

# RIG-VEDA SAMHITA

# ಋಗ್ವೇದಸಂಹಿತಾ

ಭಾಗ—೫

(ಕನ್ನಡ ಅರ್ಥಾನುವಾದ ವಿವರಣೆಗಳ ಸಹಿತ)

ಆಸ್ಥಾನ ವಿದ್ವಾನ್
ಎಚ್. ಪಿ. ವೆಂಕಟರಾವ್
ಅನುವಾದಕ ಮತ್ತು ಸಂಪಾದಕ

ಶ್ರೀ
ಚಾಮುಂಡೇಶ್ವರಿ ಎಲೆಕ್ಟ್ರಿಕ್ ಪ್ರೆಸ್
ಮೈಸೂರು.


CC-0. Jangamwadi Math Collection. Digitized by eGangotri



# ಋಗ್ವೇದಸಂಹಿತಾ

ಭಾಗ — ೫.

ಪ್ರಥಮಾಷ್ಟಕದಲ್ಲಿ ನಾಲ್ಕನೆಯ ಅಧ್ಯಾಯ

ಪ್ರಥಮಮಂಡಲ ೪೭—೬೧ ಸೂಕ್ತಗಳು

ಸಾಯಣಭಾಷ್ಯ ಮತ್ತು ಕರ್ಣಾಟಕ ಭಾಷಾನುವಾದ

ವಿವರಣೆ ಸಹಿತ



CC-0. Jangamwadi Math Collection. Digitized by eGangotri

ಶ್ರೀ ಜಯಚಾಮರಾಜೇಂದ್ರ ವೇದರತ್ನಮಾಲಾ

ಸಂಖ್ಯೆ—೫

# RIG-VEDA

ಸಾ ಯ ಣ ಭಾ ಷ್ಯ ಸ ಮೇ ತಾ

# ಋಗ್ವೇದ ಸಂಹಿತಾ

(ಕರ್ಣಾಟಕ ಭಾಷಾರ್ಥಾನುವಾದವಿವರಣೆಗಳೊಡನೆ)

ಭಾಗ—೫

## ಪ್ರಥಮಾಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು

ಪ್ರಥಮ ಮಂಡಲದ ಸೂಕ್ತಗಳು ೪೭-೬೧



*Translated with Exhaustive Critical Notes*

*by*

**Asthana Mahavidwan**

**H. P. VENKATA RAO,**

*Editor.*



*Printed at*

**Sri Chamundeswari Electric Press,**

CLOCK TOWER SQUARE,

MYSORE.

*1950*



CC-0. Jangamwadi Math Collection. Digitized by eGangotri

Published by the gracious permission of

His Highness

Sri Jayachamarajendra Wadiyar Bahadur,

G.C.B., G.C.S.I., Maharaja of Mysore.





CC-0. Jangamwadi Math Collection. Digitized by eGangotri



ಯದುವಂಶಪಯಃಪಾರಾಸುಧಾಕರರೂ ಸತ್ಸಂಪ್ರದಾಯವೈದಿಕವಿದ್ಯಾವರ್ಧಕರೂ ಮೈಸೂರು ದೇಶವನ್ನಾಳುವ
ಧರ್ಮಪ್ರಭುಗಳೂ ಆದ ಶ್ರೀಮನ್ಮಹಾರಾಜ

**ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಬಿ., ಜಿ.ಸಿ.ಎಸ್.ಐ. ರವರು.**



CC-0. Jangamwadi Math Collection. Digitized by eGangotri

ವೇದಪ್ರಕಟನಕಾರ್ಯಕ್ಕಾಗಿ ನಿಯಮಿತವಾಗಿರುವ

# ವೇದವಿಮರ್ಶನ ವಿದ್ವನ್ಮಂಡಲಿ

ಅಧ್ಯಕ್ಷರು :

ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು.**

---

Translater & Editor

**ಆಸ್ಥಾನ ಮಹಾವಿದ್ವಾನ್ H. P. ವೆಂಕಟರಾವ್,**

---

**ಸಹಾಯಕವಿದ್ವನ್ಮಂಡಲಿ**

1. ಬ್ರ॥ ಶ್ರೀ॥ ಜಿ. ವಿಷ್ಣುಮೂರ್ತಿಭಟ್ಟರು, ವ್ಯಾಕರಣವಿದ್ವಾನ್ ಶ್ರೀಮನ್ಮಹಾರಾಜರವರ ಸಂಸ್ಕೃತಮಹಾಪಾಠಶಾಲಾ, ಮೈಸೂರು.
2. ಆಸ್ಥಾನವಿದ್ವಾನ್ ಬ್ರ॥ ಶ್ರೀ॥ H. ಗಂಗಾಧರಶಾಸ್ತ್ರಿಗಳು, ಜ್ಯೋತಿಷವಿದ್ವಾನ್ ಮತ್ತು ಕರ್ಣಾಟಕಭಾಷಾ ಪಂಡಿತರು.
3. ಬ್ರ॥ ಶ್ರೀ॥ N. ಶ್ರೀನಿವಾಸಶಾಸ್ತ್ರಿಗಳು, ಋಗ್ವೇದಘನಪಾಠಿಗಳು.
4. ಬ್ರ॥ ಶ್ರೀ॥ ಹಿಟ್ಟವಳ್ಳಿ ಬಿಳಿಗಿರಿ ರಂಗಾಜೋಯಿಸರು, ಶ್ರೌತವಿದ್ವಾನ್.
5. ಬ್ರ॥ ಶ್ರೀ॥ ಹಿಟ್ಟವಳ್ಳಿ ದೇವರ ಭಟ್ಟರು, ಮೀಮಾಂಸಾದರ್ಶನಪಂಡಿತರು.
6. ಬ್ರ॥ ಶ್ರೀ॥ G. N. ಚಕ್ರವರ್ತಿ ಎಂ. ಎ.
   Professor of Sanskrit, St Philomina's College, Mysore.
7. ಬ್ರ॥ ಶ್ರೀ॥ M. S. ವೆಂಕಟರಮಣಾಚಾರ್, M. A., B. T. ಸಾಹಿತ್ಯವಿದ್ವಾನ್.
8. ಬ್ರ॥ ಶ್ರೀ॥ ರಂಗನಾಥನ್, ಸಾಹಿತ್ಯ ವಿದ್ವಾನ್, ಅರಮನೆ ಸರಸ್ವತೀ ಭಂಡಾರ.
9. ಬ್ರ॥ ಶ್ರೀ॥ S. ಸೀತಾರಾಮಶಾಸ್ತ್ರಿಗಳು, ರಿಟೈರ್ಡ್ ಪಂಡಿತರು,
   Govt. Oriental Research Institute, Mysore.

---



CC-0. Jangamwadi Math Collection. Digitized by eGangotri



ಶ್ರೀ ಜಗದ್ಗುರು ನಾಗಲಿಂಗಪರಿವ್ರಾಜಕಾಚಾರ್ಯ ಪೀಠಾಧ್ಯಕ್ಷರಾದ

**ಶಿಲ್ಪಸಿದ್ಧಾಂತಿ ಶಿವಯೋಗಿ ಶ್ರೀ ಸಿದ್ಧಲಿಂಗಸ್ವಾಮಿಗಳವರು**

**ವೇದವಿಮರ್ಶನ ವಿದ್ವನ್ಮಂಡಲಿಯ ಅಧ್ಯಕ್ಷರು.**



CC-0. Jangamwadi Math Collection. Digitized by eGangotri

# ಮುನ್ನುಡಿ

ಋಗ್ವೇದಸಂಹಿತೆಯ ಪ್ರಥಮಾಷ್ಟಕದ ನಾಲ್ಕನೆಯ ಅಧ್ಯಾಯವನ್ನೊಳಗೊಂಡಿರುವ ಈ ಭಾಗದಲ್ಲಿ ಪ್ರಥಮ ಮಂಡಲದ ೪೭-೬೧ ಸೂಕ್ತಗಳು ಅಡಕವಾಗಿವೆ. ಇವುಗಳಲ್ಲಿ ೪೭-೫೦ ಸೂಕ್ತಗಳಿಗೆ ಪ್ರಸ್ಕಣ್ವಃ ಕಾಣ್ವಃ ಎಂಬ ಋಷಿಯೂ, ೫೧-೫೭ ಸೂಕ್ತಗಳಿಗೆ ಸವ್ಯ ಆಂಗೀರಸಃ ಎಂಬ ಋಷಿಯೂ, ೫೮-೬೧ ಸೂಕ್ತಗಳಿಗೆ ನೋಧಾ ಗೌತಮಃ ಎಂಬ ಋಷಿಯೂ ಸೂಕ್ತಗಳ ದ್ರಷ್ಟೃಗಳಾಗಿದ್ದಾರೆ. ನಾವು ಹಿಂದೆಯೇ ತಿಳಿಸಿದಂತೆ ಈ ಮಂಡಲದ ಋಷಿಗಳಿಗೆ ಶತರ್ಚಿನರೆಂದು ಹೆಸರು ಎಂದರೆ ಇವರಲ್ಲಿ ಒಬ್ಬೊಬ್ಬರೂ ಸುಮಾರು ನೂರು ಋಕ್ಕುಗಳ ದ್ರಷ್ಟೃಗಳಾಗಿರುವರು.

ಪ್ರಸ್ಕಣ್ವನೆಂಬುವನು ಪ್ರಸಿದ್ಧನಾದ ಕಣ್ವಋಷಿಯ ಪುತ್ರನು. ನಿರುಕ್ತದಲ್ಲಿ ಯಾಸ್ಕರು—ಪ್ರಸ್ಕಣ್ವಃ ಕಣ್ವಸ್ಯ ಪುತ್ರಃ ಕಣ್ವಪ್ರಭವೋ ಯಥಾ ಪ್ರಾಗ್ರಂ (ನಿ. ೩-೧೭) ಪ್ರಸ್ಕಣ್ವನು ಕಣ್ವಋಷಿಯ ಪುತ್ರನು. ಕಣ್ವಋಷಿಯೇ ಮೊದಲಾದವರಂತೆ ಇವನೂ ಪ್ರತಿಭಾಶಾಲಿಯು ಎಂದು ಹೇಳಿರುವರು. ಈ ಋಷಿಯು ಋಗ್ವೇದ ಪ್ರಥಮ ಮಂಡಲದ ೪೪-೫೦ ಸೂಕ್ತಗಳು (೮೨ ಋಕ್ಕುಗಳು) ಎಂಟನೆಯ ಮಂಡಲದ ೪೯ ನೆಯ ಸೂಕ್ತ (೧೦ ಋಕ್ಕುಗಳೂ), ಒಂಭತ್ತನೆಯ ಮಂಡಲದ ೯೫ ನೆಯ ಸೂಕ್ತ (೫ ಋಕ್ಕುಗಳೂ), ಒಟ್ಟು ೯೭ ಋಕ್ಕುಗಳಿಗೆ ದ್ರಷ್ಟೃವಾಗಿರುವನು. ಈ ಋಷಿಯ ಹೆಸರು ಋಗ್ವೇದದ ೧-೪೪-೬ ; ೧-೪೫-೩ ; ೮-೩-೯ ; ೮-೫೧-೨ ; ೮-೫೪-೮ ಇತ್ಯಾದಿ ಋಕ್ಕುಗಳಲ್ಲಿಯೂ ನಿರುಕ್ತ ೩-೧೭ ರಲ್ಲಿಯೂ ಪ್ರಸ್ತಾಪಿಸಲ್ಪಟ್ಟಿರುವುದು.

ಆಂಗೀರಸಗೋತ್ರೋತ್ಪನ್ನನಾದ ಸವ್ಯನೆಂಬ ಋಷಿಯ ವಿಷಯವು ವಿಶದವಾಗಿಲ್ಲ. ಈ ಋಷಿದೃಷ್ಟವಾದ ಸೂಕ್ತಗಳು ಋಗ್ವೇದದ ಪ್ರಥಮ ಮಂಡಲದಲ್ಲಿ ೫೧-೫೭ (೭೨ ಋಕ್ಕುಗಳು) ಸೂಕ್ತಗಳುಮಾತ್ರ ವಿರುವವು.

ನೋಧಾ ಗೌತಮಃ ಎಂಬ ಋಷಿಯ ವಿಷಯವಾಗಿ ಯಾಸ್ಕರು ತಮ್ಮ ನಿರುಕ್ತದಲ್ಲಿ-ನೋಧಾ ಋಷಿರ್ಭವತಿ । ನವನಂ ದಧಾತಿ । ಸ ಯಥಾ ಸ್ತುತ್ಯಾ ಕಾಮಾನಾವಿಷ್ಕುರುತೇ (ನಿ. ೪-೧೬). ನೋಧಾಃ ಎಂಬ ಋಷಿಯು ತನ್ನ ನೂತನವಾದುದೂ, ಕಾವ್ಯರೂಪವಾದುದೂ ಆದ ಸ್ತುತಿಗಳಿಂದ ಅಂತರ್ಗತವಾದ ತನ್ನ ಅಭಿಲಾಷೆಗಳನ್ನು ಬಿಚ್ಚಿ ತೋರಿಸುವಂತೆ ಉಷಸ್ಸೂ ಸಹ ತನ್ನ ಸುಪ್ತವಾಗಿದ್ದ ಕಾಂತಿಯನ್ನೂ ಪ್ರಕಾಶಪಡಿಸುತ್ತಾಳೆಂದು—

ಉಪೋ ಅದರ್ಶಿ ಶುಂಧ್ಯುವೋ ನ ವಕ್ಷೋ ನೋಧಾ ಇವಾವಿರಕೃತ ಪ್ರಿಯಾಣಿ ।
ಅದ್ಮಸನ್ನ ಸಸತೋ ಬೋಧಯಂತೀ ಶಶ್ವತ್ತಮಾಗಾತ್ಪುನರೇಯುಷೀಣಾಂ ॥

(ಋ. ಸಂ. ೧-೧೨೪-೪)

ಎಂಬ ಋಕ್ಕನ್ನು ವಿವರಿಸುವಾಗ ನಿರ್ವಚನವನ್ನು ಹೇಳಿರುವರು.

ನೋಧಾ ಎಂಬ ಋಷಿಯು ಗೋತಮ ಎಂಬ ಋಷಿಯ ಪುತ್ರನು ಅಥವಾ ಗೋತಮನ ವಂಶೋದ್ಭವನು. ಈ ಋಷಿಯು ಋಕ್ಸಂಹಿತೆಯ ಪ್ರಥಮ ಮಂಡಲದಲ್ಲಿ ೫೮-೬೪ ನೇ ಸೂಕ್ತಗಳಿಗೂ, (೭೪ ಋಕ್ಕುಗಳು) ಎಂಟನೆಯ ಮಂಡಲದಲ್ಲಿ ೮೮ ನೇ ಸೂಕ್ತಕ್ಕೂ (೬ ಋಕ್ಕುಗಳು) ಒಂಭತ್ತನೆಯ ಮಂಡಲದಲ್ಲಿ ೯೩ ನೇ ಸೂಕ್ತಕ್ಕೂ (೫ ಋಕ್ಕುಗಳು) ಒಟ್ಟು ೮೫ ಋಕ್ಕುಗಳ ದ್ರಷ್ಟೃವೆಂದು ಪ್ರಸಿದ್ಧನಾಗಿದಾನೆ. ಇವನ ವಿಷಯವನ್ನು ಋಕ್ಸಂಹಿತೆಯಲ್ಲಿಯೇ ಅನೇಕಕಡೆ ಹೇಳಿದೆ—



CC-0. Jangamwadi Math Collection. Digitized by eGangotri

ತಂತ್ವಾ ವಯಂ ಪತಿಮಗ್ನೇ ರಯೀಣಾಂ ಪ್ರಶಂಸಾಮೋ ಮತಿಭಿರ್ಗೋತಮಾಸಃ ।
ಆಶುಂ ನ ವಾಜಂಭರಂ ಮರ್ಜಯಂತಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥
(ಋ. ಸಂ. ೧-೬೦-೫)

ಇತ್ಯಾದಿ ಋಕ್ಕುಗಳಲ್ಲಿ ಗೋತಮ ಪುತ್ರರೆಂದೂ, ಧನಪತಿಯಾದ ಅಗ್ನಿಯನ್ನು ಸ್ತುತಿಸುವರೆಂದೂ ಹೇಳಿದೆ.

ಏವಾ ತೇ ಹಾರಿಯೋಜನಾ ಸುವೃಕ್ತೀಂದ್ರ ಬ್ರಹ್ಮಾಣಿ ಗೋತಮಾಸೋ ಅಕ್ರನ್ ।
ಐಷು ವಿಶ್ವಪೇಶಸಂ ಧಿಯಂ ಧಾಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥
(ಋ. ಸಂ. ೧-೬೧-೧೬)

ಎಂಬಲ್ಲಿ ಇಂದ್ರನನ್ನುದ್ದೇಶಿಸಿ ಗೋತಮಪುತ್ರರಾದ ನೋಧಸ್ಸುಗಳು ಸ್ತುತಿಯನ್ನು ರಚಿಸಿದರೆಂದು ಪಠಿಸಿದೆ. ಈ ಋಷಿಯ ಹೆಸರು ಋಗ್ವೇದ ಸಂಹಿತೆಯ ೧-೬೧-೧೪ ; ೧-೬೨-೧೩ ; ೧-೬೪-೧ ; ೧-೧೨೪-೪ ; ನಿರುಕ್ತ ೪-೧೬ ; ಐತರೇಯ ಬ್ರಾಹ್ಮಣ ೬-೧೮ ಇತ್ಯಾದಿ ಸ್ಥಳಗಳಲ್ಲಿ ಸೂಚಿತವಾಗಿದೆ. ಪಂಚವಿಂಶ ಬ್ರಾಹ್ಮಣದಲ್ಲಿ (೭-೧೦-೧೦ ; ೨೧-೯-೧೨) ಕಕ್ಷೀವಾನ್ ಎಂಬ ಋಷಿಯ ವಂಶಸ್ಥನಾದ ಕಕ್ಷೀವತ ಎಂದು ಕರೆಯಲ್ಪಟ್ಟಿದ್ದಾನೆ. ಇದಕ್ಕೆ ಐತರೇಯಬ್ರಾಹ್ಮಣದಲ್ಲೂ (ಐ. ಬ್ರಾ. ೪-೨೭ ; ೮-೧೨-೧೭) ಅಥರ್ವವೇದದಲ್ಲಿಯೂ (ಅ. ವೇ. ೧೫-೨-೪ ; ೧೫-೪-೪) ಸಮರ್ಥನೆ ಇರುವುದು.

ಶತರ್ಚಿನರಲ್ಲಿ ಈ ಭಾಗಕ್ಕೆ ಸಂಬಂಧಪಟ್ಟ ಮೂರು ಋಷಿಗಳ ವಿಷಯವನ್ನು ಮಾತ್ರ ಇಲ್ಲಿ ಪ್ರಸ್ತಾಪ ಮಾಡಿರುವೆವು. ಈ ಮಂಡಲದ ಎಲ್ಲಾ ಋಷಿಗಳ ವಿಷಯವನ್ನು ಈ ಮಂಡಲದ ಕೊನೆಯಲ್ಲಿ ಎಂದರೆ ಋ. ಸಂ. ೧೪ ನೆಯ ಭಾಗದಲ್ಲಿ ವಿಸ್ತಾರವಾಗಿ ವಿವರಿಸಲಾಗುವುದು.

ಅತಿ ಪ್ರಾಚೀನವೂ, ಅತಿ ಗಹನವೂ, ಅತಿ ವಿಸ್ತಾರವೂ, ಸರ್ವಶಾಸ್ತ್ರಗಳಿಗೂ ಮೂಲಭೂತವೂ ಆದ ಇಂತಹ ಋಗ್ವೇದಸಂಹಿತೆಯನ್ನು ಸರಳವಾದ ಕನ್ನಡಭಾಷೆಯಲ್ಲಿ ವಿಮರ್ಶಾನುವಾದಸಹಿತವಾಗಿ ಪ್ರಕಾಶಪಡಿಸುವುದು ಸುಲಭವಾದ ಕೆಲಸವಲ್ಲ. ಆದರೂ ಇಂತಹ ಮಹತ್ಕಾರ್ಯದಿಂದ ಪಂಡಿತಪಾಮರಾದಿಯಾದ ಸಕಲ ಜನರೂ ಜ್ಞಾನಾಭಿವೃದ್ಧಿಯನ್ನು ಪಡೆದು ಈಶ್ವರಾನುಗ್ರಹಕ್ಕೆ ಪಾತ್ರರಾಗಲೆಂಬ ಘನವಾದ ಉದ್ದೇಶದಿಂದ, ಕರ್ನಾಟಕಸಿಂಹಾಸನಾಧೀಶ್ವರರೂ, ವೇದವಿದ್ಯಾಭಿಮಾನಿಗಳೂ, ಸ್ವಯಂ ಪಂಡಿತರೂ, ಪ್ರಜಾನುರಾಗಿಗಳೂ, ದೈವಭಕ್ತಿತತ್ಪರರೂ ಆದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ.ಸಿ.ಬಿ., ಜಿ.ಸಿ.ಎಸ್.ಐ. ಮಹಾಪ್ರಭುವರ್ಯರು ಬಹುದ್ರವ್ಯಸಾಧ್ಯವಾದ ಈ ಗ್ರಂಥಪ್ರಕಟನೆಯನ್ನು ತಮ್ಮ ಉದಾರಾಶ್ರಯದಿಂದ ಪ್ರೋತ್ಸಾಹಪಡಿಸುತ್ತಿರುವುದು ಕರ್ನಾಟಕ ಜನಕೋಟಿಯ ಸುಕೃತವೆಂದೇ ಹೇಳಬೇಕು. ಇಂತಹ ಉದಾರಮತಿಗಳಾದ ನಮ್ಮ ಪ್ರಭುವರ್ಯರಿಗೂ, ಅವರ ಕುಟುಂಬಕ್ಕೂ (ವೇದಮಂತ್ರಗಳಲ್ಲಿ ಅತಿಮುಖ್ಯವೆಂದು ಪರಿಗಣಿಸಲ್ಪಟ್ಟಿರುವ ಗಾಯತ್ರೀ ಎಂಬ ಮಂತ್ರನಾಮಾಂಕಿತರಾದ) ರಾಜಕುಮಾರಿಗೂ, ಸಮಸ್ತ ಪ್ರಜಾಕೋಟಿಗೂ ಸಹ ವೇದಪುರುಷನಾದ ಸರ್ವೇಶ್ವರನು ಐಹಿಕಫಲಗಳಾದ, ಆಯುರಾರೋಗ್ಯೈಶ್ವರ್ಯಾದಿ ಸಕಲ ಸಂಪತ್ತನ್ನೂ ಪಾರಮಾರ್ಥಿಕವಾದ ಅಧ್ಯಾತ್ಮಜ್ಞಾನವನ್ನೂ ಇತೋಽಪ್ಯತಿಶಯವಾಗಿ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಮೈಸೂರು
ವಿಕೃತಿನಾಮ. ಸಂ. ಆ. ಆಷಾಢ ಶು. ಏಕಾದಶೀ
ಸೋಮವಾರ, ತಾ॥ 26–6–50

ಆಸ್ಥಾನಮಹಾವಿದ್ವಾನ್
ಹೆಚ್. ಪಿ. ವೆಂಕಟರಾವ್
Translater & Editor



CC-0. Jangamwadi Math Collection. Digitized by eGangotri

## ॥ ವಿಷಯಾನುಕ್ರಮಣಿಕೆ ॥






CC-0. Jangamwadi Math Collection. Digitized by eGangotri

ಪುಟಸಂಖ್ಯೆ





CC-0. Jangamwadi Math Collection. Digitized by eGangotri

## ಪರಿಶಿಷ್ಟ





CC-0. Jangamwadi Math Collection. Digitized by eGangotri

CC-0. Jangamwadi Math Collection. Digitized by eGangotri

ಪುಟಸಂಖ್ಯೆ





CC-0. Jangamwadi Math Collection. Digitized by eGangotri

ವಿಷಯಾನುಕ್ರಮಣಿಕೆ ಸಮಾಪ್ತವು





CC-0. Jangamwadi Math Collection. Digitized by eGangotri

## ಸಂಕೇತಾಕ್ಷರಗಳ ವಿವರಣೆಯು

---

ಅಥ. ಸಂ. ಅಥವಾ ಅ. ವೇ.—ಅಥರ್ವವೇದಸಂಹಿತಾ
ಆಪ. ಸೂ.—ಆಪಸ್ತಂಬಶ್ರೌತಸೂತ್ರ
ಆಪ. ಧ. ಸೂ.—ಆಪಸ್ತಂಬಧರ್ಮಸೂತ್ರ
ಆಪ. ಪ. ಸೂ.—ಆಪಸ್ತಂಬಪರಿಭಾಷಾಸೂತ್ರ
ಆಸೂ. —ಆಶ್ವಲಾಯನಶ್ರೌತಸೂತ್ರ
ಉ. ಸೂ. —ಉಣಾದಿಸೂತ್ರ
ಋ. ಸಂ.—ಋಗ್ವೇದಸಂಹಿತಾ
ಐ ಆ.—ಐತರೇಯಾರಣ್ಯಕ
ಐ. ಉ.—ಐತರೇಯೋಪನಿಷತ್
ಐ ಬ್ರಾ.—ಐತರೇಯಬ್ರಾಹ್ಮಣ
ಛಾ. ಉ—ಛಾಂದೋಗ್ಯೋಪನಿಷತ್
ಜೈ. ಸೂ.—ಜೈಮಿನಿಯ ಪೂರ್ವಮೀಮಾಂಸಾಸೂತ್ರ
ಜೈ. ನ್ಯಾ. ವಿ.—ಜೈಮಿನಿಯ ನ್ಯಾಯಮಾಲಾವಿಸ್ತರ
ತಾ. ಬ್ರಾ.—ತಾಂಡ್ಯಮಹಾಬ್ರಾಹ್ಮಣ
ತೈ ಆ.—ತೈತ್ತರೀಯ ಆರಣ್ಯಕ
ತೈ. ಬ್ರಾ.—ತೈತ್ತಿರೀಯಬ್ರಾಹ್ಮಣ
ತೈ. ಸಂ.—ತೈತ್ತಿರೀಯ ಸಂಹಿತಾ
ನಿ.—ನಿರುಕ್ತ, ನಿಘಂಟು
ಪಾ. ಸೂ—ಪಾಣಿನೀಯ ಸೂತ್ರ
ಪಾ. ಶಿ.—ಪಾಣಿನೀಯ ಶಿಕ್ಷಾ
ಫಿ. ಸೂ—ಫಿಟ್ಸೂತ್ರ
ಬ್ರ. ಸೂ.—ಬ್ರಹ್ಮಸೂತ್ರ
ಮ. ಭಾ—ಮಹಾಭಾರತ
ಮ ಸ್ಮೃ.—ಮನುಸ್ಮೃತಿ
ಮೈ. ಸಂ —ಮೈತ್ರಾಯಣೀಸಂಹಿತಾ
ಯಾ. ಸ್ಮೃ—ಯಾಜ್ಞವಲ್ಕ್ಯಸ್ಮೃತಿ
ವಾ. ಸಂ.—ವಾಜಸನೇಯಸಂಹಿತಾ
ವಾ. ಪು.—ವಾಯುಪುರಾಣ
ವಿ. ಪು.—ವಿಷ್ಣುಪುರಾಣ
ವೇ. ಸೂ.—ವೇದಾಂತಸೂತ್ರ
ಶ. ಬ್ರಾ—ಶತಪಥಬ್ರಾಹ್ಮಣ
ಸಾ. ಸಂ —ಸಾಮವೇದಸಂಹಿತಾ ಇತ್ಯಾದಿ

---


CC-0. Jangamwadi Math Collection. Digitized by eGangotri



॥ ಶ್ರೀಮಹಾಗಣಾಧಿಪತಯೇ ನಮಃ ॥

ಸಾಯಣಭಾಷ್ಯಸಹಿತಾ

---

# ಋಗ್ವೇದ ಸಂಹಿತಾ

## ಭಾಗ—೫

### ಪ್ರಥಮಾಷ್ಟಕೇ ಚತುರ್ಥೋಽಧ್ಯಾಯಃ
### ಮೊದಲನೆಯ ಅಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು.

ವಾಗೀಶಾದ್ಯಾಃ ಸುಮನಸಃ ಸರ್ವಾರ್ಥಾನಾಮುಪಕ್ರಮೇ ।
ಯಂ ನತ್ವಾ ಕೃತಕೃತ್ಯಾಃ ಸ್ಯುಸ್ತಂ ನಮಾಮಿ ಗಜಾನನಂ ॥
ಯಸ್ಯ ನಿಃಶ್ವಸಿತಂ ವೇದಾ ಯೋ ವೇದೇಭ್ಯೋಽಖಿಲಂ ಜಗತ್ ।
ನಿರ್ಮಮೇ ತಮಹಂ ವಂದೇ ವಿದ್ಯಾತೀರ್ಥಮಹೇಶ್ವರಂ ॥
ವೇದಃ ಶಿವಃ ಶಿವೋ ವೇದೋ ವೇದಾಧ್ಯಾಯೀ ಸದಾಶಿವಃ ।
ತಸ್ಮಾತ್ಸರ್ವಪ್ರಯತ್ನೇನ ವೇದಮೇವ ಸದಾ ಜಪೇತ್ ॥

ಅಥ ಪ್ರಥಮಾಷ್ಟಕೇ ಚತುರ್ಥೋಽಧ್ಯಾಯ ಆರಭ್ಯತೇ । ಅಯಂ ವಾಮಿತಿ ನವಮಾನುವಾಕಸ್ಯ ಚತುರ್ಥಂ ಸೂಕ್ತಂ ದಶರ್ಚಂ । ಅತ್ರಾನುಕ್ರಾಂತಂ । ಅಯಂ ದಶ ಪ್ರಾಗಾಥಂ ತ್ವಿತಿ । ಋಷಿಶ್ಚಾನ್ಯಸ್ಮಾದೃಷೇರಿತಿ ಪರಿಭಾಷಿತತ್ವಾತ್ಕಣ್ವಪುತ್ರಃ ಪ್ರಸ್ಕಣ್ವ ಋಷಿಃ । ತಥಾ ಪೂರ್ವತ್ರಾಶ್ವಿನಂ ತ್ವಿತ್ಯುಕ್ತತ್ವಾತ್ತುಹ್ಯಾದಿಪರಿಭಾಷಯೇದಮಪಿ ಸೂಕ್ತಮಶ್ವಿದೇವತಾಕಂ । ಅನಯೈವ ಪರಿಭಾಷಯೇದಮುತ್ತರಂ ಚ ಪ್ರಾಗಾಥಂ । ಅತಃ ಪ್ರಥಮಾತೃತೀಯಾದ್ಯಾ ಅಯುಜೋ ಬೃಹತ್ಯಃ । ದ್ವಿತೀಯಾಚತುರ್ಥ್ಯಾದ್ಯಾ ಯುಜಃ ಸತೋಬೃಹತ್ಯಃ ॥ ಪ್ರಾತರನುವಾಕ ಆಶ್ವಿನೇ ಕ್ರತೌ ಬಾರ್ಹತೇ ಛಂದಸ್ಯೇತತ್ಸೂಕ್ತಂ । ಅಥಾಶ್ವಿನ ಇತಿ ಖಂಡೇ ಸೂತ್ರಿತಂ । ಇಮಾ ಉ ವಾಮಯಂ ವಾಂ । ಆ ೪-೧೫ । ಇತಿ ॥ ಆಶ್ವಿನಶಸ್ತ್ರೇಽಪ್ಯೇತತ್ಸೂಕ್ತಂ ಪ್ರಾತರನುವಾಕನ್ಯಾಯೇನ । ಅ. ೬-೫ । ಇತ್ಯತಿದಿಷ್ಟತ್ವಾತ್ ॥

ಅನುವಾದವು—ಅಯಂ ವಾಂ ಎಂಬ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿವೆ. ಅನುಕ್ರಮಣಿಕೆಯಲ್ಲಿ ಈ ಸೂಕ್ತದ ಹತ್ತು ಋಕ್ಕುಗಳು ಪ್ರಾಗಾಥ ಛಂದಸ್ಸಿನ ಋಕ್ಕುಗಳೆಂದು ಹೇಳಲ್ಪಟ್ಟಿದೆ. ಈ ಸೂಕ್ತಕ್ಕೆ ಕಣ್ವಪುತ್ರನಾದ ಪ್ರಸ್ಕಣ್ವನು ಋಷಿಯು. ಅಶ್ವಿನೀದೇವತೆಗಳೇ ಈ ಸೂಕ್ತಕ್ಕೆ ದೇವತೆಗಳು. ಪ್ರಾಗಾಥಂ ಬಾರ್ಹತಂ ಎಂಬದು ಛಂದಸ್ಸು ಎಂದರೆ ಪರಿಭಾಷಾಸೂತ್ರದ



CC-0. Jangamwadi Math Collection. Digitized by eGangotri

ಪ್ರಕಾರ ೧, ೩, ೫, ೭, ೯ನೆಯ ಋಕ್ಕುಗಳು ಬೃಹತೀಛಂದಸ್ಸಿನವು. ೨, ೪, ೬, ೮, ೧೦ ನೆಯ ಋಕ್ಕುಗಳು ಸತೋಬೃಹತೀಛಂದಸ್ಸಿನವು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಶ್ವಿನಕ್ರತುವೆಂಬ ಅಶ್ವಿನೀದೇವತಾಕವಾದ ಮಂತ್ರಗಳಲ್ಲಿ ಬೃಹತೀಛಂದಸ್ಸಿನ ಮಂತ್ರಗಳನ್ನು ಹೇಳುವಾಗ ಈ ಸೂಕ್ತವನ್ನು ಪಠಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ ಅಥಾಶ್ವಿನ ಎಂಬ ಖಂಡದ ಇಮಾ ಉ ವಾಮುಯಂ ವಾಂ ಎಂಬ ಸೂತ್ರದಿಂದ ಹೇಳಲ್ಪಟ್ಟಿರುವುದು (ಆ. ೪-೧೫) ಮತ್ತು ಅದೇ ಶ್ರೌತಸೂತ್ರದಲ್ಲಿ ಅಶ್ವಿನೀದೇವತಾಕವಾದ ಶಸ್ತ್ರಮಂತ್ರಪಠನಕಾಲದಲ್ಲಿ ಪ್ರಾತರನುವಾಕಮಂತ್ರಗಳನ್ನಾಗಿ ಈ ಸೂಕ್ತವನ್ನು ಉಪಯೋಗಿಸಬೇಕೆಂದು ಹೇಳಿದೆ (ಆ. ೬-೫).

## ಸೂಕ್ತ—೪೭

ಮಂಡಲ—೧ ॥ ಅನುವಾಕ—೯ ॥ ಸೂಕ್ತ—೪೭
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೧, ೨ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧-೧೦
ಋಷಿಃ—ಪ್ರಸ್ಕಣ್ವಃ ಕಾಣ್ವಃ ॥
ದೇವತಾ—ಅಶ್ವಿನೌ ॥
ಛಂದಃ—ಪ್ರಾಗಾಥಂ ಬಾರ್ಹತಂ ೧, ೩, ೫, ೭, ೯, ಬೃಹತೀ । ೨, ೪, ೬, ೮, ೧೦. ಸತೋ ಬೃಹತೀ ॥

॥ ಸಂಹಿತಾಪಾಠಃ ॥

ಅಯಂ ವಾಂ ಮಧುಮತ್ತಮಃ ಸುತಃ ಸೋಮ ಋತಾವೃಧಾ ।
ತಮಶ್ವಿನಾ ಪಿಬತಂ ತಿರೋಅಹ್ನ್ಯಂ ಧತ್ತಂ ರತ್ನಾನಿ ದಾಶುಷೇ ॥೧॥

॥ ಪದಪಾಠಃ ॥

ಅಯಂ । ವಾಂ । ಮಧುಮತ್ಽತಮಃ । ಸುತಃ । ಸೋಮಃ । ಋತಽವೃಧಾ ॥
ತಂ । ಅಶ್ವಿನಾ । ಪಿಬತಂ । ತಿರಃಽಅಹ್ನ್ಯಂ । ಧತ್ತಂ । ರತ್ನಾನಿ । ದಾಶುಷೇ ॥ ೧॥

॥ ಸಾಯಣಭಾಷ್ಯಂ ॥

ಹೇ ಋತಾವೃಧಾ ಋತಸ್ಯ ಸತ್ಯಸ್ಯ ಯಜ್ಞಸ್ಯ ವಾ ವರ್ಧಯಿತಾರಾವಶ್ವಿನಾ ಅಶ್ವಿನೌ ವಾಂ ಯುವಯೋರಯಂ ಪುರೋವರ್ತೀ ಸೋಮಃ ಸುತೋಽಭಿಷುತಃ । ಕೀದೃಶಃ । ಮಧುಮತ್ತಮೋಽತಿ-



CC-0. Jangamwadi Math Collection. Digitized by eGangotri

ಶಯೇನ ಮಾಧುರ್ಯವಾನ್ । ತಿರೋಅಹ್ನ್ಯಂ ತಿರೋಭೂತೇ ಪೂರ್ವಸ್ಮಿನ್ನಿನೇಽಭಿಷುತಂ ತಂ ಸೋಮಂ ಪಿಬತಂ । ದಾಶುಷೇ ಹವಿರ್ದತ್ತವತೇ ಯಜಮಾನಾಯ ರತ್ನಾನಿ ರಮಣೀಯಾನಿ ಧನಾನಿ ಧತ್ತಂ । ಪ್ರಯಚ್ಛತಂ ॥ ವಾಂ । ಯುಷ್ಮದಸ್ಮದೋಃ ಷಷ್ಠೀಚತುರ್ಥೀದ್ವಿತೀಯಾಸ್ಥಯೋರ್ವಾಂನಾವೌ । ಪಾ ೮-೧-೨೦ । ಇತಿ ಷಷ್ಠೀದ್ವಿವಚನಸ್ಯ ವಾಮಾದೇಶಃ । ಸ ಚಾನುದಾತ್ತಃ । ಮಧುಮತ್ತಮಃ । ಮನ ಜ್ಞಾನೇ । ಮನ್ಯತ ಇತಿ ಮಧು । ಫಲಿಪಾಟನಮೀತ್ಯಾದಿನೋಪ್ರತ್ಯಯಃ । ನಿದಿತ್ಯನುವೃತ್ತೇರಾದ್ಯುದಾತ್ತತ್ವಂ । ಧಕಾರಶ್ಚಾಂತಾದೇಶಃ । ಅತಿಶಯೇನ ಮಧುಮಾನ್ ಮಧುಮತ್ತಮಃ । ಮತುಪ್ತಮಪೋಃ ಪಿತ್ತ್ವಾದನುದಾತ್ತತ್ವೇ ಪದಸ್ವರ ಏವ ಶಿಷ್ಯತೇ । ಋತಾವೃಧಾ । ವೃಧೇರಂತರ್ಭಾವಿತಣ್ಯರ್ಥಾತ್ ಕ್ವಿಪ್ಚೇತಿ ಕ್ವಿಪ್ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದಸ್ಯ ದೀರ್ಘತ್ವಂ । ತಿರೋಅಹ್ನ್ಯಂ । ಅಹ್ನಿ ಭವೋಽಹ್ನ್ಯಃ। ಭವೇ ಛಂದಸೀತಿ ಯತ್ । ಅಹ್ನಷ್ಟಖೋರೇವ । ಪಾ ೬-೪-೧೪೫ । ಇತಿ ನಿಯಮಾನ್ನಸ್ತದ್ಧಿತ ಇತಿ ಟಿಲೋಪಾಭಾವಃ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಚನಾದ್ಯೇ ಚಾಭಾವಕರ್ಮಣೋಃ । ಪಾ ೬-೪-೧೬೮ । ಇತಿ ಪ್ರಕೃತಿಭಾವಾಭಾವೇಽಲ್ಲೋಪೋಽನ ಇತ್ಯಕಾರಲೋಪಃ। ತಿರೋಹಿತೋಽಹ್ನ್ಯಸ್ತಿರೋ ಅಹ್ನ್ಯಃ । ತಿರೋಽಂತರ್ಧೌ । ಪಾ ೧-೪-೭೧ । ಇತಿ ಗತಿತ್ವೇನ ನಿಪಾತತ್ವಾದವ್ಯಯತ್ವೇ ಪ್ರಾದಿಸಮಾಸೇಽವ್ಯಯಪೂರ್ವಪದಪ್ರಕೃತಿಸ್ವರತ್ವಂ । ದಾಶುಷೇ । ದಾಶ್ವಾನ್ಸಾಹ್ವಾನಿತ್ಯಾದಿನಾ ಕ್ವಸುಪ್ರತ್ಯಯಾಂತೋ ನಿಪಾತಿತಃ । ಚತುರ್ಥ್ಯೇಕವಚನೇ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ ॥

॥ ಪ್ರತಿಪದಾರ್ಥ ॥

ಋತಾವೃಧಾ—ಯಜ್ಞದ ಅಥವಾ ಸತ್ಯದ ವರ್ಧಕರಾದ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮಗೋಸ್ಕರ । ಮಧುಮತ್ತಮಃ—ಅತ್ಯಂತಮಧುರವಾದ । ಅಯಂ ಸೋಮಃ—ಈ ಸೋಮರಸವು। ಸುತಃ—ಹಿಂಡಲ್ಪಟ್ಟಿದೆ। ತಿರೋಅಹ್ನ್ಯಂ—ಮೊದಲನೇ (ಹಿಂದಿನ)ದಿನ ಹಿಂಡಿದ । ತಂ—ಆ ಸೋಮರಸವನ್ನು। ಪಿಬತಂ—ಕುಡಿಯಿರಿ । ದಾಶುಷೇ—ಹವಿರ್ದಾತನಾದ ಯಜಮಾನನಿಗೆ । ರತ್ನಾನಿ—ರಮಣೀಯಗಳಾದ ಧನಗಳನ್ನು । ಧತ್ತಂ—ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವು ಯಜ್ಞವನ್ನು ಅಥವಾ ಸತ್ಯವನ್ನು ಅಭಿವೃದ್ಧಿಪಡಿಸುವವರು. ನಿಮಗೋಸ್ಕರವಾಗಿ ಈ ಸೋಮರಸವು ಮೊದಲನೇ ದಿನವೇ ಹಿಂಡಿ ಸಿದ್ಧವಾಗಿದೆ. ಅತ್ಯಂತ ಮಧುರವಾದ ಈ ಸೋಮರಸವನ್ನು ಪಾನಮಾಡಿರಿ. ಹವಿರ್ದಾತನಾದ ಯಜಮಾನನಿಗೆ ಮನಸ್ಸಂತೋಷಕರಗಳಾದ ಧನಗಳನ್ನು ಕೊಡಿರಿ.

## English Translation.

O Aswins, encouragers of sacrifice, this most sweet Soma juice is prepared for you; it is of yesterday's expressing; drink it and grant riches to the sacrificer



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

**ಋತಾವೃಧಾ**—ಸತ್ಯ ಅಥವಾ ಯಜ್ಞದ ಪ್ರವರ್ಧಕರು. ಈ ಶಬ್ದದ ಅರ್ಥವನ್ನು ನಾವು ಹಿಂದೆಯೇ ವಿವರಿಸಿದೇವೆ.

**ತಿರೋಅಹ್ನ್ಯಂ**—ತಿರೋಭೂತೇ ಪೂರ್ವಸ್ಮಿನ್ದಿನೇ । ತಿರೋಹಿತೋಽಹ್ನಸ್ತಿರೋಅಹ್ನ್ಯಃ । ಕಳೆದು ಹೋದ ಹಿಂದಿನ ದಿನ, ನಿನ್ನೆಯ ದಿನ.

**ದಾಶುಷೇ**—ಹವಿರ್ದತ್ತವತೇ ಯಜಮಾನಾಯ । ಹವಿಸ್ಸನ್ನು ಸಮರ್ಪಿಸುವ ಯಜಮಾನನಿಗೆ.

॥ ವ್ಯಾಕರಣಪ್ರಕ್ರಿಯಾ ॥

**ವಾಮ್**—ಯುವಯೋಃ ಎಂಬ ಯುಷ್ಮಚ್ಛಬ್ದದ ಷಷ್ಠೀದ್ವಿವಚನಾಂತಕ್ಕೆ ಯುಷ್ಮದಸ್ಮದೋಃ ಷಷ್ಠೀಚತುರ್ಥೀದ್ವಿತೀಯಾಸ್ಥಯೋರ್ವಾಂನಾವೌ (ಪಾ. ಸೂ. ೮-೧-೨೦) ಪದದ ಮುಂದೆ ಇರುವುವೂ ಪಾದದ ಆದಿಯಲ್ಲಿಲ್ಲದವೂ ಆದ ಯುಷ್ಮತ್, ಅಸ್ಮತ್ ಶಬ್ದಗಳ ಷಷ್ಠೀಚತುರ್ಥೀ ದ್ವಿತೀಯಾ ವಿಭಕ್ತ್ಯಂತಗಳಿಗೆ ಕ್ರಮವಾಗಿ ವಾಂ, ನೌ ಆದೇಶಗಳು ಬರುವುವು. ಅವು ಅನುದಾತ್ತಗಳೂ ಆಗುವುವು ಎಂದು ಸೂತ್ರಾರ್ಥ. ಏಕವಚನದಲ್ಲಿ ತ್ವ, ಮಾ ಆದೇಶಗಳೂ ಬಹುವಚನದಲ್ಲಿ ವಸ್ ನಸ್ ಆದೇಶಗಳೂ ಬರುವುದರಿಂದ, ಈ ಸೂತ್ರದಲ್ಲಿ ವಿಹಿತವಾದ ವಾಂ, ನೌ ಆದೇಶಗಳೂ ಪರಿಶೇಷದಿಂದ ದ್ವಿವಚನದಲ್ಲಿಯೇ ಬರುವುವು. ಇದರಿಂದ ವಾಂ ಆದೇಶ ಬಂದರೆ ವಾಮ್ ಎಂದಾಗುತ್ತೆ. ಇದೇ ಸೂತ್ರದಿಂದಲೇ ಅದು ಅನುದಾತ್ತವಾಗುತ್ತೆ.

**ಮಧುಮತ್ತಮಃ**—ಮನ್ಯತೇ ಇತಿ ಮಧು ಎಂದು ವಿಗ್ರಹ. ಮನಜ್ಞಾನೇ ಧಾತುವಿನ ಮುಂದೆ ಫಲಿಪಾಟಿನಮಿ ಮನಿಜನಾಂ ಗುಕ್ ಪಟಿನಾಕಿಧತಶ್ಚ (ಉ.ಸೂ. ೧-೧೮) ಫಲ ನಿಷ್ಪತ್ತೌ, ಪಟ ಗತೌ ಣಿಚ್ಪ್ರತ್ಯಯಾಂತ ಣಮ ಪ್ರಹ್ವತ್ವೇ ಶಬ್ದೇ, ಮನ ಜ್ಞಾನೇ, ಜನೀ ಪ್ರಾದುರ್ಭಾವೇ ಈ ಧಾತುಗಳ ಮುಂದೆ ಉ ಪ್ರತ್ಯಯ ಬರುತ್ತೆ. ಅದು ನಿತ್ ಆಗುತ್ತೆ. ಅಲ್ಲದೆ ಫಲ ಧಾತುವಿಗೆ ಅಂತಾವಯವವಾಗಿ ಗುಕ್ ಆಗಮ, ಪಾಟಿಗೆ ಪಟಿ ಆದೇಶ, ನಮ್ ಧಾತುವಿಗೆ ನಾಕಿ ಆದೇಶ, ಮನ್ ಧಾತುವಿನ ನಕಾರಕ್ಕೆ ಧಕಾರಾದೇಶ, ಜನ್ ಧಾತುವಿನ ನಕಾರಕ್ಕೆ ತಕಾರಾದೇಶವೂ ಸಹ ಬರುತ್ತೆ. ಇದರಿಂದ ಮನ ಧಾತುವಿನ ಮುಂದೆ ಉ ಪ್ರತ್ಯಯ ಬಂದು ನಕಾರಕ್ಕೆ ಧಕಾರಾದೇಶ ಬಂದರೆ ಮಧು ಎಂದಾಗುತ್ತೆ. ಞ್ನಿತ್ಯಾದಿರ್ನಿತ್ಯಂ (ಪಾ. ಸೂ. ೬-೧-೧೯೭) ಎಂದು ನಿತ್ಸ್ವರದಿಂದ ಆದ್ಯುದಾತ್ತ ಬರುತ್ತೆ. ಮಧು ಅಸ್ಯ ಅಸ್ತಿ ಎಂದು ವಿಗ್ರಹವಾದಾಗ ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ (ಪಾ. ಸೂ. ೫-೨-೯೪) ಎಂದು ಮತುಪ್‌ಪ್ರತ್ಯಯ ಬಂದು ಮಧುಮಾನ್ ಎಂದಾಗುತ್ತೆ. ಅತಿಶಯಾರ್ಥವನ್ನು ವಿವಕ್ಷೆಮಾಡಿದರೆ ಅತಿಶಾಯನೇ ತಮಬಿಷ್ಠನೌ (ಪಾ. ಸೂ. ೫-೩-೫೫) ಎಂದು ತಮಪ್‌ಪ್ರತ್ಯಯ ಬರುತ್ತೆ. ಅತಿಶಯೇನ ಮಧುಮಾನ್ ಮಧುಮತ್ತಮಃ ಎಂದು ವಿಗ್ರಹ. ಮತುಪ್ ತಮಪ್ ಎರಡೂ ಪಿತ್. ಅನುದಾತ್ತೌ ಸುಪ್ಪಿತೌ (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತಗಳು. ಮಧು ಎಂಬ ಪದಕ್ಕೆ ಬಂದ ಆದ್ಯುದಾತ್ತವೇ ನಿಲ್ಲುವುದು. ಮಿಕ್ಕವುಗಳಿಗೆ ಶೇಷಾನುದಾತ್ತ ಬರುತ್ತೆ. ಉದಾತ್ತದ ಮುಂದಿರುವ ಧು ಎಂಬುದು ಉದಾತ್ತಾದನುದಾತ್ತಸ್ಯ ಎಂಬುದರಿಂದ ಸ್ವರಿತ. ಮಿಕ್ಕವು ಸ್ವರಿತಾತ್ಸಂಹಿತಾಯಾಂ ಎಂದು ಪ್ರಚಯಗಳಾಗುವುವು.

**ಋತಾವೃಧಾ**—ಣಿಚ್ಪ್ರತ್ಯಯ ಇಲ್ಲದೇ ಇದ್ದರೂ ಅದರ ಅರ್ಥವನ್ನು ಹೇಳುವ ವೃಧು ವರ್ಧನೇ ಧಾತುವಿನ ಮುಂದೆ ಕ್ವಿಪ್‌ಚ (ಪಾ. ಸೂ. ೩-೬-೭೬) ಎಂದು ಕ್ವಿಪ್ ಪ್ರತ್ಯಯ, ಪ್ರತ್ಯಯದ ಅಕ್ಷರಗಳಿಗೆಲ್ಲ



CC-0. Jangamwadi Math Collection. Digitized by eGangotri

ಖಂಡಶಃ ಲೋಪ. ಅನ್ಯೇಷಾಮಪಿ ದೃಶ್ಯತೇ (ಪಾ. ಸೂ. ೬-೩-೧೩೭) ನಿಪಾತವೇ ಮೊದಲಾದ ಹಿಂದೆ ಹೇಳಿದ ಶಬ್ದಗಳಿಗಿಂತಲೂ ಬೇರೆಯಾದ ಪೂರ್ವಪದಗಳಿಗೂ ದೀರ್ಘ ದೃಷ್ಟವಾಗಿದೆ ಎಂದು ಋತಶಬ್ದಕ್ಕೆ ದೀರ್ಘ, ಋತಾವೃಧ್ ಎಂದಾಯಿತು. ಸಂಬೋಧನ ಪ್ರಥಮಾದ್ವಿವಚನ ಔಪ್ರತ್ಯಯ. ಋತಾವೃಧೌ ಎಂದಾಗುತ್ತೆ.

ತಿರೋ ಅಹ್ನ್ಯಂ—ಅಹ್ನಿ ಭವಃ ಎಂದರೆ ದಿವಸದಲ್ಲಿ ಆದುದು ಎಂದರ್ಥ. ಭವೇ ಛಂದಸಿ (ಪಾ.ಸೂ.೪-೪-೧೧೦) ಸಪ್ತಮ್ಯಂತವಾದ ಸಮರ್ಥದಮುಂದೆ ಭವ ಎಂಬ ಅರ್ಥದಲ್ಲಿ ಛಂದಸ್ಸಿನಲ್ಲಿ ಯತ್‌ಪ್ರತ್ಯಯ ಬರುತ್ತೆ ಎಂದು ಯತ್ ಅಹನ್+ಯ, ಹಕಾರದ ಮುಂದಿರುವ ಅನ್ ಎಂಬುದು ಟಿ- ಇದಕ್ಕೆ ನಸ್ತದ್ಧಿತೇ (ಪಾ. ಸೂ. ೬-೪-೧೪೪ ತದ್ಧಿತಪ್ರತ್ಯಯ ಪರದಲ್ಲಿರುವಾಗ ನಕಾರಾಂತವೂ ಭಸಂಜ್ಞೆಯುಳ್ಳದ್ದೂ ಆದ ಅಂಗದ ಟಿಗೆ ಲೋಪ ಬರುವುದು ಎಂದು ಅನ್‌ಗೆ ಲೋಪವು ಪ್ರಾಪ್ತವಾಗುತ್ತೆ. ಆದರೂ ಅಹ್ನಷ್ಟಖೋರೇವ (ಪಾ. ಸೂ. ೬-೪-೧೪೫) ಟ ಖ ಎರಡು ಪ್ರತ್ಯಯಗಳು ಮಾತ್ರ ಪರದಲ್ಲಿರುವಾಗಲೇ ಅಹನ್ ಶಬ್ದದ ಟಿಗೆ ಲೋಪ ಬರುತ್ತೆ. ಮಿಕ್ಕ ಪ್ರತ್ಯಯಗಳು ಪರದಲ್ಲಿರುವಾಗ ಟಿಲೋಪ ಬರುವುದಿಲ್ಲ ಎಂಬ ನಿಯಮದಿಂದ ಇಲ್ಲಿ ಅನ್‌ಗೆ ಲೋಪ ಬರುವುದಿಲ್ಲ. ತಿರಸ್+ಅಹನ್ ಯ ಎಂಬಲ್ಲಿ ಸಕಾರಕ್ಕೆ ಸಸಜುಷೋರುಃ (ಪಾ. ಸೂ. ೬-೧-೧೧೩) ಎಂದು ರು ಆದೇಶ. ಅದಕ್ಕೆ ಅತೋರೋ-ರಪ್ಲುತಾದಪ್ಲುತೇ (ಪಾ. ಸೂ. ೬-೧-೧೧೩) ಎಂದು ಉ ಆದೇಶ. ಗುಣ. ತಿರೋ+ಅಹನ್+ಯ ಇಲ್ಲಿ ಯೇಚಾ-ಭಾವಕರ್ಮಣೋಃ (ಪಾ. ಸೂ. ೬-೪-೧೬೮) ಭಾವ ಅಥವಾ ಕರ್ಮ ಎಂಬ ಅರ್ಥಗಳನ್ನು ಬೋಧಿಸದೇ ಇರುವ ಯಕಾರಾದಿ ತದ್ಧಿತಪ್ರತ್ಯಯ ಪರದಲ್ಲಿದ್ದರೆ ಅನ್ ಎಂಬುದು ಪ್ರಕೃತಿಭಾವವನ್ನು ಹೊಂದುವುದು ಎಂದು ವಿಹಿತ ವಾದ ಪ್ರಕೃತಿಭಾವವು ನ್ಯಾಯವಾಗಿ ಬರಬೇಕು- ಆದರೂ ಸರ್ವೇವಿಧಯಶ್ಛಂದಸಿ ವಿಕಲ್ಪ್ಯಂತೇ ( ಪರಿಭಾ. ೩೫) ಎಲ್ಲಾ ಶಾಸ್ತ್ರಗಳೂ ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುವುವು ಎಂಬ ಪರಿಭಾಷೆಯಿಂದ ಈ ಪ್ರಕೃತಿಭಾವ ಶಾಸ್ತ್ರವೂ ವಿಕಲ್ಪವಾಗುವುದರಿಂದ ಇಲ್ಲಿ ಬರುವುದಿಲ್ಲ. ಅಲ್ಲೋಪೋಽನಃ (ಪಾ. ಸೂ. ೬-೪-೧೩೪) ಕಪ್ರತ್ಯ ಯಾವಧಿಕಯಾದ್ಯಜಾದ್ಯನ್ಯತರಸ್ವಾದಿಪ್ರತ್ಯಯಾವ್ಯವಹಿತಪೂರ್ವದಲ್ಲಿರುವ ಅನ್ ಎಂಬುದರ ಹ್ರಸ್ವಾಕಾರಕ್ಕೆ ಲೋಪ ಬರುತ್ತೆ ಎಂದು ಅನ್ ನ ಅಗೆ ಲೋಪ. ತಿರೋ+ಅಹ್‌ನ್+ಯ ತಿರೋಹಿತಃ ಅಹ್ನ್ಯಃ ತಿರೋಅಹ್ನ್ಯಃ ಕುಗತಿಪ್ರಾದಯಃ (ಪಾ. ಸೂ. ೨-೨-೧೮) ಎಂಬುದರಿಂದ ಸಮಾಸ. ತಿರೋಽನ್ತರ್ಧೌ (ಪಾ. ಸೂ. ೧-೪-೭೧ ವ್ಯವಧಾನ ಎಂಬ ಅರ್ಥದಲ್ಲಿರುವ ತಿರಸ್ ಎಂಬುದು ಗತಿಸಂಜ್ಞೆಯನ್ನು ಹೊಂದುವುದು ಎಂದು ಗತಿಸಂಜ್ಞೆ ಇದೆ, ಸ್ವರಾದಿಯಲ್ಲಿ ತಿರಸ್ ಎಂದು ಪಾಠವಿದೆ. ಆದ್ದರಿಂದ ಸ್ವರಾದಿನಿಪಾತಮವ್ಯಯಂ ಎಂಬುದರಿಂದ ಅವ್ಯಯಸಂಜ್ಞೆ ಬರುತ್ತೆ. ತತ್ಪುರುಷೇತುಲ್ಯಾರ್ಥ-,(ಪಾ. ಸೂ. ೬-೨-೨) ಎಂದು ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತೆ.

ದಾಶುಷೇ—ದಾಶೃ ದಾನೇ ಧಾತು. ದಾಶ್ವಾನ್ಸಾಹ್ವಾನ್ಮೀಢ್ವಾಂಶ್ಚ(ಪಾ.ಸೂ.೬-೧-೧೨) ದಾಶೃ ದಾನೇ, ಷಹಮರ್ಷಣೇ, ಮಿಹ ಸೇಚನೇ, ಈ ಧಾತುಗಳು ಕ್ವಸುಪ್ರತ್ಯಯಾಂತವಾಗಿ ನಿಪಾತಿಸಲ್ಪಡುವುವು, ಮೂರು ಸ್ಥಳ ದಲ್ಲಿಯೂ ದ್ವಿತ್ವವಿಲ್ಲದೆ ಇರುವಿಕೆಯೂ ಇಡಾಗಮ ಇಲ್ಲದಿರುವಿಕೆಯೂ ಸಹ ನಿಪಾತಿಸಲ್ಪಡುತ್ತೆ. ಎರಡನೆಯದರಲ್ಲಿ ಪರಸ್ಮೈಪದವೂ, ಉಪಧಾಧೀರ್ಘವೂ ಸಹ ನಿಪಾತಿಸಲ್ಪಡುವುದು. ದಾಶ+ವಸ್=ದಾಶ್ವಸ್, ಙೇಪ್ರತ್ಯಯ, ದಾಶ್ವಸ್+ಏ ವಸೋಸ್ಸಂಪ್ರಸಾರಣಂ (ಪಾ. ಸೂ. ೬-೪-೧೩೧) ವಸುಪ್ರತ್ಯಯಾಂತವೂ ಭಸಂಜ್ಞಕವೂ ಆದ ಅಂಗಕ್ಕೆ ಸಂಪ್ರಸಾರಣ (ವಕಾರಕ್ಕೆ ಉಕಾರ) ಬರುತ್ತೆ ಎಂದು ವ್‌ಗೆ ಉ. ಪೂರ್ವರೂಪ. ದಾಶುಸ್+ಏ ಆದೇಶ ಪ್ರತ್ಯಯಯೋಃ (ಪಾ. ಸೂ. ೮-೩-೬೦) ಎಂದು ಸಕಾರಕ್ಕೆ ಷಕಾರ. ಶಾಸಿವಸಿಘಸೀನಾಂ ಚ (ಪಾ. ಸೂ. ಎಂಬಲ್ಲಿ ವಸ್ ಎಂಬುದರಿಂದ ವಸಧಾತುವಿಗೆ ಗ್ರಹಣವು ಪ್ರತ್ಯಯಕ್ಕೆ ಗ್ರಹಣವಿಲ್ಲ. ಸಹಚರಿತಾಸಹಚರಿತ ಯೋಸ್ಸಹಚರಿತಸ್ಯ ಗ್ರಹಣಮ್ (ಪರಿಭಾ ೧೧೨) ಎಂಬ ಪರಿಭಾಷೆಯಿಂದ ಪೂರ್ವೋತ್ತರಗಳಲ್ಲಿರುವ ಧಾತು ಸಾಹಚರ್ಯದಿಂದ ಮಧ್ಯದಲ್ಲಿರುವ ವಸ್ ಎಂಬುದರಿಂದಲೂ ಧಾತುವಿಗೆ ಗ್ರಹಣವು ಉಚಿತ. ಈ ಸೂತ್ರದಲ್ಲಿ ಶೇಖರ



CC-0. Jangamwadi Math Collection. Digitized by eGangotri

ಕಾರರು ಆದೇಶಪ್ರತ್ಯಯತ್ವಾಭಾವಾದಪ್ರಾಪ್ತೇ ವಿಧಿರಯಮ್ ಎಂದಿರುವರು. ಇಂತಹ ಭ್ರಮನಿವಾರಣೆಗಾಗಿಯೇ ೧ ನೇ ಗಣದಲ್ಲಿ ವಸ ನಿವಾಸೇ ಧಾತುನಿರೂಪಣದಲ್ಲಿ ಕೌಮುದೀಕಾರರು ಈ ಸೂತ್ರವನ್ನು ಉದಹರಿಸಿರುವರು. ॥ ೧ ॥

॥ ಸಂಹಿತಾಪಾಠಃ ॥

ತ್ರಿವಂಧುರೇಣ ತ್ರಿವೃತಾ ಸುಪೇಶಸಾ ರಥೇನಾ ಯಾತಮಶ್ವಿನಾ।
ಕಣ್ವಾಸೋ ವಾಂ ಬ್ರಹ್ಮ ಕೃಣ್ವಂತ್ಯಧ್ವರೇ ತೇಷಾಂ ಸು ಶೃಣುತಂ
ಹವಂ ॥ ೨ ॥

॥ ಪದಪಾಠಃ ॥

ತ್ರಿಽವಂಧುರೇಣ । ತ್ರಿವೃತಾ । ಸುಽಪೇಶಸಾ । ರಥೇನ । ಆ । ಯಾತಂ ।
ಅಶ್ವಿನಾ ॥
ಕಣ್ವಾಸಃ । ವಾಂ । ಬ್ರಹ್ಮ । ಕೃಣ್ವಂತಿ । ಅಧ್ವರೇ । ತೇಷಾಂ । ಸು । ಶೃಣುತಂ ।
ಹವಂ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಶ್ವಿನಾ ತ್ರಿವಂಧುರೇಣೋನ್ನತಾನತರೂಪತ್ರಿವಿಧಬಂಧನಕಾಷ್ಠಯುಕ್ತೇನ । ತ್ರಿವೃತಾಪ್ರತಿಹತಗತಿತಯಾ ಲೋಕತ್ರಯೇ ವರ್ತಮಾನೇನ ಸುಪೇಶಸಾ ಶೋಭನಸುವರ್ಣಯುಕ್ತೇನ ರಥೇನಾ ಯಾತಂ। ಇಹಾಗಚ್ಛತಂ । ಕಣ್ವಾಸಃ ಕಣ್ವಪುತ್ರಾ ಮೇಧಾವಿನ ಋತ್ವಿಜೋ ವಾ ವಾಂ ಯುವಯೋರಧ್ವರೇಯಾಗೇ ಬ್ರಹ್ಮ ಸ್ತೋತ್ರರೂಪಂ ಮಂತ್ರಂ ಹವಿರ್ಲಕ್ಷಣಮನ್ನಂ ವಾ ಕೃಣ್ವಂತಿ । ಕುರ್ವಂತಿ । ತೇಷಾಂ ಕಣ್ವಾನಾಂ ಹವಮಾಹ್ವಾನಂ ಸು ಶೃಣುತಂ । ಸುಷ್ಠ್ವಾದರೇಣ ಶೃಣುತಂ ॥ ತ್ರಿವಂಧುರೇಣ । ಬಧ್ನಂತೀತಿ ಬಂಧುರಾಃ । ಬಂಧೇರೌಣಾದಿಕ ಉರನ್ಪ್ರತ್ಯಯಃ । ತ್ರಯೋ ಬಂಧುರಾ ಯಸ್ಯಾಸೌ ತ್ರಿಬಂಧುರಃ । ತ್ರಿಚಕ್ರಾದಿಷು ಪಾಠಾತ್ ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಂ । ಪಾ. ೬-೨-೧೯೯-೧ । ಇತ್ಯುತ್ತರಪದಾಂತೋದಾತ್ತತ್ವಂ । ತ್ರಿವೃತಾ । ತ್ರಿಷು ಲೋಕೇಷು ವರ್ತತ ಇತಿ ತ್ರಿವೃತ್ । ಕ್ವಿಪ್ಚೇತಿ ಕ್ವಿಪ್ । ಸುಪೇಶಸಾ । ಪೇಶ ಇತಿ ಹಿರಣ್ಯನಾಮ । ಶೋಭನಂ ಪೇಶೋ ಯಸ್ಯಾಸೌ ಸುಪೇಶಾಃ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಶೃಣುತಂ । ಶ್ರು ಶ್ರವಣೇ । ಶ್ರುವಃ ಶೃ ಚೇತಿ ಶ್ನುಃ । ತತ್ಸಂನಿಯೋಗೇನ ಧಾತೋಃ ಶೃಭಾವಶ್ಚ । ಹವಂ । ಹೂಯತೇರ್ಭಾವೇಽನುಪಸರ್ಗಸ್ಯ । ಪಾ. ೩-೩-೭೫। ಇತ್ಯಪ್ । ಸಂಪ್ರಸಾರಣಂ ಚ ಗುಣಾವಾದೇಶೌ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ॥



CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ತ್ರಿವಂಧುರೇಣ—ಮೂರು ಮೂಕಿಮರಗಳಿಂದ ಮನೋಹರವಾಗಿರುವುದೂ । ತ್ರಿವೃತಾ—(ಪ್ರತಿಬಂಧಕವಿಲ್ಲದಿರುವುದರಿಂದ) ಮೂರು ಲೋಕಗಳಲ್ಲಿಯೂ ಇರತಕ್ಕದ್ದೂ (ಸಂಚರಿಸತಕ್ಕದ್ದೂ) । ಸುಪೇಶಸಾ—ಶ್ರೇಷ್ಠವಾದ ಸುವರ್ಣದಿಂದ ನಿರ್ಮಿತವಾದದ್ದೂ ಆದ । ರಥೇನ—ರಥದಿಂದ ಆಯಾತಂ—(ಇಲ್ಲಿಗೆ) ಬನ್ನಿರಿ । ಕಣ್ವಾಸಃ—ಕಣ್ವಪುತ್ರರು ಅಥವಾ ಮೇಧಾವಿಗಳಾದ ಋತ್ವಿಕ್ಕುಗಳು । ವಾಂ—ನಿಮಗೆ । ಅಧ್ವರೇ—ಯಾಗದಲ್ಲಿ । ಬ್ರಹ್ಮ—ಸ್ತೋತ್ರರೂಪವಾದ ಮಂತ್ರವನ್ನು ಅಥವಾ ಹವಿಸ್ಸಿನ ರೂಪದಲ್ಲಿರುವ ಅನ್ನವನ್ನು । ಕೃಣ್ವಂತಿ—ಮಾಡುತ್ತಾರೆ (ಅರ್ಪಿಸುತ್ತಾರೆ) । ತೇಷಾಂ—ಆ ಕಣ್ವ ಪುತ್ರರ ಅಥವಾ ಮೇಧಾವಿಗಳಾದ ಋತ್ವಿಕ್ಕುಗಳ । ಹವಂ—ಆಹ್ವಾನವನ್ನು । ಸು ಶೃಣುತಂ—ಆದರದಿಂದ ಕೇಳಿರಿ

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ಸುವರ್ಣನಿರ್ಮಿತವಾದದ್ದೂ ಮೂರು ಮೂಕಿಮರಗಳಿಂದ ಕೂಡಿ ಮನೋಹರವಾದದ್ದೂ ಆದ ರಥವು ಪ್ರತಿಬಂಧಕವಿಲ್ಲದೇ ಮೂರು ಲೋಕದಲ್ಲೂ ಸಂಚರಿಸುವುದು. ಆ ರಥದಲ್ಲಿ ಕುಳಿತುಕೊಂಡು ಈ ಯಜ್ಞಭೂಮಿಗೆ ಬನ್ನಿ. ಇಲ್ಲಿ ಕಣ್ವಪುತ್ರರು ಅಥವಾ ಮೇಧಾವಿಗಳಾದ ಋತ್ವಿಕ್ಕುಗಳು ನಿಮಗೆ ಯಜ್ಞದಲ್ಲಿ ಸ್ತೋತ್ರರೂಪವಾದ ಮಂತ್ರವನ್ನು ಅಥವಾ ಹವಿಸ್ಸಿನ ರೂಪದಲ್ಲಿರುವ ಅನ್ನವನ್ನು ಅರ್ಪಿಸತ್ತಾರೆ. ಅವರ ಆಹ್ವಾನವನ್ನು ಆದರದಿಂದ ಕೇಳಿರಿ.

## English Translation.

Come hither, O Aswins, in your triangular and beautiful car of the three-fold pole. The Kanwas compose and repeat your praise at the sacrifice ; Kindly hear their invocation.

॥ ವಿಶೇಷ ವಿಷಯಗಳು ॥

ಈ ಋಕ್ಕಿನಲ್ಲಿ ಅಶ್ವಿನೀದೇವತೆಗಳ ರಥಸ್ವರೂಪವನ್ನು ಹೇಳಿದೆ. ತ್ರಿವಂಧುರೇಣ ತ್ರಿವೃತಾ ರಥೇನ ಇವರ ರಥವು ತ್ರಿಕೋಣಾಕಾರವಾಗಿಯೂ ಮೂರು ಕಂಭಗಳುಳ್ಳದ್ದಾಗಿಯೂ ಇರುವುದೆಂದಭಿಪ್ರಾಯವು. ಭಾಷ್ಯಕಾರರು ತ್ರಿವೃತಾ ಎಂಬ ಶಬ್ದಕ್ಕೆ ಮೂರು ಲೋಕಗಳಲ್ಲಿಯೂ ಅಪ್ರತಿಹತವಾದ ಗಮನವುಳ್ಳದ್ದೆಂದು ಅರ್ಥವಿವರಣೆ ಮಾಡಿರುವರು. ಈ ಅಶ್ವಿನೀದೇವತೆಗಳ ರಥವನ್ನು ಈ ಶಬ್ದಗಳಿಂದ ವರ್ಣಿಸುವುದು ಋಗ್ವೇದದಲ್ಲಿ ಕೆಲವು ಕಡೆ ಕಂಡುಬರುವುದು. ಉದಾಹರಣೆಗಾಗಿ

ತ್ರಿವಂಧುರೇಣ ತ್ರಿವೃತಾ ರಥೇನ ತ್ರಿಚಕ್ರೇಣ ಸುವೃತಾ ಯಾತಮರ್ವಾಕ್ ॥

(ಋ. ಸಂ. ೧-೧೧೮-೨)

ತ್ರಿವಂಧುರೇಣ ತ್ರಿವೃತಾ ರಥೇನಾ ಯಾತಮಶ್ವಿನಾ ॥

(ಋ- ಸಂ. ೮-೮೫-೮)



CC-0. Jangamwadi Math Collection. Digitized by eGangotri

ಆರ್ವಾಙ್ ತ್ರಿಚಕ್ರೋ ಮಧುವಾಹನೋ ರಥೋ ಜೀರಾಶ್ವೋ ಅಶ್ವಿನೋರ್ಯಾತು ಸುಷ್ಟುತಃ|
ತ್ರಿವಂಧುರೋ ಮಘವಾ ವಿಶ್ವಸೌಭಗಃ ಶಂ ನ ಆ ವಕ್ಷದ್ದ್ವಿಪದೇ ಚತುಷ್ಪದೇ ॥
(ಋ. ಸಂ. ೧-೧೫೭-೩)

ಇತ್ಯಾದಿ ಋಕ್ಕುಗಳನ್ನು ಕೊಡಬಹುದು ಈ ಋಕ್ಕುಗಳಲ್ಲಿ ಹೇಳಿರುವಂತೆ ಅಶ್ವಿನೀದೇವತೆಗಳ ರಥಕ್ಕೆ ಮೂರು ಚಕ್ರಗಳೆಂದು ಅನೇಕ ಕಡೆಗಳಲ್ಲಿಯೂ ವರ್ಣಿಸಲ್ಪಟ್ಟಿರುವುದು. ಆದುದರಿಂದ ಅಶ್ವಿನೀದೇವತೆಗಳ ರಥವನ್ನು ವರ್ಣನೆ ಮಾಡುವಾಗ ತ್ರಿವಂಧುರ, ತ್ರಿವೃತ, ತ್ರಿಚಕ್ರ ಎಂಬ ಶಬ್ದಗಳು ಅನೇಕ ಋಷಿಗಳಿಂದ ಉಪಯೋಗಿಸಲ್ಪಟ್ಟಿರುವುದರಿಂದ ಈ ಶಬ್ದಗಳಿಗೆ ಒಂದು ನಿರ್ದಿಷ್ಟವಾದ ಅರ್ಥವಿರುವುದೆಂದು ತಿಳಿಯಬಹುದು.

ಕಣ್ವಾಸಃ—ಮೇಧಾವಿನೋ ಋತ್ವಿಜಃ | ಬುದ್ಧಿವಂತರಾದ ಋತ್ವಿಕ್ಕುಗಳು, ಅಥವಾ ಕಣ್ವಋಷಿಯ ಪುತ್ರರು, ಕಣ್ವಋಷಿಯ ವಂಶಸ್ಥರು.

ಬ್ರಹ್ಮ—ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನನಾಮಗಳ ಮಧ್ಯದಲ್ಲಿ ಬ್ರಹ್ಮಶಬ್ದವು ಪಠಿತವಾಗಿರುವುದರಿಂದ ಬ್ರಹ್ಮಶಬ್ದಕ್ಕೆ ಅನ್ನವೆಂದೂ, (ನಿ. ೩-೯) ಮಘಂ, ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಬ್ರಹ್ಮಶಬ್ದವು ಪಠಿತವಾಗಿರುವುದರಿಂದ ಬ್ರಹ್ಮಶಬ್ದಕ್ಕೆ ಧನವೆಂದೂ (ನಿ. ೩-೯) ಮತ್ತು (ನಿ. ೧೨-೩೪) ಪ್ರಕಾರ ಬ್ರಹ್ಮಶಬ್ದಕ್ಕೆ ಸ್ತೋತ್ರವೆಂದೂ ಮೂರು ಅರ್ಥಗಳಿರುವವು. ಇಲ್ಲಿ ಯಾವ ಅರ್ಥವನ್ನಾದರೂ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

ತ್ರಿಬನ್ಧುರೇಣ—ಬನ್ಧ ಬನ್ಧನೇ ಧಾತು. ಬಧ್ನಂತಿ ಇತಿ ಬನ್ಧುರಾಃ ಎಂದು ವಿಗ್ರಹ. ಬನ್ಧ ಧಾತುವಿನ ಮುಂದೆ ಔಣಾದಿಕವಾದ ಉರನ್ ಪ್ರತ್ಯಯ. ತ್ರಯಃ ಬನ್ಧುರಾಃ ಯಸ್ಯ ಸಃ, ಮೂರು ವಿಧವಾದ ಕಟ್ಟುವ ಮರವುಳ್ಳ ಎಂದರ್ಥ. ಬನ್ಧುರ ಶಬ್ದವು ನಿತ್ಸ್ವರದಿಂದ ಆದ್ಯುದಾತ್ತ. ತ್ರಿಶಬ್ದವು ಪ್ರಾತಿಪದಿಕ ಸ್ವರದಿಂದ ಅಂತೋದಾತ್ತ. ಬಹುವ್ರೀಹಿಸಮಾಸ ಬಂದಮೇಲೆ ಬಹುವ್ರೀಹೌಪ್ರಕೃತ್ಯಾ-,(ಪಾ. ಸೂ. ೬-೨-೧ ) ಎಂದು ಪೂರ್ವಪದಪ್ರಕೃತಿಸ್ವರಬರಬೇಕಾಗುತ್ತದೆ. ಅಂತೋದಾತ್ತಪ್ರಕರಣೇ ತ್ರಿಚಕ್ರಾದೀನಾಂ ಛಂದಸ್ಯುಪಸಂಖ್ಯಾನಮ್ (ಪಾ. ಸೂ. ೬-೨-೧೯೯-೧) ಎಂದರೆ ಅಂತೋದಾತ್ತಪ್ರಕರಣದಲ್ಲಿ ತ್ರಿಚಕ್ರಾದೀನಾಂ ಛಂದಸಿ ಎಂದು ಪಠಿಸಬೇಕು ಎಂದರ್ಥ. ಈ ವಚನಕ್ಕೆ ಛಂದಸ್ಸಿನಲ್ಲಿ ತ್ರಿಚಕ್ರ, ತ್ರಿಬಂಧುರ ಮೊದಲಾದ ಶಬ್ದಗಳ ಕೊನೆಯ ವರ್ಣಕ್ಕೆ ಉದಾತ್ತ ಬರುತ್ತೆ ಎಂದರ್ಥ. ಇದರಿಂದ ಪೂರ್ವಪದಪ್ರಕೃತಿಸ್ವರವನ್ನು ಬಾಧಿಸಿ ಅಂತೋದಾತ್ತ ಬರುತ್ತೆ.

ತ್ರಿವೃತಾ—ತ್ರಿಷು ಲೋಕೇಷು ವರ್ತತೇ=ಮೂರು ಲೋಕಗಳಲ್ಲಿಯೂ ಇದೆ ಎಂದು ವಿಗ್ರಹ. ತ್ರಿಶಬ್ದೋಪಪದಕವಾದ ವೃತು ವರ್ತನೇ ಎಂಬ ಧಾತುವಿನ ಮುಂದೆ ಕ್ವಿಪ್ ಬರುತ್ತೆ. ತೃತೀಯೈಕವಚನಾಂತ.

ಸುಪೇಶಸಾ—ಪೇಶ ಎಂದು ಹಿರಣ್ಯ (ಚಿನ್ನ)ಕ್ಕೆ ಹೆಸರು. ಶೋಭನಂ ಪೇಶಃ ಯಸ್ಯ ಸಃ ಒಳ್ಳೆಯ ಚಿನ್ನವುಳ್ಳ ಎಂದರ್ಥ. ಆದ್ಯುದಾತ್ತಂದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಸು ಶಬ್ದದ ಮುಂದಿರುವ ಉತ್ತರ ಪದವು ಎರಡು ಅಚ್ಚುಗಳನ್ನು ಹೊಂದಿದ್ದು ಆದ್ಯುದಾತ್ತವಾಗಿದ್ದರೆ ಅದು ಛಂದಸ್ಸಿನಲ್ಲಿ ಆದ್ಯುದಾತ್ತವಾಗುತ್ತೆ ಎಂದು ಅರ್ಥ. ಇಲ್ಲಿ ದೀಪನಾರ್ಥಕವಾದ ಪಿಶಿ ಧಾತುವಿನ ಮುಂದೆ ಔಣಾದಿಕ ಅಸುನ್ ಪ್ರತ್ಯಯ ಬಂದು ಪೇಶ ಎಂಬುದು ಮಧ್ಯೋದಾತ್ತ ಎಂದು ಏರ್ಪಡುತ್ತೆ.



CC-0. Jangamwadi Math Collection. Digitized by eGangotri

ಶೃಣುತಮ್—ಶ್ರು|ಶ್ರವಣೇ ಧಾತು. ಲೋಟ್ ಮಧ್ಯಮಪುರುಷ ದ್ವಿವಚನ ಥಸ್. **ಲೋಟೋ ಲಙ್ವತ್** (ಪಾ. ಸೂ. ೩-೪-೮೫) ಎಂದು ಲಙ್ವದ್ಭಾವ. **ತಸ್ಥಸ್ಥಮಿಪಾಂತಾಂತಂತಾಮಃ** (ಪಾ. ಸೂ. ೩-೪-೧೦೭) ಎಂದು ತಮ್ ಆದೇಶ. ಶ್ರು+ತ ಈಗ **ಶ್ರುವಃಶೃಚ** (ಪಾ. ಸೂ. ೩-೧-೭೪) ಶಬ್ವಿಷಯಲ್ಲಿ ಎಂದರೆ ಕರ್ತೃ ಎಂಬ ಅರ್ಥಕೊಡುವ ಸಾರ್ವಧಾತುಕ ಪ್ರತ್ಯಯವು ಪರದಲ್ಲಿರುವಾಗ ಶ್ರು ಧಾತುವಿಗೆ ಶೃ ಎಂಬ ಆದೇಶವೂ ಶಬ್ವಿಕರಣಕ್ಕೆ ಬದಲಾಗಿ ಶ್ನು ವಿಕರಣವೂ ಬರುತ್ತೆ ಎಂದು ಶ್ನುವಿಕರಣ ಶೃ ಆದೇಶಗಳು ಬಂದರೆ ಶೃ+ನು+ತ, ಇಲ್ಲಿ ಆದೇಶವಿಕರಣಗಳೆರಡೂ ಸನ್ನಿಯೋಗಶಿಷ್ಟವಾದುವು. ಸನ್ನಿಯೋಗ= ಸಹಭಾವ, ಶಿಷ್ಟ=ವಿಹಿತ ವಾದುದು. ಆದ್ದರಿಂದ ಎರಡೂ ಜತೆಯಲ್ಲಿ ಲಕ್ಷ್ಯಗಳಲ್ಲಿ ಬರುವುವು. **ಋವರ್ಣಾನ್ನಸ್ಯ ಣತ್ವಂ ವಾಚ್ಯಂ** ಎಂದು ನಕಾರಕ್ಕೆ ಣಕಾರ. ಶೃಣುತ ಎಂದಾಗುತ್ತೆ.

ಹವಮ್—ಹ್ವೇಙ್ ಸ್ಪರ್ಧಾಯಾಂ ಶಬ್ದೇ ಚ ಧಾತು. **ಭಾವೇಽನುಪಸರ್ಗಸ್ಯ** (ಪಾ. ಸೂ. ೩-೩-೭೫) ಭಾವಾರ್ಥದಲ್ಲಿ ಉಪಸರ್ಗದಿಂದ ಕೂಡಿಲ್ಲದ ಹ್ವೇಙ್ ಧಾತುವಿಗೆ ಸಂಪ್ರಸಾರಣ (ವಕಾರಕ್ಕೆ ಉಕಾರ)ವೂ, ಆ ಧಾತುಗಿಂತಲೂ ಪರದಲ್ಲಿ ಅಪ್ ಪ್ರತ್ಯಯವೂ ಬರುತ್ತೆ ಎಂದು ಅಪ್ ಸಂಪ್ರಸಾರಣಗಳು ಬಂದರೆ ಹು+ಏ+ಅ, ಪೂರ್ವರೂಪ. ಹು+ಅ, **ಸಾರ್ವಧಾತುಕಾರ್ಧಧಾತುಕಯೋಃ** ಎಂದು ಗುಣ, ಉಕಾರಕ್ಕೆ ಓಕಾರ. ಆದಕ್ಕೆ ಅವ್ ಆದೇಶ ದ್ವಿತೀಯಾ ಏಕವಚನ ಅಮ್, ಹವಮ್ ಎಂದಾಗುತ್ತೆ. ಇಲ್ಲಿ ಅಪ್ ಪ್ರತ್ಯಯ ಪಿತ್, ಅಮ್ ವಿಭಕ್ತಿಯು ಸುಪ್ ಆದ್ದರಿಂದ **ಅನುದಾತ್ತೌ ಸುಪ್ಪಿತೌ** ಎಂದು ಎರಡೂ ಅನುದಾತ್ತಗಳು. ಧಾತು ಸ್ವರವೇ ಉಳಿಯುತ್ತದೆ ॥ ೨ ॥

ಸಂಹಿತಾಪಾಠಃ

ಅಶ್ವಿನಾ ಮಧುಮತ್ತಮಂ ಪಾತಂ ಸೋಮಮೃತಾವೃಧಾ ।
ಅಥಾದ್ಯ ದಸ್ರಾ ವಸು ಬಿಭ್ರತಾ ರಥೇ ದಾಶ್ವಾಂಸಮುಪ
ಗಚ್ಛತಂ ॥ ೩ ॥

ಪದಪಾಠಃ

ಅಶ್ವಿನಾ । ಮಧುಮತ್ಽತಮಂ । ಪಾತಂ । ಸೋಮಂ । ಋತಽವೃಧಾ ।
ಅಥ । ಅದ್ಯ । ದಸ್ರಾ । ವಸು । ಬಿಭ್ರತಾ । ರಥೇ । ದಾಶ್ವಾಂಸಂ । ಉಪ ।
ಗಚ್ಛತಂ ॥ ೩ ॥

॥ ಸಾಯಣಭಾಷ್ಯಂ ॥

ಹೇ ಋತಾವೃಧಾ ಯಜ್ಞಸ್ಯ ವರ್ಧಕಾವಶ್ವಿನೌ ಮಧುಮತ್ತಮಂ ಸೋಮಂ ಪಾತಂ । ಪಿಬತಂ ಹೇ ದಸ್ರಾಶ್ವಿನೌ ಸೋಮಪಾನಾರ್ಥಮಥಾಸ್ಮದಾಹ್ವಾನಾನಂತರಮದ್ಯಾಸ್ಮಿನ್ದಿನೇ ರಥೇ ಸ್ವಕೀಯೇ ವಸು





CC-0. Jangamwadi Math Collection. Digitized by eGangotri

ಬಿಭ್ರತಾ ಅಸ್ಮದುಪಯುಕ್ತಂ ಧನಂ ಧಾರಯಂತೌ ದಾಶ್ವಾಂಸಂ ಹವಿಷ್ಪ್ರದಂ ಯಜಮಾನಮುಪ ಗಚ್ಛತಂ ಸಮೀಪೇ ಪ್ರಾಪ್ನುತಂ ॥ ಬಿಭ್ರತಾ । ಡುಭೃಞ್ ಧಾರಣಪೋಷಣಯೋಃ । ಶತರಿ ಜುಹೋತ್ಯಾದಿಭ್ಯೋದಿ-ತ್ವಾಚ್ಛಪಃ ಶ್ಲುಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಶತುರ್ಙಿತ್ತ್ವಾದ್ಗುಣಾಭಾವೇ ಯಣಾದೇಶಃ । ಅಭ್ಯ-ಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

**ಋತಾವೃಧಾ**—ಯಜ್ಞವರ್ಧಕರಾದ ಅಶ್ವಿದೇವತೆಗಳೇ । **ಮಧುಮತ್ತಮಂ**—ಅತ್ಯಂತ ಮಧುರವಾದ **ಸೋಮಂ**—ಸೋಮರಸವನ್ನು । **ಪಾತಂ**—ಕುಡಿಯಿರಿ। **ದಸ್ರಾ**—ರಮಣೀಯರೂಪರಾದ ಅಶ್ವಿನೀ ದೇವತೆಗಳೇ। (ಸೋಮರಸಪಾನಕ್ಕಾಗಿ) । **ಅಥ**—ನಮ್ಮ ಆಹ್ವಾನದ ಅನಂತರ । **ಅದ್ಯ**—ಇಂದು । **ರಥೇ**—ನಿಮ್ಮ ರಥದಲ್ಲಿ । **ವಸು**—(ನಮಗೆ ಉಪಯುಕ್ತವಾದ) ಧನವನ್ನು । **ಬಿಭ್ರತಾ**—ಹೊತ್ತುಕೊಂಡು । **ದಾಶ್ವಾಂಸಂ**—ಹವಿರ್ದಾತನಾದ ಯಜಮಾನನನ್ನು ಕುರಿತು । **ಉಪ ಗಚ್ಛತಂ**—ಸಮೀಪಿಸಿರಿ.

॥ ಭಾವಾರ್ಥ ॥

ಯಜ್ಞವರ್ಧಕರೂ ರಮಣೀಯರೂಪವುಳ್ಳವರೂ ಆದ ಎಲೈ ಅಶ್ವಿನೀದೇವತೆಗಳೇ, ಅತ್ಯಂತ ಮಧುರವಾದ ಸೋಮರಸವನ್ನು ಪಾನಮಾಡಿರಿ. ಸೋಮರಸಪಾನಕ್ಕಾಗಿ ನಮ್ಮ ಆಹ್ವಾನವನ್ನು ಮನ್ನಿಸಿ ನಿಮ್ಮ ರಥದಲ್ಲಿ ನಮಗೆ ಉಪಯುಕ್ತವಾದ ಧನವನ್ನು ಹೊತ್ತುಕೊಂಡು ಹವಿರ್ದಾತನಾದ ಯಜಮಾನನ ಸಮೀಪಕ್ಕೆ ಬನ್ನಿ.

## English Translation.

Aswins, encouragers of sacrifice and of pleasing aspects, drink this most sweet soma juice; approach to-day the giver of the offering, bearing wealth.

॥ ವಿಶೇಷ ವಿಷಯಗಳು ॥

**ಋತಾವೃಧಾ**— ಈ ಶಬ್ದದ ವಿವರಣೆಯನ್ನು ಈ ಸೂಕ್ತದ ಮೊದಲನೆಯ ಋಕ್ಕಿನಲ್ಲಿಯೇ ಕೊಟ್ಟಿದೆ. ಈ ಶಬ್ದವು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡುವಾಗ ವಿಶೇಷವಾಗಿ ಉಪಯೋಗಿಸಲ್ಪಡುವುದು.

**ಅದ್ಯ**—ಈಗ ಅಥವಾ ಈದಿನ.

**ದಸ್ರಾ**—ಅಶ್ವಿನೀದೇವತೆಗಳಲ್ಲಿ ಒಬ್ಬನ ಹೆಸರು ದಸ್ರಾ ಎಂದೂ ಮತ್ತೊಬ್ಬನ ಹೆಸರು ನಾಸತ್ಯಾ ಎಂದೂ ಇದ್ದರೂ ಇಲ್ಲಿ ಈ ಶಬ್ದವು ಇಬ್ಬರನ್ನೂ ನಿರ್ದೇಶಿಸಲು ಉಪಯೋಗಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಬಿಭ್ರತಾ**— ಡುಭೃಞ್ ಧಾರಣಪೋಷಣಯೋಃ ಧಾತು. ಲಟ್. ಲಟಶ್ಶತೃಶಾನಚಾ— (ಪಾ. ಸೂ.೩-೨-೧೨೪) ಎಂದು ಲಟ್ಟಿಗೆ ಶತೃ ಆದೇಶ. ಶಪ್. ಜುಹೋತ್ಯಾದಿಭ್ಯಃ ಶ್ಲುಃ (ಪಾ. ಸೂ.೨-೪-೭೫) ಜುಹೋತ್ಯಾದಿ ಧಾತುಗಳ ಮುಂದಿರುವ ಶಪ್‌ಗೆ ಶ್ಲು (ಲೋಪ) ಬರುತ್ತೆ ಎಂದು ಶಪ್‌ಗೆ ಲೋಪ, ಶ್ಲು



CC-0. Jangamwadi Math Collection. Digitized by eGangotri

(ಪಾ. ಸೂ. ೬-೧-೧೦) ಶ್ಲು ಶಬ್ದವನ್ನುಚ್ಚರಿಸಿ ವಿಕರಣಕ್ಕೆ ಲೋಪ ಬರಲು ಧಾತುವಿಗೆ ದ್ವಿತ್ವ ಎಂದರೆ ಎರಡಾವರ್ತಿ ಪ್ರಯೋಗ ಬರುತ್ತೆ, ಎಂದು ದ್ವಿತ್ವ ಬಂದರೆ ಭೃ+ಭೃ+ಅತ್ ಭೃಞಾಮಿತ್ (ಪಾ. ಸೂ. ೭-೪-೭೬) ನಿಜಾಂತ್ರಯಾಣಾಂಗುಣಃ ಶ್ಲೌ (ಪಾ. ಸೂ.೭-೪-೭೫) ಎಂಬ ಸೂತ್ರದಿಂದ ತ್ರಯಾಣಾಂ ಶ್ಲೌ ಎಂಬ ಪದಗಳು ಅನುವೃತ್ತವಾಗುವುವು. ಭೃಞ್ ಮೊದಲಾದಮೂರು ಧಾತುಗಳ ಅಭ್ಯಾಸಕ್ಕೆ ಇತ್ವವು ಶ್ಲು ಬಂದಾಗ ಬರುತ್ತೆ- ಎಂದು ಇತ್ವಬರುತ್ತೆ. ಅದು ಋಕಾರ ಸ್ಥಾನದಲ್ಲಿ ಬರುವುದರಿಂದ ಉರಣ್ರಪರಃ ಎಂದು ರೇಫ ಶಿರಸ್ಕವಾಗಿ ಬರುತ್ತೆ, ಭಿರ್+ಭೃ+ಅತ್ ಹಲಾದಿಃ ಶೇಷಃ ಎಂದು ರೇಫಕ್ಕೆ ಲೋಪ, ಶತೃಪ್ರತ್ಯಯ ಪಿತ್ ಅಲ್ಲ. ಸಾರ್ವಧಾತುಕವೂ ಆಗಿದೆ. ಅದ್ದರಿಂದ ಸಾರ್ವಧಾತುಕಮಪಿತ್ (ಪಾ. ಸೂ. ೧-೨-೪) ಪಿತ್ ಅಲ್ಲದ ಸಾರ್ವಧಾತುಕವು ಙಿತ್ ಅಗುತ್ತೆ ಎಂಬ ಅತಿದೇಶಶಾಸ್ತ್ರದಿಂದ ಶತೃಪ್ರತ್ಯಯವು ಙಿತ್ತಾಗುತ್ತೆ. ಆದ್ದರಿಂದ ಕ್ಙಿತಿ ಚ (ಪಾ. ಸೂ. ೧-೧-೫) ಗಿತ್-ಕಿತ್-ಅಥವಾ ಙಿತ್ ಆದ ಪ್ರತ್ಯಯಗಳನ್ನು ನಿಮಿತ್ತ ಮಾಡಿಕೊಂಡು ಇಗ್ಲಕ್ಷಣವಾದ ಗುಣಬರುವುದಿಲ್ಲ ಎಂದು ನಿಷೇಧ ಬರುವುದರಿಂದ ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪ ) ಎಂದು ಗುಣ ಬರುವುದಿಲ್ಲ. ಇಕೋ ಯಣಚಿ ಎಂಬುದರಿಂದ ಯಣಾದೇಶ ಬರುತ್ತೆ. ಆಂದರೆ ಋಗೆ ರೇಫ ಬರುತ್ತೆ. ಪ್ರಥಮಾದ್ವಿಚನ ಔ ಪ್ರತ್ಯಯಕ್ಕೆ ಸುಪಾಂ ಸುಲುಕ್, (ಪಾ. ಸೂ. ೭-೧-೩೯) ಎಂದು ಆಕಾರದೇಶ, ಬಿಭ್ರತಾ ಎಂದಾಗುತ್ತೆ.

ಅಭ್ಯಸ್ಥಾನಾಮಾದಿಃ—(ಪಾ. ಸೂ. ೬-೧-೧೮೯) ಇಡಾಗಮಭಿನ್ನವಾದ ಅಜಾದಿಯಾದ ಲಕಾರಸ್ಥಾನದಲ್ಲಿ ಬಂದ ಸಾರ್ವಧಾತುಕವು ಪರದಲ್ಲಿದ್ದರೆ ಅಭ್ಯಸ್ತದ ಎಂದರೆ ಎರಡಾವರ್ತಿ ಪ್ರಯೋಗಿಸಿದ ಶಬ್ದದ ಆದಿಯು ಉದಾತ್ತವಾಗುತ್ತೆ ಎಂದು ಆದ್ಯುದಾತ್ತ ಬರುತ್ತೆ. ಇಲ್ಲಿ ಅತ್ ಎಂಬುದು ಅಜಾದಿಯಾದ ಲಸ್ಥಾನಿಕಸಾರ್ವಧಾತುಕ ಬಿಭೃ ಎಂಬುದು ಅಭ್ಯಸ್ತ, ಅದರ ಆದಿ ಭಿ, ಆದಕ್ಕೆ ಉದಾತ್ತ ಬರುತ್ತದೆ.

ಸಂಹಿತಾಪಾಠಃ

ತ್ರಿಷಧಸ್ಥೇ ಬರ್ಹಿಷಿ ವಿಶ್ವವೇದಸಾ ಮಧ್ವಾ ಯಜ್ಞಂ ಮಿಮಿಕ್ಷತಂ॥
ಕಣ್ವಾಸೋ ವಾಂ ಸುತಸೋಮಾ ಅಭಿದ್ಯವೋ ಯುವಾಂ ಹವಂತೇ
ಅಶ್ವಿನಾ ॥ ೪ ॥

ಪದಪಾಠಃ

ತ್ರಿಽಸಧಸ್ಥೇ । ಬರ್ಹಿಷಿ । ವಿಶ್ವವೇದಸಾ । ಮಧ್ವಾ । ಯಜ್ಞಂ । ಮಿಮಿಕ್ಷತಂ ॥
ಕಣ್ವಾಸಃ । ವಾಂ । ಸುತಽಸೋಮಾಃ । ಅಭಿಽದ್ಯವಃ । ಯುವಾಂ । ಹವಂತೇ ।
ಅಶ್ವಿನಾ ॥ ೪ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಹೇ ವಿಶ್ವವೇದಸಾ ಸರ್ವಜ್ಞಾವಶ್ವಿನೌ ತ್ರಿಷಧಸ್ಥೇ ಕಕ್ಷ್ಯಾತ್ರಯರೂಪೇಣಾಸ್ತೀರ್ಣತಯಾ ತ್ರಿಷು ಸ್ಥಾನೇಷ್ವವಸ್ಥಿತೇ ಬರ್ಹಿಷಿ ದರ್ಭೇ ಸ್ಥಿತ್ವಾ ಮಧ್ವಾ ಮಧುರೇಣ ರಸೇನ ಯಜ್ಞಂ ಮಿಮಿಕ್ಷತಂ । ಸೇಕ್ತು-ಮಿಚ್ಛತಂ । ಹೇ ಅಶ್ವಿನಾ ವಾಂ ಯುಷ್ಮದರ್ಥಂ ಸುತಸೋಮಾ ಅಭಿಷುತಸೋಮಯುಕ್ತಾ ಅಭಿದ್ಯವೋಽಭಿಗತದೀಪ್ತಯಃ ಕಣ್ವಾಸೋ ಯುವಾಮುಭಾ ಹವಂತೇ । ಆಹ್ವಯಂತೇ ॥ ತ್ರಿಷಧಸ್ಥೇ । ತ್ರಿಷು ಸ್ಥಾನೇಷು ಸಹ ತಿಷ್ಠತೀತಿ ತ್ರಿಷಧಸ್ಥಂ ಬರ್ಹಿಃ । ಸುಪಿ ಸ್ಥ ಇತಿ ಕಪ್ರತ್ಯಯಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಸಧ ಮಾದಸ್ಥಯೋಶ್ಛಂದಸಿ । ಪಾ. ೬-೩-೯೬ । ಇತಿ ಸಹಶಬ್ದಸ್ಯ ಸಧಾದೇಶಃ । ಮಧ್ವಾ। ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ ।ಜಸಿ ಚೇತ್ಯತ್ರ ಜಸಾದಿಷು ಛಂದಸಿ ವಾವಚನಂ । ಪಾ.೭-೩-೧೦೯-೧ । ಇತಿ ವಚನಾನ್ನಾಭಾವಾಭಾವಶ್ಚ। ಮಿಮಿಕ್ಷತಂ। ಮಿಹ ಸೇಚನೇ । ಸನ್ಯೇಕಾಚ ಇತೀ-ಟ್ಪ್ರತಿಷೇಧಃ । ಹಲಂತಾಚ್ಚೇತಿ ಸನಃ ಕಿತ್ತ್ವಾಲ್ಲಘೂಪಧಗುಣಾಭಾವಃ । ಅಭ್ಯಾಸಹಲಾದಿಶೇಷೌ । ಢತ್ವ-ಕುತ್ವಷತ್ವಾನಿ । ಸುತಸೋಮಾಃ । ಸುತಃ ಸೋಮೋ ಯೈಃ । ಬಹುವ್ರೀಹಿಸ್ವರಃ । ಅಭಿದ್ಯವಃ । ದ್ಯುರಿತ-ಹರ್ನಾಮ । ತೇನ ತತ್ಸಂಬಂಧೀ ಪ್ರಕಾಶೋ ಲಕ್ಷ್ಯತೇ । ಅಭಿಗತಾ ದ್ಯುಂ । ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ । ಮ. ೨-೨-೧೮-೪ । ಇತಿ ಸಮಾಸಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ವಿಶ್ವವೇದಸಾ-ಸರ್ವಜ್ಞರಾದ ಅಶ್ವಿನೀದೇವತೆಗಳೇ ।ತ್ರಿಷಧಸ್ಥೇ-ಮೂರು ಸ್ಥಾನಗಳಲ್ಲಿ ಹಾಕಿರತಕ್ಕ। ಬರ್ಹಿಷಿ—ದರ್ಭಾಸನಗಳ ಮೇಲೆ ಕುಳಿತು । ಮಧ್ವಾ—ಮಧುರವಾದ ರಸದಿಂದ । ಯಜ್ಞಂ—ಯಜ್ಞವನ್ನು । ಮಿಮಿಕ್ಷತಂ—ಪ್ರೋಕ್ಷಿಸಲಚ್ಛೈಸಿರಿ । ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ವಾಂ—ನಿಮಗೋಸ್ಕರ । ಸುತ-ಸೋಮಾಃ—ಹಿಂಡಿದ ಸೋಮರಸಯುಕ್ತರಾಗಿಯೂ । ಅಭಿದ್ಯವಃ—ಪ್ರಕಾಶಯುತರಾಗಿಯೂ ಇರುವ । ಕಣ್ವಾಸಃ—ಕಣ್ವಪುತ್ರರು ಅಥವಾ ಮೇಧಾವಿಗಳಾದ ಋತ್ವಿಕ್ಕುಗಳು । ಯುವಾಂ—ನಿಮ್ಮಿಬ್ಬರನ್ನೂ । ಹವಂತೇ—ಪ್ರಾರ್ಥಿಸಿ ಕರೆಯುತ್ತಾರೆ.

॥ ಭಾವಾರ್ಥ ॥

ಸರ್ವಜ್ಞರಾದ ಅಶ್ವಿನೀದೇವತೆಗಳೇ, ನೀವು ಕುಳಿತುಕೊಳ್ಳುವುದಕ್ಕಾಗಿ ಮೂರು ಸ್ಥಾನಗಳಲ್ಲಿ ಅನುಕ್ರಮವಾಗಿ ದರ್ಭಾಸನಗಳು ಸಿದ್ಧವಾಗಿವೆ. ಅವುಗಳ ಮೇಲೆ ಕುಳಿತು ಮಧುರವಾದ ರಸದಿಂದ ಯಜ್ಞವನ್ನು ಪ್ರೋಕ್ಷಿಸಲಿಚ್ಛೈಸಿರಿ. ಎಲೈ ದೇವತೆಗಳೇ, ಪ್ರಕಾಶಯುತರಾದ ಕಣ್ವಪುತ್ರರು ಅಥವಾ ಮೇಧಾವಿಗಳಾದ ಋತ್ವಿಕ್ಕುಗಳು ಹಿಂಡಿದ ಸೋಮರಸವನ್ನು ಹಿಡಿದುಕೊಂಡು ನಿಮ್ಮಿಬ್ಬರನ್ನೂ ಪ್ರಾರ್ಥಿಸಿ ಕರೆಯುತ್ತಾರೆ.

## English Translation.

Omniscient Aswins, sitting on the thrice heaped kusa grass, sprinkle the sacrifice with the sweet (soma) juice; the bright Kanwas having extracted the soma juice are invoking you.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ತ್ರಿಷಧಸ್ಥೇ—ಕಕ್ಷ್ಯಾತ್ರಯರೂಪೇಣಾಸ್ತೀರ್ಣತಯಾ ತ್ರಿಷು ಸ್ಥಾನೇಷ್ವವಸ್ಥಿತೇ ಬರ್ಹಿಷಿ ದರ್ಭೇ। ಕುಳಿತುಕೊಳ್ಳುವ ದರ್ಭಾಸನವು ಮೆತ್ತಗಿರುವುದಕ್ಕಾಗಿ ದರ್ಭೆಗಳನ್ನು ಒಂದು ಪದರದ ಮೇಲೆ ಮತ್ತೊಂದರಂತೆ ಮೂರಾವರ್ತಿ ಹರಡಿ ಸಿದ್ಧಪಡಿಸಿರುವ ದರ್ಭಾಸನದಲ್ಲಿ ಎಂದರ್ಥವು.

ವಿಶ್ವವೇದಸಾ—ಎಲ್ಲವನ್ನೂ ತಿಳಿದವರು, ಸರ್ವಜ್ಞರು, Omniscient

ಮಧ್ವಾ—ಮಧುಶಬ್ದಕ್ಕೆ ಜೇನುತುಪ್ಪವೆಂದರ್ಥವಿದ್ದರೂ ಋಗ್ವೇದದಲ್ಲಿ ಮಧುಶಬ್ದವು ಸಾಧಾರಣವಾಗಿ ಸೋಮರಸಕ್ಕೆ ವಿಶೇಷಣಪದವಾಗಿ ಉಪಯೋಗಿಸಲ್ಪಡುವುದು. ಇಂತಹ ಸಂದರ್ಭದಲ್ಲಿ ಮಧುಶಬ್ದಕ್ಕೆ ಮಧುವಿನಂತೆ ಸಿಹಿಯಾದ, ರುಚಿಕರವಾದ ಎಂದರ್ಥವನ್ನು ಹೇಳಬೇಕು. ಅನೇಕ ಕಡೆ ವಿಶೇಷ್ಯವಾದ ಸೋಮಶಬ್ದವಿಲ್ಲದೆ ಮಧುಶಬ್ದವನ್ನೇ ಸೋಮಶಬ್ದವನ್ನು ಸೂಚಿಸುವುದಕ್ಕಾಗಿ ಪ್ರಯೋಗಿಸಲ್ಪಡುವುದು. ಈ ಋಕ್ಕಿನಲ್ಲಿಯೂ ಹಾಗೆಯೇ ಇದೆ.

ಸುತಸೋಮಾಃ—ಸೋಮರಸವನ್ನು ಹಿಂಡಿ ಸಿದ್ಧಪಡಿಸಿರುವ.

ಅಭಿದ್ಯವಃ—ಅಭಿಗತದೀಪ್ತಯಃ। ಪ್ರಕಾಶಮಾನರಾದ ಎಂದರೆ ಪ್ರಸಿದ್ಧರಾದ.

॥ ವ್ಯಾಕರಣಪ್ರಕ್ರಿಯಾ ॥

ತ್ರಿಷಧಸ್ಥೇ—ತ್ರಿಷು=ಮೂರು ಸ್ಥಾನಗಳಲ್ಲಿ ಸಹ=ಒಟ್ಟಿಗೆ ತಿಷ್ಠತಿ=ಇರುತ್ತ್ತೆ ಎಂದು ವಿಗ್ರಹ. ತ್ರಿಸದಸ್ಥಂ ಎಂದರೆ ಬರ್ಹಿ (ದರ್ಭೆ) ಎಂದರ್ಥ. ಸುಪಿಸ್ಥಃ (ಪಾ. ಸೂ. ೩-೨-೪) ಸುಬಂತವು ಉಪಪದವಾಗಿರುವಾಗ ಸ್ಥಾ ಧಾತುವಿನ ಮುಂದೆ ಕ ಪ್ರತ್ಯಯ ಬರುತ್ತೆ ಎಂದು ಸ್ಥಾ ಧಾತುವಿನ ಮುಂದೆ ಕಪ್ರತ್ಯಯ ತ್ರಿ+ಸಹ+ಸ್ಥಾ+ಅ. ಆತೋಲೋಪಇಟಿಚ (ಪಾ. ಸೂ. ೬-೪-೬೪) ಕಿತ್ ಅಥವಾ ಙಿತ್ ಆದ ಅಜಾದ್ಯಾರ್ಧಧಾತುಕ ಪರದಲ್ಲಿದ್ದರೂ ಇಡಾಗಮ ಪರದಲ್ಲಿದ್ದರೂ ಆಕಾರಕ್ಕೆ ಲೋಪ ಬರುತ್ತೆ ಎಂದು ಸ್ಥಾಧಾತುವಿನ ಆಗೆ ಲೋಪ. ಸಧಮಾದಸ್ಥಯೋಶ್ಛಂದಸಿ (ಪಾ. ಸೂ. ೬-೩-೯೬) ವೇದದಲ್ಲಿ ಮಾದ ಅಥವಾ ಸ್ಥ ಈ ಉತ್ತರಪದಗಳು ಪರದಲ್ಲಿದ್ದರೆ ಸಹ ಸಬ್ದಕ್ಕೆ ಸಧ ಆದೇಶ ಬರುತ್ತೆ. ಎಂದು ಸಹ ಶಬ್ದಕ್ಕೆ ಸಧ ಆದೇಶ. ತ್ರಿ+ಸಧ+ಸ್ಥ್+ಅ, ಪೂರ್ವಪದಾತ್ (ಪಾ. ಸೂ. ೮-೩-೧೯೬) ಪೂರ್ವಪದದಲ್ಲಿರುವ ಇಣ್‌ಕವರ್ಗಗಳ ಮುಂದೆ ಇರುವ ಸಕಾರಕ್ಕೆ ಷಕಾರ ಬರುತ್ತೆ ಎಂದು ತ್ರಿಶಬ್ದದ ಇಕಾರದ ಮುಂದೆ ಇರುವ ಸಧಶಬ್ದದ ಸಕಾರಕ್ಕೆ ಷಕಾರ. ತ್ರಿಷಧಸ್ಥಮ್ ಎಂದಾಗುತ್ತೆ.

ಮಧ್ವಾ—ಫಲಿಪಾಟಿ ಇತ್ಯಾದಿ ಉಣಾದಿಸೂತ್ರದಿಂದ ಮಧುಶಬ್ದವು ನಿಷ್ಪನ್ನವಾಗುತ್ತೆ. ಆದು ನಿತ್ಯ ನಪುಂಸಕಲಿಂಗ. ಇದರ ಮುಂದೆ ತೃತೀಯಾ ಏಕವಚನ ಟಾಪ್ರತಯ. ಇಕೋಽಚಿ ವಿಭಕ್ತೌ (ಪಾ. ಸೂ. ೭-೧-೭೩) ಅಜಾದಿ ವಿಭಕ್ತಿಪರದಲ್ಲಿರುವಾಗ ಇ. ಉ. ಋಗಳನ್ನು ಕೊನೆಯಲ್ಲಿ ಹೊಂದಿರುವ ಅಂಗಕ್ಕೆ ನುಮ್ ಆಗಮ ಬರುತ್ತೆ. ಎಂದು ನುಮಾಗಮವು ನ್ಯಾಯವಾಗಿ ಬರಬೇಕಾಗುತ್ತೆ. ಆದು ಆಗಮಶಾಸ್ತ್ರಮನಿತ್ಯಮ್ (ಪರಿಭಾ ೯೬) ಆಗಮಶಾಸ್ತ್ರ ಅನಿತ್ಯವಾದುದು ಎಂದರೆ ನಿಯತವಾಗಿ ಎಲ್ಲ ಕಡೆಗಳಲ್ಲಿಯೂ ಪ್ರವರ್ತಿಸದು ಎಂಬುದರಿಂದ ಇಲ್ಲಿ ಬರುವುದಿಲ್ಲ. ಆಙೋ ನಾಽಸ್ತ್ರಿಯಾಮ್ (ಪಾ. ಸೂ. ೭-೩-೧೨೦) ಘಿ ಸಂಜ್ಞಕದ ಮುಂದೆ ಇರುವ ಟಾಗೆ ನಾ ಆದೇಶ ಬರುತ್ತೆ. ಇದು ಸ್ತ್ರೀಲಿಂಗದಲ್ಲಿ ಬರುವುದಿಲ್ಲ ಎಂಬುದರಿಂದ ನಾ ಆದೇಶವು



CC-0. Jangamwadi Math Collection. Digitized by eGangotri

ನ್ಯಾಯವಾಗಿ ಬರಬೇಕು. ಆದರೂ ಜಸಿಚ (ಪಾ. ಸೂ. ೭-೩-೧೦೯) ಈ ಸೂತ್ರದಲ್ಲಿ ಜಸಾದಿಷು ಛಂದಸಿ. ವಾವಚನಂಪ್ರಾಙ್ ಣೌಚಙ್ಯುಪಧಾಯಾಃ ಎಂದು ವಚನವಿದೆ, ಇಲ್ಲಿ ಆದಿಶಬ್ದ ಪ್ರಭೃತ್ಯರ್ಥಕವಲ್ಲ ಪ್ರಕಾರಾರ್ಥಕ, ಪ್ರಕಾರ ಎಂದರೆ ಸಾದೃಶ್ಯ, ಏಕಪ್ರಕರಣೋಚ್ಚ ರಿತತ್ವನಿಬಂಧನಂ ಸಾದೃಶ್ಯಮಿಹ ವಿವಕ್ಷಿತಂ, ಣೌಚಙ್ಯುಪ ಧಾಯಾ ಹ್ರಸ್ವಃ (ಪಾ. ಸೂ. ೭-೪-೧) ಎಂಬಲ್ಲಿಯವರಿಗೆ ಈ ಪ್ರಕರಣ ವಿಹಿತಕಾರ್ಯಗಳು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುವುವು ಎಂಬುದರಿಂದ ಇಲ್ಲಿ ನಾ ಆದೇಶ ಬರುವುದಿಲ್ಲ. ಯಣಾದೇಶ ಬಂದು ಮಧ್ವಾ ಎಂದಾಗುತ್ತೆ.

ಮಿಮಿಕ್ಷತಂ—ಮಿಹ ಸೇಚನೇ ಧಾತು. ಧಾತೋಃ ಕರ್ಮಣಃ-,(ಪಾ. ಸೂ. ೩-೧-೭) ಎಂದು ಸನ್. ಏಕಾಚ ಉಪದೇಶೇಽನುದಾತ್ತಾತ್ (ಪಾ. ಸೂ. ೭-೨-೧೦) ಉಪದೇಶದಲ್ಲಿ ಒಂದು ಅಚ್ಚನ್ನು ಹೊಂದಿರುವುದೂ, ಉಪದೇಶದಲ್ಲಿ ಅನುದಾತ್ತವೂ ಆದ ಧಾತುವಿನ ಮುಂದೆ ಇರುವ ವಲಾದಿಯಾದ ಆರ್ಧ ಧಾತುಕಕ್ಕೆ ಇಟ್ ಆಗಮ ಬುರುವುದಿಲ್ಲ. ಎಂದು ಸೂತ್ರಾರ್ಥ. ಪಾಣಿನ್ಯಾದಿ ಮೂರು ಋಷಿಗಳ ಆದ್ಯೋಚ್ಚಾರಣೆಗೆ ಉಪದೇಶ ಎನ್ನುವರು. ಮಿಹ್ ಇಲ್ಲಿ ಒಂದೇ ಅಚ್ಚಿದೆ. ವಸತಿರ್ದಹ್ ದಿಹಿ ದುಹೋನಹ್ ಮಿಹ್ ಎಂದು ಅನುದಾತ್ತೋಪದೇಶದಲ್ಲಿ ಮಿಹ್ ಧಾತು ಪಠಿತವಾಗಿದೆ. ಆದ್ದರಿಂದ ಎಂಬ ವಲಾದಿಯಾದ ಆರ್ಧಧಾತುಕಕ್ಕೆ ಇಟ್‌ಬರುವುದಿಲ್ಲ. ಹಲನ್ತಾಚ್ಚ (ಪಾ. ಸೂ. ೧-೨-೧೦) ಇ ಉ ಋ ಲೃಗಳ ಹತ್ತಿರದಲ್ಲಿರುವ ವ್ಯಂಜನದ ಮುಂದೆ ಇರುವ ಝುಲಾದಿಯಾದ ಸನ್ಪ್ರತ್ಯಯವು ಕಿತ್ ಆಗುತ್ತೆ ಎಂಬುದರಿಂದ ಸನ್‌ಕಿತ್ತಾಗುತ್ತದೆ. ಕ್ಙಿತಿಚ ಎಂದು ನಿಷೇಧಬರುವುದರಿಂದ ಪುಗಂತಲಘೂಪಧಸ್ಯಚ ಎಂದು ಲಘೂಪಧಗುಣ ಬರುವುದಿಲ್ಲ. ದ್ವಿತ್ವ ಆ ಮಿಹ್+ಮಿಹ್ ಸ, ಹಲಾದಿಃಶೇಷಃ ಎಂದು ಅಭ್ಯಾಸದಲ್ಲಿರುವ ಹ್‌ಗೆ ಲೋಪ, ಹೋಢಃ (ಪಾ. ಸೂ. ೮-೨-೩೧) ಝುಲ್ ಪರದಲ್ಲಿರುವಾಗಲೂ ಪದಾಂತ ವಿಷಯದಲ್ಲಿಯೂ ಸಹ ಹ್‌ಗೆ ಢ್ ಬರುತ್ತೆ ಎಂದು ಢಕಾರದೇಶ. ಷಢೋಃಕಸ್ಸಿ (ಪಾ. ಸೂ. ೮-೨-೪೧) ಸಕಾರ ಪರದಲ್ಲಿರುವಾಗ ಷಕಾರ ಢಕಾರಗಳಿಗೆ ಕಕಾರಬರುತ್ತೆ ಎಂದು ಕಕಾರವು ಢಕಾರಕ್ಕೆ ಬರುತ್ತೆ. ಆದೇಶಪ್ರತ್ಯಯಯೋಃ (ಪಾ. ಸೂ. ೮-೩-೫೯) ಎಂದು ಸಕಾರಕ್ಕೆ ಷಕಾರ ಮಿಮಿಕ್ಷತ ಎಂದಾಗುತ್ತೆ.

ಸುತಸೋಮಃ—ಸುತಃ ಸೋಮಃ ಯ್ಯೆಸ್ತೇ ಯಾರಿಂದ ಸೋಮರಸವು ಸುರಿಸಲ್ಪಟ್ಟತೋ ಅವರು ಬಹುವ್ರೀಹಿಯಾದುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತೆ.

ಅಭಿದ್ಯವಃ— ದ್ಯು ಎಂದು ಅಹಸ್ಸಿಗೆ ಹೆಸರು. ರಾತ್ರಿಯಲ್ಲಿ ಕತ್ತಲೆಯೂ ಅಹಸ್ಸಿನಲ್ಲಿ ಪ್ರಕಾಶವೂ ನಿಯತವು. ಈ ಅಹಸ್ಸಂಬಂಧವನ್ನು ಮುನ್ನಿಟ್ಟುಕೊಂಡು ದ್ಯು ಶಬ್ದವು ಲಕ್ಷಣಾವೃತ್ತಿಯಿಂದ ಅಹಸ್ಸಂಬಂಧಿ ಯಾದ ಪ್ರಕಾಶವನ್ನು ಬೋಧಿಸುತ್ತೆ. ಅಭಿಗತಾಃ ದ್ಯುಂ, ಎಂದರೆ ಪ್ರಕಾಶವನ್ನು ಹೊಂದಿರುವವರಾದ ಎಂದರ್ಥ. ಇಲ್ಲಿ ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ (ಪಾ. ಸೂ. ೨-೨-೧೮-೪) ಅತಿ ಮೊದಲಾದ ಸುಬಂತ ಗಳು ಕ್ರಾಂತ ಮೊದಲಾದ ಅರ್ಥಗಳಲ್ಲಿ ದ್ವಿತೀಯಾನ್ತ ಸುಬಂತದೊಂದಿಗೆ ಸಮಾಸವನ್ನು ಹೊಂದುವುವು. ಎಂಬು ದರಿಂದ ಸಮಾಸ. ಪೂರ್ವಪದವಾದ ಅಭಿ ಎಂಬುದು ಅವ್ಯಯ, ತೆತ್ಪುರುಷೇತುಲ್ಯಾರ್ಥ, ಎಂದು ಅವ್ಯಯ ಪೂರ್ವಪದಪ್ರಕೃತಿಸ್ವರವೇ ಬರುತ್ತೆ ॥ ೪ ॥



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಯಾಭಿಃ ಕಣ್ವ ಮಭಿಷ್ಟಿಭಿಃ ಪ್ರಾವತಂ ಯುವಮಶ್ವಿನಾ ।
ತಾಭಿಃ ಷ್ವ೧ಸ್ಮಾ ಅವತಂ ಶುಭಸ್ಪತೀ ಪಾತಂ ಸೋಮ-
ಮೃತಾವೃಧಾ ॥ ೫ ॥

ಪದಪಾಠಃ

ಯಾಭಿಃ । ಕಣ್ವಂ । ಅಭಿಷ್ಟಿಭಿಃ । ಪ್ರ । ಅವತಂ । ಯುವಂ । ಅಶ್ವಿನಾ ।
ತಾಭಿಃ । ಸು । ಅಸ್ಮಾನ್ । ಅವತಂ । ಶುಭಃ । ಪತೀ ಇತಿ । ಪಾತಂ ।
ಸೋಮಂ । ಋತಃವೃಧಾ ॥ ೫ ॥

ಸಾಯಣಭಾಷ್ಯಂ

ಹೇ ಅಶ್ವಿನಾ ಯುವಂ ಯುವಾಮುಭೌ ಯಾಭಿರಭಿಷ್ಟಿಭಿರಪೇಕ್ಷಿತಾಭೀ ರಕ್ಷಾಭಿಃ ಕಣ್ವಂ ಮಹರ್ಷಿಂ ಪ್ರಾವತಂ ರಕ್ಷಿತವಂತೌ ಹೇ ಶುಭಸ್ಪತೀ ಶೋಭನಸ್ಯ ಕರ್ಮಣಃ ಪಾಲಕೌ ತಾಭೀ ರಕ್ಷಾಭಿರಸ್ಮಾನನುಷ್ಠಾತೄನ್ಸ್ವವತಂ । ಸುಷ್ಠು ರಕ್ಷತಂ । ಸ್ಪಷ್ಟಮನ್ಯತ್ ॥ ಅಭಿಷ್ಟಿಭಿಃ । ಆಭಿಮುಖ್ಯೇನೇಷ್ಯಂತ ಇತ್ಯಭಿಷ್ಟಯಃ ಫಲಾನಿ । ಇಷು ಇಚ್ಛಾಯಾಂ । ಕರ್ಮಣಿ ಕ್ತಿನಿ ತಿತುತ್ರೇತ್ಯಾದಿನೇಟ್ಪ್ರತಿಷೇಧಃ । ಏಮನಾದಿಷು ಛಂದಸಿ ಪರರೂಪಂ ವಕ್ತವ್ಯಂ । ಪಾ. ೬-೧-೯೪-೬ । ಇತಿ ಪರರೂಪತ್ವಂ । ತಾದೌ ಚೇತಿ ಗತೇಃ ಪ್ರಕೃತಿಸ್ವರತ್ವಂ । ಉಪಸರ್ಗಾಶ್ಚಾಭಿವರ್ಜಂ । ಫಿ ೪-೧೩ । ಇತ್ಯಭಿರಂತೋದಾತ್ತಃ । ಶುಭಸ್ಪತೀ । ಶುಭ ದೀಪ್ತೌ । ಕ್ವಿಪ್ಚೇತಿ ಕ್ವಿಪ್ । ಷಷ್ಠ್ಯಾಃ ಪತಿಪುತ್ರೇತಿ ವಿಸರ್ಜನೀಯಸ್ಯ ಸತ್ವಂ । ಸುಬಾಮಂತ್ರಿತ ಇತಿ ಷಷ್ಠ್ಯಂತಸ್ಯ ಪರಾಂಗವದ್ಭಾವಾತ್ ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥ ೧ ॥

॥ ಪ್ರತಿಪದಾರ್ಥ ॥

ಶುಭಸ್ಪತೀ—ಪವಿತ್ರಕರ್ಮಗಳ ಅಥವಾ ಧರ್ಮಕಾರ್ಯಗಳ ಪಾಲಕರಾದ । ಅಶ್ವಿನಾ—ಎಲೈ ಅಶ್ವಿನೀ ದೇವತೆಗಳೇ । ಯುವಂ—ನೀವಿಬ್ಬರೂ । ಯಾಭಿಃ—ಯಾವ । ಅಭಿಷ್ಟಿಭಿಃ—ಹಾರೈಸಿದ ರಕ್ಷಣೆಗಳಿಂದ । ಕಣ್ವಂ—ಕಣ್ವಮಹರ್ಷಿಯನ್ನು । ಪ್ರಾವತಂ—ಕಾಪಾಡಿದಿರೋ ।ತಾಭಿಃ—ಅದೇ ರಕ್ಷಣೆಗಳಿಂದ । ಅಸ್ಮಾನ್— (ಯಜ್ಞಾನುಷ್ಠಾತೃಗಳಾದ) ನಮ್ಮನ್ನು । ಸು ಅವತಂ—ಚೆನ್ನಾಗಿ ಕಾಪಾಡಿರಿ । ಋತಾವೃಧಾ—ಯಜ್ಞದ ಅಥವಾ ಸತ್ಯದ ವರ್ಧಕರಾದ ಅಶ್ವಿನೀದೇವತೆಗಳೇ । ಸೋಮಂ—ಸೋಮರಸವನ್ನು । ಪಾತಂ—ಕುಡಿಯಿರಿ.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಪವಿತ್ರಕರ್ಮಗಳಪಾಲಕರಾದ ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ಸಹ ಕಣ್ವಮಹರ್ಷಿಯನ್ನು ಅವನು ಅಪೇಕ್ಷಿಸಿದ ಯಾವ ರಕ್ಷಣೆಗಳಿಂದ ಕಾಪಾಡಿದರೋ, ಅದೇ ರಕ್ಷಣೆಗಳಿಂದ ಯಜ್ಞಾನುಷ್ಠಾನವನ್ನು ನೆರವೇರಿಸತಕ್ಕ ನಮ್ಮನ್ನೂ ಚೆನ್ನಾಗಿ ಕಾಪಾಡಿರಿ. ಯಜ್ಞದ ಅಥವಾ ಸತ್ಯದ ವರ್ಧಕರಾದ ಎಲೈ ಅಶ್ವಿನೀದೇವತೆಗಳೇ ಸೋಮರಸವನ್ನು ಕುಡಿಯಿರಿ.

English Translation.

O Aswins, with such protection as you extended to Kanwa protect us also ; cherishers of pious acts, drink, the soma juice.

॥ ವಿಶೇಷ ವಿಷಯಗಳು ॥

ಕಣ್ವಋಷಿಯ ವಂಶಸ್ಥರಾದ ಕಾಣ್ವರು ಅಶ್ವಿನೀದೇವತೆಗಳನ್ನು ಪ್ರಾರ್ಥಿಸುವಾಗ—ತಮ್ಮ ವಂಶಕ್ಕೆ ಮೂಲಪುರುಷನಾದ ಕಣ್ವಋಷಿಯನ್ನು ನೀವು ಹೇಗೆ ಕಾಪಾಡಿದರೋ ಅದರಂತೆ ನಮ್ಮನ್ನೂ ಕಾಪಾಡಬೇಕೆಂದು ಬೇಡಿಕೊಳ್ಳುವರು.

**ಅಭಿಷ್ಟಿಭಿಃ—ಅಪೇಕ್ಷಿತಾಭೀ ರಕ್ಷಾಭಿಃ ।** ಅವಶ್ಯಕವಾದ ಅಥವಾ ನಾವು ಅಪೇಕ್ಷಿಸುವ ರಕ್ಷಣೆಗಳಿಂದ ಎಂದರೆ ಶತ್ರುವಿನ ಭಯದಿಂದ ಅಥವಾ ಕ್ರೂರಮೃಗಗಳ ಬಾಧೆಯಿಂದ, ಅಥವಾ ವ್ಯಾಧಿಗಳ ಭಯದಿಂದ ನಮ್ಮನ್ನು ರಕ್ಷಿಸಬೇಕೆಂದು ಅಭಿಪ್ರಾಯವು.

**ಶುಭಸ್ಪತೀ—**ಈ ಶಬ್ದಗಳು ಅಶ್ವಿನೀದೇವತೆಗಳನ್ನುದ್ದೇಶಿಸಿ ಸ್ತೋತ್ರಮಾಡುವಾಗ ವಿಶೇಷವಾಗಿ ಉಪಯೋಗಿಸಲ್ಪಡುವುದು.

॥ ವ್ಯಾಕರಣಪ್ರಕ್ರಿಯಾ ॥

**ಅಭಿಷ್ಟಿಭಿಃ—**ಅಭಿ= ಅಭಿಮುಖವಾಗಿ, ಇಷ್ಯನ್ತೇ—ಇಚ್ಛಿಸಲ್ಪಡುತ್ತವೆ ಎಂದು ವಿಗ್ರಹ. ಅಭಿಷ್ಟಿ ಎಂದರೆ ಫಲ ಎಂದರ್ಥ. ಇಷು ಇಚ್ಛಾಯಾಂ ಧಾತು. **ಸ್ತ್ರಿಯಾಂಕ್ತಿನ್** (ಪಾ. ಸೂ. ೩-೩-೯೪) ಸ್ತ್ರೀಲಿಂಗದಲ್ಲಿ ಎಲ್ಲಾ ಧಾತುಗಳ ಮುಂದೆಯೂ ಭಾವಾರ್ಥದಲ್ಲಿಯೂ ಕರ್ತೃಭಿನ್ನ ಕಾರಕಾರ್ಥದಲ್ಲಿಯೂ ಸಹ ಕ್ತಿನ್ ಪ್ರತ್ಯಯು ಬರುತ್ತೆ ಎಂದು ಸೂತ್ರಾರ್ಥ. ಇದರಿಂದ ಕರ್ಮ ಎಂಬ ಅರ್ಥದಲ್ಲಿ ಇಷ್ ಧಾತುವಿನ ಮುಂದೆ ಕ್ತಿನ್. ಇಷ್+ತಿ. **ತಿತುತ್ರತಥಸಿಸುಸರಕಸೇಷುಚ** (ಪಾ. ಸೂ. ೭-೨-೯) ಈ ಹತ್ತು ಕೃತ್ಪ್ರತ್ಯಯಗಳಿಗೆ ಇಟ್ ಆಗಮ ಬರುವುದಿಲ್ಲ ಎಂದು ಇಟ್ಟಿಗೆ ನಿಷೇಧ. **ಏಮನ್ನಾದಿಷು ಛಂದಸಿ ಪರರೂಪಂ ವಕ್ತವ್ಯಮ್** (ಪಾ. ಸೂ. ೬-೧-೯೪-೭) ಛಂದಸ್ಸಿನಲ್ಲಿ ಏಮನ್ ಮೊದಲಾದ ಶಬ್ದಗಳು ಪರದಲ್ಲಿದ್ದರೆ ಪರರೂಪವನ್ನು ಹೇಳಬೇಕು ಎಂದರ್ಥ ಏಮನ್ ಮೊದಲಾದ ಶಬ್ದಗಳಲ್ಲಿ ಇಷ್ಟಿ ಶಬ್ದವನ್ನೂ ಸೇರಿಸಿಕೊಳ್ಳಬೇಕು. ಆದ್ದರಿಂದ ಅಭಿ+ಇಷ್ಟಿ ಎಂದಿರುವಾಗ ಸವರ್ಣ ದೀರ್ಘವನ್ನು ಬಾಧಿಸಿ ಪರರೂಪ ಬಂದರೆ ಎರಡು ಇಕಾರಸ್ಥಾನದಲ್ಲಿ ಪರದಲ್ಲಿರುವ ಇಗೆ ಸದೃಶವಾದ ಇ ಒಂದೇಬರುತ್ತೆ. ಕ್ತಿನ್ ಎಂಬುದು ನಿತ್ ಆದ ಕೃತ್ತು. ಆದ್ದರಿಂದ **ತಾದೌಚ ನಿತಿಕೃತ್ಯತೌ** (ಪಾ. ಸೂ ೬-೨-೫೦) ತಕಾರಾದಿಯೂ ನಿತ್ತೂ ಆದ ತುಶಬ್ದಭಿನ್ನವಾದ ಕೃತ್ತು ಪರದಲ್ಲಿದ್ದರೆ ಅವ್ಯವಹಿತವಾದ ಗತಿಯು



CC-0. Jangamwadi Math Collection. Digitized by eGangotri

ಪ್ರಕೃತಿ ಸ್ವರವನ್ನು ಹೊಂದುತ್ತೆ ಎಂದು ಅಭಿಗೆ ಪ್ರಕೃತಿಸ್ವರ ಬರುತ್ತೆ. ಅಭಿಯು ಉಪಸರ್ಗಾಶ್ಚಾಭಿವರ್ಜಂ (ಫಿ. ಸೂ. ೮೧) ಎಂದು ಅಂತೋದಾತ್ತ. ಸಮಾಸ ಬಂದಮೇಲೂ ಇದೇ ನಿಲ್ಲುತ್ತೆ.

ಶುಭಸ್ಪತೀ—ಶುಭ ದೀಪ್ತೌ ಧಾತು. ಕ್ವಿಪ್ ಚ (ಪಾ.ಸೂ. ೩-೨-೭೬) ಎಲ್ಲಾ ಧಾತುಗಳ ಮುಂದೆಯೂ ಉಪಪದವಿದ್ದರೂ ಇಲ್ಲದಿದ್ದರೂ ಲೋಕದಲ್ಲಿಯೂ ವೇದದಲ್ಲಿಯೂ ಸಹ ಕ್ವಿಪ್ ಪ್ರತ್ಯಯ ಬರುತ್ತೆ ಎಂದು ಕ್ವಿಪ್ ಶುಭಃ+ಪತೀ ಎಂಬಲ್ಲಿ ಷಷ್ಠ್ಯಾಃ ಪತಿಪುತ್ರ ಪೃಷ್ಠಪಾರ ಪದಪಯಸ್ಪೋಷೇಷು (ಪಾ. ಸೂ. ೮-೩-೫೩) ಪತಿ ಮೊದಲಾದ ಶಬ್ದಗಳುಪರದಲ್ಲಿದ್ದರೆ ಷಷ್ಠೀವಿಭಕ್ತಿಯ ವಿಸರ್ಗಕ್ಕೆ ಸಕಾರಾದೇಶ ಬರುತ್ತೆ ಎಂದು ವಿಸರ್ಗಕ್ಕೆ ಸಕಾರಾದೇಶ. ಸುಬಾಮನ್ತ್ರಿತೇಪರಾಙ್ಗವತ್ಸ್ವರೇ (ಪಾ. ಸೂ. ೨-೧-೨) ಸ್ವರವನ್ನುಮಾಡುವಾಗ ಆಮನ್ತ್ರಿತವು ಪರದಲ್ಲಿದ್ದರೆ ಸುಬಂತವು ಪರದಲ್ಲಿರುವ ಪದಕ್ಕೆ ಅಂಗವಾದಂತೆ ಆಗುತ್ತೆ ಎಂದು ಶುಭಃ ಎಂಬುದು ಪತೀ ಎಂಬುದಕ್ಕೆ ಅಂಗವಾದಂತೆ ಆಗಿ ಈ ಎರಡೂ ಸೇರಿ ಒಂದೇ ಪದವೆಂಬ ಭಾವನೆಯು ಸ್ವರವನ್ನುಮಾಡುವಾಗ ಇರುತ್ತೆ. ಸಂಬೋಧನ ಪ್ರಥಮಾವಿಭಕ್ತ್ಯಂತಕ್ಕೆ ಆಮನ್ತ್ರಿತ ಎಂದು ಎನ್ನುವರು. ಆಮನ್ತ್ರಿತಸ್ಯಚ (ಪಾ. ಸೂ. ೮-೧-೧೯) ಎಂಬುದರಿಂದ ಎರಡಕ್ಕೂ ಸರ್ವಾನುದಾತ್ತ ಬರುತ್ತೆ ॥ ೫ ॥

॥ ಸಂಹಿತಾಪಾಠಃ ॥

ಸುದಾಸೇ ದಸ್ರಾ ವಸು ಬಿಭ್ರತಾ ರಥೇ ಪೃಕ್ಷೋ ವಹತಮಶ್ವಿನಾ ।
ರಯಿಂ ಸಮುದ್ರಾದುತ ವಾ ದಿವಸ್ಪರ್ಯಸ್ಮೇ ಧತ್ತಂ ಪುರುಸ್ಪೃಹಂ ॥

ಪದಪಾಠಃ

ಸುऽದಾಸೇ । ದಸ್ರಾ । ವಸು । ಬಿಭ್ರತಾ । ರಥೇ । ಪೃಕ್ಷಃ । ವಹತಂ । ಅಶ್ವಿನಾ ॥
ರಯಿಂ । ಸಮುದ್ರಾತ್ । ಉತ । ವಾ । ದಿವಃ । ಪರಿ । ಅಸ್ಮೇ ಇತಿ । ಧತ್ತಂ ॥
ಪುರುಸ್ಪೃಹಂ ॥ ೬ ॥

॥ ಸಾಯಣಭಾಷ್ಯಂ ॥

ಹೇ ದಸ್ರಾ ದರ್ಶನೀಯಾವಶ್ವಿನೌ ಸುದಾಸೇ ಶೋಭನದಾನಯುಕ್ತಾಯ ರಾಜ್ಞೇ ಪಿಜವನಪುತ್ರಾಯ ರಥೇ ವಸು ಬಿಭ್ರತಾ ಯುವಾಂ ಪೃಕ್ಷೋಽನ್ನಂ ವಹತಂ । ಪ್ರಾಪಿತವಂತೌ । ಸಮುದ್ರಾದಂತರಿಕ್ಷಾತ್ । ಸಮುದ್ರಮಿತ್ಯಂತರಿಕ್ಷನಾಮ । ಸಮುದ್ರೋಽಧ್ವರಮಿತಿ ತನ್ನಾಮಸು ಪಾಠಾತ್ । ಉತ ವಾ ದಿವಸ್ಪರಿ ಅಥವಾ ಸ್ವರ್ಗಾತ್ಪರ್ಯಾಹೃತ್ಯ ಪುರುಸ್ಪೃಹಂ ಬಹುಭಿಃ ಸ್ಪೃಹಣೀಯಂ ರಯಿಂ ಧನಮಸ್ಮೇ ಧತ್ತಂ । ಅಸ್ಮಾಸು ಸ್ಥಾಪಯತಂ ॥ ಸುಷ್ಠು ದದಾತೀತಿ ಸುದಾಃ । ಅಸುನಿ ಕೃದುತ್ತರಪದಪ್ರಕೃತಿಸ್ವರತ್ವಂ ।





CC-0. Jangamwadi Math Collection. Digitized by eGangotri

ದಿವಸ್ಪರಿ । ಪಂಚಮ್ಯಾಃ ಪರಾವಧ್ಯರ್ಥೇ । ಪಾ. ೮-೩-೫೧ । ಇತಿ ವಿಸರ್ಜನೀಯಸ್ಯ ಸತ್ವಂ । ಪುರುಸ್ಪೃಹಂ । ಸ್ಪೃಹ ಈಪ್ಸಾಯಾಂ । ಚುರಾದಿರದಂತಃ । ಪುರುಭಿಃ ಸ್ಪೃಹ್ಯತೆ ಇತಿ ಪುರುಸ್ಪೃಹಃ । ಕರ್ಮಣಿ ಘಞ್ । ಅತೋ ಲೋಪಸ್ಯ ಸ್ಥಾನಿವತ್ತ್ವಾಲ್ಲಘೂಪಧಗುಣಾಭಾವಃ । ಞ್ನಿತ್ಸ್ವರೇಣೋತ್ತರಪದಸ್ಯಾದ್ಯುದಾತ್ತತ್ವೇ ಕೃದುತ್ತರಪದಪ್ರಕೃತಿಸ್ವರೇಣ ತದೇವ ಶಿಷ್ಯತೇ ॥

ಪ್ರತಿಪದಾರ್ಥ

ದಸ್ರಾ—ಸುಂದರರೂಪರಾದ ಅಶ್ವಿನೀದೇವತೆಗಳೇ । ಸುದಾಸೇ—ಶ್ರೇಷ್ಠವಾದ ದಾನಯುಕ್ತನಾದ (ಮತ್ತು ಪಿಜವನ ಪುತ್ರನಾದ) ದೊರೆಗೆ । ರಥೇ—ರಥದಲ್ಲಿ । ವಸು—ಧನವನ್ನು । ಬಿಭ್ರತಾ—ಹೊತ್ತುಕೊಂಡು ಬಂದ ನೀವು! ಪೃಕ್ಷಃ—(ಪ್ರಭೂತವಾದ) ಅನ್ನವನ್ನು । ವಹತಂ—ಒದಗಿಸಿದಿರಿ । ಸಮುದ್ರಾತ್—ಅಂತರಿಕ್ಷದಿಂದಾಗಲಿ ಉತ ವಾ—ಅಥವಾ । ದಿವಸ್ಪರಿ—ಸ್ವರ್ಗದಿಂದಾಗಲಿ (ತೆಗೆದುಕೊಂಡು ಬಂದು) । ಪುರುಸ್ಪೃಹಂ—ಬಹುಜನರಿಂದ ಹಾರೈಸಲ್ಪಡುವ । ರಯಿಂ—ಧನವನ್ನು । ಅಸ್ಮೇ—ನಮ್ಮಲ್ಲಿ । ಧತ್ತಂ—ಸ್ಥಾಪಿಸಿರಿ (ನಮಗೂ ಒದಗಿಸಿರಿ)

॥ ಭಾವಾರ್ಥ ॥

ಎಲೈ ದರ್ಶನೀಯರೂಪರಾದ ಅಶ್ವಿನೀದೇವತೆಗಳೇ, ಶ್ರೇಷ್ಠವಾದ ಮತ್ತು ದಾನಿಯಾದ ಪಿಜವನ ಪುತ್ರನಾದ ಸುದಾಸನೆಂಬ ದೊರೆಗೆ ನೀವು ರಥದಲ್ಲಿ ಧನವನ್ನು ಹೊತ್ತುಕೊಂಡು ಬಂದು ಪ್ರಭೂತವಾಗಿ ಅನ್ನವನ್ನು ಒದಗಿಸಿದಿರಿ. ಅದರಂತೆಯೇ ಅಂತರಿಕ್ಷದಿಂದಾಗಲಿ ಅಥವಾ ಸ್ವರ್ಗದಿಂದಾಗಲಿ ನಮಗೂ ಸಹ ಬಹುಜನಗಳು ಹಾರೈಸುವ ಧನವನ್ನು ತಂದು ಒದಗಿಸಿರಿ.

## English Translation.

Good-looking Aswins, you brought in your car abundant food to Sudas; In the same manner bring us riches which many covet whether from the sky or from heaven beyond.

॥ ವಿಶೇಷ ವಿಷಯಗಳು ॥

ಸುದಾಸೇ—ಸುದಾಸನೆಂಬುವನು ಪಿಜವನನೆಂಬ ಪ್ರಸಿದ್ಧನಾದ ಒಬ್ಬ ರಾಜನ ಪುತ್ರನು. ವಿಷ್ಣು ಪುರಾಣದಲ್ಲಿ ಸುದಾಸನೆಂಬ ರಾಜನು ಸೂರ್ಯವಂಶದಲ್ಲಿ ಒಬ್ಬನಿದ್ದನೆಂದೂ, ಅದೇ ಹೆಸರಿನ ಮತ್ತೊಬ್ಬ ರಾಜನು ಚಂದ್ರವಂಶದಲ್ಲಿ ಒಬ್ಬನಿದ್ದನೆಂದೂ, ಅದೇ ಹೆಸರಿನ ಮತ್ತೊಬ್ಬ ರಾಜನು ಚಂದ್ರವಂಶದಲ್ಲಿ ದಿವೋದಾಸನೆಂಬ ರಾಜನ ಪುತ್ರನಾಗಿದ್ದನೆಂದೂ ವಿವರಣೆ ಇದೆ. ದಿವೋದಾಸನ ಹೆಸರು ಋಗ್ವೇದದಲ್ಲಿ ಉಕ್ತವಾಗಿರುವುದು.

ಪೃಕ್ಷಃ—ಅಂಧಃ ವಾಜಃ ಮೊದಲಾದ ಇಪ್ಪತ್ತೆಂಟು ಅನ್ನವಾಚಕಶಬ್ದಗಳ ಮಧ್ಯದಲ್ಲಿ ಪೃಕ್ಷಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೯) ಪೃಕ್ಷಶಬ್ದಕ್ಕೆ ಅನ್ನ ಅಥವಾ ಆಹಾರವೆಂದರ್ಥವು.



CC-0. Jangamwadi Math Collection. Digitized by eGangotri

ಸಮುದ್ರಾತ್—ಅಂಬರಂ ವಿಯತ್ ಮೊದಲಾದ ಹದಿನಾರು ಅಂತರಿಕ್ಷನಾಮಗಳ ಮಧ್ಯದಲ್ಲಿ ಸಮುದ್ರಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೧೦) ಸಮುದ್ರಾತ್ ಎಂದರೆ ಅಂತರಿಕ್ಷದಿಂದ ಎಂದರ್ಥವು. ಇದಲ್ಲದೆ ಈ ಋಕ್ಕಿನಲ್ಲಿ ಉತೆ ವಾ ದಿವಸ್ಪರಿ ಎಂಬ ಶಬ್ದಗಳ ಪ್ರಯೋಗವಿರುವುದರಿಂದ ಅಶ್ವಿನೀದೇವತೆಗಳ ಸ್ವಸ್ಥಾನವಾದ ಸ್ವರ್ಗ ಅಥವಾ ಅಂತರಿಕ್ಷದಿಂದ ಧನವನ್ನು ತಂದುಕೊಡಬೇಕೆಂದು ಋಷಿಯು ಪ್ರಾರ್ಥಿಸಿರುವನು.

ಪುರುಸ್ಪೃಹಂ—ಬಹುಭಿಃ ಸ್ಪೃಹಣೀಯಂ! ಬಹುಜನರಿಂದ ಅಪೇಕ್ಷಿಸಲ್ಪಡುವ, ಎಲ್ಲರೂ ಅಪೇಕ್ಷಿಸುವ, ಧನಾದ್ಯೈಶ್ವರ್ಯವನ್ನು ಎಲ್ಲರೂ ಅಪೇಕ್ಷಿಸುವರು. ಅದು ಎಲ್ಲರಿಗೂ ಬೇಕಾಗಿರುವುದು. ಅಂತಹ ಧನವನ್ನು ಕೊಡಬೇಕೆಂದು ಋಷಿಯ ಅಭಿಪ್ರಾಯವು.

॥ ವ್ಯಾಕರಣಪಕ್ರಿಯಾ ॥

ಸುದಾಸೇ—ಸುಷ್ಠು ದದಾತಿ ಇತಿ ಸುದಾಃ, ಸು ಪೂರ್ವಕ (ಡು) ದಾಞ್ ದಾನೇ ಧಾತುವಿನ ಮುಂದೆ ಸರ್ವಧಾತುಭ್ಯೋಽಸುನ್ (ಉ.ಸೂ. ೪-೬೨೮) ಎಂದು ಅಸುನ್‌ಪ್ರತ್ಯಯ, ನಿತ್ಸ್ವರದಿಂದ ಉತ್ತರಪದವು ಆದ್ಯುದಾತ್ತ. ಗತಿಕಾರಕೋ—(ಪಾ. ಸೂ.೬-೨-೧೩೯) ಎಂಬ ಕೃದುತ್ತರಪದ ಪ್ರಕೃತಿಸ್ವರದಿಂದ ಅದೇ ಸ್ವರ ನಿಲ್ಲುತ್ತೆ. ಚತುರ್ಥೀಏಕವಚನಾಂತ.

ದಿವಸ್ಪರಿ—ದಿವಃ-ಇದು ಪಂಚಮ್ಯಂತ, ಪರಿ ಶಬ್ದವು ಪರದಲ್ಲಿದೆ. ಪಂಚಮ್ಯಾಃ ಪರಾವಧ್ಯರ್ಥೇ (ಪಾ. ಸೂ. ೮-೩-೫೧) ಉಪರಿಭಾವ ಎಂದರೆ ಮೇಲೆ ಇರತಕ್ಕ ಎಂಬ ಅಧಿಶಬ್ದದ ಅರ್ಥವನ್ನು ಬೋಧಿಸುವ ಪರಿ ಶಬ್ದ ಪರದಲ್ಲಿದ್ದ ಪಂಚಮೀವಿಭಕ್ತಿಯ ಸಂಬಂಧಿಯಾದ ವಿಸರ್ಗಕ್ಕೆ ಸಕಾರಾದೇಶ ಬರುತ್ತೆ ಎಂದು ವಿಸರ್ಗಕ್ಕೆ ಸಕಾರ.

ಪುರುಸ್ಪೃಹಮ್—ಸ್ಪೃಹ ಈಪ್ಸಾಯಾಂ, ಹತ್ತನೇಗಣದಲ್ಲಿ ಅಕಾರಾಂತವಾಗಿ ಪಠಿತವಾದ ಧಾತು. ಪುರುಭಿಃ=ಬಹುಜನರಿಂದ, ಸ್ಪೃಹ್ಯತೇ=ಅಪೇಕ್ಷಿಸಲ್ಪಡುತ್ತೆ ಎಂದು ವಿಗ್ರಹ. ಕರ್ಮಾರ್ಥದಲ್ಲಿ ಘಞ್. ಅತೋ ಲೋಪಃ (ಪಾ.ಸೂ.೬-೪-೪೮) ಎಂದು ಅಕಾರಲೋಪ. ಸ್ಪೃಹ್+ಅ. ಅಚಃಪರಸ್ಮಿನ್— (ಪಾ. ಸೂ. ೧-೧-೫೭) ಲುಪ್ತವಾದ ಅಕಾರಲೋಪಕ್ಕೆ ಸ್ಥಾನಿವದ್ಭಾವ ಬರುತ್ತೆ. ಆದ್ದರಿಂದ ಪುಗಂತೆ—(ಪಾ. ಸೂ. ೭-೩-೮೬) ಎಂದು ಲಘೂಪಧ ಗುಣ ಬರುವುದಿಲ್ಲ. ಉತ್ತರಪದ ಞಿತ್ಸ್ವರದಿಂದ ಆದ್ಯುದಾತ್ತ. ಸಮಾಸಬಂದ ಮೇಲೆ ಕೃದುತ್ತರಪದ ಪ್ರಕೃತಿಸ್ವರ ಬಂದು ಅದೇ ನಿಲ್ಲುತ್ತೆ. ॥ ೬ ॥

॥ ಸಂಹಿತಾಪಾಠಃ ॥

ಯನ್ನಾಸತ್ಯಾ ಪರಾವತಿ ಯದ್ವಾ ಸ್ಥೋ ಅಧಿ ತುರ್ವಶೇ ।
ಅತೋ ರಥೇನ ಸುವೃತಾ ನ ಆ ಗತಂ ಸಾಕಂ ಸೂರ್ಯಸ್ಯ ರಶ್ಮಿಭಿಃ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಯತ್ । ನಾಸತ್ಯಾ । ಪರಾಽವತಿ । ಯತ್ । ವಾ । ಸ್ಥಃ । ಅಧಿ । ತುರ್ವಶೇ ॥
ಅತಃ । ರಥೇನ । ಸುಽವೃತಾ । ನಃ । ಆ । ಗತಂ । ಸಾಕಂ । ಸೂರ್ಯಸ್ಯ ।
ರಶ್ಮಿಽಭಿಃ ॥ ೭ ॥

ಸಾಯಣಭಾಷ್ಯಂ

ಹೇ ನಾಸತ್ಯಾಸತ್ಯರಹಿತಾವಶ್ವಿನೌ ಯದ್ಯದಿ ಯುವಾಂ ಪರಾವತಿ ದೂರದೇಶೇ ಸ್ಥೋ ವರ್ತೇಥೇ। ಯದ್ವಾ ಅಥವಾಧಿ ತುರ್ವಶೇಽಧಿಕೇ ಸಮೀಪೇ ಸ್ಥಃ । ಅತೋಽಸ್ಮಾದ್ದೂರಾತ್ಸಮೀಪಾದ್ವಾ ಸೂರ್ಯಸ್ಯ ರಶ್ಮಿಭಿಃ ಸಾಕಂ ಸೂರ್ಯೋದಯಕಾಲೇ ಸುವೃತಾ ಶೋಭನವರ್ತನಯುಕ್ತೇನ ರಥೇನ ನೋಽಸ್ಮಾನ್ ಪ್ರತ್ಯಾ ಗತಂ । ಆಗಚ್ಛತಂ ॥ ನಾಸತ್ಯಾ । ಸತ್ಸು ಭವೌ ಸತ್ಯೌ । ನ ಸತ್ಯಾವಸತ್ಯೌ । ನ ಅಸತ್ಯೌ ನಾಸತ್ಯೌ ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ। ಸ್ಥಃ। ಅಸ ಭುವಿ। ಶ್ನಸೋರಲ್ಲೋಪ ಇತ್ಯಕಾರಲೋಪಃ। ಯದ್ವೃತ್ತಯೋಗಾದನಿಘಾತಃ । ಗತಂ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ ॥

॥ ಪ್ರತಿಪದಾರ್ಥ ॥

ನಾಸತ್ಯಾ—ಅಸತ್ಯರಹಿತರಾದ ಅಶ್ವಿನೀದೇವತೆಗಳೇ । ಯತ್—ಒಂದುವೇಳೆ (ನೀವು)। ಪರಾವತಿ—ದೂರದೇಶದಲ್ಲಿ । ಸ್ಥಃ—ಇದ್ದರೂ । ಯದ್ವಾ—ಅಥವಾ। ಅಧಿ ತುರ್ವಶೇ—ಅತ್ಯಂತ ಸಮೀಪದಲ್ಲಿ (ಇದ್ದರೂ)। ಅತಃ—ಅಲ್ಲಿಂದ (ದೂರದೇಶದಿಂದಾಗಲಿ ಅಥವಾ ಸಮೀಪಪ್ರದೇಶದಿಂದಾಗಲಿ) । ಸೂರ್ಯಸ್ಯ—ಸೂರ್ಯನ ರಶ್ಮಿಭಿಃ ಸಾಕಂ—ಕಿರಣಗಳೊಡನೆ (ಸೂರ್ಯೋದಯಕಾಲದಲ್ಲಿ) । ಸುವೃತಾ—ಶ್ರೇಷ್ಠವಾದ ಸಂಚಾರವುಳ್ಳ । ರಥೇನ—ರಥದಲ್ಲಿ । ನಃ—ನಮ್ಮ ಅಭಿಮುಖವಾಗಿ । ಆಗತಂ—ಬನ್ನಿರಿ.

॥ ಭಾವಾರ್ಥ ॥

ಅಸತ್ಯರಹಿತರಾದ ಎಲೈ ಅಶ್ವಿನೀದೇವತೆಗಳೇ, ನೀವು ದೂರದೇಶದಲ್ಲಿದ್ದರೂ ಅಥವಾ ನಮಗೆ ಅತ್ಯಂತ ಸಮೀಪಪ್ರದೇಶದಲ್ಲಿದ್ದರೂ, ಸೂರ್ಯೋದಯಕಾಲದಲ್ಲಿ ಸೂರ್ಯನ ಕಿರಣಗಳ ಜೊತೆಯಲ್ಲಿ ನೀವಿರುವ ಪ್ರದೇಶದಿಂದ ನಿಮ್ಮ ಶ್ರೇಷ್ಠವಾದ ಸಂಚಾರ ಶಕ್ತಿಯುಳ್ಳ ರಥದಲ್ಲಿ ನಮ್ಮ ಅಭಿಮುಖವಾಗಿ ಬನ್ನಿರಿ.

## English Translation.

O Truthful Nasatyas, whether you happen to be far off at a distance or close at hand, come to us in your well-constructed chariot along with rays of the sun (in the morning).



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಪರಾವತಿ—ಆಕೇ ಪರಾಕೇ ಮೊದಲಾದ ಐದು ದೂರನಾಮಗಳ ಮಧ್ಯದಲ್ಲಿ ಪರಾವತಶಬ್ದವು ಪಠಿತವಾಗಿರುವುದರಿಂದ (ನಿ. ೩-೨೦) ಪರಾವತಿ ಎಂದರೆ ದೂರದಲ್ಲಿ ಎಂದರ್ಥವು.

ತುರ್ವಶೇ—ತಳಿತ್, ಆಸಾತ್ ಮೊದಲಾದ ಹನ್ನೊಂದು ಅಂತಿಕವಾಚಕನಾಮಗಳ ಮಧ್ಯದಲ್ಲಿ ತುರ್ವಶೇ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ತುರ್ವಶೇ ಎಂದರೆ ಸಮೀಪದಲ್ಲಿ ಎಂದರ್ಥವು.

ಆ ಗತಂ ಸಾಕಂ ಸೂರ್ಯಸ್ಯ ರಶ್ಮಿಭಿಃ—ಸೂರ್ಯನ ರಶ್ಮಿಗಳೊಡನೆ ಬನ್ನಿ ಎಂದರೆ ಪ್ರಾತಃಕಾಲದಲ್ಲಿ ಸೂರ್ಯೋದಯವಾದಕೂಡಲೆ ಬನ್ನಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ನಾಸತ್ಯಾ—ಸತ್ಸುಸಾಧೂ ಸತ್ಯೌ, ನ ಸತ್ಯೌ-ಅಸತ್ಯೌ, ನ ಅಸತ್ಯೌ ನಾಸತ್ಯೌ ಎಂದು ವಿಗ್ರಹ. ತತ್ರಸಾಧುಃ (ಪಾ. ಸೂ. ೪-೪-೯೮) ಎಂಬುದರಿಂದ ಯತ್ ಪ್ರತ್ಯಯ ಬರುತ್ತೆ, ಸತ್ಸುಭವೌ ಎಂದು ವಿಗ್ರಹವಾದರೆ ಛಂದಸಿ (ಪಾ. ಸೂ. ೪-೪-೧೧೦) ಎಂದು ಯತ್ (ಋ. ಸಂ. ೧-೩-೩)ರಲ್ಲಿ ಮತ್ತೊಂದು ವಿಧವಾಗಿ ಪ್ರಕ್ರಿಯೆಯು ನಿರೂಪಿತವಾಗಿದೆ. ಎಲ್ಲ ಕಡೆಯಲ್ಲೂ ನಭ್ರಾಣ್ನಪಾನ್ನವೇದಾನಾಸತ್ಯಾ—(ಪಾ. ಸೂ. ೬-೩-೭೫) ಎಂದು ಪ್ರಕೃತಿಭಾವ ಬರುವುದರಿಂದ ನಕಾರಕ್ಕೆ ಲೋಪ ಬರುವುದಿಲ್ಲ.

ಸ್ಥಃ—ಅಸ ಭುವಿ ಧಾತು. ಲಟ್ ಮಧ್ಯಮಪುರುಷದ್ವಿವಚನ ಥಸ್ ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಕಿತ್ ಙಿತ್ ಆದ ಸಾರ್ವಧಾತುಕ ಪರದಲ್ಲಿದ್ದರೆ ಶ್ನಮ್ ಪ್ರತ್ಯಯ ಅಸ್ ಧಾತು ಇವುಗಳ ಅಕಾರಕ್ಕೆ ಲೋಪ ಬರುತ್ತೆ ಎಂದು ಅಸ್ ಧಾತುವಿನ ಅಕಾರಕ್ಕೆ ಲೋಪ ಸ್+ಥಸ್, ರುತ್ವವಿಸರ್ಗಗಳು. ಸ್ಥಃ ಎಂದಾಗುತ್ತೆ. ಯದ್ವಾಸ್ಥೋ ಅಧಿ ಎಂದು ಯಚ್ಛಬ್ದಯೋಗ ಇದೆ. ಯದ್ವೃತ್ತಾನ್ನಿತ್ಯಮ್ ( ಪಾ. ಸೂ. ೮-೧-೬೬ ) ಯದಸ್ಮಿನ್ವರ್ತತೇ ಇತಿ ಯದ್ವೃತ್ತಂ ಎಂದು ಮಹಾಭಾಷ್ಯದಲ್ಲಿ ವಿಗ್ರಹವನ್ನು ಹೇಳಿರುವರು. ಆದ್ದರಿಂದ ಯಾವ ಪದದಲ್ಲಿ ಯತ್ ಎಂಬ ಪದವಿದೆಯೋ ಅದರ ಮುಂದಿರುವ ತಿಙಂತವು ಅನುದಾತ್ತವಾಗುವುದಿಲ್ಲ ಎಂದು ಸರ್ವಾನುದಾತ್ತಕ್ಕೆ ನಿಷೇಧಬರುತ್ತೆ ಪೂಜನಾತ್ಪೂಜಿತ—(ಪಾ.ಸೂ.೮-೧-೬೭) ಎಂಬಲ್ಲಿ ಪುನಃ ಪೂಜಿತಗ್ರಹಣದಿಂದ 'ಅತ್ರಪ್ರಕರಣೇ ಪಂಚಮೀ ನಿರ್ದೇಶೇಪಿ ನಾನಂತರ್ಯಮಿಷ್ಯತೇ' ಎಂದು ಜ್ಞಾಪಿತವಾಗುತ್ತೆ. ಆದ್ದರಿಂದ ವಾಶಬ್ದದಿಂದ ವ್ಯವಧಾನವಿದ್ದರೂ, ಈ ನಿಷೇಧಬರುತ್ತೆ.

ಗತಮ್—ಗಮ್ಲೃ ಗತೌಧಾತು. ಲೋಟ್, ಲಙ್ವದ್ಭಾವ, ತಸ್ಥಸ್ಥಮಿಪಾಂ-(ಪಾ. ಸೂ. ೩-೪-೧೦೧- ಎಂದು ಥಸ್, ತಮ್ ಆದೇಶ, ಶಪ್‌ಗೆ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಎಂದು ಲುಕ್ ಅನುದಾತ್ತೋಪದೇಶ-(ಪಾ. ಸೂ. ೬-೪-೩೭) ಅನುನಾಸಿಕವಾದ ಮಕಾರಕ್ಕೆ ಲೋಪ ॥ ೭ ॥

॥ ಸಂಹಿತಾಪಾಠಃ ॥

ಅರ್ವಾಂಚಾ ವಾಂ ಸಪ್ತಯೋಽಧ್ವರಶ್ರಿಯೋ ವಹಂತು ಸವನೇದುಪ ।
ಇಷಂ ಪೃಂಚಂತಾ ಸುಕೃತೇ ಸುದಾನವ ಆ ಬರ್ಹಿಃ ಸೀದತಂ ನರಾ ॥ ೮ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಅರ್ವಾಂಚಾ । ವಾಂ । ಸಪ್ತಯಃ । ಅಧ್ವರಽಶ್ರಿಯಃ । ವಹಂತು । ಸವನಾ ।
ಇತ್ । ಉಪ ॥
ಇಷಂ । ಪೃಂಚಂತಾ । ಸುಽಕೃತೇ । ಸುಽದಾನವೇ । ಆ । ಬರ್ಹಿಃ । ಸೀದತಂ ।
ನರಾ ॥ ೮ ॥

ಸಾಯಣಭಾಷ್ಯಂ

ಹೇ ಅಶ್ವಿನೌ ಅಧ್ವರಶ್ರಿಯೋ ಯಾಗಸೇವಿನಃ ಸಪ್ತಯೋಽಶ್ವಾಃ ಸವನೇದುಪಾಸ್ಮದನುಷ್ಠೇಯಾನಿ ತ್ರೀಣಿ ಸವನಾನ್ಯೇವೋಪಲಕ್ಷ್ಯಾರ್ವಾಂಚಾಭಿಮುಖೌ ವಾಂ ಯುವಾಂ ವಹಂತು । ಪ್ರಾಪಯಂತು। ಹೇ ನರಾಶ್ವಿನೌ ಸುಕೃತೇ ಸುಷ್ಠು ಕರ್ಮಕಾರಿಣೇ ಸುದಾನವೇ ಶೋಭನದಾನಯುಕ್ತಾಯ ಯಜಮಾನಾಯೇಷಮನ್ನಂ ಪೃಂಚಂತಾ ಸಂಯೋಜಯಂತೌ ಯುವಾಂ ಬರ್ಹಿರಾ ಸೀದತಂ । ದರ್ಭಂ ಪ್ರಾಪ್ನುತಂ ॥ ಅರ್ವಾಂಚಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಅಧ್ವರಶ್ರಿಯಃ । ಅಧ್ವರಂ ಶ್ರಯಂತೀತ್ಯಧ್ವರಶ್ರಿಯಃ । ಕ್ವಿಬ್ವಚಿಪ್ರಛೀತ್ಯಾದಿನಾ । ಉ ೨-೫೭ । ಕ್ವಿಬ್ದೀರ್ಘಶ್ಚ । ವಹಂತು । ವಹ ಪ್ರಾಪಣೇ । ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರೇಣಾದ್ಯುದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ। ಸವನಾ । ಷುಞ್ ಅಭಿಷವೇ । ಅಭಿಷೂಯತೇ ಸೋಮ ಏಷ್ವಿತಿ ಸವನಾನಿ । ಅಧಿಕರಣೇ ಲ್ಯುಟ್ । ಯೋರನಾದೇಶಃ । ಗುಣಾವಾದೇಶೌ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಪೃಂಚಂತಾ । ಪೃಚೀ ಸಂಪರ್ಕೇ । ಶತರಿ ರುಧಾದಿತ್ವಾತ್ ಶ್ನಂ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಪ್ರತ್ಯಯಸ್ವರಃ । ಸುಕೃತೇ । ಸುಕರ್ಮಪಾಪೇತ್ಯಾದಿನಾ । ಪಾ. ೩-೨-೮೯ । ಕರೋತೇರ್ಭೂತೇ ಕಾಲೇ ಕ್ವಿಪ್ । ಹ್ರಸ್ವಸ್ಯ ಪಿತಿ । ಪಾ. ೬-೧-೭೧ । ಇತಿ ತುಕ್ । ಸುದಾನವೇ । ಶೋಭನಂ ದಾನು ದಾನಂ ಯಸ್ಯಾಸೌ ಸುದಾನುಃ । ದಾನುಶಬ್ದೋ ನುಪ್ರತ್ಯಯಾಂತ ಆದ್ಯುದಾತ್ತಃ । ಆದ್ಯುದಾತ್ತಂ ದ್ವ್ಯಚ್ಛಂದಸೀತಿ ಬಹುವ್ರೀಹಾವುತ್ತರಪದಾದ್ಯುದಾತ್ತತ್ವಂ । ಸೀದತಂ । ಷದ್ಲೃ ವಿಶರಣಗತ್ಯವಸಾದನೇಷು ॥

॥ ಪ್ರತಿಪದಾರ್ಥ ॥

ಅಧ್ವರಶ್ರಿಯಃ—(ಎಲೈ ಅಶ್ವಿನೀದೇವತೆಗಳೇ) ಯಾಗಸೇವಿಗಳಾದ । ಸಪ್ತಯಃ—ಕುದುರೆಗಳು । ಸವನೇದುಪ—(ನಾವು ಅನುಷ್ಠಾನಮಾಡುವ) ಸವನತ್ರಯವನ್ನೂ ಉದ್ದೇಶಿಸಿ । ಅರ್ವಾಂಚಾ—ಅವುಗಳ ಅಭಿಮುಖರನ್ನಾಗಿ । ವಾಂ—ನಿಮ್ಮಿಬ್ಬರನ್ನೂ । ವಹಂತು—ಕರೆದುಕೊಂಡುಬಂದು ಸೇರಿಸಲಿ । ನರಾ—ನೇತೃಗಳಾದ ಅಶ್ವಿಗಳೇ । ಸುಕೃತೇ—ಪವಿತ್ರವಾದ ಕರ್ಮಗಳನ್ನು ಮಾಡತಕ್ಕವನೂ । ಸುದಾನವೇ—ಶ್ರೇಷ್ಠವಾದ ದಾನಯುಕ್ತನೂ ಆದ ಯಜಮಾನನಿಗೆ । ಇಷಂ—ಅನ್ನವನ್ನು । ಪೃಂಚಂತಾ—ಒದಗಿಸುತ್ತಾ । ಬರ್ಹಿಃ—ದರ್ಭಾಸನದ ಮೇಲೆ । ಆ ಸೀದತಂ—ಕುಳಿತುಕೊಳ್ಳಿ.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ಯಾಗಸೇವಿಗಳಾದ ನಿಮ್ಮ ಕುದುರೆಗಳು ನಾವು ಅನುಷ್ಠಿಸುವ ಸವನತ್ರಯ ಕಾಲಗಳಲ್ಲೂ ನಮ್ಮ ಯಜ್ಞಾಭಿಮುಖರನ್ನಾಗಿ ನಿಮ್ಮಿಬ್ಬರನ್ನೂ ಕರೆದುಕೊಂಡುಬಂದು ಸೇರಿಸಲಿ. ಎಲೈ ನೇತೃಗಳೇ, ಯಜ್ಞಕರ್ತನಾದ ಯಜಮಾನನು ಪವಿತ್ರಗಳಾದ ಕರ್ಮಗಳನ್ನು ಮಾಡತಕ್ಕವನು. ಶ್ರೇಷ್ಠವಾದ ದಾನದಿಂದ ಕೂಡಿದವನು. ಅವನಿಗೆ ಅನ್ನವನ್ನು ಒದಗಿಸುತ್ತ ದರ್ಭಾಸನದ ಮೇಲೆ ಬಂದು ಕುಳಿತುಕೊಳ್ಳಿರಿ.

## English Translation.

May your horses, the grace of the sacrifice, bring you to be present at our rite ; guides (of men) bestowing food upon the pious and liberal donor of he offering, sit down on the sacred grass.

॥ ವಿಶೇಷ ವಿಷಯಗಳು ॥

ಅಧ್ವರಶ್ರಿಯಃ—ಅಧ್ವರಂ ಶ್ರಯಂತೀತ್ಯಧ್ವರಶ್ರಿಯಃ । ಯಾಗಸೇವಿನಃ ॥ ಯಜ್ಞಾರ್ಥವಾಗಿ ಗಮನವುಳ್ಳ ಅಥವಾ ಯಜ್ಞಕ್ಕಾಗಿ ಶ್ರಮಿಸುವ.

ಸಪ್ತಯಃ—ಕುದುರೆಗಳು. ಅತ್ಯಃ ಹಯಃ ಮೊದಲಾದ ಇಪ್ಪತ್ತಾರು ಅಶ್ವನಾಮಗಳ ಮಧ್ಯದಲ್ಲಿ ಸಪ್ತಿ ಶಬ್ದವು ಪಠಿತವಾಗಿರುವುದು. (ನಿ. ೨-೨೭)

ಸವನಾ—ತ್ರೀಣಿ ಸವನಾನಿ। ಯಜ್ಞಗಳಲ್ಲಿ ಆಚರಿಸಲ್ಪಡುವ ಪ್ರಾತಸ್ಸವನ, ಮಾಧ್ಯಂದಿನಸವನ ತೃತೀಯಸವನ ಎಂಬ ಪ್ರಾತಃಕಾಲ, ಮಧ್ಯಾಹ್ನ, ಸಾಯಂಕಾಲಗಳಲ್ಲಿ ಸೋಮರಸವನ್ನು ಹಿಂಡಿ ಸಿದ್ಧಪಡಿಸುವ ಕರ್ಮವಿಶೇಷಗಳಿಗೆ ಸವನಗಳೆಂದು ಹೆಸರು. ಸವನಗಳು ಮೂರು ಇರುವವು.

ಪೃಂಚಂತಾ—ಪೃಚೀ ಸಂಪರ್ಕೇ । ಸೇರಿಸುತ್ತಾ, ಒದಗಿಸುತ್ತಾ ಸಂಪರ್ಕವನ್ನುಂಟುಮಾಡುತ್ತಾ.

॥ ವ್ಯಾಕರಣಪ್ರಕ್ರಿಯಾ ॥

ಅರ್ವಾಞ್ಚಾ-ಸುಪಾಂಸುಲುಕ್ (ಪಾ. ಸೂ. ೭-೧-೩೯) ಎಂದು ದ್ವಿತೀಯಾದ್ವಿವಚನ ಔಗೆ ಆಕಾರಾದೇಶ.

ಅಧ್ವರಶ್ರಿಯಃ—ನ ವಿದ್ಯತೇ ಧ್ವರಃ ಹಿಂಸಾ ಯಸ್ಮಿನ್ ಸಃ ಎಂದು ವಿಗ್ರಹ. ಅಧ್ವರಂ ಶ್ರಯನ್ತಿ ಇತ್ಯಧ್ವರಶ್ರಿಯಃ, ಯಾಗವನ್ನು ಆಶ್ರಯಿಸಿರುವವು ಎಂದು ಅರ್ಥ. ಕ್ವಿಬ್ವಚಿಪ್ರಚ್ಛಿ ಶ್ರಿಸ್ರುದ್ರುಪ್ರುಜ್ವಾಂ ದೀರ್ಘೋಽಸಂಪ್ರಸಾರಣಂಚ (ಉ. ಸೂ. ೨-೨೧೬) ವಚ್ ಮೊದಲಾದ ಧಾತುಗಳ ಮುಂದೆ ಕ್ವಿಪ್ ಬರುತ್ತೆ, ದೀರ್ಘ ಬರುತ್ತೆ, ಮತ್ತು ಕಿತ್ವನಿಮಿತ್ತಕವಾಗಿ ಪ್ರಾಪ್ತವಾಗುವ ಸಂಪ್ರಸಾರಣ ಬರುವುದೂ ಇಲ್ಲ ಎಂದು ಇಲ್ಲಿ ಶ್ರಿಞ್‌ಸೇವಾಯಾಂ ಧಾತುವಿನ ಮುಂದೆ ಕ್ವಿಪ್, ದೀರ್ಘಬಂದರೆ ಅಧ್ವರಶ್ರೀ ಎಂದಾಗುತ್ತೆ. ಜಸ್, ಇಯಙಾದೇಶ.



CC-0. Jangamwadi Math Collection. Digitized by eGangotri

ವಹನ್ತು—ವಹ ಪ್ರಾಪಣೇ ಲೋಟ್, ಶಪ್, ಇದು ಪಿತ್ತಾದ್ದರಿಂದ ಅನುದಾತ್ತ. ಅದು ಪದೇಶದ ಮುಂದೆ ಇರುವ ಲಸ್ಥಾನಿಕ ಸಾರ್ವಧಾತುಕಕ್ಕೆ ತಾಸ್ಯನುದಾತ್ತೇತ್ - (ಪಾ. ಸೂ. ೬-೧-೧೮೬ ) ಎಂದು ಅನುದಾತ್ತ. ಧಾತುಸ್ವರ ಉಳಿಯುತ್ತೆ- ವಹನ್ತು ಎಂಬುದು ಪಾದಾದಿಯಲ್ಲಿರುವುದು. ಸರ್ವಾನುದಾತ್ತ ಬರುವುದಿಲ್ಲ.

ಸವನಾ—ಷುಞ್ ಅಭಿಷವೇ ಧಾತು. ಅಭಿಷೂಯತೇ ಸೋಮ ಏಷ್ವಿತಿ ಸವನಾನಿ ಎಂದು ವಿಗ್ರಹ. ಅಭಿ ಉಪಸರ್ಗ. ಅದು ಪೂರ್ವದಲ್ಲಿರುವಾಗ ಷು ಧಾತುವಿನ ಮುಂದೆ ಕರಣಾಧಿಕರಣಯೋಶ್ಚ (ಪಾ. ಸೂ. ೩-೩-೧೧೭) ಎಂದು ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಧಾತ್ವಾದೇಃ ಷಃ ಸಃ (ಪಾ. ಸೂ. ೬-೧-೬೪ ) ಎಂದು ಷಕಾರಕ್ಕೆ ಸಕಾರ. ಸು+ಯು. ಯುವೋರನಾಕೌ (ಪಾ. ಸೂ. ೭-೧-೧) ಎಂದು ಯು ಗೆ ಅನ ಆದೇಶ. ಸಾರ್ವಧಾತುಕಾರ್ಧಧಾತುಕಯೋಃ (ಪಾ. ಸೂ. ೭-೩-೮೪) ಎಂದು ಗುಣ. ಉಕಾರಕ್ಕೆ ಓಕಾರ. ಸೋ+ಅನ. ಅವಾದೇಶ. ಸವನ ಎಂದಾಯಿತು. ಇದರ ಮುಂದೆ ದ್ವಿತೀಯಾ ಬಹುವಚನ ಶಸ್ ಜಶ್ಶಸೋಶ್ಶಿಃ (ಪಾ. ಸೂ. ೭-೧-೨೦) ನಪುಂಸಕಲಿಂಗವಾದ ಅಂಗದ ಮುಂದಿರುವ ಜಸ್ ಅಥವಾ ಶಸ್‌ಗಳಿಗೆ ಶಿ ಆದೇಶ ಬರುತ್ತೆ ಎಂದು ಶಸ್‌ಗೆ ಶಿ ಆದೇಶ. ಸವನಾ+ಶಿ, ಶಿಸರ್ವನಾಮಸ್ಥಾನಮ್ (ಪಾ. ಸೂ. ೧-೧-೪೨ ) ಎಂದು ಶಿಗೆ ಸರ್ವನಾಮಸ್ಥಾನ ಸಂಜ್ಞೆ. ನಪುಂಸಕಸ್ಯ ಝಲಚಃ (ಪಾ. ಸೂ. ೭-೧-೭೨) ಸರ್ವನಾಮಸ್ಥಾನ ಪ್ರತ್ಯಯ ಪರದಲ್ಲಿರುವಾಗ ನಪುಂಸಕಲಿಂಗದಲ್ಲಿ ಝಲಂತ, ವಾ ಅಜಂತವಾದ ಅಂಗಕ್ಕೆ ನುಮ್ ಆಗಮ ಬರುತ್ತೆ ಎಂದು ನುಮಾಗಮ. ಸವನನ್+ಶಿ ಸರ್ವನಾಮಸ್ಥಾನೇಚಾಸಂಬುದ್ಧೌ (ಪಾ. ಸೂ. ೬-೪-೮) ಎಂದು ಉಪಧಾದೀರ್ಘ ಶೇ ಛಂದಸಿ ಬಹುಲಂ (ಪಾ. ಸೂ. ೬-೧-೭೦) ವೇದದಲ್ಲಿ ಶಿಗೆ ಬಹುಲವಾಗಿ ಲೋಪ ಬರುತ್ತೆ ಎಂದು ಶಿಗೆ ಲೋಪ ನಲೋಪಃ ಪ್ರಾತಿಪದಿಕಾಂತಸ್ಯ ( ಪಾ. ಸೂ. ೮-೨-೭ ) ಎಂದು ನಕಾರಕ್ಕೆ ಲೋಪ, ಸವನಾ ಎಂದಾಗುತ್ತೆ.

ಪೃಞ್ಚತಾ--ಪೃಚೀ ಸಂಪರ್ಕೇ ಧಾತು. ಲಟ್ ಅದಕ್ಕೆ ಶತೃ. ರುಧಾದಿಭ್ಯಃಶ್ನಮ್ ಎಂದು ಶ್ನಮ್ ವಿಕರಣ. ಅದು ಮಿತ್ ಆದ್ದರಿಂದ ಪೃಗೆ ಪರದಲ್ಲಿ ಬರುತ್ತೆ. ಪೃನಚ್+ಅತ್, ಶ್ನಸೋರಲ್ಲೋಪಃ (ಪಾ.ಸೂ. ೬.೪-೧೧೧) ಕಿತ್ ಅಥವಾ ಙಿತ್ ಆದ ತಿಙ್ ಪ್ರತ್ಯಯ ಅಥವಾ ಅಂತಹ ಶಕಾರೇತ್ಸಂಜ್ಞಕ ಪ್ರತ್ಯಯಗಳು ಪರದಲ್ಲಿದ್ದರೆ ಶ್ನ-ಅಸ್‌ಗಳ ಅಕಾರಕ್ಕೆ ಲೋಪಬರುತ್ತೆ ಎಂದು ಶ್ನ ಪ್ರತ್ಯಯದ ಅಕಾರಕ್ಕೆ ಲೋಪ. ನಶ್ಚಾಪದಾಂತಸ್ಯಝಲಿ ಎಂದು ನಕಾರಕ್ಕೆ ಅನುಸ್ವಾರ, ಅನುಸ್ವಾರಸ್ಯ ಯಯಿಪರಸವರ್ಣಃ ಎಂದು ಪರಸವರ್ಣ, ಪೃಞ್ಚತ್ ಎಂದಾಯಿತು. ಪ್ರಥಮಾ ದ್ವಿವಚನಕ್ಕೆ ಆಕಾರಾದೇಶ. ಶತೃ ಪ್ರತ್ಯಯದ ಅಕಾರವು ಪ್ರತ್ಯಯ ಸ್ವರದಿಂದ ಉದಾತ್ತ.

ಸುಕೃತೇ—ಸು ಉಪಸರ್ಗ. ಕೃಞ್ ಕರಣೇ ಧಾತು. ಸುಕರ್ಮಪಾಪಮನ್ತ್ರ ಪುಣ್ಯೇಷುಕೃಞಃ (ಪಾ. ಸೂ. ೩-೨-೮೯) ಸು ಮೊದಲಾದ ಶಬ್ದಗಳು ಉಪಪದವಾಗಿರುವಾಗ ಭೂತಾರ್ಥದಲ್ಲಿರುವ ಕೃಞ್ ಧಾತುವಿನ ಮುಂದೆ ಕ್ವಿಪ್ ಬರುತ್ತೆ ಎಂದು ಕ್ವಿಪ್. ಹ್ರಸ್ವಸ್ಯಪಿತಿಕೃತಿತುಕ್ (ಪಾ. ಸೂ. ೬-೧-೭೧) ಪಿತ್ ಆದ ಕೃತ್ತು ಪರದಲ್ಲಿರುವಾಗ ಹ್ರಸ್ವವರ್ಣಕ್ಕೆ ತುಕ್ ಆಗಮ ಬರುತ್ತೆ ಎಂದು ತುಗಾಗಮ ಸುಕೃತ್. ಚತುರ್ಥೀ ಏಕ ವಚನ.

ಸುದಾನವೇ—ಸು= ಒಳ್ಳೆಯ, ದಾನು-ದಾನವು, ಯಸ್ಯಸಃ= ಯಾವನಿಗೆ ಇದೆಯೋ ಅವನು ಎಂದು ಬಹುವ್ರೀಹಿ. ದಾಭಾಭ್ಯಾಂನುಃ (ಉ. ಸೂ. ೩-೩೧) ಸುಶ್ಯಾಭ್ಯಾಂನಿಚ್ಚ ಎಂಬುದರಿಂದ ನಿತ್ ಅನುವೃತ್ತಿ. ದಾ-ಧಾತುಗಳ ಮುಂದೆ ನು ಪ್ರತ್ಯಯ ಬರುತ್ತೆ, ಅದು ನಿತ್ ಆಗುತ್ತೆ ಎಂದು ನು ಪ್ರತ್ಯಯ. ಪ್ರತ್ಯಯ ನಿತ್ತಾದ್ದ



CC-0. Jangamwadi Math Collection. Digitized by eGangotri

ರಿಂದ ಇದು ಆದ್ಯುದಾತ್ತವಾದ ಪದ. ಆದ್ಯುದಾತ್ತಂದ್ವ್ಯಚ್ ಛಂದಸಿ(ಪಾ.ಸೂ. ೬-೨-೧೧೯)ಸು ಶಬ್ದದ ಮುಂದಿರುವ ಆದ್ಯುದಾತ್ತವೂ ಎರಡು ಅಚ್ಚುಗಳುಳ್ಳದ್ದೂ ಆದ ಉತ್ತರಪದವು ಬಹುವ್ರೀಹಿಯಲ್ಲಿ ಆದ್ಯುದಾತ್ತವಾಗುತ್ತೆ ಎಂದು ಉತ್ತರಪದಕ್ಕೆ ಆದ್ಯುದಾತ್ತ ಬರುತ್ತೆ.

ಸೀದತಮ್—ಷದ್ಲೃಧಾತು, ಲೋಟ್, ಥಸ್, ತಮ್ ಆದೇಶ, ಶಪ್. ಪಾಘ್ರಾಧ್ಮಾ ಎಂದು ಸೀದ ಆದೇಶ, ಸರ್ವಾನುದಾತ್ತ ॥ ೮ ॥

ಸಂಹಿತಾಪಾಠಃ

ತೇನ ನಾಸತ್ಯಾ ಗತಂ ರಥೇನ ಸೂರ್ಯತ್ವಚಾ ।
ಯೇನ ಶಶ್ವದೂಹಥುರ್ದಾಶುಷೇ ವಸು ಮಧ್ವಃ ಸೋಮಸ್ಯ ಪೀತಯೇ ॥ ೯ ॥

ಪದಪಾಠಃ

ತೇನ । ನಾಸತ್ಯಾ । ಆ । ಗತಂ । ರಥೇನ । ಸೂರ್ಯ ऽ ತ್ವಚಾ ॥
ಯೇನ । ಶಶ್ವತ್ । ಊಹಥುಃ । ದಾಶುಷೇ । ವಸು । ಮಧ್ವಃ । ಸೋಮಸ್ಯ । ಪೀತಯೇ ॥ ೯ ॥

ಸಾಯಣಭಾಷ್ಯಂ

ಹೇ ನಾಸತ್ಯಾ ಸೂರ್ಯತ್ವಚಾ ಸೂರ್ಯಸಂವೃತೇನ ಸೂರ್ಯರಶ್ಮಿಸದೃಶೇನ ವಾ ತೇನ ಪ್ರಸಿದ್ಧೇನ ರಥೇನಾ ಗತಂ ಆಗಚ್ಛತಂ । ದಾಶುಷೇ ಹವಿರ್ದತ್ತವತೇ ಯಜಮಾನಾಯ ವಸು ಧನಂ ಶಶ್ವತ್ ಸರ್ವದಾ ಯೇನ ರಥೇನೋಹಥುಃ ಪ್ರಾಪಿತವಂತೌ। ತೇನ ರಥೇನೇತಿ ಪೂರ್ವತ್ರಾನ್ವಯಃ। ಕಿಮರ್ಥಮಾಗಮನಮಿತಿ ತದುಚ್ಯತೇ । ಮಧ್ವೋ ಮಧುರಸ್ಯ ಸೋಮಸ್ಯ ಪೀತಯೇ ಸೋಮಪಾನಾರ್ಥಂ ॥ ಸೂರ್ಯತ್ವಚಾ । ತ್ವಚ ಸಂವರಣೇ । ತ್ವಚತಿ ಸಂವೃಣೋತೀತಿ ತ್ವಗ್ರಶ್ಮಿಃ । ಸೂರ್ಯಸ್ಯ ತ್ವಗಿವ ತ್ವಗ್ಯಸ್ಯ । ಸಪ್ತಮ್ಯುಪಮಾನೇತ್ಯಾದಿನಾ । ಪಾ. ೨-೨-೨೪-೧೨ । ಬಹುವ್ರೀಹಿರುತ್ತರಪದಲೋಪಶ್ಚ । ಸೂರ್ಯಶಬ್ದಃ ಷೂ ಪ್ರೇರಣ ಇತ್ಯಸ್ಮಾತ್ ಕ್ಯಪಿ ರಾಜಸೂಯಸೂರ್ಯೇತ್ಯಾದಿನಾ ರುಡಾಗಮಸಹಿತೋ ನಿಪಾತಿತಃ । ತತಃ ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತಃ । ಸ ಏವ ಬಹುವ್ರೀಹೌ ಪೂರ್ವಪದ ಪ್ರಕೃತಿಸ್ವರೇಣ ಶಿಷ್ಯತೇ । ಊಹಥುಃ । ವಹ ಪ್ರಾಪಣೇ । ಲಿಟ್ಯಸಂಯೋಗಾಲ್ಲಿಟ್ ಕಿತ್ । ಪಾ. ೧-೨-೫- ಇತಿ ಲಿಟಃ ಕಿತ್ತ್ವೇ ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ಅಭ್ಯಾಸಹಲಾದಿಶೇಷೌ ಸವರ್ಣದೀರ್ಘಃ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ ॥





CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

ನಾಸತ್ಯಾ—ಎಲೈ ಅಶ್ವಿನೀದೇವತೆಗಳೇ । ಯೇನ—ಯಾವ ರಥದೊಡನೆ (ಯಾವುದರಲ್ಲಿ)। ದಾಶುಷೇ—ಹವಿರ್ದಾತನಾದ ಯಜಮಾನನಿಗೆ । ವಸು—ಧನವನ್ನು । ಶಶ್ವತ್—ಯಾವಾಗಲೂ । ಊಹಥುಃ—ಸಾಗಿಸಿ ತಲಪಿಸಿದ್ದೀರೋ । ಸೂರ್ಯತ್ವಚಾ—ಸೂರ್ಯನಿಂದ (ಸೂರ್ಯನ ಕಿರಣಗಳಿಂದ) ಆಚ್ಛಾದಿತವಾದ ಅಥವಾ ಸೂರ್ಯಕಿರಣಗಳಿಗೆ ಸದೃಶವಾದ । ತೇನ—ಪ್ರಸಿದ್ಧವಾದ । ರಥೇನ—(ಆ) ರಥದೊಡನೆ (ಅದರಲ್ಲಿ ಕುಳಿತು) ಮಧ್ವಃ—ಮಧುರವಾದ । ಸೋಮಸ್ಯ—ಸೋಮರಸದ । ಪೀತಯೇ—ಪಾನಕ್ಕಾಗಿ । ಆ ಗತಂ—ಬನ್ನಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನಿಮ್ಮ ರಥವು ಲೋಕಪ್ರಸಿದ್ಧವಾದುದು. ಅದರಲ್ಲಿ ನೀವು ಯಾವಾಗಲೂ ಹವಿರ್ದಾತನಾದ ಯಜ್ಞಕರ್ತನಿಗೆ ಧನವನ್ನು ಸಾಗಿಸಿ ತಲಪಿಸಿದ್ದೀರಿ. ಅದು ಸಂಚಾರ ಕಾಲದಲ್ಲಿ ಸೂರ್ಯಕಿರಣಗಳಿಂದ ಆಚ್ಛಾದಿತವಾಗಿ ಅಥವಾ ಸೂರ್ಯಕಿರಣಗಳಿಗೆ ಸದೃಶವಾಗಿ ಶೋಭಿಸುತ್ತದೆ. ಆ ರಥದಲ್ಲಿ ಕುಳಿತು ಸೋಮರಸಪಾನಕ್ಕಾಗಿ ಬನ್ನಿರಿ.

## English Translation.

Truthful Aswins, come hither to drink the sweet soma with your chariot, bright as the sun in which you have ever conveyed wealth to the worshipper.

॥ ವಿಶೇಷ ವಿಷಯಗಳು ॥

ಸೂರ್ಯತ್ವಚಾ—ಸೂರ್ಯಸಂವೃತೇನ, ಸೂರ್ಯರಶ್ಮಿಸದೃಶೇನ ವಾ । ಸೂರ್ಯನಿಂದ ಆವೃತವಾದ ಅಥವಾ ಸೂರ್ಯರಶ್ಮಿಸದೃಶವಾದ ಎಂದರೆ ಸೂರ್ಯನಂತೆ ಪ್ರಕಾಶಮಾನವಾದ.

ಶಶ್ವತ್—ಸರ್ವದಾ । ಯಾವಾಗಲೂ.

ಈ ಋಕ್ಕಿನಲ್ಲಿ ಯಚ್ಛಬ್ದತಚ್ಛಬ್ದಗಳ ಪ್ರಯೋಗವಿರುವುದು.

ಎಲೈ ಅಶ್ವಿನೀದೇವತೆಗಳೇ ನೀವು ಯಾವ ನಿಮ್ಮ ರಥದಲ್ಲಿ ಧನಾದ್ಯೈಶ್ವರ್ಯವನ್ನು ತುಂಬಿಕೊಂಡು ಯಜ್ಞಮಾಡುವ ಯಜಮಾನನಿಗೆ ತಂದುಕೊಡುತ್ತಿದ್ದಿರೋ ಅಂತಹ ನಿಮ್ಮ ಸೂರ್ಯನಂತೆ ಪ್ರಕಾಶಮಾನವಾದ ರಥದೊಡನೆ ಎಂದರೆ ರಥದಲ್ಲಿ ಕುಳಿತು ಸೋಮಪಾನಕ್ಕಾಗಿ ಇಲ್ಲಿಗೆ ಬನ್ನಿರಿ ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ಸೂರ್ಯತ್ವಚಾ—ತ್ವಚ ಸಂವರಣೇ ತ್ವಚತಿ ಸಂವೃಣೋತಿ ಇತಿ ತ್ವಕ್ ಸಂವರಣ ಎಂದರೆ ಆಚ್ಛಾದನೆ. ಹೊದಿಸುವುದು ಎಂದರ್ಥ, ಸೂರ್ಯನ ಕಿರಣವು ಪ್ರಪಂಚವನ್ನೆಲ್ಲಾ ಹೊದಿಸುವುದು. ಅದ್ದರಿಂದ ಆದಕ್ಕೆ ಈ ಹೆಸರು. ಅಥವಾ ಮುಚ್ಚುವುದು. ಸೂರ್ಯಸ್ಯ ತ್ವಗಿವ ತ್ವಕ್ ಯಸ್ಯ ಸಃ= ಸೂರ್ಯನ ಕಿರಣದಂತೆ ಕಿರಣವುಳ್ಳದ್ದು. ರಾಜಸೂಯ ಸೂರ್ಯ—(ಪಾ. ಸೂ. ೩-೧-೧೧೪) ಈ ಸೂತ್ರದಲ್ಲಿರುವ ಶಬ್ದಗಳ ಕ್ಯಬಂತವಾಗಿ



CC-0. Jangamwadi Math Collection. Digitized by eGangotri

ನಿಪಾತಿಸಲ್ಪಡುವುವು. ಸೂರ್ಯಶಬ್ದದಲ್ಲಿ ರುಟ್ ಎಂಬ ಆಗಮವೂ ನಿಪಾತಿತವಾಗಿದೆ. ಪ್ರತ್ಯಯ ಪಿತ್, ಆದ್ದರಿಂದ ಅನುದಾತ್ತ, ಬಹುವ್ರೀಹಿಯಲ್ಲಿ ಪೂರ್ವಪದಪ್ರಕೃತಿಸ್ವರಬರುತ್ತೆ.

ಊಹಥುಃ—ವಹಪ್ರಾಪಣೇ ಲಿಟ್ ಥಸ್, ತಸ್ಥಸ್ಥಮಿಪಾಂ ಎಂದು ಅಥುಸ್, ಅಸಂಯೋಗಾಲ್ಲಿಟ್‌ಕಿತ್ ( ಪಾ. ಸೂ. ೧-೨-೫ ) ಎಂದು ಲಿಟ್ ಕಿತ್ ಆಗುತ್ತೆ. ದ್ವಿತ್ವ ಲಿಟ್ಯಭ್ಯಾಸಸ್ಯೋಭಯೇಷಾಂ (ಪಾ. ಸೂ. ೬-೧-೧೭) ಲಿಟ್ ಪರದಲ್ಲಿರುವಾಗ ವಚ್ಯಾದಿ ಮತ್ತು ಗ್ರಹ್ಯಾದಿ ಧಾತುಗಳ ಅಭ್ಯಾಸಕ್ಕೆ ಸಂಪ್ರಸಾರಣ ಬರುತ್ತೆ ಎಂದು ಅಭ್ಯಾಸದ ವಕಾರಕ್ಕೆ ಉಕಾರ, ಪೂರ್ವರೂಪ. ಹಲಾದಿಃಶೇಷಃ ಎಂದು ಹಕಾರ ಲೋಪ, ಉ+ವಹ್+ಅಥುಸ್ ವಚಿಸ್ವಪಿಯಜಾದೀನಾಂಕಿತಿ (ಪಾ. ಸೂ. ೬-೧-೧೫) ಕಿತ್ ಆದ ಪ್ರತ್ಯಯ ಪರದಲ್ಲಿದ್ದರೆ ವಚ್ ಸ್ವಪ್ ಧಾತುಗಳಿಗೂ ಯಜಾದಿ ಧಾತುಗಳಿಗೂ ಸಂಪ್ರಸಾರಣ ಬರುತ್ತೆ ಎಂದು ಸಂಪ್ರಸಾರಣ. ಪೂರ್ವರೂಪ ಉ–ಉಹ್–ಅಥುಸ್, ಸವರ್ಣದೀರ್ಘ, ರುತ್ವವಿಸರ್ಗಗಳು ಪ್ರತ್ಯಯಸ್ವರ ಬರುತ್ತೆ. ಯೇನ ಎಂಬ ಯದ್ವೃತ್ತದ ಯೋಗ ಇದೆ. ಆದ್ದರಿಂದ ಸರ್ವಾನುದಾತ್ತ ಬರುವುದಿಲ್ಲ ॥ ೯ ॥.

ಸಂಹಿತಾಪಾಠಃ

ಉಕ್ಥೇಭಿರರ್ವಾಗವಸೇ ಪುರೂವಸೂ ಅರ್ಕೈಶ್ಚ ನಿ ಹ್ವಯಾಮಹೇ ।
ಶಶ್ವತ್ಕಣ್ವಾನಾಂ ಸದಸಿ ಪ್ರಿಯೇ ಹಿ ಕಂ ಸೋಮಂ ಪಪಥುರಶ್ವಿನಾ ॥೧೦॥

ಪದಪಾಠಃ

ಉಕ್ಥೇಭಿಃ । ಅರ್ವಾಕ್ । ಅವಸೇ । ಪುರುವಸೂ ಇತಿ ಪುರುಽವಸೂ । ಅರ್ಕೈಃ । ಚ । ನಿ । ಹ್ವಯಾಮಹೇ ॥
ಶಶ್ವತ್ । ಕಣ್ವಾನಾಂ । ಸದಸಿ । ಪ್ರಿಯೇ । ಹಿ । ಕಂ । ಸೋಮಂ । ಪಪಥುಃ । ಅಶ್ವಿನಾ ॥ ೧೦ ॥

ಸಾಯಣಭಾಷ್ಯಂ

ಪುರೂವಸೂ ಪ್ರಭೂತಧನಾವಶ್ವಿನಾವವಸೇಽಸ್ಮದ್ರಕ್ಷಣಾರ್ಥಮುಕ್ಥೇಭಿರುಕ್ಥೈಃ ಶಸ್ತ್ರೈರರ್ಕೈಶ್ಚಾರ್ಚನಸಾಧನೈಃ ಸ್ತೋತ್ರೈಶ್ಚಾರ್ವಾಗಸ್ಮದಾಭಿಮುಖ್ಯೇನ ನಿ ಹ್ವಯಾಮಹೇ । ನಿತರಾಮಾಹ್ವಯಾಮಃ । ಹೇ ಅಶ್ವಿನಾ ಕಣ್ವಾನಾಂ ಕಣ್ವಪುತ್ರಾಣಾಂ ಮೇಧಾವಿನಾಂ ವಾ ಪ್ರಿಯೇ ಸದಸಿ ಯಜ್ಞಸ್ಥಾನೇ ಶಶ್ವತ್ಸರ್ವದಾ ಸೋಮಂ ಪಪಥುರ್ಹಿ ಕಂ । ಯುವಾಂ ಪೀತವಂತೌ ಖಲು । ಉಕ್ಥೇಭಿಃ । ಬಹುಲಂ ಛಂದ-



CC-0. Jangamwadi Math Collection. Digitized by eGangotri

ಸೀತಿ ಭಿಸ ಐಸಾದೇಶಾಭಾವಃ । ಬಹುವಚನೇ ಝಲ್ಯೇದಿತ್ಯೇತ್ವಂ । ಅರ್ಕೈಃ । ಋಚ ಸ್ತುತೌ । ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತಿ ಕರಣೇ ಘಃ । ಚಜೋಃ ಕು ಘಿಣ್ಯತೋರಿತಿ ಕುತ್ವಂ । ನಿ ಹ್ವಯಾಮಹೇ । ನಿಸಮುಪವಿಭ್ಯೋ ಹ್ವಃ । ಪಾ. ೧-೩-೩೦ । ಇತ್ಯಾತ್ಮನೇಪದಂ । ಸದಸಿ । ಸೀದಂತ್ಯಸ್ಮಿನ್ನಿತಿ ಸದಃ । ಅಸುನೋ ನಿತ್ತ್ವಾದಾದ್ಯುದಾತ್ತತ್ವಂ । ಪಪಥುಃ । ಪಾ ಪಾನೇ । ಲಿಟ್ಯಾತೋ ಲೋಪ ಇಟಿ ಚೇತ್ಯಾಕಾರಲೋಪಃ । ಪ್ರತ್ಯಯಸ್ವರಃ । ಹಿ ಚೇತಿ ನಿಘಾತಪ್ರತಿಷೇಧಃ ॥ ೨ ॥

॥ ಪ್ರತಿಪದಾರ್ಥ ॥

ಪುರೂವಸೂ—ಸಮೃದ್ಧವಾದ ಧನವುಳ್ಳ ಅಶ್ವಿನೀದೇವತೆಗಳನ್ನು । ಅವಸೇ—(ನಮ್ಮ) ರಕ್ಷಣಾರ್ಥವಾಗಿ । ಉಕ್ಥೇಭಿಃ—ಶಸ್ತ್ರಮಂತ್ರಗಳಿಂದಲೂ । ಅರ್ಕೈಶ್ಚ—ಪೂಜಾಸ್ತೋತ್ರಗಳಿಂದಲೂ । ಅರ್ವಾಕ್—ನಮಗೆ ಅಭಿಮುಖರನ್ನಾಗಿ (ನಮ್ಮಲ್ಲಿಗೆ ಬರುವುದಕ್ಕಾಗಿ) ನಿ ಹ್ವಯಾಮಹೇ—ಬಹಳವಾಗಿ (ಪ್ರಾರ್ಥಿಸಿ) ಕರೆಯುತ್ತೇವೆ। ಅಶ್ವಿನಾ—ಎಲೈ ಅಶ್ವಿನೀದೇವತೆಗಳೇ । ಕಣ್ವಾನಾಂ—ಕಣ್ವಪುತ್ರರ ಅಥವಾ ಮೇಧಾವಿಗಳಾದ ಋತ್ವಿಕ್ಕುಗಳ । ಪ್ರಿಯೇ ಸದಸಿ—ಬಲವುಳ್ಳ ಯಜ್ಞಸ್ಥಾನದಲ್ಲಿ । ಶಶ್ವತ್—ಯಾವಾಗಲೂ । ಸೋಮಂ—ಸೋಮರಸವನ್ನು । ಪಪಥುಃ ಹಿ ಕಂ—ಕುಡಿದಿದ್ದೀರಲ್ಲವೆ ?

॥ ಭಾವಾರ್ಥ ॥

ಸಮೃದ್ಧವಾದ ಐಶ್ವರ್ಯವುಳ್ಳ ಅಶ್ವಿನೀದೇವತೆಗಳನ್ನು, ನಮ್ಮ ರಕ್ಷಣಾರ್ಥವಾಗಿ ಇಲ್ಲಿ ನಮ್ಮ ಸಮೀಪಕ್ಕೆ ದಯಮಾಡಲು ಉಕ್ಥಮಂತ್ರಗಳಿಂದಲೂ ಪೂಜಾಸ್ತೋತ್ರಗಳಿಂದಲೂ ಬಹಳವಾಗಿ ಪ್ರಾರ್ಥಿಸಿ ಕರೆಯುತ್ತೇವೆ. ಎಲೈ ಅಶ್ವಿನೀದೇವತೆಗಳೆ, ಕಣ್ವಪುತ್ರರ ಅಥವಾ ಮೇಧಾವಿಗಳಾದ ಋತ್ವಿಕ್ಕುಗಳ ಪ್ರೀತಿಪಾತ್ರವಾದ ಯಜ್ಞಸದಸ್ಸಿನಲ್ಲಿ ನೀವು ಯಾವಾಗಲೂ ಸೋಮರಸವನ್ನು ಕುಡಿದಿದ್ದೀರಲ್ಲವೇ ?

## English Translation.

With hymns and songs we invoke the wealthy Aswins to be present for our protection. Have you not always drunk the soma juice in the favoured dwelling of the Kanwas ?

॥ ವಿಶೇಷ ವಿಷಯಗಳು ॥

ಉಕ್ಥೇಭಿಃ—ಶಸ್ತ್ರ ಮಂತ್ರಗಳಿಂದ ಎಂದರೆ ಗಟ್ಟಿಯಾಗಿ ಪಠಿಸುವ ಋಗ್ವೇದಮಂತ್ರಗಳಿಂದ.

ಅರ್ಕೈಶ್ಚ—ಸ್ತೋತ್ರೈಶ್ಚ । ಗಾನಮಾಡಲು ಯೋಗ್ಯವಾದ ಸಾಮವೇದಮಂತ್ರಗಳಿಂದ.

ಸದಸಿ ಪ್ರಿಯೇ—ನಿಮಗೆ ಪ್ರೀತಿಪಾತ್ರವಾದ ಕಣ್ವವಂಶಸ್ಥರ ಯಜ್ಞಶಾಲೆಯಲ್ಲಿ. ಸೀದಂತ್ಯಸ್ಮಿನ್ನಿತಿ ಸದಃ ಎಂದರೆ ಕುಳಿತುಕೊಳ್ಳುವ ಸ್ಥಳ, ಸಭೆ ಯಜ್ಞಶಾಲೆ ಇತ್ಯಾದಿ.



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

**ಉಕ್ಥೇಭಿಃ**—ವಚ ಪರಿಭಾಷಣೇ, ಪಾತೃ ತುದಿ ವಚಿ ರಿಚಿ ಸಿಚಿಭ್ಯಸ್ಥಕ್ (ಉ. ಸೂ. ೨-೧೬೪) ಈ ಧಾತುಗಳ ಮುಂದೆ ಥಕ್ ಬರುತ್ತೆ ಎಂದು ಥಕ್, ವಚಿಸ್ವಪಿ ಎಂದು ಸಂಪ್ರಸಾರಣ. **ಬಹುಲಂ ಛಂದಸಿ** (ಪಾ. ಸೂ. ೭-೧-೧೦) ಎಂದು ಐಸ್ ಬರುವುದಿಲ್ಲ. **ಬಹುವಚನೇ ಝಲ್ಯೇತ್** (ಪಾ. ಸೂ. ೭-೩-೧೦೩) ಝಲಾದಿಬಹುವಚನ ಸುಪ್ ಪರದಲ್ಲಿದ್ದರೆ ಅದಂತವಾದ ಅಂಗಕ್ಕೆ ಏತ್ವ ಬರುತ್ತೆ ಎಂದು ಏತ್ವ

**ಅರ್ಕೈಃ**—ಋಚ ಗತೌ ಧಾತು. **ಪುಂಸಿಸಂಜ್ಞಾಯಾಂ ಘಃ ಪ್ರಾಯೇಣ** (ಪಾ. ಸೂ. ೩-೩-೧೧೮) ಕರಣ ಅಥವಾ ಅಧಿಕರಣ ಎಂಬ ಅರ್ಥದಲ್ಲಿ ಧಾತುವಿನ ಮುಂದೆ ಪುಲ್ಲಿಂಗದಲ್ಲಿ ಪ್ರಾಯಃ ಘ ಪ್ರತ್ಯಯ ಬರುತ್ತೆ ಎಂದು ಘ ಪ್ರತ್ಯಯ. **ಚಜೋಃ ಕುಘಿಣ್ಣ್ಯತೋಃ** (ಪಾ. ಸೂ. ೭-೩-೫೨) ಘಕಾರೇತ್ಸಂಜ್ಞಕ ಪ್ರತ್ಯಯ, ಣ್ಯತ್ ಪ್ರತ್ಯಯ, ಇವು ಪರದಲ್ಲಿರುವಾಗ ಚಕಾರ ಜಕಾರಗಳಿಗೆ ಕುತ್ವ ಅಂದರೆ ಕ್ರಮವಾಗಿ ಕಕಾರ ಗಕಾರಗಳು ಬರುತ್ತವೆ ಎಂದು ಚಕಾರಕ್ಕೆ ಕಕಾರ, ಋಕಾರಕ್ಕೆ ಲಘೂಪಧಗುಣ, ರಪರತ್ವ, ಅರ್ಕ ಎಂದಾಯಿತು.

**ನಿಹ್ವಯಾಮಹೇ**—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದು ಞಿತ್, ಕ್ರಿಯಾಫಲವು ಕರ್ತೃವಿಗೆ ಸೇರುವಾಗ ಇದರ ಮುಂದೆ ಆತ್ಮನೇಪದವು **ಸ್ವರಿತಞಿತಃ**, (ಪಾ. ಸೂ. ೧-೩-೭೨) ಎಂಬುದರಿಂದ ಸಿದ್ಧವಾಗುತ್ತೆ. ಫಲವು ಕರ್ತೃವಿಗೆ ಸೇರದೇ ಇದ್ದರೂ ಕೆಲವೆಡೆಗಳಲ್ಲಿ ಬರುತ್ತೆ. **ನಿಸಮುಪವಿಭ್ಯೋಹ್ವಃ** (ಪಾ. ಸೂ. ೧-೩-೩೦) ನಿ ಸಮ್ ಉಪ ವಿ, ಈ ಉಪಸರ್ಗಗಳ ಮುಂದಿರುವ ಹ್ವೇಞ್ ಧಾತುವಿನಮುಂದಿರುವ ಲಕಾರಕ್ಕೆ ಆತ್ಮನೇಪದ ಬರುತ್ತೆ ಎಂಬುದರಿಂದ ಆತ್ಮನೇಪದ ಬರುತ್ತೆ.

**ಸದಸಿ**—ಸೀದನ್ತ್ಯಸ್ಮಿನ್ನಿತಿ ಸದಃ, ಎಲ್ಲರೂ ಒಟ್ಟಾಗಿ ಕೂರುವ ಸ್ಥಳ. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೨೮) ಎಂದು ಷದ್ಲೃ (ಸದ್) ಧಾತುವಿನ ಮುದೆ ಅಸುನ್‌ಪ್ರತ್ಯಯ, ನಿತ್ಸ್ವರ ಆದ್ಯುದಾತ್ತ ಬರುತ್ತೆ.

**ಪಪಥುಃ**—ಪಾ ಪಾನೇ ಧಾತು. ಲಿಟ್ ಥಸ್ ಅಥುಸ್, ಪಾ+ಅಥುಸ್ ದ್ವಿತ್ವ ಆಭ್ಯಾಸಕ್ಕೆ ಹ್ರಸ್ವ, ಪಪಾ+ಅಥುಸ್ **ಆತೋಲೋಪ ಇಟಿಚ** (ಪಾ- ಸೂ. ೬-೪-೬೪) ಕಿತ್ ಙಿತ್, ಆದ ಅಜಾದ್ಯಾರ್ಧಧಾತುಕವೂ ಇಡಾಗಮವೂ ಪರದಲ್ಲಿದ್ದರೆ ದೀರ್ಘಾಕಾರಕ್ಕೆ ಆಲೋಪ ಗೆ, ಬರುತ್ತೆ ಎಂದು ಆಗೆ ಲೋಪ. ರುತ್ವವಿಸರ್ಗಗಳು **ಹಿ, ಚ** (ಪಾ. ಸೂ. ೮-೧-೩೪) ಹಿ ಶಬ್ದದ ಯೋಗ ಇದ್ದರೆ ತಿಙಂತ ಅನುದಾತ್ತವಾಗುವುದಿಲ್ಲ ಎಂದು ಸರ್ವಾನುದಾತ್ತಕ್ಕೆ ಪ್ರತಿಷೇಧ. ಪ್ರತ್ಯಯಸ್ವರದಿಂದ ಅಥುಸ್ ನ ಅಕಾರ ಉದಾತ್ತ ॥ ೧೦ ॥





CC-0. Jangamwadi Math Collection. Digitized by eGangotri

# ನಲವತ್ತೆಂಟನೆಯ ಸೂಕ್ತವು

‖ ಸಾಯಣಭಾಷ್ಯಂ ‖

ಸಹ ವಾಮೇನೇತಿ ಷೋಡಶರ್ಚಂ ಪಂಚಮಂ ಸೂಕ್ತಂ । ಪ್ರಸ್ಕಣ್ವ ಋಷಿಃ । ಬಾರ್ಹತತ್ವಾಪಯುಜೋ ಬೃಹತ್ಯೋ ಯುಜಃ ಸತೋಬೃಹತ್ಯಃ । ಉಷಾ ದೇವತಾ । ಸಹ ಷೋಳಶೋಷಸ್ಯಂ ತ್ವಿತ್ಯನುಕ್ರಮಣಿಕಾ । ಪ್ರಾತರನುವಾಕ ಉಷಸ್ಯೇ ಕ್ರತಾ ಬಾರ್ಹತೇ ಛಂದಸೀದಂ ಸೂಕ್ತಂ । ಅಥೋಷಸ್ಯ ಇತಿ ಖಂಡೇ ಸೂತ್ರಿತಂ । ಪ್ರತ್ಯು ಅದರ್ಶಿ ಸಹ ವಾಮೇನೇತಿ ಬಾರ್ಹತಂ । ಆ. ೪-೧೪ । ಇತಿ । ತಥಾ । ಶ್ವಿನಶಸ್ತ್ರೇsಪ್ಯೇತತ್ಸೂಕ್ತಂ । ಪ್ರಾತರನುವಾಕನ್ಯಾಯೇನ । ಆ. ೬-೫ । ಇತ್ಯತಿದಿಷ್ಟತ್ವಾತ್ ‖

ಅನುವಾದ—ಸಹ ವಾಮೇನ ಎಂದು ಪ್ರಾರಂಭವಾಗುವ ಸೂಕ್ತವು ಒಂಭತ್ತನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಕಣ್ವಪುತ್ರನಾದ ಪ್ರಸ್ಕಣ್ವನು ಋಷಿಯು. ಈ ಸೂಕ್ತದ ಅಸಮಸಂಖ್ಯಾಕವಾದ ಎಂದರೆ ೧, ೩, ೫ ಇತ್ಯಾದಿ ಋಕ್ಕುಗಳು ಬೃಹತೀ ಛಂದಸ್ಸಿನವು. ಸಮಸಂಖ್ಯಾಕವಾದ ಋಕ್ಕುಗಳು ಎಂದರೆ ೨, ೪, ೬, ಇತ್ಯಾದಿ ಋಕ್ಕುಗಳು ಸತೋಬೃಹತೀಛಂದಸ್ಸಿನವು. ಉಷಾಃ ಎಂಬುದು ದೇವತೆಯು. ಸಹ ಷೋಳಶೋಷಸ್ಯಂ ಎಂದು ಅನುಕ್ರಮಣಿಕೆಯಲ್ಲಿ ಋಷಿದೇವತಾಛಂದಸ್ಸುಗಳ ವಿವರಣೆಯಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಉಷಸ್ಯಕ್ರತು ಸಂಬಂಧವಾದ ಬೃಹತೀಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ಋಕ್ಕುಗಳನ್ನು ಪಠಿಸುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ ಅಥೋಷಸ್ಯ ಎಂಬ ಖಂಡದಲ್ಲಿ ಪ್ರತ್ಯು ಅದರ್ಶಿ ಸಹ ವಾಮೇನೇತಿ ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು. (ಆ. ೪-೧೪) ಇದಲ್ಲದೆ ಪ್ರಾತರನುವಾಕ ಮಂತ್ರಪಠನಕಾಲದಲ್ಲಿ ಆಶ್ವಿನಶಸ್ತ್ರಮಂತ್ರಗಳಿಗಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಅಲ್ಲಿಯೇ (ಆ. ೬-೫) ಹೇಳಿರುವುದು.

## ಸೂಕ್ತ—೪೮

ಮಂಡಲ—೧ ‖ ಅನುವಾಕ—೯ ‖ ಸೂಕ್ತ—೪೮
ಅಷ್ಟಕ—೧ ‖ ಅಧ್ಯಾಯ—೪ ‖ ವರ್ಗ— ೩, ೪, ೫ ‖

ಸೂಕ್ತದಲ್ಲಿರುವ ಋಕ್ಸಂಖ್ಯೆ—೧-೧೬
ಋಷಿಃ—ಪ್ರಸ್ಕಣ್ವಃ ಕಾಣ್ವಃ ‖
ದೇವತಾ— ಉಷಾಃ ‖
ಛಂದಃ—ಪ್ರಾಗಾಥಂ ಬಾರ್ಹತಂ । ೧, ೩, ೫, ೭, ೯, ೧೧, ೧೩, ೧೫ ಬೃಹತೀ । ೨, ೪, ೬, ೮, ೧೦, ೧೨, ೧೪, ೧೬ ಸತೋ ಬೃಹತೀ ‖

ಸಂಹಿತಾಪಾಠಃ

ಸಹ ವಾಮೇನ ನ ಉಷೋ ವ್ಯುಚ್ಛಾ ದುಹಿತರ್ದಿವಃ ।
ಸಹ ದ್ಯುಮ್ನೇನ ಬೃಹತಾ ವಿಭಾವರಿ ರಾಯಾ ದೇವಿ ದಾಸ್ವತೀ ‖ ೧ ‖



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಸಹ । ವಾಮೇನ । ನಃ । ಉಷಃ । ವಿ । ಉಚ್ಛ । ದುಹಿತಃ । ದಿವಃ ॥
ಸಹ । ದ್ಯುಮ್ನೇನ । ಬೃಹತಾ । ವಿಭಾಽವರಿ । ರಾಯಾ । ದೇವಿ । ದಾಸ್ವತೀ ॥೧॥

ಸಾಯಣಭಾಷ್ಯಂ

ಹೇ ದುಹಿತರ್ದಿವೋ ದ್ಯುದೇವತಾಯಾಃ ಪುತ್ರಿ ಉಷ ಉಷಃಕಾಲದೇವತೇ ನೋಽಸ್ಮದರ್ಥಂ ವಾಮೇನ ಧನೇನ ಸಹ ವ್ಯುಚ್ಛ । ಪ್ರಭಾತಂ ಕುರು । ಹೇ ವಿಭಾವರ್ಯುಷೋದೇವತೇ ಬೃಹತಾ ಪ್ರಭೂತೇನ ದ್ಯುಮ್ನೇನಾನ್ನೇನ ಸಹ ವ್ಯುಚ್ಛ । ಹೇ ದೇವಿ ತ್ವಂ ದಾಸ್ವತೀ ದಾನಯುಕ್ತಾ ಸತೀ ರಾಯಾ ಪಶುಲಕ್ಷಣೇನ ಧನೇನ ಸಹ ವ್ಯುಚ್ಛ ॥ ಉಚ್ಛ । ಉಛೀ ವಿವಾಸೇ । ದುಹಿತರ್ದಿವಃ । ಸುಬಾಮಂತ್ರಿತೇ ಪರಾಂಗವತ್ಸ್ವರ ಇತ್ಯತ್ರ ಪರಮಪಿ ಚ್ಛಂದಸಿ । ಪಾ. ೨-೧-೨-೬ । ಇತಿ ವಚನಾತ್ ದಿವ ಇತ್ಯಸ್ಯ ಪೂರ್ವಾಂಗವದ್ಭಾವೇ ಸತ್ಯಾಮಂತ್ರಿತಸ್ಯ ಚೇತಿ ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ । ಬೃಹತಾ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ವಿಭಾವರಿ । ಭಾ ದೀಪ್ತೌ । ಆತೋ ಮನಿನ್ನಿತ್ಯಾದಿನಾ ವನಿಪ್ । ವನೋ ರ ಚೇತಿ ಙೀಪ್ । ತತ್ಸಂನಿಯೋಗೇನ ನಕಾರಸ್ಯ ರೇಫಾದೇಶಃ । ಸಂಬುದ್ಧೌ ಹ್ರಸ್ವತ್ವಂ । ದಾಸ್ವತೀ । ಡುದಾಞ್ ದಾನೇ । ಭಾವೇಽಸುನ್ಪ್ರತ್ಯಯಃ । ತದಸ್ಯಾಸ್ತಿ । ಪಾ. ೫-೨-೧೪ । ಇತಿ ದಾಸ್ವತೀ । ಮಾದುಪಧಾಯಾ ಇತಿ ಮತುಪೋ ವತ್ವಂ । ಉಗಿತಶ್ಚೇತಿ ಙೀಪ್ ॥

॥ ಪ್ರತಿಪದಾರ್ಥ ॥

ದುಹಿತರ್ದಿವಃ—ದ್ಯುದೇವತೆಯ ಪುತ್ರಿಯಾದ । ಉಷಃ—ಎಲೈ ಉಷೋದೇವತೆಯೇ । ನಃ—ನಮಗಾಗಿ । ವಾಮೇನ ಸಹ—ಧನದೊಂದಿಗೆ । ವ್ಯುಚ್ಛ—ಉದಯಿಸು । ವಿಭಾವರಿ—ಪ್ರಭೆಯನ್ನು ಹರಡುವ ಎಲೈ ಉಷಸ್ಸೇ । ಬೃಹತಾ—ಸಮೃದ್ಧವಾದ । ದ್ಯುಮ್ನೇನ ಸಹ—ಅನ್ನದೊಂದಿಗೆ (ಉದಯಿಸು) । ದೇವಿ—ಎಲೈ ದೇವಿಯೇ । ದಾಸ್ವತೀ—ದಾನಯುಕ್ತಳಾಗಿ । ರಾಯಾ—ಪಶುರೂಪವಾದ ಧನದೊಂದಿಗೆ (ಉದಯಿಸು).

॥ ಭಾವಾರ್ಥ ॥

ಸ್ವರ್ಗದ ಪುತ್ರಿಯಾದ ಎಲೈ ಉಷೋದೇವತೆಯೇ ನಮಗೋಸ್ಕರ ಧನದೊಂದಿಗೆ ಉದಯಿಸು. ಪ್ರಭಾಪ್ರಸಾರಕಳಾದ ಎಲೈ ಉಷಸ್ಸೇ, ಸಮೃದ್ಧವಾದ ಅನ್ನದೊಂದಿಗೆ ಉದಯಿಸು. ಎಲೈ ದೇವಿಯೇ ದಾನಯುಕ್ತಳಾಗಿ ಪಶ್ವಾದಿಧನದೊಂದಿಗೆ ಉದಯಿಸು.

English Translation.

O Ushas, daughter of heaven, dawn upon us with riches ; O brilliant goddess dawn upon us with abundant food ; bountiful goddess, dawn upon us with wealth (of cattle).



CC-0. Jangamwadi Math Collection. Digitized by eGangotri

‖ ವಿಶೇಷ ವಿಷಯಗಳು ‖

ಈ ಸೂಕ್ತಕ್ಕೆ ಉಷಃಕಾಲವು ಅಥವಾ ಉಷಃಕಾಲಾಭಿಮಾನಿಯು ದೇವತೆಯು. ಋಗ್ವೇದದಲ್ಲಿ ಉಷೋದೇವತಾಕವಾದ ಸುಮಾರು ಇಪ್ಪತ್ತು ಸೂಕ್ತಗಳಿವೆ. ಇವುಗಳೆಲ್ಲಾ ಬಹಳ ಉತ್ತಮಶ್ರೇಣಿಗೆ ಸೇರಿದ ಸೂಕ್ತಗಳು ಎಂದರೆ ವರ್ಣನೆಯಲ್ಲಿಯೂ ಪದಗಳ ಜೋಡಣೆಯಲ್ಲಿಯೂ, ವಿಷಯನಿರೂಪಣೆಯಲ್ಲಿಯೂ ಬಹಳ ಮಹತ್ತ್ವಪೂರಿತವಾಗಿವೆ. ಸೂರ್ಯೋದಯಕ್ಕೆ ಮುಂಚೆ ರಾತ್ರೆ ಕಳೆದು ಬೆಳಕು ಹರಿಯುವಾಗ ಉಂಟಾಗುವ ಪ್ರಕಾಶವೇ ಉಷಃಕಾಲವು. ಈ ಉಷಃಕಾಲವು ಆಗಿನ ಕಾಲದ ಋಷಿಗಳಿಗೂ ಜನರಿಗೂ ಬಹಳ ಆನಂದ ವನ್ನುಂಟುಮಾಡಿರಬೇಕು. ಆದುದರಿಂದ ಅವರು ಉಷಃಕಾಲವರ್ಣನೆಯನ್ನು ಬಹಳ ಚೆನ್ನಾಗಿ ಮಾಡಿದಾರೆ. ಸಾಧಾರಣವಾಗಿ ಉಷಃಕಾಲವನ್ನು ಶರೀರಯುಕ್ತಳಾದ ಓರ್ವ ಸ್ತ್ರೀಯಂತೆ ಭಾವಿಸಿ ಆ ದೇವತೆಯ ಗುಣಗಳನ್ನೂ ಅಲಂಕಾರಾದಿಗಳನ್ನು ವಿಧವಿಧವಾಗಿ ಮಾಡಿರುವರು. ಅಂತರಿಕ್ಷದಿಂದ ನಮಗೆ ಬೆಳಕು ಬರುವುದರಿಂದ ಉಷಃ ಕಾಲವನ್ನು ದುಹಿತರ್ದಿವಃ ಎಂದರೆ ಅಂತರಿಕ್ಷದ ಅಥವಾ ಸ್ವರ್ಗದ ಪುತ್ರಿ ಎಂದು ವರ್ಣಿಸಿರುವುದು ಸಹಜ ವಾಗಿಯೇ ಇದೆ. ಈ ದೇವತೆಯು ಪ್ರತಿದಿನವೂ ಉದಯಿಸುತ್ತಿರುವುದರಿಂದ ಯಾವಾಗಲೂ ನವಯೌವನಭರಿತ ಳಾದ ತರುಣಿಯೆಂದೂ, ದಿನಗಳು ಕಳೆದಂತೆಲ್ಲಾ ಮನುಷ್ಯರ ಆಯುಸ್ಸನ್ನು ಕಡಮೆ ಮಾಡುವವಳೆಂದೂ ತಾನು ಉದಯಿಸಿದೊಡನೆಯೇ ಸಕಲ ಪ್ರಾಣಿಗಳಿಗೂ ಸಂತೋಷವನ್ನುಂಟುಮಾಡುವಳೆಂದೂ, ರಾತ್ರೆಯಲ್ಲಿ ಸಂಚಾರ ಮಾಡುವ ರಾಕ್ಷಸಪಿಶಾಚಾದಿನಿಶಾಚರರನ್ನು ತಾನು ಉದಯಿಸಿ ಓಡಿಸುವಳೆಂದೂ, ಪ್ರಾತಃಕಾಲದಲ್ಲಿ ಬೆಳಕನ್ನುಂಟು ಮಾಡಿ ಗೋವುಗಳು ಕೊಟ್ಟಿಗೆಯಿಂದ ಹೊರಗೆ ಬರುವಂತೆ ಮಾಡುವುದರಿಂದ ಗೋವುಗಳ ತಾಯಿಯೆಂದೂ, ಸೂರ್ಯೋದಯಕಾಲದಲ್ಲಿ ಸೂರ್ಯರಶ್ಮಿಗಳು ಸ್ವಲ್ಪ ಕೆಂಪಾಗಿರುವುದರಿಂದ ಈ ದೇವತೆಯು ಕೆಂಪು ಕುದುರೆ ಗಳನ್ನು ಅಥವಾ ಎತ್ತುಗಳನ್ನು ಕಟ್ಟಿದ ರಥದಲ್ಲಿ ಕುಳಿತು ವೇಗವಾಗಿ ಸಂಚರಿಸುವಳೆಂದೂ ವಿಧವಿಧವಾದ ವರ್ಣನೆಗಳಿವೆ.

ಉಷಶ್ಶಬ್ದದ ರೂಪನಿಷ್ಪತ್ತಿಯ ವಿಚಾರದಲ್ಲಿ ಯಾಸ್ಕಮಹರ್ಷಿಗಳ ವಿವರಣೆಯು ಈರೀತಿ ಇರುವುದು—

ಉಷಾಃ ಕಸ್ಮಾದುಚ್ಛತೀತಿ ಸತ್ಯಾ ರಾತ್ರೇರಪರಃ ಕಾಲಃ ‖

ಉಷಾಃ ಎಂಬ ಶಬ್ದವು ಹೇಗುಂಟಾಯಿತು ಎಂದರೆ "ಉಚ್ಛತೀತಿ ಸತ್ಯಾಃ ಉಚ್ಛೀ ವಿವಾಸೇ | ವಿವಾ ಸಯತಿ ಹೀಯಂ ತಮಾಂಸಿ ತಸ್ಮಾದುಚ್ಛತೀತ್ಯೇನಮಸ್ಯಾ ಉಷಾ ಇತ್ಯೇತಭಿಧಾನಂ ಭವತಿ | ಪುನರಿಯ ಮುಷಾ? ರಾತ್ರೇರಪರಃ ಕಾಲಃ ‖ (ನಿ. ೨-೧೯).

ಉಷಾಃ ಎಂಬ ಶಬ್ದವು ಉಚ್ಛೀ ಎಂಬ ಧಾತುವಿನಿಂದ ಉಂಟಾಗಿದೆ. ಈ ಧಾತುವಿಗೆ ಹೊರದೂಡು ವುದು ಎಂದರ್ಥವು. ಏನನ್ನು ಹೊರದೂಡುವುದು ಎಂದರೆ ಕತ್ತಲೆಯನ್ನು. ಕತ್ತಲೆಯನ್ನು ಹೊರದೂಡಿ ಬೆಳ ಕನ್ನುಂಟುಮಾಡುವುದರಿಂದ ಈ ದೇವತೆಗೆ ಉಷಾಃ-ಎಂದು ಹೆಸರು. ಈ ದೇವತೆಯು ಯಾರು ಎಂದರೆ ರಾತ್ರೆಯ ಕೊನೆಯಭಾಗವು, ಎಂದರೆ ರಾತ್ರೆಯು ಕಳೆದು ಸೂರ್ಯೋದಯಕ್ಕೆ ಪೂರ್ವದಲ್ಲಿ ಬೆಳಕು ಹರೆಯುವ ಕಾಲವು. ಇದಕ್ಕೆ ರಾತ್ರೇರಪರಃಕಾಲಃ ಎಂದು ಹೆಸರು. ಯಾಸ್ಕರು ತಮ್ಮ ನಿರುಕ್ತದ ಮತ್ತೊಂದು ಸ್ಥಳದಲ್ಲಿ ಇನ್ನೊಂದು ವಿಧವಾದ ಅರ್ಥವನ್ನು ಹೇಳಿರುವರು—

ಉಷಾಃ ವಷ್ಟೇಃ ಕಾಂತಿಕರ್ಮಣ ಉಚ್ಛತೇರಿತರಾ ಮಾಧ್ಯಮಿಕಾ ‖

(ನಿ. ೧೨-೭)

ಎಂದರೆ ಉಷಶ್ಶಬ್ದವು "ವಶಕಾಂತೌ" ಎಂಬ ಧಾತುವಿನಿಂದ ಉಂಟಾಗಿದೆ. ಪ್ರಕಾಶವನ್ನುಂಟುಮಾಡುವುದ ರಿಂದ ಈ ದೇವತೆಗೆ ಉಷಾಃ ಎಂದು ಹೆಸರು (ಕತ್ತಲೆಯನ್ನು ಹೊರದೂಡುವುದು ಎಂಬ ಅರ್ಥವನ್ನು ಕೊಡುವ ಉಚ್ಛತಿಧಾತುವಿನಿಂದ ಈ ಶಬ್ದನಿಷ್ಪತ್ತಿಯಾಗಿರುವುದನ್ನು ಮಾಧ್ಯಮಿಕವೆಂದು (optional) ಹೇಳಬೇಕು.

ಈ ಉಷೋದೇವತೆಯನ್ನು ಋಷಿಗಳು—ಸೂರ್ಯನು ಹಿಂಬಾಲಿಸುವುದರಿಂದ ಸೂರ್ಯನ ಪ್ರಿಯತಮೆ, ರಾತ್ರಿ ಮುಗಿದು ಬಳಿಕ ಉಷಃಕಾಲವು ಹುಟ್ಟುವುದರಿಂದ ರಾತ್ರಿಯ ಪುತ್ರಿ, ಆದಿತ್ಯ, ಭಗ, ವರುಣ ಇವರುಗಳ ಸಹೋದರಿ, ಸ್ವರ್ಗದ ಪುತ್ರಿ, ಅಶ್ವಿನೀದೇವತೆಗಳ ಸಖಿ ಮುಂತಾದ ವಿಶೇಷಣಗಳಿಂದ ಅನೇಕ ವಿಧವಾಗಿ ವರ್ಣಿಸಿದಾರೆ,

ದುಹಿತರ್ದಿವಃ—ಸ್ವರ್ಗದ ಅಥವಾ ಅಂತರಿಕ್ಷದ ಪುತ್ರಿ. ಬೆಳಕು ಎಂದರೆ ಸೂರ್ಯನ ಬೆಳಕು ನಮಗೆ ಅಂತರಿಕ್ಷ (ಸ್ವರ್ಗ)ದಿಂದ ಲಭಿಸುವುದರಿಂದಲೂ, ಸೂರ್ಯೋದಯಕ್ಕೆ ಪೂರ್ವಭಾವಿಯಾಗಿಯೇ ಉಷಃಕಾಲವು ಉಂಟಾಗುವುದರಿಂದಲೂ ಉಷೋದೇವತೆಯು ದುಹಿತರ್ದಿವಃ ಸ್ವರ್ಗದಪುತ್ರಿ (daughter of heaven) ಎಂದು ಕರೆಯಲ್ಪಡುವಳು.

ದ್ಯುಮ್ನಂ—ದ್ಯುಮ್ನಂ ದ್ಯೋತತೇರ್ಯಶೋ ವಾ ಅನ್ನಂ ವಾ ॥

(ನಿ. ೫-೬)

ದ್ಯುಮ್ನಶಬ್ದಕ್ಕೆ ಅನೇಕಾರ್ಥಗಳಿರುವವು. ಯಶಸ್ಸು ಅಥವಾ ಅನ್ನ. ಈ ಋಕ್ಕಿನಲ್ಲಿ ಭಾಷ್ಯಕಾರರು ಅನ್ನವೆಂಬ ಅರ್ಥವನ್ನು ಸ್ವೀಕರಿಸಿರುವರು. ಮತ್ತು ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಕ ಶಬ್ದಗಳ ಮಧ್ಯದಲ್ಲಿ ದ್ಯುಮ್ನಶಬ್ದವು ಪಠಿತವಾಗಿರುವುದರಿಂದ (ನಿ. ೩-೯) ದ್ಯುಮ್ನವೆಂದರೆ ಧನವೆಂದೂ ಅರ್ಥವಾಗುವುದು.

ವಿಭಾವರೀ—ವಿಭಾವರೀ, ಸೂನರೀ, ಭಾಸ್ವತೀ ಮೊದಲಾದ ಹದಿನಾರು ಉಷೋನಾಮಗಳ ಮಧ್ಯದಲ್ಲಿ ವಿಭಾವರೀ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೧೯) ವಿಭಾವರೀ ಎಂದರೆ ಉಷೋದೇವತೆಯು.

ದಾಸ್ವತೀ—ದಾನಯುಕ್ತಾ । ಡುದಾಞ್ ದಾನೇ । ಕೊಡುವವಳು, ಅನ್ನ, ಧನ ಮೊದಲಾದವುಗಳನ್ನು ಕೊಡುವವಳು ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಉಚ್ಛ—ಉಛೀ ವಿವಾಸೇ ಧಾತು. ಭ್ವಾದಿ. ಇದು ಸಾಮಾನ್ಯವಾಗಿ ವಿ ಎಂಬ ಉಪಸರ್ಗದಿಂದ ಕೂಡಿಯೇ ಇರುವುದು. ವಿವಾಸವೆಂದರೆ ಸಮಾಪ್ತಿ ಎಂದರ್ಥ. ಶಪ್ ವಿಕರಣ ಪ್ರತ್ಯಯ. ಮಧ್ಯಮಪುರುಷೈಕವಚನದ ಸಿಪ್ಪಿಗೆ ಹಿ ಆದೇಶಬಂದರೆ ಅಕಾರದ ಪರದಲ್ಲಿರುವುದರಿಂದ ಬಂದಿರುವ ಹಿಗೆ ಲುಕ್ ಬರುತ್ತದೆ. ಆಗ ಉಚ್ಛ ಎಂದು ರೂಪವಾಗುತ್ತದೆ-

ದುಹಿತರ್ದಿವಃ—ಸುಬಾಮಂತ್ರಿತೇ ಪರಾಂಗವತ್‌ಸ್ವರೆ (ಪಾ. ಸೂ. ೨-೧-೨) ಸ್ವರವನ್ನು ಮಾಡುವಾಗ ಸುಬಂತವಾದ ಒಂದು ಆಮಂತ್ರಿತ ಶಬ್ದವು ಪರದಲ್ಲಿರುವಾಗ ಪರದ ಅವಯವದಂತೆಯೇ ಆಗುವುದು. ಈ ಸೂತ್ರದಲ್ಲಿ ಪರಮಪಿ ಛಂದಸಿ ಪೂರ್ವಾಂಗವಚ್ಚೇತಿವಕ್ತವ್ಯಂ (ಪಾ. ಸೂ. ೨-೧-೨ ವಾರ್ತಿಕ ೧೩) ಎಂಬ ವಾರ್ತಿಕವು ಆರಬ್ಧವಾಗಿದೆ. ಛಂದಸ್ಸಿನಲ್ಲಿ ಪರದಲ್ಲಿರುವುದಕ್ಕೂ ಪೂರ್ವಾಂಗವದ್ಭಾವ ಬರುತ್ತದೆ ಎಂದು ಅದರರ್ಥ. ಇದನ್ನನುಸರಿಸಿ ಇಲ್ಲಿ ದುಹಿತಃ ಎಂಬುದು ಪೂರ್ವದಲ್ಲಿ ಆಮಂತ್ರಿತವಿದೆ. ಸಂಬೋಧನ ಪ್ರಥಮಾ ವಿಭಕ್ತಿಗೆ ಆಮಂತ್ರಿತವೆಂದು ಸಂಜ್ಞೆ. ಇದಕ್ಕೆ ದಿವಃ ಎಂಬ ಶಬ್ದವು ಪರದಲ್ಲಿದ್ದರೂ ಪೂರ್ವಾಂಗವದ್ಭಾವವನ್ನು ಹೊಂದುತ್ತದೆ. ದುಹಿತಃ ಎಂಬುದರ ಅಂಗವಾದುದರಿಂದ ದುಹಿತರ್ದಿವಃ ಎಂಬುದು ಒಂದು ಆಮಂತ್ರಿತವಾದ





CC-0. Jangamwadi Math Collection. Digitized by eGangotri

ಹಾಗಾಗುತ್ತದೆ. ಆಗ ಆಮಂತ್ರಿತಸ್ಯ ಚ (ಪಾ. ಸೂ. ೮-೧-೧೯) ಪದದ ಪರದಲ್ಲಿರುವ ಪಾದದ ಆದಿಯಲ್ಲಿರದ ಆಮಂತ್ರಿತಕ್ಕೆ ಸರ್ವಾನುದಾತ್ತಸ್ವರ ಬರುತ್ತದೆ ಎಂಬುದರಿಂದ ಇಲ್ಲಿ ಆಮಂತ್ರಿತ ಸಮುದಾಯಕ್ಕೆ ಸರ್ವಾನುದಾತ್ತ ಸ್ವರ ಬರುತ್ತದೆ.

ಬೃಹತಾ—ಬೃಹತ್ ಶಬ್ದದ ಮೇಲೆ ತೃತೀಯೈಕವಚನ ಟಾ ವಿಭಕ್ತಿಬಂದರೆ ರೂಪ ಸಿದ್ಧಿಯಾಗುತ್ತದೆ. ವಿಭಕ್ತಿಗೆ ಆದ್ಯುದಾತ್ತವು ಪ್ರಾಪ್ತವಾದರೆ ಬೃಹನ್ಮಹತೋರುಪಸಂಖ್ಯಾನಮ್ (ವಾರ್ತಿಕ) ಎಂಬುದರಿಂದ ಬೃಹಚ್ಛಬ್ದದ ಪರದಲ್ಲಿರುವ ವಿಭಕ್ತಿಯು ಉದಾತ್ತವಾಗುತ್ತದೆ.

ವಿಭಾವರಿ—ಭಾ ದೀಪ್ತೌ ಧಾತು. ಅದಾದಿ. ಆತೋಮನಿನ್ಕ್ವನಿಪ್ ವನಿಪಶ್ಚ (ಪಾ. ಸೂ. ೩-೨-೭೪) ಸುಬಂತವಾದ ಶಬ್ದವಾಗಲೀ ಉಪಸರ್ಗವಾಗ ಉಪಪದವಾಗಿರುವಾಗಲೀ ಅದಂತವಾದ ಧಾತುವಿಗೆ ಛಂದಸ್ಸಿನಲ್ಲಿ ಮನಿನಾದಿ ಪ್ರತ್ಯಯತ್ರಯಗಳು ಬರುತ್ತವೆ ಎಂಬುದರಿಂದ ಇಲ್ಲಿ ವಿ ಎಂಬ ಉಪಸರ್ಗವು ಉಪಪದವಾಗಿರುವುದರಿಂದ (ಸಮೀಪದಲ್ಲಿ ಉಚ್ಚರಿತವಾದ ಪದಕ್ಕೆ ಉಪಪದವೆಂದು ಹೆಸರು) ಭಾ ಧಾತುವಿಗೆ ವನಿಪ್ ಪ್ರತ್ಯಯಬರುತ್ತದೆ. ವಿಭಾವನ್ ಎಂದು ನಾಂತವಾದ ಶಬ್ದವಾಗುತ್ತದೆ. ವನೋರಚ (ಪಾ.ಸೂ.೪-೧-೭) ವನ್ನಂತವಾದುದರ ಮೇಲೂ ವನ್ನಂತವೇ ಅಂತ್ಯದಲ್ಲಿರುವ ಪ್ರಾತಿಪದಿಕದ ಮೇಲೂ ಸ್ತ್ರೀತ್ವವಿವಕ್ಷಾ ಮಾಡಿದಾಗ ಙೀಪ್ ಬರುತ್ತದೆ. ವನ್ ಎಂಬುದು ಇಲ್ಲಿ ಸಾಮಾನ್ಯ ಗ್ರಹಣ, ಅಂದರೆ ಙ್ವನಿಪ್, ಕ್ವನಿಪ್, ವನಿಪ್ ಈ ಮೂರರ ಅನುಬಂಧಗಳನ್ನು ತೆಗೆದರೆ ಉಳಿಯುವುದು ವನ್ನಾದುದರಿಂದ ಮೂರು ಪ್ರತ್ಯಯಗಳನ್ನು ತೆಗೆದುಕೊಳ್ಳಬೇಕು. ಪ್ರತ್ಯಯವನ್ನು ತೆಗೆದುಕೊಳ್ಳುವಾಗ ಅದು ಯಾವುದರಮೇಲೆ ವಿಹಿತವಾಗಿದೆಯೋ ಅದೇ ಆದಿಯಾಗಿ ಪ್ರತ್ಯಯವೇ ಅಂತವಾಗಿರುವ ಶಬ್ದಸ್ವರೂಪವನ್ನು ತೆಗೆದುಕೊಳ್ಳಬೇಕು. ಆದುದರಿಂದ ಇಲ್ಲಿ ಉಪಸರ್ಗವಿಶಿಷ್ಟವಾದುದರ ಮೇಲೆ ವನಿಪ್ ವಿಹಿತವಾದುದರಿಂದ ವಿಭಾವನ್ ಸಂಪೂರ್ಣ ತೆಗೆದುಕೊಳ್ಳಬೇಕು. ಅಂದರೆ ವನಿಬಂತವಾದುದು ಭಾವನೆಯೆಂಬುದು ಆಗುತ್ತದೆ ಇದನ್ನು ಅಧಿಕೃತವಾದ ಪ್ರಾತಿಪದಿಕಕ್ಕೆ ವಿಶೇಷಣಮಾಡುವುದರಿಂದ ವನಿಬಂತವೇ ಅಂತವಾಗಿರುವುದು ಎಂದರ್ಥವಾಗುತ್ತದೆ. ಙೀಪ್ ಬರುವಾಗ ಅದರೊಡನೆ ನಕಾರಕ್ಕೆ ರೇಫವೂ ಆದೇಶವಾಗಿ ಬರುತ್ತದೆ. ಆಗ ವಿಭಾವರೀ ಎಂದು ಙ್ಯಂತ ಶಬ್ದವಾಗುತ್ತದೆ. ಆದುದರಿಂದ ಯೂಸ್ತ್ರ್ಯಾಖ್ಯೌನದೀ (ಪಾ. ಸೂ. ೧-೪-೩) ಎಂಬುದರಿಂದ ನದೀ ಎಂಬ ಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಸಂಬುದ್ಧಿಮಾಡಿದಾಗ ಅಂಬಾರ್ಥನದ್ಯೋರ್ಹ್ರಸ್ವಃ (ಪಾ. ಸೂ. ೭-೩-೧೦೭) ಎಂಬುದರಿಂದ ನದ್ಯಂತಕ್ಕೆ ಹ್ರಸ್ವ ಬರುತ್ತದೆ. ಏಙ್ಹ್ರಸ್ವಾತ್ ಸಂಬುದ್ಧೇಃ (ಪಾ. ಸೂ. ೬-೧-೬೯) ಎಂಬುದರಿಂದ ಹ್ರಸ್ವಾಂತದ ಪರದಲ್ಲಿರುವ ಸಂಬೋಧನೆಯ ಸು ವಿಭಕ್ತಿಗೆ ಲೋಪ ಬರುತ್ತದೆ.

ದಾಸ್ವತೀ—ಡುದಾಞ್ ದಾನೇ ಧಾತು. ಜುಹೋತ್ಯಾದಿ, ಇದಕ್ಕೆ ಸರ್ವಧಾತುಭ್ಯೋಽಸುನ್ (ಉ. ಸೂ. ೬-೨೮) ಎಂಬುದರಿಂದ ಭಾವಾರ್ಥದಲ್ಲಿ ಅಸುನ್ ಪ್ರತ್ಯಯ ಬರುತ್ತದೆ. ಸಾಂತವಾದ ಶಬ್ದವಾಗುತ್ತದೆ. ದಾಃ= ದಾನಂ ಅಸ್ಯಾಸ್ತೀತಿ ದಾಸ್ವತೀ ತದಸ್ಯಾಸ್ತ್ಯಸ್ಮಿನ್ ಇತಿ ಮತುಪ್ ( ಪಾ. ಸೂ. ೫-೨-೯೪) ಎಂಬುದರಿಂದ ಮತುಪ್‌ಪ್ರತ್ಯಯ ಬರುತ್ತದೆ. ದಾಸ್+ಮತುಪ್ ಎಂದಿರುವಾಗ ಮಾದುಪಧಾಯಾಶ್ಚ (ಪಾ. ಸೂ. ೮-೨-೯) ಎಂಬುದರಿಂದ ಇಲ್ಲಿ ಅಕಾರವು ಉಪಧೆಯಾಗಿರುವುದರಿಂದ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ. ದಾಸ್ವತ್ ಶಬ್ದವಾಗುತ್ತದೆ. ಅದಕ್ಕೆ ಸ್ತ್ರೀತ್ವವನ್ನು ವಿವಕ್ಷೆಮಾಡಿದಾಗ ಉಗಿತಶ್ಚ (ಪಾ. ಸೂ. ೪-೩-೬) ಉಗಿದಂತವಾದ ಪ್ರಾತಿಪದಿಕದಮೇಲೆ ಸ್ತ್ರೀತ್ವವಿವಕ್ಷಾಮಾಡಿದಾಗ ಙೀಪ್ ಬರುತ್ತದೆ ಎಂಬುದರಿಂದ ಮತುಪಿನಲ್ಲಿ ಉಕಾರರೂಪ ಉಕ್ ಇತ್ತಾದುದರಿಂದ ತದಂತವಾದ ಪ್ರಾತಿಪದಿಕವಾದುದರಿಂದ ಙೀಪ್ ಬರುತ್ತದೆ. ದಾಸ್ವತೀ ಎಂಬುದು ಙ್ಯಂತವಾದ ಪದವಾಗುತ್ತದೆ. ॥ ೧ ॥



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಶ್ವಾವತೀರ್ಗೋಮತೀರ್ವಿಶ್ವಸುವಿದೋ ಭೂರಿ ಚ್ಯವಂತ ವಸ್ತವೇ ।
ಉದೀರಯ ಪ್ರತಿ ಮಾ ಸೂನೃತಾ ಉಷಶ್ಚೋದ ರಾಧೋ
ಮಘೋನಾಂ ॥ ೨ ॥

ಪದಪಾಠಃ

ಅಶ್ವಽವತೀಃ । ಗೋಽಮತೀಃ । ವಿಶ್ವಽಸುವಿದಃ । ಭೂರಿ । ಚ್ಯವಂತ । ವಸ್ತವೇ ।
ಉತ್ । ಈರಯ । ಪ್ರತಿ । ಮಾ । ಸೂನೃತಾಃ । ಉಷಃ । ಚೋದ । ರಾಧಃ ।
ಮಘೋನಾಂ ॥ ೨ ॥

ಸಾಯಣಭಾಷ್ಯಂ

ಅಶ್ವಾವತೀರ್ಬಹ್ವಶ್ವೋಪೇತಾ ಗೋಮತೀರ್ಬಹುಭಿರ್ಗೋಭಿರ್ಯುಕ್ತಾ ವಿಶ್ವಸುವಿದಃ ಕೃತ್ಸ್ನಸ್ಯ ಧನಸ್ಯ ಸುಷ್ಠು ಲಂಭಯಿತ್ರ್ಯ ಉಷೋದೇವತಾ ವಸ್ತವೇ ಪ್ರಜಾನಾಂ ನಿವಾಸಾಯ ಭೂರಿ ಪ್ರಭೂತಂ ಯಥಾ ಭವತಿ ತಥಾ ಚ್ಯವಂತ । ಪ್ರಾಪ್ತಾಃ । ಹೇ ಉಷೋದೇವತೇ ಮಾ ಪ್ರತಿ ಮಾಮುದ್ದಿಶ್ಯ ಸೂನೃತಾಃ ಪ್ರಿಯಹಿತವಾಚ ಉದೀರಯ । ಬ್ರೂಹಿ । ಮಘೋನಾಂ ಧನವತಾಂ ಸಂಬಂಧಿ ರಾಧೋ ಧನಂ ಚೋದ । ಅಸ್ಮದರ್ಥಂ ಪ್ರೇರಯ ॥ ಅಶ್ವಾವತೀಃ । ಮಂತ್ರೇ ಸೋಮಾಶ್ವೇಂದ್ರಿಯವಿಶ್ವದೇವ್ಯಸ್ಯ ಮತೌ । ಪಾ. ೬-೩-೧೩೧ । ಇತಿ ಪೂರ್ವಪದಸ್ಯ ದೀರ್ಘತ್ವಂ । ವಾ ಛಂದಸೀತಿ ಪೂರ್ವಸವರ್ಣದೀರ್ಘನಿಷೇಧಸ್ಯ ಪಾಕ್ಷಿಕಸ್ಯೋಕ್ತೇಃ ಪೂರ್ವಸವರ್ಣದೀರ್ಘತ್ವಂ । ಚ್ಯವಂತ । ಚ್ಯುಙ್ ಗತೌ । ಲಙ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ವಸ್ತವೇ । ವಸ ನಿವಾಸೇ । ತುಮರ್ಥೇ ಸೇಸೇನಿತಿ ತವೇನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಈರಯ । ಈರ ಗತೌ ಕಂಪನೇ ಚ । ಹೇತುಮತಿ ಣಿಚ್ । ಚೋದ । ಚುದ ಸಂಚೋದನೇ ಚೌರಾದಿಕಃ । ಲೋಟಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾತ್ ಣೇರನಿಟೀತಿ ಣಿಲೋಪಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಪಾದಾದಿತ್ವಾನ್ನಿಘಾತಾಭಾವಃ । ಮಘೋನಾಂ । ಷಷ್ಠೀಬಹುವಚನೇ ಶ್ವಯುವಮಘೋನಾಮತದ್ಧಿತೇ । ಪಾ. ೬-೪-೧೩೩ । ಇತಿ ಸಂಪ್ರಸಾರಣಂ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

**ಅಶ್ವಾವತೀಃ**—(ಬಹಳವಾಗಿ) ಅಶ್ವಗಳಿಂದೊಡಗೂಡಿದವರಾಗಿಯೂ | **ಗೋಮತೀಃ**—(ಬಹುವಾಗಿ) ಗೋವುಗಳುಳ್ಳವರಾಗಿಯೂ | **ವಿಶ್ವಸುವಿದಃ**—ಸಕಲ ವಿಧವಾದ ಧನವನ್ನೂ ಒದಗಿಸಿ ಅನುಗ್ರಹಿಸತಕ್ಕವರಾಗಿಯೂ ಇರುವ ಉಷೋದೇವತೆಗಳು | **ವಸ್ತವೇ**—(ಪ್ರಜೆಗಳ) ವಾಸಸ್ಥಾನಕ್ಕಾಗಿ | **ಭೂರಿ**—ಅತ್ಯಧಿಕವಾಗಿ (ಎಲ್ಲರಿಗೂ ಪರ್ಯಾಪ್ತವಾಗಿ ಆಗುವಂತೆ) | **ಚ್ಯವಂತ**—ಹೊಂದಿದ್ದಾರೆ | **ಉಷಃ**—ಎಲೈ ಉಷೋದೇವತೆಯೇ | **ಮಾ ಪ್ರತಿ**—ನನ್ನನ್ನು ಕುರಿತು (ನನ್ನೊಂದಿಗೆ) **ಸೂನೃತಾಃ**—ಪ್ರಿಯವಾಗಿಯೂ ಹಿತಕರವಾಗಿಯೂ ಇರುವ ಮಾತುಗಳನ್ನು | **ಉದೀರಯ**—ಆಡು | **ಮಘೋನಾಂ**—ಐಶ್ವರ್ಯವಂತರಿಗೆ ಸೇರಿದ | **ರಾಧಃ**—ಧನವನ್ನು | **ಚೋದ**—(ನಮಗೆ) ಕಳುಹಿಸು (ಬರುವಂತೆ ಮಾಡು).

|| ಭಾವಾರ್ಥ ||

ಉಷಃಕಾಲದ ದೇವತೆಗಳು ಅಶ್ವಗಳರೂಪವಾಗಿಯೂ, ಗೋವುಗಳ ರೂಪದಲ್ಲಿಯೂ ಇರತಕ್ಕ ಧನವನ್ನು ಸಮೃದ್ಧವಾಗಿ ಹೊಂದಿದ್ದಾರೆ. ಸಕಲ ಪ್ರಜೆಗಳ ವಾಸಸ್ಥಾನಕ್ಕೂ ಪರ್ಯಾಪ್ತವಾಗಿ ಆಗುವಂತೆ ಮಾಡುವ ಸಂಪತ್ತುಳ್ಳವರಾಗಿದ್ದಾರೆ. ಸಕಲ ವಿಧವಾದ ಧನಗಳನ್ನೂ ಪ್ರಜೆಗಳಿಗೆ ಒದಗಿಸಿ ಅನುಗ್ರಹಿಸತಕ್ಕವರು. ಎಲೈ ಉಷೋದೇವತೆಯೇ ನನ್ನೊಂದಿಗೆ ಪ್ರಿಯವಾಗಿಯೂ ಹಿತಕರವಾಗಿಯೂ ಇರುವ ಮಾತುಗಳನ್ನಾಡು. ಐಶ್ವರ್ಯವಂತರಲ್ಲಿರತಕ್ಕ ಧನವನ್ನು ನಮಗೂ ಸೇರುವಂತೆ ಮಾಡು.

## English Translation.

Ushases, rich in horses, rich in cows, procurers of all wealth have many times dawned and passed away. Ushas, speak to me kind words and send us the affuence of the wealthy.

|| ವಿಶೇಷ ವಿಷಯುಗಳು ||

ಈ ಋಕ್ಕಿನ ಪೂರ್ವಾರ್ಧದಲ್ಲಿ ಅಶ್ವಾವತೀಃ ಗೋಮತೀಃ ವಿಶ್ವಸುವಿದಃ ಎಂಬ ಬಹುವಚನಾಂತ ಶಬ್ದಗಳನ್ನು ಉಷೋದೇವತೆಗೆ ವಿಶೇಷಣವನ್ನಾಗಿ ಉಪಯೋಗಿಸಲಾಗಿದೆ. ಪ್ರತಿದಿನವೂ ಉಷಃಕಾಲವು ಪ್ರಾಪ್ತವಾಗುವುದರಿಂದ ಋಷಿಯು ಉಷೋದೇವತೆಯನ್ನು ಅನೇಕ ದೇವತೆಗಳೆಂದು ಭಾವಿಸಿ ಸ್ತೋತ್ರಮಾಡಿರುವನು. ಋಕ್ಕಿನ ಉತ್ತರಾರ್ಧದಲ್ಲಿ ಉಷೋದೇವತೆಯನ್ನು ಏಕವಚನದಲ್ಲಿ ಸಂಬೋಧನೆಮಾಡಲಾಗಿದೆ.

**ಅಶ್ವಾವತೀಃ, ಗೋಮತೀಃ, ವಿಶ್ವಸುವಿದಃ**—ಅಶ್ವಮೊದಲಾದವುಗಳನ್ನು ಹೊಂದಿರುವ ಎಂದರೆ ಅಶ್ವಗಳು, ಗೋವುಗಳು, ಧನ ಇವುಗಳನ್ನು ಕೊಡುವ ಎಂದಭಿಪ್ರಾಯವು. ಸ್ತೋತ್ರಮಾಡುವವರಿಗೆ ಅಶ್ವಾದಿಗಳನ್ನು ಕೊಟ್ಟು ಅವರ ವಿಷಯದಲ್ಲಿ ಹಿತವಚನಗಳನ್ನು ಆಡಬೇಕೆಂದೂ, ಐಶ್ವರ್ಯವಂತರಲ್ಲಿ ಇರುವಂತೆ ತನಗೂ ಧನವನ್ನು ಕೊಡಬೇಕೆಂದೂ ಮುಖ್ಯಾಭಿಪ್ರಾಯವು.



CC-0. Jangamwadi Math Collection. Digitized by eGangotri

ಚ್ಯವಂತೆ—ಚ್ಯುಙ್ ಗತೌ | ಹೊಂದಿಸಿರಿ, ಸೇರಿಸಿರಿ.

ವಸ್ತವೇ—ವಸ ನಿವಾಸೇ | ನಿವಾಸಸ್ಥಾನಕ್ಕಾಗಿ ಎಂದರೆ ಗೃಹ ಮೊದಲಾದ ನಿವಾಸಸ್ಥಾನಗಳನ್ನು ನಮಗೆ ಲಭಿಸುವಂತೆ ಮಾಡಿರಿ ಎಂದಭಿಪ್ರಾಯವು.

ಚೋದ—ಪ್ರೇರಯ | ಪ್ರೇರಿಸು, ಅನುಗ್ರಹಿಸು.

ಮಘೋನಾಂ--ಮಘವೆಂದರೆ ಧನವು. ಧನವಂತರಲ್ಲಿ ಸಹಜವಾಗಿರಬೇಕಾದ ಧನವನ್ನು ನಮಗೂ ಅನುಗ್ರಹಿಸಿ ನಮ್ಮನ್ನೂ ಧನವಂತರನ್ನಾಗಿ ಮಾಡಬೇಕೆಂದು ಋಷಿಯ ಆಶಯವು.

॥ ವ್ಯಾಕರಣಪ್ರಕ್ರಿಯಾ ॥

ಅಶ್ವಾವತೀಃ—ಅಶ್ವಾಃ ಆಸಾಂ ಸಂತಿ ಎಂಬರ್ಥದಲ್ಲಿ ಮತುಪ್ ಪ್ರತ್ಯಯ ಬಂದಿದೆ. ಅಕಾರದ ಪರದಲ್ಲಿ ಮತುಪ್ ಬಂದುದರಿಂದ ಮಾದುಪಧಾಯಾಶ್ಚ—ಸೂತ್ರದಿಂದ ಮಕಾರಕ್ಕೆ ವಕಾರಬರುತ್ತದೆ. ಸ್ತ್ರೀತ್ವವಿವಕ್ಷಾಮಾಡಿದಾಗ ಉಗಿತಶ್ಚ--ಸೂತ್ರದಿಂದ ಙೀಪ್ ಬರುತ್ತದೆ. ಅಶ್ವವತೀ ಎಂದಿರುವಾಗ, ಮಂತ್ರೇ ಸೋಮಾಶ್ವೇಂದ್ರಿಯ ವಿಶ್ವದೇವ್ಯಸ್ಯ ಮತೌ (ಪಾ. ಸೂ. ೬-೩-೧೩೧) ಸೋಮ, ಅಶ್ವ, ಇಂದ್ರಿಯ, ವಿಶ್ವದೇವ್ಯ. ಈ ನಾಲ್ಕುಶಬ್ದಗಳಿಗೆ ಮಂತ್ರದಲ್ಲಿ ಮತುಪ್ ಪರದಲ್ಲಿರುವಾಗ ದೀರ್ಘ ಬರುತ್ತದೆ. ಅಶ್ವಾವತೀ ಎಂದಾಗುತ್ತದೆ. ಪ್ರಥಮಾಬಹುವಚನ ಜಸ್ ಪರದಲ್ಲಿರುವಾಗ ಪ್ರಥಮಯೋಃ ಪೂರ್ವಸವರ್ಣಃ (ಪಾ. ಸೂ. ೬-೧-೧೦೨) ಎಂಬುದರಿಂದ ಪೂರ್ವಸವರ್ಣದೀರ್ಘವು ಪ್ರಾಪ್ತವಾದರೆ ದೀರ್ಘಾಜ್ಜಸಿಚ (ಪಾ. ಸೂ. ೬-೧-೧೦೫) ದೀರ್ಘದ ಪರದಲ್ಲಿ ಜಸ್ ಪರದಲ್ಲಿರುವಾಗಲೂ ಇಚ್ ಪರದಲ್ಲಿರುವಾಗಲೂ ಪೂರ್ವಸವರ್ಣದೀರ್ಘ ಬರುವುದಿಲ್ಲ ಎಂದು ನಿಷೇಧ ಬರುತ್ತದೆ. ಅಶ್ವಾವತ್ಯಃ ಎಂದಾಗಬೇಕಾಗುತ್ತದೆ. ಆದರೆ ವಾ ಛಂದಸಿ (ಪಾ. ಸೂ. ೬-೧-೧೦೬) ದೀರ್ಘದ ಪರದಲ್ಲಿ ಜಸ್ ಮತ್ತು ಇಚ್ ಪರದಲ್ಲಿರುವಾಗ ಪೂರ್ವಸವರ್ಣದೀರ್ಘವು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ಪೂರ್ವಸವರ್ಣ ದೀರ್ಘ ಬಂದು ಅಶ್ವಾವತೀಃ ಎಂದಾಗುತ್ತದೆ.

ಚ್ಯವಂತೆ—ಚ್ಯುಙ ಗತೌ ಧಾತು. ಭ್ವಾದಿ. ಲಙ್ ಪ್ರಥಮಪುರುಷಬಹುವಚನರೂಪ. ಬಹುವಚನದ ಝ ಎಂಬುದಕ್ಕೆ ಅಂತಾದೇಶ ಬರುತ್ತದೆ. ಶಪ್ ವಿಕರಣ. ಲಙ್ ಪರದಲ್ಲಿರುವಾಗ ಧಾತುವಿಗೆ ಅಡಾಗಮ ಪ್ರಾಪ್ತವಾದರೆ ಬಹುಲಂ ಛಂದಸ್ಯಾಮಾಙ್ ಯೋಗೇಪಿ (ಪಾ. ಸೂ. ೬-೪-೭೫) ಮಾಙ್ ಸಂಯೋಗವಿಲ್ಲದಿದ್ದರೂ ಛಂದಸ್ಸಿನಲ್ಲಿ ಅಟ್ ಆಟಗಳು ಬರುವುದಿಲ್ಲವೆಂಬುದರಿಂದ ಇಲ್ಲಿ ಅಡಾಗಮ ಬರುವುದಿಲ್ಲ. ಶಪ್ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ಅವಾದೇಶಪರರೂಪಗಳು ಬಂದರೆ ರೂಪಸಿದ್ಧಿಯಾಗುತ್ತದೆ.

ವಸ್ತವೇ—ವಸ ನಿವಾಸೇ ಧಾತು. ಭ್ವಾದಿ. ಕ್ರಿಯಾರ್ಥ ತೋರುವಾಗ ತುಮುನ್ ಪ್ರತ್ಯಯ ಪ್ರಾಪ್ತವಾದರೆ ತುಮರ್ಥೇ ಸೇಸೇನ್ (ಪಾ. ಸೂ- ೩-೪-೯) ಎಂಬುದರಿಂದ ತುಮುನರ್ಥದಲ್ಲಿ ತವೇನ್ ಪ್ರತ್ಯಯ ಬರುತ್ತದೆ. ತವೇನ್ ಎಂಬಲ್ಲಿ ನಕಾರ ಇತ್ತಾಗುತ್ತದೆ. ಆದುದರಿಂದ ಞ್ನಿತ್ಯಾದಿರ್ನಿತ್ಯಂ (ಪಾ. ಸೂ. ೬-೧-೧೯೭) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

ಈರಯೆ—ಈರ ಗತೌ ಕಂಪನೇ ಚ ಧಾತು- ಅದಾದಿ. ಹೇತುಮತಿಚ (ಪಾ. ಸೂ. ೩-೧-೨೬) ಪ್ರಯೋಜಕನ ಪ್ರೇಷಣಾದಿವ್ಯಾಪಾರವು ತೋರುತ್ತಿರುವಾಗ ಧಾತುವಿಗೆ ಣಿಚ್ ಬರುತ್ತದೆ ಎಂಬುದರಿಂದ ಇಲ್ಲಿ



CC-0. Jangamwadi Math Collection. Digitized by eGangotri

ಪೋಷಣವು ತೋರುವುದರಿಂದ ಣಿಚ್ ಬಂದಿದೆ. ಸನಾದಿಯಲ್ಲಿ ಣಿಚ್ ಸೇರಿರುವುದರಿಂದ ಣಿಜಂತಕ್ಕೆ ಧಾತು ಸಂಜ್ಞೆ ಬರುತ್ತದೆ. ಲೋಟ್‌ಮಧ್ಯಮಪುರುಷೈಕವಚನ ಸಿಪ್ ಪರದಲ್ಲಿರುವಾಗ ಶಪ್ ವಿಕರಣ ಬರುತ್ತದೆ. ಸಿಪ್ಪಿಗೆ ಹಿ ಆದೇಶ ಬಂದರೆ ಅಕಾರದ ಪರದಲ್ಲಿರುವುದರಿಂದ ಲುಕ್ ಬರುತ್ತದೆ. ಈರಿ+ ಅ ಎಂದಿರುವಾಗ ಗುಣ ಅಯಾದೇಶ ಗಳು ಬರುತ್ತವೆ.

**ಚೋದ**— ಚುದ ಸಂಚೋದನೆ ಧಾತು. ಚುರಾದಿ. ಚುರಾದಿಗಳಿಗೆ ಸತ್ಯಾಪಪಾಶ (ಪಾ. ಸೂ.೩-೧-೨೫) ಎಂಬುದರಿಂದ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ಣಿಚ್‌ಪರದಲ್ಲಿರುವಾಗ ಧಾತುವಿನ ಲಘೂಪದಕ್ಕೆ ಗುಣ ಬರುತ್ತದೆ. ಲೋಟ್‌ಮಧ್ಯಮಪುರುಷ ಸಿಪ್‌ಸ್ಥಾನಿತ ಹಿ ಪರದಲ್ಲಿರುವಾಗ ಣಿಜಂತಧಾತುವಿಗೆ ಶಪ್ ವಿಕರಣ ಬರುತ್ತದೆ ಚೋದಿ+ಅ+ಹಿ ಎಂದಿರುವಾಗ ಅಕಾರದ ಪರದಲ್ಲಿರುವ ಹಿಗೆ ಲುಕ್ ಬರುತ್ತದೆ. ಛಂದಸ್ಯುಭಯಥಾ (ಪಾ. ಸೂ. ೩-೪-೧೧೭) ಧಾತ್ವಧಿಕಾರದಲ್ಲಿ ವಿಹಿತಗಳಾದ ಪ್ರತ್ಯಯಗಳು ಸಾರ್ವಧಾತುಕ ಆರ್ಧಧಾತುಕಸಂಜ್ಞೆಗಳನ್ನು ಹೊಂದುತ್ತವೆ ಎಂಬುದರಿಂದ ಇಲ್ಲಿ ಶಪ್ ಪ್ರತ್ಯಯವು ಆರ್ಧಧಾತುಕಸಂಜ್ಞೆಯನ್ನು ಹೊಂದುತ್ತದೆ. ಆಗ ಣೇರನಿಟಿ (ಪಾ. ಸೂ. ೬-೪-೫೧) ಅನಿಡಾದಿಯಾದ್ಯಆರ್ಧಧಾತುಕ ಪರದಲ್ಲಿರುವಾಗ ಣಿಗೆ ಲೋಪ ಬರುತ್ತದೆ ಎಂಬುದರಿಂದ ಶಪ್ ಪರದಲ್ಲಿರುವಾಗ ಣಿಗೆ ಲೋಪ ಬರುತ್ತದೆ. ಶಪಿನ ಅಕಾರ ಸೇರಿಸಿದಾಗ ಚೋದ ಎಂದು ರೂಪಸಿದ್ಧಿಯಾಗುತ್ತದೆ. ಶಪ್ ಪಿತ್ತಾದ್ದರಿಂದ ಅನುದಾತ್ತಂ ಸುಪ್ಪಿತೌ (ಪಾ. ಸೂ. ೩-೧-೪) ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರವೇ (ಅಂತೋದಾತ್ತ) ಉಳಿಯುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತವು ಪ್ರಾಪ್ತವಾದರೆ ಆಪಾದಾದೌ ಎಂದು ನಿಷೇಧಿಸಿರುವುದರಿಂದ ಇಲ್ಲಿ ಪಾದದ ಆದಿಯಲ್ಲಿರುವುದರಿಂದ ಸರ್ವಾನುದಾತ್ತವು ಬರುವುದಿಲ್ಲ.

**ಮಘೋನಾಮ್**—ಶ್ವನ್ನುಕ್ಷನ್ (ಉ. ಸೂ. ೧-೧೫೭) ಎಂಬುದರಿಂದ ನಿಪಾತಿತವಾಗಿದೆ. ಮಹ ಶಬ್ದದ ಮೇಲೆ ಕನಿಪ್ರತ್ಯಯವೂ ಪ್ರಕೃತಿಗೆ ಅವುಗಾಗಮವೂ ಹಕಾರಕ್ಕೆ ಘಕಾರವೂ ಶಾಸ್ತ್ರಾಂತರದಿಂದ ಬಾರದಿರುವುದರಿಂದ ನಿಪಾತಿತಗಳಾಗಿವೆ. ಇದರಮೇಲೆ ಷಷ್ಠೀಬಹುವಚನ ವಿವಕ್ಷಾಮಾಡಿದಾಗ ಮಘವನ್+ಆಮ್ ಎಂದಿರುವಾಗ, ಶ್ವಯುವಮಘೋನಾಮತದ್ಧಿತೆ (ಪಾ. ಸೂ. ೬-೪-೧೩೩) ಶ್ವನ್), ಯುವನ್, ಮಘವನ್ ಎಂಬ ಅನ್ನಂತವಾದ, ಭಸಂಜ್ಞೆಯುಳ್ಳ ಅಂಗಕ್ಕೆ ತದ್ಧಿತಭಿನ್ನಪ್ರತ್ಯಯ ಪರದಲ್ಲಿರುವಾಗ ಸಂಪ್ರಸಾರಣಬರುತ್ತದೆ ಎಂಬುದರಿಂದ ಇಲ್ಲಿ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ ಯಚಿಭಂ ಎಂಬುದರಿಂದ ಭಸಂಜ್ಞೆ ಇರುವುದರಿಂದ ಸಂಪ್ರಸಾರಣ ಬರುತ್ತದೆ. ಇಗ್ಯಣಃ ಸಂಪ್ರಸಾರಣಂ ಎಂಬುದರಿಂದ ಯಣಿನ ಸ್ಥಾನಕ್ಕೆ ಬರುವ ಇಕ್ಕಿಗೆ ಸಂಪ್ರಸಾರಣವೆಂದು ಸಂಜ್ಞೆ. ಮಘವನ್ ಎಂಬಲ್ಲಿ ವಕಾರ ಯಣ್ಣಾದುದರಿಂದ ಇದಕ್ಕೆ ಆಂತರತಮ್ಯದಿಂದ ಉಕಾರ ರೂಪ ಸಂಪ್ರಸಾರಣವು ಬರುತ್ತದೆ. ಮಘ+ಉ+ಅನ್+ಆಮ್ ಎಂದಿರುವಾಗ ಸಂಪ್ರಸಾರಣಾಚ್ಚ (ಪಾ. ಸೂ. ೬-೧-೧೦೮) ಎಂಬುದರಿಂದ ಸಂಪ್ರಸಾರಣದ ಪರದಲ್ಲಿರುವ ಅಚಿಗೆ ಪೂರ್ವರೂಪವು ಬರುತ್ತದೆ. ಮಘ+ ಉನ್+ಆಮ್ ಎಂದಿರುವಾಗ ಗುಣಸಂಧಿಬಂದರೆ ಉಕ್ತರೂಪಸಿದ್ಧಿಯಾಗುತ್ತದೆ ॥ ೨ ॥

॥ ಸಂಹಿತಾಪಾಠಃ ॥

ಉವಾಸೋಷಾ ಉಚ್ಛಾಚ್ಚ ನು ದೇವೀ ಜೀರಾ ರಥಾನಾಂ ।
ಯೇ ಅಸ್ಯಾ ಆಚರಣೇಷು ದಧ್ರಿರೇ ಸಮುದ್ರೇ ನ ಶ್ರವಸ್ಯವಃ ॥೩॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಉವಾಸ । ಉಷಾಃ । ಉಚ್ಛಾತ್ । ಚ । ನು । ದೇವೀ । ಜೀರಾ । ರಥಾನಾಂ ।
ಯೇ । ಅಸ್ಯಾಃ । ಆಽಚರಣೇಷು । ದಧ್ರಿರೇ । ಸಮುದ್ರೇ । ನ । ಶ್ರವಸ್ಯವಃ ೩॥

ಸಾಯಣಭಾಷ್ಯಂ

ಉಷಾ ದೇವ್ಯುವಾಸ । ಪುರಾ ನಿವಾಸಮಕರೋತ್ । ಪ್ರಭಾತಂ ಕೃತವತೀತ್ಯರ್ಥಃ । ಚ ನು ಅದ್ಯಾಪ್ಯುಚ್ಛಾತ್ । ವ್ಯುಚ್ಛತಿ । ಪ್ರಭಾತಂ ಕರೋತಿ । ಕೀದೃಶೀ ದೇವೀ । ರಥಾನಾಂ ಜೀರಾ ಪ್ರೇರಯಿತ್ರೀ । ಉಷಃಕಾಲೇ ಹಿ ರಥಾಃ ಪ್ರೇರ್ಯಂತೇ । ಅಸ್ಯಾ ಉಷಸ ಆಚರಣೇಷ್ವಾಗಮನೇಷು ಯೇ ರಥಾಃ ದಧ್ರಿರೇ ಧೃತಾಃ ಸಜ್ಜೀಕೃತಾ ಭವಂತಿ । ತೇಷಾಂ ರಥಾನಾಮಿತಿ ಪೂರ್ವತ್ರಾನ್ವಯಃ । ರಥಪ್ರೇರಣೇ ದೃಷ್ಟಾಂತಃ । ಶ್ರವಸ್ಯವೋ ಧನಕಾಮಾಃ ಸಮುದ್ರೇ ನ । ಯಥಾ ಸಮುದ್ರಮಧ್ಯೇ ನಾವಃ ಸಜ್ಜೀಕೃತ್ಯ ಪ್ರೇರಯಂತಿ ತದ್ವತ್ ॥ ಉವಾಸ । ವಸ ನಿವಾಸೇ । ಣಲಿ ಲಿಟ್ಯಭ್ಯಾಸಸ್ಯೋಭಯೇಷಾಂ । ಪಾ. ೬-೧-೧೭। ಇತ್ಯಭ್ಯಾಸಸ್ಯ ಸಂಪ್ರಸಾರಣಂ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಉಚ್ಛಾತ್ । ಲೇಟ್ಯಾಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ತುದಾದಿತ್ವಾಚ್ಛಪ್ರತ್ಯಯಃ । ಆಗಮಾನುದಾತ್ತತ್ವೇ ಪ್ರತ್ಯಯಸ್ವರಃ । ಉಷಾ ಇತ್ಯಸ್ಯ ವಾಕ್ಯಾಂತರಗತತ್ವಾತ್ತದಪೇಕ್ಷಯಾಸ್ಯ ನಿಘಾತೋ ನ ಭವತಿ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾಃ । ಪಾ. ೮-೧-೧೮-೫ । ಇತಿ ವಚನಾತ್ । ಜೀರಾ । ಜು ಇತಿ ಗತ್ಯರ್ಥಃ ಸೌತ್ರೋ ಧಾತುಃ । ಜೋರೀ ಚ । ಉ. ೨-೨೩ । ಇತಿ ರಕ್ಪ್ರತ್ಯಯಃ । ಅಸ್ಯಾಃ । ಇದಮೋಽನ್ವಾದೇಶ ಇತ್ಯಶಾದೇಶೋಽನುದಾತ್ತಃ । ವಿಭಕ್ತಿರಪಿ ಸುಪ್ತ್ವಾದನುದಾತ್ತೇತಿ ಸರ್ವಾನುದಾತ್ತತ್ವಂ । ಆಚರಣೇಷು । ಚರ ಗತ್ಯರ್ಥಃ । ಲ್ಯುಟ್ಚ । ಪಾ. ೩-೩-೧೧೫ । ಇತಿ ಭಾವೇ ಲ್ಯುಟ್ । ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ । ದಧ್ರಿರೇ । ಧೃಙ್ ಅವಸ್ಥಾನೇ । ಲಿಟಃ ಕಿತ್ತ್ವಾದ್ಗುಣಾಭಾವೇ ಯಣಾದೇಶಃ । ಚಿತ್ತ್ವಾದಂತೋದಾತ್ತತ್ವಂ । ಯಚ್ಛಬ್ದಯೋಗಾದನಿಘಾತಃ । ಶ್ರವಸ್ಯವಃ । ಶ್ರೂಯತ ಇತಿ ಶ್ರವೋ ಧನಂ । ಅಸುನ್ । ತದಾತ್ಮನ ಇಚ್ಛಂತೀತಿ ಶ್ರವಸ್ಯವಃ । ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ ॥

॥ ಪ್ರತಿಪದಾರ್ಥ ॥

ಶ್ರವಸ್ಯವಃ—ಧನವನ್ನಪೇಕ್ಷಿಸುವವರು । ಸಮುದ್ರೇ ನ—ಸಮುದ್ರ (ಮಧ್ಯ)ದಲ್ಲಿ ದೋಣಿಗಳನ್ನು ಕಟ್ಟಿಕೊಂಡು ನಡಿಸುವಂತೆ । ಅಸ್ಯಾಃ—ಈ ಉಷಸ್ಸಿನ । ಆಚರಣೇಷು—ಆಗಮನಕಾಲಗಳಲ್ಲಿ । ಯೇ—ಯಾವ ರಥಗಳು । ದಧ್ರಿರೇ—ಕುದುರೆಗಳನ್ನು ಕಟ್ಟಿ ಪ್ರಯಾಣಕ್ಕೆ ಸಿದ್ಧ ಮಾಡಲ್ಪಡುವುವೋ । ರಥಾನಾಂ—(ಆ) ರಥಗಳ । ಜೀರಾ—ಪ್ರೇರಕಳಾದ । ಉಷಾಃ ದೇವೀ—ದಿವ್ಯ ಸ್ವರೂಪವುಳ್ಳ, ಉಷೋ ದೇವತೆಯು । ಉವಾಸ—ವಾಸಸ್ಥಾನವನ್ನು ಮಾಡಿಕೊಂಡಳು. (ಪೂರ್ವದಲ್ಲೂ ಉದಯಿಸಿ ಪ್ರಭಾತವನ್ನುಂಟು ಮಾಡಿದಳು) । ಚ ನು—ಈಗಲೂ ಕೂಡ । ಉಚ್ಛಾತ್—ಉದಯಿಸಿ ಪ್ರಭಾತವನ್ನುಂಟುಮಾಡುತ್ತಾಳೆ.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಧನಾಪೇಕ್ಷಿಗಳು ಸಮುದ್ರ ಮಧ್ಯದಲ್ಲಿ ನೌಕೆಗಳನ್ನು ಕಟ್ಟಿಕೊಂಡು ಯಾವರೀತಿ ಅವನ್ನು ನಡಿಸುವರೋ ಅದರಂತೆ ತನ್ನ ಆಗಮನಕಾಲಗಳಲ್ಲಿ ಪ್ರಯಾಣಕ್ಕೆ ಸಿದ್ಧಮಾಡಲ್ಪಟ್ಟ ರಥಗಳನ್ನು ದಿವ್ಯಸ್ವರೂಪಳಾದ ಉಷೋದೇವತೆಯು ನಡೆಸುವಳು. ಆ ರಥಗಳ ಪ್ರೇರಕಳಾದ ಉಷೋದೇವತೆಯು ಹಿಂದೆ (ಅನೇಕಾವರ್ತಿ) ಉದಯಿಸಿ ಪ್ರಭಾತವನ್ನುಂಟುಮಾಡಿದ್ದಾಳೆ. ಈಗಲೂ ಕೂಡ ಉದಯಿಸಿ ಪ್ರಭಾತವನ್ನುಂಟುಮಾಡುತ್ತಾಳೆ.

## English Translation.

The divine Ushas dwelt (many times); may she dawn to-day, the propeller of chariots which are harnessed (with horses) at her coming, as those who are desirous of wealth send ships to sea.

॥ ವಿಶೇಷ ವಿಷಯಗಳು ॥

**ಉವಾಸೋಷಾಃ**—ಉಷೋದೇವತೆಯು (ಹಿಂದೆ) ವಾಸಮಾಡಿದಳು ಎಂದರೆ ಹಿಂದೆ ಅನೇಕಾವರ್ತಿ ಉದಯಿಸಿರುವಳು. ಈಗಲೂ ಮುಂದೆಯೂ ಉದಯಿಸುವಳು ಎಂದಭಿಪ್ರಾಯವು.

**ಶ್ರವಸ್ಯವಃ**—ಶ್ರೂಯತ ಇತಿ ಶ್ರವೋ ಧನಂ ! ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನನಾಮಗಳ ಮಧ್ಯದಲ್ಲಿ ಶ್ರವಃ ಎಂಬ ಶಬ್ದವು ಪಠಿತವಾಗಿರುವುದರಿಂದ ಶ್ರವಃ ಎಂದರೆ ಧನವು. ತದಾತ್ಮನ ಇಚ್ಛಂತೀತಿ ಶ್ರವಸ್ಯವಃ ಧನವನ್ನು ಅಪೇಕ್ಷಿಸುವವರಿಗೆ ಶ್ರವಸ್ಯವಃ ಎಂದು ಹೆಸರು.

॥ ವ್ಯಾಕರಣಪ್ರಕ್ರಿಯಾ ॥

**ಉವಾಸ**—ವಸ ನಿವಾಸೇ ಧಾತು. ಭ್ವಾದಿ ಲಿಟ್ ಪ್ರಥಮಪುರುಷೈಕವಚನರೂಪ. ಲಿಟಿನ ತಿಪ್ಪಿಗೆ **ಪರಸ್ಮೈಪದಾನಾಂ**—(ಪಾ. ಸೂ. ೩-೪-೮೨) ಎಂಬುದರಿಂದ ಣಲ್ ಎಂಬ ಆದೇಶ ಬರುತ್ತದೆ. ಲಿಟ್ ಪರದಲ್ಲಿರುವಾಗ **ಲಿಟಿಧಾತೋಃ** (ಪಾ. ಸೂ. ೬-೧-೮) ಎಂಬುದರಿಂದ ಧಾತುವಿಗೆ ದ್ವಿತ್ವಬರುತ್ತದೆ. ವಸ್ ವಸ್+ಅ ಎಂದಿರುವಾಗ **ಹಲಾದಿಃಶೇಷಃ** (ಪಾ. ಸೂ. ೭-೪-೬೦) ಎಂಬುದರಿಂದ ಅಭ್ಯಾಸಸಂಜ್ಞೆಯುಳ್ಳ ಪೂರ್ವಖಂಡದ ಆದಿಯ ಹಲ್ ಮಾತ್ರ ಉಳಿಯುತ್ತದೆ. **ಲಿಟ್ಯಭ್ಯಾಸಸ್ಯೋಭಯೇಷಾಂ** (ಪಾ. ಸೂ. ೬-೧-೧೭) ಲಿಟ್ ಪರದಲ್ಲಿರುವಾಗ ವಚ್ಯಾದಿಗಳ ಮತ್ತು ಗ್ರಹ್ಯಾದಿಗಳ ಅಭ್ಯಾಸಕ್ಕೆ ಸಂಪ್ರಸಾರಣವು ಬರುತ್ತದೆ. ವಚ್ಯಾದಿಯಲ್ಲಿರುವ ಯಜಾದಿಗಳಲ್ಲಿ ವಸಧಾತುವು ಸೇರಿದೆ. ಆದುದರಿಂದ ಇದರ ಅಭ್ಯಾಸಕ್ಕೆ ಸಂಪ್ರಸಾರಣ ಬರುತ್ತದೆ. ಸಂಪ್ರಸಾರಣದ ಪರದ ಅಚಿಗೆ ಪೂರ್ವರೂಪವು ಬರುತ್ತದೆ. ಉವಸ್+ಅ ಎಂದಿರುವಾಗ ಣಲಿನಲ್ಲಿ ಣಕಾರವು ಇತ್ತಾದುದರಿಂದ ಅತ **ಉಪಧಾಯಾಃ** (ಪಾ. ಸೂ. ೭-೨-೧೧೬) ಎಂಬುದರಿಂದ ಉಪಧಾವೃದ್ಧಿ ಬರುತ್ತದೆ. ಉವಾಸ ಎಂದು ರೂಪಸಿದ್ಧವಾಗುತ್ತದೆ. ಣಲ್ ಪ್ರತ್ಯಯವು ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಲಿತ್ತಾದ ಪ್ರತ್ಯಯದ ಪೂರ್ವದಲ್ಲಿರುವುದು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ವಕಾರೋತ್ತರಾಕಾರವು ಉದಾತ್ತವಾಗುತ್ತದೆ. **ಅನುದಾತ್ತಂ ಪದಮೇಕವರ್ಜಂ** ಎಂಬುದರಿಂದ ಉಳಿದಿದ್ದು ಅನುದಾತ್ತವಾಗುತ್ತದೆ. ಸಕಾರೋತ್ತರಾಕಾರವು ಉದಾತ್ತದ ಪರದಲ್ಲಿರುವುದರಿಂದ ಸ್ವರಿತವಾಗುತ್ತದೆ.



CC-0. Jangamwadi Math Collection. Digitized by eGangotri

ಉಚ್ಛಾತ್—ಉಛೀ ವಿವಾಸೇ ಧಾತು ತುದಾದಿ. ಭ್ವಾದಿಪಠಿತವಾದುದು ಸಾಮಾನ್ಯವಾಗಿ ವಿಪೂರ್ವ ವಾಗಿಯೇ ಇರುತ್ತದೆ. ತುದಾದಿಯಾದುದರಿಂದ ತುದಾದಿಭ್ಯಃ ಶಃ (ಪಾ.ಸೂ. ೩-೧-೭೭) ಎಂಬುದರಿಂದ ಶ ಎಂಬ ವಿಕರಣ ಬರುತ್ತದೆ. ಲೇಟ್ ಪ್ರಥಮಪುರುಷೈಕವಚನ ತಿಪ್ ಪ್ರತ್ಯಯ ಮಾಡಿದಾಗ ತಿ ಎಂಬುದರ ಇಕಾರಕ್ಕೆ ಇತಶ್ಚ ಲೋಪಃ ಪರಸ್ಮೈಪದೇಷು (೩-೪-೯೭) ಲೇಟಿನ ತಿಙ ಪ್ರತ್ಯಯಗಳ ಇಕಾರಕ್ಕೆ ಪರಸ್ಮೈಪದವಿಷಯದಲ್ಲಿ ಲೋಪ ಬರುತ್ತದೆ ಎಂಬುದರಿಂದ ಲೋಪಬರುತ್ತದೆ. ಲೇಟೋಡಾಟೌ (ಪಾ.ಸೂ. ೩-೪-೯೪) ಲೇಟಿಗೆ ಅಟ್ ಆಟ್ ಎಂಬ ಎರಡು ಆಗಮಗಳು ಬರುತ್ತವೆ ಎಂಬುದರಿಂದ ಇಲ್ಲಿ ಅಡಾಗಮ ಬರುತ್ತದೆ. ಛೇಚ ಎಂಬುದರಿಂದ ಉರೂಪ ಹ್ರಸ್ವಕ್ಕೆ ಛಕಾರ ಪರದಲ್ಲಿರುವುದರಿಂದ ತುಕಾಗಮವು ಬರುತ್ತದೆ. ಅದಕ್ಕೆ ಶ್ಚುತ್ವದಿಂದ ಚಕಾರ ಬರುರ್ತದೆ. ಉಚ್ಛಾತ್ ಎಂದಿರುವಾಗ ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತ ಸ್ವರವು ಬರುತ್ತದೆ. ಲೇಟಿಗೆ ಬಂದಿರುವ ಅಟಾಗಮವು ಆಗಮಾ ಅನುದಾತ್ತಾಃ ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಆದ್ಯುದಾತ್ತಶ್ಚ (ಪಾ.ಸೂ. ೩-೧-೩) ಎಂಬುದರಿಂದ ಪ್ರತ್ಯಯದ ಆದ್ಯುದಾತ್ತಸ್ವರ ಬರುತ್ತದೆ. ಆದುದರಿಂದ ಅಂತೋದಾತ್ತವಾಗಿ ಉಚ್ಛಾತ್ ಎಂಬುದಾಗಿ ಆಗುತ್ತದೆ. ಸಮಾನವಾಕ್ಯೇ ನಿಘಾತಯುಷ್ಮದಸ್ಮದ್ಾದೇಶಾ ವಕ್ತವ್ಯಾಃ (ಪಾ. ಸೂ. ೮-೧-೧೮ ವಾ. ೫) ನಿಮಿತ್ತ ನಿಮಿತ್ತಗಳು ಏಕವಾಕ್ಯದಲ್ಲಿರುವಾಗ ನಿಘಾತವನ್ನು (ಸರ್ವಾನುದಾತ್ತ) ಹೇಳಬೇಕು ಎಂಬುದರಿಂದ, ಇಲ್ಲಿ ಉಷಾಃ ಎಂಬುದರ ಪರದಲ್ಲಿ ತಿಙಂತಬಂದರೂ ಉಷಾಃ ಎಂಬುದು ಬೇರೆ ವಾಕ್ಯದ ಸಂಬಂಧವನ್ನು ಹೊಂದಿರುವುದರಿಂದ ವಾಕ್ಯಾಂತರದಲ್ಲಿರುವ ಉಚ್ಛಾತ್ ಎಂಬುದಕ್ಕೆ ಯಾವ ಸಂಬಂಧವೂ ಇಲ್ಲದಿದ್ದುರಿಂದ ತಿಙ್ಙತಿಙಃ ಎಂಬುದರಿಂದ ನಿಘಾತವು ಬರುವುದಿಲ್ಲ.

ಜೀರಾ—ಜು ಗತೌ ಧಾತು. ಇದು ಭ್ವಾದಿ ಪಠಿತವಾದುದಲ್ಲ. ಗತ್ಯರ್ಥಕವಾದ ಸೌತ್ರಧಾತುವು. ಸೂತ್ರ ದಲ್ಲಿ ಮಾತ್ರ ನಿರ್ದಿಷ್ಟವಾಗಿದೆ. ಇದಕ್ಕೆ ಜೋರೀಚ (ಉ. ಸೂ. ೨-೧೮೧) ಎಂಬುದರಿಂದ ರಕ್ ಪ್ರತ್ಯಯವು ಬರುತ್ತದೆ. ರಕ್ ಬರುವಾಗ ಪ್ರಕೃತಿಧಾತುವಿಗೆ ಈತ್ವವೂ ಬರುತ್ತದೆ. ಸ್ತ್ರೀತ್ವವಿವಕ್ಷಾ ಮಾಡಿದಾಗ ಅದಂತ ವಾದುದರಿಂದ ಟಾಪ್ ಬರುತ್ತದೆ. ಟಾಪಿನಲ್ಲಿ ಉಳಿಯುವ ಆಕಾರ ಸೇರಿಸಿದಾಗ ಜೀರಾ ಎಂಬುದಾಗಿ ಆಗುತ್ತದೆ.

ಅಸ್ಯಾಃ—ಇದಮ್ ಶಬ್ದದ ಮೇಲೆ ಷಷ್ಠೀ ಏಕವಚನ ಪ್ರತ್ಯಯವು (ಙಸ್) ಇರುವಾಗ ಇದಮೋನ್ವಾ-ದೇಶೇಶನುದಾತ್ತಸ್ತೃತೀಯಾದೌ (ಪಾ. ಸೂ. ೨-೪-೩೨) ತೃತೀಯಾದಿ ವಿಭಕ್ತಿ ಪರದಲ್ಲಿರುವಾಗ ಅನ್ವಾದೇಶ ವಿಷಯದಲ್ಲಿ ಇದಮ್ ಶಬ್ದಕ್ಕೆ ಅನುದಾತ್ತವಾದ ಅಶ್ ಎಂಬ ಆದೇಶ ಬರುತ್ತದೆ ಎಂಬುದರಿಂದ ಅಶ್ ಆದೇಶ ಬರುತ್ತದೆ. ಪಿತ್ತಾದುದರಿಂದ ಸರ್ವಾದೇಶವಾಗಿ ಬರುತ್ತದೆ. ಸ್ತ್ರೀತ್ವ ತೋರುವಾಗ ಸರ್ವನಾಮ್ನಃ ಸ್ಯಾಡ್ಢ್ರ-ಸ್ವಶ್ಚ (ಪಾ. ಸೂ. ೭-೪-೧೧೪) ಎಂಬುದರಿಂದ ಙಸ್ಸಿಗೆ ಸ್ಯಾಟಾಗಮವು ಬರುತ್ತದೆ. ಟಾಪಿಗೆ ಹ್ರಸ್ವಬರುತ್ತದೆ. ಪ್ರತ್ಯಯ ಸೇರಿಸಿದಾಗ ಅಸ್ಯಾಃ ಎಂಬುದಾಗಿ ಆಗುತ್ತದೆ. ಇಲ್ಲಿ ವಿಭಕ್ತಿಗೆ ಅನುದಾತ್ತೌ ಸುಪ್ಪಿತೌ ಎಂಬುದ ರಿಂದ ಅನುದಾತ್ತಸ್ವರವು ಬರುತ್ತದೆ. ಇದಮಿಗೆ ಬಂದಿರುವ ಅಶಾದೇಶವೂ ಅನುದಾತ್ತವಾಗಿ ಬರುತ್ತದೆ ಎಂಬು ದರಿಂದ ಅನುದಾತ್ತವಾಗುತ್ತದೆ. ಹೀಗೆ ಅಸ್ಯಾಃ ಎಂಬುದು ಸರ್ವಾನುದಾತ್ತವಾಗುತ್ತದೆ.

ಆಚರಣೇಷು—ಚರಗತಿಭಕ್ಷಣಯೋಃ ಧಾತು ಭ್ವಾದಿ. ಇಲ್ಲಿ ಗತ್ಯರ್ಥದಲ್ಲಿ ಇದೆ. ಲ್ಯುಟ್ ಚ (ಪಾ.ಸೂ. ೩-೩-೧೧೫) ನಪುಂಸಕೇ ಭಾವೇಕ್ತಃ ಎಂಬುದರಿಂದ ಭಾವೆ ಎಂಬುದು ಅನುವೃತ್ತವಾಗುತ್ತದೆ. ಭಾವಾರ್ಥದಲ್ಲಿ ಲ್ಯುಟ್‌ಪ್ರತ್ಯಯ ಧಾತುಸಾಮಾನ್ಯಕ್ಕೆ ಬರುತ್ತದೆ. ಚರ್ ಧಾತುವಿಗೆ ಭಾವಾರ್ಥದಲ್ಲಿ (ಗಮನವೆಂಬ ಧಾತ್ವರ್ಥದಲ್ಲಿ) ಲ್ಯುಟ್ ಬಂದಾಗ ಲ್ಯುಟನಲ್ಲಿ ಯು ಎಂಬುದು ಉಳಿಯುತ್ತದೆ. ಯು ಎಂಬುದಕ್ಕೆ ಯುವೋರನಾಕೌ ಎಂಬುದರಿಂದ ಅನ ಎಂಬ ಆದೇಶವು ಬರುತ್ತದೆ. ಚರನ ಎಂದಿರುವಾಗ ಅಟ್‌ಕುಪ್ವಾಙನುಮ್‌ವ್ಯವಾಯೇಽಪಿ (ಪಾ. ಸೂ. ೮-





CC-0. Jangamwadi Math Collection. Digitized by eGangotri

೪-೨) ಎಂಬುದರಿಂದ ಅಟನ ವ್ಯವಧಾನವಿರುವಾಗ ರೇಫದ ಪರದಲ್ಲಿರುವ ನಕಾರಕ್ಕೆ ಣತ್ವ ಬರುತ್ತದೆ. ಆಙ್ ಉಪ ಸರ್ಗ. ಸಪ್ತಮೀ ಬಹುವಚನದಲ್ಲಿ ಆಚರಣೇಷು ಎಂಬ ರೂಪವಾಗುತ್ತದೆ. ಇಲ್ಲಿ ಲ್ಯುಟನಲ್ಲಿ ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತ ಸ್ವರಬರುತ್ತದೆ. ಆಗ ಚಕಾ ರದ ಮೇಲಿರುವ ಅಕಾರವು ಉದಾತ್ತವಾಗುತ್ತದೆ. ಆಚರಣ ಎಂಬ ವಿಶಿಷ್ಟಪದದಲ್ಲಿ ಚರಣವೆಂಬುದು ಕೃದಂತ ವಾದ ಉತ್ತರಪದವಾಗಿದೆ. ಆದುದರಿಂದ ಸಮಾಸದಲ್ಲಿ ಗತಿಕಾರಕೋಪಪದಾತ್ ಕೃತ್ (ಪಾ. ಸೂ. ೬-೨-೧೩೯) ಎಂಬುದರಿಂದ ಗತಿಯ ಪರದಲ್ಲಿರುವ ಕೃದಂತವು ಪ್ರಕೃತಿ ಸ್ವರವನ್ನು ಹೊಂದುತ್ತದೆ. ಆಚರಣೇಷು ಎಂಬುದು ಕೃದುತ್ತರಪದಪ್ರಕೃತಿಸ್ವರವುಳ್ಳದು ಆಗುತ್ತದೆ.

ದಧ್ರಿರೆ—ಧೃಙ್ ಅವಸ್ಥಾನೇ. ಧಾತು ದಿವಾದಿ ಲಿಟ್ ಪ್ರಥಮಪುರುಷ ಬಹುವಚನ ಪರದಲ್ಲಿರು ವಾಗ ಝ ಎಂಬ ಲಿಟನ ತಿಙ್‌ಗೆ ಇರೇಚ್ ಎಂಬ ಆದೇಶ ಬರುತ್ತದೆ. ಲಿಟ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವ ಬರುತ್ತದೆ. ಧೃ ಧೃ+ಇರೆ ಎಂದಿರುವಾಗ ಉರತ್ (ಪಾ. ಸೂ. ೭-೪-೬೬) ಅಭ್ಯಾಸದ ಋ ವರ್ಣಕ್ಕೆ ಅತ್ವ ಬರುತ್ತದೆ ಎಂಬುದರಿಂದ ಅಕಾರ ಬರುತ್ತದೆ. ಋಕಾರ ಸ್ಥಾನಕ್ಕೆ ಬರುವ ಅಕಾರವು ರಪರವಾಗಿ ಬಂದರೆ ಹಲಾದಿಶೇಷದಿಂದ ಧ ಎಂದು ಉಳಿಯುತ್ತದೆ. ಅಭ್ಯಾಸಚರ್ತ್ವದಿಂದ ಅದಕ್ಕೆ ದಕಾರ ಬರುತ್ತದೆ. ದಧೃ+ ಇರೆ ಎಂದಿರುವಾಗ ಆರ್ಧಧಾತುಕ ಪರದಲ್ಲಿರುವಾಗ ಗುಣವು ಪ್ರಾಪ್ತವಾದರೆ ಅಸಂಯೋಗಾಲ್ಲಿಟ್ ಕಿತ್ (ಪಾ. ಸೂ. ೧-೨-೫) ಎಂಬುದರಿಂದ ಲಿಟಗೆ ಕಿತ್ವವಿಧಾನ ಮಾಡಿರುವುದರಿಂದ ಕ್ಙಿತಿಚ ಸೂತ್ರದಿಂದ ಗುಣನಿಷೇಧ ಬರುತ್ತದೆ. ಗುಣಬಾರದಿರುವುದರಿಂದ ಯಣ್ ಸಂಧಿಮಾಡಿದರೆ ದಧ್ರಿರೆ ಎಂದು ರೂಪವಾಗುತ್ತದೆ. ಇಲ್ಲಿ ಲಿಟಗೆ ಬಂದಿರುವ ಇರೇಚ್ ಎಂಬ ಆದೇಶವು ಚಿತ್ತಾದುದರಿಂದ ಚಿತಃ (ಪಾ. ಸೂ. ೬-೧-೧೬೩) ಸೂತ್ರ ದಿಂದ ಅಂತೋದಾತ್ತವಾಗುತ್ತದೆ. ಚಿತಃ ಸಪ್ರಕೃತೇರ್ಬಹ್ವಕಜರ್ಥಂ ಎಂಬುದರಿಂದ ಪ್ರಕೃತಿಪ್ರತ್ಯಯ ಸಮು ದಾಯಕ್ಕೆ ಅಂತೋದಾತ್ತಸ್ವರ ಬರುತ್ತದೆ. ಯೆ ಎಂದು ಪೂರ್ವದಲ್ಲಿ ಯಚ್ಛಬ್ದಯೋಗವಿರುವುದರಿಂದ ತಿಙ್ಙ ತಿಙಃ ಸೂತ್ರದಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ.

ಶ್ರವಸ್ಯವಃ—ಶ್ರೂಯತೇ ಇತಿ ಶ್ರವಃ ಧನಂ ಶಬ್ದಮಾಡಲ್ಪಡುವುದು ಅಥವಾ ಆಶ್ರಯಿಸಲ್ಪಡುವುದು ಧನ. ಶ್ರು ಧಾತುವಿಗೆ, ಸರ್ವಧಾತುಭ್ಯೋ ಅಸುನ್ (ಉ.ಸೂ. ೪-೬೨೮) ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ಅಸುನ್ ಪರದಲ್ಲಿರುವಾಗ ಧಾತುವಿಗೆ ಗುಣಬರುತ್ತದೆ. ಅಪರದಲ್ಲಿರುವುದರಿಂದ ಗುಣಕ್ಕೆ (ಓಕಾರಕ್ಕೆ) ಅವಾದೇಶ ಬರುತ್ತದೆ. ಶ್ರವಸ್ ಎಂದುರೂಪವಾಗುತ್ತದೆ- ಶ್ರವಃ ಆತ್ಮನಃ ಇಚ್ಛಂತಿ, ಧನವನ್ನು ತನಗೆ ಅಪೇಕ್ಷಿಸು ತ್ತಾರೆ ಎಂಬರ್ಥದಲ್ಲಿ ಶ್ರವಸ್ಯವಃ ಎಂತಾಗುತ್ತದೆ. ಸುಪಆತ್ಮನಃಕ್ಯಚ್ (ಪಾ.ಸೂ. ೩-೧-೮) ಇಚ್ಛಾದಲ್ಲಿ ಕರ್ಮ ವಾಗಿಯೂ ಇಚ್ಛಾಕರ್ತೃ ಸಂಬಂಧವುಳ್ಳದ್ದಾಗಿಯೂ ಇರುವ ಸುಬಂತದ ಮೇಲೆ ಇಚ್ಛಾತೋರುತ್ತಿರುವಾಗ ಕ್ಯಚ್ ಪ್ರತ್ಯಯ ಬರುತ್ತದೆ. ಕ್ಯಚ್‌ಸನಾದಿಯಲ್ಲಿ ಸೇರಿರುವುದರಿಂದ ಕ್ಯಜಂತಕ್ಕೆ ಧಾತುಸಂಜ್ಞೆ ಬರುತ್ತದೆ. ಶ್ರವಸ್ಯಂತಿ ಇತಿ ಶ್ರವಸ್ಯವಃ. ಕ್ಯಾಚ್ಛಂದಸಿ(ಪಾ. ಸೂ. ೩-೨-೧೭೦) ಕ್ಯ ಪ್ರತ್ಯಯಾಂತದ ಮೇಲೆ ತಚ್ಛೀಲಾದಿಗಳು ತೋರು ತ್ತಿರುವಾಗ ಛಂದಸ್ಸಿನಲ್ಲಿ ಉ ಪ್ರತ್ಯಯ ಬರುತ್ತದೆ. ಶ್ರವಸ್ಯಎಂಬುದು ಕ್ಯಜಂತವಾದುದರಿಂದ ತಚ್ಛೀಲವು ಇಲ್ಲಿ ತೋರುವುದರಿಂದ ಉ ಪ್ರತ್ಯಯವು ಬಂದರೆ ಶ್ರವಸ್ಯ+ಉ ಎಂದಾಗುತ್ತದೆ. ಆಗ ಅತೋಲೋಪಃ (ಪಾ.ಸೂ. ೬-೪- ೪೮) ಎಂಬುದರಿಂದ ಶ್ರವಸ್ಯಎಂಬಲ್ಲಿರುವ ಅಕಾರವು ಲೋಪವಾಗುತ್ತದೆ. ಪ್ರತ್ಯಯ ಸೇರಿಸಿದರೆ ಶ್ರವಸ್ಯು ಎಂದು ಉಕಾರಾಂತ ಶಬ್ದವಾಗುತ್ತದೆ. ಪ್ರಥಮಾ ಬಹುವಚನ ಜಸ್ ಪ್ರತ್ಯಯ ಮಾಡಿದಾಗ ಶ್ರವಸ್ಯವಃ ಎಂಬ ರೂಪವಾಗುತ್ತದೆ ॥ ೩ ॥



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಉಷೋ ಯೇ ತೇ ಪ್ರ ಯಾಮೇಷು ಯುಂಜತೇ ಮನೋ ದಾನಾಯ
　　ಸೂರಯಃ ।
ಅತ್ರಾಹ ತತ್ಕಣ್ವ ಏಷಾಂ ಕಣ್ವತಮೋ ನಾಮ ಗೃಣಾತಿ ನೃಣಾಂ ॥ ೪ ॥

ಪದಪಾಠಃ

ಉಷಃ । ಯೇ । ತೇ । ಪ್ರ । ಯಾಮೇಷು । ಯುಂಜತೇ । ಮನಃ । ದಾನಾಯ ।
　　ಸೂರಯಃ ॥
ಅತ್ರ । ಅಹ । ತತ್ । ಕಣ್ವಃ । ಏಷಾಂ । ಕಣ್ವ ಽ ತಮಃ । ನಾಮ । ಗೃಣಾತಿ ।
　　ನೃಣಾಂ ॥ ೪ ॥

ಸಾಯಣಭಾಷ್ಯಂ

ಹೇ ಉಷಸ್ತೇ ತವ ಯಾಮೇಷು ಗಮನೇಷು ಸತ್ಸು ಯೇ ಸೂರಯೋ ವಿದ್ವಾಂಸೋ ದಾನಾಭಿಜ್ಞಾ ದಾನಾಯ ಧನಾದಿದಾನಾರ್ಥಂ ಮನಃ ಸ್ವಕೀಯಂ ಪ್ರ ಯುಂಜತೇ' ಪ್ರೇರಯಂತಿ । ದಾನಶೀಲಾ ಉದಾರಾಃ ಪ್ರಭವಃ ಪ್ರಾತಃಕಾಲೇ ದಾತುಮಿಚ್ಛಂತೀತ್ಯರ್ಥಃ । ಏಷಾಂ ದಾತುಮಿಚ್ಛತಾಂ ನೃಣಾಂ ತನ್ನಾಮ ದಾನವಿಷಯೇ ಲೋಕಪ್ರಸಿದ್ಧಂ ನಾಮ ಕಣ್ವತಮೋऽತಿಶಯೇನ ಮೇಧಾವೀ ಕಣ್ವೋ ಮಹರ್ಷಿರತ್ರಾಹ ಅತ್ರೈವೋಷಃಕಾಲೇ ಗೃಣಾತಿ । ಉಚ್ಚಾರಯತಿ । ಯೋ ದಾತುಮಿಚ್ಛತಿ ಯಶ್ಚ ನಾಮಗ್ರಹಣೇನ ದಾತಾರಂ ಪ್ರಶಂಸತಿ ತಾವುಭಾವಪ್ಯುಷಃಕಾಲ ಏವ ತಥಾ ಕುರುತ ಇತ್ಯುಷಸಃ ಸ್ತುತಿಃ ॥ ಗೃಣಾತಿ । ಗೄ ಶಬ್ದೇ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ನೃಣಾಂ । ನಾಮಿ ನೃ ಚ । ಪಾ. ೬-೪-೬ ಇತಿ ದೀರ್ಘಪ್ರತಿಷೇಧಃ ನೃ ಚಾನ್ಯತರಸ್ಯಾಂ । ಪಾ. ೬-೧-೧೮೪ । ಇತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವತೆಯೇ । ತೇ—ನಿನ್ನ । ಯಾಮೇಷು—ಸಂಚಾರವಿರಲಾಗಿ (ಪ್ರಭಾತ ಕಾಲದಲ್ಲಿ) । ಯೇ ಸೂರಯಃ—(ದಾನದ ಮಹಿಮೆಯನ್ನು ತಿಳಿದ) ಯಾವ (ಉದಾರಿಗಳಾದ ಪ್ರಭುಗಳು) ಪ್ರಾಜ್ಞರು । ದಾನಾಯ—(ಧನಾಧಿ) ದಾನ ಮಾಡುವುದಕ್ಕಾಗಿ । ಮನಃ—(ತಮ್ಮ ಮನಸ್ಸನ್ನು । ಪ್ರಯುಂಜತೇ—ಪ್ರೇರಿಸುತ್ತಾರೋ (ದಾನಮಾಡಲಿಚ್ಛಿಸುತ್ತಾರೋ) । ಏಷಾಂ ನೃಣಾಂ—ಇಂತಹ (ದಾನಮಾಡಲಿಚ್ಛಿಸುವ) ಮನುಷ್ಯರ । ತತ್ ನಾಮ—(ದಾತೃಗಳೆಂದು) ಲೋಕಪ್ರಸಿದ್ಧವಾದ ಆ ಹೆಸರುಗಳನ್ನು । ಕಣ್ವತಮಃ—ಅತ್ಯಂತ ಮೇಧಾವಿಯಾದ । ಕಣ್ವಃ—ಕಣ್ವಮಹರ್ಷಿಯು । ಅತ್ರಾಹ—ಈ ಉಷಃಕಾಲದಲ್ಲಿಯೇ । ಗೃಣಾತಿ—ಉಚ್ಚರಿಸುತ್ತಾನೆ. (ಪ್ರಶಂಸಿಸುತ್ತಾನೆ).



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಎಲೈ ಉಷೋದೇವತೆಯೇ, ಪ್ರಭಾತಕಾಲದಲ್ಲಿ ನಿನ್ನ ಉದಯವಾದೊಡನೆ ದಾನದ ಮಹಿಮೆಯನ್ನು ತಿಳಿದ ಪ್ರಾಜ್ಞರಾದ ಪ್ರಭುಗಳು ದಾನಮಾಡಲು ಅಪೇಕ್ಷಿಸುತ್ತಾರೆ ದಾತೃಗಳೆಂದು ಲೋಕಪ್ರಸಿದ್ಧರಾದ ಇಂತಹ ಉದಾರಿಗಳ ಹೆಸರನ್ನು ಮೇಧಾವಿಯಾದ ಕಣ್ವಮಹರ್ಷಿಯು ಈ ಉಷಃಕಾಲದಲ್ಲಿಯೇ ಪ್ರಶಂಸಿಸುತ್ತಾನೆ. ಹೀಗೆ ಉದಾರಿಗಳ ದಾನವೂ ಈ ದಾತೃಗಳ ಪ್ರಶಂಸೆಯೂ ಉಷಃಕಾಲದಲ್ಲಿಯೇ ನಡೆಯುತ್ತದೆ. ಇದು ಉಷಃಕಾಲದ ಪ್ರಭಾವವಾಗಿರುತ್ತೆ.

## English Translation.

Ushas, at your comings wise men turn their minds to free gifts; of these men, the most wise Kanwa proclaims the fame.

॥ ವಿಶೇಷ ವಿಷಯಗಳು ॥

ಅತ್ರ ಅಹ—ಈಗ ಅಥವಾ ಈ ಉಷಃಕಾಲದಲ್ಲಿ.

ಕಣ್ವತಮಃ—ಅತಿಶಯೇನ ಮೇಧಾವೀ—ಕಣ್ವವಂಶಸ್ಥರಲ್ಲಿ ಅತ್ಯಂತ ಮೇಧಾವಿಯಾದವನು ಅಥವಾ ಕಣ್ವಋಷಿಯು.

ಋಕ್ಕಿನ ಅರ್ಥವು ಸ್ವಲ್ಪ ಕ್ಲಿಷ್ಟವಾಗಿರುವುದು. ಆದರೂ ಋಷಿಯ ಅಭಿಪ್ರಾಯವನ್ನು ತಿಳಿದುಕೊಳ್ಳುವು ದೇನೂ ಕಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

ಗೃಣಾತಿ—ಗೄ ಶಬ್ದೇ ಧಾತು. ಕ್ರ್ಯಾದಿ ಕ್ರ್ಯಾದಿಭ್ಯಃಶ್ನಾ (ಪಾ. ಸೂ. ೩-೧-೮೧) ಎಂಬುದರಿಂದ ಕ್ರ್ಯಾದಿಗಳಿಗೆ ಶ್ನಾವಿಕರಣ ಪ್ರತ್ಯಯ ಬರುತ್ತದೆ. ಪ್ರಥಮಪುರುಷೈಕವಚನ ತಿ ಪ್ರತ್ಯಯಪರದಲ್ಲಿರುವಾಗ ವಿಕರಣಪ್ರತ್ಯಯ ಧಾತುವಿಗೆ ಬರುತ್ತದೆ. ವಿಕರಣದಲ್ಲಿ ಶಕಾರ ಇತ್ತಾಗುತ್ತದೆ. ಗೃನಾತಿ ಎಂದಿರುವಾಗ ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಸೂತ್ರದಿಂದ ಧಾತುವಿಗೆ ಹ್ರಸ್ವಬರುತ್ತದೆ. ಋವರ್ಣಾನ್ನಸ್ಯಣತ್ವಂವಾಚ್ಯಂ (ವಾ) ಎಂಬುದರಿಂದ ಋಕಾರದ ಪರದಲ್ಲಿರುವ ನಕಾರಕ್ಕೆ ಣತ್ವ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತವಾಗಿ ಗೃಣಾತಿ ಎಂಬುದಾಗಿ ರೂಪವಾಗುತ್ತದೆ.

ನೃಣಾಂ ಋಕಾರಾಂತ ಪುಲ್ಲಿಂಗ ನೃ ಶಬ್ದ. ಇದಕ್ಕೆ ಷಷ್ಠ್ಯೀ ಬಹುವಚನವಾದ ಆಮ್ ಪ್ರತ್ಯಯ ವಿವಕ್ಷೆಮಾಡಿದಾಗ ನೃ+ಆಮ್ ಎಂದಿರುವಾಗ ಹ್ರಸ್ವನದ್ಯಾಪೋನುಟ್ (ಪಾ. ಸೂ. ೭-೧-೫೪) ಸೂತ್ರದಿಂದ ಆಮಿಗೆ ನುಟಾಗಮ ಬರುತ್ತದೆ. ಟಿತ್ತಾದುದರಿಂದ ಆದ್ಯವಯವವಾಗಿ ಬಂದರೆ ನೃ+ನಾಮ್ ಎಂದಾಗುತ್ತದೆ. ಆಗ ನಾಮಿ (ಪಾ. ಸೂ. ೬-೪-೩) ಸೂತ್ರದಿಂದ ಅಜಂತವಾದ ನೃ ಎಂಬ ಅಂಗಕ್ಕೆ ದೀರ್ಘ ಪ್ರಾಪ್ತವಾಗುತ್ತದೆ. ನೃಚ (ಪಾ. ಸೂ. ೬-೪-೬) ನೃ ಶಬ್ದಕ್ಕೆ ನಾಮ್ ಪರದಲ್ಲಿರುವಾಗ ವಿಕಲ್ಪವಾಗಿ ದೀರ್ಘ ಬರುತ್ತದೆ ಎಂಬುದರಿಂದ ಇಲ್ಲಿ ದೀರ್ಘವನ್ನು ಮಾಡಲಿಲ್ಲ. ಅನುದಾತ್ತೌ ಸುಪ್ಪಿತೌ ಸೂತ್ರದಿಂದ ವಿಭಕ್ತಿಗೆ ಅನುದಾತ್ತಸ್ವರವು ಪ್ರಾಪ್ತವಾದರೆ ನೃಚಾನ್ಯತರಸ್ಯಾಂ (ಪಾ. ಸೂ. ೬-೧-೧೮೪) ನೃಶಬ್ದದ ಪರದಲ್ಲಿರುವ ಹಲಾದಿವಿಭಕ್ತಿಯು



CC-0. Jangamwadi Math Collection. Digitized by eGangotri

ವಿಕಲ್ಪವಾಗಿ ಉದಾತ್ತವಾಗುತ್ತದೆ ಎಂಬುದರಿಂದ ವಿಭಕ್ತಿಯು ಉದಾತ್ತವಾಗುತ್ತದೆ. ನುಡಾಗಮ ಬಂದ ಮೇಲೆ ವಿಭಕ್ತಿಯು ಹಲಾದಿಯಾಗುತ್ತದೆ. ವಿಭಕ್ತಿಯು ಉದಾತ್ತವಾಗುವುದರಿಂದ ನೃಣಾಂ ಎಂಬ ಶಬ್ದವು ಅಂತೋದಾತ್ತವಾದ ಶಬ್ದವಾಗುತ್ತದೆ. ॥ ೪ ॥

॥ ಸಂಹಿತಾಪಾಠಃ ॥

ಆ ಘಾ ಯೋಷೇವ ಸೂನರ್ಯುಷಾ ಯಾತಿ ಪ್ರಭುಂಜತೀ ।
ಜರಯಂತೀ ವೃಜನಂ ಪದ್ವದೀಯತ ಉತ್ಪಾತಯತಿ ಪಕ್ಷಿಣಃ ॥ ೫ ॥

॥ ಪದಪಾಠಃ ॥

ಆ । ಘ । ಯೋಷಾಽಇವ । ಸೂನರೀ । ಉಷಾಃ । ಯಾತಿ । ಪ್ರಽಭುಂಜತೀ ॥
ಜರಯಂತೀ । ವೃಜನಂ । ಪತ್ಽವತ್ । ಈಯತೇ । ಉತ್ । ಪಾತಯತಿ ।
ಪಕ್ಷಿಣಃ ॥ ೫ ॥

॥ ಸಾಯಣಭಾಷ್ಯಂ ॥

ಉಷಾ ದೇವೀ ಪ್ರಭುಂಜತೀ ಪ್ರಕರ್ಷೇಣ ಸರ್ವಂ ಪಾಲಯಂತ್ಯಾ ಯಾತಿ ಘ । ಪ್ರತಿದಿನಮಾಗಚ್ಛತಿ ಖಲು । ತತ್ರ ದೃಷ್ಟಾಂತಃ । ಸೂನರೀ ಸುಷ್ಠು ಗೃಹಕೃತ್ಯಸ್ಯ ನೇತ್ರೀ ಯೋಷೇವ ಗೃಹಿಣೀವ । ಕೀದೃಶ್ಯುಷಾಃ । ವೃಜನಂ ಗಮನಶೀಲಂ ಜಂಗಮಂ ಪ್ರಾಣಿಜಾತಂ ಜರಯಂತೀ ಜರಾಂ ಪ್ರಾಪಯಂತೀ । ಅಸಕೃದುಷಸ್ಯಾವೃತ್ತಾಯಾಂ ವಯೋಹಾನ್ಯಾ ಪ್ರಾಣಿನೋ ಜೀರ್ಣಾ ಭವಂತಿ । ಕಿಂಚ ಉಷಃಕಾಲೇ ಪದ್ವತ್ ಪಾದಯುಕ್ತಂ ಪ್ರಾಣಿಜಾತಮೀಯತೇ । ನಿದ್ರಾಂ ಪರಿತ್ಯಜ್ಯ ಸ್ವಸ್ವಕೃತ್ಯಾರ್ಥಂ ಗಚ್ಛತಿ। ಕಿಂಚ ಇಯಮುಷಾಃ ಪಕ್ಷಿಣ ಉತ್ಪಾತಯತಿ । ಪಕ್ಷಿಣೋ ಹ್ಯುಷಃಕಾಲೇ ಸಮುತ್ಥಾಯ ತತ್ರ ತತ್ರ ವ್ರಜಂತಿ ॥ ಋಚಿ ತುನುಘೇತ್ಯಾದಿನಾ ಸಂಹಿತಾಯಾಂ ದೀರ್ಘಃ । ಸುಷ್ಠು ನಯತೀತಿ ಸೂನರೀ । ನೃ ನಯೇ । ಅಚ ಇರಿತೀಪ್ರತ್ಯಯಃ । ಗತಿಸಮಾಸೇ ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಂ । ಪರಿ. ೨೮ । ಇತಿ ವಚನಾತ್ಕೃದಿಕಾರಾದಕ್ತಿನಃ। ಪಾ. ೪-೧-೪೫। ಇತಿ ಙೀಷ್ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ನಿಪಾತಸ್ಯ ಚೇತಿ ಪೂರ್ವಪದಸ್ಯ ದೀರ್ಘಃ । ಪ್ರಭುಂಜತೀ । ಭುಜಪಾಲನಾಭ್ಯವಹಾರಯೋಃ । ಲಟಃ ಶತೃ । ರುಧಾದಿಭ್ಯಶ್ಚ್ನಂ । ಶ್ನಸೋರಲ್ಲೋಪ ಇತ್ಯಕಾರಲೋಪಃ । ಉಗಿತಶ್ಚೇತಿ ಙೀಪ್ । ಶತುರನುಮ ಇತಿ ನದ್ಯಾ ಉದಾತ್ತತ್ವಂ । ವೃಜನಂ ವೃಜೀ ವರ್ಜನೇ । ವರ್ಜ್ಯತ ಇತಿ ವೃಜನಂ



CC-0. Jangamwadi Math Collection. Digitized by eGangotri

ಪ್ರಾಣಿಜಾತಂ | ಕ್ವಾ ಪ್ವಾ ವೃಜಿಮಂದಿನಿಧಾಞ್ಭ್ಯಃ ಕ್ಯುಃ | ಉ. ೨-೮೧ | ಇತಿ ಕ್ಯುಪ್ರತ್ಯಯಃ | ಕಿತ್ವಾ-ಲ್ಲಘೂಪಧಗುಣಾಭಾವಃ | ಯೋರನಾದೇಶೇ ಪ್ರತ್ಯಯಸ್ವರಃ | ಪದ್ವತ್ | ಪತ್ ಪಾದಃ | ತದಸ್ಯಾಸ್ತೀತಿ ಪದ್ವತ್ | ಝಯ ಇತಿ ಮತುಪೋ ವತ್ವಂ | ವ್ಯತ್ಯಯೇನ ಮತುಪ ಉದಾತ್ತತ್ವಂ | ನ ಚ ಸ್ವರವಿಧೌ ವ್ಯಂಜನಮವಿದ್ಯಮಾನವತ್ | ಪರಿ. ೭೯ | ಇತಿ ವ್ಯಂಜನಸ್ಯಾವಿದ್ಯಮಾನವತ್ತ್ವೇ ಸತಿ ಹ್ರಸ್ವನುಡ್ಭ್ಯಾಂ ಮತುಬಿತಿ ಮತುಪ ಉದಾತ್ತತ್ವಮಿತಿ ವಾಚ್ಯಂ | ಹ್ರಸ್ವಾದಿತ್ಯೇವ ಸಿದ್ಧೇ ಪುನರ್ನುಡ್ ಗ್ರಹಣಸಾಮರ್ಥ್ಯಾ-ದೇಷಾ ಪರಿಭಾಷಾ ನಾಶ್ರೀಯತ ಇತಿ ವೃತ್ತಾವುಕ್ತಂ | ಕಾ. ೬-೧-೧೭೬ | ಇತರಥಾ ಹಿ ಮರುತ್ವಾನಿತ್ಯ-ತ್ರಾಪಿ ಮತುಪ ಉದಾತ್ತತ್ವಂ ಸ್ಯಾತ್ || ೩ ||

॥ ಪ್ರತಿಪದಾರ್ಥ ॥

ಉಷಾಃ—ಉಷೋದೇವಿಯು | ಸೂನರೀ—(ಗೃಹಕೃತ್ಯಗಳಲ್ಲಿ) ಒಳ್ಳೆಯ ಆದರ್ಶಪ್ರಾಯಳಾದ | ಯೋಷೇವ—(ಮನೆಯ ಯಜಮಾನಿಯಾದ) ಹೆಂಗಸಿನಂತೆ | ಪ್ರಭುಂಜತೀ—(ಎಲ್ಲರನ್ನೂ) ಚೆನ್ನಾಗಿ ಪೋಷಿಸುತ್ತ | ವೃಜನಂ—ಚರಾತ್ಮಕವಾದ ಸಕಲ ಪ್ರಾಣಿ ಸಮೂಹವನ್ನೂ | ಜರಯಂತೀ—ಮುಪ್ಪಿಗೆ ಒಯ್ಯುತ್ತ | ಆಯಾತಿ ಘ—(ಪ್ರತಿದಿನವೂ) ಬರುತ್ತಾಳಲ್ಲವೇ| (ಉಷಃಕಾಲದಲ್ಲಿ) ಪದ್ವತ್—ಪಾದಗಳುಳ್ಳ (ಸಂಚಾರ ಸ್ವಭಾವವುಳ್ಳ) ಪ್ರಾಣಿ ಸಮೂಹವು | ಈಯತೇ—(ನಿದ್ರೆಯಿಂದ ಎದ್ದು ತನ್ನ ತನ್ನ ಕೆಲಸಕ್ಕೆ) ಹೋಗುತ್ತದೆ. (ಮತ್ತು ಈ ಉಷಸ್ಸು) ಪಕ್ಷಿಣಃ—ಪಕ್ಷಿಗಳನ್ನು | ಉತ್ಪಾತಯತಿ—(ಎಬ್ಬಿಸಿ) ಹಾರುವಂತೆ ಮಾಡುತ್ತಾಳೆ.

॥ ಭಾವಾರ್ಥ ॥

ಗೃಹಕೃತ್ಯದಲ್ಲಿ ನಿಪುಣಳೂ ಆದರ್ಶಪ್ರಾಯಳೂ ಆದ ಗೃಹಿಣಿಯಾದ ಹೆಂಗಸು ಮನೆಯಲ್ಲಿ ಸಕಲರನ್ನೂ ಪೋಷಿಸುವಂತೆ ಉಷೋದೇವಿಯು ಪ್ರತಿದಿನವೂ ಉದಯಿಸಿ ಲೋಕದಲ್ಲಿ ಎಲ್ಲರನ್ನೂ ಪೋಷಿಸುತ್ತಾಳೆ. ಆದರೆ ಅವಳು ಹೀಗೆ ಅನೇಕಾವರ್ತಿ ಉದಯಿಸಿದರೆ ಚರಾತ್ಮಕವಾದ ಸಕಲಪ್ರಾಣಿ ಸಮೂಹವನ್ನೂ ಮುಪ್ಪಿಗೆ ಒಯ್ಯುತ್ತಾಳೆ. ಸಂಚಾರ ಸ್ವಭಾವವಿದ್ದು ಪಾದಗಳಿಂದ ಕೂಡಿದ ಸಕಲ ಪ್ರಾಣಿಸಮೂಹವೂ ಉಷಃಕಾಲದಲ್ಲಿ ನಿದ್ರೆಯಿಂದ ಎದ್ದು ತನ್ನ ತನ್ನ ಕೆಲಸಕ್ಕೆ ಹೋಗುತ್ತದೆ. ಪಕ್ಷಿಗಳು ಎದ್ದು ತಮ್ಮ ತಮ್ಮ ಆಹಾರಾರ್ಥವಾಗಿ ಹಾರಿಹೋಗುತ್ತವೆ

## English Translation.

Ushas, nourishing all comes daily like a beautiful young damsel well versed in household duties ; she makes the people old ; at her coming those beings that have feet get up from their sleep and make a stir ; she wakes up the birds.

॥ ವಿಶೇಷ ವಿಷಯಗಳು ॥

ಯೋಷೇವ—ಯುವತಿಯಂತೆ, ಉತ್ತಮ ಸ್ತ್ರೀಯಂತೆ ಎಂದರೆ ಗೃಹಿಣಿಯಂತೆ.

ಸೂನರೀ—ಸೂನರೀ ಶಬ್ದವು ಹದಿನಾರು ಉಷೋನಾಮಗಳ ಮಧ್ಯದಲ್ಲಿ ಪಠಿತವಾಗಿದ್ದರೂ (ನಿ. ೨-೧೯) ಇಲ್ಲಿ ಭಾಷ್ಯಕಾರರು ಈ ಶಬ್ದಕ್ಕೆ ಸುಷ್ಠು ಗೃಹಕೃತ್ಯಸ್ಯ ನೇತ್ರೀ ಗೃಹಿಣೀ—ಗೃಹಕೃತ್ಯಗಳನ್ನು ಚೆನ್ನಾಗಿ ನಿರ್ವಹಿಸುವ ಗೃಹಿಣಿ ಎಂದು ಅರ್ಥವಿವರಣೆ ಮಾಡಿರುವರು. ಏಕೆಂದರೆ ಉಷಾಃ ಎಂಬ ಪ್ರತ್ಯೇಕಶಬ್ದವು ಈ ಋಕ್ಕಿನಲ್ಲಿ ರುವುದು.



CC-0. Jangamwadi Math Collection. Digitized by eGangotri

**ಪ್ರಭುಂಜತೀ**—ಪ್ರಕರ್ಷೇಣ ಸರ್ವಂ ಪಾಲಯಂತೀ । ಭುಜಪಾಲನಾಭ್ಯವಹಾರಯೋಃ । ಸರ್ವರನ್ನೂ ಪೋಷಣೆಮಾಡುತ್ತಾ ಪಾಲಿಸುವವಳು.

**ಜರಯಂತೀ ವೃಜನಂ**—ಚಲಿಸುವ ಪ್ರಾಣಿಸಮೂಹದ ಆಯುಸ್ಸನ್ನು ಕ್ಷೀಣಮಾಡುವವಳು, ಸಮೆಯಿಸುವವಳು. ಏಕೆಂದರೆ ಉಷೋದೇವತೆಯು ಪ್ರತಿದಿನವೂ ಉದಯಿಸುವುದರಿಂದ ಪ್ರಾಣಿಗಳ ಆಯುಸ್ಸಿನಲ್ಲಿ ಒಂದೊಂದಾಗಿ ದಿನಗಳು ಕಳೆದು ಹೋಗಿ ಇವುಗಳ ಆಯುಃಪ್ರಮಾಣವು ಕ್ಷೀಣಿಸುವುದೆಂದಭಿಪ್ರಾಯವು.

**ಪದ್ವತ್**—ಪಾದಯುಕ್ತಂ ಪ್ರಾಣಿಜಾತಂ । ಪಾದಗಳು ಅಥವಾ ಕಾಲುಗಳುಳ್ಳ ಮನುಷ್ಯರೇ ಮೊದಲಾದ ಪ್ರಾಣಿಗಳು.

**ಪಕ್ಷಿಣಃ ಉತ್ಪಾತಯತಿ**—ಉಷಃಕಾಲವಾದೊಡನೆಯೇ ಬೆಳಕಾಗುವುದರಿಂದ ನಿದ್ರಾಪರವಶವಾದ ಪಕ್ಷಿಗಳು ಎಚ್ಚರಗೊಂಡು ಆಹಾರಸಂಪಾದನೆಗಾಗಿ ಸಂಚರಿಸುವವು. ರಾತ್ರಿಕಾಲದಲ್ಲಿ ಕತ್ತಲೆಯಾಗಿರುವುದರಿಂದ ಪಕ್ಷಿಗಳು ಚಲಿಸಲು ಸಾಧ್ಯವಿಲ್ಲದೆ ತಮ್ಮ ತಮ್ಮ ಗೂಡುಗಳಲ್ಲಿ ನಿದ್ರೆಗೈಯ್ಯುವವು. ಉಷಃಕಾಲದಲ್ಲಿ ಬೆಳಕಾದೊಡನೆಯೇ ನಿದ್ರೆಯಿಂದೆಚ್ಚತ್ತು ತಮ್ಮ ವ್ಯವಹಾರಗಳಲ್ಲಿ ತೊಡಗುವವು. ಆದುದರಿಂದ ಉಷಃಕಾಲವು ಅಥವಾ ಉಷೋದೇವತೆಯು ಪಕ್ಷಿಗಳನ್ನು ಎಬ್ಬಿಸಿ ಚಲಿಸುವಂತೆ ಮಾಡುವಳು ಎಂದು ಋಷಿಯು ವರ್ಣಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

**ಘ**—ಖಲು ಎಂಬ ಅರ್ಥದಲ್ಲಿದೆ. **ಋಚಿ ತುನುಘಮಕ್ಷು** (ಪಾ. ಸೂ. ೬-೩-೧೩೩) ಎಂಬುದರಿಂದ ಮಂತ್ರದಲ್ಲಿ ದೀರ್ಘಬರುತ್ತದೆ. ಘಾ ಎಂದು ಮಂತ್ರಪಾಠದಲ್ಲಿ ರೂಪವನ್ನು ಹೊಂದುತ್ತದೆ

**ಸೂನರೀ**—ಸುಷ್ಠು ನಯತೀತಿ ಸೂನರೀ ಚೆನ್ನಾಗಿ ಕಾರ್ಯವನ್ನು ನೆರವೇರಿಸುವವಳು. ಸು ಎಂಬುದು ನಿಪಾತ. ಉಪಸರ್ಗಕ್ಕೂ ನಿಪಾತ ಸಂಜ್ಞೆ ಬರುತ್ತದೆ. ಣ್ಣಾ ನಯೆ ಧಾತು ಕ್ರ್ಯಾದಿ. ಇದಕ್ಕೆ **ಅಚಇಃ** (ಉ. ಸೂ. ೫೭೮) ಅಜಂತವಾದ ಧಾತುವಿಗೆ ಇ ಪ್ರತ್ಯಯ ಬರುತ್ತದೆ ಎಂಬುದರಿಂದ (ಧಾತುವಿಗೆ) ಇ ಪ್ರತ್ಯಯ ಬರುತ್ತದೆ. ಸಾರ್ವಧಾತುಕಾರ್ಧಧಾತುಕಯೋಃ ಸೂತ್ರದಿಂದ ಇ ಪರದಲ್ಲಿರುವಾಗ ಧಾತುವಿಗೆ ಗುಣ ಬಂದರೆ ನರ್+ಇ ನರಿ ಎಂದಾಗುತ್ತದೆ. ಸು ನಿಪಾತದೊಡನೆ ಸಮಾಸವಾಗುತ್ತದೆ. ಇದಕ್ಕೆ ಗತಿ ಸಮಾಸವೆಂದು ಹೆಸರು. ಸು ಎಂಬುದಕ್ಕೆ ನಿಪಾತಸಂಜ್ಞಾದೊಡನೆ ಗತಿ ಎಂಬ ಸಂಜ್ಞೆಯೂ ಧಾತುಯೋಗವಿರುವುದರಿಂದ ಬರುತ್ತದೆ. ಕೃದ್ಗ್ರಹಣೆಗತಿಕಾರಕಪೂರ್ವಸ್ಯಾಪಿ ಗ್ರಹಣಂ (ಪರಿಭಾ. ೨೮) ಕೃತ್ ಪ್ರತ್ಯಯವಾದುದರಿಂದ ತದಂತಗ್ರಹಣದಿಂದ ಕೃದಂತವೆಂದಾಗುತ್ತದೆ. ಕೃದಂತಕ್ಕೆ ಉಪಾದಾನವಿರುವೆಡೆಯಲ್ಲಿ ಗತಿಪೂರ್ವವಾಗಿರುವ ಕೃದಂತಕ್ಕೂ ಕಾರಕಪೂರ್ವವಾಗಿರುವುದಕ್ಕೂ ಗ್ರಹಣ ಬರುತ್ತದೆ. ಇಲ್ಲಿ ಗತಿಪೂರ್ವಕವಾದುದರಿಂದ ವಿಶಿಷ್ಟ ಕೃದಂತವೆಂದೇ ಗ್ರಹಿಸಬೇಕು. **ಕೃದಿಕಾರಾದಕ್ತಿನಃ** (ಪಾ. ಸೂ. ೪-೧-೪೫ ಗ.) ಕ್ತಿನ್ ಭಿನ್ನವಾದ ಇಕಾರಾಂತ ಕೃದಂತ ಪ್ರಾತಿಪದಿಕಕ್ಕೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ ಙೀಷ್ ಬರುತ್ತದೆ. ಹಿಂದೆ ಹೇಳಿದಂತೆ ಕೃದಂತವಿಷಯದಲ್ಲಿ ವಿಶಿಷ್ಟಗ್ರಹಣವಿರುವುದರಿಂದ ಇಲ್ಲಿ ಗತಿಪೂರ್ವವಾದ ಸೂನರಿ ಎಂಬುದೇ ಕೃದಂತವಾಗುತ್ತದೆ. ಇ ರೂಪ ಕೃದಂತವಾದುದರಿಂದ ಙೀಷ್ ಬರುತ್ತದೆ. ಸೂನರೀ ಎಂಬುದಾಗಿ ರೂಪವಾಗುತ್ತದೆ. **ಪರಾದಿಶ್ಛಂದಸಿಬಹುಲಂ** (ಪಾ. ಸೂ. ೬-೨-೧೯೯) ಛಂದಸ್ಸಿನಲ್ಲಿ ಪರ ಶಬ್ದಕ್ಕೆ ಆದಿ ಉದಾತ್ತ ಬರುತ್ತದೆ ಎಂಬುದರಿಂದ ಇಲ್ಲಿ ಉತ್ತರಪದದ ಆದ್ಯುದಾತ್ತ ಸ್ವರವು ಸತಿಶಿಷ್ಟವಾಗಿ ಪ್ರಧಾನವಾಗುತ್ತದೆ. ಯದ್ಯಪಿ ಪೂರ್ವಸೂತ್ರದಲ್ಲಿ ಪರದ ಉಕ್ಥಶಬ್ದಕ್ಕೆ ಮಾತ್ರ ಆದ್ಯುದಾತ್ತವು ವಿಹಿತವಾಗಿರುತ್ತದೆ. ಆದರೆ ಬಹುಲಗ್ರಹಣದಿಂದ ಉಕ್ತಾರ್ಥವು ಸಿದ್ಧವಾಗುತ್ತದೆ. **ನಿಪಾತಸ್ಯಚ** (ಪಾ. ಸೂ-



CC-0. Jangamwadi Math Collection. Digitized by eGangotri

೬-೩-೧೩೬) ನಿಪಾತವಾದ ಪೂರ್ವಪದಕ್ಕೆ ಛಂದಸ್ಸಿನಲ್ಲಿ ದೀರ್ಘ ಬರುತ್ತದೆ. ಸು ಎಂಬುದು ನಿಪಾತವಾದುದ ರಿಂದ ದೀರ್ಘಬಂದರೆ ಸೂನರೀ ಎಂಬುದಾಗಿ ರೂಪವಾಗುತ್ತದೆ.

**ಪ್ರಭುಂಜತೀ**—ಪ್ರ ಉಪಸರ್ಗ. ಭುಜ ಪಾಲನಾಭ್ಯವಹಾರಯೋಃ ಧಾತು. ರುಧಾದಿ. **ಲಟಃ ಶತೃಶಾನಚಾ** (ಪಾ. ಸೂ. ೩-೨-೧೨೪) ಎಂಬುದರಿಂದ ಲಟಿನ ಸ್ಥಾನದಲ್ಲಿ ಶತೃ ಬರುತ್ತದೆ. ಶಕಾರ ಋಕಾರ ಗಳು ಇತ್ತಾಗುತ್ತವೆ. ಶಿತ್ ಪ್ರತ್ಯಯ ಪರದಲ್ಲಿರುವುದರಿಂದ ರುಧಾದಿ ವಿಕರಣವಾದ ಶ್ನಮ್ ಪ್ರತ್ಯಯವು ಬರುತ್ತದೆ. **ಮಿದಚೋಽಂತ್ಯಾತ್ಪರಃ** (ಪಾ. ಸೂ. ೧-೧-೪೭) ಸೂತ್ರದಿಂದ ಶ್ನಮ್ ಮಿತ್ತಾದುದರಿಂಡ ಧಾತು ವಿನ ಅಂತ್ಯದ ಅಚಿನಪರಕ್ಕೆ ಬರುತ್ತದೆ. ಭು+ನ+ಜ್+ಅತ್ ಎಂದಿರುವಾಗ ನಕಾರಾಕಾರಕ್ಕೆ **ಶ್ನಸೋರ ಲ್ಲೋಪಃ** (ಪಾ. ಸೂ. ೬-೪-೧೧೧) ಕಿತ್ತು ಙಿತ್ತಾದ ಸಾರ್ವಧಾತುಕವು ಪರದಲ್ಲಿರುವಾಗ ಶ್ನ ಪ್ರತ್ಯಯದ ಅಕಾರವೂ ಅಸ್ ಧಾತುವಿನ ಅಕಾರವೂ ಲೋಪವಾಗುತ್ತದೆ ಎಂಬುದರಿಂದ ಲೋಪಬರುತ್ತದೆ. ನಕಾರಕ್ಕೆ ಅನುಸ್ವಾರ ಪರಸವರ್ಣಗಳು ಬಂದರೆ ಭುಞ್ಜತ್ ಎಂದು ರೂಪವಾಗುತ್ತದೆ. ಇದಕ್ಕೆ ಸ್ತ್ರೀತ್ವವಿವಕ್ಷೆ ಮಾಡಿ ದಾಗ ಶೃತೃಪ್ರತ್ಯಯದಲ್ಲಿ ಉಗಿತ್ತಾದುದರಿಂದ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್ ಪ್ರತ್ಯಯ ಬರುತ್ತದೆ. ಭುಂಜತೀ ಎಂಬುದಾಗಿ ರೂಪವಾಗುತ್ತದೆ. **ಶತುರನುಮೋನದ್ಯಜಾದೀ** (ಪಾ. ಸೂ. ೬-೧-೧೭೩) ನುಮಾಗಮ ಹೊಂದದಿರುವ ಶೃತೃಪ್ರತ್ಯಯಾಂತಕವಾದುದರ ಮೇಲಿರುವ ನದೀ (ಈ ಮತ್ತು ಊ) ಎಂಬುದು ಉದಾತ್ತವಾಗುತ್ತದೆ. ಎಂಬುದರಿಂದ ಇಲ್ಲಿ ನುಮ್ ಬಾರದಿರುವುದರಿಂದ ನದೀ ಸಂಜ್ಞೆಯುಳ್ಳ ಙೀಪಿನ ಈಕಾರವು ಉದಾತ್ತವಾಗುತ್ತದೆ. ಪ್ರಭುಂಜತೀ ಎಂಬುದು ಅಂತೋದಾತ್ತವಾಗುತ್ತದೆ.

**ವೃಜನಂ**—ವೃಜೀ ವರ್ಜನೆ. ಧಾತು ಅದಾದಿ ವರ್ಜ್ಯತೆ ಇತಿ ವೃಜನಂ ಪ್ರಾಣಿಜಾತಂ. ಹೋಗುವ ಸ್ವಭಾವವುಳ್ಳವುಗಳು ಪ್ರಾಣಿಸಮೂಹವೆಂದರ್ಥ. **ಕೃಪೃವೃಜಿಮಂದಿನಿಧಾಞ್ಭ್ಯಃಕ್ಯುಃ** (ಉ. ಸೂ. ೨-೮೧) ಎಂಬುದರಿಂದ ಕ್ಯು ಪ್ರತ್ಯಯ ಬರುತ್ತದೆ. ಕ್ಯು ಪ್ರತ್ಯಯದಲ್ಲಿ ಕಕಾರವು ಇತ್ತಾಗುತ್ತದೆ. ಯು ಎಂಬುದಕ್ಕೆ **ಯುವೋರನಾಕೌ** ಸೂತ್ರದಿಂದ ಅನ ಎಂಬ ಆದೇಶ ಬರುತ್ತದೆ. ಕಕಾರ ಇತ್ತಾದುದರಿಂದ **ಕ್ಙಿತಿಚ** (ಪಾ. ಸೂ. ೧-೧-೫) ಎಂಬುದರಿಂದ ಧಾತುವಿಗೆ ಬರಬೇಕಾದ ಲಘೂಪಧಗುಣ ನಿಷೇಧ ಬರುತ್ತದೆ. ಪ್ರತ್ಯಯ ಸೇರಿಸಿದರೆ ವೃಜನ ಎಂದು ರೂಪವಾಗುತ್ತದೆ. **ಆದ್ಯುದಾತ್ತಶ್ಚ** (ಪಾ. ಸೂ. ೩-೧-೩) ಎಂಬುದರಿಂದ ಪ್ರತ್ಯಯ ಸ್ವರವು ಬರುತ್ತದೆ.

**ಪದ್ವತ್**—ಪತ್ ಅಂದರೆ ಪಾದ. ಪತ್ ಅಸ್ಯ ಅಸ್ತೀತಿ (ಕಾಲು ಇದಕ್ಕೆ ಇದೆ) ಎಂಬರ್ಥದಲ್ಲಿ **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** (ಪಾ. ಸೂ. ೫-೨-೯೪) ಸೂತ್ರದಿಂದ ಮತುಪ್ ಪ್ರತ್ಯಯ ಬರುತ್ತದೆ. ತಕಾರಕ್ಕೆ ಜಶ್ತ್ವದಿಂದ ದಕಾರ ಬರುತ್ತದೆ. **ಝಯಃ** (ಪಾ. ಸೂ. ೮-೪-೧೧೧) ಝಯಿನ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರಬರುತ್ತದೆ. **ವ್ಯತ್ಯಯೋಬಹುಲಂ** ಎಂಬುದರಿಂದ ಮತುಪ್ ಉದಾತ್ತವಾಗುತ್ತದೆ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗಬೇಕಾಗುತ್ತದೆ. ಆದುದರಿಂದ ವ್ಯತ್ಯಯವನ್ನು ಸ್ವೀಕರಿಸಬೇಕು. **ಸ್ವರವಿಧೌ ವ್ಯಂಜನಮವಿದ್ಯಮಾನವತ್** (ಪರಿಭಾಷಾ ೭೯) ಸ್ವರವಿಧಾನ ಮಾಡುವಾಗ ಮಧ್ಯೆ ವ್ಯಂಜನವಿದ್ದರೂ ಇಲ್ಲ ದಂತೆಯೇ ಆಗುತ್ತದೆ ಎಂದು ವಿಧಾನಮಾಡಿರುವರು. ಆದುದರಿಂದ ಇಲ್ಲಿ ವ್ಯತ್ಯಯ ಸ್ವೀಕರಿಸಿದರೆ ಉದಾತ್ತ ವನ್ನು ಸಾಧಿಸಲು ಸಾಧ್ಯವಾಗುತ್ತದೆ ಎಂದು ಒಂದು ಪೂರ್ವಪಕ್ಷವು ಬರುತ್ತದೆ. ಅದು ಹೇಗೆಂದರೆ, ಪದ್ವತ್ ಎಂಬಲ್ಲಿ ಪಕಾರದ ಅಕಾರಕ್ಕೂ ಮತುಪಿಗೂ ಮಧ್ಯೆ ದಕಾರದ ವ್ಯವಧಾನಮಾತ್ರ ಇದೆ. ಹಿಂದೆ ಹೇಳಿದ ಪರಿ ಭಾಷೆಯರ್ಥದಂತೆ ಅದಕ್ಕೆ ಅವಿದ್ಯಮಾನವದ್ಭಾವ ಹೇಳಿದರೆ ಪ್ರಸ್ವಕಾರದ ಪರದಲ್ಲಿ ಮತುಪ್ ಬಂದಂತೆ ಆಗು


CC-0. Jangamwadi Math Collection. Digitized by eGangotri

ತ್ತದೆ. ಆಗ ಹ್ರಸ್ವಾನುಡ್ಭ್ಯಾಂ ಮತುಪ್ (ಪಾ. ಸೂ. ೬-೧-೧೭೬) ಹ್ರಸ್ವಾಂತದ ಅಂತೋದಾತ್ತದ ಪರದಲ್ಲಿರುವ ನುಟ್ಟಿನ ಪರದಲ್ಲಿರುವ ಮತುಪ್ ಉದಾತ್ತವಾಗುತ್ತದೆ ಎಂಬುದರಿಂದ ಉದಾತ್ತವಾಗುತ್ತದೆ. ಅದಕ್ಕೋಸ್ಕರ ವ್ಯತ್ಯಯವನ್ನು ಸ್ವೀಕರಿಸುವುದು ವ್ಯರ್ಥ ಎಂದು ಶಂಕೆ ಬಂದರೆ ಅದಕ್ಕೆ ಈ ಸೂತ್ರದಲ್ಲಿ ಅವಕಾಶವಿಲ್ಲ. ಹಾಗೆ ಮಧ್ಯೆ ವ್ಯಂಜನವಿಲ್ಲವೆಂದು ಭಾವಿಸಿ ಬರುವುದಾದರೆ ಈ ಸೂತ್ರದಲ್ಲಿ ನುಟ್ ಗ್ರಹಣ ವ್ಯರ್ಥವಾಗುತ್ತದೆ- ಅಕ್ಷಣ್ವಂತಃ ಇತ್ಯಾದಿಗಳು ನುಟಿನ ಪರದಲ್ಲಿರುವ ಮತುಪಿಗೆ ಉದಾತ್ತ ಬಂದುದಕ್ಕೆ ಉದಾಹರಣೆಗಳು. ಸೂತ್ರದಲ್ಲಿ ನುಟ್ ಇಲ್ಲದಿದ್ದರೂ ಪರಿಭಾಷಾರ್ಥದಂತೆ ಮಧ್ಯೆ ನುಟ್ಟಿದ್ದರೂ ಸ್ವರವಿಧಾನದಲ್ಲಿ ಇಲ್ಲವೆಂದು ಭಾವಿಸಿ ಉದಾತ್ತ ಸ್ವರವನ್ನು ಹೇಳಲು ಬರುತ್ತದೆ. ಹೀಗಿರುವಾಗ ನುಟ್ ಏಕೆ ಹೇಳಬೇಕು? ಆದುದರಿಂದ ಆ ಪರಿಭಾಷೆಯು ಇಲ್ಲಿ ಆಶ್ರಯಿಸಲ್ಪಡುವುದಿಲ್ಲವೆಂದು ವೃತ್ತಿಯಲ್ಲಿಯೂ ಹೇಳಿರುವರು. (ಕಾ. ೬-೧-೧೭೬) ಈ ಸೂತ್ರದಲ್ಲಿ ಪರಿಭಾಷೆಯನ್ನು ಆಶ್ರಯಿಸುವುದಿಲ್ಲವೆಂದು ಹೇಳಲೇಬೇಕು. ಇಲ್ಲವಾದರೆ ಮರುತ್ವಾನ್ ಮುಂತಾದ ಸ್ಥಳದಲ್ಲಿ ವ್ಯಂಜನಮಧ್ಯೆ ಇಲ್ಲವೆಂದು ಮತುಪಿಗೆ ಉದಾತ್ತಸ್ವರವು ಬರಬೇಕಾಗುತ್ತದೆ. ಹಾಗೆ ಎಲ್ಲಿಯೂ ಮಾಡಲಿಲ್ಲ. ಆದುದರಿಂದ ಪದ್ವತ್ ಎಂಬಲ್ಲಿ ವ್ಯತ್ಯಯದಿಂದಲೇ ಮತುಪಿಗೆ ಉದಾತ್ತಸ್ವರವನ್ನು ಹೇಳಬೇಕು ॥ ೫ ॥

ಸಂಹಿತಾಪಾಠಃ

ವಿ ಯಾ ಸೃಜತಿ ಸಮನಂ ವ್ಯ೧ರ್ಥಿನಃ ಪದಂ ನ ವೇತ್ಯೋದತೀ ।
ವಯೋ ನಕಿಷ್ಟೇ ಪಪ್ತಿವಾಂಸ ಆಸತೇ ವ್ಯುಷ್ಟೌ ವಾಜಿನೀವತಿ ॥ ೬ ॥

॥ ಪದಪಾಠಃ ॥

ವಿ । ಯಾ । ಸೃಜತಿ । ಸಮನಂ । ವಿ । ಅರ್ಥಿನಃ । ಪದಂ । ನ । ವೇತಿ । ಓದತೀ ।
ವಯಃ । ನಕಿಃ । ತೇ । ಪಪ್ತಿಽವಾಂಸಃ । ಆಸತೇ । ವಿಽಉಷ್ಟೌ । ವಾಜಿ-
ನೀಽವತಿ ॥ ೬ ॥

ಸಾಯಣಭಾಷ್ಯಂ

ಯಾ ದೇವತಾ ಸಮನಂ ಸಮೀಚೀನಚೇಷ್ಟಾವಂತಂ ಪುರುಷಂ ವಿ ಸೃಜತಿ ಪ್ರೇರಯತಿ । ಗೃಹಾರಾಮಾದಿಚೇಷ್ಟಾಕುಶಲಾನ್ಪುರುಷಾನುಷಃಕಾಲಃ ಶಯನಾದುತ್ಥಾಪ್ಯ ಸ್ವಸ್ವವ್ಯಾಪಾರೇ ಪ್ರೇರಯತೀತಿ ಪ್ರಸಿದ್ಧಂ । ಕಿಂಚ ಉಷಾ ಅರ್ಥಿನೋ ಯಾಚಕಾನ್ವಿ ಸೃಜತಿ । ತೇಽಪಿ ಹ್ಯುಷಃಕಾಲೇ ಸಮುತ್ಥಾಯ ಸ್ವಕೀಯದಾತೃಗೃಹೇ ಗಚ್ಛಂತಿ। ಓದತ್ಯುಷೋದೇವತಾ ಪದಂ ಸ್ಥಾನಂ ನ ವೇತಿ। ನ ಕಾಮಯತೇ । ಉಷಃಕಾಲಃ ಶೀಘ್ರಂ ಗಚ್ಛತೀತ್ಯರ್ಥಃ । ಹೇ ವಾಜಿನೀವತ್ಯುಷೋದೇವತೇ ತೇ ವ್ಯುಷ್ಟೌ ತ್ವದೀಯೇ ಪ್ರಭಾತ-





CC-0. Jangamwadi Math Collection. Digitized by eGangotri

ಕಾಲೇ ಪಪ್ತಿವಾಂಸಃ ಪತನಯುಕ್ತಾ ವಯಃ ಪಕ್ಷಿಣೋ ನಕಿರಾಸತೇ । ನ ತಿಷ್ಠಂತಿ । ಕಿಂತು ಸ್ವಸ್ವನೀಡಾದ್ವಿನಿರ್ಗತ್ಯ ಗಚ್ಛಂತೀತ್ಯರ್ಥಃ ॥ ಸೃಜತಿ । ಸೃಜ ವಿಸರ್ಗೇ । ತುದಾದಿತ್ವಾಚ್ಛಃ । ತಸ್ಯ ಙಿತ್ವಾಲ್ಲಘೂಪಧಗುಣಾಭಾವಃ । ಪ್ರತ್ಯಯಸ್ಯ ಪಿತ್ವಾದನುದಾತ್ತತ್ವೇ ವಿಕರಣಸ್ವರಃ । ಯದ್ವೃತ್ತಯೋಗಾದನಿಘಾತಃ ಓದತೀ । ಉನ್ದೀ ಕ್ಲೇದನೇ । ಉನತ್ತಿ ಸರ್ವಂ ನೀಹಾರೇಣೇತ್ಯೋದತ್ಯುಷಾಃ । ಶತರಿ ವ್ಯತ್ಯಯೇನ ಶಪ್ । ವ್ಯತ್ಯಯೇನಾನುನಾಸಿಕಲೋಪೇ ಲಘೂಪಧಗುಣಃ । ಉಗಿತಶ್ಚೇತಿ ಙೀಪ್ । ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ಶಪಃ ಪಿತ್ವಾದನುದಾತ್ತತ್ವಂ । ಶತುರದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತತ್ವಂ । ನ ಚ ಶತುರನುಮ ಇತಿ ನದ್ಯಾ ಉದಾತ್ತತ್ವಂ । ಅಂತೋದಾತ್ತಾಚ್ಚತುಃ ಪರಸ್ಯಾಸ್ತದ್ವಿಧಾನಾತ್ । ನಕಿಷ್ಟೇ । ಯುಷ್ಮತ್ತತ್ತತಕ್ಷುಃ ಷ್ವಂತಃಪಾದಮಿತಿ ಷತ್ವಂ । ಪಪ್ತಿವಾಂಸಃ । ಪತ್ಲೃ ಗತೌ । ಲಿಟಃ ಕ್ವಸುಃ । ಕ್ರಾದಿನಿಯಮಾತ್ಪ್ರಾಪ್ತ ಇಟ್ ವಸ್ವೇಕಾಜಾದ್ಘಸಾಮಿತಿ ನಿಯಮಾನ್ನ ಪ್ರಾಪ್ನೋತಿ ತತ್ಕ್ರಿಯತೇ ಸರ್ವವಿಧೀನಾಂ ಛಂದಸಿ ವಿಕಲ್ಪಿತತ್ವಾತ್ । ಕನಿಪತ್ಯೋಶ್ಛಂದಸಿ । ಪಾ. ೬-೪-೯೯ । ಇತ್ಯುಪಧಾಲೋಪಃ । ದ್ವಿರ್ವಚನೇಚೀತಿ ಸ್ಥಾನಿವದ್ಭಾವಾದ್ದ್ವಿರ್ಭಾವಃ । ಪ್ರತ್ಯಯಸ್ವರಃ । ವಾಜಿನೀವತಿ । ವಾಜೋನ್ನಮಸ್ಯಾ ಅಸ್ತೀತಿ ವಾಜಿನೀ ಕ್ರಿಯಾ । ಮತ್ವರ್ಥೀಯ ಇನಿಃ । ಋನ್ನೇಭ್ಯ ಇತಿ ಙೀಪ್ । ತಾದೃಶೀ ಕ್ರಿಯಾ ಯಸ್ಯಾಃ ಸಾ । ತದಸ್ಯಾಸ್ತೀತಿ ಮತುಪ್ । ಸಂಜ್ಞಾಯಾಮಿತಿ ಮತುಪೋ ವತ್ವಂ ॥

॥ ಪ್ರತಿಪದಾರ್ಥ ॥

ಯಾ—(ಯಾವ) ಉಷೋದೇವತೆಯು । ಸಮನಂ—ಉದ್ಯೋಗಶೀಲನಾದ ಪುರುಷನನ್ನು । ವಿಸೃಜತಿ—(ಅವನ ಕೆಲಸಕ್ಕೆ) ಪ್ರೇರಿಸುತ್ತಾಳೆ । ಅರ್ಥಿನಃ—ಯಾಚಕರನ್ನು । ವಿ (ಸೃಜತಿ)—(ಅವರವರ ದಾತೃಗಳ ಮನೆಗೆ) ಹೋಗುವಂತೆ ಪ್ರೇರಿಸುತ್ತಾಳೆ । ಓದತೀ—ಉಷೋದೇವತೆಯು । ಪದಂ—(ಶಾಶ್ವತವಾದ) ಸ್ಥಾನವನ್ನು । ನವೇತಿ—ಇಚ್ಛಿಸುವುದಿಲ್ಲ. ಉದಯವಾದೊಡನೆ ಹೊರಟುಹೋಗುತ್ತಾಳೆ) । ವಾಜಿನೀವತಿ—ಅನ್ನಯುಕ್ತ(ದಾತ)ಳಾದ ಉಷೋದೇವತೆಯೇ ॥ ತೇ ವ್ಯುಷ್ಟೌ—ನಿನ್ನ ಉದಯಕಾಲದಲ್ಲಿ । ಪಪ್ತಿವಾಂಸಃ—ಹಾರುವ ಸ್ವಭಾವವುಳ್ಳ । ವಯಃ—ಪಕ್ಷಿಗಳು । ನಕಿಃ ಆಸತೇ—(ಗೂಡುಗಳಲ್ಲಿ) ನಿಲ್ಲುವುದೇ ಇಲ್ಲ.

॥ ಭಾವಾರ್ಥ ॥

ಉಷೋದೇವತೆಯು (ಉಷಃಕಾಲವು) ಮನೆ, ತೋಟ ಮುಂತಾದ ಸ್ಥಳಗಳಲ್ಲಿ ಉದ್ಯೋಗಗಳನ್ನು ನಿಯತವಾಗಿಟ್ಟುಕೊಂಡಿರುವ ಪುರುಷರನ್ನು ಅವರವರ ಹಾಸಿಗೆಯಿಂದೆಬ್ಬಿಸಿ ಅವರವರ ಕೆಲಸಗಳಲ್ಲಿ ತೊಡಗುವಂತೆ ಪ್ರೇರಿಸುತ್ತಾಳೆ. ಯಾಚಕರನ್ನು ಅವರವರ ದಾತೃಗಳ ಮನೆಗೆ ಹೋಗುವಂತೆ ಪ್ರೇರಿಸುತ್ತಾಳೆ. ಇವಳು ಉದಯಿಸಿದ ಮೇಲೆ ಅದೇ ಸ್ಥಾನದಲ್ಲಿ ಶಾಶ್ವತವಾಗಿ ನಿಲ್ಲದೇ ಒಡನೇ ತಿರೋಹಿತಳಾಗುತ್ತಾಳೆ. ಅನ್ನಯುಕ್ತಳೂ ಅನ್ನದಾತಳೂ ಆದ ಉಷೋದೇವತೆಯೇ, ನಿನ್ನ ಉದಯವಾದೊಡನೆಯೇ ಪಕ್ಷಿಗಳು ತಮ್ಮ ಗೂಡುಗಳಲ್ಲಿ ನಿಲ್ಲದೇ ಆಹಾರಾರ್ಥವಾಗಿ ಹಾರಿಹೋಗುತ್ತವೆ.

## English Translation.

She animates the industrious and sends solicitors to their donors; she never stays in one place (but moves on). O bestower of food, birds no longer stay but begin to fly at your approach.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಸೃಜತಿ—ಸೃಜ ವಿಸರ್ಗೆ | ಕಳುಹಿಸುವಳು, ಹೋಗುವಂತೆ ಪ್ರೇರಿಸುವಳು.

ಸಮನಂ—ಸಮೀಚೀನಚೇಷ್ಟಾವಂತಂ । ಚಟುವಟಿಕೆಯಿಂದ ಕೆಲಸಮಾಡುವ ಮನುಷ್ಯನನ್ನು, ಉದ್ಯೋಗಶೀಲನನ್ನು, diligent, busy, industrious.

ಓದತೀ—ಉಂದೀ ಕ್ಲೇದನೇ । ಉನತ್ತಿ ಸರ್ವಂ ನೀಹಾರೇಣೇತ್ಯೋದತ್ಯುಷಾಃ ಓದತೀ ಎಂಬ ಶಬ್ದವು ಉಂದೀ ಎಂಬ ಧಾತುವಿನಿಂದ ಉಂಟಾಗಿದೆ. ಈ ಧಾತುವಿಗೆ ನೆನೆಯಿಸು ಎಂದರ್ಥವಿರುವುದು. ಉಷಃ ಕಾಲದಲ್ಲಿ ಸೂರ್ಯೋದಯಕ್ಕೆ ಮುಂಚೆ ಭೂಮಿಯ ಮೇಲೂ ತೃಣಾದಿಗಳ ಮೇಲೂ ಹಿಮವು ಬಿದ್ದು ಎಲ್ಲವೂ ನೆನೆದಿರುವುದರಿಂದ ಉಷೋದೇವತೆಯು ಎಲ್ಲವನ್ನೂ ನೆನೆಯಿಸುವವಳು. ಆದುದರಿಂದ ಉಷೋದೇವತೆಯನ್ನು ಓದತೀ-ನೆನೆಯಿಸುವವಳು ಎಂದು ಹೇಳಬೇಕು.

ನಕಿಃ—ಎಲ್ಲ, ಸಮಸ್ತ. ಹಿಕಂ ನುಕಂ ಮೊದಲಾದ ಒಂಭತ್ತು ಸರ್ವನಾಮಗಳಲ್ಲಿ ನಕಿಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೩) ನಕಿಃ ಎಂದರೆ ಎಲ್ಲವೂ, ಸಮಸ್ತವೂ ಎಂದರ್ಥವು.

॥ ವ್ಯಾಕರಪ್ರಕ್ರಿಯಾ ॥

ಸೃಜತಿ—ಸೃಜ ವಿಸರ್ಗೆ ಧಾತು. ತುದಾದಿ. ಪ್ರಥಮಪುರುಷ ಏಕವಚನ ತುದಾದಿಗೆ ಶ ವಿಕರಣ ಬರುತ್ತದೆ. ಸಾರ್ವಧಾತುಕಮಪಿತ್ (ಪಾ. ಸೂ. ೧-೨-೪) ಎಂಬುದರಿಂದ ಅದು ಙಿತ್ತಾಗುತ್ತದೆ. ಸೃಜ್+ಅ+ತಿ ಎಂದಿರುವಾಗ ಶ ಙಿತ್ತಾದುದರಿಂದ ಲಘೂಪಧ ಗುಣವು ಬರುವುದಿಲ್ಲ. ಸೃಜತಿ ಎಂದಿರುವಾಗ ತಿಪ್ ಪಿತ್ತಾದುದರಿಂದ ಅನುದಾತ್ತೌಸುಪ್ಪಿತೌ ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ವಿಕರಣಸ್ವರವೇ ಸತಿಶಿಷ್ಟವಾಗುತ್ತದೆ. ಆದ್ಯುದಾತ್ತಶ್ಚ ಎಂಬುದರಿಂದ ಅದು ಉದಾತ್ತವಾಗುತ್ತದೆ. ಜಕಾರೋತ್ತರ ಅಕಾರವು ಉದಾತ್ತವೆಂದು ತಿಳಿಯಬೇಕು. ಉದಾತ್ತದ ಪರದಲ್ಲಿ ಅನುದಾತ್ತ ಬಂದುದರಿಂದ ತಿಪ್ ಪ್ರತ್ಯಯ ಸ್ವರವು ಸ್ವರಿತವಾಗುತ್ತದೆ. ಸೃಜತಿ ಎಂಬಾದರ ಹಿಂದೆ ಯಾ ಶಬ್ದವಿರುವುದರಿಂದ ಯದ್ವೃತ್ತಯೋಗದಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತವಾಗುವುದಿಲ್ಲ. ಯಚ್ಛಬ್ದಯೋಗವಿರುವಾಗ ನಿಷೇಧ ಹೇಳಿರುತ್ತಾರೆ.

ಓದತೀ—ಉಂದೀ ಕ್ಲೇದನೆ ಧಾತು. ರುಧಾದಿ. ಉನತ್ತಿ ಸರ್ವಂ ನೀಹಾರೇಣ ಇತಿ ಓದತೀ ಉಷಾಃ ಹಿಮಕಿರಣಗಳಿಂದ ಎಲ್ಲವನ್ನೂ ಒದ್ದೆ ಮಾಡುವವಳು (ಉಷೆ) ಎಂದರ್ಥ. ಲಡರ್ಥದಲ್ಲಿ ಲಟಃ ಶತೃ-ಶಾನಚಾ—ಸೂತ್ರದಿಂದ ಶತೃ ಪ್ರತ್ಯಯ ಬರುತ್ತದೆ. ಶತೃ ಪ್ರತ್ಯಯ ಪರದಲ್ಲಿರುವಾಗ ರುಧಾದಿಗಳಿಗೆ ಪ್ರಾಪ್ತವಾಗುವ ಶ್ನಮ್ ವಿಕರಣವು ಬಂದರೆ ಅದಕ್ಕೆ ಬದಲಾಗಿ ವ್ಯತ್ಯಯೋಬಹುಲಂ ಸೂತ್ರದಿಂದ ವ್ಯತ್ಯಯದಿಂದ ಶಪ್ ವಿಕರಣ ಪ್ರತ್ಯಯ ಬರುತ್ತದೆ. ಉಂದ್+ಅ+ಅತ್ ಎಂದಿರುವಾಗ ಝಲಾದಿಯಾದ ಙಿತ್ತು ಕಿತ್ತು ಪ್ರತ್ಯಯಪರದಲ್ಲಿ ಇಲ್ಲದಿದ್ದರೂ ವ್ಯತ್ಯಯದಿಂದಲೇ ಛಂದಸ್ಸಿನಲ್ಲಿ ಅನುನಾಸಿಕಕ್ಕೆ ಲೋಪಬರುತ್ತದೆ. ಆಗ ಉದ್ ಎಂಬ ಲಘೂಪಧೆಯ ಅಂಗಕ್ಕೆ ಪುಗಂತಲಘೂಪಧಸ್ಯಚ (ಪಾ. ಸೂ. ೭-೩-೮೬) ಸೂತ್ರದಿಂದ ಗುಣಬರುತ್ತದೆ. ಓದತ್ ಎಂದು ವಿಶಿಷ್ಟರೂಪವಿರುವಾಗ ಸ್ತ್ರೀತ್ವ ವಿವಕ್ಷಾಮಾಡಿದರೆ, ಉಗಿತಶ್ಚ (ಪಾ. ಸೂ. ೪-೧-೬) ಉಗಿದಂತವಾದ ಪ್ರಾತಿಪದಿಕಕ್ಕೆ ಙೀಪ್ ಬರುತ್ತದೆ ಎಂಬುದರಿಂದ ಙೀಪ್ ಬರುತ್ತದೆ. ಓದತೀ ಎಂದು ರೂಪವಾಗುತ್ತದೆ. ಶತೃ ಉಗಿತ್ತಾದುದರಿಂದ ಸರ್ವನಾಮಸ್ಥಾನ ಸಂಜ್ಞೆಯುಳ್ಳ ಪ್ರಥಮೈಕವಚನ ಪರದಲ್ಲಿರುವಾಗ ಉಗಿದಚಾಂ



CC-0. Jangamwadi Math Collection. Digitized by eGangotri

ಸರ್ವನಾಮ (ಪಾ. ಸೂ. ೭-೧-೫೦) ಎಂಬುದರಿಂದ ಇಲ್ಲಿ ನುಮಾಗಮ ಪ್ರಾಪ್ತವಾಗುತ್ತದೆ. ಆದರೆ ಆಗಮ ಶಾಸ್ತ್ರಮನಿತ್ಯಂ (ಪರಿಭಾಷಾ ೯೩) ಎಂಬುದರಿಂದ ಇಲ್ಲಿ ಅನಿತ್ಯತ್ವ ಆಶ್ರಯಣದಿಂದ, ನುಮಾಗಮವಾದುದ ರಿಂದ ಬರುವುದಿಲ್ಲ. ಓದ್+ಅ+ಅತ್ ಎಂಬಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತೌಸುಪ್ಪಿತೌ ಸೂತ್ರದಿಂದ ಅನು ದಾತ್ತವಾಗುತ್ತದೆ. ಶತೃಪ್ರತ್ಯಯ ಸ್ವರದಿಂದ ಅಂತೋದಾತ್ತವಾದರೆ, ತಾಸ್ಯನುದಾತ್ತೇತ್ (ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತೋಃ ಸೂತ್ರ ದಿಂದ ಬಂದಿರುವ ಅಂತೋದಾತ್ತವಾದ ಧಾತುಸ್ವರವೇ ಉಳಿಯುವುದು. ಇದರಿಂದ ಓದತೀ ಎಂಬುದು ಆದ್ಯು ದಾತ್ತಪದವಾಗುತ್ತದೆ. ಇಲ್ಲಿ ಶತೃರನುನೋ ನದ್ಯಜಾದೀ ಸೂತ್ರದಿಂದ ನದೀ ಸಂಜ್ಞೆಯುಳ್ಳ ಈಕಾರವು ಉದಾತ್ತವೇಕೆ ಆಗುವುದಿಲ್ಲವೆಂದು ಶಂಕೆ ಬರುತ್ತದೆ. ನುಮನ್ನು ಹೊಂದದಿರುವ ಶತೃವಿನ ಪರದಲ್ಲಿರುವ ನದಿಯೂ (ಈ ಮತ್ತು ಊ) ಅಜಾದಿ ಶಸಾದಿ ವಿಭಕ್ತಿಯೂ ಉದಾತ್ತವಾಗುತ್ತದೆ ಎಂದು ಆ ಸೂತ್ರದ ಅರ್ಥ. ಆದುದರಿಂದ ಉದಾತ್ತವಾಗಲಿ ಎಂದರೆ, ಆ ಸೂತ್ರದಲ್ಲಿ ಅಂತೋದಾತ್ತವೆಂದೂ ಅನುವೃತ್ತವಾಗಿದೆ. ಶತೃಪ್ರತ್ಯ ಯಾಂತವಾದ ಅಂತೋದಾತ್ತದ ಪರದಲ್ಲಿರುವ ನದಿಯು ಉದಾತ್ತವಾಗುತ್ತದೆ ಎಂದು ಅರ್ಥವಾಗುತ್ತದೆ. ಇಲ್ಲಿ ಶತೃಪ್ರತ್ಯಯದ ಪರದಲ್ಲಿದ್ದರೂ ಅಂತೋದಾತ್ತದ ಪರದಲ್ಲಿ ಬಂದಂತಾಗುವುದಿಲ್ಲ. ಶಪ್ ಪಿತ್ತಾದುದರಿಂದ ಅನು ದಾತ್ತವಾಗುತ್ತದೆ ಎಂದು ಹೇಳಿದೆ. ಅನುದಾತ್ತದಪರದಲ್ಲಿರುವ ಶತೃಪ್ರತ್ಯಯವೂ ಹಿಂದೆ ಹೇಳಿದಂತೆ ಅನುದಾತ್ತ ವಾಗುತ್ತದೆ ಎಂದು ಹೇಳಿದೆ. ಆದುದರಿಂದ ನಿಮಿತ್ತವಿಲ್ಲದಿರುವುದರಿಂದ ನದಿಗೆ ಉದಾತ್ತ ಸ್ವರವು ಬರುವುದಿಲ್ಲ.

ನಕಿಷ್ಟೇ—ನಕಿಃ ತೆ ಎಂದಿರುವಾಗ ವಿಸರ್ಜನೀಯಸ್ಯ ಸಃ (ಪಾ. ಸೂ. ೮-೩-೩೪) ಸೂತ್ರದಿಂದ ವಿಸ ರ್ಗಕ್ಕೆ ಸತ್ವಬರುತ್ತದೆ. ನಕಿಸ್+ತೆ ಎಂದಿರುವಾಗ ಯುಷ್ಮತ್ತತಕ್ಷುಷ್ಷಂತಃ ಪಾದಂ (ಪಾ. ಸೂ. ೮-೩-೧೦೩) ಪಾದ ಮಧ್ಯದಲ್ಲಿರುವ ಸಕಾರಕ್ಕೆ ಯುಷ್ಮಾದಾದೇಶಗಳಿಂದ ತಾದಿಗಳೂ ಪರದಲ್ಲಿರುವಾಗ ಷತ್ವ ಬರುತ್ತದೆ. ಎಂಬುದರಿಂದ ಸಕಾರಕ್ಕೆ ಷಕಾರ ಬರುತ್ತದೆ. ಇಲ್ಲಿ ಯುಷ್ಮಚ್ಛಬ್ದಕ್ಕೆ ತೇಮಯೊವೇಕವಚನಸ್ಯ ಸೂತ್ರದಿಂದ ತೇ ಎಂಬ ಆದೇಶ ಬಂದಿದೆ. ಷತ್ವ ಬಂದರೆ ತಕಾರಕ್ಕೆ ಷಕಾರಯೋಗವಿರುವುದರಿಂದ ಷ್ಟುನಾಷ್ಟುಃ (ಪಾ. ಸೂ. ೮-೪-೪೧) ಸೂತ್ರದಿಂದ ಷ್ಟುತ್ವಸಂಧಿ ಬರುತ್ತದೆ. ತಕಾರಕ್ಕೆ ಟಕಾರ ಬಂದರೆ ನಕಿಷ್ಟೇ ಎಂದು ರೂಪವಾಗುತ್ತದೆ.

ಪಪ್ತಿವಾಂಸಃ—ಪತ್ಲೃ ಗತೌ ಧಾತು ಭ್ವಾದಿ ಛಂದಸಿಲಿಟ್ ಎಂದು ಅನುವೃತ್ತವಾಗುವಾಗ ಕ್ವಸುಶ್ಚ (ಪಾ. ಸೂ. ೩-೨-೧೦೭) ಭೂತಸಾಮಾನ್ಯದಲ್ಲಿ ಲಿಟನಸ್ಥಾನದಲ್ಲಿ ಕ್ವಸು ಪ್ರತ್ಯಯ ಬರುತ್ತದೆ. ಕ್ವಸು ಎಂಬಲ್ಲಿ ವಸ್ ಮಾತ್ರ ಉಳಿಯುತ್ತದೆ. ತಿಙ, ರಿತ್, ವ್ಯತಿರಿಕ್ತವಾದುದರಿಂದ ಇದು ಆರ್ಧಧಾತುಕ ಸಂಜ್ಞೆಯನ್ನು ಹೊಂದುತ್ತದೆ. ವಲಾದಿ ಆರ್ಧಧಾತುಕಗಳಿಗೆ ಇಟ್ ಪ್ರಾಪ್ತವಾದರೆ ಕೃ ಸೃ ಭೃ (ಪಾ. ಸೂ. ೭-೨-೧೩) ಸೂತ್ರದಿಂದ ನಿಯಮ ಮಾಡಿರುತ್ತಾರೆ. ಇಣ್ ನಿಷೇಧ ಬರುವುದಾದರೆ ಈ ಸೂತ್ರದಲ್ಲಿ ಹೇಳಿದವುಗಳಿಗೆ ಮಾತ್ರವೇ ಬರುವುದು. ಬೇರೆ ಧಾತುಗಳಿಗೆ ಇಟ್ ಬರುತ್ತದೆ ಎಂದು ಆ ನಿಯಮದಿಂದ ಸಿದ್ಧವಾಗುತ್ತದೆ. ಆದರೆ ಈ ಪ್ರತ್ಯಯ ವಿಷಯದಲ್ಲಿ ಇನ್ನೊಂದು ನಿಯಮವು ಆರಬ್ಧವಾಗಿರುತ್ತದೆ. ವಸ್ವೇಕಾಜಾದ್ಘಸಾಂ (ಪಾ. ಸೂ. ೭-೨-೬೭) ದ್ವಿತ್ವವನ್ನು ಹೊಂದಿರುವ ಏಕಾಚಾದ ಧಾತುಗಳ, ಆದಂತ ಧಾತುಗಳ, ಘಸಾದೇಶದ, ಪರದಲ್ಲಿರುವ ವಸುವಿಗೆ ಇಟ್ ಇರು ತ್ತದೆ. ಇಲ್ಲಿ ವಸು ಎಂಬುದು ವಲಾದಿ ಆರ್ಧಧಾತುಕವಾದುದರಿಂದ ಸಾಮಾನ್ಯ ಸೂತ್ರದಿಂದ ಪ್ರಾಪ್ತವಾಗುವಾಗ ಪುನಃ ಈ ಸೂತ್ರದಿಂದ ಇಡ್ವಿಧಾನ ಮಾಡಿದುದರಿಂದ ನಿಯಮವಾಗುತ್ತದೆ ಎಂದು ತಿಳಿಯಬೇಕು. ಈ ನಿಯ ಮದಿಂದ ಪ್ರಕೃತಸ್ಥಲದಲ್ಲಿ ಇಟ್ ಬಾರದೇ ಇರಬೇಕಾಗುತ್ತದೆ ಅದು ಹೇಗೆಂದರೆ; ಲಿಟನ ಸ್ಥಾನದಲ್ಲಿ ಕ್ವಸು ಪ್ರತ್ಯಯ ಬಂದಿರುತ್ತದೆ. ಆದುದರಿಂದ ಅದು ಪರದಲ್ಲಿರುವಾಗ ದ್ವಿತ್ವ ಬರುತ್ತದೆ. ದ್ವಿತ್ವಕ್ಕಿಂತಲೂ ಮೊದಲು



CC-0. Jangamwadi Math Collection. Digitized by eGangotri

ತೆನಿಪತ್ಯೋಶ್ಛಂದೆಸಿ (ಪಾ. ಸೂ. ೬-೪-೯೯) ಈ ಎರಡು ಧಾತುಗಳಿಗೆ ಛಂದಸ್ಸಿನಲ್ಲಿ ಕಿತ್ ಜಿತ್ತಾದ ಪ್ರತ್ಯಯುಗಳು ಪರದಲ್ಲಿರುವಾಗ ಉಪಧಾ ಲೋಪ ಬರುತ್ತದೆ ಎಂಬುದರಿಂದ ಉಪಧೆಯಾದ ಅಕಾರಕ್ಕೆ ಲೋಪ ಬರುತ್ತದೆ. ಆಮೇಲೆ ದ್ವಿತ್ವಮಾಡುವಾಗ ದ್ವಿರ್ವಚನೇಚಿ (ಪಾ. ಸೂ. ೧-೧-೫೭) ದ್ವಿತ್ವನಿಮಿತ್ತಕವಾದ ಪ್ರತ್ಯಯುಪರದಲ್ಲಿರುವಾಗ ಅಚ್‌ಸ್ಥಾನಿಕ ಆದೇಶಕ್ಕೆ ಸ್ಥಾನಿವದ್ಭಾವ ಬರುತ್ತದೆ ಎಂಬುದರಿಂದ ಲೋಪ ರೂಪಾದೇಶಕ್ಕೆ ಸ್ಥಾನಿವದ್ಭಾವ ಬಂದರೆ ಅಕಾರವಿದ್ದಂತೆಯೇ ಆಗುವುದು. ದ್ವಿತ್ವಬಂದಾಗ ಪತ್‌ಪತ್+ವಸ್ ಎಂತಾಗುತ್ತದೆ. ಹಲಾದಿಶೇಷ ಸೂತ್ರದಿಂದ ಪಪತ್‌ವಸ್ ಎಂತಾಗುತ್ತದೆ. ಈಗ ಧಾತುವು ಅನೇಕಾಚಾಗುತ್ತದೆ. ದ್ವಿತ್ವ ಬಂದಾಗಲೂ ಏಕಾಚಾಗಿರುವ ಧಾತುವಿನ ಮೇಲಿರುವ ವಸುವಿಗೆ ಮಾತ್ರ ಇಡಾಗಮವನ್ನು ನಿಯಮಸೂತ್ರದಲ್ಲಿ ಹೇಳಿರುತ್ತಾರೆ. ಅದುದರಿಂದ ಪುನಃ ಇಣ್‌ನಿಷೇಧ ಪ್ರಾಪ್ತವಾಗುತ್ತದೆ. ಆದುದರಿಂದ ಷಷ್ಠೀಯುಕ್ತಃ ಛಂದೆಸಿವಾ (ಪಾ. ಸೂ. ೧-೪-೯) ಸೂತ್ರದಲ್ಲಿ ಯೋಗ ವಿಭಾಗದಿಂದ ಸಿದ್ಧವಾದ ಅರ್ಥವನ್ನು ಆಶ್ರಯಿಸಬೇಕು. ಅಲ್ಲಿ ಛಂದಸಿ ವಾ ಎಂದು ಯೋಗ ವಿಭಾಗ ಮಾಡಿಕೊಂಡು ಛಂದಸ್ಸಿನಲ್ಲಿ ಎಲ್ಲಾ ಕಾರ್ಯಗಳೂ ವಿಕಲ್ಪವೆಂದು ತಿಳಿಯಬೇಕು. ಆ ಅರ್ಥವನ್ನು ಸ್ವೀಕರಿಸಿದುದರಿಂದ ವಸುಪ್ರತ್ಯಯುದ ನಿಯಮವೂ ವಿಕಲ್ಪವಾಗುವುದರಿಂದ ಪ್ರಕೃತಸ್ಥಲದಲ್ಲಿ ಬರುವುದಿಲ್ಲ. ಆಗ ಪುನಃ ಇಡಾಗಮ ಬರುತ್ತದೆ. ಉಪಧಾಲೋಪ ಬಂದು ಪ್ರತ್ಯಯಕ್ಕೆ ಇಡಾಗಮ ಬಂದರೆ ಪಪ್ತ್+ಇವಸ್ ಎಂದಾಗುತ್ತದೆ. ಪಪ್ತಿವಸ್ ಶಬ್ದವು ಸಕಾರಾಂತವಾಗುತ್ತದೆ. ಬಹುವಚನ ಜಸ್ ಪರದಲ್ಲಿರುವಾಗ (ಸರ್ವನಾಮಸ್ಥಾನ) ನುಮಾಗಮ. ಬರುತ್ತದೆ. ಅತ್ವಸಂತಸ್ಯ ಸೂತ್ರದಿಂದ ಉಪಧೆಗೆ ದೀರ್ಘ ಬರುತ್ತದೆ. ನುಮಿನ ನಕಾರಕ್ಕೆ ನಶ್ಚಾಪದಾಂತಸ್ಯ ಝಲಿ ಸೂತ್ರದಿಂದ ಅನುಸ್ವಾರ ಬಂದು ವಿಭಕ್ತಿ ಸೇರಿಸಿದರೆ ಪಪ್ತಿವಾಂಸಃ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಕ್ವಸು ಎಂಬುದು ಆದ್ಯುದಾತ್ತವಾಗುತ್ತದೆ. ಪರದಲ್ಲಿರುವ ವಿಭಕ್ತಿಯ ಅನುದಾತ್ತಸ್ವರಕ್ಕೆ ಸ್ವರಿತವು ಬರುತ್ತದೆ. ಪಪ್ತಿವಾಂಸ ಶಬ್ದದಲ್ಲಿ ವಕಾರೋತ್ತರಾಕಾರ ಉದಾತ್ತವಾದುದರಿಂದ ಉಳಿದವುಗಳು ಅನುದಾತ್ತಗಳು.

ವಾಜನೀವತಿ—ವಾಜವೆಂದರೆ ಅನ್ನ. ವಾಜಃ ಅನ್ನಂ ಅಸ್ಯಾ ಅಸ್ತೀತಿ ವಾಜಿನೀ. ಇಲ್ಲಿ ಕ್ರಿಯಾ ಎಂದು ತಾತ್ಪರ್ಯ. ತದಸ್ಯಾಸ್ತಿ ಎಂಬರ್ಥದಲ್ಲಿ ಅತಃ ಇನಿಠನೌ (ಪಾ. ಸೂ. ೫-೨-೧೧೫) ಎಂಬ ಸೂತ್ರದಿಂದ ಇನಿ ಪ್ರತ್ಯಯು ಬರುತ್ತದೆ. ಇಕಾರ ಉಚ್ಚಾರಣಾರ್ಥವಾದುದರಿಂದ ಇನ್ ಉಳಿಯುತ್ತದೆ. ಪ್ರತ್ಯಯ ಪರದಲ್ಲಿರುವಾಗ ಯಸ್ಯೇತಿಚ (ಪಾ. ಸೂ. ೬-೪-೧೪೮) ಸೂತ್ರದಿಂದ ಪ್ರಕೃತಿಯ ಅಕಾರಕ್ಕೆ ಲೋಪ ಬರುತ್ತದೆ. ವಾಜಿನ್ ಎಂದು ನಾಂತವಾದ ಪದವಾದುದರಿಂದ ಸ್ತ್ರೀಲಿಂಗದಲ್ಲಿ ಋನ್ನೇಭ್ಯೋ ಙೀಪ್ (ಪಾ. ಸೂ. ೪-೧-೫) ಸೂತ್ರದಿಂದ ಙೀಪ್ ಬಂದರೆ ವಾಜಿನೀ ಎಂದಾಗುತ್ತದೆ. ತಾದೃಶೀ ಕ್ರಿಯಾ ಯಸ್ಯಾಃ ಸಾ, ಆ ರೀತಿಯಾದ ವ್ಯಾಪಾರವು ಯಾವಳಿಗಿದೆಯೋ ಅವಳು ಎಂಬರ್ಥದಲ್ಲಿ ತಿರುಗಿ ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ (ಪಾ. ಸೂ. ೫-೨-೯೪) ಸೂತ್ರದಿಂದ ಮತುಪ್ ಬರುತ್ತದೆ. ವಾಜಿನೀ ಮತ್ ಎಂದಿರುವಾಗ ಸಂಜ್ಞಾಯಾಂ (ಪಾ. ಸೂ. ೮-೨-೧೧) ಸಂಜ್ಞಾ ತೋರುವಾಗ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ ಎಂಬುದರಿಂದ ಮತುಪಿಗೆ ವಕಾರ ಬರುತ್ತದೆ. ವಾಜಿನೀವತ್ ಎಂದು ಶಬ್ದವಿರುವಾಗ ಸ್ತ್ರೀಲಿಂಗದಲ್ಲಿ ಉಗಿತಶ್ಚ ಸೂತ್ರದಿಂದ ಙೀಪ್ ಬರುತ್ತದೆ. ಆಗ ವಾಜಿನೀವತೀ ಎಂದು ಈಕಾರಾಂತ ಶಬ್ದವಾಗುತ್ತದೆ. ಸಂಬುದ್ಧಿಯಲ್ಲಿ ಅಂಬಾರ್ಥನದ್ಯೋರ್ಹ್ರಸ್ವಃ ಎಂಬುದರಿಂದ ಹ್ರಸ್ವವು ಬಂದು ಸುಲೋಪವಾದರೆ ವಾಜಿನೀವತಿ ಎಂದು ರೂಪವಾಗುತ್ತದೆ ‖ ೬ ‖



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಏಷಾಯುಕ್ತ ಪರಾವತಃ ಸೂರ್ಯಸ್ಯೋದಯನಾದಧಿ ।
ಶತಂ ರಥೇಭಿಃ ಸುಭಗೋಷಾ ಇಯಂ ವಿ ಯಾತ್ಯಭಿ ಮಾನುಷಾನ್ ॥

ಪದಪಾಠಃ

ಏಷಾ । ಅಯುಕ್ತ । ಪರಾವತಃ । ಸೂರ್ಯಸ್ಯ । ಉತ್ ಽ ಅಯನಾತ್ । ಅಧಿ ।
ಶತಂ । ರಥೇಭಿಃ । ಸು ಽ ಭಗಾ । ಉಷಾಃ । ಇಯಂ । ವಿ । ಯಾತಿ । ಅಭಿ ।
ಮಾನುಷಾನ್ ॥ ೭ ॥

ಸಾಯಣಭಾಷ್ಯಂ

ಏಷೋಷೋದೇವಿ ಶತಮಯುಕ್ತ । ಸ್ವಕೀಯಾನಾಂ ರಥಾನಾಂ ಶತಂ ಯೋಜಿತವತೀ । ಸುಭಗಾ ಸೌಭಾಗ್ಯಯುಕ್ತೇಯಮುಷಾಃ ಪರಾವತೋ ದೂರಸ್ಥಾತ್ ಸೂರ್ಯಸ್ಯೋದಯನಾದಧಿ ಸೂರ್ಯೋದಯಸ್ಥಾನಾದಧಿಕಾದ್ದ್ಯುಲೋಕಾನ್ಮಾನುಷಾನಭಿ ಮನುಷ್ಯಾನುದ್ದಿಶ್ಯ ರಥೇಭಿಃ ಶತಸಂಖ್ಯಾಕೈರ್ಯುಕ್ತೈ ರಥೈರ್ವಿ ಯಾತಿ । ವಿಶೇಷೇಣ ಗಚ್ಛತಿ ॥ ಅಯುಕ್ತ । ಲುಙಿ ಝಲೋ ಝಲಿ । ಪಾ. ೮-೨-೨೬ । ಇತಿ ಸಿಚೋ ಲೋಪಃ । ಉದಯನಾತ್ । ಉದೇತ್ಯತ್ರೇತ್ಯುದಯನಂ । ಇಣ್ ಗತೌ । ಅಧಿಕರಣೇ ಲ್ಯುಟ್ । ಕೃದುತ್ತರಪದಪ್ರಕೃತಿಸ್ವರತ್ವಂ । ಸುಭಗಾ । ಶೋಭನೋ ಭಗೋ ಯಸ್ಯಾಃ ಸಾ ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಮಾನುಷಾನ್ । ಮನೋಃ ಪುತ್ರಾಃ ಮಾನುಷಾಃ । ಮನೋರ್ಜಾತಾವಞ್ಯತೌ ಷುಕ್ ಚೇತ್ಯಞ್ ಷುಗಾಗಮಶ್ಚ । ಞ್ನಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಏಷಾ—ಈ ಉಷೋದೇವಿಯು । ಶತಂ—(ತನ್ನ ರಥಗಳಲ್ಲಿ) ನೂರನ್ನು । ಅಯುಕ್ತ—ಸಿದ್ಧಪಡಿಸಿಕೊಂಡಳು । ಸುಭಗಾ—ಮಂಗಳಕರಳಾದ । ಇಯಂ ಉಷಾಃ—ಈ ಉಷೋದೇವತೆಯು । ಪರಾವತಃ—ಬಹಳ ದೂರದೇಶವಾಗಿಯೂ । ಸೂರ್ಯಸ್ಯ ಉದಯನಾಧದಿ—ಸೂರ್ಯನ ಉದಯಸ್ಥಾನಕ್ಕಿಂತಲೂ ಎತ್ತರವಾಗಿಯೂ ಇರುವ ದ್ಯುಲೋಕದಿಂದ । ಮಾನುಷಾನ್ ಅಭಿ—ಮನುಷ್ಯರ ಅಭಿಮುಖವಾಗಿ । ರಥೇಭಿಃ—(ತನ್ನ ನೂರು ರಥಗಳೊಡನೆ। ವಿ ಯಾತಿ—ವೈಭವದಿಂದ ಬರುತ್ತಾಳೆ.

॥ ಭಾವಾರ್ಥ ॥

ಮಂಗಳಕರಳಾದ ಉಷೋದೇವಿಯು ತನ್ನ ಉದಯಕಾಲದಲ್ಲಿ ನೂರು ರಥಗಳನ್ನು ಸಿದ್ಧಪಡಿಸಿಕೊಂಡು, ಸೂರ್ಯನ ಉದಯಸ್ಥಾನಕ್ಕಿಂತಲೂ ಎತ್ತರವಾಗಿ ಬಹುದೂರದೇಶವಾದ ದ್ಯುಲೋಕದಿಂದ ಮನುಷ್ಯರ ಅಭಿಮುಖವಾಗಿ ತನ್ನ ನೂರು ರಥಗಳೊಡನೆ ವೈಭವದಿಂದ ಬರುತ್ತಾಳೆ.



CC-0. Jangamwadi Math Collection. Digitized by eGangotri

## English Translation.

This auspicious Ushas has harnessed (her chariot) from afar, above the rising of the sun; and she goes gloriously towards men with a hundred chariots.

॥ ವಿಶೇಷ ವಿಷಯಗಳು ॥

ಪರಾವತಃ ಸೂರ್ಯಸ್ಯ—ದೂರದಲ್ಲಿರುವ ಸೂರ್ಯನ, ಸೂರ್ಯನು ಬಹುದೂರದಲ್ಲಿ ಉದಯಿಸುವನು. ಅದಕ್ಕಿಂತ ದೂರದಿಂದಲೂ ಉಷೋದೇವಿಯು ಬರುವಳು ಎಂದಭಿಪ್ರಾಯವು.

ಶತಂ ರಥೇಭಿಃ—ನೂರು ಅಥವಾ ಅನೇಕ ರಥಗಳಿಂದ ಸಹಿತಳಾಗಿ, ಅನೇಕ ರಥಗಳಲ್ಲಿ ಕುಳಿತು. ಇಲ್ಲಿ ರಥಗಳೆಂದರೆ ಸೂರ್ಯನ ರಶ್ಮಿಗಳಿರಬಹುದೆಂದು ಕೆಲವರ ಅಭಿಪ್ರಾಯವಿರುವುದು.

ಸುಭಗಾ—ಸೌಭಾಗ್ಯಯುಕ್ತಾ । ಮಂಗಳಕರಳಾದ, ಸೌಭಾಗ್ಯ ಅಥವಾ ಶ್ರೇಯಸ್ಸನ್ನುಂಟುಮಾಡುವ.

ಅಭಿ ಮಾನುಷಾನ್—ಮನುಷ್ಯರ ಅಭಿಮುಖವಾಗಿ. ಸ್ವರ್ಗಲೋಕ ಅಥವಾ ಅಂತರಿಕ್ಷದಿಂದ ಹೊರಟು ಮನುಷ್ಯಲೋಕವಾದ ಭೂಮಿಗಭಿಮುಖವಾಗಿ ಬರುವಳೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ಅಯುಕ್ತ—ಯುಜಿರ್ ಯೋಗೇ. ಧಾತು ರುಧಾದಿ ಉಭಯಪದಿ ಲುಙ್ ಪ್ರಥಮಪುರುಷ ಏಕವಚನ ಪ್ರತ್ಯಯ ವಿವಕ್ಷಾ ಮಾಡಿದಾಗ ಯುಜ್+ತ ಎಂದಾಗುತ್ತದೆ. ಚ್ಲಿಲುಙಿ ಎಂದು ಸಾಮಾನ್ಯ ಪ್ರಾಪ್ತವಾದ ಚ್ಲಿಗೆ ಚ್ಲೇಃಸಿಚ್ ಸೂತ್ರದಿಂದ ಸಿಚ್ ವಿಕರಣ ಪ್ರತ್ಯಯ ಬರುತ್ತದೆ. ಯುಜ್+ಸ್+ತ ಎಂದಿರುವಾಗ ಝುಲೋಝುಲಿ (ಪಾ. ಸೂ. ೮-೨-೨೬) ಝುಲಿನ ಪರದಲ್ಲಿರುವ ಸಕಾರಕ್ಕೆ ಝುಲ್ ಪರದಲ್ಲಿರುವಾಗ ಲೋಪ ಬರುತ್ತದೆ ಎಂಬುದರಿಂದ ಇಲ್ಲಿ ಝುಲಿನ ಜಕಾರದ ಪರದಲ್ಲಿ ಸಿಚ್ ಬಂದುದರಿಂದಲೂ ಅದಕ್ಕೆ ಝುಲಿನ ತಕಾರ ಪರದಲ್ಲಿರುವುದರಿಂದಲೂ ಲೋಪ ಬರುತ್ತದೆ. ಯುಜ್+ತ ಎಂದಿರುವಾಗ ಧಾತುವಿಗೆ ಅಡಾಗಮ ಬರುತ್ತದೆ. ಜಕಾರಕ್ಕೆ ಚೋಃಕುಃ ಸೂತ್ರದಿಂದ ಕುತ್ವ ಬಂದರೆ ಗಕಾರ ಬರುತ್ತದೆ. ಗಕಾರಕ್ಕೆ ಚರ್ತ್ವದಿಂದ ಕಕಾರ ಬರುತ್ತದೆ. ಆಗ ಅಯುಕ್ತ ಎಂದು ರೂಪವಾಗುತ್ತದೆ.

ಉದಯನಾತ್—ಉದೇಷ್ಯತಿ ಅತ್ರ ಇತಿ ಉದಯನಮ್ ಇಲ್ಲಿ ಉದಯವನ್ನು ಹೊಂದುತ್ತಾನೆ ಎಂಬ ರ್ಥದಲ್ಲಿ ಉದಯನಂ ಎಂತಾಗುತ್ತದೆ. ಇಣ್ ಗತೌ ಧಾತು. ಇದಕ್ಕೆ ಲ್ಯುಟ್ ಚ (ಪಾ. ಸೂ. ೩-೩-೧೧೫) ಸೂತ್ರದಿಂದ ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬರುತ್ತದೆ. ಲ್ಯುಟನಲ್ಲಿ ಯು ಎಂಬುದು ಉಳಿಯುತ್ತದೆ. ಯುವೋರನಾಕೌ (ಪಾ. ಸೂ. ೭-೧-೧) ಸೂತ್ರದಿಂದ ಯು ಎಂಬುದಕ್ಕೆ ಅನ ಎಂಬ ಆದೇಶ ಬರುತ್ತದೆ. ಧಾತು ವಿನ ಇಕಾರಕ್ಕೆ ಸಾರ್ವಧಾತುಕಾರ್ಧಧಾತುಕಯೋಃ ಸೂತ್ರದಿಂದ ಗುಣ ಬರುತ್ತದೆ. ಗುಣಕ್ಕೆ ಅಯಾದೇಶ ಬಂದರೆ ಅಯನ ಎಂದಾಗುತ್ತದೆ. ಉತ್ ಎಂಬುದರಿಂದ ಸಮಾಸವಾದಾಗ ಕೃದುತ್ತರ ಪ್ರಕೃತಿಸ್ವರ ಬರುತ್ತದೆ. ಲ್ಯುಟನಲ್ಲಿ ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಸೂತ್ರದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಆಗ ಧಾತುವಿಗೆ ಬಂದ ಅಯ್ ಎಂಬುದು ಉದಾತ್ತವಾಗುತ್ತದೆ. ಗತಿಕಾರಕೋಪಪದಾತ್ ಕೃತ್ (ಪಾ. ಸೂ. ೬-೨-೧೩೯) ಸೂತ್ರದಿಂದ ಗತಿಯ ಪರದಲ್ಲಿರುವ ಕೃದಂತವಾದುದರಿಂದ ಪ್ರಕೃತಿಯ ಸ್ವರವೇ ಉಳಿಯುತ್ತದೆ. ಆಗ ಉದಯನಾತ್ ಎಂಬಲ್ಲಿ ದಕಾರೋತ್ತರಾಕಾರ ಮಾತ್ರ ಉದಾತ್ತವಾಗುತ್ತದೆ.



CC-0. Jangamwadi Math Collection. Digitized by eGangotri

ಸುಭಗಾ—ಶೋಭನಂ ಭಗೋ ಯಸ್ಯಾಃ ಸಾ ಸುಭಗಾ । ಮಹತ್ತಾದ ಐಶ್ವರ್ಯಾದಿಗಳುಳ್ಳವಳು ಎಂದರ್ಥ. ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಆದ್ಯುದಾತ್ತವಾದ ಎರಡು ಅಜುಳ್ಳ ಪದವು ಬಹುವ್ರೀಹಿಯಲ್ಲಿ ಸುವಿನ ಉತ್ತರದಲ್ಲಿ ಬಂದರೂ ಆದ್ಯುದಾತ್ತವೇ ಆಗುತ್ತದೆ. ಎಂಬುದರಿಂದ ಇಲ್ಲಿ ಸುಪರದಲ್ಲಿರುವ ಆದ್ಯುದಾತ್ತವಾದ ಭಗ ಶಬ್ದವು ಸಮಾಸದಲ್ಲಿಯೂ ಆದ್ಯುದಾತ್ತವಾಗಿರುತ್ತದೆ. ಆಗ ಸುಭಗಾ ಶಬ್ದವು ಮಧ್ಯೋದಾತ್ತ ಶಬ್ದವಾಗುತ್ತದೆ.

ಮಾನುಷಾತ್—ಮನೋಃ ಪುತ್ರಾಃ ಮಾನುಷಾಃ ಮನುವಿನ ಮಕ್ಕಳು ಎಂದರ್ಥ. ಮನೋರ್ಜಾ-ತಾವಞ್ಯತೌ ಷುಕ್‌ಚ (ಪಾ. ಸೂ. ೪-೧-೧೬೧) ಮನು ಶಬ್ದಕ್ಕೆ ಜಾತಿ ಎಂಬರ್ಥದಲ್ಲಿ (ಸಮುದಾಯ) ಅಞ್ ಮತ್ತು ಯತ್ ಪ್ರತ್ಯಯಗಳು ಬರುತ್ತವೆ. ಪ್ರಕೃತಿಗೆ ಷುಕಾಗಮವು ಬರುತ್ತದೆ. ಷುಕ್ ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಇಲ್ಲಿ ಅಞ್ ಪ್ರತ್ಯಯವು ಬಂದಿದೆ. ಮನು+ಷ್+ಅ ಎಂದಿರುವಾಗ ಪ್ರತ್ಯಯವು ಞಿತ್ತಾದುದರಿಂದ ತದ್ಧಿತೇಷ್ವಚಾಮಾದೇಃ (ಪಾ. ಸೂ. ೭-೨-೧೧೭) ಸೂತ್ರದಿಂದ ಪ್ರಕೃತಿಯ ಆದ್ಯ ಚಿಗೆ ವೃದ್ಧಿ ಬರುತ್ತದೆ. ಮಾನುಷ ಎಂದು ರೂಪವಾಗುತ್ತದೆ. ಪ್ರತ್ಯಯವು ಞಿತ್ತಾದುದರಿಂದ ಞ್ನಿತ್ಯಾ-ದಿರ್ನಿತ್ಯಂ (ಪಾ. ಸೂ. ೬-೧-೧೯೭) ಸೂತ್ರದಿಂದ ಆದ್ಯುದಾತ್ತ ಸ್ವರ ಬರುತ್ತದೆ. ದ್ವಿತೀಯಾ ಬಹುವಚನವಾದ ಮಾನುಷಾನ್ ಎಂಬ ಶಬ್ದವು ಆದ್ಯುದಾತ್ತವಾಗುತ್ತದೆ. ಉದಾತ್ತದ ಪರದಲ್ಲಿರುವ ನಕಾರೋತ್ತರದಲ್ಲಿರುವ ಉಕಾರವು ಅನುದಾತ್ತವು ಸ್ವರಿತವಾಗುತ್ತದೆ. ಸ್ವರಿತದ ಪರದಲ್ಲಿರುವ ಷಕಾರೋತ್ತರದಲ್ಲಿರುವ ಅನುದಾತ್ತಾಕಾರವು ಪ್ರಚಯವಾಗುತ್ತದೆ ॥ ೭ ॥

॥ ಸಂಹಿತಾಪಾಠಃ ॥

ವಿಶ್ವಮಸ್ಯಾ ನಾನಾಮ ಚಕ್ಷಸೇ ಜಗಜ್ಜ್ಯೋತಿಷ್ಕೃಣೋತಿ ಸೂನರೀ ।
ಅಪ ದ್ವೇಷೋ ಮಘೋನೀ ದುಹಿತಾ ದಿವ ಉಷಾ ಉಚ್ಛದಪಸ್ರಿಧಃ ॥೮॥

॥ ಪದಪಾಠಃ ॥

ವಿಶ್ವಂ । ಅಸ್ಯಾಃ । ನನಾಮ । ಚಕ್ಷಸೇ । ಜಗತ್ । ಜ್ಯೋತಿಃ । ಕೃಣೋತಿ । ಸೂನರೀ ।
ಅಪ । ದ್ವೇಷಃ । ಮಘೋನೀ । ದುಹಿತಾ । ದಿವಃ । ಉಷಾಃ । ಉಚ್ಛತ್ । ಅಪ । ಸ್ರಿಧಃ ॥ ೮ ॥

ಸಾಯಣಭಾಷ್ಯಂ

ವಿಶ್ವಂ ಸರ್ವಂ ಜಗತ್ ಜಂಗಮಂ ಪ್ರಾಣಿಜಾತಮಸ್ಯಾ ಉಷಸಶ್ಚಕ್ಷಸೇ ಪ್ರಕಾಶಾಯ ನನಾಮ । ಪ್ರಹ್ವೀಭವತಿ । ರಾತ್ರೌ ತಮಸಿ ನಿಮಗ್ನಾಃ ಸರ್ವೇ ಜನಾಸ್ತನ್ನಿವಾರಯಿತ್ರೀಮುಷಸಮುಪಲಭ್ಯ ನಮ-


CC-0. Jangamwadi Math Collection. Digitized by eGangotri

ಸ್ಕುರ್ವಂತೀತ್ಯರ್ಥಃ । ಕುತಃ । ಯಸ್ಮಾದೇಷಾ ಸೂನರೀ ಸುಷ್ಠು ನೇತ್ರೀ ಅಭಿಮತಫಲಸ್ಯ ಪ್ರಾಪಯಿತ್ರ್ಯುಷಾ ಜ್ಯೋತಿಷ್ಕೃಣೋತಿ ಸರ್ವಂ ಪ್ರಕಾಶಯತಿ । ಕಿಂಚ ಮಘೋನೀ ಮಘವತೀ ಧನವತೀ ದಿವೋ ದುಹಿತಾ ।ದ್ಯುಲೋಕಸಕಾಶಾದುತ್ಪನ್ನೋಷಾ ದ್ವೇಷೋ ದ್ವೇಷ್ಟ್ರಾನಪೋಚ್ಛತ್ । ಅಪವರ್ಜಯತಿ । ತಥಾ ಸ್ರಿಧಃ ಶೋಷಯಿತ್ರ್ಯಾನಪೋಚ್ಛತ್ । ಅಪವರ್ಜಯತಿ । ತಸ್ಮಾದಿಷ್ಟಪ್ರಾಪ್ತ್ಯನಿಷ್ಟಪರಿಹಾರಹೇತುಭೂತಾಮುಷೋದೇವತಾಂ ವಿಶ್ವಂ ಜಗನ್ನಮಸ್ಕರೋತೀತ್ಯರ್ಥಃ । ಅಸ್ಯಾಃ । ಇದಮೋಽನ್ವಾದೇಶ ಇತ್ಯಶಾದೇಶೋಽನುದಾತ್ತಃ । ವಿಭಕ್ತಿಶ್ಚ ಸುಪ್ತ್ವಾದನುದಾತ್ತೇತಿ ಸರ್ವಾನುದಾತ್ತತ್ವಂ । ನನಾಮ । ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತ್ಯಭ್ಯಾಸಸ್ಯ ದೀರ್ಘತ್ವಂ । ತುಜಾದಿತ್ವೇ ಹಿ ತೂತುಜಾನ ಇತ್ಯಾದಾವಿವ ಪದಕಾಲೇಽಪಿ ದೀರ್ಘಃ ಶ್ರೂಯತೇ । ಜ್ಯೋತಿಃ । ಇಣಃ ಷ ಇತ್ಯನುವೃತ್ತಾವಿಸುಸೋಃ ಸಾಮರ್ಥ್ಯೇ । ಪಾ. ೮-೩-೪೪ । ಇತಿ ವಿಸರ್ಜನೀಯಸ್ಯ ಷತ್ವಂ । ದ್ವೇಷಃ । ದ್ವಿಷ ಅಪ್ರೀತೌ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಲಘೂಪಧಗುಣಃ । ಮಘೋನೀ । ಮಘಂ ವನತಿ ಸಂಭಜತ ಇತಿ ಮಘೋನೀ । ಶ್ವನ್ನುಕ್ಷನ್ನಿತ್ಯಾದಿನಾ ಮಘವಚ್ಛಬ್ದಃ ಕನಿನ್ಪ್ರತ್ಯಯಾಂತೋ ನಿಪಾತಿತಃ । ಸ್ತ್ರಿಯಾಮೃನ್ನೇಭ್ಯೋ ಙೀಬಿತಿ ಙೀಪ್ । ಭಸಂಜ್ಞಾಯಾಂ ಶ್ವಯುವಮಘೋನಾಮತದ್ಧಿತ ಇತಿ ಸಂಪ್ರಸಾರಣಂ । ಉಚ್ಛತ್ । ಉಛೀ ವಿವಾಸೇ । ವಿವಾಸೋ ವರ್ಜನಂ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲಙ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಾಗಮಾಭಾವಃ । ಸ್ರಿಧಃ । ಸ್ರಿಧು ಶೋಷಣೇ । ಕ್ವಿಪ್ಚೇತಿ ಕ್ವಿಪ್ ॥

|| ಪ್ರತಿಪದಾರ್ಥ ||

ವಿಶ್ವಂ ಜಗತ್—ಸಕಲ ಜಗತ್ತೂ (ಪ್ರಾಣಿ ಸಮೂಹವೂ) । ಅಸ್ಯಾಃ—ಈ ಉಷೋದೇವಿಯ । ಚಕ್ಷಸೇ—ಪ್ರಕಾಶಕ್ಕಾಗಿ । ನನಾಮ—ನಮಸ್ಕರಿಸುತ್ತದೆ । ಸೂನರೀ—(ಅಭಿಮತವಾದ ಫಲವನ್ನು) ಸಂಪಾದಿಸಿ ಕೊಡತಕ್ಕ ಉಷೋದೇವಿಯು । ಜ್ಯೋತಿಷ್ಕೃಣೋತಿ—(ಎಲ್ಲವನ್ನೂ) ಬೆಳಗಿಸುತ್ತಾಳೆ । ಮಘೋನೀ—ಧನವಂತಳೂ । ದಿವಃ ದುಹಿತಾ—ದ್ಯುಲೋಕದಿಂದ ಉತ್ಪನ್ನಳಾದವಳೂ ಆದ । ಉಷಾಃ—ಉಷೋದೇವಿಯು । ದ್ವೇಷಃ—ಕೇಡು ಬಯಸುವವರನ್ನು । ಅಪ ಉಚ್ಛತ್—ಓಡಿಸುತ್ತಾಳೆ । ಸ್ರಿಧಃ—(ನಮ್ಮ ಧನವನ್ನೂ ಬಲವನ್ನೂ) ಹೀರುವ ಶತ್ರುಗಳನ್ನೂ । ಅಪ (ಉಚ್ಛತ್)—ಚದುರಿಸುತ್ತಾಳೆ.

॥ ಭಾವಾರ್ಥ ॥

ರಾತ್ರಿಯೆಲ್ಲ ಕಗ್ಗತ್ತಲೆಯನ್ನನುಭವಿಸಿದ ಸಕಲ ಜಗತ್ತೂ ಉದಯಕಾಲದಲ್ಲಿ ಆ ತಮಸ್ಸನ್ನು ನಾಶಮಾಡಿ ಪ್ರಕಾಶವನ್ನು ಕೊಡುವುದಕ್ಕಾಗಿ ಉಷೋದೇವಿಗೆ ನಮಸ್ಕರಿಸಿ ಆರಾಧಿಸುತ್ತದೆ. ಸಕಲರ ಇಷ್ಟಾರ್ಥವನ್ನೂ ನೆರವೇರಿಸತಕ್ಕ ಈ ಉಷೋದೇವಿಯು ಜಗತ್ತಿನಲ್ಲಿ ಎಲ್ಲವನ್ನೂ ಬೆಳಗಿಸುತ್ತಾಳೆ. ಈ ದೇವಿಯು ನಮಗೆ ಕೇಡುಬಯಸುವ ಶತ್ರುಗಳನ್ನೂ ನಮ್ಮ ಸಕಲವನ್ನೂ ಹಿಂಡಿ ಹೀರುವ ಶತ್ರುಗಳನ್ನೂ ಚದುರಿಸಿ ಓಡಿಸುತ್ತಾಳೆ.

## English Translation.

All creation bows to her manifestation ; bringer of good, she lights up the world ; the rich daughter of heaven drives away the haters and disperses the absorbers (of moisture ?)





CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ನನಾಮ—ನಮಸ್ಕರಿಸುವುದು. ಛಂದಸ್ಸಿನ ಅನುಕೂಲಕ್ಕಾಗಿ ಈ ಶಬ್ದದ ಪ್ರಥಮಾಕ್ಷರವು ದೀರ್ಘವಾಗಿರುವುದು.

ಜ್ಯೋತಿಷ್ಕೃಣೋತಿ—ಸರ್ವಂ ಪ್ರಕಾಶಯತಿ । ಸಮಸ್ತ ಜಗತ್ತನ್ನು ಬೆಳಗುತ್ತಾಳೆ. ರಾತ್ರಿಯ ಕತ್ತಲೆಯನ್ನು ಹೋಗಲಾಡಿಸಿ ಬೆಳಕನುಂಟುಮಾಡಿ ಸಮಸ್ತ ಪ್ರಾಣಿಗಳಿಗೂ ಆನಂದವನ್ನುಂಟುಮಾಡುತ್ತಾಳೆ. ಇಂತಹ ಉಪಕಾರವನ್ನು ಮಾಡುವ ಈ ಉಷೋದೇವಿಯನ್ನು ಸರ್ವರೂ ಕೃತಜ್ಞತೆಯಿಂದ ನಮಸ್ಕರಿಸುತ್ತಾರೆಂದಭಿಪ್ರಾಯವು.

ಸೂನರೀ—ಸೂನರೀ ಎಂಬ ಶಬ್ದಕ್ಕೆ ಉಷೋದೇವತೆಯೆಂಬ ಅರ್ಥವಿದ್ದರೂ ಈ ಋಕ್ಕಿನಲ್ಲಿ ಉಷಾಃ ಎಂಬ ಪ್ರತ್ಯೇಕ ಶಬ್ದವಿರುವುದರಿಂದ ಸೂನರೀ ಶಬ್ದಕ್ಕೆ ಭಾಷ್ಯಕಾರರು ಸುಷ್ಠು ನೇತ್ರೀ, ಅಭಿಮತ ಫಲಸ್ಯ ಪ್ರಾಪಯಿತ್ರೀ ಎಂದು ಅವಯವಾರ್ಥವನ್ನು ಕಲ್ಪಿಸಿರುವರು.

ದ್ವೇಷಃ—ದ್ವೇಷಿಸುವವರನ್ನು, ಶತ್ರುಗಳನ್ನು.

ಮಘೋನೀ—ಮಘವೆಂದರೆ ಧನ, ಧನ ಅಥವಾ ಐಶ್ವರ್ಯಯುಕ್ತಳು ಅಥವಾ ಧನವನ್ನು ಕೊಡುವವಳು.

ದುಹಿತಾ ದಿವಃ—ಸ್ವರ್ಗದ ಪುತ್ರಿಯು. ಸ್ವರ್ಗಲೋಕದಲ್ಲಿರುವ (ಅಂತರಿಕ್ಷದಲ್ಲಿರುವ) ಸೂರ್ಯನ ಬಳಿಯಿಂದ ಬರುವವಳಾದ್ದರಿಂದ ಸ್ವರ್ಗದ ಪುತ್ರಿಯೆಂದು ಕರೆಯುವರು.

ಸ್ರಿಧಃ—ಸ್ರಿಧು ಶೋಷಣೇ । ಒಣಗಿಸುವವರು, ಹೀರುವವರು. ಏನನ್ನು ಹೀರುವರು ಎಂಬುದು ಸ್ಪಷ್ಟವಾಗಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

ಅಸ್ಯಾಃ—ಇದಮ್ ಶಬ್ದದ ಮೇಲೆ ಷಷ್ಠ್ಯೇಕವಚನ ವಿವಕ್ಷಾ ಮಾಡಿದಾಗ ಇದಮ್+ಙಸ್ ಎಂದಿರುತ್ತದೆ. ಅನ್ವಾದೇಶದಲ್ಲಿ ಅಂದರೆ ಹಿಂದೆ ಪ್ರಸಕ್ತವಾದುದಕ್ಕೇ ಕಾರ್ಯಾಂತರಕ್ಕೋಸ್ಕರ ಪುನಃ ಅದನ್ನೇ ತೆಗೆದುಕೊಳ್ಳುವಲ್ಲಿ, ಇದಮೋನ್ವಾದೇಶೇಽಶನುದಾತ್ತಸ್ತೃತೀಯಾದೌ (ಪಾ. ಸೂ. ೨-೪-೩೨) ಅನ್ವಾದೇಶದಲ್ಲಿ ಇದಮ್ ಶಬ್ದಕ್ಕೆ ತೃತೀಯಾದಿ ವಿಭಕ್ತಿ ಪರದಲ್ಲಿರುವಾಗ ಅನುದಾತ್ತವಾದ ಅಶ್ ಎಂಬ ಆದೇಶವು ಬರುತ್ತದೆ. ಎಂಬುದರಿಂದ ಇಲ್ಲಿ ಅಶಾದೇಶ ಬರುತ್ತದೆ. ಶಿತ್ತಾದುದರಿಂದ ಇದು ಸರ್ವಾದೇಶವಾಗಿ ಬಂದರೆ ಅ+ಅಸ್ ಎಂತಾಗುತ್ತದೆ. ಸರ್ವನಾಮವಾದುದರಿಂದ ಸ್ತ್ರೀಲಿಂಗದಲ್ಲಿ ಸ್ಯಾಡಾಗಮವೂ ಪ್ರಕೃತಿಗೆ ಹ್ರಸ್ವವೂ ಬಂದಾಗ, ಪ್ರತ್ಯಯಕ್ಕೆ ರುತ್ವವಿಸರ್ಗಗಳು ಮಾಡಿದಾಗ ಅಸ್ಯಾಃ ಎಂದು ರೂಪವಾಗುತ್ತದೆ. ಇಲ್ಲಿ ಅನುದಾತ್ತೌ ಸುಪ್ಪಿತೌ ಎಂಬುದರಿಂದ ವಿಭಕ್ತಿಯು ಅನುದಾತ್ತವಾಗುತ್ತದೆ. ಪ್ರಕೃತ್ಯಾದೇಶವೂ ಅನುದಾತ್ತವಾಗಿಯೇ ಬರುವುದೆಂಬುದರಿಂದ ಅನುದಾತ್ತವಾಯಿತು. ಹೀಗೆ ಅಸ್ಯಾಃ ಎಂಬ ಸಂಪೂರ್ಣರೂಪವು ಅನುದಾತ್ತ ಸ್ವರವುಳ್ಳದ್ದೇ ಆಗುತ್ತದೆ.

ನನಾಮ—ಣಮು ಪ್ರಹ್ವತ್ವೇ ಶಬ್ದೇ ಚ ಧಾತು ಭ್ವಾದಿ ಲಿಟ್ ಪ್ರಥಮಪುರುಷೈಕವಚನದ ರೂಪ. ಸಂಹಿತಾದಲ್ಲಿ ಅನ್ಯೇಷಾಮಪಿ ದೃಶ್ಯತೆ (೬-೩-೧೩೭) ಸೂತ್ರದಿಂದ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಪೂರ್ವದಲ್ಲಿ ವಿಶೇಷ ಶಬ್ದಗಳಿಗೆ ದೀರ್ಘ ವಿಧಾನ ಮಾಡಿರುತ್ತಾರೆ. ಅಲ್ಲಿ ಹೇಳದ ನಿಮಿತ್ತವಿಲ್ಲದಿದ್ದರೂ ಸಂಹಿತಾದಲ್ಲಿ ಕೆಲವು ಕಡೆ ದೀರ್ಘ ಬರುತ್ತದೆ ಎಂದು ಆ ಸೂತ್ರದ ಅರ್ಥ. ಇಲ್ಲಿ ಒಂದು ಆಶಂಕೆ ಬರುತ್ತದೆ. ಅಭ್ಯಾಸದ ದೀರ್ಘಕ್ಕೋಸ್ಕರ ಇದನ್ನು ತುಜಾದಿಯಲ್ಲಿ ಪಾಠಮಾಡಬಹುದಷ್ಟೆ. ತುಜಾದಿಗಳಿಗೆ ತುಜಾದೀನಾಂ ದೀರ್ಘೋಭ್ಯಾಸಸ್ಯ ಸೂತ್ರದಿಂದ ಅಭ್ಯಾಸದೀರ್ಘ ಮಾಡಿರುತ್ತಾರೆ. ಆದುದರಿಂದ ಸುಲಭದಿಂದಲೇ ದೀರ್ಘವು ಸಿದ್ಧವಾ



CC-0. Jangamwadi Math Collection. Digitized by eGangotri

ಗುತ್ತದೆ. ಅದಕ್ಕೋಸ್ಕರ ಗೌಣಪಕ್ಷವನ್ನು ಆಶ್ರಯಿಸಬೇಕಾಗಿಲ್ಲವೆಂದು ಪೂರ್ವಪಕ್ಷವು ಬರುತ್ತದೆ. ಆದರೆ ತುಜಾದಿಯಲ್ಲಿ ಈ ಧಾತುವನ್ನು ಸೇರಿಸಿ ಅಭ್ಯಾಸಕ್ಕೆ ದೀರ್ಘವಿಧಾನ ಮಾಡುವುದಾದರೆ ಅದು ನಿತ್ಯವಾದುದರಿಂದ ಪದಕಾಲದಲ್ಲಿಯೂ ದೀರ್ಘವು ಶ್ರವಣವಾಗಬೇಕಾಗುತ್ತದೆ. ಆದರೆ ಇಲ್ಲಿ ಕೇವಲ ಸಂಹಿತಾದಲ್ಲಿ ಮಾತ್ರ ದೀರ್ಘ ಶ್ರುತವಾಗಿದೆ. ಆದುದರಿಂದ ಹಿಂದೆ ಹೇಳಿದಂತೆಯೇ ಅನ್ಯೇಷಾಂ—ಸೂತ್ರದಿಂದಲೇ ಸಂಹಿತಾದಲ್ಲಿ ಮಾತ್ರ ದೀರ್ಘವನ್ನು ಹೇಳಬೇಕು.

ಜ್ಯೋತಿಃ—ಜ್ಯೋತಿಸ್+ಕೃಣೋತಿ ಎಂದಿರುವಾಗ ಸಕಾರಕ್ಕೆ ರುತ್ವವಿಸರ್ಗಗಳು ಬರುತ್ತವೆ. ಆಗ, ಇಸುಸೋಃ ಸಾಮರ್ಥ್ಯೇ (ಪಾ. ಸೂ. ೮-೩-೪೪) ಇಸ್, ಉಸ್ ಇವುಗಳ ವಿಸರ್ಗಕ್ಕೆ ಕವರ್ಗ ಪವರ್ಗ ಪರದಲ್ಲಿ ರುವಾಗ ವಿಕಲ್ಪವಾಗಿ ಷಕಾರ ಬರುತ್ತದೆ. ಇಣಃಷಃ ಸೂತ್ರದಿಂದ ಷಃ ಎಂಬುದು ಅನುವೃತ್ತವಾಗುತ್ತದೆ. ಎಂಬುದರಿಂದ ಇಲ್ಲಿ ವಿಸರ್ಗಕ್ಕೆ ಷತ್ವವು ಬರುತ್ತದೆ. ಸಾಮರ್ಥ್ಯವು ಸಂಸ್ಕೃತದಲ್ಲಿ ಎರಡು ವಿಧವಾಗಿದೆ. ಇಲ್ಲಿ ವ್ಯಪೇಕ್ಷಾ ಲಕ್ಷಣ ಸಾಮರ್ಥ್ಯವನ್ನು ಸ್ವೀಕರಿಸಬೇಕು ಪದಗಳಿಗೆ ಆಕಾಂಕ್ಷಾಯೋಗ್ಯತಾ ಸನ್ನಿಧಿಗಳಿಂದ ಪರ ಸ್ಪರಾನ್ವಯ ಬರುವುದೇ ವ್ಯಪೇಕ್ಷಾಲಕ್ಷಣ ಸಾಮರ್ಥ್ಯವಾಗುತ್ತದೆ. ಇಲ್ಲಿ ಜ್ಯೋತಿಸ್ಸಿಗೂ ಧಾತುವಿಗೂ ಸಂಬಂಧ ವಿರುವುದರಿಂದ ಆ ಸಾಮರ್ಥ್ಯವು ತೋರುತ್ತದೆ. ಆದುದರಿಂದ ವಿಸರ್ಗಕ್ಕೆ ಷಕಾರ ಬಂದರೆ ಜ್ಯೋತಿಷ್ಕೃಣೋತಿ ಎಂಬುದಾಗಿ ರೂಪವಾಗುತ್ತದೆ.

ದ್ವೇಷಃ—ದ್ವಿಷ ಅಪ್ರೀತೌ. ಧಾತು ಅದಾದಿ ಅನ್ಯೇಭ್ಯೋಽಪಿ ದೃಶ್ಯಂತೆ (ಪಾ. ಸೂ. ೩-೩-೭೫) ನಿಮಿತ್ತವಿಲ್ಲದಿದ್ದರೂ ಧಾತುಗಳ ಮೇಲೆ ವಿಚ್ ಪ್ರತ್ಯಯು ಬರುತ್ತದೆ ಎಂಬುದರಿಂದ ವಿಚ್ ಪ್ರತ್ಯಯು ಬರು ತ್ತದೆ ವಿಚಿನಲ್ಲಿ ಚಕಾರ ಇತ್ತಾಗುತ್ತದೆ. ಇಕಾರ ಉಚ್ಚಾರಣಾರ್ಥವಾದುದರಿಂದ ಹೋಗುತ್ತದೆ. ವಕಾರವು ವೇರಪೃಕ್ತಸ್ಯ ಸೂತ್ರದಿಂದ ಲೋಪವಾಗುತ್ತದೆ. ಹೀಗೆ ಸರ್ವಲೋಪವಾಗುವುದರಿಂದ ಧಾತುಮಾತ್ರ ಉಳಿಯುತ್ತದೆ. ಪುಗಂತ ಲಘೂಪಧಸ್ಯಚೆ ಸೂತ್ರದಿಂದ ಧಾತುವಿನ ಇಕಾರಕ್ಕೆ ಗುಣಬಂದರೆ ದ್ವೇಷ್ ಎಂತಾ ಗುತ್ತದೆ. ಇದಕ್ಕೆ ದ್ವಿತೀಯಾ ಬಹುವಚನ ಶಸ್ ಪ್ರತ್ಯಯ ಸೇರಿಸಿದಾಗ ದ್ವೇಷಃ ಎಂಬುದಾಗಿ ರೂಪ ವಾಗುತ್ತದೆ.

ಮಘೋನೀ—ಮಘಂ ವನತಿ ಸಂಭಜತೇ ಇತಿ ಮಘೋನೀ ಐಶ್ವರ್ಯವನ್ನುಹೊಂದುವುದು ಎಂಬರ್ಥ ದಲ್ಲಿ ರೂಪವಾಗುತ್ತದೆ. ಶ್ವನ್ನುಕ್ಷನ್ (ಉ. ಸೂ. ೧-೧೫೭) ಸೂತ್ರದಿಂದ ಮಘವನ್ ಶಬ್ದವು ಕನಿನ್ ಪ್ರತ್ಯ ಯಾಂತವಾಗಿ ನಿಪಾತಿತವಾಗಿದೆ. ಮಹ ಪೂಜಾಯಾಂ ಧಾತು. ಇದಕ್ಕೆ ಕನಿನ್ ಪ್ರತ್ಯಯ ಪರದಲ್ಲಿರುವಾಗ ಅವುಕಾಗಮವೂ ಹಕಾರಕ್ಕೆ ಘಕಾರವೂ ಬರುತ್ತದೆ. ಮಘ್+ಅವ್+ಅನ್=ಮಘವನ್ ಎಂಬುದಾಗಿ ರೂಪ ವಾಗುತ್ತದೆ. ಇದಕ್ಕೆ ಸ್ತ್ರೀಲಿಂಗದಲ್ಲಿ ಋನ್ನೇಭ್ಯೋ ಜೀಪ್ (ಪಾ. ಸೂ. ೪-೧-೫) ಸೂತ್ರದಿಂದ ನಾಂತವಾದುದ ರಿಂದ ಜೀಪ್ ಬರುತ್ತದೆ. ಮಘವನ್+ಈ ಎಂದಿರುವಾಗ ಅಜಾದಿ ಪ್ರತ್ಯಯ ಪರದಲ್ಲಿರುವುದರಿಂದ ಭಸಂಜ್ಞಾ ಇರುತ್ತದೆ. ಶ್ವಯುವ ಮಘೋನಾಮತದ್ಧಿತೆ (ಪಾ. ಸೂ. ೬-೪-೧೩೩) ಇವುಗಳಿಗೆ ತದ್ಧಿತಭಿನ್ನ ಪ್ರತ್ಯಯ ಪರದಲ್ಲಿರುವಾಗ ಸಂಪ್ರಸಾರಣ ಬರುತ್ತದೆ, ಎಂಬುದರಿಂದ ಇಲ್ಲಿ ಈ ಪರದಲ್ಲಿರುವಾಗ ವಕಾರಕ್ಕೆ ಉಕಾರರೂಪ ವಾದ ಸಂಪ್ರಸಾರಣ ಬಂದರೆ ಸಂಪ್ರಸಾರಣದ ಪರದಲ್ಲಿರುವ ಅಚಿಗೆ ಪೂರ್ವರೂಪಬಂದರೆ ಮಘು+ಉನ್+ಈ ಎಂತಾಗುತ್ತದೆ. ಗುಣಬಂದರೆ ಮಘೋನೀ ಎಂಬುದಾಗಿ ರೂಪವಾಗುತ್ತದೆ.

ಉಚ್ಛೃತ್—ಉಛೀ ವಿವಾಸೆ ಧಾತು. ತುದಾದಿ. ಛಂದಸಿ ಲುಙ್‌ಲಙ್‌ಲಿಟಃ (ಪಾ. ಸೂ. ೩-೪-೬) ಸೂತ್ರದಿಂದ ಛಂದಸ್ಸಿನಲ್ಲಿ ವರ್ತಮಾನಾರ್ಥದಲ್ಲಿ ಲಙ್ ಬರುತ್ತದೆ. ತುದಾದಿಗಳಿಗೆ ಶ ವಿಕರಣಪ್ರತ್ಯಯ



CC-0. Jangamwadi Math Collection. Digitized by eGangotri

ಬರುತ್ತದೆ. ಉಚ್ಛ್+ಅ+ತಿ ಎಂದಿರುವಾಗ ಇತಶ್ಚ ಸೂತ್ರದಿಂದ ಲಙಿನ ಇಕಾರಕ್ಕೆ ಲೋಪ ಬರುತ್ತದೆ. ಬಹುಲಂ ಛಂದಸ್ಯಮಾಙ್ಯೋಗೇಽಪಿ (ಪಾ. ಸೂ. ೬-೪-೭೫) ಛಂದಸ್ಸಿನಲ್ಲಿ ಮಾಙ್ಯೋಗವಿಲ್ಲದಿದ್ದರೂ ಅಟ್ ಆಟ್‌ಗಳು ಧಾತುವಿಗೆ ಬರುವುದಿಲ್ಲ ಎಂಬುದರಿಂದ ಇಲ್ಲಿ ಲಙ್ ಪರದಲ್ಲಿರುವಾಗ ಬರಬೇಕಾದ ಅಡಾಗಮವು ಬರುವುದಿಲ್ಲ. ಅಡಾಗಮು ಬಾರದಿರುವಾಗ ಉಚ್ಛತ್ ಎಂದು ರೂಪವಾಗುತ್ತದೆ.

ಸ್ರಿಧಃ—ಸ್ರಿಧು ಶೋಷಣೆ ಧಾತು. ಕ್ವಿಪ್ ಚ (ಪಾ. ಸೂ. ೩-೨-೭೬) ಸಾಮಾನ್ಯವಾಗಿ ವಿಜಾದಿ ಗಳಂತೆ ಧಾತುಗಳ ಮೇಲೆ ಈ ಪ್ರತ್ಯಯ ಬರುತ್ತದೆ. ಕ್ವಿಪ್ ಪ್ರತ್ಯಯದಲ್ಲಿ ವಿಚಿನಲ್ಲಿ ಹೇಳಿದಂತೆ ಸರ್ವವೂ ಲೋಪವಾಗುತ್ತದೆ. ಸ್ರಿಧ್ ಎಂಬುದು ಕೃದಂತವಾದುದರಿಂದ ಪ್ರಾತಿಪದಿಕವಾಗುತ್ತದೆ. ದ್ವಿತೀಯಾಬಹು ವಚನ ಶಸ್ ಪ್ರತ್ಯಯವನ್ನು ಸೇರಿಸಿದಾಗ ಸ್ರಿಧಃ ಎಂಬುದಾಗಿ ರೂಪವಾಗುತ್ತದೆ. ॥ ೮ ॥

ಸಂಹಿತಾಪಾಠಃ

ಉಷ ಆ ಭಾಹಿ ಭಾನುನಾ ಚಂದ್ರೇಣ ದುಹಿತರ್ದಿವಃ ।
ಆವಹಂತೀ ಭೂರ್ಯಸ್ಮಭ್ಯಂ ಸೌಭಗಂ ವ್ಯುಚ್ಛಂತೀ ದಿವಿಷ್ಟಿಷು ॥೯॥

ಪದಪಾಠಃ

ಉಷಃ । ಆ । ಭಾಹಿ । ಭಾನುನಾ । ಚಂದ್ರೇಣ । ದುಹಿತಃ । ದಿವಃ ।
ಆಽವಹಂತೀ । ಭೂರಿ । ಅಸ್ಮಭ್ಯಂ । ಸೌಭಗಂ । ವಿಽ ಉಚ್ಛಂತೀ । ದಿವಿಷ್ಟಿಷು ॥೯॥

॥ ಸಾಯಣಭಾಷ್ಯಂ ॥

ಹೇ ದಿವೋ ದುಹಿತರ್ದ್ಯುಲೋಕಸ್ಯ ಪುತ್ರಿ ಉಷ ಉಷೋದೇವತೇ ಚಂದ್ರೇಣ ಸರ್ವೇಷಾಮಾಹ್ಲಾದಕೇನ ಭಾನುನಾ ಪ್ರಕಾಶೇನ ಆ ಸಮಂತಾದ್ಭಾಹಿ। ಪ್ರಕಾಶಸ್ವ । ಕಿಂ ಕುರ್ವತೀ। ದಿವಿಷ್ಟಿಷು ದಿವಸೇಷು ಭೂರಿ ಪ್ರಭೂತಂ ಸೌಭಗಂ ಸೌಭಾಗ್ಯಮಸ್ಮಭ್ಯಮಾವಹಂತೀ ಸಂಪಾದಯಂತೀ । ತಥಾ ವ್ಯುಚ್ಛಂತೀ ತಮಾಂಸಿ ವರ್ಜಯಂತೀ ॥ ಉಷಃ । ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ದುಹಿತರ್ದಿವಃ । ಪರಮಪಿ ಛಂದಸೀತಿ ದಿವ ಇತ್ಯಸ್ಯ ಪರಸ್ಯ ಷಷ್ಠ್ಯಂತಸ್ಯ ಪೂರ್ವಾಮಂತ್ರಿತಾಂಗವದ್ಭಾವೇ ಸತಿ ಷಷ್ಠ್ಯಾಮಂತ್ರಿತಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ । ಆವಹಂತೀ । ಜುೕಸ್ಯಪೌ ಪಿತ್ತ್ವಾದನುದಾತ್ತೌ । ಶತುಶ್ಚಾದುಪದೇಶಾಲ್ಲಸಾರ್ವಧಾತುಕಸ್ವರೇಣಾನುದಾತ್ತತ್ವಂ । ಅತೋ ಧಾತುಸ್ವರಃ ಶಿಷ್ಯತೇ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ । ಭೂರಿ । ಪ್ರಭವತಿ ನ ವಿನಶ್ಯತೀತಿ ಭೂರಿ । ಅದಿಶದಿಭೂಶುಭಿಭ್ಯಃ ಕ್ರಿನ್ । ಉ. ೪-೬೫ । ಇತಿ ಕ್ರಿನ್ । ನಿತ್ತ್ವಾದಾದ್ಯುದಾತ್ತತ್ವಂ । ಸುಭಗಸ್ಯ ಭಾವಃ ಸೌಭಗಂ । ಸುಭ-



CC-0. Jangamwadi Math Collection. Digitized by eGangotri

ಗಾಸ್ಮಂತ್ರ ಇತ್ಯೃದ್ಗಾತ್ರಾದಿಷು ಪಾಠಾದೇಷ್ಪ್ರತ್ಯಯಃ । ಹೃದ್ಭಗಸಿಂಧ್ವಂತೇ ಪೂರ್ವಪದಸ್ಯ ಚೇತ್ಯುಭಯ-ಪದವೃದ್ಧೌ ಪ್ರಾಪ್ತಾಯಾಂ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ವಚನಾದತ್ರೋತ್ತರಪದವೃದ್ಧಿರ್ನ ಭವತೀತಿ ವೃತ್ತಾವುಕ್ತಂ । ಕಾ. ೭-೩-೧೯ । ವ್ಯುಚ್ಛಂತೀ । ಉಛೀ ವಿವಾಸೇ । ವಿವಾಸೋ ವರ್ಜನಂ । ತೌದಾದಿಕಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ । ದಿವಿಷ್ಟಿಷು । ದಿವ್ಯತ್ಯೇನ ದಿವಿಷ್ಟ ಆದಿತ್ಯೋ ಲಕ್ಷ್ಯತೇ । ತಸ್ಯೇಷ್ಟಯ ಏಷಣಾನಿ ಗಮನಾನಿ ಯೇಷು ದಿವಸೇಷು ತೇ ದಿವಿಷ್ಟಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ದಿವಃ ದುಹಿತಃ—ದ್ಯುಲೋಕದ ಪುತ್ರಿಯಾದ । ಉಷಃ—ಎಲೈ ಉಷೋದೇವಿಯೇ। ದಿವಿಷ್ಟಿಷು—ಪ್ರತಿದಿನವೂ । ಭೂರಿ—ಅತ್ಯಧಿಕವಾಗಿ । ಸೌಭಗಂ—ಸೌಖ್ಯವನ್ನು । ಅಸ್ಮಭ್ಯಂ—ನಮಗೆ । ಆವಹಂತೀ— ಸಂಪಾದಿಸಿಕೊಡುತ್ತಲೂ । ವ್ಯುಚ್ಛಂತೀ—(ಕತ್ತಲನ್ನು) ಚದುರಿಸುತ್ತಲೂ । ಚಂದ್ರೇಣ—ಆಹ್ಲಾದವನ್ನುಂಟುಮಾಡತಕ್ಕ । ಭಾನುನಾ—ಪ್ರಭೆಯಿಂದ । ಆ ಭಾಹಿ—ಸುತ್ತಲೂ ಪ್ರಕಾಶಿಸು.

॥ ಭಾವಾರ್ಥ ॥

ದ್ಯುಲೋಕೋತ್ಪನ್ನಳಾದ ಎಲೈ ಉಷೋದೇವಿಯೇ, ಪ್ರತಿದಿನವೂ ನಮಗೆ ಅಧಿಕವಾಗಿ ಸೌಖ್ಯವನ್ನು ಸಂಪಾದಿಸಿಕೊಡು. ನಮ್ಮ ಕಾರ್ಯಗಳಿಗೆ ವಿಘ್ನಮಾಡತಕ್ಕ ಕತ್ತಲೆಯನ್ನು ಚದುರಿಸು. ಸರ್ವರಿಗೂ ಸಂತೋಷದಾಯಕವಾದ ನಿನ್ನ ಪ್ರಭೆಯಿಂದ ಎಲ್ಲೆಲ್ಲೂ ಪ್ರಕಾಶಿಸು.

## English Translation.

Ushas, shine around with delightful brightness, bringing us every day much happiness and dispersing darkness.

॥ ವಿಶೇಷ ವಿಷಯಗಳು ॥

ಭಾನುನಾ—ಪ್ರಕಾಶೇನ । ಪ್ರಕಾಶದಿಂದ. ಭಾನು ಶಬ್ದಕ್ಕೆ ನಿರುಕ್ತದಲ್ಲಿ (ನಿ. ೨-೨೧) ಅಹಃ ಎಂದರೆ ಹಗಲು ಎಂಬರ್ಥವನ್ನು ಹೇಳಿದ್ದರೂ ಭಾಷ್ಯಕಾರರು ಹಗಲಿನಲ್ಲಿ ಸೂರ್ಯಪ್ರಕಾಶವಿರುವುದರಿಂದ ಭಾನು ಶಬ್ದಕ್ಕೆ ಪ್ರಕಾಶವೆಂದು ಅರ್ಥಮಾಡಿರುವರು. ಅಥವಾ ಉಷಃಕಾಲದಲ್ಲಿ ಚಂದ್ರನು ಇನ್ನೂ ಮುಳಗದೆ ಕಾಣುತ್ತಿರುವುದರಿಂದಲೂ ಸೂರ್ಯನು ಸಹ ಉದಯಿಸಲು ಪ್ರಾರಂಭಿಸುತ್ತಿರುವುದರಿಂದಲೂ ಉಷೋದೇವತೆಯು ಸೂರ್ಯಚಂದ್ರರೊಡಗೂಡಿ ಪ್ರಕಾಶಿಸು ಎಂದು ಋಷಿಯು ಪ್ರಾರ್ಥಿಸಿರಬಹುದೇ ಎಂಬ ಶಂಕೆಗೆ ಆಸ್ಪದವಿರುವುದು. ಚಂದ್ರಶಬ್ದಕ್ಕೆ ಹಿರಣ್ಯವೆಂದು ನಿರುಕ್ತದಲ್ಲಿ (ನಿ. ೨-೧೦) ಹೇಳಿದೆ ಮತ್ತು ಅಲ್ಲಿಯೇ (ನಿ. ೧೧-೫) ಚಂದ್ರಶ್ಚಂದತೇಃ ಕಾಂತಿಕರ್ಮಣಃ ಎಂದು ಹೇಳಿರುವುದರಿಂದ ಚಂದ್ರಶಬ್ದವು ಕಾಂತಿವಾಚಕವೂ ಆಗಿರುವುದು. ಮುಖ್ಯಾಭಿಪ್ರಾಯವನ್ನು ಗ್ರಹಿಸಿ ಭಾಷ್ಯಕಾರರು ಚಂದ್ರಶಬ್ದಕ್ಕೆ ಚಂದ್ರನಂತೆ ಆಹ್ಲಾದಕರವಾದ ಎಂಬರ್ಥವನ್ನೂ, ಭಾನುಶಬ್ದಕ್ಕೆ ಸೂರ್ಯನಂತೆ ಪ್ರಕಾಶವೆಂಬ ಅರ್ಥವನ್ನು ಹೇಳಿರುವುದು ಸ್ವೀಕಾರಾರ್ಹವಾಗಿಯೇ ಇರುವುದು)



CC-0. Jangamwadi Math Collection. Digitized by eGangotri

**ದಿವಿಷ್ಟಿಷು**—ಈ ಶಬ್ದಕ್ಕೆ ಭಾಷ್ಯಕಾರರು ದಿವಸೇಷು—ದಿನಗಳಲ್ಲಿ ಎಂದರ್ಥವನ್ನು ಹೇಳಿರುವರು. ಯಾಸ್ಕಮಹರ್ಷಿಗಳ ನಿರುಕ್ತದಲ್ಲಿ (ನಿ. ೬-೨೩) ದಿವಿಷ್ಟಿಷು ದಿವ ಏಷಣೇಷು ಎಂದು ಹೇಳಿರುವರು. ಎಂದರೆ ಯಾಭಿಃ ಕ್ರಿಯಾಭಿರ್ದಿವಮಿಚ್ಛಂತಿ ಗಂತುಂ ತಾ ದಿವಿಷ್ಟಯಃ ಯಾವ ಕರ್ಮಗಳಿಂದ ಸ್ವರ್ಗವನ್ನು ಪಡೆಯಲಿಚ್ಛಿಸುವರೋ ಅಂತಹ ಕರ್ಮಗಳಿಗೆ ದಿವಿಷ್ಟಯಃ ಎಂದು ಹೆಸರು. ಆದುದರಿಂದ ದಿವಿಷ್ಟಿಷು ಎಂದರೆ ಸ್ವರ್ಗಾಪೇಕ್ಷೆಯಿಂದ ಮಾಡುವ ಕರ್ಮಗಳಲ್ಲಿ ಎಂದು ಈ ಶಬ್ದದ ಅರ್ಥವು. ಆದರೆ ಪ್ರಕೃತಸಂದರ್ಭದಲ್ಲಿ ಈ ಅರ್ಥವು ಹೊಂದುವುದಿಲ್ಲ.

|| ವ್ಯಾಕರಣಪ್ರಕ್ರಿಯಾ ||

**ಉಷಃ**—ಉಷಸ್ ಶಬ್ದದ ಸಂಬುದ್ಧಿ ಏಕವಚನ. ಇದಕ್ಕೆ ಆಮಂತ್ರಿತ ಎಂದು ಸಂಜ್ಞೆ ಇದೆ. ಆಮಂತ್ರಿತಕ್ಕೆ ಸರ್ವಾನುದಾತ್ತವು ಎಂಟನೇ ಅಧ್ಯಾಯದ ಸೂತ್ರದಿಂದ ವಿಹಿತವಾಗಿದೆ. ಇಲ್ಲಿ ಆಮಂತ್ರಿತಸ್ಯ ಚ (ಪಾ. ಸೂ. ೬-೧-೧೯೮) ಆಮಂತ್ರಿತಕ್ಕೆ ಆದ್ಯುದಾತ್ತಸ್ವರ ಬರುತ್ತದೆ ಎಂಬುದರಿಂದ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತಸ್ವರ ಬಂದಿದೆ.

**ದುಹಿತರ್ದಿವಃ**—**ಸುಬಾಮಂತ್ರಿತೇ ಪರಾಂಗವತ್ ಸ್ವರೆ** (ಪಾ.ಸೂ. ೨-೧-೨) ಎಂಬುದರಿಂದ ಪೂರ್ವದಲ್ಲಿರುವ ಸುಬಂತವು ಪರದಲ್ಲಿರುವ ಆಮಂತ್ರಿತಕ್ಕೆ ಅಂಗವಾಗುವುದರಿಂದ ಆಮಂತ್ರಿತಸ್ವರವನ್ನು ಹೊಂದುವುದು. ಆದರೆ ಛಂದಸ್ಸಿನಲ್ಲಿ **ಪರಮಪಿ ಛಂದಸಿ** (ವಾ) (ಪೂರ್ವಾಂಗವಚ್ಚೇತಿವಕ್ತವ್ಯಂ ಎಂದು ಪಾಠಾಂತರವಿದೆ) ಎಂಬುದರಿಂದ ಪರದಲ್ಲಿರುವ ಸುಬಂತವು ಪೂರ್ವದಲ್ಲಿರುವ ಆಮಂತ್ರಿತಕ್ಕೆ ಅವಯುವದಂತೆ ಆಗುತ್ತದೆ. ಆದುದರಿಂದ **ಆಮಂತ್ರಿತಸ್ಯ ಚ** (ಪಾ. ಸೂ. ೮-೧-೧೯) ಪದದ ಪರದಲ್ಲಿರುವ ಪಾದದ ಆದಿಯಲ್ಲಿರದ ಆಮಂತ್ರಿತಕ್ಕೆ ಸರ್ವಾನುದಾತ್ತ ಬರುತ್ತದೆ ಎಂಬುದರಿಂದ ಇಲ್ಲಿ ದಿವಃ ಎಂಬುದು ಪೂರ್ವದಲ್ಲಿರುವ ದುಹಿತಃ ಎಂಬ ಆಮಂತ್ರಿತಕ್ಕೆ ಅಂಗವಾದುದರಿಂದ ದುಹಿತರ್ದಿವಃ ಎಂಬುದು ಸರ್ವವೂ ಅನುದಾತ್ತವಾಗುತ್ತದೆ.

**ಆವಹಂತೀ**—ಆಙ್ ಉಪಸರ್ಗ. ವಹ ಪ್ರಾಪಣೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ ಬರುತ್ತದೆ. ಋಕಾರ ಇತ್ತಾದುದರಿಂದ ಸ್ತ್ರೀಲಿಂಗದಲ್ಲಿ **ಉಗಿತಶ್ಚ** ಸೂತ್ರದಿಂದ ಙೀಪ್ ಪ್ರತ್ಯಯ ಬರುತ್ತದೆ. ವಹ್+ಅತ್+ಈ ಎಂದಿರುವಾಗ ಋಕಾರ ಇತ್ತಾದುದರಿಂದಲೇ **ಉಗಿದಚಾಂ ಸರ್ವನಾಮಸ್ಥಾನೇಧಾತೋಃ** (ಪಾ. ಸೂ. ೭-೧-೭೦) ಸೂತ್ರದಿಂದ ನುಮಾಗಮ ಬರುತ್ತದೆ. ಮಧ್ಯೆ ಶಪ್ ವಿಕರಣ ಬಂದು ಪರರೂಪವನ್ನು ಹೊಂದಿರುತ್ತದೆ. ನುಮಿನ ನಕಾರಕ್ಕೆ ಅನುಸ್ವಾರ ಪರಸವರ್ಣ ಬಂದರೆ ವಹಂತೀ ಎಂದು ರೂಪವಾಗುತ್ತದೆ. ಇಲ್ಲಿ ಙೀಪ್ ಮತ್ತು ಶಪ್ ಪ್ರತ್ಯಯಗಳು ಪಿತ್ತಾದುದರಿಂದ ಅನುದಾತ್ತವಾಗುತ್ತವೆ. ಶತೃಪ್ರತ್ಯಯವೂ ಲಸಾರ್ವಧಾತುಕವಾದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ **ಧಾತೋಃ** ಸೂತ್ರದಿಂದ ಬಂದಿರುವ ಅಂತೋದಾತ್ತಧಾತುಸ್ವರವೇ ಉಳಿಯುತ್ತದೆ. ಆಙನಿಂದ ಸಮಾಸ ಮಾಡಿದಾಗ ಸಮಾಸಸ್ವರಕ್ಕೆ ಅಪವಾದವಾಗಿ **ಗತಿಕಾರಕೋಪಪದಾತ್ ಕೃತ್** (ಪಾ. ಸೂ. ೬-೨-೧೩೯) ಸೂತ್ರದಿಂದ ಕೃದಂತವಾದುದು ಉತ್ತರಪದವಾಗಿರುವುದರಿಂದ ಕೃದುತ್ತರಪ್ರಕೃತಿಸ್ವರವು ಬರುತ್ತದೆ. ಅದರ ಸ್ವರವು ಹಾಗೆಯೇ ಉಳಿಯುವುದು ಎಂದರ್ಥ. ಆಗ ಆವಹಂತೀ ಶಬ್ದದಲ್ಲಿ ವಕಾರೋತ್ತರಾಕಾರಮಾತ್ರ ಉದಾತ್ತವೂ ಉಳಿದದ್ದೆಲ್ಲಾ ಅನುದಾತ್ತಗಳೂ ಆಗುತ್ತವೆ.



CC-0. Jangamwadi Math Collection. Digitized by eGangotri

ಭೂರಿ—ಪ್ರಭವತಿ ನ ವಿನಶ್ಯತಿ ಇತಿ ಭೂರಿ ಹೆಚ್ಚಾಗುತ್ತದೆ. ನಾಶವಾಗುವುದಿಲ್ಲ. ಎಂಬರ್ಥದಲ್ಲಿ ಭೂರಿ ಶಬ್ದವಾಗುತ್ತದೆ. ಅದಿಶಃಥಿಭೂ ಶುಭಿಭ್ಯ ಕ್ರಿನ್ (ಉ. ಸೂ. ೪-೫೦೫) ಈ ಧಾತುಗಳಿಗೆ ಕ್ರಿನ್‌ಪ್ರತ್ಯಯ ಬರುತ್ತದೆ. ಕ್ರಿನ್ನಿನಲ್ಲಿ ರಿ ಎಂದುಮಾತ್ರ ಉಳಿಯುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ (ಪಾ. ಸೂ. ೬-೧-೧೯೭) ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ಉದಾತ್ತದ ಪರದಲ್ಲಿರುವುದರಿಂದ ರೇಫದ ಮೇಲಿರುವ ಇಕಾರವು ಅನುದಾತ್ತಸ್ವರಿತವಾಗುತ್ತದೆ. ಭೂರಿ ಎಂಬುದು ಆದ್ಯುದಾತ್ತವಾದ ಪದ.

ಸೌಭಗಂ—ಉದ್ಗಾತ್ರಾದಿಗಣಪಠಿತವಾದವುಗಳಿಗೆ ಅಞ್ ಪ್ರತ್ಯಯವು ವಿಹಿತವಾಗಿದೆ. ಅಲ್ಲಿ ಸುಭಗಾನ್ಮಂತ್ರೇ ಎಂದು ವಿಶೇಷಾರ್ಥದಲ್ಲಿ ಪಾಠಮಾಡಿರುವುದರಿಂದ ಸುಭಗ ಶಬ್ದದ ಮೇಲೆ ಛಂದಸ್ಸಿನಲ್ಲಿಮಾತ್ರ ಅಞ್‌ಪ್ರತ್ಯಯ ಬರುತ್ತದೆ. ಸುಭಗ+ಅ ಎಂದಿರುವಾಗ ಪ್ರತ್ಯಯ ಞಿತ್ತಾದುದರಿಂದ ಆದಿವೃದ್ಧಿಯನ್ನು ಬಾಧಿಸಿ ಹೃದ್ಭಗಸಿಂಧ್ವಂತೆ ಪೂರ್ವಪದಸ್ಯ ಚ (ಪಾ. ಸೂ. ೭-೩-೧೯) ಸೂತ್ರದಿಂದ ಭಗಶಬ್ದ ಅಂತವಾಗಿರುವುದರಿಂದ ಉಭಯಪದ ವೃದ್ಧಿಯು ಪ್ರಾಪ್ತವಾಗುತ್ತದೆ. ಆದರೆ ವಾ ಛಂದಸಿ ಎಂದು ಯೋಗವಿಭಾಗದಿಂದ ಸಿದ್ಧವಾದ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೆ ಎಂಬ ವಚನದಂತೆ ಇಲ್ಲಿ ಉತ್ತರಪದವೃದ್ಧಿಯು ಬರುವುದಿಲ್ಲವೆಂದು ವೃತ್ತಿಯಲ್ಲಿ (ಕಾ. ೭-೩-೧೯) ಹೇಳಿರುತ್ತಾರೆ. ಆಗ ತದ್ಧಿತೇಷ್ವ ಎಂಬ ಸಾಮಾನ್ಯ ಸೂತ್ರದಿಂದಲೇ ಆದ್ಯಚಿಗೆ ವೃದ್ಧಿ ಬಂದರೆ ಸೌಭಗಂ ಎಂಬ ರೂಪವಾಗುತ್ತದೆ.

ವ್ಯುಚ್ಛಂತೀ—ಉಛೀ ವಿವಾಸೇ ಧಾತು. ತುದಾದಿ. ಇದು ಸಾಮಾನ್ಯವಾಗಿ ವಿ ಉಪಸರ್ಗ ಪೂರ್ವವಾಗಿಯೇ ಇರುತ್ತದೆ. ವಿವಾಸವೆಂದರೆ ವರ್ಜನ ತ್ಯಜಿಸುವುದು ಎಂದರ್ಥ- ಶತೃಪ್ರತ್ಯಯ ಮಾಡಿದಾಗ ಧಾತುವಿಗೆ ತುದಾದಿಯ ಶವಿಕರಣ ಬರುತ್ತದೆ. ಉಚ್ಛ್+ಅ+ಅತ್ ಎಂದಿರುವಾಗ ಅತೋಗುಣೇ ಸೂತ್ರದಿಂದ ಪರರೂಪ ಬರುತ್ತದೆ. ಶತೃನಲ್ಲಿ ಋಕಾರರೂಪ ಉಗಿತ್ತಾದುದರಿಂದ ನುಮ್ ಬರುತ್ತದೆ. ಉಗಿತಶ್ಚ ಸೂತ್ರದಿಂದ ಸ್ತ್ರೀತ್ವ ವಿವಕ್ಷಾಮಾಡಿದಾಗ ಙೀಪ್ ಬರುತ್ತದೆ. ವಿ ಉಪಸರ್ಗದ ಇಕಾರಕ್ಕೆ ಯಣಾದೇಶ ಬಂದರೆ ಛಕಾರದ ಹಿಂದೆ ಹ್ರಸ್ವಕ್ಕೆ ತುಕಾಗಮ ಬಂದು ಶ್ಚುತ್ವ ಬಂದರೆ ವ್ಯುಚ್ಛಂತೀ ಎಂದು ರೂಪವಾಗುತ್ತದೆ. ಇಲ್ಲಿ ಶತೃಲಸಾರ್ವಧಾತುಕವಾದುದರಿಂದ ತಾಸ್ಯನುದಾತ್ತೇತ್ (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಶವಿಕರಣಸ್ವರವೇ ಸತಿಶಿಷ್ಟವಾಗುವುದರಿಂದ ಆದ್ಯುದಾತ್ತಶ್ಚ ಸೂತ್ರದಿಂದ ಉದಾತ್ತವಾಗುತ್ತದೆ. ಉಳಿದದ್ದು ಅನುದಾತ್ತವಾಗುತ್ತದೆ. ವ್ಯುಚ್ಛಂತೀ ಎಂಬಲ್ಲಿ ಛಕಾರೋತ್ತರಾಕಾರವು ಉದಾತ್ತ ನುಮ್ ಬಂದಿರುವುದರಿಂದ ನದಿಗೆ ಉದಾತ್ತತ್ವವು ಬರುವುದಿಲ್ಲ.

ದಿವಿಷ್ಟಿಷು—ಇಲ್ಲಿ ದಿವ್‌ಶಬ್ದದಿಂದ ಆಕಾಶದಲ್ಲಿರುವ ಸೂರ್ಯನು ಲಕ್ಷಣಯಾ ಗೃಹೀತನಾಗುತ್ತಾನೆ. ಇದಕ್ಕೆ ಗೌಣಲಾಕ್ಷಣಿಕಪ್ರಯೋಗವೆಂದು ಹೆಸರು. ದಿವಃ ಇಷ್ಟಯಃ ಏಷಣಾನಿ ಗಮನಾನಿ ಏಷು ದಿವಸೇಷು ತೇ ದಿವಿಷ್ಟಯಃ ಸೂರ್ಯನ ಗಮನಗಳು ಭ್ರಮಣಗಳು ಯಾವುದರಲ್ಲಿ ಇರುತ್ತವೆಯೋ ಅವುಗಳು ಎಂದು ತಾತ್ಪರ್ಯ. ಬಹುವ್ರೀಹಿ ಸಮಾಸವಾದುದರಿಂದ ಸಮಾಸಸ್ವರವು ಬಾಧಿತವಾಗಿ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ (ಪಾ. ಸೂ. ೬-೨-೧) ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ. ದಿವ್ ಎಂಬುದು ಉದಾತ್ತವಾದುದರಿಂದ ದಿವಿಷ್ಟಿಷು ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ಉದಾತ್ತದ ಪರದಲ್ಲಿರುವುದರಿಂದ ವಕಾರೋತ್ತರ ಇಕಾರವು ಅನುದಾತ್ತಸ್ವರಿತವಾಗುತ್ತದೆ. ಉಳಿದದ್ದು ಪ್ರಚಯವಾಗುತ್ತದೆ. ॥ ೯ ॥



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ವಿಶ್ವಸ್ಯ ಹಿ ಪ್ರಾಣನಂ ಜೀವನಂ ತ್ವೇ ವಿ ಯದುಚ್ಛಸಿ ಸೂನರಿ ।
ಸಾ ನೋ ರಥೇನ ಬೃಹತಾ ವಿಭಾವರಿ ಶ್ರುಧಿ ಚಿತ್ರಾಮಘೇ ಹವಂ ॥೧೦॥

॥ ಪದಪಾಠಃ ॥

ವಿಶ್ವಸ್ಯ । ಹಿ । ಪ್ರಾಣನಂ । ಜೀವನಂ । ತ್ವೇ ಇತಿ । ವಿ । ಯತ್ । ಉಚ್ಛಸಿ । ಸೂನರಿ ॥
ಸಾ । ನಃ । ರಥೇನ । ಬೃಹತಾ । ವಿಭಾಽವರಿ । ಶ್ರುಧಿ । ಚಿತ್ರಽಮಘೇ । ಹವಂ ॥೧೦॥

ಸಾಯಣಭಾಷ್ಯಂ

ಹೇ ಸೂನರೀ ಉಷೋದೇವಿ ವಿಶ್ವಸ್ಯ ಸರ್ವಸ್ಯ ಪ್ರಾಣಿಜಾತಸ್ಯ ಪ್ರಾಣನಂ ಚೇಷ್ಟನಂ ಜೀವನಂ ಪ್ರಾಣಧಾರಣಂ ಚ ತ್ವೇ ಹಿ ತ್ವಯ್ಯೇವ ವರ್ತತೇ । ಯದ್ಯಸ್ಮಾತ್ತ್ವಂ ವ್ಯುಚ್ಛಸಿ ತಮೋ ವರ್ಜಯಸಿ । ಹೇ ವಿಭಾವರಿ ವಿಶಿಷ್ಟಪ್ರಕಾಶಯುಕ್ತೇ ಸಾ ತಾದೃಶೀ ತ್ವಂ ನೋಽಸ್ಮಾನ್ಪ್ರತಿ ಬೃಹತಾ ಪೌಢೇನ ರಥೇನಾಯಾಹೀತಿ ಶೇಷಃ । ತಥಾ ಹೇ ಚಿತ್ರಾಮಘೇ ವಿಚಿತ್ರಧನಯುಕ್ತ ಉಷೋದೇವಿ ನೋಽಸ್ಮದೀಯಂ ಹವಮಾಹ್ವಾನಂ ಶ್ರುಧಿ । ಶೃಣು ॥ ಪಾಣನಂ । ಅನ ಚೇಷ್ಟಾಯಾಂ । ಲ್ಯುಟ್ಚೇತಿ ಭಾವೇ ಲ್ಯುಟ್ । ಯೋರನಾದೇಶಃ । ಸಮಾಸೇಽನಿತೇಃ । ಪಾ. ೮-೪-೧೯ । ಇತ್ಯುಪಸರ್ಗಸ್ಥಾದ್ರೇಕರಾನ್ನಿಮಿತ್ತಾದುತ್ತರಸ್ಯ ನಕಾರಸ್ಯ ಣತ್ವಂ । ನನ್ವನಿತೇರಿತೀಟಾ ನಿರ್ದೇಶಾತ್ಕಥಮನ ಚೇಷ್ಟಾಯಾಮಿತ್ಯಸ್ಯ ಣತ್ವಂ । ತರ್ಹಿ ಜೀವನಸ್ಯ ಪೃಥಗುಪಾದಾನಾತ್ತೇನೈವ ಧಾತುನಾ ಚೇಷ್ಟಾ ಲಕ್ಷ್ಯತೇ । ಸಮಾಸೇ ಕೃದುತ್ತರಪದಪ್ರಕೃತಿಸ್ವರತ್ವಂ। ಸಂಹಿತಾಯಾಮೇಕಾದೇಶಸ್ವರೇಣೈಕಾದೇಶಸ್ಯೋದಾತ್ತತ್ವಂ । ತ್ವೇ । ಸುಪಾಂ ಸುಲುಗಿತಿ ಸಪ್ತಮ್ಯಾಃ ಶೇಆದೇಶಃ। ಉಚ್ಛಸಿ । ಉಛೀ ವಿವಾಸೇ । ತೌದಾದಿಕಃ । ಸಿಪಃ ಪಿತ್ತ್ವಾದನುದಾತ್ತತ್ವೇ ವಿಕರಣಸ್ವರಃ । ನಿಪಾತೈರ್ಯದ್ಯದಿಹಂತೇತಿ ನಿಘಾತಪ್ರತಿಷೇಧಃ । ಸೂನರಿ । ಸುಷ್ಠು ನಯತೀತಿ ಸೂನರೀ । ನ್ಯಾ ನಯೆ ಇತ್ಯಸ್ಮಾದಚ ಇರಿತ್ಯೌಣಾದಿಕ ಇಪ್ರತ್ಯಯಃ । ಗತಿಸಮಾಸೇ ಕೃದ್ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಾತ್ ಕೃದಿಕಾರಾದಕ್ತಿನ ಇತಿ ಙೀಷ್ । ನಿಪಾತಸ್ಯ ಚೇತಿ ಪೂರ್ವಪದಸ್ಯ ದೀರ್ಘತ್ವಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವೇ ಪ್ರಾಪ್ತ ಆಮಂತ್ರಿತಸ್ಯ ಚೇತ್ಯಾಷ್ಟಮಿಕೋ ನಿಘಾತಃ । ವಿಭಾವರಿ । ವಿಶಿಷ್ಟಾ ಭಾ ಯಸ್ಯಾಃ ಸಾ । ಛಂದಸೀವನಿಪೌ । ಪಾ. ೫-೨-೧೦೯-೨ । ಇತಿ ಮತ್ವರ್ಥೀಯೋ ವನಿಪ್ । ವನೋ ರ ಚೇತಿ ಙೀಪ್ ತತ್ಸಂನಿಯೋಗೇನ ನಕಾರಸ್ಯ ರೇಫಾದೇಶಶ್ಚ । ಶ್ರುಧಿ । ಶ್ರುಶೃಣುಪೄಕೃವೃಭ್ಯಶ್ಛಂದಸೀತಿ ಹೇರ್ಧಿರಾದೇಶಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹೇರ-


CC-0. Jangamwadi Math Collection. Digitized by eGangotri

ಪಿತ್ತ್ವೇವ ಪ್ರತ್ಯಯಸ್ಸ್ವರೇಣಾಂತೋದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ಮಘಮಿತಿ ಧನನಾಮ । ಚಿತ್ರಂ ಮಘಂ ಯಸ್ಯಾಃ ಸಾ ಚಿತ್ರಮಘಾ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ಪೂರ್ವಪದಸ್ಯ ದೀರ್ಘತ್ವಂ । ಹವಂ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಭಾವೇಽನುಪಸರ್ಗಸ್ಯೇತ್ಯಪ್ಪ್ರತ್ಯಯಃ । ತತ್ಸಂನಿಯೋಗೇನ ಸಂಪ್ರಸಾರಣಂ ಚ ॥ ೪ ॥

॥ ಪ್ರತಿಪದಾರ್ಥ ॥

ಸೂನರಿ—ಮಾರ್ಗದರ್ಶಕಳಾದ ಎಲೈ ಉಷೋದೇವಿಯೇ । ಯತ್—ಯಾವ ಕಾರಣದಿಂದ । ವಿ ಉಚ್ಛಸಿ—(ನೀನು) ತಮಸ್ಸನ್ನು ಚದುರಿಸಿ (ಬೆಳಕನ್ನು ತರುತ್ತೀಯೋ ಆದ್ದರಿಂದಲೇ) । ವಿಶ್ವಸ್ಯ—ಸಕಲ ಪ್ರಾಣಿ ವರ್ಗದ । ಪ್ರಾಣನಂ—ಉಸಿರೂ । ಜೀವನಂ—ಪ್ರಾಣಧಾರಣವೂ । ತ್ವೇ ಹಿ—ನಿನ್ನಲ್ಲೇ (ಇದೆ. ನಿನ್ನನ್ನೇ ನಂಬಿವೆ) । ವಿಭಾವರಿ—ವಿಶಿಷ್ಟಪ್ರಭಾಯುತಳಾದ ಎಲೈ ಉಷಸ್ಸೇ । ಸಾ—ಅಂತಹ (ಸಕಲಜೀವನಾಧಾರವಾದ) ನೀನು । ನಃ—ನಮ್ಮನ್ನು ಕುರಿತು । ಬೃಹತಾ—ಉನ್ನತವಾಗಿಯೂ ವಿಸ್ತಾರವಾಗಿಯೂ ಇರುವ । ರಥೇನ—ರಥ (ದಲ್ಲಿ)ದೊಡನೆ (ದಯಮಾಡು) । ಚಿತ್ರಾಮಘೇ—ವಿವಿಧವಾಗಿಯೂ ಆಶ್ಚರ್ಯಕರವಾಗಿಯೂ ಇರುವ ಧನದಿಂದ ಕೂಡಿದ ಎಲೈ ಉಷಸ್ಸೆ । ನಃ—ನಮ್ಮ । ಹವಂ—ಆಹ್ವಾನವನ್ನು । ಶ್ರುಧಿ—ಆಲಿಸು.

॥ ಭಾವಾರ್ಥ ॥

ಲೋಕಕ್ಕೆ ಮಂಗಳವನ್ನುಂಟುಮಾಡುವ ಮತ್ತು ಮಾರ್ಗದರ್ಶಕಳಾದ ಎಲೈ ಉಷೋದೇವಿಯೇ, ನೀನು ಕಗ್ಗತ್ತಲೆಯನ್ನು ಚದುರಿಸಿ ಲೋಕಕ್ಕೆ ಬೆಳಕನ್ನು ತರುವುದರಿಂದ ಸಕಲಪ್ರಾಣಿವರ್ಗದ ಉಸಿರೂ ಜೀವನಾಧಾರವೂ ನಿನ್ನಲ್ಲಿಯೇ ಇವೆ. ಸಕಲ ಜೀವನಾಧಾರವಾದ ಅಂತಹ ನೀನು ವಿಶಿಷ್ಟಪ್ರಭಾಯುತಳಾಗಿ ಉನ್ನತವಾಗಿಯೂ ವಿಸ್ತಾರವಾಗಿಯೂ ಇರುವ ನಿನ್ನ ರಥದೊಡನೆ ನಮ್ಮಲ್ಲಿಗೆ ದಯಮಾಡು. ವಿವಿಧವಾದ ಮತ್ತು ಆಶ್ಚರ್ಯಕರವಾದ ಧನದಿಂದ ಕೂಡಿದ ಎಲೈ ಉಷೋದೇವಿಯೇ, ನಮ್ಮ ಆಹ್ವಾನವನ್ನು ಆಲಿಸು.

## English Translation.

O fair Ushas, when you dawn forth, the breath and life of all (creatures) lies in you ; bright goddess, possessor of wondrous wealth, come to us with your spacious car and hear our invocation.

॥ ವಿಶೇಷ ವಿಷಯಗಳು ॥

ವಿಶ್ವಸ್ಯ—ಸಮಸ್ತ ಪ್ರಪಂಚದ, ಸಮಸ್ತ ಜೀವರಾಶಿಗಳ, of all creatures of the Universe etc.

ಪ್ರಾಣನಂ—ಅನ ಚೇಷ್ಟಾಯಾಂ । ಪ್ರಾಣಿಗಳು ಜೀವಿಸುವುದಕ್ಕೆ ಅತ್ಯವಶ್ಯಕವಾದ ಉಸಿರು ಅಥವಾ ಜೀವವುಳ್ಳ ಪ್ರಾಣಿಗಳಿಗೆ ಸಹಜಧರ್ಮವೆನಿಸಿದ ಚೇಷ್ಟಾದಿವ್ಯಾಪಾರಗಳು ; movements.

ಜೀವನಂ—ಜೀವಿಸಿರುವುದು, ಬದುಕಿರುವುದು, life.





CC-0. Jangamwadi Math Collection. Digitized by eGangotri

ವಿ ಉಚ್ಛಸಿ—ತಮೋ ವರ್ಜಯಸಿ | ಕತ್ತಲೆಯನ್ನು ನಾಶಮಾಡುವೆ.

ಚಿತ್ರಾಮಘೋ—ನಾನಾವಿಧವಾದ ಧನಾದಿಗಳಿಂದ ಯುಕ್ತಳಾದ, ಮಘವೆಂದರೆ ಧನವು. ಚಿತ್ರವೆಂದರೆ ನಾನಾವಿಧವಾದ, ಎಂದರೆ ದ್ರವ್ಯ, ರತ್ನಗಳು, ಪಶುಗಳು ಇತ್ಯಾದಿ ವಿಧವಿಧವಾದ.

॥ ವ್ಯಾಕರಣಪ್ರಕ್ರಿಯಾ ॥

ಪ್ರಾಣನಂ—ಅನ ಚೇಷ್ಟಾಯಾಂ ಧಾತು. ಪ್ರ ಉಪಸರ್ಗ. ಲ್ಯುಟ್ ಚ (ಪಾ- ಸೂ. ೩-೩-೧೧೫) ಸೂತ್ರದಿಂದ ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬರುತ್ತದೆ. ಲ್ಯುಟನಲ್ಲಿ ಉಳಿಯುವ ಯು ಎಂಬುದಕ್ಕೆ ಅನ ಎಂಬ ಆದೇಶವು ಬರುತ್ತದೆ. ಅನನಂ ಎಂದಾಗುತ್ತದೆ. ಪ್ರ ಎಂಬುದರೊಡನೆ ಸಮಾಸ ಮಾಡಿದಾಗ, ಅನಿತೇಃ (ಪಾ. ಸೂ. ೮-೧-೪) ಉಪಸರ್ಗದಲ್ಲಿರುವ ನಿಮಿತ್ತದ ಪರದಲ್ಲಿರುವ ಅನಧಾತುವಿನ ನಕಾರಕ್ಕೆ ಣಕಾರವು ಬರುತ್ತದೆ ಎಂಬುದರಿಂದ ಣತ್ವ ಬರುತ್ತದೆ. ಣತ್ವಕ್ಕೆ ನಿಮಿತ್ತವು ರೇಫ ಅಥವಾ ಷಕಾರ. ಇಲ್ಲಿ ಪ್ರ ಎಂಬಲ್ಲಿ ರೇಫವಿದೆ. ಪರದಲ್ಲಿ ಅನಧಾತು ಬಂದುದರಿಂದ ನಕಾರಕ್ಕೆ ಣಕಾರ ಬಂದರೆ ಪ್ರಾಣನಂ ಎಂದಾಗುತ್ತದೆ. ಮಂತ್ರದಲ್ಲಿ ಪ್ರಾಣಂ ಜೀವನಂ ಎಂದು ಎರಡು ಶಬ್ದಗಳು ಉಪಾತ್ತವಾದುದರಿಂದ ಪ್ರಾಣನಂ ಎಂಬಲ್ಲಿ ಅನ-ಚೇಷ್ಟಾಯಾಂ ಎಂಬ ಧಾತುವನ್ನು ಸ್ವೀಕರಿಸಿರುವುದು. ಆದರೆ ಹಾಗೆ ಚೇಷ್ಟಾರ್ಥಕ ಅನಧಾತುವನ್ನು ತೆಗೆದುಕೊಂಡರೆ ರೂಪಸಿದ್ಧಿಯಾಗುವುದಿಲ್ಲ. ಏಕೆಂದರೆ ಣತ್ವವಿಧಾನಮಾಡುವ ಸೂತ್ರದಲ್ಲಿ ಅನಿತೇಃ ಎಂದು ಇಚ್ ಸಹಿತವಾಗಿ ಉಚ್ಚರಿಸಿರುವುದರಿಂದ ಅನ ಪ್ರಾಣನೆ ಎಂಬ ಧಾತುವನ್ನು ಸ್ವೀಕರಿಸಬೇಕು. ಇದು ಅನಿಟ್ಟಾದ್ದರಿಂದ ಆ ರೂಪವನ್ನು ಹೊಂದುವುದಿಲ್ಲ. ಹೀಗಿರುವಾಗ ಚೇಷ್ಟಾರ್ಥಕ ಧಾತುವಿಗೆ ಣತ್ವ ಬಾರದೆ ಉಕ್ತರೂಪಸಿದ್ಧಿಯಾಗಲಾರದು. ಪ್ರಾಣನಾರ್ಥಕ ಅನಧಾತುವನ್ನೇ ತೆಗೆದುಕೊಳ್ಳೋಣವೆಂದರೆ ಮುಂದೆ ಮಂತ್ರದಲ್ಲಿ ಜೀವನಂ ಎಂದಿರುವುದರಿಂದ ವ್ಯರ್ಥವಾಗುತ್ತದೆ. ಹೀಗೆ ಪೂರ್ವಪಕ್ಷವು ಬಂದರೆ ಆಗ ಪ್ರಾಣನಾರ್ಥಕ ಅನಧಾತುವೇ ಇಲ್ಲಿ ಉಪಾತ್ತವಾದುದು ಎಂದು ಹೇಳಬೇಕು. ಆಗ ರೂಪಸಿದ್ಧಿಯಾಗುವುದರಲ್ಲಿ ಅಭ್ಯಂತರವಿಲ್ಲ. ಆದರೆ ಅರ್ಥ ವಿಷಯದಲ್ಲಿ ಪೌನರುಕ್ತ್ಯದೋಷ ಬರುತ್ತದೆ. ಆಗ ಅನ ಧಾತುವಿಗೆ ಚೇಷ್ಟಾರೂಪ ಅರ್ಥವನ್ನು ಲಕ್ಷಣಯಾ ಹೇಳಬೇಕು. ಜೀವಿಸಿರುವವನ ಲಕ್ಷಣ ಚೇಷ್ಟಾವೆಂಬುದು ಸರ್ವಸಂಮತವಾದುದು. ಪ್ರ ಎಂಬುದು ಗತಿಯಾದುದರಿಂದಲೂ ಅನನಂ ಎಂಬುದು ಕೃದಂತವಾದುದರಿಂದಲೂ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಪ್ರ+ಅನನಂ ಎಂದಿರುವಾಗ ಧಾತುವಿನ ಅಕಾರ ಉದಾತ್ತವಾಗುತ್ತದೆ. ಗತಿಯ ಅಕಾರದೊಡನೆ ಏಕಾದೇಶ ಬಂದಾಗ ಏಕಾದೇಶ ಉದಾತ್ತೇನೋದಾತ್ತಃ ( ಪಾ. ಸೂ. ೮-೨-೫ ) ಉದಾತ್ತದಿಂದ ಕೂಡಿಕೊಂಡು ಏಕಾದೇಶ ಬಂದಾಗ ಉದಾತ್ತವೇ ಆಗುತ್ತದೆ ಎಂಬುದರಿಂದ ಪ್ರಾ ಎಂಬುದು ಉದಾತ್ತವಾಗುತ್ತದೆ. ಣಕಾರಾಕಾರವು ಸ್ವರಿತವಾಗುತ್ತದೆ. ಪ್ರಾಣನಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

ತ್ವೇ—ಯುಷ್ಮಚ್ಛಬ್ದದಮೇಲೆ ಸಪ್ತಮೀ ಏಕವಚನ ವಿವಕ್ಷಾಮಾಡಿದಾಗ ಯುಷ್ಮದ್+ಇ (ಙಿ) ಎಂದಿರುತ್ತದೆ. ಸುಪಾಂಸುಲುಕ್ (ಪಾ. ಸೂ. ೭-೧-೩೯) ಸೂತ್ರದಿಂದ ಸಪ್ತಮಿಯ ಙಿಗೆ ಶೆ ಎಂಬ ಆದೇಶ ಬರುತ್ತದೆ. ಶೆ ಎಂಬಲ್ಲಿ ಶಕಾರವು ಇತ್ತಾಗುತ್ತದೆ. ಯುಷ್ಮಚ್ಛಬ್ದದ ಮಪರ್ಯಂತಕ್ಕೆ ತ್ವ ಆದೇಶವು ತ್ವಮಾವೇಕವಚನೇ ಸೂತ್ರದಿಂದ ಬರುತ್ತದೆ. ಅದ್ ಎಂಬ ಶೇಷಕ್ಕೆ ಮಪರ್ಯಂತಸ್ಯ ಎಂಬುದರಿಂದ ಲೋಪ ಬರುತ್ತದೆ. ತ್ವ+ಎ ಎಂದಿರುವಾಗ ಗುಣ ಬಂದರೆ ತ್ವೇ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

ಉಚ್ಛಸಿ— ಉಛೀ ವಿವಾಸೇ ಧಾತು ತುದಾದಿ. ಲಟ್ ಮಧ್ಯಮಪುರುಷೈಕವಚನ ಪ್ರತ್ಯಯ ಪರದಲ್ಲಿ ರುವಾಗ ಉಚ್ಛ್+ಸಿ ಎಂದಿರುವಾಗ ತುದಾದಿಯ ಶವಿಕರಣಪ್ರತ್ಯಯ ಬಂದರೆ ಉಚ್ಛಸಿ ಎಂದಾಗುತ್ತದೆ. ಇಲ್ಲಿ ಸಿಪ್ ಪ್ರತ್ಯಯ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ವಿಕರಣದ ಆದ್ಯುದಾತ್ತಸ್ವರವೇ ಪ್ರಬಲವಾಗುತ್ತದೆ. ನಿಪಾತೈರ್ಯದ್ಯದಿ (ಪಾ. ಸೂ. ೮-೧-೩೦) ಯದಾದಿಯೋಗವಿರುವಾಗ ಸರ್ವಾನುದಾತ್ತವು ಬರುವುದಿಲ್ಲ. ಎಂಬುದರಿಂದ ಇಲ್ಲಿ ತಿಙ್ಙತಿಙಃ ಎಂಬುದರಿಂದ ನಿಘಾತವು ಬರುವುದಿಲ್ಲ. ಹಿಂದೆ ಯಚ್ಛಬ್ದದ ಸಂಬಂಧವಿದೆ. ಆದುದರಿಂದ ಉಚ್ಛಸಿ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

ಸೂನರಿ— ಸುಷ್ಟು ನಯತಿ ಇತಿ ಸೂನರೀ ಚೆನ್ನಾಗಿ । ಕೊಂಡೊಯ್ಯುವವಳು ಎಂದರ್ಥ. ಣೃ ನಯೆ ಧಾತು. ಇದಕ್ಕೆ ಅಚಿ ಇಃ (ಉ. ಸೂ ೪-೫-೭೮) ಅಜಂತವಾದ ಧಾತುವಿಗೆ ಇ ಪ್ರತ್ಯಯ ಬರುತ್ತದೆ ಎಂಬುವರಿಂದ ಇ ಪ್ರತ್ಯಯಿ ಬರುತ್ತದೆ. ಇದು ಆರ್ಧಧಾತುಕಸಂಜ್ಞೆಯನ್ನು ಹೊಂದಿರುವುದರಿಂದ ಧಾತುವಿಗೆ ಗುಣ ಬರುತ್ತದೆ. ಸೂನರಿ ಎಂದು ಇಕಾರಾಂತ ಶಬ್ದವಾಗುತ್ತದೆ. ಗತಿಸಮಾಸವನ್ನು ಹೊಂದಿರುವುದರಿಂದ ಇಲ್ಲಿ ಕೃದಂತವನ್ನು ತೆಗೆದುಕೊಳ್ಳುವಾಗ ಗತಿ ಕಾರಕಪೂರ್ವದಲ್ಲಿರುವವುಗಳನ್ನೂ ತೆಗೆದುಕೊಳ್ಳಬೇಕೆಂದು ಪರಿಭಾಷೆಯಿಂದ ಲಭ್ಯವಾಗುತ್ತದೆ ಎಂದು ಹಿಂದೆ ಹೇಳಿದೆ. ಆದುದರಿಂದ ಇಲ್ಲಿ ಸ್ತ್ರೀತ್ವವಿವಕ್ಷಾಮಾಡಿದಾಗ ಕೃದಿಕಾರಾದಕ್ತಿನಃ ಎಂಬುದರಿಂದ ಙೀಷ್ ಪ್ರತ್ಯಯ ಬರುತ್ತದೆ. ಕ್ತಿನ್ ಭಿನ್ನವಾದ ಇಕಾರಾಂತ ಕೃತ್ ಪ್ರತ್ಯಯಾಂತ ಶಬ್ದಕ್ಕೆ ಙೀಷ್ ಬರುತ್ತದೆ ಎಂಬುದರಿಂದ ಇಲ್ಲಿ ಗತಿಪೂರ್ವಕವಾದ ಸೂನರಿ ಎಂಬುದಕ್ಕೆ ಙೀಷ್ ಬರುತ್ತದೆ. ನಿಪಾತಸ್ಯ ಚ (ಪಾ. ಸೂ. ೬-೩-೧೩೬) ಎಂಬುದರಿಂದ ಸು ಎಂಬ ನಿಪಾತಕ್ಕೆ ದೀರ್ಘಬರುತ್ತದೆ. ಸೂನರಿ ಶಬ್ದಕ್ಕೆ ಸಂಬುದ್ಧಿಯಲ್ಲಿ ಅಂಬಾರ್ಥನದ್ಯೋಃ ಹ್ರಸ್ವಃ ಎಂಬುದರಿಂದ ಹ್ರಸ್ವ ಬರುತ್ತದೆ. ಹ್ರಸ್ವದ ಪರದಲ್ಲಿರುವ ಸಂಬುದ್ಧಿಯ ಸು ವಿಭಕ್ತಿಗೆ ಲೋಪ ಬಂದರೆ ಸೂನರಿ ಎಂದು ರೂಪವಾಗುತ್ತದೆ. ಪಂಾದಿಶ್ಛಂದಸಿ ಬಹುಲಂ (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತವು ಪ್ರಾಪ್ತವಾದರೆ ಆಮಂತ್ರಿತಸ್ಯ ಚ ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ಸರ್ವಾನುದಾತ್ತಸ್ವರವು ಬರುತ್ತದೆ.

ವಿಭಾವರಿ— ವಿಶಿಷ್ಟಾ ಭಾ ಯಸ್ಯಾಃ ಸಾ ವಿಭಾವರೀ. ಹೆಚ್ಚಾದ ಕಾಂತಿಯುಳ್ಳವಳು ಎಂದರ್ಥ. ತದಸ್ಯಾಸ್ತ್ಯಸ್ಮಿನ್ನಿತಿ ಸೂತ್ರದಿಂದ ಮತುಪ್ ಪ್ರಾಪ್ತವಾದರೆ- ಛಂದಸೀ ವನಿಪೌ (ಪಾ. ಸೂ. ೫-೨-೧೦೯) ಛಂದಸ್ಸಿನಲ್ಲಿ ಮತ್ವರ್ಥದಲ್ಲಿ ಈ ವನಿಪ್ ಪ್ರತ್ಯಯಗಳು ಬರುತ್ತವೆ ಎಂಬುದರಿಂದ ವನಿಪ್ ಪ್ರತ್ಯಯ ಬರುತ್ತದೆ. ವನಿಪ್ಪಿನಲ್ಲಿ ವನ್ ಉಳಿಯುತ್ತದೆ. ವಿಭಾವನ್ ಎಂದು ನಾಂತವಾದ ಶಬ್ದವಾಗುತ್ತದೆ. ಸ್ತ್ರೀಲಿಂಗದಲ್ಲಿ ವನೋರಚ (ಪಾ. ಸೂ. ೪-೧-೭) ಸೂತ್ರದಿಂದ ವನ್ನಂತಾತಕ್ಕೆ ಙೀಪ್ ಪ್ರತ್ಯಯವೂ ನಕಾರಕ್ಕೆ ರೇಫವೂ ಬರುತ್ತದೆ. ವಿಭಾವರೀ ಎಂದು ರೂಪವಾಗುತ್ತದೆ. ಸಂಬುದ್ಧಿಯಲ್ಲಿ ಹ್ರಸ್ವ ಬಂದು ಸುಲೋಪವಾದಾಗ ವಿಭಾವರಿ ಎಂದು ರೂಪವಾಗುತ್ತದೆ. ಆಮಂತ್ರಿತ ನಿಘಾತಸ್ವರವು ಬಂದಿದೆ.

ಶ್ರುಧಿ— ಶ್ರು ಶ್ರವಣೆ ಧಾತು. ಭ್ವಾದಿ ಲೋಟ್‌ಮಧ್ಯಮಪುರುಷೈಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. ಸೇರ್ಹ್ಯಪಿಚ್ಚ ಸೂತ್ರದಿಂದ ಸಿಪ್ಪಿಗೆ ಹಿ ಎಂಬ ಆದೇಶ ಬರುತ್ತದೆ. ಅದಕ್ಕೆ ಶ್ರುಶೃಣುಪೃಕೃವೃಭ್ಯಶ್ಛಂದಸಿ (ಪಾ. ಸೂ. ೬-೪-೧೦೨) ಎಂಬುದರಿಂದ ಛಂದಸ್ಸಿನಲ್ಲಿ ಧಿ ಎಂಬ ಆದೇಶವು ಬರುತ್ತದೆ. ಶ್ರುವಃಶೃಚ ಸೂತ್ರದಿಂದ ಪ್ರಕೃತ್ಯಾದೇಶವೂ ಶ್ನುವಿಕರಣವೂ ಪ್ರಾಪ್ತವಾದರೆ ಆಗ, ಬಹುಲಂ ಛಂದಸಿ (ಪಾ. ಸೂ. ೨-೪-೭೩) ಛಂದಸ್ಸಿನಲ್ಲಿ ವಿಕಲ್ಪವಾಗಿ ವಿಕರಣಕ್ಕೆ ಲುಕ್ ಬರುತ್ತದೆ; ಎಂಬುದರಿಂದ ಇಲ್ಲಿ ವಿಕರಣಕ್ಕೆ ಲುಕ್ ಬರುತ್ತದೆ. ತತ್ಸನ್ನಿಯೋಗದಿಂದ ಬರುವ ಪ್ರಕೃತ್ಯಾದೇಶವೂ ಬರುವುದಿಲ್ಲ. ಶೃಧಿ ಎಂಬ ರೂಪವು ಆಗುತ್ತದೆ. ಇಲ್ಲಿ



CC-0. Jangamwadi Math Collection. Digitized by eGangotri

ಸಿಪ್ಪಿಗೆ ಬಂದಿರುವ ಹಿ ಆದೇಶಕ್ಕೆ ಅಪಿತ್ವವನ್ನು ಅತಿದೇಶಮಾಡಿರುವುದರಿಂದ ಅನುದಾತ್ತಸ್ವರವು ಬರುವುದಿಲ್ಲ. ಆಗ ಆದ್ಯುದಾತ್ತಶ್ಚ ಸೂತ್ರದಿಂದ ಪ್ರತ್ಯಯದ ಆದ್ಯುದಾತ್ತಸ್ವರವು ಬರುತ್ತದೆ. ತಿಙ್ಙತಿಙಃ ಸೂತ್ರದಿಂದ ನಿಘಾತವು ಪ್ರಾಪ್ತವಾದರೆ ಅಪಾದಾದೌ ಎಂದು ನಿಷೇಧಮಾಡಿರುವುದರಿಂದ ಇಲ್ಲಿ ಪಾದದ ಆದಿಯಲ್ಲಿ ಬಂದಿರು ವುದರಿಂದ ನಿಘಾತಸ್ವರವು (ಸರ್ವಾನುದಾತ್ತ) ಬರುವುದಿಲ್ಲ ಶ್ರುಧಿ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

ಚಿತ್ರಾಮಘೇ—ಮಘ ಎಂದರೆ ಧನದ ಹೆಸರು. ಚಿತ್ರಂ ಮಘಂ ಯಸ್ಯಾಃ ಸಾ ಚಿತ್ರಮಘಾ ನಾನಾ ವಿಧವಾದ ಐಶ್ವರ್ಯವುಳ್ಳವಳು ಎಂದರ್ಥ. ಅನ್ಯೇಷಾಮಪಿ ದೃಶ್ಯತೆ (ಪಾ. ಸೂ. ೬-೩-೧೩೭) ಬೇರೆ ಪೂರ್ವ ಪದಗಳಿಗೂ ಸಂಹಿತಾದಲ್ಲಿ ದೀರ್ಘ ಬರುತ್ತದೆ ಎಂಬುದರಿಂದ ಇಲ್ಲಿ ಮಂತ್ರದಲ್ಲಿ ಪೂರ್ವಪದವಾದ ಚಿತ್ರವೆಂಬುದಕ್ಕೆ ದೀರ್ಘ ಬಂದಿದೆ. ಸಂಬುದ್ಧಿಯಲ್ಲಿ ಸಂಬುದ್ಧೌ ಚ (ಪಾ. ಸೂ. ೭-೩-೧೦೬) ಸೂತ್ರದಿಂದ ಆಬಂತಕ್ಕೆ ಏಕಾರ ಬರುತ್ತದೆ. ಏಕಾರದ ಪರದಲ್ಲಿ ಸು ಬಂದುದರಿಂದ ಲೋಪಬಂದರೆ ಚಿತ್ರಾಮಘೆ ಎಂದು ರೂಪವಾಗುತ್ತದೆ.

ಹವಂ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಭ್ವಾದಿ. ಭಾವೇಽನುಪಸರ್ಗಸ್ಯ (ಪಾ. ಸೂ. ೩-೩-೭೫) ಅನುಪಸರ್ಗವುಳ್ಳ (ಕೇವಲವಾದ) ಹ್ವೇಞ್ ಧಾತುವಿಗೆ ಭಾವಾರ್ಥದಲ್ಲಿ ಅಪ್ ಪ್ರತ್ಯಯವು ಬರುತ್ತದೆ ಅದರೊಡನೆ ಧಾತುವಿಗೆ ಸಂಪ್ರಸಾರಣವೂ ಬರುತ್ತದೆ. ಇಲ್ಲಿ ಕೇವಲ ಧಾತುವಿರುವುದರಿಂದ ಅಪ್ ಪ್ರತ್ಯಯ ಬರುತ್ತದೆ. ಹ್ವೇಞನ ವಕಾರಕ್ಕೆ ಉಕಾರರೂಪವಾದ ಸಂಪ್ರಸಾರಣವು ಬರುತ್ತದೆ. ಹು+ಏ+ಅ ಎಂದಿರುವಾಗ ಸಂಪ್ರಸಾರಣಾಚ್ಚ ಸೂತ್ರದಿಂದ ಸಂಪ್ರಸಾರಣದ ಪರದಲ್ಲಿರುವ ಏಕಾರಕ್ಕೆ ಪೂರ್ವರೂಪ ಬರುತ್ತದೆ. ಹು+ಅ ಎಂದಿರುವಾಗ ಗುಣ ಅವಾದೇಶಗಳು ಬಂದರೆ ಹವಂ ಎಂಬ ರೂಪವಾಗುತ್ತದೆ.

ಸಂಹಿತಾಪಾಠಃ

ಉಷೋ ವಾಜಂ ಹಿ ವಂಸ್ವ ಯಶ್ಚಿತ್ರೋ ಮಾನುಷೇ ಜನೇ ।
ತೇನಾ ವಹ ಸುಕೃತೋ ಅಧ್ವರಾಁ ಉಪ ಯೇ ತ್ವಾ ಗೃಣಂತಿ
ವಹ್ನಯಃ ॥ ೧೧ ॥

ಪದಪಾಠಃ

ಉಷಃ । ವಾಜಂ । ಹಿ । ವಂಸ್ವ । ಯಃ । ಚಿತ್ರಃ । ಮಾನುಷೇ । ಜನೇ ।
ತೇನ । ಆ । ವಹ । ಸುಽಕೃತಃ । ಅಧ್ವರಾನ್ । ಉಪ । ಯೇ । ತ್ವಾ । ಗೃಣಂತಿ ।
ವಹ್ನಯಃ ॥ ೧೧ ॥



CC-0. Jangamwadi Math Collection. Digitized by eGangotri

## ಸಾಯಣಭಾಷ್ಯಂ

ಹೇ ಉಷೋ ವಾಜಂ ಹವಿರ್ಲಕ್ಷಣಮನ್ನಂ ಹಿ ಶ್ರುತಿಷು ಪ್ರಸಿದ್ಧಂ ವಂಸ್ವ । ಯಾಚಸ್ವ । ಸ್ವೀಕುರ್ವಿತ್ಯರ್ಥಃ । ಯೋ ವಾಜಶ್ಚಿತ್ರಶ್ಚಾಯನೀಯೋ ಮಾನುಷೇ ಮನುಷ್ಯೇ ಜನೇ ಜಾತೇ ಯಜಮಾನೇ ವರ್ತತೇ । ತಂ ವಾಜಮಿತಿ ಪೂರ್ವತ್ರಾನ್ವಯಃ । ತೇನ ಕಾರಣೇನ ಸುಕೃತಃ ಸುಷ್ಠು ಕೃತವತೋ ಯಜಮಾನಾನಧ್ವರಾನ್ । ಹಿಂಸಾರಹಿತಾನ್ ಯಾಗಾನುಪಾ ವಹ । ಪ್ರಾಪಯ । ಯೇ ಯಜಮಾನಾ ವಹ್ನಯೋ ಯಜ್ಞನಿರ್ವಾಹಕಾಸ್ತ್ವಾಂ ತ್ವಾಂ ಗೃಣಂತಿ ಸ್ತುವಂತಿ । ತಾನ್ ಸುಕೃತ ಇತಿ ಪೂರ್ವೇಣ ಸಂಬಂಧಃ । ಏತದುಕ್ತಂ ಭವತಿ । ಯಜಮಾನೈಃ ಪ್ರತ್ತಂ ಹವಿಃ ಸ್ವೀಕೃತ್ಯ ಪುನರಪಿ ತೇಷಾಂ ಯಜ್ಞಂ ಸಂಪಾದಯೇತಿ ॥ ವಾಜಂ । ವಜ ವ್ರಜ ಗತೌ । ಕರ್ಮಣಿ ಘಞ್ । ಅಜಿವ್ರಜ್ಯೋಶ್ಚ । ಪಾ. ೭-೩-೬೦ । ಇತ್ಯತ್ರ ಚಶಬ್ದಸ್ಯಾನುಕ್ತಸಮುಚ್ಚಯಾರ್ಥತ್ವಾದ್ವಾಜೋ ವಾಜ್ಯಮಿತ್ಯತ್ರಾಪಿ ಕುತ್ವಾಭಾವ ಇತಿ ವೃತ್ತಾವುಕ್ತತ್ವಾತ್ಕುತ್ವಾಭಾವಃ । ಕರ್ಷಾತ್ವತ ಇತ್ಯಂತೋದಾತ್ತತ್ವೇ ಪ್ರಾಪ್ತೇ ವೃಷಾದಿತ್ವಾದಾದ್ಯುದಾತ್ತತ್ವಂ । ವಂಸ್ವ । ವನು ಯಾಚನೇ । ಅತ್ರ ಯಾಚನವಾಚಿನಾ ಧಾತುನಾ ತದುತ್ತರಭಾವೀ ಸ್ವೀಕಾರೋ ಲಕ್ಷ್ಯತೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಹಿ ಚೇತಿ ನಿಘಾತಪ್ರತಿಷೇಧಃ । ಸುಕೃತಃ । ಸುಕರ್ಮಪಾಪೇತ್ಯಾದಿನಾ ಕರೋತೇರ್ಭೂತಾರ್ಥೇ ಕ್ವಿಪ್ । ತುಗಾಗಮಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅಧ್ವರಾನ್ । ಧ್ವರೋ ಹಿಂಸಾ ನಾಸ್ತ್ಯಸ್ಮಿನ್ನಿತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಅಧ್ವರಾನಿತ್ಯಸ್ಯೇಪ್ಸಿತತಮತ್ವಾತ್ಕರ್ತುರೀಪ್ಸಿತತಮಂ । ಪಾ. ೧-೪-೪೯ । ಇತಿ ಕರ್ಮಸಂಜ್ಞಾ । ಸುಕೃತ ಇತ್ಯಸ್ಯ ತ್ವಕಥಿತಂ ಚ । ಪಾ. ೧-೪-೫೧ । ಇತಿ । ನೀವಹ್ಯೋರ್ಹರತೇಶ್ಚ । ಮ. ೧-೪-೫೧ । ಇತಿ ದ್ವಿಕರ್ಮಕೇಷು ವಹತೇಃ ಪರಿಗಣಿತತ್ವಾತ್ । ಅಧ್ವರಾನಿತ್ಯತ್ರ ನಕಾರಸ್ಯ ಸಂಹಿತಾಯಾಂ ದೀರ್ಘಾದಟೀತಿ ರುತ್ವಂ । ಆತೋಽಟಿ ನಿತ್ಯಮಿತಿ ಪೂರ್ವಸ್ಯಾಕಾರಸ್ಯ ಸಾನುನಾಸಿಕತಾ । ಗೃಣಂತಿ । ಗ್ವಾ ಶಬ್ದೇ । ಕ್ರ್ಯಾದಿಭ್ಯಃ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ ॥

## ॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ, । ಚಿತ್ರಃ—ಉತ್ತಮವಾದ । ಯಃ— ಯಾವ ಅನ್ನವು । ಮಾನಷೇ ಜನೇ—ಮಾನವನಾದ ಯಜ್ಞಕರ್ತನಲ್ಲಿ ಸಂಪಾದಿತವಾಗಿದೆಯೋ । (ತಂ) ವಾಜಂ ಹಿ—ಶ್ರುತಿ ಪ್ರಸಿದ್ಧವಾಗಿ ಹವಿಸ್ಸಿನ ರೂಪದಲ್ಲಿರುವ ಆ ಅನ್ನವನ್ನು । ವಂಸ್ವ—ಸ್ವೀಕರಿಸು. । ತೇನ—ಆ ಕಾರಣದಿಂದ । ಯೇ—ಯಾವ ಯಜಮಾನರು । ವಹ್ನಯಃ— ಯಜ್ಞನಿರ್ವಾಹಕರಾಗಿ । ತ್ವಾಂ—ನಿನ್ನನ್ನು । ಗೃಣಂತಿ—ಸ್ತುತಿಸುತ್ತಾರೋ । (ತಾನ್) ಸುಕೃತಃ—ಪವಿತ್ರಕರ್ಮಗಳನ್ನುಮಾಡುವ ಆ ಯಜ್ಞಕರ್ತರನ್ನು । ಅಧ್ವರಾನ್—ಹಿಂಸಾರಹಿತವಾದ ಯಜ್ಞಗಳ ಬಳಿಗೆ । ಉಪಾ ವಹ—ಕರೆತಂದು ಸೇರಿಸು.

## ॥ ಭಾವಾರ್ಥ ॥

ಎಲೈ ಉಷೋದೇವಿಯೇ, ಮಾನವನಾದ ಯಜ್ಞಕರ್ತನಲ್ಲಿ ಶ್ರುತಿಪ್ರಸಿದ್ಧವಾದ ಹವಿಸ್ಸಿನ ರೂಪದಲ್ಲಿರುವ ಅನ್ನವನ್ನು ಸ್ವೀಕರಿಸು. ಈ ರೀತಿ ಅವನ ಯಜ್ಞವನ್ನು ಸಾಂಗವಾಗಿ ನೆರವೇರಿಸಿ ಪುನಃ ಆ ಯಜ್ಞಸಂಪಾದನಾರ್ಥವಾಗಿ, ಯಜ್ಞನಿರ್ವಾಹಕರೂ, ನಿನ್ನನ್ನು ಸ್ತುತಿಸುವವರೂ ಮತ್ತು ಪವಿತ್ರಕರ್ಮಗಳನ್ನು ಮಾಡುವವರೂ ಆದ ಯಜಮಾನರನ್ನು ಹಿಂಸಾರಹಿತವಾದ ಯಜ್ಞಗಳ ಸ್ಥಾನಕ್ಕೆ ಕರೆತಂದುಸೇರಿಸು.



CC-0. Jangamwadi Math Collection. Digitized by eGangotri

## English Translation.

Ushas, accept true Sacrificial food of best quality which exists among men and thereby bring to true Ceremony (Sacrifice) the pious, who offering oblations praise you

॥ ವಿಶೇಷ ವಿಷಯಗಳು ॥

**ವಂಸ್ವ—ವನು ಯಾಚನೇ । ಅತ್ರ ಯಾಚನವಾಚಿನಾ ಧಾತುನಾ ತದುತ್ತರಭಾವೀ ಸ್ವೀಕಾರೋ ಲಕ್ಷ್ಯತೇ ।** ವಂಸ್ವ ಎಂಬ ಕ್ರಿಯಾಪದವು, ವನು ಯಾಚನೇ-ಯಾಚಿಸು ಎಂಬ ಧಾತುವಿನಿಂದ ಉಂಟಾಗಿದೆ. ಈ ಧಾತುವಿಗೆ ಯಾಚನೆಮಾಡು ಎಂಬ ಅರ್ಥವಿದ್ದರೂ, ಆ ಯಾಚನೆಗೆ ಉತ್ತರರೂಪವಾಗಿ ಕೊಡುವ ವಸ್ತುವನ್ನು ಸ್ವೀಕಾರಮಾಡು ಎಂಬ ಅರ್ಥವೇ ಇಲ್ಲಿ ಪರಿಗ್ರಾಹ್ಯವೆಂದು ಭಾಷ್ಯಕಾರರು ಹೇಳಿರುವರು-

**ಚಿತ್ರಃ—ಚಾಯನೀಯಃ, ಶ್ರೇಷ್ಠಃ, ಪೂಜನೀಯಃ**—ಉತ್ತಮವಾದ

**ಸುಕೃತಃ—ಸುಷ್ಠು ಕೃತವತಃ ।** ಯಜ್ಞಾನುಷ್ಠಾನವನ್ನು ಚೆನ್ನಾಗಿ ಮಾಡಿರುವ (ಯಜಮಾನರು)

**ವಹ್ನಯಃ—ವೋಢಾರಃ ಯಜ್ಞನಿರ್ವಾಹಕಾಃ ।** ಯಜ್ಞಗಳನ್ನು ನಿರ್ವಹಿಸುವ

ಈ ಋಕ್ಕಿನ ಉತ್ತರಾರ್ಧಕ್ಕೆ ಭಾಷ್ಯಕಾರರು ಅರ್ಥಮಾಡಿರುವುದಕ್ಕಿಂತ—**ದೇವೇಷು ಜನೇಷು ಯದ್ಧನಮುತ್ತಮಮಿತಿ ಕಥ್ಯತೇ ತತ್ತು ಅಸ್ಮಾದೃಗ್ಭಿರ್ಮರ್ತ್ಯೈರಲಭ್ಯಮೇವ । ಯತ್ಪುನರ್ಮನುಷ್ಯಜನೇಷೂತ್ತಮಮಿತಿ ಗಣ್ಯತೇ ತತ್ತ್ವಾಂ ಸ್ತುವದ್ಭ್ಯಃ ಅಸ್ಮಾದೃಗ್ಭ್ಯಸ್ತ್ವಂ ದೇಹಿ । ತದ್ವದಾಸಿ ಚೇತ್ತೇನ ಸಮೃದ್ಧಾ ವಯಂ ಯಾನ್ ಯಜ್ಞಾನ್ ಕರಿಷ್ಯಾಮಸ್ತಾನ್ಪ್ರತಿ ಸುಕರ್ಮಕಾರಿಣೋ ದೇವಾ ಹವಿರ್ಗ್ರಹಣಾರ್ಥಮವಶ್ಯಮೇವ ಆಗಮಿಷ್ಯಂತೀತಿ ॥** ಎಲೈ ಉಷೋ ದೇವತೆಯೇ, ನಿನ್ನನ್ನು ಯಾವ ಯಜ್ಞಾನುಷ್ಠಾನಮಾಡುವ ಜನರು ಸ್ತುತಿಸುವರೋ ಅವರು ಮಾಡುತ್ತಿರುವ ಯಜ್ಞಗಳಿಗೆ ದೇವತೆಗಳನ್ನು ( ಸುಕೃತ ) ಕರೆದುಕೊಂಡುಬಾ ಎಂಬ ಅರ್ಥವು ಸರಿಯಾಗಿ ಹೊಂದುವುದೆಂದು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ವಾಜಂ**—ವಜ ವ್ರಜ ಗತೌ ಧಾತು. ಕರ್ಮಾರ್ಥದಲ್ಲಿ ಘಞ್‌ಪ್ರತ್ಯಯ ಬರುತ್ತದೆ. ವಜ್+ಅ ಎಂದಿರುವಾಗ ಇತ್ತ್ವಾದುದರಿಂದ **ಅತಉಪಧಾಯಾಃ** ಸೂತ್ರದಿಂದ ಧಾತುವಿಗೆ ವೃದ್ಧಿ ಬರುತ್ತದೆ. **ಚಜೋಃ ಕುಘಿಣ್ಣ್ಯತೋಃ** ಎಂಬ ಸೂತ್ರದಿಂದ ಕುತ್ವವು ಪ್ರಾಪ್ತವಾದರೆ **ಅಜಿವ್ರಜ್ಯೋಶ್ಚ** ( ಪಾ. ಸೂ. ೭-೩-೬೦ ) ಎಂಬುದರಿಂದ ಕುತ್ವನಿಷೇಧಬರುತ್ತದೆ. ಅಲ್ಲಿ ವಜ ಧಾತುವನ್ನು ಸೇರಿಸದಿದ್ದರೂ ಚಕಾರವನ್ನು ಪಾಠಮಾಡಿರುವುದರಿಂದ ಅದು ಅನುಕ್ತಸಮುಚ್ಚಾಯಕವಾಗುತ್ತದೆ. ಅನುಕ್ತವಾದ ಧಾತುವೆಂದರೆ ಈ ವಜ ಧಾತುವೇ. ಆದುದರಿಂದ ವಾಜಂ ವಾಜ್ಯಂ ಎಂದು ಘಿತ್ತು ಣಿತ್ತು ಆದ ಪ್ರತ್ಯಯಪರಲ್ಲಿರುವಾಗ ಕುತ್ವವು ಬರುವುದಿಲ್ಲ. ಈ ವಿಷಯವನ್ನು ವೃತ್ತಿಯಲ್ಲಿ ಹೇಳಿರುತ್ತಾರೆ. ವಾಜ ಶಬ್ದವು ಘಞಂತವಾದುದರಿಂದ **ಕರ್ಷಾತ್ವತೋ ಘಞೋಂತ ಉದಾತ್ತಃ** (ಪಾ. ಸೂ. ೬-೧-೧೫೯) ಸೂತ್ರದಿಂದ ಅಂತೋದಾತ್ತವು ಪ್ರಾಪ್ತವಾದರೆ ವೃಷಾ-



CC-0. Jangamwadi Math Collection. Digitized by eGangotri

ದೀನಾಂ ಚ (ಪಾ. ಸೂ- ೬-೧-೨೦೩) ವೃಷಾದಿಗಣಪಠಿತವಾದವುಗಳಿಗೆ ಆದ್ಯುದಾತ್ತಸ್ವರ ಬರುತ್ತದೆ. ಎಂಬುದರಿಂದ ವೃಷಾದಿಯಲ್ಲಿ ವಾಜ ಶಬ್ದವನ್ನು ಪಾಠಮಾಡಿರುವುದರಿಂದ ಆದ್ಯುದಾತ್ತವಾಗುತ್ತದೆ. ವಾಜಂ ಎಂಬುದು ಆದ್ಯುದಾತ್ತವಾದ ಪದ.

ವಂಸ್ವ—ವನು ಯಾಚನೇ ಧಾತು. ತನಾದಿ. ಇಲ್ಲಿ ಯಾಚನೆ ಮಾತ್ರ ಅರ್ಥವಲ್ಲ. ಯಾಚನೆಯಾದನಂತರ ಮುಂದಿನ ವ್ಯಾಪಾರವು ಅಂದರೆ ಸ್ವೀಕಾರವು ಅರ್ಥ. ಲಕ್ಷಣಾಪ್ರಯೋಗ. ತನಾದಿಗೆ ಬರುವ ವಿಕರಣವು (ಉ) ಪ್ರಾಪ್ತವಾದರೆ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಎಂಬುದರಿಂದ ವಿಕರಣಕ್ಕೆ ಲುಕ್ ಬರುತ್ತದೆ. ಥಾಸಃ ಸೇ (ಪಾ. ಸೂ. ೩-೪-೮೦) ಸೂತ್ರದಿಂದ ಲೋಟಿನ ಮಧ್ಯಮಪುರುಷದ ಥಾಸಿಗೆ ಸೆ ಆದೇಶ ಬಂದರೆ ಸವಾಭ್ಯಾಂ ವಾಮೌ ( ಪಾ. ಸೂ. ೩-೪-೯೧) ಸೂತ್ರದಿಂದ ಸಪರದಲ್ಲಿರುವ ಏಕಾರಕ್ಕೆ ವ ಎಂಬ ಆದೇಶ ಬರುತ್ತದೆ. ವನ್+ಸ ಎಂದಿರುವಾಗ ನಶ್ಚ ಸೂತ್ರದಿಂದ ಅನುಸ್ವಾರಬಂದರೆ ವಂಸ್ವ ಎಂದಾಗುತ್ತದೆ. ವನು ಧಾತುವು ಅನುದಾತ್ತೇತ್ತಾದುದರಿಂದ ತಾಸ್ಯನುದಾತ್ತೇತ್ (ಪಾ. ಸೂ. ೬-೧-೧೮೬) ಸೂತ್ರದಿಂದ ಲಸಾರ್ವಧಾತುಕವಾದ ಸ್ವ ಎಂಬುದು ಅನುದಾತ್ತವಾಗುತ್ತದೆ. ಆಗ ಧಾತುಸ್ವರವೇ (ಅಂತೋದಾತ್ತ) ಉಳಿಯುತ್ತದೆ. ಹಿಚ (ಪಾ. ಸೂ. ೮-೧-೩೪) ಹಿ ಶಬ್ದದ ಸಂಬಂಧವಿರುವಾಗ ತಿಙಂತಕ್ಕೆ ನಿಘಾತ ಬರುವುದಿಲ್ಲ ಎಂಬುದರಿಂದ ತಿಙ್ಙತಿಙಃ ಸೂತ್ರದಿಂದ ಸರ್ವಾನುದಾತ್ತಸ್ವರ ಬರುವುದಿಲ್ಲ.

ಸುಕೃತಃ—ಸು ಉಪಸರ್ಗ. ಡುಕೃಞ್ ಕರಣೇ ಧಾತು. ಇದಕ್ಕೆ ಸುಕರ್ಮಪಾಪಮಂತ್ರಪುಣ್ಯೇಷು ಕೃಞಃ (ಪಾ. ಸೂ. ೩-೨-೮೯) ಇವುಗಳು ಉಪಪದವಾಗಿರುವಾಗ ಕೃಞ್ ಧಾತುವಿಗೆ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುತ್ತದೆ ಎಂಬುದರಿಂದ ಭೂತಾರ್ಥದಲ್ಲಿ ಕ್ವಿಪ್ ಪ್ರತ್ಯಯ ಬರುತ್ತದೆ. ಸುಕೃ+ಕ್ವಿಪ್ ಎಂದಿರುವಾಗ ಪ್ರತ್ಯಯಕ್ಕೆ ಸರ್ವಲೋಪ ಬಂದರೆ ಅದು ಪಿತ್ತಾದುದರಿಂದ ಹ್ರಸ್ವಸ್ಯ ಪಿತಿ ಕೃತಿ ತುಕ್ ಸೂತ್ರದಿಂದ ಧಾತುವಿನ ಹ್ರಸ್ವ ಋಕಾರಕ್ಕೆ ತುಗಾಗಮ ಬರುತ್ತದೆ. ಸುಕೃತ್ ಎಂದಾಗುತ್ತದೆ. ತಕಾರಾಂತವಾದ ಈ ಶಬ್ದದ ಮೇಲೆ ದ್ವಿತೀಯಾಬಹುವಚನ ಪ್ರತ್ಯಯವನ್ನು ಸೇರಿಸಿದರೆ ಸುಕೃತಃ ಎಂದು ರೂಪವಾಗುತ್ತವೆ. ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದಂತೋತ್ತರಪದಪ್ರಕೃತಿಸ್ವರ ಬರುತ್ತದೆ. ಕಕಾರೋತ್ತರ ಋಕಾರವು ಉದಾತ್ತವಾಗುತ್ತದೆ. ಸುಕೃತಃ ಎಂಬುದು ಮಧ್ಯೋದಾತ್ತವಾದ ಶಬ್ದವಾಗುತ್ತದೆ. ಉದಾತ್ತದ ಪರದಲ್ಲಿರುವ ಅನುದಾತ್ತವು ಸ್ವರಿತವಾಗುತ್ತದೆ.

ಅಧ್ವರಾನ್—ಧ್ವರಃ ಹಿಂಸಾ ನಾಸ್ತಿ ಅಸ್ಮಿನ್ ಇತಿ ಅಧ್ವರಃ ಯಾವುದರಲ್ಲಿ ಹಿಂಸಾವೆಂಬುದು ಇಲ್ಲವೋ ಅದು ಅಧ್ವರವೆಂದು ತಾತ್ಪರ್ಯ. ಇದು ಬಹುವ್ರೀಹಿಸಮಾಸ. ಬಹುವ್ರೀಯಲ್ಲಿ ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ, ನಞ್ಸುಭ್ಯಾಂ (ಪಾ. ಸೂ. ೬-೨-೧೭೨) ನಞ್, ಸು, ಪರದಲ್ಲಿರುವ ಉತ್ತರಪದವು ಬಹುವ್ರೀಹಿಯಲ್ಲಿ ಅಂತೋದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಉತ್ತರಪದಾಂತೋದಾತ್ತಸ್ವರವು ಬರುತ್ತದೆ. ಅಧ್ವರಶಬ್ದವು ಅಂತೋದಾತ್ತವಾದ ಶಬ್ದವಾಗುತ್ತದೆ. ದ್ವಿತೀಯಾಬಹುವಚನದಲ್ಲಿ ಪೂರ್ವಸವರ್ಣದೀರ್ಘಬಂದು ನತ್ವ ಬಂದರೆ ಅಧ್ವರಾನ್ ಎಂದು ರೂಪವಾಗುತ್ತದೆ. ಕರ್ತುರೀಪ್ಸಿತತಮಂ ಕರ್ಮ ( ಪಾ. ಸೂ. ೧-೪-೪೯) ಕರ್ತೃವ್ಯಾಪಾರದಿಂದುಂಟಾಗುವ ಫಲದ ಸಂಬಂಧವು ಎಲ್ಲಿ ಉಂಟಾಗಬೇಕೆಂದು ಉತ್ಕಟವಾದ ಇಚ್ಛೆಯಿರುವುದೋ ಆ ಇಚ್ಛಾದಲ್ಲಿ ವಿಷಯವಾದ ಕರ್ಮವೆಂಬ ಸಂಜ್ಞೆಯನ್ನು ಹೊಂದುತ್ತದೆ. ತಂಡುಲಂ ಪಚತಿ ಎಂಬಲ್ಲಿ ಪಾಕಕ್ರಿಯೆಯಿಂದುಂಟಾಗುವ ಶಿಥಿಲವಾಗುವ ಫಲವನ್ನು ಅಕ್ಕಿಯಲ್ಲಿ ಬಯಸುವುದರಿಂದ ಅದು



CC-0. Jangamwadi Math Collection. Digitized by eGangotri

ಕರ್ಮವಾಗುತ್ತದೆ. ಹಾಗೆ ಇಲ್ಲಿ ಅಧ್ವರಾನ್ ವಹ ಎಂದು ಪ್ರಯುಕ್ತವಾದುದರಿಂದ ವಹ ಧಾತುವಿನ ವ್ಯಾಪಾರದಿಂದುಂಟಾಗುವ ಫಲವನ್ನು ಅಧ್ವರದಲ್ಲಿ ವಿಶೇಷವಾಗಿ ಅನ್ವಯಿಸುವುದರಿಂದ ಹಿಂದಿನ ಸೂತ್ರದಿಂದ ಅಧ್ವರಶಬ್ದಕ್ಕೆ ಕರ್ಮಸಂಜ್ಞಾ ಬಂದಿದೆ. ಆದುದರಿಂದ ಕರ್ಮಣಿ ದ್ವಿತೀಯಾ ಎಂಬ ಸೂತ್ರದಿಂದ ದ್ವಿತೀಯಾವಿಭಕ್ತಿ ಬಂದಿರುತ್ತದೆ. **ಅಕಥಿತಂ ಚ** ( ಪಾ. ಸೂ. ೧-೪-೫೧ ) ಅಪಾದಾನಾದಿಗಳನ್ನು ವಿವಕ್ಷಾಮಾಡದೇ ಇರುವಾಗ ಕೇವಲ ಸಂಬಂಧಿ ಎಂದು ವಿವಕ್ಷಾಮಾಡಿದಾಗ ಕರ್ಮಸಂಜ್ಞೆ ಬರುತ್ತದೆ. ಎಲ್ಲಾ ಧಾತುಪ್ರಯೋಗವಿರುವಾಗಲೂ ಹೀಗೆ ಕರ್ಮಸಂಜ್ಞೆ ಪ್ರಾಪ್ತವಾದರೆ ಭಾಷ್ಯದಲ್ಲಿ ಇಷ್ಟೇ ಧಾತುಗಳನ್ನು ತೆಗೆದುಕೊಳ್ಳಬೇಕೆಂದು ಪರಿಗಣನ ಮಾಡಿರುವರು. ಅಲ್ಲಿ **ನೀ ವಹ್ಯೋರ್ಹರತೇಶ್ಚ** (ಪಾ. ಮ. ೧-೪-೫೧) ಎಂದು ಪಠಿತವಾದವುಗಳ ಜೊತೆಗೆ ವಹ ಧಾತುವನ್ನೂ ಸೇರಿಸಿರುತ್ತಾರೆ. ಇಲ್ಲಿ ಪಠಿತವಾದ ಧಾತುಗಳೆಲ್ಲವೂ ದ್ವಿಕರ್ಮಕಗಳಾಗುತ್ತವೆ ಇಲ್ಲಿ ವಹ ಧಾತುವಿರುವುದರಿಂದ ವಹಧಾತ್ವರ್ಥದಲ್ಲಿ ಸಾಕ್ಷಾತ್ತಾಗಿ ಕರ್ಮವಾದುದು ಅಧ್ವರವೆಂದು ಹಿಂದೆ ಹೇಳಿರುತ್ತದೆ. ಅಕಥಿತಂ ಚ ಸೂತ್ರದಿಂದ ಸುಕೃತಃ ಎಂಬುದಕ್ಕೂ ಕರ್ಮಸಂಜ್ಞೆಯು ಬರುತ್ತದೆ. ಸುಕೃತಃ ಎಂಬಲ್ಲಿರುವ ಕರ್ತೃಕಾರಕನನ್ನು ವಿವಕ್ಷಾಮಾಡದೆ ಸಂಬಂಧಮಾತ್ರ ವಿವಕ್ಷಾಮಾಡಿದುದರಿಂದ ಕರ್ಮಸಂಜ್ಞಾ ಬಂದು ದ್ವಿತೀಯಾವಿಭಕ್ತಿ ಬಂದಿದೆ. ಅಧ್ವರಾನ್ ಎಂಬಲ್ಲಿ ಮಂತ್ರದಲ್ಲಿ **ದೀರ್ಘಾದಟಿ ಸಮಾನಪಾದೇ** ( ಪಾ. ಸೂ. ೮-೩-೯ ) ದೀರ್ಘದ ಪರದಲ್ಲಿರುವ ನಕಾರಕ್ಕೆ ಅಟ್ ಪರದಲ್ಲಿರುವಾಗ ಸಮಾನಪಾದದಲ್ಲಿ ರುತ್ವ ಬರುತ್ತದೆ ಎಂಬುದರಿಂದ ನಕಾರವು ದೀರ್ಘದ ಪರದಲ್ಲಿರುವದರಿಂದಲೂ ಅದಕ್ಕೆ ಉಪ ಎಂಬಲ್ಲಿರುವ ಅಚ್ ಪರದಲ್ಲಿರುವುದರಿಂದಲೂ ರುತ್ವ ಬರುತ್ತದೆ ಅಧ್ವರಾರ್+ಉಪ ಎಂದಿರುವಾಗ ರುತ್ವಕ್ಕೆ ಯತ್ವವೂ ಲೋಪವೂ ಬರುತ್ತದೆ. **ಆತೋಽಟಿ ನಿತ್ಯಂ** (ಪಾ. ಸೂ. ೮-೩-೩) ಅಟ್ ಪರದಲ್ಲಿರುವಾಗ ರುವಿನ ಪೂರ್ವದಲ್ಲಿರುವ ಆಕಾರಕ್ಕೆ ನಿತ್ಯವಾಗಿ ಅನುನಾಸಿಕ ಬರುತ್ತದೆ. ಇದರಿಂದ ಹಿಂದೆ ಹೇಳಿದಂತೆ ಅಟ್ ಪರದಲ್ಲಿರುವುದರಿಂದ ರೇಫದಮೇಲಿರುವ ಆಕಾರವು ಅನುನಾಸಿಕವಾಗುತ್ತದೆ. ಇದು ಮಂತ್ರದಲ್ಲಿ ಮಾತ್ರ ವೆಂದುದರಿಂದ ಪದಕಾಲದಲ್ಲಿ ಇಲ್ಲ.

**ಗೃಣಂತಿ**—ಗೄ ಶಬ್ದೇ ಧಾತು. ಕ್ರ್ಯಾದಿ. ಪ್ರಥಮಪುರುಷ ಬಹುವಚನ ವಿವಕ್ಷಾಮಾಡಿದಾಗ ಝಿ ಪ್ರತ್ಯಯ ಬಂದರೆ ಅದಕ್ಕೆ ಅಂತಾದೇಶ ಬರುತ್ತದೆ **ಕ್ರ್ಯಾದಿಭ್ಯಃ ಶ್ನಾ** (ಪಾ. ಸೂ. ೩-೧-೮೧) ಸೂತ್ರದಿಂದ ಶ್ನಾ ವಿಕರಣ ಪ್ರತ್ಯಯ ಬರುತ್ತದೆ. ಗೄ+ನಾ+ಅಂತಿ ಎಂದಿರುವಾಗ **ಪ್ವಾದೀನಾಂ ಹ್ರಸ್ವಃ** (ಪಾ. ಸೂ. ೭-೩-೮೦) ಸೂತ್ರದಿಂದ ಪ್ವಾದಿಯಲ್ಲಿ ಈ ಧಾತುವು ಸೇರಿರುವುದರಿಂದ ಹ್ರಸ್ವ ಬರುತ್ತದೆ. **ಶ್ನಾಭ್ಯಸ್ತಯೋರಾತಃ** (ಪಾ. ಸೂ. ೬-೪-೧೧೨) ಸೂತ್ರದಿಂದ ಅಜಾದಿ ಙಿತ್ಸಾರ್ವಧಾತುಕ ಪ್ರತ್ಯಯು ಪರದಲ್ಲಿರುವುದರಿಂದ ವಿಕರಣದ ಆಕಾರಕ್ಕೆ ಲೋಪಬರುತ್ತದೆ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ ಬಂದರೆ ಗೃಣಂತಿ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರವು ಪ್ರಬಲವಾದುದರಿಂದ ಪ್ರತ್ಯಯಕ್ಕೆ ಆದ್ಯುದಾತ್ತಸ್ವರಬರುತ್ತದೆ. ಣಕಾರೋತ್ತರ ಆಕಾರವು ಉದಾತ್ತವಾಗುತ್ತದೆ. ಗೃಣಂತಿ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ. ಹಿಂದೆ ಯೇ ಎಂಬ ಯಚ್ಛಬ್ದದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ( ಪಾ. ಸೂ. ೮-೧-೬೬ ) ಸೂತ್ರದಿಂದ ನಿಘಾತ ಪ್ರತಿಷೇಧ ಬರುತ್ತದೆ. ॥ ೧೧ ॥

---



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ವಿಶ್ವಾನ್ದೇವಾಁ ಆ ವಹ ಸೋಮಪೀತಯೇಽಂತರಿಕ್ಷಾದುಷಸ್ತ್ವಂ।
ಸಾಸ್ಮಾಸು ಧಾ ಗೋಮದಶ್ವಾವದುಕ್ಥ್ಯ೧ಮುಷೋ ವಾಜಂ ಸುವೀರ್ಯಂ ॥೧೨॥

॥ ಪದಪಾಠಃ ॥

ವಿಶ್ವಾನ್। ದೇವಾನ್। ಆ। ವಹ। ಸೋಮಽಪೀತಯೇ। ಅಂತರಿಕ್ಷಾತ್। ಉಷಃ। ತ್ವಂ।
ಸಾ। ಅಸ್ಮಾಸು। ಧಾಃ। ಗೋಽಮತ್। ಅಶ್ವಽವತ್। ಉಕ್ಥ್ಯಂ। ಉಷಃ। ವಾಜಂ। ಸುಽವೀರ್ಯಂ ॥೧೨॥

ಸಾಯಣಭಾಷ್ಯಂ

ಹೇ ಉಷಸ್ತ್ವಂ ಸೋಮಪೀತಯೇ ಸೋಮಪಾನಾಯಾಂತರಿಕ್ಷಾದಂತರಿಕ್ಷಲೋಕಾದ್ವಿಶ್ವಾನ್ಸರ್ವಾನ್ದೇವಾನಾ ವಹ। ಅಸ್ಮದೀಯಂ ದೇವಯಜನದೇಶಂ ಪ್ರಾಪಯ। ಹೇ ಉಷಃ ಸಾ ತಾದೃಶೀ ತ್ವಂ ಗೋಮತ್ ಗೋಮಂತಂ ಬಹುಭಿರ್ಗೋಭಿರ್ಯುಕ್ತಮಶ್ವಾವದಶ್ವೈರುಪೇತಮುಕ್ಥ್ಯಂ ಪ್ರಶಸ್ಯಂ ಸುವೀರ್ಯಂ ಶೋಭನವೀರ್ಯೋಪೇತಂ ವಾಜಮನ್ನಮಸ್ಮಾಸು ಧಾಃ। ನಿಧೇಹಿ। ಸ್ಥಾಪಯೇತ್ಯರ್ಥಃ। ಧಾಃ। ಛಂದಸಿ ಲುಙ್ಲಙ್ಲಿಟ ಇತಿ ಪ್ರಾರ್ಥನಾಯಾಂ ಲುಙ್। ಗಾತಿಸ್ಥೇತಿ ಸಿಚೋ ಲುಕ್। ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ। ಗೋಮತ್। ಅಶ್ವಾವತ್। ಮಂತ್ರೇ ಸೋಮಾಶ್ವೇಂದ್ರಿಯೇತಿ ಮತುಪಿ ದೀರ್ಘತ್ವಂ। ಉಭಯತ್ರ ಸುಪಾಂ ಸುಲುಗಿತಿ ವಿಭಕ್ತೇರ್ಲುಕ್। ಉಕ್ಥ್ಯಂ। ಉಕ್ಥಂ ಸ್ತೋತ್ರಂ। ತತ್ರ ಭವಮುಕ್ಥ್ಯಂ। ಭವೇ ಛಂದಸೀತಿ ಯತ್। ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತ ಇತಿ ಯತೋಽನಾವ ಇತ್ಯಾದ್ಯುದಾತ್ತತ್ವಾಭಾವೇ ತಿತ್ಸ್ವರಿತಮಿತಿ ಸ್ವರಿತತ್ವಂ। ಉಷಃ। ಆಮಂತ್ರಿತಾದ್ಯುದಾತ್ತತ್ವಂ। ಪಾದಾದಿತ್ವಾನ್ನಿಘಾತಾಭಾವಃ। ಸುವೀರ್ಯಂ। ಶೋಭನಂ ವೀರ್ಯಂ ಯಸ್ಯ। ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ, । ತ್ವಂ—ನೀನು । ಸೋಮಪೀತಯೇ—ಸೋಮರಸಪಾನಕ್ಕಾಗಿ। ಅಂತರಿಕ್ಷಾತ್-ಅಂತರಿಕ್ಷಲೋಕದಿಂದ । ವಿಶ್ವಾನ್ ದೇವಾನ್-ಸಕಲದೇವತೆಗಳನ್ನೂ। ಆ ವಹ—(ನಮ್ಮ ಯಜ್ಞಭೂಮಿಗೆ) ಕರೆದುಕೊಂಡು ಬಾ। ಉಷಃ—ಎಲೈ ದೇವಿಯೇ, । ಸಾ—ಅಂತಹ ನೀನು । ಗೋಮತ್—(ಬಹಳ)





CC-0. Jangamwadi Math Collection. Digitized by eGangotri

ಗೋವುಗಳಿಂದಕೂಡಿಯೂ । ಅಶ್ವಾವತ್—(ಬಹಳ) ಅಶ್ವಗಳಿಂದಕೂಡಿಯೂ । ಉಕ್ಥ್ಯಂ—ಪ್ರಶಸ್ತ್ಯವಾಗಿಯೂ । ಸುವೀರ್ಯಂ—ಶ್ರೇಷ್ಠವಾದ ವೀರ್ಯದಿಂದಕೂಡಿಯೂ (ಪುಷ್ಟಿಕರವಾದ) ಇರುವ। ವಾಜಂ—ಅನ್ನವನ್ನು। ಅಸ್ಮಾಸು—ನಮ್ಮಲ್ಲಿ। ಧಾಃ—ಸ್ಥಾಪಿಸು (ಶಾಶ್ವತವಾಗಿರಿಸು).

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಸೋಮರಸಪಾನಕ್ಕಾಗಿ ನೀನು ಅಂತರಿಕ್ಷಲೋಕದಿಂದ ಸಕಲದೇವತೆಗಳನ್ನೂ ನಮ್ಮ ಯಜ್ಞಭೂಮಿಗೆ ಕರೆದುಕೊಂಡು ಬಾ, ಎಲೈ ದೇವಿಯೇ ನಮಗೆ ಉಪಕಾರಕಳಾದ ಅಂತಹ ನೀನು ಗೋವುಗಳಿಂದಲೂ ಅಶ್ವಗಳಿಂದಲೂ ಕೂಡಿ ಪ್ರಶಸ್ತ್ಯವಾಗಿಯೂ ಶ್ರೇಷ್ಠವಾದ ವೀರ್ಯದಿಂದೊಡಗೂಡಿಯೂ (ಪುಷ್ಟಿಕರವಾಗಿಯೂ) ಇರುವ ಅನ್ನವನ್ನು ನಮಗೆ ಶಾಶ್ವತವಾಗಿ ಕೊಡು.

English Translation.

Ushas, bring from the firmament, all the Gods to drink the Soma juice and bestow upon us excellent and invigorating food, cattle and horses.

॥ ವಿಶೇಷ ವಿಷಯಗಳು ॥

ಅಸ್ಮಾಸು ಧಾಃ—ನಿಧೇಹಿ ಸ್ಥಾಪಯ । ನಮ್ಮಲ್ಲಿ ಇರಿಸು ಎಂದರೆ ನಮಗೆ ದೊರಕಿಸಿಕೊಡು. ಗೋಮತ್, ಅಶ್ವಾವತ್, ಉಕ್ಥ್ಯಂ, ಸುವೀರ್ಯಂ ಎಂಬ ಶಬ್ದಗಳು ವಾಜಂ ಎಂಬ ಶಬ್ದಕ್ಕೆ ವಿಶೇಷಣಗಳು. ಮುಖ್ಯಾಭಿಪ್ರಾಯವೇನೆಂದರೆ—ಗೋವುಗಳು, ಅಶ್ವಗಳು, ಶ್ರೇಷ್ಠವಾದ ಮತ್ತು ಪುಷ್ಟಿಕರವಾದ ಆಹಾರ ಇವುಗಳನ್ನು ಕೊಡು ಎಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ಧಾಃ—ಡುಧಾಞ್ ಧಾರಣಪೋಷಣಯೋಃ ಧಾತು ಆದಾದಿ. ಛಂದಸಿ ಲುಙ್ಲಙ್ಲಿಟಃ (ಪಾ.ಸೂ. ೩-೪-೬) ಸೂತ್ರದಿಂದ ಪ್ರಾರ್ಥನಾರೂಪ ಅರ್ಥದಲ್ಲಿ ಲುಙ್ ಬರುತ್ತದೆ. ಮಧ್ಯಮಪುರುಷೈಕವಚನ ಸಿಪ್ ಪರದಲ್ಲಿರುವಾಗ ಸಾಮಾನ್ಯಪ್ರಾಪ್ತವಾದ ಚ್ಲಿಗೆ ಸಿಚ್ ಬಂದರೆ ಧಾ+ಸ್+ಸಿ ಎಂದಿರುವಾಗ ಗಾತಿಸ್ಥಾಘುಪಾ (ಪಾ.ಸೂ. ೨-೪-೭೭) ಸೂತ್ರದಿಂದ ಸಿಚಿಗೆ ಲುಕ್ ಬರುತ್ತದೆ. ಸಿಪಿನ ಇಕಾರಕ್ಕೆ ಇತಶ್ಚ ಸೂತ್ರದಿಂದ ಲೋಪ ಬರುತ್ತದೆ. ಅಡಾಗಮ ಧಾತುವಿಗೆ ಪ್ರಾಪ್ತವಾದರೆ ಬಹುಲಂಛಂದಸ್ಯಮಾಙ್ಯೋಗೇಽಪಿ (ಪಾ.ಸೂ. ೬-೪-೭೫) ಸೂತ್ರದಿಂದ ಮಾಙ್ ಯೋಗವಿಲ್ಲದಿದ್ದರೂ ಅಡಾಗಮ ಬರುವುದಿಲ್ಲ. ಸಿಪಿನ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಧಾಃ ಎಂದು ರೂಪವಾಗುತ್ತದೆ.

ಗೋಮತ್ । ಅಶ್ವಾವತ್—ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ ಎಂಬ ಸೂತ್ರದಿಂದ ಎರಡು ಶಬ್ದಗಳಿಗೂ ಮತುಪ್ ಪ್ರತ್ಯಯ ಬರುತ್ತದೆ. ಅಶ್ವಾವತ್ ಎಂಬಲ್ಲಿ ಅಕಾರದ ಪರದಲ್ಲಿರುವುದರಿಂದ ಮಾದುಪಧಾಯಾಃ—ಸೂತ್ರದಿಂದ ಮಕಾರಕ್ಕೆ ವಕಾರ ಬರುತ್ತದೆ. ಮತ್ತು ಮಂತ್ರೇ ಸೋಮಾಶ್ವೇಂದ್ರಿಯ (ಪಾ.ಸೂ. ೬-೩-೧೩೧) ಸೂತ್ರದಿಂದ ಮತುಪ್ ಪರದಲ್ಲಿರುವುದರಿಂದ ಅಶ್ವಶಬ್ದಕ್ಕೆ ದೀರ್ಘವೂ ಬರುತ್ತದೆ.



CC-0. Jangamwadi Math Collection. Digitized by eGangotri

ಎರಡು ಶಬ್ದಗಳಲ್ಲಿಯೂ ದ್ವಿತೀಯಾ ಏಕವಚನದ ಅಮ್ ವಿಭಕ್ತಿಗೆ ಸುಪಾಂ ಸುಲುಕ್ ಸೂತ್ರದಿಂದ ಲುಕ್ ಬರುತ್ತದೆ. ವಿಭಕ್ತಿ ಲುಕ್ಕಾದುದರಿಂದ ಗೋಮತ್, ಅಶ್ವಾವತ್ ಎಂದು ರೂಪ ಸಿದ್ಧಿಯಾಗುತ್ತದೆ.

ಉಕ್ಥ್ಯಂ—ಉಕ್ಥಂ ಸ್ತೋತ್ರಂ ಸ್ತುತಿಸುವ ಮಂತ್ರವೆಂದರ್ಥ. ಉಕ್ಥೇ ಭವಂ ಉಕ್ಥ್ಯಮ್. ಭವೇ ಛಂದಸಿ (ಪಾ. ಸೂ. ೪-೪-೧೧೦) ಸಪ್ತಮ್ಯಂತದ ಮೇಲೆ ಭವಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ ಎಂಬುದರಿಂದ ಇಲ್ಲಿ ಯತ್ ಪ್ರತ್ಯಯ ಬರುತ್ತದೆ. ಯಸ್ಯೇತಿ ಚ ಸೂತ್ರದಿಂದ ಪ್ರತ್ಯಯಪರದಲ್ಲಿರುವಾಗ ಅಕಾರ ಲೋಪವಾದರೆ ಉಕ್ಥ್ಯಂ ಎಂದು ರೂಪವಾಗುತ್ತದೆ. ಇಲ್ಲಿ ಯತೋಽನಾವಃ (ಪಾ. ಸೂ. ೬-೧-೨೧೩) ನೌ ಶಬ್ದವನ್ನು ಬಿಟ್ಟು ಎರಡು ಅಚ್ಚುಗಳುಳ್ಳ ಯತ್ ಪ್ರತ್ಯಯಾಂತವಾದುದಕ್ಕೆ ಆದ್ಯುದಾತ್ತಸ್ವರವು ಬರುತ್ತದೆ ಎಂಬುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾದರೆ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ । ಎಂಬುದರಿಂದ ಆದ್ಯುದಾತ್ತಸ್ವರವು ಬರುವುದಿಲ್ಲ. ತಿತ್ಸ್ವರಿತಮ್ (ಪಾ. ಸೂ. ೬-೧-೧೮೫) ಸೂತ್ರದಿಂದ ಯತ್ ಪ್ರತ್ಯಯ ತಿತ್ತಾದುದರಿಂದ ಸ್ವರಿತಸ್ವರವೇ ಬರುತ್ತದೆ. ಉಕ್ಥ್ಯಂ ಎಂಬುದು ಸ್ವರಿತಾಂತವಾದ ಪದವಾಗುತ್ತದೆ.

ಉಷಃ—ಇಲ್ಲಿ ಪಾದದ ಆದಿಯಲ್ಲಿರುವುದರಿಂದ ಎಂಟನೇ ಅಧ್ಯಾಯದ ಆಮಂತ್ರಿತ ಸರ್ವಾನುದಾತ್ತ ಸ್ವರವು ಬರುವುದಿಲ್ಲ. ಆದುದರಿಂದ ಆಮಂತ್ರಿತಸ್ಯ ಚ (ಪಾ. ಸೂ. ೬-೧-೧೯೮) ಸೂತ್ರದಿಂದ ಆದ್ಯುದಾತ್ತ ಸ್ವರ ಬರುತ್ತದೆ.

ಸುವೀರ್ಯಂ—ಶೋಭನಂ ವೀರ್ಯಂ ಯಸ್ಯ ತತ್ ಸುವೀರ್ಯಂ. ಅತಿಶಯವಾದ ಶಕ್ತಿ ಉಳ್ಳದ್ದು ಎಂದರ್ಥ. ಇದು ಬಹುವ್ರೀಹಿ ಸಮಾಸ. ವೀರವೀರ್ಯೌ ಚ (ಪಾ. ಸೂ. ೬-೨-೧೨೦) ಸುವಿನ ಪರದಲ್ಲಿರುವ ಶಬ್ದಕ್ಕೆ ಬಹುವ್ರೀಹಿಯಲ್ಲಿ ಆದ್ಯುದಾತ್ತ ಸ್ವರ ಬರುತ್ತದೆ. ಇಲ್ಲಿ ಸುವಿನ ಪರದಲ್ಲಿ ವೀರ್ಯ ಶಬ್ದವಿರುವುದರಿಂದ ವಕಾರೋತ್ತರ ಈಕಾರವು ಉದಾತ್ತವಾಗುತ್ತದೆ. ಸುವೀರ್ಯಂ ಎಂಬುದು ಮಧ್ಯೋದಾತ್ತವಾದ ಶಬ್ದವಾಗುತ್ತದೆ.

॥ ಸಂಹಿತಾಪಾಠಃ ॥

ಯಸ್ಯಾ ರುಶಂತೋ ಅರ್ಚಯಃ ಪ್ರತಿ ಭದ್ರಾ ಅದೃಕ್ಷತ ।
ಸಾ ನೋ ರಯಿಂ ವಿಶ್ವವಾರಂ ಸುಪೇಶಸಮುಷಾ ದದಾತು
ಸುಗ್ಮ್ಯಂ ॥೧೩॥

॥ ಪದಪಾಠಃ ॥

ಯಸ್ಯಾಃ । ರುಶಂತಃ । ಅರ್ಚಯಃ । ಪ್ರತಿ । ಭದ್ರಾಃ । ಅದೃಕ್ಷತ ।
ಸಾ । ನಃ । ರಯಿಂ । ವಿಶ್ವಽವಾರಂ । ಸುಽಪೇಶಸಂ । ಉಷಾಃ । ದದಾತು ।
ಸುಗ್ಮ್ಯಂ ॥೧೩॥



CC-0. Jangamwadi Math Collection. Digitized by eGangotri

ಸಾಯಣಭಾಷ್ಯಂ

ಯಸ್ಯಾ ಉಷಸೋಽರ್ಚಯಃ ಪ್ರಕಾಶಾ ರುಶಂತಃ ಶತ್ರೂನ್ಹಿಂಸಂತೋ ಭದ್ರಾಃ ಕಲ್ಯಾಣಾಃ ಪ್ರತ್ಯದೃಕ್ಷತ ಪ್ರತಿದೃಶ್ಯಂತೇ ಸಾ ತಥಾಭೂತೋಷಾ ನೋಽಸ್ಮಭ್ಯಂ ರಯಿಂ ದದಾತು । ಕೀದೃಶಂ ರಯಿಂ । ವಿಶ್ವವಾರಂ ವಿಶ್ವಸ್ಯ ವಾರಕಂ । ಯದ್ವಾ । ವಿಶ್ವೈರ್ವರಣೀಯಂ । ಸುಪೇಶಸಂ ಪೇಶ ಇತಿ ರೂಪನಾಮ । ಶೋಭನರೂಪೋಪೇತಂ ಸುಗ್ಮ್ಯಂ ಸುಷ್ಠು ಗಂತವ್ಯಂ । ಯದ್ವಾ । ಸುಗ್ಮ್ಯಮಿತಿ ಸುಖನಾಮ । ತದ್ಧೇತುತ್ವಾತ್ತಾಚ್ಛಬ್ದ್ಯಂ ॥ ರುಶಂತಃ । ರುಶ ರಿಶ ಹಿಂಸಾಯಾಂ । ಶತರಿ ತುದಾದಿತ್ವಾಚ್ಛಃ ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಸತಿ ಶಿಷ್ಟತ್ವಾದ್ವಿಕರಣಸ್ವರೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ಅದೃಕ್ಷತ । ದೃಶೇಃ ಕರ್ಮಣಿ ಲುಜಿ ಝುಸ್ಯಾದಾದೇಶಃ ಚ್ಲೇಃ ಸಿಚ್ । ನ ದೃಶಃ । ಪಾ. ೩-೧-೪೭ । ಇತಿ ಕ್ಸಪ್ರತಿಷೇಧಃ । ಏಕಾಚ ಇತೀಟ್ಪ್ರತಿಷೇಧಃ । ಲಿಙ್ಸಿಚಾವಾತ್ಮನೇಪದೇಷು । ಪಾ ೧-೨-೧೧ । ಇತಿ ಸಿಚಃ ಕಿತ್ತ್ವಾಲ್ಲಘೂಪಧಗುಣಾಭಾವಃ । ಸೃಜಿದೃಶೋರ್ಝಲ್ಯಮಕಿತಿ । ಪಾ ೬-೧-೫೮ । ಇತ್ಯಮಾಗಮಾಭಾವಶ್ಚ ಕಿತ್ತ್ವಾದೇವ । ಷತ್ವಕತ್ವಷತ್ವಾನಿ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ । ವಿಶ್ವವಾರಂ । ವಿಶ್ವಂ ವೃಣೋತೀತಿ ವಿಶ್ವವಾರಃ । ವೃಞ್ ವರಣೇ ಕರ್ಮಣ್ಯಣ್ । ಯದ್ವಾ । ವಿಶ್ವೈರ್ವ್ರಿಯತ ಇತಿ ವಿಶ್ವವಾರಃ । ಕರ್ಮಣಿ ಘಞ್ । ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಸುಗ್ಮ್ಯಂ ಸುಷ್ಠು ಗಂತವ್ಯಃ ಸುಗ್ಮಃ । ಗಮೇರ್ಘಞರ್ಥೇ ಕವಿಧಾನಮಿತಿ ಕಪ್ರತ್ಯಯಃ । ಗಮಹನೇತ್ಯಾದಿನೋಪಧಾಲೋಪಃ । ತತ್ರ ಭವಂ ಸುಗ್ಮ್ಯಂ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಯಸ್ಯಾಃ—ಯಾವ ಉಷೋದೇವತೆಯ । ಅರ್ಚಯಃ—ಕಿರಣಗಳು । ರುಶಂತಃ—ಶತ್ರುಗಳನ್ನು ಹಿಂಸಿಸುತ್ತ । ಭದ್ರಾಃ—ಮಂಗಳರೂಪವುಳ್ಳವುಗಳಾಗಿ । ಪ್ರತಿ ಅದೃಕ್ಷತ—ಸುತ್ತಲೂ ಕಾಣಿಸಿಕೊಳ್ಳುವುವೋ । ಸಾ ಉಷಾಃ—ಅಂತಹ ಉಷಸ್ಸು । ನಃ—ನಮಗೆ । ವಿಶ್ವವಾರಂ—ಸರ್ವರಿಂದಲೂ ಹಾರೈಸಲ್ಪಡುವುದೂ । ಸುಪೇಶಸಂ—ರಮಣೀಯವಾದ ರೂಪವುಳ್ಳದ್ದೂ । ಸುಗ್ಮ್ಯಂ—ಸುಲಭವಾಗಿ ಹೊಂದತಕ್ಕದ್ದೂ ಆದ । ರಯಿಂ—ಐಶ್ವರ್ಯವನ್ನು । ದದಾತು—ಕೊಡಲಿ.

॥ ಭಾವಾರ್ಥ ॥

ಉಷೋದೇವತೆಯ ಕಿರಣಗಳು ಉದಯುವಾದೊಡನೆಯೇ ಶತ್ರುಗಳನ್ನು ಹಿಂಸಿಸುತ್ತ ನಮ್ಮ ಕಣ್ಣಿಗೆ ಮಂಗಳರೂಪವುಳ್ಳವುಗಳಾಗಿ ಸುತ್ತಲೂ ಬೆಳಗುವುವು. ಅಂತಹ ಪ್ರಭೆಯುಳ್ಳ ಉಷೋದೇವಿಯು ನಮಗೆ ಸರ್ವರಿಗೂ ಪ್ರಿಯವಾದದ್ದೂ, ಸರ್ವರಿಗೂ ಆಕರ್ಷಕವಾದದ್ದೂ ಮತ್ತು ಸುಲಭವಾಗಿ ಹೊಂದತಕ್ಕದ್ದೂ ಆದ ಐಶ್ವರ್ಯವನ್ನು ಕೊಡಲಿ.

## English Translation.

May that Ushas whose bright and refreshing rays are visible all round, grant us agreeable and easily attainable riches that all may envy.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ರುಶಂತಃ—ಶತ್ರೂನ್ ಹಿಂಸಂತಃ ಭದ್ರಾಃ ಕಲ್ಯಾಣಾಃ। ರುಶ ರಿಶ ಹಿಂಸಾಯಾಂ। ಶತ್ರುಗಳನ್ನು ಹಿಂಸಿಸುವ ಅಥವಾ ಮಂಗಳಕರವಾದ, (dazzling to the eyes, auspicious, refreshing &c.

ಅರ್ಚಯಃ—ಜಮತ್, ಕಲ್ಪಲೀಕಿನಂ ಮೊದಲಾದ ಹನೊಂದು ಜ್ವಲನ್ನಾಮಗಳ ಮಧ್ಯದಲ್ಲಿ ಅರ್ಚಿಃ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೨-೨೮) ಅರ್ಚಯಃ ಎಂದರೆ ಪ್ರಕಾಶಮಾನವಾದ ಕಿರಣಗಳು.

ವಿಶ್ವವಾರಂ—ವಿಶ್ವೈರ್ವರಣೀಯಂ। ಎಲ್ಲರಿಂದಲೂ ಅಪೇಕ್ಷಿಸಲ್ಪಡುವ, ಎಲ್ಲರಿಗೂ ಬೇಕಾದ, (desirable by all). ಈ ಶಬ್ದವನ್ನು ಅನೇಕ ಋಷಿಗಳು ಅನೇಕ ಸಂದರ್ಭಗಳಲ್ಲಿ ಉಪಯೋಗಿಸಿರುವುದರಿಂದ ಈ ಶಬ್ದವು ವಿಶೇಷ ಬಳಕೆಯಲ್ಲಿತ್ತೆಂದು ತೋರುವುದು. ನಾವು ಒಂದೆರಡು ಉದಾಹರಣೆಗಳನ್ನು ಕೊಡುವೆವು.—

ಅಸ್ಮೇ ರಯಿಂ ವಿಶ್ವವಾರಂ ಸಮಿನ್ವಾಸ್ಮೇ ವಿಶ್ವಾನಿ ದ್ರವಿಣಾನಿ ಧೇಹಿ ॥
(ಋ. ಸಂ. ೫-೪-೭)

ಅರ್ವಾಗ್ರಥಂ ವಿಶ್ವವಾರಂ ತ ಉಗ್ರೇಂದ್ರ ಯುಕ್ತಾಸೋ ಹರಯೋ ವಹಂತು ॥
(ಋ. ಸಂ, ೬-೩೭-೧)

ಪ್ರ ವಾಯುಮುಚ್ಛಾ ಬೃಹತೀ ಮನೀಷಾ ಬೃಹದ್ರಯಿಂ ವಿಶ್ವವಾರಂ ರಥಪ್ರಾಂ ॥
(ಋ. ಸಂ. ೬-೪೯-೪)

ದ್ಯೌಶ್ಚ ಯಂ ಪೃಥಿವೀ ವಾವೃಧಾತೇ ಆ ಯಂ ಹೋತಾ ಯಜತಿ ವಿಶ್ವವಾರಂ ॥
(ಋ. ಸಂ. ೭-೭-೫)

ಆದಿತ್ಯೈಭಿರದಿತಿಂ ವಿಶ್ವಜನ್ಯಾಂ ಬೃಹಸ್ಪತಿಮೃಕ್ವಭಿರ್ವಿಶ್ವವಾರಂ ॥
(ಋ. ಸಂ. ೭-೧೦-೪)

ಅಸ್ಮೇ ಇಂದ್ರಾವರುಣಾ ವಿಶ್ವವಾರಂ ರಯಿಂ ಧತ್ತಂ ವಸುಮಂತಂ ಪುರುಕ್ಷುಂ ॥
(ಋ. ಸಂ. ೭-೮೪-೪)

ರಯಿಂ ದೇಹಿ ವಿಶ್ವವಾರಂ ॥ (ಋ. ಸಂ. ೮-೭೧-೩)

ತ್ವಾಮು ಜಾತವೇದಸಂ ವಿಶ್ವವಾರಂ ಗೃಣೇ ಧಿಯಾ ॥
(ಋ. ಸಂ. ೧೦-೧೫೦-೩)

ಇತ್ಯಾದಿ—

ಸುಪೇಶಸಂ—ಪೇಶ ಇತಿ ರೂಪನಾಮ। ಶೋಭನರೂಪೋಪೇತಂ ॥ ಒಳ್ಳೆಯ ರೂಪವುಳ್ಳ

ಸುಗ್ಮ್ಯಂ—ಸುಷ್ಠು ಗಂತವ್ಯಂ। ಯದ್ವಾ ಸುಗ್ಮ್ಯಮಿತಿ ಸುಖನಾಮ। ಶಿಂಬಾತಾ ಶತರಾ ಮೊದಲಾದ ಇಪ್ಪತ್ತು ಸುಖನಾಮಗಳ ಮಧ್ಯದಲ್ಲಿ ಸುಗ್ಮ್ಯಂ ಎಂಬ ಶಬ್ದವು ಪಠಿತವಾಗಿರುವುದರಿಂದ (ನಿ. ೩-೧೩) ಸುಗ್ಮ್ಯಂ ಎಂದರೆ ಸುಖವೆಂದರ್ಥವು. ಉಷೋದೇವತೆಯು ನಮಗೆ ಎಲ್ಲರೂ ಅಪೇಕ್ಷಿಸುವ ಧನವನ್ನೂ ಸುಖವನ್ನೂ ಕೊಡಲೆಂದಭಿಪ್ರಾಯವು.



CC-0. Jangamwadi Math Collection. Digitized by eGangotri

|| ವ್ಯಾಕರಣಪ್ರಕ್ರಿಯಾ ||

**ರುಶಂತಃ**—ರುಶ್ ರಿಶ ಹಿಂಸಾಯಾಂ ಧಾತು. ತುದಾದಿ. ಲಟ್‌ಸ್ಥಾನದಲ್ಲಿ ಶತೃಪ್ರತ್ಯಯವಿಟ್ಟಾಗ ರುಶ್+ಅತ್ ಎಂದಿರುವಾಗ ತುದಾದಿಯ ಶವಿಕರಣಪ್ರತ್ಯಯ ಬರುತ್ತದೆ. ಶ ಪ್ರತ್ಯಯದ ಅಕಾರಕ್ಕೂ ಶತೃವಿನ ಅಕಾರಕ್ಕೂ **ಅತೋ ಗುಣೇ** ಎಂಬುದರಿಂದ ಪರರೂಪ ಬರುತ್ತದೆ. ರುಶತ್ ಎಂದು ತಕಾರಾಂತವಾದ ಶಬ್ದ ವಾಗುತ್ತದೆ. ಶತೃಪ್ರತ್ಯಯದಲ್ಲಿ ಉಗಿತ್ತಾದುದರಿಂದ ಸರ್ವನಾಮಸ್ಥಾನಸಂಜ್ಞೆಯುಳ್ಳ ಪ್ರಥಮಾ ಜಸ್ ಪ್ರತ್ಯಯಪರದಲ್ಲಿರುವಾಗ **ಉಗಿದಚಾಂ**—ಎಂಬ ಸೂತ್ರದಿಂದ ನುಮಾಗಮ ಬರುತ್ತದೆ. ನುಮಿಗೆ ಅನುಸ್ವಾರ ಪರಸವರ್ಣಗಳು ಬಂದು ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ರುಶನ್ತಃ ಎಂದು ರೂಪವಾಗುತ್ತದೆ. ಇಲ್ಲಿ ಶತೃ ಲಸಾರ್ವಧಾತುಕವಾದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ವಿಕರಣದ ಉದಾತ್ತಸ್ವರವೇ ಸತಿಶಿಷ್ಟವಾದುದರಿಂದ ಪ್ರಧಾನವಾಗುತ್ತದೆ. ಆದರೆ ಇಲ್ಲಿ ವ್ಯತ್ಯಯೋ ಬಹುಲಂ (ಪಾ.ಸೂ. ೩-೧-೮೫) ಸೂತ್ರದಿಂದ ಧಾತುವಿನ ಸ್ವರವೇ ಪ್ರಧಾನವಾಗುತ್ತದೆ. ಆದ್ಯುದಾತ್ತವಾದುದರಿಂದ ರುಶಂತಃ ಎಂಬಲ್ಲಿ ರೇಫದ ಮೇಲಿರುವ ಉಕಾರವು ಉದಾತ್ತವಾಗುತ್ತದೆ. ರುಶಂತಃ ಎಂಬುದು ಆದ್ಯುದಾತ್ತವಾದ ಪದ.

**ಅದೃಕ್ಷತ**—ದೃಶಿರ್ ಪ್ರೇಕ್ಷಣೇ ಧಾತು. ಭ್ವಾದಿ. ಕರ್ಮಣಿ ಲುಙ್ ಪ್ರಥಮಪುರುಷ ಬಹುವಚನ ವಿವಕ್ಷಾಮಾಡಿದಾಗ ದೃಶ್+ಝ ಎಂದಿರುತ್ತದೆ. **ಆತ್ಮನೇಪದೇಷ್ವನತಃ** (ಪಾ.ಸೂ. ೭-೧-೫) ಸೂತ್ರದಿಂದ ಅ ನಕಾರದ ಪರದಲ್ಲಿರುವುದರಿಂದ ಝ ಪ್ರತ್ಯಯಕ್ಕೆ ಅತ್ ಆದೇಶ ಬರುತ್ತದೆ. ಲುಙಿನಲ್ಲಿ ಬರುವ ಚ್ಲಿ ವಿಕರಣಕ್ಕೆ ಸಿಚ್ ಆದೇಶಬರುತ್ತದೆ. ಆದಕ್ಕೆ **ಶಲ ಇಗುಪಧಾದನಿಟಃ ಕ್ಸಃ** ಸೂತ್ರದಿಂದ ಕ್ಸಾದೇಶ ಪ್ರಾಪ್ತವಾದರೆ ನ ದೃಶಃ (ಪಾ.ಸೂ. ೩-೧-೪೭) ಎಂಬುದರಿಂದ ನಿಷೇಧಬರುತ್ತದೆ. ದೃಶ್+ಸ್+ಅತ ಎಂದಿರುವಾಗ ಸಿಚ್ ಆರ್ಧಧಾತುಕ ವಾದುದರಿಂದ ಇಟ್ ಪ್ರಾಪ್ತವಾದರೆ **ಏಕಾಚ ಉಪದೇಶೇನುದಾತ್ತಾತ್** (ಪಾ.ಸೂ. ೭-೨-೧೦) ಸೂತ್ರದಿಂದ ಧಾತುವು ಏಕಾಚಾದುದರಿಂದ ಪರದಲ್ಲಿರುವ ಸಿಚಿಗೆ ಇಣ್ನಿಷೇಧ ಬರುತ್ತದೆ. **ಲಙ್‌ಸಿಚಾವಾತ್ಮನೇಪದೇಷು** (ಪಾ.ಸೂ. ೧-೨-೧೧) ಇಕ್ಕಿನ ಸಮೀಪದಲ್ಲಿರುವ ಹಲಿನ ಪರದಲ್ಲಿರುವ ಝಲಾದಿಯಾದ ಲಿಙ್ ಮತ್ತು ಆತ್ಮನೇಪದ ಪರದಲ್ಲಿರುವ ಸಿಚ್ ಪ್ರತ್ಯಯವೂ ಕಿತ್ತಾಗುತ್ತವೆ. ಇಲ್ಲಿ ಋಕಾರದ ಪರದಲ್ಲಿರುವ ಶಕಾರದ ಪರದಲ್ಲಿ ಸಿಚ್ ಬಂದುದರಿಂದಲೂ ಅದಕ್ಕೆ ಆತ್ಮನೇಪದವು ಪರದಲ್ಲಿರುವುದರಿಂದಲೂ ಕಿತ್ತಾಗುತ್ತದೆ. ಆದುದರಿಂದ ಧಾತುವಿಗೆ ಲಘೂಪಧ ಗುಣ ಬರುವುದಿಲ್ಲ. ಕ್ಙಿತಿ ಚ ಸೂತ್ರದಿಂದ ನಿಷೇಧ ಬರುತ್ತದೆ. ಹಾಗೆಯೇ ಸೃಜಿ **ದೃಶೋರ್ಝಲ್ಯಮಕಿತಿ** (ಪಾ.ಸೂ. ೬-೧-೫೮) ಈ ಎರಡು ಧಾತುಗಳಿಗೆ ಅಕಿತ್ತಾದ ಝಲಾದಿಪ್ರತ್ಯಯ ಪರದಲ್ಲಿರುವಾಗ ಅಮಾಗಮ ಬರುತ್ತದೆ. ಎಂಬುದರಿಂದ ಅಮಾಗಮವೂ ಬರುವುದಿಲ್ಲ. ಸಿಚ್ ಕಿತ್ತಾದುದರಿಂದ ಅಕಿತಿ ಎಂದು ನಿಷೇಧಮಾಡಿರುವುದರಿಂದ ಬರುವುದಿಲ್ಲವೆಂದು ತಾತ್ಪರ್ಯ. **ವ್ರಶ್ಚಭ್ರಸ್ಜ**—ಸೂತ್ರದಿಂದ ಶಕಾರಕ್ಕೆ ಷಕಾರ ಬರುತ್ತದೆ. ಅದಕ್ಕೆ ಸಕಾರಪರದಲ್ಲಿರುವುದರಿಂದ **ಷಢೋಃಕಃ ಸಿ** ಸೂತ್ರದಿಂದ ಕಕಾರಾದೇಶ ಬರುತ್ತದೆ. ಆಗ ಕಕಾರದ ಪರದಲ್ಲಿ ಸಿಚ್ ಬಂದುದರಿಂದ ಅದಕ್ಕೆ ಷತ್ವಬರುತ್ತದೆ. ಕಕಾರ ಷಕಾರಯೋಗವಿರುವುದರಿಂದ ಕ್ಷಕಾರವಾಗುತ್ತದೆ. ಧಾತುವಿಗೆ ಲುಙ್ ನಿಮಿತ್ತಕವಾದ ಅಡಾಗಮ ಬರುತ್ತದೆ. ಅದೃಕ್ಷತ ಎಂದು ಉಕ್ತರೂಪ ವಾಗುತ್ತದೆ. ಆಗಮವಾದ ಅಡಾಗಮವು ಉದಾತ್ತವಾಗಿ ಬರುತ್ತದೆ ಎಂದು ಸೂತ್ರದಲ್ಲಿ ವಿಹಿತವಾದುದರಿಂದ ಸತಿಶಿಷ್ಟವಾಗುವುದರಿಂದ ಅದೃಕ್ಷತ ಎಂಬಲ್ಲಿ ಆದಿಯ ಅಕಾರವು ಉದಾತ್ತವಾಗಿ ಆದ್ಯುದಾತ್ತಪದವಾಗುತ್ತದೆ. ಯಸ್ಯಾಃ ಎಂದು ಯಚ್ಛಬ್ದದ ಸಂಬಂಧವಿರುವುದರಿಂದ **ತಿಙ್ಙತಿಙಃ** ಸೂತ್ರದಿಂದ ಸರ್ವಾನುದಾತ್ತವು ಬರುವುದಿಲ್ಲ.



CC-0. Jangamwadi Math Collection. Digitized by eGangotri

ವಿಶ್ವವಾರಮ್—ವಿಶ್ವಂ ವೃಣೋತೀತಿ ವಿಶ್ವವಾರಃ. ಪ್ರಪಂಚವನ್ನು ಆವರಿಸುವುದು ಎಂದರ್ಥ. ವೃಞ್ ವರಣೇ ಧಾತು. ಕರ್ಮಣ್ಯಣ್ (ಪಾ.ಸೂ. ೩-೨-೧) ಕರ್ಮವು ಉಪಪದವಾಗಿರುವಾಗ ಧಾತುವಿಗೆ ಅಣ್ ಪ್ರತ್ಯಯ ಬರುತ್ತದೆ. ವೃ+ಅ ಎಂದಿರುವಾಗ ಅಣಿನಲ್ಲಿ ಣಿತ್ತಾದುದರಿಂದ ಅಚೋಞ್ಣಿತಿ ಸೂತ್ರದಿಂದ ಧಾತುವಿಗೆ ವೃದ್ಧಿಬರುತ್ತದೆ. ಆ ರೂಪವಾದ ವೃದ್ಧಿಯು ಋಕಾರದ ಸ್ಥಾನದಲ್ಲಿ ರ ಪರವಾಗಿ ಬರುತ್ತದೆ. ವಿಶ್ವವಾರ ಎಂದು ರೂಪವಾಗುತ್ತದೆ. ಅಥವಾ ವಿಶ್ವೈ ರ್ವ್ರಿಯತೇ ಇತಿ ವಿಶ್ವವಾರಃ ಪ್ರಪಂಚದಿಂದ ಅಪೇಕ್ಷಿಸಲ್ಪಡುವುದು ಎಂದು ತಾತ್ಪರ್ಯ. ಆಗ ಕರ್ಮಣಿ ಘಞ್ ಪ್ರತ್ಯಯ ಬರುತ್ತದೆ. ಘಞ್ ಞಿತ್ತಾದುದರಿಂದ ಹಿಂದಿನಂತೆಯೇ ವೃದ್ಧಿಯು ಬರುತ್ತದೆ. ಈ ಶಬ್ದವು ಮರುದ್ವೃಧಾದಿಗಳಲ್ಲಿ ಪಠಿತವಾರುವುದರಿಂದ ಅವುಗಳಲ್ಲಿ ಪೂರ್ವಪದಕ್ಕೆ ಅಂತೋದಾತ್ತವು ವಿಹಿತವಾಗಿರುವುದರಿಂದ ಇಲ್ಲಿ ವಿಶ್ವ ಎಂಬಲ್ಲಿ ಕೊನೆಯ ಅಕಾರವು ಉದಾತ್ತವಾಗುತ್ತದೆ. ವಿಶ್ವವಾರಂ ಎಂಬುದು ದ್ವಿತೀಯಾಚ್ ಉದಾತ್ತವಾದ ಶಬ್ದ.

ಸುಗ್ಮ್ಯಮ್—ಸುಷ್ಠು ಗಂತವ್ಯಃ ಸುಗ್ಮಃ ಚೆನ್ನಾಗಿ ಹೊಂದಲ್ಪಡಲು ಸಾಧ್ಯವಾದದ್ದು ಎಂದರ್ಥ. (ಸುಖ). ಗಮ್ಲೃ ಗತೌ ಧಾತು. ಭ್ವಾದಿ. ಘಞರ್ಥೇ ಕವಿಧಾನಮ್ (ಪಾ. ಸೂ. ೩-೩-೮ ವಾ. ೨೨೪) ಎಂಬುದರಿಂದ ಘಞರ್ಥದಲ್ಲಿ ಕ ಪ್ರತ್ಯಯ ಬರುತ್ತದೆ. ಸುಗಮ್+ಅ ಎಂದಿರುವಾಗ, ಗಮಹನ ಜನಖನ (ಪಾ.ಸೂ. ೬-೪-೯೮) ಅಙ್ಭಿನ್ನವಾದ ಕಿತ್ ಙಿತ್ ಪ್ರತ್ಯಯ ಪರದಲ್ಲಿರುವಾಗ ಗಮಾದಿಗಳ ಉಪಧೆಗೆ ಲೋಪ ಬರುತ್ತದೆ ಎಂಬುದರಿಂದ ಇಲ್ಲಿ ಕಿತ್ತಾದ ಪ್ರತ್ಯಯವು ಪರದಲ್ಲಿರುವುದರಿಂದ ಗಕಾರದ ಮೇಲಿರುವ ಉಪಧೆಯಾದ ಅಕಾರಕ್ಕೆ ಲೋಪ ಬರುತ್ತದೆ. ಸುಗ್ಮ ಎಂದು ರೂಪವಾಗುತ್ತದೆ. ಸುಗ್ಮೇ ಭವಂ ಸುಗ್ಮ್ಯಮ್. ಸುಗ್ಮದಲ್ಲಿ ಉಂಟಾದುದು ಎಂದರ್ಥ. ಭವೇ ಛಂದಸಿ (ಪಾ.ಸೂ. ೪-೪-೧೧೦) ಸೂತ್ರದಿಂದ ಸಪ್ತಮ್ಯಂತದ ಮೇಲೆ ಯತ್ ಪ್ರತ್ಯಯ ಬರುತ್ತದೆ. ಯತ್ ಪರದಲ್ಲಿರುವಾಗ ಭಸಂಜ್ಞೆ ಇರುವುದರಿಂದ ಸುಗ್ಮ ಎಂಬಲ್ಲಿರುವ ಅಕಾರಕ್ಕೆ ಯಸ್ಯೇತಿ ಚ ಸೂತ್ರದಿಂದ ಲೋಪಬಂದರೆ ಸುಗ್ಮ್ಯಂ ಎಂದಾಗುತ್ತದೆ. ಯತೋಽನಾವಃ (ಪಾ.ಸೂ. ೬-೧-೨೧೩) ಸೂತ್ರದಿಂದ ದ್ವ್ಯಚ್ಕವಾದ ಯತ್ ಪ್ರತ್ಯಯಾಂತಕ್ಕೆ ಆದ್ಯುದಾತ್ತಸ್ವರ ಬರುತ್ತದೆ. ಸುಗ್ಮ್ಯಮ್ ಎಂಬುದು ಆದ್ಯುದಾತ್ತವಾದ ಪದ. ಉದಾತ್ತದ ಪರದಲ್ಲಿರುವ ಕೊನೆಯ ಅನುದಾತ್ತವು ಸ್ವರಿತವಾಗುತ್ತದೆ.

॥ ಸಂಹಿತಾಪಾಠಃ ॥

ಯೇ ಚಿದ್ಧಿ ತ್ವಾಮೃಷ॑ಯಃ ಪೂರ್ವ॑ ಊ॒ತಯೇ॑ ಜು॒ಹೂರೇಽವ॑ಸೇ ಮ॒ಹಿ।

ಸಾ ನಃ॒ ಸ್ತೋಮಾ॑ಁ ಅ॒ಭಿ ಗೃ॑ಣೀಹಿ॒ ರಾಧ॒ಸೋಷಃ॑ ಶು॒ಕ್ರೇಣ॑ ಶೋ॒ಚಿಷಾ ॥೧೪॥



CC-0. Jangamwadi Math Collection. Digitized by eGangotri

‖ ಪದಪಾಠಃ ‖

ಯೇ । ಚಿತ್ । ಹಿ । ತ್ವಾಂ । ಋಷಯಃ । ಪೂರ್ವೇ । ಊತಯೇ ।
ಜುಹೂರೇ । ಅವಸೇ । ಮಹಿ ।
ಸಾ । ನಃ । ಸ್ತೋಮಾನ್ । ಅಭಿ । ಗೃಣೀಹಿ । ರಾಧಸಾ । ಉಷಃ ।
ಶುಕ್ರೇಣ । ಶೋಚಿಷಾ । ‖೧೪‖

‖ ಸಾಯಣಭಾಷ್ಯಂ ‖

ಹೇ ಮಹಿ ಮಹಿತೇ ಪೂಜನೀಯೇ ವೋಷೋದೇವತೇ ತ್ವಾಂ ಯೇ ಚಿದ್ಧಿ ಯೇ ಖಲು ಪ್ರಸಿದ್ಧಾಃ ಪೂರ್ವೇ ಚಿರಂತನಾ ಋಷಯೋ ಮಂತ್ರಪ್ರಷ್ಟಾರ ಊತಯೇ ರಕ್ಷಣಾಯ । ಅವ ಇತ್ಯನ್ನನಾಮ । ಅವಸೇಽನ್ನಾಯ ಚ ಜುಹೂರೇ ಜುಹ್ವಿರೇ ಆಹೂತವಂತಃ । ಸೂಕ್ತರೂಪೈರ್ಮಂತ್ರೈಃ ಸ್ತುತವಂತ ಇತ್ಯರ್ಥಃ । ಹೇ ಉಷಃ ಸಾ ತಾದೃಶೀ ತ್ವಂ ರಾಧಸಾಸ್ಮಾಭಿರ್ದತ್ತೇನ ಹವಿರ್ಲಕ್ಷಣೇನ ಧನೇನ ಶುಕ್ರೇಣ ಶೋಚಿಷಾ ದೀಪ್ತೇನ ತಮೋ ನಿವಾರಯಿತುಂ ಸಮರ್ಥೇನ ತೇಜಸಾ ಚೋಪಲಕ್ಷಿತಾ ಸತೀ ತೇಷಾಮೃಷೀಣಾಮಿವ ನೋಽಸ್ಮಾಕಂ ಸ್ತೋಮಾನಭಿ ಸ್ತುತೀರಭಿಲಕ್ಷ್ಯ ಗೃಣೀಹಿ । ಸಮ್ಯಕ್ ಸ್ತುತಮಿತಿ ಶಬ್ದಯ । ಅಸ್ಮದೀಯಾಭಿಃ ಸ್ತುತಿಭಿಃ ಸಂತುಷ್ಟಾ ಭವೇತ್ಯರ್ಥಃ ॥ ಊತಯೇ । ಅವತೇಃ ಕ್ತಿನಿ ಜ್ವರತ್ವರೇತ್ಯಾದಿನಾ ವಕಾರಸ್ಯೋಪಧಾಯಾಶ್ಚೋಟ್ । ಊತಿಯೂತೀತ್ಯಾದಿನಾ ಕ್ತಿನ್ನುದಾತ್ತೋ ನಿಪಾತಿತಃ । ಜುಹೂರೇ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಲಿಡ್ಯಭ್ಯಸ್ತಸ್ಯ ಚೇತಿ ದ್ವಿರ್ವಚನಾತ್ಪೂರ್ವಮೇವಾಭ್ಯಸ್ತಕಾರಣಭೂತಸ್ಯ ಹ್ವಯತೇಃ ಸಂಪ್ರಸಾರಣಂ । ಅಭ್ಯಸ್ತಸ್ಯ ಯೋ ಹ್ವಯತಿಃ ಕಶ್ಚಾಭ್ಯಸ್ತಸ್ಯ ಹ್ವಯತಿಃ ಯಸ್ತಸ್ಯ ಕಾರಣಂ । ಕಾ ೬-೧-೩೩ । ಇತಿ ವ್ಯಾಖ್ಯಾತತ್ವಾತ್ । ಪರಪೂರ್ವತ್ವೇ ಹಲ ಇತಿ ದೀರ್ಘತ್ವಂ । ದ್ವಿರ್ವಚನಾದೀನಿ । ಇರಯೋ ರ ಇತೀರೇಚೋ ರೇಆದೇಶಃ । ಚಿತ ಇತ್ಯಂತೋದಾತ್ತತ್ವಂ । ಯದ್ವೃತ್ತಯೋಗಾದನಿಘಾತಃ । ತತ್ರ ಹಿ ಪಂಚಮೀ ನಿರ್ದೇಶೇಽಪಿ ವ್ಯವಹಿತೇಽಪಿ ಕಾರ್ಯಂ ಭವತೀತ್ಯುಕ್ತಂ । ಕಾ. ೮-೧-೬೬ । ಮಹಿ । ಮಹ ಪೂಜಾಯಾಂ । ಔಣಾದಿಕ ಇ ಪ್ರತ್ಯಯಃ । ಕೃದಿಕಾರಾದಕ್ತಿನ ಇತಿ ಙೀಷ್ । ಸಂಬುದ್ಧಾವಂಬಾರ್ಥೇತಿ ಹ್ರಸ್ವತ್ವಂ । ಪಾ ೭-೩-೧೦೭ । ಸ್ತೋಮಾನ್ । ಸಂಹಿತಾಯಾಂ ನಕಾರಸ್ಯ ರುತ್ವಾದ್ಯುಕ್ತಂ । ನಿತ್ತ್ವಾದಾದ್ಯುದಾತ್ತತ್ವಂ । ಗೃಣೀಹಿ । ಗೃ ಶಬ್ದೇ । ಕ್ರ್ಯಾದಿಕಃ । ಶಿತಿ ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ರಾಧಸಾ । ರಾಧ್ನೋತ್ಯನೇನೇತಿ ರಾಧಃ । ಅಸುನೋ ನಿತ್ತ್ವಾದಾದ್ಯುದಾತ್ತತ್ವಂ । ಉಷಃ ಪಾದಾದಿತ್ವಾದಾಷ್ಟಮಿಕನಿಘಾತಾಭಾವೇ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ ॥

‖ ಪ್ರತಿಪದಾರ್ಥ ‖

ಮಹಿ— ಪೂಜ್ಯಳಾದ ಉಷೋದೇವತೆಯೇ । ತ್ವಾಂ— ನಿನ್ನನ್ನು । ಯೇ ಚಿದ್ಧಿ— ಯಾವ ಪ್ರಸಿದ್ಧರೂ । ಪೂರ್ವೇ— ಪ್ರಾಚೀನರೂ ಆದ । ಋಷಯಃ— ಮಂತ್ರದ್ರಷ್ಟೃಗಳಾದ ಋಷಿಗಳು । ಊತಯೇ— ರಕ್ಷಣಕ್ಕೋಸ್ಕರವೂ । ಅವಸೇ— ಅನ್ನಕ್ಕೋಸ್ಕರವೂ । ಜುಹೂರೇ— ಕರೆದರೋ (ಸೂಕ್ತರೂಪಗಳಾದ ಮಂತ್ರಗಳಿಂದ



CC-0. Jangamwadi Math Collection. Digitized by eGangotri

ಸ್ತೋತ್ರಮಾಡಿದರು) | ಉಷಃ—ಎಲೈ ದೇವಿಯೇ | ಸಾ—ಹಾಗೆ ಸ್ತುತಿಸಲ್ಪಟ್ಟ ನೀನು | ರಾಧಸಾ—(ನಮ್ಮಿಂದ ಅರ್ಪಿಸಲ್ಪಟ್ಟ) ಹವಿರ್ಲಕ್ಷಣವುಳ್ಳ ಧನದಿಂದಲೂ | ಶುಕ್ರೇಣ ಶೋಚಿಷಾ—(ತಮಸ್ಸನ್ನು ನಿವಾರಿಸಲು ಸಮರ್ಥವಾದ) ಶುಭ್ರವಾದ ತೇಜಸ್ಸಿನಿಂದಲೂ ಕೂಡಿಕೊಂಡು (ಆ ಋಷಿಗಳ ಸ್ತೋತ್ರಗಳನ್ನು ಕೇಳಿದಂತೆ) | ನಃ—ನಮ್ಮ | ಸ್ತೋಮಾರ್ ಅಭಿ—ಸ್ತೋತ್ರಗಳನ್ನೂ ಸ್ವೀಕರಿಸಿ | ಗೃಣೀಹಿ—(ನಿನ್ನ ಸಂತೋಷವನ್ನು ಸೂಚಿಸುವ) ಶಬ್ದಮಾಡು.

॥ ಭಾವಾರ್ಥ ॥

ಎಲೈ ಪೂಜ್ಯಳಾದ ಉಷೋದೇವಿಯೇ, ಪ್ರಾಚೀನರೂ ಪ್ರಸಿದ್ಧರೂ ಆದ ದಿವ್ಯದೃಷ್ಟಿಯುಳ್ಳ ಮತ್ತು ಮಂತ್ರಗಳ ಸ್ವರೂಪವನ್ನು ತಿಳಿದ ಋಷಿಗಳು ನಿನ್ನನ್ನು ರಕ್ಷಣೆಗಾಗಿಯೂ ಅನ್ನಕ್ಕಾಗಿಯೂ ಸೂಕ್ತರೂಪಗಳಾದ ಮಂತ್ರಗಳಿಂದ ಸ್ತೋತ್ರಮಾಡಿ ಕರೆದರು. ನೀನು ಅವರ ಸ್ತೋತ್ರಕ್ಕೆ ತೃಪ್ತಳಾಗಿ ಅವರನ್ನು ಅನುಗ್ರಹಿಸಿದೆ. ಅದರಂತೆಯೇ ನಾವು ಅರ್ಪಿಸುವ ಹವಿಸ್ಸಿನರೂಪದ ಧನದಿಂದಲೂ, ತಮಸ್ಸನ್ನು ನಿವಾರಿಸತಕ್ಕ ನಿನ್ನ ಶುಭ್ರವಾದ ತೇಜಸ್ಸಿನಿಂದಲೂ ಕೂಡಿಕೊಂಡು ನಮ್ಮ ಸ್ತೋತ್ರಗಳನ್ನೂ ಸ್ವೀಕರಿಸಿ. ನಿನ್ನ ಸಂತೋಷಸೂಚಕವಾದ ಶಬ್ದವನ್ನು ಮಾಡು.

English Translation.

Adorable Ushas, ancient sages invoked you for protection and food; you Ushas who shine with pure light, accept our offerings and commend our praises.

॥ ವಿಶೇಷ ವಿಷಯಗಳು ॥

ಚಿತ್—ಚಿದಿತ್ಯೇಷೋಽನೇಕಕರ್ಮಾ (ನಿ. ೧-೪) ಚಿತ್ ಶಬ್ದಕ್ಕೆ ಅನೇಕ ಅರ್ಥಗಳಿವೆ. ಇಲ್ಲಿ ಭಾಷ್ಯಕಾರರು ಪ್ರಸಿದ್ಧವೆಂಬ ಅರ್ಥವನ್ನು ಹೇಳಿದಾರೆ.

ಮಹಿ—ಮಹಿತೇ, ಪೂಜನೀಯೇ ॥ ಪೂಜ್ಯಳೇ.

ಸ್ತೋಮಾನ್—ಸ್ತೋತ್ರಾರ್ | ನಾವು ಮಾಡುವ ಸೂಕ್ತರೂಪವಾದ ಸ್ತೋತ್ರಗಳನ್ನು.

ಋಕ್ಕಿನ ಮುಖ್ಯಾಭಿಪ್ರಾಯವು—ಎಲೈ ಪೂಜ್ಯಳಾದ ಉಷೋದೇವತೆಯೇ ನಿನ್ನನ್ನು ಹಿಂದಿನ ಋಷಿಗಳು ರಕ್ಷಣೆಗಾಗಿಯೂ ಆಹಾರಕ್ಕಾಗಿಯೂ ಆಹ್ವಾನಮಾಡಿ ಪ್ರಾರ್ಥಿಸಿದ್ದಾರೆ ಅದರಂತೆ ತಮಸ್ಸನ್ನು ಹೋಗಲಾಡಿಸಿ ಪ್ರಕಾಶಮಾನವಾದ ಕಾಂತಿಯಿಂದ ಬೆಳಗುವ ನೀನು ನಾವು ಮಾಡುವ ಸ್ತೋತ್ರಗಳನ್ನು ಸ್ವೀಕರಿಸು.

॥ ವ್ಯಾಕರಣಪ್ರಕ್ರಿಯಾ ॥

ಊತಯೇ—ಅವರಕ್ಷಣೆ ಧಾತು. ಭ್ವಾದಿ. ಇದಕ್ಕೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ ಬರುತ್ತದೆ. ಅವ್+ಕ್ತಿ ಎಂದಿರುವಾಗ ಜ್ವರತ್ವರಸ್ರಿವ್ಯವಿ (ಪಾ. ಸೂ. ೬-೪-೨೦) ಕ್ವಿಪ್ ಪರದಲ್ಲಿರುವಾಗಲೂ ಝಲಾದಿಯಾದ ಅನುನಾಸಿಕಾದಿಯಾದ ಪ್ರತ್ಯಯಪರದಲ್ಲಿರುವಾಗಲೂ ಜ್ವರಾದಿಧಾತುಗಳ ಉಪಧೆಗೂ ವಕಾರಕ್ಕೂ ಸಹ ಊಠಾದೇಶ ಬರುತ್ತದೆ ಎಂಬುದರಿಂದ ಇಲ್ಲಿ ಅಕಾರವೇ ಉಪಧೆಯಾಗಿರುವುದರಿಂದ ಸರ್ವಕ್ಕೂ ಊಠ್ ಬರುತ್ತದೆ.





CC-0. Jangamwadi Math Collection. Digitized by eGangotri

ಕ್ತಿನ್ ಪ್ರತ್ಯಯದಲ್ಲಿ ಕಕಾರ ಇತ್ತಾದುದರಿಂದ ಊತಿ ಎಂದು ರೂಪವಾಗುತ್ತದೆ. ಅದಕ್ಕೆ ಚತುರ್ಥೀ ಙೇ ಪ್ರತ್ಯಯ ಪರದಲ್ಲಿರುವಾಗ ಪೂರ್ವಕ್ಕೆ ಘಿ ಸಂಜ್ಞಾ ನಿಮಿತ್ತಕ ಗುಣ ಬಂದು ಅಯಾದೇಶ ಬಂದರೆ ಊತಯೇ ಎಂದು ಉಕ್ತರೂಪವು ಸಿದ್ಧವಾಗುತ್ತದೆ. ಊತಿಯೂತಿಜೂತಿ (ಪಾ. ಸೂ. ೩-೩-೯೭) ಸೂತ್ರದಲ್ಲಿ ಕ್ತಿನ್ ಉದಾತ್ತವಾಗಿ ನಿಪಾತಿತವಾದುದರಿಂದ ನಿತ್ಸ್ವರವು ಬಾಧಿತವಾಗಿ ತಕಾರೋತ್ತರಾಕಾರವು ಉದಾತ್ತವಾಗುತ್ತದೆ. ಊತಯೇ ಎಂಬುದು ಮಧ್ಯೋದಾತ್ತವಾದ ಪದ.

ಜುಹೂರೆ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಭ್ವಾದಿ. ಲಿಟ್ ಮಧ್ಯಮಪುರುಷ ಬಹುವಚನ ವಿವಕ್ಷಾಮಾಡಿದಾಗ ಝ ಪ್ರತ್ಯಯ ಬರುತ್ತದೆ. ಅದಕ್ಕೆ ಲಿಟಸ್ತಝಯೋರೇಶಿರೇಚ್ ಸೂತ್ರದಿಂದ ಇರೇಚ್ ಆದೇಶ ಬರುತ್ತದೆ. ಲಿಟಿಧಾತೋರನಭ್ಯಾಸಸ್ಯ ಸೂತ್ರದಿಂದ ಲಿಟ್ ಪರದಲ್ಲಿರುವಾಗ ದ್ವಿತ್ವವು ಪ್ರಾಪ್ತವಾದರೆ ಅಭ್ಯಸ್ತಸ್ಯ ಚ (ಪಾ. ಸೂ. ೬-೧-೩೩) ಅಭ್ಯಸ್ತವನ್ನು ಮುಂದೆ ಹೊಂದುವ ಹ್ವೇಞಿಗೆ ಸಂಪ್ರಸಾರಣವು ಬರುತ್ತದೆ ಎಂಬುದರಿಂದ ಇಲ್ಲಿ ಮೊದಲೇ ಸಂಪ್ರಸಾರಣವು ಬರುತ್ತದೆ. ದ್ವಿತ್ವವನ್ನು ಹೊಂದಿದಮೇಲೆ ದ್ವಿತ್ವಹೊಂದಿದ ಎರಡು ಖಂಡಗಳಿಗೆ ಅಭ್ಯಸ್ತವೆಂದು ಸಂಜ್ಞೆ ಬರುತ್ತದೆ. ಆಗ ಅಭ್ಯಸ್ತಕ್ಕೆ ಆಶ್ರಯವಾದುದು ಹ್ವೇಞ್ ಧಾತುವಾಯಿತು. ಇಲ್ಲಿ ಅಭ್ಯಸ್ತಸ್ಯ ಎಂಬುದಕ್ಕೆ ಅಭ್ಯಸ್ತವನ್ನು ಮುಂದೆ ಹೊಂದುವ ಎಂದು ಅರ್ಥ ಮಾಡಲು ಪ್ರಮಾಣವು ಭಾಷ್ಯವೇ. ಅಲ್ಲಿ ಅಭ್ಯಸ್ತಸ್ಯ ಯೋ ಹ್ವಯತಿಃ ಕಶ್ಚಾಭ್ಯಸ್ತಸ್ಯ ಹ್ವಯತಿಃ ಯಃ ತಸ್ಯ ಕಾರಣಮ್ (ಕಾ. ೬-೧-೩೩) ಎಂದು ವ್ಯಾಖ್ಯಾನಮಾಡಿರುತ್ತಾರೆ. ಅಭ್ಯಸ್ತವಾದ ಯಾವ ಹ್ವೇಞ್ ಧಾತು ವಿದೆಯೋ ಅದು. ಅಭ್ಯಸ್ತವಾದುದರ ಯಾವುದು ? ಹ್ವೇಞ್ ಧಾತುವು. ಯಾವುದು ಅಭ್ಯಸ್ತಕ್ಕೆ ಕಾರಣವಾಗುವುದೋ ಅದು ಎಂದು ಅದರ ತಾತ್ಪರ್ಯ. ಹ್ವೇಞ್ ಧಾತುವಿನಲ್ಲಿ ಸಂಪ್ರಸಾರಣವನ್ನು ಹೊಂದುವುದು ವಕಾರ. ಆದಕ್ಕೆ ಉಕಾರರೂಪ ಸಂಪ್ರಸಾರಣ ಬರುತ್ತದೆ. ಹು+ಏ+ಇರೆ ಎಂದಿರುವಾಗ ಸಂಪ್ರಸಾರಣಾಚ್ಚ ಸೂತ್ರದಿಂದ ಪೂರ್ವರೂಪ ಬರುತ್ತದೆ. ಹು+ಇರೆ ಎಂದಿರುವಾಗ ಹಲಃ (ಪಾ. ಸೂ. ೬-೪-೨) ಅಂಗಾವಯವವಾದ ಹಲಿನ ಪರದಲ್ಲಿರುವ ಸಂಪ್ರಸಾರಣಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಸಂಪ್ರಸಾರಣವಾದ ಉಕಾರಕ್ಕೆ ದೀರ್ಘಬರುತ್ತದೆ. ಹೂ+ಇರೆ ಎಂಬ ಅವಸ್ಥೆಯಲ್ಲಿ ಲಿಣ್ಣಿಮಿತ್ತಕವಾದ ದ್ವಿತ್ವ ಬರುತ್ತದೆ. ಅಭ್ಯಾಸದ ಅಚಿಗೆ ಹ್ರಸ್ವಃ ಸೂತ್ರದಿಂದ ಹ್ರಸ್ವ ಬಂದರೆ ಅಭ್ಯಾಸದ ಹಕಾರಕ್ಕೆ ಕುಹೋಶ್ಚುಃ ಸೂತ್ರದಿಂದ ಜಕಾರ ಬಂದರೆ ಜುಹೂ+ಇರೆ ಎಂದು ರೂಪವಾಗುತ್ತದೆ. ಇರಯೋರೆ (ಪಾ.ಸೂ. ೬-೪-೭೬) ಲಿಡಾದೇಶವಾದ ಇರ ಎಂಬುದಕ್ಕೆ ರೆ ಎಂಬ ಆದೇಶವು ಛಂದಸ್ಸಿನಲ್ಲಿ ಬರುತ್ತದೆ. ಆಗ ಜುಹೂರೆ ಎಂದು ರೂಪವು ಸಿದ್ಧವಾಗುತ್ತದೆ. ಚಿತಃ (ಪಾ.ಸೂ ೬-೪-೧೬೩) ಸೂತ್ರದಿಂದ ಜುಹೂರೆ ಎಂಬುದು ಅಂತೋದಾತ್ತವಾಗುತ್ತದೆ. ಇಲ್ಲಿ ಇರೇಚ್ ಆದೇಶವು ಚಿತ್ತಾದುದರಿಂದ ನಿಮಿತ್ತವಿದೆ. ಯದ್ವೃತ್ತಯೋಗಾನ್ನಿತ್ಯಂ (ಪಾ. ಸೂ. ೮-೧-೬೬) ಸೂತ್ರದಿಂದ ಇಲ್ಲಿ ಹಿಂದೆ ಯೆ ಎಂಬುದರ ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಇಲ್ಲಿ ಸೂತ್ರದಲ್ಲಿ ಪಂಚಮೀ ನಿರ್ದೇಶಮಾಡಿದುದರಿಂದ ವಾಸ್ತವವಾಗಿ ತಸ್ಮಾದಿತ್ಯುತ್ತರಸ್ಯ ಎಂಬ ಪರಿಭಾಷೆಯಿಂದ ಅವ್ಯವಹಿತಪರದಲ್ಲಿ ಸಂಬಂಧ ಬಂದರೇ ನಿಷೇಧ ಬರಬೇಕಾಗುತ್ತದೆ. ಆದರೂ ವ್ಯವಧಾನವಿದ್ದಾಗಲೂ ಬರುತ್ತದೆ ಎಂದು ವೃತ್ತಿಯಲ್ಲಿ ಹೇಳಿದುದರಿಂದ (ಕಾ. ೮-೧-೬೬) ನಿಷೇಧ ಬರುತ್ತದೆ ಎಂದು ತಿಳಿಯಬೇಕು.

ಮಹಿ—ಮಹ ಪೂಜಾಯಾಂ ಧಾತು. ಭ್ವಾದಿ. ಇದಕ್ಕೆ ಉಣಾದಿಯ ಇ ಪ್ರತ್ಯಯ ಬರುತ್ತದೆ. ಸರ್ವಧಾತುಭ್ಯ ಇನ್ (ಉ.ಸೂ. ೫೫೭) ಎಂಬುದರಿಂದ ಇನ್ ಪ್ರತ್ಯಯ ಬರುತ್ತದೆ. ಕೃದಿಕಾರಾದಕ್ತಿನಃ (ಪಾ.ಸೂ. ೪-೧-೪೫, ಗ ೫೦) ಕ್ತಿನ್ ಭಿನ್ನವಾದ ಇಕಾರಾಂತ ಕೃದಂತಕ್ಕೆ ಸ್ತ್ರೀಲಿಂಗದಲ್ಲಿ ಙೀಷ್ ಬರುತ್ತದೆ. ಮಹಿ+ಈ ಎಂದಿರುವಾಗ ಇಕಾರ ಲೋಪವಾದರೆ ಮಹೀ ಎಂದಾಗುತ್ತದೆ. ಇದಕ್ಕೆ ಸಂಬುದ್ಧಿಯಲ್ಲಿ ಸು ಪರದಲ್ಲಿರು



CC-0. Jangamwadi Math Collection. Digitized by eGangotri

ವಾಗ ಅಂಬಾರ್ಥನದ್ಯೋರ್ಹ್ರಸ್ವಃ (ಪಾ.ಸೂ. ೭-೩-೧೦೭) ಸೂತ್ರದಿಂದ ಹ್ರಸ್ವ ಬರುತ್ತದೆ. ಏಙ್ಹ್ರಸ್ವಾತ್ ಸೂತ್ರದಿಂದ ಸು ಲೋಪವಾದರೆ ಮಹಿ ಎಂದು ರೂಪವಾಗುತ್ತದೆ. ಆಮಂತ್ರಿತ ನಿಘಾತ ಬಂದು ಸರ್ವಾನುದಾತ್ತ ವಾಗುತ್ತದೆ.

ಸ್ತೋಮಾನ್—ಸ್ತೋಮಶಬ್ದದ ಮೇಲೆ ದ್ವಿತೀಯಾಬಹುವಚನವಿದ್ದಾಗ ಪೂರ್ವಸವರ್ಣ ದೀರ್ಘ ನತ್ವ ಬಂದರೆ ರೂಪಸಿದ್ಧಿಯಾಗುತ್ತದೆ. ಇಲ್ಲಿ ಮಂತ್ರದಲ್ಲಿ ಮಾತ್ರ ದೀರ್ಘಾದಟಿ ಸಮಾನಪಾದೇ (ಪಾ.ಸೂ. ೮-೩-೯) ಸೂತ್ರದಿಂದ ಹಿಂದೆ ಅಧ್ವರಾನ್ ಎಂಬಲ್ಲಿ ಹೇಳಿದಂತೆಯೇ ರುತ್ವವು ಬರುತ್ತದೆ. ರುತ್ವಕ್ಕೆ ಯತ್ವಲೋಪಗಳು ಬಂದಮೇಲೆ ಆತೋಟಿನಿತ್ಯಂ (ಪಾ.ಸೂ. ೮-೩-೩) ಸೂತ್ರದಿಂದ ಅನುನಾಸಿಕವು ಬರುತ್ತದೆ. ಅಧ್ವರಾ ಎಂದು ಅನುನಾಸಿಕಾಂತವಾದ ಪದವಾಗುತ್ತದೆ. ಇದು ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರ ದಿಂದ ಆದ್ಯುದಾತ್ತವಾಗುತ್ತದೆ.

ಗೃಣೀಹಿ—ಗೄ ಶಬ್ದೇ ಧಾತು. ಕ್ರ್ಯಾದಿ. ಲೋಟ್ ಮಧ್ಯಮಪುರುಷೈಕವಚನದಲ್ಲಿ ಸಿಪ್ಪಿಗೆ ಹಿ ಆದೇಶ ಬಂದರೆ ಗೄ+ಹಿ ಎಂದಿರುವಾಗ ಶ್ನಾ ವಿಕರಣಪ್ರತ್ಯಯ ಬರುತ್ತದೆ. ಅದು ಶಿತ್ತಾದುದರಿಂದ ಪ್ವಾದೀನಾಂ ಹ್ರಸ್ವಃ (ಪಾ.ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಬರುತ್ತದೆ. ಈಹಲ್ಯಘೋಃ (ಪಾ.ಸೂ. ೬-೪-೧೧೩) ಸಾರ್ವಧಾತುಕವಾದ ಕಿತ್ತು ಙಿತ್ತು ಆದ ಹಲಾದಿಪ್ರತ್ಯಯ ಪರದಲ್ಲಿರುವಾಗ ಶ್ನಾಅಭ್ಯಸ್ತಗಳ ಆಕಾರಕ್ಕೆ ಈಕಾರ ಬರುತ್ತದೆ ಎಂಬುದರಿಂದ ಇಲ್ಲಿ ಙಿತ್ತಾದ ಹಿ ಪರದಲ್ಲಿರುವುದರಿಂದ ಈತ್ವ ಬಂದು ಣತ್ವ ಬಂದರೆ ಗೃಣೀಹಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬಂದಿದೆ.

ರಾಧಸಾ—ರಾಧ್ನೋತಿ ಅನೇನ ಇತಿ ರಾಧಃ ಇದರಿಂದ ಪುಷ್ಟರಾಗುತ್ತಾರೆ ಎಂದರ್ಥ. ಸರ್ವ ಧಾತುಭ್ಯೋಽಸುನ್ (ಉ.ಸೂ. ೪-೬೨೮) ಎಂಬುದರಿಂದ ರಾಧ ಸಂಸಿಧ್ಧೌ ಧಾತುವಿಗೆ ಅಸುನ್ ಪ್ರತ್ಯಯ ಬರುತ್ತದೆ. ಆಗ ಸಕಾರಾಂತವಾದ ಶಬ್ದವಾಗುತ್ತದೆ. ಅಸುನಿನಲ್ಲಿ ನಕಾರ ಇತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ರಾಧಸಾ ಎಂಬುದು ತೃತೀಯಾ ವಿಭಕ್ತಿಏಕವಚನಾಂತವಾದ ಶಬ್ದ.

ಉಷಃ—ಸಂಬುದ್ಧಿ ಏಕವಚನಾಂತ. ಎಂಟನೇ ಅಧ್ಯಾಯದ ಆಮಂತ್ರಿತನಿಘಾತ ಬರಲು— ಅಪಾದಾದೌ ಎಂದು ನಿಷೇಧವಿರುವುದರಿಂದ ಬರುವುದಿಲ್ಲ. ಆದುದರಿಂದ ಆರನೇ ಅಧ್ಯಾಯಲ್ಲಿ ವಿಹಿತವಾದ ಆಮಂತ್ರಿತಸ್ವರದಿಂದ ಆದ್ಯುದಾತ್ತಸ್ವರ ಬರುತ್ತದೆ. ಉಷಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

॥ ಸಂಹಿತಾಪಾಠಃ ॥

ಉಷೋ ಯದದ್ಯ ಭಾನುನಾ ವಿ ದ್ವಾರಾವೃಣವೋ ದಿವಃ।
ಪ್ರ ನೋ ಯಚ್ಛತಾದವೃಕಂ ಪೃಥು ಚ್ಛರ್ದಿಃ ಪ್ರ ದೇವಿ
ಗೋಮತೀರಿಷಃ ॥೧೫॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಉಷಃ । ಯತ್ । ಅದ್ಯ । ಭಾನುನಾ । ವಿ । ದ್ವಾರೌ । ಋಣವಃ । ದಿವಃ ।
ಪ್ರ । ನಃ । ಯಚ್ಛತಾತ್ । ಅವೃಕಂ । ಪೃಥು । ಛರ್ದಿಃ । ಪ್ರ । ದೇವಿ ।
ಗೋಽಮತೀಃ । ಇಷಃ ॥೧೫॥

॥ ಸಾಯಣಭಾಷ್ಯಂ ॥

ಹೇ ಉಷಸ್ತ್ವಮದ್ಯಾಸ್ಮಿನ್ಪ್ರಭಾತೇ ಸಮಯೇ ಯದ್ಯಸ್ಮಾದ್ಭಾನುನಾ ಪ್ರಕಾಶೇನ ದಿವೋಽಂತರಿಕ್ಷಸ್ಯ ದ್ವಾರೌ ದ್ವಾರಭೂತೌ ಪೂರ್ವಾಪರದಿಗ್ಭಾಗಾವಂಧಕಾರೇಣಾಚ್ಛಾದಿತೌ ವ್ಯೃಣವಃ ವಿಶ್ಲಿಷ್ಯ ಪ್ರಾಪ್ನೋಷಿ ತಸ್ಮಾತ್ತ್ವಂ ನೋಽಸ್ಮಭ್ಯಂ ಛರ್ದಿಸ್ತೇಜಸ್ವಿ ಗೃಹಂ ಪ್ರ ಯಚ್ಛತಾತ್ । ದೇಹಿ । ಕೀದೃಶಂ ಛರ್ದಿಃ । ಅವೃಕಂ ಹಿಂಸಕರಹಿತಂ ಪೃಥು ವಿಸ್ತೀರ್ಣಂ । ಅಪಿ ಚ ಹೇ ದೇವಿ ದೇವನಶೀಲೇ ಗೋಮತೀರ್ಬಹುಭಿರ್ಗೋಭಿರ್ಯುಕ್ತಾ ಇಷೋಽನ್ನಾನಿ । ಪ್ರೇತ್ಯುಪಸರ್ಗಸ್ಯಾವೃತ್ತೇರ್ಯಚ್ಛತಾದಿತ್ಯನುಷಜ್ಯತೇ । ಪ್ರಯಚ್ಛತಾತ್ । ದೇಹಿ । ತ್ವದಾಗಮನಸ್ಯಾಸ್ಮತ್ಪ್ರಷ್ಟಣಾರ್ಥತ್ವಾದಸ್ಮದಭೀಪ್ಸಂ ಗೃಹಾದಿಕಂ ಪ್ರಯಚ್ಛೇತ್ಯರ್ಥಃ । ಛರ್ದಿರಿತಿ ಗೃಹನಾಮ । ಛರ್ದಿಶ್ಛದಿರಿತಿ ತನ್ನಾಮಸು ಪಾಠಾತ್ । ಋಣವಃ । ಋಣ ಗತೌ । ಛಾಂದಸೇ ಲಙಿ ಸಿಪಿ ತನಾದಿತ್ವಾದುಪ್ರತ್ಯಯಃ । ತತೋ ವ್ಯತ್ಯಯೇನ ಶಪಿ ಗುಣಾವಾದೇಶೌ । ಶಪಃ ಪಿತ್ತ್ವಾದನುದಾತ್ತತ್ವೇ ಉಪ್ರತ್ಯಯಸ್ವರಃ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ । ದಿವಃ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಪ್ರ ನಃ । ಉಪಸರ್ಗಾದ್ಬಹುಲಮಿತಿ ಬಹುಲವಚನಾನ್ನಸೋ ಣತ್ವಾಭಾವಃ । ಯಚ್ಛತಾತ್ । ದಾಣ ದಾನೇ । ಶಪಿ ಪಾಘ್ರೇತ್ಯಾದಿನಾ ಯಚ್ಛಾದೇಶಃ । ಅವೃಕಂ । ನಾಸ್ತಿ ವೃಕೋಽಸ್ಮಿನ್ನಿತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಪೃಥು । ಪ್ರಥ ಪ್ರಖ್ಯಾನೇ । ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಂ ಸಲೋಪಶ್ಚ । ಉ ೧-೨೯ । ಇತಿ ಕುಪ್ರತ್ಯಯಃ ಸಂಪ್ರಸಾರಣಂ ಚ । ಛರ್ದಿರಿತಿ ಗೃಹನಾಮ । ಉಛೃದಿರ್ ದೀಪ್ತಿದೇವನಯೋಃ । ಅರ್ಚಿಶುಚಿಹುಸೃಪಿಛಾದಿಛರ್ದಿಭ್ಯ ಇಸಿಃ । (ಉ ೨-೧೦೮) ಇತೀಸಿಪ್ರತ್ಯಯಃ । ಲಘೂಪಧಗುಣಃ । ಪ್ರತ್ಯಯಸ್ವರಃ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವತೆಯೆ, । ಅದ್ಯ—ಈಗ (ಈ ಪ್ರಭಾತಕಾಲದಲ್ಲಿ) । ಯತ್—ಯಾವ ಕಾರಣದಿಂದ । ಭಾನುನಾ—ನಿನ್ನ ಪ್ರಕಾಶದಿಂದ । ದಿವಃ—ಅಂತರಿಕ್ಷದ । ದ್ವಾರೌ—ಕತ್ತಲಿನಿಂದ (ಆಚ್ಛಾದಿತವಾಗಿ ಪೂರ್ವಾಪರ ರೂಪಗಳಾಗಿರುವ) ಎರಡು ಬಾಗಿಲುಗಳನ್ನೂ । ವಿ ಋಣವಃ—ಬಿಡಿಸಿತೆರೆದುಕೊಂಡು ಬಂದಿದ್ದೀಯೋ (ಆದ್ದರಿಂದ) । ನಃ—ನಮಗೆ । ಅವೃಕಂ—ಹಿಂಸಾರಹಿತವಾಗಿಯೂ (ನೆಮ್ಮದಿಯುಳ್ಳದ್ದೂ) । ಪೃಥು—ವಿಸ್ತಾರವಾಗಿಯೂ ಇರುವ । ಛರ್ದಿಃ—ತೇಜಸ್ವಿಯಾದ ವಾಸಸ್ಥಾನವನ್ನು । ಪ್ರ ಯಚ್ಛತಾತ್—ಅನುಗ್ರಹಿಸಿಕೊಡು । ದೇವಿ—ಎಲೈ ದೇವಿಯೇ । ಗೋಮತೀಃ—(ಬಹಳ) ಗೋವುಗಳಿಂದ ಕೂಡಿದ ಇಷಃ—ಅನ್ನಗಳನ್ನು । ಪ್ರ (ಯಚ್ಛತಾತ್) ಕೊಡು.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಈ ಪ್ರಭಾತಕಾಲದಲ್ಲಿ ನೀನು ತಮಸ್ಸನ್ನು ನಾಶಮಾಡುವ ನಿನ್ನ ಪ್ರಭೆಯಿಂದ ಕೂಡಿಕೊಂಡು, ಕತ್ತಲಿನಿಂದ ಆವರಿಸಲ್ಪಟ್ಟ ಪೂರ್ವಾಪರಗಳೆಂಬ ಅಂತರಿಕ್ಷದ ಎರಡು ಬಾಗಿಲುಗಳನ್ನೂ ತೆರೆದುಕೊಂಡು ನಮ್ಮ ಉಪಕಾರಕ್ಕಾಗಿಯೇ ಬಂದಿದ್ದೀಯೆ, ಆದ್ದರಿಂದ ನಮಗೆ ನೆಮ್ಮದಿಯುಳ್ಳದ್ದೂ ವಿಸ್ತಾರವುಳ್ಳದ್ದೂ, ಬೆಳಕಿನಿಂದಕೂಡಿದ್ದೂ ಆದ ವಾಸಸ್ಥಾನವನ್ನು ಕೊಡು. ಎಲೈ ದೇವಿಯೇ, ಬಹಳ ಗೋವುಗಳನ್ನೂ ಅನ್ನಗಳನ್ನೂ ಅನುಗ್ರಹಿಸು.

## English Translation.

Ushas, since you have to-day set open the two gates of heaven with light, grant us spacious and secure shelter ; bestow upon us cattle and food.

॥ ವಿಶೇಷ ವಿಷಯಗಳು ॥

ದ್ವಾರೌ—ದ್ವಾರಭೂತೌ ಪೂರ್ವಾಪರದಿಗ್ಭಾಗೌ ಅಂಧಕಾರೇಣಾಚ್ಛಾದಿತೌ । ಉಷಃಕಾಲಕ್ಕೆ ಮುಂಚೆ ಪೂರ್ವಪಶ್ಚಿಮದಿಕ್ಕುಗಳು ಕತ್ತಲೆಯಿಂದ ಆವೃತವಾಗಿರುವುವು. ಉಷೋ ದೇವತೆಯು ಆ ಕತ್ತಲೆಯನ್ನು ಹೋಗಲಾಡಿಸಿ ಸ್ವರ್ಗಕ್ಕೆ (ಅಂತರಿಕ್ಷಕ್ಕೆ) ದ್ವಾರ ಅಥವಾ ಬಾಗಿಲುಗಳಂತಿರುವ ಪೂರ್ವಪಶ್ಚಿಮದಿಗ್ಭಾಗಗಳನ್ನು ತನ್ನ ಬೆಳಕಿನಿಂದ ತುಂಬಿ ಎಲ್ಲರಿಗೂ ಕಾಣುವಂತೆ ಮಾಡುವುದರಿಂದ ಮುಚ್ಚಿರುವ ಬಾಗಿಲುಗಳನ್ನು ತೆಗೆದಿರುವೆ ಎಂದು ಋಷಿಯು ಪ್ರಶಂಸೆಮಾಡಿರುವನು.

ಅವೃಕಂ—ವೃಕಶಬ್ದಕ್ಕೆ ವಜ್ರಾಯುಧ (ನಿ. ೩-೧೧) ಕಳ್ಳ (ನಿ. ೩-೧೪) ಚಂದ್ರ (ನಿ. ೫-೨೧) ಬಾಲ (೬-೨೬) ಎಂಬ ಅರ್ಥಗಳಿರುವುದರಿಂದ ಅವೃಕಂ—ಬಾಧರಹಿತವಾದ, ಅಕಂಟಕವಾದ, ಏನೊಂದೂ ಭಯವಿಲ್ಲದ ಇತ್ಯಾದಿ ಅರ್ಥಗಳನ್ನು ಹೇಳಬಹುದು.

ಛರ್ದಿಃ—ಗಯಃ ಕೃದರಃ ಮೊದಲಾದ ಇಪ್ಪತ್ತೆರಡು ಗೃಹನಾಮಗಳ ಮಧ್ಯದಲ್ಲಿ ಛರ್ದಿಃ ಎಂಬ ಶಬ್ದವು ಪಠಿತವಾಗಿರುವುದರಿಂದ ಛರ್ದಿಃ ಎಂದರೆ ಗೃಹವು, ಮನೆಯು ಎಂದರ್ಥವು.

ಗೋಮತೀಃ ಇಷಃ—ಗೋಮತೀ ಎಂಬ ಶಬ್ದವು ಇಷಃ ಎಂಬ ಶಬ್ದಕ್ಕೆ ವಿಶೇಷಣವು. ಗೋವುಗಳಿಂದ ಕೂಡಿದ ಅನ್ನ ಅಥವಾ ಆಹಾರವೆಂದರೆ ಗೋವುಗಳೂ ಮತ್ತು ಆಹಾರ ಇವುಗಳನ್ನು ಕೊಡಬೇಕೆಂದಭಿಪ್ರಾಯವು.

॥ ವ್ಯಾಕರಣಪ್ರಕ್ರಿಯಾ ॥

ಋಣವಃ—ಋಣು ಗತೌ ಧಾತು. ತನಾದಿ. ಛಂದಸಿ ಲುಙ (ಪಾ. ಸೂ. ೩-೪-೬) ಸೂತ್ರದಿಂದ ವರ್ತಮಾನಾರ್ಥದಲ್ಲಿ ಲಙ್. ಅದಕ್ಕೆ ಮಧ್ಯಮಪುರುಷ ಏಕವಚನ ವಿವಕ್ಷಾಮಾಡಿದಾಗ ಸಿಪ್ ಪ್ರತ್ಯಯ ಬರುತ್ತದೆ. ಮಧ್ಯೆ ತನಾದಿಯ ವಿಕರಣವಾದ ಉ ಪ್ರತ್ಯಯ ಬರುತ್ತದೆ. ಋಣ್+ಉ+ಸ್ ಎಂದಿರುವಾಗ ಪುನಃ ವ್ಯತ್ಯಯೋ ಬಹುಲಂ ಸೂತ್ರದಿಂದ ಶಪ್ ವಿಕರಣ ಬರುತ್ತದೆ. ಆಗ ಶಪ್ ಪರದಲ್ಲಿರುವಾಗ ಉ ವಿಕರಣ ಪ್ರತ್ಯಯಕ್ಕೆ ಗುಣವಾದೇಶಗಳು ಬರುತ್ತವೆ. ಋಣವ್+ಅ+ಸ್ ಎಂದು ರೂಪವಿರುವಾಗ ರುತ್ವವಿಸರ್ಗಗಳು ಬಂದರೆ ಋಣವಃ ಎಂದು ರೂಪ ಸಿದ್ಧಿಯಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತೌ ಸುಪ್ಪಿತೌ ಸೂತ್ರದಿಂದ



CC-0. Jangamwadi Math Collection. Digitized by eGangotri

ಅನುದಾತ್ತವಾಗುತ್ತದೆ. ಆಗ ಉ ವಿಕರಣಪ್ರತ್ಯಯದ ಸ್ವರವೇ ಸತಿಶಿಷ್ಟವಾಗುವುದರಿಂದ ಪ್ರಬಲವಾಗಿ ಆದ್ಯುದಾತ್ತವಾಗುತ್ತದೆ. ಋಣವಃ ಎಂಬುದು ಮಧ್ಯೋದಾತ್ತ ಪದವಾಗುತ್ತದೆ. ಯದದ್ಯ ಎಂದು ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ ಯದ್ವೃತ್ತಯೋಗಾನ್ನಿತ್ಯಂ ಸೂತ್ರದಿಂದ ನಿಘಾತಪ್ರತಿಷೇಧ ಬರುವುದರಿಂದ ಸರ್ವಾನುದಾತ್ತವಾಗುವುದಿಲ್ಲ.

ದಿವಃ—ದಿವ್ ಶಬ್ದದ ಷಷ್ಠೀ ಏಕವಚನರೂಪ. ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ (ಪಾ.ಸೂ. ೬-೧-೧೭೧) ಇವುಗಳ ಪರದಲ್ಲಿರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಷಷ್ಠೀವಿಭಕ್ತಿಯು ಉದಾತ್ತವಾಗುತ್ತದೆ. ದಿವಃ ಎಂಬುದು ಅಂತೋದಾತ್ತವಾದ ಶಬ್ದವಾಗುತ್ತದೆ.

ಪುನಃ—ಏಕಾಜುತ್ತರಪದೇ ಣಃ—(ಪಾ-ಸೂ. ೮-೪-೧೨) ಸೂತ್ರದಿಂದ ಪೂರ್ವಪದದ ನಿಮಿತ್ತದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವವು ಪ್ರಾಪ್ತವಾದರೆ ಉಪಸರ್ಗಾದ್ಬಹುಲಂ ಎಂದು ಬಹುಲವಚನ ಹೇಳಿರುವುದರಿಂದ ಇಲ್ಲಿ ನಸಿಗೆ ಣತ್ವ ಬರುವುದಿಲ್ಲ. ಬಹುಲವಚನ ಬಂದಲ್ಲಿ ಕೆಲವು ಕಡೆ ಅನಿತ್ಯವಾದರೂ ನಿತ್ಯವೆಂದೂ, ಕೆಲವುಕಡೆ ಬರುವಲ್ಲಿ ಬರುವುದಿಲ್ಲವೆಂದೂ, ಕೆಲವು ಕಡೆ ಅನಿತ್ಯವೆಂದೂ, ಕೆಲವುಕಡೆ ಸೂತ್ರಾರ್ಥವನ್ನು ಅತಿಕ್ರಮಿಸಿಯೂ ಕಾರ್ಯ ಬರುವುದೆಂದು ಪ್ರಾಚೀನರ ಅಭಿಪ್ರಾಯ.

ಯಚ್ಛತಾತ್—ದಾಣ್ ದಾನೆ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷೈಕವಚನ ಸಿಪ್ ಪರದಲ್ಲಿರುವಾಗ ಶಪ್ ವಿಕರಣ ಬರುತ್ತದೆ. ಸಿಪ್ಪಿಗೆ ತುಹ್ಯೋಸ್ತಾತಙ್ ಆಶಿಷ್ಯನ್ಯತರಸ್ಯಾಂ (ಪಾ-ಸೂ. ೭-೧-೩೫) ಸೂತ್ರದಿಂದ ತಾತಙ್ ಆದೇಶ ಬರುತ್ತದೆ. ತಾತ್ ಎಂದು ಉಳಿಯುತ್ತದೆ. ಶಪ್ ಪರದಲ್ಲಿರುವಾಗ ಧಾತುವಿಗೆ ಪಾಘ್ರಾಧ್ಮಾಸ್ಥಾ (ಪಾ.ಸೂ. ೭-೩-೭೮) ಸೂತ್ರದಿಂದ ಯಚ್ಛ ಎಂಬ ಆದೇಶ ಬರುತ್ತದೆ. ಯಚ್ಛತಾತ್ ಎಂದು ರೂಪವು ಸಿದ್ಧವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬಂದಿರುವುದರಿಂದ ಸರ್ವಾನುದಾತ್ತವಾಗುತ್ತದೆ.

ಅವೃಕಮ್—ನಾಸ್ತಿ ವೃಕೋ ಅಸ್ಮಿನ್ನಿತಿ ಅವೃಕಮ್. ಯಾವುದರಲ್ಲಿ ಹಿಂಸಾಕೃತ್ಯವಿಲ್ಲವೋ ಅದು ಅವೃಕ. (ಮನೆ) ಇದು ಬಹುವ್ರೀಹಿಸಮಾಸ. ಇದಕ್ಕೆ ಪೂರ್ವಪದಪ್ರಕೃತಿಸ್ವರವು ಪ್ರಾಪ್ತವಾದರೆ ನಞ್ಸುಭ್ಯಾಂ (ಪಾ.ಸೂ. ೬-೨-೧೭೨) ಸೂತ್ರದಿಂದ ನಞಿನ ಪರದಲ್ಲಿ ಉತ್ತರಪದ ಬಂದಿರುವುದರಿಂದ ಬಹುವ್ರೀಹಿಸಮಾಸವಾದುದರಿಂದಲೂ ಉತ್ತರಪದ ಅಂತೋದಾತ್ತಸ್ವರವು ಬರುತ್ತದೆ. ಅವೃಕಂ ಎಂಬುದು ಅಂತೋದಾತ್ತವಾದ ಶಬ್ದವಾಗುತ್ತದೆ.

ಪೃಥು—ಪ್ರಥ ಪ್ರಖ್ಯಾನೆ ಧಾತು. ಭ್ವಾದಿ. (ಚುರಾದಿ) ಇದಕ್ಕೆ ಪ್ರಥಿಮ್ರದಿಭ್ರಸ್ಜಾಂ ಸಂಪ್ರಸಾರಣಂ ಸಲೋಪಶ್ಚ (ಉ.ಸೂ. ೧-೨೮) ಸೂತ್ರದಿಂದ ಕು ಪ್ರತ್ಯಯ ಬರುತ್ತದೆ. ಅದರ ಸಂನಿಯೋಗದಿಂದ ಸಂಪ್ರಸಾರಣವೂ ಬರುತ್ತದೆ. ಪ್ರಥ ಎಂಬಲ್ಲಿ ರೇಫಕ್ಕೆ ಋಕಾರರೂಪ ಸಂಪ್ರಸಾರಣವು ಬರುತ್ತದೆ. ಕು ಪ್ರತ್ಯಯದಲ್ಲಿ ಉಕಾರ ಉಳಿಯುತ್ತದೆ. ಪೃಥು ಎಂದು ರೂಪವಾಗುತ್ತದೆ.

ಛರ್ದಿಃ—ಛರ್ದಿ ಎಂಬುದು ಮನೆಗೆ ಹೆಸರು. ಉಛೃದಿರ್ ದೀಪ್ತಿದೇವನಯೋಃ ಧಾತು. ರುಧಾದಿ ಅರ್ಚಿಶುಚಿ ಹು ಸೃಪಿಛಾದಿಛರ್ದಿಭ್ಯ ಇಸಿಃ (ಉ.ಸೂ. ೨-೧೦೮) ಎಂಬ ಸೂತ್ರದಿಂದ ಇಲ್ಲಿ ಇಸಿ ಪ್ರತ್ಯಯ ಬರುತ್ತದೆ. ಉಛೃದಿರ್ ಧಾತುವಿನಲ್ಲಿ ಉಕಾರ ಇತ್ಸಂಜ್ಞೆಯಿಂದ ಲೋಪವಾಗುತ್ತದೆ. ಇರಿತ್ತಾದ ಧಾತು. ಛೃದ್+ಇಸ್ ಎಂದಿರುವಾಗ ಪುಗಂತಲಘೂಪಧಸ್ಯ ಚ ಸೂತ್ರದಿಂದ ಲಘೂಪಧಗುಣ ಬರುತ್ತದೆ. ಇಸಿನ ಸಕಾರಕ್ಕೆ ರುತ್ವವಿಸರ್ಗಗಳು ಬರುತ್ತವೆ. ಗುಣವು ರ ಪರವಾಗಿ ಬಂದರೆ ಛರ್ದಿಃ ಎಂದಾಗುತ್ತದೆ. ಪ್ರತ್ಯಯ ಸ್ವರದಿಂದ (ಆದ್ಯುದಾತ್ತ) ಛರ್ದಿ ಎಂಬುದು ಅಂತೋದಾತ್ತವಾದ ಪದವಾಗುತ್ತದೆ. ॥ ೧೫ ॥



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಸಂ ನೋ॑ ರಾ॒ಯಾ ಬೃ॑ಹ॒ತಾ ವಿ॒ಶ್ವಪೇ॑ಶಸಾ ಮಿಮಿ॒ಕ್ಷ್ವಾ॒ ಸಮಿಳಾ॑ಭಿ॒ರಾ ।
ಸಂ ದ್ಯು॒ಮ್ನೇ॑ನ ವಿಶ್ವ॒ತುರೋ॑ಷೋ ಮಹಿ॒ ಸಂ ವಾಜೈ॒ರ್ವಾ॑ಜಿನೀವತಿ ॥ ೧೬ ॥

ಪದಪಾಠಃ

ಸಂ । ನಃ॒ । ರಾ॒ಯಾ । ಬೃ॒ಹ॒ತಾ । ವಿ॒ಶ್ವಽಪೇ॑ಶಸಾ । ಮಿ॒ಮಿ॒ಕ್ಷ್ವ । ಸಂ । ಇಳಾ॑ಭಿಃ । ಆ ।
ಸಂ । ದ್ಯು॒ಮ್ನೇ॑ನ । ವಿ॒ಶ್ವ॒ಽತುರಾ॑ । ಉ॒ಷಃ॒ । ಮ॒ಹಿ॒ । ಸಂ । ವಾಜೈಃ॑ । ವಾ॒ಜಿ॒ನೀ॒ಽವ॒ತಿ॒ ॥ ೧೬ ॥

ಸಾಯಣಭಾಷ್ಯಂ

ಹೇ ಉಷೋ ನೋಽಸ್ಮಾನ್ರಾಯಾ ಧನೇನ ಸಂ ಮಿಮಿಕ್ಷ್ವ । ಸಂಸಿಂಚ । ಸಂಯೋಜಯೇತ್ಯರ್ಥಃ । ಕೀದೃಶೇನ ಧನೇನ । ಬೃಹತಾ ಪ್ರಭೂತೇನ ವಿಶ್ವಪೇಶಸಾ । ಪೇಶ ಇತಿ ರೂಪನಾಮ । ಬಹುವಿಧರೂಪಯುಕ್ತೇನ । ತಥೇಳಾಭಿರಾ ಗೋಭಿಶ್ಚಾಸ್ಮಾನ್ಸಂ ಮಿಮಿಕ್ಷ್ವ । ಇಳೇತಿ ಗೋನಾಮ । ಇಳಾ ಜಗತೀತಿ ತನ್ನಾಮಸು ಪಾಠಾತ್ । ಆಕಾರಃ ಸಮುಚ್ಚಯೇ ಪದಾಂತೇ ವರ್ತಮಾನತ್ವಾತ್ । ಉಕ್ತಂ ಚ । ಏತಸ್ಮಿನ್ನೇವಾರ್ಥೇ ದೇವೇಭ್ಯಶ್ಚ ಪಿತೃಭ್ಯ ಏತ್ಯಾಕಾರಃ । ನಿ. ೧-೪ । ಇತಿ । ಕಿಂಚ ಹೇ ಮಹಿ ಮಹನೀಯ ಉಷೋದೇವತೇ ದ್ಯುಮ್ನೇನ ಯಶಸಾ ಸಂ ಮಿಮಿಕ್ಷ್ವ । ದ್ಯುಮ್ನಂ ದ್ಯೋತತೇಃ ಯಶೋ ವಾನ್ನಂ ವೇತಿ ಯಾಸ್ಕಃ । ನಿ. ೫-೫ । ಕೀದೃಶೇನ ದ್ಯುಮ್ನೇನ । ವಿಶ್ವತುರಾ ಸರ್ವೇಷಾಂ ಶತ್ರೂಣಾಂ ಹಿಂಸಕೇನ । ತಥಾ ಹೇ ವಾಜನೀವತಿ ಅನ್ನಸಾಧನಭೂತಕ್ರಿಯಾಯುಕ್ತೇ ವಾಜೈರನ್ನೈರಸ್ಮಾನ್ಸಂ ಮಿಮಿಕ್ಷ್ವ । ಅನ್ನಂ ವೈ ವಾಜಃ । ಶತ. ಬ್ರಾ. ೯-೩-೪-೧ । ಇತಿ ಶ್ರುತ್ಯಂತರಾತ್ ॥ ರಾಯಾ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಬೃಹತಾ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತಿರುದಾತ್ತಾ । ವಿಶ್ವಪೇಶಸಾ । ವಿಶ್ವಾನಿ ಪೇಶಾಂಸಿ ಯಸ್ಯಾಸೌ ವಿಶ್ವಪೇಶಾಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ವ್ಯತ್ಯಯೇನಾಸಂಜ್ಞಾಯಾಮಪಿ ಪೂರ್ವಪದಾಂತೋದಾತ್ತತ್ವಂ । ಯದ್ವಾ ಮರು-



CC-0. Jangamwadi Math Collection. Digitized by eGangotri

ದ್ವ್ಯರ್ಥಾನಿರ್ಶ್ರೀಷ್ವವ್ಯಃ । ಮಿಮಿಕ್ಷ್ವ । ಮಿಹ ಸೇಚನೇ । ವ್ಯತ್ಯಯೇನಾತ್ಮನೇಪದಂ । ಲೋಟಿ ಬಹುಲಂ ಛಂದಸೀತಿ ಶಪಃ ಶ್ಲುಃ । ದ್ವಿರ್ಭಾವಹಲಾದಿಶೇಷೌ । ಛತ್ವಕತ್ವಷತ್ವಾನಿ ಪ್ರತ್ಯಯಸ್ವರಸ್ಯ ಸತಿಶಿಷ್ಟತ್ವಾತ್ಸ ಏವ ಶಿಷ್ಯತೇ । ಪೂರ್ವಪದಸ್ಯಾಸಮಾನವಾಕ್ಯಸ್ಥತ್ವಾತ್ತಿಙ್ಙತಿಙ ಇತಿ ನಿಘಾತೋ ನ ಭವತಿ । ಸಮಾನವಾಕ್ಯೇ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾ ಇತಿ ವಚನಾತ್ । ವಿಶ್ವತುರಾ । ತೂರ್ವತೀತಿ ತೂಃ ತುರ್ವೀ ಹಿಂಸಾರ್ಥಃ । ಕ್ವಿಪ್ಚೇತಿ ಕ್ವಿಪ್ । ರಾಲ್ಲೋಪ ಇತಿ ವಲೋಪಃ । ವಿಶ್ವೇಷಾಂ ತೂರ್ವಿಶ್ವತೂಃ । ಸಮಾಸಸ್ಯೇತ್ಯಂತೋದಾತ್ತತ್ವಂ । ವಾಜನೀವತಿ । ವಾಜೋಽನ್ನಮಸ್ಯಾ ಅಸ್ತೀತಿ ವಾಜಿನೀ ಕ್ರಿಯಾ । ತಾದೃಶೀ ಕ್ರಿಯಾ ಯಸ್ಯಾಃ ಸಾ ತಥೋಕ್ತಾ ॥ ೩ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ । ನಃ—ನಮ್ಮನ್ನು । ಬೃಹತಾ—ಅತ್ಯಧಿಕವಾಗಿಯೂ, ಪ್ರಭೂತ ವಾಗಿಯೂ । ವಿಶ್ವಪೇಶಸಾ—ಬಹುವಿಧವಾದ ರೂಪವುಳ್ಳದಾಗಿಯೂ ಇರುವ । ರಾಯಾ—ಧನದೊಂದಿಗೆ । ಸಂ ಮಿಮಿಕ್ಷ್ವ—ಸಂಯೋಜಿಸು. (ಹಾಗೆಯೇ) । ಇಳಾಭಿಃ ಆ—ಬಹು ಸಂಖ್ಯಾತಗಳಾದ ಗೋವು ಗಳೊಡನೆಯೂ । ಸಂ (ಮಿಮಿಕ್ಷ್ವ)—ಸಂಯೋಜಿಸು । ಮಹಿ—ಪೂಜ್ಯಳಾದ ಉಷೋದೇವಿಯೇ । ವಿಶ್ವತುರಾ—ಸಕಲಶತ್ರುಗಳನ್ನೂ ಹಿಂಸೆಮಾಡುವ (ಅವರನ್ನು ಜಯಿಸುವುದರಿಂದ ಲಭಿಸುವ) ಯಶಸ್ಸಿನೊಡನೆ । ಸಂ ಮಿಮಿಕ್ಷ್ವ ಸಂಯೋಜಿಸು । ವಾಜಿನೀವತಿ—ಅನ್ನಸಾಧನವಾದ ಕ್ರಿಯೆಯಿಂದ ಕೂಡಿದ ದೇವಿಯೇ, ವಾಜೈಃ—ಅನ್ನ ಗಳೊಂದಿಗೆ । (ಸಂ ಮಿಮಿಕ್ಷ್ವ)—(ನಮ್ಮನ್ನು) ಸೇರಿಸು.

॥ ಭಾವಾರ್ಥ ॥

ಪೂಜ್ಯಳೂ, ಅನ್ನವನ್ನು (ಆಹಾರವನ್ನು) ಕೊಡುವವಳೂ ಆದ ಎಲೈ ಉಷೋದೇವಿಯೇ, ನಮಗೆ ಬಹುವಿಧರೂಪಗಳುಳ್ಳ ಅತ್ಯಧಿಕವಾದ ಧನಗಳನ್ನೂ, ಬಹುಸಂಖ್ಯಾತಗಳಾದ ಗೋವುಗಳನ್ನೂ, ಸಕಲ ಶತ್ರುಗಳನ್ನೂ ಜಯಿಸುವ ಯಶಸ್ಸನ್ನೂ ಮತ್ತು ಅನ್ನಗಳನ್ನೂ ಕೊಟ್ಟು ಅನುಗ್ರಹಿಸು.

## English Translation.

Adorable Ushas, associate us with (grant us) different kinds of wealth liberally; O giver of food, grant us abundant cattle and fame which can be got by conquering our enemies.

॥ ವಿಶೇಷ ವಿಷಯಗಳು ॥

ಮುಖ್ಯಾಭಿಪ್ರಾಯವು—ಎಲೈ ಉಷೋದೇವತೆಯೇ, ನೀನು ನಮಗೆ ಬಹಳವೂ ನಾನಾವಿಧವೂ ಆದ ಧನಗಳನ್ನೂ, ಗೋವುಗಳನ್ನೂ ಅನ್ನವನ್ನೂ (ಆಹಾರವನ್ನು) ಶತ್ರುಗಳನ್ನು ಜಯಿಸುವುದರಿಂದ ಲಭಿಸುವ ಯಶಸ್ಸನ್ನೂ ಬಹಳವಾಗಿ ಕೊಡು.

ಸಂ ಮಿಮಿಕ್ಷ್ವ—ಮಿಹ ಸೇಚನೇ । ಸಂಸಿಂಚ । ಸಂಯೋಜಯೇತ್ಯರ್ಥಃ । ನೀರಿನಿಂದ ನೆನೆಸುವಂತೆ ನಮಗೆ ಬೇಕಾದ ಧನಾದಿಗಳಿಂದ ನಮ್ಮನ್ನು ತೃಪ್ತಿಪಡಿಸು ಎಂದರ್ಥವು. ವೇದಗಳಲ್ಲಿ ಸೇಚನಶಬ್ದವು



CC-0. Jangamwadi Math Collection. Digitized by eGangotri

ಬಹಳವಾಗಿ ಕೊಡು ಎಂಬರ್ಥದಲ್ಲಿ ಉಪಯೋಗಿಸಲ್ಪಡುವುದು.—ಉದಾಹರಣೆಗಾಗಿ—ಸಂತ್ವಾ ಸಿಂಚಾಮಿ ಯಜುಷಾ ಪ್ರಜಾಮಾಯುರ್ಧನಂ ಚ ಎಂದು ತೈತ್ತಿರೀಯ ಸಂಹಿತೆಯ ವಾಕ್ಯವಿರುವುದು (ತೈ. ಸಂ. ೧-೬-೧)

ಇಳಾಭಿಃ—ಇಳಾಶಬ್ದಕ್ಕೆ ಪೃಥಿವೀ (ನಿ. ೨-೫) ವಾಕ್ಕು (ನಿ. ೨-೨೩) ಅನ್ನ, (ನಿ. ೨-೯) ಗೋವು (ನಿ. ೩-೯) ಎಂಬ ಅನೇಕಾರ್ಥಗಳಿರುವವು. ಇವುಗಳಲ್ಲಿ ಅನ್ನ ಅಥವಾ ಗೋವು ಎಂಬ ಅರ್ಥವನ್ನು ಇಲ್ಲಿ ಸ್ವೀಕರಿಸಬಹುದು.

ದ್ಯುಮ್ನೇನ—ದ್ಯೋತತೇರ್ಯಶೋ ವಾನ್ನಂ ವಾ—(ನಿ. ೫-೫) ದ್ಯುಮ್ನಶಬ್ದಕ್ಕೆ ಯಶಸ್ಸು ಮತ್ತು ಅನ್ನವೆಂಬ ಅರ್ಥಗಳಿರುವವು. ಈ ಋಕ್ಕಿನಲ್ಲಿರುವ ಇಳಾಶಬ್ದಕ್ಕೆ ಅನ್ನವೆಂಬ ಅರ್ಥವನ್ನು ಸ್ವೀಕರಿಸಿದಲ್ಲಿ ದ್ಯುಮ್ನ ಶಬ್ದಕ್ಕೆ ಯಶಸ್ಸೆಂಬ ಅರ್ಥವನ್ನು ಹೇಳಬೇಕು.

ವಿಶ್ವತುರಾ—ತೂರ್ವತೀತಿ ತೂಃ। ತುರ್ವೀ ಹಿಂಸಾರ್ಥಃ। ವಿಶ್ವೇಷಾಂ ತೂಃ ವಿಶ್ವತೂಃ। ಸರ್ವೇಷಾಂ ಶತ್ರೂಣಾಂ ಹಿಂಸಕೇನ॥ ವಿಶ್ವ = ಸಮಸ್ತ ಶತ್ರುಗಳನ್ನು, ತುರಾ—ಹಿಂಸೆಮಾಡುವ (ಜಯಿಸುವ) ಶತ್ರುಜಯದಿಂದ ಉಂಟಾದ ಯಶಸ್ಸೆಂದಭಿಪ್ರಾಯವು. ಈ ಶಬ್ದವು ದ್ಯುಮ್ನೇನ ಎಂಬ ಶಬ್ದಕ್ಕೆ ವಿಶೇಷಣವು.

ವಾಜಿನೀವತಿ—ಅನ್ನವತಿ। ವಾಜವೆಂದರೆ ಅನ್ನವು (ನಿ. ೩-೯). ಅನ್ನಂ ವೈ ವಾಜಃ ಎಂದು ಶತಪಥ ಬ್ರಾಹ್ಮಣವಾಕ್ಯವಿರುವುದು (ಶತ. ಬ್ರಾ. ೯-೩-೪-೧) ವಾಜಿನೀವತಿ ಎಂದರೆ ಅನ್ನ (ಆಹಾರ) ವುಳ್ಳವಳು ಎಂದರೆ ಅನ್ನವನ್ನು ಕೊಡಲು ಶಕ್ತಿಯುಳ್ಳವಳು.

॥ ವ್ಯಾಕರಣಪ್ರಕ್ರಿಯಾ ॥

ರಾಯಾ—ರೈ ಎಂಬುದು ಧನವಾಚಿಯಾದ ಐಕಾರಾಂತವಾದ ಶಬ್ದ. ತೃತೀಯಾ ವಿಭಕ್ತಿ ಏಕವಚನ ಟಾ ವಿವಕ್ಷಾಮಾಡಿದಾಗ ಆಯಾದೇಶ ಬಂದರೆ ರಾಯಾ ಎಂದು ರೂಪವಾಗುತ್ತದೆ. ಊಡಿದಂಪದಾದ್ಯಪ್ಪುಮ್ರೈದ್ಯುಭ್ಯಃ (ಪಾ. ಸೂ. ೬-೧-೧೭೬) ಇವುಗಳ ಪರದಲ್ಲಿರುವ ಅಸರ್ವನಾಮಸ್ಥಾನ ವಿಭಕ್ತಿಯು ಉದಾತ್ತ ವಾಗುತ್ತದೆ ಎಂಬುದರಿಂದ ಟಾ ವಿಭಕ್ತಿಯು ಉದಾತ್ತವಾಗುತ್ತದೆ. ರಾಯಾ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

ಬೃಹತಾ—ಬೃಹತ್ ಶಬ್ದದಮೇಲೆ ತೃತೀಯಾ ಏಕವಚನ ಪರವಾಗಿರುವಾದ ಬೃಹತಾ ಎಂದು ರೂಪವಾಗುತ್ತದೆ. ಸುಪ್ಪಿಗೆ ಅನುದಾತ್ತಸ್ವರವು, ಪ್ರಾಪ್ತವಾದರೆ ಬೃಹನ್ಮಹತೋರುಪಸಂಖ್ಯಾನಮ್ ಈ ಎರಡು ಪದದ ಪರದಲ್ಲಿರುವ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ಉದಾತ್ತಸ್ವರ ಬರುತ್ತದೆ. ಆಗ ಬೃಹತಾ ಎಂಬುದು ಅಂತೋದಾತ್ತವಾದ ಶಬ್ದವಾಗುತ್ತದೆ.

ವಿಶ್ವಪೇಶಸಾ—ವಿಶ್ವಾನಿ ಪೇಶಾಂಸಿ ಯಸ್ಯ ಅಸೌ ವಿಶ್ವಪೇಶಾಃ ಯಾರಿಗೆ ನಾನಾವಿಧವಾದ ರೂಪ ಗಳಿವೆಯೋ ಅವನು ವಿಶ್ವಪೇಶಾಃ ಬಹುವ್ರೀಹಿಸಮಾಸ. ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ (ಪಾ. ಸೂ. ೬-೨-೧೦೬) ಬಹುವ್ರೀಹಿಯಲ್ಲಿ ಸಂಜ್ಞಾತೋರುತ್ತಿರುವಾಗ ಪೂರ್ವಪದವಾದ ವಿಶ್ವಶಬ್ದವು ಅಂತೋದಾತ್ತ ಸ್ವರವನ್ನು ಹೊಂದುವುದು. ಇಲ್ಲಿ ವಿಶ್ವಶಬ್ದವು ಪೂರ್ವಪದವಾಗಿದೆ. ಆದರೆ ಸಂಜ್ಞಾತೋರುವುದಿಲ್ಲ. ಆದರೂ ಅಂತೋದಾತ್ತಸ್ವರವು ಬಂದಿರುವುದರಿಂದ ವ್ಯತ್ಯಯೋಬಹುಲಂ ಸೂತ್ರದಿಂದ ಸಂಜ್ಞಾತೋರದಿದ್ದರೂ ಪೂರ್ವ ಸೂತ್ರದಿಂದ ವಿಶ್ವಶಬ್ದಕ್ಕೆ ಅಂತೋದಾತ್ತಸ್ವರ ಬರುತ್ತದೆ ಎಂದು ಸ್ವೀಕರಿಸಬೇಕು. ಅಥವಾ ಮರುದ್ವೃಧಾದಿಗಣವು ಆಕೃತಿಗಣವಾದುದರಿಂದ ಅವುಗಳಿಗೆ ಅಂತೋದಾತ್ತವನ್ನು ವಿಧಿಸಿರುವುದರಿಂದ ವಿಶ್ವಪೇಶಶ್ಶಬ್ದವನ್ನು ಆ ಗಣದಲ್ಲಿ ಪಾಠಮಾಡಿದೆ ಎಂದು ಅಂಗೀಕರಿಸಬೇಕು. ಆಗ ಸ್ವರಿತವಾಗಿ ಪೂರ್ವಪದಾಂತೋದಾತ್ತ ಸ್ವರವು ಬರುತ್ತದೆ.





CC-0. Jangamwadi Math Collection. Digitized by eGangotri

ಮಿಮಿಕ್ಷ್ವ—ಮಿಹ ಸೇಚನೆ ಧಾತು. ಭ್ವಾದಿ. ಇದು ಪ್ರರಸ್ಮೈಪದಿಯಾದ ಧಾತು. ಆದರೆ ಇಲ್ಲಿ ವ್ಯತ್ಯಯೋ ಬಹುಲಂ ಸೂತ್ರದಿಂದ ವ್ಯತ್ಯಯದಿಂದ ಆತ್ಮನೇ ಪದಪ್ರತ್ಯಯ ಬರುತ್ತದೆ ಎಂದು ಸ್ವೀಕರಿಸ ಬೇಕು. ಲೋಟ್‌ಮಧ್ಯಮಪುರುಷ ಏಕವಚನ ಪ್ರತ್ಯಯ ವಿವಕ್ಷಾಮಾಡಿದಾದ ಮಿಹ್ + ಥಾಸ್. ಎಂದಿರುವಾಗ ಥಾಸಿಗೆ ಸೆ ಆದೇಶ ಬರುತ್ತದೆ. ಸವಾಭ್ಯಾಂವಾಮ್ ಸೂತ್ರದಿಂದ ಸಕಾರೋತ್ತರ ಎಕಾರಕ್ಕೆ ವ ಎಂಬ ಆದೇಶ ಬರುತ್ತದೆ. ಮಿಹ್ + ಸ್ವ ಎಂದಾಗುತ್ತದೆ. ಇದು ಭ್ವಾದಿಯಾದುದರಿಂದ ಶಪ್ ವಿಕರಣಪ್ರತ್ಯಯವು ಪ್ರಾಪ್ತ ವಾದರೆ ವ್ಯತ್ಯಯದಿಂದ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಸೂತ್ರದಿಂದ ಶಪಿಗೆ ಶ್ಲು ವಿಕರಣ ಬರುತ್ತದೆ. ಆಗ ಶ್ಲೌ (ಪ್ರಾ. ಸೂ. ೬-೧-೧೦) ಸೂತ್ರದಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಹಲಾದಿಶೇಷಬಂದರೆ ಮಿಮಿಹ್ +. ಸ್ವ ಎಂದು ಆಗುತ್ತದೆ. ಹೋಢಃ (ಪಾ. ಸೂ. ೮-೨-೩೧) ಸೂತ್ರದಿಂದ ಹಕಾರಕ್ಕೆ ಢಕಾರಬರುತ್ತದೆ. ಷಢೋಃ ಕಃ ಸಿ (ಪಾ. ಸೂ. ೮-೨-೪೧) ಸೂತ್ರದಿಂದ ಆ ಢಕಾರಕ್ಕೆ ಸಕಾರಪರದಲ್ಲಿರುವುದರಿಂದ ಕಕಾರವು ಬರುತ್ತದೆ. ಕಕಾರದಪರದಲ್ಲಿ ಸಕಾರಬಂದಿರುವುದರಿಂದ ಸಕಾರಕ್ಕೆ ಷತ್ವಬರುತ್ತದೆ. ಕಕಾರ ಷಕಾರಯೋಗದಿಂದ ಕ್ಷಕಾರವಾಗುತ್ತದೆ. ಮಿಮಿಕ್ಷ್ವ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರವು ಸತಿಶಿಷ್ಟವಾಗಿರು ವುದರಿಂದ ಅದೇ ಉಳಿಯುತ್ತದೆ. ಮಿಮಿಕ್ಷ್ವ ಎಂಬುದು ಅಂತೋದಾತ್ತವಾದ ಪದವಾಗುತ್ತದೆ. ಸಮಾನವಾಕ್ಯೆ ನಿಘಾತಯುಷ್ಮದಸ್ಮದಾದೇಶಾ ವಕ್ತವ್ಯಾ ಎಂದು ವಿಶೇಷವಾಗಿ ವಾರ್ತಿಕಕಾರರು ಹೇಳಿರುವುದರಿಂದ ಇಲ್ಲಿ ಪೂರ್ವ ಪದವು ಹಿಂದಿನವಾಕ್ಯದಲ್ಲಿಯೇ ಅನ್ವಯಿಸಿರುವುದರಿಂದ ಮಿಮಿಕ್ಷ್ವ ಎಂಬುದು ಸಮಾನವಾಕ್ಯದಲ್ಲಿರುವ ಪೂರ್ವಪದದ ಪರದಲ್ಲಿ ಬರಲಿಲ್ಲ. ಆದುದರಿಂದ ತಿಙ್ಙತಿಙಃ ಸೂತ್ರದಿಂದ ನಿಘಾತಬರುವುದಿಲ್ಲ.

ವಿಶ್ವತುರಾ—ತೂರ್ವತಿ ಇತಿ ತೂಃ. ಹಿಂಸೆಮಾಡುವವನು ಎಂದರ್ಥ. ತುರ್ವೀ ಹಿಂಸಾಯಾಂ ಧಾತು. (ಇತರ ಧಾತುವಿನೊಡನೆ ಸೇರಿ ಹಿಂಸಾರ್ಥದಲ್ಲಿ ಪ್ರತಿತವಾಗಿದೆ) ಕ್ವಿಪ್ ಚ (ಪಾ. ಸೂ. ೩-೨-೭೬) ಸೂತ್ರದಿಂದ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪಿನಲ್ಲಿ ಸರ್ವವೂ ಲೋಪವಾಗುತ್ತದೆ ತುರ್ವ್+ಕ್ವಿಪ್ ಎಂದಿರುವಾಗ ರಾಲ್ಲೋಪಃ (ಪಾ. ಸೂ. ೬-೪-೨೧) ರೇಫದ ಪರದಲ್ಲಿರುವ ಛಕಾರ ವಕಾರಗಳಿಗೆ ಕ್ವಿಪ್ ಮತ್ತು ಅನುನಾಸಿಕಾದಿ ಝಲಾದಿ ಪ್ರತ್ಯಯಪರದಲ್ಲಿರುವಾಗ ಲೋಪಬರುತ್ತದೆ ಎಂಬುದರಿಂದ ಇಲ್ಲಿ ರೇಫದಪರದಲ್ಲಿ ವಕಾರಪರದಲ್ಲಿರುವುದರಿಂದ ಲೋಪಬರುತ್ತದೆ; ತುರ್ ಎಂದು ರೇಫಾಂತ ಶಬ್ದವಾಗುತ್ತದೆ. ಇದಕ್ಕೆ ಸು ಪರದಲ್ಲಿರುವಾಗ ರ್ವೋರುಪಧಾಯಾ ದೀರ್ಘ ಇಕಃ ಸೂತ್ರದಿಂದ ಇಕಿಗೆ ದೀರ್ಘ ಬರುತ್ತದೆ. ಹಲಿನ ಪರದಲ್ಲಿರುವುದರಿಂದ ಸುಲೋಪವಾಗುತ್ತದೆ. ರೇಫಕ್ಕೆ ವಿಸರ್ಗಬಂದರೆ ತೂಃ ಎಂದು ರೂಪವಾಗುತ್ತದೆ. ವಿಶ್ವೇಷಾಂ ತೂಃ ವಿಶ್ವತೂಃ ಸರ್ವವನ್ನೂ ಹಿಂಸಿಸು ವವನು ಎಂದರ್ಥ. ಸಮಾಸಸ್ಯ (ಪ್ರಾ. ಸೂ ೬-೧-೨೨೩) ಸಮಾಸಕ್ಕೆ ಅಂತೋದಾತ್ತ ಬರುತ್ತದೆ ಎಂಬುದರಿಂದ ಅಂತೋದಾತ್ತ ಸ್ವರಬರುತ್ತದೆ. ವಿಶ್ವತುರ್ ಎಂಬುದು ಅಂತೋದಾತ್ತ ಶಬ್ದ. ಇದಕ್ಕೆ ತೃತೀಯಾಏಕವಚನದಲ್ಲಿ ವಿಶ್ವತುರಾ ಎಂದು ರೂಪವಾಗುತ್ತದೆ.

ವಾಜಿನೀವತಿ—ವಾಜಃ ಅನ್ನಂ ಅಸ್ಯಾಃ ಅಸ್ತಿ ಇತಿ ವಾಜಿನೀ ಕ್ರಿಯಾ ಅನ್ನಸಂಪಾದಕವಾದ ವ್ಯಾಪಾರವೆಂದರ್ಥ. ಮತ್ವರ್ಥದಲ್ಲಿ ಇನಿಪ್ರತ್ಯಯ ಬರುತ್ತದೆ. ನಾಂತವಾದುದರಿಂದ ಙೀಪ್ ಬರುತ್ತದೆ. ವಾಜಿನೀ ಕ್ರಿಯಾ ಯಸ್ಯಾಃ ಸಾ ವಾಜಿನೀವತೀ ಅನ್ನಸಂಪಾದಕವಾದ ಕ್ರಿಯೆಉಳ್ಳವಳು ಎಂದರ್ಥ. ಮತುಪ್ ಪ್ರತ್ಯಯ ಬಂದು ಉಗಿತಶ್ಚ ಸೂತ್ರದಿಂದ ಙೀಪ್ ಬರುತ್ತದೆ. ಮತುಪಿನ ಮಕಾರಕ್ಕೆ ಸಂಜ್ಞಾಯಾಂ (ಪಾ. ಸೂ. ೮-೨-೧೧) ಸೂತ್ರದಿಂದ ವಕಾರ ಬರುತ್ತದೆ. ಸಂಬುದ್ಧಿಯಲ್ಲಿ ಹ್ರಸ್ವಬಂದು ಸುಲೋಪಬರುವುದರಿಂದ ವಾಜಿನೀವತಿ ಎಂದು ರೂಪವಾಗುತ್ತದೆ. ಎಂಟನೇ ಅಧ್ಯಾಯದ ಆಮಂತ್ರಿತಸ್ಯ ಚ ಸೂತ್ರದಿಂದ ನಿಘಾತಸ್ವರ ಬರುತ್ತದೆ. ವಾಜಿನೀವತಿ ಎಂಬುದು ಸರ್ವಾನುದಾತ್ತವಾದ ಶಬ್ದ. ॥ ೧೬ ॥



CC-0. Jangamwadi Math Collection. Digitized by eGangotri

# ನಲವತ್ತೊಂಭತ್ತನೆಯ ಸೂಕ್ತವು

ಉಷೋ ಭದ್ರೇಭಿರಿತಿ ಚತುರ್ಋಚಂ ಷಷ್ಠಂ ಸೂಕ್ತಂ । ಅತ್ರಾನುಕ್ರಮ್ಯತೇ । ಉಷಚ್ಚ-ತುಷ್ಕಮಾನುಷ್ಟುಭಂ ತ್ವಿತಿ । ಕಣ್ವಪುತ್ರಃ ಪ್ರಸ್ಕಣ್ವ ಋಷಿಃ । ತುಹ್ಯಾದಿಪರಿಭಾಷಯೇದಮುತ್ತರಂ ಚಾನುಷ್ಟುಭಂ । ಪೂರ್ವತ್ರೋಽಪಸ್ಯಂ ತ್ವಿತ್ಯುಕ್ತತ್ವಾದಿದಮಪಿ ಸೂಕ್ತಮುಷಸ್ಯಂ । ಪ್ರಾತರನುವಾಕ-ಸ್ಯೋಽಷಸ್ಯೇ ಕ್ರತಾವಾನುಷ್ಟುಭೇ ಛಂದಸ್ಯೇತತ್ಸೂಕ್ತಂ । ಸೂತ್ರ್ಯತೇ ಹಿ । ಉಷೋ ಭದ್ರೇಭಿರಿತ್ಯಾ-ನುಷ್ಟುಭಂ । ಆ. ೪-೧೪ । ಇತಿ ॥ ಆಶ್ವಿನಶಸ್ತ್ರೇಽಪ್ಯೇತತ್ಸೂಕ್ತಂ । ಪ್ರಾತರನುವಾಕನ್ಯಾಯೇನ । ಆ ೬-೫ । ಇತ್ಯತಿದೇಶಾತ್ ॥

ಅನುವಾದ—ಉಷೋ ಭದ್ರೇಭಿಃ ಎಂಬುವುದು ಈ ಒಂಭತ್ತನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ನಾಲ್ಕು ಋಕ್ಕುಗಳಿರುವವು. ಅನುಕ್ರಮಣಿಕೆಯಲ್ಲಿ—ಉಷೋ ಭದ್ರೇಭಿಃ ಎಂಬ ಸೂಕ್ತವು ಅನುಷ್ಟುಪ್‌ಛಂದಸ್ಸಿನಿಂದ ಕೂಡಿದ ನಾಲ್ಕು ಋಕ್ಕುಗಳುಳ್ಳ ಸೂಕ್ತವು ಎಂದಿರುವುದು. ಈ ಸೂಕ್ತಕ್ಕೆ ಕಣ್ವಋಷಿಯ ಪುತ್ರನಾದ ಪ್ರಸ್ಕಣ್ವನೆಂಬುವನು ಋಷಿಯು. ಅನುಷ್ಟುಪ್ ಛಂದಸ್ಸು. ಉಷೋ ದೇವತೆಯು. ಪ್ರಾತರನುವಾಕಪಠನಮಾಡುವಾಗ ಉಷಸ್ಯಕ್ರತುಮಂತ್ರಗಳಲ್ಲಿ ಅನುಷ್ಟುಪ್ ಛಂದಸ್ಸಿನ ಋಕ್ಕುಗಳನ್ನು ಪಠಿಸುವುದಕ್ಕಾಗಿ ಈ ಸೂಕ್ತವನ್ನು ಉಪಯೋಗಿಸುವರು. ಈ ವಿಷಯವು ಆಶ್ವಲಾಯನಶ್ರೌತಸೂತ್ರದಲ್ಲಿ ಉಷೋ ಭದ್ರೇಭಿರಿ-ತ್ಯಾನುಷ್ಟುಭಂ ಎಂಬ ಸೂತ್ರದಿಂದ ಉಕ್ತವಾಗಿರುವುದು. (ಆ. ೪-೧೪) ಮತ್ತು ಅಲ್ಲಿಯೇ ಪ್ರಾತರನುವಾಕ-ನ್ಯಾಯೇನ (ಆ. ೬-೫) ಎಂಬ ಸೂತ್ರದಿಂದ ಈ ಸೂಕ್ತವನ್ನು ಆಶ್ವಿನಶಸ್ತ್ರಮಂತ್ರಪಠನಕ್ಕಾಗಿಯೂ ಉಪಯೋಗಿಸಬೇಕೆಂದು ಹೇಳಲ್ಪಟ್ಟಿರುವುದು.

## ಸೂಕ್ತ—೪೯

ಮಂಡಲ—೧ ॥ ಅನುವಾಕ—೯ ॥ ಸೂಕ್ತ—೪೯ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೬ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೪
ಋಷಿಃ—ಪ್ರಸ್ಕಣ್ವಃ ಕಾಣ್ವಃ ॥
ದೇವತಾ— ಉಷಾಃ ॥
ಛಂದಃ—ಅನುಷ್ಟುಪ್

॥ ಸಂಹಿತಾಪಾಠಃ ॥

ಉಷೋ ಭದ್ರೇಭಿರಾ ಗಹಿ ದಿವಶ್ಚಿದ್ರೋಚನಾದಧಿ ।
ವಹನ್ತ್ವರುಣಪ್ಸವ ಉಪ ತ್ವಾ ಸೋಮಿನೋ ಗೃಹಂ ॥ ೧ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಉಷಃ । ಭದ್ರೇಭಿಃ । ಆ । ಗಹಿ । ದಿವಃ । ಚಿತ್ । ರೋಚನಾತ್ । ಅಧಿ । ವಹಂತು । ಅರುಣಽಪ್ಸವಃ । ಉಪ । ತ್ವಾ । ಸೋಮಿನಃ । ಗೃಹಂ ॥ ೧ ॥

॥ ಸಾಯಣಭಾಷ್ಯಂ ॥

ಹೇ ಉಷ ಉಷೋದೇವತೇ ಭದ್ರೇಭಿರ್ಭಂದನೀಯೈಃ ಶೋಭನೈರ್ಮಾರ್ಗೈರ್ದಿವೋಽಂತರಿಕ್ಷ-ಲೋಕಾತ್ ರೋಚನಾದ್ರೋಚಮಾನಾದ್ದೀಪ್ಯಮಾನಾತ್ । ಅಧಿರುಪರ್ಯರ್ಥೇ । ಉಪರಿ ವರ್ತಮಾನಾತ್ । ಚಿದಿತಿ ಪೂಜಿತಾರ್ಥಃ । ಪೂಜಿತಾದೇವಂವಿಧಾದಂತರಿಕ್ಷಲೋಕಾದಾ ಗಹಿ । ಆ ಗಚ್ಛ । ಹೇ ಉಷಃ ಅರುಣ-ಪ್ಸವೋಽರುಣವರ್ಣಾ ಗಾವಃ ಸೋಮಿನಃ ಸೋಮಯುಕ್ತಸ್ಯ ಯಜಮಾನಸ್ಯ ಗೃಹಂ ದೇವಯಜನರೂಪಂ ಯಜ್ಞಗೃಹಂ ತ್ವಾ ತ್ವಾಮುಪವಹಂತು । ಪ್ರಾಪಯಂತು ॥ ಗಹಿ । ಗಮೇರ್ಲೋಟಿ ಬಹುಲಂ ಛಂದಸೀತಿ ಶಪೋ ಲುಕ್ । ಹೇರಪಿತ್ತ್ವೇನ ಙಿತ್ತ್ವೇಽನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ಅತೋ ಹೇರಿತಿ ಲುಙ್ನ ಭವತಿ । ಅಸಿದ್ಧವದತ್ರಾ ಭಾದಿತ್ಯನುನಾಸಿಕಲೋಪಸ್ಯಾಸಿದ್ಧತ್ವಾತ್ । ರೋಚನಾತ್ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ । ಯೋರನಾದೇಶೇ ಚಿತ ಇತ್ಯಂತೋದಾತ್ತತ್ವಂ। ಅರುಣಪ್ಸವಃ । ಪ್ಸಾ ಭಕ್ಷಣೇ । ಪ್ಸಾಂತಿ ಭಕ್ಷಯಂತಿ ಸ್ತನಂ ಪಿಬಂತೀತಿ ಪ್ಸವೋ ವತ್ಸಾಃ । ಔಣಾದಿಕಃ ಕುಪ್ರತ್ಯಯಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಅರುಣಾಃ ಪ್ಸವೋ ಯಾಸಾಂ ತಾಸ್ತ-ಥೋಕ್ತಾಃ । ಅತ್ರ ವತ್ಸಾನಾಮಾರುಣ್ಯಪ್ರತಿಪಾದನಾನ್ಮಾತೃಣಾಮಪಿ ತಥಾತ್ವಂ ಗಮ್ಯತೇ । ಪೈತೃಕಮಶ್ವಾ ಅನುಹರಂತೇ ಮಾತೃಕಂ ಗಾವೋಽನುಹರಂತೇ । ಮ ೧-೩-೨೧. ೫ । ಇತಿ ಗೋನರ್ದೀಯಃ । ತಾಸಾಂ ಚೋಷೋವಾಹನತ್ವಂ ನಿಘಂಟಾವುಕ್ತಂ । ಅರುಣ್ಯೋ ಗಾವ ಉಷಸಾಮಿತಿ । ಅರುಣಶಬ್ದೋಽರ್ತೇಶ್ಚ । ಉ ೩-೬೦ । ಇತ್ಯುನನ್ಪ್ರತ್ಯಯಾಂತಃ । ತೃಣಾಖ್ಯಾಯಾಂ ಚಿತ್ । ಉ. ೩-೫೯ । ಇತ್ಯತಶ್ಚಿದಿತ್ಯನುವೃತ್ತೇರಂ-ತೋದಾತ್ತಃ । ಸ ಏವ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ಶಿಷ್ಯತೇ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ । ಅಧಿ ಚಿತ್—ಮೇಲುಗಡೆ ಪೂಜ್ಯಸ್ಥಾನದಲ್ಲಿ । ರೋಚನಾತ್—ಪ್ರಕಾಶಿಸತಕ್ಕ । ದಿವಃ—ದ್ಯುಲೋಕದಿಂದ । ಭದ್ರೇಭಿಃ—ಮಂಗಳಕರಗಳಾದ ಮಾರ್ಗಗಳ ಮೂಲಕ । ಆ ಗಹಿ—ದಯಮಾಡು । (ಎಲೈ ದೇವಿ(ಯೇ) ಅರುಣಪ್ಸವಃ—ಕೆಂಪುಬಣ್ಣದ ಹಸುಗಳು । ಸೋಮಿನಃ—ಸೋಮರಸವನ್ನಿಟ್ಟುಕೊಂಡಿರುವ ಯಜಮಾನನ । ಗೃಹಂ—(ದೇವತೆಗಳನ್ನುದ್ದೇಶಿಸಿ ಮಾಡುವ) ಯಜ್ಞಗೃಹಕ್ಕೆ ತ್ವಾ—ನಿನ್ನನ್ನು । ಉಪ ವಹಂತು—ಕರೆತಂದು ಸೇರಿಸಲಿ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ಮೇಲುಗಡೆ ಪೂಜ್ಯಸ್ಥಾನದಲ್ಲಿ ಪ್ರಕಾಶಿಸತಕ್ಕ ಅಂತರಿಕ್ಷಲೋಕದಿಂದ ಮಂಗಳಕರಗಳಾದ ಮಾರ್ಗಗಳ ಮೂಲಕ ಇಲ್ಲಿಗೆ ದಯಮಾಡು. ಕೆಂಪುಬಣ್ಣದ ಹಸುಗಳು ಸೋಮರಸಯುಕ್ತನಾದ ಯಜಮಾನನ ಯಜ್ಞಗೃಹಕ್ಕೆ ನಿನ್ನನ್ನು ಕರೆತರಲಿ.



CC-0. Jangamwadi Math Collection. Digitized by eGangotri

## English Translation.

Ushas, come by auspicious ways from above the bright region of the firmament; let the ruddy coloured cows bring you to the dwelling of the offerer of the soma juice.

### ॥ ವಿಶೇಷ ವಿಷಯಗಳು ॥

ಭದ್ರೇಭಿಃ— ಶೋಭನೈರ್ಮಾರ್ಗೈಃ—ಉತ್ತಮವಾದ ಮಾರ್ಗಗಳಿಂದ; ವೇದಾರ್ಥಯತ್ನಕಾರರೇ ಮೊದಲಾದ ಕೆಲವರು ಭದ್ರೇಭಿಃ ಎಂಬ ಶಬ್ದಕ್ಕೆ ಭದ್ರೇಭಿಃ ಅಶ್ವೈಃ—ಉತ್ತಮವಾದ ಕುದುರೆಗಳಿಂದ ಎಂಬ ಅರ್ಥವಿವರಣೆಮಾಡಿರುವರು. ಋಕ್ಕಿನಲ್ಲಿ ಮಾರ್ಗೈಃ ಅಥವಾ ಅಶ್ವೈಃ ಎಂಬ ಯಾವ ಶಬ್ದವೂ ಇಲ್ಲದೆ ಭದ್ರೇಭಿಃ ಎಂಬ ಶಬ್ದಮಾತ್ರವಿರುವುದರಿಂದ ಈ ಶಬ್ದಪ್ರಯೋಗದಲ್ಲಿ ಋಷಿಯ ಆಶಯವೇನಿರಬಹುದೆಂಬುದು ಸ್ಪಷ್ಟವಾಗಿಲ್ಲ.

ಅರುಣಪ್ಸವಃ—ಅರುಣ ಎಂದರೆ ಕೆಂಪಾದ, ಪ್ಸು ಎಂದರೆ ರೂಪ (ನಿ. ೩-೨೩) ಆದುದರಿಂದ ಅರುಣಪ್ಸವಃ ಎಂಬ ಶಬ್ದಕ್ಕೆ ಕೆಂಪಾದ ರೂಪಗಳು ಅಥವಾ ಕೆಂಪಾದ ರೂಪಗಳುಳ್ಳ ಎಂದರ್ಥವಾಗುವುದು- ಭಾಷ್ಯಕಾರರು ಈ ಶಬ್ದಕ್ಕೆ ಅರುಣವರ್ಣಾ ಗಾವಃ ಕೆಂಪುಬಣ್ಣದ ಗೋವುಗಳು ಎಂದು ವಿವರಣೆಮಾಡಿರುವರು. ಗೋವುಗಳು ಉಷೋದೇವತೆಯನ್ನು ಯಜಮಾನನ ಗೃಹಕ್ಕೆ ಕರೆತರುವವು ಎಂಬ ಅರ್ಥವು ನಿರುಕ್ತದ ನಿಘಂಟು ಪ್ರಕರಣದಲ್ಲಿ ಉಕ್ತವಾಗಿರುವುದೆಂದು ಹೇಳಿರುವರು. ಅಶ್ವಗಳಲ್ಲಿ ಕೆಂಪುಬಣ್ಣದ ಅಶ್ವಗಳಿರುವುದರಿಂದ ಕೆಂಪು ಬಣ್ಣದ ಅಶ್ವಗಳೆಂದೂ ಅರ್ಥಮಾಡಬಹುದು. ಅಥವಾ ಉಷಃಕಾಲದಲ್ಲಿ ಸೂರ್ಯೋದಯವಾಗುವಾಗ ಸೂರ್ಯನ ಕಿರಣಗಳು ಕೆಂಪುಬಣ್ಣಗಳಿಂದ ಗೋಚರವಾಗುವುದರಿಂದ ಇಲ್ಲಿ ಕೆಂಪುಬಣ್ಣದ ಕಿರಣಗಳಿಂದ ಎಂದು ಬೇಕಾದರೂ ಅರ್ಥ ಹೇಳಬಹುದು. ಉಷೋದೇವತೆಗೆ ಕೆಂಪು ಹಸುಗಳೇ ವಾಹನಗಳೆಂದು ನಿರುಕ್ತದಲ್ಲಿ ಹೇಳಿದೆ. (ನಿ. ೧-೧೫)

ಸೋಮಿನಃ—ಸೋಮಯುಕ್ತಸ್ಯ ಯಜಮಾನಸ್ಯ—ದೇವತೆಗೆ ಅರ್ಪಿಸುವುದಕ್ಕಾಗಿ ಸೋಮರಸವನ್ನು ಸಿದ್ಧಪಡಿಸಿಟ್ಟುಕೊಂಡಿರುವ ಯಜಮಾನನ.

### ॥ ವ್ಯಾಕರಣಪ್ರಕ್ರಿಯಾ ॥

ಗಹಿ—ಗಮ್ಲೃ ಗತೌ ಧಾತು. ಭ್ವಾದಿ. ಲೋಟ್ ಮಧ್ಯಮಪುರುಷ ಏಕವಚನ ವಿವಕ್ಷಾಮಾಡಿದಾಗ ಸಿಪ್ ಪ್ರತ್ಯಯ ಬರುತ್ತದೆ. ಸೇರ್ಹ್ಯಪಿಚ್ಚ ಸೂತ್ರದಿಂದ ಅದಕ್ಕೆ ಅಪಿತ್ತಾದ ಹಿ ಎಂಬ ಆದೇಶ ಬರುತ್ತದೆ. ಗಮ್+ಹಿ ಎಂದಿರುವಾಗ ಭ್ವಾದಿಯ ಶಪ್ ವಿಕರಣವು ಪ್ರಾಪ್ತವಾಗುತ್ತದೆ. ಅದಕ್ಕೆ ಬಹುಲಂ ಛಂದಸಿ (ಪಾ. ಸೂ. ೨-೪-೭೩) ಸೂತ್ರದಿಂದ ಲುಕ್ ಬರುತ್ತದೆ. ಸಾರ್ವಧಾತುಕಮಪಿತ್ ಸೂತ್ರದಿಂದ ಹೀಗೆ ಅಪಿತ್ತ್ವವನ್ನು ಹೇಳಿದುದರಿಂದ ಙಿತ್ತಾಗುತ್ತದೆ. ಆಗ ಅನುದಾತ್ತೋಪದೇಶವ (ಪಾ. ಸೂ. ೬-೪-೩೭) ಸೂತ್ರದಿಂದ ಙಿತ್ ಪ್ರತ್ಯಯ ಪರದಲ್ಲಿರುವುದರಿಂದ ಅನುನಾಸಿಕವಾದ ಮಕಾರಕ್ಕೆ ಲೋಪ ಬರುತ್ತದೆ. ಮಕಾರಕ್ಕೆ ಲೋಪವಾದಾಗ ಗ+ಹಿ ಎಂದಾಗುತ್ತದೆ. ಇಲ್ಲಿ ಅಕಾರದ ಪರದಲ್ಲಿ ಹಿ ಬಂದಿರುವುದರಿಂದ ಅತೋಹೇಃ (ಪಾ. ಸೂ. ೬-೪-೧೦೫) ಸೂತ್ರದಿಂದ ಹಿ ಗೆ ಲುಕ್ ಪ್ರಾಪ್ತವಾಗುತ್ತದೆ. ಅಸಿದ್ಧವದತ್ರಾಭಾತ್ (ಪಾ. ಸೂ. ೬-೪-೨೨) ಸಮಾನನಿಮಿತ್ತಕವಾದ ಭಸಂಜ್ಞಾಧಿಕಾರಕ್ಕೆ ಒಳಪಟ್ಟ ಕಾರ್ಯವನ್ನು ಮಾಡುವಾಗ ಭಸಂಜ್ಞಾಧಿಕಾರೀಯ ಕಾರ್ಯವು ಅಸಿದ್ಧವಾಗುತ್ತದೆ. ಇಲ್ಲಿ ಅನುದಾತ್ತೋಪದೇಶ ಸೂತ್ರವು ಭಸಂಜ್ಞಾಧಿಕಾರದಲ್ಲಿ ಸೇರಿದೆ. ಆದುದ



CC-0. Jangamwadi Math Collection. Digitized by eGangotri

ರಿಂದ ಇದರಿಂದ ಮಾಡಿದ ಅನುನಾಸಿಕ ಲೋಪವು ಭಸಂಜ್ಞಾಧಿಕಾರೀಯವಾದ ಹಿಲುಕ್ ಕಾರ್ಯವನ್ನು ಕುರಿತು ಅಸಿದ್ಧವಾಗುತ್ತದೆ. ಅಂದರೆ ಲೋಪವಾದರೂ ಮಕಾರವಿದ್ದಂತೆಯೇ ಆಗುತ್ತದೆ. ಇದರಿಂದ ಅಕಾರದ ಪರದಲ್ಲಿ ಹಿ ಬಾರದಿರುವುದರಿಂದ ಲುಕ್ ಬರುವುದಿಲ್ಲ.

**ರೋಚನಾತ್**—ರುಚ ದೀಪ್ತೌ ಧಾತು. ಭ್ವಾದಿ. ಇದಕ್ಕೆ ಅನುದಾತ್ತೇತಶ್ಚ ಹಲಾದೇಃ (ಪಾ. ಸೂ. ೩-೨-೧೪೯) ಹಲಾದಿಯಾಗಿಯೂ ಅನುದಾತ್ತೇತ್ತಾಗಿಯೂ ಇರುವ ಅಕರ್ಮಕವಾದ ಧಾತುವಿನಮೇಲೆ ಯುಚ್ ಪ್ರತ್ಯಯ ಬರುತ್ತದೆ ಎಂಬುದರಿಂದ ಯುಚ್ ಪ್ರತ್ಯಯ ಬರುತ್ತದೆ. ಯುವೋರನಾಕೌ ಸೂತ್ರದಿಂದ ಯುಚಿನಲ್ಲಿ ಉಳಿಯುವ ಯು ಎಂಬುದಕ್ಕೆ ಅನಾದೇಶ ಬರುತ್ತದೆ. ಪುಗಂತಲಘೂಪಧಸ್ಯಚ ಸೂತ್ರದಿಂದ ಧಾತುವಿನ ಉಪಧೆಗೆ ಗುಣ ಬಂದರೆ ರೋಚನ ಎಂದಾಗುತ್ತದೆ. ಪಂಚಮೀ ವಿಭಕ್ತಿ ಏಕವಚನದಲ್ಲಿ ರೋಚನಾತ್ ಎಂದು ರೂಪವಾಗುತ್ತದೆ. ಯುಚಿನಲ್ಲಿ ಚಕಾರ ಇತ್ತಾದುದರಿಂದ ಚಿತಃ (ಪಾ. ಸೂ. ೬-೧-೧೬೩) ಸೂತ್ರದಿಂದ ಅಂತೋದಾತ್ತವಾಗುತ್ತದೆ. ರೋಚನವೆಂಬುದು ಅಂತೋದಾತ್ತವಾದುದರಿಂದ ಇದಕ್ಕೆ ವಿಭಕ್ತಿಯ ಏಕಾದೇಶವೂ ಉದಾತ್ತವಾಗುತ್ತದೆ

**ಅರುಣಪ್ಸವಃ**—ಪ್ಸಾ ಭಕ್ಷಣೆ ಧಾತು. ಅದಾದಿ. ಪ್ಸಾಂತಿ ಭಕ್ಷಯಂತಿ ಸ್ತನಂ ಪಿಬಂತಿ ಇತಿ ಪ್ಸವಃ ವತ್ಸಾಃ ; ತಿನ್ನುತ್ತವೆ, ಮೊಲೆಯನ್ನು ಕುಡಿಯುತ್ತವೆ ಅಂದರೆ ಕರುಗಳು ಎಂದು ತಾತ್ಪರ್ಯ. ಈ ಧಾತುವಿಗೆ ಉಣಾದಿಸಿದ್ಧವಾದ ಕು ಪ್ರತ್ಯಯ ಬರುತ್ತದೆ. ಕಕಾರ ಇತ್ತಾದುದರಿಂದ ಆತೋ ಲೋಪ ಇಟಿಚ (ಪಾ. ಸೂ. ೬-೪-೬೪) ಸೂತ್ರದಿಂದ ಧಾತುವು ಆಕಾರಾಂತವಾದುದರಿಂದ ಅದರ ಆಕಾರಕ್ಕೆ ಲೋಪ ಬರುತ್ತದೆ. ಪ್ಸು ಎಂದು ರೂಪವಾಗುತ್ತದೆ. ಅರುಣಾಃ ಪ್ಸವಃ ಯಾಸಾಂ ತಾಃ ಅರುಣಪ್ಸವಃ ಕೆಂಪಾದ ಕರುಗಳು ಉಳ್ಳವುಗಳು. ಹಸುಗಳು ಎಂದರ್ಥ. ಇಲ್ಲಿ ಕರುಗಳು ಕೆಂಪಾದವುಗಳು ಎಂದು ಹೇಳಿದರೂ ಆ ಕೆಂಪುಕರುಗಳುಳ್ಳ ಹಸುಗಳೂ ಕೆಂಪಾದುವುಗಳು ಎಂದು ಸ್ವರಸವಾಗಿ ಲಬ್ಧವಾಗುತ್ತದೆ. ಸಾಮಾನ್ಯವಾಗಿ ಕರುಗಳು ತಾಯಿಯ ಗುಣಗಳನ್ನು ಹೊಂದುತ್ತವೆ ಎಂದು ಲೋಕವಿದಿತವಾಗಿದೆ. ಪೈತೃಕಮಶ್ವಾ ಅನುಹರಂತೆ ಮಾತೃಕಂ ಗಾವೋಽನುಹರಂತೆ (ಪಾ. ಮ. ೧-೩-೨೧-೫) ಇತಿ ಗೋನರ್ದೀಯಃ ಪತಂಜಲಿಮಹರ್ಷಿಗಳೂ ಭಾಷ್ಯದಲ್ಲಿ "ಕುದುರೆಗಳು ತಂದೆಯ ಗುಣಗಳನ್ನೂ ಹಸುಗಳು ತಾಯಿಯ ಗುಣಗಳನ್ನೂ ಹೊಂದುತ್ತವೆ" ಎಂದು ಹೇಳಿರುವರು. ತಾಸಾಂ ಚ ಉಷೋವಾಹನತ್ವಂ ನಿಘಂಟಾವುಕ್ತಮ್ ಅರುಣ್ಯೋ ಗಾವ ಉಷಸಾಮ್ (ನಿ. ೧-೧೫-೭) ಇತಿ। ಈ ಕೆಂಪಾದ ಹಸುಗಳು ಉಷೋದೇವತೆಯ-ವಾಹನಗಳೆಂದು ನಿಘಂಟುವಿನಲ್ಲಿ ಹೇಳಿರುತ್ತಾರೆ. ಇಲ್ಲಿ ಅರುಣ ಶಬ್ದವು ಅರ್ತೇಶ್ಚ (ಉ. ಸೂ. ೫-೬೮೫) ಸೂತ್ರದಲ್ಲಿ ವಿಹಿತವಾದ ಉನ್ ಪ್ರತ್ಯಯಾಂತವಾದ ಶಬ್ದವು. ಅರ್ತೇಶ್ಚ ಸೂತ್ರದಲ್ಲಿ ತೃಣಾಖ್ಯಾಯಾಂ ಚಿತ್ (ಉ. ಸೂ. ೩-೩೩೯) ಸೂತ್ರದಿಂದ ಚಿತ್ ಎಂಬುದು ಅನುವೃತ್ತವಾಗುತ್ತದೆ. ಉನ್ ಪ್ರತ್ಯಯ ಚಿತ್ತಿನಂತೆ ಆಗುವುದು ಎಂದು ತಾತ್ಪರ್ಯ. ಆದುದರಿಂದ ಚಿತಃ ಸೂತ್ರದಿಂದ ಅರುಣಶಬ್ದವು ಅಂತೋದಾತ್ತವಾಗುತ್ತದೆ. ಇದರೊಡನೆ ಬಹುವ್ರೀಹಿ ಸಮಾಸಮಾಡಿರುವುದರಿಂದ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ (ಪಾ. ಸೂ. ೬-೨-೧) ಸೂತ್ರದಿಂದ ಪೂರ್ವಪದಪ್ರಕೃತಿಸ್ವರವೇ ಸತಿಶಿಷ್ಟವಾಗುವುದರಿಂದ ಸಮಾಸದ ಅಂತೋದಾತ್ತಸ್ವರವು ಬರುವುದಿಲ್ಲ. ಅರುಣಪ್ಸವಃ ಎಂಬುದು ಮಧ್ಯೋದಾತ್ತ ಶಬ್ದವಾಗುತ್ತದೆ. ಣಕಾರದ ಮೇಲಿರುವ ಅನುದಾತ್ತವು ಸ್ವರಿತವಾಗುತ್ತದೆ. ॥ ೧ ॥



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಸುಪೇಶಸಂ ಸುಖಂ ರಥಂ ಯಮಧ್ಯಸ್ಥಾ ಉಷಸ್ತ್ವಂ ।
ತೇನಾ ಸುಶ್ರವಸಂ ಜನಂ ಪ್ರಾವಾದ್ಯ ದುಹಿತರ್ದಿವಃ ॥ ೨ ॥

॥ ಪದಪಾಠಃ ॥

ಸುಽಪೇಶಸಂ । ಸುಽಖಂ । ರಥಂ । ಯಂ । ಅಧಿಽಅಸ್ಥಾಃ । ಉಷಃ । ತ್ವಂ ।
ತೇನ । ಸುಽಶ್ರವಸಂ । ಜನಂ । ಪ್ರ । ಅವ । ಅದ್ಯ । ದುಹಿತಃ । ದಿವಃ ॥ ೨ ॥

ಸಾಯಣಭಾಷ್ಯಂ

ಹೇ ಉಷಸ್ತ್ವಂ ಯಂ ರಥಮಧ್ಯಸ್ಥಾಃ ಅಧಿತಿಷ್ಠಸಿ । ಕೀದೃಶಂ ರಥಂ । ಸುಪೇಶಸಂ ಶೋಭನಾವಯವಂ ಶೋಭನರೂಪಯುಕ್ತಂ ವಾ । ಪೇಶ ಇತಿ ರೂಪನಾಮೇತಿ ಯಾಸ್ಕಃ । ನಿ. ೮-೧೧ । ಯದ್ವಾ । ಶೋಭನಹಿರಣ್ಯಯುಕ್ತಂ । ಪೇಶಃ ಕೃಶನಮಿತಿ ತನ್ನಾಮಸು ಪಾಠಾತ್ । ಸುಖಂ ಶೋಭನೇನ ಖೇನಾಕಾಶೇನ ಯುಕ್ತಂ । ವಿಸ್ತೃತಮಿತ್ಯರ್ಥಃ । ಯದ್ವಾ । ಸುಖಹೇತುಭೂತಂ । ಅಥವಾ ಸುಖಮಿತಿ ಕ್ರಿಯಾವಿಶೇಷಣಂ । ಸುಖಂ ಯಥಾ ಭವತಿ ತಥೇತ್ಯರ್ಥಃ । ಹೇ ದಿವೋ ದುಹಿತರ್ದ್ಯುಲೋಕಸಕಾಶಾದುತ್ಪನ್ನ ಉಷೋದೇವತೇ ತೇನ ರಥೇನಾದ್ಯಾಸ್ಮಿನ್ಕಾಲೇ ಸುಶ್ರವಸಂ ಶೋಭನಹವಿರ್ಯುಕ್ತಂ ಜನಂ ಯಜಮಾನಂ ಪ್ರಾವ । ಪ್ರಕರ್ಷೇಣ ಗಚ್ಛ ॥ ಸುಪೇಶಸಂ ಪಿಶ ಅವಯವೇ । ಅಸ್ಮಾದಸುನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತಃ ಪೇಶಸ್ಶಬ್ದಃ । ಶೋಭನಂ ಪೇಶೋ ಯಸ್ಯಾಸೌ ಸುಪೇಶಾಃ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಅಧ್ಯಸ್ಥಾಃ । ತಿಷ್ಠತೇಶ್ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲುಙ್ । ಗಾತಿಸ್ಥೇತಿ ಸಿಚೋ ಲುಕ್ । ಅಡಾಗಮ ಉದಾತ್ತಃ । ಯದ್ವೃತ್ತಯೋಗಾದನಿಘಾತಃ । ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ । ತೇನ । ಅನ್ಯೇಷಾಮಪಿ ದೃಶ್ಯತ ಇತಿ ಸಂಹಿತಾಯಾಂ ದೀರ್ಘಃ । ಸುಶ್ರವಸಂ । ಶ್ರವ ಇತ್ಯನ್ನನಾಮ । ಶ್ರೂಯತ ಇತಿ ಸತಃ । ನಿ. ೧೦-೩ । ಇತಿ ಯಾಸ್ಕಃ । ಸುಪೇಶಸಮಿತಿವದುತ್ತರಪದಾದ್ಯುದಾತ್ತತ್ವಂ । ಅವ । ಅವ ರಕ್ಷಣಗತಿಪ್ರೀತಿತೃಪ್ತೀತ್ಯುಕ್ತತ್ವಾದತ್ರಾವತಿರ್ಗತ್ಯರ್ಥಃ । ದುಹಿತರ್ದಿವಃ ಪರಮಪಿ ಛಂದಸೀತಿ ಷಷ್ಠ್ಯಂತಸ್ಯ ಪೂರ್ವಾಮಂತ್ರಿತಾಂಗವದ್ಭಾವೇ ಸತಿ ಪದದ್ವಯಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವತೆಯೇ । ತ್ವಂ—ನೀನು । ಸುಪೇಶಸಂ—ಶ್ರೇಷ್ಠವಾದ ಅವಯವಗಳಿಂದ ಕೂಡಿರುವುದೂ ಅಥವಾ ಶ್ರೇಷ್ಠವಾದ ರೂಪಯುಕ್ತವಾದುದೂ ಅಥವಾ ಶ್ರೇಷ್ಠವಾದ ಸುವರ್ಣನಿರ್ಮಿತವಾದುದೂ (ಮತ್ತು), । ಸುಖಂ—ಮಹತ್ತಾದ ಆಕಾಶದೊಡನೆ ಕೂಡಿ (ವಿಶಾಲವಾಗಿ) ರುವುದೂ ಅಥವಾ ಸುಖಕರ



CC-0. Jangamwadi Math Collection. Digitized by eGangotri

ವಾಗಿರುವುದೂ ಆದ । ಯಂ ರಥಂ—ಯಾವ ರಥವನ್ನು । ಅಧ್ಯಸ್ಥಾಃ—ಹತ್ತಿ ಕುಳಿತಿದ್ದೀಯೋ । ತೇನ ರಥೇನ— ಆ ರಥದೊಂದಿಗೆ । ದಿವಃ ದುಹಿತಃ—ದ್ಯುಲೋಕೋತ್ಪನ್ನಳಾದ ದೇವಿಯೇ, । ಅದ್ಯ—ಈಗ । ಸುಶ್ರವಸಂ— ಉತ್ತಮವಾದ ಹವಿಸ್ಸನ್ನಿಟ್ಟುಕೊಂಡಿರುವ । ಜನಂ—ಯಜಮಾನನನ್ನು ಕುರಿತು । ಪ್ರಾವ—ಸಂಭ್ರಮದಿಂದ ಹೋಗು.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನೀನು ಕುಳಿತಿರುವ ರಥವು ಶ್ರೇಷ್ಠವಾದ ಅವಯವಗಳಿಂದ ಕೂಡಿದೆ; ರಮಣೀಯವಾದ ರೂಪವುಳ್ಳದ್ದು ; ಉತ್ತಮವಾದ ಸುವರ್ಣದಿಂದ ನಿರ್ಮಿತವಾದದ್ದು ; ಮಹತ್ತಾದ ಆಕಾಶ ದಂತೆ ವಿಸ್ತಾರವಾಗಿರುವುದು ಮತ್ತು ಸುಖದಾಯಕವಾಗಿರುವುದು. ದ್ಯುಲೋಕದಲ್ಲಿ ಉತ್ಪನ್ನಳಾದ ಎಲೈ ದೇವಿಯೇ, ಆ ರಥದಲ್ಲಿ ಕುಳಿತು ನೀನು ಶ್ರೇಷ್ಠವಾದ ಹವಿಸ್ಸನ್ನಿಟ್ಟುಕೊಂಡಿರುವ ಯಜಮಾನನಲ್ಲಿಗೆ ಸಂಭ್ರಮದಿಂದ ಹೋಗು.

## English Translation.

Ushas, daughter of heaven, sitting in the beautiful and easy-moving chariot, come to the pious offerer of the oblation.

॥ ವಿಶೇಷ ವಿಷಯಗಳು ॥

ಸುಪೇಶಸಂ—ಪೇಶವೆಂದರೆ ರೂಪ (ನಿ. ೮-೧೧) ಸುಪೇಶಶಂ ಎಂದರೆ ಉತ್ತಮವಾದ ರೂಪವುಳ್ಳ, ಸುಂದರವಾದ, ನೋಡುವುದಕ್ಕೆ ಅಂದವಾದ. ಅಥವಾ ಪೇಶಶಬ್ದಕ್ಕೆ ಹಿರಣ್ಯ (ಚಿನ್ನ) ವೆಂದೂ ಅರ್ಥವಾಗು ವುದರಿಂದ (ನಿ. ೨-೧೦) ಸುಪೇಶಸಂ ಎಂದರೆ ಸುವರ್ಣಮಯವಾದ ಎಂದೂ ಹೇಳಬಹುದು.

ಸುಖಂ—ಖಂ ಎಂದರೆ ಆಕಾಶ. ಆಕಾಶದಲ್ಲಿ ಸಂಚರಿಸುವುದರಿಂದ ಸುಖಂ ಎಂದರೆ ವಿಸ್ತಾರವಾದ ಎಂದು ಭಾಷ್ಯಕಾರರು ಅರ್ಥಮಾಡಿರುವರು. ಈ ಅರ್ಥವು ಅಷ್ಟೇನೂ ಸಮಂಜಸವಾಗಿಲ್ಲ. ಸುಖಂ ಯಥಾ ಭವತಿ ತಥಾ ಸುಖವಾಗಿ ಎಂದು ಕ್ರಿಯಾವಿಶೇಷಣಾರ್ಥವನ್ನೂ ಹೇಳಿರುವರು. ಈ ಅರ್ಥವೇ ಇಲ್ಲಿ ಸರಿಯಾಗಿ ಹೊಂದುವುದು. ಸುಖಂ ಎಂದರೆ ಮೆತ್ತನೆಯ ಆಸನಗಳನ್ನು ಹಾಕಿ ಸಿದ್ಧಪಡಿಸಿ ಸುಖವಾಗಿ ಕುಳಿತುಕೊಳ್ಳುವಂತೆ ಸಜ್ಜುಗೊಳಿಸಿರುವ ಅಥವಾ ಕುಳಿತಿರುವವರಿಗೆ ಆಯಾಸವಾಗದಂತೆ ಸುಲಭವಾಗಿ ಚಲಿಸುವ ಎಂಬ ಅರ್ಥಗಳನ್ನೂ ಹೇಳಬಹುದು.

ಸುಶ್ರವಸಂ—ಶ್ರವ ಇತ್ಯನ್ನನಾಮ (ನಿ. ೧೦-೩) ಶೋಭನಹವಿರ್ಯುಕ್ತಂ । ಉತ್ತಮವಾದ ಹವಿಸ್ಸನ್ನು (ಅನ್ನವನ್ನು) ಸಿದ್ಧಪಡಿಸಿ ಇಟ್ಟುಕೊಂಡಿರುವ

ಪ್ರಾವ—ರಕ್ಷಣಾರ್ಥಂ ಪ್ರಕರ್ಷೇಣ ಗಚ್ಛ । ಸಂರಕ್ಷಿಸು, ಕಾಪಾಡು.



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

**ಸುಪೇಶಸಮ್**—ಪಿಶ ಅವಯವೇ ಧಾತು. **ಸರ್ವಧಾತುಭ್ಯೋಽಸುನ್** (ಉ. ಸೂ. ೪-೬೫೫) ಎಂಬುದರಿಂದ ಇದಕ್ಕೆ ಅಸುನ್ ಪ್ರತ್ಯಯ ಬರುತ್ತದೆ. **ಞ್ನಿತ್ಯಾದಿರ್ನಿತ್ಯಂ** (ಪಾ. ಸೂ. ೬-೧-೧೯೭) **ಸೂತ್ರ** ದಿಂದ ಅಸುನ್ನಿನಲ್ಲಿ ನಿತ್ತಾದುದರಿಂದ ಪೇಶಸ್ ಶಬ್ದವು ಆದ್ಯುದಾತ್ತವಾಗುತ್ತದೆ. **ಶೋಭನಂ ಪೇಶಃ ಯಸ್ಯ** ಅಸೌ ಸುಪೇಶಾಃ ಮನೋಹರವಾದ ಅವಯವ ಅಥವಾ ರೂಪವುಳ್ಳವನು ಎಂದರ್ಥ. ಇದು ಬಹುವ್ರೀಹಿ ಸಮಾಸ. **ಆದ್ಯುದಾತ್ತಂ ದ್ವ್ಯಚ್ ಛಂದಸಿ** (ಪಾ. ಸೂ. ೬-೨-೧೧೯) ಸುವಿನ ಉತ್ತರದಲ್ಲಿರುವ ದ್ವ್ಯಚ್ಕವಾದ ಆದ್ಯುದಾತ್ತಪದವು ಬಹುವ್ರೀಹಿಯಲ್ಲಿಯೂ ಆದ್ಯುದಾತ್ತವಾಗುತ್ತದೆ ಎಂಬುದರಿಂದ ಪೇಶಸ್ ಆದ್ಯುದಾತ್ತವಾಗಿರು ವುದರಿಂದ ಉತ್ತರಪದವಾಗಿರುವುದರಿಂದ ಸಮಾಸಸ್ವರವನ್ನು ಬಾಧಿಸಿ ಆದ್ಯುದಾತ್ತವಾಗಿಯೇ ಇರುವುದು. ಪಕಾರದ ಮೇಲಿರುವ ಏಕಾರವು ಉದಾತ್ತವಾಗಿದೆ. ದ್ವಿತೀಯೈಕವಚನವಾದ ಅಮ್ ಪ್ರತ್ಯಯ ಪರದಲ್ಲಿರುವಾಗ ಸುಪೇಶಸಂ ಎಂದಾಗುತ್ತದೆ.

**ಅಧ್ಯಸ್ಥಾಃ**—ಅಧಿ ಉಪಸರ್ಗ. ಷ್ಠಾ ಗತಿನಿವೃತ್ತೌ ಧಾತು. ಭ್ವಾದಿ. **ಛಂದಸಿ ಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಸೂತ್ರದಿಂದ ವರ್ತಮಾನಾರ್ಥದಲ್ಲಿ ಲುಙ್ ಬರುತ್ತದೆ. ಲುಙ್‌ಮಧ್ಯಮಪುರುಷ ಏಕವಚನ ವಿವಕ್ಷಾಮಾಡಿದಾಗ ಸ್ಥಾ+ಸಿ ಎಂದಿರುತ್ತದೆ. **ಇತಶ್ಚ** ಸೂತ್ರದಿಂದ ಸಿಪಿನ ಇಕಾರಕ್ಕೆ ಲೋಪಬರುತ್ತದೆ. ಲುಙ್‌ನ ವಿಕರಣವಾದ ಚ್ಲಿಗೆ ಸಿಚ್ ಆದೇಶ ಬರುತ್ತದೆ. **ಗಾತಿಸ್ಥಾ ಘುಪಾಭೂಭ್ಯಃ ಸಿಚಃ ಪರಸ್ಮೈಪದೇಷು** (ಪಾ. ಸೂ. ೨-೪-೭೭) ಸೂತ್ರದಿಂದ ಸ್ಥಾ ಧಾತುವಿನ ಪರದಲ್ಲಿರುವ ಸಿಚಿಗೆ ಲುಕ್ ಬರುತ್ತದೆ. ಲುಙ್ ನಿಮಿತ್ತವಾದ ಅಡಾಗಮವು ಧಾತುವಿಗೆ ಬರುತ್ತದೆ. ಸಿಪ್ಪಿನ ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಅಧಿ+ಅಸ್ಥಾಃ ಎಂದು ರೂಪವಾಗುತ್ತದೆ. ಆಗಮಾ ಉದಾತ್ತಾ ಎಂಬುದರಿಂದ ಅಡಾಗಮವು ಉದಾತ್ತವಾಗುತ್ತದೆ. **ಯದ್ವೃತ್ತಾನ್ನಿತ್ಯಂ** (ಪಾ. ಸೂ. ೮-೧-೬೬) ಸೂತ್ರದಿಂದ ಹಿಂದೆ ಯಂ ಎಂಬ ಯಚ್ಛಬ್ದಸಂಬಂಧವಿರುವುದರಿಂದ ನಿಘಾತಸ್ವರ ಬರುವುದಿಲ್ಲ. **ತಿಙಿ ಚೋದಾತ್ತವತಿ** (ಪಾ. ಸೂ. ೮-೧-೭೧) ಉದಾತ್ತವುಳ್ಳ ತಿಙಂತವು ಪರದಲ್ಲಿರುವಾಗ ಗತಿಯು ಅನುದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಗತಿ ಸಂಜ್ಞೆಯುಳ್ಳ ಅಧಿ ಎಂಬುದು ಅನುದಾತ್ತವಾಗುತ್ತದೆ.

**ತೇನ**—ತಚ್ಛಬ್ದದಮೇಲೆ ತೃತೀಯೈಕವಚನ ಪರದಲ್ಲಿರುವಾಗ ತೇನ ಎಂದು ರೂಪವಾಗುತ್ತದೆ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಸೂತ್ರದಿಂದ ಮಂತ್ರಪಾಠದಲ್ಲಿ ದೀರ್ಘ ಬರುತ್ತದೆ. ಆದುದರಿಂದ ತೇನಾ ಎಂದು ಸಂಹಿತೆಯಲ್ಲಿ ಮಾತ್ರ ದೀರ್ಘ ಬರುತ್ತದೆ.

**ಸುಶ್ರವಸಮ್**—ಶ್ರವ ಇತಿ ಅನ್ನನಾಮ ಶ್ರೂಯತೆ ಇತಿ ಸತಃ (ನಿರುಕ್ತ ೧೦-೩) ಇತಿ ಯಾಸ್ಕಃ ಸಾಂಪ್ರದಾಯಿಕರು ಶ್ರವವೆಂಬುದನ್ನು ಅನ್ನಕ್ಕೆ ಹೆಸರೆಂದು ವ್ಯವಹರಿಸುತ್ತಾರೆ ಎಂದು ಯಾಸ್ಕರು ನಿರುಕ್ತದಲ್ಲಿ ಹೇಳಿರುತ್ತಾರೆ. ಶೋಭನಂ ಶ್ರವಃ ಯಸ್ಯ ಅಸೌ ಸುಶ್ರವಾಃ ಪ್ರಶಸ್ತವಾದ ಅನ್ನ (ಹವಿಸ್ಸು) ವುಳ್ಳವರು ಎಂದರ್ಥ. ಇಲ್ಲಿಯೂ ಹಿಂದಿನಂತೆ **ಆದ್ಯುದಾತ್ತಂ ದ್ವ್ಯಚ್ ಛಂದಸಿ** ಸೂತ್ರದಿಂದ ಉತ್ತರಪದ ಆದ್ಯುದಾತ್ತಸ್ವರವು ಬರುತ್ತದೆ.

**ಅವ**—ಅವ ರಕ್ಷಣಗತಿ ಕಾಂತಿ ಪ್ರೀತಿ ತೃಪ್ತಿ ಅವಗಮ ಪ್ರವೇಶ ಶ್ರವಣಸ್ವಾಮಿ ಅರ್ಥಯಾಚನ ಕ್ರಿಯೇಚ್ಛಾ ದೀಪ್ತಿ ಅವಾಪ್ತಿ ಆಲಿಂಗನ ಹಿಂಸಾ ಆದಾನಭಾಗವೃದ್ಧಿಷು. ಧಾತು. ಅನೇಕಾರ್ಥವಲ್ಲಿ ಪಠಿತವಾಗಿರುವ ಅವಧಾತುವು ಇಲ್ಲಿ ಗತ್ಯರ್ಥದಲ್ಲಿ ಪಠಿತವಾಗಿವೆ. ಲೋಟ್ ಮಧ್ಯಮಪುರುಷ ಏಕವಚನ ಪರದಲ್ಲಿರುವಾಗ ಶಪ್ ವಿಕರಣಬರುತ್ತದೆ. ಸಿಪ್ಪಿಗೆ ಹಿ ಆದೇಶಬಂದು ಅಕಾರದ ಪರದಲ್ಲಿರುವುದರಿಂದ ಲುಕ್ಕಾ ಗುತ್ತದೆ. ಅವ ಎಂದು ರೂಪವಾಗುತ್ತದೆ.





CC-0. Jangamwadi Math Collection. Digitized by eGangotri

ಮಹಿತರ್ದಿವಃ—ಸುಬಾಮಂತ್ರಿತೇ ಪರಾಂಗವತ್‌ಸ್ವರೆ (ಪಾ. ಸೂ. ೨-೧-೨) ಸೂತ್ರದಲ್ಲಿ ಆಮಂತ್ರಿತ ಸ್ವರವಿಧಾನದಲ್ಲಿ ಪೂರ್ವದಲ್ಲಿರುವ ಸುಬಂತವು ಪರಾಂಗವನ್ನು ಹೊಂದುತ್ತದೆ ಎಂದು ಹೇಳಿ ಪರಮಪಿ ಛಂದಸಿ ಎಂದು ಪರದಲ್ಲಿರುವ ಸುಬಂತವು ಪೂರ್ವದ ಆಮಂತ್ರಿತಕ್ಕೆ ಅವಯವಭಾವವನ್ನು ಹೊಂದುತ್ತದೆ ಎಂದು ಹೇಳಿರುತ್ತಾರೆ. ಆದುದರಿಂದ ಇಲ್ಲಿ ಮಹಿತಃ ಎಂಬ ಪೂರ್ವದ ಆಮಂತ್ರಿತಕ್ಕೆ ದಿವಃ ಎಂಬ ಪರಸುಬಂತವು ಅಂಗವಾಗುತ್ತದೆ. ಆದ್ದರಿಂದ ಆಮಂತ್ರಿತಸ್ಯ ಚ (ಪಾ. ಸೂ. ೮-೧-೧೯) ಸೂತ್ರದಿಂದ ಪದದ್ವಯಸಮುದಾಯಕ್ಕೂ ಸರ್ವಾನುದಾತ್ತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ವಯಶ್ಚಿತ್ತೇ ಪತತ್ರಿಣೋ ದ್ವಿಪಚ್ಚತುಷ್ಪದರ್ಜುನಿ ।
ಉಷಃ ಪ್ರಾರನ್ನೃತೂರನು ದಿವೋ ಅಂತೇಭ್ಯಸ್ಪರಿ ॥ ೩ ॥

॥ ಪದಪಾಠಃ ॥

ವಯಃ । ಚಿತ್ । ತೇ । ಪತತ್ರಿಣಃ । ದ್ವಿಽಪತ್ । ಚತುಃಽಪತ್ । ಅರ್ಜುನಿ ।
ಉಷಃ । ಪ್ರ । ಆರ್ರ । ಋತೂನ್ । ಅನು । ದಿವಃ । ಅಂತೇಭ್ಯಃ । ಪರಿ ॥ ೩ ॥

॥ ಸಾಯಣಭಾಷ್ಯಂ ॥

ಹೇ ಅರ್ಜುನಿ ಶುಭ್ರವರ್ಣ ಉಷ ಉಷೋದೇವತೇ ತೇ ತವ ಋತೂಽರನು ಗಮನಾನ್ಯನುಲಕ್ಷ್ಯ ದ್ವಿಪತ್ ದ್ವಿಪಾತ್ ಮನುಷ್ಯಾದಿಕಂ ಚತುಷ್ಪತ್ ಗವಾದಿಕಂ ತಥಾ ಪತತ್ರಿಣಃ ಪತತ್ರವಂತಃ ಪಕ್ಷೋಪೇತಾ ವಯಶ್ಚಿತ್ ಪಕ್ಷಿಣಶ್ಚ ದಿವೋಽಂತೇಭ್ಯ ಆಕಾಶಪ್ರಾಂತೇಭ್ಯಃ ಪರ್ಯುಪರಿ ಪ್ರಾರನ್ । ಪ್ರಕರ್ಷೇಣ ಗಚ್ಛಂತಿ । ರಾತ್ರಾವಂಧಕಾರೇಣಾಭಿಭೂತಾಃ ಸರ್ವೇ ಪ್ರಾಣಿನಸ್ತ್ವದಾಗಮಾನಂತರಂ ಚೇಷ್ಟಾವಂತೋ ಭವಂತೀತ್ಯರ್ಥಃ ॥ ಪತತ್ರಿಣಃ । ಪತ್ಲೃ ಗತೌ । ಪತತ್ಯನೇನೇತಿ ಪತತ್ರಂ । ಅಮಿನಕ್ಷೀತ್ಯಾದಿನಾ । ಉ. ೧-೧೦೫ । ಅತ್ರನ್ಪ್ರತ್ಯಯಃ । ತತೋ ಮತ್ವರ್ಥೀಯ ಇನಿಃ । ದ್ವಿಪತ್ । ದ್ವೌ ಪಾದಾವಸ್ಯೇತಿ ಸಂಖ್ಯಾಸುಪೂರ್ವಸ್ಯ । ಪಾ. ೫-೪-೧೪೦ । ಇತಿ ಪಾದಶಬ್ದಸ್ಯಾಂತ್ಯಲೋಪಃ ಸಮಾಸಾಂತಃ । ಅಯಸ್ಯಾದಿತ್ವೇನ ಭತ್ವಾತ್ ಪಾದಃ ಪತ್ । ಪಾ. ೬-೪-೧೩೦ । ಇತಿ ಪದ್‌ಭಾವಃ । ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು ಬಹುವ್ರೀಹೌ । ಪಾ ೬-೨-೧೯೭ । ಇತ್ಯುತ್ತರಪದಾಂತೋದಾತ್ತತ್ವಂ । ಚತುಷ್ಪತ್ । ಚತ್ವಾರಃ ಪಾದಾ ಅಸ್ಯ । ಸ್ವರವ್ಯತಿರಿಕ್ತಂ ಪೂರ್ವವತ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಇಣಃ ಷ ಇತ್ಯನುವೃತ್ತಾವಿದುದುಪಧಸ್ಯ ಚಾಪ್ರತ್ಯಯಸ್ಯ । ಪಾ. ೮-೩-೪೧ । ಇತಿ ವಿಸರ್ಜನೀಯಸ್ಯ ಷತ್ವಂ । ನ ಚ ಪರತ್ವೇನಾಸ್ಯ ವಿದ್ಧತ್ವಾತ್ ಕುಪ್ವೋಃ ೱಕ ೲಪೌ ಚ । ಪಾ. ೮-೩-೩೭ । ಇತ್ಯುಪಧ್ಮಾನೀಯಾದೇಶಃ ಶಂಕನೀಯಃ ।



CC-0. Jangamwadi Math Collection. Digitized by eGangotri

ಯೇನ ನಾಪ್ರಾಪ್ತಿನ್ಯಾಯೇನ ತಸ್ಯಾಪವಾದತ್ವಾತ್ । ಅಪವಾದಸ್ತು ಪರಮಪಿ ಪೂರ್ವಂ ಬಾಧತ ಏವೇತಿ ವೃತ್ತಾವುಕ್ತಂ । ಆರನ್ । ಋ ಗತೌ । ಛಂದಸಿ ಲುಜ್‌ಲಙ್‌ಲಿಟ ಇತಿ ವರ್ತಮಾನೇ ಲುಙ । ಸರ್ತಿಶಾಸ್ತ್ಯ-ರ್ತಿಭ್ಯಶ್ಚೇತಿ । ಚ್ಲೇರಙಾದೇಶಃ । ಋದೃಶೋಽಙಿ ಗುಣ ಇತಿ ಗುಣಃ । ಆಡಾಗಮಃ । ಋತೂನ್ । ಋ ಗತೌ । ಅಸ್ಮಾದೌಣಾದಿಕೋ ಭಾವೇ ಕುಪ್ರತ್ಯಯಃ । ಅನು । ಅನುರ್ಲಕ್ಷಣೇ । ಪಾ. ೧-೪-೮೪ । ಇತ್ಯನೋಃ ಕರ್ಮಪ್ರವಚನೀಯತ್ವಂ । ಕರ್ಮಪ್ರವಚನೀಯಯುಕ್ತೇ । ಪಾ. ೨-೩-೮ । ಇತಿ ದ್ವಿತೀಯಾ । ಸಂಹಿ-ತಾಯಾಂ ದೀರ್ಘಾದಟಿ ಸಮಾನಪಾದ ಇತಿ ನಕಾರಸ್ಯ ರುತ್ವಂ । ಅತ್ರಾನುನಾಸಿಕಃ ಪೂರ್ವಸ್ಯ ತು ವೇತಿ ರೋಃ ಪೂರ್ವಸ್ಯ ವರ್ಣಸ್ಯ ಸಾನುನಾಸಿಕತ್ವಂ । ದಿವಃ । ಊಡಿದಮಿತಿ ವಿಭಕ್ತಿರುದಾತ್ತಾ । ಅಂತೇಭ್ಯಃ । ಪಂಚಮ್ಯಾಃ ಪರಾವಧ್ಯರ್ಥ ಇತಿ ವಿಸರ್ಜನೀಯಸ್ಯ ಸತ್ವಂ ॥

॥ ಪ್ರತಿಪದಾರ್ಥ ॥

ಅರ್ಜುನಿ—ಶುಭ್ರವರ್ಣವುಳ್ಳ । ಉಷಃ—ಎಲೈ ಉಷೋದೇವಿಯೇ । ತೇ—ನಿನ್ನ । ಋತೂನ್ ಅನು—ಗಮನಗಳನ್ನನುಸರಿಸಿ (ನೀನು ಉದಯಿಸಿದ ಕೂಡಲೇ) । ದ್ವಿಪತ್—ಎರಡುಕಾಲುಗಳುಳ್ಳ ಮನುಷ್ಯಾದಿ ಪ್ರಾಣಿಗಳೂ । ಚತುಷ್ಪತ್—ನಾಲ್ಕು ಕಾಲುಗಳುಳ್ಳ ಗವಾದಿಗಳೂ । ಪತತ್ರಿಣಃ—ರೆಕ್ಕೆಗಳುಳ್ಳ । ವಯಶ್ಚಿತ್— ಪಕ್ಷಿಗಳೂ ಕೂಡ । ದಿವಃ—ಅಂತರಿಕ್ಷದ । ಅಂತೇಭ್ಯಃ—ಪ್ರಾಂತ ಭಾಗಗಳಿಂದ (ನಾನಾ ಮೂಲೆಗಳಿಂದಲೂ) । ಪರಿ—ಮೇಲುಭಾಗದಲ್ಲಿ । ಪ್ರಾರ್ರ—(ಗುಂಪುಕೂಡಿಕೊಂಡು) ಉತ್ಸಾಹದಿಂದ ಸಂಚರಿಸುತ್ತವೆ

॥ ಭಾವಾರ್ಥ ॥

ಶುಭ್ರವರ್ಣವುಳ್ಳ ಎಲೈ ಉಷೋದೇವಿಯೇ, ನಿನ್ನ ಉದಯವಾದೊಡನೆಯೇ ನಿನ್ನ ಗಮನಗಳನ್ನನುಸರಿಸಿ ಮನುಷ್ಯಾದಿದ್ವಿಪಾದಿಗಳೂ, ಗವಾದಿ ಚತುಷ್ಪಾದಿಗಳೂ, ಸಂಚರಿಸಲು ಪ್ರಾರಂಭಿಸುವವು. ಅಂತರಿಕ್ಷದ ನಾನಾ ಮೂಲೆಗಳಿಂದಲೂ ರೆಕ್ಕೆಗಳುಳ್ಳ ಪಕ್ಷಿಗಳೂ ಸಹ ಗುಂಪುಕಟ್ಟಿಕೊಂಡು ಉತ್ಸಾಹದಿಂದ ಸಂಚರಿಸುತ್ತವೆ.

## English Translation.

O bright Ushas, at your coming in the morning the bipeds (men) and quadrupeds (animals with four legs) begin to move and even the winged birds flock around from the boundaries of the sky.

॥ ವಿಶೇಷ ವಿಷಯಗಳು ॥

ಮುಖ್ಯಾಭಿಪ್ರಾಯವು—ಉಷಃಕಾಲದಲ್ಲಿ ಬೆಳಕಾದೊಡನೆಯೇ ಎರಡು ಕಾಲುಗಳುಳ್ಳ ಮನುಷ್ಯರು, ನಾಲ್ಕು ಕಾಲುಗಳುಳ್ಳ ಗೋವು ಮೊದಲಾದ ಪ್ರಾಣಿಗಳು ಸಂಚರಿಸತೊಡಗುವವು. ರೆಕ್ಕೆಗಳುಳ್ಳ ಪಕ್ಷಿಗಳು ಅಂತರಿಕ್ಷದಲ್ಲಿ ಗುಂಪುಗುಂಪಾಗಿ ಹಾರಾಡಲು ಪ್ರಾರಂಭಿಸುವವು. ರಾತ್ರಿಯಲ್ಲಿ ಕತ್ತಲೆಯಾಗಿರುವುದರಿಂದ ಪ್ರಾಣಿಗಳ ಸಂಚಾರಕ್ಕೆ ಅವಕಾಶವಿರುವುದಿಲ್ಲ. ಬೆಳಕಾದೊಡನೆಯೇ ಮನುಷ್ಯರು, ಪ್ರಾಣಿಗಳು ಪಕ್ಷಿಗಳು ಮೊದಲಾದ ಸಮಸ್ತಜೀವಜಂತುಗಳು ತಮ್ಮ ತಮ್ಮ ಸಂಚಾರಾದಿವ್ಯಾಪಾರಗಳಲ್ಲಿ ತೊಡಗುವವು. ಆದುದರಿಂದ ಸಮಸ್ತ ಪ್ರಾಣಿಗಳೂ ನಿನ್ನ (ಉಷಃಕಾಲದ) ಆಗಮನವನ್ನು ಸ್ವಾಗತಿಸುತ್ತವೆ ಎಂದಭಿಪ್ರಾಯವು.



CC-0. Jangamwadi Math Collection. Digitized by eGangotri

ಪತತ್ರಿಣಃ—ಪತ್ಲೃ ಗತೌ। ಪತತ್ಯನೇನೇತಿ ಪತತ್ರಂ—(ಆಕಾಶದಲ್ಲಿ) ಸಂಚಾರಮಾಡುವುದರಿಂದ ಅಥವಾ ರೆಕ್ಕೆಗಳುಳ್ಳದ್ದರಿಂದ ಪತತ್ರಿಣಃ ಎಂದರೆ ಪಕ್ಷಿಗಳು.

ದ್ವಿಪತ್—ದ್ವೌ ಪಾದಾವಸ್ಯೇತಿ—ಎರಡು ಕಾಲುಗಳುಳ್ಳ ಮನುಷ್ಯರು.

ಚತುಷ್ಪತ್—ಚತ್ವಾರಃ ಪಾದಾ ಅಸ್ಯ—ನಾಲ್ಕು ಕಾಲುಗಳುಳ್ಳ ಗೋವುಗಳು ಮೊದಲಾದ ಪ್ರಾಣಿಗಳು

ಅರ್ಜುನಿ—ವಿಭಾವರೀ ಸೂನರೀ ಮೊದಲಾದ ಹದಿನಾರು ಉಷೋನಾಮಗಳ ಮಧ್ಯದಲ್ಲಿ ಅರ್ಜುನಿ ಶಬ್ದವು ಪಠಿತವಾಗಿರುವುದರಿಂದ (ನಿ. ೨-೧೯) ಅರ್ಜುನೀ ಎಂದರೆ ಉಷೋದೇವತೆಯು. ಈ ಋಕ್ಕಿನಲ್ಲಿ ಉಷಃ ಎಂಬ ಶಬ್ದವೂ ಇರುವುದರಿಂದ ಅರ್ಜುನಿ ಎಂಬ ಶಬ್ದಕ್ಕೆ ಶುಭ್ರವರ್ಣವುಳ್ಳ ಎಂಬರ್ಥವನ್ನ ಭಾಷ್ಯಾಕಾರರು ಹೇಳಿರುವರು.

ಋತೂನ್—ಋತೇರರ್ತೇರ್ಗತಿಕರ್ಮಣಃ (ನಿ. ೨-೨-೨೫) ಎಂದು ನಿರುಕ್ತವಚನವಿರುವುದರಿಂದ ಋತೂನ್ ಎಂದರೆ ಗಮನಗಳನ್ನು; ಉಷೋದೇವತೆಯು ಪ್ರತಿದಿನದ ಉದಯಗಳನ್ನು ಎಂದರ್ಥವು. ಪ್ರತಿದಿನದ ಉಷಃಕಾಲಗಳಲ್ಲಿ ಎಂಬರ್ಥವನ್ನು ಸೂಚಿಸುವುದಕ್ಕಾಗಿ ಬಹುವಚನ ಪ್ರಯೋಗವಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಪತತ್ರಿಣಃ—ಪತ್ಲೃ ಗತೌ ಧಾತು. ಭ್ವಾದಿ. ಪತತಿ ಅನೇನ ಇತಿ ಪತತ್ರಂ. ಹೋಗುವುದಕ್ಕೆ (ಹಾರಲು) ಸಾಧನವಾದುದು ಎಂದರ್ಥ. ಅಮಿನಕ್ಷಿ—(ಉ. ಸೂ. ೩-೩೮೫) ಎಂಬುದರಿಂದ ಅತ್ರನ್ ಪ್ರತ್ಯಯ ಬರುತ್ತದೆ. ಪತತ್ರಂ ಎಂದು ರೂಪವಾಗುತ್ತದೆ. ಪತತ್ರಂ ಅಸ್ಯ ಅಸ್ತೀತಿ ಪತತ್ರೀ. ರೆಕ್ಕೆಗಳು ಉಳ್ಳದ್ದು ಎಂದರ್ಥ. ಅತ ಇನಿಠನೌ ಸೂತ್ರದಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ. ಆಗ ಯಸ್ಯೇತಿಚ ಸೂತ್ರದಿಂದ ಪತತ್ರ ಎಂಬಲ್ಲಿರುವ ಅಕಾರವು ಲೋಪವಾದರೆ ನಾಂತವಾದ ಪದವಾಗುತ್ತದೆ.

ದ್ವಿಪತ್—ದ್ವೌ ಪಾದೌ ಅಸ್ಯ ಇತಿ ದ್ವಿಪತ್. ಎರಡು ಕಾಲುಗಳು ಉಳ್ಳದ್ದು ಎಂದರ್ಥ. ಸಂಖ್ಯಾಸುಪೂರ್ವಸ್ಯ (ಪಾ. ಸೂ. ೫-೪-೧೪೦) ಸಂಖ್ಯಾಪೂರ್ವದಲ್ಲಿರುವ ಪಾದಶಬ್ದಕ್ಕೆ ಅಂತ್ಯ ಲೋಪ ಬರುತ್ತದೆ. ಸಮಾಸಾಂತಾಃ (ಪಾ. ಸೂ. ೫-೪-೬೮) ಎಂಬ ಅಧಿಕಾರದಲ್ಲಿ ಇದನ್ನು ಹೇಳಿರುವುದರಿಂದ ಲೋಪವೂ ಸಮಾಸಾಂತವಾಗುತ್ತದೆ. ಕೊನೆಯ ಅಕಾರಕ್ಕೆ ಲೋಪಬಂದರೆ ದ್ವಿಪಾದ್ ಎಂದು ರೂಪವಾಗುತ್ತದೆ. ಅಯಸ್ಮಯಾದೀನಿ ಛಂದಸಿ (ಪಾ. ಸೂ. ೧-೪-೨೦) ಈ ಗಣಪಠಿತವಾದವುಗಳಿಗೆ ನಿಮಿತ್ತವಿಲ್ಲದಿದ್ದರೂ ಭಸಂಜ್ಞೆ ಬರುತ್ತದೆ. ದ್ವಿಪಾದ್ ಎಂಬುದನ್ನು ಈ ಗಣದಲ್ಲಿ ಪಾಠಮಾಡಿರುವುದರಿಂದ ಭಸಂಜ್ಞಾ ಇದಕ್ಕೂ ಬರುತ್ತದೆ. ಆಗ ಪಾದಃ ಪತ್ (ಪಾ. ಸೂ. ೬-೪-೧೩೦) ಭಸಂಜ್ಞಾ ಇರುವಾಗ ಪಾದ್ ಶಬ್ದಕ್ಕೆ ಪತ್ ಎಂಬ ಆದೇಶ ಬರುತ್ತದೆ ಎಂಬುದರಿಂದ ಪತಾದೇಶ ಬರುತ್ತದೆ. ದ್ವಿಪತ್ ಎಂದು ರೂಪವಾಗುತ್ತದೆ. ದ್ವಿತ್ರಿಭ್ಯಾಂ ಪಾದ್ದನ್ಮೂರ್ಧಸು ಬಹುವ್ರೀಹೌ (ಪಾ. ಸೂ. ೬-೨-೧೯೭) ದ್ವಿ ತ್ರಿ ಶಬ್ದದ ಪರದಲ್ಲಿರುವ ಪಾದ್ ದತ್ ಮೂರ್ಧನ್ ಶಬ್ದಗಳಿಗೆ ಬಹುವ್ರೀಹಿಸಮಾಸದಲ್ಲಿ ಅಂತೋದಾತ್ತಸ್ವರವು ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ಉತ್ತರಪದ ಅಂತೋದಾತ್ತಸ್ವರವು ಬಂದಿದೆ.



CC-0. Jangamwadi Math Collection. Digitized by eGangotri

ಚತುಷ್ಪತ್ ಚತ್ವಾರಃ ಪಾದಾಃ ಅಸ್ಯ ಚತುಷ್ಪತ್. ನಾಲ್ಕು ಕಾಲುಗಳು ಉಳ್ಳದ್ದು ಎಂದರ್ಥ. ಸ್ವರವನ್ನು ಬಿಟ್ಟು ಉಳಿದ ಕಾರ್ಯಗಳೆಲ್ಲವೂ ದ್ವಿಪತ್ ಶಬ್ದದಂತೆಯೇ ತಿಳಿಯಬೇಕು. ಅಂದರೆ ಸಂಖ್ಯಾಸು-ಪೂರ್ವಸ್ಯ ಸೂತ್ರದಿಂದ ಸಮಾಸಾಂತವನ್ನೂ ಆಯಸ್ಮ್ರಯಾದಿಯಲ್ಲಿ ಪಾಠಮಾಡಿ ಪತ್ ಆದೇಶವನ್ನು ಹೇಳಬೇಕು. ಸಮಾಸಸ್ವರವು ಪ್ರಾಪ್ತವಾದರೆ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ (ಪಾ. ಸೂ. ೬-೨-೧) ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಚುತುಷ್ಪದ್ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ಚತುಃ ಪದ್ ಎಂದಿರುವಾಗ, ಇದುದುಪಧಸ್ಯ ಚಾಪ್ರತ್ಯಯಸ್ಯ (ಪಾ. ಸೂ. ೮-೩-೪೧) ಸೂತ್ರದಿಂದ ಷತ್ವ ಬರುತ್ತದೆ. ಆ ಸೂತ್ರದಲ್ಲಿ ಇಣಃ ಷಃ ಎಂದು ಪೂರ್ವಸೂತ್ರವು ಅನುವೃತ್ತವಾಗುತ್ತದೆ. ಇಕಾರ ಉಕಾರ ಉಪಧೆಯಾಗಿ ಉಳ್ಳ ಪ್ರತ್ಯಯಭಿನ್ನವಾದ ವಿಸರ್ಗಕ್ಕೆ ಕವರ್ಗ ಪವರ್ಗಗಳು ಪರದಲ್ಲಿರುವಾಗ ಷತ್ವ ಬರುತ್ತದೆ ಎಂದು ಆ ಸೂತ್ರದಲ್ಲಿ ಹೇಳಿರುವುದರಿಂದ ಇಲ್ಲಿ ವಿಸರ್ಗಕ್ಕೆ ಪಕಾರ ಪರದಲ್ಲಿರುವುದರಿಂದ ಷತ್ವಬಂದರೆ ಚತುಷ್ಪತ್ ಎಂದು ರೂಪವಾಗುತ್ತದೆ. ಪೂರ್ವತ್ರಾಸಿದ್ಧಮ್ (ಪಾ. ಸೂ. ೮-೨-೧) ಸಪಾದ ಸಪ್ತಾಧ್ಯಾಯಿಯನ್ನು ಕುರಿತು ಮುಂದಿನ ತ್ರಿಪಾದಿಯು ಅಸಿದ್ಧವಾಗುತ್ತದೆ. ತ್ರಿಪಾದಿಯಲ್ಲಿ ಪೂರ್ವಸೂತ್ರವನ್ನು ಕುರಿತು ಪರಸೂತ್ರವು ಅಸಿದ್ಧ ವಾಗುತ್ತದೆ. ಇದನ್ನು ಆಶ್ರಯಿಸಿ ಇಲ್ಲಿ ಒಂದು ಪೂರ್ವಪಕ್ಷವು ಉದ್ಭವವಾಗುತ್ತದೆ ಇದಕ್ಕಿಂತ ಹಿಂದೆ, ಕುಪ್ವೋಃ ≍ಕಃ ≍ಪೌಚ (ಪಾ. ಸೂ. ೮-೩-೩೭) ಕವರ್ಗ ಪವರ್ಗ ಪರದಲ್ಲಿರುವಾಗ ವಿಸರ್ಗಕ್ಕೆ ವಿಸರ್ಗವೂ ≍ಕಃ ≍ಪ ಆದೇಶಗಳೂ ಬರುತ್ತವೆ ಎಂಬುದಾಗಿ ಒಂದು ಸೂತ್ರದಿಂದ ವಿಧಿಸಿರುತ್ತಾರೆ. ಅದು ಪೂರ್ವಸೂತ್ರವಾಗಿರುವುದ ರಿಂದ, ಇದುದುಪಧಸ್ಯ—ಸೂತ್ರವು ಪರವಾದುದರಿಂದ, ಇದುದುಪಧಸ್ಯ—ಸೂತ್ರವು ಅಸಿದ್ಧವಾಗುತ್ತದೆ. ಆದುದ ರಿಂದ ಷತ್ವಮಾಡಿದರೂ ಅದು ಇಲ್ಲದ ದೃಷ್ಟಿಯಿಂದ ಹಿಂದಿನ ಕುಪ್ವೋಃ—ಸೂತ್ರದಿಂದ ಉಪಧ್ಮಾನೀಯ ಆದೇಶವು ಪ್ರಾಪ್ತವಾಗುತ್ತದೆ. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಅದನ್ನು ಅಪವಾದದಿಂದ ಪರಿಹರಿಸಬೇಕು. ಪರ-ನಿತ್ಯಾಂತರಂಗ ಅಪವಾದಾನಾಂ ಉತ್ತರೋತ್ತರಂ ಬಲೀಯಃ ಎಂದು ಹೇಳಿರುವುದರಿಂದ ಕುಪ್ವೋಃ ಸೂತ್ರಕ್ಕೆ ಇದುದುಪಧಸ್ಯ—ಸೂತ್ರವು ಅಪವಾದ. ಯೇನ ನಾಪ್ರಾಪ್ತೇಯೋ ವಿಧಿರಾರಭ್ಯತೇ ಸ ತಸ್ಯ ಅಪವಾದಃ ಎಂದು ಅಪವಾದಲಕ್ಷಣವನ್ನು ಹೇಳಿರುತ್ತಾರೆ. ಯಾವುದು ಅವಶ್ಯವಾಗಿ ಬರುತ್ತಿರುವಾಗ ಯಾವ ವಿಶೇಷವಿಧಿಯೊಂದು ಪ್ರಾಪ್ತವಾಗುವುದೋ ಅದು ಅಪವಾದವಾಗುವುದೆಂದು ತಾತ್ಪರ್ಯ. ಕುಪ್ವೋಃ ಸೂತ್ರವು ಸಾಮಾನ್ಯವಾದುದರಿಂದ ಅವಶ್ಯವಾಗಿ ಈ ಲಕ್ಷದಲ್ಲಿ ಪ್ರಾಪ್ತವಾಗುತ್ತಿರುವಾಗ ವಿಶೇಷವಾಗಿ ಇದುದುಪಧಸ್ಯ ಚ—ಸೂತ್ರವು ಆರಬ್ಧವಾದುದ ರಿಂದ ಅಪವಾದವಾಗುತ್ತದೆ. ಅಪವಾದಸ್ತು ಪರಮಪಿ ಪೂರ್ವಂ ಬಾಧತ ಏವ ಎಂದು ವೃತ್ತಿಯಲ್ಲಿ ಹೇಳಿರು ತ್ತಾರೆ. ಯದ್ಯಪಿ ಇದು ಪರದಲ್ಲಿರುವುದರಿಂದ ಹಿಂದೆ ಹೇಳಿದಂತೆ ಅಸಿದ್ಧವಾಗುತ್ತದೆ. ಆದರೂ ಪೂರ್ವವನ್ನು ಬಾಧಿಸಿಯೇ ಬಾಧಿಸುತ್ತದೆ ಎಂದು ವೃತ್ತಿಕಾರರ ಅಭಿಪ್ರಾಯ. ಆದುದರಿಂದ ಉಪಧ್ಮಾನೀಯವನ್ನು ಬಾಧಿಸಿ ಷತ್ವವೇ ಬರುತ್ತದೆ.

ಆರನ್—ಋ ಗತೌ ಧಾತು. ಛಂದಸಿ ಲುಙ್ಲಙ್ಲಿಟಃ (ಪಾ. ಸೂ. ೩-೪-೬) ಸೂತ್ರದಿಂದ ಛಂದಸ್ಸಿನಲ್ಲಿ ವರ್ತಮಾನಾರ್ಥದಲ್ಲಿ ಲುಙ್ ಬರುತ್ತದೆ. ಪ್ರಥಮಪುರುಷ ಬಹುವಚನ ಪ್ರತ್ಯಯ ಪರದಲ್ಲಿರುವಾಗ ಋ+ಝಿ ಎಂದಿರುತ್ತದೆ. ಝೋಽಂತಃ ಸೂತ್ರದಿಂದ ಝಿಗೆ ಅಂತಾದೇಶ ಬರುತ್ತದೆ. ಇತಶ್ಚ ಸೂತ್ರದಿಂದ ಅಂತ್ಯದ ಇಕಾರಕ್ಕೆ ಲೋಪಬಂದರೆ ಸಂಯೋಗಾಂತಲೋಪದಿಂದ ತಕಾರ ಲೋಪವಾಗುತ್ತದೆ. ಅನ್ ಎಂದು ಉಳಿಯುತ್ತದೆ. ಲುಙಿನಲ್ಲಿ ಪ್ರಾಪ್ತವಾಗುವ ಚ್ಲಿಗೆ ಸರ್ತಿಶಾಸ್ತ್ಯರ್ತಿಭ್ಯಶ್ಚ (ಪಾ. ಸೂ. ೩-೧-೫೬) ಸೂತ್ರದಿಂದ ಅಙಾದೇಶ ಬರುತ್ತದೆ. ಋ+ಅ+ಅನ್ ಎಂದಿರುವಾಗ ಋದೃಶೋಽಙಿ ಗುಣಃ (ಪಾ. ಸೂ. ೭-೪-೧೬) ಸೂತ್ರದಿಂದ


CC-0. Jangamwadi Math Collection. Digitized by eGangotri

ಧಾತುವಿಗೆ ಗುಣ ಬರುತ್ತದೆ. ಅಜಾದಿ ಧಾತುವಾದುದರಿಂದ ಆಡಾಗಮ ಬರುತ್ತದೆ. ಆಜಿನ ಅಕಾರಕ್ಕೂ ಪ್ರತ್ಯಯದ ಅಕಾರಕ್ಕೂ ಪರರೂಪವು ಏಕಾದೇಶವಾಗಿ ಬರುತ್ತದೆ. ಗುಣವು ರ ಪರವಾಗಿ ಬಂದುದರಿಂದ ಆರನ್ ಎಂದು ರೂಪವಾಗುತ್ತದೆ.

ಋತೂನ್—ಋ ಗತೌ ಧಾತು. ಇದಕ್ಕೆ ಭಾವಾರ್ಥದಲ್ಲಿ (ಗಮನ) ಉಣಾದಿಸಿದ್ಧವಾದ ಕು ಪ್ರತ್ಯಯ ಬರುತ್ತದೆ. ಕಿತ್ತಾದುದರಿಂದ ಗುಣಾದಿಗಳು ಬರುವುದಿಲ್ಲ. ದ್ವಿತೀಯಾ ಬಹುವಚನದಲ್ಲಿ ಋತೂನ್ ಎಂದು ರೂಪವಾಗುತ್ತದೆ.

**ಅನು**—**ಅನುರ್ಲಕ್ಷಣೇ** (ಪಾ. ಸೂ. ೧-೪-೮೪) ಜ್ಞಾಪ್ಯಜ್ಞಾಪಕಭಾವಾದಿಗಳು ತೋರುವಾಗ ಅನು ಎಂಬುದಕ್ಕೆ ಕರ್ಮಪ್ರವಚನೀಯ ಸಂಜ್ಞೆಯು ಬರುತ್ತದೆ. ಇಲ್ಲಿ ಉಷೆಯ ಗಮನವನ್ನು ಜ್ಞಾಪಿಸಿಕೊಂಡು ಪಕ್ಷಿ ಮುಂತಾದುವುಗಳು ಹಾರುತ್ತವೆ ಎಂದು ಇರುವುದರಿಂದ ಜ್ಞಾಪ್ಯಜ್ಞಾಪಕಭಾವ ತೋರುತ್ತದೆ. ಆಗ **ಕರ್ಮಪ್ರವಚನೀಯಯುಕ್ತೇ ದ್ವಿತೀಯಾ** (ಪಾ. ಸೂ. ೨-೩-೮) ಕರ್ಮಪ್ರವಚನೀಯದ ಸಂಬಂಧವಿರುವಾಗ ಜ್ಞಾಪಕ ವಾಚಕದ ಮೇಲೆ ದ್ವಿತೀಯಾ ವಿಭಕ್ತಿ ಬರುತ್ತದೆ ಎಂಬುದರಿಂದ ಅನುಸಂಬಂಧವಿರುವ ಜ್ಞಾಪಕವಾಚಕವಾದ ಋತು (ಗಮನ) ಶಬ್ದದ ಮೇಲೆ ದ್ವಿತೀಯಾ ವಿಭಕ್ತಿ ಬರುತ್ತದೆ. ಋತೂನ್ ಎಂಬಲ್ಲಿ ಮಂತ್ರಪಾಠದಲ್ಲಿ **ದೀರ್ಘಾದಟಿ ಸಮಾನಪಾದೇ** (ಪಾ. ಸೂ ೮-೩-೯) ಸೂತ್ರದಿಂದ ನಕಾರಕ್ಕೆ ರುತ್ವ ಬರುತ್ತದೆ. **ಅತ್ರಾನುನಾಸಿಕಃ ಪೂರ್ವಸ್ಯ ತು ವಾ** (ಪಾ. ಸೂ. ೮-೩-೨) ರುತ್ವದ ಹಿಂದೆ ವಿಕಲ್ಪವಾಗಿ ಅನುನಾಸಿಕವು ಬರುತ್ತದೆ ಎಂಬುದರಿಂದ ಪೂರ್ವವರ್ಣಕ್ಕೆ ಅನುನಾಸಿಕತ್ವವು ಬರುತ್ತದೆ. ನಿಮಿತ್ತವಿಲ್ಲದಿರುವುದರಿಂದ ರುತ್ವದ ರೇಫಕ್ಕೆ ಬೇರೆ ಆದೇಶಗಳು ಬರುವುದಿಲ್ಲ.

**ದಿವಃ**—ದಿವ್ ಶಬ್ದದ ಷಷ್ಠೀ ಏಕವಚನದಲ್ಲಿ ದಿವಃ ಎಂದು ರೂಪವಾಗುತ್ತದೆ. ಇಲ್ಲಿ ವಿಭಕ್ತಿಗೆ ಅನುದಾತ್ತಸ್ವರವು ಪ್ರಾಪ್ತವಾದರೆ **ಊಡಿದಂ**—(ಪಾ. ಸೂ. ೬-೧-೧೭೧) ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರವು ಬರುತ್ತದೆ. ದಿವಃ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

**ಅಂತೇಭ್ಯಃ**—ಅಂತೇಭ್ಯಃ ಪರಿ ಎಂದು ಮಂತ್ರಪಾಠದಲ್ಲಿ **ಪಂಚಮ್ಯಾಃ ಪರಾವಧ್ಯರ್ಥೇ** (ಪಾ. ಸೂ. ೮-೩-೫೧) ಪಂಚಮೀವಿಭಕ್ತಿಯ ವಿಸರ್ಗಕ್ಕೆ ಮೇಲೆ (ಉಪರಿ) ಎಂಬ ಅರ್ಥಕೊಡುವ ಪರಿ ಶಬ್ದವು ಪರದಲ್ಲಿರುವಾಗ ಸತ್ವವು ಬರುತ್ತದೆ ಎಂಬುದರಿಂದ ವಿಸರ್ಗಕ್ಕೆ ಸಕಾರ ಬರುತ್ತದೆ. ಅಂತೇಭ್ಯಸ್ಪರಿ ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ವ್ಯು॒ಚ್ಛಂತೀ॒ ಹಿ ರ॒ಶ್ಮಿಭಿ॒ರ್ವಿಶ್ವ॑ಮಾ॒ಭಾಸಿ॑ ರೋಚ॒ನಂ।

ತಾಂ ತ್ವಾಮು॑ಷರ್ವಸೂ॒ಯವೋ॑ ಗೀ॒ರ್ಭಿಃ ಕಣ್ವಾ॑ ಅಹೂಷತ ॥ ೪ ॥



CC-0. Jangamwadi Math Collection. Digitized by eGangotri

ಪದಪಾಠಃ

ವಿಽಉಚ್ಛಂತೀ । ಹಿ । ರಶ್ಮಿಽಭಿಃ । ವಿಶ್ವಂ । ಆಽಭಾಸಿ । ರೋಚನಂ ।

ತಾಂ । ತ್ವಾಂ । ಉಷಃ । ವಸುಽಯವಃ । ಗೀಃಽಭಿಃ । ಕಣ್ವಾಃ । ಅಹೂಷತ ॥ ೪ ॥

ಸಾಯಣಭಾಷ್ಯಂ

ಹೇ ಉಷೋ ವ್ಯುಚ್ಛಂತೀ ತಮೋ ವರ್ಜಯಂತೀ ತ್ವಂ ರಶ್ಮಿಭಿಃ ಸ್ವಕೀಯೈಸ್ತೇಜೋಭಿರ್ವಿಶ್ವಂ ಸರ್ವಂ ಭೂತಜಾತಂ ರೋಚನಂ ರೋಚಮಾನಂ ಪ್ರಕಾಶಯುಕ್ತಂ ಯಥಾ ಭವತಿ ತಥಾಭಾಸಿ । ಆ ಸಮಂತಾತ್ ಪ್ರಕಾಶಸೇ । ಹಿ ಯಸ್ಮಾದೇವಂ ತಸ್ಮಾತ್ತಾಂ ತಾದೃಶೀಂ ತ್ವಾಂ ವಸೂಯವೋ ವಸುಕಾಮಾಃ ಕಣ್ವಾ ಮೇಧಾವಿನ ಋುತ್ವಿಜಃ ಕಣ್ವಗೋತ್ರೋತ್ಪನ್ನಾ ವಾ ಮಹರ್ಷಯೋ ಗೀರ್ಭಿಃ ಸ್ತುತಿಲಕ್ಷಣೈರ್ವಚೋಭಿರಹೂಷತ । ಸ್ತುತವಂತ ಇತ್ಯರ್ಥಃ । ಕಣ್ವ ಇತಿ ಮೇಧಾವಿನಾಮ । ಕಣ್ವ ಋಭುರಿತಿ ತನ್ನಾಮಸು ಪಾಠಾತ್ ॥ ಆಭಾಸಿ । ಭಾ ದೀಪ್ತೌ । ಅದಾದಿತ್ವಾಚ್ಛಪೋ ಲುಕ್ । ಸಿಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಹಿ ಚೇತಿ ನಿಘಾತಪ್ರತಿಷೇಧಃ ।ತಿಙಿ ಚೋದಾತ್ತವತೀತಿ ಗತೇರನುದಾತ್ತತ್ವಂ । ರೋಚನಂ । ರುಚ ದೀಪ್ತೌ । ಅನುದಾತ್ತೇತಶ್ಚ ಹಲಾದೇರಿತಿ ಯುಚ್ । ಚಿತ ಇತ್ಯಂತೋದಾತ್ತತ್ವಂ । ವಸೂಯವಃ । ವಸು ಧನಮಾತ್ಮನ ಇಚ್ಛಂತಃ । ಸುಪ ಆತ್ಮನಃ ಕ್ಯಚ್ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಗೀರ್ಭಿಃ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಕಣ್ವಾಃ । ಕಣ ಶಬ್ದಾರ್ಥಃ । ಅಶಿಪ್ರುಷಿಲಟಿಕಣೀತ್ಯಾದಿನಾ ಕ್ವನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಅಹೂಷತ । ಹ್ವೇಞೋ ಲುಙಿ ಹ್ವಃ ಸಂಪ್ರಸಾರಣಮಿತ್ಯನುವೃತ್ತೌ ಬಹುಲಂ ಛಂದಸೀತಿ ಸಂಪ್ರಸಾರಣಂ । ಪರಪೂರ್ವತ್ವೇ ಹಲ ಇತಿ ದೀರ್ಘತ್ವಂ । ಚ್ಲೇಃ ಸಿಚ್ । ಏಕಾಚ ಇತೀಟ್‌ಪ್ರತಿಷೇಧಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ಗುಣಾಭಾವಃ ॥ ೬ ॥

॥ ಪ್ರತಿಪದಾರ್ಥ ॥

ಉಷಃ—ಎಲೈ ಉಷೋದೇವಿಯೇ, (ನೀನು) । ವ್ಯುಚ್ಛಂತೀ—(ಕತ್ತಲನ್ನು) ಚದುರಿಸುತ್ತ ರಶ್ಮಿಭಿಃ—(ನಿನ್ನ) ತೇಜಸ್ಸುಗಳಿಂದ । ವಿಶ್ವಂ—ಸಮಸ್ತ ಲೋಕವನ್ನೂ । ರೋಚನಂ—ಪ್ರಕಾಶಿಸುವಂತೆ । ಆ ಭಾಸಿ—ಸುತ್ತಲೂ ಬೆಳಗುತ್ತೀಯೆ । ಹಿ—ಆದ್ದರಿಂದಲೇ । ತಾಂ ತ್ವಾಂ—ಅಂತಹತೇಜೋಯುಕ್ತಳಾದ ನಿನ್ನನ್ನು । ವಸೂಯವಃ—ಧನಾಪೇಕ್ಷಿಗಳಾದ । ಕಣ್ವಾಃ—ಮೇಧಾವಿಗಳಾದ ಋತ್ವಿಕ್ಕುಗಳು ಅಥವಾ ಕಣ್ವಗೋತ್ರೋತ್ಪನ್ನರಾದ ಋಷಿಗಳು । ಗೀರ್ಭಿಃ—(ಸ್ತುತಿರೂಪಗಳಾದ) ವಾಕ್ಕುಗಳಿಂದ । ಅಹೂಷತ—ಸ್ತೋತ್ರ ಮಾಡಿ ಕರೆದಿದ್ದಾರೆ.

॥ ಭಾವಾರ್ಥ ॥

ಎಲೈ ಉಷೋದೇವಿಯೇ, ನೀನು ಕತ್ತಲನ್ನು ಚದುರಿಸುತ್ತ ನಿನ್ನ ತೇಜಸ್ಸುಗಳಿಂದ ನೀನೂ ಬೆಳಗಿ ಸಮಸ್ತ ಲೋಕವನ್ನೂ ಬೆಳಗಿಸುತ್ತೀಯೆ. ಅಂತಹ ತೇಜೋಯುಕ್ತಳಾದ ನಿನ್ನನ್ನು ಧನಾಪೇಕ್ಷೆಯುಳ್ಳ



CC-0. Jangamwadi Math Collection. Digitized by eGangotri

ಮೇಧಾವಿಗಳಾದ ಋತ್ವಿಕ್ಕುಗಳು ಅಥವಾ ಕಣ್ವವಂಶದಲ್ಲಿ ಹುಟ್ಟಿದ ಋಷಿಗಳು ಸ್ತುತಿರೂಪವಾದ ವಾಕ್ಕುಗಳಿಂದ ಸ್ತೋತ್ರಮಾಡಿ ಕರೆದಿದ್ದಾರೆ.

## English Translation.

O Ushas, dispersing the darkness you illumine the whole universe with your bright rays; therefore, O Ushas, the sons of Kanwas, desirous of wealth, praise you with their hymns.

॥ ವಿಶೇಷ ವಿಷಯಗಳು ॥

ವ್ಯುಚ್ಛಂತೀ—ತಮೋ ವರ್ಜಯಂತೀ । ಕತ್ತಲೆಯನ್ನು ಹೋಗಲಾಡಿಸುವವಳು.

ವಸೂಯವಃ— ವಸುಕಾಮಾಃ ಧನಕಾಮಾಃ । ಧನವನ್ನು ಅಪೇಕ್ಷಿಸುವ.

ಗೀರ್ಭಿಃ—ಸ್ತುತಿಲಕ್ಷಣೈರ್ವಚೋಭಿಃ । ಸ್ತುತಿರೂಪವಾದ ವಾಕ್ಯಗಳಿಂದ ।

ಕಣ್ವಾಃ—ಕಣ್ವಋಷಿಯ ಪುತ್ರರು ಅಥವಾ ಕಣ್ವಋಷಿಯ ವಂಶಸ್ಥರು.

॥ ವ್ಯಾಕರಣಪ್ರಕ್ರಿಯಾ ॥

ಆಭಾಸಿ—ಆಙ್ ಉಪಸರ್ಗ. ಭಾ ದೀಪ್ತೌ ಧಾತು. ಅದಾದಿ. ಲಟ್ ಮಧ್ಯಮಪುರುಷ ಏಕವಚನ ಸಿಪ್ ಪ್ರತ್ಯಯ ಪರದಲ್ಲಿರುವಾಗ ವಿಕರಣಕ್ಕೆ ಅದಿಪ್ರಭೃತಿಭ್ಯಃ ಶಪಃ ಸೂತ್ರದಿಂದ ಲುಕ್ ಬರುತ್ತದೆ. ಸಿಪ್ ಪಿತ್ತಾದುದರಿಂದ ಅನುದಾತ್ತಸ್ವರ ಬರುತ್ತದೆ. ಆಗ ಧಾತೋಃ ಎಂಬುದರಿಂದ ಧಾತುಸ್ವರವೇ (ಅಂತೋದಾತ್ತ) ಉಳಿಯುತ್ತದೆ. ಆಭಾಸಿ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ. ಹಿಚ (ಪಾ. ಸೂ. ೮-೧-೩೪) ಸೂತ್ರದಿಂದ ನಿಘಾತಪ್ರತಿಷೇಧ ಬರುತ್ತದೆ. ತಿಙಿ ಚೋದಾತ್ತವತಿ (ಪಾ. ಸೂ. ೮-೧-೭೧) ಉದಾತ್ತವಿಶಿಷ್ಟತಿ ಙಂತವು ಪರದಲ್ಲಿರುವಾಗ ಗತಿಯು ಅನುದಾತ್ತವಾಗುತ್ತದೆ ಎಂಬುದರಿಂದ ಗತಿ ಸಂಜ್ಞೆಯುಳ್ಳ ಆ ಎಂಬುದು ಅನುದಾತ್ತವಾಗುತ್ತದೆ.

ರೋಚನಮ್—ರುಚ ದೀಪ್ತೌ ಧಾತು. ಭ್ವಾದಿ. ಅನಾದಾತ್ತೇತ್. ಅನುದಾತ್ತೇತಶ್ಚ ಹಲಾದೇಃ (ಪಾ. ಸೂ. ೩-೨-೧೪೯) ಹಲಾದಿಯಾದ ಅನುದಾತ್ತೇತ್ತಾದ ಧಾತುವಿಗೆ ಯುಚ್ ಪ್ರತ್ಯಯ ಬರುತ್ತದೆ. ಇದರಿಂದ ಇಲ್ಲಿ ರುಚಧಾತುವಿಗೆ ಯುಚ್ ಪ್ರತ್ಯಯ ಬರುತ್ತದೆ. ಯುವೋರನಾಕೌ ಸೂತ್ರದಿಂದ ಯು ಎಂಬುದಕ್ಕೆ ಅನಾದೇಶ ಬರುತ್ತದೆ. ಧಾತುವಿಗೆ ಲಘೂಪಧಗುಣ ಬರುತ್ತದೆ. ರೋಚನಂ ಎಂದು ರೂಪವಾಗುತ್ತದೆ. ಯುಚ್ ಪ್ರತ್ಯಯವು ಚಿತ್ತಾದುದರಿಂದ ಚಿತಃ ಸೂತ್ರದಿಂದ ಅಂತೋದಾತ್ತವಾಗುತ್ತದೆ. ರೋಚನಂ ಎಂಬುದು ಅಂತೋದಾತ್ತವಾದ ಪದ.

ವಸೂಯವಃ—ವಸು ಧನಂ ಆತ್ಮನಃ ಇಚ್ಛಂತಃ ವಸೂಯವಃ ಹಣವನ್ನು ತಮಗೆ ಬಯಸುವವರು ಎಂದರ್ಥ. ಸುಪ ಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಸೂತ್ರದಿಂದ ವಸು ಎಂಬ ಸುಬಂತದ ಮೇಲೆ ಕ್ಯಚ್ ಪ್ರತ್ಯಯ ಬರುತ್ತದೆ. ಕ್ಯಚ್ ಸನಾದಿಯಲ್ಲಿ ಸೇರಿರುವುದರಿಂದ ಕ್ಯಜಂತಕ್ಕೆ ಧಾತುಸಂಜ್ಞೆ ಬರುತ್ತದೆ. ವಸುಯ



CC-0. Jangamwadi Math Collection. Digitized by eGangotri

ಎಂದಿರುವಾಗ ಅಶೃತ್ಸಾರ್ವಧಾತುಕಯೋರ್ದೀರ್ಘಃ (ಪಾ. ಸೂ. ೭-೪-೨೫) ಕೃತ್ಸಾರ್ವಧಾತುಕಭಿನ್ನವಾದ ಯಕಾರಾದಿ ಪ್ರತ್ಯಯು ಪರದಲ್ಲಿರುವಾಗ ಅಜಂತಾಂಗಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಉಕಾರಕ್ಕೆ ದೀರ್ಘ ಬರುತ್ತದೆ. ವಸೂಯತಿ ಎಂದು ಕ್ರಿಯಾಪದವಾಗುತ್ತದೆ. ವಸೂಯ ಎಂಬ ಧಾತುವಿನ ಮೇಲೆ ಕ್ಯಾಚ್ಛಂದಸಿ (ಪಾ. ಸೂ. ೩-೨-೧೭೦) ಸೂತ್ರದಿಂದ ಛಂದಸ್ಸಿನಲ್ಲಿ ಉ ಪ್ರತ್ಯಯ ಬರುತ್ತದೆ. ವಸೂಯ+ಉ ಎಂದಿರುವಾಗ ಅತೋಲೋಪಃ ಸೂತ್ರದಿಂದ ಕ್ಯಚಿನ ಅಕಾರಕ್ಕೆ ಲೋಪಬಂದರೆ ವಸೂಯು ಎಂದು ಉಕಾರಾಂತ ಶಬ್ದವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಜಸಿಚ ಸೂತ್ರದಿಂದ ಗುಣ ಅವಾದೇಶಗಳು ಬಂದರೆ ವಸೂಯವಃ ಎಂದು ರೂಪವಾಗುತ್ತದೆ.

ಗೀರ್ಭಿಃ— ಗಿರ್ ಶಬ್ದದ ಪರದಲ್ಲಿ ತೃತೀಯಾ ಬಹುವಚನವಿರುವಾಗ ರ್ವೋರುಪಧಾಯಾಃ ಸೂತ್ರದಿಂದ ದೀರ್ಘ ಬಂದು ಗೀರ್ಭಿಃ ಎಂದು ರೂಪವಾಗುತ್ತದೆ. ಸಾವೇಕಾಚಸ್ತೃತೀಯಾದಿರ್ವಿಭಕ್ತಿಃ (ಪಾ. ಸೂ. ೬-೧-೧೬೮) ಸಪ್ತಮೀ ಏಕವಚನ ಪರದಲ್ಲಿರುವಾಗ ಏಕಾಚ್ ಉಳ್ಳ ಶಬ್ದದ ಪರದಲ್ಲಿರುವ ತೃತೀಯಾದಿ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಗೀರ್ಭಿಃ ಎಂಬುದು ಅಂತೋದಾತ್ತವಾಗುತ್ತದೆ.

ಕಣ್ವಾಃ— ಕಣ ಶಬ್ದಾರ್ಥಃ (ಅನೇಕ ಧಾತುಗಳೊಡನೆ ಶಬ್ದಾರ್ಥದಲ್ಲಿ ಇದನ್ನು ಪಠಿಸಿರುತ್ತಾರೆ.) ಇದಕ್ಕೆ ಅಶಿಪ್ರುಷಿಲಟಿಕಣಿ (ಉ. ಸೂ. ೧-೧೪೯) ಸೂತ್ರದಿಂದ ಕ್ವನ್ ಪ್ರತ್ಯಯ ಬರುತ್ತದೆ. ಕ್ವನ್ನಿನಲ್ಲಿ ವ ಎಂಬುದು ಉಳಿಯುತ್ತದೆ. ಕಣ್ವ ಎಂದು ರೂಪವಾಗುತ್ತದೆ. ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ಬಹುವಚನದಲ್ಲಿ ಆದ್ಯುದಾತ್ತವಾಗಿ ಕಣ್ವಾಃ ಎಂದು ರೂಪವಾಗುತ್ತದೆ.

ಅಹೂಷತ— ಹ್ವೇಞ್ ಸ್ಪರ್ಧಾಯಾಂ ಧಾತು. ಭ್ವಾದಿ. ಲುಙ್ ಪ್ರಥಮಪುರುಷ ಬಹುವಚನ ಪರದಲ್ಲಿರುವಾಗ ಹ್ವೆ+ಅತ ಎಂದಿರುತ್ತದೆ. ಬಹುಲಂ ಛಂದಸಿ (ಪಾ. ಸೂ. ೬-೧-೩೪) ಛಂದಸ್ಸಿನಲ್ಲಿ ಹ್ವೇಞ್ ಧಾತುವಿಗೆ ಸಂಪ್ರಸಾರಣ ಬರುತ್ತದೆ ಎಂಬುದರಿಂದ ಸಂಪ್ರಸಾರಣ ಬರುತ್ತದೆ. ವಕಾರಕ್ಕೆ ಉಕಾರರೂಪ ಸಂಪ್ರಸಾರಣ ಬಂದರೆ ಹು+ಏ+ಅತ ಎಂದಾಗುತ್ತದೆ. ಸಂಪ್ರಸಾರಣಾಚ್ಚ ಸೂತ್ರದಿಂದ ಪೂರ್ವರೂಪ ಬಂದರೆ ಹು+ಅತ ಎಂದು ರೂಪವಾಗುತ್ತದೆ. ಹಲಃ (ಪಾ. ಸೂ. ೬-೪-೨) ಅಂಗಾವಯವವಾದ ವ್ಯಂಜನದ ಪರದಲ್ಲಿರುವ ಸಂಪ್ರಸಾರಣಕ್ಕೆ ದೀರ್ಘ ಬರುತ್ತದೆ ಎಂಬುದರಿಂದ ಹು ಎಂಬುದಕ್ಕೆ ದೀರ್ಘ ಬರುತ್ತದೆ. ಹೂ+ಅತ ಎಂದಿರುವಾಗ ಲುಙಿನಲ್ಲಿ ಪ್ರಾಪ್ತವಾಗುವ ಚ್ಲಿಗೆ ಸಿಚ್ ವಿಕರಣ ಬರುತ್ತದೆ. ಏಕಾಚ ಉಪದೇಶೇನುದಾತ್ತಾತ್ ಸೂತ್ರದಿಂದ ಆರ್ಧಧಾತುಕವಾದ ಸಿಚಿಗೆ ಇಣ್ನಿಷೇಧ ಬರುತ್ತದೆ. ಸಂಜ್ಞಾಪೂರ್ವಕೋವಿಧಿರನಿತ್ಯಃ (ಪರಿಭಾಷಾ. ೯೫) ಎಂಬುದರಿಂದ ಆರ್ಧಧಾತುಕವನ್ನು ನಿಮಿತ್ತೀಕರಿಸಿ ಬರುವ ಗುಣವು ಇಲ್ಲಿ ಬರುವುದಿಲ್ಲ. ಇಕಿನ ಪರದಲ್ಲಿ ಸಿಚ್ಚಿನ ಸಕಾರವಿರುವುದರಿಂದ ಆದೇಶಪ್ರತ್ಯಯಯೋಃ ಸೂತ್ರದಿಂದ ಷತ್ವ ಬಂದರೆ ಧಾತುವಿಗೆ ಅಡಾಗಮ ಬಂದರೆ ಅಹೂಷತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ಸರ್ವಾನುದಾತ್ತವಾಗುತ್ತದೆ.





CC-0. Jangamwadi Math Collection. Digitized by eGangotri

# ಐವತ್ತನೆಯ ಸೂಕ್ತವು

ಉದು ತ್ಯಮಿತಿ ತ್ರಯೋದಶರ್ಚಂ ಸಪ್ತಮಂ ಸೂಕ್ತಂ ಪ್ರಸ್ಕಣ್ವಸ್ಯಾರ್ಷಂ ಸೂರ್ಯ. ದೇವತ್ಯಂ । ಆದೌ ನವ ಗಾಯತ್ರ್ಯಃ ಶಿಷ್ಟಾಶ್ಚತಸ್ರೋಽನುಷ್ಟುಭ ಇತ್ಯುಕ್ತಂ । ತಥಾ ಚಾನುಕ್ರಾಂತಂ । ಉದು ತ್ಯಂ ಸಪ್ತೋನಾ ಸೌರ್ಯಂ ನವಾದ್ಯಾ ಗಾಯತ್ರ್ಯ ಇತಿ ॥ ಆಶ್ವಿನಶಸ್ತ್ರೇ ಸೌರ್ಯೇ ಕ್ರತಾವುದು ತ್ಯಮಿತ್ಯಾದಯೋ ನವರ್ಚಃ ಶಂಸನೀಯಾಃ । ಸಂಸ್ಥಿತೇಷ್ವಾಶ್ವಿನಾಯೇತಿ ಖಂಡೇ ಸೂತ್ರಿತಂ । ಸೂರ್ಯೋ ನೋ ದಿವ ಉದು ತ್ಯಂ ಜಾತವೇದಸಮಿತಿ ನವ । ಅ. ೬-೫ । ಇತಿ ॥

ಅನುವಾದವು—ಉದುತ್ಯಂ ಎಂಬುದು ಒಂಭತ್ತನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಹದಿಮೂರು ಋಕ್ಕುಗಳಿರುವವು. ಮೊದಲನೆಯ ಒಂಭತ್ತು ಋಕ್ಕುಗಳು ಗಾಯತ್ರೀ ಛಂದಸ್ಸಿನವು, ಉಳಿದ ನಾಲ್ಕು ಋಕ್ಕುಗಳು ಅನುಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ—ಉದುತ್ಯಂ ಎಂಬ ಸೂಕ್ತವು ನವಮಾನುವಾಕದಲ್ಲಿ ಏಳನೆಯ ಸೂಕ್ತವು. ಇದು ಸೂರ್ಯದೇವತಾಕವಾದುದು. ಈ ಸೂಕ್ತದ ಮೊದಲ ಒಂಭತ್ತು ಋಕ್ಕುಗಳು ಗಾಯತ್ರೀ ಛಂದಸ್ಸಿನವು ಎಂದು ಹೇಳಿರುವುದು. ಆಶ್ವಿನಶಸ್ತ್ರಮಂತ್ರ ಪಠನಮಾಡುವಾಗ ಸೌರ್ಯಕ್ರತುಮಂತ್ರಗಳಿಗಾಗಿ ಉದುತ್ಯಂ ಎಂದು ಮೊದಲಾಗಿರುವ ಒಂಭತ್ತು ಋಕ್ಕುಗಳನ್ನು ಪಠಿಸಬೇಕೆಂದು ಹೇಳಲ್ಪಟ್ಟಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದಲ್ಲಿ ಸಂಸ್ಥಿತೇಷ್ವಾಶ್ವಿನಾಯ ಎಂಬ ಖಂಡದಲ್ಲಿ ಸೂರ್ಯೋ ನೋ ದಿವ (ಋ. ಸಂ. ೧೦-೧೫೮) ಉದು ತ್ಯಂ ಜಾತವೇದಸಂ ನವ (ಋ. ಸಂ. ೧-೫೦-೧ ರಿಂದ ೯ ಋಕ್ಕುಗಳು) ಎಂಬ ಸೂತ್ರದಿಂದ ವಿವರಿಸಲ್ಪಟ್ಟಿರುವುದು.

## ಸೂಕ್ತ—೫೦

ಮಂಡಲ—೧ ॥ ಅನುವಾಕ—೯ ॥ ಸೂಕ್ತ—೫೦ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ—೭, ೮ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧-೧೩ ॥
ಋಷಿಃ—ಪ್ರಸ್ಕಣ್ವಃ ಕಾಣ್ವಃ ॥
ದೇವತಾ—ಸೂರ್ಯಃ ॥
ಛಂದಃ—೧-೯ ಗಾಯತ್ರೀ । ೧೦-೧೩ ಅನುಷ್ಟುಪ್ ॥

॥ ಸಂಹಿತಾಪಾಠಃ ॥

ಉದು ತ್ಯಂ ಜಾತವೇದಸಂ ದೇವಂ ವಹನ್ತಿ ಕೇತವಃ ।
ದೃಶೇ ವಿಶ್ವಾಯ ಸೂರ್ಯಂ ॥ ೧ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಉತ್ । ಊಂ ಇತಿ । ತ್ಯಂ । ಜಾತಽವೇದಸಂ । ದೇವಂ । ವಹಂತಿ । ಕೇತವಃ । ದೃಶೇ । ವಿಶ್ವಾಯ । ಸೂರ್ಯಂ ॥ ೧ ॥

॥ ಸಾಯಣಭಾಷ್ಯಂ ॥

ಕೇತವಃ ಪ್ರಜ್ಞಾಪಕಾಃ ಸೂರ್ಯಾಶ್ವಾ ಯದ್ವಾ ಸೂರ್ಯರಶ್ಮಯಃ ಸೂರ್ಯಂ ಸರ್ವಸ್ಯ ಪ್ರೇರಕಮಾದಿತ್ಯಮುದು ವಹಂತಿ । ಊರ್ಧ್ವಂ ವಹಂತಿ । ಉ ಇತಿ ಪಾದಪೂರಣಃ । ಉಕ್ತಂ ಚ । ಮಿತಾಕ್ಷರೇಷ್ವನರ್ಥಕಾಃ ಕಮೀಮಿದ್ವಿತಿ । ನಿ. ೧-೯ । ಕಿಮರ್ಥಂ ವಿಶ್ವಾಯ ವಿಶ್ವಸ್ಮೈ ಭುವನಾಯ ದೃಶೇ ದ್ರಷ್ಟುಂ । ಯಥಾ ಸರ್ವೇ ಜನಾಃ ಸೂರ್ಯಂ ಪಶ್ಯಂತಿ ತಥೋರ್ಧ್ವಂ ವಹಂತೀತ್ಯರ್ಥಃ । ಕೀದೃಶಂ ಸೂರ್ಯಂ । ತ್ಯಂ ಪ್ರಸಿದ್ಧಂ ಜಾತವೇದಸಂ ಜಾತಾನಾಂ ಪ್ರಾಣಿನಾಂ ವೇದಿತಾರಂ ಜಾತಪ್ರಜ್ಞಂ ಜಾತಧನಂ ವಾ ದೇವಂ ದ್ಯೋತಮಾನಂ । ಅತ್ರ ನಿರುಕ್ತಂ । ಉದ್ವಹಂತಿ ತಂ ಜಾತವೇದಸಂ ದೇವಮಶ್ವಾಃ ಕೇತವೋ ರಶ್ಮಯೋ ವಾ ಸರ್ವೇಷಾಂ ಭೂತಾನಾಂ ಸಂದರ್ಶನಾಯ ಸೂರ್ಯಂ । ನಿ. ೧೨-೧೫ । ಇತಿ ॥ ಜಾತವೇದಸಂ । ಜಾತಾನಿ ವೇತ್ತೀತಿ ಜಾತವೇದಾಃ । ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ । ಚೇತ್ಯಸುನ್ ಪೂರ್ವಪದಪ್ರಕೃತಿಸ್ವರತ್ವಂ ಚ । ದೃಶೇ । ದೃಶೇ ವಿಖ್ಯೇ ಚ । ಪಾ. ೩-೪-೧೧ । ಇತಿ ತುಮರ್ಥೇ ನಿಪಾತಿತಃ । ಸೂರ್ಯಂ । ರಾಜಸೂಯಸೂರ್ಯೇತ್ಯಾದಿನಾ ಷೂ ಪ್ರೇರಣ ಇತ್ಯಸ್ಮಾತ್ ಕ್ಯಪಿ ರುಡಾಗಮುಸಹಿತೋ ನಿಪಾತಿತಃ । ಅತಃ ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರೇಣಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಕೇತವಃ—(ಸೂರ್ಯನ ಆಗಮನವನ್ನು ಸೂಚಿಸತಕ್ಕ) ಸೂರ್ಯನ ಕುದುರೆಗಳು ಅಥವಾ ಸೂರ್ಯನ ಕಿರಣಗಳು । ತ್ಯಂ—(ಲೋಕ) ಪ್ರಸಿದ್ಧನಾಗಿಯೂ । ಜಾತವೇದಸಂ—ಉತ್ಪನ್ನವಾದ ಸಕಲವನ್ನು ತಿಳಿದವನಾಗಿಯೂ ಅಥವಾ ಉತ್ಪನ್ನವಾದ ಧನವುಳ್ಳವನಾಗಿಯೂ । ದೇವಂ—ಪ್ರಕಾಶಮಾನನಾಗಿಯೂ ಇರುವ । ಸೂರ್ಯಂ—(ಸರ್ವರನ್ನೂ ತಮ್ಮ ತಮ್ಮ ಕೆಲಸದಲ್ಲಿ ಪ್ರೇರಿಸತಕ್ಕ) ಸೂರ್ಯನನ್ನು । ವಿಶ್ವಾಯ—ಸಮಸ್ತಲೋಕದ । ದೃಶೇ— ದರ್ಶನಕ್ಕೋಸ್ಕರ । ಉದು ವಹಂತಿ—ಮೇಲೆತ್ತಿಹಿಡಿಯುತ್ತವೆ. (ವಹಿಸುತ್ತವೆ).

॥ ಭಾವಾರ್ಥ ॥

ಸರ್ವರನ್ನೂ ತಮ್ಮ ತಮ್ಮ ವ್ಯವಹಾರದಲ್ಲಿ ಪ್ರೇರಿಸತಕ್ಕ ಸೂರ್ಯದೇವನು ಲೋಕಪ್ರಸಿದ್ಧನು. ಉತ್ಪನ್ನವಾದ ಸಕಲವನ್ನೂ ತಿಳಿದವನು. ಉತ್ಪನ್ನವಾದ ಧನವುಳ್ಳವನು. ಮತ್ತು ಪ್ರಕಾಶಮಾನನು. ಇಂತಹ ದಿವ್ಯಗುಣಗಳುಳ್ಳ ಸೂರ್ಯನನ್ನು ಅವನ ಆಗಮನವನ್ನು ಸೂಚಿಸತಕ್ಕ ಕುದುರೆಗಳು ಅಥವಾ ಅವನ ಕಿರಣಗಳು ಸಮಸ್ತ ಲೋಕದ ದರ್ಶನಕ್ಕಾಗಿ ಮೇಲೆತ್ತಿ ಹಿಡಿಯುತ್ತವೆ.



CC-0. Jangamwadi Math Collection. Digitized by eGangotri

## English Translation.

His horses (or rays) carry on high all-knowing and divine Sun that he may be seen by all.

### ॥ ವಿಶೇಶ ವಿಷಯಗಳು ॥

ಈ ಸೂಕ್ತವು ಸೂರ್ಯದೇವತಾಕವು. ಋಗ್ವೇದದಲ್ಲಿ ಸೂರ್ಯದೇವತಾಕವಾದ ಋಕ್ಕುಗಳು ಒಟ್ಟು ಅರವತ್ತ್ರೂವರೆ ಇರುವವು. ಇವುಗಳನ್ನು ಒಟ್ಟುಗೂಡಿಸಿ ಸೌರಸೂಕ್ತವೆಂದು ಕರೆಯುವರು. ಸೂರ್ಯೋಪಸ್ಥಾನದಲ್ಲಿಯೂ ಸೂರ್ಯನಮಸ್ಕಾರ ಮುಂತಾದ ಪೂಜಾಕರ್ಮಗಳಲ್ಲಿಯೂ ಈ ಸೌರಸೂಕ್ತವನ್ನು ಪಠಿಸುವರು. ಸೂರ್ಯ, ಆದಿತ್ಯ, ಸವಿತೃ ಎಂಬ ದೇವತೆಗಳು ಒಂದೇ ವ್ಯಕ್ತಿಯಾದ ಸೂರ್ಯನನ್ನು ಸೂಚಿಸುವುದಾದರೂ ಋಗ್ವೇದದಲ್ಲಿ ಹಿಂದೆ ಹೇಳಿದಂತೆ ಸೂರ್ಯಪ್ರತಿಪಾದಿತವಾದ ಋಕ್ಕುಗಳು ಹೆಚ್ಚಾಗಿಲ್ಲ. ಆದಿತ್ಯಸವಿತೃದೇವತಾಕವಾದ ಅನೇಕ ಸೂಕ್ತಗಳಿರುವವು.

ಸೂರ್ಯಶಬ್ದಕ್ಕೆ ಯಾಸ್ಕರು—ಸೂರ್ಯಃ ಸರ್ತೇರ್ವಾ | ಸುವತೇರ್ವಾ | ಸ್ವೀರ್ಯತೇರ್ವಾ ॥ (ನಿ. ೧೨-೧೪) ಎಂದರೆ ಚಲಿಸುವುದರಿಂದ, ಸಮಸ್ತವನ್ನು ಹುಟ್ಟಿಸುವುದರಿಂದ ಅಥವಾ ಸಮಸ್ತಪ್ರಾಣಿವರ್ಗವನ್ನು ಪ್ರೇರಿಸುವುದರಿಂದ ಸೂರ್ಯನೆಂದು ಹೆಸರು ಎಂದು ಸೂರ್ಯ ಶಬ್ದಕ್ಕೆ ನಿಷ್ಪತ್ತಿಯನ್ನು ಹೇಳಿರುವರು ಮತ್ತು ಈ ಋಕ್ಕಿಗೆ ಈ ರೀತಿ ನಿರ್ವಚನವನ್ನು ಹೇಳಿರುವರು—

> ಉದ್ವಹಂತಿ ತಂ ಜಾತವೇದಸಂ ರಶ್ಮಯಃ ಕೇತವಃ ಸರ್ವೇಷಾಂ ಭೂತಾನಾಂ ದರ್ಶನಾಯ ಸೂರ್ಯಮಿತಿ | ಕಮನ್ಯಮಾದಿತ್ಯಾದೇವಮವಕ್ಷ್ಯತ್ ॥ (ನಿ. ೧೨-೧೫).

ಈ ನಿರ್ವಚನವು ಭಾಷ್ಯಕಾರರು ಹೇಳಿರುವ ಅರ್ಥದಂತೆಯೇ ಇರುವುದರಿಂದ ಇದರ ವಿವರಣೆಯು ಅವಶ್ಯಕವಿಲ್ಲ.

ತ್ಯಂ—ಈ ಶಬ್ದವು ತಚ್ಛಬ್ದಾರ್ಥವನ್ನು ಸೂಚಿಸುವುದು. ತ್ಯಂ ಎಂದರೆ ತಂ ಎಂದರ್ಥವು.

ಜಾತವೇದಸಂ—ಜಾತಾನಿ ವೇತ್ತೀತಿ ಜಾತವೇದಾಃ ತಂ | ಪ್ರಪಂಚದಲ್ಲಿ ಹುಟ್ಟಿದ ಸಮಸ್ತವನ್ನೂ ತಿಳಿಯುವವನು.

ದೇವಂ—ಪ್ರಕಾಶಮಾನವಾದ, ಸ್ವರ್ಗದಲ್ಲಿ ಬೆಳಗುತ್ತಿರುವ.

ಉತ್ ವಹಂತಿ—ಮೇಲೆ ವಹಿಸುತ್ತವೆ. ಅಥವಾ ಧರಿಸುತ್ತವೆ. ಸೂರ್ಯಾಶ್ವಗಳು ಅಥವಾ ಸೂರ್ಯನ ರಶ್ಮಿಗಳು ಸೂರ್ಯನನ್ನು ಎಲ್ಲರಿಗೂ ಕಾಣಿಸುವಂತೆ ಅಂತರಿಕ್ಷದ ಮೇಲುಭಾಗದಲ್ಲಿ ಸೂರ್ಯನನ್ನು ಎತ್ತಿ ಹಿಡಿಯುತ್ತವೆ ಎಂದರೆ ಎತ್ತರವಾದ ಮಾರ್ಗದಿಂದ ಕೊಂಡೊಯ್ಯುತ್ತವೆ.

ಕೇತವಃ—ಕೇತು ಶಬ್ದಕ್ಕೆ ಪ್ರಜ್ಞೆಯೆಂದೂ (ನಿ. ೩-೧೩) ರಶ್ಮಿಯೆಂದೂ ಅರ್ಥವಿರುವುದರಿಂದ ಇಲ್ಲಿ ಪ್ರಜ್ಞೆಯಿಂದ ಕೂಡಿದ ಸೂರ್ಯಾಶ್ವಗಳು ಅಥವಾ ಸೂರ್ಯನ ರಶ್ಮಿಗಳು ಎಂಬರ್ಥವನ್ನು ಭಾಷ್ಯಕಾರರೂ ಸ್ಕಂದ



CC-0. Jangamwadi Math Collection. Digitized by eGangotri

ಸ್ವಾಮಿಯೂ ಹೇಳಿರುವರು. ಯಾಸ್ಕರು ಮಾತ್ರ ಕೇತವಃ ಎಂದರೆ ಸೂರ್ಯನ ರಶ್ಮಿಗಳೆಂದು ನಿರ್ವಚನವನ್ನು ಹೇಳಿರುವರು.

ದೃಶೇ—ದ್ರಷ್ಟುಂ। ದರ್ಶನಾಯ। ಎಲ್ಲರಿಗೂ ಕಾಣಿಸುವುದಕ್ಕಾಗಿ, ಎಲ್ಲರೂ ನೋಡುವುದಕ್ಕಾಗಿ.

ವಿಶ್ವಾಯ—ವಿಶ್ವಸ್ಮೈ ಭುವನಾಯ। ಸಮಸ್ತ ಪ್ರಪಂಚ ಅಥವಾ ಸಮಸ್ತ ಜನರ (ಪ್ರಾಣಿಗಳ) ದರ್ಶನಾರ್ಥವಾಗಿ.

॥ ವ್ಯಾಕರಣಪ್ರಕ್ರಿಯಾ ॥

ಜಾತವೇದಸಮ್—ಜಾತಾನಿ ವೇತ್ತಿ ಇತಿ ಜಾತವೇದಾಃ। ಹುಟ್ಟಿದವುಗಳನ್ನು ತಿಳಿಯುವವನು. ಗತಿಕಾರಕೋಪಪದಯೋಃ ಪೂರ್ವಪದಪ್ರಕೃತಿಸ್ವರತ್ವಂ ಚ (ಉ. ಸೂ. ೫-೬೭೭) ಗತಿಯೂ ಕಾರಕವೂ ಉಪಪದವಾಗಿರುವಾಗ ಧಾತುವಿಗೆ ಅಸುನ್ ಪ್ರತ್ಯಯವೂ ಪೂರ್ವಪದಪ್ರಕೃತಿಸ್ವರೂಪವೂ ಬರುತ್ತದೆ ಎಂಬುದರಿಂದ ಇಲ್ಲಿ ಜಾತವೆಂಬ ಕಾರಕವು ಉಪಪದವಾಗಿರುವಾಗ ವಿದ್ ಧಾತುವಿಗೆ ಅಸುನ್ ಪ್ರತ್ಯಯ ಬಂದಿದೆ. ಪ್ರತ್ಯಯ ಪರದಲ್ಲಿರುವಾಗ ಪ್ರಗಂತೆಲಘೂಪಧಸ್ಯ ಚ ಸೂತ್ರದಿಂದ ಲಘೂಪದಗುಣವು ಧಾತುವಿಗೆ ಬರುತ್ತದೆ. ಜಾತವೇದಸ್ ಎಂದು ಸಕಾರಾಂತ ಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಜಾತವೇದಸಂ ಎಂದು ರೂಪವಾಗುತ್ತದೆ. ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಉತ್ತರಪದ ಪ್ರಕೃತಿಸ್ವರಕ್ಕೆ ಅಪವಾದವಾಗಿ ಪೂರ್ವಪದಪ್ರಕೃತಿಸ್ವರವು ಬರುತ್ತದೆ. ಪ್ರತ್ಯಯಸ್ವರದಿಂದ ಜಾತಶಬ್ದವು ಅಂತೋದಾತ್ತವಾದುದರಿಂದ ಜಾತವೇದಸಂ ಎಂಬಲ್ಲಿ ತಕಾರಾಕಾರವು ಉದಾತ್ತವಾಗುತ್ತದೆ.

ದೃಶೆ—ದ್ರಷ್ಟುಂ ದೃಶೆ ನೋಡುವುದಕ್ಕೋಸ್ಕರ ಎಂದರ್ಥ. ದೃಶಿರ್ ಪ್ರೇಕ್ಷಣೆ ಧಾತು. ದೃಶೇ ವಿಖ್ಯೇ ಚ (ಪಾ. ಸೂ. ೩-೪-೧೧) ಈ ಎರಡು ಶಬ್ದಗಳು ತುಮುನರ್ಥದಲ್ಲಿ ನಿಪಾತಿತಗಳಾಗಿರುತ್ತವೆ. ಆದುದರಿಂದ ದ್ರಷ್ಟುಂ ಎಂಬರ್ಥದಲ್ಲಿ ದೃಶೆ ಎಂದು ನಿಪಾತಿತವಾದ ಶಬ್ದ.

ಸೂರ್ಯಮ್—ಷೂ ಪ್ರೇರಣೆ ಧಾತು. ತುದಾದಿ. ರಾಜಸೂಯಸೂಯಸೂರ್ಯಮೃಷೋದ್ಯರುಚ್ಯಕುಪ್ಯಕೃಷ್ಟಪಚ್ಯಾವ್ಯಥ್ಯಾಃ (ಪಾ. ಸೂ. ೩-೧-೧೧೪) ಇಲ್ಲಿ ಏಳು ಶಬ್ದಗಳು ಕ್ಯಪ್ ಪ್ರತ್ಯಯಾಂತಗಳಾಗಿ ನಿಪಾತಿತಗಳಾಗಿವೆ. ಇದರಲ್ಲಿ ಸೂರ್ಯಶಬ್ದವು ಸೇರಿದೆ. ಸರತಿ ಆಕಾಶೆ ಸೂರ್ಯಃ ಆಕಾಶದಲ್ಲಿ ಹೋಗುವವನು ಎಂಬರ್ಥದಲ್ಲಿಯೂ ಸೂರ್ಯಶಬ್ದವನ್ನು ನಿರ್ವಚನಮಾಡಬಹುದು. ಆಗ ಸೃಧಾತುವಿಗೆ ಕ್ಯಪ್‌ಪ್ರತ್ಯಯವನ್ನೂ ನಿಪಾತನದಿಂದ ಉತ್ವವನ್ನೂ ದೀರ್ಘವನ್ನೂ ಹೇಳಬೇಕಾಗುತ್ತದೆ. ಅಥವಾ ಮೊದಲು ಹೇಳಿದ ಧಾತುವಿಗೇ ಕ್ಯಪ್ ಪ್ರತ್ಯಯ ಬರುತ್ತದೆ. ಆಗ ಸುವತಿ ಕರ್ಮಣಿ ಲೋಕಂ ಪ್ರೇರಯತಿ ಸೂರ್ಯಃ ಎಂದು ನಿರ್ವಚನ ಮಾಡಬೇಕು. ಅಂದರೆ ಲೋಕವನ್ನು ಕರ್ಮದಲ್ಲಿ ಪ್ರೇರೇಪಿಸುವವನು ಎಂದು ತಾತ್ಪರ್ಯ. ಕ್ಯಪ್ ಪ್ರತ್ಯಯ ಸಂನಿಯೋಗದಿಂದ ಧಾತುವಿಗೆ ರುಡಾಗಮ ಬರುತ್ತದೆ. ರುಚ್ ಚಿತ್ತಾದುದರಿಂದ ಅಂತಾವಯವವಾಗಿ ಬಂದರೆ ಸೂರ್ಯ ಎಂದು ರೂಪವಾಗುತ್ತದೆ. ಕ್ಯಪ್ ಪಿತ್ತಾದುದರಿಂದ ಪ್ರತ್ಯಯಸ್ವರವನ್ನು ಬಾಧಿಸಿ ಅನುದಾತ್ತೌ ಸುಪ್ಪಿತೌ ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತೋಃ ಸೂತ್ರದಿಂದ ಬಂದಿರುವ ಧಾತುವಿನ ಅಂತೋದಾತ್ತಸ್ವರವೇ ಪ್ರಬಲವಾಗುವುದರಿಂದ ಸೂರ್ಯ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ಉದಾತ್ತದ ಪರದಲ್ಲಿ ಅನುದಾತ್ತ ಬಂದುದರಿಂದ ಪ್ರತ್ಯಯದ ಅಕಾರವು ಸ್ವರಿತವಾಗುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಪ ತ್ಯೇ ತಾಯವೋ ಯಥಾ ನಕ್ಷತ್ರಾ ಯನ್ತ್ಯಕ್ತುಭಿಃ ।
ಸೂರಾಯ ವಿಶ್ವಚಕ್ಷಸೇ ॥ ೨ ॥

॥ ಪದಪಾಠಃ ॥

ಅಪ । ತ್ಯೇ । ತಾಯವಃ । ಯಥಾ । ನಕ್ಷತ್ರಾ । ಯಂತಿ । ಅಕ್ತುಭಿಃ ।
ಸೂರಾಯ । ವಿಶ್ವಽಚಕ್ಷಸೇ ॥ ೨ ॥

॥ ಸಾಯಣಭಾಷ್ಯಂ ॥

ತ್ಯೇ ತಾಯವೋ ಯಥಾ ಪ್ರಸಿದ್ಧಾಸ್ತಸ್ಕರಾ ಇವ ನಕ್ಷತ್ರಾ ನಕ್ಷತ್ರಾಣಿ ದೇವಗೃಹರೂಪಾಣಿ । ದೇವಗೃಹಾ ವೈ ನಕ್ಷತ್ರಾಣಿ । ತೈ. ಬ್ರಾ. ೧. ೫. ೨. ೬ । ಇತಿ ಶ್ರುತ್ಯಂತರಾತ್ । ಯದ್ವಾ । ಇಹ ಲೋಕೇ ಕರ್ಮಾನುಷ್ಠಾಯ ಯೇ ಸ್ವರ್ಗಂ ಪ್ರಾಪ್ನುವಂತಿ ತೇ ನಕ್ಷತ್ರರೂಪೇಣ ದೃಶ್ಯಂತೇ । ತಥಾ ಚ ಶ್ರೂಯತೇ । ಯೋ ವಾ ಇಹ ಯಜತೇಽಮುಂ ಸ ಲೋಕಂ ನಕ್ಷತೇ ತನ್ನಕ್ಷತ್ರಾಣಾಂ ನಕ್ಷತ್ರತ್ವಂ । ತೈ. ಬ್ರಾ. ೧-೫-೨-೫ । ಇತಿ । ಯದ್ವಾ । ತೇಷಾಂ ಸುಕೃತಿನಾಂ ಜ್ಯೋತೀಂಷಿ ನಕ್ಷತ್ರಾಣ್ಯುಚ್ಯಂತೇ । ಸುಕೃತಾಂ ವಾ ಏತಾನಿ ಜ್ಯೋತೀಂಷಿ ಯನ್ನಕ್ಷತ್ರಾಣಿ । ತೈ ಸಂ. ೫-೪-೧-೩ । ಇತ್ಯಾಮ್ನಾನಾತ್ । ಯಾಸ್ಕಸ್ತ್ವಾಹ । ನಕ್ಷತ್ರಾಣಿ ನಕ್ಷತೇರ್ಗತಿಕರ್ಮಣೋ ನೇಮಾನಿ ಕ್ಷತ್ರಾಣೀತಿ ಚ ಬ್ರಾಹ್ಮಣಂ । ನಿ. ೩-೨೦ । ಇತಿ । ತಥಾವಿಧಾನಿ ನಕ್ಷತ್ರಾಣ್ಯಕ್ತುಭೀ ರಾತ್ರಿಭಿಃ ಸಹಾಪ ಯಂತಿ । ಅಪಗಚ್ಛಂತಿ । ವಿಶ್ವಚಕ್ಷಸೇ ವಿಶ್ವಸ್ಯ ಸರ್ವಸ್ಯ ಪ್ರಕಾಶಕಸ್ಯ ಸೂರಾಯ ಸೂರ್ಯಸ್ಯಾಗಮನಂ ದೃಷ್ಟ್ವೇತಿ ಶೇಷಃ । ತಸ್ಕರಾ ನಕ್ಷತ್ರಾಣಿ ಚ ರಾತ್ರಿಭಿಃ ಸಹ ಸೂರ್ಯ ಆಗಮಿಷ್ಯತೀತಿ ಭೀತ್ಯಾ ಪಲಾಯಂತ ಇತ್ಯರ್ಥಃ । ತಾಯುರಿತಿ ಸ್ತೇನನಾಮ । ತಾಯುಸ್ತಸ್ಕರ ಇತಿ ತನ್ನಾಮಸು ಪಾಠಾತ್ । ಅಕ್ತುರಿತಿ ರಾತ್ರಿನಾಮ । ಶರ್ವರ್ಯಕ್ತುರಿತಿ ತತ್ರ ಪಾಠಾತ್ । ಯಥಾ । ಯಥೇತಿ ಪಾದಾಂತ ಇತಿ ಸರ್ವಾನುದಾತ್ತತ್ವಂ । ನಕ್ಷತ್ರಾ । ನಕ್ಷ ಗತೌ । ಅಮಿನಕ್ಷಿಯಜಿಬಂಧಿಪತಿಭ್ಯೋಽತ್ರನ್ । ಉ. ೩-೧೦೫ । ಇತ್ಯತ್ರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ನಭ್ರಾಣ್ನಪಾದಿತ್ಯತ್ರ ವೃತ್ತೌ ತ್ವೇವಮುಕ್ತಂ । ನ ಕ್ಷರತಿ ನ ಕ್ಷೀಯತ ಇತಿ ವಾ ನಕ್ಷತ್ರಂ । ಕ್ಷೀಯತೇಃ ಕ್ಷರತೇರ್ವಾ ನಕ್ಷತ್ರಮಿತಿ ನಿಪಾತ್ಯತ ಇತಿ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಯಂತಿ । ಇಣ್ ಗತೌ । ಇಣೋ ಯಣಿತಿ ಯಣಾದೇಶಃ । ಸೂರಾಯ ವಿಶ್ವಚಕ್ಷಸೇ । ವಿಶ್ವಂ ಚಷ್ಟೇ ಪ್ರಕಾಶಯತೀತಿ ವಿಶ್ವಚಕ್ಷಾಃ । ಚಕ್ಷೇರ್ಬಹುಲಂ ಶಿಚ್ಚ । ಉ. ೪-೨೩೨ । ಇತ್ಯಸುನ್ಪ್ರತ್ಯಯಃ । ಶಿತ್ತ್ವೇನ ಸಾರ್ವಧಾತುಕತ್ವಾತ್ ಖ್ಯಾಞಾದೇಶಾಭಾವಃ । ಉಭಯತ್ರ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ । ಪಾ ೨-೩-೬೨-೧ । ಇತಿ ಚತುರ್ಥೀ ॥



CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

ತ್ಯೇ—(ಆ) ಪ್ರಸಿದ್ಧರಾದ । ತಾಯವೋ ಯಥಾ—ಕಳ್ಳರಂತೆ । ನಕ್ಷತ್ರಾ—(ದೇವತೆಗಳ ಗೃಹ ರೂಪಗಳಾದ) ನಕ್ಷತ್ರಗಳು ಅಥವಾ ನಕ್ಷತ್ರರೂಪದಲ್ಲಿರುವ ಸುಕೃತಿಗಳ ತೇಜಸ್ಸುಗಳು । ಅಕ್ತುಭಿಃ—ರಾತ್ರಿ ಗಳೊಡನೆ । ವಿಶ್ವಚಕ್ಷಸೇ—ಸಮಸ್ತಕ್ಕೂ ಪ್ರಕಾಶಕನಾದ ಸೂರ್ಯನ (ಆಗಮನವನ್ನು ನೋಡಿ) । ಅಪ ಯಂತಿ—(ತಪ್ಪಿಸಿಕೊಂಡು) ಹೊರಟುಹೋಗುತ್ತವೆ.

॥ ಭಾವಾರ್ಥ ॥

ಸೂರ್ಯೋದಯಕಾಲದಲ್ಲಿ ಪ್ರಸಿದ್ಧರಾದ ಕಳ್ಳರು ಯಾವರೀತಿ ಓಡಿಹೋಗುತ್ತಾರೋ ಆದರಂತೆ ದೇವತೆಗಳ ಗೃಹರೂಪಗಳಾದ ನಕ್ಷತ್ರಗಳು ಅಥವಾ ನಕ್ಷತ್ರಗಳ ರೂಪದಲ್ಲಿರುವ ಈ ಲೋಕದ ಕರ್ಮಾನುಷ್ಠಾನ ಮಾಡಿದ ಸುಕೃತಿಗಳ ತೇಜಸ್ಸುಗಳು ರಾತ್ರಿಗಳೊಡನೆ ಸಮಸ್ತಕ್ಕೂ ಪ್ರಕಾಶಕನಾದ ಸೂರ್ಯನ ಆಗಮನವನ್ನು ನೋಡಿದೊಡನೆ ಮರೆಯಾಗಿ ಹೊರಟುಹೋಗುತ್ತವೆ. (ಕಾಣಿಸದಂತೆ ಮಂಕಾಗುತ್ತವೆ).

English Translation.

At the approuch of the illuminating sun, the stars depart with the night like thieves.

॥ ವಿಶೇಷ ವಿಷಯಗಳು ॥

ತ್ಯೇ—ತ್ಯೇ ಎಂದರೆ ತೇ, ಆ, ಪ್ರಸಿದ್ಧರಾದ, ಎಲ್ಲರಿಗೂ ತಿಳಿದಿರುವ. ಕಳ್ಳರು ರಾತ್ರಿಕಾಲದಲ್ಲಿ ಕಳ್ಳತನವನ್ನು ಮಾಡುವರೆಂಬ ವಿಷಯವು ಪ್ರಸಿದ್ಧವಾಗಿರುವುದೆಂದಭಿಪ್ರಾಯವು.

ತಾಯವಃ—ತೃಪುಃ, ತಕ್ವಾ ಮೊದಲಾದ ಹದಿನಾಲ್ಕು ಸ್ತೇನನಾಮಗಳ ಮಧ್ಯದಲ್ಲಿ ತಾಯುಃ ಎಂಬ ಶಬ್ದವು ಪಠಿತವಾಗಿರುವುದರಿಂದ ತಾಯವಃ ಎಂದರೆ ಕಳ್ಳರು ಎಂದರ್ಥವು.

ಅಪ ಯಂತಿ—ಓಡಿಹೋಗುವರು, ಕಾಣದಂತೆ ಅಥವಾ ತಪ್ಪಿಸಿಕೊಂಡು ಹೋಗುವರು.

ನಕ್ಷತ್ರಾ—ನಕ್ಷತ್ರಗಳು ಅಥವಾ ದೇವಗೃಹಗಳು. ದೇವತೆಗಳು ವಾಸಮಾಡುವ ಗೃಹಗಳಿಗೆ ನಕ್ಷತ್ರ ಗಳೆಂದು ದೇವಗೃಹಾ ವೈ ನಕ್ಷತ್ರಾನಿ (ತೈ. ಬ್ರಾ. ೧-೫-೨-೬) ಎಂದು ತೈತ್ತಿರೀಯ ಬ್ರಾಹ್ಮಣದಲ್ಲಿ ಹೇಳಿರುವುದು ಮತ್ತು ಯೋ ವಾ ಇಹ ಯಜತೇಽಮುಂ ಲೋಕಂ ನಕ್ಷತೇ ನಕ್ಷತ್ರಾಣಾಂ ನಕ್ಷತ್ರತ್ವಂ (ತೈ. ಬ್ರಾ. ೧-೫-೨-೫) ಈ ಲೋಕದಲ್ಲಿ ಯಜ್ಞವನ್ನು ಮಾಡುವವನು ಪರಲೋಕದಲ್ಲಿ ಪ್ರಕಾಶಮಾನವಾದ ಗೃಹದಲ್ಲಿ ವಾಸಮಾಡುವನು. ಆದುದರಿಂದ ನಕ್ಷತ್ರಗಳಿಗೆ ಈ ಹೆಸರು ಬಂದಿರುವುದು ಎಂದು ಅಲ್ಲಿಯೇ ಹೇಳಿದೆ. ಅಥವಾ ಸುಕೃತಾಂ ವಾ ಏತಾನಿ ಜ್ಯೋತೀಂಷಿ ಯನ್ನಕ್ಷತ್ರಾಣಿ (ತೈ. ಸಂ. ೫-೪-೧-೩) ಸತ್ಕರ್ಮಾನುಷ್ಠಾನಮಾಡಿ ದವರು ಪರಲೋಕದಲ್ಲಿ ನಕ್ಷತ್ರರೂಪವಾದ ತೇಜಸ್ಸಿನಿಂದ ಬೆಳಗುತ್ತಿರುವರು. ಅವರೇ ನಮಗೆ ನಕ್ಷತ್ರರೂಪದಿಂದ ಕಾಣಿಸುತ್ತಿರುವರು ಎಂದು ತೈತ್ತಿರೀಯಸಂಹಿತೆಯಲ್ಲಿ ಹೇಳಿದೆ. ಯಾಸ್ಕರು ತಮ್ಮ ನಿರುಕ್ತದಲ್ಲಿ—ನಕ್ಷತ್ರಾಣಿ ನಕ್ಷತೇರ್ಗತಿಕರ್ಮಣಃ । ನೇಮಾನಿ ಕ್ಷತ್ರಾಣೀತಿ ಚ ಬ್ರಾಹ್ಮಣಂ (ನಿ. ೩-೨೦) ಎಂದು ಹೇಳಿರುವರು.



CC-0. Jangamwadi Math Collection. Digitized by eGangotri

ಎಂದರೆ ನಕ್ಷತಿಧಾತುವಿಗೆ ಗತ್ಯರ್ಥವಿರುವುದು. ಕ್ಷತ್ರ ಎಂದರೆ ಧನವು. ಧನರೂಪವಾದ ಹಿರಣ್ಯದಂತೆ ಪ್ರಕಾಶಮಾನವಾದುದರಿಂದ ಇವುಗಳಿಗೆ ನಕ್ಷತ್ರಗಳೆಂದು ಹೆಸರು. ಸತ್ಕರ್ಮವನ್ನು ಮಾಡಿದವರು ಸ್ವರ್ಗಲೋಕದಲ್ಲಿ ಉತ್ತಮಸ್ಥಾನದಲ್ಲಿ ವಾಸಿಸುತ್ತಾ ನಕ್ಷತ್ರರೂಪದಿಂದ ಬೆಳಗುತ್ತಿರುವರು ಎಂದು ಪ್ರತೀತಿ ಇರುವುದು.

ಅಕ್ತುಭಿಃ—ರಾತ್ರಿಗಳಿಂದ ; ಅಕ್ತುಭೀ ರಾತ್ರಿಭಿಃ ಎಂದು ನಿರುಕ್ತವಚನವಿರುವುದು (ನಿ. ೧೨-೩೩).

‖ ವ್ಯಾಕರಣಪ್ರಕ್ರಿಯಾ ‖

**ಯಥಾ**—ಇದು ನಿಪಾತಸಂಜ್ಞೆಯುಳ್ಳದ್ದು. ಚಾದಯೋಽನುದಾತ್ತಾಃ (ಫಿ.ಸೂ. ೮೪) ಎಂಬುದರಿಂದ ಸಾಮಾನ್ಯವಾಗಿ ಅನುದಾತ್ತವು ಪ್ರಾಪ್ತವಾದರೆ ಯಥೇತಿಪಾದಾಂತೆ (ಫಿ.ಸೂ. ೮೫) ಎಂಬುದರಿಂದ ಚಾದಿಘಟಕವಾದ ಯಥಾ ಎಂಬುದಕ್ಕೆ ಪಾದಾಂತ್ಯದಲ್ಲಿ ಮಾತ್ರ ಸರ್ವಾನುದಾತ್ತವಾಗುತ್ತದೆ ಎಂದು ವಿಧಿಸಿರುತ್ತಾರೆ. ಆದುದರಿಂದ ಇಲ್ಲಿ ಪಾದದ ಕೊನೆಯಲ್ಲಿರುವುದರಿಂದ ಸರ್ವಾನುದಾತ್ತವಾಗಿದೆ.

**ನಕ್ಷತ್ರಾ**—ನಕ್ಷ ಗತೌ ಧಾತು. ಭ್ವಾದಿ. ಅಮಿನಕ್ಷಿಯಜಿ ಬಂಧಿ ಪತಿಭ್ಯೋಽತ್ರನ್ (ಉ. ಸೂ. ೩-೩೮೫) ಇವುಗಳಿಗೆ ಅತ್ರನ್ ಪ್ರತ್ಯಯ ಬರುತ್ತದೆ. ಉಪದೇಶಕಾಲದಲ್ಲಿ ಣಕ್ಷ ಎಂದು ಇದರ ಸ್ವರೂಪ. ಣೋನಃ ಎಂಬ ಸೂತ್ರದಿಂದ ಣಕಾರಕ್ಕೆ ನಕಾರಾದೇಶ ಬರುತ್ತದೆ. ನಕ್ಷ್+ಅತ್ರನ್ ಎಂದಿರುವಾಗ ಪ್ರತ್ಯಯದ ಅಂತ್ಯಕ್ಕೆ ಲೋಪ ಬಂದರೆ ನಕ್ಷತ್ರ ಎಂದು ರೂಪವಾಗುತ್ತದೆ. ಪ್ರತ್ಯಯವು ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ (ಪಾ. ಸೂ. ೬-೧-೧೯೭) ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ನಕ್ಷತ್ರಾ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ನಭ್ರಾಣ್ಣಪಾತ್ನ್ನ (ಪಾ. ಸೂ. ೬-೩-೭೫) ಎಂಬ ಸೂತ್ರದ ವೃತ್ತಿಯಲ್ಲಿ ಈ ನಕ್ಷತ್ರಶಬ್ದದ ನಿರ್ವಚನವನ್ನು ಈ ರೀತಿಯಾಗಿ ಮಾಡಿರುತ್ತಾರೆ. "ನ ಕ್ಷರತಿ ನ ಕ್ಷೀಯತೆ ಇತಿ ವಾ ನಕ್ಷತ್ರಮ್ | ಕ್ಷೀಯತೇಃ ಕ್ಷರತೇ ವಾ ನಕ್ಷತ್ರಮಿತಿ ನಿಪಾತ್ಯತೆ" (ಕಾ. ೬-೩-೭೫) ಸಂಚಲಿಸದೇ ಇರುವುದು ಅಥವಾ ನಾಶವಾಗದಿರುವುದು ನಕ್ಷತ್ರ ಎಂದರ್ಥ. ಕ್ಷರ ಸಂಚಲನೆ ಧಾತು. ಭ್ವಾದಿ. ಈ ಧಾತುವನ್ನು ಸ್ವೀಕರಿಸಿ ಕ್ಷತ್ರಂ ಎಂದು ನಿಪಾತ ಮಾಡಿರುತ್ತಾರೆ. ನಕ್ಷತ್ರಂ ಎಂದು ಸಮಾಸದಲ್ಲಿ ನಞಿಗೆ ನ ಲೋಪವಾಗದೆ ಪ್ರಕೃತಿಭಾವವನ್ನೂ ನಿಪಾತ ಮಾಡಿರುತ್ತಾರೆ. ಅಥವಾ ಕ್ಷಿ ಕ್ಷಯೆ ಧಾತು. ಭ್ವಾದಿ. ಈ ಧಾತುವಿನಿಂದ ನಿಷ್ಪನ್ನವಾದ ನಿಪಾತಿತಶಬ್ದವೆಂದು ಸ್ವೀಕರಿಸಬೇಕು. ನಕ್ಷತ್ರ ಶಬ್ದದಮೇಲೆ ಪ್ರಥಮಾ ಬಹುವಚನ ವಿವಕ್ಷಾಮಾಡಿದಾಗ ನಕ್ಷತ್ರ+ಜಸ್ ಎಂದಿರುವಾಗ ಜಶ್ಶಸೋಃ ಶಿಃ (ಪಾ. ಸೂ. ೭-೧-೨೦) ಸೂತ್ರದಿಂದ ಜಸ್ಸಿಗೆ ಶಿ ಎಂಬ ಆದೇಶ ಬರುತ್ತದೆ. ಶಿ ಗೆ ಶೇಶ್ಛಂದಸಿ ಬಹುಲಂ (ಪಾ. ಸೂ. ೬-೧-೭೦) ಎಂಬುದರಿಂದ ಛಂದಸ್ಸಿನಲ್ಲಿ ಲೋಪ ಬರುತ್ತದೆ. ಶಿಸರ್ವನಾಮಸ್ಥಾನಮ್ ಎಂಬುದರಿಂದ ಶಿ ಎಂಬುದಕ್ಕೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ ಸರ್ವನಾಮಸ್ಥಾನ ಪರದಲ್ಲಿರುವುದರಿಂದ ನಪುಂಸಕಸ್ಯ ಝಲಚಃ (ಪಾ. ಸೂ. ೭-೧-೭೨) ಸೂತ್ರದಿಂದ ಅಜಂತವಾದ ನಕ್ಷತ್ರ ಎಂಬುದಕ್ಕೆ ನುಮಾಗಮ ಬರುತ್ತದೆ. ನಾಂತಲಕ್ಷಣ ಉಪಧಾದೀರ್ಘ ಬಂದು ನಲೋಪವಾದರೆ ನಕ್ಷತ್ರಾ ಎಂದು ರೂಪವಾಗುತ್ತದೆ.

**ಯಂತಿ**—ಇಣ್ ಗತೌ ಧಾತು. ಅದಾದಿ. ಪ್ರಥಮಪುರುಷ ಬಹುವಚನ ವಿವಕ್ಷಾ ಮಾಡಿದಾಗ ಇ+ಅಂತಿ ಎಂದಿರುತ್ತದೆ. ಅಚಿಶ್ನುಧಾತುಭ್ರುವಾಂ (ಪಾ. ಸೂ. ೬-೪-೭೭) ಸೂತ್ರದಿಂದ ಇಯಙಾದೇಶವು ಪ್ರಾಪ್ತವಾದರೆ ಇಣೋಯಣ್ (ಪಾ. ಸೂ. ೬-೪-೮೧) ಅಜಾದಿಪ್ರತ್ಯಯ ಪರದಲ್ಲಿರುವಾಗ ಇಣ್ ಧಾತುವಿಗೆ ಯಣಾದೇಶ ಬರುತ್ತದೆ ಎಂಬುದರಿಂದ ಇಯಙಿಗೆ ಅಪವಾದವಾದ ಯಣಾದೇಶ ಬರುತ್ತದೆ. ಇಕಾರಕ್ಕೆ ಯಕಾರ ಬಂದರೆ ಯಂತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿ ಇರುವುದರಿಂದ ನಿಘಾತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಸೂರಾಯ—ಸೂರಶಬ್ದದ ಮೇಲೆ ಚತುರ್ಥೀ ಏಕವಚನ ವಿವಕ್ಷಾ ಮಾಡಿದಾಗ ಸೂರ+ಎ ಎಂದಿರುವಾಗ ಙೇರ್ಯಃ ಸೂತ್ರದಿಂದ ವಿಭಕ್ತಿಗೆ ಯಾದೇಶ ಬರುತ್ತದೆ. ಸುಪಿಚ ಸೂತ್ರದಿಂದ ಪ್ರಕೃತಿಗೆ ದೀರ್ಘ ಬಂದರೆ ಸೂರಾಯ ಎಂದು ರೂಪವಾಗುತ್ತದೆ. ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ (ಪಾ. ಮ. ೨-೩-೬೨-೧) ಎಂದು ಮಹಾಭಾಷ್ಯದಲ್ಲಿ ಹೇಳಿರುವುದರಿಂದ ಇಲ್ಲಿ ಷಷ್ಠಿಯ ಅರ್ಥದಲ್ಲಿ ಚತುರ್ಥೀವಿಭಕ್ತಿ ಬಂದಿದೆ. ಸೂರ್ಯನ ಆಗಮನ ಎಂದೇ ಅರ್ಥವಾಗುತ್ತದೆ.

ವಿಶ್ವಚಕ್ಷಸೇ—ವಿಶ್ವಂ ಚಷ್ಟೇ ಪ್ರಕಾಶಯತಿ ಇತಿ ವಿಶ್ವಚಕ್ಷಾಃ. ಪ್ರಪಂಚವನ್ನು ಪ್ರಕಾಶಿಸುವವನು ಎಂದರ್ಥ. ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು ಅದಾದಿ 'ಧಾತೂನಾಮನೇಕಾರ್ಥತ್ವಂ' ಎಂಬುದರಿಂದ ಇಲ್ಲಿ ಪ್ರಕಾಶನಾರ್ಥವನ್ನು ಸ್ವೀಕರಿಸಬೇಕು. ಚಕ್ಷೇರ್ಬಹುಲಂ ಶಿಚ್ಚ (ಉ. ಸೂ. ೪-೬೭) ಚಕ್ಷಿಙ್ ಧಾತುವಿಗೆ ಅಸುನ್ ಪ್ರತ್ಯಯ ಬರುತ್ತದೆ. ಈ ಪ್ರತ್ಯಯವು ಶಿತ್ತಾಗುತ್ತದೆ ಎಂಬುದರಿಂದ ಅಸುನ್ ಪ್ರತ್ಯಯ ಬರುತ್ತದೆ. ಚಕ್ಷಸ್ ಎಂದು ಸಕಾರಾಂತವಾದ ಶಬ್ದವಾಗುತ್ತದೆ. ಪ್ರತ್ಯಯಕ್ಕೆ ಶಿದ್ವದ್ಭಾವವನ್ನು ಹೇಳಿರುವುದರಿಂದ ಸಾರ್ವಧಾತುಕ ಸಂಜ್ಞೆಯು ತಿಙ್‌ಶಿತ್ ಸಾರ್ವಧಾತುಕಂ ಸೂತ್ರದಿಂದ ಬರುತ್ತದೆ. ಆದುದರಿಂದ ಆರ್ಧಧಾತುಕವು ಪರದಲ್ಲಿರುವಾಗ ಬರತಕ್ಕ ಖ್ಯಾಞಾದೇಶವು ಚಕ್ಷಿಙಿಗೆ ಬರುವುದಿಲ್ಲ. ವಿಶ್ವಚಕ್ಷಸ್ ಶಬ್ದಕ್ಕೆ ಚತುರ್ಥೀ ಏಕವಚನದಲ್ಲಿ ವಿಶ್ವಚಕ್ಷಸೇ ಎಂದು ರೂಪವಾಗುತ್ತದೆ. ಇಲ್ಲಿಯೂ ಹಿಂದೆ ಹೇಳಿದಂತೆ ಷಷ್ಠ್ಯರ್ಥೇ ಚತುರ್ಥೀ ವಕ್ತವ್ಯಾ ಎಂಬ ಭಾಷ್ಯಕಾರರ ವಚನದಿಂದ ಷಷ್ಠ್ಯರ್ಥದಲ್ಲಿ ಚತುರ್ಥೀವಿಭಕ್ತಿಯು ಬರುತ್ತದೆ.

॥ ಸಂಹಿತಾಪಾಠಃ ॥

ಅದೃಶ್ರಮಸ್ಯ ಕೇತವೋ ವಿ ರಶ್ಮಯೋ ಜನಾ೵ ಅನು।
ಭ್ರಾಜನ್ತೋ ಅಗ್ನಯೋ ಯಥಾ ॥ ೩ ॥

॥ ಪದಪಾಠಃ ॥

ಅದೃಶ್ರಂ । ಅಸ್ಯ । ಕೇತವಃ । ವಿ । ರಶ್ಮಯಃ । ಜನಾನ್ । ಅನು ।
ಭ್ರಾಜನ್ತಃ । ಅಗ್ನಯಃ । ಯಥಾ ॥ ೩ ॥

॥ ಸಾಯಣಭಾಷ್ಯಂ ॥

ಅಸ್ಯ ಸೂರ್ಯಸ್ಯ ಕೇತವಃ ಪ್ರಜ್ಞಾಪಕಾ ರಶ್ಮಯೋ ದೀಪ್ತಯೋ ಜನಾನನು ವ್ಯದೃಶ್ರಂ । ಜಾತಾನ್ಸರ್ವಾನನುಕ್ರಮೇಣ ಪ್ರೇಕ್ಷಂತೇ । ಸರ್ವಂ ಜಗತ್ಪ್ರಕಾಶಯಂತೀತ್ಯರ್ಥಃ । ತತ್ರ ದೃಷ್ಟಾಂತಃ । ಭ್ರಾಜಂತೋ ದೀಪ್ಯಮಾನಾ ಅಗ್ನಯೋ ಯಥಾ ಅಗ್ನಯ ಇವ ॥ ಅದೃಶ್ರಂ । ದೃಶಿರ್ ಪ್ರೇಕ್ಷಣೇ । ವರ್ತಮಾನೇ ಲುಙ್ । ಇರಿತೋ ವಾ । ಪಾ. ೩-೧-೫೭ । ಇತಿ ಚ್ಲೇರಙಾದೇಶಃ । ರುಡಿತ್ಯನುವೃತ್ತೌ





CC-0. Jangamwadi Math Collection. Digitized by eGangotri

ಬಹುಲಂ ಛಂದಸಿ । ಪಾ. ೭-೧-೮ । ಇತಿ ರುಡಾಗಮಃ । ಅತ ಏವ ಬಹುಲವಚನಾದೃಶೋಽಙಿ ಗುಣ ಇತಿ ಗುಣಾಭಾವ ಇತ್ಯುಕ್ತಂ । ತಿಙಾಂ ತಿಙೋ ಭವಂತೀತಿ ಪ್ರಥಮಪುರುಷಬಹುವಚನಸ್ಯೋತ್ತಮ-ಪುರುಷೈಕವಚನಾದೇಶಃ । ಪ್ರಥಮಪುರುಷಾಂತ ಏವ ಶಾಖಾಂತರೇ ಶ್ರೂಯತೇ । ಅದೃಶ್ರನ್ನಸ್ಯ ಕೇತವಃ । ಅಥ. ೧೩-೧-೧೮ । ಇತಿ । ಜನಾನಿತ್ಯಸ್ಯ ನಕಾರಸ್ಯ ಸಂಹಿತಾಯಾಂ ರುತ್ವಯತ್ವಾದಿ ಪೂರ್ವವತ್ । ಭ್ರಾಜಂತಃ । ಶಪಃ ಪಿತ್ತ್ವಾದನುದಾತ್ತತ್ವಂ । ಶತುಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರ ಏವ ಶಿಷ್ಯತೇ ॥

॥ ಪ್ರತಿಪದಾರ್ಥ ॥

ಅಸ್ಯ—ಈ ಸೂರ್ಯದೇವನ । ಕೇತವಃ—(ಆಗಮನವನ್ನು) ಸೂಚಿಸತಕ್ಕ । ರಶ್ಮಯಃ—ಕಿರಣಗಳು । ಭ್ರಾಜಂತಃ— ಪ್ರಜ್ವಲಿಸುವ । ಅಗ್ನಯೋ ಯಥಾ—ಅಗ್ನಿಗಳಂತೆ । ಜನಾನ್—ಉತ್ಪನ್ನವಾದ ಸಮಸ್ತವನ್ನೂ ಅನು—ಅನುಕ್ರಮವಾಗಿ । ವಿ ಅದೃಶ್ರಂ—ಚೆನ್ನಾಗಿ ನೋಡುತ್ತವೆ. (ಸಕಲ ಜಗತ್ತನ್ನೂ ಪ್ರಕಾಶಿಸುವಂತೆ ಮಾಡುತ್ತವೆ.

॥ ಭಾವಾರ್ಥ ॥

ಸೂರ್ಯನಿಗಿಂತಲೂ ಪೂರ್ವಭಾವಿಯಾಗಿ ಪ್ರಸರಿಸಿ ಸೂರ್ಯನ ಆಗಮನವನ್ನು ಲೋಕಕ್ಕೆ ಸೂಚಿಸುವ ಅವನ ಕಿರಣಗಳು ಪ್ರಜ್ವಲಿಸುವ ಅಗ್ನಿಗಳಂತೆ ಉತ್ಪನ್ನವಾದ ಸಮಸ್ತವನ್ನೂ ಅನುಕ್ರಮವಾಗಿ ಪ್ರಕಾಶಿಸುವಂತೆ ಮಾಡುತ್ತವೆ.

English Translation.

High illuminating rays are seen among men like blazing fires.

॥ ವಿಶೇಷ ವಿಷಯಗಳು ॥

ಕೇತವಃ ಪ್ರಜ್ಞಾಪಕಾಃ—ಕೇತುಶಬ್ದವು ಪ್ರಜ್ಞಾವಾಚಕವು. (ನಿ. ೩-೧೩) ಇಲ್ಲಿ ಕೇತವಃ ಎಂಬ ಶಬ್ದವು ರಶ್ಮಯಃ ಎಂಬ ಶಬ್ದಕ್ಕೆ ವಿಶೇಷಣವಾಗಿರುವುದರಿಂದ ಕೇತವಃ ಎಂದರೆ ಜ್ಞಾನವನ್ನುಂಟುಮಾಡುವ, ತಿಳುವಳಿಕೆಯುನ್ನುಂಟುಮಾಡುವ, ಬುದ್ಧಿಯನ್ನು ಪ್ರೇರಿಸುವ ಇತ್ಯಾದಿ ಅರ್ಥಗಳನ್ನು ಹೇಳಬಹುದು. ಸೂರ್ಯ ರಶ್ಮಿಗಳ ಅಥವಾ ಸೂರ್ಯನ ಬೆಳಕಿನ ಸಹಾಯದಿಂದ ಬಾಹ್ಯವಸ್ತುಗಳ ಪರಿಜ್ಞಾನವು ಉಂಟಾಗುವುದರಿಂದ ಕೇತವಃ ಎಂದರೆ ಪ್ರಜ್ಞಾಪಕ ಎಂಬ ಅರ್ಥವನ್ನು ಭಾಷ್ಯಕಾರರು ಹೇಳಿರುವರು.

ಅದೃಶ್ರಂ ರಶ್ಮಯಃ ಜನಾನ್ ಅನು—ಸೂರ್ಯನ ರಶ್ಮಿಗಳು ಜನರನ್ನು ನೋಡುತ್ತವೆ. ಎಂದರೆ ಸೂರ್ಯನ ರಶ್ಮಿಗಳು ಜನರ ಮಧ್ಯದಲ್ಲಿ (ಲೋಕದಲ್ಲಿ) ಪ್ರಕಾಶಿಸುವುದರಿಂದ ಆ ಬೆಳಕಿನ ಸಹಾಯದಿಂದ ಜನರು ಪ್ರಪಂಚವಸ್ತುಗಳನ್ನು ನೋಡಲು ಸಮರ್ಥರಾಗುವರು ಎಂದಭಿಪ್ರಾಯವು.

ಭ್ರಾಜಂತೋ ಅಗ್ನಯೋ ಯಥಾ—ಚೆನ್ನಾಗಿ ಪ್ರಕಾಶಮಾನವಾಗಿ ಉರಿಯುತ್ತಿರುವ ಅಗ್ನಿಯು ಯಾವರೀತಿ ಲೋಕವನ್ನು ಬೆಳಗುವುದೋ ಅದರಂತೆ ಸೂರ್ಯನ ಕಿರಣಗಳೂ ಸಹ ಸಮಸ್ತಪ್ರಪಂಚವನ್ನು ಬೆಳಗುವವು ಎಂದಭಿಪ್ರಾಯವು.



CC-0. Jangamwadi Math Collection. Digitized by eGangotri

|| ವ್ಯಾಕರಣಪ್ರಕ್ರಿಯಾ ||

**ಅದೃಶ್ರಮ್**—ದೃಶಿರ್ ಪ್ರೇಕ್ಷಣೇ ಧಾತು. ಭ್ವಾದಿ. **ಛಂದಸಿಲುಙ್‌ಲಙ್‌ಲಿಟಃ** (ಪಾ. ಸೂ. ೩-೪-೬) ಸೂತ್ರದಿಂದ ವರ್ತಮಾನಾರ್ಥದಲ್ಲಿ ಲುಙ್ ಬರುತ್ತದೆ. ಪ್ರಥಮಪುರುಷ ಬಹುವಚನ ವಿವಕ್ಷಾಮಾಡಿದಾಗ ಝಿ ಪ್ರಾಪ್ತವಾದರೆ **ವ್ಯತ್ಯಯೋ ಬಹುಲಂ** ಎಂಬುದರಿಂದ ಸಿದ್ಧವಾದ ತಿಜಾಂ ತಿಜೋ ಭವಂತಿ ಎಂಬುದರಿಂದ ಪ್ರಥಮಪುರುಷ ಬಹುವಚನಕ್ಕೆ ಉತ್ತಮಪುರುಷ ಏಕವಚನ ಪ್ರತ್ಯಯವು ಆದೇಶವಾಗಿ ಬರುತ್ತದೆ. ದೃಶ್+ಮಿ ಎಂದಿರುವಾಗ **ಇತಶ್ಚ** ಸೂತ್ರದಿಂದ ಪ್ರತ್ಯಯದ ಇಕಾರಕ್ಕೆ ಲೋಪ ಬರುತ್ತದೆ. **ಚ್ಲಿಲುಙಿ** ಸೂತ್ರದಿಂದ ಚ್ಲಿ ಪ್ರಾಪ್ತವಾದರೆ ಅದಕ್ಕೆ **ಇರಿತೋ ವಾ** (ಪಾ. ಸೂ. ೩-೧-೫೭) ಎಂಬುದರಿಂದ ಅಙಾದೇಶ ಬರುತ್ತದೆ. ದೃಶಿರ್ ಎಂಬಲ್ಲಿ ಇರ್ ಎಂಬುದು ಇತ್ತಾಗುವುದರಿಂದ ಇರಿತ್ತಾದ ಧಾತುವಾಗುತ್ತದೆ. ದೃಶ್+ಅ+ಮ್ ಎಂದಿರುವಾಗ ಬಹುಲಂ ಛಂದಸಿ (ಪಾ. ಸೂ. ೭-೧-೮) ಛಂದಸ್ಸಿನಲ್ಲಿ ವಿಕಲ್ಪವಾಗಿ ಧಾತುವಿನ ಪರದಲ್ಲಿರುವ ಪ್ರತ್ಯಯಕ್ಕೆ ರುಡಾಗಮ ಬರುತ್ತದೆ ಎಂಬುದರಿಂದ ರುಡಾಗಮ ಬರುತ್ತದೆ. ಈ ಸೂತ್ರದಲ್ಲಿ **ಶೀಙೋರುಟ್** ಎಂಬ ಸೂತ್ರ ದಿಂದ ರುಟ್ ಎಂಬುದು ಅನುವೃತ್ತವಾಗುತ್ತದೆ. ಲುಙ್ ನಿಮಿತ್ತವಾದ ಅಡಾಗಮವು ಧಾತುವಿಗೆ ಬಂದರೆ ಅದೃಶ್ರಮ್ ಎಂದು ರೂಪವಾಗುತ್ತದೆ. **ಋದೃಶೋಙಿ ಗುಣಃ** ಎಂಬುದರಿಂದ ಅಙ್ ಪರದಲ್ಲಿರುವಾಗ ಧಾತುವಿನ ಋಕಾರಕ್ಕೆ ಗುಣವು ಪ್ರಾಪ್ತವಾಗುತ್ತದೆ. ಆದರೆ ಹಿಂದೆ ಹೇಳಿದ **ಬಹುಲಂ ಛಂದಸಿ** ಎಂಬ ಸೂತ್ರದಲ್ಲಿ ಬಹುಲಗ್ರಹಣಮಾಡಿದುದರಿಂದಲೇ ಇಲ್ಲಿ ಗುಣವು ಬರುವುದಿಲ್ಲ ಎಂದು ಹೇಳಿರುತ್ತಾರೆ. ವ್ಯತ್ಯಯದಿಂದ ಪ್ರಥಮ ಪುರುಷ ಬಹುವಚನಕ್ಕೆ ಉತ್ತಮಪುರುಷದ ಏಕವಚನವು ಆದೇಶವಾಗಿ ಬಂದಿದೆ ಎಂದು ಹಿಂದೆ ಹೇಳಿದೆ. ಕೆಲವೆಡೆಯಲ್ಲಿ ಇತರ ಶಾಖೆಗಳಲ್ಲಿ ಪ್ರಥಮಪುರುಷ ಬಹುವಚನವೇ ಶ್ರುತವಾಗಿರುತ್ತದೆ. **ಅದೃಶ್ರನ್ನಸ್ಯ ಕೇತವಃ** (ಅ. ಸ. ೧೩-೨-೧೮) ಎಂದು ಅಲ್ಲಿ ಮಂತ್ರಪಾಠವಿರುತ್ತದೆ.

**ಜನಾನ್**—**ಆತೋಽಟಿ ನಿತ್ಯಂ** (ಪಾ. ಸೂ. ೮-೩-೩) ಸೂತ್ರದಿಂದ ಸಂಹಿತಾದಲ್ಲಿ ನಕಾರಕ್ಕೆ ರುತ್ವ ಬರುತ್ತದೆ. ರುತ್ವಕ್ಕೆ ಯತ್ವಲೋಪಗಳು ಬರುತ್ತವೆ. **ಅತ್ರಾನುನಾಸಿಕಃ** ಸೂತ್ರದಿಂದ ರುತ್ವದ ಹಿಂದೆ ಅನುನಾಸಿಕ ಬರುತ್ತದೆ. ಜನಾ ಎಂದು ಮಂತ್ರಪಾಠದಲ್ಲಿ ರೂಪವಾಗುತ್ತದೆ.

**ಭ್ರಾಜಂತಃ**—ಭ್ರಾಜೃ ದೀಪ್ತೌ ಧಾತು. ಭ್ವಾದಿ. **ಲಟಃ ಶತೃಶಾನಚೌ** ಸೂತ್ರದಿಂದ ಶತೃಪ್ರತ್ಯಯ ಬರುತ್ತದೆ. ಭ್ರಾಜೃಧಾತುವಿಗೆ ಶಿತ್ತಾದ ಪ್ರತ್ಯಯವು ಪರದಲ್ಲಿರುವುದರಿಂದ ಶಪ್ ವಿಕರಣ ಪ್ರತ್ಯಯ ಬರುತ್ತದೆ. ಭ್ರಾಜತ್ ಎಂದು ತಕಾರಾಂತ ಶಬ್ದವಾಗುತ್ತದೆ. ಇದಕ್ಕೆ ಪ್ರಥಮಾ ಬಹುವಚನ ವಿವಕ್ಷಾಮಾಡಿದಾಗ ಜಸ್ ಪ್ರತ್ಯಯ ಬರುತ್ತದೆ. ಜಸಿಗೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ ಪ್ರಕೃತಿಯು ಉಗಿತ್ತಾದುದರಿಂದ **ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ** ಸೂತ್ರದಿಂದ ನುಮಾಗಮ ಬರುತ್ತದೆ. ನಕಾರಕ್ಕೆ ಅನುಸ್ವಾರ ಪರಸವರ್ಣ ಬಂದರೆ ಭ್ರಾಜನ್ತಃ ಎಂದು ರೂಪವಾಗುತ್ತದೆ. ಇಲ್ಲಿ ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಶತೃ ಲಸಾರ್ವಧಾತುಕವಾದುದರಿಂದ ಶಪಿನ ಪರದಲ್ಲಿ ಬಂದುದರಿಂದ **ತಾಸ್ಯನುದಾತ್ತೇತ್** (ಪಾ. ಸೂ. ೬-೧-೧೮೬) ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರವೇ ಉಳಿಯುತ್ತದೆ. ಭ್ರಾಜಂತಃ ಎಂಬುದು **ಆದ್ಯುದಾತ್ತ** ವಾದ ಪದವಾಗುತ್ತದೆ.

---



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ತ॒ರಣಿ॒ರ್ವಿ॒ಶ್ವದ॑ರ್ಶತೋ ಜ್ಯೋ॒ತಿ॒ಷ್ಕೃದ॑ಸಿ ಸೂರ್ಯ ।
ವಿಶ್ವ॒ಮಾ ಭಾ॑ಸಿ ರೋಚ॒ನಮ್ ॥ ೪ ॥

॥ ಪದಪಾಠಃ ॥

ತ॒ರಣಿಃ॑ । ವಿ॒ಶ್ವಽದ॑ರ್ಶತಃ । ಜ್ಯೋ॒ತಿಃ॒ಽಕೃತ್ । ಅ॒ಸಿ॒ । ಸೂ॒ರ್ಯ॒ ।
ವಿಶ್ವ॑ಮ್ । ಆ । ಭಾ॒ಸಿ॒ । ರೋ॒ಚ॒ನಮ್ ॥ ೪ ॥

ಸಾಯಣಭಾಷ್ಯಂ

ಚಾತುರ್ಮಾಸ್ಯೇಷು ಶುನಾಸೀರ್ಯೇ ಪರ್ವಣ್ಯಸ್ತಿ ಸೌರ್ಯ ಏಕಕಪಾಲಃ । ತಸ್ಯ ತರಣಿರಿತ್ಯೇಷಾನುವಾಕ್ಯಾ । ತಥಾ ಚ ಸೂತ್ರಿತಂ । ತರಣಿರ್ವಿಶ್ವದರ್ಶತಶ್ಚಿತ್ರಂ ದೇವಾನಾಮುದಗಾದನೀಕಮಿತಿ ಯಾಜ್ಯಾನುವಾಕ್ಯಾಃ । ಆ. ೨.೨೦ । ಇತಿ । ತಥಾತಿಮೂರ್ತಿನಾಮ್ನ್ಯೇಕಾಹೇ ಕೃಷ್ಣಪಕ್ಷೇ ಸೌರ್ಯೇಷ್ಟಿಃ ಕರ್ತವ್ಯಾ । ತಸ್ಯಾಮಪ್ಯೇಷಾನುವಾಕ್ಯಾ । ಅತಿಮೂರ್ತಿನೇತಿ ಖಂಡೇ ಸೂತ್ರಿತಂ । ನವೋ ನವೋ ಭವತಿ ಜಾಯಮಾನಸ್ತರಣಿರ್ವಿಶ್ವದರ್ಶತಃ । ಆ ೯-೮ । ಇತಿ

ಹೇ ಸೂರ್ಯ ತ್ವಂ ತರಣಿಸ್ತರಿತಾ ಅನ್ಯೇನ ಗಂತುಮಶಕ್ಯಸ್ಯ ಮಹತೋಽಧ್ವನೋ ಗಂತಾಸಿ। ತಥಾ ಚ ಸ್ಮರ್ಯತೇ। ಯೋಜನಾನಾಂ ಸಹಸ್ರೇ ದ್ವೇ ದ್ವೇ ಶತೇ ದ್ವೇ ಚ ಯೋಜನೇ । ಏಕೇನ ನಿಮಿಷಾರ್ಧೇನ ಕ್ರಮಮಾಣ ನಮೋಽಸ್ತು ತ ಇತಿ। ಯದ್ವಾ। ಉಪಾಸಕಾನಾಂ ರೋಗಾತ್ತಾರಯಿತಾಸಿ। ಆರೋಗ್ಯಂ ಭಾಸ್ಕರಾದಿಚ್ಛೇದಿತಿ ಸ್ಮರಣಾತ್। ತಥಾ ವಿಶ್ವದರ್ಶತೋ ವಿಶ್ವೈಃ ಸರ್ವೈಃ ಪ್ರಾಣಿಭಿರ್ದರ್ಶನೀಯಃ। ಆದಿತ್ಯದರ್ಶನಸ್ಯ ಚಂಡಾಲಾದಿದರ್ಶನಜನಿತಪಾಪನಿರ್ಹರಣಹೇತುತ್ವಾತ್ । ತಥಾ ಚಾಪಸ್ತಂಬಃ। ದರ್ಶನೇ ಜ್ಯೋತಿಷಾಂ ದರ್ಶನಮಿತಿ। ಯದ್ವಾ। ವಿಶ್ವಂ ಸಕಲಂ ಭೂತಜಾತಂ ದರ್ಶತಂ ದ್ರಷ್ಟವ್ಯಂ ಪ್ರಕಾಶ್ಯಂ ಯೇನ ಸ ತಥೋಕ್ತಃ। ತಥಾ ಜ್ಯೋತಿಷ್ಕೃತ್ ಜ್ಯೋತಿಷಃ ಪ್ರಕಾಶಸ್ಯ ಕರ್ತಾ। ಸರ್ವಸ್ಯ ವಸ್ತುನಃ ಪ್ರಕಾಶಯಿತೇತ್ಯರ್ಥಃ। ಯದ್ವಾ। ಚಂದ್ರಾದೀನಾಂ ರಾತ್ರೌ ಪ್ರಕಾಶಯಿತಾ। ರಾತ್ರೌ ಹ್ಯಮ್ಮಯೇಷು ಚಂದ್ರಾದಿಬಿಂಬೇಷು ಸೂರ್ಯಕಿರಣಾಃ ಪ್ರತಿಫಲಿತಾಃ ಸಂತೋಽಂಧಕಾರಂ ನಿವಾರಯಂತಿ ಯಥಾ ದ್ವಾರಸ್ಥದರ್ಪಣೋಪರಿ ನಿಪತಿತಾಃ ಸೂರ್ಯರಶ್ಮಯೋ ಗೃಹಾಂತರ್ಗತಂ ತಮೋ ನಿವಾರಯಂತಿ ತದ್ವದಿತ್ಯರ್ಥಃ। ಯಸ್ಮಾದೇವಂ ತಸ್ಮಾದ್ವಿಶ್ವಂ ವ್ಯಾಪ್ತಂ ರೋಚನಂ ರೋಚಮಾನಮಂತರಿಕ್ಷಮಾಸಮಂತಾದ್ಭಾಸಿ। ಪ್ರಕಾಶಯಸಿ ॥ ಯದ್ವಾ । ಹೇ ಸೂರ್ಯ ಅಂತರ್ಯಾಮಿತಯಾ ಸರ್ವಸ್ಯ ಪ್ರೇರಕ ಪರಮಾತ್ಮನ್ ತರಣಿಃ ಸಂಸಾರಾಬ್ಧೇಸ್ತಾರಕೋಽಸಿ । ಯಸ್ಮಾತ್ತ್ವಂ ವಿಶ್ವದರ್ಶತೋ ವಿಶ್ವೈಃ ಸರ್ವೈರ್ಮುಮುಕ್ಷುಭಿರ್ದರ್ಶತೋ ದ್ರಷ್ಟವ್ಯಃ। ಸಾಕ್ಷಾತ್ಕರ್ತವ್ಯ ಇತ್ಯರ್ಥಃ। ಅಧಿಷ್ಠಾನಸಾಕ್ಷಾತ್ಕಾರೇ ಹ್ಯಾರೋಪಿತಂ ನಿವರ್ತತೇ। ಜ್ಯೋತಿಷ್ಕೃತ್ ಜ್ಯೋತಿಷಃ ಸೂರ್ಯಾದೇಃ ಕರ್ತಾ। ತಥಾ ಚಾಮ್ನಾಯತೇ। ಚಂದ್ರಮಾ



CC-0. Jangamwadi Math Collection. Digitized by eGangotri

ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ । ತೈ ಅ. ೩-೧೨-೬ । ಇತಿ । ಈದೃಶಸ್ತ್ವಂ ಚಿದ್ರೂಪತಯಾ ವಿಶ್ವಂ ಸರ್ವಂ ದೃಶ್ಯಜಾತಂ ರೋಚನಂ ರೋಚಮಾನಂ ದೀಪ್ಯಮಾನಂ ಯಥಾ ಭವತಿ ತಥಾ ಭಾಸಿ । ಪ್ರಕಾಶಯಸಿ । ಚೈತನ್ಯಸ್ಫುರಣೇ ಹಿ ಸರ್ವಂ ಜಗದ್ದೃಶ್ಯತೇ । ತಥಾ ಚಾಮ್ನಾಯತೇ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ । ಕ. ಉ. ೫-೧೫ । ಇತಿ । ತರಣಿಃ । ತೄ ಪ್ಲವನತರಣಯೋಃ । ಅಸ್ಮಾದಂತರ್ಭಾವಿತಣ್ಯರ್ಥಾದರ್ತಿಸೃಭೃಧೃಧಮ್ಯಶ್ಯವಿತೃಭ್ಯೋಽನಿರಿತ್ಯನಿಪ್ರತ್ಯಯಃ । ಪ್ರತ್ಯಯಾದ್ಯುದಾತ್ತತ್ವಂ । ಜ್ಯೋತಿಃ ಕರೋತೀತಿ ಜ್ಯೋತಿಷ್ಕೃತ್ । ಕ್ವಿಪ್ಚೇತಿ ಕ್ವಿಪ್ । ನಿತ್ಯಂ ಸಮಾಸೇಽನುತ್ತರಪದಸ್ಥಸ್ಯೇತಿ ವಿಸರ್ಜನೀಯಸ್ಯ ಷತ್ವಂ । ಭಾಸಿ । ಭಾ ದೀಪ್ತೌ । ಅಂತರ್ಭಾವಿತಣ್ಯರ್ಥಾಲ್ಲಟ್ಯದಾದಿತ್ವಾಚ್ಛಪೋ ಲುಕ್ ॥

॥ ಪ್ರತಿಪದಾರ್ಥ ॥

ಸೂರ್ಯ—ಎಲೈ ಸೂರ್ಯದೇವನೇ (ನೀನು) । ತರಣಿಃ—(ಇತರರಿಂದ ಹೋಗಲಶಕ್ಯವಾದ ಮಹಾ ಮಾರ್ಗದಲ್ಲಿ) ಸಂಚರಿಸುವವನಾಗಿ ಅಥವಾ (ನಿನ್ನ ಭಕ್ತರನ್ನು ರೋಗದಿಂದ) ದಾಟಿಸುವವನಾಗಿ । ಅಸಿ—ಆಗಿದ್ದೀಯೆ. (ಹಾಗೆಯೇ) ವಿಶ್ವದರ್ಶತಃ—ಸಕಲ ಪ್ರಾಣಿಗಳಿಂದಲೂ ನೋಡಲ್ಪಡುವವನು ಅಥವಾ ಸಕಲ ಭೂತಗಳನ್ನೂ ಪ್ರಕಾಶಿಸುವಂತೆ ಮಾಡುವವನು । ಜ್ಯೋತಿಷ್ಕೃತ್—ಪ್ರಕಾಶವನ್ನು ಸೃಷ್ಟಿಸುವವನು ಅಥವಾ ಚಂದ್ರಾದಿಗಳನ್ನು ಜ್ಯೋತಿಃಸ್ವರೂಪರನ್ನಾಗಿ ಮಾಡುವವನು (ಆದ್ದರಿಂದಲೇ) । ವಿಶ್ವಂ—ಎಲ್ಲ ಕಡೆಯೂ ವ್ಯಾಪಿಸಿರುವ । ರೋಚನಂ—ಅಂತರಿಕ್ಷವನ್ನು । ಆ ಭಾಸಿ—ಸುತ್ತಲೂ ಪ್ರಕಾಶಿಸುವಂತೆ ಮಾಡುತ್ತೀಯೆ.

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ನೀನು ಇತರರಿಂದ ಹೋಗಲಶಕ್ಯವಾದ ಮಹಾಮಾರ್ಗದಲ್ಲಿ ಸಂಚರಿಸುತ್ತೀಯೇ. ಅಥವಾ ನಿನ್ನನ್ನು ಪೂಜಿಸುವ ಭಕ್ತರನ್ನು ರೋಗದಿಂದ ದಾಟಿಸುತ್ತೀಯೆ. ನೀನು ಸಕಲ ಪ್ರಾಣಿಗಳಿಗೂ ಗೋಚರನು. ಅಥವಾ ಸಕಲ ಭೂತಗಳನ್ನೂ ಪ್ರಕಾಶಿಸುವಂತೆ ಮಾಡುವವನು. ತೇಜಸ್ಸನ್ನು ಸೃಷ್ಟಿಸುವವನು. ಅಥವಾ ನೀರಿನಿಂದ ತುಂಬಿರುವ ಚಂದ್ರಬಿಂಬದಲ್ಲಿ ನಿನ್ನ ಕಿರಣಗಳನ್ನು ತುಂಬಿ ಅದನ್ನು ಜ್ಯೋತಿಃಸ್ವರೂಪದಲ್ಲಿರುವಂತೆ ಮಾಡುವವನು. ಎಲ್ಲ ಕಡೆಯೂ ವ್ಯಾಪಿಸಿರುವ ಅಂತರಿಕ್ಷವನ್ನು ಸುತ್ತಲೂ ಪ್ರಕಾಶಿಸುವಂತೆ ಮಾಡುವವನು.

ಅಥವಾ

॥ ಪ್ರತಿಪದಾರ್ಥ ॥

ಸೂರ್ಯ—(ಅಂತರ್ಯಾಮಿಯಾಗಿ) ಸಕಲವನ್ನೂ ಪ್ರೇರಿಸತಕ್ಕ ಎಲೈ ಪರಮಾತ್ಮನೇ (ನೀನು) । ತರಣಿಃ—(ಸಂಸಾರಸಾಗರದಿಂದ) ದಾಟಿಸುವವನಾಗಿ । ಅಸಿ—ಆಗಿದ್ದೀಯೆ. (ಆದ್ದರಿಂದಲೇ ನೀನು) । ವಿಶ್ವದರ್ಶತಃ—(ಮೋಕ್ಷವನ್ನಿಚ್ಛಿಸುವ) ಸಕಲರಿಂದಲೂ ಸಾಕ್ಷಾತ್ಕರಿಸಲ್ಪಡುವವನು । ಜ್ಯೋತಿಷ್ಕೃತ್—ಜ್ಯೋತಿಃಸ್ವರೂಪದಲ್ಲಿರುವ ಸೂರ್ಯಾದಿಗಳನ್ನು ಸೃಷ್ಟಿಸುವವನು (ಈ ರೀತಿ ಚಿದ್ರೂಪಿಯಾದ ನೀನು) । ವಿಶ್ವಂ—ಸಮಸ್ತ ಲೋಕವನ್ನೂ । ರೋಚನಂ—ಪ್ರಕಾಶಮಾನವಾಗಿ ಆಗುವಂತೆ । ಆ ಭಾಸಿ-ಸುತ್ತಲೂ ಬೆಳಗಿಸುತ್ತೀಯೆ.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಎಲ್ಲದರಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡು ಸಕಲವನ್ನೂ ಪ್ರೇರಿಸತಕ್ಕ ಎಲೈ ಪರಮಾತ್ಮನೇ, ನೀನು ಸಕಲರನ್ನೂ ಸಂಸಾರಸಾಗರದಿಂದ ದಾಟಿಸುವವನಾಗಿದ್ದೀಯೆ. ಆದ್ದರಿಂದಲೇ ಮೋಕ್ಷದಲ್ಲಿ ಅಪೇಕ್ಷೆಯುಳ್ಳವರೆಲ್ಲರೂ ನಿನ್ನನ್ನು ಸಾಕ್ಷಾತ್ಕಾರಮಾಡಲಿಚ್ಛಿಸುವರು. ನೀನು ಜ್ಯೋತಿಸ್ವರೂಪದಲ್ಲಿರುವ ಸೂರ್ಯಾದಿಗಳನ್ನು ಸೃಷ್ಟಿಸುತ್ತೀಯೆ. ಚಿದ್ರೂಪಿಯಾದ ನೀನು ಸಕಲ ಲೋಕವನ್ನೂ ಬೆಳಗಿಸುವಂತೆ ಸುತ್ತಲೂ ಪ್ರಕಾಶಿಸುತ್ತೀಯೆ.

## English Translation.

O Surya, you overtake all in speed ; you are visible to all ; you are the source of light ; you shine throughout the whole firmanent.

॥ ವಿಶೇಷ ವಿಷಯಗಳು ॥

ಈ ಋಕ್ಕಿನ ವಿಶೇಷ ವಿನಿಯೋಗವು ಚಾತುರ್ಮಾಸ್ಯವೆಂಬ ಯಾಗದಲ್ಲಿ ಸೂರ್ಯನನ್ನುದ್ದೇಶಿಸಿ ಹೋಮಮಾಡುವ ಸೌರ್ಯ ಏಕಕಪಾಲವೆಂಬ ಪುರೋಡಾಶಹೋಮಮಾಡುವಾಗ ಈ ತರಣಿರ್ವಿಶ್ವದರ್ಶತಃ ಎಂಬ ಋಕ್ಕನ್ನು ಯಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ ತರಣಿರ್ವಿಶ್ವ-ದರ್ಶತಶ್ಚಿತ್ರಂ ದೇವಾನಾಮುದಗಾದನೀಕಮಿತಿ ಯಾಜ್ಯಾನುವಾಕ್ಯಾ ಎಂಬ ಸೂತ್ರದಿಂದ ವಿಷ್ಪತವಾಗಿರುವುದು. (ಆ. ೨-೨೦) ಮತ್ತು ಅತಿಮೂರ್ತಿ ಎಂಬ ಒಂದು ದಿನದಲ್ಲಿ ಮಾಡುವ ಸೌರೇಷ್ಟಿಯು ಕೃಷ್ಣಪಕ್ಷದಲ್ಲಿ ಮಾಡಲ್ಪಡಬೇಕು. ಆಗ ಈ ಋಕ್ಕನ್ನು ಪುರೋನುವಾಕ್ಯಾ ಮಂತ್ರವನ್ನಾಗಿ ಹೇಳಬೇಕೆಂದು ಆಶ್ವಲಾಯನ ಶ್ರೌತಸೂತ್ರದ ಅತಿಮೂರ್ತಿನಾ ಎಂಬ ಖಂಡದಲ್ಲಿ ನವೋ ನವೋ ಭವತಿ ಜಾಯಮಾನಸ್ತರಣಿರ್ವಿಶ್ವದರ್ಶತಃ ಎಂಬ ಸೂತ್ರವು ವಿವರಿಸುವುದು.

ಈ ಋಕ್ಕಿಗೆ ಭಾಷ್ಯಕಾರರು ಎರಡು ವಿಧವಾದ ಅರ್ಥವನ್ನು ಹೇಳಿರುವರು. ಒಂದು—ಪ್ರತ್ಯಕ್ಷವಾಗಿ ಕಾಣುವ ಸೂರ್ಯನ ಪರವಾಗಿ; ಮತ್ತೊಂದು—ಸರ್ವವನ್ನೂ ಪ್ರೇರಿಸುವ ಪರಮಾತ್ಮನ ಪರವಾಗಿ.

ತರಣಿಃ—ಇತರರಿಂದ ಸುಲಭವಾಗಿ ಹೋಗುವುದಕ್ಕೆ ಅಶಕ್ಯವಾದ ಅಂತರಿಕ್ಷಮಾರ್ಗದಲ್ಲಿ ಸಂಚರಿಸುವವನು. ೨೨೦೨ ಯೋಜನಗಳ ದೂರವನ್ನು ನಿಮೇಷಮಾತ್ರದಲ್ಲಿ (ಒಂದು ರೆಪ್ಪೆ ಹೊಡೆಯುವಷ್ಟು ಕಾಲದಲ್ಲಿ) ಅತಿಕ್ರಮಿಸುವ ಶಕ್ತಿಯು ಸೂರ್ಯನಿಗಿರುವುದೆಂದು ಭಾಷ್ಯಕಾರರು ಒಂದು ವಾಕ್ಯವನ್ನು ಉದಾಹರಿಸಿರುವರು. ಸ್ಕಂದಸ್ವಾಮಿಯು ತರಣಿಶಬ್ದಕ್ಕೆ ಕ್ಷಿಪ್ರ—ಬೇಗನೆ, ಶೀಘ್ರವಾಗಿ ಎಂದರ್ಥವಿವರಣೆ ಮಾಡಿರುವರು ಅಥವಾ ರೋಗಗಳನ್ನು ನಿವಾರಣೆಮಾಡುವವನು ಎಂಬರ್ಥವನ್ನು ಹೇಳಬಹುದು. ಸೂರ್ಯನ ಪ್ರಕಾಶದಿಂದ (ಬಿಸಲಿನಿಂದ) ಅನೇಕ ರೋಗಗಳು ವಾಸಿಯಾಗುವುದಲ್ಲದೆ ಸಮಸ್ತ ಪ್ರಾಣಿಗಳ (ಮತ್ತು ಸಸ್ಯವರ್ಗದ) ಆರೋಗ್ಯಕ್ಕೂ ಬೆಳವಣಿಗೆಗೂ ಸೂರ್ಯನ ಬೆಳಕು ಅತ್ಯವಶ್ಯಕವೆಂದು ವೈದ್ಯಶಾಸ್ತ್ರಪ್ರವೀಣರ ಅಭಿಪ್ರಾಯವಿರುವುದು. ಲೋಕದಲ್ಲಿ ನಮ್ಮ ಅನುಭವವೂ ಅದೇ ರೀತಿ ಇರುವುದು. ಆದುದರಿಂದ ಸೂರ್ಯನು ರೋಗನಿವಾರಕನೆಂದು ಹೇಳುವುದು



CC-0. Jangamwadi Math Collection. Digitized by eGangotri

ಯುಕ್ತವಾಗಿಯೇ ಇದೆ. ಆರೋಗ್ಯಂ ಭಾಸ್ಕರಾದಿಚ್ಛೇತ್ ಎಂಬ ವಚನವಿರುವುದು. ಪರಮಾತ್ಮನ ಪರವಾದ ಅರ್ಥದಲ್ಲಿ ಜೀವರುಗಳನ್ನು ಸಂಸಾರಸಾಗರದಿಂದ ದಾಟಿಸುವವನೆಂಬ ಅರ್ಥವನ್ನು ಹೇಳಬಹುದು.

ವಿಶ್ವದರ್ಶತಃ—ಸಮಸ್ತ ಪ್ರಾಣಿಗಳಿಂದಲೂ ನೋಡಲ್ಪಡುವವನು ಎಂದರೆ ಸಮಸ್ತರೂ ಸೂರ್ಯನನ್ನು ನೋಡುವರು ಅಥವಾ ಸೂರ್ಯನು ಸಮಸ್ತ ಜಗತ್ತನ್ನೂ ನೋಡುವವನು ಎಂದರ್ಥವು. ಇದಲ್ಲದೆ ಸಾಧಾರಣವಾದ ಪಾಪಗಳ ಪರಿಹಾರಕ್ಕಾಗಿ ಪ್ರಾಯಶ್ಚಿತ್ತರೂಪವಾಗಿ ಸೂರ್ಯನನ್ನು ನೋಡುವುದರಿಂದ ದೋಷನಿವಾರಣೆ ಯಾಗುವುದೆಂದು ಪ್ರಸಿದ್ಧಿಯಾಗಿರುವುದು. ಕರ್ಮಾನುಷ್ಠಾನಕಾಲಗಳಲ್ಲಿ ಕಾಣದೆ ಮಾಡುವ ಲೋಪದೋಷಗಳ ನಿವಾರಣೆಗಾಗಿ "ಜ್ಯೋಕ್ ಚ ಸೂರ್ಯಂ ದೃಶೇ" ಎಂಬ ಮಂತ್ರಪಠನವು ರೂಢಿಯಲ್ಲಿರುವುದು. ಅಥವಾ ಸಮಸ್ತ ಜಗತ್ತನ್ನೂ ತನ್ನ ಪ್ರಕಾಶದಿಂದ ಬೆಳಗುವವನು ಎಂಬರ್ಥವನ್ನು ಹೇಳಬಹುದು. ಪರಮಾತ್ಮನ ಪರವಾಗಿ—ಸರ್ವೈರ್ಮುಮುಕ್ಷುಭಿರ್ದ್ರಷ್ಟವ್ಯಃ ಮೋಕ್ಷಾಭಿಲಾಷೆಯಿಂದಿರುವ ಸಮಸ್ತ ಜ್ಞಾನಿಗಳಿಂದಲೂ ನೋಡಲ್ಪ ಡುವ ಎಂದರೆ ಮೋಕ್ಷಾಭಿಲಾಷಿಗಳು ಪರಮಾತ್ಮಸಾಕ್ಷಾತ್ಕಾರವನ್ನು ಬಯಸುವರು ಎಂದಭಿಪ್ರಾಯವು.

ಜ್ಯೋತಿಷ್ಕೃತ್ ಜ್ಯೋತಿಷಃ ಪ್ರಕಾಶಸ್ಯ ಕರ್ತಾ । ಪ್ರಕಾಶಕ್ಕೆ ಕಾರಣನಾದವನು. ಸೂರ್ಯ ನಿಂದಲೇ ನಮಗೆ ಬೆಳಕು ದೊರಕುವುದು. ಸೂರ್ಯನೇ ಎಲ್ಲಾ ವಿಧವಾದ ಬೆಳಕು ಅಥವಾ ಪ್ರಕಾಶಕ್ಕೆ ಕಾರಣ ಭೂತನಾದವನು. ಸೂರ್ಯನಿಲ್ಲದಿದ್ದರೆ ನನಗೆ ಯಾವ ವಿಧವಾದ ಪ್ರಕಾಶವೂ ದೊರಕುವುದಿಲ್ಲ. ಅಥವಾ ಸೂರ್ಯನು ನಮಗೆ ಪ್ರತ್ಯಕ್ಷವಾಗಿ ಬೆಳಕನ್ನು ಕೊಡುವುದಲ್ಲದೆ ಚಂದ್ರಬಿಂಬಾದಿಗಳ ಮೇಲೆ ಸೂರ್ಯನ ಕಿರಣಗಳು ಬಿದ್ದು ಅವು ಪ್ರತಿಬಿಂಬಿತವಾಗಿ ಆ ಬೆಳಕು ನಮಗೆ ಪರೋಕ್ಷರೂಪದಿಂದಲೂ ದೊರಕುವುದರಿಂದ ಸೂರ್ಯನೇ ಎಲ್ಲಾ ವಿಧವಾದ ಬೆಳಕಿಗೂ ಮೂಲವು ಎಂದಭಿಪ್ರಾಯವು. ಪರಮಾತ್ಮನ ಪರವಾಗಿ ಸೂರ್ಯಾದಿಜ್ಯೋತೀರೂಪ ಮಂಡಲಗಳನ್ನು ಸೃಷ್ಟಿಸುವ ಎಂದರ್ಥವು. "ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತ (ತೈ. ಆ. ೩-೧೨-೬) ಎಂದು ಈ ವಿಷಯದಲ್ಲಿ ಶ್ರುತಿವಾಕ್ಯವಿರುವುದು.

ವಿಶ್ವಮಾ ಭಾಸಿ ರೋಚನಂ—ಇಲ್ಲಿ ರೋಚನಂ ಎಂದರೆ ಅಂತರಿಕ್ಷವು. ಸೂರ್ಯನು ವಿಸ್ತಾರವಾದ ಅಂತರಿಕ್ಷವೆಲ್ಲವನ್ನೂ ಬೆಳಗುವನು. ಪರಮಾತ್ಮನ ಪರವಾಗಿ ಚೈತನ್ಯರೂಪದಿಂದ ಸಮಸ್ತ ಚರಾಚರಾತ್ಮಕವಾದ ಪ್ರಪಂಚವನ್ನು ಬೆಳಗುವನು. (ಪ್ರೇರಿಸುವನು) ಎಂದು "ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂದು ಕಠೋಪನಿಷದ್ವಾಕ್ಯವಿರುವುದು.

॥ ವ್ಯಾಕರಣಪ್ರಕ್ರಿಯಾ ॥

ತರಣಿಃ—ತೄ ಪ್ಲವನತರಣಯೋಃ ಭ್ವಾದಿ. ಇಲ್ಲಿ ಅಂತರ್ಭಾವಿತಣ್ಯರ್ಥವನ್ನು ಸ್ವೀಕರಿಸಬೇಕು. ಣಿಚ್ ಇಲ್ಲದಿದ್ದರೂ ಣಿಜರ್ಥವು ಧಾತ್ವರ್ಥದಲ್ಲಿ ಅಡಕವಾಗಿದೆ ಎಂದು ತಾತ್ಪರ್ಯ. ಅರ್ತಿ ಸೃ ಭೃ ಧೃ ಧಮ್ಯಶ್ಯ- ವಿತೃಭ್ಯೋಽನಿಃ (ಉ. ಸೂ. ೨-೩೬೦) ಸೂತ್ರದಿಂದ ಅನಿ ಪ್ರತ್ಯಯವು ಬರುತ್ತದೆ. ತೃ+ಅನಿ ಎಂದಿರುವಾಗ ಆರ್ಧಧಾತುಕ ಪರದಲ್ಲಿರುವುದರಿಂದ ಧಾತುವಿಗೆ ಗುಣ ಬರುತ್ತದೆ. ರೇಫ ನಿಮಿತ್ತವಿರುವುದರಿಂದ ಅಟ್ ವ್ಯವಧಾನವಿರುವುದರಿಂದ ನಕಾರಕ್ಕೆ ಣತ್ವ ಬಂದರೆ ತರಣಿ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅನಿ ಎಂಬಲ್ಲಿ ಅಕಾರವು ಉದಾತ್ತವಾಗುತ್ತದೆ. ತರಣಿಃ ಎಂಬುದು ಮಧ್ಯೋದಾತ್ತವಾದ ಶಬ್ದವಾಗುತ್ತದೆ.



CC-0. Jangamwadi Math Collection. Digitized by eGangotri

ಜ್ಯೋತಿಷ್ಕೃತ್—ಜ್ಯೋತಿಃ ಕರೋತಿ ಇತಿ ಜೋತಿಷ್ಕೃತ್ ಪ್ರಕಾಶವನ್ನುಂಟುಮಾಡುವವನು ಎಂದರ್ಥ. ಕ್ವಿಪ್ ಚ (ಪಾ. ಸೂ. ೩-೨-೭೬) ಸೂತ್ರದಿಂದ ಕೃಞ್ ಧಾತುವಿಗೆ ಕ್ವಿಪ್ ಪ್ರತ್ಯಯ ಬರುತ್ತದೆ. (ಈ ಪ್ರತ್ಯಯವು ಉಪಪದವಿದ್ದರೂ ಇಲ್ಲದಿದ್ದರೂ ಛಂದಸ್ಸಿನಲ್ಲಿಯೂ ಲೋಕದಲ್ಲಿಯೂ ಬರುತ್ತದೆ) ಕ್ವಿಪಿನಲ್ಲಿ ಸರ್ವಲೋಪವಾಗುತ್ತದೆ. ಪಿತ್ತಾದುದರಿಂದ ಪಿತ್ತಾದ ಕೃತ್ ಪರದಲ್ಲಿರುವುದರಿಂದ ಕೃ ಎಂಬಲ್ಲಿರುವ ಹ್ರಸ್ವವಾದ ಋಕಾರಕ್ಕೆ ಹ್ರಸ್ವಸ್ಯ ಪಿತಿ ಕೃತ್ ತುಕ್ (ಪಾ.ಸೂ. ೬-೧-೭೧) ಸೂತ್ರದಿಂದ ತುಗಾಗಮ ಬರುತ್ತದೆ. ಕಿತ್ತಾದುದರಿಂದ ಅಂತಾವಯವವಾಗಿ ಬಂದರೆ ಕೃತ್ ಎಂದು ರೂಪವಾಗುತ್ತದೆ. ಜ್ಯೋತಿಃ ಕೃತ್ ಎಂದಿರುವಾಗ, ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ (ಪಾ. ಸೂ. ೮-೩-೪೫) ಉತ್ತರಪದದಲ್ಲಿ ಇಲ್ಲದಿರುವ ಇಸ್, ಉಸ್‌ಗಳ ವಿಸರ್ಜನೀಯಕ್ಕೆ (ವಿಸರ್ಗಕ್ಕೆ) ಸಮಾಸದಲ್ಲಿ ಕವರ್ಗ ಪವರ್ಗ ಪರದಲ್ಲಿರುವಾಗ ನಿತ್ಯವಾಗಿ ಷತ್ವಬರುತ್ತದೆ ಎಂಬುದರಿಂದ ವಿಸರ್ಗಕ್ಕೆ ಷಕಾರ ಬಂದರೆ ಜ್ಯೋತಿಷ್ಕೃತ್ ಎಂದು ರೂಪವಾಗುತ್ತದೆ.

ಭಾಸಿ—ಭಾ ದೀಪ್ತೌ ಅದಾದಿ. ಇಲ್ಲಿಯೂ ಣಿಜರ್ಥವನ್ನು ಧಾತ್ವರ್ಥದ ಮಧ್ಯೆ ಸೇರಿಸಿ ಹೇಳಬೇಕು. ಇನ್ನೊಂದನ್ನು ಪ್ರಕಾಶಪಡಿಸುವುದು ಎಂದು ಅರ್ಥವನ್ನು ಹೇಳಬೇಕು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. ವಿಕರಣ ಶಪ್ ಪ್ರತ್ಯಯ ಪ್ರಾಪ್ತವಾದರೆ ಅದಿಪ್ರಭೃತಿಭ್ಯಃ ಶಪಃ (ಪಾ. ಸೂ. ೨-೪-೭೨) ಸೂತ್ರದಿಂದ ಅದಾದಿಯಾದುದರಿಂದ ಲುಕ್ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ

॥ ಸಂಹಿತಾಪಾಠಃ ॥

ಪ್ರತ್ಯಙ್ ದೇವಾನಾಂ ವಿಶಃ ಪ್ರತ್ಯಙ್ಙುದೇಷಿ ಮಾನುಷಾನ್ ।
ಪ್ರತ್ಯಙ್ವಿಶ್ವಂ ಸ್ವರ್ದೃಶೇ ॥ ೫ ॥

ಪದಪಾಠಃ

ಪ್ರತ್ಯಙ್ । ದೇವಾನಾಂ । ವಿಶಃ । ಪ್ರತ್ಯಙ್ । ಉತ್ । ಏಷಿ । ಮಾನುಷಾನ್ ।
ಪ್ರತ್ಯಙ್ । ವಿಶ್ವಂ । ಸ್ವಃ । ದೃಶೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯ ತ್ವಂ ದೇವಾನಾಂ ವಿಶೋ ಮರುನ್ನಾಮಕಾನ್ದೇವಾನ್ । ಮರುತೋ ವೈ ದೇವಾನಾಂ ವಿಶಃ । ತೈ. ಸಂ. ೨-೨-೫-೭ । ಇತಿ ಶ್ರುತ್ಯಂತರಾತ್ । ತಾನ್ಮರುತ್ಸಂಜ್ಞಕಾನ್ದೇವಾನ್ ಪ್ರತ್ಯಙ್ಙುದೇಷಿ । ತಾನ್ಪ್ರತಿಗಚ್ಛನ್ನುದಯಂ ಪ್ರಾಪ್ನೋಷಿ । ತೇಷಾಮಭಿಮುಖಂ ಯಥಾ ಭವತಿ ತಥೇತ್ಯರ್ಥಃ । ತಥಾ ಮಾನುಷಾನ್ಮನುಷ್ಯಾನ್ ಪ್ರತ್ಯಙ್ಙುದೇಷಿ । ತೇಽಪಿ ಯಥಾಸ್ಮದಭಿಮುಖ ಏವ ಸೂರ್ಯ ಉದೇತೀತಿ ಮನ್ಯಂತೇ । ತಥಾ ವಿಶ್ವಂ ವ್ಯಾಪ್ತಂ ಸ್ವಃ ಸ್ವರ್ಲೋಕಂ ದೃಶೇ ದ್ರಷ್ಟುಂ ಪ್ರತ್ಯಙ್ಙುದೇಷಿ । ಯಥಾ ಸ್ವ-



CC-0. Jangamwadi Math Collection. Digitized by eGangotri

ಲೋಕವಾಸಿನೋ ಜನಾಃ ಸ್ವಸ್ವಾಭಿಮುಖ್ಯೇನ ಪಶ್ಯಂತಿ ತಥೋದೇಷೀತ್ಯರ್ಥಃ। ಏತದುಕ್ತಂ ಭವತಿ। ಲೋಕತ್ರಯವರ್ತಿನೋ ಜನಾಃ ಸರ್ವೇಽಪಿ ಸ್ವಸ್ವಾಭಿಮುಖ್ಯೇನ ಸೂರ್ಯಂ ಪಶ್ಯಂತೀತಿ। ತಥಾ ಚಾಮ್ನಾಯತೇ। ತಸ್ಮಾತ್ಸರ್ವ ಏವ ಮನ್ಯತೇ ಮಾಂ ಪ್ರತ್ಯುದಗಾದಿತಿ॥ ಪ್ರತ್ಯಙ್। ಪ್ರತ್ಯಂಚತೀತಿ ಪ್ರತ್ಯಙ್। ಅಂಚು ಗತಿಪೂಜನಯೋಃ। ಋತ್ವಿಗಿತ್ಯಾದಿನಾ ಕ್ವಿನ್। ಅನಿದಿತಾಮಿತಿ ನಲೋಪಃ। ಉಗಿದಚಾಮಿತಿ ನುಮ್। ಹಲ್ಙ್ಯಾಬ್ಭ್ಯೋ ದೀರ್ಘಾತ್ಸುತಿಸ್ಯಪೃಕ್ತಂ ಹಲ್। ಹಲ್ಙ್ಯಾದಿಸಂಯೋಗಾಂತಲೋಪೌ। ಸಂಯೋಗಾಂತಲೋಪಸ್ಯಾಸಿದ್ಧತ್ವಾದುಪಧಾದೀರ್ಘನಲೋಪಯೋರಭಾವಃ। ಕ್ವಿನ್ಪ್ರತ್ಯಯಸ್ಯ ಕುಃ। ಪಾ. ೮-೨-೬೨। ಇತಿ ಕುತ್ವಂ। ಅನಿಗಂತೋಽಂಚತೌ। ಪಾ. ೬-೨-೫೨। ಇತ್ಯನಿಗಂತ ಇತಿ ಪರ್ಯುದಾಸಾತ್ಪೂರ್ವಪದಪ್ರಕೃತಿಸ್ವರಾಭಾವೇ ಕೃದುತ್ತರಪದಪ್ರಕೃತಿಸ್ವರತ್ವಂ। ಏಷಿ। ಇಣ್ ಗತೌ। ಸಿಪ್ಯದಾದಿತ್ವಾಚ್ಛಪೋ ಲುಕ್। ಆದೇಶಪ್ರತ್ಯಯಯೋರಿತಿ ಷತ್ವಂ। ಸ್ವಃ। ಸುಪೂರ್ವಾದರ್ತೇರ್ವಿಚ್। ಗುಣೇ ಯಣಾದೇಶಃ। ನ್ಯಙ್ಸ್ವರೌ ಸ್ವರಿತೌ ಚೇತಿ ಸ್ವಂತತ್ವಂ। ದೃಶೇ। ದೃಶಿರ್ ಪ್ರೇಕ್ಷಣೇ ಇತ್ಯಸ್ಮಾದ್ದೃಶೇ ವಿಖ್ಯೇ ಚೇತಿ ತುಮರ್ಥೇ ನಿಪಾತಿತಃ॥ ೭॥

॥ ಪ್ರತಿಪದಾರ್ಥ ॥

ದೇವಾನಾಂ ವಿಶಃ—(ಎಲೈ ಸೂರ್ಯದೇವನೇ, ನೀನು) ದೇವಲೋಕದ ಪ್ರಜೆಗಳಾದ ಮರುದ್ದೇವತೆಗಳ। ಪ್ರತ್ಯಙ್—ಅಭಿಮುಖವಾಗಿ। ಉದೇಷಿ—ಉದಯಿಸುತ್ತೀಯೆ। ಮಾನುಷಾನ್ ಪ್ರತ್ಯಙ್—ಮನುಷ್ಯರಿಗೆ ಅಭಿಮುಖವಾಗಿ (ಉದಯಿಸುತ್ತೀಯೆ)। ವಿಶ್ವಂ—ಸರ್ವವ್ಯಾಪಕವಾದ। ಸ್ವಃ—ಸ್ವರ್ಲೋಕಕ್ಕೆ। ದೃಶೇ—ಗೋಚರವಾಗಲು। ಪ್ರತ್ಯಙ್—ಅಭಿಮುಖನಾಗಿ ಉದಯಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ನೀನು ದೇವಲೋಕದ ಪ್ರಜೆಗಳಾದ ಮರುದ್ದೇವತೆಗಳಿಗೂ, ಸಕಲಮಾನವರಿಗೂ, ಸರ್ವವ್ಯಾಪಕವಾದ ಸ್ವರ್ಲೋಕಕ್ಕೂ ಅಭಿಮುಖನಾಗಿ ಸಕಲರಿಗೂ ಗೋಚರನಾಗುವಂತೆ ಉದಯಿಸುತ್ತೀಯೆ.

English Translation.

You rise opposite to Maruts (or divine beings) opposite to the men and opposite to all the heaven that they may see.

॥ ವಿಶೇಷ ವಿಷಯಗಳು ॥

ಪ್ರತ್ಯಙ್—ಅಭಿಮುಖವಾಗಿ, ಎದುರಾಗಿ.

ದೇವಾನಾಂ ವಿಶಃ—ಈ ಶಬ್ದಗಳಿಗೆ ಮರುದ್ದೇವತೆಗಳೆಂದು ಭಾಷ್ಯಕಾರರು ಅರ್ಥವಿವರಣೆಮಾಡಿ ಈ ವಿಷಯದಲ್ಲಿ ತೈತ್ತಿರೀಯಸಂಹಿತೆಯ ಮರುತೋ ವೈ ದೇವಾನಾಂ ವಿಶಃ (ತೈ. ಸಂ. ೨-೨-೫-೭) ಎಂಬ ಶ್ರುತಿವಾಕ್ಯವನ್ನು ಉದಾಹರಿಸಿರುವರು.





CC-0. Jangamwadi Math Collection. Digitized by eGangotri

ಸ್ವಃ—ಹೇ ಆದಿತ್ಯ, ಎಲೈ ಆದಿತ್ಯನೇ. ಸ್ವರಾದಿತ್ಯೋ ಭವತಿ ಎಂದು ನಿರುಕ್ತವಚನವಿರುವುದು. (ನಿ. ೨-೧೪).

ಮುಖ್ಯಾಭಿಪ್ರಾಯವೇನೆಂದರೆ—ಸೂರ್ಯನು ಉದಯಿಸುವಾಗ ಭೂಲೋಕಸ್ವರ್ಗಲೋಕದ ಜನರೆಲ್ಲರೂ ಸೂರ್ಯನನ್ನು ನೋಡುವರು. ಸೂರ್ಯನು ಉದಯಿಸಿ ಭೂಮ್ಯಂತರಿಕ್ಷಸ್ವರ್ಗಲೋಕಗಳನ್ನು ಬೆಳಗುವನು.

ಈ ಋಕ್ಕಿಗೆ ಯಾಸ್ಕರ ನಿರುಕ್ತವು—ಪ್ರತ್ಯಙ್ಙಿದಂ ಸರ್ವಮುದೇಷಿ ಪ್ರತ್ಯಙ್ಙಿದಂ ಜ್ಯೋತಿರುಚ್ಯತೇ। ಪ್ರತ್ಯಙ್ಙಿದಂ ಸರ್ವಮಭಿವಿಪಶ್ಯಸೀತಿ ॥ (ನಿ. ೧೨-೨೪) ಎಂದಿರುವುದು ಇದಕ್ಕೆ ವ್ಯಾಖ್ಯಾನವು—ಪ್ರತ್ಯಙ್ ದೇವಾನಾಂ ವಿಶಸ್ತಾಃ ಕೃತ್ವಾ ಪುರಸ್ತಾತ್ತಾಸಾಂ ಉದೇಷಿ ಮಾನುಷಾನ್ ಚೈವಮೇವ ಪ್ರತ್ಯಙ್ ಕೃತ್ವಾ ತೇಷಾಮಪಿ ಪುರಸ್ತಾದೇವ ಉದೇಷಿ। ಕಿಂ ಬಹುನಾ ಹೇ ಸ್ವಃ ಆದಿತ್ಯ ಪ್ರತ್ಯಙ್ ಇದಂ ಸರ್ವಂ ಆತ್ಮನಃ ಕೃತ್ವಾ ಪುರಸ್ತಾದುದ್ಯನ್ ಸರ್ವಮಭಿವಿಪಶ್ಯಸಿ ॥ ಇದರ ಅರ್ಥವು ಭಾಷ್ಯಕಾರರ ಅರ್ಥವಿವರಣೆಯಂತೆಯೇ ಇರುವುದರಿಂದ ಇದನ್ನು ವಿಸ್ತರಿಸುವುದು ಅನಾವಶ್ಯಕವು.

॥ ವ್ಯಾಕರಣಪ್ರಕ್ರಿಯಾ ॥

ಪ್ರತ್ಯಙ್—ಪ್ರತಿ ಅಂಚತಿ ಇತಿ ಪ್ರತ್ಯಙ್. ಅಭಿಮುಖವಾಗಿ ಚಲಿಸುವವನು ಎಂದರ್ಥ. ಅಂಚು ಗತಿಪೂಜನಯೋಃ ಧಾತು. ಭ್ವಾದಿ. ಋತ್ವಿಕ್ ದಧೃಕ್ ಸ್ರಗ್ದಿಗುಷ್ಣಿಗಂಚುಯುಜಿಕ್ರುಂಚಾಂ ಚ (ಪಾ. ಸೂ. ೩-೨-೫೯) ಇವುಗಳಿಗೆ ಕ್ವಿಪ್ ಪ್ರತ್ಯಯ ಬರುತ್ತದೆ. ಕೆಲವು ಶಬ್ದಗಳಿಗೆ ಶಾಸ್ತ್ರಾಂತರದಿಂದ ಬಾರದ ಕಾರ್ಯಗಳನ್ನು ನಿಪಾತಮಾಡಿರುತ್ತಾರೆ. ಇದರಿಂದ ಅಂಚು ಧಾತುವಿಗೆ ಸುಬಂತವು ಉಪಪದವಾಗಿರುವಾಗ ಕ್ವಿನ್ ಪ್ರತ್ಯಯ ಬರುತ್ತದೆ. ಪ್ರತಿ ಎಂಬುದು ಸುಬಂತ. ಅವ್ಯಯಾದಾಪ್ ಸುಪಃ ಸೂತ್ರದಿಂದ ಇದರಮೇಲೆ ಬಂದಿರುವ ಸುಪ್ ಲುಕ್ ಆಗುತ್ತದೆ. ಕ್ವಿನ್ ಪ್ರತ್ಯಯದಲ್ಲಿ ಸರ್ವವೂ ಲೋಪವಾಗುತ್ತದೆ. ಕೃತ್ತದ್ಧಿತಸಮಾಸಾಶ್ಚ (೧-೨-೪೬) ಸೂತ್ರದಿಂದ ಅವಶಿಷ್ಟವಾದ ಪ್ರತ್ಯಙ್ ಎಂಬುದಕ್ಕೆ ಪ್ರಾತಿಪಾದಿಕಸಂಜ್ಞೆಯು ಬರುತ್ತದೆ. ಅನಿದಿತಾಂ ಹಲ ಉಪಧಾಯಾಃ—(ಪಾ ಸೂ. ೬-೪-೨೪) ಎಂಬುದರಿಂದ ಕಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಅಂಚುಧಾತುವಿನಲ್ಲಿರುವ ಉಪಧಾಭೂತವಾದ ನಕಾರಕ್ಕೆ ಲೋಪ ಬರುತ್ತದೆ. ಅಂಚು ಎಂದು ಧಾತುವು ಉಗಿತ್ತಾಗಿರುವುದರಿಂದ ಉಗಿದಚಾಂ ಸರ್ವನಾಮಸ್ಥಾನೇಽಧಾತೋಃ ಸೂತ್ರದಲ್ಲಿ ಅಧಾತೋಃ ಎಂದು ನಿಷೇಧ ಮಾಡಿದರೂ ಅಚಾಂ ಎಂದು ಲುಪ್ತನಕಾರವುಳ್ಳ ಅಂಚುಧಾತುವನ್ನು ಪುನಃ ಉಪಾದಾನಮಾಡಿರುವುದರಿಂದ ಸರ್ವನಾಮಸ್ಥಾನ ಸಂಜ್ಞೆಯುಳ್ಳ ಸು ಪ್ರಥಮಾವಿಭಕ್ತಿಯು ಪರದಲ್ಲಿರುವಾಗ ನುಮಾಗಮ ಬರುತ್ತದೆ. ಮಿತ್ತಾದುದರಿಂದ ಅಂತ್ಯಾಚಿನ ಪರದಲ್ಲಿ ಅವಯವವಾಗಿ ಬಂದರೆ ಪ್ರತ್ಯನ್ ಚ್+ಸ್ ಎಂದು ರೂಪವಾಗುತ್ತದೆ. ಹಲಿನ ಪರದಲ್ಲಿ ಸು ಬಂದಿರುವುದರಿಂದ ಹಲ್ಙ್ಯಾಭ್ಯೋದೀರ್ಘಾತ್—(ಪಾ. ಸೂ. ೬-೧-೬೮) ಸೂತ್ರದಿಂದ ಅದಕ್ಕೆ ಲೋಪ ಬರುತ್ತದೆ. ಸಂಯೋಗಾಂತ್ಯವಾದ ಪದವಾದುದರಿಂದ ಸಂಯೋಗಾಂತಸ್ಯ ಲೋಪಃ ಸೂತ್ರದಿಂದ ಕೊನೆಯ ಚಕಾರಕ್ಕೆ ಲೋಪ ಬರುತ್ತದೆ. ಪ್ರತ್ಯನ್ ಎಂದಿರುವಾಗ ಸಂಯೋಗಾಂತಲೋಪವು ಅಸಿದ್ಧವಾಗಿರುವುದರಿಂದ ಸರ್ವನಾಮಸ್ಥಾನೇಚಾಸಂಬುದ್ಧೌ ಸೂತ್ರದಿಂದ ನಾಂತಲಕ್ಷಣ ಉಪಧಾದೀರ್ಘವೂ ನಲೋಪಃ ಪ್ರಾತಿಪದಿಕಾಂತಸ್ಯ ಸೂತ್ರದಿಂದ ನ ಲೋಪವೂ ಬರುವುದಿಲ್ಲ. ಕ್ವಿನ್ ಪ್ರತ್ಯಯಸ್ಯ ಕುಃ (ಪಾ. ಸೂ. ೮-೨-೬೨) ಕ್ವಿನ್ ಪ್ರತ್ಯಯವು ಯಾವುದರಮೇಲೆ ವಿಹಿತವಾಗಿದೆಯೋ ಅದಕ್ಕೆ (ಅಂತ್ಯಕ್ಕೆ) ಕುತ್ವವು ಬರುತ್ತದೆ ಎಂಬುದರಿಂದ ಇಲ್ಲಿ ಸ್ಥಾನೇಂತರತಮಃ ಪರಿಭಾಷೆಯಿಂದ ಪ್ರತ್ಯನ್ ಎಂಬಲ್ಲಿರುವ ಅಂತ್ಯನಕಾರಕ್ಕೆ ಙಕಾರ



CC-0. Jangamwadi Math Collection. Digitized by eGangotri

ಬರುತ್ತದೆ. ಪ್ರತ್ಯಙ್ ಎಂದು ರೂಪವಾಗುತ್ತದೆ. ಅನಿಗಂತೇಽಂಚತೌ ವ ಪ್ರತ್ಯಯೇ (ಪಾ. ಸೂ. ೬-೨-೫೨) ವ ಪ್ರತ್ಯಯಾಂತವಾದ ಅಂಚುಧಾತುವು ಪರದಲ್ಲಿರುವಾಗ ಇಗಂತಭಿನ್ನವಾದ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತದೆ. ಕ್ವಿನ್ ಪ್ರತ್ಯಯದಲ್ಲಿ ವಕಾರಮಾತ್ರ ಉಳಿಯುವುದರಿಂದ ಬೇರೆ ವರ್ಣಗಳು ಇತ್ತಾಗುವುದರಿಂದ ವ ಪ್ರತ್ಯಯಾಂತವಾದ ಅಂಚುಧಾತುವು ಆಗುತ್ತದೆ. ಆದರೆ ಪ್ರತಿ ಎಂಬುದು ಇಗಂತವಾದುದರಿಂದ ತದ್ಭಿನ್ನವಾದ ಗತಿಗೆ ಪ್ರಕೃತಿಭಾವ ಹೇಳರುವುದರಿಂದ ಇಲ್ಲಿ ಗತಿ ಸ್ವರಕ್ಕೆ ಬಾಧಕವಾಗಿ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರ ಪ್ರಕೃತಿಸ್ವರವೇ ಬರುತ್ತದೆ. ಪ್ರತ್ಯಙ್ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

ಏಷಿ—ಇಣ್ ಗತೌ ಧಾತು. ಅದಾದಿ. ಲಟ್ ಮಧ್ಯಮಪುರುಷ ಏಕವಚನ ವಿವಕ್ಷಾಮಾಡಿದಾಗ ಸಿಪ್ ಪ್ರತ್ಯಯ ಬರುತ್ತದೆ. ಅದಿಪ್ರಭೃತಿಭ್ಯಃ ಶಪಃ ಸೂತ್ರದಿಂದ ವಿಕರವಾಗಿ ಬಂದ ಶಪ್ ಪ್ರತ್ಯಯಕ್ಕೆ ಲುಕ್ ಬರುತ್ತದೆ. ಇ+ಸಿ ಎಂದಿರುವಾಗ ಇಗಂತಲಕ್ಷಣಗುಣ ಬರುತ್ತದೆ. ಪ್ರತ್ಯಯ ಸಕಾರವಾದುದರಿಂದ ಆದೇಶ ಪ್ರತ್ಯಯಯೋಃ (ಪಾ. ಸೂ. ೮-೩-೫೯) ಸೂತ್ರದಿಂದ ಷತ್ವ ಬರುತ್ತದೆ. ಏಷಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸ್ವಃ—ಸು ಎಂಬುದು ಗತಿಸಂಜ್ಞೆಯುಳ್ಳ ಉಪಪದ. ಋ ಗತೌ ಧಾತು. ಭ್ವಾದಿ. ಅನ್ಯೇಭ್ಯೋಽಪಿ ದೃಶ್ಯಂತೇ (ಪಾ. ಸೂ. ೩-೨-೭೫) ಮನಿನ್ ಕ್ವನಿಪ್, ವನಿಪ್, ವಿಚ್ ಪ್ರತ್ಯಯಗಳು ಧಾತುಗಳ ಮೇಲೆ ಬರುತ್ತವೆ ಎಂಬುದರಿಂದ ಇಲ್ಲಿ ವಿಚ್ ಪ್ರತ್ಯಯ ಬರುತ್ತದೆ. ವಿಚ್ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ಋಕಾರದ ಸ್ಥಾನಕ್ಕೆ ಬರುವುದರಿಂದ ರ ಪರವಾಗಿ ಬರುತ್ತದೆ. ಸು+ಅರ್+ವಿಚ್ ಎಂದಿರುವಾಗ ಪ್ರತ್ಯಯಕ್ಕೆ ಸರ್ವಲೋಪ ಬರುತ್ತದೆ. ಸು+ಅರ್ ಎಂಬಲ್ಲಿ ಯಣಾದೇಶ ಬರುತ್ತದೆ. ಅವಸಾನನಿಮಿತ್ತಕ ವಿಸರ್ಗ ಬಂದರೆ ಸ್ವಃ ಎಂದಾಗುತ್ತದೆ. ನ್ಯಙ್ಸ್ವರೌ ಸ್ವರಿತೌ ಚ (ಫಿ. ಸೂ. ೭೪) ಎಂಬುದರಿಂದ ಸ್ವರಿತಸ್ವರ ಬರುತ್ತದೆ.

ದೃಶೆ—ದೃಶಿರ್ ಪ್ರೇಕ್ಷಣೇ ಧಾತು. ಭ್ವಾದಿ. ದೃಶೇ ವಿಖ್ಯೇ ಚ (ಪಾ. ಸೂ. ೩-೪-೧೧) ಸೂತ್ರದಿಂದ ಈ ಧಾತುವಿಗೆ ತುಮುನರ್ಥದಲ್ಲಿ ದೃಶೆ ಎಂದು ನಿಪಾತಮಾಡಿರುತ್ತಾರೆ. ದ್ರಷ್ಟುಂ ಎಂಬರ್ಥದಲ್ಲಿ ದೃಶೆ ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ಯೇನಾ ಪಾವಕ ಚಕ್ಷಸಾ ಭುರಣ್ಯನ್ತಂ ಜನಾ ಅನು ।
ತ್ವಂ ವರುಣ ಪಶ್ಯಸಿ ॥ ೬ ॥

॥ ಪದಪಾಠಃ ॥

ಯೇನ । ಪಾವಕ । ಚಕ್ಷಸಾ । ಭುರಣ್ಯನ್ತಂ । ಜನಾನ್ । ಅನು ।
ತ್ವಂ । ವರುಣ । ಪಶ್ಯಸಿ ॥ ೬ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಹೇ ಪಾವಕ ಸರ್ವಸ್ಯ ಶೋಧಕ ವರುಣಾನಿಷ್ಟನಿವಾರಕ ಸೂರ್ಯ ತ್ವಂ ಜನಾನ್ ಜಾತಾನ್ಪ್ರಾಣಿನೋ ಭುರಣ್ಯಂತಂ ಧಾರಯಂತಂ ಪೋಷಯಂತಂ ವೇಮಂ ಲೋಕಂ ಯೇನ ಚಕ್ಷುಸಾ ಪ್ರಕಾಶೇನಾನು ಪಶ್ಯಸಿ ಅನುಕ್ರಮೇಣ ಪ್ರಕಾಶಯಸಿ । ತಂ ಪ್ರಕಾಶಂ ಸ್ತುಮ ಇತಿ ಶೇಷಃ । ಯದ್ವಾ । ಉತ್ತರಸ್ಯಾಮೃಚಿ ಸಂಬಂಧಃ । ತೇನ ಚಕ್ಷುಸಾ ವ್ಯೇಷೀತಿ । ತಥಾ ಚ ಯಾಸ್ಕೇನೋಕ್ತಂ । ತತ್ತೇ ವಯಂ ಸ್ತುಮ ಇತಿ ವಾಕ್ಯಶೇಷೋಽಪಿ ವೋತ್ತರಸ್ಯಾ ಮನ್ವಯಸ್ತೇನ ವ್ಯೇಷಿ । ನಿ. ೧೨-೨೨ । ಇತಿ ॥ ಭುರಣ್ಯಂತಂ । ಭುರಣ ಧಾರಣಪೋಷಣಯೋಃ । ಕಂಡ್ವಾದಿತ್ವಾದ್ಯಕ್ । ತತಃ ಶತರಿ ಕರ್ತರಿ ಶಪ್ । ಅನುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಯಕ ಏವ ಸ್ವರಃ ಶಿಷ್ಯತೇ । ವರುಣ । ವೃಞ್ ವರಣೇ । ಅಸ್ಮಾದಂತರ್ಭಾವಿತಣ್ಯರ್ಥಾತ್ಕೃವೃವೃತ್ಯದಾರಿಭ್ಯ ಉನನ್ । ಉ. ೩-೫೩ । ಇತ್ಯುನನ್ಪ್ರತ್ಯಯಃ । ಅತ್ರ ವರುಣಶಬ್ದೇನಾದಿತ್ಯ ಏವೋಚ್ಯತೇ । ತಥಾ ಚಾನ್ಯತ್ರಾಮ್ನಾತಂ । ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಮಿತಿ । ಮಿತ್ರಶ್ಚ ವರುಣಶ್ಚ ಧಾತಾ ಚಾರ್ಯಮಾ ಚ । ತೈ. ಆ. ೧-೧೩-೩ । ಇತಿ ಚ ।

॥ ಪ್ರತಿಪದಾರ್ಥ ॥

ಪಾವಕ—(ಸಕಲವನ್ನೂ) ಶುದ್ಧಿಮಾಡತಕ್ಕವನಾಗಿಯೂ । ವರುಣ—ಅನಿಷ್ಟವನ್ನು ತಪ್ಪಿಸುವವನಾಗಿಯೂ ಇರುವ ಎಲೈ ಸೂರ್ಯನೇ, । ತ್ವಂ—ನೀನು । ಜನಾನ್—ಉತ್ಪನ್ನಗಳಾದ ಸಕಲ ಪ್ರಾಣಿಗಳನ್ನೂ ಭುರಣ್ಯಂತಂ—ಹೊತ್ತುಕೊಂಡಿರುವ ಅಥವಾ ಪೋಷಿಸುತ್ತಿರುವ ಈ ಲೋಕವನ್ನು । ಯೇನ ಚಕ್ಷುಸಾ—ಯಾವ ಪ್ರಕಾಶದಿಂದ । ಅನು ಪಶ್ಯಸಿ—ಅನುಕ್ರಮವಾಗಿ ನೋಡುತ್ತೀಯೋ (ಬೆಳಗುವಂತೆಮಾಡುತ್ತೀಯೋ ಆ ಪ್ರಕಾಶವನ್ನು ಸ್ತೋತ್ರಮಾಡುತ್ತೇವೆ).

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ನೀನು ಸಕಲವನ್ನೂ ಶುದ್ಧಿಮಾಡತಕ್ಕವನು. ಅನಿಷ್ಟದಿಂದ ತಪ್ಪಿಸಿ ಎಲ್ಲರಿಗೂ ಒಳ್ಳೆಯದನ್ನು ಮಾಡುವವನು. ಸಕಲ ಪ್ರಾಣಿಗಳನ್ನೂ ಹೊತ್ತುಕೊಂಡಿರುವ ಅಥವಾ ಪೋಷಿಸುವ ಈ ಲೋಕವನ್ನು ಯಾವ ಪ್ರಕಾಶದಿಂದ ಬೆಳಗುವಂತೆ ಮಾಡುತ್ತೀಯೋ ಆ ಪ್ರಕಾಶವನ್ನು ನಾವು ಸ್ತೋತ್ರಮಾಡುತ್ತೇವೆ.

## English Translation.

With that light with which you, the purifier and defender from evil, look upon this world full of living beings.

॥ ವಿಶೇಷ ವಿಷಯಗಳು ॥

ಭುರಣ್ಯಂತಂ—ಭುರಣ ಧಾರಣಪೋಷಣಯೋಃ । ಧಾರಯಂತಂ । ಪೋಷಯಂತಂ ವಾ ॥ ಜನರನ್ನು ಪೋಷಿಸುವ ಅಥವಾ ಧರಿಸುವ (ಕಾಪಾಡುವ).



CC-0. Jangamwadi Math Collection. Digitized by eGangotri

ವರುಣ—ವೃಞ್ ವರಣೇ। ಅನಿಷ್ಟನಿವಾರಕ। ಜನರ ಅನಿಷ್ಟಗಳನ್ನು (ಪಾಪಗಳನ್ನು) ನಿವಾರಿಸುವವನು. ವರುಣಶಬ್ದವು ಆದಿತ್ಯನನ್ನು ಸೂಚಿಸುವುದೆಂದು ಭಾಷ್ಯಕಾರರು ಹೇಳಿ ಇದಕ್ಕೆ ತಸ್ಯೈ ಮಿತ್ರಶ್ಚ ವರುಣಶ್ಚಾ ಜಾಯೇತಾಂ (ತೈ. ಬ್ರಾ. ೧-೧-೯-೨) ಮಿತ್ರಶ್ಚ ವರುಣಶ್ಚ। ಧಾತಾಚಾರ್ಯಮಾ ಚ (ತೈ. ಆ. ೧-೧೩-೩) ಎಂಬ ಎರಡು ಶ್ರುತಿವಾಕ್ಯಗಳ ಉದಾಹರಣೆಯನ್ನು ಕೊಟ್ಟಿರುವರು.

ಈ ಋಕ್ಕಿಗೆ ಯಾಸ್ಕರು ನಿರ್ವಚನವನ್ನು ಹೇಳಿರುವರು.—

> ಭುರಣ್ಯುರಿತಿ ಕ್ಷಿಪ್ರನಾಮ। ಭುರಣ್ಯುಃ ಶಕುನಿರ್ಭೂರಿಮಧ್ವಾನಂ ನಯತಿ ಸ್ವರ್ಗಸ್ಯ ಲೋಕಸ್ಯಾಪಿ ವೋಳ್ಹಾ ತತ್ಸಂಪಾತೀ ಭುರಣ್ಯುರನೇನ ಪಾವಕಖ್ಯಾತೇನ। ಭುರಣ್ಯಂತಂ ಜನಾನ್ ಅನು। ತ್ವಂ ವರುಣಪಶ್ಯಸಿ। ತತ್ತೇ ವಯಂ ಸ್ತುಮ ಇತಿ ವಾಕ್ಯಶೇಷಃ॥ (ನಿ. ೧೨-೨೨)

ಭುರಣ್ಯು ಶಬ್ದಕ್ಕೆ ಕ್ಷಿಪ್ರ-ಬೇಗನೆ, ಶೀಘ್ರವಾಗಿ ಎಂದರ್ಥವು. ವೇಗವಾಗಿ ಅಂತರಿಕ್ಷಮಾರ್ಗದಲ್ಲಿ ಸಂಚರಿಸುವವನು ಅಥವಾ ಸ್ವರ್ಗವನ್ನು ಧರಿಸಿರುವವನು ಅಥವಾ ಸ್ವರ್ಗವನ್ನು ಸಂರಕ್ಷಿಸತಕ್ಕವನು ಎಂದು ಭುರಣ್ಯಂತಂ ಎಂಬ ಶಬ್ದದ ಅರ್ಥವು ಎಲೈ ಸೂರ್ಯನೆ, ಇಂತಹ ನೀನು ಜನರನ್ನು ನೋಡುವೆ ಎಂದರೆ ಜನರು ನಿನ್ನನ್ನು ನೋಡುವರು. ಇಂತಹ ನಿನ್ನನ್ನು ಸ್ತೋತ್ರಮಾಡುವೆವು ಎಂದಭಿಪ್ರಾಯವು ಅಥವಾ ಮುಂದಿನ ಋಕ್ಕಿನಲ್ಲಿರುವ ವಿ ಏಷಿ ಎಂಬ ಕ್ರಿಯಾಪದದೊಡನೆ ಸಮನ್ವಯವನ್ನು ಬೇಕಾದರೆ ಮಾಡಬಹುದು. ಎಂದರೆ ಯೇನ ಚಕ್ಷಸಾ ವ್ಯೇಷಿ—ಯಾವ ಪ್ರಕಾಶದಿಂದ ಉದಯಿಸುತ್ತೀಯೋ ಅಂತಹ ನೀನು ಎಂದು ಉತ್ತರ ಋಕ್ಕಿಗೆ ಸಂಬಂಧವನ್ನು ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

ಚಕ್ಷಸಾ—ಚಕ್ಷಿಙ್ ವ್ಯಕ್ತಾಯಾಂ ವಾಚಿ ಧಾತು. ಚಕ್ಷೇರ್ಬಹುಲಂ ಶಿಚ್ಚ (ಉ. ಸೂ. ೪-೬೨೨) ಸೂತ್ರದಿಂದ ಅಸುನ್ ಪ್ರತ್ಯಯ ಬರುತ್ತದೆ. ಚಕ್ಷಸ್ ಎಂದು ಸಕಾರಾಂತ ಶಬ್ದನಾಗುತ್ತದೆ. ಶಿತ್ತಾಗುತ್ತದೆ ಎಂದುದರಿಂದ ಆರ್ಧಧಾತುಕಸಂಜ್ಞೆಯು ಬರುವುದಿಲ್ಲ. ಆದುದರಿಂದ ಚಕ್ಷಿಙಃ ಖ್ಯಾಞ್ ಸೂತ್ರದಿಂದ ಖ್ಯಾಞಾದೇಶವೂ ಬರುವುದಿಲ್ಲ. ತೃತೀಯಾ ಏಕವಚನದಲ್ಲಿ ಚಕ್ಷಸಾ ಎಂದು ರೂಪವಾಗುತ್ತದೆ.

ಭುರಣ್ಯಂತಂ—ಭುರಣ ಧಾರಣಪೋಷಣಯೋಃ ಧಾತು. ಕಂಡ್ವಾದಿ. ಲಟ್ ವಿವಕ್ಷಾಮಾಡಿದಾಗ ಶತೃಪ್ರತ್ಯಯ ಬರುತ್ತದೆ. ಭುರಣ್+ಅತ್ ಎಂದಿರುವಾಗ ಕಂಡ್ವಾದಿಭ್ಯೋ ಯಕ್ (ಪಾ. ಸೂ. ೩-೧-೨೭) ಸೂತ್ರದಿಂದ ಯಕ್ ಪ್ರತ್ಯಯ ಬರುತ್ತದೆ. ಕರ್ತ್ರರ್ಥಕ ಸಾರ್ವಧಾತುಕ ಪರದಲ್ಲಿರುವುದರಿಂದ, ಶಪ್ ವಿಕರಣ ಪ್ರತ್ಯಯ ಬರುತ್ತದೆ. ಯಕ್ ಸನಾದಿಯಲ್ಲಿ ಸೇರಿರುವುದರಿಂದ ಸನಾದ್ಯಂತಾ ಧಾತವಃ ಸೂತ್ರದಿಂದ ಯಗಂತಕ್ಕೆ ಧಾತುಸಂಜ್ಞೆಯು ಇರುತ್ತದೆ. ಭುರಣ್ಯ+ಅ+ಅತ್ ಎಂದಿರುವಾಗ ಲಕ್ಷ್ಯಭೇದದಿಂದ ಎರಡುಸಾರಿ ಅತೋಗುಣೇ ಸೂತ್ರದಿಂದ ಪರರೂಪ ಬರುತ್ತದೆ. ಭುರಣ್ಯತ್ ಎಂಬ ತಾಂತಶಬ್ದದಮೇಲೆ ದ್ವಿತೀಯೈಕವಚನ ವಿವಕ್ಷಾಮಾಡಿದಾಗ ಉಗಿತ್ತಾದುದರಿಂದ ನುಮಾಗಮ ಬಂದರೆ ಭುರಣ್ಯಂತಂ ಎಂದು ರೂಪವಾಗುತ್ತದೆ. ಇಲ್ಲಿ ಶಪ್ ಅನುದಾತ್ತವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವಾದ ಶತೃಪ್ರತ್ಯಯ ಬಂದುದರಿಂದ ತಾಸ್ಯನುದಾತ್ತೇತ್



CC-0. Jangamwadi Math Collection. Digitized by eGangotri

ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಯಣ್ಸ್ವರವೇ ಸತಿಶಿಷ್ಟವಾಗುವುದರಿಂದ ಯಣ್ಸ್ವರವೇ ಉಳಿಯು ತ್ತದೆ. ಯಕಾರೋತ್ತರಾಕಾರವು ಉದಾತ್ತವಾಗುತ್ತದೆ.

ವರುಣ—ವೃಞ್ ವರಣೆ. ಧಾತು. ಸ್ವಾದಿ. ಇಲ್ಲಿ ಅಂತರ್ಭಾವಿತಣ್ಯರ್ಥವನ್ನು ಸ್ವೀಕರಿಸಬೇಕು ಣಿಜರ್ಥವನ್ನು (ಪ್ರೇರಣೆಯನ್ನು) ಧಾತ್ವರ್ಥದ ನಡುವೆ ಸೇರಿಸಿ ಹೇಳಬೇಕು. ಕೃ ವೃ ದಾರಿಭ್ಯಃ ಉನನ್ (ಉ. ಸೂ. ೩-೫೩) ಸೂತ್ರದಿಂದ ಉನನ್ ಪ್ರತ್ಯಯ ಬರುತ್ತದೆ. ಸಾರ್ವಧಾತುಕಾರ್ಧಧಾತುಕಯೋಃ ಸೂತ್ರದಿಂದ ಉನನ್ ಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಗುಣ ಬರುತ್ತದೆ. ಋಕಾರದ ಸ್ಥಾನಕ್ಕೆ ಬರುವುದ ರಿಂದ ರ ಪರವಾಗಿ ಬಂದರೆ ವರುಣ ಎಂದು ರೂಪವಾಗುತ್ತದೆ. ರೇಫದ ಪರದಲ್ಲಿ ನಕಾರವಿರುವುದರಿಂದ ಅಟ್. ಕುಪ್ವಾಙ್ ಸೂತ್ರದಿಂದ ಣತ್ವ ಬರುತ್ತದೆ. ಸಂಬುದ್ಧಿಯಲ್ಲಿ ಹ್ರಸ್ವದ ಪರದಲ್ಲಿ ಸು ಬಂದಿರುವುದರಿಂದ ಏಙ್ಹ್ರಸ್ವಾ- ತ್ಸಂಬುದ್ಧೇಃ ಸೂತ್ರದಿಂದ ಸುವಿಗೆ ಲೋಪಬರುತ್ತದೆ. ಆಗ ವರುಣ ಎಂದು ರೂಪವಾಗುತ್ತದೆ. ಇದಕ್ಕೆ ಆಮಂತ್ರಿತಸಂಜ್ಞೆ ಇರುವುದರಿಂದ ಆಮಂತ್ರಿತಸ್ಯ ಚ ಎಂಬ ಎಂಟನೇ ಅಧ್ಯಾಯದ ಸೂತ್ರದಿಂದ ನಿಘಾತಸ್ವರ ಬರುತ್ತದೆ. ಇಲ್ಲಿ ವರುಣಶಬ್ದದಿಂದ ಸೂರ್ಯನೇ ಅಭಿಹಿತನಾಗುತ್ತಾನೆ. ಇದು ಬೇರೆಡೆಗಳಲ್ಲಿ ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ. ತಸ್ಯೈ ಮಿತ್ರಶ್ಚ ವರುಣಶ್ಚಾಜಾಯೇತಾಮ್ (ತೈ. ಬ್ರಾ. ೧-೧-೯-೨) ಇತಿ । ತೈತ್ತರೀಯ ಬ್ರಾಹ್ಮಣದ ಈ ಮಂತ್ರದಲ್ಲಿ ವರುಣಶಬ್ದದಿಂದ ಅಭಿಹಿತನಾದವನು ಸೂರ್ಯನೇ. ಹಾಗೆಯೇ ತೈತ್ತರೀಯ ಆರಣ್ಯಕದಲ್ಲಿಯೂ-ಮಿತ್ರಶ್ಚ ವರಣಶ್ಚ ಧಾತಾಚಾರ್ಯಮಾಚ (ತೈ. ಆ. ೧-೧೩-೩) ಎಂದು ಸೂರ್ಯನ ಪರ್ಯಾಯ ಪದಗಳಲ್ಲಿ ವರುಣಶಬ್ದವು ಪಠಿತವಾಗಿರುತ್ತದೆ.

॥ ಸಂಹಿತಾಪಾಠಃ ॥

ವಿ ದ್ಯಾಮೇಷಿ ರಜಸ್ಪೃಥ್ವಹಾ ಮಿಮಾನೋ ಅಕ್ತುಭಿಃ ।
ಪಶ್ಯಞ್ಜನ್ಮಾನಿ ಸೂರ್ಯ ॥ ೭ ॥

॥ ಪದಪಾಠಃ ॥

ವಿ । ದ್ಯಾಂ । ಏಷಿ । ರಜಃ । ಪೃಥು । ಅಹಾ । ಮಿಮಾನಃ । ಅಕ್ತುಽಭಿಃ ।
ಪಶ್ಯನ್ । ಜನ್ಮಾನಿ । ಸೂರ್ಯ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯ ತ್ವಂ ಪೃಥು ವಿಸ್ತೀರ್ಣಂ ರಜೋ ಲೋಕಂ । ಲೋಕಾ ರಜಾಂಸ್ಯುಚ್ಯಂತ ಇತಿ ಯಾಸ್ಕಃ । ನಿ. ೪-೧೯ । ಕಂ ಲೋಕಂ । ದ್ಯಾಮಂತರಿಕ್ಷಲೋಕಂ । ವ್ಯೇಷಿ । ವಿಶೇಷೇಣ ಗಚ್ಛಸಿ । ಕಿಂ ಕುರ್ವನ್ । ಅಹಾಹಾನ್ಯಕ್ತುಭೀ ರಾತ್ರಿಭಿಃ ಸಹ ಮಿಮಾನ ಉತ್ಪಾದಯನ್ । ಆದಿತ್ಯಗತ್ಯಧೀನತ್ವಾ ದಹೋರಾತ್ರವಿಭಾಗಸ್ಯ । ತಥಾ ಜನ್ಮಾನಿ ಜನನವಂತಿ ಭೂತಜಾತಾನಿ ಪಶ್ಯನ್ ಪ್ರಕಾಶಯನ್ । ರಜಸ್ಪೃ



CC-0. Jangamwadi Math Collection. Digitized by eGangotri

ಥ್ವಿತ್ಯೈತ್ರೆ ಚ್ಛಂದಸಿ ವಾಪ್ರಾಮ್ರೇಡಿತಯೋಃ । ಪಾ ೮-೩-೪೯ । ಇತಿ ವಿಸರ್ಜನೀಯಸ್ಯ ಸತ್ವಂ । ಅಹಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಮಿಮಾನಃ । ಮಾಙ್ ಮಾನೇ । ಜೌಹೋತ್ಯಾದಿಕಃ । ಶಾನಚಿ ಶ್ಲೌ ದ್ವಿರ್ಭಾವೇ ಭೃ ಞಾಮಿದಿತ್ಯಭ್ಯಾಸಸ್ಯೇತ್ವಂ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಅಭ್ಯಸ್ತಾನಾಮಾದಿರಿತ್ಯಭ್ಯಸ್ತಸ್ಯಾದ್ಯುದಾತ್ತತ್ವಂ । ಜನ್ಮಾನಿ । ಜನೀ ಪ್ರಾದುರ್ಭಾವೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಸೂರ್ಯ—ಎಲೈ ಸೂರ್ಯದೇವನೇ । (ತ್ವಂ—ನೀನು) ಅಹಾ—ಹಗಲುಗಳನ್ನು । ಅಕ್ತುಭಿಃ—ರಾತ್ರಿಗಳೊಂದಿಗೆ । ಮಿಮಾನಃ—ಸೃಷ್ಟಿಸುತ್ತಾ (ಹಾಗೆಯೇ) । ಜನ್ಮಾನಿ—ಉತ್ಪನ್ನವಾದ ಸಕಲ ಭೂತಗಳನ್ನೂ । ಪಶ್ಯನ್—ಬೆಳಗಿಸುತ್ತ । ಪೃಥು—ವಿಸ್ತಾರವಾದ । ದ್ಯಾಂ ರಜಃ—ಅಂತರಿಕ್ಷಲೋಕದಲ್ಲಿ । ವಿ ಏಷಿ—ಅಧಿಕವಾಗಿ ಸಂಚರಿಸುತ್ತೀಯೆ.

॥ ಭಾವಾರ್ಥ ॥

ಎಲೈ ಸೂರ್ಯದೇವನೇ ಹಗಲು ರಾತ್ರಿಗಳೆಲ್ಲವೂ ನಿನ್ನ ಗತ್ಯಧೀನಗಳು. ನಿನ್ನ ಸಂಚಾರಗಳಿಂದ ಅವುಗಳನ್ನು ಅನುಕ್ರಮವಾಗಿ ಉಂಟುಮಾಡುತ್ತ ಹಾಗೆಯೇ ಉತ್ಪನ್ನಗಳಾದ ಸಕಲ ಭೂತಗಳನ್ನೂ ಬೆಳಗಿಸುತ್ತ (ನೋಡುತ್ತಾ) ನೀನು ವಿಸ್ತಾರವಾದ ಅಂತರಿಕ್ಷಲೋಕದಲ್ಲಿ ಸರ್ವದಾ ಸಂಚರಿಸುತ್ತಿದ್ದೀಯೆ.

## English Translation.

You travel through the vast space of the firmament, measuring days and nights and observing all creatures.

॥ ವಿಶೇಷ ವಿಷಯಗಳು ॥

ದ್ಯಾಂ ರಜಃ—ವಿಸ್ತಾರವಾದ ಅಂತರಿಕ್ಷಲೋಕವನ್ನು ರಜಃ ಎಂದರೆ ಲೋಕವು. ಲೋಕಾ ರಜಾಂಸ್ಯುಚ್ಯಂತೆ (ನಿ. ೪-೧೯) ಎಂದು ನಿರುಕ್ತ ವಚನವಿರುವುದು.

ಮಿಮಾನಃ—ಮಾಙ್ ಮಾನೇ । ಅಳತೆಮಾಡುತ್ತಾ ಎಂದರೆ ಅಹೋರಾತ್ರೆಗಳನ್ನು ಸಮನಾಗಿ ವಿಂಗಡಿಸುತ್ತಾ ಎಂದರ್ಥವು. ಅಹೋರಾತ್ರೆಗಳ ಪ್ರಮಾಣವು ಸಮನಾಗಿರುವುದರಿಂದ ಮಾಙ್‌ಧಾತುವನ್ನು ಇಲ್ಲಿ ಉಪಯೋಗಿಸಿರುವುದು.

ಅಹಾ ಅಕ್ತುಭಿಃ—ಹಗಲುಗಳನ್ನು ರಾತ್ರೆಗಳೊಡನೆ ಸಮನಾಗಿ ಮಾಡುತ್ತಾ ಅಹೋರಾತ್ರೆಗಳ ಕಾಲಪ್ರಮಾಣವನ್ನು ಒಂದೇ ಸಮನಾಗಿರುವಂತೆ ಮಾಡುತ್ತಾ ಎಂದಭಿಪ್ರಾಯವು.

ಜನ್ಮಾನಿ—ಜನನವಂತಿ ಭೂತಜಾತಾನಿ—ಹುಟ್ಟಿದ ಅಥವಾ ಹುಟ್ಟುವ ಸಕಲ ಪ್ರಾಣಿಗಳನ್ನು; ಸೂರ್ಯನ ಕಣ್ಣಿಗೆ ಬೀಳದಿರುವ ಪ್ರಾಣಿಗಳು ಯಾವವೂ ಇರುವುದಿಲ್ಲ. ಆದುದರಿಂದ ಸೂರ್ಯನು ಎಲ್ಲವನ್ನು ನೋಡುವವನು ಕರ್ಮಸಾಕ್ಷೀ ಎಂದು ಹೇಳುವ ರೂಢಿಯಿರುವುದು.



CC-0. Jangamwadi Math Collection. Digitized by eGangotri

ಈ ಋಕ್ಕಿಗೆ ಯಾಸ್ಕರ ನಿರುಕ್ತವು—"ವ್ಯೇಷಿ ದ್ಯಾಂ ರಜಶ್ಚ ಪೃಥು ಮಹಾಂತಂ ಲೋಕಮಹಾನಿ ಚ ವಿಮಾನೋ ಅಕ್ತುಭೀ ರಾತ್ರಿಭಿಃ ಸಹ ಪಶ್ಯನ್ ಜನ್ಮಾನಿ ಜಾತಾನಿ ಸೂರ್ಯ" ಎಂದಿರುವುದು. ಭಾಷ್ಯಕಾರರ ಅರ್ಥವಿವರಣೆಗೂ ಯಾಸ್ಕರ ನಿರ್ವಚನಕ್ಕೂ ಏನೂ ವ್ಯತ್ಯಾಸವಿಲ್ಲ.

॥ ವ್ಯಾಕರಣಪ್ರಕ್ರಿಯಾ ॥

ರಜಸ್ಪೃಥು—ರಜಃ ಪೃಥು ಎಂದಿರುವಾಗ ಛಂದಸಿ ವಾಪ್ರೇನ್ರೇಡಿತಯೋಃ (ಪಾ. ಸೂ. ೮-೩-೪೯) ಪ್ರ ಶಬ್ದವನ್ನೂ ಆಮ್ರೇಡಿತವನ್ನೂ ಬಿಟ್ಟು ಕವರ್ಗ ಪವರ್ಗಗಳು ಪರದಲ್ಲಿರುವಾಗ ಛಂದಸ್ಸಿನಲ್ಲಿ ವಿಸರ್ಗಕ್ಕೆ ಸತ್ವವು ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ಪಕಾರ ಪರದಲ್ಲಿರುವುದರಿಂದ ಉಪಧ್ಮಾನೀಯವನ್ನು ಬಾಧಿಸಿ ವಿಸರ್ಗಕ್ಕೆ ಸಕಾರ ಬರುತ್ತದೆ. ರಜಸ್ಪೃಥು ಎಂದು ರೂಪವಾಗುತ್ತದೆ.

ಅಹಾ—ಅಹನ್ ಶಬ್ದದಮೇಲೆ ದ್ವಿತೀಯಾ ಬಹುವಚನ ಶಸ್ ಪರದಲ್ಲಿರುವಾಗ ಶಸಿಗೆ ನಪುಂಸಕ ಲಿಂಗದಲ್ಲಿ ಶಶ್ಯಸೋಃ ಶಿಃ ಎಂಬುದರಿಂದ ಶಿ ಆದೇಶವು ಬರುತ್ತದೆ. ಅದಕ್ಕೆ ಸರ್ವನಾಮಸ್ಥಾನ ಸಂಜ್ಞೆ ಇರುವುದರಿಂದ ಅದು ಪರದಲ್ಲಿರುವಾಗ ನಾಂತಾಂಗದ ಉಪಧೆಗೆ ದೀರ್ಘ ಬರುತ್ತದೆ. ಅಹಾನ್+ಇ ಎಂದಿರುವಾಗ ಶೇಶ್ಛಂದಸಿ ಬಹುಲಂ (ಪಾ. ಸೂ. ೬-೧-೭೦) ಸೂತ್ರದಿಂದ ವಿಭಕ್ತಿಯ ಶಿಗೆ ಲೋಪಬರುತ್ತದೆ. ನಲೋಪಃ ಪ್ರಾತಿಪದಿಕಾಂತಸ್ಯ ಸೂತ್ರದಿಂದ ನ ಲೋಪಬಂದರೆ ಅಹಾ ಎಂದು ರೂಪವಾಗುತ್ತದೆ.

ಮಿಮಾನಃ—ಮಾಙ್ ಮಾನೆ ಧಾತು. ಜುಹೋತ್ಯಾದಿ. ಙಿತ್ತಾದುದರಿಂದ ಆತ್ಮನೇ ಪದಿ. ಲಟಃ ಶತೃಶಾನಚಾ ಸೂತ್ರದಿಂದ ಶಾನಚ್ ಪ್ರತ್ಯಯ ಬರುತ್ತದೆ. ಶಾನಚ್ ಪರದಲ್ಲಿರುವಾಗ ಶ್ಲು ವಿಕರಣ ಬರುತ್ತದೆ. ಶ್ಲೌ ಸೂತ್ರದಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಮಾಮಾ+ಅನ ಎಂದಿರುವಾಗ ಭೃಞಾಮಿತ್ (ಪಾ. ಸೂ. ೭-೪-೭೬) ಭೃಞ್ ಮಾಙ್ ಓಹಾಙ್ ಈ ಮೂರು ಧಾತುಗಳ ಅಭ್ಯಾಸಕ್ಕೆ ಶ್ಲು ಪರದಲ್ಲಿರುವಾಗ ಇತ್ವವು ಬರುತ್ತದೆ ಎಂಬುದರಿಂದ ಅಭ್ಯಾಸಕ್ಕೆ ಇಕಾರ ಬರುತ್ತದೆ. ಮಿಮಾ+ಅನ ಎಂದಿರುವಾಗ ಶ್ನಾಭ್ಯಸ್ತಯೋರಾತಃ (ಪಾ. ಸೂ. ೬-೪-೧೧೨) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ಮಿಮಾನ ಎಂದು ರೂಪವಾಗುತ್ತದೆ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಇಟ್‌ಭಿನ್ನ ಅಜಾದಿ ಲಸಾರ್ವಧಾತುಕವು ಪರದಲ್ಲಿರುವಾಗ ಅಭ್ಯಸ್ತಗಳ ಆದಿಯು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಶಾನಚ್ ಲಸಾರ್ವಧಾತುಕವಾದುದರಿಂದ ಧಾತೋಃ ಸ್ವರವನ್ನು ಬಾಧಿಸಿ ಆದ್ಯುದಾತ್ತವಾಗುತ್ತದೆ. ಮಿಮಾನಃ ಎಂಬುದು ಆದ್ಯುದಾತ್ತವಾದ ಪದ.

ಜನ್ಮಾನಿ—ಜನೀ ಪ್ರಾದುರ್ಭಾವೇ ಧಾತು. ದಿವಾದಿ. ಅನ್ಯೇಭ್ಯೋಽಪಿ ದೃಶ್ಯಂತೇ (ಪಾ ಸೂ. ೩-೨-೭೫) ಸೂತ್ರದಿಂದ ಈ ಧಾತುವಿಗೆ ಮನಿನ್ ಪ್ರತ್ಯಯ ಬರುತ್ತದೆ. ಜನ್ಮನ್ ಎಂದು ನಕಾರಾಂತ ಶಬ್ದವಾಗುತ್ತದೆ. ಇದಕ್ಕೆ ದ್ವಿತೀಯಾ ಬಹುವಚನ ಶಸ್ ಪರದಲ್ಲಿರುವಾಗ ಶಸಿಗೆ ನಪುಂಸಕವಲ್ಲಿ ಶಿ ಆದೇಶ ಬರುತ್ತದೆ. ಸರ್ವನಾಮಸ್ಥಾನಸಂಜ್ಞೆ ಇರುವುದರಿಂದ ನಾಂತವಾದ ಅಂಗದ ಉಪಧೆಗೆ ದೀರ್ಘ ಬರುತ್ತದೆ. ಜನ್ಮಾನಿ ಎಂದು ರೂಪವಾಗುತ್ತದೆ. ಮನಿನ್ ಪ್ರತ್ಯಯವು ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರದಿಂದ ಆದ್ಯುದಾತ್ತಸ್ವರವು ಬರುತ್ತದೆ. ಜನ್ಮಾನಿ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಸಪ್ತ ತ್ವಾ ಹರಿತೋ ರಥೇ ವಹನ್ತಿ ದೇವ ಸೂರ್ಯ।

ಶೋಚಿಷ್ಕೇಶಂ ವಿಚಕ್ಷಣ ॥ ೮ ॥

॥ ಪದಪಾಠಃ ॥

ಸಪ್ತ । ತ್ವಾ । ಹರಿತಃ । ರಥೇ । ವಹನ್ತಿ । ದೇವ । ಸೂರ್ಯ ।

ಶೋಚಿಃಽಕೇಶಂ । ವಿಽಚಕ್ಷಣ ॥ ೮ ॥

॥ ಸಾಯಣಭಾಷ್ಯಂ ॥

ಹೇ ಸೂರ್ಯ ದೇವ ದ್ಯೋತಮಾನ ವಿಚಕ್ಷಣ ಸರ್ವಸ್ಯ ಪ್ರಕಾಶಯಿತಃ ಸಪ್ತ ಸಪ್ತಸಂಖ್ಯಾಕಾ ಹರಿತೋಽಶ್ವಾ ರಸಹರಣಶೀಲಾ ರಶ್ಮಯೋ ವಾ ತ್ವಾ ತ್ವಾಂ ವಹಂತಿ । ಪ್ರಾಪಯಂತಿ । ಕೀದೃಶಂ । ರಥೇಽವಸ್ಥಿತಮಿತಿ ಶೇಷಃ । ತಥಾ ಶೋಚಿಷ್ಕೇಶಂ । ಶೋಚೀಂಷಿ ತೇಜಾಂಸ್ಯೇವ ಯಸ್ಮಿನ್ಕೇಶಾ ಇವ ದೃಶ್ಯಂತೇ ಸ ತಥೋಕ್ತಃ । ತಂ । ಹರಿತ ಇತ್ಯಾದಿತ್ಯಾಶ್ವಾನಾಂ ಸಂಜ್ಞಾ. ಹರಿತ ಆದಿತ್ಯಸ್ಯೇತಿ ನಿಘಂಟಾವುಕ್ತತ್ವಾತ್ ॥ ಶೋಚಿಷ್ಕೇಶಂ । ಶುಚ ದೀಪ್ತೌ । ಅರ್ಚಿಶುಚಿಹುಸೃಪಿಛಾದಿಛರ್ದಿಭ್ಯ ಇಸಿರಿತೀಸಿಪ್ರತ್ಯಯಾಂತೋಽಂತೋದಾತ್ತಃ । ಸ ಏವ ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ಶಿಷ್ಯತೇ । ನಿತ್ಯಂ ಸಮಾಸೇಽನುತ್ತರಪದಸ್ಥಸ್ಯೇತಿ ವಿಸರ್ಜನೀಯಸ್ಯ ಷತ್ವಂ ॥

॥ ಪ್ರತಿಪದಾರ್ಥ ॥

ದೇವ—ಪ್ರಕಾಶಮಾನನಾಗಿಯೂ । ವಿಚಕ್ಷಣ—(ಸಮಸ್ತವನ್ನೂ) ಪ್ರಕಾಶಿಸುವಂತೆ ಮಾಡುವವನಾಗಿಯೂ ಇರುವ । ಸೂರ್ಯ—ಎಲೈ ಸೂರ್ಯದೇವನೇ, । ರಥೇ—ರಥದಲ್ಲಿ ಕುಳಿತಿರುವವನೂ (ಮತ್ತು) । ಶೋಚಿಷ್ಕೇಶಂ—ಕೂದಲುಗಳಂತಿರುವ ತೇಜಸ್ಸಿನಿಂದ ಕೂಡಿದವನೂ ಆದ । ತ್ವಾ—ನಿನ್ನನ್ನು । ಸಪ್ತ ಹರಿತಃ—ಹರಿತ್ತುಗಳೆಂಬ ಏಳು ಕುದುರೆಗಳು ಅಥವಾ ಜಲವನ್ನು ಹೀರತಕ್ಕ ಕಿರಣಗಳು । ವಹಂತಿ—ಹೊರುತ್ತವೆ.

॥ ಭಾವಾರ್ಥ ॥

ಎಲೈ ಸೂರ್ಯದೇವನೇ, ನೀನು ಸ್ವಯಂಪ್ರಕಾಶಕನು ಮತ್ತು ಸಮಸ್ತವನ್ನೂ ಪ್ರಕಾಶಿಸುವಂತೆ ಮಾಡುವವನು. ನಿನ್ನತೇಜಸ್ಸೇ ನಿನಗೆ ತಲೆಯ ಕೂದಲುಗಳಂತೆ ಇರುತ್ತದೆ. ರಥದಲ್ಲಿ ಕುಳಿತಿರುವ ನಿನ್ನನ್ನು ಹರಿತ್ತುಗಳೆಂಬ ಏಳು ಕುದುರೆಗಳು ಅಥವಾ ರಸವನ್ನು ಹೀರತಕ್ಕ ಕಿರಣಗಳು ಹೊತ್ತುಕೊಂಡು ಸಂಚರಿಸುತ್ತವೆ.





CC-0. Jangamwadi Math Collection. Digitized by eGangotri

## English Translation.

Divine and light-spreading Surya, your seven horses (mares) bear you bright-haired in your car.

|| ವಿಶೇಷ ವಿಷಯಗಳು ||

**ಸಪ್ತ ಹರಿತಃ**—ಸೂರ್ಯನ ರಥಕ್ಕೆ ಏಳು ಕುದುರೆಗಳಿರುವವು. ಈ ಕುದುರೆಗಳು ಹರಿದ್ವರ್ಣಗಳೆಂದು ಪ್ರಸಿದ್ಧವು. **ಹರಿತ ಆದಿತ್ಯಸ್ಯ** (ನಿ. ೨-೨೮) ಎಂಬ ಯಾಸ್ಕರ ವಚನದಂತೆ ಸೂರ್ಯನ ಕುದುರೆಗಳಿಗೆ ಹರಿತಃ ಎಂದು ಹೆಸರು. ಹರಿತಃ ಎಂದರೆ ಕಿರಣಗಳೂ ಎಂದರ್ಥವಿರುವುದರಿಂದ ಸೂರ್ಯನ ಕಿರಣಗಳೇ ಸೂರ್ಯನ ಕುದುರೆಗಳೆಂದು ಹೇಳಲ್ಪಡುವವು. ವಾರದ ಏಳು ದಿನಗಳೇ ಏಳು ಕುದುರೆಗಳೆಂದು ಕೆಲವರು ಹೇಳುವರು.

**ಶೋಚಿಷ್ಕೇಶಂ—ಶುಚ ದೀಪ್ತೌ | ಶೋಚೀಂಷಿ ತೇಜಾಂಸ್ಯೇವ ಯಸ್ಮಿನ್ಕೇಶಾ ಇವ ದೃಶ್ಯಂತೆ ಸ ಶೋಚಿಷ್ಕೇಶಃ |** ಪ್ರಕಾಶಮಾನವಾದ ಸೂರ್ಯಕಿರಣಗಳು ಕೂದಲಿನಂತೆ ಕಾಣುವುದರಿಂದ ಸೂರ್ಯನನ್ನು ಪ್ರಕಾಶಮಾನವಾದ ಕಿರಣಗಳುಳ್ಳವನು ಎಂಬರ್ಥವನ್ನು ಹೇಳುವುದಕ್ಕಾಗಿ ಶೋಚಿಷ್ಕೇಶಂ ಪ್ರಕಾಶಮಾನವಾದ ಕೂದಲುಗಳಿಂದ ಯುಕ್ತನಾದವನು ಎಂದು ಋಷಿಯು ವರ್ಣಿಸಿರುವನು.

|| ವ್ಯಾಕರಣಪ್ರಕ್ರಿಯಾ ||

**ವಹಂತಿ**—ವಹ ಪ್ರಾಪಣೆ ಧಾತು. ಭ್ವಾದಿ. ಪ್ರಥಮಪುರುಷ ಬಹುವಚನದಲ್ಲಿ ವಹಂತಿ ಎಂದು ರೂಪವಾಗುತ್ತದೆ. **ತಾಸ್ಯನುದಾತ್ತೇತ್** ಸೂತ್ರದಿಂದ ತಿಙ್ ಪ್ರತ್ಯಯವು ಅನುದಾತ್ತವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ.

**ಶೋಚಿಷ್ಕೇಶಮ್**—ಶುಚ ದೀಪ್ತೌ ಧಾತು. ಭ್ವಾದಿ. **ಅರ್ಚಿಶುಚಿಹೃಸೃಪಿಛಾದಿಛರ್ದಿಭ್ಯ ಇಸಿಃ** (ಉ. ಸೂ. ೨-೧೦೮) ಎಂಬುದರಿಂದ ಈ ಧಾತುವಿಗೆ ಇಸಿ ಪ್ರತ್ಯಯ ಬರುತ್ತದೆ. ಶುಚ್+ಇಸ್ ಎಂದಿರುವಾಗ ಧಾತುವಿಗೆ ಉಪಧಾಗುಣ ಬರುತ್ತದೆ. ಶೋಚಿಸ್ ಎಂಬಲ್ಲಿ ರುತ್ವವಿಸರ್ಗಗಳು ಬಂದರೆ ಶೋಚಿಃ ಎಂದು ರೂಪವಾಗುತ್ತದೆ. ಶೋಚಿಃ ಎಂಬುದು ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. **ಶೋಚೀಂಷಿ ಕೇಶಾಃ ಯಸ್ಯ ಸಃ** ಎಂದು ಬಹುವ್ರೀಹಿ ಸಮಾಸಮಾಡಿದಾಗ **ನಿತ್ಯಂ ಸಮಾಸೇಽನುತ್ತರಪದಸ್ಥಸ್ಯ** (ಪಾ. ಸೂ. ೮-೩-೪೫) ಸೂತ್ರದಿಂದ ಶೋಚಿಃ ಎಂಬಲ್ಲಿರುವ ಪೂರ್ವಪದದ ಇಸ್ ಸಂಬಂಧಿ ವಿಸರ್ಗಕ್ಕೆ ನಿತ್ಯವಾಗಿ ಷತ್ವ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಶೋಚಿಷ್ಕೇಶಂ ಎಂದು ರೂಪವಾಗುತ್ತದೆ. ಬಹುವ್ರೀಹಿ ಸಮಾಸವಾದುದರಿಂದ **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** (ಪಾ. ಸೂ. ೬-೨-೧) ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರವು ಸಮಾಸಸ್ವರಕ್ಕೆ ಅಪವಾದವಾಗಿ ಬರುತ್ತದೆ. ಶೋಚಿಷ್ಕೇಶಂ ಎಂಬಲ್ಲಿ ಚಕಾರೋತ್ತರ ಇಕಾರವು ಉದಾತ್ತವಾಗುತ್ತದೆ. ಆದರ ಮುಂದಿರುವ ಅನುದಾತ್ತವು ಸ್ವರಿತವಾಗುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಯು॑ಕ್ತ ಸ॒ಪ್ತ ಶು॒ನ್ಧ್ಯು॑ವಃ॒ ಸೂರೋ॒ ರಥ॑ಸ್ಯ ನ॒ಪ್ತ್ಯಃ॑ ।
ತಾಭಿ॑ರ್ಯಾತಿ॒ ಸ್ವಯು॑ಕ್ತಿಭಿಃ ॥ ೯ ॥

॥ ಪದಪಾಠಃ ॥

ಅಯು॑ಕ್ತ । ಸ॒ಪ್ತ । ಶು॒ನ್ಧ್ಯು॑ವಃ । ಸೂರಃ॑ । ರಥ॑ಸ್ಯ । ನ॒ಪ್ತ್ಯಃ॑ ।
ತಾಭಿಃ॑ । ಯಾ॒ತಿ॒ । ಸ್ವಯು॑ಕ್ತಿಽಭಿಃ ॥ ೯ ॥

॥ ಸಾಯಣಭಾಷ್ಯಂ ॥

ಸೂರಃ ಸರ್ವಸ್ಯ ಪ್ರೇರಕಃ ಸೂರ್ಯಃ ಶುಂಧ್ಯುವಃ ಶೋಧಿಕಾ ಅಶ್ವಸ್ತ್ರಿಯಃ ತಾದೃಶೀಃ ಸಪ್ತ ಸಪ್ತಸಂಖ್ಯಾಕಾ ಅಯುಕ್ತ । ಸ್ವರಥೇ ಯೋಜಿತವಾನ್ । ಕೀದೃಶ್ಯಃ । ರಥಸ್ಯ ನಪ್ತ್ರ್ಯೋ ನ ಪಾತಯಿತ್ರ್ಯಃ । ಯಾಭಿರ್ಯುಕ್ತಾಭೀ ರಥೋ ಯಾತಿ ನ ಪತತಿ ತಾದೃಶೀಭಿರಿತ್ಯರ್ಥಃ । ಏವಂಭೂತಾಭಿಸ್ತಾಭಿರಶ್ವಸ್ತ್ರೀಭಿಃ ಸ್ವಯುಕ್ತಿಭಿಃ ಸ್ವಕೀಯಯೋಜನೇನ ರಥೇ ಸಂಬದ್ಧಾಭಿರ್ಯಾತಿ । ಯಜ್ಞಗೃಹಂ ಪ್ರತ್ಯಾಗಚ್ಛತಿ । ಅತಸ್ತಸ್ಮೈ ಹವಿರ್ದಾತವ್ಯಮಿತಿ ವಾಕ್ಯಶೇಷಃ ॥ ಅಯುಕ್ತ । ಯುಜಿರ್ ಯೋಗೇ । ಸ್ವರಿತೇತ್ತ್ವಾತ್ಕರ್ತ್ರಭಿಪ್ರಾಯೇ ಆತ್ಮನೇಪದಂ । ಲುಙಿ ಚ್ಲೇಃ ಸಿಚ್ । ಏಕಾಚ ಇತೀಟ್ಪ್ರತಿಷೇಧಃ । ಲಿಙ್ಸಿಚಾವಾತ್ಮನೇಪದೇಷು । ಪಾ. ೧-೨-೧೧ । ಇತಿ ಸಿಚಃ ಕಿತ್ತ್ವಾಲ್ಲಘೂಪಧಗುಣಾಭಾವಃ । ಝಲೋ ಝಲೀತಿ ಸಿಚಃ ಸಕಾರಲೋಪಃ । ಚೋಃ ಕುರಿತಿ ಕುತ್ವಂ । ಶುಂಧ್ಯುವಃ । ಶುನ್ಧ ವಿಶುದ್ಧೌ । ಯಜಿಮನಿಶುಂಧಿದಸಿಜನಿಭ್ಯೋ ಯುಚ್ । ಉ. ೩-೨೦ । ಇತಿ ಯುಪ್ರತ್ಯಯಃ । ಶಸಿ ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಂ । ಪಾ. ೬-೪-೭೭-೧ । ಇತ್ಯುವಙಾದೇಶಃ । ಸೂರಃ । ಷೂ ಪ್ರೇರಣೇ । ಸುಸೂಧಾಗೃಧಿಭ್ಯಃ ಕ್ರನ್ । ಉ. ೨-೨೪ । ಇತಿ ಕ್ರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ನಪ್ತ್ಯಃ । ನ ಪಾತಯತೀತ್ಯರ್ಥೇ—ನಪ್ತೃನೇಷ್ಟೃ । ಉ. ೨-೯೬ । ಇತ್ಯಾದಿನೋಣಾದಿಷು ನಪ್ತೃಶಬ್ದಸ್ತೃಜಂತೋ ನಿಪಾತಿತಃ । ಋನ್ನೇಭ್ಯೋ ಙೀಬಿತಿ ಙೀಪ್ । ಯಣಾದೇಶ ಉದಾತ್ತಯಣೋ ಹಲ್ಪೂರ್ವಾದಿತಿ ಙೀಪ ಉದಾತ್ತತ್ವಂ । ಸುಪಾಂ ಸುಪೋ ಭವಂತೀತಿ ಶಸೋ ಜಸಾದೇಶಃ । ತತೋ ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ರೇಫಲೋಪಶ್ಛಾಂದಸಃ । ಉಕ್ತಂ ಚ । ದ್ವೌ ಚಾಪರೌ ವರ್ಣವಿಕಾರನಾಶೌ । ಕಾ ೬-೩-೧೦೯ . ಇತಿ । ಶಾಖಾಂತರೇ ತು ನಪ್ತ್ರ್ಯ ಇತ್ಯೇವ ಪಠ್ಯತೇ । ಸ್ವಯುಕ್ತಿಭಿಃ । ಸ್ವಕೀಯಾಃ ಸೂರ್ಯಸಂಬಂಧಿನ್ಯೋ ಯುಕ್ತಯೋ ಯೋಜನಾನಿ ಯಾಸಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಸೂರಃ—ಸಕಲವನ್ನೂ ಪ್ರೇರಿಸತಕ್ಕ ಸೂರ್ಯನು । ರಥಸ್ಯ ನಪ್ತ್ಯಃ—(ಸಂಚರಿಸುವಾಗಲೂ) ರಥವನ್ನು ಕೆಳಕ್ಕೆ ಬೀಳಿಸದೇ ಇರತಕ್ಕ । ಸಪ್ತ ಶುಂಧ್ಯುವಃ—ಪರಿಶುದ್ಧಗಳಾದ ಏಳು ಹೆಣ್ಣು ಕುದುರೆಗಳನ್ನು



CC-0. Jangamwadi Math Collection. Digitized by eGangotri

ಅಯುಕ್ತ—(ರಥಕ್ಕೆ) ಸೇರಿಸಿ ಕಟ್ಟಿದ್ದಾನೆ. । ಸ್ವಯುಕ್ತಿಭಿಃ—ತಾವೇ ಸ್ವತಃ ರಥಕ್ಕೆ ಸೇರಿಕೊಂಡಿರುವ । ತಾಭಿಃ— ಆ ಹೆಣ್ಣು ಕುದುರೆಗಳ ಸಹಾಯದಿಂದ । ಯಾತಿ— ಯಜ್ಞಗೃಹವನ್ನು ಕುರಿತು ಬರುತ್ತಾನೆ. (ಆದುದರಿಂದ ಅವನಿಗೆ ಹವಿಸ್ಸನ್ನರ್ಪಿಸಬೇಕು).

॥ ಭಾವಾರ್ಥ ॥

ಸಕಲವನ್ನೂ ಪ್ರೇರಿಸತಕ್ಕ ಸೂರ್ಯದೇವನು ತನ್ನ ರಥಕ್ಕೆ ಏಳು ಹೆಣ್ಣು ಕುದುರೆಗಳನ್ನು ಕಟ್ಟಿದ್ದಾನೆ. ಅವು ರಥವನ್ನು ಎಷ್ಟು ವೇಗವಾಗಿ ಎಳೆದುಕೊಂಡುಹೋದರೂ ಕೆಳಕ್ಕೆ ಬೀಳಿಸದೆ ಸುರಕ್ಷಿತವಾಗಿ ಎಳೆಯುತ್ತವೆ. ಈ ಪರಿಶುದ್ಧಗಳಾದ ಕುದುರೆಗಳು ತಾವೇ ಸ್ವತಃ ರಥಕ್ಕೆ ಹೂಡಿಕೊಂಡಿವೆ. ಈ ಕುದುರೆಗಳ ಸಹಾಯದಿಂದ ಸೂರ್ಯನು ಯಜ್ಞಗೃಹಕ್ಕೆ ಬರುತ್ತಾನೆ. ಆದುದರಿಂದ ಅವನಿಗೆ ಹವಿಸ್ಸನ್ನರ್ಪಿಸಬೇಕು.

## English Translation.

The sun has yoked the seven horses that safely draw his chaiot and comes with those self-harnessed horses.

॥ ವಿಶೇಷ ವಿಷಯಗಳು ॥

ಶುಂಧ್ಯುವಃ—ಶುಂಧ ಶುದ್ಧೌ । ಶುಂಧ್ಯುರಾದಿತ್ಯೋ ಭವತಿ ಶೋಧನಾತ್ । ತಸ್ಯ ಸ್ವಭೂತಾಃ । ಸಕಲವನ್ನು ಶುದ್ಧಿಮಾಡುವವನಾದುದರಿಂದ ಆದಿತ್ಯನಿಗೆ ಶುಂಧ್ಯು ಎಂದು ಹೆಸರು. ಆ ಶುಂಧ್ಯುವಿನ (ಆದಿತ್ಯನ) ಸಂಬಂಧವಾದ ಕುದುರೆಗಳಿಗೆ ಶುಂಧ್ಯುವಃ ಎಂದು ಹೆಸರು. ಅಥವಾ ಶೋಧಯಿತ್ರ್ಯಃ ಶುಂಧ್ಯುವಃ ಸಮಸ್ತವನ್ನೂ ಶುದ್ಧಿಮಾಡುವ ಕಿರಣಗಳು.

ಸೂರಃ—ಸರ್ವಸ್ಯ ಪ್ರೇರಕಃ ಸೂರ್ಯಃ । ಸರ್ವರನ್ನೂ ಪ್ರೇರಿಸುವ ಸೂರ್ಯನು.

ನಪ್ತ್ಯಃ—ನ ಪಾತಯಿತ್ರ್ಯಃ । ಯಾಭಿರ್ಯುಕ್ತಾಭೀ ರಥೋ ಯಾತಿ ನ ಪತತಿ ತಾಃ । ಬೀಳಿಸದಿರುವ; ಈ ಕುದುರೆಗಳನ್ನು ಕಟ್ಟುವುದರಿಂದ ರಥವು ಬೀಳದಂತೆ ಸುಗಮವಾಗಿ ಹೋಗುವುದರಿಂದ ಈ ಕುದುರೆಗಳಿಗೆ ನಪ್ತ್ಯಃ ರಥವನ್ನು ಕೆಡವದಿರುವ ಎಂದಭಿಪ್ರಾಯವು.

ಸ್ವಯುಕ್ತಿಭಿಃ—ಸ್ವಕೀಯಯೋಜನೇನ ರಥೇ ಸಂಬದ್ಧಾಭಿಃ । ಸ್ವಯಮೇವ ಯಾ ರಥೇ ಯುಜ್ಯಂತೇ ತಾಃ ಸ್ವಯುಕ್ತಯಃ । ಸೂರ್ಯನ ರಥಕ್ಕೆ ಇನ್ನೊಬ್ಬರ ಸಹಾಯವಿಲ್ಲದೆ ತಾವೇ ಹೂಡಿಕೊಳ್ಳುವವು ಎಂದರ್ಥವು. ಇಂದ್ರನ ಹರೀ ಎಂಬ ಕುದುರೆಗಳ ವಿಷಯದಲ್ಲಿಯೂ ಇದೇ ಅಭಿಪ್ರಾಯವು ಸೂಚಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಅಯುಕ್ತ—ಯುಜಿರ್ ಯೋಗೇ ಧಾತು. ರುಧಾದಿ. ಸ್ವರಿತೇತ್ತಾದ ಧಾತು. ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ (ಪಾ. ಸೂ. ೧-೩-೭೨) ಸ್ವರಿತೇತ್ತಾಗಿಯೂ ಞಿತ್ತಾಗಿಯೂ ಇರುವ ಧಾತುಗಳ ಮೇಲೆ ಕ್ರಿಯಾದಿಂದುಂಟಾಗುವ ಫಲವು ಕರ್ತೃವನ್ನು ಹೊಂದುತ್ತಿರುವಾಗ ಆತ್ಮನೇಪದಪ್ರತ್ಯಯಗಳು ಬರುತ್ತವೆ.



CC-0. Jangamwadi Math Collection. Digitized by eGangotri

ಇಲ್ಲಿ ಧಾತ್ವರ್ಥದಿಂದ ತೋರುವ ವ್ಯಾಪಾರಜನಿತವಾದ ಫಲವು ಕರ್ತೃವಾದ ಸೂರ್ಯನನ್ನು ಹೊಂದುವುದರಿಂದ ಧಾತುವು ಸ್ವರಿತೇತ್ತಾದುದರಿಂದ ಇದಕ್ಕೆ ಆತ್ಮನೇಪದ ಪ್ರತ್ಯಯಗಳು ಬರುತ್ತವೆ. ಲುಙ್ ಪ್ರಥಮಪುರುಷ ಏಕವಚನ ವಿವಕ್ಷಾಮಾಡಿದಾಗ ತ ಎಂಬ ಪ್ರತ್ಯಯವು ಬರುತ್ತದೆ. ಯುಜ್+ತ ಎಂದಿರುವಾಗ ಚ್ಲಿ ವಿಕರಣ ಪ್ರತ್ಯಯ ಬರುತ್ತದೆ. ಚ್ಲೇಃ ಸಿಚ್ ಸೂತ್ರದಿಂದ ಅದಕ್ಕೆ ಸಿಚಾದೇಶ ಬರುತ್ತದೆ. ಏಕಾ ಚ ಉಪದೇಶೇಽನುದಾತ್ತೇತ್ (ಪಾ. ಸೂ. ೭-೨-೧೦) ಎಂಬುದರಿಂದ ಧಾತುವು ಏಕಾಚಾದುದರಿಂದ ಅದರ ಪರದಲ್ಲಿರುವ ವಲಾದಿ ಆರ್ಧಧಾತುಕವಾದ ಸಿಚಿಗೆ ಇಟ್ ಪ್ರತಿಷೇಧ ಬರುತ್ತದೆ. ಪುಗಂತಲಘೂಪಧಸ್ಯಚ ಸೂತ್ರದಿಂದ ಧಾತುವಿನ ಉಪಧೆಗೆ ಗುಣವು ಪ್ರಾಪ್ತವಾದರೆ ಲಿಙ್ ಸಿಚಾವಾತ್ಮನೇಪದೇಷು (ಪಾ. ಸೂ. ೧-೨-೧೧) ಇಕ್ಕಿನ ಪರದಲ್ಲಿ ಯಾವ ಹಲ್ ಇದೆಯೋ ಅದರ ಪರದಲ್ಲಿರುವ ಝಲಾದಿಯಾದ ಲಿಙ್ ಮತ್ತು ಆತ್ಮನೇಪದ ಪರದಲ್ಲಿರುವ ಸಿಚ್ ಪ್ರತ್ಯಯವೂ ಕಿತ್ತಾಗುತ್ತದೆ; ಎಂಬುದರಿಂದ ಇಲ್ಲಿ ಉಕಾರದ ಪರದಲ್ಲಿ ಹಲ್ ಇದ್ದು ಅದರ ಪರದಲ್ಲಿ ಆತ್ಮನೇಪದ ಪರದಲ್ಲಿರುವ ಸಿಚ್ ಬಂದುದರಿಂದ ಕಿದ್ವದ್ಭಾವವನ್ನು ಹೊಂದಿರುವುದರಿಂದ ಕ್ಙಿತಿ ಚ ಸೂತ್ರದಿಂದ ಗುಣ ನಿಷೇಧ ಬರುತ್ತದೆ. ಲಘೂಪಧಗುಣ ಬಾರದಿರುವಾಗ ಯುಜ್+ಸ್+ತ ಎಂದಿರುವಾಗ ಝಲೋ ಝಲಿ (ಪಾ. ಸೂ. ೮-೨-೨೬) ಝಲಿನ ಪರದಲ್ಲಿರುವ ಸಕಾರಕ್ಕೆ ಝಲ್ ಪರದಲ್ಲಿರುವಾಗ ಲೋಪ ಬರುತ್ತದೆ ಎಂಬುದರಿಂದ ಸಿಚಿನ ಸಕಾರಕ್ಕೆ ಲೋಪಬರುತ್ತದೆ ಯುಜ್+ತ ಎಂದಿರುವಾಗ ಝಲ್ ಪರದಲ್ಲಿರುವುದರಿಂದ ಚೋಃ ಕುಃ ಸೂತ್ರದಿಂದ ಜಕಾರಕ್ಕೆ ಕುತ್ವ ಬರುತ್ತದೆ. ಅದಕ್ಕೆ ಖರಿಚ ಸೂತ್ರದಿಂದ ಚರ್ತ್ವ ಬರುತ್ತದೆ. ಅಂಗಕ್ಕೆ ಲುಙ್ ನಿಮಿತ್ತವಾದ ಅಡಾಗಮ ಬಂದರೆ ಅಯುಕ್ತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರದಿದ್ದುದರಿಂದ ನಿಘಾತಸ್ವರ ಬರುವುದಿಲ್ಲ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

ಶುಂಧ್ಯುವಃ—ಶುಂಧ ವಿಶುದ್ಧೌ ಧಾತು. ಭ್ವಾದಿ. ಯಜಿಮನಿಶುಂಧಿದಸಿಜನಿಭ್ಯೋ ಯುಃ (ಉ. ಸೂ. ೩-೩೦೦) ಎಂಬುದರಿಂದ ಇದಕ್ಕೆ ಯು ಪ್ರತ್ಯಯ ಬರುತ್ತದೆ. ಆಗ ಶುಂಧ್ಯು ಎಂದು ಉಕಾರಾಂತ ಶಬ್ದವಾಗುತ್ತದೆ. ಇದಕ್ಕೆ ದ್ವಿತೀಯಾ ಬಹುವಚನ ಶಸ್ ಪರದಲ್ಲಿರುವಾಗ ಶುಂಧ್ಯು+ಅಸ್ ಎಂಬಲ್ಲಿ ಪೂರ್ವ ಸವರ್ಣದೀರ್ಘವು ಪ್ರಾಪ್ತವಾದರೆ ತನ್ವಾದೀನಾಂ ಛಂದಸಿ ಬಹುಲಮುಪಸಂಖ್ಯಾನಮ್ (ಪಾ. ಸೂ. ೬-೪-೭೭ ವಾ. ೧) ಎಂಬುದರಿಂದ ಉವಙಾದೇಶ ಬರುತ್ತದೆ. ಶುಂಧ್ಯುವಸ್ ಎಂದು ಇರುವಾಗ ರುತ್ವವಿಸರ್ಗ ಬಂದರೆ ಶುಂಧ್ಯುವಃ ಎಂದು ರೂಪವಾಗುತ್ತದೆ.

ಸೂರಃ—ಷೂ ಪ್ರೇರಣೆ ಧಾತು. ತುದಾದಿ. ಧಾತ್ವಾದೇಃ ಷಃ ಸಃ ಸೂತ್ರದಿಂದ ಷಕಾರಕ್ಕೆ ಸಕಾರ ಬರುತ್ತದೆ. ಇದಕ್ಕೆ ಸುಸೂಧಾಗೃಧಿಭ್ಯಃ ಕ್ರನ್ (ಉ. ಸೂ. ೨-೧೮೨) ಎಂಬುದರಿಂದ ಕ್ರನ್ ಪ್ರತ್ಯಯ ಬರುತ್ತದೆ. ಕ್ರನ್ನಿನಲ್ಲಿ ರೇಫ ಉಳಿಯುತ್ತದೆ. ಸೂರ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರದಿಂದ ಆದ್ಯುದಾತ್ತವಾಗುತ್ತದೆ.

ನಪ್ತ್ರ್ಯಃ—ನ ಪಾತಯತಿ ಇತಿ ನಪ್ತಾ ಕೆಡಹುವುದಿಲ್ಲವೆಂದರ್ಥ. ಈ ಅರ್ಥದಲ್ಲಿ ನಪ್ತೃನೇಷ್ಟೃತ್ವಷ್ಟೃ (ಉ. ಸೂ. ೨-೨೫೨) ಎಂಬುದರಿಂದ ಉಣಾದಿಯಲ್ಲಿ ನಪ್ತೃಶಬ್ದವು ತೃಜಂತವಾಗಿ ನಿಪಾತಿತವಾಗಿದೆ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ ಋನ್ನೇಭ್ಯೋಙೀಪ್ ಸೂತ್ರದಿಂದ ಙೀಪ್ ಬರುತ್ತದೆ. ನಪ್ತೃ+ಈ ಎಂದಿರುವಾಗ ಯಣಾದೇಶ ಬರುತ್ತದೆ. ಉದಾತ್ತಯಣೋ ಹಲ್‌ಪೂರ್ವಾತ್ (ಪಾ. ಸೂ. ೬-೧-೧೭೪) ಉದಾತ್ತಸ್ಥಾನದಲ್ಲಿ ಯಾವ ಯಣ್ ಬಂದಿರುತ್ತದೆಯೋ ಮತ್ತು ಅದಕ್ಕೆ ಹಲ್ ಪೂರ್ವವಾಗಿದೆಯೋ ಅದರ



CC-0. Jangamwadi Math Collection. Digitized by eGangotri

ಪರದಲ್ಲಿರುವ ನದಿಯೂ ಶಸಾದಿವಿಭಕ್ತಿಯೂ ಉದಾತ್ತವಾಗುತ್ತದೆ; ಎಂಬುದರಿಂದ ಇಲ್ಲಿ ನಪ್ರೀ ಎಂಬಲ್ಲಿ ಯಣ್ ಬಂದಾಗ ಪೂರ್ವದಲ್ಲಿ ಶಕಾರವಿರುವುದರಿಂದ ಯಣಿನ ಪರದಲ್ಲಿರುವ ನದೀ ಸಂಜ್ಞೆಯುಳ್ಳ ಈಕಾರವು ಉದಾತ್ತವಾಗುತ್ತದೆ. ವ್ಯತ್ಯಯೋಬಹುಲಂ ಎಂಬ ಸೂತ್ರದಿಂದ ಸಿದ್ಧವಾದ ಸುಪಾಂ ಸುಪೋ ಭವಂತಿ ಎಂಬುದರಿಂದ ಇಲ್ಲಿ ದ್ವಿತೀಯಾ ಬಹುವಚನದ ಶಸಿಗೆ ಬದಲಾಗಿ ಪ್ರಥಮಾ ಜಸ್ ಬರುತ್ತದೆ. ನಪ್ರೀ+ಅಸ್ ಎಂದಿರುವಾಗ ದೀರ್ಘಾಜ್ಜಸಿಚ ಸೂತ್ರದಿಂದ ಪೂರ್ವಸವರ್ಣ ದೀರ್ಘ ನಿಷೇಧವಿರುವುದರಿಂದ ಪುನಃ ಯಣಾದೇಶ ಬರುತ್ತದೆ ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ (ಪಾ. ಸೂ. ೮-೨-೪) ಉದಾತ್ತಸ್ಥಾನದಲ್ಲಿಯೂ ಸ್ವರಿತಸ್ಥಾನದಲ್ಲಿಯೂ ಯಾವ ಯಣ್ ಬಂದಿರುತ್ತದೆಯೋ ಅದರ ಪರದಲ್ಲಿರುವ ಅನುದಾತ್ತವು ಸ್ವರಿತವಾಗುತ್ತದೆ ಎಂಬುದರಿಂದ ಇಲ್ಲಿ ಉದಾತ್ತವಾದ ಜಸಿಗೆ ಯಣಾದೇಶ ಬಂದಿರುವುದರಿಂದ ಪರದಲ್ಲಿರುವ ಅನುದಾತ್ತವಾದ ವಿಭಕ್ತಿಯು ಸ್ವರಿತವಾಗುತ್ತದೆ. ಇಲ್ಲಿ ಯಣಾದೇಶ ಬಂದಾಗ ನಪ್ರೀ ಎಂದು ರೇಫವು ಶ್ರುತವಾಗಿದೆ. ಆದಕ್ಕೆ ಲೋಪವನ್ನು ಛಾಂದಸವಾಗಿ ಹೇಳಬೇಕು. ಆದುದರಿಂದ ಮಂತ್ರದಲ್ಲಿ ನಪ್ತ್ಯಃ ಎಂದು ರೇಫರಹಿತವಾಗಿ ಪಠಿತವಾಗಿದೆ. ಇದನ್ನೇ ದ್ವೌ ಚಾಪರೌ ವರ್ಣವಿಕಾರನಾಶೌ (ಶಾ. ೬-೩-೧೧೯) ಎಂದು ಹೇಳಿರುತ್ತಾರೆ. ಛಂದಸ್ಸಿನಲ್ಲಿ ನಿರ್ನಿಮಿತ್ತವಾಗಿಯೇ ವರ್ಣವಿಕಾರವೂ ವಿನಾಶವೂ (ಲೋಪವೂ) ಬರುತ್ತದೆ ಎಂದು ತಾತ್ಪರ್ಯ. ಶಾಖಾಂತರದಲ್ಲಿಯಾದರೋ ನಪ್ತ್ರ್ಯಃ ಎಂದು ರೇಫ ಘಟಿತವಾಗಿಯೇ ಪಠಿತವಾಗಿದೆ.

ಸ್ವಯುಕ್ತಿಭಿಃ—ಸ್ವಕೀಯಾಃ ಸೂರ್ಯಸಂಬಂಧಿನ್ಯೋ ಯುಕ್ತಯೋ ಯೋಜನಾನಿ ಯಾಸಾಂ ತಾಃ ಸ್ವಯುಕ್ತಯಃ । ಸ್ವ ಶಬ್ದದಿಂದ ಸೂರ್ಯನನ್ನು ತಿಗೆದುಕೊಳ್ಳಬೇಕು. ಯುಕ್ತಿ ಎಂದರೆ ಇಲ್ಲಿ ಸೇರಿಸುವಿಕೆ ಎಂದು ಸ್ವೀಕರಿಸಬೇಕು. ಹೀಗೆ ಇಲ್ಲಿ ಸೂರ್ಯಸಂಬಂಧವಾದ ಯೋಜನೆಗಳುಳ್ಳ ಅಶ್ವಗಳು ಎಂದು ಅನ್ಯಪದಾರ್ಥಪ್ರಧಾನವಾದ ಬಹುವ್ರೀಹಿ ಸಮಾಸವನ್ನು ಸ್ವೀಕರಿಸಬೇಕು. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಬರುತ್ತದೆ.

॥ ಸಂಹಿತಾಪಾಠಃ ॥

ಉದ್ವಯಂ ತಮಸಸ್ಪರಿ ಜ್ಯೋತಿಷ್ಪಶ್ಯಂತ ಉತ್ತರಂ ।
ದೇವಂ ದೇವತ್ರಾ ಸೂರ್ಯಮಗನ್ಮ ಜ್ಯೋತಿರುತ್ತಮಂ ॥ ೧೦ ॥

॥ ಪದಪಾಠಃ ॥

ಉತ್ । ವಯಂ । ತಮಸಃ । ಪರಿ । ಜ್ಯೋತಿಃ । ಪಶ್ಯಂತಃ । ಉತ್ಽತರಂ ।
ದೇವಂ । ದೇವಽತ್ರಾ । ಸೂರ್ಯಂ । ಅಗನ್ಮ । ಜ್ಯೋತಿಃ । ಉತ್ಽತಮಂ ॥ ೧೦ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಅವಭೃಥೇಷ್ಟ್ಯಾ ಹೋತ್ರಕಾ ಜಲಾನ್ನಿಷ್ಕ್ರಮ್ಯೋದ್ವಯಂ ತಮಸಸ್ಪರೀತಿ ಮಂತ್ರಂ ಬ್ರೂಯುಃ। ತಥಾ ಚ ಪತ್ನೀಸಂಯೋಜ್ಯೈಷ್ಠರಿತ್ವೇತಿ ಖಂಡೇ ಸೂತ್ರಿತಂ। ಉದ್ವಯಂ ತಮಸಸ್ಪರೀತ್ಯುದೇತ್ಯ। ಆ. ೬-೧೩। ಇತಿ॥

ವಯಮನುಷ್ಠಾತಾರಸ್ತಮಸಸ್ಪರಿ ತಮಸ ಉಪರಿ ರಾತ್ರೇರೂರ್ಧ್ವಂ ವರ್ತಮಾನಂ ತಮಸಃ ಪಾಪಾತ್ಪರ್ಯುಪರಿ ವರ್ತಮಾನಂ ವಾ। ಪಾಪರಹಿತಮಿತ್ಯರ್ಥಃ। ತಥಾ ಚಾಮ್ನಾಯತೇ। ಉದ್ವಯಂ ತಮಸಸ್ಪರೀತ್ಯಾಹ ಪಾಪ್ಮಾ ವೈ ತಮಃ ಪಾಪ್ಮಾನಮೇವಾಸ್ಮಾದಪ ಹಂತಿ। ತೈ. ಸಂ. ೫-೧-೮-೬। ಇತಿ। ಜ್ಯೋತಿಸ್ತೇಜಸ್ವಿನಮುತ್ತರಮುದ್ಗತತರಮುತ್ಕೃಷ್ಟತರಂ ವಾ ದೇವತ್ರಾ ದೇವೇಷು ಮಧ್ಯೇ ದೇವಂ ದಾನಾದಿಗುಣಯುಕ್ತಂ ಸೂರ್ಯಂ ಪಶ್ಯಂತಃ ಸ್ತುತಿಭಿರ್ಹವಿರ್ಭಿಶ್ಚೋಪಾಸೀನಾಃ ಸಂತ ಉತ್ತಮಮುತ್ಕೃಷ್ಟತಮಂ ಜ್ಯೋತಿಃ ಸೂರ್ಯರೂಪಮಗನ್ಮ। ಪ್ರಾಪ್ನವಾಮ। ತಥಾ ಚ ಶ್ರೂಯತೇ। ಅಗನ್ಮ ಜ್ಯೋತಿರುತ್ತಮಮಿತ್ಯಾಹಾಸೌ ವಾ ಆದಿತ್ಯೋ ಜ್ಯೋತಿರುತ್ತಮಮಾದಿತ್ಯಸ್ಯೈವ ಸಾಯುಜ್ಯಂ ಗಚ್ಛತೀತಿ। ಯುಕ್ತಂ ಚೈತತ್। ತಂ ಯಥಾ ಯಥೋಪಾಸತೇ ತದೇವ ಭವಂತೀತಿ ಶ್ರುತ್ಯಂತರಾತ್॥ ತಮಸಸ್ಪರಿ। ಪಂಚಮ್ಯಾಃ ಪರಾವಧ್ಯರ್ಥೇ ಇತಿ ವಿಸರ್ಜನೀಯಸ್ಯ ಸತ್ವಂ। ಜ್ಯೋತಿಷ್ಪಶ್ಯಂತಃ। ಇಸುಸೋಃ ಸಾಮರ್ಥ್ಯೇ। ಪಾ. ೮-೩-೪೪। ಇತಿ ವಿಸರ್ಜನೀಯಸ್ಯ ಷತ್ವಂ। ವ್ಯಪೇಕ್ಷಾಲಕ್ಷಣಂ ಸಾಮರ್ಥ್ಯಂ ತತ್ರಾಂಗೀಕ್ರಿಯತೇ। ದೇವತ್ರಾ। ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋರ್ಬಹುಲಂ। ಪಾ. ೫-೪-೫೬। ಇತಿ ಸಪ್ತಮ್ಯರ್ಥೇ ತ್ರಾಪ್ರತ್ಯಯಃ। ಪ್ರತ್ಯಯಸ್ವರಃ। ಅಗನ್ಮ। ಛಂದಸಿ ಲುಙ್ಲಙ್ಲಿಟ ಇತಿ ಪ್ರಾರ್ಥನಾಯಾಂ ಲಙ। ಬಹುಲಂ ಛಂದಸೀತಿ ಶಪೋ ಲುಕ್। ಮ್ವೋಶ್ಚ। ಪಾ ೮-೨-೬೫। ಇತಿ ಧಾತೋರ್ಮಕಾರಸ್ಯ ನಕಾರಃ। ಅಡಾಗಮ ಉದಾತ್ತಃ। ಪಾದಾದಿತ್ವಾನ್ನಿಘಾತಾಭಾವಃ। ಉತ್ತಮಂ। ತಮಪಃ ಪಿತ್ತ್ವಾದನುದಾತ್ತತ್ವೇ ಪ್ರಾಪ್ತೆ ಉತ್ತಮಶಶ್ವತ್ತಮೌ ಸರ್ವತ್ರೇತ್ಯುಂಛಾದಿಷು ಪಾಠಾದಂತೋದಾತ್ತತ್ವಂ।

॥ ಪ್ರತಿಪದಾರ್ಥ ॥

ವಯಂ—(ಯಜ್ಞಾನುಷ್ಠಾನಮಾಡುವ) ನಾವು। ತಮಸಸ್ಪರಿ— ಕತ್ತಲಿನಿಂದ ತುಂಬಿದ ರಾತ್ರಿಯಾದ ನಂತರ ಬರತಕ್ಕವನೂ ಅಥವಾ ಪಾಪರಹಿತನೂ। ಜ್ಯೋತಿಃ— ತೇಜಸ್ವಿಯೂ। ಉತ್ತರಂ—ಉದಯಿಸಿ ಮೇಲಕ್ಕೆ ಬರತಕ್ಕವನೂ ಅಥವಾ ಅತ್ಯಂತ ಶ್ರೇಷ್ಠನೂ । ದೇವತ್ರಾ—ದೇವತೆಗಳ ನಡುವೆ। ದೇವಂ—ದಾನಾದಿಗುಣಗಳಿಂದ ಕೂಡಿದವನೂ ಆದ। ಸೂರ್ಯಂ— ಸೂರ್ಯದೇವನನ್ನು। ಪಶ್ಯಂತಃ—(ಸ್ತುತಿಗಳಿಂದಲೂ ಹವಿಸ್ಸುಗಳಿಂದಲೂ) ಪೂಜಿಸುತ್ತ। ಉತ್ತಮಂ— ಅತ್ಯಂತ ಶ್ರೇಷ್ಠನಾದ। ಜ್ಯೋತಿಃ—(ಸೂರ್ಯರೂಪದಲ್ಲಿರುವ) ಜ್ಯೋತಿಯನ್ನು। ಅಗನ್ಮ— ಸೇರುವೆವು.

॥ ಭಾವಾರ್ಥ ॥

ಕತ್ತಲುರೂಪವಾದ ರಾತ್ರಿಯು ಕಳೆದಮೇಲೆ ಪಾಪರಹಿತನೂ ತೇಜಸ್ವಿಯೂ ಅತ್ಯಂತ ಶ್ರೇಷ್ಠನೂ ಆದ ಸೂರ್ಯನು ಉದಯಿಸಿ ಮೇಲಕ್ಕೆ ಬರುತ್ತಾನೆ. ದೇವತೆಗಳ ನಡುವೆ ದಾನಾದಿಗುಣಗಳಿಂದ ಕೂಡಿರತಕ್ಕ ಈ ಸೂರ್ಯದೇವನನ್ನು ನಾವು ಸ್ತುತಿಗಳಿಂದಲೂ ಹವಿಸ್ಸುಗಳಿಂದಲೂ ಪೂಜಿಸುತ್ತ ಈ ರೂಪದಲ್ಲಿರುವ ಜ್ಯೋತಿಯನ್ನು ಸೇರುವೆವು.



CC-0. Jangamwadi Math Collection. Digitized by eGangotri

## English Translation.

Beholding the up-rising light above the darkness, we approach the divine Sun among the gods, the excellent light.

॥ ವಿಶೇಷ ವಿಷಯಗಳು ॥

ಅವಭೃಥೇಷ್ಟಿಯಲ್ಲಿ ಹೋತೃವರ್ಗದ ಋತ್ವಿಕ್ಕುಗಳು ಸ್ನಾನಮಾಡಿ ನೀರಿನಿಂದ ಹೊರಕ್ಕೆ ಬರುವಾಗ ಉದ್ವಯಂ ತಮಸಸ್ಪರಿ ಎಂಬ ಋಕ್ಕನ್ನು ಪಠಿಸುವರು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ ತಥಾ ಚ ಪತ್ನೀಸಂಯಾಜೈಶ್ಚರಿತ್ವಾ ಎಂಬ ಖಂಡದಲ್ಲಿ ಉದ್ವಯಂ ತಮಸಸ್ಪರಿತ್ಯುದೇತ್ಯ ಎಂಬ ಸೂತ್ರದಿಂದ ವಿವೃತ ವಾಗಿರುವುದು (ಆ. ೬-೧೩).

ಈ ಋಕ್ಕಿಗೂ ಸಹ ಭಾಷ್ಯಕಾರರು ಎರಡು ವಿಧವಾದ ಅರ್ಥಗಳನ್ನು ಹೇಳಿರುವರು.

ತಮಸಸ್ಪರಿ—ತಮಸ ಉಪರಿ ರಾತ್ರೇರೂರ್ಧ್ವಂ—ಕತ್ತಲೆಯು ಹೋಗಿ ಬೆಳಕಾದ ಮೇಲೆ, ರಾತ್ರಿಯು ಕಳೆದು ಪ್ರಾತಃಕಾಲವಾದ ಮೇಲೆ ಅಥವಾ ತಮಸಃ ಪಾಪಾತ್ಪರ್ಯುಪರಿ ವರ್ತಮಾನಂ ಪಾಪರಹಿತಮಿ-ತ್ಯರ್ಥಃ—ಅಜ್ಞಾನವೆಂಬ ಕತ್ತಲೆಯು ಪರಿಹಾರವಾದ ಬಳಿಕ ಅಥವಾ ಪಾಪವು ನಾಶವಾದ ಬಳಿಕ, ಪಾಪರಹಿತ ವಾದ ಎಂದರ್ಥವು. ಈ ವಿಷಯದಲ್ಲಿ ಉದ್ವಯಂ ತಮಸಸ್ಪರೀತ್ಯಾಹ ಪಾಪ್ಮಾ ವೈ ತಮಃ ಪಾಪ್ಮಾನಮೇವಾ-ಸ್ಮಾದಪ ಹಂತಿ—(ತೈ. ಸಂ. ೫-೧-೮-೬) ಎಂದು ತೈತ್ತಿರೀಯಶ್ರುತಿವಾಕ್ಯವಿರುವುದು.

ದೇವತ್ರಾ—ದೇವತೆಗಳ ಮಧ್ಯದಲ್ಲಿ. ಇದು ದ್ವಿತೀಯಾ ವಿಭಕ್ತ್ಯಂತಪದವು ಸಪ್ತಮ್ಯರ್ಥದಲ್ಲಿ ಉಪ-ಯೋಗಿಸಲ್ಪಟ್ಟಿರುವುದು. ಈ ವಿಷಯದಲ್ಲಿ ದೇವಮನುಷ್ಯಪುರುಷಪುರುಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋ-ರ್ಬಹುಲಂ (ಪಾ. ಸೂ. ೫-೪-೫೬) ಎಂದು ಪಾಣಿನಿಯ ಸೂತ್ರವಿರುವುದು.

ಅಗನ್ಮ ಜ್ಯೋತಿರುತ್ತಮಂ—ಉತ್ಕೃಷ್ಟವಾದ ಜ್ಯೋತಿಸ್ವರೂಪನಾದ ಸೂರ್ಯನನ್ನು (ಸೂರ್ಯ ಲೋಕವನ್ನು ಅಥವಾ ಸಾಯುಜ್ಯಪದವಿಯನ್ನು) ಹೊಂದುವೆವು. ಈ ವಿಷಯದಲ್ಲಿ ಸ್ವರ್ಗೋ ವೈ ಲೋಕಃ । ಸೂರ್ಯೋ ಜ್ಯೋತಿರುತ್ತಮಃ । ಸ್ವರ್ಗ ಏವ ಲೋಕೇಽನ್ತತಃ ಪ್ರತಿತಿಷ್ಠತಿ । (ಶತ ಬ್ರಾ. ೧೨-೯-೨-೮) ಎಂಬ ಶತಪಥಬ್ರಾಹ್ಮಣಶ್ರುತಿವಾಕ್ಯವೂ, ಅಗನ್ಮ ಜ್ಯೋತಿರುತ್ತಮಮಿತ್ಯಾಹಾಸೌ ವಾ ಆದಿತ್ಯೋ ಜ್ಯೋತಿ ರುತ್ತಮಮಾದಿತ್ಯಸ್ಯೈವ ಸಾಯುಜ್ಯಂ ಗಚ್ಛತಿ ಎಂಬ ತೈತ್ತಿರೀಯ ಶ್ರುತಿವಾಕ್ಯವೂ ಈ ವಿಷಯವನ್ನು ಸಮರ್ಥಿಸುವವು.

॥ ವ್ಯಾಕರಣಪ್ರಕ್ರಿಯಾ ॥

ತಮಸಸ್ಪರಿ—ತಮಸಃ ಪರಿ ಎಂದಿರುವಾಗ ಪಂಚಮ್ಯಾಃ ಪರಾವಧ್ಯರ್ಥೆ (ಪಾ. ಸೂ ೮-೩-೫೧) ಮೇಲೆ ಎಂಬ ಅರ್ಥಕೊಡುವ ಪರಿ ಶಬ್ದವು ಪರದಲ್ಲಿರುವಾಗ ಪಂಚಮಿಯ ವಿಸರ್ಗಕ್ಕೆ ಸತ್ವವು ಬರುತ್ತದೆ ಎಂಬುದರಿಂದ ವಿಸರ್ಗಕ್ಕೆ ಸಕಾರ ಬರುತ್ತದೆ. ತಮಸಸ್ಪರಿ ಎಂದು ರೂಪವಾಗುತ್ತದೆ.

ಜ್ಯೋತಿಷ್ಪಶ್ಯಂತಃ—ಜ್ಯೋತಿಃ ಪಶ್ಯಂತಃ ಎಂದಿರುವಾಗ, ಇಸು ಸೋಃ ಸಾಮರ್ಥ್ಯೆ (ಪಾ. ಸೂ. ೮-೩-೪೪) ವ್ಯಪೇಕ್ಷಾಲಕ್ಷಣಸಾಮರ್ಥ್ಯವು ತೋರುವಾಗ ಕವರ್ಗಪವರ್ಗಗಳು ಪರದಲ್ಲಿರುವ ಇಸ್ ಉಸ್ ಸಂಬಂಧಿ ವಿಸರ್ಗಕ್ಕೆ ಷತ್ವವು ಬರುತ್ತದೆ ಎಂಬುದರಿಂದ ಇಸ್ ಸಂಬಂಧಿ ವಿಸರ್ಗವಿರುವುದರಿಂದ ಷತ್ವ ಬರುತ್ತದೆ.



CC-0. Jangamwadi Math Collection. Digitized by eGangotri

ಆಕಾಂಕ್ಷಾದಿಗಳಿಂದ ಪರಸ್ಪರ ಅನ್ವಯವೇ ವ್ಯಪೇಕ್ಷಾಲಕ್ಷಣಸಾಮರ್ಥ್ಯ. ಇಲ್ಲಿ ಕ್ರಿಯಾದಲ್ಲಿ ಕರ್ಮತಾಸಂಬಂಧ ದಿಂದ ಜ್ಯೋತಿಃಶಬ್ದಾರ್ಥಕ್ಕೆ ಅನ್ವಯವಿರುವುದರಿಂದ ಕ್ರಿಯಾಕಾರಕಭಾವ ಸಂಬಂಧವಿರುತ್ತದೆ.

ದೇವತ್ರಾ—ದೇವಮನುಷ್ಯಪುರುಷಮರ್ತ್ಯೇಭ್ಯೋ ದ್ವಿತೀಯಾಸಪ್ತಮ್ಯೋರ್ಬಹುಲಂ (ಪಾ. ಸೂ. ೫-೪-೫೬) ದ್ವಿತೀಯಾಂತವಾದ ಮತ್ತು ಸಪ್ತಮ್ಯಂತವಾದ ಈ ಶಬ್ದಗಳ ಮೇಲೆ ತ್ರಾ ಎಂಬ ಪ್ರತ್ಯಯ ಬರುತ್ತದೆ. ಎಂಬುದರಿಂದ ಇಲ್ಲಿ ದೇವೇಷು ಎಂಬರ್ಥದಲ್ಲಿ ದೇವಶಬ್ದದಮೇಲೆ ತ್ರಾ ಪ್ರತ್ಯಯವು ಬರುತ್ತದೆ. ದೇವತ್ರಾ ಎಂದು ರೂಪವಾಗುತ್ತದೆ. ಆದ್ಯುದಾತ್ತವಾದ ಪ್ರತ್ಯಯಸ್ವರದಿಂದ ದೇವತ್ರಾ ಎಂಬುದು ಅಂತೋದಾತ್ತವಾದ ಪದ ವಾಗುತ್ತದೆ.

ಆಗನ್ಮ—ಗಮ್ಲೃ ಗತೌ ಧಾತು. ಭ್ವಾದಿ. ಛಂದಸಿ ಲುಙ್‌ಲಙ್‌ಲಿಟಃ ಸೂತ್ರದಿಂದ ಪ್ರಾರ್ಥನಾರ್ಥ ದಲ್ಲಿ ಲಙ್ ಬರುತ್ತದೆ. ಉತ್ತಮಪುರುಷಬಹುವಚನ ವಿವಕ್ಷಾಮಾಡಿದಾಗ ಮಸ್ ಪ್ರತ್ಯಯ ಬರುತ್ತದೆ. ನಿತ್ಯಂಙಿತಃ (ಪಾ. ಸೂ. ೩-೪-೯೯) ಸೂತ್ರದಿಂದ ಮಸ್ಸಿನ ಸಕಾರಕ್ಕೆ ಲೋಪ ಬರುತ್ತದೆ. ಬಹುಲಂ ಛಂದಸಿ (ಪಾ. ಸೂ. ೨-೪-೭೩) ಸೂತ್ರದಿಂದ ವಿಕರಣಪ್ರತ್ಯಯವಾದ ಶಪ್ ಎಂಬುದಕ್ಕೆ ಲೋಪ ಬರುತ್ತದೆ. ಅಂಗಕ್ಕೆ ಲಙ್ ನಿಮಿತ್ತಕವಾದ ಆಡಾಗಮ ಬರುತ್ತದೆ. ಆಗಮ್+ಮ ಎಂದಿರುವಾಗ ಮ್ವೋಶ್ಚ (ಪಾ. ಸೂ. ೮-೨-೬೫) ಮಾಂತವಾದ ಧಾತುವಿನ ಮಕಾರಕ್ಕೆ ಮಕಾರ ಮತ್ತು ವಕಾರ ಪರದಲ್ಲಿರುವಾಗ ನಕಾರಾದೇಶ ಬರುತ್ತದೆ. ಎಂಬುದರಿಂದ ಇಲ್ಲಿ ಗಮಿನ ಮಕಾರಕ್ಕೆ ಮಕಾರ ಪರದಲ್ಲಿರುವುದರಿಂದ ನಕಾರ ಬಂದರೆ ಆಗನ್ಮ ಎಂದು ರೂಪ ವಾಗುತ್ತದೆ — ಆಡುದಾತ್ತಃ ಎಂದು ಉದಾತ್ತವಾಗಿಯೇ ವಿಧಾನಮಾಡಿರುವುದರಿಂದ ಆಗನ್ಮ ಎಂಬುದು ಆದ್ಯು ದಾತ್ತವಾದ ಪದವಾಗುತ್ತದೆ. ಪಾದದ ಆದಿಯಲ್ಲಿ ಬಂದಿರುವುದರಿಂದ ಅಪಾದಾದೌ ಎಂದು ನಿಷೇಧಮಾಡಿರುವುದ ರಿಂದ ತಿಙ್ಙತಿಙಃ ಸೂತ್ರದಿಂದ ನಿಘಾತಸ್ವರವು ಬರುವುದಿಲ್ಲ.

ಉತ್ತಮಮ್—ಅತಿಶಯಾರ್ಥದಲ್ಲಿ ತಮಪ್ ಪ್ರತ್ಯಯ ಬರುತ್ತದೆ. ತಮಪ್ ಪಿತ್ತಾದುದ್ದರಿಂದ ಅನುದಾತ್ತೌ ಸುಪ್‌ಪಿತೌ ಸೂತ್ರದಿಂದ ಅನುದಾತ್ತಸ್ವರವು ಪ್ರಾಪ್ತವಾಗುತ್ತದೆ. ಆದರೆ, ಉಂಛಾದೀನಾಂಚ (ಪಾ. ಸೂ. ೬-೧-೧೬೦) ಈ ಗಣಪಠಿತವಾದವುಗಳಿಗೆ ಅಂತೋದಾತ್ತಸ್ವರ ಬರುತ್ತದೆ ಎಂಬುದರಿಂದ ಅಂತೋ ದಾತ್ತಸ್ವರ ಬರುತ್ತದೆ. ಉಂಛಾದಿಗಣದಲ್ಲಿ ಉತ್ತಮಶಶ್ವತ್ತಮೌ ಸರ್ವತ್ರ ಎಂದು ಪಾಠಮಾಡಿರುತ್ತಾರೆ. ಆದುದರಿಂದ ಉತ್ತಮಂ ಎಂಬುದು ಅಂತೋದಾತ್ತವಾದಶಬ್ದವಾಗುತ್ತದೆ.

॥ ಸಂಹಿತಾಪಾಠಃ ॥

ಉದ್ಯನ್ನದ್ಯ ಮಿತ್ರಮಹ ಆರೋಹನ್ನುತ್ತರಾಂ ದಿವಂ।
ಹೃದ್ರೋಗಂ ಮಮ ಸೂರ್ಯ ಹರಿಮಾಣಂ ಚ ನಾಶಯ ॥೧೧॥





CC-0. Jangamwadi Math Collection. Digitized by eGangotri

॥ ಪದಪಾಠಃ ॥

ಉತ್ಽಯನ್। ಅದ್ಯ। ಮಿತ್ರಽಮಹಃ। ಆಽರೋಹನ್। ಉತ್ಽತರಾಂ। ದಿವಂ। ಹೃತ್ಽರೋಗಂ। ಮಮ। ಸೂರ್ಯ। ಹರಿಮಾಣಂ। ಚ। ನಾಶಯ॥ ೧೧ ॥

॥ ಸಾಯಣಭಾಷ್ಯಂ ॥

ಉದ್ಯನ್ನಿತ್ಯಯಂ ತೃಚೋ ರೋಗಶಾಂತ್ಯರ್ಥಃ। ತಥಾ ಚಾನುಕ್ರಮಣ್ಯಾಮುಕ್ತಂ। ಅಂತ್ಯಸ್ತ್ರೃಚೋ ರೋಗಘ್ನ ಉಪನಿಷದಿತಿ। ಯುಕ್ತಂ ಚೈತತ್। ಯಸ್ಮಾದನೇನ ತೃಚೇನ ತ್ವಗ್ದೋಷಶಾಂತಯೇ ಪ್ರಸ್ಕಣ್ವಃ ಸೂರ್ಯಮಸ್ತೌತ್ ತೇನ ತೃಚೇನ ಸ್ತುತಃ ಸೂರ್ಯಸ್ತಮೃಷಿಂ ರೋಗಾನ್ನಿರಗಮಯೇತ್ ತಸ್ಮಾದಿದಾನೀಮಪಿ ರೋಗಶಾಂತಯೇಽನೇನ ತೃಚೇನ ಸೂರ್ಯ ಉಪಾಸನೀಯಃ। ತದುಕ್ತಂ ಶೌನಕೇನ। ಉದ್ಯನ್ನದ್ಯೇತಿ ಮಂತ್ರೋಽಯಂ ಸೌರಃ ಪಾಪಪ್ರಣಾಶನಃ। ರೋಗಘ್ನಶ್ಚ ವಿಷಘ್ನಶ್ಚ ಭುಕ್ತಿಮುಕ್ತಿಫಲಪ್ರದ ಇತಿ॥

ಹೇ ಸೂರ್ಯ ಸರ್ವಸ್ಯ ಪ್ರೇರಕ ಮಿತ್ರಮಹಃ ಸರ್ವೇಷಾಮನುಕೂಲದೀಪ್ತಿಯುಕ್ತ ಅದ್ಯಾಸ್ಮಿನ್ಕಾಲ ಉದ್ಯನ್ ಉದಯಂ ಗಚ್ಛನ್ ಉತ್ತರಾಮುದ್ಗತತರಾಂ ದಿವಮಂತರಿಕ್ಷಮಾರೋಹನ್ ಆಭಿಮುಖ್ಯೇನ ಪ್ರಾಪ್ನುವನ್। ಯದ್ವಾ। ದಿವಮಂತರಿಕ್ಷಮುತ್ತರಾಮಾರೋಹನ್ ಉತ್ಕರ್ಷೇಣ ಪ್ರಾಪ್ನುವನ್। ಏವಂವಿಧಸ್ತ್ವಂ ಮಮ ಹೃದ್ರೋಗಂ ಹೃದಯಗತಮಾಂತರಂ ರೋಗಂ ಹರಿಮಾಣಂ ಶರೀರಗತಕಾಂತಿಹರಣಶೀಲಂ ಬಾಹ್ಯಂ ರೋಗಂ। ಯದ್ವಾ। ಶರೀರಗತಂ ಹರಿದ್ವರ್ಣಂ ರೋಗಪ್ರಾಪ್ತಂ ವೈವರ್ಣ್ಯಮಿತ್ಯರ್ಥಃ। ತದುಭಯಮಪಿ ನಾಶಯ। ಮಾಂ ಸ್ತೋತಾರಮುಭಯವಿಧಾದ್ರೋಗಾನ್ಮೋಚಯೇತ್ಯರ್ಥಃ॥ ಮಿತ್ರಮಹಃ। ಮಿತ್ರಮನುಕೂಲಂ ಮಹಸ್ತೇಜೋ ಯಸ್ಯಾಸೌ। ಆಮಂತ್ರಿತನಿಘಾತಃ। ಉತ್ತರಾಂ। ಉದಿತ್ಯನೇನೋಪಸರ್ಗೇಣ ಸ್ವಸಂಸೃಷ್ಟಧಾತ್ವರ್ಥೋ ಲಕ್ಷ್ಯತೇ। ತಸ್ಮಾದಾತಿಶಾಯನಿಕಸ್ತರಪ್ಪ್ರತ್ಯಯಃ। ಪ್ರಥಮಪಕ್ಷೇಂತರಿಕ್ಷವಿಶೇಷಣತ್ವೇನ ದ್ರವ್ಯಪ್ರಕರ್ಷಪ್ರತೀತೇರಾಂ ನ ಭವತಿ। ದ್ವಿತೀಯೇ ತ್ವಾರೋಹಣಕ್ರಿಯಾಯಾಃ ಪ್ರಕರ್ಷೋ ಗಮ್ಯತ ಇತಿ ಕಿಮೇತ್ತಿಙವ್ಯಯಘಾದಾಮ್ವದ್ರವ್ಯಪ್ರಕರ್ಷೇ। ಪಾ. ೫-೪-೧೧। ಇತಿ ಆಮುಃ। ಪ್ರಥಮಪಕ್ಷೇ ಟಾಪ್ತರಪೋಃ ಪಿತ್ತ್ವಾದನುದಾತ್ತತ್ವೇ ಉಪಸರ್ಗಸ್ವರ ಏವ ಶಿಷ್ಯತೇ। ದ್ವಿತೀಯೇ ತ್ವಾಮ್ಪ್ರತ್ಯಯಸ್ಯ ಸತಿ ಶಿಷ್ಟತ್ವಾತ್ತಸ್ಯೈವ ಸ್ವರೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ। ವೃಷಾದಿರ್ವಾ ದ್ರಷ್ಟವ್ಯಃ। ಸ ಹ್ಯಾಕೃತಿಗಣಃ। ಹೃದ್ರೋಗಂ। ವಾ ಶೋಕಷ್ಯಞ್ರೋಗೇಷು। ಪಾ. ೬-೩-೫೧। ಇತಿ ಹೃದಯಶಬ್ದಸ್ಯ ಹೃದಾದೇಶಃ। ಮಮ। ಯುಷ್ಮದಸ್ಮದೋರ್ಙಸೀತ್ಯಾದ್ಯುದಾತ್ತತ್ವಂ। ಹರಿಮಾಣಂ। ಹೃಞ್ ಹರಣೇ। ಜನಿಹೃಭ್ಯಾಮಿಮನಿನ್। ಉ. ೪-೧೪೮। ಇತ್ಯೌಣಾದಿಕ ಇಮನಿನ್ಪ್ರತ್ಯಯಃ। ವ್ಯತ್ಯಯೇನಾಂತೋದಾತ್ತತ್ವಂ। ಯದ್ವಾ। ಹರಿಚ್ಛಬ್ದಸ್ಯ ವರ್ಣವಾಚಿತ್ವಾದ್ವರ್ಣದೃಢಾದಿಭ್ಯಃ ಷ್ಯಞ್ಚ। ಪಾ. ೫-೧-೧೨೩। ಇತಿ ಚಕಾರಾದಿಮನಿನ್ಪ್ರತ್ಯಯಃ। ಇಷ್ಠೇಮೇಯಃಸ್ವಿತ್ಯನುವೃತ್ತೌ ಟೇರಿತಿ ಟಿಲೋಪಃ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ಮಿತ್ರಮಹಃ—(ಲೋಕಕ್ಕೆಲ್ಲ) ಅನುಕೂಲಮಾಡತಕ್ಕ ತೇಜಸುಳ್ಳ | ಸೂರ್ಯ—(ಸಮಸ್ತಕ್ಕೂ) ಪ್ರೇರಕನಾದ ಎಲೈ ಸೂರ್ಯನೇ | ಅದ್ಯ—ಈಗ | ಉದ್ಯನ್—ಉದಯಿಸುತ್ತ | ಉತ್ತರಾಂ ದಿವಂ ಆರೋಹನ್—ಅತ್ಯಂತ ಎತ್ತರದಲ್ಲಿರತಕ್ಕ ಅಂತರಿಕ್ಷವನ್ನು ಹತ್ತುತ್ತ | ಅಥವಾ ದಿವಂ ಉತ್ತರಾಂ ಆರೋಹನ್-ಅಂತರಿಕ್ಷವನ್ನು ಅತಿಶಯನಾಗಿ ಹತ್ತುತ್ತ || ಮಮ—ನನ್ನ | ಹೃದ್ರೋಗಂ—ಹೃದಯಗತವಾದ (ದೇಹದ ಒಳಗಿನ) ರೋಗವನ್ನೂ | ಹರಿಮಾಣಂ—(ದೇಹದ ಲಾವಣ್ಯವನ್ನು) ಅಪಹರಿಸುವ (ಹೊರಗಿನ) ರೋಗವನ್ನೂ | ಅಥವಾ ವಿಕಾರವಾದ ಹಳದಿ ಬಣ್ಣವನ್ನುಂಟುಮಾಡುವ (ಕಾಮಾಲೆ, ತೊನ್ನು ಮುಂತಾದ) ರೋಗವನ್ನೂ | ನಾಶಯ—ನಾಶಮಾಡು.

|| ಭಾವಾರ್ಥ ||

ಎಲೈ ಸೂರ್ಯನೇ, ನೀನು ಲೋಕಕ್ಕೆಲ್ಲ ಅನುಕೂಲಮಾಡತಕ್ಕ ತೇಜಸ್ಸಿನಿಂದ ಕೂಡಿ, ಎಲ್ಲಕ್ಕೂ ಪ್ರೇರಕನಾಗಿದ್ದೀಯೆ. ಈಗ ಉದಯಿಸಿ ಅತ್ಯಂತ ಎತ್ತರದಲ್ಲಿರತಕ್ಕ ಅಂತರಿಕ್ಷವನ್ನು ಹತ್ತುತ್ತಾ, ನನ್ನ ಹೃದಯಗತವಾದ ಒಳಗಿನ ರೋಗವನ್ನೂ ಹಳದಿ ಬಣ್ಣವನ್ನುಂಟುಮಾಡುವ ಕಾಮಾಲೆ, ತೊನ್ನು ಮುಂತಾದ ದೇಹದ ಹೊರಗಿನ ರೋಗಗಳನ್ನೂ ನಾಶಮಾಡು.

## English Translation.

O Sun, rising to-day and mounting into the highest heaven you look radiant with benevolent light; remove the sickness of my heart and the yellowness (of my body).

|| ವಿಶೇಷ ವಿಷಯಗಳು ||

ಉದ್ಯನ್ನದ್ಯ—ಎಂಬ ಈ ಋಕ್ಕೂ ಮುಂದಿನ ಎರಡು ಋಕ್ಕುಗಳೂ ರೋಗಶಾಂತ್ಯರ್ಥವಾಗಿ ಪಠಿಸಲ್ಪಡುವವೆಂದು ಪ್ರಸಿದ್ಧವಾಗಿರುವುದು. ಅನುಕ್ರಮಣಿಕೆಯಲ್ಲಿಯೂ ಸಹ ಅಂತ್ಯಸ್ತ್ರೃಚೋ ರೋಗಘ್ನ ಉಪನಿಷದಿತಿ ಎಂದರೆ ಉದುತ್ಯಂ ಎಂಬ ಈ ಸೂಕ್ತದ ಕಡೆಯ ಮೂರು ಋಕ್ಕುಗಳು ರೋಗನಾಶಕಗಳು ಎಂದು ಹೇಳಿರುವುದು. ಇದು ಯುಕ್ತವಾಗಿಯೇ ಇರುವುದು. ಏಕೆಂದರೆ ಈ ಸೂಕ್ತದ ಋಷಿಯಾದ ಪ್ರಸ್ಕಣ್ವಋಷಿಯು ಈ ಮೂರು ಋಕ್ಕುಗಳಲ್ಲಿ ಚರ್ಮಸಂಬಂಧವಾದ ರೋಗವನ್ನು ಪರಿಹಾರಮಾಡಬೇಕೆಂದು ಸೂರ್ಯನನ್ನು ಪ್ರಾರ್ಥಿಸಲು ಸೂರ್ಯನು ಅದರಂತೆ ಆ ಋಷಿಯ ರೋಗವನ್ನು ನಾಶಮಾಡಿದನು. ಆದುದರಿಂದ ಈ ಮೂರು ಋಕ್ಕುಗಳಿಂದ ಸೂರ್ಯನನ್ನು ಪ್ರಾರ್ಥನೆಮಾಡಿದರೆ ಈಗಲೂ ರೋಗ ನಿವಾರಣೆಯಾಗುವುದು. ಈ ವಿಷಯವನ್ನು ಉದ್ಯನ್ನದ್ಯೇತಿ ಮಂತ್ರೋऽಯಂ ಸೌರಃ ಪಾಪಪ್ರಣಾಶನಃ | ರೋಗಘ್ನಶ್ಚ ವಿಷಘ್ನಶ್ಚ ಭುಕ್ತಿಮುಕ್ತಿಫಲಪ್ರದ ಇತಿ—ಎಂದರೆ ಉದ್ಯನ್ನದ್ಯ ಎಂಬ ಸೂರ್ಯದೇವತಾಕವಾದ ಈ ಮೂರು ಋಕ್ಕುಗಳು, ಪಠಿಸಿದವರ ಪಾಪಗಳನ್ನು ನಾಶಮಾಡುವುದಲ್ಲದೆ ಸಕಲರೋಗಗಳನ್ನೂ ವಿಷವನ್ನೂ ನಾಶಮಾಡಿ ಇಹಲೋಕ ಪರಲೋಕ ಸೌಖ್ಯಗಳಾದ ಭುಕ್ತಿಮುಕ್ತಿಗಳನ್ನು ಕೊಡುವವು ಎಂದು ಶೌನಕಮಹರ್ಷಿಯು ಹೇಳಿರುವರು. ಬೃಹದ್ದೇವತಾ ಎಂಬ ಗ್ರಂಥದಲ್ಲಿಯೂ ರೋಗಘ್ನಸ್ತ್ರೃಚ ಉತ್ತಮಃ (ಬೃ. ದೆ. ೩-೧೧೩) ಎಂದು ಹೇಳಿರುವುದು.



CC-0. Jangamwadi Math Collection. Digitized by eGangotri

ಉದ್ಯನ್ನದ್ಯ—ಈಗತಾನೇ ಉದಯಿಸಿರುವ ಸೂರ್ಯನು ಪೂರ್ವದಿಕ್ಕಿನ ಅಧೋಭಾಗದಲ್ಲಿ ಉದಯಿಸಿ ಕ್ರಮವಾಗಿ ಆರೋಹನ್ ಉತ್ತರಾಂ ದಿವಂ ಎಂದರೆ ಸ್ವರ್ಗದ (ಅಂತರಿಕ್ಷದ) ಮೇಲುಭಾಗಕ್ಕೆ ಹೋಗುವನು.

ಮಿತ್ರಮಹಃ—ಮಿತ್ರಮನುಕೂಲಂ ಮಹಸ್ತೇಜೋ ಯಸ್ಯಾಸೌ । ಸರ್ವೇಷಾಮನುಕೂಲ-ದೀಪ್ತಿಯುಕ್ತ ಇತ್ಯರ್ಥಃ—ಸರ್ವರಿಗೂ ಅನುಕೂಲವಾದ ಅಥವಾ ಅತ್ಯವಶ್ಯಕವಾದ ಕಾಂತಿಯಿಂದ (ಬೆಳಕಿನಿಂದ) ಕೂಡಿರುವವನು.

ಉತ್ತರಾಂ ದಿವಂ ಆರೋಹನ್—ಉದ್ಗತತರಾಂ ದಿವಮಾರೋಹನ್—ಉದಯಾನಂತರ ಕ್ರಮ ಕ್ರಮವಾಗಿ ಅಂತರಿಕ್ಷದಲ್ಲಿ ಮೇಲುಮೇಲಕ್ಕೆ ಹೋಗುವನು. ಸೂರ್ಯನು ಪ್ರಾತಃಕಾಲದಲ್ಲಿ ಅಂತರಿಕ್ಷದ ಕೆಳಭಾಗದಲ್ಲಿ ಉದಯಿಸಿ ಕ್ರಮೇಣ ಮಧ್ಯಾಹ್ನಕಾಲಕ್ಕೆ ಅಂತರಿಕ್ಷದ ಮೇಲುಭಾಗಕ್ಕೆ ಬರುವನೆಂದಭಿಪ್ರಾಯವು.

ಹೃದ್ರೋಗಂ—ಹೃದಯಸಂಬಂಧವಾದ ರೋಗವನ್ನು.

ಹರಿಮಾಣಂ—ಶರೀರದಲ್ಲಿ ಉಂಟಾದ ಹಳದೀಬಣ್ಣದಿಂದ ಕೂಡಿದ ಒಂದು ವಿಧವಾದ ಚರ್ಮರೋಗ ಅಥವಾ ಈ ಶಬ್ದಕ್ಕೆ ತೊನ್ನು (Leprosy) ಎಂಬ ಅರ್ಥವನ್ನು ಕೆಲವರು ಹೇಳುವರು. ಈ ವಿಧವಾದ ಚರ್ಮರೋಗವನ್ನೂ ಪರಿಹರಿಸಬೇಕೆಂದು ಪ್ರಸ್ಕಣ್ವಋಷಿಯು ಸೂರ್ಯನನ್ನು ಪ್ರಾರ್ಥಿಸಿರುವನು.

॥ ವ್ಯಾಕರಣಪ್ರಕ್ರಿಯಾ ॥

ಮಿತ್ರಮಹಃ—ಮಿತ್ರಂ ಅನುಕೂಲಂ ಮಹಃ ತೇಜೋ ಯಸ್ಯ ಅಸೌ ಮಿತ್ರಮಹಾಃ । ಎಲ್ಲರಿಗೂ ಅನುಕೂಲವಾದ ತೇಜಸ್ಸುಳ್ಳವನು ಎಂದು ತಾತ್ಪರ್ಯ. ಮಿತ್ರಮಹಸ್ ಶಬ್ದದ ಮೇಲೆ ಸಂಬುದ್ಧಿವಿವಕ್ಷಾ ಮಾಡಿದಾಗ ಮಿತ್ರಮಹಸ್+ಸ್ ಎಂದಿರುತ್ತದೆ. ಅಸಂಬುದ್ಧೌ ಎಂದು ದೀರ್ಘ ನಿಷೇಧಮಾಡಿರುವುದರಿಂದ ದೀರ್ಘಬರುವುದಿಲ್ಲ. ಹಲ್ಙ್ಯಾದಿ ಲೋಪದಿಂದ ಸು ಲೋಪವಾಗುತ್ತದೆ. ಸಕಾರಕ್ಕೆ ರುತ್ವವಿಸರ್ಗಗಳು ಬಂದರೆ ಮಿತ್ರಮಹಃ ಎಂದು ರೂಪವಾಗುತ್ತದೆ. ಆಮಂತ್ರಿತಸ್ಯಚ ಎಂಬ ಎಂಟನೇ ಅಧ್ಯಾಯದ ಸೂತ್ರದಿಂತ ಸರ್ವಾನುದಾತ್ತಸ್ವರ ಬರುತ್ತದೆ.

ಉತ್ತರಾಮ್-ಉತ್ ಎಂಬುದು ಉಪಸರ್ಗ. ಉಪಸರ್ಗಾಃ ಕ್ರಿಯಾಯೋಗೇ ಎಂಬುದರಿಂದ ಕ್ರಿಯೆಯ ಸಂಬಂಧವಿರುವಾಗ ಮಾತ್ರ ಉಪಸರ್ಗಸಂಜ್ಞೆ ಬರುತ್ತದೆ. ಆದುದರಿಂದ ಇಲ್ಲಿ ಕೇವಲ ಉಪಸರ್ಗವಿರುವುದರಿಂದ ಉಪಸರ್ಗ ಸಂಬಂಧವಿರುವ ಪ್ರಾಕರಣಿಕವಾದ ಒಂದು ಧಾತ್ವರ್ಥವನ್ನು ಸ್ವೀಕರಿಸಬೇಕು. ಲುತಿನಿಂದ ಲಕ್ಷಣಾವೃತ್ತಿಯಿಂದ ಧಾತ್ವರ್ಥವು ಬೋಧಿತವಾಗುತ್ತದೆ. ಲಕ್ಷ್ಯವಾದ ಧಾತ್ವರ್ಥದಲ್ಲಿರುವ ಅತಿಶಯವನ್ನು ವಿವಕ್ಷಾಮಾಡಿದಾಗ ತರಪ್ ಪ್ರತ್ಯಯ ಬರುತ್ತದೆ. ಉತ್ತರಾಂ ಎಂಬಲ್ಲಿ ಹಿಂದೆ ಎರಡು ರೀತಿಯಿಂದ ವ್ಯಾಖ್ಯಾನ ತೋರಿಸಿದೆ. ಮೊದಲನೇ ವ್ಯಾಖ್ಯಾನದಲ್ಲಿ ಉತ್ತರಾಂ ಎಂಬುದು ಅಂತರಿಕ್ಷಕ್ಕೆ ವಿಶೇಷಣವಾಗಿರುತ್ತದೆ. ಆಗ ಉತ್ತರಾಂ ಎಂಬಲ್ಲಿ ವಿಶೇಷ ವಿವಕ್ಷಾಮಾಡಿದರೆ ದ್ರವಗತವಾದ ವಿಶೇಷವನ್ನು ವಿವಕ್ಷಾಮಾಡಿದಂತೆಯೇ ಆಗುತ್ತದೆ. ಆಗ ತರಪಿನ ಮೇಲೆ ಆಮ್ ಪ್ರತ್ಯಯ ಬರುವುದಿಲ್ಲ. ಕಿಮೇತ್ತಿಙವ್ಯಯಘಾದಾಮ್ವದ್ರವ್ಯ ಪ್ರಕರ್ಷೆ ಇದು ಆಮನ್ನು ವಿಧಾನಮಾಡುವ ಸೂತ್ರ. ತರಪ್‌ತಮಪ್ ಪ್ರತ್ಯಯಗಳಿಗೆ ಘ ಎಂದು ಸಂಜ್ಞೆ. ಕಿಮ್, ಏದಂತವಾದ ಶಬ್ದ, ತಿಙಂತ, ಅವ್ಯಯ ಇವುಗಳಮೇಲೆ ಬಂದಿರುವ ತರಪ್‌ತಮಪ್ (ಪಾ. ಸೂ. ೫-೪-೧೧) ಪ್ರತ್ಯಯಗಳ ಮೇಲೆ ಆಮ್



CC-0. Jangamwadi Math Collection. Digitized by eGangotri

ಬರುತ್ತದೆ. ದ್ರವ್ಯಗತವಾದ ಪ್ರಕರ್ಷ ತೋರುತ್ತಿದ್ದರೆ ಬರುವುದಿಲ್ಲ. ಹೀಗೆ ಅದ್ರವ್ಯಪ್ರಕರ್ಷೆ ಎಂದು ನಿಷೇಧ ಮಾಡಿರುವುದರಿಂದ ಅಂತರಿಕ್ಷವಿಶೇಷಣವಾಗುವಾಗ ಬರುವುದಿಲ್ಲ. ಎರಡನೆಯ ವ್ಯಾಖ್ಯಾನದಲ್ಲಿ ಆರೋಹಣ ಕ್ರಿಯಾದಲ್ಲಿರುವ ಪ್ರಕರ್ಷವು ತೋರುತ್ತದೆ. ಆದುದರಿಂದ ಹಿಂದಿನ ಸೂತ್ರದಿಂದ ತರಪಿನಮೇಲೆ ಆಮ್ ಬರುತ್ತದೆ. ಪ್ರಥಮ ವ್ಯಾಖ್ಯಾನದಲ್ಲಿ ತರಪಿನಮೇಲೆ ಆಮ್ ಬರದಿರುವುದರಿಂದ ಸ್ತ್ರೀತ್ವವಿವಕ್ಷಾಮಾಡಿದಾಗ ಅದಂತವಾದುದ ರಿಂದ ಟಾಪ್ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಉತ್ತರಾಂ ಎಂದು ರೂಪವಾಗುತ್ತದೆ. ಟಾಪ್ ಮತ್ತು ತರಪ್ ಎರಡು ಪ್ರತ್ಯಯಗಳೂ ಪಿತ್ತಾದುದರಿಂದ ಅನುದಾತ್ತಸ್ವರವು ಬರುವುದರಿಂದ ಉಪಸರ್ಗದ ಉದಾತ್ತ ಸ್ವರವೇ ಉಳಿಯುತ್ತದೆ. ಉತ್ತರಾಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ. ಎರಡನೇ ವ್ಯಾಖ್ಯಾನದಲ್ಲಿ ತರಪ್ ಪಿತ್ತಾದುದರಿಂದ ಅನುದಾತ್ತಸ್ವರ ಬರುತ್ತದೆ. ಆದರೆ ಆದರಮೇಲೆ ಆಮ್ ವಿಧಾನಮಾಡಿರುವುದರಿಂದ ಅದು ಸತಿಶಿಷ್ಟವಾಗುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೆ ಛಂದಸ್ಸಿನಲ್ಲಿ ವ್ಯತ್ಯಯವನ್ನು ಸ್ವೀಕರಿಸಿ ಆದ್ಯುದಾತ್ತವನ್ನು ಹೇಳಬೇಕು. ಅಥವಾ ವೃಷಾದಿಗಣವು ಆಕೃತಿಗಣವೆಂದು ಸ್ವೀಕರಿಸಿರುವುದರಿಂದ ಉತ್ತರಾಂ ಎಂಬ ಆಮಂತಶಬ್ದವನ್ನು ಆ ಗಣದಲ್ಲಿ ಪಠಿಸಿದೆ ಎಂದು ಸ್ವೀಕರಿಸಬೇಕು. ವೃಷಾದಿಗಳಿಗೆ ಆದ್ಯು ದಾತ್ತವನ್ನು ಹೇಳಿರುವುದರಿಂದ ಸ್ವರಸವಾಗಿ ಉತ್ತರಾಂ ಎಂಬುದಕ್ಕೆ ಆದ್ಯುದಾತ್ತವು ಸಿದ್ಧವಾಗುತ್ತದೆ.

ಹೃದ್ರೋಗಮ್—ಹೃದಯಸ್ಯ ರೋಗಃ ಹೃದ್ರೋಗಃ ತಂ ಹೃದ್ರೋಗಂ || ದೇಹದ ಒಳಗಿನ ರೋಗ ಎಂದರ್ಥ. ವಾ ಶೋಕಷ್ಯಞ್‌ರೋಗೇಷು (ಪಾ. ಸೂ. ೬-೩-೫೧) ಹೃದಯ ಶಬ್ದಕ್ಕೆ ಶೋಕ, ಷ್ಯಞ್, ರೋಗ ಶಬ್ದಗಳು ಪರದಲ್ಲಿರುವಾಗ ಹೃದಾದೇಶವು ವಿಕಲ್ಪವಾಗಿ ಬರುತ್ತದೆ ಎಂಬುದರಿಂದ ಇಲ್ಲಿ ರೋಗಶಬ್ದ ಪರದಲ್ಲಿರು ವುದರಿಂದ ಹೃದಯಶಬ್ದಕ್ಕೆ ಹೃದಾದೇಶ ಬರುತ್ತದೆ. ಹೃದ್ರೋಗಂ ಎಂದು ರೂಪವಾಗುತ್ತದೆ.

ಮಮ—ಅಸ್ಮಚ್ಛಬ್ದಕ್ಕೆ ಷಷ್ಠೀ ಏಕವಚನ ಪರದಲ್ಲಿರುವಾಗ ತವಮಮೌಙಸಿ (ಪಾ. ಸೂ. ೭-೨-೯೬) ಸೂತ್ರದಿಂದ ಮಪರ್ಯಂತಕ್ಕೆ ಮಮ ಎಂಬ ಆದೇಶ ಬರುತ್ತದೆ. ಶೇಷೇಲೋಪಃ ಸೂತ್ರದಿಂದ ಮಪರ್ಯಂತದ ಪರದಲ್ಲಿರುವ ಅದ್ ಎಂಬುದಕ್ಕೆ ಲೋಪ ಬರುತ್ತದೆ. ಯುಷ್ಮದಸ್ಮದ್ಭ್ಯಾಂ ಙಸೋಽಶ್ (ಪಾ. ಸೂ. ೭-೧-೨೭) ಸೂತ್ರದಿಂದ ಷಷ್ಠಿಯ ಙಸ್ ವಿಭಕ್ತಿಗೆ ಅಶಾದೇಶ ಬರುತ್ತದೆ. ಅತೋಗುಣೇ ಸೂತ್ರದಿಂದ ಪರರೂಪವು ಏಕಾ ದೇಶವಾಗಿ ಬಂದರೆ ಮಮ ಎಂದು ರೂಪವಾಗುತ್ತದೆ. ಏಕಾದೇಶೇ ಉದಾತ್ತೇನೋದಾತ್ತಃಸೂತ್ರದಿಂದ ವಿಭಕ್ತಿಗೆ ಉದಾತ್ತವು ಪ್ರಾಪ್ತವಾದರೆ ಯುಷ್ಮದಸ್ಮದೋರ್ಙಸಿ (ಪಾ. ಸೂ. ೬-೧-೨೧೧) ಎಂಬುದರಿಂದ ಆದ್ಯುದಾತ್ತ ವಾಗುತ್ತದೆ. ಮಮ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

ಹರಿಮಾಣಮ್—ಹೃಞ್ ಹರಣೆ ಧಾತು. ಭ್ವಾದಿ. ಜನಿಹೃಭ್ಯಾಮಿಮನಿನ್ (ಉ. ಸೂ. ೪-೫೪೮) ಎಂಬ ಉಣಾದಿ ಸೂತ್ರದಿಂದ ಈ ಧಾತುವಿಗೆ ಇಮನಿನ್ ಪ್ರತ್ಯಯ ಬರುತ್ತದೆ. ಹೃ+ಇಮನಿನ್ ಎಂದಿರುವಾಗ ಇನ್ ಲೋಪವಾಗುತ್ತದೆ. ಧಾತುವಿಗೆ ಆರ್ಧಧಾತುಕನಿಮಿತ್ತವಾದ ಗುಣ ಬರುತ್ತದೆ. ಯಕಾರಸ್ಥಾನಕ್ಕೆ ಬರುವ ಗುಣವು ರ ಪರವಾಗಿ ಬಂದರೆ ಹರಿಮನ್ ಎಂದು ನಾಂತವಾದ ಪದವಾಗುತ್ತದೆ. ದ್ವಿತೀಯೈಕವಚನದಲ್ಲಿ ಅಮ್ ಪ್ರತ್ಯಯ ಬಂದಾಗ ಹರಿಮಾಣಂ ಎಂದು ರೂಪವಾಗುತ್ತದೆ. ಅಟ್‌ಕುಪ್ವಾಙ್‌ನುಮ್ ವ್ಯವಾಯೇಽಪಿ ಸೂತ್ರ ದಿಂದ ನಕಾರಕ್ಕೆ ಣತ್ವ ಬಂದಿರುತ್ತದೆ. ನಿತ್ ಪ್ರತ್ಯಯವಾದುದರಿಂದ ಆದ್ಯುದಾತ್ತವು ಪ್ರಾಪ್ತವಾದರೆ ವ್ಯತ್ಯಯ ದಿಂದ ಅಂತೋದಾತ್ತಸ್ವರವು ಬರುತ್ತದೆ. ಹರಿಮಾಣಂ ಎಂಬಲ್ಲಿ ಮಕಾರೋತ್ತರಾಕಾರವು ಉದಾತ್ತವಾಗುತ್ತದೆ. ಅಥವಾ ಹರಿತ್ ಎಂಬುದು ವರ್ಣವಾಚಕವಾದ ಶಬ್ದ. ವರ್ಣದೃಢಾದಿಭ್ಯಃ ಷ್ಯಂಚ (ಪಾ. ಸೂ. ೫-೧-೧೨೩)


CC-0. Jangamwadi Math Collection. Digitized by eGangotri

ವರ್ಣವಾಚಕಶಬ್ದಗಳಿಗೂ ದೃಢಾದಿಗಳಿಗೂ ಷ್ಯಞ್ ಪ್ರತ್ಯಯವೂ ಚಕಾರದಿಂದ ಇಮನಿಚ್ ಪ್ರತ್ಯಯವೂ ಬರುತ್ತದೆ ಎಂಬುದರಿಂದ ಇಲ್ಲಿ ಹರಿತ್ ಶಬ್ದಕ್ಕೆ ಇಮನಿಚ್ ಪ್ರತ್ಯಯ ಬರುತ್ತದೆ. ಹರಿತ್+ಇಮನ್ ಎಂದಿರುವಾಗ ಟೇಃ (ಪಾ. ಸೂ. ೬-೪-೧೫೫) ಭಸಂಜ್ಞಾ ಇರುವ ಅಂಗದ ಟಿಗೆ ಇಷ್ಠನ್ ಇಮನಿಚ್ ಈಯಸುನ್ ಪ್ರತ್ಯಯಗಳು ಪರದಲ್ಲಿರುವಾಗ ಲೋಪಬರುತ್ತದೆ ಎಂಬುದರಿಂಧ ಟಿಗೆ (ಇತ್) ಲೋಪಬರುತ್ತದೆ. ಆಗ ಹರಿಮನ್ ಎಂದು ನಾಂತಶಬ್ದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಹರಿಮಾಣಂ ಎಂದು ಪೂರ್ವದಂತೆಯೇ ಆಗುತ್ತದೆ.

॥ ಸಂಹಿತಾಪಾಠಃ ॥

ಶುಕೇಷು ಮೇ ಹರಿಮಾಣಂ ರೋಪಣಾಕಾಸು ದಧ್ಮಸಿ ।
ಅಥೋ ಹಾರಿದ್ರವೇಷು ಮೇ ಹರಿಮಾಣಂ ನಿ ದಧ್ಮಸಿ ॥೧೨॥

॥ ಪದಪಾಠಃ ॥

ಶುಕೇಷು । ಮೇ । ಹರಿಮಾಣಂ । ರೋಪಣಾಕಾಸು । ದಧ್ಮಸಿ ।
ಅಥೋ ಇತಿ । ಹಾರಿದ್ರವೇಷು । ಮೇ । ಹರಿಮಾಣಂ । ನಿ । ದಧ್ಮಸಿ ॥೧೨॥

॥ಸಾಯಣಭಾಷ್ಯಂ ॥

ಮೇ ಮದೀಯಂ ಹರಿಮಾಣಂ ಶರೀರಗತಂ ಹರಿದ್ವರ್ಣಸ್ಯ ಭಾವಂ ಶುಕೇಷು ತಾದೃಶಂ ವರ್ಣಂ ಕಾಮಯಮಾನೇಷು ಪಕ್ಷಿಷು ತಥಾ ರೋಪಣಾಕಾಸು ಶಾರಿಕಾಸು ಪಕ್ಷಿವಿಶೇಷೇಷು ದಧ್ಮಸಿ । ಸ್ಥಾಪಯಾಮಃ । ಅಥೋ ಅಪಿ ಚ ಹಾರಿದ್ರವೇಷು ಹರಿತಾಲದ್ರುಮೇಷು ತಾದೃಗ್ವರ್ಣವತ್ಸು ಮೇ ಮದೀಯಂ ಹರಿಮಾಣಂ ನಿ ದಧ್ಮಸಿ । ನಿದಧೀಮಹಿ । ಸ ಚ ಹರಿಮಾ ತತ್ರೈವ ಸುಖೇನಾಸ್ತಾಮಸ್ಮಾನ್ಮಾ ವಾಧಿಷ್ಟೇತ್ಯರ್ಥಃ ॥ ದಧ್ಮಸಿ । ಇದಂತೋ ಮಸಿರಿತಿ ಮಸ ಇಕಾರಾಗಮಃ ॥

॥ ಪ್ರತಿಪದಾರ್ಥ ॥

ಮೇ—ನನ್ನ (ದೇಹದ) । ಹರಿಮಾಣಂ—ಹಳದೀಬಣ್ಣವನ್ನು । ಶುಕೇಷು — (ಆ ಬಣ್ಣಕ್ಕೆ ಇಷ್ಟಪಡುವ) ಗಿಳಿ ಮುಂತಾದ ಪಕ್ಷಿಗಳಲ್ಲಿಯೂ । ರೋಪಣಾಕಾಸು—ಶಾರಿಕಾ (ಮೈನಾ) ಪಕ್ಷಿಗಳಲ್ಲಿಯೂ । ದಧ್ಮಸಿ—(ನನ್ನ ದೇಹದಿಂದ ಬದಲಾಯಿಸಿ) ಇಡೋಣ । ಅಥೋ—ಅಲ್ಲದೆ । ಹಾರಿದ್ರವೇಷು—ಹರಿತಾಳವೃಕ್ಷಗಳಲ್ಲಿಯೂ । ಮೇ—ನನ್ನ (ದೇಹದ) । ಹರಿಮಾಣಂ—ಹಳದೀ ಬಣ್ಣವನ್ನು । ನಿದಧ್ಮಸಿ—ಇಡೋಣ.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ನನಗೆ ಅನನುಕೂಲವಾಗಿರುವ ನನ್ನ ದೇಹದ (ಪಚ್ಚೆ) ಹಳದೀ ಬಣ್ಣವನ್ನು ಆ ಬಣ್ಣಕ್ಕೆ ಆಸೆಪಡುವ ಗಿಳಿಗಳಲ್ಲಿಯೂ ಮೈನಾ ಪಕ್ಷಿಗಳಲ್ಲಿಯೂ ಹರಿತಾಳ ವೃಕ್ಷಗಳಲ್ಲಿಯೂ ಇಡೋಣ.

## English Translation.

Let us transfer the yellowness (of my body) to the parrots, to the starlings or to the Haridala tree.

॥ ವಿಶೇಷ ವಿಷಯಗಳು ॥

ಹಿಂದಿನ ಋಕ್ಕಿನಲ್ಲಿ ಪ್ರಸ್ಕಣ್ವಋಷಿಯು ತನ್ನ ಚರ್ಮಗತವಾದ ರೋಗವನ್ನು ಪರಿಹರಿಸಬೇಕೆಂದು ಸೂರ್ಯನನ್ನು ಪ್ರಾರ್ಥಿಸಿರುವನಷ್ಟೆ. ಆ ರೋಗಪರಿಹಾರಕ್ರಮವನ್ನು ಈ ಮಂತ್ರದಲ್ಲಿ ವಿಶದಪಡಿಸಿರುವನು.

ಶುಕೇಷು— ಗಿಣಿಗಳಲ್ಲಿ ; ಗಿಣಿಗಳ ಬಣ್ಣವು ಹಸುರಾಗಿಯೂ ಹಳದಿಯಾಗಿಯೂ ಇರುವುದು. ನನ್ನ ಚರ್ಮಗತವಾದ ಆ ಬಣ್ಣವು ಶುಕಾದಿಗಳಿಗೆ ಸ್ವಭಾವಸಿದ್ಧವಾದುದು. ಆದುದರಿಂದ ರೋಗಜನಿತವಾದ ಈ ಹರಿದ್ವರ್ಣವನ್ನು ಶುಕಾದಿಪಕ್ಷಿಗಳಲ್ಲಿ ಇಟ್ಟಲ್ಲಿ ಎಂದರೆ ಸೇರಿಸಿದಲ್ಲಿ ನನ್ನ ರೋಗವು ಸುಲಭವಾಗಿ ನಾಶವಾಗುವುದೆಂಬ ಉಪಾಯವನ್ನು ಸೂಚಿಸಿ ಋಷಿಯು ಸೂರ್ಯನನ್ನು ಪ್ರಾರ್ಥಿಸಿರುವನು.

ಹರಿಮಾಣಂ— ಹರಿದ್ವರ್ಣಸ್ಯ ಭಾವಂ। ಹಳದೀ ಬಣ್ಣದಿಂದ ಕೂಡಿದ ಈ ನನ್ನ ಚರ್ಮರೋಗವನ್ನು ; ಹಳದಿಯ ಬಣ್ಣವನ್ನು.

ರೋಪಣಾಕಾಸು— ಶಾರಿಕಾ ಎಂಬ ಪಕ್ಷಿವಿಶೇಷಗಳಲ್ಲಿ. Starlings.

ಹಾರಿದ್ರವೇಷು— ಹರಿತಾಲವೆಂಬ ವೃಕ್ಷವಿಶೇಷಗಳಲ್ಲಿ- ಇಲ್ಲಿ ಹರಿತಾಲ ವೃಕ್ಷವು ಯಾವುದು ಎಂಬುದು ಸ್ಪಷ್ಟವಾಗಿಲ್ಲ. ಬಹುಶಃ ಆ ವೃಕ್ಷದ ಎಲೆಗಳು ಹಳದೀ ಬಣ್ಣದ್ದಾಗಿರಬಹುದು. ಹರಿತಾಲ ಎಂದರೆ ಅರಸಿನ- ಎಂದೂ ಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

ದಧ್ಮಸಿ— ಡುಧಾಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ. ಲಟ್ ಉತ್ತಮಪುರುಷ ಬಹುವಚನ ವಿವಕ್ಷಾಮಾಡಿದಾಗ ಮಸ್ ಪ್ರತ್ಯಯ ಬರುತ್ತದೆ. ಧಾ+ಮಸ್ ಎಂದಿರುವಾಗ ಜುಹೋತ್ಯಾದಿಭ್ಯಃ ಶ್ಲುಃ ಎಂಬುದರಿಂದ ಶ್ಲುವಿಕರಣ ಬರುತ್ತದೆ. ಶ್ಲೌ ಎಂಬ ಸೂತ್ರದಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಧಾಧಾ+ಮಸ್ ಎಂದಿರುವಾಗ ಹ್ರಸ್ವಃ ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ ಬರುತ್ತದೆ. ಅಭ್ಯಾಸೇ ಚರ್ಚ ಸೂತ್ರದಿಂದ ಜಶ್ತ್ವ ಬರುತ್ತದೆ. ದಧಾ+ಮಸ್ ಎಂದಿರುವಾಗ ಶ್ನಾಭ್ಯಸ್ತಯೋರಾತಃ (ಪಾ. ಸೂ. ೬.೪-೧೧೨) ಎಂಬುದರಿಂದ ಅಭ್ಯಸ್ತಸಂಜ್ಞೆ ಇರುವುದರಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ದಧ್ಮಸ್ ಎಂದಿರುವಾಗ ಸಕಾರಕ್ಕೆ ರುತ್ವವಿಸರ್ಗಗಳು ಪ್ರಾಪ್ತವಾಗುತ್ತವೆ. ಇದಂತೋಮಸಿ (ಪಾ. ಸೂ. ೭-೧-೪೬) ಮಸಿ ಎಂಬುದು ಅವಿಭಕ್ತಿಕ



CC-0. Jangamwadi Math Collection. Digitized by eGangotri

ವಾದ ನಿರ್ದೇಶ. ಇಕಾರವು ಉಚ್ಚಾರಣಾರ್ಥವಾಗಿ ಗೃಹೀತವಾಗಿದೆ. ಮಸ್ ಎಂಬುದು ಇಕಾರರೂಪವಾದ ಅಂತ್ಯಾವಯವದಿಂದ ಕೂಡಿಕೊಂಡು ಬರುತ್ತದೆ; ಅಂದರೆ ಮಸಿಗೆ ಇತ್ ಎಂಬುದು ಆಗಮವಾಗಿ ಬರುತ್ತದೆ ಎಂದು ತಾತ್ಪರ್ಯ. ಇದರಿಂದ ರುತ್ವವಿಸರ್ಗಗಳು ಬಾಧಿತವಾಗಿ ಮಸಿ ಎಂದು ಪ್ರತ್ಯಯವಾಗುತ್ತದೆ. ದಧ್ಮಸಿ ಎಂದು ರೂಪವಾಗುತ್ತದೆ. ತಿಙ್ಙತಿಙಃ ಸೂತ್ರದಿಂದ ನಿಘಾತಸ್ವರ ಬರುವುದರಿಂದ ದಧ್ಮಸಿ ಎಂಬುದು ಸರ್ವಾನುದಾತ್ತ ವಾಗುತ್ತದೆ.

॥ ಸಂಹಿತಾಪಾಠಃ ॥

ಉದಗಾದಯಮಾದಿತ್ಯೋ ವಿಶ್ವೇನ ಸಹಸಾ ಸಹ ।
ದ್ವಿಷನ್ತಂ ಮಹ್ಯಂ ರನ್ಧಯನ್ಮೋ ಅಹಂ ದ್ವಿಷತೇ ರಧಂ ॥ ೧೩ ॥

॥ ಪದಪಾಠಃ ॥

ಉತ್ । ಅಗಾತ್ । ಅಯಂ । ಆದಿತ್ಯಃ । ವಿಶ್ವೇನ । ಸಹಸಾ । ಸಹ ।
ದ್ವಿಷನ್ತಂ । ಮಹ್ಯಂ । ರಂಧಯನ್ । ಮೋ ಇತಿ । ಅಹಂ । ದ್ವಿಷತೇ । ರಧಂ ॥೧೩॥

॥ ಸಾಯಣಭಾಷ್ಯಂ ॥

ಅಯಂ ಪುರೋವರ್ತ್ಯಾದಿತ್ಯೋಽದಿತೇಃ ಪುತ್ರಃ ಸೂರ್ಯೋ ವಿಶ್ವೇನ ಸಹಸಾ ಸರ್ವೇಣ ಬಲೇನ ಸಹೋದಗಾತ್ । ಉದಯಂ ಪ್ರಾಪ್ತವಾನ್ । ಕಿಂ ಕುರ್ವನ್ । ಮಹ್ಯಂ ದ್ವಿಷಂತಂ ರಂಧಯನ್। ಮನೋಪದ್ರವಕಾರಿಣಂ ಹಿಂಸನ್ । ಅಪಿ ಚಾಹಂ ದ್ವಿಷತೇಽನಿಷ್ಟಕಾರಿಣೇ ರೋಗಾಯ ಮೋ ರಧಂ । ನೈವ ಹಿಂಸಾಂ ಕರೋಮಿ । ಸೂರ್ಯ ಏವ ಅಸ್ಮದನಿಷ್ಟಕಾರಿಣಂ ರೋಗಂ ವಿನಾಶಯತ್ವಿತ್ಯರ್ಥಃ ॥ ಅಗಾತ್ ಏತೇರ್ಲುಙೀಣೋ ಗಾ ಲುಙೀತಿ ಗಾದೇಶಃ । ಗಾತಿಸ್ಥೇತಿ ಸಿಚೋ ಲುಕ್ । ಆದಿತ್ಯಃ । ದಿತ್ಯದಿತ್ಯಾದಿತ್ಯೇತ್ಯಪತ್ಯಾರ್ಥೇ ಪ್ರಾಗ್ದೀವ್ಯತೀಯೋ ಣ್ಯಪ್ರತ್ಯಯಃ । ರಂಧಯನ್ । ರಧ ಹಿಂಸಾಸಂರಾದ್ಧ್ಯೋಃ । ಣ್ಯಂತಾಲ್ಲಟಃ ಶತೃ । ರಧಿಜಭೋರಚಿ । ಪಾ. ೭-೧-೬೧ । ಇತಿ ಧಾತೋರ್ನುಮಾಗಮಃ । ಮೋ । ಮಾ ಉ ನಿಪಾತದ್ವಯಸಮುದಾಯೋ ಮೈವೇತ್ಯಸ್ಯಾರ್ಥೇ । ಓತ್ । ಪಾ. ೧-೧-೧೫ । ಇತಿ ಪ್ರಗೃಹ್ಯತ್ವೇ ಪ್ಲುತಪ್ರಗೃಹ್ಯಾ ಅಚೀತಿ ಪ್ರಕೃತಿಭಾವಃ । ದ್ವಿಷತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ರಧಂ । ರಧೇರ್ಲುಙಿ ಪುಷಾದಿತ್ವಾತ್ ಚ್ಲೇರಙಾದೇಶಃ । ರಧಿಜಭೋರಚೀತಿ ಧಾತೋರ್ನುಂ । ಅನಿದಿತಾಮಿತ್ಯನುಷಂಗಲೋಪಃ । ನ ಮಾಙ್ಯೋಗ ಇತ್ಯಡಭಾವಃ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

**ಅಯಂ ಆದಿತ್ಯಃ**—ಎದುರಿಗಿರುವ ಅದಿತಿಪುತ್ರನಾದ ಈ ಸೂರ್ಯನು । **ವಿಶ್ವೇನ ಸಹಸಾ ಸಹ**—(ತನ್ನ) ಸಮಸ್ತಬಲದೊಂದಿಗೆ । **ಮಹ್ಯಂ**—ನನಗಾಗಿ । **ದ್ವಿಷಂತಂ**—(ರೋಗರೂಪದಲ್ಲಿರುವ) ಶತ್ರುವನ್ನು । **ರಂಧಯನ್**—ಹಿಂಸಿಸುತ್ತ (ನಾಶಮಾಡುತ್ತ) । **ಉದಗಾತ್**—ಉದಯಿಸಿದ್ದಾನೆ. (ಮತ್ತು) । **ಅಹಂ**—ನಾನು **ದ್ವಿಷತೇ**—(ನನಗೆ ಕೇಡನ್ನುಂಟುಮಾಡುವ ರೋಗರೂಪವಾದ) ಶತ್ರುವಿಗೆ । **ಮೋ ರಧಂ**—ಹಿಂಸೆಯನ್ನು ಮಾಡುವುದಿಲ್ಲ. (ನನಗೋಸ್ಕರ ಸೂರ್ಯನೇ ಶತ್ರುವನ್ನು ನಾಶಮಾಡಲಿ).

|| ಭಾವಾರ್ಥ ||

ಎದುರಿಗಿರುವ ಅದಿತಿಪುತ್ರನಾದ ಈ ಸೂರ್ಯನು ತನ್ನ ಸಮಸ್ತ ಬಲದೊಂದಿಗೆ ನನ್ನ ರೋಗರೂಪದಲ್ಲಿರುವ ಶತ್ರುವನ್ನು ನಾಶಮಾಡುತ್ತ ಉದಯಿಸಿದ್ದಾನೆ. ಆ ಶತ್ರುನಾಶಮಾಡಲು ನನಗೆ ಶಕ್ತಿಯಿಲ್ಲ. ಸೂರ್ಯನೇ ನಾಶಮಾಡಲಿ.

## English Translation.

This Aditya has risen with all his might (glory) destroying my adversary, for I am unable to resist my enemy.

|| ವಿಶೇಷ ವಿಷಯಗಳು ||

**ಅಯಂ ಆದಿತ್ಯಃ**—ಈ ಸೂರ್ಯನು ಎಂದರೆ ನನ್ನ ಮುಂದೆ ಕಾಣಿಸುತ್ತಿರುವ ಈ ಸೂರ್ಯನು, ಈಗತಾನೇ ಉದಯಿಸಿರುವ ಸೂರ್ಯನು.

**ವಿಶ್ವೇನ ಸಹಸಾ ಸಹ**—ಸಮಸ್ತಬಲಸಹಿತನಾಗಿ ಎಂದರೆ ಸಮಸ್ತರಶ್ಮಿಸಹಿತನಾಗಿ, ಬಹಳ ಪ್ರಕಾಶಮಾನವಾಗಿ. with all his glory. ಸಹಸ್ ಎಂಬ ಶಬ್ದವು ಬಲನಾಮಗಳಲ್ಲಿ ಪಠಿತವಾಗಿದೆ. (ನಿ. ೩-೯.)

**ಮಹ್ಯಂ ದ್ವಿಷಂತಂ ರಂಧಯನ್**—ನನ್ನ ಹಿಂಸೆಯನ್ನುಂಟುಮಾಡುವ ಶತ್ರುಗಳನ್ನು ಹಿಂಸಿಸುತ್ತಾ; ಸ್ಕಂದಸ್ವಾಮಿಯು ರಂಧಯನ್ ಎಂಬ ಶಬ್ದಕ್ಕೆ ರಧ್ಯತಿರ್ವಶಗಮನೇ। ಮಮ ವಶಂ ನಯನ್ನಿತ್ಯರ್ಥಃ। ಎಂದರೆ ನನ್ನ ಶತ್ರುಗಳನ್ನು ನನ್ನ ವಶಮಾಡುತ್ತಾ ಎಂದರ್ಥವಿವರಣೆಮಾಡಿರುವರು. ಮತ್ತು.

**ಮೋ ಅಹಂ ದ್ವಿಷತೇ ರಧಂ**—ಅಸ್ಯ ಭಗವತಃ ಪ್ರಸಾದಾನ್ಮಾಹಂ ಶತ್ರೋರ್ವಶಂ ಗಚ್ಛೇಯಂ। ನಾನು ಸಹ ಶತ್ರುಗಳ ವಶವಾಗದಂತೆ ಮಾಡಬೇಕೆಂದು ಹೇಳಿರುವ ಅರ್ಥವೂ ಸಮಂಜಸವಾಗಿರುವುದು. ಭಾಷ್ಯಕಾರರು ಈ ಶಬ್ದಗಳಿಗೆ ನಾನು ನನ್ನ ಶತ್ರುಗಳಾದ ರೋಗಾದಿಗಳನ್ನು ಹಿಂಸಿಸದಿರಲಿ. ಸೂರ್ಯನೇ ಅವುಗಳನ್ನು ನಾಶಮಾಡಲಿ ಎಂಬ ಅರ್ಥವನ್ನು ವಿವರಿಸಿರುವರು.

|| ವ್ಯಾಕರಣಪ್ರಕ್ರಿಯಾ ||

**ಅಗಾತ್**—ಇಣ್ ಗತೌ ಧಾತು. ಅದಾದಿ. ಲುಙ್ ಪ್ರಥಮಪುರುಷ ಏಕವಚನ ವಿವಕ್ಷಾಮಾಡಿದಾಗ ತಿಪ್. ಪ್ರತ್ಯಯು ಬರುತ್ತದೆ. ಇತಶ್ಚ ಸೂತ್ರದಿಂದ ಪ್ರತ್ಯಯದ ಇಕಾರಕ್ಕೆ ಲೋಪ ಬರುತ್ತದೆ. ಇಣೋಗಾಲುಙಿ (ಪಾ. ಸೂ. ೨-೪-೪೫) ಲುಙ್ ಪರದಲ್ಲಿರುವಾಗ ಇಣ್ ಧಾತುವಿಗೆ ಗಾ ಎಂಬ ಆದೇಶವು ಬರುತ್ತದೆ. ಚ್ಲಿ



CC-0. Jangamwadi Math Collection. Digitized by eGangotri

ವಿಕರಣಕ್ಕೆ ಸಿಚಾದೇಶ ಬರುತ್ತದೆ. ಧಾತುವಿಗೆ ಲುಙ್ ನಿಮಿತ್ತಕವಾದ ಅಡಾಗಮ ಬರುತ್ತದೆ. ಅಗಾ+ಸ್+ತ್ ಎಂದಿರುವಾಗ ಗಾತಿಸ್ಥಾಘುಪಾ (ಪಾ. ಸೂ. ೨-೪-೭೭) ಸೂತ್ರದಿಂದ ಸಿಚಿಗೆ ಲುಕ್ ಬರುತ್ತದೆ. ಅಗಾತ್ ಎಂದು ರೂಪವಾಗುತ್ತದೆ.

ಆದಿತ್ಯಃ—ಅದಿತೇಃ ಅಪತ್ಯಂ ಪುಮಾನ್ ಆದಿತ್ಯಃ ಅದಿತಿಯ ಮಗನು ಎಂದರ್ಥ. ದಿತ್ಯದಿತ್ಯಾದಿತ್ಯ-ಪತ್ಯುತ್ತರಪದಾಣ್ಣ್ಯಃ (ಪಾ. ಸೂ. ೪-೧-೮೫) ಸೂತ್ರದಿಂದ ತಸ್ಯಾಪತ್ಯಂ ಎಂಬರ್ಥದಲ್ಲಿ ಅಣಿಗೆ ಅಪವಾದವಾಗಿ ಣ್ಯ ಪ್ರತ್ಯಯವು ಬರುತ್ತದೆ. ಅದಿತಿ+ಯ ಎಂದಿರುವಾಗ ಪ್ರತ್ಯಯ ಣಿತ್ತಾದುದರಿಂದ ತದ್ಧಿತೇಷ್ವಚಾಮಾದೇಃ ಸೂತ್ರದಿಂದ ಆದಿವೃದ್ಧಿ ಬರುತ್ತದೆ. ಯಸ್ಯೇತಿಚ ಸೂತ್ರದಿಂದ ಪ್ರತ್ಯಯ ಪರದಲ್ಲಿರುವಾಗ ಕೊನೆಯ ಇಕಾರಕ್ಕೆ ಲೋಪಬಂದರೆ ಆದಿತ್ಯ ಎಂದು ರೂಪವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ.

ರಂಧಯನ್—ರಧ ಹಿಂಸಾಸಂರಾಧ್ಯೋಃ ಧಾತು. ದಿವಾದಿ. ಪ್ರೇರಣಾ ತೋರುವಾಗ ಹೇತುಮತಿ ಚ ಸೂತ್ರದಿಂದ ಣಿಚ್ ಬರುತ್ತದೆ. ರಾಧಿ ಎಂದು ಧಾತುವಾಗುತ್ತದೆ. ಸನಾದಿಯಲ್ಲಿ ಣಿಚ್ ಸೇರಿರುವುದರಿಂದ ಸನಾದ್ಯಂತಾ ಧಾತವಃ ಸೂತ್ರದಿಂದ ಧಾತುಸಂಜ್ಞೆಯನ್ನು ಹೇಳಬೇಕು. ಲಡರ್ಥದಲ್ಲಿ ಲಟಃ ಶತೃಶಾನಚ್ ಸೂತ್ರದಿಂದ ಶತೃಪ್ರತ್ಯಯ ಬರುತ್ತದೆ. ರಧ್+ಇ+ಅತ್ ಎಂದಿರುವಾಗ ರಧಿಜಭೋರಚಿ (ಪಾ. ಸೂ. ೭-೧-೬೧) ಅಚ್ ಪರದಲ್ಲಿರುವಾಗ ಈ ಎರಡು ಧಾತುಗಳಿಗೆ ನುಮ್ ಬರುತ್ತದೆ ಎಂಬುದರಿಂದ ನುಮಾಗಮ ಬರುತ್ತದೆ. ಮಿತ್ತಾದುದರಿಂದ ಅಂತ್ಯಾಚಿನ ಪರಕ್ಕೆ ಅವಯವವಾಗಿ ಬರುತ್ತದೆ. ರಂಧ್ ಎಂದಿರುವಾಗ ಅಕಾರವು ಉಪಧೆ ಯಾಗದಿರುವುದರಿಂದ ವೃದ್ಧಿ ಬರುವುದಿಲ್ಲ. ಣಿಚಿನ ಇಕಾರಕ್ಕೆ ಗುಣಾಯಾದೇಶಗಳು ಬಂದರೆ ರಂಧಯತ್ ಎಂಬ ತಾಂತಶಬ್ದವಾಗುತ್ತದೆ. ಪ್ರಥಮಾ ಏಕವಚನ ಪರದಲ್ಲಿರುವಾಗ ಸರ್ವನಾಮಸ್ಥಾನಸಂಜ್ಞೆ ಇರುವುದರಿಂದ ಅಂಗಕ್ಕೆ ನುಮಾಗಮ ಬರುತ್ತದೆ. ಹಲ್ಙ್ಯಾದಿ ಸೂತ್ರದಿಂದ ಸು ಲೋಪ ಬರುತ್ತದೆ. ಸಂಯೋಗಾಂತ ಲೋಪದಿಂದ ತಕಾರವು ಲೋಪವಾಗುತ್ತದೆ. ಸಂಯೋಗಾಂತ ಲೋಪವು ಅಸಿದ್ಧವಾದುದರಿಂದ ಪುನಃ ನಲೋಪಃ ಪ್ರಾತಿಪದಿ-ಕಾಂತಸ್ಯ ಸೂತ್ರದಿಂದ ನ ಲೋಪವು ಬರುವುದಿಲ್ಲ. ರಂಧಯನ್ ಎಂದು ರೂಪವಾಗುತ್ತದೆ.

ಮೋ—ಮಾ ಮತ್ತು ಉ ಎಂಬ ಎರಡು ನಿಪಾತಗಳ ಸಮುದಾಯದಿಂದ ಮೈವ ಎಂಬರ್ಥದಲ್ಲಿ ಮೋ ಎಂಬ ರೂಪವಾಗಿದೆ. ಮೋ+ಅಹಂ ಎಂದಿರುವಾಗ ಅವಾದೇಶವು ಪ್ರಾಪ್ತವಾಗುತ್ತದೆ. ಓತ್ (ಪಾ. ಸೂ. ೧-೧-೧೫) ಓದಂತವಾದ ನಿಪಾತವು ಪ್ರಗೃಹ್ಯಸಂಜ್ಞೆಯನ್ನು ಹೊಂದುತ್ತದೆ. ಮೋ ಎಂಬುದು ಓದಂತವಾದ ನಿಪಾತವಾದುದರಿಂದ ಪ್ರಗೃಹ್ಯಸಂಜ್ಞೆಯು ಬರುತ್ತದೆ. ಪ್ಲುತಪ್ರಗೃಹ್ಯಾ ಅಚಿ ನಿತ್ಯಂ (ಪಾ. ಸೂ. ೬-೧-೧೨೫) ಸೂತ್ರದಿಂದ ಮೋ ಎಂಬುದಕ್ಕೆ ಅಚ್ ಪರದಲ್ಲಿರುವುದರಿಂದ ಅವಾದೇಶವು ಬಾಧಿತವಾಗಿ ಪ್ರಕೃತಿಭಾವವು ಬರುತ್ತದೆ. ಮೋ ಅಹಂ ಎಂದೇ ಇರುತ್ತದೆ.

ದ್ವಿಷತೇ—ದ್ವಿಷ ಅಪ್ರೀತೌ ಧಾತು, ಅದಾದಿ. ಇದಕ್ಕೆ ಶತೃಪ್ರತ್ಯಯ ಬರುತ್ತದೆ. ದ್ವಿಷತ್ ಎಂದು ತಾಂತಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ದ್ವಿಷತೆ ಎಂದು ರೂಪವಾಗುತ್ತದೆ. ಶತುರನುಮೋ ನದ್ಯ-ಜಾದೀ (ಪಾ. ಸೂ. ೬-೧-೧೭೩) ನುಮ್ ಹೊಂದದಿರುವ ಶತ್ರಂತದ ಪರದಲ್ಲಿರುವ ಅಜಾದಿಯಾದ ಶಸಾದಿ ವಿಭಕ್ತಿಯು ಉದಾತ್ತವಾಗುತ್ತದೆ ಎಂಬುದರಿಂದ ವಿಭಕ್ತಿಯು (ಎ) ಉದಾತ್ತವಾಗುತ್ತದೆ. ದ್ವಿಷತೆ ಎಂಬುದು ಅಂತೋದಾತ್ತವಾದ ಶಬ್ದ.

ರಧಮ್—ರಧ ಹಿಂಸಾಸಂರಾಧ್ಯೋಃ ಧಾತು. ಅದಾದಿ. ಛಂದಸಿ ಲುಙ್ಲಙ್ಲಿಟಃ ಸೂತ್ರದಿಂದ ವರ್ತಮಾನಾರ್ಥದಲ್ಲಿ ಲುಙ್ ಬರುತ್ತದೆ. ಉತ್ತಮಪುರುಷೈಕವಚನದಲ್ಲಿ ರಧ್+ಮಿ ಎಂದಿರುವಾಗ ಇತಶ್ಚ



CC-0. Jangamwadi Math Collection. Digitized by eGangotri

ಸೂತ್ರದಿಂದ ಪ್ರತ್ಯಯದ ಇಕಾರವು ಲೋಪವಾಗುತ್ತದೆ. ಪುಷಾದಿಯಲ್ಲಿ ಈ ಧಾತುವು ಪಠಿತವಾಗಿವೆ. ಪುಷಾದಿದ್ಯುತಾ (ಪಾ. ಸೂ. ೩-೧-೫೫) ಲುಙ್ ಪರಸ್ಮೈಪದ ಪರದಲ್ಲಿರುವಾಗ ಇವುಗಳಿಗೆ ಬಂದಿರುವ ಚ್ಲಿಗೆ ಅಙಾದೇಶ ಬರುತ್ತದೆ ಎಂಬುದರಿಂದ ಇಲ್ಲಿ ಚ್ಲಿಗೆ ಅಙಾದೇಶ ಬರುತ್ತದೆ. ರಧಿಜಭೋರಚಿ ಸೂತ್ರದಿಂದ ಧಾತುವಿಗೆ ಅಜ್ ಪರದಲ್ಲಿರುವಾಗ ನುಮಾಗಮವು ಬರುತ್ತದೆ. ರನ್ಧ್+ಅ+ನ್ ಎಂದಿರುವಾಗ ಙಿತ್ತಾದ ಅಙ್ ಪರದಲ್ಲಿರುವುದರಿಂದ ಅನಿದಿತಾಂ ಹಲಉಪಧಾಯಾಃ ಕ್ಙಿತಿ ಸೂತ್ರದಿಂದ ನುಮಿನ ನಕಾರಕ್ಕೆ ಲೋಪ ಬರುತ್ತದೆ. ನಮಾಙ್‌ಯೋಗೆ (ಪಾ. ಸೂ. ೬-೪-೭೪) ಮಾಙ್ ಸಂಬಂಧವಿರುವಾಗ ಅಂಗಕ್ಕೆ ಲುಙ್ ನಿಮಿತ್ತಕವಾದ ಅಟ್ ಆಟ್ ಆಗಮಗಳು ಬರುವುದಿಲ್ಲ. ಇಲ್ಲಿ ಮೋ ರಧಂ ಎಂದು ಸಂಬಂಧವಿರುವುದರಿಂದ ಮಾಙ್ ನಿಮಿತ್ತಕವಾದ ಅಡಾಗಮಕ್ಕೆ ನಿಷೇಧ ಬರುತ್ತದೆ. ರಧಮ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

---

# ಐವತ್ತೊಂದನೆಯ ಸೂಕ್ತವು

ದಶಮೇಽನುವಾಕೇ ಸಪ್ತ ಸೂಕ್ತಾನಿ । ತತ್ರಾಭಿ ತ್ಯಮಿತಿ ಪಂಚದಶರ್ಚಂ ಪ್ರಥಮಂ ಸೂಕ್ತಂ। ಅತ್ರೇತಿಹಾಸಮಾಚಕ್ಷತೇ ಅಂಗಿರಾ ಇಂದ್ರಸದೃಶಂ ಪುತ್ರಮಾತ್ಮನಃ ಕಾಮಯಮಾನೋ ದೇವತಾ ಉಪಾಸಾಂ ಚಕ್ರೇ । ತಸ್ಯ ಸವ್ಯಾಖ್ಯೇನ ಪುತ್ರರೂಪೇಣೇಂದ್ರ ಏವ ಸ್ವಯಂ ಜಜ್ಞೇ ಜಗತಿ ಮತ್ತುಲ್ಯಃ ಕಶ್ಚಿನ್ಮಾ ಭೂದಿತಿ । ಸ ಸವ್ಯ ಆಂಗಿರಸೋಽಸ್ಯ ಸೂಕ್ತಸ್ಯ ಋಷಿಃ । ಚತುರ್ದಶೀಪಂಚದಶ್ಯೌ ತ್ರಿಷ್ಟುಭೌ। ತ್ರಿಷ್ಟುಬಂತಸ್ಯ ಸೂಕ್ತಸ್ಯ ಶಿಷ್ಟಾ ಜಗತ್ಯ ಇತಿ ಪರಿಭಾಷಯಾವಶಿಷ್ಟಾಸ್ತ್ರಯೋದಶರ್ಚೋ ಜಗತ್ಯಃ। ಇಂದ್ರೋ ದೇವತಾ । ತದೇತತ್ಸರ್ವಮನುಕ್ರಮಣ್ಯಾಮುಕ್ತಂ। ಅಭಿ ತ್ಯಂ ಪಂಚೋನಾ ಸವ್ಯೋ ದ್ವಿತ್ರಿಷ್ಟುಬಂತಮಂಗಿರಾ ಇಂದ್ರತುಲ್ಯಂ ಪುತ್ರಮಿಚ್ಛನ್ನಭ್ಯಧ್ಯಾಯತ್ಸವ್ಯ ಇತೀಂದ್ರ ಏವಾಸ್ಯ ಪುತ್ರೋಽಜಾಯತೇತಿ ॥ ಅತಿರಾತ್ರೇ ಪ್ರಥಮೇ ರಾತ್ರಿಪರ್ಯಾಯೇ ಹೋತುಃ ಶಸ್ತ್ರ ಇದಂ ಸೂಕ್ತಂ ಶಂಸನೀಯಂ। ಅತಿರಾತ್ರೇ ಪರ್ಯಾಯಾಣಾಮಿತಿ ಖಂಡೇ ಸೂತ್ರಿತಂ । ಅಭಿತ್ಯಂ ಮೇಷಮಧ್ವರ್ಯವೋ ಭರತೇಂದ್ರಾಯ ಸೋಮಮಿತಿ ಯಾಜ್ಯಾ। ಅ. ೬-೪ । ಇತಿ । ಗವಾಮಯನಸ್ಯ ಮಧ್ಯಭೂತೇ ವಿಷುವತ್ಸಂಜ್ಞಕೇಽಹನ್ಯಪಿ ನಿಷ್ಕೇವಲ್ಯ ಇದಂ ಸೂಕ್ತಂ ಶಂಸನೀಯಂ। ತಥಾ ಚ ಸೂತ್ರಿತಂ। ಯಸ್ತಿಗ್ಮಶೃಂಗೋಽಭಿ ತ್ಯಂ ಮೇಷಮಿಂದ್ರಸ್ಯ ನು ವೀರ್ಯಾಣೀತ್ಯೇತಸ್ಮಿನ್ನೈಂದ್ರೀಂ ನಿವಿದಂ ಶಸ್ತ್ವಾ । ಅ. ೮-೬ । ಇತಿ ॥

ಅನುವಾದವು— ಈ ಸೂಕ್ತದಿಂದ ಪ್ರಥಮಮಂಡಲದ ಹತ್ತನೆಯ ಅನುವಾಕವು ಆರಂಭವಾಗುವುದು. ಈ ಅನುವಾಕದಲ್ಲಿ ಏಳು ಸೂಕ್ತಗಳಿರುವವು (೫೧-೫೭) ಅವುಗಳಲ್ಲಿ ಅಭಿ ತ್ಯಂ ಮೇಷಂ ಎಂಬ ಮೊದಲನೆಯ ಸೂಕ್ತದಲ್ಲಿ ಹದಿನೈದು ಋಕ್ಕುಗಳಿರುವವು. ಇಲ್ಲಿ ಒಂದು ಇತಿಹಾಸವು ಉಕ್ತವಾಗಿರುವುದು. ಒಂದಾನೊಂದು ಕಾಲದಲ್ಲಿ ಅಂಗಿರಾ ಎಂಬ ಋಷಿಯು ತನಗೆ ಇಂದ್ರಸಮಾನನಾದ ಪುತ್ರನಾಗಬೇಕೆಂದು ಬಯಸಿ ದೇವತೆಗಳನ್ನು ಉಪಾಸನೆಮಾಡಿದನು. ಆಗ ಇಂದ್ರನು ಜಗತ್ತಿನಲ್ಲಿ ತನಗೆ ಸಮಾನರಾದವರು ಯಾರು ಇರಬಾರದೆಂಬ ಭಾವನೆಯಿಂದ ತಾನೇ ಆ ಋಷಿಗೆ ಸವ್ಯ ಎಂಬ ಹೆಸರಿನ ಪುತ್ರರೂಪದಿಂದ ಉತ್ಪನ್ನನಾದನು. ಅಂಗಿರಸಪುತ್ರನಾದ ಈ ಸವ್ಯನೆಂಬುವನೇ ಈ ಸೂಕ್ತಕ್ಕೆ ಋಷಿಯು. ಈ ಸೂಕ್ತದ ಹದಿನಾಲ್ಕು ಮತ್ತು ಹದಿನೈದನೆಯ ಋಕ್ಕುಗಳು ತ್ರಿಷ್ಟುಪ್ ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಸನ್ನು, ಇಂದ್ರನ ದೇವತೆಯು. ಇದೆಲ್ಲವೂ ಅನುಕ್ರಮಣಿಕೆ

ಯಲ್ಲಿ ಈ ರೀತಿ ಉಕ್ತವಾಗಿರುವುದು. ಅಭಿ ತ್ಯಂ ಷಂಚೋನಾ ಸವ್ಯೋ ದ್ವಿತ್ರಿಷ್ಟುಬಂತಮಂಗಿರಾ ಇಂದ್ರ-
ತುಲ್ಯಂ ಪುತ್ರಮಿಚ್ಛನ್ನಭ್ಯಧ್ಯಾಯತ್ಸವ್ಯ ಇತೀಂದ್ರ ಏವಾಸ್ಯ ಪುತ್ರೋಽಜಾಯತೇತಿ—ಎಂದು. ಅತಿರಾತ್ರ
ವೆಂಬ ಯಾಗದ ಪ್ರಥಮರಾತ್ರಿಪರ್ಯಾಯದಲ್ಲಿ ಹೋತೃವೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ
ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನ ಶ್ರೌತಸೂತ್ರದ ಅತಿರಾತ್ರೇ ಪರ್ಯಾ-
ಯಾಣಾಂ ಎಂಬ ಖಂಡದಲ್ಲಿ ಅಭಿತ್ಯಂ ಮೇಷಮಧ್ವರ್ಯವೋ ಭರತೇಂದ್ರಾಯ ಸೋಮಮಿತಿ ಯಾಜ್ಯಾ ಎಂಬ
ಸೂತ್ರದಿಂದ ವಿವೃತವಾಗಿರುವುದು. (ಆ. ೬-೪). ಮತ್ತು ಗವಾಮಯನವೆಂಬ ಯಾಗದಲ್ಲಿಯೂ ವಿಷುವತ್ಸಂಜ್ಞಕ
ವೆಂಬ ಮಧ್ಯದದಿನದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಯಸ್ತಿಗ್ಮ
ಶೃಂಗೋಽಭಿ ತ್ವಂ ಮೇಷಮಿಂದ್ರಸ್ಯ ನು ವೀರ್ಯಾಣೀತ್ಯೇತಸ್ಮಿನ್ನೈಂದ್ರೀಂ ನಿವಿದಂ ಶಂಸೇತ್ ಎಂಬ ಸೂತ್ರವು
ವಿವರಿಸುವುದು (ಆ. ೮-೬).

## ಸೂಕ್ತ—೫೧

ಮಂಡಲ—೧ ॥ ಅನುವಾಕ—೧೦ ॥ ಸೂಕ್ತ—೫೧ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ—೯, ೧೦, ೧೧ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫ ॥
ಋಷಿಃ—ಸವ್ಯ ಆಂಗಿರಸಃ ॥
ದೇವತಾ—ಇಂದ್ರಃ ॥
ಛಂದಃ—೧-೧೩ ಜಗತೀ | ೧೪-೧೫ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಅಭಿ ತ್ಯಂ ಮೇಷಂ ಪುರುಹೂತಮೃಗ್ಮಿಯಮಿಂದ್ರಂ ಗೀರ್ಭಿರ್ಮದತಾ ವಸ್ವೋ ಅರ್ಣವಂ ।
ಯಸ್ಯ ದ್ಯಾವೋ ನ ವಿಚರಂತಿ ಮಾನುಷಾ ಭುಜೇ ಮಂಹಿಷ್ಠಮಭಿ-ವಿಪ್ರಮರ್ಚತ ॥ ೧ ॥

॥ ಪದಪಾಠಃ ॥

ಅಭಿ । ತ್ಯಂ । ಮೇಷಂ । ಪುರುಽಹೂತಂ । ಋಗ್ಮಿಯಂ । ಇಂದ್ರಂ । ಗೀಃಽಭಿಃ । ಮದತ । ವಸ್ವಃ । ಅರ್ಣವಂ ।
ಯಸ್ಯ । ದ್ಯಾವಃ । ನ । ವಿಽಚರಂತಿ । ಮಾನುಷಾ । ಭುಜೇ । ಮಂಹಿಷ್ಠಂ । ಅಭಿ । ವಿಪ್ರಂ । ಅರ್ಚತ ॥ ೧ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯಂ ||

ತ್ಯಂ ಪ್ರಸಿದ್ಧಂ ಮೇಷಂ ಶತ್ರುಭಿಃ ಸ್ಪರ್ಧಮಾನಂ । ಯದ್ವಾ । ಕಣ್ವಪುತ್ರಂ ಮೇಧಾತಿಥಿಂ ಯಜಮಾನಮಿಂದ್ರೋ ಮೇಷರೂಪೇಣಾಗತ್ಯ ತದೀಯಂ ಸೋಮಂ ಪಪೌ । ಸ ಋಷಿಸ್ತಂ ಮೇಷ ಇತ್ಯವೋಚತ್ । ಅತ ಇದಾನೀಮಪಿ ಮೇಷ ಇತೀಂದ್ರೋಽಭಿಧೀಯತೇ । ಮೇಧಾತಿಥೇರ್ಮೇಷೇತಿ ಸುಬ್ರಹ್ಮಣ್ಯಮಂತ್ರೈಕದೇಶಸ್ಯ ವ್ಯಾಖ್ಯಾನರೂಪಂ ಬ್ರಾಹ್ಮಣಮೇವಮಾಮ್ನಾಯತೇ । ಮೇಧಾತಿಥಿಂ ಹ ಕಾಣ್ವಾಯನಿಂ ಮೇಷೋ ಭೂತ್ವಾಜಹಾರೇತಿ । ಆಗತ್ಯ ಸೋಮಮಪಹೃತವಾನಿತ್ಯರ್ಥಃ । ಪುರುಹೂತಂ ಪುರುಭಿರ್ಯಜಮಾನೈರಾಹೂತಂ ಋಗ್ಮಿಯಮೃಗ್ಭಿರ್ವಿಕ್ರಿಯಮಾಣಂ । ಸ್ತೂಯಮಾನಮಿತ್ಯರ್ಥಃ । ಸ್ತುತ್ಯಾ ಹಿ ದೇವತಾ ವಿಕ್ರಿಯತೇ । ಯದ್ವಾ । ಋಗ್ಭಿರ್ಮೀಯತೇ ಶಬ್ದ್ಯತ ಇತಿ ಋಗ್ಮೀಃ । ತಂ । ವಸ್ವೋ ಅರ್ಣವಂ ಧನಾನಾಮಾವಾಸಭೂಮಿಂ ಏವಂಗುಣವಿಶಿಷ್ಟಮಿಂದ್ರಂ ಹೇ ಸ್ತೋತಾರೋ ಗೀರ್ಭಿಃ ಸ್ತುತಿಭಿರಭಿ ಮದತ । ಆಭಿಮುಖ್ಯೇನ ಹರ್ಷಂ ಪ್ರಾಪಯತ । ಯಸ್ಯೇಂದ್ರಸ್ಯ ಕರ್ಮಾಣಿ ಮಾನುಷಾ ಮನುಷ್ಯಾಣಾಂ ಹಿತಾನಿ ವಿಚರಂತಿ ವಿಶೇಷೇಣ ವರ್ತಂತೇ । ತತ್ರ ದೃಷ್ಟಾಂತಃ । ದ್ಯಾವೋ ನ । ಯಥಾ ಸೂರ್ಯರಶ್ಮಯಃ ಸರ್ವೇಷಾಂ ಹಿತಕರಾಃ । ಭುಜೇ ಭೋಗಾಯ ಮಂಹಿಷ್ಠಮತಿಶಯೇನ ಪ್ರವೃದ್ಧಂ ವಿಪ್ರಂ ಮೇಧಾವಿನಂ ತಥಾವಿಧಮಿಂದ್ರಮಭ್ಯರ್ಚತ । ಅಭಿಪೂಜಯತ ॥ ಮೇಷಂ ಮಿಷ ಸ್ಪರ್ಧಾಯಾಂ । ಇಗುಪಧಲಕ್ಷಣೇ ಕೇ ಪ್ರಾಪ್ತೇ ದೇವಸೇನಮೇಷಾದಯಃ ಪಚಾದಿಷು ದ್ರಷ್ಟವ್ಯಾ ಇತಿ ವಚನಾದಚ್ಪ್ರತ್ಯಯಃ । ಋಗ್ಮಿಯಂ । ತಸ್ಯ ವಿಕಾರ ಇತ್ಯರ್ಥೇ ಏಕಾಚೋ ನಿತ್ಯಂ ಮಯಟಮಿಚ್ಛಂತಿ । ಕಾ. ೪-೩-೧೪೪ । ಇತಿ ಮಯಟ್ಪ್ರತ್ಯಯಃ । ಅಕಾರಸ್ಯೇಕಾರಶ್ಛಾಂದಸಃ । ಪ್ರತ್ಯಯಸ್ವರಃ । ಯದ್ವಾ । ಮಾಙ್ ಮಾನೇ ಶಬ್ದೇ ಚ । ಋಗ್ಭಿರ್ಮೀಯತ ಇತಿ ಋಗ್ಮೀಃ । ಕ್ವಿಪಿ ವಲಿ ಲೋಪಾತ್ಪೂರ್ವಮೇವ ಪರತ್ವಾತ್ ಘುಮಾಸ್ಥೇತೀತ್ವಂ । ಅಚಿ ಶ್ನುಧಾತ್ವಿತ್ಯಾದಿನೇಯಙಾದೇಶಃ । ಕೃದುತ್ತರಪದಪ್ರಕೃತಿಸ್ವರತ್ವಂ । ಮದತ । ಮದೀ ಹರ್ಷೇ । ಹೇತುಮತಿ ಣಿಚ್ । ಮದೀ ಹರ್ಷಗ್ಲಪನಯೋರಿತಿ ಘಟಾದಿಷು ಪಾಠಾತ್ ಹರ್ಷಾರ್ಥೇ ವರ್ತಮಾನಸ್ಯ ಘಟಾದಯೋ ಮಿತಃ । ಧಾ । ೧೯-೧ । ಇತಿ ಮಿತ್ತ್ವೇ ಸತಿ ಮಿತಾಂ ಹ್ರಸ್ವಃ । ಪಾ. ೬-೪-೯೨ । ಇತಿ ಹ್ರಸ್ವತ್ವಂ । ಲೋಣ್ಮಧ್ಯಮಪುರುಷಬಹುವಚನೇ ಶಪಿ ಛಂದಸ್ಯುಭಯಥೇತ್ಯಾರ್ಧಧಾತುಕತ್ವಾತ್ ಣೇರನಿಟೀತಿ ಣಿಲೋಪಃ । ತಶಬ್ದಸ್ಯ ಸಾರ್ವಧಾತುಕಮಪಿದಿತಿ ಙಿತ್ತ್ವೇ ಋಚಿ ತುನುಘಮಕ್ಷುತಙ್ಕುತ್ರೋರುಷ್ಯಾಣಾಮಿತಿ ದೀರ್ಘಃ । ವಸ್ವಃ । ಜಸ್ಯಾಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ಜಸಾದಿಷು ಛಂದಸಿ ವಾವಚನಂ । ಪಾ. ೭-೩-೧೦೯-೧ । ಇತಿ ವಚನಾತ್ ಘೇರ್ಙಿತಿ । ಪಾ. ೭-೩-೧೧೧ । ಇತಿ ಗುಣಾಭಾವೇ ಯಣಾದೇಶಃ । ಅರ್ಣವಂ । ಅರ್ಣ ಉದಕಮಸ್ಮಿನ್ನಸ್ತೀತ್ಯರ್ಣವಃ ಸಮುದ್ರಃ । ಅರ್ಣಸೋ ಲೋಪಶ್ಚ । ಕಾ. ೫-೨-೧೦೯-೩ । ಇತಿ ಮತ್ವರ್ಥೀಯೋ ವಪ್ರತ್ಯಯಃ ಸಲೋಪಶ್ಚ । ತೇನ ಶಬ್ದೇನ ಜಲಾಶ್ರಯವಾಚಿನಾಶ್ರಯಮಾತ್ರಂ ಲಕ್ಷ್ಯತೇ । ಪ್ರತ್ಯಯಸ್ವರಃ । ವಿಚರಂತಿ । ಚರ ಗತ್ಯರ್ಥಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ತಿಙಿ ಚೋದಾತ್ತವತೀತಿ ಗತಿರನುದಾತ್ತಾ । ಯದ್ವೃತ್ತಯೋಗಾದನಿಘಾತಃ । ಮಾನುಷಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಭುಜೇ । ಭುಜ ಪಾಲನಾಭ್ಯವಹಾರಯೋಃ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಮಂಹಿಷ್ಠಂ । ಮಹಿ ವಹಿ ವೃದ್ಧೌ । ಅತಿಶಯೇನ ಮಂಹಿತಾ ಮಂಹಿಷ್ಠಃ । ತುಶ್ಛಂದಸೀತೀಷ್ಠನ್ಪ್ರತ್ಯಯಃ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಅರ್ಚತ । ಅರ್ಚ ಪೂಜಾಯಾಂ । ಭೌವಾದಿಕಃ ॥



CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

ಯಸ್ಯ—ಯಾವ ಇಂದ್ರನ (ಕರ್ಮಗಳು) | ದ್ಯಾವೋ ನ— ಸೂರ್ಯನ ಕಿರಣಗಳಂತೆ | ಮಾನುಷಾ— ಮಾನವರಿಗೆ (ಹಿತಕರಗಳಾಗಿ) | ವಿಚರಂತಿ—ಸುತ್ತಲೂ ಪ್ರಸರಿಸುತ್ತವೆಯೋ, | ತ್ಯಂ—ಆ ಪ್ರಸಿದ್ಧನಾಗಿಯೂ, ಮೇಷಂ—ಶತ್ರುಗಳೊಡನೆ ಹೋರಾಡುವವನಾಗಿಯೂ ಅಥವಾ ಮೇಷ (ಟಗರು) ರೂಪದಲ್ಲಿರುವವನಾಗಿಯೂ ಪುರುಹೂತಂ—ಅನೇಕ ಯಜಮಾನರಿಂದ ಕರೆಯಲ್ಪಟ್ಟವನಾಗಿಯೂ | ಋಗ್ಮಿಯಂ—ಋಕ್ಕುಗಳಿಂದ ಸ್ತುತಿಸಲ್ಪಡುವವನಾಗಿಯೂ ಅಥವಾ ಕರೆಯಲ್ಪಡುವವನಾಗಿಯೂ | ವಸ್ವಃ ಅರ್ಣವಂ—ಧನಗಳಿಗೆ ಸಾಗರಪ್ರಾಯನಾಗಿಯೂ ಇರತಕ್ಕ | ಇಂದ್ರಂ—ಇಂದ್ರನನ್ನು | ಗೀರ್ಭಿಃ—(ಸ್ತುತಿರೂಪಗಳಾದ) ವಾಕ್ಕುಗಳಿಂದ | ಅಭಿಮದತ-ಅಭಿಮುಖರಾಗಿ ತೃಪ್ತಿಪಡಿಸಿ | ಭುಜೇ—(ಅಭ್ಯುದಯವನ್ನು) ಅನುಭವಿಸುವುದಕ್ಕಾಗಿ | ಮಂಹಿಷ್ಠಂ— ಅತ್ಯಂತ ವೃದ್ಧಿಹೊಂದಿರುವ | ವಿಪ್ರಂ—ಮೇಧಾವಿಯಾದ ಇಂದ್ರನನ್ನು | ಅಭಿ ಅರ್ಚತ—(ಸುತ್ತಲೂ) ಪೂಜೆಮಾಡಿ.

॥ ಭಾವಾರ್ಥ ॥

ಯಾವ ಇಂದ್ರನ ಕರ್ಮಗಳು ಸೂರ್ಯನ ಕಿರಣಗಳಂತೆ ಸುತ್ತಲೂ ಪ್ರಸರಿಸಿ ಮಾನವರಿಗೆ ಹಿತಕರಗಳಾಗಿವೆಯೋ, ಅಂತಹ ಪ್ರಸಿದ್ಧನಾಗಿಯೂ ಟಗರುರೂಪದಲ್ಲಿರುವವನಾಗಿಯೂ ಅನೇಕ ಯಜಮಾನರಿಂದ ಋಕ್ಕುಗಳಿಂದ ಸ್ತುತಿಸಲ್ಪಡುವವನಾಗಿಯೂ ಧನಗಳಿಗೆ ಸಾಗರದಂತೆ ಆಧಾರನಾಗಿಯೂ ಇರತಕ್ಕ ಇಂದ್ರನನ್ನು ಸ್ತುತಿರೂಪವಾದ ವಾಕ್ಕುಗಳಿಂದ ತೃಪ್ತಿಪಡಿಸಿ. ಅತ್ಯಂತ ವೃದ್ಧಿಹೊಂದಿರುವ ಮೇಧಾವಿಯಾದ ಇಂದ್ರನನ್ನು ಅಭ್ಯುದಯವನ್ನು ಅನುಭವಿಸುವುದಕ್ಕಾಗಿ ಸುತ್ತಲೂ ಪೂಜೆಮಾಡಿ.

## English Translation.

Animate with praises that ram (Indra) who is adored by many, who is gratified by hymns and is an ocean of wealth; whose good deeds spread abroad for the benefit of mankind; Worship the wise and powerful Indra for the enjoyment of prosperity.

॥ ವಿಶೇಷ ವಿಷಯಗಳು ॥

ತ್ಯಂ—ಈ ಶಬ್ದಕ್ಕೆ ತಚ್ಛಬ್ದಾರ್ಥವಿರುವುದು. ತ್ಯಂ ಎಂದರೆ ತಂ, ಆ ಅಥವಾ ಪ್ರಸಿದ್ಧವಾದ ಎಂದರ್ಥವು.

ಮೇಷಂ—ಮಿಷ ಸ್ಪರ್ಧಾಯಾಂ | ಶತ್ರುಭಿಃ ಸ್ಪರ್ಧಮಾನಂ | ಶತ್ರುಗಳೊಡನೆ ಹೋರಾಡುವ, ಅಥವಾ ಇಲ್ಲಿ ಭಾಷ್ಯಕಾರರು ಒಂದು ಪೂರ್ವೇತಿಹಾಸವನ್ನು ಹೇಳಿರುವರು. ಕಣ್ವಪುತ್ರನಾದ ಮೇಧಾತಿಥಿ ಋಷಿಯು ಯಜ್ಞಮಾಡುತ್ತಿರುವಾಗ ಇಂದ್ರನು ಮೇಷ (ಮೇಕೆ, ಟಗರು) ರೂಪದಿಂದ ಅಲ್ಲಿಗೆ ಬಂದು ಅಲ್ಲಿ ಸಿದ್ಧಪಡಿಸಿದ್ದ | ಸೋಮರಸವನ್ನು ಪಾನಮಾಡಿದನು ಆದುದರಿಂದ ಈ ಸೂಕ್ತದ ಋಷಿಯಾದ ಮೇಧಾತಿಥಿಯು ಇಂದ್ರನನ್ನು ಮೇಷ ಎಂಬದಾಗಿ ಸ್ತೋತ್ರವಮಾಡಿರುವನು. ಈ ವಿಷಯವು—ಮೇಧಾತಿಥಿಂ ಹಿ ಕಾಣ್ವಾಯನಿಂ ಮೇಷೋ ಭೂತ್ವಾಜಹಾರ | ಎಂಬ ಬ್ರಾಹ್ಮಣವಾಕ್ಯವು ಸಮರ್ಥಿಸುವುದೆಂದು ಭಾಷ್ಯಕಾರರು ಹೇಳಿರುವರು.



CC-0. Jangamwadi Math Collection. Digitized by eGangotri

**ಪುರುಹೂತಂ**—ಪುರುಭಿಃ ಬಹುಭಿರ್ಯಜಮಾನೈರಾಹೂತಂ । ಅನೇಕ ಯಜ್ಞಮಾಡುವ ಯಜಮಾನದಿಂದ ಆಹ್ವಾನಿಸಲ್ಪಡುವವನು.

**ಋಗ್ಮಿಯಂ**—ಋಗ್ಭಿರ್ವಿಕ್ರಿಯಮಾಣಂ ಸ್ತೂಯಮಾನಮಿತ್ಯರ್ಥಃ। ಋಕ್ಕುಗಳಿಂದ ಅಥವಾ ಮಂತ್ರಗಳಿಂದ ಸ್ತುತಿಸಲ್ಪಡುವವನು. ಇಲ್ಲಿ ದೇವತಾವಿಕ್ರಿಯವೆಂದರೆ ದೇವತಾಸ್ತೋತ್ರವೆಂದರ್ಥವು ಅಥವಾ ಋಗ್ಭಿರ್ಮಿಯತೆ ಶಬ್ದ್ಯತ ಇತಿ ಋಗ್ಮೀಃ। ಋಕ್ಕುಗಳಿಂದ ಶಬ್ದಸಹಿತವಾಗಿ ಹೊಗಳಲ್ಪಡುವವನಾದುದರಿಂದ ಋಗ್ಮೀಃ ಎಂದು ಹೆಸರು.

**ವಸ್ವೋ ಅರ್ಣವಂ**—ಧನಗಳಿಗೆ ಆವಾಸಭೂಮಿಯು ಎಂದರೆ ಆಶ್ರಯಕರ್ತನು. ಬಹಳ ಧನವುಳ್ಳವನು, ಸಮುದ್ರವು ನೀರಿಗೆ ಹೇಗೆ ಮುಖ್ಯಾಶ್ರಯವಾಗಿರುವುದೋ ಹಾಗೆ ಇಂದ್ರನು ಧನಾದ್ಯೈಶ್ವರ್ಯಗಳಿಗೆ ಮುಖ್ಯಾಶ್ರಯನಾಗಿರುವನು.

**ದ್ಯಾವೋ ನ**—ಸೂರ್ಯರಶ್ಮಿಯಂತೆ ಹಿತಕರವಾದ.

**ಮಂಹಿಷ್ಠಂ**—ಅತಿಶಯೇನ ಪ್ರವೃದ್ಧಂ। ಅತಿಶಯವಾಗಿ ಪ್ರವೃದ್ಧನಾದ, ಮಹಾಮಹಿಮೆಯುಳ್ಳ,

**ವಿಪ್ರಂ**—ಮೇಧಾವಿನಂ। ಬುದ್ಧಿವಂತನಾದ, ವಿವೇಕಿಯಾದ

**ಮಾನುಷಾ**—ಮನುಷ್ಯಾಣಾಂ। ಮನುಷ್ಯರ, ಇಲ್ಲಿ ಷಷ್ಠ್ಯರ್ಥದಲ್ಲಿ ಪ್ರಥಮಾಭಕ್ತಿಯ ಪ್ರಯೋಗವಿರುವುದು. ಇಲ್ಲಿ ಹಿತಾನಿ ಎಂಬ ಪದವನ್ನು ಅಧ್ಯಾಹಾರಮಾಡಿಕೊಳ್ಳಬೇಕು.

**ವಿಚರಂತಿ**—ವಿಶೇಷೇಣ ವರ್ತಂತೆ। ವಿಶೇಷವಾಗಿ ಇರುವವು.

**ಅಭಿ ಅರ್ಚತ**—ಪೂಜಿಸಿರಿ, ಸ್ತೋತ್ರಮಾಡಿರಿ.

## ॥ ವ್ಯಾಕರಣಪ್ರಕ್ರಿಯಾ ॥

**ಮೇಷಮ್**—ಮಿಷ ಸ್ಪರ್ಧಾಯಾಂ ಧಾತು. ತುದಾದಿ. ಇಗುಪಧಜ್ಞಾ ಪ್ರೀಕಿರಃ ಕಃ ಸೂತ್ರದಿಂದ ಧಾತುವು ಇಗುಪಧನಾದುದರಿಂದ ಕ ಪ್ರತ್ಯಯವು ಪ್ರಾಪ್ತವಾಗುತ್ತದೆ. ಆದರೆ ದೇವಸೇನಮೇಷಾದಯಃ ಪಚಾದಿಷು ದ್ರಷ್ಟವ್ಯಾಃ ಎಂದು ವಚನವಿರುವುದರಿಂದ ನಂದಿಗ್ರಹಪಚಾದಿಭ್ಯಃ ಸೂತ್ರದಿಂದ ಅಚ್ ಪ್ರತ್ಯಯ ಬರುತ್ತದೆ. ಮಿಷ್+ಅ ಎಂದಿರುವಾಗ ಲಘೂಪಧ ಗುಣ ಬಂದರೆ ಮೇಷ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಮೇಷಂ ಎಂದು ರೂಪವಾಗುತ್ತದೆ.

**ಋಗ್ಮಿಯಮ್**—ತಸ್ಯ ವಿಕಾರಃ ಎಂಬರ್ಥದಲ್ಲಿ ಅಣಾದಿಪ್ರತ್ಯಯಗಳು ಬರುತ್ತವೆ. ಋಚಾಂ ವಿಕಾರಃ ಎಂದು ಅರ್ಥವಿವಕ್ಷಾಮಾಡಿದಾಗ ನಿತ್ಯಂ ವೃದ್ಧಶರಾದಿಭ್ಯಃ ಎಂಬ ಸೂತ್ರದಲ್ಲಿ ಏಕಾಚೋ ನಿತ್ಯಂ ಮಯಟಮಿಚ್ಛಂತಿ (ಏಕಾಚೋ ನಿತ್ಯಂ) (ಕಾ. ೪-೩-೧೪೪) ಎಂದು ಪಾಠಮಾಡಿರುತ್ತಾರೆ. ವಿಕಾರಾರ್ಥದಲ್ಲಿ ಏಕಾಚಾದ ಪ್ರಾತಿಪದಿಕಕ್ಕೆ ನಿತ್ಯವಾಗಿ ಮಯಚ್ ಪ್ರತ್ಯಯ ಬರುತ್ತದೆ ಎಂದು ಅದರ ತಾತ್ಪರ್ಯ. ಋಚೆಂಬುದು ಏಕಾಚಾದುದರಿಂದ ವಿಕಾರಾರ್ಥ ವಿವಕ್ಷಾಮಾಡಿದುದರಿಂದ ಮಯಚ್ ಪ್ರತ್ಯಯ ಬರುತ್ತದೆ. ಮಯಚ್ ಪರದಲ್ಲಿರುವಾಗ ಪದಸಂಜ್ಞೆ ಇರುವುದರಿಂದ ಋಚಿನ ಚಕಾರಕ್ಕೆ ಚೋಃ ಕುಃ ಸೂತ್ರದಿಂದ ಕುತ್ವ ಗಕಾರ ಬರುತ್ತದೆ. ವ್ಯತ್ಯಯದಿಂದ ಮಯಚಿನ ಅಕಾರಕ್ಕೆ ಇಕಾರ ಬರುತ್ತದೆ. ಋಗ್ಮಿಯಂ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಋಗ್ಮಿಯಂ ಎಂಬುದು ಮಧ್ಯೋದಾತ್ತವಾಗುತ್ತದೆ. ಪ್ರತ್ಯಯವು ಆದ್ಯುದಾತ್ತವಾಗುವುದರಿಂದ



CC-0. Jangamwadi Math Collection. Digitized by eGangotri

ಮಕಾರದ ಪರದಲ್ಲಿರುವ ಇಕಾರವು ಉದಾತ್ತವಾಗುತ್ತದೆ. ಅಥವಾ ಮಾಜ್ ಮಾನೆ ಶಬ್ದೇ ಚ ಧಾತು. ದಿವಾದಿ. (ಜುಹೋತ್ಯಾದಿ) ಋಗ್ಭಿಃ ಮೀಯತೆ ಇತಿ ಋಗ್ಮೀಃ ಋಕ್ಕುಗಳಿಂದ ಶಬ್ದಮಾಡಲ್ಪಡುವವನು (ಹೊಗಳಲ್ಪಡುವವನು) ಎಂದರ್ಥ. ಕ್ವಿಪ್ ಚ ಎಂಬುದರಿಂದ ಮಾಜ್ ಧಾತುವಿಗೆ ಕ್ವಿಪ್ ಬರುತ್ತದೆ. ಕ್ವಿಪಿನಲ್ಲಿ ಕಕಾರವು ಲಶಕ್ವತದ್ಧಿತೆ ಸೂತ್ರದಿಂದಲೂ ಪಕಾರವು ಹಲಂತ್ಯಂ ಸೂತ್ರದಿಂದಲೂ ಲೋಪವಾಗುತ್ತದೆ. ಇಕಾರ ಉಚ್ಚಾರಣಾರ್ಥವಾಗಿ ಹೇಳಿದೆ. ವಕಾರಕ್ಕೆ ವೇರಪೃಕ್ತಸ್ಯ (ಪಾ. ಸೂ. ೬-೧-೬೭) ಎಂಬುದರಿಂದ ಲೋಪ ಬರಬೇಕಾದರೆ ಮೊದಲು ಪರಸೂತ್ರವಾದುದರಿಂದ ಘುಮಾಸ್ಥಾಗಾಪಾಜಹಾತಿಸಾಂಹಲಿ (ಪಾ. ಸೂ. ೬-೪-೬೬) ಎಂಬ ಸೂತ್ರವು ಬರುತ್ತದೆ. ಕಿತ್ತು ಙಿತ್ತಾದ ಹಲಾದಿಪ್ರತ್ಯಯಗಳು ಪರದಲ್ಲಿರುವಾಗ ದಾಮುಂತಾದುವುಗಳ ಆಕಾರಕ್ಕೆ ಈಕಾರ ಬರುತ್ತದೆ. ಋಗ್ಮೀ ಎಂದು ಈಕಾರಾಂತ ಶಬ್ದವಾಗುತ್ತದೆ. ದ್ವಿತೀಯಾ ಏಕವಚನ ಅಮ್ ಪರದಲ್ಲಿರುವಾಗ ಅಚಿಶ್ನುಧಾತುಭ್ರುವಾಂ ಯ್ವೋರಿಯಙುವಙೌ ಸೂತ್ರದಿಂದ ಈಕಾರಕ್ಕೆ ಇಯಙಾದೇಶ ಬರುತ್ತದೆ. ಋಗ್ಮಿಯಂ ಎಂದು ರೂಪವಾಗುತ್ತದೆ. ಗತಿಕಾರಕೋಪಪದಾತ್ ಕೃತ್ (ಪಾ. ಸೂ. ೬-೨-೧೩೯) ಎಂಬುದರಿಂದ ಕಾರಕೋಪಪದಕವಾದ ಕೃದಂತವಿರುವುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

ಮದತ—ಮದೀ ಹರ್ಷೇ ಧಾತು. ಭ್ವಾದಿ. ಪ್ರೇರಣಾರ್ಥ ತೋರುವುದರಿಂದ ಹೇತುಮತಿ ಚ (ಪಾ. ಸೂ. ೩-೧-೨೬) ಸೂತ್ರದಿಂದ ಣಿಚ್ ಬರುತ್ತದೆ. ಸನಾದಿಯಲ್ಲಿ ಣಿಚ್ ಸೇರಿರುವುದರಿಂದ ಧಾತುಸಂಜ್ಞೆ ಬರುತ್ತದೆ. ಲೋಟ್ ಮಧ್ಯಮಪುರುಷ ಬಹುವಚನ ವಿವಕ್ಷಾ ಮಾಡಿದಾಗ ಥ ಎಂಬ ಪ್ರತ್ಯಯ ಬರುತ್ತದೆ. ಲೋಟೋಲಙ್ವತ್ ಎಂದು ಲಙ್ವದ್ಭಾವ ಹೇಳಿರುವುದರಿಂದ ತಸ್‌ಥಸ್‌ಥಮಿಪಾಂ ತಾಂ ತಂ ತಾಮಃ ಎಂದು ಆಯಾಯ ವಿಭಕ್ತಿಗಳಿಗೆ ಆದೇಶ ಹೇಳಿರುವುದರಿಂದ ಥ ಎಂಬುದಕ್ಕೆ ತ ಎಂಬ ಆದೇಶವು ಬರುತ್ತದೆ. ಮದ್+ಇ+ತ ಎಂದಿರುವಾಗ ಅತ ಉಪಧಾಯಾಃ ಎಂಬ ಸೂತ್ರದಿಂದ ಧಾತುವಿನ ಅಕಾರಕ್ಕೆ ವೃದ್ಧಿ ಬರುತ್ತದೆ. ಘಟಾದಯೋಮಿತಃ ಎಂಬುದರಿಂದ ಭ್ವಾದಿಯ ಅಂತರ್ಗಣವಾದ ಘಟಾದಿಗೆ ಮಿದ್ವದ್ಭಾವವನ್ನು ಹೇಳಿರುತ್ತಾರೆ. ಘಟಾದಿಯಲ್ಲಿ ಮದೀ ಹರ್ಷಗ್ಲಪನಯೋಃ । ಎಂದು ಪಾಠಮಾಡಿರುತ್ತಾರೆ. ಆದುದರಿಂದ ಹರ್ಷಾರ್ಥಕವಾದ ಈ ಧಾತುವಿಗೆ ಣಿಚ್ಚಿನಲ್ಲಿ ಮಿತಾಂ ಹ್ರಸ್ವಃ (ಪಾ. ಸೂ. ೬-೪-೯೨) ಮಿತ್ ಸಂಜ್ಞೆ ಉಳ್ಳವುಗಳಿಗೆ ಹ್ರಸ್ವ ಬರುತ್ತದೆ ಎಂಬುದರಿಂದ ಹ್ರಸ್ವ ಬರುತ್ತದೆ. ಮದಿ+ತ ಎಂದಿರುವಾಗ ವಿಕರಣವಾದ ಶಪ್ ಪ್ರತ್ಯಯ ಬರುತ್ತದೆ. ಛಂದಸ್ಯುಭಯಥಾ ಎಂಬುದರಿಂದ ವಾಸ್ತವಿಕವಾಗಿ ಇದು ಸಾರ್ವಧಾತುಕವಾದರೂ ಇಲ್ಲಿ ಆರ್ಧಧಾತುಕ ಸಂಜ್ಞೆಯನ್ನು ಹೊಂದುತ್ತದೆ. ಆದುದರಿಂದ ಮದಿ+ಅ+ತ ಎಂದಿರುವಾಗ ಣೇರನಿಟಿ (ಪಾ. ಸೂ. ೬-೪-೫೧) ಅನಿಟಾದಿಯಾದ ಆರ್ಧಧಾತುಕವು ಪರದಲ್ಲಿರುವಾಗ ಣಿಚಿಗೆ ಲೋಪ ಬರುತ್ತದೆ. ಮದತ ಎಂದು ರೂಪವಾಗುತ್ತದೆ. ಲೋಟಿನ ತ ಪ್ರತ್ಯಯಕ್ಕೆ ಸಾರ್ವಧಾತುಕಮಪಿತ್ ಸೂತ್ರದಿಂದ ಙಿದ್ವದ್ಭಾವ ಬರುತ್ತದೆ. ಇದರಿಂದ ಯಚಿ-ತುನುಘಮಕ್ಷುತಙ್ ಕುತ್ರೋರುಪಸಂಖ್ಯಾನಮ್ (ಪಾ. ಸೂ. ೬-೩-೧೩೩) ಎಂಬುದರಿಂದ ಮಂತ್ರಪಾಠದಲ್ಲಿ ದೀರ್ಘ ಬರುತ್ತದೆ. ಆದುದರಿಂದ ಮಂತ್ರಪಾಠದಲ್ಲಿ ಮದತಾ ಎಂದು ಶ್ರುತವಾಗುತ್ತದೆ.

ವಸ್ವಃ—ವಸು ಶಬ್ದದಮೇಲೆ ಷಷ್ಠೀ ಏಕವಚನ ವಿವಕ್ಷಾಮಾಡಿದಾಗ ಙಸ್ ಪ್ರತ್ಯಯ ಬರುತ್ತದೆ. ವಸು+ಅಸ್ ಎಂದಿರುವಾಗ ಇಕೋಽಚಿವಿಭಕ್ತೌ ಸೂತ್ರದಿಂದ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ ನುಮಾಗಮವು ಪ್ರಾಪ್ತವಾಗುತ್ತದೆ. ಆದರೆ ಆಗಮಶಾಸ್ತ್ರಮನಿತ್ಯಂ ಎಂಬುದರಿಂದ ನುಮ್ ಆಗಮವಾದುದರಿಂದ ಅನಿತ್ಯಾಶ್ರಯಣದಿಂದ ಇಲ್ಲಿ ಬರುವುದಿಲ್ಲ. ಜಸಾದಿಷುಚ್ಛಂದಸಿ ವಾವಚನಮ್ (ಪಾ. ಸೂ. ೭-೩-೧೦೯-೧) ಜಸಾದಿವಿಭಕ್ತಿ ಪರದಲ್ಲಿರುವಾಗ ಗುಣಾದಿಗಳು ಛಂದಸ್ಸಿನಲ್ಲಿ ವಿಕಲ್ಪವಾಗಿ ಬರುತ್ತವೆ. ಶೇಷೋಘ್ಯಸಖಿ ಸೂತ್ರದಿಂದ ವಸು ಶಬ್ದಕ್ಕೆ ಘಿಸಂಜ್ಞಾವಿರುವಾಗ ಘೇರ್ಙಿತಿ (ಪಾ. ಸೂ. ೭-೩-೧೧೧) ಙಿತ್ತಾದ ಪ್ರತ್ಯಯ ಪರದಲ್ಲಿರು



CC-0. Jangamwadi Math Collection. Digitized by eGangotri

ವಾಗ ಘಿಸಂಜ್ಞಾ ಉಳ್ಳ ಅಂಗಕ್ಕೆ ಗುಣ ಬರುತ್ತದೆ ಎಂಬುದರಿಂದ ಇಲ್ಲಿ ಗುಣವು ಪ್ರಾಪ್ತವಾಗುತ್ತದೆ. ಆದರೆ ಹಿಂದೆ ಹೇಳಿದ ವಾರ್ತಿಕದಿಂದ ಇಲ್ಲಿ ಗುಣವು ಬರುವುದಿಲ್ಲ. ಆಗ ಸಾಮಾನ್ಯವಾದ ಯಣಾದೇಶವೇ ಬಂದು ರುತ್ವ ವಿಸರ್ಗಗಳು ಬಂದರೆ ವಸ್ವಃ ಎಂದು ರೂಪವಾಗುತ್ತದೆ.

ಅರ್ಣವಮ್—ಅರ್ಣಃ ಉದಕಂ ಅಸ್ಮಿನ್ ಅಸ್ತಿ ಇತಿ ಅರ್ಣವಃ ಸಮುದ್ರಃ ನೀರಿಗೆ ಆಶ್ರಯುವಾದುದು ಎಂದರ್ಥ. ಅರ್ಣಸೋಲೋಪಶ್ಚ (ಕಾ. ೫-೨-೧೦೯-೨) ಅರ್ಣಸ್ ಶಬ್ದದಮೇಲೆ ಮತ್ವರ್ಥದಲ್ಲಿ ವ ಪ್ರತ್ಯಯ ಬರುತ್ತದೆ. ತತ್ಸಂನಿಯೋಗದಿಂದ ಅರ್ಣಸಿನ ಕೊನೆಯ ಸಕಾರಕ್ಕೆ ಲೋಪ ಬರುತ್ತದೆ. ಅರ್ಣವ ಎಂದು ರೂಪವಾಗುತ್ತದೆ. ನೀರಿಗೆ ಆಶ್ರಯ ಎಂಬರ್ಥಕೊಡುವ ಅರ್ಣವಶಬ್ದದಿಂದ ಇಲ್ಲಿ ಕೇವಲ ಆಶ್ರಯ ಎಂಬರ್ಥವನ್ನು ಮಾತ್ರ ಲಕ್ಷಣಾವೃತ್ತಿಯಿಂದ ಹೇಳಬೇಕು. ಪ್ರತ್ಯಯಸ್ವರದಿಂದ ಅರ್ಣವ ಶಬ್ದವು ಅಂತೋದಾತ್ತವಾಗುತ್ತದೆ.

ವಿಚರಂತಿ—ವಿ ಗತಿಸಂಜ್ಞೆಯುಳ್ಳ ಶಬ್ದ. ಚರ ಗತಿಭಕ್ಷಣಯೋಃ ಧಾತು. ಭ್ವಾದಿ. ಇಲ್ಲಿ ಗತ್ಯರ್ಥ ವನ್ನು ಸ್ವೀಕರಿಸಬೇಕು. ಪ್ರಥಮಪುರುಷ ಬಹುವಚನದಲ್ಲಿ ಚರಂತಿ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದ ರಿಂದ ಅನುದಾತ್ತವಾಗುತ್ತದೆ. ತಾಸ್ಯನುದಾತ್ತೇತ್ ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವೇ ಸತಿಶಿಷ್ಟವಾಗುತ್ತದೆ. ತಿಙಿ ಚೋದಾತ್ತವತಿ (ಪಾ. ಸೂ. ೮-೧-೭೧) ಸೂತ್ರದಿಂದ ವಿ ಎಂಬ ಗತಿಯು ಅನುದಾತ್ತವಾಗುತ್ತದೆ. ಹಿಂದೆ ಯಸ್ಯ ಎಂಬ ಯಚ್ಛಬ್ದಯೋಗವಿರುವುದರಿಂದ ಯದ್ವೃತ್ತಾನ್ನಿತ್ಯಂ (ಪಾ. ಸೂ. ೮-೧-೬೬) ಸೂತ್ರದಿಂದ ತಿಙಂತಕ್ಕೆ ನಿಘಾತಪ್ರತಿಷೇಧ ಬರುತ್ತದೆ.

ಮಾನುಷಾ—ಮಾನುಷಶಬ್ದದಮೇಲೆ ಷಷ್ಠೀ ಬಹುವಚನವಿರುವಾಗ ಸುಪಾಂ ಸುಲುಕ್ ಸೂತ್ರದಿಂದ ಶಿ ಆದೇಶ ಬರುತ್ತದೆ. ಅದಕ್ಕೆ ಶೇಶ್ಛಂದಸಿ ಬಹುಲಂ ಎಂಬುದರಿಂದ ಲೋಪ ಬರುತ್ತದೆ. ಮಾನುಷಾ ಎಂದು ರೂಪವಾಗುತ್ತದೆ.

ಭುಜೆ—ಭುಜ ಪಾಲನಾಭ್ಯವಹಾರಯೋಃ ಧಾತು. ರುಧಾದಿ. ಸಂಪದಾದಿಭ್ಯಃ ಕ್ವಿಪ್ (ವಾ. ೨೨೩೩) ಎಂಬುದರಿಂದ ಸಂಪದಾದಿಯಲ್ಲಿ ಈ ಧಾತುವು ಸೇರಿರುವುದರಿಂದ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪಿನಲ್ಲಿ ಸರ್ವ ಲೋಪವಾಗುವುದರಿಂದ ಭುಜ್ ಎಂದೇ ಉಳಿಯುತ್ತದೆ. ಕೃದಂತವಾದುದರಿಂದ ಪ್ರಾತಿಪದಿಕಸಂಜ್ಞೆ ಬರುತ್ತದೆ. ಚತುರ್ಥೀ ಏಕವಚನದಲ್ಲಿ ಙೇ ಪ್ರತ್ಯಯ ಬರುತ್ತದೆ. ಭುಜೆ ಎಂದು ರೂಪವಾಗುತ್ತದೆ. ಸಾವೇಕಾಚಸ್ತೃತೀ-ಯಾ (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಭುಜೆ ಎಂಬುದು ಅಂತೋ ದಾತ್ತವಾದ ಪದವಾಗುತ್ತದೆ.

ಮಂಹಿಷ್ಠಮ್—ಮಹಿ ವಹಿ ವೃದ್ಧೌ ಧಾತು. ಅತಿಶಯೇನ ಮಂಹಿತಾ ಮಂಹಿಷ್ಠಃ। ಅತಿಶಯವಾಗಿ ಪ್ರವೃದ್ಧವಾದುದು ಎಂದರ್ಥ. ಮಹಿ ಧಾತುವು ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಇದಕ್ಕೆ ತೃಚ್ ಪ್ರತ್ಯಯ ಪರದಲ್ಲಿರುವಾಗ ಮಂಹಿತಾ ಎಂದು ರೂಪವಾಗುತ್ತದೆ. ತುಶ್ಛಂದಸಿ (ಪಾ. ಸೂ. ೫-೩-೫೯) ತೃನ್ ತಜಂತದಮೇಲೆ ಅತಿಶಯಾರ್ಥದಲ್ಲಿ ಇಷ್ಠನ್ ಈಯಸುನ್ ಪ್ರತ್ಯಯಗಳು ಬರುತ್ತವೆ. ಇದರಿಂದ ಇಲ್ಲಿ ಮಂಹಿತೃ ಎಂಬ ತೃಜಂತದಮೇಲೆ ಇಷ್ಠನ್ ಪ್ರತ್ಯಯ ಬರುತ್ತದೆ. ತುರಿಷ್ಠೇಮೇಯಃಸು (ಪಾ. ಸೂ. ೬-೪-೧೫೪) ಎಂಬುದರಿಂದ ಇಷ್ಠನ್ ಪರದಲ್ಲಿರುವಾಗ ತೃ ಶಬ್ದಕ್ಕೆ ಲೋಪ ಬರುತ್ತದೆ. ದ್ವಿತೀಯೈಕವಚನದಲ್ಲಿ ಮಂಹಿಷ್ಠಂ ಎಂದು ರೂಪವಾಗುತ್ತದೆ. ಇಷ್ಠನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಮಂಹಿಷ್ಠಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

ಅರ್ಚತ—ಅರ್ಚ ಪೂಜಾಯಾಂ ಧಾತು ಭ್ವಾದಿ. ಲೋಟ್ ಮಧ್ಯಮಪುರುಷ ಬಹುವಚನದಲ್ಲಿ ಅರ್ಚತ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅ॒ಭೀಮ॑ವನ್ವನ್ತ್ಸ್ವಭಿ॒ಷ್ಟಿಮೂ॒ತಯೋ॑ಽನ್ತರಿಕ್ಷ॒ಪ್ರಾಂ ತವಿ॑ಷೀಭಿ॒ರಾವೃ॑ತಮ್।
ಇಂದ್ರಂ॒ ದಕ್ಷಾ॑ಸ ಋ॒ಭವೋ॑ ಮ॒ದಚ್ಯು॑ತಂ ಶ॒ತಕ್ರ॑ತುಂ॒ ಜವ॑ನೀ ಸೂ॒ನೃತಾ-
ರು॑ಹತ್ ॥ ೧ ॥

॥ ಪದಪಾಠಃ ॥

ಅ॒ಭಿ। ಈ॒ಮ್। ಅ॒ವ॒ನ್ವ॒ನ್। ಸು॒ಽಅ॒ಭಿ॒ಷ್ಟಿಮ್। ಊ॒ತಯಃ॑। ಅ॒ನ್ತ॒ರಿ॒ಕ್ಷ॒ಽಪ್ರಾಮ್।
ತವಿ॑ಷೀಭಿಃ। ಆಽವೃ॑ತಮ್।
ಇಂದ್ರ॑ಮ್। ದಕ್ಷಾ॑ಸಃ। ಋ॒ಭವಃ॑। ಮ॒ದ॒ಽಚ್ಯು॑ತಮ್। ಶ॒ತಽಕ್ರ॑ತುಮ್। ಜವ॑ನೀ।
ಸೂ॒ನೃತಾ॑। ಆ। ಅ॒ರು॒ಹ॒ತ್ ॥ ೧ ॥

॥ ಸಾಯಣಭಾಷ್ಯಂ ॥

ಊತಯೋಽವಿತಾರೋ ರಕ್ಷಿತಾರೋ ದಕ್ಷಾಸೋ ದಕ್ಷಯಿತಾರಃ ಪ್ರವರ್ಧಯಿತಾರ ಋಭವಃ। ಉರು ಭಾಂತೀತಿ ನೈರುಕ್ತವ್ಯುತ್ಪತ್ತ್ಯಾ ಋಭವೋಽತ್ರ ಮರುತ ಉಚ್ಯಂತೇ। ಏವಂಭೂತಾ ಮರುತ ಇಂದ್ರಮಭೀಮವನ್ವನ್। ಆಭಿಮುಖ್ಯೇನ ಖಲ್ವಭಜಂತ। ವೃತ್ರೇಣ ಸಹ ಯುಧ್ಯಮಾನಮಿಂದ್ರಂ ಸರ್ವೇ ದೇವಾಃ ಪರ್ಯತ್ಯಜನ್। ಮರುತಸ್ತು ತಥಾ ನ ಪರ್ಯತ್ಯಾಕ್ಷುಃ। ತಥಾ ಚಾಮ್ನಾಸ್ಯತೇ। ವಿಶ್ವೇ ದೇವಾ ಅಜಹುರ್ಯೇ ಸಖಾಯಃ। ಮರುದ್ಭಿರಿಂದ್ರ ಸಖ್ಯಂ ತೇ ಅಸ್ತು। ಋಗ್ವೇ ೮-೯೬-೭। ಇತಿ। ಬ್ರಾಹ್ಮಣೇಽಪ್ಯಾಮ್ನಾತಂ। ಮರುತೋ ಹೈನಂ ನಾಜಹುಃ। ಐ. ಬ್ರಾ ೩-೨೦। ಇತಿ। ಕೀದೃಶಮಿಂದ್ರಂ। ಸ್ವಭಿಷ್ಟಿಂ ಶೋಭನಾಭ್ಯೇಷಣವಂತಂ। ಶೋಭನಾಭಿಗಮನಮಿತ್ಯರ್ಥಃ। ಅಂತರಿಕ್ಷಪ್ರಾಂ। ಅಂತರಿಕ್ಷಂ ದ್ಯುಲೋಕಂ ಸ್ವತೇಜಸಾ ಪ್ರಾತಿ ಪೂರಯತೀತ್ಯಂತರಿಕ್ಷಪ್ರಾಃ। ದ್ವಾದಶಸ್ವಾದಿತ್ಯೇಷ್ವಿಂದ್ರಸ್ಯ ವಿದ್ಯಮಾನ-ತ್ವಾತ್। ಶಾಖಾಂತರೇಽಪಿ ಶ್ರೂಯತೇ। ತಸ್ಯಾ ಇಂದ್ರಶ್ಚ ವಿವಸ್ವಾಗ್ಂಶ್ಚಾಜಾಯೇತಾಂ। ತೈ. ಬ್ರಾ. ೧-೧.೯.೩। ಇತಿ। ಇಂದ್ರಶ್ಚ ವಿವಸ್ವಾಂಶ್ಚೇತ್ಯೇತೇ ಇತಿ ಚ। ತವಿಷೀಭಿರಾವೃತಂ। ತವಿಷೀತಿ ಬಲನಾಮ। ತವಿಷೀ ಶುಷ್ಮಮಿತಿ ತನ್ನಾಮಸು ಪಾಠಾತ್। ಬಲೈರಾವೃತಂ। ಅತಿ ಬಲಿನಮಿತ್ಯರ್ಥಃ। ಅತ ಏವ ಮದ-ಚ್ಯುತಂ ಶತ್ರೂಣಾಂ ಮದಸ್ಯ ಗರ್ವಸ್ಯ ಚ್ಯಾವಯಿತಾರಂ। ಕಿಂಚ ಶತಕ್ರತುಂ ಶತಸಂಖ್ಯಾನಾಂ ಕ್ರತೂ-



CC-0. Jangamwadi Math Collection. Digitized by eGangotri

ನಾಮಾಹರ್ತಾರಂ ಬಹುವಿಧಕರ್ಮಾಣಂ ವಾ | ಪೂರ್ವೋಕ್ತಂ ತಮಿಂದ್ರಂ ಜವನೀ ವೃತ್ರವಧಂ ಪ್ರತಿ ಪ್ರೇರಯಿತ್ರೀ ಸೂನೃತಾ ಶೈರ್ಮರುದ್ಭಿಃ ಪ್ರಯುಕ್ತಾತ್ರ ಪ್ರಹರ ಭಗವೋ ಜಹಿ ವೀರಯಸ್ವ | ಐ. ಬ್ರಾ ೩.೨೦ | ಇತಿ ಬ್ರಾಹ್ಮಣೋಕ್ತರೂಪಾ ಪ್ರಿಯಸತ್ಯಾತ್ಮಿಕಾ ವಾಗಪ್ಯಾರುಹತ್ | ಆರೂಢವತೀ | ವೃತ್ರವಧಂ ಪ್ರತಿ ಸಾಪಿ ವಾಗಿಂದ್ರಸ್ಯೋತ್ಸಾಹಕಾರಿಣ್ಯಭೂದಿತ್ಯರ್ಥಃ || ಅವನ್ವನ್ | ವನ ಷಣ ಸಂಭಕ್ತೌ | ಲಙಿ ಶಪಿ ಪ್ರಾಪ್ತೇ ವ್ಯತ್ಯಯೇನೋಪ್ರತ್ಯಯಃ | ಸ್ವಭಿಷ್ಟಿಂ | ಇಷ ಗತೌ | ಭಾವೇ ಕ್ತಿನ್ಪ್ರತ್ಯಯಃ | ತಿತುತ್ರೇತ್ಯಾದಿನೇಟ್‌ಪ್ರತಿಷೇಧಃ | ಏಮನಾದಿತ್ವಾತ್ಪರರೂಪತ್ವಂ | ಪಾ. ೬-೧-೯೪-೬ | ಶೋಭನಾ ಅಭಿಷ್ಟಯೋ ಯಸ್ಯೇತಿ ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ | ಊತಯಃ | ಅವತೇಃ ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಕ್ತಿನ್ಪ್ರತ್ಯಯಃ | ಯದ್ವಾ | ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ ಜ್ವರತ್ವರೇತ್ಯಾದಿನೋಟ್ | ಚಿತ ಇತ್ಯಂತೋದಾತ್ತತ್ವಂ | ಅಂತರಿಕ್ಷಪ್ರಾಂ | ಪ್ರಾ ಪೂರಣೇ | ಅಂತರಿಕ್ಷಂ ಪ್ರಾತಿ ಪೂರಯತೀತ್ಯಂತರಿಕ್ಷಪ್ರಾಃ | ಆತೋ ಮನಿನ್ನಿತ್ಯತ್ರ ಚಶಬ್ದಾದ್ವಿಚ್ | ಆವೃತಂ | ವೃಞ್ ವರಣೇ | ಅವ್ರಿಯತ ಇತ್ಯಾವೃತಃ | ಕರ್ಮಣಿ ನಿಷ್ಠಾ | ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ | ದಕ್ಷಾಸಃ | ದಕ್ಷ ವೃದ್ಧೌ | ದಕ್ಷಂತ ಏಭಿರಿತಿ ದಕ್ಷಾಃ | ಕರಣೇ ಘಞ್ | ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ | ಆಜ್ಜಸೇರಸುಕ್ | ಮದಚ್ಯುತಂ | ಚ್ಯುಙ್ ಗತೌ | ಅಂತರ್ಭಾವಿತಣ್ಯರ್ಥಾತ್ ಕ್ವಿಪ್ಚೇತಿ ಕ್ವಿಪ್ | ಹ್ರಸ್ವಸ್ಯ ಪಿತಿ ಕೃತೀತಿ ತುಕ್ | ಶತಕ್ರತುಂ | ಶತಂ ಕ್ರತವೋ ಯಸ್ಯ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ | ಜವನೀ | ಜು ಇತಿ ಸೌತ್ರೋ ಧಾತುಃ | ಕರಣೇ ಲ್ಯುಟ್ | ಟಿಡ್ಢಾಣಞಿತ್ಯಾದಿನಾ ಙೀಪ್ | ಲಿತ್ಸ್ವರೇಣ ಜಕಾರಾತ್ಪರಸ್ಯೋದಾತ್ತತ್ವಂ | ಅರುಹತ್ | ಅರುಹೇರ್ಲುಙಿ ಕೃಮೃದೃರುಹಿಭ್ಯಶ್ಛಂದಸೀತಿ ಚ್ಲೇರಙಾದೇಶಃ ||

|| ಪ್ರತಿಪದಾರ್ಥ ||

ಊತಯಃ—ರಕ್ಷಿಸುವವರೂ | ದಕ್ಷಾಸಃ—(ಪೋಷಿಸಿ) ವೃದ್ಧಿಹೊಂದಿಸುವವರೂ ಆದ |ಋಭ್ವಃ— ಅಧಿಕವಾಗಿ ಪ್ರಕಾಶಿಸುವ ಮರುತ್ತುಗಳು | ಸ್ವಭಿಷ್ಟಂ—ಗಂಭೀರವಾದ ಗಮನವುಳ್ಳವನೂ | ಅಂತರಿಕ್ಷಪ್ರಾಂ— ಅಂತರಿಕ್ಷವನ್ನು (ತನ್ನ ತೇಜಸ್ಸಿನಿಂದ) ತುಂಬುವವನೂ | ತವಿಷೀಭಿಃ ಆವೃತಂ—ಬಲಗಳಿಂದ ತುಂಬಿದವನೂ (ಅತ್ಯಂತ ಬಲಶಾಲಿಯಾದವನೂ) | ಮದಚ್ಯುತಂ—(ಅದ್ದರಿಂದಲೇ ಶತ್ರುವಿನ) ಗರ್ವವನ್ನು ನಾಶಮಾಡತಕ್ಕವನೂ | ಶತಕ್ರತುಂ—ನೂರು ಯಜ್ಞಕರ್ತನೂ ಅಥವಾ ಬಹುವಿಧವಾದ ಪವಿತ್ರಕರ್ಮಗಳನ್ನು ಮಾಡುವವನೂ ಆದ | ಇಂದ್ರಂ—ಇಂದ್ರನನ್ನು | ಅಭೀಂ ಅವನ್ವತ—ಅಭಿಮುಖವಾಗಿ ಹೋಗಿ ಸೇವಿಸಿದರು. ಜವನೀ—(ವೃತ್ರವಧಕ್ಕಾಗಿ) ಪ್ರೇರಿಸತಕ್ಕದ್ದೂ | ಸೂನೃತಾ—(ಮರುತ್ತುಗಳಿಂದ ಉಚ್ಚರಿಸಲ್ಪಟ್ಟ) ಪ್ರಿಯವಾದದ್ದೂ ಸತ್ಯರೂಪವುಳ್ಳದ್ದೂ ಆದ ವಾಕ್ಕು | ಆರುಹತ್—(ಇಂದ್ರನಿಗೆ ಉತ್ಸಾಹವನ್ನುಂಟುಮಾಡುವಂತೆ) ಹೋಗಿ ಸೇರಿತು.

|| ಭಾವಾರ್ಥ ||

ಲೋಕರಕ್ಷಕರೂ ಪೋಷಕರೂ ಅಧಿಕವಾಗಿ ಪ್ರಕಾಶಿಸುವವರೂ ಆದ ಮರುತ್ತುಗಳು, ಗಂಭೀರಗಮನವುಳ್ಳವನೂ, ಅಂತರಿಕ್ಷವನ್ನು ತನ್ನ ತೇಜಸ್ಸಿನಿಂದ ಬೆಳಗಿಸುವವನೂ, ಬಲಶಾಲಿಯಾದವನೂ, ಅದ್ದರಿಂದಲೇ ಶತ್ರುಗಳ ಗರ್ವವನ್ನಡಗಿಸುವವನೂ, ನೂರಾರು ಪವಿತ್ರಕರ್ಮಗಳನ್ನು ಮಾಡುವವನೂ ಆದ ಇಂದ್ರನನ್ನು ಅಭಿಮುಖವಾಗಿ ಹೋಗಿ ಸೇವಿಸಿದರು. ವೃತ್ರವಧಕ್ಕೆ ಪ್ರೇರಿಸಲು ಅವರು ಉಚ್ಚರಿಸಿದ ಪ್ರಿಯವಾದದ್ದೂ ಸತ್ಯವಾದದ್ದೂ ಆದ ವಾಕ್ಕು ಇಂದ್ರನಿಗೆ ಉತ್ಸಾಹವನ್ನುಂಟುಮಾಡಿತು.



CC-0. Jangamwadi Math Collection. Digitized by eGangotri

## English Translation.

If was this Indra, the great granter of wishes, the pervader of heaven, surrounded by powers that his allies, Marnts, loved; it was brave Indra that the mighty and wise Maruts loved; it was Indra of hundred wisdoms that their encouraging vaice reached

‖ ವಿಶೇಷ ವಿಷಯಗಳು ‖

ಋಭವಃ—ಉರು ಭಾಂತಿ ಇತಿ ನೈರುಕ್ತವ್ಯುತ್ಪತ್ತ್ಯಾ ಋಭವೋऽತ್ರ ಮರುತ ಉಚ್ಯಂತೇ । ಬಹಳವಾಗಿ ಪ್ರಕಾಶಿಸುವ ದೇವತೆಗಳಾದ ಮರುತ್ತುಗಳಿಗೆ ಮೇಲಿನ ನಿರುಕ್ತವ್ಯುತ್ಪತ್ತಿಯಿಂದ ಋಭು ಪದವು ವಾಚ್ಯವಾಗಿದೆ. ಮತ್ತು ನಿರುಕ್ತದಲ್ಲಿ ಋತೇನ ಭಾಂತೀತಿ ವಾ । ಋತೇನ ಭವಂತೀತಿವಾ । ಎಂದು ಬೇರೆ ಎರಡು ರೀತಿಯಲ್ಲಿ ವ್ಯುತ್ಪತ್ತಿಯನ್ನು ತೋರಿಸಿ ಸತ್ಯದಿಂದಲೂ, ಸತ್ವದಿಂದಲೂ ಪ್ರಕಾಶಿಸುತ್ತಿರುವವರು ಎಂಬ ರ್ಥವನ್ನು ಋಭುಪದಕ್ಕೆ ಕಲ್ಪಿಸಿರುವರು. ಇವರು ಸತ್ಯವಂತರೆಂಬುದಕ್ಕೆ ಒಂದು ನಿದರ್ಶನವಿದೆ. ವೃತ್ರಾಸುರ ನೊಡನೆ ಇಂದ್ರನು ಹೋರಾಡುವಾಗ ಸಕಲ ದೇವತೆಗಳೂ ವೃತ್ರನಿಗೆ ಹೆದರಿ ಓಡಿಹೋದರು. ಆದರೆ ಈ ಮರುತ್ತಗಳು ಮಾತ್ರ ಇಂದ್ರನ ಪಕ್ಷವನ್ನು ಬಿಡಲಿಲ್ಲ. ಆದ್ದರಿಂದಲೇ ಇಂದ್ರಸುಖರೆಂದೂ ಮರುತ್ತುಗಳಿಗೆ ಪ್ರಸಿದ್ಧಿಯಿದೆ., ವಿಶ್ವೇ ದೇವಾ ಅಜಹುರ್ಯೇ ಸಖಾಯಃ । ಮರುದ್ಭಿರಿಂದ್ರ ಸಖ್ಯಂ ತೇ ಅಸ್ತು (ಋ. ಸಂ. ೮-೯೬-೭) " ಮರುತೋ ಹ್ಯೇನಂ ನಾಜಹುಃ " (ಐ. ಬ್ರಾ. ೩-೨೦) ಈ ಶ್ರುತಿಗಳೂ ಅದೇ ಅರ್ಥವನ್ನೇ ಸಾರುತ್ತಿರುವುವು.

ಅಂತರಿಕ್ಷಪ್ರಾಂ—ಅಂತರಿಕ್ಷಂ ದ್ಯುಲೋಕಂ ಸ್ವತೇಜಸಾ ಪ್ರಾತಿ ಪೂರಯತೀತಿ ಅಂತರಿಕ್ಷಪ್ರಾಃ । ದ್ವಾದಶಸ್ವಾದಿತ್ಯೇಷು ಇಂದ್ರಸ್ಯ ವಿದ್ಯಮಾನತ್ವಾತ್ । ದ್ವಾದಶಾದಿತ್ಯರು ದೇವಲೋಕವನ್ನೂ ಇತರ ಎಲ್ಲ ಲೋಕಗಳನ್ನೂ ತಮ್ಮ ತೇಜಸ್ಸಿನಿಂದ ಬೆಳಗಿಸುವರು. ಆದರೆ ಅವರು ಇಂದ್ರನಿಗೆ ಅಧೀನರಾಗಿರುವುದರಿಂದ ದ್ವಾದ ಶಾದಿತ್ಯ ವಾಚಕವಾದ, ಈ ಪದವು 'ಇಂದ್ರ' ಎಂಬರ್ಥಕ್ಕೂ ವಿಶೇಷಣವಾಗಿರುವುದು. " ತಸ್ಯಾ ಇಂದ್ರಶ್ಚ ವಿವಸ್ವಾಂಶ್ಚಾಜಾಯೇತಾಂ " ತೈ. ಬ್ರಾ. (೧-೧-೯-೩) " ಇಂದಶ್ಚ ವಿವಸ್ವಾಗ್‌ಶ್ಚೈತ್ಯೇತೇ " (ತೈ. ಆ. ೧-೧೩-೩) ಎಂಬ ಶ್ರುತಿಗಳೂ ಇದಕ್ಕೆ ನಿದರ್ಶನಗಳಾಗಿವೆ.

ತವಿಷೀ ತವಿಷೀತಿ ಬಲನಾಮ । 'ತವಿಷೀ ಶುಷ್ಮಂ' (ನಿ. ೨-೯) ಹೀಗೆಂದು ಬಲಾರ್ಥದಲ್ಲಿ ಉಕ್ತವಾಗಿರುವುದರಿಂದ ತವಿಷೀ ಎಂದರೆ ಬಲ, ಶಕ್ತಿ ಎಂದರ್ಥ.

ಶತಕ್ರತುಂ—ನೂರು ಯಾಗಗಳನ್ನು ನಡೆಸಿದವನು, ಅಥವಾ ಅನೇಕ ಕರ್ಮಗಳನ್ನು ನಡೆಸುವವನು. ಎಂದರ್ಥವು.

ಜವನೀ—ವೃತ್ರಾಸುರವಧೆಗೆ ಪ್ರೇರಿಸಿದ ಮಾತು. ಜು. ಎಂಬುದು ಸೂತ್ರ ಸಂಬಂಧವಾದ ಧಾತು. ಇದಕ್ಕೆ ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯವು ಬಂದಿದೆ.

ಸೂನೃತಾ—ಮರುದ್ದೇವತೆಗಳು ದೇವೇಂದ್ರನನ್ನು ಸ್ತುತಿಸುವ " ಪ್ರಹರ ಭಗವೋ ಜಹಿ ವೀರ-ಯಸ್ವ " (ಐ. ಬ್ರಾ. ೩-೨೦) ಇತ್ಯಾದಿ ಬ್ರಾಹ್ಮಣೋಕ್ತವಾದ ಪ್ರಿಯವೂ ಸತ್ಯವೂ ಆದ ಮಾತುಗಳು.



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

ಅವಸ್ಯನ್—ವನ ಷಣ ಸಂಭಕ್ತೌ ಧಾತು. ಲಙ್ ಪ್ರಥಮಪುರುಷ ಬಹುವಚನ ವಿವಕ್ಷಾಮಾಡಿದಾಗ ಝಿ ಪ್ರತ್ಯಯ ಬರುತ್ತದೆ. ಅದಕ್ಕೆ ಅಂತಾದೇಶ ಬಂದು ಇಕಾರ ಲೋಪಮಾಡಿದರೆ ಅನ್ ಎಂದು ಉಳಿಯುತ್ತದೆ. ವನ್+ಅನ್ ಎಂದಿರುವಾಗ ಕರ್ತರಿಶಪ್ ಸೂತ್ರದಿಂದ ಶಪ್ ಪ್ರಾಪ್ತವಾದರೆ ವ್ಯತ್ಯಯೋ ಬಹುಲಂ ಸೂತ್ರದಿಂದ ಉ ವಿಕರಣ ಬರುತ್ತದೆ. ವನು+ಅನ್ ಎಂಬಲ್ಲಿ ಯಣಾದೇಶ ಬಂದು ಧಾತುವಿಗೆ ಅಡಾಗಮ ಬಂದರೆ ಅವನ್ವನ್ ಎಂದು ರೂಪವಾಗುತ್ತದೆ.

ಸ್ವಭಿಷ್ಟಿಮ್—ಇಷ ಗತೌ ಧಾತು. ತುದಾದಿ. ಭಾವೆ ಎಂಬ ಅಧಿಕಾರದಲ್ಲಿರುವ ಸ್ತ್ರಿಯಾಂಕ್ತಿನ್ (ಪಾ. ಸೂ. ೩-೩-೯೪) ಸೂತ್ರದಿಂದ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ ಬರುತ್ತದೆ. ಅದು ಆರ್ಧಧಾತುಕವಾದುದರಿಂದ ಇಡಾಗಮವು ಪ್ರಾಪ್ತವಾದರೆ ತಿತುತ್ರತಥಸಿ (ಪಾ. ಸೂ. ೭-೨-೯) ಸೂತ್ರದಿಂದ ಇಣ್ನಿಷೇಧ ಬರುತ್ತದೆ. ಇಷ್+ತಿ ಎಂದಿರುವಾಗ ಷ್ಟುತ್ವ ಬಂದರೆ ಇಷ್ಟಿ ಎಂದು ರೂಪವಾಗುತ್ತದೆ. ಅಭಿ+ಇಷ್ಟಿ ಎಂದಿರುವಾಗ ಸವರ್ಣ ದೀರ್ಘವು ಪ್ರಾಪ್ತವಾದರೆ ಏಙಿಪರರೂಪಂ (ಪಾ. ಸೂ. ೬-೧-೯೪) ಸೂತ್ರದಲ್ಲಿ ಅನ್ಯಾದೀನಾಮುಪಸಂಖ್ಯಾನಂ (ಪಾ. ಸೂ. ೬-೧-೯೪-೬) ಎಂದು ಪಾಠಮಾಡಿರುವುದರಿಂದ ಅನ್ಯಾದಿಯಲ್ಲಿ ಇದನ್ನು ಸೇರಿಸಿರುವುದರಿಂದ ಪರರೂಪವು ಬರುತ್ತದೆ. ಅಭಿಷ್ಟಿ ಎಂದು ರೂಪವಾಗುತ್ತದೆ. ಶೋಭನಾ ಅಭಿಷ್ಟಯಃ ಯಸ್ಯ ಸಃ ಸ್ವಭಿಷ್ಟಿಃ ದ್ವಿತೀಯಾ ಏಕವಚನದಲ್ಲಿ ಸ್ವಭಿಷ್ಟಿಂ ಎಂದು ರೂಪವಾಗುತ್ತದೆ. ಇದು ಬಹುವ್ರೀಹಿ ಸಮಾಸ. ನಞ್ಸುಭ್ಯಾಂ (ಪಾ. ಸೂ. ೬-೨-೧೭೨) ಸೂತ್ರದಿಂದ ಬಹುವ್ರೀಹಿಯಲ್ಲಿ ಉತ್ತರಪದಾಂತೋದಾತ್ತ ಸ್ವರ ಬರುತ್ತದೆ. ಸ್ವಭಿಷ್ಟಿಂ ಎಂಬುದು ಅಂತೋದಾತ್ತವಾದ ಪದವಾಗುತ್ತದೆ.

ಊತಯಃ—ಅವ ರಕ್ಷಣೆ ಧಾತು. ಭ್ವಾದಿ. ಕೃತ್ಯಲ್ಯುಟೋ ಬಹುಲಂ (ಪಾ. ಸೂ. ೩-೩-೧೧೩) ಎಂಬುದರಿಂದ. ಕರ್ತ್ರರ್ಥದಲ್ಲಿ ಕ್ತಿನ್ ಪ್ರತ್ಯಯ ಬರುತ್ತದೆ ಅಥವಾ ಕ್ತಿಚ್ ಕ್ತೌ ಚ ಸಂಜ್ಞಾಯಾಂ (ಪಾ.ಸೂ. ೩-೩-೧೭೪) ಆಶೀರರ್ಥದಲ್ಲಿಯೂ ಸಂಜ್ಞಾದಲ್ಲಿಯೂ ಧಾತುಗಳಿಗೆ ಈ ಎರಡು ಪ್ರತ್ಯಯಗಳು ಬರುತ್ತವೆ ಎಂಬುದರಿಂದ ಕ್ತಿಚ್ ಪ್ರತ್ಯಯ ಬರುತ್ತದೆ. ಅವ್+ತಿ ಎಂದಿರುವಾಗ ಜ್ವರತ್ವರಸ್ರಿವಿ (ಪಾ. ಸೂ. ೬-೪-೨೦) ಸೂತ್ರದಿಂದ ಉಪಧಾ ಮತ್ತು ವಕಾರಕ್ಕೆ ಏಕಕಾಲದಲ್ಲಿ (ಎರಡೂ ಸ್ಥಾನಿ) ಊಠಾದೇಶ ಬರುತ್ತದೆ. ಊತಿ ಎಂದು ರೂಪವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಊತಯಃ ಎಂದು ರೂಪವಾಗುತ್ತದೆ. ಕ್ತಿಚಿನಲ್ಲಿ ಚಕಾರ ಇತ್ತಾದುದರಿಂದ ಚಿತಃ ಸೂತ್ರದಿಂದ ಅಂತೋದಾತ್ತಸ್ವರ ಬರುತ್ತದೆ. ವಿಭಕ್ತಿಗೆ ಅನುದಾತ್ತಸ್ವರ ಬರುತ್ತದೆ. ಊತಯಃ ಎಂಬುದು ಮಧ್ಯೋದಾತ್ತವಾಗುತ್ತದೆ.

ಅಂತರಿಕ್ಷಪ್ರಾಮ್—ಪ್ರಾ ಪೂರಣೆ ಧಾತು. ಅದಾದಿ. ಅಂತರಿಕ್ಷಂ ಪ್ರಾತಿ ಪೂರಯತಿ ಇತಿ ಅಂತರಿಕ್ಷಪ್ರಾಃ ಆಕಾಶವನ್ನು ತುಂಬುವುದು ಎಂದರ್ಥ. ಆತೋ ಮನಿನ್ ಕ್ವನಿಬ್ವನಿಪಶ್ಚ (ಪಾ. ಸೂ. ೩-೨-೭೪) ಸೂತ್ರದಲ್ಲಿ ಚಕಾರ ಪಾಠಮಾಡಿರುವುದರಿಂದ ಛಂದಸ್ಸಿನಲ್ಲಿ ಸುಬಂತವು ಉಪಪದವಾಗಿರುವಾಗ ಅದಂತವಾದ ಧಾತುವಿಗೆ ವಿಚ್ ಪ್ರತ್ಯಯ ಬರುತ್ತದೆ. ವಿಚಿನಲ್ಲಿ ಸರ್ವಲೋಪವಾಗುತ್ತದೆ. ಕೃದಂತವಾದುದರಿಂದ ಪ್ರಾತಿಪದಿಕ ಸಂಜ್ಞೆ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಅಂತರಿಕ್ಷಪ್ರಾಂ ಎಂದು ರೂಪವಾಗುತ್ತದೆ. ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ.

ಅವೃತಮ್—ವೃಞ್ ವರಣೆ ಧಾತು. ಕ್ರ್ಯಾದಿ. ಅವ್ರಿಯತೆ ಇತಿ ಅವೃತಃ ಆವರಿಸಲ್ಪಡುವುದು ಎಂದರ್ಥ. ತಯೋರೇವಕೃತ್ಯಕ್ತಖಲರ್ಥಾಃ (ಪಾ. ಸೂ. ೩-೪-೭೦) ಎಂದು ಭಾವಕರ್ಮಾರ್ಥದಲ್ಲಿ ಕ್ತ ಪ್ರತ್ಯಯ



CC-0. Jangamwadi Math Collection. Digitized by eGangotri

ವನ್ನು ವಿಧಾನಮಾಡಿರುವುದರಿಂದ ಕರ್ಮಾರ್ಥದಲ್ಲಿ ಇಲ್ಲಿ ಕ್ತ ಪ್ರತ್ಯಯ ಬರುತ್ತದೆ. ಆಙ್ ಎಂಬುದು ಗತಿಸಂಜ್ಞೆಯುಳ್ಳ ಶಬ್ದ. ಕಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಆವೃತಃ ಎಂದು ರೂಪವಾಗುತ್ತದೆ. ಗತಿರನಂತರಃ (ಪಾ. ಸೂ. ೬-೨-೪೯) ಕರ್ಮಾರ್ಥಕಕ್ತಾಂತವು ಪರದಲ್ಲಿರುವಾಗ ಅವ್ಯವಹಿತ ಪೂರ್ವದಲ್ಲಿರುವ ಗತಿಯು ಪ್ರಕೃತಿಸ್ವರವನ್ನು ಹೊಂದುತ್ತದೆ ಎಂಬುದರಿಂದ ಇಲ್ಲಿ ಗತಿಗೆ ಪ್ರಕೃತಿಸ್ವರ ಬರುತ್ತದೆ. ಆವೃತಂ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

ದಕ್ಷಾಸಃ—ದಕ್ಷ ವೃದ್ಧೌ ಧಾತು. ಭ್ವಾದಿ. ದಕ್ಷಂತ ಏಭಿಃ ಇತಿ ದಕ್ಷಾಃ। ಇವುಗಳಿಂದ ಅಭಿವೃದ್ಧಿಯನ್ನು ಹೊಂದುತ್ತನೆ ಎಂದರ್ಥ. ಕರಣಾರ್ಥದಲ್ಲಿ ಘಞ್ ಪ್ರತ್ಯಯ ಬರುತ್ತದೆ. ದಕ್ಷ ಎಂದು ರೂಪವಾಗುತ್ತದೆ. ದಕ್ಷಶಬ್ದದ ಮೇಲೆ ಪ್ರಥಮಾ ಬಹುವಚನ ಪರದಲ್ಲಿರುವಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಅವರ್ಣಾಂತವಾದ ಅಂಗದ ಪರದಲ್ಲಿರುವ ಜಸಿಗೆ ಅಸುಕ್ ಬರುತ್ತದೆ ಎಂಬುದರಿಂದ ಜಸಿಗೆ ಅಸುಕಾಗಮ ಬರುತ್ತದೆ. ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ದಕ್ಷಾಸಸ್ ಎಂದಿರುವಾಗ ರುತ್ವವಿಸರ್ಗ ಬಂದರೆ ದಕ್ಷಾಸಃ ಎಂದು ರೂಪವಾಗುತ್ತದೆ.

ಮದಚ್ಯುತಮ್—ಮದಂ ಚ್ಯಾವಯತಿ ಇತಿ ಮದಚ್ಯುತ್. ಚ್ಯುಙ್ ಗತೌ ಧಾತು. ಭ್ವಾದಿ. ಣಿಜರ್ಥವು ಧಾತ್ವರ್ಥದಲ್ಲಿ ಅಂತರ್ಭೂತವಾಗಿದೆ. ಕ್ವಿಪ್ ಚ ಸೂತ್ರದಿಂದ ಕ್ವಿಪ್ ಪ್ರತ್ಯಯ ಬರುತ್ತದೆ. ಪಿತ್ತಾದುದರಿಂದ ಹ್ರಸ್ವಸ್ಯ ಪಿತಿ ಕೃತಿ ತುಕ್ (ಪಾ. ಸೂ. ೬.೧-೭೧) ಸೂತ್ರದಿಂದ ಚ್ಯು ಎಂಬುದಕ್ಕೆ ತುಕಾಗಮ ಬರುತ್ತದೆ. ಮದಚ್ಯುತ್ ಎಂದು ತಾಂತಪದವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ ಮದಚ್ಯುತಂ ಎಂದು ರೂಪವಾಗುತ್ತದೆ.

ಶತಕ್ರತುಮ್—ದ್ವಿತೀಯೈಕವಚನರೂಪ ಶತಂ ಕ್ರತವೋ ಯಸ್ಯ ಸಃ ಶತಕ್ರತುಃ ಬಹುವ್ರೀಹಿ ಸಮಾಸಃ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬ ಸೂತ್ರದಿಂದ ಪೂರ್ವಪದ ಪ್ರಕೃತಿಸ್ವರಬರುತ್ತದೆ. ತಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಜವನೀ—ಜು ಎಂಬುದು ಸೂತ್ರನಿರ್ದಿಷ್ಟವಾದ ಧಾತು. ಇದು ಗತ್ಯರ್ಥದಲ್ಲಿಯೂ ವೇಗಾರ್ಥದಲ್ಲಿಯೂ ಇದೆ. ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬರುತ್ತದೆ. ಯುವೋರನಾಕೌ ಸೂತ್ರದಿಂದ ಲ್ಯುಟನಲ್ಲಿ ಉಳಿಯುವ ಯು ಎಂಬುದಕ್ಕೆ ಅನಾದೇಶ ಬರುತ್ತದೆ. ಜವನ ಎಂದು ರೂಪವಾಗುತ್ತದೆ. ಸ್ತ್ರೀತ್ವ ವಿವಕ್ಷಾಮಾಡಿದಾಗ ಟಿಡ್ಢಾಣಞ (ಪಾ. ಸೂ. ೪-೧-೧೫) ಎಂಬುದರಿಂದ ಟಿದಂತವಾದ ಪ್ರಾತಿಪದಿಕವಾದುದರಿಂದ ಙೀಪ್ ಬರುತ್ತದೆ. ಜವನೀ ಎಂದು ರೂಪವಾಗುತ್ತದೆ. ಲಿತಿ (ಪಾ. ಸೂ. ೬-೧-೧೯೩) ಲಿತ್ತಾದ ಪ್ರತ್ಯಯದ ಪೂರ್ವವು ಉದಾತ್ತವಾಗುತ್ತದೆ ಎಂಬುದರಿಂದ ಇಲ್ಲಿ ಜಕಾರದ ಪರದಲ್ಲಿರುವ ಅಕಾರವು ಉದಾತ್ತವಾಗುತ್ತದೆ.

ಅರುಹತ್—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಧಾತು. ಭ್ವಾದಿ. ರುಹ ಧಾತುವಿಗೆ ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿ ಪ್ರತ್ಯಯ ಬರುತ್ತದೆ. ಕೃಮೃದೃರುಹಿಭ್ಯಶ್ಛಂದಸಿ (ಪಾ. ಸೂ. ೭.೨-೧೩) ಸೂತ್ರದಿಂದ ಚ್ಲಿಗೆ ಅಙಾದೇಶ ಬರುತ್ತದೆ. ಧಾತುವಿಗೆ ಅಡಾಗಮ ಬಂದರೆ ಅರುಹತ್ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

‖ ಸಂಹಿತಾಪಾಠಃ ‖

ತ್ವಂ ಗೋತ್ರಮಂಗಿರೋಭ್ಯೋಽವೃಣೋರಪೋತಾತ್ರಯೇ ಶತದುರೇಷು
ಗಾತುವಿತ್ ।
ಸಸೇನ ಚಿದ್ವಿಮದಾಯಾವಹೋ ವಸ್ವಾಜಾವದ್ರಿಂ ವಾವಸಾನಸ್ಯ
ನರ್ತಯನ್ ‖ ೩ ‖

‖ ಪದಪಾಠಃ ‖

ತ್ವಂ । ಗೋತ್ರಂ । ಅಂಗಿರಃಽಭ್ಯಃ । ಅವೃಣೋಃ । ಅಪ । ಉತ । ಅತ್ರಯೇ ।
ಶತಽದುರೇಷು । ಗಾತುಽವಿತ್ ।
ಸಸೇನ । ಚಿತ್ । ವಿಽಮದಾಯ । ಅವಹಃ । ವಸು । ಆಜೌ । ಅದ್ರಿಂ । ವವ-
ಸಾನಸ್ಯ । ನರ್ತಯನ್ ‖ ೩ ‖

‖ ಸಾಯಣಭಾಷ್ಯಂ ‖

ಹೇ ಇಂದ್ರ ತ್ವಂ ಗೋತ್ರಮವ್ಯಕ್ತಶಬ್ದವಂತಂ ವೃಷ್ಟ್ಯುದಕಸ್ಯಾವರಕಂ ಮೇಘಮಂಗಿರೋಭ್ಯೋಽಂಗಿರಸಾಮೃಷೀಣಾಮರ್ಥಾಯಾಪಾವೃಣೋಃ । ಅಪವರಣಂ ಕೃತವಾನಸಿ । ವೃಷ್ಟೇರಾವರಕಂ ಮೇಘಂ ವಜ್ರೇಣೋದ್ಘಾಟ್ಯ ವರ್ಷಣಂ ಕೃತವಾನಸೀತ್ಯರ್ಥಃ । ಯದ್ವಾ । ಗೋತ್ರಂ ಗೋಸಮೂಹಂ ಪಣಿಭಿರಪಹೃತಂ ಗುಹಾಸು ನಿಹಿತಮಂಗಿರೋಭ್ಯ ಋಷಿಭ್ಯೋಽಪಾವೃಣೋಃ । ಗುಹಾದ್ವಾರೋದ್ಘಾಟನೇನ ಪ್ರಾಕಾಶಯಃ । ಉತಾಪಿ ಚಾತ್ರಯೇ ಮಹರ್ಷಯೇ। ಕೀದೃಶಾಯ। ಶತದುರೇಷು ಶತದ್ವಾರೇಷು ಯಂತ್ರೇಷ್ವಸುರೈಃ ಪೀಡಾರ್ಥಂ ಪ್ರಕ್ಷಿಪ್ತಾಯ । ಗಾತುವಿತ್ ಮಾರ್ಗಸ್ಯ ಲಂಭಯಿತಾಭೂಃ । ತಥಾ ವಿಮದಾಯ ಚಿತ್ ವಿಮದನಾಮ್ನೇ ಮಹರ್ಷಯೇಽಪಿ ಸಸೇನಾನ್ನೇನ । ಯುಕ್ತಂ ವಸು ಧನಮವಹಃ । ಪ್ರಾಪಿತವಾನ್ । ತಥಾಜೌ ಸಂಗ್ರಾಮೇ ಜಯಾರ್ಥಂ ವವಸಾನಸ್ಯ ನಿವಸತೋ ವರ್ತಮಾನಸ್ಯಾನ್ಯಸ್ಯಾಪಿ ಸ್ತೋತುರದ್ರಿಂ ವಜ್ರಂ ನರ್ತಯನ್ ರಕ್ಷಣಂ ಕೃತವಾನಸೀತಿ ಶೇಷಃ । ಅತಸ್ತವ ಮಹಿಮಾ ಕೇನ ವರ್ಣಯಿತುಂ ಶಕ್ಯೇತ ಇತಿ ಭಾವಃ ‖ ಗೋತ್ರಂ । ಗುಙ್ ಅವ್ಯಕ್ತೇ ಶಬ್ದೇ । ಔಣಾದಿಕಸ್ತ್ರಪ್ರತ್ಯಯಃ। ಯದ್ವಾ । ಖಲಗೋರಥಾದಿತ್ಯನುವೃತ್ತಾವಿನಿತ್ರಕಟ್ಯಚಶ್ಚ । ಪಾ. ೪-೨-೫೧ । ಇತಿ ಸಮೂಹಾರ್ಥೇ ತ್ರಪ್ರತ್ಯಯಃ ।



CC-0. Jangamwadi Math Collection. Digitized by eGangotri

ಶತದುರೇಷು । ಶತಂ ದುರಾ ದ್ವಾರಾಣ್ಯೇಷಾಂ । ದೃೃ ಇತ್ಯೇಕೇ । ದೃರ್ಯಂತೇ ಸಂಪ್ರಿಯಂತ ಇತಿ ದುರಾಃ ಘಞರ್ಥೇ ಕವಿಧಾನಮಿತಿ ಕಪ್ರತ್ಯಯಃ । ಛಾಂದಸಂ ಸಂಪ್ರಸಾರಣಂ ಪರಪೂರ್ವತ್ವಂ । ತಚ್ಚಿಯೋ ಹ್ಯುಭಯೋಃ ಸ್ಥಾನೇ ಭವತಿ ಸ ಲಭತೇಽನ್ಯತರೇಣಾಪಿ ವ್ಯಪದೇಶಮಿತ್ಯುರಣ್ ರಪರಃ । ಪಾ. ೧-೧-೫೧ । ಇತಿ ರಪರಂ ಭವತಿ । ಯದ್ವಾ । ದ್ವಾರಶಬ್ದಸ್ಯೈವ ಛಾಂದಸಂ ಸಂಪ್ರಸಾರಣಂ ದ್ರಷ್ಟವ್ಯಂ । ಗಾತುವಿತ್ । ಗಾಜ್ ಗತೌ । ಅಸ್ಮಾತ್ಕಮಿಮನಿಜನಿಭಾಗಾಪಾಯಾಹಿಭ್ಯಶ್ಚ । ಉ. ೧-೭೩ । ಇತಿ ತುಪ್ರತ್ಯಯಃ । ತಂ ವೇದಯತಿ ಲಂಭಯತೀತಿ ಗಾತುವಿತ್ । ವಿದ್ಲೃ ಲಾಭೇ । ಅಂತರ್ಭಾವಿತಣ್ಯರ್ಥಾತ್ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಸಸೇನ । ಸಸಮಿತ್ಯನ್ನನಾಮ । ಸಸಂ ನಮ ಆಯುರಿತಿ ತನ್ನಾಮಸು ಪಾಠಾತ್ । ಆಜಿರಿತಿ ಸಂಗ್ರಾಮನಾಮ । ಆಹವ ಆಜಾವಿತಿ ತತ್ರ ಪಾಠಾತ್ । ಅದ್ರಿಂ । ಅತ್ತಿ ಭಕ್ಷಯತಿ ವೈರಿಣಮಿತ್ಯದ್ರಿರ್ವಜ್ರಃ । ಅದಿಶದಿಭೂಶುಭಿಭ್ಯಃ ಕ್ರಿನ್ನಿತಿ ಕ್ರಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಯಾಸ್ಕಸ್ತ್ವೇವಮದ್ರಿಶಬ್ದಂ ವ್ಯಾಚಖ್ಯೌ । ಅದ್ರಿರಾದೃಣಾತ್ಯನೇನಾಪಿ ವಾತ್ತೇಃ ಸ್ಯಾತ್ । ನಿ. ೪-೪ ಇತಿ । ವವಸಾನಸ್ಯ । ವಸ ನಿವಾಸೇ ಕರ್ತರಿ ತಾಚ್ಛೀಲಿಕಶ್ಚಾನಶ್ । ಬಹುಲಂ ಛಂದಸೀತಿ ಶಪಃ ಶ್ಲುಃ । ದ್ವಿರ್ಭಾವಹಲಾದಿಶೇಷೌ । ಚಿತ್ತ್ವಾದಂತೋದಾತ್ತತ್ವಂ ॥

॥ ಪ್ರತಿಪದಾರ್ಥ ॥

(ಇಂದ್ರ—ಎಲೈ ಇಂದ್ರನೇ) । ತ್ವಂ—ನೀನು । ಗೋತ್ರಂ—(ವೃಷ್ಟಿಯನ್ನು ತಡೆದು) ಶಬ್ದಮಾಡುತ್ತಿರುವ ಮೇಘವನ್ನು । ಅಂಗಿರೋಭ್ಯಃ—(ಋಷಿಗಳಾದ) ಅಂಗಿರಸ್ಸುಗಳಿಗಾಗಿ । ಅಪ ಅವೃಣೋಃ—(ವಜ್ರದಿಂದ) ಸೀಳಿಬಿಡಿಸಿದ್ದೀಯೆ (ಮಳೆಯನ್ನು ಸುರಿಸಿದ್ದೀಯೆ) । [ಅಥವಾ ಗೋತ್ರಂ—(ಪಣಿಯಿಂದ ಅಪಹೃತವಾಗಿ ಗುಹೆಗಳಲ್ಲಿಟ್ಟಿರುವ) ಗೋಸಮೂಹವನ್ನು । ಅಂಗಿರೋಭ್ಯಃ—(ಋಷಿಗಳಾದ) ಅಂಗಿರಸ್ಸುಗಳಿಗಾಗಿ । ಅಪ ಅವೃಣೋಃ—(ಗುಹಾದ್ವಾರಗಳನ್ನು) ಸೀಳಿ ಹೊರಕ್ಕೆ ಹೊರಡಿಸಿದೆ । ] ಉತ—ಮತ್ತು । ಶತದುರೇಷು—(ಶತ್ರುದಮನಕ್ಕಾಗಿ) ನೂರಾರು ದ್ವಾರಗಳಲ್ಲಿ । ಅತ್ರಯೇ—ಅತ್ರಿಮಹರ್ಷಿಗೆ ।ಗಾತುವಿತ್— ಮಾರ್ಗದರ್ಶಕನಾಗಿ ಆದೆ । ವಿಮದಾಯ ಚಿತ್—ವಿಮದನೆಂಬ ಮಹರ್ಷಿಗೂ ಕೂಡ । ಸಸೇನ ಅನ್ನದಿಂದೊಡಗೂಡಿದ । ವಸು—ಧನವನ್ನು । ಅವಹಃ—ತಂದು ಹೊಂದಿಸಿದ್ದೀಯೇ (ಹಾಗೆಯೇ) । ಆಜೌ-ಯುದ್ಧದಲ್ಲಿ । ವವಸಾನಸ್ಯ-(ಆತ್ಮರಕ್ಷಣೆಯಲ್ಲಿ) ಉದ್ಯುಕ್ತನಾದ ಭಕ್ತನಿಗೂ (ಅವನ ಸಹಾಯಾರ್ಥವಾಗಿ) । ಅದ್ರಿಂ—ವಜ್ರಾಯುಧವನ್ನು । ನರ್ತಯನ್—ಪ್ರಯೋಗಿಸುತ್ತಾ (ಅವನನ್ನೂ ರಕ್ಷಿಸಿರುವೆ).

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಋಷಿಗಳಾದ ಅಂಗಿರಸ್ಸುಗಳಿಗಾಗಿ ಮೇಘವನ್ನು ಒಡೆದು ಮಳೆಯನ್ನು ಸುರಿಸಿದ್ದೀಯೆ. ಶತ್ರುದಮನಕ್ಕಾಗಿ ನೂರಾರು ದ್ವಾರಗಳಲ್ಲಿ ಯಂತ್ರಗಳನ್ನಿಟ್ಟುಕೊಂಡು ಕಾದಾಡುತ್ತಿರುವ ಅತ್ರಿಮಹರ್ಷಿಗೆ ಮಾರ್ಗದರ್ಶಕನಾಗಿದ್ದೀಯೆ. ವಿಮದನೆಂಬ ಮಹರ್ಷಿಗೆ ಅನ್ನದಿಂದ ಕೂಡಿದ ಧನವನ್ನು ಅನುಗ್ರಹಿಸಿಕೊಟ್ಟಿದ್ದೀಯೆ. ಯುದ್ಧದಲ್ಲಿ ಆತ್ಮರಕ್ಷಣೆಯಲ್ಲಿ ಉದ್ಯುಕ್ತನಾದ ಭಕ್ತನಿಗೂ ಅವನ ಸಹಾಯಾರ್ಥವಾಗಿ ವಜ್ರಾಯುಧವನ್ನು ಪ್ರಯೋಗಿಸುತ್ತ ಅವನನ್ನೂ ರಕ್ಷಿಸಿರುವೆ.



CC-0. Jangamwadi Math Collection. Digitized by eGangotri

## English Translation.

You have opened the cloud for the Angirasas, you have shown the way to Atri who vexes his adversaries by a hundred devices; you have granted wealth with food to VIMADA; you are weilding your thunderbolt in defence of a worshipper engaged in battle.

॥ ವಿಶೇಷ ವಿಷಯಗಳು ॥

ಅಂಗಿರೋಭ್ಯಃ—ಅಂಗಿರಾಋಷಿಗಳ ವಿಷಯವಾಗಿ ನಾವು ಬರೆದಿರುವ ವಿಸ್ತಾರವಾದ ವಿವರಣೆಯನ್ನು ಋ. ಸಂ. ಭಾಗ ೩ ಪೇಜು 520-522 ನೋಡಿ.

ಅತ್ರಯೇ—ಅತ್ರಿಮಹರ್ಷಿಗಾಗಿ. ಅತ್ರಿ ಎಂಬ ಋಷಿಯು ಪ್ರಸಿದ್ಧವಾದ ಅತ್ರಿವಂಶಕ್ಕೆ ಮೂಲ ಪುರುಷನು. ಈ ಅತ್ರಿಋಷಿಯೂ ಇವನ ವಂಶಸ್ಥರೂ ಋಗ್ವೇದದ ಐದನೆಯ ಮಂಡಲದ ಸೂಕ್ತಗಳಿಗೆ ಋಷಿಗಳಾಗಿರುವರು. ಅತ್ರಿವಂಶದವರ ವಿಷಯದಲ್ಲಿ ಪ್ರಿಯಮೇಧರೂ, ಕಣ್ವರೂ, ಗೋತಮರೂ, ಕಕ್ಷೀವತರೂ ಹತ್ತಿರದ ಸಂಬಂಧವನ್ನಿಟ್ಟುಕೊಂಡಿದ್ದರೆಂದು ತಿಳಿದುಬರುವುದು. ಋ. ಸಂ. ಐದನೇ ಮಂಡಲದ ೯ ಮತ್ತು ೧೭ ನೇ ಋಕ್ಕುಗಳಲ್ಲಿ ಪರುಷ್ಣಿ ಮತ್ತು ಯಮುನಾ ಎಂಬ ನದಿಗಳು ಪಠಿತವಾಗಿರುವುದರಿಂದ ಈ ಅತ್ರಿವಂಶಸ್ಥರು ಆ ಪ್ರದೇಶಗಳಲ್ಲಿ ನೆಲಸಿದ್ದರೆಂದು ಊಹಿಸಬಹುದು.

ಗೋತ್ರಂ—ಅವ್ಯಕ್ತಶಬ್ದವಂತಂ ವೃಷ್ಟ್ಯುದಕಸ್ಥಾವರಕಂ ಮೇಘಂ। ಯದ್ವಾ ಗೋತ್ರಂ ಗೋಸಮೂಹಂ ಪಣಿಭಿರಪಹೃತಂ। ಗೋತ್ರಶಬ್ದವು "ಗುಙ್ ಅವ್ಯಕ್ತೇ ಶಬ್ದೇ" ಎಂಬ ಔಣಾದಿಕವಾದ ಧಾತುವಿನಿಂದ ನಿಷ್ಪನ್ನವಾಗಿ, ಅವ್ಯಕ್ತವಾಗಿ ಗುಡುಗುವ ಮತ್ತು ವೃಷ್ಟಿಗೆ ಆಶ್ರಯವಾಗಿರುವ ಮೇಘ ಎಂಬರ್ಥವನ್ನು ಕೊಡುವುದು. ಅಥವಾ ಗೋಶಬ್ದದಮೇಲೆ "ಇನಿತ್ರಕಟ್ಯಚಶ್ಚ" (ಪಾ. ಸೂ. ೪-೨-೫೧) ಎಂಬ ಸೂತ್ರದಿಂದ ಸಮೂಹಾರ್ಥದಲ್ಲಿ ತ್ರ ಪ್ರತ್ಯಯವಿಟ್ಟರೆ ಗೋಸಮೂಹ ಎಂಬರ್ಥವೂ ಆಗುವುದು.

ಶತದುರೇಷು—ಶತದ್ವಾರೇಷು ಯಂತ್ರೇಷ್ವಸುರೈಃ ಪೀಡಾರ್ಥಂ ಪ್ರಕ್ಷಿಪ್ತಾಯ। ಶತಂ ದುರಾ ದ್ವಾರಾಣ್ಯೇಷಾಂ॥ ನಾನಾವಿಧಗಳಾದ ದ್ವಾರ (ಅಲುಗು) ಗಳುಳ್ಳ ಯಂತ್ರವಿಶೇಷ. ರಾಕ್ಷಸರನ್ನು ಹಿಂಸಿಸುವುದಕ್ಕಾಗಿ ಉಪಯೋಗಿಸುವ ಆಯುಧ.

ಸಸೇನ—ಅನ್ನೇನ ಯುಕ್ತಂ। 'ಸಸಂ ನಮಃ ಆಯುಃ (ನಿ. ೩.೯) ಎಂದು ಅನ್ನಾರ್ಥದಲ್ಲಿ ಸಸಶಬ್ದವು ಪಠಿತವಾಗಿದೆ.

ಅದ್ರಿಂ—ವಜ್ರಂ। ಅತ್ತಿ ಭಕ್ಷಯತಿ ವೈರಿಣಂ ಇತಿ ಅದ್ರಿರ್ವಜ್ರಃ। ವೈರಿನಾಶಕವಾದದ್ದು ಎಂಬರ್ಥದಲ್ಲಿ ಅದ್ರಿಶಬ್ದವನ್ನು ವಜ್ರಾಯುಧದ ಪರವಾಗಿ ಅರ್ಥಮಾಡಲಾಗಿದೆ. ಯಾಸ್ಕರು ನಿರುಕ್ತದಲ್ಲಿ ಅದ್ರಿಶಬ್ದಕ್ಕೆ ಈ ರೀತಿ ವಿವರಣೆಕೊಟ್ಟಿದ್ದಾರೆ. "ಅದ್ರಿರಾದೃಣಾತ್ಯೇತೇನಾಪಿ ವಾತ್ತೇಃ ಸ್ಯಾತ್। ತೇ ಸೋಮಾದ ಇತಿ ಹ ವಿಜ್ಞಾಯತೇ" ಎಂದರೆ ಅದ್ರಿ (ಪರ್ವತ) ಸಾರವನ್ನೇ ಈ ವಜ್ರಾಯುಧವು ಭಕ್ಷಿಸುತ್ತದೆ. ಅಥವಾ ಸೋಮಾಭಿಷವಗ್ರಾವವುಳ್ಳದ್ದು ಅದ್ರಿವಾನ್ ಎನ್ನಿಸಿಕೊಳ್ಳುವುದು ಅಂತಹ ಸೋಮವನ್ನು ಜಜ್ಜುವ ಅಥವಾ ಹಿಂಡುವ ಕಲ್ಲೂ ಅದ್ರಿಯೆನಿಸಿಕೊಳ್ಳುವುದು.





CC-0. Jangamwadi Math Collection. Digitized by eGangotri

ವವಸಾನಸ್ಯ—'ವಸ ನಿವಾಸೆ' ಎಂಬ ಧಾತುವಿಗೆ ಕರ್ತೃರ್ತಾಚ್ಛೀಲ್ಯಾರ್ಥದಲ್ಲಿ ಚಾನಶ್ ಪ್ರತ್ಯಯ ಬಂದು, 'ವಾಸಮಾಡುತ್ತಲಿರುವ' ಎಂಬರ್ಥವು ಇಲ್ಲಿ ಉಪಲಬ್ಧವಾಗಿದೆ.

ವಿಮದಾಯ—ವಿಮದನೆಂಬುವನು ಒಬ್ಬ ಋಷಿಯು. ಈ ಋಷಿಯು ಋಗ್ವೇದ ಹತ್ತನೆಯ ಮಂಡಲದ ೨೦-೨೬ ಸೂಕ್ತಗಳಲ್ಲಿರುವ ೬೬ ಋಕ್ಕುಗಳಿಗೆ ಋಷಿಯು. ಈ ಸೂಕ್ತಗಳಲ್ಲಿ ಎಂದರೆ ಋ. ಸಂ ೧೦-೨೦-೧೦; ೧೦-೨೩-೭ ಋಕ್ಕುಗಳಲ್ಲಿ ವಿಮದಋಷಿಯ ಮತ್ತು ಅವನ ನಂಶದ ವಿಷಯವು ಪ್ರಸ್ತಾಪಿಸಲ್ಪಟ್ಟಿರುವುದು. ಅರ್ಥ ರ್ವಣವೇದ. ೪-೨೯-೪; ಮತ್ತು ಐತರೇಯ ಬ್ರಾಹ್ಮಣ ೫-೫-೧ ಮಂತ್ರಗಳಲ್ಲಿಯೂ ವಿಮದಋಷಿಯ ಹೆಸರು ಪಠಿತವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಗೋತ್ರಮ್—ಗುಙ್ ಅವ್ಯಕ್ತೇ ಶಬ್ದೇ ಧಾತು. ಭ್ವಾದಿ. ಇದಕ್ಕೆ ಉಣಾದಿಸಿದ್ಧನಾದ ತ್ರ ಪ್ರತ್ಯಯ ಬರುತ್ತದೆ. ತ್ರ ಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಗುಣ ಬಂದರೆ ಗೋತ್ರ ಎಂದು ರೂಪವಾಗುತ್ತದೆ. ಅಥವಾ ಇನಿತ್ರಕಟ್ಯಚಶ್ಚ (ಪಾ. ಸೂ. ೪-೨-೫೧) ಖಲಗೋರಥಾತ್ ಸೂತ್ರದಿಂದ ಗೋ ಶಬ್ದವು ಅನುವೃತ್ತವಾಗುತ್ತದೆ. ಪ್ರಕೃತಿ ಪ್ರತ್ಯಯಗಳಿಗೆ ಯಥಾಸಂಖ್ಯ ಇರುವುದರಿಂದ ಅದಕ್ಕೆ ತ್ರ ಪ್ರತ್ಯಯ ಬರುತ್ತದೆ. ತಸ್ಯ ಸಮೂಹಃ ಎಂದು ಅರ್ಥಾಧಿಕಾರವಿರುವುದರಿಂದ ಸಮೂಹಾರ್ಥದಲ್ಲಿ ಈ ಪ್ರತ್ಯಯವು ಬರುತ್ತದೆ. ಗೋತ್ರಂ ಎಂದು ರೂಪ ವಾಗುತ್ತದೆ.

ಶತದುರೇಷು—ಶತಂ ದುರಾ ದ್ವಾರಾಣಿ ಏಷಾಂ, ಶತದುರಾಣಿ. ತೇಷು. ಶತದುರೇಷು. ದ್ವೃ ಸಂವರಣೆ ಭ್ವಾದಿ. ದ್ವರ್ಯಂತೆ ಸಂವ್ರಿಯಂತೆ ಇತಿ ದುರಾಃ. ಘಞರ್ಥೇ ಕವಿಧಾನಮ್ (ಪಾ. ಸೂ. ೩-೩-೫೮-೨) ಎಂಬುದರಿಂದ ಕ ಪ್ರತ್ಯಯ ಬರುತ್ತದೆ. ದ್ವೃ+ಅ ಎಂದಿರುವಾಗ ಛಾಂದಸವಾದ ಸಂಪ್ರಸಾರಣ ಬರುತ್ತದೆ. ದ್+ಉ+ಋ ಎಂದಿರುವಾಗ ಸಂಪ್ರಸಾರಣಾಚ್ಚ ಸೂತ್ರದಿಂದ ಋಕಾರಕ್ಕೆ ಪೂರ್ವರೂಪವು ಬರುತ್ತದೆ. ಅಂತಾದಿವಚ್ಚ (ಪಾ. ಸೂ. ೬-೧-೮೫) ಪೂರ್ವಪರದಲ್ಲಿ ಬಂದಿರುವ ಏಕಾದೇಶವು ಪೂರ್ವಾಂತದಂತೆಯೂ ಪರಾದಿಯಂತೆಯೂ ಆಗುವುದು ಎಂಬುದರಿಂದ ಇಲ್ಲಿ ಪೂರ್ವರೂಪವು ಋಕಾರಕ್ಕೂ ಬರುವುದರಿಂದ ಉರಣ್‌ರಪರಃ (ಪಾ. ಸೂ. ೧-೧-೫೧) ಸೂತ್ರದಿಂದ ರ ಪರವಾಗಿ ಬರುತ್ತದೆ. ದುರ್+ಅ ಎಂದಾಗುತ್ತದೆ. ಸಪ್ತಮೀ ಬಹುವಚನ ದಲ್ಲಿ ಶತದುರೇಷು ಎಂದು ರೂಪವಾಗುತ್ತದೆ. ಅಥವಾ ದ್ವಾರ ಶಬ್ದಕ್ಕೆ ಛಾಂದಸವಾದ ಸಂಪ್ರಸಾರಣ ಬರುತ್ತದೆ. ದು+ಆರ ಎಂದಿರುವಾಗ ಪೂರ್ವರೂಪ ಬಂದರೆ ದುರ ಎಂದು ರೂಪವಾಗುತ್ತದೆ.

ಗಾತುವಿತ್—ಇಲ್ಲಿ ಎರಡು ಧಾತುಗಳಿವೆ. ಗಾಙ್ ಗತೌ ಧಾತು. ಅದಾದಿ. ಇದಕ್ಕೆ ಕಮಿಮನಿ-ಜನಿಭಾಗಾಪಾಯಾಹಿಭ್ಯಶ್ಚ (ಉ. ಸೂ. ೧-೭೨) ಎಂಬ ಉಣಾದಿಸೂತ್ರದಿಂದ ತು ಪ್ರತ್ಯಯ ಬರುತ್ತದೆ. ಗಾತು ಎಂದು ರೂಪವಾಗುತ್ತದೆ. ಗಾತುಂ ವೇದಯತಿ ಲಂಭಯತಿ ಇತಿ ಗಾತುವಿತ್. ಮಾರ್ಗವನ್ನು ಹೊಂದಿಸುವವನು ಎಂದರ್ಥ. ವಿದಲ್ಯ ಲಾಭೆ ಧಾತು. ಣಿಜರ್ಥವು ಧಾತ್ವರ್ಥದಲ್ಲಿ ಅಂತರ್ಭೂತವಾಗಿದೆ. ಈ ಧಾತುವಿನ ಮೇಲೆ ಸುಬಂತವು ಉಪಪದವಾಗಿರುವಾಗ ಕ್ವಿಪ್ ಪ್ರತ್ಯಯ ಬರುತ್ತದೆ. ಅವಸಾನಚರ್ತ್ವದಿಂದ ಗಾತುವಿತ್ ಎಂದು ರೂಪವಾಗುತ್ತದೆ. ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದ ಪ್ರಕೃತಿ ಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಸಸೇನ—ಸಸಂ ಎಂಬುದು ಅನ್ನದ ಹೆಸರು. ಸಸಂ ನಮಃ ಆಯುಃ (ನಿ. ೩-೯) ಎಂಬುದಾಗಿ ಅನ್ನಪರ್ಯಾಯದಲ್ಲಿ ಇದನ್ನು ಪಾಠಮಾಡಿರುತ್ತಾರೆ. ತೃತೀಯಾ ಏಕವಚನದಲ್ಲಿ ಸಸೇನ ಎಂದು ರೂಪವಾಗುತ್ತದೆ.

ಆಜೌ—ಆಜಿಃ ಎಂಬುದು ಯುದ್ಧದ ಹೆಸರು. ಆಹವೇ ಆಜೌ (ನಿ. ೩-೯) ಎಂಬುದಾಗಿ ಅದರ ಅರ್ಥವನ್ನು ಪರ್ಯಾಯ ಪದದಿಂದ ಹೇಳಿರುತ್ತಾರೆ. ಸಪ್ತಮೀ ಏಕವಚನದಲ್ಲಿ ಆಜೌ ಎಂದು ರೂಪವಾಗುತ್ತದೆ.

ಅದ್ರಿವಃ—ಅತ್ತಿ ಭಕ್ಷಯತಿ ವೈರಿಣಂ ಇತಿ ಅದ್ರಿಃ ವಜ್ರಃ ಶತ್ರುಗಳನ್ನು ತಿನ್ನುವುದು (ಸಂಹಾರ ಮಾಡುವುದು) ಎಂದರ್ಥ. ಆದಿಶದಿಭೂಶುಭಿಭ್ಯಃ ಕ್ರಿನ್ (ಉ. ಸೂ. ೪-೫೦೫) ಎಂಬುದರಿಂದ ಭಕ್ಷಣಾರ್ಥಕ ಅದ್ ಧಾತುವಿಗೆ ಕ್ರಿನ್ ಪ್ರತ್ಯಯ ಬರುತ್ತದೆ. ಕ್ರಿನ್ ಎಂಬಲ್ಲಿ ರಿ ಎಂಬುದು ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ ಅದ್ರಿಂ ಎಂದು ರೂಪವಾಗುತ್ತದೆ. ಪ್ರತ್ಯಯವು ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರದಿಂದ ಆದ್ಯುದಾತ್ತವಾಗುತ್ತದೆ. ಯಾಸ್ಕರು ಅದ್ರಿ ಶಬ್ದವನ್ನು ಈ ರೀತಿಯಾಗಿ ವ್ಯಾಖ್ಯಾನಮಾಡಿರುತ್ತಾರೆ. ಅದ್ರಿರಾದೃಣಾತ್ಯನೇನಾಪಿ ವಾತ್ತೇಃ ಸ್ಯಾತ್ ( ನಿರು. ೪-೪ ) ದೃ ಧಾತುವಿನಿಂದಲಾಗಲೀ ಅದ್ ಧಾತುವಿನಿಂದಾಗಲೀ ಅದ್ರಿ ಎಂಬುದು ಆಗಿದೆ ಎಂದು ತಾತ್ಪರ್ಯ.

ವವಸಾನಸ್ಯ—ವಸ ನಿವಾಸೇ ಧಾತು ಭ್ವಾದಿ. ತಾಚ್ಛೀಲ್ಯವಯೋವಚನೇಷು ಚಾನಶ್ (ಪಾ. ಸೂ. ೩-೨-೧೨೯) ಎಂಬುದರಿಂದ ತಚ್ಛೀಲಾರ್ಥ ತೋರುವಾಗ ಕರ್ತ್ರರ್ಥದಲ್ಲಿ ಚಾನಶ್ ಪ್ರತ್ಯಯ ಬರುತ್ತದೆ. ಶಿತ್ತಾದುದರಿಂದ ಧಾತುವಿಗೆ ಶಪ್ ವಿಕರಣ ಬರುತ್ತದೆ. ಬಹುಲಂ ಛಂದಸಿ ಎಂಬುದರಿಂದ ಅದಕ್ಕೆ ಶ್ಲು ಬರುತ್ತದೆ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಹಲಾದಿಃ ಶೇಷಃ ಸೂತ್ರದಿಂದ ಅಭ್ಯಾಸದ ಆದಿಹಲಿಗೆ ಶೇಷ ಬಂದರೆ ವವಸಾನ ಎಂದು ರೂಪವಾಗುತ್ತದೆ. ಷಷ್ಠೀ ಏಕವಚನದಲ್ಲಿ ವವಸಾನಸ್ಯ ಎಂದು ರೂಪವಾಗುತ್ತದೆ. ಚಾನಶ್ ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತ್ವಮ॒ಪಾಮ॑ಪಿ॒ಧಾನಾ॑ವೃಣೋ॒ರಪಾ॑ಧಾರಯಃ॒ ಪರ್ವ॑ತೇ॒ ದಾನು॑ಮ॒ದ್ವಸು॑।
ವೃ॒ತ್ರಂ ಯದಿಂ॑ದ್ರ॒ ಶವ॒ಸಾವ॑ಧೀ॒ರಹಿ॒ಮಾದಿತ್ಸೂರ್ಯಂ॑ ದಿ॒ವ್ಯಾರೋ॑-
ಹಯೋ ದೃ॒ಶೇ ॥ ೪ ॥

॥ ಪದಪಾಠಃ ॥

ತ್ವಂ । ಅ॒ಪಾಂ । ಅ॒ಪಿ॒ಽಧಾನಾ॑ । ಅ॒ವೃ॒ಣೋಃ॒ । ಅಪ॑ । ಅಧಾ॑ರಯಃ । ಪರ್ವ॑ತೇ ।
ದಾನು॑ಽಮತ್ । ವಸು॑ ।
ವೃ॒ತ್ರಂ । ಯತ್ । ಇಂ॒ದ್ರ॒ । ಶವ॑ಸಾ । ಅವ॑ಧೀಃ । ಅಹಿಂ॑ । ಆತ್ । ಇತ್ ।
ಸೂರ್ಯಂ॑ । ದಿ॒ವಿ । ಆ । ಅ॒ರೋ॒ಹ॒ಯಃ॒ । ದೃ॒ಶೇ ॥ ೪ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಪಾಮುದಕಾನಾಮಪಿಧಾನಾಪಿಧಾನಾನ್ಯಾಚ್ಛಾದಕಾನ್ಮೇಘಾನಪಾವೃಣೋಃ । ಅಪಾವರೀಃ । ತಥಾ ಪರ್ವತೇ ಪರ್ವವತಿ ಪೂರಯಿತವ್ಯಪ್ರದೇಶಯುಕ್ತೇ ಸ್ವಕೀಯನಿವಾಸಸ್ಥಾನೇ ದಾನುಮತ್ ದಾನುಮತೋ ಹಿಂಸಾಯುಕ್ತಸ್ಯ । ಯದ್ವಾ । ದನುರಸುರಮಾತಾ ತಸ್ಯಾ ಪುತ್ರೋ ದಾನುಃ । ತದ್ವತಃ । ಶಾದೃಶಸ್ಯ ವೃತ್ರಾದೇರ್ವಸು ಧನಮಧಾರಯಃ । ಶತ್ರೂನ್ಜಿತ್ವಾ ತದೀಯಂ ಧನಮುಪಹೃತ್ಯ ಸ್ವಗೃಹೇ ನ್ಯಚಿ-ಕ್ಷಿಪ ಇತ್ಯರ್ಥಃ । ಯದ್ವಾ । ದಾನುಮದಿತಿ ವಸುವಿಶೇಷಣಂ । ಶೋಭನದಾನಯುಕ್ತಮಿತ್ಯರ್ಥಃ । ಹೇ ಇಂದ್ರ ತ್ವಂ ಯದ್ಯದಾ ಶವಸಾ ಬಲೇನ ವೃತ್ರಂ ತ್ರಯಾಣಾಂ ಲೋಕಾನಾಮಾವರೀತಾರಂ । ತಥಾ ಚ ಶಾಖಾಂತರೇ ಸಮಾಮ್ನಾತಂ । ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ । ತೈ. ಸಂ. ೨-೪-೧೨-೨ । ಇತಿ । ಅಹಿಂ ಆ ಸಮಂತಾದ್ಧಂತಾರಂ । ತಥಾ ಚ ವಾಜಸನೇಯಿನಃ ಸಮಾಮನಂತಿ । ಸೋಽಗ್ನೀಷೋಮಾವಭಿಸಂಬಭೂವ ಸರ್ವಾಂ ವಿದ್ಯಾಂ ಸರ್ವಂ ಯಶಃ ಸರ್ವಮನ್ನಾದ್ಯಂ ಸರ್ವಾಂ ಶ್ರಿಯಂ ಸ ಯತ್ಸರ್ವಮೇತತ್ಸಮಭವತ್ತಸ್ಮಾದಹಿರಿತಿ । ಏವಂಭೂತಮಸುರಮವಧೀಃ ವಧಂ ಪ್ರಾಪಿತಃ । ಆದಿತ್ ಅನಂತರಮೇವ ದಿವಿ ದ್ಯುಲೋಕೇ ದೃಶೇ ದ್ರಷ್ಟುಂ ಸೂರ್ಯಮಾರೋಹಯಃ । ವೃತ್ರೇಣಾವೃತಂ ಸೂರ್ಯಂ ತಸ್ಮಾದ್ವೃತ್ರಾದಪನೀಯೋಚ್ಚ ಇತ್ಯರ್ಥಃ॥ ಅಪಾಂ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ। ಅಪಿಧಾನಾ । ಅಪಿಧೀಯತ ಆಚ್ಛಾದ್ಯತ ಏಭಿರಿತ್ಯಪಿಧಾನಾನಿ । ಕರಣೇ ಲ್ಯುಟ್ । ಲಿತೀತಿ ಪ್ರತ್ಯಯಾತ್ಪೂ-ರ್ವಸ್ಯ ಧಾತ್ವಾಕಾರಸ್ಯೋದಾತ್ತತ್ವಂ । ತತ ಏಕಾದೇಶಸ್ವರಃ । ಕೃದುತ್ತರಪದಪ್ರಕೃತಿಸ್ವರತ್ವಂ । ಸುಪಾಂ ಸುಲುಗಿತಿ ವಿಭಕ್ತೇಃ ಪೂರ್ವಸವರ್ಣದೀರ್ಘತ್ವಂ । ಅಧಾರಯಃ । ಪಾದಾದಿತ್ವಾನ್ನಿಘಾತಾಭಾವಃ । ಪರ್ವತೇ । ಪರ್ವವಾನ್ ಪರ್ವತಃ । ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ ನಿ. ೧-೨೦ । ಇತಿ ಯಾಸ್ಕಃ । ದಾನುಮತ್ । ದೋ ಅವಖಂಡನ ಇತ್ಯಸ್ಮಾದ್ವಾ ದಾಞ್ ದಾನ ಇತ್ಯಸ್ಮಾದ್ವಾ ದಾಭಾಭ್ಯಾಂ ನುರಿತ್ಯೌಣಾದಿ-ಕೋ ನುಪ್ರತ್ಯಯಃ । ಅಸುರವಿಶೇಷಣತ್ವೇ ಸುಪಾಂ ಸುಲುಗಿತಿ ಷಷ್ಠ್ಯಾ ಲುಕ್ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಅಪಾಂ—ನೀರುಗಳಿಗೆ । ಅಪಿಧಾನಾ—ಆಚ್ಛಾದಕಗಳಾದ (ಮುಚ್ಚಿಡುವ) ಮೋಡಗಳನ್ನು । ಅಪ ಅವೃಣೋಃ—ಬಿಡಿಸಿರುವೆ (ಮಳೆಯನ್ನು ಸುರಿಸಿರುವೆ) । ಪರ್ವತೇ—(ನಿನ್ನ ವಾಸಸ್ಥಾನವಾದ ) ಪರ್ವತಪ್ರದೇಶದಲ್ಲಿ । ದಾನುಮತ್—ಹಿಂಸಾಯುಕ್ತನಾದ ಅಥವಾ ದಾನುವಿನಿಂದೊಡಗೂಡಿದ ವೃತ್ರಾಸುರನ । ವಸು—ಧನವನ್ನು [ಅಥವಾ ದಾನುಮದ್ವಸು—ಶ್ರೇಷ್ಠವಾದ ದಾನ ಯುಕ್ತವಾದ ಧನವನ್ನು ] ಅಧಾರಯಃ—ನಿಕ್ಷೇಪಮಾಡಿರುವೆ (ಸೇರಿಸಿಟ್ಟಿರುವೆ ಎಲೈ ಇಂದ್ರನೇ) ಯತ್—ಯಾವಾಗ । ಶವಸಾ—ಬಲದಿಂದ । ಅಹಿಂ—ಎಲ್ಲ ಕಡೆಯೂ ಹಿಂಸಕನಾದ (ಮತ್ತು) । ವೃತ್ರಂ—(ಮೂರು ಲೋಕಗಳನ್ನೂ) ಆವರಿಸಿದ್ದ ವೃತ್ರಾಸುರನನ್ನು । ಅವಧೀಃ—ಕೊಂದೆಯೋ । ಆದಿತ್—ಆ ಕೂಡಲೆ । ದಿವಿ—ಅಂತರಿಕ್ಷದಲ್ಲಿ । ದೃಶೇ—(ಎಲ್ಲರ) ಗೋಚರಕ್ಕಾಗಿ । ಸೂರ್ಯಂ—(ವೃತ್ರನಿಂದ ಆವೃತನಾದ) ಸೂರ್ಯನನ್ನು । ಆರೋಹಯಃ—ಬಿಡಿಸಿ ಪ್ರಕಾಶಿಸುವಂತೆ ಮಾಡಿರುವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನೀರುಗಳನ್ನು ತುಂಬಿ ಆಚ್ಛಾದಕವಾದ ಮೇಘಗಳನ್ನು ಬಿಡಿಸಿ ಮಳೆಯನ್ನು ಸುರಿಸಿರುವೆ. ಕೇಡನ್ನುಂಟುಮಾಡುವ ರಾಕ್ಷಸನನ್ನು ಜಯಿಸಿ ಅವನ ಸಕಲ ಧನವನ್ನೂ ನಿನ್ನ ವಾಸ



CC-0. Jangamwadi Math Collection. Digitized by eGangotri

ಸ್ಥಾನವಾದ ಪರ್ವತಪ್ರದೇಶಗಳಲ್ಲಿಟ್ಟಿರುವೆ. ನಿನ್ನ ಶಕ್ತಿಯಿಂದ ಮೂರು ಲೋಕಗಳನ್ನೂ ಆವರಿಸಿದ್ದ ವೃತ್ರಾಸುರನನ್ನು ಕೊಂದಾಗ ಒಡನೆಯೇ ಆ ಮರೆಯಿಂದ ಸೂರ್ಯನನ್ನು ಬಿಡಿಸಿ ಮೂರು ಲೋಕಕ್ಕೂ ಕಾಣಿಸುವಂತೆ ಮಾಡಿದೆ.

## English Translation.

You have opened the receptacle of the waters; you have detained in the mountain the treasure of the malignant; when you had slain Vritra, the destroyer, you made the sun visible in the sky.

॥ ವಿಶೇಷ ವಿಷಯಗಳು ॥

ಪರ್ವತೇ—ಪರ್ವತಿ ಪೂರಯಿತವ್ಯಪ್ರದೇಶಯುಕ್ತೇ ಸ್ವಕೀಯನಿವಾಸಸ್ಥಾನೇ । ಪರ್ವವಾನ್ ಪರ್ವತಃ ಪರ್ವಪುನಃ ಪೃಣಾತೇಃ ಪ್ರೀಣಾತೇರ್ವಾ ( ನಿರು. ೧-೨೦) ಪರ್ವಶಬ್ದಕ್ಕೆ ಯಾಸ್ಕರು ಕಲ್ಲು ಶಿಖರ ಮುಂತಾದ ವಸ್ತುಗಳಿಂದ ತುಂಬಿರುವುದು ಎಂದು ಅರ್ಥಮಾಡಿದ್ದಾರೆ. ಪ್ರೀಣಾತೇರ್ವಾ ಎಂದು ಹೇಳಿ ಕೇವಲ ಶಿಲಾಪೂರಣಾರ್ಥವೆಂದೇ ಹೇಳಬೇಕಾಗಿಲ್ಲ; ಶಿಲಾದಿವಸ್ತುಗಳಿಂದ ದೇವತೆಗಳನ್ನು ತೃಪ್ತಿಪಡಿಸುವ ವಸ್ತು ಎಂದೂ ಹೇಳಬಹುದೆಂದು ವಿವರಿಸಿದ್ದಾರೆ.

ಅಹಿಂ— ಆ ಸಮಂತಾತ್ ಹಂತಾರಂ । ಸಂಪೂರ್ಣವಾಗಿ ಎಲ್ಲವನ್ನೂ ನಾಶಮಾಡುವವನು ಎಂದರ್ಥ. ಇದು ವಾಜಸನೇಯ ಶ್ರುತಿಯಲ್ಲಿ ಸೋಽಗ್ನೀಷೋಮಾವಭಿಸಂಬಭೂವ ಸರ್ವಾಂ ವಿದ್ಯಾಂ ಸರ್ವಂ ಯಶಃ ಸರ್ವಮನ್ನಾದ್ಯಂ ಸರ್ವಾಂ ಶ್ರಿಯಂ ಸ ಯತ್ಸರ್ವಮೇತತ್ಸಮಭವತ್ತಸ್ಮಾದಹಿಃ ಅಗ್ನಿಷೋಮದೇವತೆಗಳನ್ನು ಜಯಿಸಿ ಅವರ ಎಲ್ಲಾ ವಿಧವಾದ, ವಿದ್ಯೆ, ಕೀರ್ತಿ, ಅನ್ನಾದಿಗಳು, ಐಶ್ವರ್ಯ ಇವುಗಳನ್ನು ಅಪಹರಿಸಿದವನು, ರಾಕ್ಷಸನು ಎಂದು ವಿವೃತವಾಗಿದೆ.

ವೃತ್ರಂ—ತ್ರಯಾಣಾಂ ಲೋಕಾನಾಮಾವರೀತಾರಂ । ಮೂರು ಲೋಕಗಳನ್ನೂ ವ್ಯಾಪಿಸುವವನು. ಇದನ್ನೇ ಯದಿಮಾನ್ ಲೋಕಾನವೃಣೋತ್ತದ್ವೃತ್ರಸ್ಯ ವೃತ್ರತ್ವಂ (ತೈ. ಸಂ. ೨-೪-೧೨-೨) ಎಂಬ ಶ್ರುತಿಯು ಸಮರ್ಥಿಸುತ್ತದೆ.

॥ ವ್ಯಾಕರಣಪ್ರಕ್ರಿಯಾ ॥

ಅಪಾಮ್—ಅಪ್ ಶಬ್ದದ ಷಷ್ಠೀ ಬಹುವಚನದಲ್ಲಿ ಅಪಾಂ ಎಂದು ರೂಪವಾಗುತ್ತದೆ. ಊಡಿದಂ ಪದಾದ್ಯ—(ಪಾ. ಸೂ. ೬-೧-೧೭೧) ಸೂತ್ರದಿಂದ ವಿಭಕ್ತಿಗೆ ಅನುದಾತ್ತಸ್ವರವು ಬಾಧಿತವಾಗಿ ಉದಾತ್ತಸ್ವರ ಬರುತ್ತದೆ.

ಅಪಿಧಾನಾ—ಅಪಿಧೀಯತೇ ಆಚ್ಛಾದ್ಯತೆ ಏಭಿಃ ಇತಿ ಅಪಿಧಾನಾನಿ ಇವುಗಳಿಂದ ಮುಚ್ಚಲ್ಪಡುತ್ತವೆ ಎಂದರ್ಥ. ಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬರುತ್ತದೆ. ಧಾಞ್ ಧಾತುವಿಗೆ ಲ್ಯುಟ್ ಬಂದರೆ ಲ್ಯುಟಗೆ ಯುವೋರನಾಕೌ ಎಂಬುದರಿಂದ ಅನಾದೇಶ ಬರುತ್ತದೆ. ಅಪಿಧಾನ ಎಂದು ರೂಪವಾಗುತ್ತದೆ. ದ್ವಿತೀಯಾ



CC-0. Jangamwadi Math Collection. Digitized by eGangotri

ಬಹುವಚನದಲ್ಲಿ ಶಸ್ ಪ್ರಾಪ್ತವಾದರೆ ಸುಪಾಂಸುಲುಕ್ ಸೂತ್ರದಿಂದ ಅದಕ್ಕೆ ಪೂರ್ವಸವರ್ಣದೀರ್ಘವು ಬರುತ್ತದೆ. ಲಿತಿ ಸೂತ್ರದಿಂದ ಪ್ರತ್ಯಯದ ಪೂರ್ವದಲ್ಲಿರುವ ಧಾತುವಿನ ಅಕಾರಕ್ಕೆ ಉದಾತ್ತಸ್ವರ ಬರುತ್ತವೆ. ಧಾ+ಅನ ಎಂದಿರುವಾಗ ಹಿಂದೆ ಏಕಾದೇಶವನ್ನು ಮಾಡಿರುತ್ತೆ. ಆದುದರಿಂದ ಏಕಾದೇಶ ಉದಾತ್ತೇನೋದಾತ್ತಃ (ಪಾ. ಸೂ. ೮-೨-೫) ಸೂತ್ರದಿಂದ ಏಕಾದೇಶವೂ ಉದಾತ್ತವಾಗುತ್ತದೆ. ಅಪಿ ಎಂಬುದರೊಡನೆ ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ-

ಅಧಾರಯಃ—ಧೃಙ್ ಅವಸ್ಥಾನೆ, ಧಾತು, ತುದಾದಿ, ಣಿಜಂತಮೇಲೆ ಲಙ್ ಮಧ್ಯಮಪುರುಷ ಏಕವಚನದಲ್ಲಿ ಅಧಾರಯಃ ಎಂದು ರೂಪವಾಗುತ್ತದೆ. ಅಪಾದಾದೌ ಎಂದು ನಿಷೇಧ ಮಾಡಿರುವುದರಿಂದ ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾಗುತ್ತದೆ ಎಂದು ವಿಧಿಸಿರುವುದರಿಂದ ಅಧಾರಯಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

ಪರ್ವತೆ— ಪರ್ವವಾನ್ ಪರ್ವತಃ ಪೂರಣಮಾಡುವ ಸ್ಥಳವುಳ್ಳದ್ದು ಎಂದರ್ಥ. ತೆಪ್ಪರ್ವಮರುದ್ಭ್ಯಾಂ (ವಾ. ೫-೨-೧) ಎಂಬುದರಿಂದ ಮತ್ವರ್ಥದಲ್ಲಿ ತಪ್ ಪ್ರತ್ಯಯ ಬರುತ್ತದೆ. ಪರ್ವ ಶಬ್ದದ ನಿರ್ವಚನದಲ್ಲಿ ಯಾಸ್ಕರು ಹೀಗೆ ಹೇಳಿರುತ್ತಾರೆ. ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ (ನಿರು. ೧-೨೦) ಪೃ ಪಾಲನ ಪೂರಣಯೋಃ ಎಂಬ ಧಾತುವಿನಿಂದಾಗಲೀ ಪ್ರೀಞ್ ತರ್ಪಣೆಕಾಂತೌಚ ಎಂಬ ಧಾತುವಿನಿಂದಾಗಲೀ ಪರ್ವ ಶಬ್ದವು ಆಗಿದೆ ಎಂದು ಅದರ ತಾತ್ಪರ್ಯ.

ದಾನುಮತ್—ದೋ ಅವಖಂಡನೆ ಅಥವಾ ದಾಣ್ ದಾನೆ ಧಾತು. ದಾಭಾಭ್ಯಾಂನುಃ (ಉ. ಸೂ. ೨-೫೧) ಎಂಬುದರಿಂದ ನು ಪ್ರತ್ಯಯ ಬರುತ್ತದೆ. ದೋ ಧಾತುವಿಗೂ ಅಪಿತ್ ಪ್ರತ್ಯಯ ಪರದಲ್ಲಿರುವಾಗ ಆದೇಚ ಉಪದೇಶೇಽಶಿತಿ ಸೂತ್ರದಿಂದ ಆತ್ವ ಬರುವುದರಿಂದ ರೂಪವ್ಯತ್ಯಾಸವಾಗುವುದಿಲ್ಲ. ದಾನು ಎಂದು ರೂಪವಾಗುತ್ತದೆ. ದಾನುಃ ಅಸ್ಯಾಸ್ತೀತಿ ದಾನುಮತ್ ತದಸ್ಯಾಸ್ತ್ಯಸ್ಮಿನ್ ಇತಿಮತುಪ್ ಸೂತ್ರದಿಂದ ಮತುಪ್ ಪ್ರತ್ಯಯ ಬರುತ್ತದೆ. ಇದರಮೇಲೆ ಷಷ್ಠೀ ಏಕವಚನ ವಿವಕ್ಷಾಮಾಡಿದಾಗ ಙಸ್ ಪ್ರತ್ಯಯ ಪ್ರಾಪ್ತವಾದರೆ ಅದಕ್ಕೆ ಸುಪಾಂ ಸುಲುಕ್ ಸೂತ್ರದಿಂದ ಲುಕ್ ಬರುತ್ತದೆ. ದಾನುಮತ್ ಎಂದೇ ರೂಪವಾಗುತ್ತದೆ. ಅಸುರನಿಗೆ ಇದು ವಿಶೇಷಣ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ತ್ವಂ ಮಾಯಾಭಿರಪ ಮಾಯಿನೋಽಧಮಃ ಸ್ವಧಾಭಿರ್ಯೇ ಅಧಿ ಶುಪ್ತಾ-
ವಜುಹ್ವತ ।
ತ್ವಂ ಪಿಪ್ರೋರ್ನೃಮಣಃ ಪ್ರಾರುಜಃ ಪುರಃ ಪ್ರ ಋಜಿಶ್ವಾನಂ ದಸ್ಯು-
ಹತ್ಯೇಷ್ವಾವಿಥ ॥ ೫ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತ್ವಂ । ಮಾಯಾಭಿಃ । ಅಪ । ಮಾಯಿನಃ । ಅಧಮಃ । ಸ್ವಧಾಭಿಃ । ಯೇ । ಅಧಿ ।
ಶುಪ್ತೌ । ಅಜುಹ್ವತ ।
ತ್ವಂ । ಪಿಪ್ರೋಃ । ನೃಮನಃ । ಪ್ರ । ಅರುಜಃ । ಪುರಃ । ಪ್ರ । ಋಜಿಶ್ವಾನಂ ।
ದಸ್ಯುಹತ್ಯೇಷು । ಆವಿಥ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಮಾಯಾಭಿರ್ಜಯೋಪಾಯಜ್ಞಾನೈಃ । ಮಾಯೇತಿ ಜ್ಞಾನನಾಮ । ಶಚೀ ಮಾಯೇತಿ ತನ್ನಾಮಸು ಪಾಠಾತ್ । ಯದ್ವಾ ಮಾಯಾಭಿರ್ಲೋಕಪ್ರಸಿದ್ಧೈಃ ಕಪಟೈಃ । ಮಾಯಿನ ಉಕ್ತಲಕ್ಷಣಮಾಯೋಪೇತಾನ್ವೃತ್ರಾದೀನಸುರಾನಪಾಧಮಃ । ಅಪಾಜೀಗಮಃ । ಧಮತಿರ್ಗತಿಕರ್ಮೇತಿ ಯಾಸ್ಕಃ । ನಿ. ೬-೨ । ಯೇಽಸುರಾಃ ಸ್ವಧಾಭಿರ್ಹವಿರ್ಲಕ್ಷಣೈರನ್ನೈಃ ಶುಪ್ತಾವಧಿ ಶೋಭಮಾನೇ ಸ್ವಕೀಯೇ ಮುಖ ಏವಾಜುಹ್ವತ ಅಹೌಷುಃ ನಾಗ್ನೌ । ತಾನಸುರಾನಿತಿ ಪೂರ್ವೇಣ ಸಂಬಂಧಃ । ತಥಾ ಚ ಕೌಷೀತಕಿಭಿರಾಮ್ನಾಯತೇ । ಅಸುರಾ ವಾ ಆತ್ಮನ್ನಜುಹವುರುದ್ವಾತೇಽಗ್ನೌ ತೇ ಪರಾಭವನ್ನಿತಿ । ವಾಜಸನೇಯಿಭಿರಪ್ಯಾಮ್ನಾತಂ । ದೇವಾಶ್ಚ ಹ ವಾ ಅಸುರಾಶ್ಚಾಸ್ಪರ್ಧಂತ ತತೋ ಹಾಸುರಾ ಅಭಿಮಾನೇನ ಕಸ್ಮೈ ಚ ನ ಜುಹುಮ ಇತಿ ಸ್ವೇಷ್ವೇವಾಸ್ಯೇಷು ಜುಹ್ವತಶ್ಚೇರುಸ್ತೇ ಪರಾಬಭೂವುರಿತಿ । ತಥಾ ಹೇ ನೃಮಣೋ ನೃಷು ಯಜಮಾನೇಷು ರಕ್ಷಿತವ್ಯೇಷ್ವನುಗ್ರಹಬುದ್ಧಿಯುಕ್ತ ತ್ವಂ ಪಿಪ್ರೋಃ ಪೂರಯಿತುರೇತನ್ನಾಮ್ನೋಽಸುರಸ್ಯ ಪುರಃ ಪುರಾಣಿ ನಿವಾಸಸ್ಥಾನಾನಿ ಪ್ರಾರುಜಃ । ಪ್ರಾಭಾಂಕ್ಷೀಃ । ಏವಂ ಕೃತ್ವಾ ತೇನಾಸುರೇಣೋಪದ್ರುತಮೃಜಿಶ್ವಾನಮೃಜುಗಮನಮೇತತ್ಸಂಜ್ಞಕಂ ಸ್ತೋತಾರಂ ದಸ್ಯುಹತ್ಯೇಷು ದಸ್ಯೂನಾಮುಪಕ್ಷಪಯಿತೄಣಾಂ ಹನನೇನ ಯುಕ್ತೇಷು ಸಂಗ್ರಾಮೇಷು । ಯದ್ವಾ । ದಸ್ಯೂನಾಂ ಹನನೇ ನಿಮಿತ್ತಭೂತೇಷು । ಪ್ರಾವಿಥ । ಪ್ರಕರ್ಷೇಣ ರರಕ್ಷಿಥ । ಮಾಯಿನಃ । ಮಾಯಾಶಬ್ದಸ್ಯ ವ್ರೀಹ್ಯಾದಿಷು ಪಾಠಾತ್ ವ್ರೀಹ್ಯಾದಿಭ್ಯಶ್ಚೇತಿ ಮತ್ವರ್ಥೀಯ ಇನಿಃ । ಶುಪ್ತೌ । ಶುಭ ದೀಪ್ತೌ । ಕರ್ಮಣಿ ಕ್ತಿನ್ । ತಿತುತ್ರೇತ್ಯಾದಿನೇಟ್ಪ್ರತಿಷೇಧಃ । ಝಷಸ್ತಥೋರಿತಿ ಧತ್ವಾಭಾವಶ್ಛಾಂದಸಃ । ಖರಿ ಚ । ಪಾ. ೮-೪-೫೫ । ಇತಿ ಚರ್ತ್ವಂ । ಅಜುಹ್ವತ । ಜುಹೋತೇರ್ಲಙಿ ವ್ಯತ್ಯಯೇನಾತ್ಮನೇಪದಂ । ಅದಭ್ಯಸ್ತಾತ್ । ಪಾ. ೭-೧-೪ । ಇತಿ ಝಸ್ಯಾದೇಶಃ । ಹುಶ್ನುವೋಃ ಸಾರ್ವಧಾತುಕ ಇತಿ ಯಣಾದೇಶಃ । ಪಿಪ್ರೋಃ । ಪೄ ಪಾಲನಪೂರಣಯೋಃ । ಪೄಭಿದಿವ್ಯಧೀತ್ಯಾದಿನಾ । ಉ. ೧-೨೪ । ಕು ಪ್ರತ್ಯಯಃ । ಉದೋಷ್ಠ್ಯಪೂರ್ವಸ್ಯೇತ್ಯತ್ರ ಬಹುಲಂ ಛಂದಸೀತ್ಯುಕ್ತತ್ವಾದುತ್ವಾಭಾವಃ । ಛಾಂದಸಂ ದ್ವಿರ್ವಚನಂ । ಅಭ್ಯಾಸಸ್ಯೋರದತ್ವಹಲಾದಿಶೇಷಾಃ । ಅರ್ತಿಪಿಪರ್ತ್ಯೋಶ್ಚ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಯಣಾದೇಶಃ । ನೃಮಣಃ । ನೃಷು ಮನೋ ಯಸ್ಯ । ಛಂದಸ್ಯೃದವಗ್ರಹಾತ್ । ಪಾ. ೮-೪-೨೬ । ಇತಿ ಣತ್ವಂ । ಅರುಜಃ । ರುಜೋ ಭಂಗೇ । ತಸ್ಯ ಜಾತ್ವಾದ್ಗುಣಾಭಾವಃ । ಋಜಿಶ್ವಾನಂ । ಋಜ್ವಶ್ನುತೇ ಪ್ರಾಪ್ನೋತೀತ್ಯೃಜಿಶ್ವಾ । ಸ್ವ-



CC-0. Jangamwadi Math Collection. Digitized by eGangotri

ಷೋದರಾದಿಃ । ದಸ್ಯುಹತ್ಯೇಷು । ಹನ ಹಿಂಸಾಗತ್ಯೋಃ । ಹನಸ್ತ ಚ । ಪಾ. ೩-೧-೧೦೮ । ಇತಿ ಭಾವೇ ಕ್ಯಪ್ಪ್ರತ್ಯಯಸ್ತಕಾರಶ್ಚಾಂತಾದೇಶಃ । ದಸ್ಯೂನಾಂ ಹತ್ಯಾ ಯೇಷು ಸಂಗ್ರಾಮೇಷು । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ತತ್ಪುರುಷಪಕ್ಷೇ ತು ಕೃದುತ್ತರಪದಪ್ರಕೃತಿಸ್ವರತ್ವಂ । ಆವಿಥ । ಅವ ರಕ್ಷಣೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವಂ—ನೀನು । ಮಾಯಾಭಿಃ—(ಜಯಸಾಧನಗಳಿಂದ) ಜ್ಞಾನಗಳಿಂದ ಅಥವಾ ತಂತ್ರಗಳಿಂದ । ಯೇ—ಯಾವ ರಾಕ್ಷಸರು । ಸ್ವಧಾಭಿಃ—ಹವಿಸ್ಸಿನ ರೂಪದಲ್ಲಿರುವ ಅನ್ನಗಳಿಂದ । ಶುಪ್ತಾ ಅಧಿ—ಪ್ರಕಾಶವಾನಗಳಾದ ತಮ್ಮ ಬಾಯಿಗಳಲ್ಲೇ । ಅಜುಹ್ವತ—ಹೋಮ ಮಾಡಿಕೊಂಡರೋ । ಮಾಯಿನಃ—ಮೋಸಗಾರರಾದ ಆ ರಾಕ್ಷಸರನ್ನು । ಅಪ ಅಧಮಃ—ಸದೆಬಡಿದು ಜಯಿಸಿದೆ । ನೃಮಣಃ—ಮಾನವರಲ್ಲಿ ಅನುಗ್ರಹಬುದ್ಧಿಯುಳ್ಳ ಇಂದ್ರನೇ । ತ್ವಂ—ನೀನು । ಪಿಪ್ರೋಃ—ಪಿಪ್ರುವೆಂಬ ರಾಕ್ಷಸನ । ಪುರಃ—ಪಟ್ಟಣಗಳನ್ನು । ಪ್ರ ಅರುಜಃ—ಭಗ್ನಮಾಡಿದೆ । ಋಜಿಶ್ವಾನಂ—(ಆ ರಾಕ್ಷಸನಿಂದ ಹಿಂಸಿತನಾದ) ಋಜಿಶ್ವನೆಂಬ ಭಕ್ತನನ್ನು । ದಸ್ಯುಹತ್ಯೇಷು—ಚೋರರಾದ ರಾಕ್ಷಸರನ್ನು ನಾಶಮಾಡಲು ನಡೆದ ಯುದ್ಧಗಳಲ್ಲಿ । ಪ್ರ ಆವಿಥ—ಸಂಪೂರ್ಣವಾಗಿ ರಕ್ಷಿಸಿದೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಹವಿಸ್ಸನ್ನು ಅಗ್ನಿಯಲ್ಲಿ ಹಾಕಿ ಹೋಮಮಾಡದೇ ತಮ್ಮ ಬಾಯಲ್ಲೇ ಹಾಕಿಕೊಂಡ ಮೋಸಗಾರರಾದ ರಾಕ್ಷಸರನ್ನು ಜಯಸಾಧನಗಳಾದ ತಂತ್ರಗಳಿಂದ ಜಯಿಸಿದೆ. ಮಾನವರಲ್ಲಿ ಅನುಗ್ರಹಬುದ್ಧಿಯುಳ್ಳ ಎಲೈ ಇಂದ್ರನೇ, ನೀನು ಪಿಪ್ರುವೆಂಬ ರಾಕ್ಷಸನ ಪಟ್ಟಣಗಳನ್ನು ಧ್ವಂಸಮಾಡಿದೆ. ಚೋರರಾದ ರಾಕ್ಷಸರನ್ನು ನಾಶಮಾಡಲು ನಡೆದ ಯುದ್ಧಗಳಲ್ಲಿ ಋಜಿಶ್ವನೆಂಬ ಭಕ್ತನನ್ನು ಸಂಪೂರ್ಣವಾಗಿ ರಕ್ಷಿಸಿದೆ.

## English Translation.

O Indra, by your devices you have humbled the deceivers who presented oblations to their own mouths; propitions to men, you have destroyed the cities of Pipru and have well defended Rijswan in robber-destroying contests.

॥ ವಿಶೇಷ ವಿಷಯಗಳು ॥

ಪಿಪ್ರೋಃ—ಪಿಪ್ರು ಎಂಬ ರಾಕ್ಷಸನು ಇಂದ್ರನ ಶತ್ರುವು. ಋಜಿಶ್ವಾ ಎಂಬುವನನ್ನು ಕಾಪಾಡುವುದಕ್ಕಾಗಿ ಇದ್ರನು ಇವನನ್ನು ಸೋಲಿಸಿದನೆಂದು ಋಗ್ವೇದದ ಅನೇಕ ಋಕ್ಕುಗಳಲ್ಲಿ ಎಂದರೆ ಋ. ಸಂ. ೧-೧೦೧-೨ ; ೪-೧೬-೧೩ ; ೫-೨೯-೧೧ ; ೬-೨೦-೭ ; ೮-೪೯-೧೦ ; ೧೦-೯೯-೧೧ ; ೧೦-೧೩೮-೩ ; ೧-೧೦೩-೮ ; ೨-೧೪-೫ ; ೬-೧೮-೮ ಮತ್ತು ಋ. ಸಂ. ೧-೫೧-೫ ; ೬-೨೦-೭ ಎಂಬ ಋಕ್ಕುಗಳಲ್ಲಿ ಈ ಪಿಪ್ರುವಿನ ಪಟ್ಟಣದ ವಿಷಯವು ಪ್ರಸ್ತಾಪಿಸಲ್ಪಟ್ಟಿದೆ. ಋ. ಸಂ. ೮-೬೨-೨ ; ೧೦-೧೩೮-೩ ಋಕ್ಕುಗಳಲ್ಲಿ ಇವನು ದಾಸ ಮತ್ತು ಅಸುರನೆಂದು ಕರೆಯಲ್ಪಟ್ಟಿದಾನೆ ಋ. ಸಂ. ೧-೧೦೧-೧ ; ೪-೧೬-೧೩ರಲ್ಲಿ ಇವನು ಈ ದೇಶದ ಪೂರ್ವನಿವಾಸಿಗಳಾದ ಕಪ್ಪು ಜನರೊಡನೆ ಸಂಬಂಧವಿಟ್ಟುಕೊಂಡಿದ್ದನೆಂಬ ಭಾವನೆಯು ಭಾಸವಾಗುವುದು.



CC-0. Jangamwadi Math Collection. Digitized by eGangotri

**ಮಾಯಾಭಿಃ**— ಇಲ್ಲಿ ಮಾಯಾಶಬ್ದಕ್ಕೆ ಜಯವನ್ನು ಪಡೆಯುವ ಉಪಾಯ ಎಂಬರ್ಥವಿದೆ. ಸಾಮಾನ್ಯವಾಗಿ ಮಾಯಾಶಬ್ದವು ಕಪಟ ಎಂಬರ್ಥದಲ್ಲಿ ಪ್ರಸಿದ್ಧಿ ಇದ್ದರೂ ಶಚೀ ಮಾಯಾ (ನಿ. ೩-೯) ಎಂಬ ನಿರುಕ್ತಸೂತ್ರದಲ್ಲಿ ಜ್ಞಾನಾರ್ಥಕವಾಗಿ ಮಾಯಾಶಬ್ದವನ್ನು ಹೇಳಿರುವರು.

**ಮಾಯಿನಃ**— ಇಲ್ಲಿ ಹೇಳಿರುವ ಮಾಯಾಶಬ್ದವು ಲೋಕಪ್ರಸಿದ್ಧವಾದ ಕಪಟ ಎಂಬರ್ಥವನ್ನೇ ತಿಳಿಸುವುದು. ಮಾಯಿನಃ ಎಂದರೆ ಕಪಟೋಪಾಯನಿರತರಾದ ವೃತ್ರಾದಿಗಳು ಎಂದರ್ಥ.

**ಅಧಮಃ**— ಧಮತಿರ್ಗತಿಕರ್ಮಾ (ನಿ. ೬-೨) ಎಂದು ಯಾಸ್ಕರು, ಧಮ್‌ಧಾತುವಿಗೆ ಗತಿಕರ್ಮಾರ್ಥವನ್ನು ಹೇಳಿರುವುದರಿಂದ ಈ ಪದವು, ನೀನು ಜಯಿಸಿದೆ. ಎಂಬರ್ಥವುಳ್ಳ ಲೋಟ್ ಮಧ್ಯಮಪುರುಷೈಕವಚನ ಪದವಾಗಿದೆ.

**ಅಧಿಶುಪ್ತೌ ಅಜುಹ್ವತ**— ಇಲ್ಲಿ ರಾಕ್ಷಸರು ಹವಿಸ್ಸನ್ನು ಅಗ್ನಿಯಲ್ಲಿ ಹೋಮಮಾಡದೆ ತಮ್ಮ ತಮ್ಮ ಬಾಯಿಗಳಲ್ಲಿಯೇ ಹಾಕಿಕೊಂಡರು ಎಂದು ಹೇಳಿದೆ. ಇದೇ ಅಭಿಪ್ರಾಯವನ್ನೇ ಅಸುರಾ ವಾ ಆತ್ಮನ್ನಜುಹವುರುದ್ವಾಶೇsಗ್ನೌ ತೇ ಪರಾಭವನ್ ಎಂಬ ಕೌಶೀತಕೀ ಶ್ರುತಿಯೂ ದೇವಾಶ್ಚ ಹ ವಾ ಅಸುರಾಶ್ಚಾಸ್ಪರ್ಧಂತ ತತೋ ಹಾಸುರಾ ಅಭಿಮಾನೇನ ಕಸ್ಮೈ ಚ ನ ಜುಹುಮ ಇತಿ ಸ್ವೇಷ್ವೇವಾಸ್ಯೇಷು ಜುಹ್ವತಶ್ಚೇರುಸ್ತೇ ಪರಾಬಭೂವುಃ ಎಂದರೆ ದೇವತೆಗಳಿಗೂ ಅಸುರರಿಗೂ ಸ್ಪರ್ಧೆಯುಂಟಾಗಲು ಆಗ ಅಸುರರು ತಾವು ಯಾರಿಗೂ ಹೋಮಮಾಡುವುದಿಲ್ಲವೆಂದು ಹೇಳಿ ಹವಿಸ್ಸನ್ನು ತಮ್ಮ ತಮ್ಮ ಬಾಯಿಯಲ್ಲೇ ಹಾಕಿಕೊಂಡರೆಂದೂ ಆದರಿಂದ ಅವರು ಪರಾಜಿತರಾದರೆಂದೂ ವಾಜಸನೇಯ ಶ್ರುತಿಯಲ್ಲಿಯೂ ಹೇಳಿರುವುದು.

**ನೃಮಣಃ**— ನೃಷು ಮನೋ ಯಸ್ಯ ಸಃ ನೃಮಣಃ ಎಂದು ವ್ಯುತ್ಪತ್ತಿಮಾಡಿದಾಗ ಮನುಷ್ಯರನ್ನು ಸಾವಧಾನಮನಸ್ಸಿನಿಂದ ರಕ್ಷಿಸುವವನು ಎಂದರ್ಥ ಬರುವುದು. ಆದರೆ ಇಲ್ಲಿ ಮನುಷ್ಯರೆಂದರೆ ಯಜ್ಞಕ್ರಿಯೆಯಲ್ಲಿ ದೀಕ್ಷಿತರಾದ ಯಜಮಾನರು ಎಂದರ್ಥಮಾಡಿ ಅವರನ್ನು ಕಾಪಾಡುವವನು ಎಂಬರ್ಥವನ್ನು ಸ್ಪಷ್ಟಪಡಿಸಿದ್ದಾರೆ.

**ದಸ್ಯುಹತ್ಯೇಷು**— ಈ ಪದಕ್ಕೆ ಯಾಗಸಾಧನಾದಿಗಳನ್ನು ಅಪಹರಿಸುವ ತಸ್ಕರರನ್ನು ಕೊಲ್ಲುವ ಯುದ್ಧದಲ್ಲಿ ಎಂಬರ್ಥವನ್ನಾದರೂ ಹೇಳಬಹುದು. ಅಥವಾ ಮೇಲೆಹೇಳಿದ ದಸ್ಯುಗಳನ್ನು ಕೊಲ್ಲುವ ನಿಮಿತ್ತವಾಗಿ ಎಂದಾದರೂ ಅರ್ಥವನ್ನು ಕಲ್ಪಿಸಬಹುದು. ಈ ಎರಡರ್ಥಗಳಲ್ಲಿಯೂ ಈ ಶಬ್ದವು ಇಲ್ಲಿ ಉಪಯುಕ್ತವಾಗಿದೆ.

**ಋಜಿಶ್ವಾನಂ**— ಋಜಿಶ್ವನ್ ಎಂಬುವನ ಹೆಸರು ಋಗ್ವೇದದಲ್ಲಿ ಋ. ಸಂ. ೧-೫೧-೫; ೧-೫೩-೮; ೧-೧೦೧-೧; ೬-೨೦-೭; ೮-೪೯-೧೦; ೧೦-೯೯-೧೧; ೧೦-೧೩೮-೩ ಎಂಬ ಋಕ್ಕುಗಳಲ್ಲಿ ಪಠಿತವಾಗಿರುವುದು ಆದರೆ ಹೆಚ್ಚು ಸಂಗತಿಗಳೇನೂ ತಿಳಿಸುವಂತಿಲ್ಲ. ಪಿಪ್ರು ಎಂಬುವನೊಡನೆ ಇಂದ್ರನು ಯುದ್ಧಮಾಡುವಾಗ ಇಂದ್ರನಿಗೆ ಇವನು ಸಹಾಯಮಾಡಿದ ವಿಷಯವು ಸೂಚಿತವಾಗಿರುವುದು. ಪಾಶ್ಚಾತ್ಯರಲ್ಲಿ Ludwig ಎಂಬ ಜರ್ಮನ್ ಪಂಡಿತನು ಋ. ಸಂ. ೧೦-೯೯-೧೧ ಎಂಬ ಋಕ್ಕಿನ ಆಧಾರದ ಮೇಲೆ ಈ ಋಜಿಶ್ವನ್ ಎಂಬುವನು ಔಶಿಜನ ಮಗನೆಂದು ಅಭಿಪ್ರಾಯವನ್ನು ವ್ಯಕ್ತಪಡಿಸಿರುವನು. ಋ. ಸಂ. ೪-೧೬-೧೩; ೫-೨೯-೧೧ ಈ ಋಕ್ಕುಗಳಲ್ಲಿ ಇವನು ವಿದಥಿನ ಎಂಬುವನ ಪುತ್ರನಾದ ವೈದಥಿನ ಎಂದು ಸ್ಪಷ್ಟವಾಗಿ ಕರೆಯಲ್ಪಟ್ಟಿರುವುದು ಕಂಡು ಬರುವುದು.

॥ ವ್ಯಾಕರಣಪ್ರಕ್ರಿಯಾ ॥

**ಮಾಯಿನಃ**— ಮಾಯಾ ಅಸ್ಯ ಅಸ್ತಿ ಇತಿ ಮಾಯೀ ತಾನ್ ಮಾಯಿನಃ ಮಾಯೆ ಉಳ್ಳವರು ಎಂದರ್ಥ. ವ್ರೀಹ್ಯಾದಿಭ್ಯಶ್ಚ (ಪಾ. ಸೂ. ೫-೨-೧೧೬) ಈಗಣಪಠಿತವಾದವುಗಳಿಗೆ ಮತ್ವರ್ಥದಲ್ಲಿ ಇನಿ ಪ್ರತ್ಯಯವು



CC-0. Jangamwadi Math Collection. Digitized by eGangotri

ಬರುತ್ತದೆ. ವ್ರೀಹ್ಯಾದಿಯಲ್ಲಿ ಮಾಯಾಶಬ್ದವನ್ನೂ ಪಾಠಮಾಡಿರುವುದರಿಂದ ಇದಕ್ಕೆ ಇನಿ ಪ್ರತ್ಯಯ ಬಂದರೆ ಮಾಯಿನ್ ಎಂದು ನಾಂತಶಬ್ದವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ಮಾಯಿನಃ ಎಂದು ರೂಪವಾಗುತ್ತದೆ.

ಶುಪ್ತೌ—ಶುಭ ದೀಪ್ತೌ ಧಾತು. ಭ್ವಾದಿ ಕರ್ಮಾರ್ಥದಲ್ಲಿ ಕ್ತಿನ್ ಪ್ರತ್ಯಯ ಬರುತ್ತದೆ. ಸೇಟಾದುದರಿಂದ ಇಡಾಗಮವು ಪ್ರಾಪ್ತವಾದರೆ ತಿತುತ್ರತಥಸಿ (ಪಾ. ಸೂ. ೭-೨-೯) ಎಂಬ ಸೂತ್ರದಿಂದ ಇಣ್ನಿಷೇಧ ಬರುತ್ತದೆ. ಶುಭ್+ತಿ ಎಂದಿರುವಾಗ ಝಷಸ್ತಥೋರ್ಧಃ ಎಂಬುದರಿಂದ ತಿ ಎಂಬ ತಕಾರಕ್ಕೆ ಧಕಾರವು ಪ್ರಾಪ್ತವಾಗುತ್ತದೆ. ಆದರೆ ವ್ಯತ್ಯಯೋಬಹುಲಂ ಎಂಬುದರಿಂದ ಛಾಂದಸವಾಗಿ ಇಲ್ಲಿ ಬರುವುದಿಲ್ಲ. ಖರಿಚ (ಪಾ. ಸೂ. ೮-೪-೫೫) ಖರ್ ಪರದಲ್ಲಿರುವಾಗ ಝಲ್ ವರ್ಣಗಳಿಗೆ ಚರ್ ವರ್ಣಗಳು ಬರುತ್ತವೆ ಎಂಬುದರಿಂದ ಇಲ್ಲಿ ಭಕಾರಕ್ಕೆ ಪಕಾರವು ಆಂತರತಮ್ಯದಿಂದ ಬರುತ್ತದೆ. ಶುಪ್ತಿ ಎಂದು ಇಕಾರಾಂತ ಶಬ್ದವಾಗುತ್ತದೆ. ಸಪ್ತಮೀ ಏಕವಚನದಲ್ಲಿ ಶುಪ್ತೌ ಎಂದು ರೂಪವಾಗುತ್ತದೆ.

ಅಜುಹ್ವತ—ಹು ದಾನಾದನಯೋಃ ಧಾತು ಜುಹೋತ್ಯಾದಿ. ಇದು ಪರಸ್ಮೈಪದಿಯಾದರೂ ವ್ಯತ್ಯಯದಿಂದ ಇಲ್ಲಿ ಆತ್ಮನೇಪದ ಪ್ರತ್ಯಯಗಳು ಬರುತ್ತವೆ. ಲಙ್ ಪ್ರಥಮಪುರುಷ ಬಹುವಚನದಲ್ಲಿ ಝ ಪ್ರತ್ಯಯ ಬರುತ್ತದೆ. ಶ್ಲು ವಿಕರಣ ಬರುತ್ತದೆ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ ಬರುತ್ತದೆ. ಅಭ್ಯಾಸಕ್ಕೆ ಕುಹೋಶ್ಚುಃ ಎಂಬುದರಿಂದ ಚವರ್ಗಾದೇಶ ಬಂದು ಜಕಾರ ಬರುತ್ತದೆ. ಜುಹು+ಝ ಎಂದಿರುವಾಗ ಅದಭ್ಯಸ್ತಾತ್ (ಪಾ. ಸೂ. ೭-೧-೪) ಅಭ್ಯಸ್ತದ ಪರದಲ್ಲಿರುವ ಝ ಪ್ರತ್ಯಯಕ್ಕೆ ಅತ್ ಎಂಬ ಆದೇಶ ಬರುತ್ತದೆ ಎಂಬುದರಿಂದ ಇಲ್ಲಿ ದ್ವಿತ್ವದ ಪರದಲ್ಲಿರುವುದರಿಂದ ಅತ್ ಎಂಬ ಆದೇಶವು ಬರುತ್ತದೆ. ಜುಹು+ಅತ ಎಂದಿರುವಾಗ ಉವಙಾದೇಶ ಪ್ರಾಪ್ತವಾದರೆ ಹುಶ್ನುವೋಃ ಸಾರ್ವಧಾತುಕೇ (ಪಾ. ಸೂ. ೬-೪-೮೭) ಎಂಬುದರಿಂದ ಸಾರ್ವಧಾತುಕವು ಪರದಲ್ಲಿರುವುದರಿಂದ ಉವಙಗೆ ಅಪವಾದವಾಗಿ ಯಣಾದೇಶವು ಬರುತ್ತದೆ. ಧಾತುವಿಗೆ ಅಡಾಗಮ ಬಂದರೆ ಅಜುಹ್ವತ ಎಂದು ರೂಪವಾಗುತ್ತದೆ.

ಪಿಪ್ರೋಃ—ಪ್ರಾ ಪಾಲನಪೂರಣಯೋಃ ಧಾತು ಜುಹೋತ್ಯಾದಿ ಪ್ರೃಭಿದಿವ್ಯಧಿಗೃಧಿಧೃಷಿಭ್ಯಃ (ಉ. ಸೂ. ೧-೨೩) ಎಂಬುದರಿಂದ ಕು ಪ್ರತ್ಯಯ ಬರುತ್ತದೆ. ಪೃ+ಉ ಎಂದಿರುವಾಗ ಉದೋಷ್ಠ್ಯಪೂರ್ವಸ್ಯ (ಪಾ. ಸೂ. ೭,೧-೧೦೨) ಎಂಬುದರಿಂದ ಉತ್ವವು ಧಾತುವಿಗೆ ಪ್ರಾಪ್ತವಾದರೆ ಬಹುಲಂಛಂದಸಿ (ಪಾ. ಸೂ. ೭-೧,೧೦೩) ಎಂಬುದರಿಂದ ಛಂದಸ್ಸಿನಲ್ಲಿ ಬರುವುದಿಲ್ಲ. ನಿಮಿತ್ತವಿಲ್ಲದಿದ್ದರೂ ಛಾಂದಸವಾಗಿ ಧಾತುವಿಗೆ ದ್ವಿತ್ವ ಬರುತ್ತದೆ. ದ್ವಿತ್ವಬಂದಾಗ ಉರತ್ ಸೂತ್ರದಿಂದ ಅಭ್ಯಾಸದ ಋಕಾರಕ್ಕೆ ಅತ್ವವು ಬರುತ್ತದೆ. ಅಕಾರವು ರಪರವಾಗಿ ಬಂದು ಹಲಾದಿಶೇಷದಿಂದ ಆದಿಹಲನ್ನು ಬಿಟ್ಟು ಉಳಿದ ಅಭ್ಯಾಸದ ವ್ಯಂಜನಗಳು ಲುಪ್ತವಾಗುತ್ತವೆ. ಪಪೃ+ಉ ಎಂದಿರುವಾಗ ಅರ್ತಿಪಿಪರ್ತ್ಯೋಶ್ಚ (ಪಾ.ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇಕಾರ ಬರಲು ಶ್ಲು ನಿಮಿತ್ತವಿಲ್ಲದುದರಿಂದ ಬರುವುದಿಲ್ಲ. ಆದರೆ ಬಹುಲಂಛಂದಸಿ (ಪಾ. ಸೂ- ೭-೪-೭೮) ಛಂದಸ್ಸಿನಲ್ಲಿ ಅಭ್ಯಾಸಕ್ಕೆ ಇಕಾರ ಬರುತ್ತದೆ ಎಂಬುದರಿಂದ ಇಕಾರ ಬರುತ್ತದೆ. ಧಾತುವಿನ ಋಕಾರಕ್ಕೆ ಯಣಾದೇಶ ಬಂದರೆ ಪಿಪ್ರು ಎಂದು ರೂಪವಾಗುತ್ತದೆ. ಷಷ್ಠೀ ಏಕವಚನದಲ್ಲಿ ಪಿಪ್ರೋಃ ಎಂದು ರೂಪವಾಗುತ್ತದೆ.

ನೃಮಣಃ—ನೃಷು ಮನೋ ಯಸ್ಯ ಸಃ ನೃಮನಃ ತನ್ನವರಲ್ಲಿ ಪಾಲನಮಾಡುವ ಬುದ್ಧಿಯುಳ್ಳವನು ಎಂದರ್ಥ. ಛಂದಸ್ಯೃದವಗ್ರಹಾತ್ (ಪಾ. ಸೂ. ೮-೪-೨೬) ಋಕಾರಾಂತವಾದ ಅವಗ್ರಹದ ಪರದಲ್ಲಿರುವ ನಕಾರಕ್ಕೆ ಣಕಾರ ಬರುತ್ತದೆ ಎಂಬುದರಿಂದ ಇಲ್ಲಿ ಅವಗೃಹದ ಪರದಲ್ಲಿರುವುದರಿಂದ ಣತ್ವ ಬರುತ್ತದೆ. ನೃಮಣಃ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

ಅರುಜಃ—ರುಜೋ ಭಂಗೆ ಧಾತು ತುದಾದಿ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. ತುದಾದಿಗೆ ಶ ವಿಕರಣ ಬರುತ್ತದೆ. ಸಾರ್ವಧಾತುಕಮಪಿತ್ ಎಂಬುದರಿಂದ ವಿಕರಣವು ಙಿತ್ತಾದುದರಿಂದ ಕ್ಙಿತಿಚ ಸೂತ್ರದಿಂದ ಧಾತುವಿಗೆ ಲಘೂಪಧಗುಣ ನಿಷೇಧ ಬರುತ್ತದೆ. ಇತಶ್ಚ ಎಂಬುದರಿಂದ ಸಿಪ್ಪಿನ ಇಕಾರಕ್ಕೆ ಲೋಪ ಬಂದು ಅಡಾಗಮ ಬಂದರೆ ಅರುಜಃ ಎಂದು ರೂಪವಾಗುತ್ತದೆ.

ಋಜಿಶ್ವಾನಮ್—ಋಜು ಅಶ್ನುತೆ ಪ್ರಾಪ್ನೋತಿ ಇತಿ ಋಜಿಶ್ವಾ. ಅಶೂ ವ್ಯಾಪ್ತೌ ಧಾತುಃ ಸ್ವಾದಿ ಪೃಷೋದರಾದೀನಿಯಥೋಪದಿಷ್ಟಮ್ (ಪಾ. ಸೂ. ೬-೩-೧೦೯) ಈ ಗಣದಲ್ಲಿ ಪಠಿತವಾದವುಗಳು ಶಿಷ್ಟೋಚ್ಚಾರಣೆಯಿಂದ ಸಾಧುತ್ವವನ್ನು ಹೊಂದುತ್ತವೆ ಎಂಬುದರಿಂದ ಈ ಶಬ್ದವು ಪೃಷೋದರಾದಿಯಲ್ಲಿ ಪಠಿತವಾಗಿದೆ. ಅಲ್ಲಿ ಕೆಲವು ವರ್ಣಗಳಿಗೆ ಲೋಪವೂ, ವಿಕಾರವೂ, ಆಗಮವೂ, ವ್ಯತ್ಯಾಸವೂ ಬರುತ್ತವೆ. ಆದುದರಿಂದ ಇಲ್ಲಿ ಋಜು ಎಂಬಲ್ಲಿ ಉಕಾರಲೋಪವೂ ಅಶುಧಾತುವಿನ ಅಕಾರಕ್ಕೆ ಇಕಾರವೂ ಬಂದಿದೆ. ದ್ವಿತೀಯಾ ಏಕವಚನದಲ್ಲಿ ಋಜಿಶ್ವಾನಂ ಎಂದು ರೂಪವಾಗುತ್ತದೆ.

ದಸ್ಯುಹತ್ಯೇಷು—ದಸ್ಯೂನಾಂ ಹತ್ಯಾ ಏಷು ತಾನಿ ದಸ್ಯುಹತ್ಯಾನಿ. ಅನ್ಯಪದಾರ್ಥದಿಂದ ಸಂಗ್ರಾಮವು ಗೃಹೀತವಾದುದರಿಂದ ದುಷ್ಟರ ವಧೆಯುಳ್ಳ ಯುದ್ಧಗಳು ಎಂದರ್ಥವಾಗುತ್ತದೆ. ಹನಸ್ತ್ರಚ (ಪಾ. ಸೂ. ೩.೧-೧೦೮) ಭುವೋ ಭಾವೆ ಎಂಬುದರಿಂದ ಭಾವೆ ಎಂಬುದು ಅನುವೃತ್ತವಾಗುತ್ತದೆ. ಅನುಪಸರ್ಗವಾದ ಸುಬಂತವು ಉಪಪದವಾಗಿರುವಾಗ ಹನಧಾತುವಿಗೆ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯ ಬರುತ್ತದೆ. ತತ್ಸಂನಿಯೋಗದಿಂದ ಧಾತುವಿನ ಕೊನೆಯ ನಕಾರಕ್ಕೆ ತಕಾರವು ಆದೇಶವಾಗಿ ಬರುತ್ತದೆ ಎಂಬುದರಿಂದ ದಸ್ಯು ಎಂಬುದು ಇಲ್ಲಿ ಉಪಪದವಾಗಿರುವುದರಿಂದ ಹನ ಧಾತುವಿಗೆ ಕ್ಯಪ್ ಪ್ರತ್ಯಯ ಬರುತ್ತದೆ. ದಸ್ಯುಹತ್ಯ ಎಂದು ರೂಪವಾಗುತ್ತದೆ. ಸಪ್ತಮೀ ಬಹುವಚನದಲ್ಲಿ ದಸ್ಯುಹತ್ಯೇಷು ಎಂದು ರೂಪವಾಗುತ್ತದೆ. ಪರಾದಿಶ್ಛಂದಸಿ ಬಹುಲಂ (ವಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಕ್ಕೆ ಆದ್ಯುದಾತ್ತಸ್ವರ ಬರುತ್ತದೆ. ತತ್ಪುರುಷಸಮಾಸ ಮಾಡಿದಲ್ಲಿ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ.

ಆವಿಥ—ಅವ ರಕ್ಷಣೆ ಧಾತು ಭ್ವಾದಿ ಲಿಟ್ ಮಧ್ಯಮಪುರುಷ ಏಕವಚನದಲ್ಲಿ ದ್ವಿತ್ವ, ಹಲಾದಿಶೇಷ, ದೀರ್ಘ, ಇಡಾಗಮಗಳು ಬಂದರೆ ಆವಿಥ ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ತ್ವಂ ಕುತ್ಸಂ ಶುಷ್ಣಹತ್ಯೇಷ್ವಾವಿಥಾರಂಧಯೋಽತಿಥಿಗ್ವಾಯ ಶಂಬರಂ ।
ಮಹಾಂತಂ ಚಿದರ್ಬುದಂ ನಿ ಕ್ರಮೀಃ ಪದಾ ಸನಾದೇವ ದಸ್ಯುಹತ್ಯಾಯ ಜಜ್ಞಿಷೇ ॥ ೬ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತ್ವಂ । ಕುತ್ಸಂ । ಶುಷ್ಣಽಹತ್ಯೇಷು । ಆವಿಥ । ಅರಂಧಯಃ । ಅತಿಥಿಽಗ್ವಾಯ । ಶಂಬರಂ ।

ಮಹಾಂತಂ । ಚಿತ್ । ಅರ್ಬುದಂ । ನಿ । ಕ್ರಮೀಃ । ಪದಾ । ಸನಾತ್ । ಏವ । ದಸ್ಯುಽಹತ್ಯಾಯ । ಜಜ್ಞಿಷೇ ॥ ೬ ॥

॥ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ಕುತ್ಸಂ ಕುತ್ಸಸಂಜ್ಞಕಮೃಷಿಂ ಶುಷ್ಣಹತ್ಯೇಷು । ಶುಷ್ಣಃ ಶೋಷಯಿತಾ । ಏತನ್ನಾಮ್ನೋಽಸುರಸ್ಯ ಹನನಯುಕ್ತೇಷು ಸಂಗ್ರಾಮೇಷ್ವಾವಿಥ । ರರಕ್ಷಿಥ । ತಥಾತಿಥಿಗ್ವಾಯಾತಿಥಿಭಿರ್ಗಂತವ್ಯಾಯ ದಿವೋದಾಸಾಯ ಶಂಬರಮೇತನ್ನಾಮಾನಮಸುರಮರಂಧಯಃ । ಹಿಂಸಾಂ ಪ್ರಾಪಿತಃ । ತಥಾ ಮಹಾಂತಂ ಚಿತ್ ಅತಿಪ್ರವೃದ್ಧಮಪ್ಯರ್ಬುದಮೇತತ್ಸಂಜ್ಞಕಮಸುರಂ ಪದಾ ಪಾದೇನ ನಿ ಕ್ರಮೀಃ । ನಿತರಾಮಾಕ್ರಮಿತಾಭೂಃ । ಯಸ್ಮಾದೇವಂ ತಸ್ಮಾತ್ಸನಾದೇವ ಚಿರಕಾಲಾದೇವಾರಭ್ಯ ದಸ್ಯುಹತ್ಯಾಯೋಪಕ್ಷಪಯಿತೄಣಾಂ ಹನನಾಯ ಜಜ್ಞಿಷೇ । ಸರ್ವದಾ ತ್ವಂ ದಸ್ಯುಹನನಶೀಲೋ ಭವಸೀತ್ಯರ್ಥಃ ॥ ಅರಂಧಯಃ । ರಧ ಹಿಂಸಾಸಂರಾಡ್ಧ್ಯೋಃ । ರಧಿಜಭೋರಚಿ । ಪಾ. ೭-೧-೬೧ । ಇತಿ ಧಾತೋರ್ನುಂ । ಅತಿಥಿಗ್ವಾಯ । ಗಮೇರೌಣಾದಿಕೋ ಡ್ವಪ್ರತ್ಯಯಃ । ಕ್ರಮೀಃ । ಕ್ರಮು ಪಾದವಿಕ್ಷೇಪೇ । ಹ್ಮ್ಯಂತಕ್ಷಣ । ಪಾ. ೭-೨-೫ । ಇತಿ ವೃದ್ಧಿಪ್ರತಿಷೇಧಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಪದಾ । ಸಾವೇಕಾಚಃ ಇತಿ ಪ್ರೋಡಿದಂಪದಾದೀತಿ ವಾ ವಿಭಕ್ತೇರುದಾತ್ತತ್ವಂ । ಜಜ್ಞಿಷೇ । ಜನೀ ಪ್ರಾದುರ್ಭಾವೇ । ಲಿಟಿ ಗಮಹನೇತ್ಯಾದಿನೋಪಧಾಲೋಪಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವಂ—ನೀನು । ಕುತ್ಸಂ—ಕುತ್ಸನೆಂಬ ಋಷಿಯನ್ನು । ಶುಷ್ಣಹತ್ಯೇಷು—ಶುಷ್ಣನೆಂಬ ರಾಕ್ಷಸನನ್ನು ನಾಶಮಾಡಲು ನಡೆದ ಯುದ್ಧಗಳಲ್ಲಿ । ಆವಿಥ—ಕಾಪಾಡಿದೆ । ಅತಿಥಿಗ್ವಾಯ—ಅತಿಥಿಗಳ ಜತೆಯಲ್ಲಿ ಹೋಗತಕ್ಕದಿವೋ ದಾಸನೆಂಬ ಭಕ್ತನಿಗಾಗಿ । ಶಂಬರಂ—ಶಂಬರನೆಂಬ ರಾಕ್ಷಸನನ್ನು । ಅರಂಧಯಃ ಹಿಂಸಿಸಿಕೊಂದೆ । ಮಹಾಂತಂ ಚಿತ್—ಅತಿ ಪ್ರಬಲನಾದಾಗ್ಯೂಕೂಡ । ಅರ್ಬುದಂ । ಅರ್ಬುದನೆಂಬ ರಾಕ್ಷಸನನ್ನು ಪದಾ-ಕಾಲಿನಿಂದ । ನಿಕ್ರಮೀಃ—ಮೆಟ್ಟಿತುಳಿದೆ. (ನಾಶಮಾಡಿದೆ ಆದ್ದರಿಂದಲೇ) ಸನಾದೇವ—ಚಿರಕಾಲದಿಂದಲೇ । ದಸ್ಯುಹತ್ಯಾಯ—ಚೋರರಾದ ರಾಕ್ಷಸರನಾಶಕ್ಕಾಗಿ (ಯೇ) । ಜಜ್ಞಿಷೇ—ಉತ್ಪನ್ನನಾಗಿರುವೆ.



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಎಲೈ ಇಂದ್ರನೇ, ಶುಷ್ಣನೆಂಬ ರಾಕ್ಷಸನನ್ನು ನಾಶಮಾಡಲು ನಡೆದ ಯುದ್ಧಗಳಲ್ಲಿ ನೀನು ಕುತ್ಸನೆಂಬ ಋಷಿಯನ್ನು ಕಾಪಾಡಿದೆ. ಅತಿಥಿಸತ್ಕಾರದಲ್ಲಿ ನಿರತನಾಗಿ ಹೋಗುತ್ತಿದ್ದ ದಿವೋದಾಸನಿಗಾಗಿ ಶಂಬರನೆಂಬ ರಾಕ್ಷಸನನ್ನು ಹಿಂಸೆಮಾಡಿ ಕೊಂದೆ. ಅರ್ಬುದನೆಂಬ ರಾಕ್ಷಸನು ಅತ್ಯಂತ ಪ್ರಬಲನಾದಾಗ್ಯೂ ಅವನನ್ನು ಕಾಲಿನಿಂದ ಮೆಟ್ಟಿಕೊಂದೆ. ಆದ್ದರಿಂದಲೇ ನೀನು ಚೋರರಾದ ರಾಕ್ಷಸರ ನಾಶಕ್ಕಾಗಿಯೇ ಚಿರಕಾಲದಿಂದಲೂ ಉತ್ಪನ್ನನಾಗಿರುವೆ.

## English Translation.

You have defended Kutsa in fatal fights with Sushna ; You have destroyed Sambara in defence of Atithigwa ; you have trodden with your foot upon the great Arbuda ; from remote times you were born for the destructlon of oppressors.

॥ ವಿಶೇಷ ವಿಷಯಗಳು ॥

ಕುತ್ಸಂ—ಕುತ್ಸನೆಂಬುವನು ಒಬ್ಬ ಶೂರನು ಇವನ ಹೆಸರು ಋಗ್ವೇದದಲ್ಲಿ ಅನೇಕ ಕಡೆ ಪಠಿತವಾಗಿರುವುದು. ಆ ಕಾಲದಲ್ಲಿಯೇ ಇವನ ಹೆಸರು ಬಹಳ ಹಳೆಯದಾಗಿದ್ದುದರಿಂದ ಇವನ ವಿಷಯವಾಗಿ ಋಗ್ವೇದದಲ್ಲಿ ಹೆಚ್ಚು ವಿಷಯಗಳು ತಿಳಿದುಬಂದಿಲ್ಲ. ಋ. ಸಂ ೪-೨೬-೧ ; ೭-೧೯-೨ ; ೮-೧-೧೧ ಋಕ್ಕುಗಳಲ್ಲಿ ಇವನು ಆರ್ಜುನೇಯ ಎಂದರೆ ಅರ್ಜುನನ ಮಗನೆಂದು ಕರೆಯಲ್ಪಟ್ಟಿದಾನೆ ಮತ್ತು ಶುಷ್ಣಾಸುರನೊಡನೆ ಇಂದ್ರನು ಯುದ್ಧಮಾಡಿದಾಗ ಇವನ ಹೆಸರು ಅಲ್ಲಲ್ಲಿ ಸೂಚಿತವಾಗಿರುವುದು. ಈ ವಿಷಯವು ಋ. ಸಂ. ೧-೬-೩ ; ೧-೧೫೧-೧೯ ; ೧-೧೭೪-೫ ; ೧-೧೭೫-೪ ; ೪-೩೦-೪ ; ೫-೨೯-೪ ; ೬-೨೦-೫ ; ೭-೧೯-೨ ; ೧೦-೯೯-೯ ಈ ಋಕ್ಕುಗಳಲ್ಲಿ ಸೂಚಿತವಾಗಿದೆ. ಮತ್ತು ಇವನು ಸ್ಮದಿಭ, ತುಗ್ರ, ವೇತಸು ಎಂಬುವರನ್ನು ಸೋಲಿಸಿದನೆಂಬ ವಿಷಯವು ಋ. ಸಂ. ೧೦-೪೯-೪ ರಲ್ಲಿ ಉಕ್ತವಾಗಿದೆ. ಋ. ಸಂ. ೧-೫೩-೧೦ ; ೨-೧೪-೭ ; ೮-೫೩-೨ ಎಂಬ ಋಕ್ಕಗಳಲ್ಲಿ ಅತಿಥಿಗ್ವ ಮತ್ತು ಆಯು ಎಂಬುವರೊಡನೆ ಇವನ ಹೆಸರು ಪಠಿತವಾಗಿರುವುದು. ಋ. ಸಂ. ೧-೫೩-೧೦ ರಲ್ಲಿ ತೂರ್ವಯಾಣನೆಂಬುವನಿಂದ ಇವನು ಪರಾಜಿತನಾದನೆಂದು ಹೇಳಿದೆ. ಋ. ಸಂ. ೧-೫೧-೬ ; ೬-೨೬-೩ ರಲ್ಲಿ ಇವನು ಇಂದ್ರನ ಸ್ನೇಹಿತನೆಂದು ಪರಿಗಣಿಸಲ್ಪಟ್ಟಿದಾನೆ. ಇದಲ್ಲದೆ ಇವನ ಹೆಸರು ಋ. ಸಂ. ೧೦-೩೮-೫ ; ಪಂಚವಿಂಶಬ್ರಾಹ್ಮಣ ೯-೨-೨೨ ; ಜೈಮಿನೀಯ ಬ್ರಾಹ್ಮಣ ೧-೨೨೮ ಎಂಬ ಸ್ಥಳಗಳಲ್ಲಿ ಪಠಿತವಾಗಿರುವುದು.

ಶುಷ್ಣಹತ್ಯೇಷು—ಶುಷ್ಣನೆಂಬ ರಾಕ್ಷಸನನ್ನು ಕೊಲ್ಲುವ ಯುದ್ಧದಲ್ಲಿ ಎಂದರ್ಥ.

ಅತಿಥಿಗ್ವಾಯ—ಅತಿಥಿಗಳಿಗಾಗಿ ಎಲ್ಲಿಗಾದರೂ ಪ್ರಯಾಣಮಾಡುವ ದಿವೋದಾಸನಿಗೆ ಶಂಬರಾಸುರನು ಬಹಳವಾಗಿ ಹಿಂಸೆಕೊಡುತ್ತಿದ್ದನು. ಅಂತಹ ಶಂಬರಾಸುರನನ್ನು ಇಂದ್ರನು ದಿವೋದಾಸನ ರಕ್ಷಣಾರ್ಥವಾಗಿ ಕೊಂದುಹಾಕಿದನು. 174 ನೇ ಪೇಜು ನೋಡಿ.

ಚಿತ್—ಈ ಪದಕ್ಕೆ ಅತ್ಯಂತವಾಗಿ ಬೆಳೆದಿದ್ದರೂ ಕೂಡ ಎಂಬರ್ಥ.



CC-0. Jangamwadi Math Collection. Digitized by eGangotri

ಸನಾತ್— ಬಹುಕಾಲದಿಂದ ಎಂಬ ಇದರ ಅರ್ಥವು ಸನಾತನ ಎಂಬ ಪದೈಕದೇಶದಿಂದ ಲಬ್ಧವಾಗಿದೆಯೆಂದು ತಿಳಿಯಬಹುದು.

ಅತಿಥಿಗ್ವಾಯ—ಅತಿಥಿಗ್ವ ಎಂಬ ಹೆಸರು ಋಗ್ವೇದದಲ್ಲಿ ಅನೇಕಕಡೆ ಪಠಿತವಾಗಿರುವುದು. ಸಾಧಾರಣವಾಗಿ ಈ ಸ್ಥಳಗಳಲ್ಲೆಲ್ಲಾ ದಿವೋದಾಸನೆಂಬ ರಾಜನೊಡನೆ ಪಠಿತವಾಗಿರುವುದರಿಂದ ಇವರಿಬ್ಬರೂ ಒಬ್ಬನೇ ವ್ಯಕ್ತಿಯೆಂದು ಊಹಿಸಲು ಸಾಕಾದಷ್ಟು ಕಾರಣಗಳಿವೆ. ಋ. ಸಂ. ೧-೫೧-೬; ೧-೧೧೨-೧೪; ೧-೧೩೦-೭; ೪-೨೬-೩; ೬-೪೭-೨೨ ಋಕ್ಕುಗಳು ಈ ವಿಷಯವನ್ನು ಸಮರ್ಥಿಸುವವು. ಈ ಸ್ಥಳಗಳಲ್ಲಿ ಶಂಬರನೆಂಬುವನೊಡನೆ ಯುದ್ಧಮಾಡಿದ ವಿಚಾರವು ಸೂಚಿತವಾಗಿರುವುದು. ಋ. ಸಂ. ೧-೫೩-೮; ೧೦-೪೮-೪ ರಲ್ಲಿ ಇಂದ್ರನು ಪರ್ಣಯ ಮತ್ತು ಕರಂಜರೆಂಬುವರನ್ನು ಸಂಹಾರಮಾಡಿದಾಗ ಇವನು ಇಂದ್ರನಿಗೆ ಸಹಾಯಕನಾಗಿದ್ದನೆಂದು ಹೇಳಿದೆ. ಋ. ಸಂ. ೭-೧೯-೮ ರಲ್ಲಿ ಇವನು ತುರ್ವಶ ಮತ್ತು ಯದು ಎಂಬುವರ ಶತ್ರುವೆಂದು ಹೇಳಿದೆ. ಋ. ಸಂ. ೧-೫೩-೧೦; ೨-೧೪-೭; ೬-೧೮-೧೩; ೮-೫೩-೨ ಈ ಋಕ್ಕುಗಳಲ್ಲಿ ಅತಿಥಿಗ್ವನು ಅಯು ಮತ್ತು ಕುತ್ಸ ಎಂಬುವರೊಡನೆ ಸೇರಿ ತೂರ್ವಯಾಣನೆಂಬುವನನ್ನು ಸೋಲಿಸಿರುವುದು ಉಕ್ತವಾಗಿದೆ. ಋ. ಸಂ. ೮-೬೮-೧೬; ೮-೬೮-೧೭ ನೇ ಋಕ್ಕುಗಳಲ್ಲಿ ಕಂಡುಬರುವ ದಾನಸ್ತುತಿಯಲ್ಲಿ ಅತಿಥಿಗ್ವನೆಂಬುವನು ಬೇರೆ ವ್ಯಕ್ತಿಯಾಗಿರಬಹುದು ಅಲ್ಲಿ ಇವನ ಮಗನಾದ ಇಂದ್ರೋತನೆಂಬುವನ ಹೆಸರು ಇರುವುದು.

ಪಾಶ್ಚಾತ್ಯರಲ್ಲಿ ಕೆಲವರು ಅತಿಥಿಗ್ವ ಎಂಬ ಹೆಸರಿನ ಮೂರು ವ್ಯಕ್ತಿಗಳಿದ್ದರೆಂದೂ ಅವರಲ್ಲಿ ಪರ್ಣಯ ಮತ್ತು ಕರಂಜರ ಶತ್ರುವಾದ ಅತಿಥಿಗ್ವನೆಂಬುವನು ಒಬ್ಬನು; ಅತಿಥಿಗ್ವ ದಿವೋದಾಸನು ಎರಡನೆಯವನು; ತೂರ್ವಯಾಣನ ಶತ್ರುವಾದ ಅತಿಥಿಗ್ವನು ಮೂರನೆಯವನು ಎಂದು ಅಭಿಪ್ರಾಯಪಡುವರು. ಆದರೆ ಆ ಪ್ರಾಚೀನಕಾಲದಲ್ಲಿಯೇ ಇವನ ಹೆಸರು ವಿಶೇಷವಾಗಿ ಬಳಕೆಯಲ್ಲಿದ್ದುದರಿಂದ ಇವನು ಪುರಾತನವಾದ ಓರ್ವ ಶೂರನೆಂದು ಪರಿಗಣಿಸಲ್ಪಟ್ಟು ಆದರಂತೆ ಅನೇಕ ಋಕ್ಕುಗಳಲ್ಲಿ ಪಠಿತವಾಗಿರುವುದು ಕಂಡುಬರುವುದು.

ಶಂಬರಂ—ಶಂಬರನೆಂಬುವನು ಇಂದ್ರನ ಶತ್ರುವು. ಇವನ ಹೆಸರೂ ಇವನ ವಿಷಯವೂ ಋ. ಸಂ. ೧-೫೧-೬; ೧-೫೪-೪; ೧-೫೯-೬; ೧-೧೦೧-೨; ೧-೧೦೩-೮; ೧-೧೧೨-೧೪; ೧-೧೩೦-೭; ೨-೧೨-೧೧; ೨-೧೪-೬; ೨-೧೯-೬; ೪-೨೬-೩; ೪-೩೦-೧೪; ೬-೧೮-೮; ೬-೨೬-೫! ೬-೩೧-೪; ೬-೩೧-೧; ೬-೪೭-೨; ೬-೪೭-೨೧; ೭-೧೮-೨೦; ೭-೯೯-೫ ಈ ಋಕ್ಕುಗಳಲ್ಲಿ ಉಕ್ತವಾಗಿರುವುದು. ಋ. ಸಂ. ೬-೨೬-೫ ರಲ್ಲಿ ಇವನು ಕುಲಿಕಾರ ಎಂಬುವನ ಮಗನಾದ ದಾಸನೆಂದು ಹೇಳಿದೆ. ಸಾಧಾರಣವಾಗಿ ಇವನ ಹೆಸರು ಶುಷ್ಣ, ಪಿಪ್ರು ವರ್ಚಿನ್ ಎಂಬುವರೊಡನೆ ಸೇರಿ ಪಠಿವಾಗಿರುವುದು. ಇವನ ಕೋಟೆಗಳು (ದುರ್ಗಗಳು) ೯೦, ೯೯ ಮತ್ತು ೧೦೦ ಇದ್ದವೆಂದು ಋ. ಸಂ. ೧-೧೩೦-೭; ೨-೧೯-೬; ೨-೧೪-೬ ರಲ್ಲಿ ಹೇಳಿದೆ. ಋ. ಸಂ. ೨-೨೪-೨ ರಲ್ಲಿ ಇವನ ದುರ್ಗಗಳನ್ನು ಸೂಚಿಸುವುದಕ್ಕೆ ಶಂಬರಾಣಿ ಎಂಬ ಶಬ್ದವನ್ನೇ ಉಪಯೋಗಿಸಲಾಗಿದೆ. ಇವನು ದಿವೋದಾಸ ಅತಿಥಿಗ್ವನೆಂಬುವನ ಮುಖ್ಯಶತ್ರುವೆಂದೂ ಇವನನ್ನು ಅತಿಥಿಗ್ವನು ಇಂದ್ರನ ಸಹಾಯದಿಂದ ಗೆದ್ದನೆಂದೂ ಋ. ಸಂ. ೧-೫೧-೬; ೧-೧೩೦-೭; ೨-೧೯-೬; ೪-೨೬-೩ ಇತ್ಯಾದಿ ಋಕ್ಕುಗಳಲ್ಲಿ ವರ್ಣಿತವಾಗಿದೆ.

ಈ ಶಂಬರನ ವಿಷಯದಲ್ಲಿ ಕೆಲವು ಪಾಶ್ಚಾತ್ಯರು ಬೇರೆ ವಿಧವಾದ ಅಭಿಪ್ರಾಯವನ್ನು ವ್ಯಕ್ತಪಡಿಸುವರು ಇವನು ನಿಜವಾಗಿ ಜೀವಂತನಾದ ವ್ಯಕ್ತಿಯೇ ಅಥವಾ ಹೆಸರು ಮಾತ್ರದಿಂದ ಪ್ರಸಿದ್ಧನಾದವನೇ ಎಂಬ ಸಂಶಯವು ಉಂಟಾಗುವುದು Hillebrandt ಎಂಬ ಪಂಡಿತನು ಇವನು ನಿಜವಾದ ವ್ಯಕ್ತಿಯೆಂದು ದಿವೋದಾಸ



CC-0. Jangamwadi Math Collection. Digitized by eGangotri

ನೆಂಬುವನ ಮುಖ್ಯಶತ್ರುವಾಗಿದ್ದನೆಂದೂ ಭಾವಿಸುವನು. ಇವನು ಈ ದೇಶದ ಪೂರ್ವನಿವಾಸಿಗಳಲ್ಲಿ ಒಬ್ಬ ಮುಖಂಡನೆಂದೂ ಇವನು ಬೆಟ್ಟಗುಡ್ಡಗಳಲ್ಲಿ ವಾಸಮಾಡುತ್ತಾ ಆರ್ಯರಿಗೆ ತೊಂದರೆಕೊಡುತ್ತಿದ್ದನೆಂದೂ ಕೆಲವರ ಅಭಿಪ್ರಾಯವಿರುವುದು.

ಅರ್ಬುದಂ— ಇವನು ಒಬ್ಬ ರಾಕ್ಷಸನು. ಪಂಚವಿಂಶಬ್ರಾಹ್ಮಣದಲ್ಲಿ ೪೫-೧೫ ರಲ್ಲಿ ಅರ್ಬುದನೆಂಬುವನು ಸರ್ಪಯಾಗದಲ್ಲಿ ಗ್ರಾವಸ್ತುತಿಯನ್ನು ಮಾಡುವ ಒಬ್ಬ ಋತ್ವಿಕ್ಕೆಂದು ಹೇಳಿದೆ. ಪ್ರಾಯಶಃ ಇವನು ಐತರೇಯ ಬ್ರಾಹ್ಮಣ ೬-೧; ಕೌಶೀತಕೀಬ್ರಾಹ್ಮಣ ೧೯-೧; ಶತಪಥಬ್ರಾಹ್ಮಣ ೧೩-೪-೩-೯ ಎಂಬ ಮಂತ್ರಗಳಲ್ಲಿ ಕಂಡು ಬರುವ ಅರ್ಬುದಃ ಕಾದ್ರವೇಯಃ ಎಂಬ ಋಷಿಯಾಗಿರಬಹುದು. ಇವನ ವಿಷಯವಾಗಿ ಹೆಚ್ಚು ಸಂಗತಿಗಳು ತಿಳಿದುಬಂದಿಲ್ಲ.

|| ವ್ಯಾಕರಣಪ್ರಕ್ರಿಯಾ ||

ಅರಂಧಯಃ—ರಧ ಹಿಂಸಾಸಂರಾಧ್ಯೋಃ ಧಾತು, ಚುರಾದಿ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. ಚುರಾದಿಗಳಿಗೆ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ರಧಿಜಭೋರಚಿ (ಪಾ. ಸೂ. ೭-೧-೬೧) ಎಂಬುದರಿಂದ ಅಚ್ ಪರದಲ್ಲಿರುವುದರಿಂದ ಧಾತುವಿಗೆ ನುಮಾಗಮ ಬರುತ್ತದೆ. ಶಪ್ ಪರದಲ್ಲಿರುವಾಗ ಣಿಚಿಗೆ ಗುಣ ಅಯಾದೇಶಗಳು ಬಂದರೆ ಅರಂಧಯಃ ಎಂದು ರೂಪವಾಗುತ್ತದೆ.

ಅತಿಥಿಗ್ವಾಯ—ಅತಿಥಿಭಿಃ ಗಂತವ್ಯಃ ಅತಿಥಿಗ್ವಃ ಗಮ್ಲೃ ಗತೌ ಧಾತು. ಇದಕ್ಕೆ ಉಣಾದಿನಿಷ್ಪನ್ನವಾದ ಡ್ವ ಪ್ರತ್ಯಯ ಬರುತ್ತದೆ. ಡಿತ್ ಮಾಡಿದುದರಿಂದ ಭಸಂಜ್ಞಾ ಇಲ್ಲದಿದ್ದರೂ ಪ್ರಕೃತಿಯ ಟಿಗೆ ಲೋಪ ಬರುತ್ತದೆ. ಅಮಿಗೆ ಲೋಪವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಅತಿಥಿಗ್ವಾಯ ಎಂದು ರೂಪವಾಗುತ್ತದೆ.

ಕ್ರಮೀಃ—ಕ್ರಮು ಪಾದವಿಕ್ಷೇಪೆ ಧಾತು, ಭ್ವಾದಿ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. ಚ್ಲಿ ವಿಕರಣವು ಪ್ರಾಪ್ತವಾದರೆ ಅದಕ್ಕೆ ಸಿಚಾದೇಶ ಬರುತ್ತದೆ. ಸಿಚಿಗೆ ಇಡಾಗಮ ಬರುತ್ತದೆ. ಸಿಪಿನ ಇಕಾರಕ್ಕೆ ಲೋಪ ಬರುವುದರಿಂದ ಅಸ್ತಿಸಿಚೋಽಪೃಕ್ತೆ ಸೂತ್ರದಿಂದ ಅದಕ್ಕೆ ಈಡಾಗಮ ಬರುತ್ತದೆ. ಇಟ ಈಟಿ ಎಂಬುದರಿಂದ ಸಿಚಿಗೆ ಲೋಪ ಬರುತ್ತದೆ. ಅತೋಹಲಾದೇಃ ಸೂತ್ರದಿಂದ ವೃದ್ಧಿಯು ಪ್ರಾಪ್ತವಾದರೆ ಧಾತುವು ಮಾಂತವಾದುದರಿಂದ ಹ್ಮ್ಯಂತಕ್ಷಣಶ್ವಸ—(ಪಾ. ಸೂ. ೭-೨-೫) ಎಂಬುದರಿಂದ ವೃದ್ಧಿ ನಿಷೇಧ ಬರುತ್ತದೆ. ಬಹುಲಂ ಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಲುಙ್ ನಿಮಿತ್ತಕವಾದ ಅಡಾಗಮವು ಧಾತುವಿಗೆ ಬರುವುದಿಲ್ಲ. ರುತ್ವವಿಸರ್ಗ ಬಂದರೆ ಕ್ರಮೀಃ ಎಂದು ರೂಪವಾಗುತ್ತದೆ.

ಪದಾ—ಪಾದಶಬ್ದದಮೇಲೆ ತೃತೀಯಾ ಏಕವಚನವಿರುವಾಗ ಪದ್ದನ್ನೋಮಾಸ್ ಸೂತ್ರದಿಂದ ಪದಾದೇಶ ಬರುತ್ತದೆ. ಸಾವೇಕಾಚಸ್ತೃತೀಯಾದಿಃ—ಎಂಬುದರಿಂದ ಏಕಾಚಿನಪರದಲ್ಲಿ ವಿಭಕ್ತಿ ಬಂದುದರಿಂದ ಅನುದಾತ್ತವು ಬಾಧಿತವಾಗಿ ಉದಾತ್ತಸ್ವರ ಬರುತ್ತದೆ. ಅಥವಾ ಊಡಿದಂಪದಾದಿ—(ಪಾ. ಸೂ ೬-೧-೧೭೧) ಸೂತ್ರದಿಂದ ವಿಭಕ್ತಿಯು ಉದಾತ್ತವಾಗುತ್ತದೆ.

ಜಜ್ಞಿಷೆ—ಜನೀ ಪ್ರಾದುರ್ಭಾವೆ ಧಾತು ದಿವಾದಿ ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ ಬರುತ್ತದೆ. ಥಾಸಃ ಸೆ ಎಂಬುದರಿಂದ ಅದಕ್ಕೆ ಸೆ ಆದೇಶ ಬರುತ್ತದೆ. ಆರ್ಧಧಾತುಕವಾದುದರಿಂದ ಇಡಾಗಮ ಬರುತ್ತದೆ. ಧಾತುವಿಗೆ ಲಿಣ್ಣಿಮಿತ್ತಕದ್ವಿತ್ವ ಹಲಾದಿಶೇಷಗಳು ಬಂದರೆ ಜಜನ್+ಇಸೆ ಎಂದಿರುತ್ತದೆ.



CC-0. Jangamwadi Math Collection. Digitized by eGangotri

ಗಮಹನಜನ—(ಪಾ. ಸೂ. ೬-೪-೯೮) ಎಂಬುದರಿಂದ ಲಿಟ್ ಪರದಲ್ಲಿರುವಾಗ ಧಾತುವಿನ ಉಪಧಾಕ್ಕೆ ಲೋಪ ಬರುತ್ತದೆ. ಶ್ಚುತ್ವದಿಂದ ನಕಾರಕ್ಕೆ ಞಕಾರ ಬರುತ್ತದೆ. ಜಕಾರ ಞಕಾರ ಯೋಗದಿಂದ ಜ್ಞಕಾರವಾಗುತ್ತದೆ. ಇಣ್ ಪರದಲ್ಲಿರುವುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ ಬಂದರೆ ಜಜ್ಞಿಷೆ ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ತ್ವೇ ವಿಶ್ವಾ ತವಿಷೀ ಸಧ್ರ್ಯಗ್ಘಿತಾ ತವ ರಾಧಃ ಸೋಮಪೀಥಾಯ ಹರ್ಷತೇ ।

ತವ ವಜ್ರಶ್ಚಿಕಿತೇ ಬಾಹ್ವೋರ್ಹಿತೋ ವೃಶ್ಚಾ ಶತ್ರೋರವ ವಿಶ್ವಾನಿ ವೃಷ್ಣ್ಯಾ ॥ ೭ ॥

॥ ಪದಪಾಠಃ ॥

ತ್ವೇ ಇತಿ । ವಿಶ್ವಾ । ತವಿಷೀ । ಸಧ್ರ್ಯಕ್ । ಹಿತಾ । ತವ । ರಾಧಃ । ಸೋಮಪೀಥಾಯ । ಹರ್ಷತೇ ।

ತವ । ವಜ್ರಃ । ಚಿಕಿತೇ । ಬಾಹ್ವೋಃ । ಹಿತಃ । ವೃಶ್ಚ । ಶತ್ರೋಃ । ಅವ । ವಿಶ್ವಾನಿ । ವೃಷ್ಣ್ಯಾ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವೇ ತ್ವಯಿ ವಿಶ್ವಾ ತವಿಷೀ ಸರ್ವಂ ಬಲಂ ಸಧ್ರ್ಯಕ್ ಸಧ್ರೀಚೀನಂ ಅಪರಾಙ್ಮುಖಂ ಯಥಾ ಭವತಿ ತಥಾ ಹಿತಾ ನಿಹಿತಂ । ತಥಾ ತವ ರಾಧೋ ಮನಃ ಸೋಮಪೀಥಾಯ ಸೋಮಪಾನಾಯ ಹರ್ಷತೇ । ಹೃಷ್ಯತಿ । ಕಿಂಚ ತವ ಬಾಹ್ವೋರ್ಹಸ್ತಯೋರ್ಹಿತೋಽವಸ್ಥಿತೋ ವಜ್ರಶ್ಚಿಕಿತೇ। ಅಸ್ಮಾಭಿರ್ಜ್ಞಾಯತೇ । ಅತಃ ಶತ್ರೋಃ ಶಾತಯಿತುರ್ವೃತ್ರಾದೇಃ ವಿಶ್ವಾನಿ ಸರ್ವಾಣಿ ವೃಷ್ಣ್ಯಾ ವೃಷ್ಣ್ಯಾನಿ ವೀರ್ಯಾಣ್ಯವವೃಶ್ಚ । ಛೇದನಂ ಕುರು ॥ ಸಹಾಂಚತೀತಿ ಸಧ್ರ್ಯಕ್ । ಅಂಚತೇರೃತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ಸಮಾಸೇ ಸಹಸ್ಯ ಸಧ್ರಿರಿತಿ ಸಹಶಬ್ದಸ್ಯ ಸಧ್ರ್ಯಾದೇಶಃ । ಚೋಃ ಕುರಿತಿ ಕುತ್ವಂ। ಕೃದುತ್ತರಪದಪ್ರಕೃತಿಸ್ವರತ್ವೇ ಪ್ರಾಪ್ತೇಽದ್ರಿಸಧ್ರ್ಯೋರಂತೋದಾತ್ತತ್ವನಿಪಾತನಂ ಕೃತ್ಸ್ವ-



CC-0. Jangamwadi Math Collection. Digitized by eGangotri

ರನಿವೃತ್ತ್ಯರ್ಥಂ । ಪಾ. ೬.೩-೯೫.೧ । ಇತಿ ವಚನಾತ್ಸಧ್ರ್ಯಾದೇಶೋಽಂತೋದಾತ್ತಃ । ತಸ್ಯ ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ರಾಧಃ । ರಾಧ್ನೋತಿ ಸಮೃದ್ಧೋ ಭವತ್ಯನೇನ । ರಾಧೋಽತ್ರ ಮನ ಉಚ್ಯತೇ । ಅಸುನೋ ನಿತ್ತ್ವಾದಾದ್ಯುದಾತ್ತತ್ವಂ । ಸೋಮಪೀಥಾಯ । ಪಾ ಪಾನೇ । ಪಾತೃತುದಿವಚೀತ್ಯಾದಿನಾ ಥಕ್ಪ್ರತ್ಯಯಃ । ಘುಮಾಸ್ಥೇತೀತ್ವಂ । ಹರ್ಷತೇ । ಹೃಷ ತುಷ್ಟೌ । ಶ್ಯನಿ ಪ್ರಾಪ್ತೇ ವ್ಯತ್ಯಯೇನ ಶಪ್ । ಆತ್ಮನೇಪದಂ ಚ । ಚಿಕಿತೇ । ಕಿತ ಜ್ಞಾನೇ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಕರ್ಮಣಿ ಲಿಟ್ । ಬಾಹ್ವೋಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ವೃಶ್ಚ । ಓವ್ರಶ್ಚೂ ಛೇದನೇ । ತೌದಾದಿಕಃ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ವಿಕರಣಸ್ವರಃ । ಸಂಹಿತಾಯಾಂ ದ್ವ್ಯಚೋಽತಸ್ತಿಙ ಇತಿ ದೀರ್ಘತ್ವಂ । ವೃಷ್ಣ್ಯಾ । ವೃಷ ಸೇಚನೇ । ಔಣಾದಿಕೋ ನಕ್ಪ್ರತ್ಯಯಃ । ತತ್ರ ಭವಾನಿ ವೃಷ್ಣ್ಯಾನಿ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಶೇಶ್ಛಂದಸೀತಿ ಶೇರ್ಲೋಪಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವೇ—ನಿನ್ನಲ್ಲಿ । ವಿಶ್ವಾ ತವಿಷೀ—ಸಮಸ್ತ ಬಲವೂ । ಸಧ್ರ್ಯಕ್ ಹಿತಾ—ಒಟ್ಟಿಗೆ ಶೇಖರಿತವಾಗಿಡಲ್ಪಟ್ಟಿದೆ । ತವ—ನಿನ್ನ । ರಾಧಃ—ಮನಸ್ಸು । ಸೋಮಪೀಥಾಯ—ಸೋಮರಸಪಾನಕ್ಕಾಗಿ । ಹರ್ಷತೇ—ಹಿಗ್ಗುತ್ತದೆ । ತವ ಬಾಹ್ವೋಃ—ನಿನ್ನ ಕೈಗಳಲ್ಲಿ । ಹಿತಃ—ಇಟ್ಟುಕೊಂಡಿರತಕ್ಕ । ವಜ್ರಃ—ವಜ್ರಾಯುಧವು । ಚಿಕಿತೇ—(ನಮ್ಮ) ತಿಳಿವಳಿಕೆಗೆ ಬಂದಿದೆ (ಆದರಿಂದ) । ಶತ್ರೋಃ—ಹಿಂಸಕನಾದ ಶತ್ರುವಿನ । ವಿಶ್ವಾನಿ ವೃಷ್ಣ್ಯಾ— ಸಕಲ ವೀರ್ಯಗಳನ್ನೂ । ಅವ ವೃಶ್ಚ—ಛೇದನ ಮಾಡು ।

॥ ಭಾವಾರ್ಥ ॥

ಎಲೈ ಇಂದ್ರನೇ, ಸಮಸ್ತ ಬಲವೂ ಒಟ್ಟಿಗೆ ನಿನ್ನಲ್ಲಿ ಶೇಖರಿತವಾಗಿದೆ. ನಿನ್ನ ಮನಸ್ಸು ಸೋಮರಸಪಾನಕ್ಕಾಗಿ ಹಿಗ್ಗುತ್ತಿದೆ. ನೀನು ಕೈಗಳಲ್ಲಿ ವಜ್ರಾಯುಧವನ್ನಿಟ್ಟುಕೊಂಡಿರುವುದನ್ನು ನಾವು ಬಲ್ಲೆವು. ಅದರಿಂದ ಹಿಂಸಕನಾದ ಶತ್ರುವಿನ ಸಕಲ ವೀರ್ಯಗಳನ್ನೂ ಛೇದನಮಾಡು.

## English Translation.

O Indra, all vigour is fully concentrated in you; your will delight to drink the soma juice; it is known by us that the thunderbolt is deposited in your hands; cut off all prowess from the enemy.

॥ ವಿಶೇಷ ವಿಷಯಗಳು ॥

ತ್ವೇ—ತ್ವಯಿ—ಯುಷ್ಮಚ್ಛಬ್ದವು ವೈದಿಕಪ್ರಕ್ರಿಯಾನುಸಾರವಾಗಿ ಸಪ್ತಮೀ ವಿಭಕ್ತಿಯಲ್ಲಿ ತ್ವಯಿ ಎಂಬುದಕ್ಕೆ ಬದಲಾಗಿ ತ್ವೇ ಎಂಬ ರೂಪವನ್ನು ಪಡೆದಿರುವುದು.





CC-0. Jangamwadi Math Collection. Digitized by eGangotri

ಸಧ್ರ್ಯಕ್—ಸಧ್ರೀಚೀನಂ ಅಪರಾಙ್ಮುಖಂ ಯಥಾ ಭವತಿ ತಥಾ ಈ ಪದವು ಜೊತೆಯಲ್ಲಿಯೇ ಇದ್ದು ಯಾವ ಕಾರಣದಿಂದಲೂ ಎದುರಾಗದಿರುವ ಬಲಿಷ್ಠವಾದ ಮತ್ತು ಪ್ರಾಮಾಣಿಕವಾದ ಸೈನ್ಯವು ಎಂಬರ್ಥವನ್ನು ಕೊಡುವುದು. ದೇವೇಂದ್ರನ ಬಲದ ವಿಶೇಷ ಗುಣವನ್ನೆಲ್ಲಾ ಸುಲಭವಾದ ಮಾತಿನಿಂದ ತಿಳಿಸುವ ಪದವಿದು.

ಸೋಮಪೀಥಾಯೆ—ಇಲ್ಲಿ ಪೀಥ ಶಬ್ದವು ಪಾನಾರ್ಥದಲ್ಲಿ ಉಪಯೋಗಿಸಲ್ಪಟ್ಟದೆ.

ವೃಷ್ಣ್ಯಾ—ವೃಷ್ಣ್ಯಾನಿ ವೀರ್ಯಾಣಿ—ವೃಷ ಸೇಚನೇ ಎಂಬ ಸೇಚಕಾರ್ಥವಾದ ವೃಷಧಾತುವಿನಿಂದ ನಿಷ್ಪಾದಿತವಾದ ವೃಷ್ಣ್ಯಶಬ್ದವು ವೀರ್ಯ ಎಂಬರ್ಥವನ್ನು ಕೊಡುವುದು.

ವೃಕ್ಷ—ಇದಕ್ಕೆ ಕತ್ತರಿಸು ಎಂದರ್ಥ. ಸಂಹಿತೆಯಲ್ಲಿ ಮಾತ್ರ ಇದು ದ್ವ್ಯಚೋತಸ್ತಿಙಃ ಎಂಬ ಸೂತ್ರದಿಂದ ದೀರ್ಘವಾಗಿ ಉಚ್ಚರಿಸಲ್ಪಡುವುದು.

॥ ವ್ಯಾಕರಣಪ್ರಕ್ರಿಯಾ ॥

ಸಧ್ರ್ಯಕ್—ಸಹ ಅಂಚತಿ ಇತಿ ಸಧ್ರ್ಯಕ್ ಅಂಚು ಗತಿಪೂಜನಯೋಃ ಧಾತು. ಋತ್ವಿಕ್ ದಧೃಕ್ (ಪಾ. ಸೂ. ೩-೨-೫೯) ಸೂತ್ರದಿಂದ ಸುಬಂತವು ಉಪಪದವಾಗಿರುವಾಗ ಅಂಚು ಧಾತುವಿಗೆ ಕ್ವಿನ್ ಪ್ರತ್ಯಯ ಬರುತ್ತದೆ. ಕಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಅನಿದಿತಾಂ ಎಂಬ ಸೂತ್ರದಿಂದ ಅಂಚುಧಾತುವಿನ ಉಪಧೆಯಾದ ನಕಾರಕ್ಕೆ ಲೋಪ ಬರುತ್ತದೆ. ಅಚ್ ಎಂದು ರೂಪವಾಗುತ್ತದೆ. ಸಹ ಎಂಬುದರೊಡನೆ ಸಮಾಸಮಾಡಿದಾಗ ಸಹಸ್ಯ ಸಧ್ರಿಃ (ಪಾ. ಸೂ. ೬-೩-೯೫) ಅಂಚುಧಾತು ಪರದಲ್ಲಿರುವಾಗ ಸಹ ಎಂಬುದಕ್ಕೆ ಸಧ್ರಿ ಆದೇಶಬರುತ್ತದೆ ಎಂಬುದರಿಂದ ಸಧ್ರ್ಯಾದೇಶ ಬಂದರೆ ಸಧ್ರ್ಯಚ್ ಶಬ್ದವಾಗುತ್ತದೆ. ಸು ಪರದಲ್ಲಿರುವಾಗ ಹಲಙ್ಯಾಭ್ಯೋ ಸೂತ್ರದಿಂದ ಸುವಿಗೆ ಲೋಪ ಬರುತ್ತದೆ. ಚೋಕುಃ ಎಂಬುದರಿಂದ ಪದಾಂತವಾದುದರಿಂದ ಚಕಾರಕ್ಕೆ ಕುತ್ವದಿಂದ ಕಕಾರ ಬರುತ್ತದೆ. ಸಧ್ರ್ಯಕ್ ಎಂದು ರೂಪವಾಗುತ್ತದೆ. ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರವು ಪ್ರಾಪ್ತವಾದರೆ, ಅದ್ರಿಸಧ್ರ್ಯೋರಂತೋದಾತ್ತತ್ವನಿಪಾತನಂ ಕೃತ್‌ಸ್ವರ ನಿವೃತ್ತ್ಯರ್ಥಂ (ಪಾ. ಸೂ. ೬-೩-೯೫-೧) ಕೃತ್ ಸ್ವರಕ್ಕೆ ಬಾಧಕವಾಗಿ ಅದ್ರಿ ಸಧ್ರಿ ಆದೇಶಗಳಿಗೆ ಅಂತೋದಾತ್ತ ಸ್ವರವನ್ನು ನಿಪಾತ ಮಾಡಬೇಕು ಎಂದು ವಚನಾಂತರವಿರುವುದರಿಂದ ಇಲ್ಲಿ ಪೂರ್ವಪದವಾದ ಸಧ್ರಿ ಆದೇಶಕ್ಕೆ ಅಂತೋದಾತ್ತಸ್ವರ ಬರುತ್ತದೆ. ಅದರೊಡನೆ ಧಾತುವಿನ ಅನುದಾತ್ತವಾದ ಅಕಾರದೊಡನೆ ಯಣ್ ಸಂಧಿಮಾಡಿರುವುದರಿಂದ ಉದಾತ್ತಸ್ವರತಯೋರ್ಯಣಃ (ಪಾ. ಸೂ. ೮-೨-೪) ಎಂಬುದರಿಂದ ಸ್ವರಿತವು ಬರುತ್ತದೆ. ಸ್ವರಿತಾಂತವಾದ ಪದವಾಗುತ್ತದೆ.

ರಾಧಃ—ರಾಧ ಸಂಸಿದ್ಧೌ ಧಾತು. ರಾಧ್ನೋತಿ ಸಮೃದ್ಧೋ ಭವತಿ ಅನೇನ ರಾಧಃ. ಇದರಿಂದ ಅಭಿವೃದ್ಧವಾಗುತ್ತದೆ ಎಂದು ತಾತ್ಪರ್ಯ. ರಾಧ ಶಬ್ದದಿಂದ ಇಲ್ಲಿ ಮನಸ್ಸು ಅಭಿಹಿತವಾಗುತ್ತದೆ. ಸರ್ವಧಾತುಭ್ಯೋಽಸುನ್ (ಉ. ಸೂ. ೪-೬೨೮) ಸೂತ್ರದಿಂದ ಅಸುನ್ ಪ್ರತ್ಯಯ ಬರುತ್ತದೆ. ರಾಧಸ್ ಎಂಬ ಸಾಂತವಾದ ಪದವಾಗುತ್ತದೆ. ಅಸುನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

**ಸೋಮಪೀಥಾಯ**—ಸೋಮಸ್ಯ ಪೀಥಃ ಸೋಮಪೀಥಃ ತಸ್ಮೈ ಸೋಮಪೀಥಾಯ. ಪಾ. ಪಾನೆ ಧಾತು ಭ್ವಾದಿ ಇದಕ್ಕೆ ಪಾತೃತುದಿವಚಿ—(ಉ. ಸೂ. ೧-೧೬೪) ಎಂಬುದರಿಂದ ಥಕ್ ಪ್ರತ್ಯಯ ಬರುತ್ತದೆ. ಪಾ+ಥ ಎಂದಿರುವಾಗ ಘುಮಾಸ್ಥಾಗಾಪಾ (ಪಾ. ಸೂ. ೬-೪-೬೬) ಸೂತ್ರದಿಂದ ಕಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಆಕಾರಕ್ಕೆ ಈತ್ವ ಬರುತ್ತದೆ. ಚತುರ್ಥಿಯಲ್ಲಿ ಸೋಮಪೀಥಾಯ ಎಂದು ರೂಪವಾಗುತ್ತದೆ.

**ಹರ್ಷತೆ**—ಹೃಷ ತುಷ್ಟೌ ಧಾತು ದಿವಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ಹರ್ಷತೆ ಎಂದು ರೂಪವಾಗುತ್ತದೆ. ದಿವಾದಿಗೆ ಶ್ಯನ್ ವಿಕರಣವು ವಿಹಿತವಾಗಿದೆ. ಇಲ್ಲಿ ವ್ಯತ್ಯಯೋಬಹುಲಂ ಸೂತ್ರದಿಂದ ಶ್ಯನ್ನಿನ ಸ್ಥಾನದಲ್ಲಿ ಶಪ್ ಬರುತ್ತದೆ. ಆದುದರಿಂದ ಧಾತುವಿಗೆ ಗುಣ ಬರುತ್ತದೆ. ನಿಘಾತಸ್ವರ ಬಂದಿದೆ.

**ಚಿಕಿತೆ**—ಕಿತ ಜ್ಞಾನೆ ಧಾತು. ಭ್ವಾದಿ ಛಂದಸಿ ಲುಙ್‌ಲಙ್‌ಲಿಟಃ ಸೂತ್ರದಿಂದ ವರ್ತಮಾನಾರ್ಥದಲ್ಲಿ ಕರ್ಮಣಿಯಲ್ಲಿ ಲಿಟ್ ಬರುತ್ತದೆ. ಧಾತುವಿಗೆ ದ್ವಿತ್ವ ಬಂದು ಹಲಾದಿಶೇಷ ಅಭ್ಯಾಸ ಚುತ್ವಬಂದರೆ ಚಿಕಿತೆ ಎಂದು ರೂಪವಾಗುತ್ತದೆ.

**ಬಾಹ್ವೋಃ**—ಬಾಹುಶಬ್ದದ ಷಷ್ಠೀ ದ್ವಿವಚನದಲ್ಲಿ ರೂಪವಾಗುತ್ತದೆ. ಉದಾತ್ತಯಣೋಹಲ್-ಪೂರ್ವಾತ್ (ಪಾ. ಸೂ. ೬-೧-೧೪) ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವೃಶ್ಚ**—ಓವ್ರಶ್ಚೂ ಛೇದನೆ ಧಾತು. ತುದಾದಿ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ ಬರುತ್ತದೆ. ತುದಾದಿಭ್ಯಃಶಃ ಎಂಬುದರಿಂದ ಶ ವಿಕರಣ ಪ್ರತ್ಯಯ ಬರುತ್ತದೆ. ಅದು ಅಪಿತ್ತಾದುದರಿಂದ ಙಿತ್ತಾಗುತ್ತದೆ. ಆದುದರಿಂದ ಗ್ರಹಿಜ್ಯಾವಯಿ (ಪಾ. ಸೂ. ೬-೧-೧೬) ಸೂತ್ರದಿಂದ ಧಾತುವಿಗೆ ಸಂಪ್ರಸಾರಣ ಬರುತ್ತದೆ. ರೇಫಕ್ಕೆ ಋಕಾರ ಸಂಪ್ರಸಾರಣ ಬಂದರೆ ವೃಶ್ಚ್+ಅ+ಸಿ ಎಂದಾಗುತ್ತದೆ. ಸಿಪಿಗೆ ಹಿ ಆದೇಶ ಬಂದು ಅದಂತದ ಪರದಲ್ಲಿ ಬಂದುದರಿಂದ ಅತೋಹೇಃ ಸೂತ್ರದಿಂದ ಲೋಪವನ್ನು ಹೊಂದುತ್ತದೆ. ವೃಶ್ಚ ಎಂದು ರೂಪವಾಗುತ್ತದೆ. ವಿಕರಣಸ್ವರವು ಸತಿಶಿಷ್ಟವಾಗುವುದರಿಂದ ಅಂತೋದಾತ್ತವಾಗುತ್ತದೆ. ಸಂಹಿತಾಪಾಠದಲ್ಲಿ ದ್ವ್ಯಚೋತಸ್ತಿಙಃ ಸೂತ್ರದಿಂದ ದೀರ್ಘವು ಬರುತ್ತದೆ.

**ವೃಷ್ಣ್ಯಾ**—ವೃಷ ಸೇಚನೆ ಧಾತು ಚುರಾದಿ ಇದಕ್ಕೆ ಉಣಾದಿಸಿದ್ಧವಾದ ನಕ್ ಪ್ರತ್ಯಯ ಬಂದರೆ ವೃಷ್ಣ ಎಂದು ರೂಪವಾಗುತ್ತದೆ. ವೃಷ್ಣೇ ಭವಾನಿ ವೃಷ್ಣ್ಯಾನಿ. ಅಲ್ಲಿ ಹುಟ್ಟಿದುದು ಎಂದರ್ಥ. ಭವೇ ಛಂದಸಿ (ಪಾ. ಸೂ. ೪-೪-೧೧೦) ಸೂತ್ರದಿಂದ ಭವಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಯಸ್ಯೇತಿಚ ಸೂತ್ರದಿಂದ ಅಲೋಪ ಬಂದರೆ ವೃಷ್ಣ್ಯ ಎಂದು ರೂಪವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ಶಸಿಗೆ ಶಿ ಆದೇಶ ಬಂದರೆ ಶೇಶ್ಛಂದಸಿ ಸೂತ್ರದಿಂದ ಲೋಪಬರುತ್ತದೆ. ವೃಷ್ಣ್ಯಾ ಎಂದು ರೂಪವಾಗುತ್ತದೆ. ಯತೋಽನಾವಃ (ಪಾ. ಸೂ. ೬-೧-೨೧೩) ಸೂತ್ರದಿಂದ ಯತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತ ಸ್ವರವು ಪ್ರತ್ಯಯ ಸ್ವರಕ್ಕೆ ಅಪವಾದವಾಗಿ ಬರುತ್ತದೆ.





CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ವಿ ಜಾನೀಹ್ಯಾರ್ಯಾನ್ಯೇ ಚ ದಸ್ಯವೋ ಬರ್ಹಿಷ್ಮತೇ ರನ್ಧಯಾ ಶಾಸ-
ದವ್ರತಾನ್ ।
ಶಾಕೀ ಭವ ಯಜಮಾನಸ್ಯ ಚೋದಿತಾ ವಿಶ್ವೇತ್ತಾ ತೇ ಸಧಮಾದೇಷು
ಚಾಕನ ॥ ೮ ॥

॥ ಪದಪಾಠಃ ॥

ವಿ । ಜಾನೀಹಿ । ಆರ್ಯಾನ್ । ಯೇ । ಚ । ದಸ್ಯವಃ । ಬರ್ಹಿಷ್ಮತೇ । ರಂಧಯ ।
ಶಾಸತ್ । ಅವ್ರತಾನ್ ।
ಶಾಕೀ । ಭವ । ಯಜಮಾನಸ್ಯ । ಚೋದಿತಾ । ವಿಶ್ವಾ । ಇತ್ । ತಾ । ತೇ ।
ಸಧಽಮಾದೇಷು । ಚಾಕನ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಾರ್ಯಾನ್ವಿದುಷೋಽನುಷ್ಠಾತೄನ್ವಿ ಜಾನೀಹಿ । ವಿಶೇಷೇಣ ಬುಧ್ಯಸ್ವ । ಯೇ ಚ ದಸ್ಯವಸ್ತೇಷಾಮನುಷ್ಠಾತೄಣಾಮುಪಕ್ಷಪಯಿತಾರಃ ಶತ್ರವಸ್ತಾನಪಿ ವಿ ಜಾನೀಹೀತಿ ಶೇಷಃ । ಜ್ಞಾತ್ವಾ ಚ ಬರ್ಹಿಷ್ಮತೇ ಬರ್ಹಿಷಾ ಯಜ್ಞೇನ ಯುಕ್ತಾಯ ಯಜಮಾನಾಯಾವ್ರತಾನ್ । ವ್ರತಮಿತಿ ಕರ್ಮನಾಮ । ಕರ್ಮವಿರೋಧಿನಸ್ತಾನ್ದಸ್ಯೂನ್ ರಂಧಯ । ಹಿಂಸಾಂ ಪ್ರಾಪಯ । ಯದ್ವಾ । ಯಜಮಾನಸ್ಯ ವಶಂ ಗಮಯ । ರಧ್ಯತಿರ್ವಶಗಮನೇ । ನಿ. ೬-೩೨ । ಇತಿ ಯಾಸ್ಕಃ । ಕಿಂ ಕುರ್ವನ್ । ಶಾಸತ್ ದುಷ್ಟಾನಾಮನುಶಾಸನಂ ನಿಗ್ರಹಂ ಕುರ್ವನ್ । ಅತಃ ಶಾಕೀ ಶಕ್ತಿಯುಕ್ತಸ್ತ್ವಂ ಯಜಮಾನಸ್ಯ ಚೋದಿತಾ ಪ್ರೇರಕೋ ಭವ । ಯಜ್ಞವಿಘಾತಕಾನಸುರಾಂಸ್ತಿರಸ್ಕೃತ್ಯ ಯಜ್ಞಾನ್ಯಜಮಾನೈಃ ಸಮ್ಯಗನುಷ್ಠಾಪಯೇತಿ ಭಾವಃ । ಅಹಮಪಿ ಸ್ತೋತಾ ತೇ ತವ ತಾ ತಾನಿ ಪೂರ್ವೋಕ್ತಾನಿ ಕರ್ಮಾಣಿ ವಿಶ್ವೇತ್ ಸರ್ವಾಣ್ಯೇವ ಸಧಮಾದೇಷು ಸಹಮದನಯುಕ್ತೇಷು ಯಜ್ಞೇಷು ಸ್ತೋತುಂ ಚಾಕನ । ಕಾಮಯೇ । ಜಾನೀಹಿ । ಜ್ಞಾ ಅವಬೋಧನೇ । ಕ್ರ್ಯಾದಿಕಃ । ಜ್ಞಾಜನೋರ್ಜಾ ಇತಿ ಜಾದೇಶಃ । ಅತ್ರ ಪ್ಲೀ ಗತೌ ವೃತ್ । ಧಾ ೩೧-೩೨ । ಇತಿ ವೃತ್ಕರಣಂ ಲ್ವಾದಿಪರಿಸಮಾಪ್ತ್ಯರ್ಥಮೇವ ನ ಪ್ವಾದಿಪರಿಸಮಾಪ್ತ್ಯರ್ಥಮಿತಿ ಯೇಷಾಂ ದರ್ಶನಂ



CC-0. Jangamwadi Math Collection. Digitized by eGangotri

ಽಷಾಂ ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವೇನ ಭವಿತವ್ಯಂ । ನ್ಯೆವಂ । ಜ್ಞಾಜನೋರ್ಜಾ ಇತಿ ದೀರ್ಘೋಚ್ಚಾರಣಸಾಮರ್ಥ್ಯಾತ್ । ಜನೀ ಪ್ರಾದುರ್ಭಾವ ಇತ್ಯಸ್ಯ ತು ದೀರ್ಘೋಚ್ಚಾರಣಮಂತರಣಾಪ್ಯತೋ ದೀರ್ಘೋ ಯಙಿ । ಪಾ. ೭-೩-೧೦೧ । ಇತ್ಯನೇನೈವ ದೀರ್ಘಃ ಸಿಧ್ಯತಿ । ತಸ್ಮಾದ್ದೀರ್ಘೋಚ್ಚಾರಣವೈಯರ್ಥ್ಯಪ್ರಸಂಗಾದತ್ರ ಹ್ರಸ್ವೋ ನ ಭವತೀತಿ ಸಿದ್ಧಂ । ಬರ್ಹಿಷ್ಮತೇ । ತಸೌ ಮತ್ವರ್ಥ ಇತಿ ಭತ್ವಾತ್ ರುತ್ವಜಶ್ತ್ವಯೋರಭಾವಃ । ರಂಧಯ । ರಧ ಹಿಂಸಾಸಂರಾಧ್ಯೋಃ । ಶಾಸತ್ । ಶಾಸು ಅನುಶಿಷ್ಟೌ । ಶಶರ್ಯದಾದಿತ್ವಾಚ್ಛಪೋ ಲುಕ್ । ಜಕ್ಷಿತ್ಯಾದಯಃ ಷಟ್ । ಪಾ. ೬-೧-೬ । ಇತ್ಯಭ್ಯಸ್ತಸಂಜ್ಞಾಯಾಂ ನಾಭ್ಯಸ್ತಾಚ್ಛತುರಿತಿ ನುಮ್ಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಶಾಕೀ । ಶಕ್ಲೃ ಶಕ್ತೌ । ಭಾವೇ ಘಞ್ । ತತೋ ಮತ್ವರ್ಥೀಯ ಇನಿಃ । ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವಾ । ವೃಷಾದಿರ್ದ್ರಷ್ಟವ್ಯಃ । ವಿಶ್ವಾ ತಾ । ಉಭಯತ್ರ ಶೇಶ್ಛಂದಸೀತಿ ಶೇರ್ಲೋಪಃ । ಸಧಮಾದೇಷು । ಸಹ ಮಾದ್ಯಂತ್ಯೇಷ್ವಿತಿ ಸಧಮಾದಾ ಯಜ್ಞಾಃ । ಅಧಿಕರಣೇ ಘಞ್ಪ್ರತ್ಯಯಃ । ನನು ಮದೋಽನುಪಸರ್ಗ ಇತ್ಯಪ್ಪ್ರತ್ಯಯೇನ ಭವಿತವ್ಯಂ । ನ್ಯೆವಂ । ವ್ಯಧಜಪೋರನುಪಸರ್ಗೇ । ಪಾ. ೩-೩-೬೧ । ಇತ್ಯತ್ರೈವ ಮದ ಇತಿ ವಕ್ತವ್ಯೇ ಯನ್ಮದೋಽನುಪಸರ್ಗ ಇತಿ ಪೃಥಗುಪಾದಾನಂ ತದ್ವಞಪಿ ಪಕ್ಷೇ ಯಥಾ ಸ್ಯಾದಿತಿ ನ್ಯಾಸಕಾರೇಣ ಪ್ರತ್ಯಪಾದೀತ್ಯಸ್ಮಾಭಿರ್ಧಾತುವೃತ್ತಾವುಕ್ತಂ । ಸಧಮಾದಸ್ಥಯೋಶ್ಛಂದಸೀತಿ ಸಹಶಬ್ದಸ್ಯ ಸಧಾದೇಶಃ । ಚಾಕನ । ಕನ ದೀಪ್ತಿಕಾನ್ತಿಗತಿಷು । ಅತ್ರ ಕಾಂತ್ಯರ್ಥಃ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲಿಟ್ । ಣಲುತ್ತಮೋ ವಾ । ಪಾ. ೭-೧-೯೧ । ಇತಿ ಣಿತ್ತ್ವಸ್ಯ ವಿಕಲ್ಪನಾದ್ವೃದ್ಧ್ಯಭಾವಃ । ತುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ, ನೀನು) ಆರ್ಯಾನ್—(ಜ್ಞಾನಿಗಳೂ, ಅನುಷ್ಠಾತೃಗಳೂ ಆದ) ಆರ್ಯರನ್ನು । ವಿ ಜಾನೀಹಿ—ವಿವೇಚನೆಯಿಂದ ತಿಳಿ । ಯೇ ಚ ದಸ್ಯವಃ—ಯಾರು (ಇಂತಹ ಆರ್ಯರನ್ನು ಹಿಂಸಿಸುವ) ಕಳ್ಳರಾದ ಶತ್ರುಗಳೋ (ಅವರನ್ನೂ ವಿವೇಚನೆಯಿಂದ ತಿಳಿ ಅನಂತರ) । ಬರ್ಹಿಷ್ಮತೇ—ಯಜ್ಞಯುಕ್ತನಾದ ಯಜಮಾನನಿಗೆ । ಅವ್ರತಾನ್—ಕರ್ಮವಿರೋಧಿಗಳಾದ ದಸ್ಯುಗಳನ್ನು । ಶಾಸತ್—ಶಿಕ್ಷಿಸುತ್ತ (ನಿಗ್ರಹಿಸುತ್ತ) । ರಂಧಯ—ಅಧೀನರಾಗುವಂತೆ ಮಾಡು. (ಅಥವಾ ಅವನಿಗಾಗಿ ಅವರನ್ನು ಹಿಂಸಿಸಿ ನಾಶಮಾಡು) । ಶಾಕೀ—ಶಕ್ತಿಯುತನಾದ ನೀನು । ಯಜಮಾನಸ್ಯ—ಯಜ್ಞಕರ್ತನಿಗೆ । ಚೋದಿತಾ ಭವ —ಪ್ರೇರಕನಾಗು, (ಭಕ್ತನಾದ ನಾನೂ ಕೂಡ) । ತೇ—ನಿನ್ನ । ತಾ ವಿಶ್ವೇತ್—ಹಿಂದೆ ವರ್ಣಿತಗಳಾದ ಸಕಲ ಕರ್ಮಗಳನ್ನೂ । ಸಧಮಾದೇಷು—(ನಿನಗೆ) ತೃಪ್ತಿಕೊಡತಕ್ಕ ಯಜ್ಞಗಳಲ್ಲಿ । ಚಾಕನ—(ಕೊಂಡಾಡಲು) ಇಷ್ಟಪಡುತ್ತೇನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ಜ್ಞಾನಿಗಳೂ ಯಜ್ಞಾನುಷ್ಠಾನಮಾಡುವವರೂ ಆದ ಆರ್ಯರಾರು, ಯಜ್ಞಾನುಷ್ಠಾನಮಾಡದೇ ಈ ಆರ್ಯರನ್ನು ಹಿಂಸಿಸುವ ದಸ್ಯುಗಳಾರು ಎಂಬುದನ್ನು ವಿವೇಚನೆಯಿಂದ ತಿಳಿ. ಕರ್ಮವಿರೋಧಿಗಳಾದ ದಸ್ಯುಗಳನ್ನು ನಿಗ್ರಹಿಸಿ ಅವರನ್ನು ಯಜ್ಞಕರ್ತನಾದ ಯಜಮಾನನಿಗೆ ಅಧೀನರಾಗುವಂತೆ



CC-0. Jangamwadi Math Collection. Digitized by eGangotri

ಮಾಡು. ಮತ್ತು ಬಲಶಾಲಿಯಾದ ನೀನು ಯಜಮಾನನು ಯಜ್ಞವನ್ನು ನೆರವೇರಿಸುವಂತೆ ಪ್ರೇರಿಸು. ನಾನೂ ಕೂಡ ಹಿಂದೆ ವರ್ಣಿತಗಳಾದ ನಿನ್ನ ಸಕಲ ಕರ್ಮಗಳನ್ನೂ ನಿನಗೆ ತೃಪ್ತಿಕೊಡತಕ್ಕ ಯಜ್ಞಗಳಲ್ಲಿ ಕೊಂಡಾಡ ಲಿಪ್ಸಪಡುತ್ತೇನೆ.

## English Translation.

Discriminate between the Aryas, and they who are Dasyus; restraining those who perform no religious rites, compel them to submit to the performer of sacrifices; you are powerful, be the encourage of the sacrificer; I am desirous of celebrating all your deeds in ceremonies that give you satisfaction.

### ವಿಶೇಷ ವಿಷಯಗಳು

ಆರ್ಯಾನ್—ಆರ್ಯರೆಂದರೆ ಯಜ್ಞಯಾಗಾದಿವೇದೋಕ್ತ ಕರ್ಮಗಳಲ್ಲಿ ಆಸಕ್ತರಾಗಿ ಅವುಗಳನ್ನು ಆಚರಿಸುವ ಸಜ್ಜನರೆಂದೂ, ದಸ್ಯುಗಳೆಂದರೆ ಆರ್ಯರ ಕರ್ಮಾಚರಣೆಗೆ ವ್ಯತಿರಿಕ್ತವಾಗಿ ಆಚರಿಸುತ್ತಾ ಯಜ್ಞಾದಿ ಕರ್ಮಗಳನ್ನು ಮಾಡದೆ ಇರುವವರೆಂದೂ, ವ್ಯಕ್ತವಾಗುವುದು. ಮತ್ತು ಈ ದಸ್ಯುಗಳು ಈ ದೇಶದ ಪೂರ್ವ ನಿವಾಸಿಗಳಾದ ಕಪ್ಪುಜನರೆಂದೂ, ಆರ್ಯರಿಗೆ ವಿರೋಧಿಗಳೆಂದೂ, ಆರ್ಯರೊಡನೆ ಸಂಪರ್ಕವನ್ನಿಟ್ಟುಕೊಳ್ಳದೆ ಅವರಿಗೆ ವಿಧವಿಧವಾದ ತೊಂದರೆಗಳನ್ನು ಕೊಡುತ್ತಿದ್ದರೆಂದೂ ಆದುದರಿಂದ ಋಷಿಗಳು ಇವರನ್ನು ಕಳ್ಳರೆಂದೂ, ದೇವತೆಗಳಿಗೆ ಶತ್ರುಗಳೆಂದೂ ಅಲ್ಲಲ್ಲಿ ವರ್ಣನೆಮಾಡಿರುವರು. ಆರ್ಯಾನ್—ಪೂಜ್ಯಾರ್ಥಕವಾದ ಈ ಶಬ್ದವು ವಿದ್ವಾಂಸರಾಗಿಯೂ, ಯಾಗಕರ್ಮಾನುಷ್ಠಾನಮಾಡುವವರಾಗಿಯೂ ಇರುವ ಕರ್ಮಠರು ಎಂಬರ್ಥವನ್ನು ಕೊಡುವುದು.

ದಸ್ಯವಃ—ಇವರು ಯಾಗಾದಿ ಶ್ರೌತಕರ್ಮಗಳಲ್ಲಿ ಆಸಕ್ತರಾದ ಆಸ್ತಿಕರಿಗೆ ನಾನಾರೀತಿ ಹಿಂಸೆ ಕೊಡುತ್ತಿದ್ದ ನೀಚಜನರು. ಆಸ್ತಿಕರನ್ನು ರಕ್ಷಿಸುವುದಕ್ಕೂ, ನಾಸ್ತಿಕರನ್ನು ಶಿಕ್ಷಿಸುವುದಕ್ಕೂ ಮುಂದುವರಿಯ ಬೇಕು ಎಂದು ಇಂದ್ರನನ್ನು ಪ್ರಾರ್ಥಿಸಲಾಗಿದೆ.

ಅವ್ರತಾನ್—ವ್ರತಶೂನ್ಯರು ಎಂದರೆ ಸಕಲಶ್ರೌತಕರ್ಮಕ್ಕೂ ವಿರೋಧಿಗಳು ಎಂದು ಹೇಳಬಹುದು.

ರಂಧಯ—ಈ ಪದಕ್ಕೆ 'ಹಿಂಸೆಮಾಡು' ಅಥವಾ 'ವಶಪಡಿಸು' ಎಂಬ ಎರಡರ್ಥವನ್ನೂ ಹೇಳ ಬಹುದು. ರಧ್ಯತಿರ್ವಶಗಮನೇ (ನಿ. ೬-೩೨) ಎಂಬ ನಿರುಕ್ತಸೂತ್ರವು ಮೇಲಿನ ಅರ್ಥವನ್ನು ಸೂಚಿಸುವುದು.

ಶಾಕೀ—ಶಕ್ತಿಯುಕ್ತನು, ಸರ್ವಸಮರ್ಥನು ಎಂಬರ್ಥದಿಂದ ಈ ಪದವು ಇಂದ್ರಪದಕ್ಕೆ ವಿಶೇಷಣ ವಾಗಿರುವುದು.

ವಿಶ್ವಾ ಇತ್-ವಿಶ್ವೇತ್—ಇಲ್ಲಿ ಇತ್ ಶಬ್ದವು ಏವಕಾರಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಸಧಮಾದೇಷು—ಸಹಮದನಯುಕ್ತೇಷು ಯಜ್ಞೇಷು ಸ್ತೋತುಂ । ಸಹ ಮಾದ್ಯಂತಿ ಏಸು ಎಂಬ ವ್ಯುತ್ಪತ್ತಿಯಿಂದ ಸಧಮಾದ ಎಂಬ ಶಬ್ದವು ಯಜ್ಞಾರ್ಥವನ್ನು ಕೊಡುವುದು. ಹೋತೃ, ಉದ್ಗಾತೃ ಇವರೊಡನೆ ಯಜಮಾನನು ದೀಕ್ಷಾಬದ್ಧನಾಗಿ ಮಾಡುವ ಕರ್ಮವು ಯಾಗವಾದ್ದರಿಂದ ಸಧಮಾದಶಬ್ದವು ಯಜ್ಞಾರ್ಥದಲ್ಲಿ ರೂಢವಾಗಿದೆ.



CC-0. Jangamwadi Math Collection. Digitized by eGangotri

ಚಾಕನ—ದೀಪ್ತಿ, ಕಾಂತಿ, ಗತಿ, ಈ ಅರ್ಥಗಳುಳ್ಳ ಕನ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಕಾಂತ್ಯರ್ಥವನ್ನು (ತಿಳಿಯುತ್ತೇನೆ) ಕೊಡುವುದು.

ವ್ಯಾಕರಣಪ್ರಕ್ರಿಯಾ

ಜಾನೀಹಿ—ಜ್ಞಾ ಅವಬೋಧನೆ ಧಾತು. ಕ್ರ್ಯಾದಿ ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಆದೇಶವಾಗಿ ಬಂದಿರುವ ಹಿಗೆ ಅಪಿತ್ವ ಹೇಳಿರುವುದರಿಂದ ಙಿತ್ವ ಬರುತ್ತದೆ. ಅದರಿಂದ ವಿಕರಣಕ್ಕೆ ಈಹ- ಲ್ಯಘೋಃ ಸೂತ್ರದಿಂದ ಈತ್ವ ಬರುತ್ತದೆ. ಜ್ಞಾಜನೋರ್ಜಾ (ಪಾ. ಸೂ. ೬-೩-೭೯) ಎಂಬುದರಿಂದ ಧಾತು ವಿಗೆ ಜಾ ಎಂಬ ಆದೇಶಬರುತ್ತದೆ. ಜಾನೀಹಿ ಎಂದು ರೂಪವಾಗುತ್ತದೆ. ಇಲ್ಲಿ ಪ್ವಾದೀನಾಂ ಹ್ರಸ್ವಃ ಎಂದು ಕ್ರ್ಯಾದ್ಯಂತರ್ಗಣ ಪ್ವಾದಿಗಳಿಗೆ ಹ್ರಸ್ವವು ವಿಹಿತವಾಗಿದೆ. ಪ್ವಾದಿಯ ನಿವೃತ್ತಿಯಲ್ಲಿ ಮತಾಂತರವಿದೆ. ಪ್ಲೀಗತೌ ಎಂಬ ಧಾತುವಿನಲ್ಲಿ ವೃತ್‌ಕರಣ ಮಾಡಿರುವುದರಿಂದ ಪ್ವಾದಿಯು ನಿವೃತ್ತವಾಯಿತು (ಮುಗಿಯಿತು) ಎಂದು ಕೆಲವರ ಮತ. ಇನ್ನು ಕೆಲವರು ಅಲ್ಲಿರುವ ವೃತ್‌ಕರಣವು ಕೇವಲ ಲ್ವಾದಿಗಳಿಗೆ ಮಾತ್ರ. ಪ್ವಾದಿಯು ಮುಂದೆಯೂ ಅನುವೃತ್ತವಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ. ಆಗ ಎರಡನೆಯವರ ಮತದಲ್ಲಿ ಮುಂದೆ ಪಠಿತವಾಗಿರುವ ಜ್ಞಾ ಧಾತುವೂ ಪ್ವಾದಿಯಲ್ಲಿ ಸೇರಿರುವುದರಿಂದ ಜಾದೇಶಬಂದಾಗ ಹ್ರಸ್ವವು ಪ್ರಾಪ್ತವಾಗುತ್ತದೆ. ಆಗ ಉಕ್ತರೂಪವು ಆಗಲಾರದು. ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಜ್ಞಾಜನೋರ್ಜಾ ಎಂದು ಸೂತ್ರದಲ್ಲಿ ದೀರ್ಘಘಟಿತವಾಗಿ ಉಚ್ಚಾರಣ ಮಾಡಿರುವುದರಿಂದಲೇ ಹ್ರಸ್ವ ಬರುವುದಿಲ್ಲ ಎಂದು ಹೇಳಬೇಕು. ಇಲ್ಲವಾದರೆ ದೀರ್ಘೋಚ್ಚಾರಣೆಯು ವ್ಯರ್ಥವಾಗುತ್ತದೆ. ದೀರ್ಘೋಚ್ಚಾರಣೆಗೆ ಜನೀ ಪ್ರಾದುರ್ಭಾವೆ ಎಂಬ ಧಾತುವಿನಲ್ಲಿ ಚಾರಿತಾರ್ಥ್ಯ ಬರುತ್ತದೆ. ಅದು ಕ್ರ್ಯಾದಿಯಲ್ಲವಷ್ಟೆ ಎಂದು ಶಂಕಿಸಬಾರದು. ಅಲ್ಲಿ ದೀರ್ಘ ಹೇಳದಿದ್ದರೂ ಬಾಧಕವಿಲ್ಲ. ಹ್ರಸ್ವಾದೇಶ ಹೇಳಿದರೂ ಅತೋದೀರ್ಘೋಯಞಿ ಎಂಬ ಸೂತ್ರದಿಂದ ಶ್ಯನ್ ಪರದಲ್ಲಿರು ವುದರಿಂದ ದೀರ್ಘ ಬರುತ್ತದೆ. ಆದುದರಿಂದ ಸೂತ್ರದಲ್ಲಿ ದೀರ್ಘೋಚ್ಚಾರಣೆಯು ವ್ಯರ್ಥವಾಗುವುದರಿಂದ ಪ್ವಾದಿಯಾದರೂ ಇಲ್ಲಿ ಮಾತ್ರ ಹ್ರಸ್ವ ಬರುವುದಿಲ್ಲ ಎಂದು ಸಿದ್ಧವಾಗುತ್ತದೆ. ಮೊದಲನೇ ಪಕ್ಷದಲ್ಲಿ ಆ ಶಂಕೆಗೆ ಅವಕಾಶವೇ ಇಲ್ಲ. ಪ್ಲೀ ಗತೌ ಎಂಬುದರ ಮುಂದೆ ಈ ಧಾತುವು ಪಠಿತವಾಗಿದೆ.

ಬರ್ಹಿಷ್ಮತೆ—ಬರ್ಹಿಃ ಅಸ್ಯೆ ಅಸ್ತಿ ಇತಿ ಬರ್ಹಿಷ್ಮಾನ್ ತಸ್ಮೈ ಬರ್ಹಿಷ್ಮತೆ ಮತುಪ್ ಪರದಲ್ಲಿರು ವಾಗ ಪದಸಂಜ್ಞಾ ಇರುವುದರಿಂದ ಬರ್ಹಿಸ್ ಎಂಬಲ್ಲಿ ಪದಾಂತ ಸಕಾರಕ್ಕೆ ರುತ್ವಾದಿಗಳು ಪ್ರಾಪ್ತವಾಗುತ್ತವೆ. ತಸೌಮತ್ವರ್ಥೇ ಎಂಬುದರಿಂದ ಮತುಪ್ ಪರದಲ್ಲಿರುವಾಗ ಸಾಂತವಾದುದರಿಂದ ಭ ಸಂಜ್ಞೆಯನ್ನು ಹೊಂದು ತ್ತದೆ. ಆದುದರಿಂದ ರುತ್ವ ಜಶ್ತ್ವಗಳು ಬರುವುದಿಲ್ಲ. ಷತ್ವದಿಂದ ಬರ್ಹಿಷ್ಮತೆ ಎಂದು ರೂಪವಾಗುತ್ತದೆ.

ರಂಧಯ—ರಧ ಹಿಂಸಾಸಂರಾಧ್ಯೋಃ ಧಾತು. ಆರನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

ಶಾಸತ್—ಶಾಸು ಅನುಶಿಷ್ಟೌ ಧಾತು ಅದಾದಿ. ಲಟಃಶತೃಶಾನಚಾ ಸೂತ್ರದಿಂದ ಶತೃ ಪ್ರತ್ಯಯ ಬರುತ್ತದೆ. ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ವಿಕರಣದ ಶಪಿಗೆ ಲುಕ್ ಬರುತ್ತದೆ. ಶಾಸತ್ ಎಂದು ರೂಪವಾಗುತ್ತದೆ. ಜಕ್ಷಿತ್ಯಾದಯಃ ಷಟ್ (ಪಾ. ಸೂ. ೬-೧-೬) ಜಕ್ಷಿತಿ ಮುಂತಾದ ಏಳು ಧಾತುಗಳಿಗೆ (ದ್ವಿತ್ವಬಾರದಿದ್ದರೂ) ಅಭ್ಯಸ್ತಸಂಜ್ಞೆಯು ಬರುತ್ತದೆ. ಆದುದರಿಂದ ಉಗಿತ್ತಾದುದರಿಂದ ನುಮ್ ಪ್ರಾಪ್ತ ವಾದರೆ ನಾಭ್ಯಸ್ತಾಚ್ಛತುಃ (ಪಾ. ಸೂ. ೭-೧-೭೮) ಎಂಬುದರಿಂದ ನುಮಿಗೆ ಪ್ರತಿಷೇಧ ಬರುತ್ತದೆ. ಅಭ್ಯಸ್ತಾ- ನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಇದಕ್ಕೆ ಅಭ್ಯಸ್ತಸಂಜ್ಞೆ ಹೇಳಿರುವುದರಿಂದ ಆದ್ಯುದಾತ್ತ ಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಶಾಕೀ—ಶಕ್ಲೃ ಶಕ್ತೌ ಧಾತು ಸ್ವಾದಿ. ಭಾವಾರ್ಥದಲ್ಲಿ ಘಞ್ ಪ್ರತ್ಯಯ ಬರುತ್ತದೆ. ಞಿತ್ತಾದುದರಿಂದ ಅತಉಪಧಾಯಾಃ ಸೂತ್ರದಿಂದ ಧಾತುವಿನ ಅಕಾರಕ್ಕೆ ವೃದ್ಧಿ ಬರುತ್ತದೆ. ಶಾಕ ಎಂದು ರೂಪವಾಗುತ್ತದೆ. ಶಾಕಂ ಅಸ್ಯ ಅಸ್ತೀತಿ ಶಾಕೀ. ಮತ್ವರ್ಥದಲ್ಲಿ ಅತ ಇನಿಠನೌ ಸೂತ್ರದಿಂದ ಇನಿ ಪ್ರತ್ಯಯ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೆ ವ್ಯತ್ಯಯದಿಂದ ಛಂದಸ್ಸಿನಲ್ಲಿ ಆದ್ಯುದಾತ್ತಸ್ವರಬರುತ್ತದೆ. ಅಥವಾ ವೃಷಾದಿಯಲ್ಲಿ ಇದನ್ನು ಪಾಠಮಾಡುವುದರಿಂದ ವೃಷಾದೀನಾಂಚ (ಪಾ. ಸೂ. ೬-೧-೧೦೩) ಎಂಬುದರಿಂದ ಆದ್ಯುದಾತ್ತ ಸ್ವರಬರುತ್ತದೆ.

ವಿಶ್ವಾ ತಾ—ವಿಶ್ವಾನಿ, ತಾನಿ ಎಂದು ರೂಪವು. ಛಂದಸ್ಸಿನಲ್ಲಿ ನಪುಂಸಕದ ಬಹುವಚನಾದೇಶ ಶಿಗೆ ಶೇಶ್ಛಂದಸಿ ಬಹುಲಂ ಸೂತ್ರದಿಂದ ಲೋಪಬರುತ್ತದೆ. ಆಗ ಎರಡು ಶಬ್ದಗಳ ರೂಪವು ವಿಶ್ವಾ, ತಾ, ಎಂದ ಆಗುತ್ತದೆ.

ಸಧಮಾದೇಷು—ಸಹ ಮಾದ್ಯಂತೆ ಏಷು ಇತಿ ಸದಮಾದಾಃ ಯಜ್ಞಾಃ ಯಜ್ಞಗಳಲ್ಲಿ ಎಲ್ಲರೂ ಸಂತೋಷಗೊಳ್ಳುತ್ತಾರೆ ಎಂದು ಭಾವ. ಅಧಿಕರಣಾರ್ಥದಲ್ಲಿ ಹರ್ಷಾರ್ಥಕ ಮದಧಾತುವಿಗೆ ಘಞ್ ಪ್ರತ್ಯಯ ಬರುತ್ತದೆ. ಅಕಾರಕ್ಕೆ ವೃದ್ಧಿಬಂದರೆ ಮಾದ ಎಂದು ರೂಪವಾಗುತ್ತದೆ. ಆದರೆ ಇಲ್ಲಿ ಒಂದು ಪೂರ್ವಪಕ್ಷವು ಪ್ರಾಪ್ತವಾಗುತ್ತದೆ. ಉಪಸರ್ಗ ಭಿನ್ನವಾದ ಪದವು ಉಪಪದವಾಗಿರುವಾಗ ಮದಧಾತುವಿಗೆ ಮದೋಽನುಪಸರ್ಗೇ (ಪಾ. ಸೂ. ೩-೩-೬೭) ಎಂಬುದರಿಂದ ಘಞಿಗೆ ಅಪವಾದವಾಗಿ ಅಪ್ ಪ್ರತ್ಯಯ ಬರುತ್ತದೆ. ಹೀಗಿರುವಾಗ ಘಞಿನಿಂದ ರೂಪನಿಷ್ಪತ್ತಿ ಹೇಗೆ ಆಗುತ್ತದೆ? ಎಂದರೆ ಇದಕ್ಕೆ ನಾವು ಧಾತುವೃತ್ತಿಯಲ್ಲಿಯೇ ಸಮಾಧಾನ ಹೇಳಿರುತ್ತೇವೆ. ವ್ಯಧಜಪೋರನುಪಸರ್ಗೇ (ಪಾ. ಸೂ. ೩-೩-೬೧) ಎಂಬ ಸೂತ್ರವು ಇದರ ಹಿಂದೆ ಪಠಿತವಾಗಿದೆ. ಅಲ್ಲಿಯೂ ಅಪ್ ಪ್ರತ್ಯಯವನ್ನು ವಿಧಾನಮಾಡುತ್ತಾರೆ. ಹೀಗಿರುವಾಗ ಮದ ಧಾತುವನ್ನು ಅಲ್ಲಿಯೇ ಸೇರಿಸಿದರೆ ಲಾಘವವಾಗುತ್ತದೆ. ಅದನ್ನು ಬಿಟ್ಟು ಮದೋಽನುಪಸರ್ಗೇ ಎಂದು ಬೇರೆ ಯೋಗಮಾಡಿರುವುದರಿಂದ ಈ ಮದ ಧಾತುವಿಗೆ ಘಞ್ ಪ್ರತ್ಯಯವೂ ಪಾಕ್ಷಿಕವಾಗಿ ಬರುತ್ತದೆ ಎಂದು ಜ್ಞಾಪಿತವಾಗುತ್ತದೆ ಎಂದು ನ್ಯಾಸಕಾರರು ಪ್ರತಿಪಾದನಮಾಡಿರುತ್ತಾರೆ. ಇದನ್ನೇ ಧಾತುವೃತ್ತಿಯಲ್ಲಿ ಹೇಳಿರುತ್ತೇವೆ. ಆದುದರಿಂದ ಪಾಕ್ಷಿಕವಾದ ಘಞಿನಿಂದ ಇಷ್ಟರೂಪ ಸಿದ್ಧಿಯಾಗುತ್ತದೆ. ಸಧಮಾದಸ್ಥಯೋಶ್ಛಂದಸಿ (ಪಾ. ಸೂ. ೬-೩-೯೬) ಎಂಬುದರಿಂದ ಸಹ ಎಂಬುದಕ್ಕೆ ಸಧ ಆದೇಶ ಬರುತ್ತದೆ. ಸಪ್ತಮಿಯಲ್ಲಿ ಸಧಮಾದೇಷು ಎಂದು ರೂಪವಾಗುತ್ತದೆ.

ಚಾಕನ—ಕನ ದೀಪ್ತಿಕಾಂತಿಗತಿಷು ಧಾತು. ಇಲ್ಲಿ ಕಾಂತ್ಯರ್ಥದಲ್ಲಿ ಪ್ರಯುಕ್ತವಾಗಿರುತ್ತದೆ. ಛಂದಸಿ ಲುಙ್‌ಲಙ್‌ಲಿಟಃ ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್ ಬರುತ್ತದೆ. ಲಿಟ್ ಉತ್ತಮಪುರುಷ ಏಕವಚನಕ್ಕೆ ಣಲ್ ಆದೇಶ ಬರುತ್ತದೆ. ಧಾತುವಿಗೆ ದ್ವಿತ್ವ ಹಲಾದಿಶೇಷ ಅಭ್ಯಾಸಚರ್ತ್ವಗಳು ಬಂದರೆ ಚಕನ ಎಂದು ರೂಪವಾಗುತ್ತದೆ. ಣಲ್ ಣಿತ್ತಾದುದರಿಂದ ಧಾತುವಿಗೆ (ಉಪಧೆಗೆ) ದ್ವಿತ್ವವು ಪ್ರಾಪ್ತವಾದರೆ ಣಲುತ್ತಮೋ ವಾ (ಪಾ.ಸೂ. ೭-೧-೯೧) ಉತ್ತಮಪುರುಷದ ಣಲ್ ವಿಕಲ್ಪವಾಗಿ ಣಿತ್ತಾಗುತ್ತದೆ ಎಂಬುದರಿಂದ ಇಲ್ಲಿ ಣಿತ್ವ ಇಲ್ಲದಿರುವಾಗ ವೃದ್ಧಿಯು ಬರುವುದಿಲ್ಲ. ತುಜಾದೀನಾಂ ದೀರ್ಘೋಽಭ್ಯಾಸಸ್ಯ ಎಂಬುದರಿಂದ ತುಜಾದಿಯಲ್ಲಿ ಇದು ಸೇರಿರುವುದರಿಂದ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಚಾಕನ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅನುವ್ರತಾಯ ರಂಧಯನ್ನಪವ್ರತಾನಾಭೂಭಿರಿಂದ್ರಃ ಶ್ನಥಯನ್ನನಾ-
ಭುವಃ ।
ವೃದ್ಧಸ್ಯ ಚಿದ್ವರ್ಧತೋ ದ್ಯಾಮಿನಕ್ಷತಃ ಸ್ತವಾನೋ ವಮ್ರೋ ವಿ ಜಘಾನ
ಸಂದಿಹಃ ॥ ೮ ॥

॥ ಪದಪಾಠಃ ॥

ಅನುಽವ್ರತಾಯ । ರಂಧಯನ್ । ಅಪಽವ್ರತಾನ್ । ಆಽಭೂಭಿಃ । ಇಂದ್ರಃ ।
ಶ್ನಥಯನ್ । ಅನಾಽಭುವಃ ।
ವೃದ್ಧಸ್ಯ । ಚಿತ್ । ವರ್ಧತಃ । ದ್ಯಾಂ । ಇನಕ್ಷತಃ । ಸ್ತವಾನಃ । ವಮ್ರಃ । ಜಘಾನ
ಸಂಽದಿಹಃ ॥ ೮ ॥

॥ ಸಾಯಣಭಾಷ್ಯಂ ॥

ಯ ಇಂದ್ರೋಽನುವ್ರತಾಯಾನುಕೂಲಕರ್ಮಣೇ ಯಜಮಾನಾಯಾಪವ್ರತಾನಪಗತಕರ್ಮಣೋ ಯಜಮಾನಾನ್ ರಂಧಯನ್ ಹಿಂಸಯನ್ವಶೀಕುರ್ವನ್ವಾ ತಥಾಭೂಭಿಃ । ಆಭಿಮುಖ್ಯೇನ ಭವಂತೀತ್ಯಾಭುವಃ ಸ್ತೋತಾರಃ । ತೈರನಾಭುವಸ್ತದ್ವಿಪರೀತಾನ್ ಶ್ನಥಯನ್ಹಿಂಸಯನ್ವರ್ತತೇ । ವೃದ್ಧಸ್ಯ ಚಿದ್ವರ್ಧತಃ ಪೂರ್ವಂ ವೃದ್ಧಸ್ಯಾಪಿ ಪುನರ್ವರ್ಧಮಾನಸ್ಯ ದ್ಯಾಮಿನಕ್ಷತಃ ಸ್ವರ್ಗಂ ವ್ಯಾಪ್ನುವತಸ್ತಸ್ಯೇಂದ್ರಸ್ಯ ಸ್ತವಾನಃ ಸ್ತುತಿಂ ಕುರ್ವಾಣೋ ವಮ್ರಃ ಸ್ತುತ್ಯುದ್ಗಿರಣಶೀಲ ಏತತ್ಸಂಜ್ಞಕ ಋಷಿಃ ಸಂದಿಹಃ ಸಮ್ಯಗುಪಚಿತಾ ವಲ್ಮೀಕವಪಾ ವಿ ಜಘಾನ । ಇಂದ್ರೇಣ ಪರಿಹೃತಾಂತರಾಯಃ ಸನ್ಪೃಥಿವ್ಯಾಃ ಸಾರಭೂತಂ ವಲ್ಮೀಕವಪಾಲಕ್ಷಣಂ ಯಜ್ಞಸಂಭಾರಮಾಹಾರ್ಷೀದಿತ್ಯರ್ಥಃ । ತಥಾ ಚ ಶಾಖಾಂತರೇ ಸಮಾಮ್ನಾತಂ । ಯದ್ವಲ್ಮೀಕವಪಾಸಂಭಾರೋ ಭವತಿ ಊರ್ಜಮೇವ ರಸಂ ಪೃಥಿವ್ಯಾ ಅವರುಂಧೇ । ತೈ. ಬ್ರಾ. ೧-೧-೩-೪ । ಇತಿ ॥ ಅನುವ್ರತಾಯ । ಅನುಕೂಲಂ ವ್ರತಂ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಶ್ನಥಯನ್ । ಶ್ನಥ ಹಿಂಸಾಯಾಂ । ಣಿಚಿ ಘಟಾದಿತ್ವಾನ್ಮಿತ್ತ್ವೇ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ವರ್ಧತಃ । ವ್ಯತ್ಯಯೇನ ಪರಸ್ಮೈಪದಂ । ಇನಕ್ಷತಃ । ನಕ್ಷ ಗತೌ । ಇಕಾರೋಽಪಜನಶ್ಛಾಂದಸಃ । ಯದ್ವಾ ।



CC-0. Jangamwadi Math Collection. Digitized by eGangotri

ಇನಕ್ಷತಿರ್ಗತ್ಯರ್ಥಃ । ಪ್ರಕೃತ್ಯಂತರಮನ್ವೇಷ್ಟವ್ಯಂ । ಸ್ತವಾನಃ । ಸಮ್ಯಾನಚ್ ಸ್ತುವಃ । ಉ. ೨-೮೯ । ಇತಿ ಸ್ತೌತೇರ್ಬಹುಲವಚನಾನ್ನಿರುಪಪದಾದಪ್ಯಾನಚ್ಪ್ರತ್ಯಯಃ । ವ್ಯತ್ಯಯೇನಾದ್ಯುದಾತ್ತತ್ವಂ । ಜಭಾ. ನ । ಅಭ್ಯಾಸಾಚ್ಚೇತ್ಯಭ್ಯಾಸಾದುತ್ತರಸ್ಯ ಹಂತೇರ್ಹಕಾರಸ್ಯ ಕುತ್ವಂ । ಸಂದಿಹಃ । ದಿಹ ಉಪಚಯೇ । ಕೃತ್ಯಲ್ಯುಟೋ ಬಹುಲಮಿತಿ ಬಹುಲವಚನಾತ್ಕರ್ಮಣಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಇಂದ್ರಃ—ಇಂದ್ರನು । ಅನುವ್ರತಾಯ—ಅನುಕೂಲವಾದ ಯಜ್ಞಕರ್ಮಗಳನ್ನು ಮಾಡುವ ಯಜಮಾನನಿಗಾಗಿ । ಅಪವ್ರತಾನ್—ಯಜ್ಞರಹಿತರಾದ ಕರ್ಮಭ್ರಷ್ಟರನ್ನು । ರಂಧಯನ್—ನಿಗ್ರಹಿಸಿ ವಶಮಾಡಿಕೊಂಡು (ಮತ್ತು) । ಆಭೂಭಿಃ—ಅಭಿಮುಖವಾಗಿ ಸ್ತೋತ್ರಮಾಡುವ ಭಕ್ತರಿಂದ । ಅನಾಭುವಃ—ಪೂಜಾರಹಿತರನ್ನು । ಶ್ನಥಯನ್—ಹಿಂಸೆಪಡಿಸುತ್ತಾ (ನೆಲಸಿದ್ದಾನೆ) । ವೃದ್ಧಸ್ಯ ಚಿದ್ವರ್ಧತಃ—ಹಿಂದೆ ವೃದ್ಧಿ ಹೊಂದಿದ್ದರೂ ಪುನಃ ಪ್ರವೃದ್ಧನಾಗುತ್ತಿರುವ (ಮತ್ತು) । ದ್ಯಾಮಿನಕ್ಷತಃ—ಸ್ವರ್ಗವನ್ನೆಲ್ಲಾ ವ್ಯಾಪಿಸಿರುವ ಆ ಇಂದ್ರನ ಸ್ತವಾನಃ—ಸ್ತೋತ್ರಮಾಡುತ್ತಿರುವ । ವಮ್ರಃ—ವಮ್ರನೆಂಬ ಋಷಿಯು । ಸಂದಿಹಃ—ಚೆನ್ನಾಗಿ ಶೇಖರಿತಗಳಾದ ಯಜ್ಞಸಂಭಾರಗಳನ್ನು । ವಿಜಘಾನ—ಅಪಹರಿಸಿದನು ।

॥ ಭಾವಾರ್ಥ ॥

ಇಂದ್ರನು ಯಜ್ಞಕರ್ಮಗಳನ್ನು ಮಾಡುವ ಯಜಮಾನನಿಗೋಸ್ಕರ ಯಜ್ಞರಹಿತರಾದ ಕರ್ಮಭ್ರಷ್ಟರನ್ನು ನಿಗ್ರಹಿಸಿ ವಶಮಾಡಿಕೊಂಡು ತನ್ನ ಅಭಿಮುಖವಾಗಿ ತನ್ನನ್ನು ಸ್ತೋತ್ರಮಾಡುವ ಭಕ್ತರಿಂದ ಪೂಜಾರಹಿತರಾದವರನ್ನೆಲ್ಲಾ ಹಿಂಸೆಪಡಿಸುತ್ತ ನೆಲಸಿದ್ದಾನೆ. ಹಿಂದೆ ವೃದ್ಧಿಹೊಂದಿದ್ದರೂ ಪುನಃ ಪ್ರವೃದ್ಧನಾಗುತ್ತಿರುವವನೂ, ಸ್ವರ್ಗವನ್ನೆಲ್ಲ ವ್ಯಾಪಿಸಿರುವವನೂ ಆದ ಆ ಇಂದ್ರನನ್ನು ಸ್ತೋತ್ರಮಾಡುತ್ತಿರುವ ವಮ್ರನೆಂಬ ಋಷಿಯು ಇಂದ್ರನಿಗಾಗಿ ಶೇಖರಿತಗಳಾದ ಯಜ್ಞಸಂಭಾರಗಳನ್ನು ಅಪಹರಿಸಿದನು.

## English Translation.

Indra abides, humbling the neglecters of holy acts in favour of those who observe them, and punishing those who turn away from his worship in favour of those who are present with their praise ; Vamra, while praising him though old still growing, and spreading through heaven, carried off the accumulated (materials of the sacrifice).

॥ ವಿಶೇಷ ವಿಷಯಗಳು ॥

ಅನುವ್ರತಾಯ—ಇದು ಅನುಕೂಲಂ ವ್ರತಂ ಯಸ್ಯಸಃ ಎಂಬ ವ್ಯುತ್ಪತ್ತಿಯಿಂದ ಶ್ರುತ್ಯುಕ್ತವಾದ ವಿಧಿಯಂತೆ ಯಾಗಾದಿಗಳನ್ನು ನಡೆಸುವ ಯಜಮಾನನಿಗೆ ವಿಶೇಷಣವಾಗಿರುವುದು.



CC-0. Jangamwadi Math Collection. Digitized by eGangotri

ಅಭೂಭಿಃ—ಅಭಿಮುಖ್ಯೇನ ಭವಂತೀತಿ ಅಭುವಃ ಸ್ತೋತಾರಃ। ದೇವತೆಗಳಿಗೆ ಎದುರಾಗಿ ನಿಂತು ಸ್ತೋತ್ರಮಾಡುವವರು ಎಂದರ್ಥ.

ವೃದ್ಧಸ್ಯ ಚಿತ್—ವರ್ಧತಃ ಮೊದಲು ವೃದ್ಧನಾಗಿದ್ದರೂ (ಅಲ್ಪಬಲವುಳ್ಳವನಾದರೂ) ಮತ್ತೆ ಇತರ ಶಕ್ತ್ಯಾದಿಗಳಿಂದ ವೃದ್ಧಿಹೊಂದುತ್ತಿರುವ ಇಂದ್ರ ಎಂಬರ್ಥವು ಇಲ್ಲಿ ಸ್ಪಷ್ಟಪಡುವುದು.

ಚಿತ್—ಎಂಬ ಪದವು ಪುನಃ ಎಂಬರ್ಥದಲ್ಲಿ ಇಲ್ಲಿ ಉಪಯುಕ್ತವಾಗಿದೆ.

ದ್ಯಾಮಿನಕ್ಷತಃ—ದ್ಯಾಂ--ಇನಕ್ಷತಃ—ಆಕಾಶದಲ್ಲಿ ಸಂಚರಿಸುವವನು ಅಥವಾ ನೆಲಸಿರುವವನು ಎಂದರ್ಥ. ಇಲ್ಲಿ ನಕ್ಷ ಗತೌ ಎಂಬ ಧಾತುವಿನಿಂದ ಉಂಟಾದ ಇನಕ್ಷತಃ ಎಂಬ ಪದದಲ್ಲಿ ಮೊದಲನೆಯದಾದ ಇಕಾರವು ಛಾಂದಸವಾಗಿ ಬಂದಿದೆ. ವ್ಯಾಕರಣ ನಿಯಮಕ್ಕೆ ಒಳಪಟ್ಟು ಆ ಅಕ್ಷರವು ಬರುವಂತಿಲ್ಲ. ಅಥವಾ ಗತ್ಯರ್ಥಕವಾದ ಇನಕ್ಷತಿ ಎಂಬ ಬೇರೆ ಪ್ರಕೃತಿಯೇ ಇರಬಹುದೆಂದು ಹೇಳಬೇಕು.

ವಮ್ರಃ—ದೇವತಾಸ್ತೋತ್ರವನ್ನು ಮತ್ತೆ ಮತ್ತೆ ಹೇಳಬಯಸುವ ಒಬ್ಬ ಋಷಿಯ ಹೆಸರು ಇದು. ಈತನು ಇಂದ್ರನನ್ನು ಬಹಳವಾಗಿ ಸ್ತುತಿಸಿ ಸಕಲ ಪ್ರತಿಬಂಧಕಗಳನ್ನೂ ಕಳೆದುಕೊಂಡು, ಪೃಥಿವಿಯ ಸಾರಭೂತವಾದ ವಲ್ಮೀಕವಪಾಲಕ್ಷಣಭೂತವಾದ ಯಜ್ಞಸಾಮಗ್ರಿಯೊಂದನ್ನು ಸಂಪಾದಿಸಿಕೊಂಡನು. ಪೃಥಿವೀಸಾರವೇ ವಲ್ಮೀಕವಪೆಯು ಎನ್ನುವುದಕ್ಕೆ ಯದ್ವಲ್ಮೀಕವಪಾಸಂಭಾರೋ ಭವತಿ ಊರ್ಜಮೇವ ರಸಂ ಪೃಥಿವ್ಯಾ ಅವರುಂಧೇ (ತೈ. ಬ್ರಾ. ೧.೧-೩-೪) ಎಂಬ ಶ್ರುತಿಯು ಪ್ರಮಾಣವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

ಅನುವ್ರತಾಯ—ಅನುಕೂಲಂ ವ್ರತಂ ಯಸ್ಯ ಸಃ ಅನುವ್ರತಃ ತಸ್ಮೈ ಅನುವ್ರತಾಯ. ಬಹುವ್ರೀಹಿ ಸಮಾಸ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ.

ಶ್ನಥಯನ್—ಶ್ನಥ ಹಿಂಸಾಯಾಂ ಭ್ವಾದಿ. ಣಿಜಂತದ ಮೇಲೆ ಶತೃಪ್ರತ್ಯಯ ಬರುತ್ತದೆ. ಣಿಚ್ ಪರದಲ್ಲಿರುವಾಗ ಅತಉಪಧಾಯಾಃ ಸೂತ್ರದಿಂದ ಧಾತುವಿನ ಅಕಾರಕ್ಕೆ ವೃದ್ಧಿ ಬರುತ್ತದೆ. ಶ್ನಾಥಯತ್ ಎಂದು ರೂಪವಾಗುತ್ತದೆ. ಇದು ಭ್ವಾದ್ಯಂತರ್ಗಣಘಟಾದಿಯಲ್ಲಿ ಸೇರಿದೆ. ಆದುದರಿಂದ ಘಟಾದಯೋ-ಮಿತಃ ಎಂಬುದರಿಂದ ಮಿತ್ ಸಂಜ್ಞಾ ಬರುತ್ತದೆ. ಣಿಚ್ ಪರದಲ್ಲಿರುವುದರಿಂದ ಮಿತಾಂಹ್ರಸ್ವಃ (ಪಾ. ಸೂ. ೬.೪.೯೨) ಸೂತ್ರದಿಂದ ಹ್ರಸ್ವಬರುತ್ತದೆ. ಪ್ರಥಮಾ ಏಕವಚನದಲ್ಲಿ ನುಮ್ ಸುಲೋಪತಲೋಪಗಳು ಬಂದರೆ ಶ್ನಥಯನ್ ಎಂದು ರೂಪವಾಗುತ್ತದೆ.

ವರ್ಧತಃ—ವೃಧು ವೃದ್ಧೌ ಧಾತು. ಭ್ವಾದಿ ಅನುದಾತ್ತೇತ್ ವ್ಯತ್ಯಯೋ ಬಹುಲಂ ಎಂಬುದರಿಂದ ಪರಸ್ಮೈಪದ ಪ್ರತ್ಯಯ ಬರುತ್ತದೆ. ಶಾನಚಿಗೆ ಬದಲಾಗಿ ಶತೃಪ್ರತ್ಯಯ ಬರುತ್ತದೆ ಎಂದು ತಾತ್ಪರ್ಯ. ಷಷ್ಠೀ ಏಕವಚನದಲ್ಲಿ ವರ್ಧತಃ ಎಂದು ರೂಪವಾಗುತ್ತದೆ.

ಇನಕ್ಷತಃ—ನಕ್ಷ ಗತೌ ಧಾತು. ವರ್ತಮಾನಾರ್ಥದಲ್ಲಿ ಶತೃಪ್ರತ್ಯಯ ಬರುತ್ತದೆ. ಛಾಂದಸವಾಗಿ ಇಕಾರವು ಉಪಪದವಾಗಿ ಬರುತ್ತದೆ. ಷಷ್ಠೀ ಏಕವಚನರೂಪ. ಅಥವಾ ಇನಕ್ಷತಿ ಎಂಬುದೇ ಧಾತುವೆಂದು



CC-0. Jangamwadi Math Collection. Digitized by eGangotri

ಸ್ವೀಕರಿಸಬೇಕು. ಧಾತುಗಣಪಾಠದಲ್ಲಿ ಪಠಿತವಾಗದಿರುವುದರಿಂದ ಈ ಪ್ರಕೃತಿಯನ್ನು ಅನುಮಾನದಿಂದ ತಿಳಿಯಬೇಕು. ಭ್ವಾದಿ, ಚುರಾದಿಗಳು ಆಕೃತಿಗಣವಾದುದರಿಂದ ಅವುಗಳಲ್ಲಿ ಸೇರಿಸಬೇಕು ಎಂದು ತಾತ್ಪರ್ಯ.

ಸ್ತವಾನಃ—ಷ್ಟುಞ್ ಸ್ತುತೌ ಧಾತು. ಅದಾದಿ ಸಮಾನಚ್ ಸ್ತುವಃ (ಉ. ಸೂ, ೨-೨೪೬) ಸಮ್ ಉಪಪದವಾಗಿರುವಾಗ ಈ ಧಾತುವಿಗೆ ಆನಚ್ ಪ್ರತ್ಯಯ ಬರುತ್ತದೆ. ಬಹುಲಗ್ರಹಣವಿರುವುದರಿಂದ ಉಪಪದವಿಲ್ಲದಿದ್ದರೂ ಆನಚ್ ಪ್ರತ್ಯಯ ಬರುತ್ತದೆ. ಕೇವಲ ಧಾತುವಿಗೆ ಆನಚ್ ಬಂದರೆ ಧಾತುವಿಗೆ ಗುಣವೂ ಅವಾದೇಶವೂ ಬರುತ್ತದೆ. ಸ್ತವಾನ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಪ್ರತ್ಯಯಕ್ಕೆ ಆದ್ಯುದಾತ್ತವು ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತಸ್ವರವು ಬರುತ್ತದೆ.

ಜಘಾನ—ಹನ ಹಿಂಸಾಗತ್ಯೋಃ ಧಾತು ಅದಾದಿ ಲಿಟ್ ಪ್ರಥಮಪುರುಷ ಏಕವಚನಕ್ಕೆ ಣಲಾದೇಶ ಬರುತ್ತದೆ. ದ್ವಿತ್ವಹಲಾದಿಶೇಷ ಅಭ್ಯಾಸಚರ್ತ್ವಗಳು ಬಂದರೆ ಜಹಾನ ಎಂದು ರೂಪವಾಗುತ್ತದೆ. ಅಭ್ಯಾಸಾಚ್ಚ (ಪಾ. ಸೂ. ೭-೩-೫೫) ಅಭ್ಯಾಸದ ಪರದಲ್ಲಿರುವ ಹನಿನ ಹಕಾರಕ್ಕೆ ಕುತ್ವ ಬರುತ್ತದೆ ಎಂಬುದರಿಂದ ಹಕಾರಕ್ಕೆ ಆಂತರತಮ್ಯದಿಂದ ಘಕಾರ ಬಂದರೆ ಜಘಾನ ಎಂದು ರೂಪವಾಗುತ್ತದೆ.

ಸಂದಿಹಃ—ದಿಹ ಉಪಚಯೆ ಧಾತು ಅದಾದಿ ಕೃತ್ಯಲ್ಯುಟೋ ಬಹುಲಂ (ಪಾ. ಸೂ. ೩-೩-೧೧೩) ಎಂಬಲ್ಲಿ ಬಹುಲವಚನವಿರುವುದರಿಂದ ಕರ್ಮಣಿಯಲ್ಲಿ ಕ್ವಿಪ್ ಪ್ರತ್ಯಯ ಬರುತ್ತದೆ. ಕ್ವಿಪಿನಲ್ಲಿ ಸರ್ವಲೋಪ ವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ಸಂದಿಹ ಎಂದು ರೂಪವಾಗುತ್ತದೆ. ಗತಿಕಾರಕೋಪಪದಾತ್-ಕೃತ್ ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರವು ಬರುತ್ತದೆ.

॥ ಸಂಹಿತಾಪಾಠಃ ॥

ತಕ್ಷದ್ಯತ್ತ ಉಶನಾ ಸಹಸಾ ಸಹೋ ವಿ ರೋದಸೀ ಮಜ್ಮನಾ ಬಾಧತೇ ಶವಃ ।
ಆ ತ್ವಾ ವಾತಸ್ಯ ನೃಮಣೋ ಮನೋಯುಜ ಆ ಪೂರ್ಯಮಾಣಮವಹನ್ನಭಿ ಶ್ರವಃ ॥ ೧೦ ॥

॥ ಪದಪಾಠಃ ॥

ತಕ್ಷತ್ । ಯತ್ । ತೇ । ಉಶನಾ । ಸಹಸಾ । ಸಹಃ । ವಿ । ರೋದಸೀ ಇತಿ । ಮಜ್ಮನಾ । ಬಾಧತೇ । ಶವಃ ।
ಆ । ತ್ವಾ । ವಾತಸ್ಯ । ನೃಮನಃ । ಮನಃಯುಜಃ । ಆ । ಪೂರ್ಯಮಾಣಂ । ಅವಹನ್ । ಅಭಿ । ಶ್ರವಃ ॥ ೧೦ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯಂ ||

ಹೇ ಇಂದ್ರ ಯದ್ಯದೋಶನಾ ಕಾವ್ಯಃ ಸಹಸಾತ್ಮೀಯೇನ ಬಲೇನ ತೇ ಸಹಸ್ತ್ವದೀಯಂ ಬಲಂ ತಕ್ಷತ್ ತನೂಕೃತವಾನ್ । ಸಮ್ಯಕ್ ತೀಕ್ಷ್ಣಮಕಾರ್ಷೀದಿತ್ಯರ್ಥಃ । ತದಾ ಶವಸ್ತ್ವದೀಯಂ ಬಲಂ ಮಜ್ಮನಾ ಸರ್ವಸ್ಯ ಶೋಧಕೇನ ಸ್ವತೈಕ್ಷ್ಣ್ಯೇನ ರೋದಸೀ ದ್ಯಾವಾಪೃಥಿವ್ಯಾ ವಿ ಬಾಧತೇ । ತೇ ಬಿಭೀತ ಇತ್ಯರ್ಥಃ । ತಥಾ ಚಾನ್ಯತ್ರಾಮ್ನಾತಂ । ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ । ಋಗ್ವೇ. ೨-೧೨-೧। ಇತಿ । ಯದ್ವಾ । ರೊದಸೀ ಯಸ್ಮಾದ್ವೃತ್ರಾದೇರ್ಬಿಭೀತಸ್ತಂ ಬಾಧತ ಇತ್ಯರ್ಥಃ । ಹೇ ನೃಮಣೋ ನೃಷು ರಕ್ಷಿತವ್ಯೇಷು ಯಜಮಾನೇಷ್ವನುಗ್ರಹಬುದ್ಧಿಯುಕ್ತೇಂದ್ರ ಆ ಪೂರ್ಯಮಾಣಂ ಪೂರ್ವೋಕ್ತೇನ ಬಲೇನಾ ಸಮಂತಾತ್ಪೂರ್ಯಮಾಣಂ ತ್ವಾ ತ್ವಾಂ ಮನೋಯುಜೋ ಮನೋವ್ಯಾಪಾರಮಾತ್ರೇಣ ಯುಕ್ತಾ ವಾತಸ್ಯ ವಾಯೋಃ ಸಂಬಂಧಿನಃ । ತದ್ವದ್ವೇಗೇನ ಗಚ್ಛಂತ ಇತ್ಯರ್ಥಃ । ಏವಂಭೂತಾ ಅಶ್ವಾಃ ಶ್ರವೋಽಭಿ ಹವಿರ್ಲಕ್ಷಣಮನ್ನಮಭಿಲಕ್ಷ್ಯಾವಹನ್ । ಅಭಿಮುಖ್ಯೇನ ಪ್ರಾಪಯಂತು ॥ ತಕ್ಷತ್ । ತಕ್ಷೂ ತ್ವಕ್ಷೂ ತನೂಕರಣೇ । ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಉಶನಾ । ವಶ ಕಾಂತೌ । ವಶೇಃ ಕನಸಿಃ । ಉ. ೪-೨೩೮ । ಇತಿ ಕನಸ್ । ಗ್ರಹಿಜ್ಯೇತ್ಯಾದಿನಾ ಸಂಪ್ರಸಾರಣಂ । ಋದುಶನಸ್ಪುರುದಂಶೋಽನೇಹಸಾಂ ಚ । ಪಾ. ೭-೧-೯೪। ಇತ್ಯನಙಾದೇಶಃ । ಸರ್ವನಾಮಸ್ಥಾನೇ ಚ । ಪಾ. ೬-೪-೮ । ಇತ್ಯುಪಧಾದೀರ್ಘತ್ವಂ । ಹಲ್ಙ್ಯಾದಿನಲೋಪೌ । ಮಜ್ಮನಾ । ಟುಮಸ್ಜೋ ಶುದ್ಧೌ । ಔಣಾದಿಕೋ ಮನಿಪ್ರತ್ಯಯಃ । ನೃಮಣಃ । ಛಂದಸ್ಯೃದವಗ್ರಹಾದಿತಿ ಣತ್ವಂ । ಆವಹನ್ । ಛಂದಸಿ ಲುಙ್‌ಲಙ್‌ಲಿಟ ಇತಿ ಪ್ರಾರ್ಥನಾಯಾಂ ಲಙ್ ।

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ಯತ್—ಯಾವಾಗ । ಉಶನಾ—ಉಶನಸ್ಸು । ಸಹಸಾ—(ತನ್ನ) ಬಲದಿಂದ । ತೇ—ನಿನ್ನ । ಸಹಃ—ಬಲವನ್ನು । ತಕ್ಷತ್—(ಅತ್ಯಂತ) ತೀಕ್ಷ್ಣವಾಗುವಂತೆ ಮಾಡಿದನೋ(ಆಗ) । ಶವಃ—ನಿನ್ನ ಬಲವು । ಮಜ್ಮನಾ— ಎಲ್ಲವನ್ನೂ ಶೋಧಿಸತಕ್ಕ ತೈಕ್ಷ್ಣ್ಯದಿಂದ । ರೋಧಸೀ—ಪೃಥಿವ್ಯಂತರಿಕ್ಷಗಳೆರಡನ್ನೂ । ವಿ ಬಾಧತೇ — ಭಯಪಡಿಸುತ್ತದೆ ( ಅಥವಾ ದ್ಯಾವಾಪೃಥಿವಿಗಳೆರಡನ್ನೂ ಬೆದರಿಸುವ ವೃತ್ರನನ್ನೂ ಬೆದರಿಸುತ್ತದೆ) । ನೃಮಣಃ—(ಯಜ್ಞಕರ್ತರಾದ) ಮಾನವರಲ್ಲಿ ಅನುಗ್ರಹಬುದ್ಧಿಯುಳ್ಳ ಇಂದ್ರನೇ । ಆ ಪೂರ್ಯಮಾಣಂ (ಇಂತಹ ಬಲದಿಂದ) ಸಂಪೂರ್ಣವಾಗಿ ವ್ಯಾಪ್ತನಾಗುವ । ತ್ವಾ—ನಿನ್ನನ್ನು । ಮನೋಯುಜಃ—ಸಂಕಲ್ಪಮಾತ್ರದಿಂದಲೇ ರಥಕ್ಕೆ ಸೇರಿಕೊಳ್ಳತಕ್ಕವೂ । ವಾತಸ್ಯ—ವಾಯುವಿನ (ವೇಗದಲ್ಲಿ ಓಡಬಲ್ಲವೂ ಆದ ಕುದುರೆಗಳು) । ಶ್ರವಃ ಅಭಿ—ಹವಿಸ್ಸಿನರೂಪದಲ್ಲಿರುವ ಅನ್ನವನ್ನುದ್ದೇಶಿಸಿ । ಆ ಅವಹರ್—(ಅದರ) ಅಭಿಮುಖವಾಗಿ ಕರೆತರಲಿ.

|| ಭಾವಾರ್ಥ ||

ಎಲೈ ಇಂದ್ರನೇ, ಉಶನಸ್ಸು ಯಾವಾಗ ತನ್ನ ಬಲದಿಂದ ನಿನ್ನ ಬಲವನ್ನು ತೀಕ್ಷ್ಣವಾಗುವಂತೆ ಮಾಡುವನೋ ಆಗ ಎಲ್ಲವನ್ನೂ ಶೋಧಿಸತಕ್ಕ ತೈಕ್ಷ್ಣ್ಯದಿಂದ ಕೂಡಿದ ನಿನ್ನ ಬಲವು ಪೃಥಿವ್ಯಂತರಿಕ್ಷಗಳೆರಡನ್ನೂ ಬೆದರಿಸುತ್ತದೆ. (ವೃತ್ರನನ್ನೂ ಬೆದರಿಸುವ ಸಾಮರ್ಥ್ಯವುಳ್ಳದ್ದಾಗಿರುತ್ತದೆ). ಮಾನವರಲ್ಲಿ ಅತ್ಯಂತ



CC-0. Jangamwadi Math Collection. Digitized by eGangotri

ಅನುಗ್ರಹಬುದ್ಧಿಯುಳ್ಳವನಾದ ಇಂದ್ರನೇ, ಇಂತಹ ಪ್ರಭಾವದಿಂದ ಕೂಡಿದ ನಿನ್ನನ್ನು ಸಂಕಲ್ಪಮಾತ್ರದಿಂದಲೇ ರಥಕ್ಕೆ ಸೇರಿಕೊಳ್ಳತಕ್ಕವೂ, ವಾಯುವಿನ ವೇಗದಲ್ಲಿ ಓಡತಕ್ಕವೂ ಆದ ಕುದುರೆಗಳು ಹವಿಸ್ಸಿನರೂಪದಲ್ಲಿರುವ ಅನ್ನದ ಅಭಿಮುಖವಾಗಿ ಕರೆತರಲಿ.

## English Translation.

If Usanas should sharpen your vigour by his own, then your might would terrify by its intensity both heaven and earth. Friend of man, let the will-harnessed horses, with the velocity of the wind convey you, replete with vigour to partake of the sacrificial food.

### ॥ ವಿಶೇಷ ವಿಷಯಗಳು ॥

ಉಶನಾ— ಉಶನಸ್ ಎಂಬುವನು ಕವಿಯ ಪುತ್ರನು. ಆದುದರಿಂದ ಇವನಿಗೆ ಉಶನಾಃ ಕಾವ್ಯಃ ಎಂಬ ಹೆಸರು ರೂಢಿಯಾಗಿರುವುದು. (ಋ. ಸಂ. ೪-೨೬-೧) ಈ ಉಶನಸ್ ಎಂಬುವನು ಒಬ್ಬ ಬಹು ಪುರಾತನನಾದ ಋಷಿಯು. ಸಾಧಾರಣವಾಗಿ ಕುತ್ಸ, ಮತ್ತು ಇಂದ್ರನೊಡನೆ ಇವನ ಹೆಸರು ಋಗ್ವೇದದ ಅನೇಕ ಋಕ್ಕುಗಳಲ್ಲಿ ಋ. ಸಂ. ೧-೫೧-೧೦; ೧-೮೩-೫; ೧-೧೨೧-೧೨; ೪-೧೬-೨; ೬-೨೦-೧೧; ೮-೨೩-೧೭; ೯-೮೭-೩; ೯-೯೭-೭; ೧೦-೪೦-೭; ೧-೧೩೦-೯ : ೫-೩೧-೮; ೫-೩೪-೨; ೮-೭-೨೬ : ೧೦-೨೨-೬ ಋಕ್ಕುಗಳಲ್ಲಿಯೂ ಅಥರ್ವವೇದ ೪-೨೯-೬ರಲ್ಲಿಯೂ ಪಠಿತವಾಗಿದೆ. ಅಸುರರು ದೇವತೆಗಳೊಡನೆ ಯುದ್ಧಮಾಡಿದಾಗ ಇವನು ಅಸುರರಿಗೆ ಪುರೋಹಿತನಾಗಿದ್ದನೆಂದು ತೈ. ಸಂ. ೨-೫-೮-೫; ಪಂಚವಿಂಶಬ್ರಾಹ್ಮಣ. ೭-೫-೨೦; ಸಾಂಖ್ಯಾಯನಶ್ರೌತಸೂತ್ರ ೧೪-೨೭-೧ ಇತ್ಯಾದಿ ಸ್ಥಳಗಳಲ್ಲಿ ಹೇಳಿದೆ.

ಮಜ್ಮನಾ— ಎಲ್ಲವನ್ನೂ ಕಂಡುಹಿಡಿಯುವಂತಹ ತೀಕ್ಷ್ಣಸ್ವಭಾವ. ಶುಕ್ರಾಚಾರ್ಯರು ದೇವಸೈನ್ಯವನ್ನು ನಾಶಗೊಳಿಸಲು ಉಪಯೋಗಿಸಿದ ಶಕ್ತಿ ಇದು.

ರೋದಸೀ— ಭೂಮ್ಯಂತರಿಕ್ಷಗಳು. ಇಲ್ಲಿ ವೃತ್ರಾಸುರನಿಂದ ಪೀಡಿತಗಳಾದ ಭೂಮ್ಯಂತರಿಕ್ಷಗಳನ್ನು ನೀನು ರಕ್ಷಿಸು ಎಂದು ಇಂದ್ರನನ್ನು ಪ್ರಾರ್ಥಿಸುವ ಸನ್ನಿವೇಶ ಇದು. **ಯಸ್ಯ ಶುಷ್ಮಾದ್ರೋದಸೀ ಅಭ್ಯಸೇತಾಂ** (ಋ. ಸಂ. ೨-೧೨-೧) ಎಂಬ ಶ್ರುತಿಯು ಈ ಅರ್ಥವನ್ನು ಸಮರ್ಥಿಸುವುದು.

ಶವಃ— ಈ ಪದವು ಬಲ ಅಥವಾ ಸೈನ್ಯಾರ್ಥದಲ್ಲಿ ಇಲ್ಲಿ ಉಪಯುಕ್ತವಾಗಿದೆ.

ನೃಮಣಃ— ರಕ್ಷಿಸಲ್ಪಡಬೇಕಾದ ಯಾಗದೀಕ್ಷಿತರನ್ನು ಅನುಗ್ರಹಬುದ್ಧಿಯಿಂದ ಕಾಪಾಡುವವನು. (ಇಂದ್ರ).

ಶ್ರವಃ ಅಭಿ— ಹವಿರ್ಲಕ್ಷಣಮನ್ನಮಭಿಲಕ್ಷ್ಯ । ಇಲ್ಲಿ ವಾಯುವೇಗದಿಂದ ಓಡುವ ನಿನ್ನ (ಇಂದ್ರನ) ಕುದುರೆಗಳು ಶತ್ರು ಸಂಹಾರ ಕಾಲದಲ್ಲಿ ಯಜಮಾನರು (ಯಾಗದೀಕ್ಷಿತರು) ಕೊಡುವ ಹವಿಸ್ಸನ್ನು ಎದುರು ನೋಡುತ್ತಾ ಇಲ್ಲಿಗೆ ಬರಲಿ ಎಂದಭಿಪ್ರಾಯವು.



CC-0. Jangamwadi Math Collection. Digitized by eGangotri

|| ವ್ಯಾಕರಣಪ್ರಕ್ರಿಯಾ ||

**ತಕ್ಷತ್**—ತಕ್ಷೂ ತ್ವಕ್ಷೂ ತನೂಕರಣೇ ಧಾತು. ಭ್ವಾದಿ ಲಙ್ ಪ್ರಥಮಪುರುಷ ಏಕವಚನರೂಪ. ಶಪ್ ವಿಕರಣಪ್ರತ್ಯಯ ಬರುತ್ತದೆ. ತಿಪಿನ ಇಕಾರಕ್ಕೆ ಲೋಪಬರುತ್ತದೆ. **ಬಹುಲಂಛಂದಸ್ಯಮಾಙ್-ಯೋಗೇsಪಿ** ಎಂಬುದರಿಂದ ಲಙ್ ನಿಮಿತ್ತಕವಾದ ಅಡಾಗಮ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತ ಸ್ವರಬರುತ್ತದೆ. **ಧಾತೋಃ** ಎಂಬುದರಿಂದ ಧಾತುವಿನ ಅಂತೋದಾತ್ತಸ್ವರವೇ ಉಳಿಯುತ್ತದೆ.

**ಉಶನಾ**—ವಶ ಕಾಂತೌ ಧಾತು ಅದಾದಿ **ವಶೇಃಕನಸಿಃ** (ಉ. ಸೂ. ೪-೬೭೮) ಎಂಬುದರಿಂದ ಕನಸ್ ಪ್ರತ್ಯಯ ಬರುತ್ತದೆ. ಕಿತ್ತಾದುದರಿಂದ **ಗ್ರಹಿಜ್ಯಾವಯಿ**—ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ವಕಾರಕ್ಕೆ ಉಕಾರಬಂದರೆ ಉ+ಅಶ್+ಅನಸ್ ಎಂದಾಗುತ್ತದೆ ಸಂಪ್ರಸಾರಣದ ಪರದಲ್ಲಿರುವ ಅಕಾರಕ್ಕೆ ಪೂರ್ವ ರೂಪಬಂದರೆ ಉಶನಸ್ ಶಬ್ದವಾಗುತ್ತದೆ. ಪ್ರಥಮಾ ಏಕವಚನ ಪರದಲ್ಲಿರುವಾಗ ಉಶನಸ್+ಸ್ ಎಂದಿರುವಾಗ **ಋದುಶನಸ್ಪುರುದಂಸೋಽನೇಹಸಾಂ ಚ** (ಪಾ. ಸೂ. ೭-೧-೯೪) ಅಸಂಬುದ್ಧಿಸು ಪರದಲ್ಲಿರುವಾಗ ಋದಂತ ಶಬ್ದಗಳಿಗೂ ಉಶನಸಾದಿಗಳಿಗೂ ಅನಙಾದೇಶ ಬರುತ್ತದೆ ಎಂಬುದರಿಂದ ಅನಙ್ ಬರುತ್ತದೆ. ಙಿತ್ತಾದುದರಿಂದ ಅಂತ್ಯಾದೇಶವಾಗಿ ಬರುತ್ತದೆ. ಉಶನನ್ ಎಂದಾಗುತ್ತದೆ. **ಸರ್ವನಾಮಸ್ಥಾನೇ ಚಾಸಂಬುದ್ಧೌ** (ಪಾ. ಸೂ. ೬-೪-೮) ಸೂತ್ರದಿಂದ ಸು ಪರದಲ್ಲಿರುವಾಗ ನಾಂತದ ಉಪಧೆಗೆ ದೀರ್ಘ ಬರುತ್ತದೆ. ಹಲ್‌ಙ್ಯಾದಿ ಸೂತ್ರದಿಂದ ಸುಲೋಪ ಬರುತ್ತದೆ. **ನಲೋಪಃ ಪ್ರಾತಿಪದಿಕಾಂತಸ್ಯ** ಸೂತ್ರದಿಂದ ನಲೋಪ ಬಂದರೆ ಉಶನಾ ಎಂದು ರೂಪವಾಗುತ್ತದೆ.

**ಮಜ್ಮನಾ**—ಟುಮಸ್ಜೋ ಶುದ್ಧೌ ಧಾತು ತುದಾದಿ. ಇದಕ್ಕೆ ಉಣಾದಿಸಿದ್ಧವಾದ ಮನಿ ಪ್ರತ್ಯಯವು ಬರುತ್ತದೆ. ಮಸ್ಜ್+ಮನ್ ಎಂದಿರುವಾಗ **ಸ್ಕೋಃ ಸಂಯೋಗಾದ್ಯೋಃ**—ಸೂತ್ರದಿಂದ ಸಕಾರಕ್ಕೆ ಲೋಪ ಬರುತ್ತದೆ. ತೃತೀಯಾ ಏಕವಚನದಲ್ಲಿ ಮಜ್ಮನಾ ಎಂದು ರೂಪವಾಗುತ್ತದೆ.

**ನೃಮಣಃ**—ಹಿನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

**ಅವಹನ್**—ವಹ ಪ್ರಾಪಣೇ ಧಾತು ಭ್ವಾದಿ. ಛಂದಸಿ **ಲುಙ್‌ಲಙ್‌ಲಿಟಃ** ಎಂಬುದರಿಂದ **ಪ್ರಾರ್ಥ**ನಾರೂಪ ಅರ್ಥದಲ್ಲಿ ಲಙ್ ಬರುತ್ತದೆ. ಲಙ್ ಪ್ರಥಮಪುರುಷ ಬಹುವಚನದಲ್ಲಿ ಅವಹನ್ ಎಂದು ರೂಪವಾಗುತ್ತದೆ. ನಿಘಾತಸ್ವರ ಬರುತ್ತದೆ.

|| ಸಂಹಿತಾಪಾಠಃ ||

ಮಂದಿಷ್ಟ ಯದುಶನೇ ಕಾವ್ಯೇ ಸಚಾ಼ ಇಂದ್ರೋ ವಂಕ್ಕೂ ವಂಕುತರಾಧಿ ತಿಷ್ಠತಿ ।
ಉಗ್ರೋ ಯಯಿಂ ನಿರಪಃ ಸ್ರೋತಸಾಸೃಜದ್ವಿ ಶುಷ್ಣಸ್ಯ ದೃಂಹಿತಾ ಐರಯತ್ಪುರಃ ॥ ೧೧ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಮಂದಿಷ್ಟ । ಯತ್ । ಉಶನೇ । ಕಾವ್ಯೇ । ಸಚಾ । ಇಂದ್ರಃ । ವಂಕೂ ಇತಿ । ವಂಕುತರಾ । ಅಧಿ । ತಿಷ್ಠತಿ ।

ಉಗ್ರಃ । ಯಯಿಂ । ನಿಃ । ಅಪಃ । ಸ್ರೋತಸಾ । ಅಸೃಜತ್ । ವಿ । ಶುಷ್ಣಸ್ಯ । ದೃಂಹಿತಾಃ । ಐರಯತ್ । ಪುರಃ ॥ ೧೧ ॥

॥ ಸಾಯಣಭಾಷ್ಯಂ ॥

ಯದ್ಯದೇಂದ್ರ ಉಶನೇ ಕಾಮಯಮಾನೇ ಕಾವ್ಯೇ ಸಚಾ ಸಹ ಮಂದಿಷ್ಟ ಸ್ತುತೋಽಭೂತ್ ತದಾನೀಂ ವಂಕೂ ವಂಕುತರಾತಿಶಯೇನ ಕುಟಿಲಂ ಗಚ್ಛಂತಾವಶ್ವಾವಧಿತಿಷ್ಠತಿ । ರಥೇ ಸಂಯೋಜ್ಯ ತಮಾರೋಹತೀತ್ಯರ್ಥಃ । ಯದ್ವಾ ವಂಕುತರಾತಿಶಯೇನ ವಕ್ರಂ ಗಚ್ಛತಿ ರಥೇ ವಂಕೂ ವಕ್ರಗಮನಶೀಲಾವಶ್ವೌ ಸಂಯೋಜ್ಯೇತಿ ಯೋಜನೀಯಂ । ಉಗ್ರ ಉದ್ಗೂರ್ಣಸ್ತಾದೃಶ ಇಂದ್ರೋ ಯಯಿಂ ಗಮನಯುಕ್ತಾನ್ಮೇಘಾತ್ ಸ್ರೋತಸಾ ಪ್ರವಾಹರೂಪೇಣಾಪೋ ನಿರಸೃಜತ್ । ಜಲಾನಿ ನಿರಗಮಯತ್ । ತಥಾ ಶುಷ್ಣಸ್ಯ ಸರ್ವಸ್ಯ ಶೋಷಯಿತುರಸುರಸ್ಯ ದೃಂಹಿತಾಃ ಪ್ರವೃದ್ಧಾಃ ಪುರೋ ನಗರಾಣಿ ನಿವಾಸಸ್ಥಾನಾನಿ ವ್ಯೈರಯತ್। ವಿವಿಧಂ ಪ್ರೇರಿತವಾನ್॥ ಮಂದಿಷ್ಟ । ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು। ಲುಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಉಶನೇ । ವಶೇರೌಣಾದಿಕಃ ಕ್ಯುಪ್ರತ್ಯಯಃ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಯೋರನಾದೇಶಃ । ಸಚಾ । ಷಚ ಸಮವಾಯೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಆಙ್ಯಾಜಯಾರಾಂ ಚೋಪಸಂಖ್ಯಾನಂ । ಮ. ೭-೧-೩೯-೧ । ಇತಿ ವಿಭಕ್ತೇರಾಜಾದೇಶಃ । ಸಂಹಿತಾಯಾಂ ಆಙೋಽನುನಾಸಿಕಶ್ಛಂದಸಿ । ಪಾ. ೬-೧-೧೨೬. । ಇತಿ ತಸ್ಯ ಸಾನುನಾಸಿಕತ್ವಂ । ವಂಕೂ । ವಂಚು ಗತೌ । ಔಣಾದಿಕ ಉಪ್ರತ್ಯಯಃ । ಬಹುಲವಚನಾತ್ಕುತ್ವಂ । ವಂಕುತರಾ । ಅತಿಶಯೇನ ವಂಕೂ ವಂಕುತರಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಅತ್ರ ಗತಿಸಾಮಾನ್ಯವಾಚಿನಾ ಗತಿವಿಶೇಷೋ ಲಕ್ಷ್ಯತೇ ಯಯಿಂ । ಯಾ ಪ್ರಾಪಣೇ । ಆದೃಗಮಹನಜನ ಇತಿ ಕಿಪ್ರತ್ಯಯಃ । ಸುಪಾಂ ಸುಪೋ ಭವಂತೀತಿ ಲಿಙ್ವದ್ಭಾವಾತ್ ದ್ವಿರ್ವಚನಹ್ರಸ್ವತ್ವೇ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ। ಪ್ರತ್ಯಯಸ್ವರಃ ।ಪಂಚಮ್ಯಾ ಅಮಾದೇಶಃ । ದೃಂಹಿತಾಃ । ದೃಹಿ ವೃದ್ಧೌ। ಇದಿತ್ತ್ವಾನ್ನುಮ್ । ಐರಯತ್ । ಈರ ಪ್ರೇರಣೇ । ಚೌರಾದಿಕಃ । ಲಙ್ಯಾಡಾಗಮಃ । ಆಟಶ್ಚ । ಪಾ. ೬-೧- ೯೦ । ಇತಿ ವೃದ್ಧಿಃ ॥

॥ ಪ್ರತಿಪದಾರ್ಥ ॥

ಯತ್—ಯಾವಾಗ । ಇಂದ್ರಃ—ಇಂದ್ರನು । ಉಶನೇ ಕಾವ್ಯೇ ಸಚಾ—ಕವಿಪುತ್ರನಾದ ಉಶನಸ್ಸಿನಿಂದ ಸ್ತುತನಾಗಿ । ಮಂದಿಷ್ಟ—ತೃಪ್ತನಾದನೋ (ಆಗ) । ವಂಕೂ ವಂಕುತರಾ—ಅತ್ಯಂತ ಕುಟಿಲಗಮನವುಳ್ಳ (ಅಶ್ವಗಳಿಂದ ಎಳೆಯಲ್ಪಡುವ ರಥವನ್ನು) ಅಥವಾ ವಂಕುತರಾ ವಂಕೂ—ಅತ್ಯಂತ ಕುಟಿಲ



CC-0. Jangamwadi Math Collection. Digitized by eGangotri

ವಾಗಿ ಹೋಗುವ (ರಥಕ್ಕೆ) ವಕ್ರಗಮನ ಶೀಲಗಳಾದ (ಕುದುರೆಗಳನ್ನು ಕಟ್ಟಿ) ಅಧಿ ತಿಷ್ಠತಿ—ಹತ್ತಿ ಕುಳಿತು ಕೊಳ್ಳುತ್ತಾನೆ । ಉಗ್ರಃ—(ಅಂತಹ) ಭಯಂಕರನಾದ ಇಂದ್ರನು । ಯೆಯಿಂ—ಸಂಚರಿಸುವ ಮೇಘದಿಂದ ಸ್ರೋತಸಾ—ಪ್ರವಾಹರೂಪವಾಗಿ । ಅಪಃ—ನೀರುಗಳನ್ನು । ನಿಃ ಅಸೃಜತ್—ಹೊರಡಿಸಿ ಹರಿಸಿದನು. (ಹಾಗೆಯೆ) । ಶುಷ್ಣಸ್ಯ—ಶುಷ್ಣನೆಂಬ ಸರ್ವಶೋಷಕನಾದ ರಾಕ್ಷಸನ । ದೃಂಹಿತಾಃ—ವಿಸ್ತಾರವಾಗಿ ಬೆಳೆದಿರುವ । ಪುರಃ—ಪಟ್ಟಣಗಳನ್ನು । ವಿ ಐರಯತ್—ನಾನಾವಿಧವಾಗಿ ಬೆದರಿಸಿದನು. (ಧ್ವಂಸಮಾಡಿದನು).

॥ ಭಾವಾರ್ಥ ॥

ಇಂದ್ರನು ತನಗೆ ಅಭೀಷ್ಟವಾದ ಸ್ತೋತ್ರದಿಂದ ತೃಪ್ತನಾದಾಗ ಅತ್ಯಂತ ಕುಟಿಲಗಮನವುಳ್ಳ ಅಶ್ವಗಳು ಎಳೆಯುವ ರಥವನ್ನು ಹತ್ತಿ ಕುಳಿತುಕೊಳ್ಳುತ್ತಾನೆ. ಭಯಂಕರನಾದ ಇಂದ್ರನು ಸಂಚರಿಸುವ ಮೇಘದಿಂದ ಪ್ರವಾಹರೂಪವಾಗಿ ನೀರುಗಳನ್ನು ಹೊರಡಿಸಿ ಹರಿಸಿದನು. ವಿಸ್ತಾರವಾಗಿ ಬೆಳೆದಿರುವ ಸರ್ವಶೋಷಕನಾದ ಶುಷ್ಣನೆಂಬ ರಾಕ್ಷಸನ ಪಟ್ಟಣಗಳನ್ನು ನಾನಾ ವಿಧವಾಗಿ ಹೊಡೆದು ಧ್ವಂಸಮಾಡಿದನು.

## English Translation.

When Indra is delighted with acceptable hymns, he ascends (his car) drawn by more and more obliquely-curveting horses ; fierce, he extracts the water from the passing cloud in a torrent, and has overwhelmed the extensive cities of Sushna.

॥ ವಿಶೇಷ ವಿಷಯಗಳು ॥

ಸಚಾ—ಈ ಶಬ್ದವು ಸಹಾರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ.

ವಙ್ಕೂ ವಙ್ಕುತರಾಧಿತಿಷ್ಠತಿ—ಅತಿಶಯವಾದ ರೀತಿಯಲ್ಲಿ ವಕ್ರರೀತಿಯಿಂದ ಹೋಗುವ ಕುದುರೆಗಳನ್ನು ರಥಕ್ಕೆ ಕಟ್ಟಿ ಇಂದ್ರನು ಯುದ್ಧಕ್ಕಾಗಿ ಹೊರಡುವನು. ಅಥವಾ ವಕ್ರಮಾರ್ಗದಲ್ಲಿ ಮುಂದುವರಿಯುವ ತನ್ನ ರಥಕ್ಕೆ ಬಲಿಷ್ಠವಾದ ಕುದುರೆಗಳನ್ನು ಕಟ್ಟಿಕೊಂಡು ಇಂದ್ರನು ಯುದ್ಧಾಭಿಮುಖನಾಗುವನು. ಎಂಬ ಎರಡು ರೀತಿಯ ಅರ್ಥವೂ ಮೇಲಿನ ವಾಕ್ಯದಿಂದ ತೋರಿಬರುವುದು ವಙ್ಕು-ಗತೌ ಎಂಬ ಧಾತುವಿನಿಂದ ಸಾಮಾನ್ಯಗತ್ಯರ್ಥಬೋಧಕವಾಗಿರುವ ವಙ್ಕು ಶಬ್ದಕ್ಕೆ ಗತಿವಿಶೇಷಾರ್ಥವನ್ನು ಹೇಳುವುದೇ ತರಪ್ಪ್ರತ್ಯಯಸಹಿತವಾದ ವಙ್ಕುಶಬ್ದದ ಉದ್ದೇಶ.

ಶುಷ್ಣಸ್ಯ—ಸರ್ವವನ್ನೂ ಒಣಗಿಸುವ ಎಂದರೆ ನೀರಸವನ್ನಾಗಿ ಮಾಡುವವನು, ರಾಕ್ಷಸ.

॥ ವ್ಯಾಕರಣಪ್ರಕ್ರಿಯಾ ॥

ಮಂದಿಷ್ಟ—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ ಬರುತ್ತದೆ. ಚ್ಲಿಗೆ ಸಿಚಾದೇಶ ಬರುತ್ತದೆ. ಧಾತುವು ಇದಿತ್ತಾದುದರಿಂದ ನುಮಾಗಮ ಬರುತ್ತದೆ. ಸಿಚಿಗೆ ಇಡಾಗಮ ಬರುತ್ತದೆ. ಆದೇಶ ಪತ್ವಬಂದರೆ ಮಂದಿಷ್ಟ ಎಂದು ರೂಪವಾಗುತ್ತದೆ. ಬಹುಲಂ ಛಂದಸ್ಯಮಾಙ್ ಯೋಗೇಽಪಿ ಸೂತ್ರದಿಂದ ಅಡಾಗಮ ಬರುವುದಿಲ್ಲ.





CC-0. Jangamwadi Math Collection. Digitized by eGangotri

ಉಶನೇ—ವಶ ಕಾಂತೌ ಧಾತು. ಔಣಾದಿಕ ಕ್ಯ ಪ್ರತ್ಯಯ ಬರುತ್ತದೆ. ಯುವೋರನಾಕೌ ಸೂತ್ರದಿಂದ ಅವಶಿಷ್ಟವಾಗುವ ಯು ಎಂಬುದಕ್ಕೆ ಅನಾದೇಶ ಬರುತ್ತದೆ. ಗ್ರಹಿಜ್ಯಾ—ಸೂತ್ರದಿಂದ ಧಾತುವಿಗೆ ಸಂಪ್ರಸಾರಣ ಬರುತ್ತದೆ. ಪರದ ಅಚಿಗೆ ಪೂರ್ವರೂಪ ಬಂದರೆ ಉಶನ ಎಂದು ರೂಪವಾಗುತ್ತದೆ. ಸಪ್ತಮೀ ಏಕವಚನ ರೂಪ.

ಸಚಾ—ಷಚ ಸಮವಾಯೇ ಧಾತು. ಭ್ವಾದಿ. ಸಂಪದಾದಿಭ್ಯಃ ಕ್ವಿಪ್ (ಪಾ. ೩೩೩೩) ಎಂಬುದರಿಂದ ಇದು ಸಂಪದಾದಿಯಲ್ಲಿ ಸೇರಿರುವುದರಿಂದ ಕ್ವಿಪ್ ಪ್ರತ್ಯಯ ಬರುತ್ತದೆ. ಧಾತ್ವಾದೇಃ—ಸೂತ್ರದಿಂದ ಸಕಾರಕ್ಕೆ ಸಕಾರ ಬರುತ್ತದೆ. ತೃತೀಯಾ ಏಕವಚನದಲ್ಲಿ ಟಾ ಬರುತ್ತದೆ. ಅದಕ್ಕೆ ಆಙ್ಯಾಜಯಾರಾಂ ಚೋಪಸಂಖ್ಯಾನಮ್ (ವಾ. ಮ. ೭-೧-೩೯-೧) ಎಂಬುದರಿಂದ ಆಚ್ ಆದೇಶ ಬರುತ್ತದೆ. ಸಂಹಿತಾಪಾಠದಲ್ಲಿ ಆಙೋಽನುನಾಸಿಕಶ್ಛಂದಸಿ (ಪಾ. ಸೂ. ೬-೧-೧೨೬) ಎಂಬುದರಿಂದ ಬಂದಿರುವ ಆಚಿಗೆ ಅನುನಾಸಿಕತ್ವವು ಬರುತ್ತದೆ.

ವಜ್ರೂ—ವಂಚು ಗತೌ ಧಾತು. ಉಣಾದಿಸಿದ್ಧವಾದ ಉ ಪ್ರತ್ಯಯ ಬರುತ್ತದೆ. ಛಂದಸ್ಸಿನಲ್ಲಿ ಬಹುಲವಚನವಿರುವುದರಿಂದ ನಿಮಿತ್ತವಿಲ್ಲದಿದ್ದರೂ ಕುತ್ವ ಬರುತ್ತದೆ. ದ್ವಿತೀಯಾ ದ್ವಿವಚನದಲ್ಲಿ ಪೂರ್ವ ಸವರ್ಣ ದೀರ್ಘ ಬಂದರೆ ವಜ್ರೂ ಎಂದು ರೂಪವಾಗುತ್ತದೆ.

ವಙ್ಕುತರಾ—ಅತಿಶಯೇನ ವಙ್ಕೂ ವಙ್ಕುತರಾ. ದ್ವಿವಚನ ವಿ—ಸೂತ್ರದಿಂದ ತರಪ್ ಪ್ರತ್ಯಯ ಬರುತ್ತದೆ. ದ್ವಿತೀಯಾ ದ್ವಿವಚನದ ಔ ಪ್ರತ್ಯಯಕ್ಕೆ ಛಂದಸ್ಸಿನಲ್ಲಿ ಸುಪಾಂ ಸುಲುಕ್—ಸೂತ್ರದಿಂದ ಆಕಾರಾದೇಶ ಬರುತ್ತದೆ. ವಙ್ಕುತರಾ ಎಂದು ರೂಪವಾಗುತ್ತದೆ. ಇಲ್ಲಿ ಗತಿಸಾಮಾನ್ಯಬೋಧಕಶಬ್ದದಿಂದ ಗತಿವಿಶೇಷವು ಲಕ್ಷಣಾದಿಂದ ಬೋಧಿತವಾಗುತ್ತದೆ. ಕುಟಿಲಗಮನವೆಂದು ವಿಶೇಷಾರ್ಥ ತೋರುತ್ತದೆ.

ಯಯಿಮ್—ಯಾ ಪ್ರಾಪಣೇ ಧಾತು. ಅದಾದಿ. ಆದೃಗಮಹನಜನ—(ಪಾ. ಸೂ. ೩-೨-೧೭೧) ಸೂತ್ರದಿಂದ ಆದಂತವಾದುದರಿಂದ ಕಿ ಪ್ರತ್ಯಯ ಬರುತ್ತದೆ. ಇದಕ್ಕೆ ಲಿಡ್ವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವವೂ ಅಭ್ಯಾಸಕ್ಕೆ ಹ್ರಸ್ವವೂ ಬರುತ್ತದೆ. ಯಯಾ+ಇ ಎಂದಿರುವಾಗ ಆತೋ ಲೋಪ ಇಟಿ ಚ ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತಸ್ವರ ಬರುತ್ತದೆ. ಸುಪಾಂ ಸುಪೋ ಭವಂತಿ ಎಂಬುದರಿಂದ ಪಂಚಮಿಗೆ ಅಮಾದೇಶ ಬರುತ್ತದೆ. ಅಮಿಪೂರ್ವಃ ಎಂಬುದರಿಂದ ಪೂರ್ವರೂಪ ಬಂದರೆ ಯಯಿಂ ಎಂದು ರೂಪವಾಗುತ್ತದೆ.

ದೃಂಹಿತಾಃ—ದೃಹಿ ವೃದ್ಧೌ ಧಾತು. ಭ್ವಾದಿ. ಇದಿತ್ತಾದುದರಿಂದ ಧಾತುವಿಗೆ ನುಮಾಗಮ ಬರುತ್ತದೆ ಕ್ತ ಪ್ರತ್ಯಯಕ್ಕೆ ಇಡಾಗಮ ಬಂದರೆ ದೃಂಹಿತ ಎಂದು ರೂಪವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ದೃಂಹಿತಾಃ ಎಂದು ರೂಪವಾಗುತ್ತದೆ.

ಐರಯತ್—ಈರ ಪ್ರೇರಣೇ. ಧಾತು. ಚುರಾದಿ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ ಬರುತ್ತದೆ. ಚುರಾದಿಗೆ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ಶಪ್ ವಿಕರಣ ಬರುತ್ತದೆ. ಅಜಾದಿಯಾದುದರಿಂದ ಆಡಾಗಮ ಬರುತ್ತದೆ. ಆ+ಈರಿ+ಅತ್ ಎಂದಿರುವಾಗ ಆಟಶ್ಚ (ಪಾ. ಸೂ. ೬-೧-೯೦) ಎಂಬುದರಿಂದ ಆಟಿಗೆ ಅಚ್ ಪರದಲ್ಲಿರುವುದರಿಂದ ವೃದ್ಧಿ ಬರುತ್ತದೆ. ಐರಯತ್ ಎಂದು ರೂಪವಾಗುತ್ತದೆ.

---



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಆ ಸ್ಮಾ ರಥಂ ವೃಷಪಾಣೇಷು ತಿಷ್ಠಸಿ ಶಾರ್ಯಾತಸ್ಯ ಪ್ರಭೃತಾ ಯೇಷು
ಮಂದಸೇ ।
ಇಂದ್ರ ಯಥಾ ಸುತಸೋಮೇಷು ಚಾಕನೋಽನರ್ವಾಣಂ ಶ್ಲೋಕಮಾ
ರೋಹಸೇ ದಿವಿ ॥ ೧೨ ॥

॥ ಪದಪಾಠಃ ॥

ಆ । ಸ್ಮ । ರಥಂ । ವೃಷಽಪಾನೇಷು । ತಿಷ್ಠಸಿ । ಶಾರ್ಯಾತಸ್ಯ । ಪ್ರಽಭೃತಾಃ
ಯೇಷು । ಮಂದಸೇ ।
ಇಂದ್ರ । ಯಥಾ । ಸುತಽಸೋಮೇಷು । ಚಾಕನಃ । ಅನರ್ವಾಣಂ । ಶ್ಲೋಕಂ ।
ಆ । ರೋಹಸೇ । ದಿವಿ ॥ ೧೨ ॥

॥ ಸಾಯಣಭಾಷ್ಯಂ ॥

ಅತ್ರ ಕೌಷೀತಕಿನ ಇತಿಹಾಸಮಾಚಕ್ಷತೇ । ಶಾರ್ಯಾತನಾಮ್ನೋ ರಾಜರ್ಷೇರ್ಯಜ್ಞೇ ಭೃಗುಗೋತ್ರೋತ್ಪನ್ನಶ್ಚ್ಯವನೋ ಮಹರ್ಷಿರಾಶ್ವಿನಂ ಗ್ರಹಮಗೃಹ್ಣಾತ್ । ಇಂದ್ರಸ್ತಂ ದೃಷ್ಟ್ವಾ ಕ್ರುದ್ಧೋಽಭೂತ್। ತಮಿಂದ್ರಮನುನೀಯ ಪುನಃ ಸೋಮಂ ತಸ್ಮೈ ಪ್ರಾದಾದಿತಿ । ಅಯಮರ್ಥೋಽಸ್ಯಾಂ ಪ್ರತಿಪಾದ್ಯತೇ ॥ ಹೇ ಇಂದ್ರ ತ್ವಂ ವೃಷಪಾಣೇಷು । ವೃಷ್ಣಃ ಸೇಚನಸಮರ್ಥಸ್ಯ ಸೋಮಸ್ಯ ಪಾನಾನಿ ವೃಷಪಾಣಾನಿ । ತೇಷು ನಿಮಿತ್ತಭೂತೇಷು ರಥಮಾತಿಷ್ಠಸಿ ಸ್ಮ । ಸ್ವಯಮೇವ ರಥಮಾರುಹ್ಯ ಗಚ್ಛಸಿ । ನ ತ್ವನ್ಯಃ ಕಶ್ಚಿತ್ಪ್ರವರ್ತಯಿತೇತಿ ಭಾವಃ । ಏವಂ ಚ ಸತಿ ಯೇಷು ಸೋಮೇಷು ತ್ವಂ ಮಂದಸೇ ಹರ್ಷಂ ಪ್ರಾಪ್ನೋಷಿ ತಾದೃಶಾಃ ಸೋಮಾಃ ಶಾರ್ಯಾತಸ್ಯೈತನ್ನಾಮ್ನೋ ರಾಜರ್ಷೇಃ ಸಂಬಂಧಿನಃ ಪ್ರಭೃತಾಃ । ಪ್ರಕರ್ಷೇಣ ಸಂಪಾದಿತಾಃ । ಅಭಿಷವಾದಿಸಂಸ್ಕಾರೈಃ ಸಂಸ್ಕೃತಾ ಇತ್ಯರ್ಥಃ । ಅತಃ ಸುತಸೋಮೇಷ್ವಭಿಷುತಸೋಮಯುಕ್ತೇಷ್ವನ್ಯದೀಯೇಷು ಯಜ್ಞೇಷು ಯಥಾ ಚಾಕನಃ ಯಥಾ ಕಾಮಯಸೇ ಏವಮಸ್ಯಾಪಿ ಶಾರ್ಯಾತಸ್ಯ ಸೋಮಾನ್ಕಾಮಯಸ್ವ । ತಥಾ ಸತಿ ದಿವಿ ದ್ಯುಲೋಕೇಽನರ್ವಾಣಂ ಗಮನರಹಿತಂ ಸ್ಥಿರಂ ಶ್ಲೋಕಂ ಸ್ತೋತ್ರಲಕ್ಷಣಂ ವಚೋ ಯಶೋ ವಾ ಆ ರೋಹಸೇ । ಪ್ರಾಪ್ನೋಷಿ । ಯದ್ವಾ । ಇಮಂ ಯಜಮಾನಂ ದಿವಿ ದ್ಯುಲೋಕ ಉಕ್ತಲಕ್ಷಣಂ ಯಶಃ ಪ್ರಾಪಯಸಿ ॥ ಸ್ಮ । ನಿಪಾತಸ್ಯ ಚೇತಿ ದೀರ್ಘತ್ವಂ ।



CC-0. Jangamwadi Math Collection. Digitized by eGangotri

ವೃಷಪಾಣೇಷು । ಪಾ ಪಾನೇ । ಭಾವೇ ಲ್ಯುಟ್ । ವಾ ಭಾವಕರಣಯೋಃ । ಪಾ. ೮-೪-೧೦ । ಇತಿ ಪೂರ್ವಪದಸ್ಥಾನ್ನಿಮಿತ್ತಾದುತ್ತರಸ್ಯ ಪಾನಶಬ್ದನಕಾರಸ್ಯ ಣತ್ವಂ। ಪ್ರಭೃತಾಃ । ಭೃಞ್ ಭರಣೇ। ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಮಂದಸೇ । ಮದಿ ಸ್ತುತಿಮೋದಮದಸ್ವಪ್ನಕಾಂತಿ-ಗತಿಷು । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ಚಾಕನಃ । ಕನ ದೀಪ್ತಿಕಾಂತಿ-ಗತಿಷು । ಅತ್ರ ಕಾಂತ್ಯರ್ಥಃ । ಕಾಂತಿಶ್ಚಾಭಿಲಾಷಃ । ಲೇಟಿ ಸಿಪ್ಯಡಾಗಮಃ । ಬಹುಲಂ ಛಂದಸೀತಿ ಶಪಃ ಶ್ಲುಃ । ಕುಜಾದಿತ್ವಾದಭ್ಯಾಸಸ್ಯ ದೀರ್ಘತ್ವಂ । ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೆ ಇತ್ಯಭ್ಯಸ್ತಸ್ಯಾದ್ಯು-ದಾತ್ತತ್ವಾಭಾವೇ ಧಾತೋರಿತಿ ಧಾತ್ವಂತಸ್ಯೋದಾತ್ತತ್ವಂ । ಅನರ್ವಾಣಂ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ದೃಶಿಗ್ರಹಣಾದ್ಭಾವೇ ವನಿಪ್ । ನಞೋ ಬಹುವ್ರೀಹಾವವ್ಯಯರ್ವಣಸ್ತ್ರಸಾವನೇಞ ಇತಿ ಪರ್ಯು-ದಾಸಾತ್ತೃಆದೇಶಾಭಾವೇ ಸರ್ವನಾಮಸ್ಥಾನೇ ಚೇತ್ಯುಪಧಾದೀರ್ಘತ್ವಂ । ನಞ್ಸುಭ್ಯಾಮಿತ್ಯುತ್ತರ-ಪದಾಂತೋದಾತ್ತತ್ವಂ । ಶ್ಲೋಕಂ । ಶ್ಲೋಕೃ ಸಂಘಾತೇ । ಶ್ಲೋಕ್ಯತ ಇತಿ ಶ್ಲೋಕಃ । ಕರ್ಮಣಿ ಘಞ್ । ಞಿತ್ವಾದಾದ್ಯುದಾತ್ತತ್ವಂ । ರೋಹಸೇ । ರುಹೇರ್ವ್ಯತ್ಯಯೇನಾತ್ಮನೇಪದಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ, (ನೀನು) । ವೃಷಪಾಣೇಷು—ಸೋಮರಸಪಾನದ ಸಂದರ್ಭಗಳಲ್ಲಿ । ರಥಂ—ರಥವನ್ನು । ಆತಿಷ್ಠಸಿ—(ಇತರರ ಪ್ರೇರಣೆಯಿಲ್ಲದೇ) ನೀನೇ ಸ್ವಯಂ ಹತ್ತಿ ಹೋಗುತ್ತೀಯೆ. (ಅದ್ದರಿಂದ) । ಯೇಷು—ಯಾವ ಸೋಮರಸಗಳಲ್ಲಿ । ಮಂದಸೇ—(ನೀನು ತೃಪ್ತಿಯನ್ನು ಹೊಂದುತ್ತೀಯೋ (ಅಂತಹ ಸೋಮರಸಗಳು) । ಶಾರ್ಯಾತಸ್ಯ—ಶಾರ್ಯಾತನೆಂಬ ರಾಜರ್ಷಿಯ (ಯಾಗದಲ್ಲಿ) । ಪ್ರಭೃತಾಃ—(ಅಭಿಷ ವಾದಿಸಂಸ್ಕಾರಗಳಿಂದ) ಚೆನ್ನಾಗಿ ಸಂಪಾದಿತವಾಗಿವೆ. (ಅದ್ದರಿಂದ) । ಸುತಸೋಮೇಷು—(ಇತರರು ನೆರವೇರಿ ಸಿದ ಯಾಗಗಳಲ್ಲಿ) ಹಿಂಡಿದ ಸೋಮರಸಗಳಲ್ಲಿ । ಯಥಾ—ಯಾವರೀತಿ । ಚಾಕನಃ—ಇಷ್ಟಪಡುತ್ತೀಯೋ (ಅದೇರೀತಿ ಶಾರ್ಯಾತನಿಂದ ಅರ್ಪಿಸಲ್ಪಟ್ಟ ಸೋಮರಸವನ್ನೂ ಇಚ್ಛಿಸಿಪಾನಮಾಡು) ಮತ್ತು ತೃಪ್ತನಾಗು । ದಿವಿ-ದ್ಯುಲೋಕದಲ್ಲಿ । ಅನರ್ವಾಣಂ—ಸ್ಥಿರವಾದ । ಶ್ಲೋಕಂ—ಯಶಸ್ಸನ್ನು (ಅಥವಾ ಸ್ತೋತ್ರರೂಪವಾದ ವಾಕ್ಯನ್ನು) ಆ ರೋಹಸೇ—ಹೊಂದುತ್ತೀಯೇ (ಅಥವಾ ಯಜಮಾನನಿಗೆ ಆ ಯಶಸ್ಸನ್ನು ತರುತ್ತೀಯೆ).

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಯಜ್ಞಕಾಲದ ಸೋಮರಸಪಾನದ ಸಂದರ್ಭಗಳಲ್ಲಿ ಇತರರ ಪ್ರೇರಣೆಯಿಲ್ಲದೇ ನೀನೇ ಸ್ವಯಂ ರಥವನ್ನು ಹತ್ತಿಹೋಗುತ್ತೀಯೆ. ನಿನಗೆ ತೃಪ್ತಿಯನ್ನು ಕೊಡತಕ್ಕ ಸೋಮರಸಗಳು ಶಾರ್ಯಾತ ನೆಂಬ ರಾಜರ್ಷಿಯ ಯಾಗದಲ್ಲಿ ಸಂಪಾದಿತವಾಗಿವೆ. ಇತರರು ನೆರವೇರಿಸಿದ ಯಾಗಗಳಲ್ಲಿ ಹಿಂಡಿದ ಸೋಮ ರಸಪಾನಕ್ಕಾಗಿ ಹೇಗೆ ಇಷ್ಟಪಡುತ್ತೀಯೋ ಹಾಗೆ ಶಾರ್ಯಾತನಿಂದ ಅರ್ಪಿಸಲ್ಪಟ್ಟ ಸೋಮರಸವನ್ನೂ ಇಚ್ಛಿಸಿ ಪಾನಮಾಡು ಮತ್ತು ತೃಪ್ತನಾಗು. ಅದ್ದರಿಂದ ನೀನು ದ್ಯುಲೋಕದಲ್ಲಿ ಸ್ಥಿರವಾದ ಯಶಸ್ಸನ್ನು ಹೊಂದುತ್ತೀಯೆ ಅಥವಾ ಯಜಮಾನನಾದ ಶಾರ್ಯಾನಿಗೆ ಆ ಯಶಸ್ಸನ್ನು ತರುತ್ತೀಯೇ.



CC-0. Jangamwadi Math Collection. Digitized by eGangotri

## English Translation.

O Indra, you mount your chariot willingly for the sake of drinking the libations; at the sacrifice of Saryata such libations in which you delight have been prepared; be pleased with them, as you are gratified by the effused soma juices at the sacrifices of others, so you obtain imperishable fame in heaven.

॥ ವಿಶೇಷ ವಿಷಯಗಳು ॥

**ಶಾರ್ಯಾತಸ್ಯ**—ಶಾರ್ಯಾತನೆಂಬುವನು ಭೃಗುವಂಶದಲ್ಲಿ ಉತ್ಪನ್ನನಾದ ಒಬ್ಬ ಋಷಿಯು. ಐತರೇಯ ಬ್ರಾಹ್ಮಣದಲ್ಲಿ ಇವನು ಮನುವಂಶದ ಒಬ್ಬ ರಾಜನೆಂದು ಹೇಳಿದೆ. ಶಾರ್ಯಾತನೆಂಬ ಹೆಸರು ಶರ್ಯಾತಿ ಎಂಬುವನ ಮಗನೆಂಬ ಅರ್ಥವನ್ನು ಸೂಚಿಸುವುದು. ಇವನು ವೈವಸ್ವತಮನುವಿನ ನಾಲ್ಕನೆಯ ಮಗನು. ಇವನ ಮಗಳನ್ನು ಚ್ಯವನನೆಂಬ ಋಷಿಯು ಮದುವೆಮಾಡಿಕೊಂಡಾಗ ನಡೆದ ಯಜ್ಞದಲ್ಲಿ ಇಂದ್ರನೂ ಅಶ್ವಿನೀದೇವತೆಗಳೂ ಬಂದಿದ್ದರು. ಆಗ ಚ್ಯವನನು ಅಶ್ವಿನೀದೇವತೆಗಳಿಗಾಗಿ ವಿಾಸಲಾಗಿದ್ದ ಹವಿಸ್ಸನ್ನು ತಾನೇ ಭಕ್ಷಿಸಿದನು. ಇದರಿಂದ ಇಂದ್ರನಿಗೆ ಕೋಪಬಂದಿತು. ಇಂದ್ರನನ್ನು ಸಮಾಧಾನಮಾಡುವುದಕ್ಕಾಗಿ ಬೇರೆ ಹವಿಸ್ಸನ್ನು ಸಿದ್ಧಪಡಿಸಲಾಯಿತು. ಈ ವಿಷಯವನ್ನೇ ಇಲ್ಲಿ ಹೇಳಿರುವುದೆಂದು ಭಾಷ್ಯಕಾರರು ಕೌಷೀತಕೀಬ್ರಾಹ್ಮಣವಾಕ್ಯವನ್ನು ಉದಹರಿಸಿರುವರು. ಈ ವಿಷಯವು ಭಾಗವತ ಮತ್ತು ಪದ್ಮಪುರಾಣಗಳಲ್ಲಿ ಉಕ್ತವಾಗಿದೆ.

**ವೃಷಪಾಣೇಷು**—ಇಲ್ಲಿ ವೃಷಶಬ್ದಕ್ಕೆ ಸೋಮರಸವೆಂಬ ಅರ್ಥವಿದೆ. ಅದು ಸೇಚನಸಮರ್ಥವಾದುದು. ಎಂದರೆ ಯಾಗದಲ್ಲಿ ಪ್ರಾಶನಾದಿ ಸಮಸ್ತಕಾರ್ಯಗಳಿಗೂ ವೀರ್ಯವತ್ತಾಗಿ ನಿಂತು ಸಮಸ್ತದೇವತೆಗಳಿಗೂ ಬಲವನ್ನು ಹೆಚ್ಚಿಸಬಲ್ಲುದು. ಅಂತಹ ಸೋಮವನ್ನು ಪಾನಮಾಡುವ ಕಾರ್ಯದಲ್ಲಿ ದೇವೇಂದ್ರನು ರಥಾರೂಢನಾಗಿ ತಾನೇ ವೇಗದಿಂದ ಹೊರಟುಬರುವನು.

**ಶಾರ್ಯಾತಸ್ಯ ಪ್ರಭೃತಾಃ**—ಶಾರ್ಯಾತನೆಂಬ ಪದವು ಅದೇ ಹೆಸರಿನ ಒಬ್ಬ ರಾಜರ್ಷಿಯ ಹೆಸರನ್ನು ತಿಳಿಸುವುದು. ಹಿಂದೆ ಶಾರ್ಯಾತನೆಂಬ ರಾಜರ್ಷಿಯು ಯಾಗಮಾಡಿದಾಗ, ಭೃಗುಗೋತ್ರೋದ್ಭವನಾದ ಚ್ಯವನ ಮಹರ್ಷಿಯು ಅಶ್ವಿನೀ ದೇವತೆಗಳಿಗೆ ಮೊದಲು ಹವಿರ್ಭಾಗವನ್ನು ಕೊಟ್ಟನು. ಆಗ ಇಂದ್ರನಿಗೆ ವಿಶೇಷವಾಗಿ ಕೋಪಬಂದಿತು. ಆಗ ಶಾರ್ಯಾತನು ಇದನ್ನರಿತು, ಇಂದ್ರನನ್ನು ನಾನಾರೀತಿಯಾಗಿ ಸ್ತುತಿಸಿ ಆತನನ್ನು ಪ್ರಸನ್ನನಾಗಿ ಮಾಡಿಕೊಂಡು, ಅಭಿಷವಾದಿ ಸೋಮರಸವನ್ನು ಸಂಸ್ಕರಿಸುವ ಕರ್ಮಗಳಿಂದ ಶುದ್ಧವಾದ ಸೋಮ ವನ್ನು ಇಂದ್ರನಿಗೆ ಸಮರ್ಪಿಸಿದನು. ಈ ಇತಿಹಾಸವನ್ನು ಈ ಶಾರ್ಯಾತವೆಂಬ ಪದವು ಇಲ್ಲಿ ತಿಳಿಸುವುದು. ಈ ಶಾರ್ಯಾತನ ಹೆಸರು ಋ. ಸಂ. ೩-೫೧-೭ ರಲ್ಲಿಯೂ ಐತರೇಯ ಬ್ರಾಹ್ಮಣ ೪-೩೨-೭ ರಲ್ಲಿಯೂ ಶತಪಥ ಬ್ರಾಹ್ಮಣ ೪-೧-೫-೧; ಜೈಮಿನೀಯ ಬ್ರಾಹ್ಮಣ ೩-೧೨೧ ಈ ಸ್ಥಳಗಳಲ್ಲಿ ಸೂಚಿತವಾಗಿರುವುದು.

**ಅನರ್ವಾಣಂ**—ಇದು ಯಶೋವಾಚಕವಾದ ಶ್ಲೋಕಶಬ್ದಕ್ಕೆ ವಿಶೇಷವಾಗಿದೆ. ಗಮನರಹಿತವಾದದ್ದು ಎಂದರೆ ಚಂಚಲವಾಗದೆ ಸ್ಥಿರವಾದದ್ದು ಎಂಬುದೇ ಇದರ ಅರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಸ್ಮ**—ಚಾದಿಯಲ್ಲಿ ಸೇರಿರುವುದರಿಂದ ನಿಪಾತ. **ನಿಪಾತಸ್ಯ ಚ** (ಪಾ. ಸೂ. ೬-೩-೧೩೬) ಎಂಬುದರಿಂದ ಛಂದಸ್ಸಿನಲ್ಲಿ ಇದಕ್ಕೆ ದೀರ್ಘ ಬರುತ್ತದೆ.



CC-0. Jangamwadi Math Collection. Digitized by eGangotri

ವೃಷಪಾಣೇಷು—ಪಾ ಪಾನೇ ಧಾತು. ಭ್ವಾದಿ. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬರುತ್ತದೆ. ಅನಾದೇಶ ಬಂದರೆ ಪಾನ ಎಂದು ರೂಪವಾಗುತ್ತದೆ. ವೃಷ್ಣಃ ಪಾನಾನಿ ವೃಷಪಾನಾನಿ. ವಾಭಾವಕರಣಯೋಃ (ಪಾ. ಸೂ. ೮-೪-೧೦) ಪೂರ್ವಪದದ ನಿಮಿತ್ತದ ಪರದಲ್ಲಿರುವ ಉತ್ತರಪದವಾದ ಭಾವಾರ್ಥ, ಕರಣಾರ್ಥದಲ್ಲಿ ಇರುವ ಪಾನಶಬ್ದದ ನಕಾರಕ್ಕೆ ಣತ್ವವು ಬರುತ್ತದೆ ಎಂಬುದರಿಂದ ಇಲ್ಲಿ ಭಾವಾರ್ಥದಲ್ಲಿ ಪಾನಶಬ್ದವಿರುವುದರಿಂದ ಣತ್ವ ಬರುತ್ತದೆ. ಸಪ್ತಮೀ ಬಹುವಚನದಲ್ಲಿ ವೃಷಪಾಣೇಷು ಎಂದು ರೂಪವಾಗುತ್ತದೆ.

ಪ್ರಭೃತಾಃ—ಭೃಞ್ ಭರಣೇ ಧಾತು. ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಪ್ರ ಎಂಬುದರೊಡನೆ ಗತಿ ಸಮಾಸವಾದಾಗ, ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಪ್ರಭೃತಾಃ ಎಂಬುದು ಆದ್ಯುದಾತ್ತವಾಗುತ್ತದೆ.

ಮಂದಸೇ—ಮದಿ ಸ್ತುತಿಮೋದಮದಸ್ವಪ್ನಕಾಂತಿಗತಿಷು ಧಾತು. ಇದಿತೋ ನುಮ್ ಧಾತೋಃ ಎಂಬುದರಿಂದ ಧಾತುವಿಗೆ ನುಮಾಗಮ. ಥಾಸಃ ಸೇ ಎಂಬುದರಿಂದ ವಿಭಕ್ತಿಗೆ ಸೇ ಆದೇಶ. ಕರ್ತರಿ ಶಪ್ ಸೂತ್ರದಿಂದ ಶಪ್ ಮಂದಸೇ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ತಾಸ್ಯನುದಾತ್ತೇತ್ ಸೂತ್ರದಿಂದ ಅನುದಾತ್ತವಾಗುತ್ತದೆ. ಧಾತುವಿನ ಅಂತೋದಾತ್ತಸ್ವರದಿಂದ ಮಂದಸೇ ಎಂಬುದು ಆದ್ಯುದಾತ್ತವಾಗುತ್ತದೆ. ಯಚ್ಛಬ್ದಯೋಗವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ.

ಚಾಕನ—ಕನ ದೀಪ್ತಿಕಾಂತಿಗತಿಷು. ಧಾತು. ಇಲ್ಲಿ ಕಾಂತ್ಯರ್ಥದಲ್ಲಿ ಗೃಹೀತವಾಗಿದೆ. ಕಾಂತಿ ಎಂದರೆ ಅಭಿಲಾಷೆ ಎಂದರ್ಥ. ಲೇಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಬರುತ್ತದೆ. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ ಲೇಟೋಽಡಾಟೌ ಎಂಬುದರಿಂದ ಅದಕ್ಕೆ ಅಡಾಗಮ. ಬಹುಲಂ ಛಂದಸಿ ಸೂತ್ರದಿಂದ ಶಪಿನಸ್ಥಾನದಲ್ಲಿ ಶ್ಲು ವಿಕರಣ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಚುತ್ವ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗಗಳು ಬಂದರೆ ಚಕನಃ ಎಂದಾಗುತ್ತದೆ. ಇದು ತುಜಾದಿಯಲ್ಲಿ ಸೇರಿರುವುದರಿಂದ ತುಜಾದೀನಾಂ ದೀರ್ಘೋಽಭ್ಯಾಸಸ್ಯ (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ ಬಂದರೆ ಚಾಕನಃ ಎಂದು ರೂಪವಾಗುತ್ತದೆ. ಅಭ್ಯಸ್ತಸ್ಯಚ (ಪಾ. ಸೂ. ೬-೧-೩೩) ಸೂತ್ರದಿಂದ ಆದ್ಯುದಾತ್ತಸ್ವರವು ಪ್ರಾಪ್ತವಾದರೆ ಸರ್ವೇ ವಿಧಯಃ ಛಂದಸಿ ವಿಕಲ್ಪ್ಯಂತೇ ಎಂಬ ವಚನವಿರುವುದರಿಂದ ಇಲ್ಲಿ ಆದ್ಯುದಾತ್ತವು ಬಾರದಿರುವುದರಿಂದ ಧಾತೋಃ ಎಂಬುದರಿಂದ ಧಾತ್ವಂತಕ್ಕೆ ಉದಾತ್ತಸ್ವರವು ಬರುತ್ತದೆ. ಚಾಕನಃ ಎಂಬುದು ಮಧ್ಯೋದಾತ್ತವಾದ ಪದವಾಗುತ್ತದೆ.

ಅನರ್ವಾಣಮ್—ಋ ಗತೌ ಧಾತು. ಅನ್ಯೇಭ್ಯೋಽಪಿ ದೃಶ್ಯಂತೇ (ಪಾ. ಸೂ. ೩-೨-೭೫) ಸೂತ್ರದಲ್ಲಿ ದೃಶಿಗ್ರಹಣದಿಂದ ಭಾವಾರ್ಥದಲ್ಲಿ ಇಲ್ಲಿ ವನಿಪ್ ಪ್ರತ್ಯಯ. ವನಿಪ್ ಪರದಲ್ಲಿರುವಾಗ ಧಾತುವಿಗೆ ಗುಣ ಅರ್ವನ್ ಶಬ್ದವಾಗುತ್ತದೆ. ಇದಕ್ಕೆ ನಞ್‌ನೊಡನೆ ಬಹುವ್ರೀಹಿ ಸಮಾಸಮಾಡಿದಾಗ ಅನರ್ವನ್ ಶಬ್ದವಾಗುತ್ತದೆ. ಇದಕ್ಕೆ ಅಮ್ ಪರದಲ್ಲಿರುವಾಗ ಅರ್ವಣಸ್ತ್ರಸಾವನಞಃ ಎಂಬ ಸೂತ್ರದಲ್ಲಿ ಅನಞಃ ಎಂದು ಪರ್ಯುದಾಸ ಮಾಡಿರುವುದರಿಂದ ತೃ ಆದೇಶವು ಬರುವುದಿಲ್ಲ. ಸರ್ವನಾಮಸ್ಥಾನೇ ಚಾಸಂಬುದ್ಧೌ ಎಂಬುದರಿಂದ ಉಪಧಾ ದೀರ್ಘ. ರೇಫದ ಪರದಲ್ಲಿ ನಕಾರವಿರುವುದರಿಂದ ಅಟ್‌ಕುಪ್ವಾಙ್-ಸೂತ್ರದಿಂದ ಣತ್ವ. ಅನರ್ವಾಣಮ್ ಎಂದು ರೂಪವಾಗುತ್ತದೆ. ನಞ್‌ಸುಭ್ಯಾಂ ಎಂಬುದರಿಂದ ಉತ್ತರಪದ ಅಂತೋದಾತ್ತಸ್ವರವು ಬರುತ್ತದೆ.



CC-0. Jangamwadi Math Collection. Digitized by eGangotri

ಶ್ಲೋಕಮ್—ಶ್ಲೋಕೃ ಸಂಘಾತೇ ಧಾತು. ಶ್ಲೋಕ್ಯತೇ ಇತಿ ಶ್ಲೋಕಃ ಕರ್ಮಾರ್ಥದಲ್ಲಿ ಘಞ್ ಪ್ರತ್ಯಯ ಶ್ಲೋಕ ಎಂದು ರೂಪವಾಗುತ್ತದೆ. ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಞಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ.

ರೋಹಸೇ—ರುಹ ಬೀಜಜನ್ಮನಿ ಪ್ರಾದುರ್ಭಾವೇ ಚ ಧಾತು. ವ್ಯತ್ಯಯೋ ಬಹುಲಂ ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಲಟ್ ಮಧ್ಯಮಪುರುಷ ಏಕವಚನದ ರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಅದದಾ ಅರ್ಭಾಂ ಮಹತೇ ವಚಸ್ಯವೇ ಕಕ್ಷೀವತೇ ವೃಚಯಾಮಿಂದ್ರ-
ಸುನ್ವತೇ ।
ಮೇನಾಭವೋ ವೃಷಣಶ್ವಸ್ಯ ಸುಕ್ರತೋ ವಿಶ್ವೇತ್ತಾ ತೇ ಸವನೇಷು
ಪ್ರವಾಚ್ಯಾ ॥ ೧೩ ॥

॥ ಪದಪಾಠಃ ॥

ಅದದಾಃ । ಅರ್ಭಾಂ । ಮಹತೇ । ವಚಸ್ಯವೇ । ಕಕ್ಷೀವತೇ । ವೃಚಯಾಂ ।
ಇಂದ್ರ । ಸುನ್ವತೇ ।
ಮೇನಾ । ಅಭವಃ । ವೃಷಣಶ್ವಸ್ಯ । ಸುಕ್ರತೋ ಇತಿ ಸುಽಕ್ರತೋ । ವಿಶ್ವಾ ।
ಇತ್ । ತಾ । ತೇ । ಸವನೇಷು । ಪ್ರಽವಾಚ್ಯಾ ॥ ೧೩ ॥

॥ ಸಾಯಣಭಾಷ್ಯಂ ॥

ಅತ್ರೇಯಮಾಖ್ಯಾಯಿಕಾ । ಅಂಗರಾಜಃ ಕಸ್ಮಿಂಶ್ಚಿದ್ದಿವಸೇ ಸ್ವಕೀಯಾಭಿರ್ಯೋಷಿದ್ಭಿಃ ಸಹ ಗಂಗಾಯಾಂ ಜಲಕ್ರೀಡಾಂ ಚಕ್ರೇ । ತಸ್ಮಿನ್ಸಮಯೇ ದೀರ್ಘತಮಾ ನಾಮ ಋಷಿಃ ಸ್ವಭಾರ್ಯಯಾ ಪುತ್ರಭೃತ್ಯಾದಿಭಿಶ್ಚ ದುರ್ಬಲತ್ವಾತ್ಕಿಮಪಿ ಕುರ್ವನ್ನ ಶಕ್ನೋತೀತಿ ದ್ವೇಷೇಣ ಗಂಗಾಮಧ್ಯೇ ಪ್ರಚಿಕ್ಷಿಪೇ । ಸ ಚ ಋಷಿಃ ಕೇನಚಿತ್ಪ್ಲವೇನಾಂಗರಾಜಸ್ಯ ಕ್ರೀಡಾದೇಶಂ ಪ್ರತಿ ಸಮಾಜಗಾಮ । ಸ ಚ ರಾಜಾ ಸರ್ವಜ್ಞಂ



CC-0. Jangamwadi Math Collection. Digitized by eGangotri

ತಮೃಷಿಮುಪಗತ್ಯ ಸ್ಲನಾದವತಾರ್ಯೈವಮುವೋಚತ್ । ಹೇ ಭಗವನ್ ಮಮ ಪುತ್ರೋ ನಾಸ್ತಿ । ಏಷಾ ಮಹಿಷೀ । ಅಸ್ಯಾಂ ಕಂಚಿತ್ಪುತ್ರಮುತ್ಪಾದಯೇತಿ । ಸ ಚ ತಥೇತ್ಯಬ್ರವೀತ್ । ಸಾ ಮಹಿಷೀ ತು ರಾಜಾನಂ ಪ್ರತಿ ತಥೇತ್ಯುಕ್ತ್ವಾಯಂ ವೃದ್ಧತರೋ ಜುಗುಪ್ಸಿತೋ ಮಮ ಯೋಗ್ಯೋ ನ ಭವತೀತಿ ಬುದ್ಧ್ಯಾ ಸ್ವಕೀಯಾಮುಶಿಕ್ಸಂಜ್ಞಾಂ ದಾಸೀಂ ಪ್ರಾಹೈಷೀತ್ । ತೇನ ಚ ಸರ್ವಜ್ಞೇನ ಋಷಿಣಾ ಮಂತ್ರಪೂತೇನ ವಾರಿಣಾಭ್ಯುಕ್ಷಿತಾ ಸತೀ ಸೈವ ಋಷಿಪತ್ನೀ ಬಭೂವ । ತಸ್ಯಾಮುತ್ಪನ್ನಃ ಕಕ್ಷೀವಾನ್ನಾಮ ಋಷಿಃ । ಸ ಏವ ರಾಜ್ಞಃ ಪುತ್ರೋಽಭೂತ್ । ಸ ಚ ಬಹುವಿಧೇನ ರಾಜಸೂಯಾದಿನೇಜೇ । ತಸ್ಮೈ ರಾಜ್ಞೇ ತತ್ಕೃತೈರ್ಯಜ್ಞೈಃ ಪರಿತುಷ್ಟ ಇಂದ್ರೋ ವೃಚಯಾಖ್ಯಾಂ ತರುಣಾಂ ಯೋಷಿತಂ ಪ್ರಾದಾತ್ । ಅಯಮರ್ಥಃ ಪೂರ್ವಾರ್ಧೇ ಪ್ರತಿಪಾದ್ಯತೇ ॥ ಹೇ ಇಂದ್ರ ತ್ವಂ ಮಹತೇ ಪ್ರವೃದ್ಧಾಯ ವಚಸ್ಯವೇ ತ್ವದೀಯಸ್ತೋತ್ರಲಕ್ಷಣಂ ವಚ ಆತ್ಮನ ಇಚ್ಛತೇ ಸುನ್ವತೇ ತ್ವದ್ದೇವತಾಕೇಷು ಯಜ್ಞೇಷು ಸೋಮಾಭಿಷವಂ ಕುರ್ವತೇ ಕಕ್ಷೀವತ ಏತನ್ನಾಮ್ನೇ ರಾಜ್ಞೇ ವೃಚಯಾಂ ವೃಚಯಾಖ್ಯಾಮರ್ಭಾಮಲ್ಪಾಂ । ಯುವತಿಮಿತ್ಯರ್ಥಃ । ಏವಂಭೂತಾಂ ಸ್ತ್ರಿಯಮದದಾಃ । ತಥಾ ಸುಕ್ರತೋ ಶೋಭನಕರ್ಮನ್ ಶೋಭನಪ್ರಜ್ಞ ವಾ ಹೇ ಇಂದ್ರ ತ್ವಂ ವೃಷಣಶ್ವಸ್ಯೈತದಾಖ್ಯಸ್ಯ ರಾಜ್ಞೋ ಮೇನಾಭವಃ । ಮೇನಾ ನಾಮ ಕನ್ಯಕಾಭೂಃ । ತಥಾ ಚ ಶಾಟ್ಯಾಯನಿಭಿಃ ಸುಬ್ರಹ್ಮಣ್ಯಾಮಂತ್ರೈಕದೇಶವ್ಯಾಖ್ಯಾನರೂಪಂ ಬ್ರಾಹ್ಮಣಮೇವಮಾಮ್ನಾಯತೇ । ವೃಷಣಶ್ವಸ್ಯ ಮೇನ ಇತಿ ವೃಷಣಶ್ವಸ್ಯ ಮೇನಾ ಭೂತ್ವಾ ಮಘವಾ ಕುಲ ಉವಾಸೇತಿ । ತಾಂ ಚ ಪ್ರಾಪ್ತಯೌವನಾಂ ಸ್ವಯಮೇವೇಂದ್ರಶ್ಚಕಮೇ । ತಥಾ ಚ ತಾಂಡಿಭಿರಾಮ್ನಾತಂ । ವೃಷಣಶ್ವಸ್ಯ ಮೇನಾ ನಾಮ ದುಹಿತಾಸ । ತಾಮಿಂದ್ರಶ್ಚಕಮ ಇತಿ । ಅತ ಉಕ್ತರೂಪಾಣಿ ಯಾನಿ ಕರ್ಮಾಣಿ ತ್ವಯಾ ಕೃತಾನಿ ತೇ ತಾ ತ್ವದೀಯಾನಿ ತಾನಿ ವಿಶ್ವೇತ್ ಸರ್ವಾಣ್ಯೇವ ಸವನೇಷು ಯಜ್ಞೇಷು ಪ್ರವಾಚ್ಯಾ । ಪ್ರಕರ್ಷೇಣ ವಕ್ತವ್ಯಾನಿ । ಸ್ತುತಿಭಿಃ ಸ್ತೋತವ್ಯಾನೀತ್ಯರ್ಥಃ ॥ ಮಹತೇ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ವಚಸ್ಯವೇ । ಸುಪ ಆತ್ಮನಃ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಕಕ್ಷೀವತೇ । ಅಶ್ವಬಂಧನಹೇತವೋ ರಜ್ಜವಃ ಕಕ್ಷ್ಯಾಃ । ಕಕ್ಷೀವಾನ್ ಕಕ್ಷ್ಯಾವಾನ್ ನಿ. ೬-೧೦ । ಇತಿ ಯಾಸ್ಕಃ । ಆಸಂದೀವದಷ್ಠೀವಚ್ಚಕ್ರೀವತ್ಕಕ್ಷೀವತ್ । ಪಾ. ೮-೨-೧೨ । ಇತಿ ಸಂಪ್ರಸಾರಣಂ ಮತುಪೋ ವತ್ವಂ ಸಂಜ್ಞಾಯಾಂ ನಿಪಾತ್ಯತೇ । ಮೇನೇತಿ ಸ್ತ್ರೀನಾಮ । ಮೇನಾ ಗ್ನಾ ಇತಿ ಪಾಠಾತ್ । ಮನ ಜ್ಞಾನೇ । ಮನ್ಯತೇ ಗೃಹಕೃತ್ಯಂ ಜಾನಾತೀತಿ ಮೇನಾ । ಪಚಾದ್ಯಚ್ । ನತಿಮನ್ಯೋರಲಿಟ್ಯೇತ್ವಂ ವಕ್ತವ್ಯಂ । ಪಾ. ೬-೪-೧೨೦-೫ । ಇತ್ಯೇತ್ವಂ । ವೃಷಾದಿರ್ದ್ರಷ್ಟವ್ಯಃ । ಮೇನಾ । ಮಾನಯಂತ್ಯೇನಾ ಇತಿ ಯಾಸ್ಕಃ । ನಿ. ೩-೨೧ । ಸವನೇಷು । ಸವನಮಿತಿ ಯಜ್ಞನಾಮ । ಸೂಯತೇಽಭಿಷೂಯತ ಏಷ್ವಿತ್ಯಧಿಕರಣೇ ಲ್ಯುಟ್ । ಪ್ರವಾಚ್ಯಾ । ವಚ ಪರಿಭಾಷಣೇ । ಣ್ಯತಿ ಯಜಯಾಚರುಚಪ್ರವಚರ್ಚಶ್ಚ । ಪಾ. ೭-೩-೬೬ । ಇತಿ ಕುತ್ವಾಭಾವಃ । ತಿತ್ಸ್ವರಿತೇಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ಯದ್ವಾ । ವಾಚಯತೇರಚೋ ಯದಿತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ (ನೀನು) । ಮಹತೇ—ಪ್ರವೃದ್ಧನಾದವನೂ । ವಚಸ್ಯವೇ—(ನಿನ್ನ ಸ್ತೋತ್ರರೂಪಗಳಾದ) ವಾಕ್ಕುಗಳನ್ನು ಹೊಂದಲು ಇಚ್ಛಿಸಿದ (ನಿನ್ನನ್ನು ಪ್ರಶಂಸಿಸಲಿಚ್ಛಿಸಿದ) ವನೂ । ಸುನ್ವತೇ—(ನಿನ್ನನ್ನೇ ದೇವತೆಯನ್ನಾಗಿ ಉದ್ದೇಶಿಸಿ ಮಾಡಿದ ಯಾಗಗಳಲ್ಲಿ) ಸೋಮರಸವನ್ನು ಹಿಂಡಿ (ಅರ್ಪಿಸಿ) ದವನೂ



CC-0. Jangamwadi Math Collection. Digitized by eGangotri

ಆದ | ಕಕ್ಷೀವತೇ—ಕಕ್ಷೀವಂತನೆಂಬ ರಾಜನಿಗೆ | ವೃಚಯಾಂ—ವೃಚಯಾ ಎಂಬ ಹೆಸರುಳ್ಳ | ಅರ್ಭಾಂ—ಯುವತಿಯನ್ನು | ಅದದಾಃ—ಕೊಟ್ಟಿರುವೆ. (ಹಾಗೆಯೆ) | ಸುಕ್ರತೋ—ಶ್ರೇಷ್ಠವಾದ ಕರ್ಮವುಳ್ಳ ಅಥವಾ ಪ್ರಜ್ಞೆಯುಳ್ಳ ಇಂದ್ರನೇ (ನೀನು) | ವೃಷಣಶ್ವಸ್ಯ—ವೃಷಣಶ್ವನೆಂಬ ರಾಜನಿಗೆ | ಮೇನಾಭವಃ—ಮೇನಾ ಎಂಬ ಕನ್ಯೆಯಾಗಿ ಹುಟ್ಟಿದೆ. | ತೇ ತಾ—ನಿನ್ನ ಇಂತಹ (ಮಹಿಮೆಯುಳ್ಳ) | ವಿಶ್ವೇತ್—ಸಕಲ ಕಾರ್ಯಗಳೂ | ಸವನೇಷು—ಯಜ್ಞಗಳಲ್ಲಿ | ಪ್ರವಾಚ್ಯಾ—ಶ್ರೇಷ್ಠವಾದ ವಾಕ್ಕುಗಳಿಂದ ಪ್ರಶಂಸನೀಯವಾದವು.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು, ಪ್ರವೃದ್ಧನಾದವನೂ, ನಿನ್ನನ್ನು ಸ್ತೋತ್ರಮಾಡಲಿಚ್ಛಿಸಿದವನೂ, ಯಜ್ಞಗಳಲ್ಲಿ ನಿನಗಾಗಿ ಸೋಮರಸವನ್ನು ಹಿಂಡಿ ಅರ್ಪಿಸಿದವನೂ ಆದ ಕಕ್ಷೀವಂತನೆಂಬ ರಾಜನಿಗೆ ವೃಚಯಾ ಎಂಬ ಯುವತಿಯನ್ನು ಮದುವೆಮಾಡಿಕೊಟ್ಟೆ. ಶ್ರೇಷ್ಠವಾದ ಕರ್ಮಯುಕ್ತನಾದ ಎಲೈ ಇಂದ್ರನೇ, ವೃಷಣಶ್ವನೆಂಬ ರಾಜನಿಗೆ ಮೇನಾ ಎಂಬ ಕನ್ಯೆಯಾಗಿ ಹುಟ್ಟಿದೆ. ನಿನ್ನ ಇಂತಹ ಮಹಿಮೆಯುಳ್ಳ ಸಕಲ ಕಾರ್ಯಗಳೂ ಯಜ್ಞಗಳಲ್ಲಿ ಉತ್ಕೃಷ್ಟವಾಗಿ ಪ್ರಶಂಸಿಸಿ ಪಠಿಸಬೇಕಾದವುಗಳಾಗಿವೆ.

## English Translation.

Indra, you have given the youthful Vṛchaya, to the aged Kakshivat, praising you and offering libations; O Satakratu, you were born as Mena, the daughter of Vrishanaswa; all these your deeds are to be recited at your worships.

॥ ವಿಶೇಷ ವಿಷಯಗಳು ॥

ವೃಚಯಾಂ—ವೃಚಯಾ ಎಂಬ ಸ್ತ್ರೀಯ ಹೆಸರು ಋಗ್ವೇದದಲ್ಲಿ ಈ ಋಕ್ಕಿನಲ್ಲಿ ಮಾತ್ರ ಪಠಿತವಾಗಿದೆ ಇವಳನ್ನು ಅಶ್ವಿನೀದೇವತೆಗಳು ಕಕ್ಷೀವಂತ್ ಎಂಬ ಋಷಿಗೆ ಮದುವೆಮಾಡಿಕೊಟ್ಟರೆಂದು ಹೇಳಿದೆ. ಋ. ಸಂ. ೧-೧೧೬-೧೭ ರಲ್ಲಿ ಹೇಳಿರುವ ಸೂರ್ಯಪುತ್ರಿಯಾದ ಸೂರ್ಯಾ ಎಂಬ ಸ್ತ್ರೀಯು ಈ ವೃಚಯಾ ಎಂಬವಳೇ ಆಗಿರಬಹುದು. ಈ ಸ್ತ್ರೀಯ ವಿಷಯವಾಗಿ ನಮಗೆ ಹೆಚ್ಚು ವಿಷಯಗಳೇನೂ ತಿಳಿದಿಲ್ಲ.

ವೃಷಣಶ್ವಸ್ಯ ಮೇನಾಭವಃ—ವೃಷಣಶ್ವನೆಂಬುವನಿಗೆ ಇಂದ್ರನು ಮೇನಾ ಎಂಬ ಕನ್ಯೆಯಾಗಿ ಹುಟ್ಟಿದ ವಿಷಯವು ಪ್ರಸಕ್ತ ಋಕ್ಕಿನಲ್ಲಿರುವುದು. ಇದೇ ವಿಷಯವು ಜೈಮಿನೀಯ ಬ್ರಾಹ್ಮಣ. ೨-೭೯; ಶತಪಥಬ್ರಾಹ್ಮಣ ೩-೩-೪-೧೮; ಷಡ್ವಿಂಶಬ್ರಾಹ್ಮಣ. ೧-೧-೧೬; ತೈತ್ತಿರೀಯ ಸಂಹಿತಾ ೧-೧೨-೩ ಎಂಬ ಸ್ಥಳಗಳಲ್ಲಿಯೂ ಸೂಚಿತವಾಗಿರುವುದು. ಆದರೆ ಅಲ್ಲಿ ಹೇಳಿರುವುದೆಲ್ಲಾ ಈ ಋಕ್ಕಿನಲ್ಲಿ ಹೇಳಿರುವ ವಿಷಯಕ್ಕೆ ಸಂಬಂಧಪಟ್ಟಿರುವುದೆಂದು ದೃಢವಾಗಿ ಹೇಳಲು ಸಾಧ್ಯವಿಲ್ಲ.

ವೃಷಣಶ್ವ ಎಂಬ ಹೆಸರಿನವನು ಒಬ್ಬ ರಾಜನು. ಅವನು ಮಾಡಿದ ಯಾಗಾದಿಕರ್ಮಗಳಿಂದ ತೃಪ್ತನಾದ ಇಂದ್ರನು ಮೇನಾ ಎಂಬ ಹೆಸರಿನ ಪುತ್ರಿಯೊಬ್ಬಳನ್ನು ಕರುಣಿಸಿದನು. ತಾನೇ ಆ ಹೆಸರಿನ ಪುತ್ರಿಯಾಗಿ ಅವತರಿಸಿದನು ಎಂದು ವೃಷಣಶ್ವಸ್ಯ ಮೇನ ಇತಿ ವೃಷಣಶ್ವಸ್ಯ ಮೇನಾ ಭೂತ್ವಾ ಮಘವಾ ಕುಲ





1422

CC-0. Jangamwadi Math Collection. Digitized by eGangotri

ಉಪಾಸ ಎಂಬ ಶ್ರುತಿಯಲ್ಲಿ ಶಾಟ್ಯಾಯನಿಗಳು ಹೇಳುತ್ತಾರೆ. ಆ ಮೇನಾದೇವಿಯು ಯುವತಿಯಾದಾಗ ಅವಳನ್ನು ನೋಡಿ ಇಂದ್ರನೇ ಮೋಹಿಸಿದನು. ಇದನ್ನೇ ವೃಷಣಶ್ವಸ್ಯ ಮೇನಾ ನಾಮ ದುಹಿತಾಸ ತಾಮಿಂದ್ರಶ್ಚಕಮೇ ಎಂಬ ತಾಂಡ್ಯಶ್ರುತಿಯು ತಿಳಿಸುವುದು. ಮೇನಾ ಶಬ್ದವು ಸ್ತ್ರೀವಾಚಕವಾಗಿ ಮೇನಾ ಗ್ನಾಃ (ನಿರು. ೩-೨೧) ಎಂಬ ನಿರುಕ್ತಸೂತ್ರದಲ್ಲಿ ಹೇಳಲ್ಪಟ್ಟಿರುವುದು. ಇದಕ್ಕೆ ಮನ್ಯತೇ ಗೃಹಕೃತ್ಯಂ ಜಾನಾತೀತಿ ಮೇನಾ ಗೃಹಕೃತ್ಯಗಳನ್ನು ತಿಳಿದವಳು ಎಂದು ವ್ಯುತ್ಪತ್ತಿಯಿರುವುದು.

ಕಕ್ಷೀವತೇ—ಕಕ್ಷೀವಾನ್ ಎಂಬ ಹೆಸರಿನವನು ಒಬ್ಬ ರಾಜನು. ಇವನ ಉತ್ಪತ್ತಿಯ ಇತಿಹಾಸವು ಹೀಗಿದೆ. ಹಿಂದೆ ಅಂಗದೇಶದ ರಾಜನು ಒಂದುಸಾರಿ ಪತ್ನೀದಾಸೀಯರೊಡನೆ ಜಲಕ್ರೀಡಾರ್ಥವಾಗಿ ಗಂಗಾನದಿಗೆ ಹೋಗಿದ್ದನು. ಆ ಸಮಯಕ್ಕೆ ಸರಿಯಾಗಿ ದೀರ್ಘತಮನೆಂಬ ಋಷಿಯು ಒಂದು ದೋಣಿಯಲ್ಲಿ ತೇಲಿಕೊಂಡು ಬರುತ್ತಿದ್ದನು. ಆ ಋಷಿಯು ಅತ್ಯಂತ ದುರ್ಬಲನಾಗಿದ್ದರಿಂದ ಆ ಋಷಿಯ ಪತ್ನೀಪುತ್ರಾದಿಗಳು, ಇಂತಹ ದುರ್ಬಲನು ತಮಗೆ ಬೇಡವೆಂದು ಅವನನ್ನು ಒಂದು ದೋಣಿಯಲ್ಲಿಟ್ಟು ಗಂಗಾನದಿಗೆ ಎಸೆದಿದ್ದರು. ಅಂಗರಾಜನು ಅಕಸ್ಮಾತ್ತಾಗಿ ತಾನಿದ್ದ ಸ್ಥಳಕ್ಕೆ ದೋಣಿಯಲ್ಲಿ ಬಂದ ದೀರ್ಘತಮ ಋಷಿಯನ್ನು ನೋಡಿ, ಅತ್ಯಂತ ಸಂತೋಷ ದಿಂದ ವಂದಿಸಿ, ಅವನನ್ನು ದೋಣಿಯಿಂದಿಳಿಸಿ ಪೂಜಿಸಿ, “ ಸ್ವಾಮಿ, ನನಗೆ ಬಹುಕಾಲದಿಂದ ಮಕ್ಕಳಿಲ್ಲ. ಇದೋ ನನ್ನ ಪತ್ನಿಯು ಇಲ್ಲಿಯೇ ಇರುವಳು. ಇವಳಲ್ಲಿ ಒಬ್ಬ ಪುತ್ರನನ್ನು ಉತ್ಪಾದನೆ ಮಾಡಿ ’ ಎಂದು ಪ್ರಾರ್ಥಿಸಿ ಕೊಂಡನು. ಆಗ ರಾಣಿಯು ಅತ್ಯಂತ ವೃದ್ಧನಾಗಿರುವ ಈ ಋಷಿಯನ್ನು ನೋಡಿ ಅವನೊಡನೆ ಕೂಡಲು ಇಷ್ಟಪಡದೆ, ಉಶಿಕ್ ಎಂಬ ಹೆಸರಿನ ತನ್ನ ದಾಸಿಯೊಬ್ಬಳನ್ನು ಕಳುಹಿಸಿಕೊಟ್ಟಳು. ಸರ್ವಜ್ಞನಾದ ಆ ಮಹ ರ್ಷಿಯು ಆಕೆಯ ಮೇಲೆ ಮಂತ್ರಪೂತವಾದ ಜಲವನ್ನು ಪ್ರೋಕ್ಷಿಸಲು ಆ ದಾಸಿಯು ಋಷಿಪತ್ನಿಯಂತೆ ಕಂಗೊಳಿ ಸಿದಳು. ಆಕೆಯಲ್ಲಿ ಜನಿಸಿದ ಮಗನೇ ಕಕ್ಷೀವಾನ್ ಎಂಬ ಋಷಿಯು. ಈತನು ರಾಜಸೂಯವೇ ಮೊದ ಲಾದ ಅನೇಕ ಯಾಗಗಳನ್ನು ಮಾಡಿದನು. ಆ ಯಾಗಗಳಿಂದ ತೃಪ್ತನಾದ ಇಂದ್ರನು ಕಕ್ಷೀವತನಿಗೆ ವೃಚಯಾ ಎಂಬ ಹೆಸರಿನ ತರುಣಿಯೊಬ್ಬಳನ್ನು ಅನುಗ್ರಹಿಸಿಕೊಟ್ಟನು. ಕಕ್ಷ್ಯಾ ಶಬ್ದಕ್ಕೆ ಕುದುರೆಯನ್ನು ಕಟ್ಟುವ ಹಗ್ಗ ಎಂದೂ ಅರ್ಥವಿದೆ ಕಕ್ಷೀವಾನ್ ಕಕ್ಷ್ಯಾವಾನ್ (ನಿ. ರು. ೬-೧೦) ಅರ್ಭಾಂ—ಇದಕ್ಕೆ ಅಲ್ಪವೆಂದೂ ಸ್ತ್ರೀಯೆಂದೂ ಅರ್ಥವಿದೆ.

ಈ ಕಕ್ಷೀವಾನನ ಹೆಸರು ಋಗ್ವೇದ ಸಂ. ೧-೧೮-೧ ; ೧-೫೧-೧೩ ; ೧-೧೧೨-೧೧ ; ೧-೧೧೬-೭ ; ೧-೧೧೭-೬ ; ೧-೧೨೬-೩ ; ೪-೨೬-೧ ; ೮-೯-೧೦ ; ೯-೭೪-೮ ; ೧೦-೨೫-೧೦ ; ೧೦-೬೧-೧೬ ಎಂಬ ಋಕ್ಕುಗಳ ಲ್ಲಿಯೂ ಅಥರ್ವ ವೇದ ೪-೨೯-೫ರಲ್ಲಿಯೂ ಪಠಿತವಾಗಿದೆ. ಇವನ ವಂಶದ ಹೆಸರು ಪಜ್ರ ಎಂದಿರಬೇಕು. ಏಕೆಂದರೆ ಇವನನ್ನು ಪಜ್ರಿಯ ಎಂದು ಋ. ಸಂ. ೧-೧೧೬-೭ ; ೧-೧೧೭-೬ರಲ್ಲಿ ಕರೆಯಲಾಗಿದೆ ಮತ್ತು ಋ. ಸಂ. ೧-೧೨೬-೪ರಲ್ಲಿ ಇವನ ಸಂತತಿಯವರನ್ನು ಪಜ್ರಾಃ ಎಂದೂ ಕರೆದಿದಾರೆ. ಋ. ಸಂ. ೧-೧೨೬ನೇ ಸೂಕ್ತದಲ್ಲಿ ಈ ಋಷಿಯು ಸ್ವನಯಭಾವ್ಯ ಎಂಬ ರಾಜನು ತನಗೆ ಕೊಟ್ಟ ದಾನವಸ್ತುಗಳ ವಿಷಯವಾಗಿ ಪ್ರಶಂಸೆಮಾಡಿ ದಾನೆ ಮತ್ತು ಸಾಂಖ್ಯಾಯನ ಶ್ರೌತಸೂತ್ರ. ೧೬-೪-೫ ರಲ್ಲಿ ನಾರಾಶಂಸಸೂಕ್ತಗಳೆಂಬ ವೀರರನ್ನು ಪ್ರಶಂಸೆ ಮಾಡುವ ಮಂತ್ರಗಳ ಸಮುದಾಯದಲ್ಲಿ ಉಶಿಜ ಪುತ್ರನಾದ ಕಕ್ಷಿವಾನ್ ಎಂಬುವನು ಸ್ವನಯ ಭಾವಯನ್ನು ಎಂಬ ರಾಜನ ದಾನಪ್ರಶಂಸೆಯ ಮಂತ್ರವೂ ಸೇರಿರುವುದು. ಇವನು ವಯಸ್ಸಾದ ಮೇಲೆ ವೃಚಯಾ ಎಂಬ ಕನ್ಯೆಯನ್ನು ಮದುವೆಯಾದ ವಿಷಯವು ಪ್ರಸಕ್ತ ಋಕ್ಕಿನಲ್ಲಿ (ಋ. ಸಂ. ೧-೫೧-೧೩) ವರ್ಣಿತವಾಗಿದೆ. ಇವನು ಒಂದು ನೂರು ವರ್ಷಗಳವರೆಗೆ ಜೀವಿಸಿದ್ದನೆಂದು ಋ. ಸಂ. ೯-೭೪-೮ ಋಕ್ಕಿನಿಂದ ತಿಳಿದುಬರುವುದು. ಋ. ಸಂ. ೪-೨೬-೧ ರಲ್ಲಿ ಇವನ ಹೆಸರು ಕುತ್ಸ ಮತ್ತು ಕವಿ ಉಶನಸ್ ಎಂಬುವರೊಡನೆ ಸೂಚಿತವಾಗಿದೆ.



CC-0. Jangamwadi Math Collection. Digitized by eGangotri

ಋ. ಸಂ. ೮-೯-೧೦ ಎಂಬ ಒಂದು ಋಕ್ಕಿನಲ್ಲಲ್ಲದೆ ಮತ್ತೆಲ್ಲಿಯೂ ದೀರ್ಘತಮಸ್ ಎಂಬ ಋಷಿಯೊಡನೆ ಸಂಬಂಧವಿರುವ ವಿಷಯವು ಕಂಡುಬರುವುದಿಲ್ಲ. ಆದರೆ ಬೃಹದ್ದೇವತಾ ಎಂಬ ಶೌನಕೋಕ್ತಗ್ರಂಥದಲ್ಲಿ ಈ ಕಕ್ಷೀವಾನ್ ಎಂಬುವನು ದೀರ್ಘತಮಸ್ಸೆಂಬ ಋಷಿಗೆ ಉಶಿಜೆ ಎಂಬ ದಾಸಿಯಲ್ಲಿ ಜನಿಸಿದ ಪುತ್ರನೆಂದು ಹೇಳಿರುವುದು.

Weber ಎಂಬ ಪಾಶ್ಚಾತ್ಯಪಂಡಿತನು. ತೈ. ಸಂ. ೫-೬-೫-೩; ಕಾಠಕಸಂಹಿತಾ ೧೩-೩; ಪಂಚ ವಿಂಶಬ್ರಾಹ್ಮಣ ೫೫-೧೬-೩ ಎಂಬ ಮಂತ್ರಗಳ ಆಧಾರದ ಮೇಲೆ ಈ ಕಕ್ಷೀವಾನ್ ಎಂಬುವನು ಮೊದಲು ಕ್ಷತ್ರಿಯನಾಗಿದ್ದನೆಂದೂ ಆದುದರಿಂದಲೇ ಇವನ ಹೆಸರು ಮೇಲೆ ಕೊಟ್ಟಿರುವ ಮಂತ್ರಗಳಲ್ಲಿ ಪರ ಆತ್ನಾರ, ವೀತಹವ್ಯ, ಶ್ರಾಯಸ, ತ್ರಸದಸ್ಯು ಪೌರುಕುತ್ಸ ಎಂಬ ರಾಜರ ಜತೆಯಲ್ಲಿ ಪಠಿತವಾಗಿರುವುದೆಂದೂ ಅಭಿಪ್ರಾಯ ಪಡುವನು.

ವಚಸ್ಯವೇ—ಇಂದ್ರಸ್ತೋತ್ರವನ್ನು ಸೂಚಿಸುವ ಮಾತಿಗೆ ಇಲ್ಲಿ ವಚಃ ಎಂದು ವ್ಯವಹಾರ. ಅಂತಹ ಇಂದ್ರಸ್ತೋತ್ರವನ್ನು ತಾನು ಸರ್ವದಾ ಹೇಳಲಪೇಕ್ಷಿಸುವವನು ವಚಸ್ಯು. ಈ ಪದವು ಕಕ್ಷೀವಾನ್ ಎಂಬ ಪದಕ್ಕೆ ವಿಶೇಷಣ.

## ॥ ವ್ಯಾಕರಣಪ್ರಕ್ರಿಯಾ ॥

ಮಹತೇ—ಮಹ ಪೂಜಾಯಾಂ ಧಾತು. ಶತೃ ಪ್ರತ್ಯಯ ಮಹತ್ ಶಬ್ದದ ಚತುರ್ಥೀ ಏಕವಚನ ರೂಪ. ಬೃಹನ್ಮಹತೋರುಪಸಂಖ್ಯಾನಮ್ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ವಚಸ್ಯವೇ—ವಚಃ ಆತ್ಮನಃ ಇಚ್ಛತಿ ಎಂಬರ್ಥದಲ್ಲಿ ಸುಪ ಆತ್ಮನಃ ಕ್ಯಚ್ ಎಂಬುದರಿಂದ ಕ್ಯಚ್. ವಚಸ್ಯ ಎಂಬುದು ಸನಾದ್ಯಂತಾಧಾತವಃ ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಕ್ಯಾಚ್ಛಂದಸಿ (ಪಾ. ಸೂ. ೩-೨-೧೭೦) ಸೂತ್ರದಿಂದ ವಚಸ್ಯ ಎಂಬುದರ ಮೇಲೆ ಉ ಪ್ರತ್ಯಯ. ಉ ಪರದಲ್ಲಿರುವಾಗ ಅತೋಲೋಪಃ ಎಂಬುದರಿಂದ ಪೂರ್ವದ ಅಕಾರಕ್ಕೆ ಲೋಪ. ವಚಸ್ಯು ಎಂಬ ಉಕಾರಾಂತ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

ಕಕ್ಷೀವತೇ—ಅಶ್ವಬಂಧನಹೇತವೋ ರಜ್ಜವಃ ಕಕ್ಷ್ಯಾಃ (ಕುದುರೆಯನ್ನು ಕಟ್ಟುವ ಹಗ್ಗಗಳು) ಕಕ್ಷೀವಾನ್ ಕಕ್ಷ್ಯಾವಾನ್ (ನಿರು. ೬-೧೦) ಎಂದು ಯಾಸ್ಕರು ಹೇಳಿರುತ್ತಾರೆ. ಆಸಂದೀವದಷ್ಠೀವಚ್ಚಕ್ರೀವತ್ಕಕ್ಷೀವತ್ (ಪಾ. ಸೂ. ೮-೨-೧೨) ಎಂಬುದರಿಂದ ಕಕ್ಷ್ಯಾ ಶಬ್ದಕ್ಕೆ ಸಂಪ್ರಸಾರಣವೂ ಮತುಪಿನ ಮಕಾರಕ್ಕೆ ವತ್ವವೂ ಸಂಜ್ಞಾತೋರುವಾಗ ನಿಪಾತಿತವಾಗಿದೆ. ಚತುರ್ಥೀ ಏಕವಚನಾಂತರೂಪ.

ಮೇನಾ—ಮೇನಾ ಎಂಬುದು ಹೆಂಗಸಿನ ಹೆಸರು. ಮೇನಾ ಗ್ನಾಃ (ನಿರು. ೩-೨೧) ಎಂದು ಪಾಠ ಮಾಡಿರುತ್ತಾರೆ. ಮನ ಜ್ಞಾನೇ ಧಾತು. ಮನ್ಯತೇ ಗೃಹಕೃತ್ಯಂ ಜಾನಾತಿ ಇತಿ ಮೇನಾ. ಪಚಾದಿಯಲ್ಲಿ ಸೇರಿರುವುದರಿಂದ ನಂದಿಗ್ರಹಪಚಾದಿಭ್ಯಃ—ಸೂತ್ರದಿಂದ ಅಚ್. ಮನ್+ಅ ಎಂದಿರುವಾಗ ನಶಿಮನ್ಯೋರಲಿಟ್ಯೇತ್ವಂ ವಕ್ತವ್ಯಂ (ಪಾ. ಸೂ. ೬-೪-೧೨೦-೫) ಎಂಬ ವಚನದಿಂದ ಲಿಟ್ ಭಿನ್ನಪ್ರತ್ಯಯ ಪರದಲ್ಲಿರುವುದರಿಂದ ಧಾತುವಿನ ಅಕಾರಕ್ಕೆ ಏತ್ವ ಬರುತ್ತದೆ. ಸ್ತ್ರೀತ್ವದಲ್ಲಿ ಅಜಾದ್ಯತಷ್ಟಾಪ್ ಎಂಬುದರಿಂದ ಟಾಪ್. ಮೇನಾ ವೃಷಾದಿಯಲ್ಲಿ ಸೇರಿರುವುದರಿಂದ ವೃಷಾದೀನಾಂಚ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಮಾನಯಂತಿ ಏನಾಃ (ನಿರು. ೩-೨೧) ಎಂದು ಯಾಸ್ಕರು ನಿರ್ವಚನ ಮಾಡಿರುತ್ತಾರೆ.



CC-0. Jangamwadi Math Collection. Digitized by eGangotri

**ಸವನೇಷು**—ಸವನವೆಂಬುದು ಯಾಗದ ಹೆಸರು. ಸೂಯತೇ ಅಭಿಷೂಯತೇ ಏಷು ಇತಿ ಸವನಂ (ಸೋಮವು ಹಿಂಡಲ್ಪಡುವುದು) ಅಧಿಕರಣಾರ್ಥದಲ್ಲಿ ಲ್ಯುಟ್ ಯುವೋರನಾಕೌ ಎಂಬುದರಿಂದ ಅಲ್ಲಿ ಉಳಿಯುವ ಯು ಎಂಬುದಕ್ಕೆ ಅನಾದೇಶ, ಸಪ್ತಮೀ ಬಹುವಚನದ ರೂಪ.

**ಪ್ರವಾಚ್ಯಾ**—ವಚ ಪರಿಭಾಷಣೇ ಧಾತು. ಋಹಲೋರ್ಣ್ಯತ್ (ಪಾ. ಸೂ. ೩-೧-೧೨೪) ಸೂತ್ರದಿಂದ ಣ್ಯತ್. ಅತ ಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಚಜೋಃ ಕುಃ ಸೂತ್ರದಿಂದ ಚಕಾರಕ್ಕೆ ಕುತ್ವವು ಪ್ರಾಪ್ತವಾದರೆ ಯಜಯಾಚರುಚಪ್ರವಚರ್ಚಶ್ಚ (ಪಾ. ಸೂ. ೭-೩-೬೬) ಎಂಬುದರಿಂದ ಕುತ್ವ ನಿಷೇಧ ಬರುತ್ತದೆ. ಣ್ಯತ್ ತಿತ್ತಾದುದರಿಂದ ತಿತ್ಸ್ವರಿತಮ್ ಎಂಬುದರಿಂದ ಸ್ವರಿತವು ಪ್ರಾಪ್ತವಾದರೆ ವ್ಯತ್ಯಯೋ ಬಹುಲಂ ಎಂಬುದರಿಂದ ವ್ಯತ್ಯಯದ ಆದ್ಯುದಾತ್ತಸ್ವರವು ಬರುತ್ತದೆ. ಅಥವಾ ವಚ ಧಾತುವಿಗೆ ಣಿಜಂತದ ಮೇಲೆ ಯತ್ ಪ್ರತ್ಯಯಮಾಡಿದರೆ ವಾಚ್ಯಾ ಎಂದಾಗುತ್ತದೆ. ಆಗ ಯತೋಽನಾವಃ (ಪಾ. ಸೂ. ೬-೧-೨೧೩) ಎಂಬುದರಿಂದ ಸ್ವರಸವಾಗಿ ಆದ್ಯುದಾತ್ತಸ್ವರ ಬರುತ್ತದೆ. ಪ್ರ ಎಂಬ ಗತಿಯೊಡನೆ ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಇಂದ್ರೋ ಅಶ್ರಾಯಿ ಸುಧ್ಯೋ ನಿರೇಕೇ ಪಜ್ರೇಷು ಸ್ತೋಮೋ
ದುರ್ಯೋ ನ ಯೂಪಃ ।
ಅಶ್ವಯುರ್ಗವ್ಯೂ ರಥಯುರ್ವಸೂಯುರಿಂದ್ರ ಇದ್ರಾಯಃ ಕ್ಷಯತಿ
ಪ್ರಯನ್ತಾ ॥ ೧೪ ॥

॥ ಪದಪಾಠಃ ॥

ಇಂದ್ರಃ । ಅಶ್ರಾಯಿ । ಸುಧ್ಯಃ । ನಿರೇಕೇ । ಪಜ್ರೇಷು । ಸ್ತೋಮಃ । ದುರ್ಯಃ ।
ನ । ಯೂಪಃ ।
ಅಶ್ವಯುಃ । ಗವ್ಯುಃ । ರಥಯುಃ । ವಸುಯುಃ । ಇಂದ್ರಃ । ಇತ್ । ರಾಯಃ ।
ಕ್ಷಯತಿ । ಪ್ರಯನ್ತಾ ॥ ೧೪ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಇಂದ್ರೋ ದೇವಃ ಸುಧ್ಯಃ ಶೋಭನಕರ್ಮಣೋ ಯಜಮಾನಾನ್ ಶೋಭನಪ್ರಜ್ಞಾನ್ವಾ ನಿರೇಕೇ ನೈರ್ಧನ್ಯೇ ನಿಮಿತ್ತಭೂತೇ ಸತಿ ತಾನ್ರಕ್ಷಿತುಮಶ್ರಾಯಿ । ಅಸೇವಿಷ್ಟ । ಪಜ್ರೇಷು । ಪಜ್ರಾ ಇತ್ಯಂಗಿರಸಾಮಾಖ್ಯಾ । ತಥಾ ಚ ಶಾಟ್ಯಾಯನಿಭಿರಾಮ್ನಾತಂ । ಪಜ್ರಾ ವಾ ಅಂಗಿರಸಃ ಪಶುಕಾಮಾಸ್ತ-ಪೋಽತಪ್ಯಂತೇತಿ । ಯೇಷು ಯಜಮಾನೇಷ್ವಂಗಿರಃಸು ಸ್ತೋಮಃ ಸ್ತೋತ್ರಂ ನಿಷ್ಫಲಂ ತಿಷ್ಠತಿ ದುರ್ಯೋ ನ ಯೂಪೋ ದ್ವಾರಿ ನಿಖಾತಾ ಸ್ಥೂಣೇವ । ತಾನ್ಸುಧ್ಯ ಇತಿ ಪೂರ್ವೇಣಾನ್ವಯಃ । ತಸ್ಮಾ-ದಿದಾನೀಮಪಿ ರಾಯಃ ಪ್ರಯಂತಾ ಧನಸ್ಯ ಪ್ರದಾತೇಂದ್ರ ಇತ್ ಇಂದ್ರ ಏವ ಯಜಮಾನಾನಾಂ ದಾತುಮಶ್ವಯುರಶ್ವಾನಿಚ್ಛನ್ ತಥಾ ಗವ್ಯುರ್ಗಾ ಇಚ್ಛನ್ ರಥಯೂ ರಥಾನಿಚ್ಛನ್ ವಸೂಯು-ರೇವಮನ್ಯದಪಿ ಯದ್ಧನಮಸ್ತಿ ತದಪೀಚ್ಛನ್ ಕ್ಷಯತಿ ವರ್ತತೇ ॥ ಅಶ್ರಾಯಿ । ಶ್ರಿಞ್ ಸೇವಾಯಾಂ । ಕರ್ತರಿ ಲುಙಿ ವ್ಯತ್ಯಯೇನ ಚ್ಲೇಶ್ಚಿಣಾದೇಶಃ । ಸುಧ್ಯಃ । ಧೀರಿತಿ ಕರ್ಮನಾಮ । ಶೋಭನಾ ಧೀರ್ಯೇಷಾಂ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಶಸಿ ಛಂದಸ್ಯುಭಯಥಾ । ಪಾ. ೬-೪-೮೬ । ಇತಿ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ಸ್ವರಿ-ತತ್ವಂ । ನಿರೇಕೇ । ನಿತರಾಂ ರೇಚನಂ ನಿರೇಕಃ । ರಿಚಿರ್ ವಿರೇಚನೇ । ಭಾವೇ ಘಞ್ । ಥಾಥಾದಿನೋ-ತ್ತರಪದಾಂತೋದಾತ್ತತ್ವಂ । ದುರ್ಯಃ । ದುರೇ ಭವೋ ದುರ್ಯಃ । ಭವೇ ಛಂದಸೀತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಯೂಪಃ । ಯು ಮಿಶ್ರಣೇ । ಯೂಯತೇ ಯುಜ್ಯತೇಽಸ್ಮಿನ್ನಿತಿ ಯೂಪಃ । ಕುಯುಭ್ಯಾಂ ಚ । ಉ. ೩-೨೭ । ಇತಿ ಪಪ್ರತ್ಯಯಃ । ದೀರ್ಘ ಇತ್ಯನುವೃತ್ತೇರ್ದೀ-ರ್ಘತ್ವಂ । ಅಶ್ವಯುಃ । ಯಜಮಾನೇಭ್ಯೋಽಶ್ವಾನಿಚ್ಛನ್ । ಛಂದಸಿ ಪರೇಚ್ಛಾಯಾಂ । ಕಾ. ೩-೧-೮-೨ । ಇತಿ ಕ್ಯಚ್ । ನ ಛಂದಸ್ಯಪುತ್ರಸ್ಯೇತೀತ್ವದೀರ್ಘಯೋರ್ನಿಷೇಧಃ । ಅಶ್ವಾಘಸ್ಯಾದಿತ್ಯಾತ್ವಂ ತು ಛಾಂದಸತ್ವಾನ್ನ ಭವತಿ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ಏವಮುತ್ತರತ್ರಾಪಿ । ಏತಾವಾಂಸ್ತು ವಿಶೇಷಃ । ಗವ್ಯುರಿತ್ಯತ್ರ ವಾಂತೋ ಯಿ ಪ್ರತ್ಯಯ ಇತ್ಯವಾದೇಶಃ । ಯಾಸ್ಕಸ್ತ್ವೇವಂ ವ್ಯಾಚಷ್ಟೇ । ಇದಂಯು-ರಿದಂ ಕಾಮಯಮಾನೋಽಥಾಪಿ ತದ್ವದರ್ಥೇ ಭಾಷ್ಯತೇ । ವಸೂಯುರಿಂದ್ರೋ ವಸುಮಾನಿತ್ಯರ್ಥಃ । ಅಶ್ವಯುರ್ಗವ್ಯೂ ರಥಯುರ್ವಸೂಯುರಿತ್ಯಪಿ ನಿಗಮೋ ಭವತಿ । ನಿ. ೬-೩೧ । ಇತಿ । ಕ್ಷಯತಿ । ಕ್ಷಿ ಕ್ಷಯೇ । ಭೌವಾದಿಕಃ । ಪ್ರಯಂತಾ । ಯಮ ಉಪರಮೇ । ತೃಚ್ಯೇಕಾಚ ಇತೀಟ್ಪ್ರತಿಷೇಧಃ । ಚಿತ-ಇತ್ಯಂತೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

**ಸುಧ್ಯಃ**—ಉತ್ತಮವಾದ ಯಜ್ಞಕರ್ಮಗಳನ್ನು ಮಾಡುವ ಯಜಮಾನರಾದಿ ಜನರು । **ನಿರೇಕೇ**—ನಿರ್ಗತಿಕರಾದರೂ (ಧನರಹಿತರಾದರೂ ಅಂತವರಿಂದ) । **ಇಂದ್ರಃ**—ಇಂದ್ರನು । **ಅಶ್ರಾಯಿ**—ಸೇವಿಸಲ್ಪಡುತ್ತಾನೆ **ಪಜ್ರೇಷು**—ಅಂಗಿರಾ ಋಷಿಗಳು ನಿರ್ಧನರಾಗಿದ್ದರೂ । **ಸ್ತೋಮಃ**—ಅವರು ಇಂದ್ರನ ವಿಷಯವಾಗಿ ಮಾಡುವ ಸ್ತೋತ್ರಗಳು । **ದುರ್ಯೋ ನ ಯೂಪಃ**—ಬಾಗಿಲ್ಲಿನಲ್ಲಿ ಯೂಪಸ್ತಂಭದಂತೆ ನಿಷ್ಫಲವಾಗಿರುವವು । **ಅಶ್ವಯುಃ** ತನ್ನನ್ನು ಸ್ತೋತ್ರಮಾಡುವವರಿಗೆ ಅಶ್ವಗಳನ್ನು ಕೊಡಬೇಕೆಂದು ಇಚ್ಛಿಸುವ । **ರಥಯುಃ**—ರಥಗಳನ್ನು ಕೊಡಬೇಕೆಂದು ಇಚ್ಛಿಸುವ । **ವಸೂಯುಃ**—ಧನವನ್ನು ಕೊಡಬೇಕೆಂದು ಇಚ್ಛಿಸುವ । **ಇಂದ್ರ ಇತ್**—ಆ ಇಂದ್ರನೇ **ರಾಯಃ**—ಧನದ । **ಪ್ರಯಂತಾ**—ದಾತನಾಗಿ (ಕೊಡುವವನಾಗಿ) । **ಕ್ಷಯತಿ**—ಇರುತ್ತಾನೆ (ವಾಸಿಸುತ್ತಾನೆ.)



CC-0. Jangamwadi Math Collection. Digitized by eGangotri

‖ ಭಾವಾರ್ಥ ‖

ತನ್ನನ್ನು ಸ್ತೋತ್ರಮಾಡುವ ಯಜಮಾನರು ನಿರ್ಧನರಾಗಿದ್ದರೂ ಇಂದ್ರನು ಅವರ ಸ್ತೋತ್ರಗಳನ್ನು ಸ್ವೀಕರಿಸುವನು. ಆದುದರಿಂದ ಅಂಗಿರಾಋಷಿಗಳು ನಿರ್ಧನರಾದರೂ ಅವರು ಮಾಡಿದ ಸ್ತೋತ್ರಗಳು ಬಾಗಿಲ ಬಳಿ ಹೂಳಿರುವ ಯೂಪಸ್ತಂಭದಂತೆ ಸ್ಥಿರವಾಗಿರುವುದರಿಂದ ಇಂದ್ರನು ಆ ಸ್ತೋತ್ರಗಳನ್ನು ಸ್ವೀಕರಿಸಿದನು ಮತ್ತು ಇಂದ್ರನು ಭಕ್ತರಿಗೆ ಕೊಡುವುದಕ್ಕಾಗಿ ಅಶ್ವಗಳು, ಗೋವುಗಳು, ರಥಗಳು, ಧನಗಳು ಮೊದಲಾದವುಗಳನ್ನು ಅಪೇಕ್ಷಿಸುವನು. ಸ್ತೋತ್ರಮಾಡುವವರಿಗೆ ಇಂದ್ರನು ಮಾತ್ರವೇ ಧನಾದಿಗಳನ್ನು ಕೊಡುವವನು.

## English Translation.

Indra repairs to the house of the pious even in poverty ; with the Pajras the praise of Indra is firm as the doorpost. Desirous of (winning in battle) horses, cows, chariots and riches for his worshippers, Indra the giver of riches is alona the lord of riches.

‖ ವಿಶೇಷ ವಿಷಯಗಳು ‖

ಏತದುಕ್ತಂ ಭವತಿ । ಇಂದ್ರೋ ನ ಕೇವಲಂ ಸತಿ ಧನೇ ಸ್ತೋಪಾಸಕಾನಾಂ ಗೃಹೇ ಸೋಮ-ಕಾನಾಯ ಗಚ್ಛತಿ ತೇ ವಾ ತಮುಪಾಸತೇ ಅಪಿ ತು ಹ್ರಾಪ್ರೇಽಪಿ ನೈರ್ಧನ್ಯೇ ಸ ತೇಷಾಂ ಗೃಹೇ ಗಚ್ಛತಿ ತೇ ತಮುಪಾಸತೇ । ಅತ ಏವ ಪಜ್ರೇಷು ಸತಿ ವಾ ನ ವಾ ಸತಿ ಧನೇ ಇಂದ್ರಸ್ಯ ಸ್ತೋತ್ರಂ ದ್ವಾರಿ ಸ್ಥಿತಾ ಸ್ಥೂಣೇವ ನಿಶ್ಚಲಂ । ಸತತಮಿತಿ ಯಾವತ್ । ಗೀಯತೇ । ಅಪಿ ಚ ಯಜಮಾನೇಭ್ಯೋಽಶ್ವಾದೀನ್ ಸಂಪಾದಯನ್ನಿಂದ್ರ ಏವ ಧನಸ್ಯ ಪ್ರಭುರಸ್ತೀತ್ಯರ್ಥಃ ‖

ಸುಧ್ಯಃ—ಪ್ರಶಸ್ತವಾದ ಕರ್ಮವುಳ್ಳವರು ಅಥವಾ ನಿಷ್ಕಲ್ಮಷವಾದ ಪ್ರಜ್ಞೆಯುಳ್ಳ ಯಜಮಾನರು ಎಂದರ್ಥ.

ನಿರೇಕೇ—ಬಡತನವೇ ಮೊದಲಾದುವುಗಳಿಂದ ಪೀಡಿತರಾದಾಗ ಯಜಮಾನರು ಇಂದ್ರನನ್ನು ತೃಪ್ತಿ ಪಡಿಸಲು ಯಜ್ಞಾದಿಗಳನ್ನಾಚರಿಸುವರು ಎಂಬರ್ಥವನ್ನು ಇದು ಸೂಚಿಸುವುದು.

ಪಜ್ರೇಷು—ಪಜ್ರಾ ಎಂಬುದು ಅಂಗಿರಸ್ಸೆಂಬ ಋಷಿಗಳ ಹೆಸರು ಪಜ್ರಾ ವಾ ಅಂಗಿರಸಃ ಪಶುಕಾಮಾ-ಸ್ತಪೋಽತಪ್ಯಂತ ಎಂಬ ಶ್ರುತಿಯು ಇದನ್ನು ತಿಳಿಸುವುದು.

ಸ್ತೋಮಃ—ನಿಶ್ಚಲವಾದ ಸ್ತೋತ್ರವು.

ದುರ್ಯೋ ನ ಯೂಪಃ ದುರೇ ಭವಃ ದುರ್ಯಃ ದ್ವಾರಿ ಇತ್ಯರ್ಥಃ ಇಲ್ಲಿ ನ ಶಬ್ದಕ್ಕೆ ಯಥಾ ಎಂದರ್ಥ ಬಾಗಿಲಿನಲ್ಲಿ ನೆಡಲ್ಪಟ್ಟ ಯೂಪಸ್ತಂಭದಂತೆ ಎಂಬದು ಇದರ ಅರ್ಥ. ಇದು ಹಿಂದಿನ ಯಜಮಾನಾರ್ಥಕವಾದ ಸುಧ್ಯ ಎಂಬ ಪದದಲ್ಲಿ ಅನ್ವಯವನ್ನು ಪಡೆಯುವುದು.



CC-0. Jangamwadi Math Collection. Digitized by eGangotri

**ಅಶ್ವಯುಃ, ಗವ್ಯುಃ, ರಥಯುಃ, ವಸುಯುಃ**—ಇಲ್ಲಿ ಅಶ್ವಾದಿ ಪದಗಳ ಮೇಲೆ ಛಂದಸಿ ಪರೇಚ್ಛಾಯಾಂ (ಪಾ. ೩-೧-೮-೨) ಎಂಬ ಸೂತ್ರಾನುಸಾರವಾಗಿ ಪರೇಚ್ಛಾರ್ಥದಲ್ಲಿ, ಕ್ಯಚ್, ಪ್ರತ್ಯಯವು ಬಂದಿದ್ದರೂ ಇದಂಯುರಿದಂ ಕಾಮಯಮಾನೋಽಥಾಪಿ ತದ್ವದರ್ಥೇ ಭಾಷ್ಯತೇ । ವಸೂಯುರಿಂದ್ರೋ ವಸುಮಾನಿತ್ಯರ್ಥಃ । ಅಶ್ವಯುರ್ಗವ್ಯೂರಥಯುರ್ವಸೂಯುರಿತ್ಯಪಿ ನಿಗಮೋ ಭವತಿ (ನಿರು ೬-೩೧) ಎಂಬ ಸೂತ್ರಾನುಸಾರವಾಗಿ ಅಶ್ವಾದಿ ಪದಾರ್ಥಗಳನ್ನು ಇಚ್ಛಿಸುವವನು ಎಂದು ಅರ್ಥಹೇಳಬಹುದು.

॥ ವ್ಯಾಕರಣಪ್ರಕ್ರಿಯಾ ॥

**ಅಶ್ರಾಯಿ**—ಶ್ರಿಞ್ ಸೇವಾಯಾಂ ಧಾತು. ಕರ್ತ್ರರ್ಥದಲ್ಲಿ ಲುಙ್ ಪ್ರಥಮಪುರುಷ ಏಕವಚನ ಪರದಲ್ಲಿರುವಾಗ ಚ್ಲಿಲುಙಿ ಎಂಬುದರಿಂದ ಚ್ಲಿ ವಿಕರಣ. ಅದಕ್ಕೆ ವ್ಯತ್ಯಯೋ ಬಹುಲಂ ಎಂಬುದರಿಂದ ಚಿಣಾದೇಶ. ಣಿತ್ತಾದುದರಿಂದ ಅಚೋಞ್ಣಿತಿ ಸೂತ್ರದಿಂದ ಧಾತುವಿನ ಇಕಾರಕ್ಕೆ ವೃದ್ಧಿ. ಇಕಾರ ಪರದಲ್ಲಿರುವುದರಿಂದ ಆಯಾದೇಶ. ಚಿಣೋ ಲುಕ್ (ಪಾ. ಸೂ. ೬-೪-೧೦೪) ಸೂತ್ರದಿಂದ ಚಿಣಿನ ಪರದಲ್ಲಿರುವ ತ ಪ್ರತ್ಯಯಕ್ಕೆ ಲುಕ್. ಅಡಾಗಮ ಬಂದರೆ ಅಶ್ರಾಯಿ ಎಂದು ರೂಪವಾಗುತ್ತದೆ.

**ಸುಧ್ಯಃ**—ಧೀಃ ಎಂಬುದು ಕರ್ಮದ ಹೆಸರು. ಶೋಭನಾ ಧೀಃ ಯೇಷಾಂ ಸುಧ್ಯಃ ಸುಧೀಶಬ್ದಕ್ಕೆ ಶಸ್ ಪರದಲ್ಲಿರುವಾಗ ನಭೂಸುಧಿಯೋಃ ಎಂಬುದರಿಂದ ಯಣ್ ನಿಷೇಧ ಪ್ರಾಪ್ತವಾದರೆ ಛಂದಸ್ಯುಭಯಥಾ ಎಂಬುದರಿಂದ ಯಣಾದೇಶ ಬರುತ್ತದೆ. ಸುಧ್ಯಃ ಎಂದು ರೂಪವಾಗುತ್ತದೆ. ನಞ್‌ಸುಭ್ಯಾಂ ಎಂಬುದರಿಂದ ಬಹುವ್ರೀಹಿಯಲ್ಲಿ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಉದಾತ್ತವಾದ ಇಕಾರಕ್ಕೆ ಯಣಾದೇಶ ಬಂದುದರಿಂದ ಉದಾತ್ತಸ್ವರಿತಯೋರ್ಯಣಃ (ಪಾ. ಸೂ. ೮-೨-೪) ಸೂತ್ರದಿಂದ ಯಣಿನ ಪರದ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ.

**ನಿರೇಕೇ**—ನಿತರಾಂ ರೇಚನಂ ನಿರೇಕಃ। ರಿಚಿರ್ ವಿರೇಚನೇ ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಘಞ್ ಪರದಲ್ಲಿರುವಾಗ ಧಾತುವಿನ ಲಘೂಪಧೆಗೆ ಗುಣ. ಚಜೋಃ ಕುಘಿಣ್ಣ್ಯತೋಃ ಎಂಬುದರಿಂದ ಚಕಾರಕ್ಕೆ ಕುತ್ವ ನಿ ಉಪಸರ್ಗ (ಗತಿ) ನಿರೇಕಃ ಎಂದು ರೂಪವಾಗುತ್ತದೆ. ಥಾಥಘಞ್‌ಕ್ತಾಜ (ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

**ದುರ್ಯಃ**—ದುರೇ ಭವಃ ದುರ್ಯಃ. ಭವೇಛಂದಸಿ (ಪಾ. ಸೂ. ೪-೪-೧೧೦) ಎಂಬುದರಿಂದ ಭವಾರ್ಥದಲ್ಲಿ ಯತ್ ಪ್ರತ್ಯಯ. ಯಸ್ಯೇತಿಚ ಸೂತ್ರದಿಂದ ಪೂರ್ವದ ಆಕಾರಕ್ಕೆ ಲೋಪ. ಯತೋಽನಾವಃ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಯೂಪಃ**—ಯು ಮಿಶ್ರಣೇ ಧಾತು. ಯೂಯತೇ ಯುಜ್ಯತೇಽಸ್ಮಿನ್ನಿತಿ ಯೂಪಃ. ಕುಯುಭ್ಯಾಂ ಚ (ಉ. ಸೂ. ೫-೩೦೭) ಎಂಬುದರಿಂದ ಪ ಪ್ರತ್ಯಯ. ಸ್ತುವೋರ್ದೀರ್ಘಶ್ಚ ಸೂತ್ರದಿಂದ ದೀರ್ಘಃ ಎಂದು ಅನುವೃತ್ತವಾಗುವುದರಿಂದ ಧಾತುವಿಗೆ ದೀರ್ಘ ಬರುತ್ತದೆ. ಚ್ಯುವಃ ಕಿಚ್ಚ ಎಂಬುದರಿಂದ ಕಿತ್ ಎಂದು ಅನುವೃತ್ತವಾಗುವುದರಿಂದ ಗುಣ ಬರುವುದಿಲ್ಲ ಅಥವಾ ದೀರ್ಘವಿಧಾನಮಾಡಿರುವುದರಿಂದಲೇ ಗುಣಬರುವುದಿಲ್ಲ. ಗುಣ ಬರುವುದಾದರೆ ದೀರ್ಘವು ವ್ಯರ್ಥವಾಗುವುದು.



CC-0. Jangamwadi Math Collection. Digitized by eGangotri

ಅಶ್ವಯುಃ—ಯಜಮಾನೇಭ್ಯೋಽಶ್ವಾನಿಚ್ಛನ್ ಅಶ್ವಯುಃ ಬೇರೊಬ್ಬನಿಗೆ ಇಚ್ಛಿಸುವಾಗ ಛಂದಸಿ ಪರೇಚ್ಛಾಯಾಂ (ಕಾ. ೩-೧೮-೨) ಎಂಬುದರಿಂದ ಕ್ಯಚ್ ಅಶ್ವ+ಯ ಎಂದಿರುವಾಗ ಕ್ಯಚಿಚ ಸೂತ್ರದಿಂದ ಈತ್ವವು ಪ್ರಾಪ್ತವಾದರೆ ನ ಛಂದಸ್ಯ ಪುತ್ರಸ್ಯ (ಪಾ. ಸೂ. ೭-೪-೩೫) ಸೂತ್ರದಿಂದ ಈತ್ವ ದೀರ್ಘಗಳಿಗೆ ನಿಷೇಧ ಬರುತ್ತದೆ. ಅಶ್ವಾಘಸ್ಯಾತ್ ಎಂಬುದರಿಂದ ಬರಬೇಕಾದ ಆತ್ವವೂ ಛಾಂದಸವಾದುದರಿಂದಲೇ ಬರುವುದಿಲ್ಲ. ಅಶ್ವಯ ಎಂಬ ಕ್ಯಜಂತವು ಧಾತುವಾಗುತ್ತದೆ. ಕ್ಯಾಚ್ಛಂದಸಿ ಎಂಬುದರಿಂದ ಕ್ಯಜಂತದಮೇಲೆ ಉ ಪ್ರತ್ಯಯ ಅತೋಲೋಪಃ ಸೂತ್ರದಿಂದ ಕ್ಯಚಿನ ಅಕಾರಕ್ಕೆ ಲೋಪ, ಅಶ್ವಯುಃ ಎಂದು ರೂಪವಾಗುತ್ತದೆ. ಹೀಗೆಯೇ ಗೋವನ್ನು ಯಜಮಾನನಿಗೆ ಇಚ್ಛಿಸುವವನು ಎಂಬರ್ಥದಲ್ಲಿ ಮುಂದಿನ ಗವ್ಯು ಎಂಬ ಶಬ್ದವಾಗುತ್ತದೆ. ಆದರೆ ಅಲ್ಲಿ ಗೋಶಬ್ದಕ್ಕೆ ಕ್ಯಚ್ ಪರದಲ್ಲಿರುವಾಗ ಯಾದಿ ಪ್ರತ್ಯಯವು ಪರದಲ್ಲಿರುವುದರಿಂದ ವಾಂತೋ ಯಿ ಪ್ರತ್ಯಯೇ ಸೂತ್ರದಿಂದ ಓಕಾರಕ್ಕೆ ಅವಾದೇಶ ಬರುತ್ತದೆ. ಬೇರೆ ಎಲ್ಲಾ ಕಾರ್ಯಗಳು ಹಿಂದಿನಂತೇ ತಿಳಿಯಬೇಕು. ಯಾಸ್ಕರು ಮಾತ್ರ ಇನ್ನೊಂದು ರೀತಿಯಲ್ಲಿ ವ್ಯಾಖ್ಯಾನಮಾಡಿರುತ್ತಾರೆ. ಇದಂಯುಃ ಇದಂ ಕಾಮಯಮಾನಃ ಅಥಾಪಿ ತದ್ವದರ್ಥೇ ಭಾಷ್ಯತೇ । ವಸೂಯುರಿಂದ್ರೋ ವಸುಮಾನಿತ್ಯರ್ಥಃ । ಅಶ್ವಯುರ್ಗವ್ಯೂ ರಥಯುರ್ವಸೂಯುರಿತ್ಯಪಿ ನಿಗಮೋ ಭವತಿ (ನಿರು. ೬-೩೧) ಇದಂಯುಃ ಎಂಬುದು ಇದನ್ನು ತನಗೆ ಇಚ್ಛಿಸುವವನು ಎಂಬರ್ಥದಲ್ಲಿಯೇ ಕ್ಯಜಂತಕ್ಕೆ ಉ ಪ್ರತ್ಯಯದಿಂದ ಸಿದ್ಧವಾಗುತ್ತದೆ. ಆದರೆ ಅದು ಉಳ್ಳವನು ಎಂಬ ಮತ್ವರ್ಥದಲ್ಲಿಯೂ ಕೆಲವೆಡೆ ಹೇಳಲ್ಪಡುತ್ತದೆ. ಉದಾಹರಣೆಗಾಗಿ ವಸೂಯುಃ=ಇಂದ್ರನು ಹಣವುಳ್ಳವನು ಎಂದರ್ಥ. ಆದುದರಿಂದ ಅಶ್ವಯುಃ ಮುಂತಾದ ಶಬ್ದಗಳು ಮತ್ವರ್ಥದಲ್ಲಿಯೂ ಸಾಧುವಾಗುತ್ತವೆ ಎಂದು ತಾತ್ಪರ್ಯ.

ಕ್ಷಯತಿ—ಕ್ಷಿ ಕ್ಷಯೇ ಧಾತು. ಭ್ವಾದಿ. ತಿ ಪರದಲ್ಲಿರುವಾಗ ಕರ್ತರಿಶಪ್ ಎಂಬುದರಿಂದ ಶಪ್ ವಿಕರಣ. ಸಾರ್ವಧಾತುಕನಿಮಿತ್ತಕವಾಗಿ ಧಾತುವಿಗೆ ಗುಣ. ಅಯಾದೇಶ, ಕ್ಷಯತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಪ್ರಯಂತಾ—ಯಮ ಉಪರಮೇ ಧಾತು. ಕರ್ತ್ರರ್ಥದಲ್ಲಿ ತೃಚ್. ಏಕಾ ಚ ಉಪದೇಶೇಽನುದಾತ್ತಾತ್ ಸೂತ್ರದಿಂದ ಇಣ್ನಿಷೇಧ. ಧಾತುವಿನ ಮಕಾರಕ್ಕೆ ನಶ್ಚಾಪದಾಂತಸ್ಯ ಝಲಿ ಎಂಬುದರಿಂದ ಅನುಸ್ವಾರ ಅನುಸ್ವಾರಸ್ಯ ಯಯಿ ಪರಸವರ್ಣಃ ಎಂಬುದರಿಂದ ಪರಸವರ್ಣದಿಂದ ನಕಾರಾದೇಶ ಯನ್ತೃ ಶಬ್ದವಾಗುತ್ತದೆ. ಪ್ರಥಮಾ ಏಕವಚನದ ರೂಪ. ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ. ಪ್ರ ಎಂಬುದರೊಡನೆ ಗತಿಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

---



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಇದಂ ನಮೋ ವೃಷಭಾಯ ಸ್ವರಾಜೇ ಸತ್ಯಶುಷ್ಮಾಯ ತವಸೇಽವಾಚಿ ।
ಅಸ್ಮಿನ್ನಿಂದ್ರ ವೃಜನೇ ಸರ್ವವೀರಾಃ ಸ್ಮತ್ಸೂರಿಭಿಸ್ತವ ಶರ್ಮನ್ತ್ಸ್ಯಾಮ ೧೫

॥ ಪದಪಾಠಃ ॥

ಇದಂ । ನಮಃ । ವೃಷಭಾಯ । ಸ್ವಽರಾಜೇ । ಸತ್ಯಽಶುಷ್ಮಾಯ । ತವಸೇ । ಅವಾಚಿ ।
ಅಸ್ಮಿನ್ । ಇಂದ್ರ । ವೃಜಿನೇ । ಸರ್ವಽವೀರಾಃ । ಸ್ಮತ್ । ಸೂರಿಽಭಿಃ । ತವ ।
ಶರ್ಮನ್ । ಸ್ಯಾಮ ॥ ೧೫ ॥

॥ ಸಾಯಣಭಾಷ್ಯಂ ॥

ಇದಂ ಪುರೋವರ್ತಿ ನಮಃ ಸ್ತುತಿಲಕ್ಷಣಂ ವಚೋ ಹೇ ಇಂದ್ರ ತುಭ್ಯಮವಾಚಿ । ಅಸ್ಮಾಭಿಃ ಪ್ರಯೋಜಿ । ಕೀದೃಶಾಯ । ವೃಷಭಾಯ । ವರ್ಷಣಶೀಲಾಯ । ಸ್ವರಾಜೇ । ಸ್ವಕೀಯೇನ ತೇಜಸಾ ರಾಜಮಾನಾಯ । ಸತ್ಯಶುಷ್ಮಾಯ । ಶುಷ್ಮಮಿತಿ ಬಲನಾಮ ಶತ್ರೂಣಾಂ ಶೋಷಕತ್ವಾತ್ । ಅವಿತಥ-ಬಲಯುಕ್ತಾಯ । ತವಸೇಽತ್ಯಂತಂ ಪ್ರವೃದ್ಧಾಯ । ಯಸ್ಮಾದೇವಂ ತಸ್ಮಾದಸ್ಮಿನ್ವೃಜನೇ ವರ್ಜನ-ವತಿ ಸಂಗ್ರಾಮೇ ಸರ್ವವೀರಾಃ । ವಿಶೇಷೇಣೇರಯಂತ್ಯಮಿತ್ರಾನಿತಿ ವೀರಾ ಭಟಾಃ । ತಾದೃಶೈಃ ಸರ್ವೈ-ರ್ಭಟೈರುಪೇತಾ ವಯಂ । ಸ್ಮದಿತಿ ನಿಪಾತಃ ಸುಶಬ್ದಾರ್ಥಃ । ತವ ಸ್ಮತ್ ಶರ್ಮನ್ ತ್ವಯಾ ದತ್ತೇ ಶೋಭನೇ ಗೃಹೇ ಸೂರಿಭಿರ್ವಿದ್ವದ್ಭಿಃ ಪುತ್ರಾದಿಭಿಃ ಸಹ ಸ್ಯಾಮ । ಭವೇಮ । ನಿವಸೇಮೇತ್ಯರ್ಥಃ । ಯದ್ವಾ ತ್ವತ್ಸಂಬಂಧಿನಿ ಶೋಭನೇ ಯಜ್ಞಗೃಹೇ ಸೂರಿಭಿರ್ವಿದ್ವದ್ಭಿರೃತ್ವಿಗ್ಭಿಃ ಸಹ ಸ್ಯಾಮ । ಶರ್ಮೇತಿ ಗೃಹನಾಮ । ಶರ್ಮ ವರ್ಮೇತಿ ಪಠಿತತ್ವಾತ್ ॥ ಸ್ವರಾಜೇ । ರಾಜೃ ದೀಪ್ತೌ । ಸತ್ಸೂದ್ವಿಷೇತಿ ಕ್ವಿಪ್ । ಸತ್ಯಶುಷ್ಮಾಯ । ಸತ್ಯಂ ಶುಷ್ಮಂ ಬಲಂ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ತವಸೇ । ತವತಿಃ ಸೌತ್ರೋ ಧಾತುಃ । ಅಸ್ಮಾದೌಣಾದಿಕೋಽಸಿಪ್ರತ್ಯಯಃ । ವೃಜನೇ । ವೃಜೀ ವರ್ಜನೇ । ಕೃಪೃವೃಜಿಮಂದಿನಿಧಾಞ್ಭ್ಯಃ ಕ್ಯುಃ । ಉ. ೨-೮೧ । ಇತಿ ಕ್ಯುಃ ಪ್ರತ್ಯಯಃ । ಶರ್ಮನ್ । ಸುಪಾಂ ಸುಲುಗಿತಿ ಸಪ್ತಮ್ಯಾ ಲುಕ್ ನ ಙಿಸಂಬುದ್ಧ್ಯೋಃ । ಪಾ. ೮-೨-೮ । ಇತಿ ನಲೋಪಪ್ರತಿಷೇಧಃ । ಸ್ಯಾಮ । ನಶ್ಚ । ಪಾ. ೮-೩-೩೦ । ಇತಿ ಸಂಹಿತಾಯಾಂ ಸಕಾರಸ್ಯ ಧುಡಾಗಮಃ । ಖರಿ ಚೇತಿ ಚರ್ತ್ವಂ । ಚಯೋ ದ್ವಿತೀಯಾಃ ಶರಿ ಪೌಷ್ಕರಸಾದೇಃ । ಪಾ. ೮-೪-೪೮-೩ । ಇತಿ ತಕಾರಸ್ಯ ಥಕಾರಃ ॥





CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ವೃಷಭಾಯ—ಮಳೆಯನ್ನು ಸುರಿಸುವವನೂ । ಸ್ವರಾಜೇ—ಸ್ವತೇಜಸ್ಸಿನಿಂದ ಬೆಳಗುವವನೂ । ಸತ್ಯಶುಷ್ಮಾಯ—(ಶತ್ರುನಾಶದಲ್ಲಿ) ಸಾರ್ಥಕವಾದ ಸತ್ತ್ವವುಳ್ಳವನೂ । ತವಸೇ—ಪ್ರಬಲನೂ (ಆದ ನಿನಗಾಗಿ) । ಇದಂ ನಮಃ—ಸ್ತೋತ್ರರೂಪವಾದ ಈ ವಾಕ್ಯು । ಅವಾಚಿ—(ನಮ್ಮಿಂದ) ಪಠಿಸಲ್ಪಟ್ಟಿದೆ. (ಆದ್ದರಿಂದ) । ಅಸ್ಮಿನ್ ವೃಜನೇ—ಈ ಯುದ್ಧದಲ್ಲಿ । ಸರ್ವವೀರಾಃ—ಸಕಲ ಭಟರೊಡನೆಯೂ ಕೂಡಿದ ನಾವು (ಅವರ ಸಹಾಯದಿಂದ ಕೂಡಿದ) । ತವ ಸತ್ ಶರ್ಮನ್—ನಿನ್ನಿಂದಲೇ ಕೊಡಲ್ಪಟ್ಟ ಶ್ರೇಷ್ಠವಾದ ಗೃಹದಲ್ಲಿ ಸೂರಿಭಿಃ—ವಿದ್ಯಾವಂತರಾದ ಪುತ್ರರೊಡನೆ । ಸ್ಯಾಮ—(ಇರುವಂತೆ) ಆಗಲಿ. [ ಅಥವಾ ತವ ಸ್ಮತ್ ಶರ್ಮನ್—ನಿನಗೆ ಸೇರಿದ ಶ್ರೇಷ್ಠವಾದ ಯಜ್ಞಗೃಹದಲ್ಲಿ । ಸೂರಿಭಿಃ — ವಿದ್ಯಾವಂತರಾದ ಋತ್ವಿಕ್ಕುಗಳೊಡನೆ । ಸ್ಯಾಮ—(ಇರುವಂತೆ) ಆಗಲಿ.]

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಮಳೆಯನ್ನು ಸುರಿಸುವವನು. ಸ್ವತೇಜಸ್ಸಿನಿಂದ ಬೆಳಗುವವನು. ಸಾರ್ಥಕವಾದ ಸತ್ತ್ವವುಳ್ಳವನು. ಅತ್ಯಂತ ಪ್ರಬಲನು. ಇಂತಹ ಗುಣಗಳುಳ್ಳ ನಿನಗೆ ನಮಸ್ಕಾರರೂಪವಾದ ಈ ಸ್ತುತಿ ವಾಕ್ಯು ಪಠಿಸಲ್ಪಟ್ಟಿದೆ. ಈ ಯುದ್ಧದಲ್ಲಿ ಸಕಲ ಭಟರ ಸಹಾಯದೊಡನೆ ಕೂಡಿ ನಾವು ನಿನ್ನಿಂದಲೇ ಕೊಡಲ್ಪಟ್ಟ ಶ್ರೇಷ್ಠವಾದ ಗೃಹದಲ್ಲಿ ವಿದ್ಯಾವಂತರಾದ ಪುತ್ರಾದಿಗಳೊಡನೆ ವಾಸಮಾಡುವಂತಾಗಲಿ. ಅಥವಾ ಯಜ್ಞಗೃಹಲ್ಲಿ ಋತ್ವಿಕ್ಕುಗಳೊಡನೆ ಇರುವಂತಾಗಲಿ.

## English Translation.

This adoration is offered to the shedder of rain, the self-resplendent, the possessor of true vigour, the mightly; Indra, may we be aided in this conflict by many heroes and abide in a prosperous drvelling bestowed by you.

ವಿಶೇಷ ವಿಷಯಗಳು

ನಮಃ—ಇದಕ್ಕೆ ಸ್ತುತಿಯನ್ನು ಸೂಚಿಸುವ ಮಾತು ಎಂದರ್ಥ.

ವೃಷಭಾಯ—ವೃಷ್ಟಿಯನ್ನು ಸುರಿಸುವ ಸ್ವಭಾವವುಳ್ಳವನು. ಇಂದ್ರ.

ಸತ್ಯಶುಷ್ಮಾಯ—ಸತ್ಯವೇ ಶತ್ರುನಾಶಕವಾದ ಬಲವಾಗಿ ಉಳ್ಳವನು, ಅಂದರೆ ಯಥಾರ್ಥವಾಗಿಯೂ ಶತ್ರುವನ್ನು ಧ್ವಂಸಮಾಡುವ, ವ್ಯರ್ಥವಲ್ಲದ ಬಲವುಳ್ಳವನು ಎಂದರ್ಥ.

ಸರ್ವವೀರಾಃ—ವಿಶೇಷೇಣ ಈರಯಂತಿ ಅಮಿತ್ರಾನಿತಿ ವೀರಾಃ ಸಮಸ್ತ ಶತ್ರುಗಳನ್ನೂ ಕ್ಷಣಕಾಲದಲ್ಲಿ ನಾಶಮಾಡುವಂತಹ ಪರಾಕ್ರಮವುಳ್ಳವರು.

ಸ್ಮತ್—ಇದು ಸು (ಶ್ರೇಷ್ಠ) ಶಬ್ದಾರ್ಥಕವಾದ ನಿಪಾತ.



CC-0. Jangamwadi Math Collection. Digitized by eGangotri

ಶರ್ಮನ್—ಶರ್ಮ ವರ್ಮ (ನಿರು. ೩-೪) ಎಂಬ ಸೂತ್ರಾನುಸಾರವಾಗಿ ಶರ್ಮ ಶಬ್ದಕ್ಕೆ ಮನೆ ಎಂದರ್ಥ. ಶರ್ಮನ್ ಎಂಬುದು ಶರ್ಮಣಿ ಎಂಬ ಸಪ್ತಮೀ ವಿಭಕ್ತಿಯ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆ. ನಿನ್ನಿಂದ ಕರುಣಿಸಲ್ಪಟ್ಟ ಪ್ರಶಸ್ತವಾದ ಗೃಹದಲ್ಲಿ ಅನೇಕ ವಿದ್ವಾಂಸರಿಂದಲೂ, ಋತ್ವಿಕ್ಕುಗಳಿಂದಲೂ ಕೂಡಿ ಸುಖದಿಂದ ವಾಸಮಾಡೋಣ ಎಂದರ್ಥವು.

|| ವ್ಯಾಕರಣಪ್ರಕ್ರಿಯಾ ||

ಸ್ವರಾಜೇ—ರಾಜೃ ದೀಪ್ತೌ ಧಾತು. ಭ್ವಾದಿ. ಸತ್ಸೂದ್ವಿಷ—(ಪಾ. ಸೂ. ೩-೨-೬೧) ಸೂತ್ರದಿಂದ ಕ್ವಿಪ್. ಕ್ವಿಪಿನಲ್ಲಿ ಸರ್ವಲೋಪ. ಕೃದಂತವಾದುದರಿಂದ ಪ್ರಾತಿಪದಿಕಸಂಜ್ಞಾ. ಚತುರ್ಥೀ ಏಕವಚನರೂಪ.

ಸತ್ಯಶುಷ್ಮಾಯ—ಸತ್ಯಂ ಶುಷ್ಮಂ ಬಲಂ ಯಸ್ಯ ಸಃ ಸತ್ಯಶುಷ್ಮಃ. ಬಹುವ್ರೀಹಿ ಸಮಾಸವಾದುದರಿಂದ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ತವಸೇ—ತವ ಎಂಬುದು ಸೌತ್ರ (ಸೂತ್ರದಲ್ಲಿ ಪಠಿತ) ವಾದ ಧಾತು. ಇದಕ್ಕೆ ಉಣಾದಿಸಿದ್ಧವಾದ ಅಸಿ ಪ್ರತ್ಯಯವು ಬಂದು ತವಸ್ ಶಬ್ದವಾಗುತ್ತದೆ. ಚತುರ್ಥೀ ಏಕವಚನ ರೂಪ.

ವೃಜನೇ—ವೃಜೀ ವರ್ಜನೇ ಧಾತು. ಕೃಪೃವೃಜಿಮಂದಿನಿಧಾಞ್ಭ್ಯಃ ಕ್ಯುಃ (ಉ. ಸೂ. ೨-೨೫) ಎಂಬುದರಿಂದ ಕ್ಯು ಪ್ರತ್ಯಯ ಬರುತ್ತದೆ. ಯುವೋರನಾಕೌ ಸೂತ್ರದಿಂದ ಅಲ್ಲಿ ಉಳಿಯುವ ಯುವಿಗೆ ಅನಾದೇಶ. ಕಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ವೃಜನ ಶಬ್ದವಾಗುತ್ತದೆ. ಸಪ್ತಮೀ ಏಕವಚನ ರೂಪ. ಪ್ರತ್ಯಯಸ್ವರದಿಂದ ಮಧ್ಯೋದಾತ್ತ.

ಶರ್ಮನ್—ಶರ್ಮನ್ ಶಬ್ದಕ್ಕೆ ಸಪ್ತಮೀ ಏಕವಚನ ಪರದಲ್ಲಿರುವಾಗ ಸುಪಾಂ ಸುಲುಕ್ ಸೂತ್ರದಿಂದ ಸಪ್ತಮಿಗೆ ಲುಕ್. ನಲೋಪಃ ಪ್ರಾತಿಪದಿಕಾಂತಸ್ಯ ಎಂಬುದರಿಂದ ನಲೋಪವು ಪ್ರಾಪ್ತವಾದರೆ ನಙಿಸಂಬುದ್ಧ್ಯೋಃ (ಪಾ. ಸೂ. ೮-೨-೮) ಸೂತ್ರದಿಂದ ಙಿ ಪರದಲ್ಲಿರುವುದರಿಂದ ನಲೋಪನಿಷೇಧ ಬರುತ್ತದೆ.

ಸ್ಯಾಮ—ಅಸ ಭುವಿ ಧಾತು. ಅದಾದಿ. ವಿಧಿಲಿಙ್ ಉತ್ತಮಪುರುಷದಲ್ಲಿ ಮಸ್ ಪ್ರತ್ಯಯ. ನಿತ್ಯಂ ಙಿತಃ ಎಂಬುದರಿಂದ ಅದರ ಸಕಾರಕ್ಕೆ ಲೋಪ. ಯಾಸುಟ್‌ಪರಸ್ಮೈಪ—ಸೂತ್ರದಿಂದ ಅದಕ್ಕೆ ಯಾಸುಟಾಗಮ. ಶ್ನಸೋರಲ್ಲೋಪಃ ಎಂಬುದರಿಂದ ಅಸಿನ ಅಕಾರಕ್ಕೆ ಲೋಪ. ಸ್ಯಾಮ ಎಂದು ರೂಪವಾಗುತ್ತದೆ.

ಶರ್ಮನ್+ಸ್ಯಾಮ ಎಂದಿರುವಾಗ ನಶ್ಚ (ಪಾ. ಸೂ. ೮-೩-೩೦) ಸೂತ್ರದಿಂದ ನಾಂತದ ಪರದಲ್ಲಿ ಸಕಾರ ಬಂದುದರಿಂದ ಸಂಹಿತಾದಲ್ಲಿ ಸಕಾರಕ್ಕೆ ಧುಡಾಗಮ ಬರುತ್ತದೆ. ಧುಟ್ ಟಿತ್ತಾದುದರಿಂದ ಸಕಾರಕ್ಕೆ ಆದ್ಯವಯವವಾಗಿ ಬರುತ್ತದೆ. ಸಕಾರರೂಪ ಖರ್ ಪರದಲ್ಲಿರುವುದರಿಂದ ಖರಿ ಚ (ಪಾ. ಸೂ. ೮-೪-೫೫) ಎಂಬುದರಿಂದ ಧಕಾರಕ್ಕೆ ಚರ್ತ್ವದಿಂದ ತಕಾರಾದೇಶ ಬರುತ್ತದೆ. ಶರ್ಮನ್‌ತ್ಸ್ಯಾಮ ಎಂದು ಸಂಧಿಯಾಗುತ್ತದೆ. ಚಯೋ ದ್ವಿತೀಯಾಃ ಶರಿ ಪೌಷ್ಕರಸಾದೇರಿತಿ ವಾಚ್ಯಂ (ಪಾ. ಸೂ. ೮-೪-೪೮-೩) ಎಂಬುದರಿಂದ ತಕಾರಕ್ಕೆ ವಿಕಲ್ಪವಾಗಿ ಥಕಾರಾದೇಶವೂ ಬರುತ್ತದೆ. ಥಕಾರಾದೇಶಕ್ಕೆ ಪುನಃ ಖರಿ ಚ ಎಂಬುದರಿಂದ ಚರ್ತ್ವ ಬಂದರೆ ತಕಾರ ಬರುತ್ತದೆ ಎಂದು ಶಂಕಿಸಬಾರದು. ಪೌಷ್ಕರಸಾಚಾರ್ಯರ ಮತದಲ್ಲಿ ದ್ವಿತೀಯಾಕ್ಷರ ವಿಧಾನ ಮಾಡಿದುದೇ ವ್ಯರ್ಥವಾಗುವುದರಿಂದ ಪುನಃ ಚರ್ತ್ವವು ಬರುವುದಿಲ್ಲ.



CC-0. Jangamwadi Math Collection. Digitized by eGangotri

# ಐವತ್ತೆರಡನೆಯ ಸೂಕ್ತವು

॥ ಸಾಯಣಭಾಷ್ಯಂ ॥

**ತ್ಯಂ ಸು ಮೇಷಮಿತಿ ಪಂಚದಶರ್ಚಂ ದ್ವಿತೀಯಂ ಸೂಕ್ತಂ ಸವ್ಯಸ್ಯಾರ್ಷಮೈಂದ್ರಂ। ತ್ರಯೋದಶೀ ಪಂಚದಶೀ ತ್ರಿಷ್ಟುಭೌ ಶಿಷ್ಟಾ ಜಗತ್ಯಃ । ತಥಾ ಚಾನುಕ್ರಾಂತಂ। ತ್ಯಂ ಸು ತ್ರಯೋದಶ್ಯಂತ್ಯೇ ತಿಷ್ಟುಭಾವಿತಿ॥ ಗವಾಮಯನಸ್ಯ ಮಧ್ಯಮೇಽಹನಿ ವಿಷುವತ್ಸಂಜ್ಞಕೇ ಮರುತ್ವತೀಯಶಸ್ತ್ರ ಇದಂ ಸೂಕ್ತಂ ವಿಷುವಾನ್ದಿವಾ ಕೀರ್ತ್ಯ ಇತಿ ಖಂಡೇ ಸೂತ್ರಿತಂ। ತ್ಯಂ ಸುಮೇಷಂ ಕಯಾಶುಭೇತಿ ಚ ಮರುತ್ವತೀಯಂ। ಆ. ೮-೬। ಇತಿ॥**

**ಅನುವಾದವು—ತ್ಯಂ ಸು ಮೇಷಂ** ಎಂಬುವುದು ಹತ್ತನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಹದಿನೈದು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸವ್ಯನೆಂಬುವನು ಋಷಿಯು. ಇಂದ್ರನು ದೇವತೆಯು. ಹದಿಮೂರು, ಹದಿನೈದನೆಯ ಋಕ್ಕಗಳು ತ್ರಿಷ್ಟುಪ್‌ಛಂದಸ್ಕವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ **ತ್ಯಂ ಸು ತ್ರಯೋದಶ್ಯಂತೇ ತ್ರಿಷ್ಟುಭಾವಿತಿ** ಎಂದು ಹೇಳಿರುವುದು. ಗವಾಮಯನವೆಂಬ ಯಾಗದ ವಿಷುವತ್ಸಂಜ್ಞಕವೆಂಬ ಮಧ್ಯದ ದಿವಸದಲ್ಲಿ ಮರುತ್ವತೀಯಶಸ್ತ್ರಮಂತ್ರಪಠನಕ್ಕಾಗಿ ಈ ಸೂಕ್ತವನ್ನು ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ **ವಿಷುವಾನ್ದಿವಾಕೀರ್ತ್ಯ** ಎಂಬ ಖಂಡದ **ತ್ಯಂ ಸು ಮೇಷಂ ಕಯಾ ಶುಭೇತಿ ಚ ಮರುತ್ವತೀಯಂ** ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೮-೬)

## ಸೂಕ್ತ ೫೨

ಮಂಡಲ—೧॥ ಅನುವಾಕ—೧೦॥ ಸೂಕ್ತ—೫೨॥
ಅಷ್ಟಕ—೧॥ ಅಧ್ಯಾಯ—೪॥ ವರ್ಗ—೧೨, ೧೩, ೧೪॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೧೫॥
ಋಷಿಃ—ಸವ್ಯ ಆಂಗಿರಸಃ॥
ದೇವತಾ—ಇಂದ್ರಃ॥
ಛಂದಃ—೧-೧೨, ೧೪ ಜಗತೀ। ೧೩, ೧೫ ತ್ರಿಷ್ಟುಪ್॥

॥ ಸಂಹಿತಾಪಾಠಃ ॥

ತ್ಯಂ ಸು ಮೇಷಂ ಮಹಯಾ ಸ್ವರ್ವಿದಂ ಶತಂ ಯಸ್ಯ ಸುಭ್ವಃ ಸಾಕಮೀರತೇ।
ಅತ್ಯಂ ನ ವಾಜಂ ಹವನಸ್ಯದಂ ರಥಮೇಂದ್ರಂ ವವೃತ್ಯಾಮವಸೇ ಸುವೃಕ್ತಿಭಿಃ ॥೧॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತ್ಯಂ । ಸು । ಮೇಷಂ । ಮಹಯ । ಸ್ವಃऽವಿದಂ । ಶತಂ । ಯಸ್ಯ । ಸುಽಭ್ವಃ ।
ಸಾಕಂ । ಈರತೇ ।
ಅತ್ಯಂ । ನ । ವಾಜಂ । ಹವನಽಸ್ಯದಂ । ರಥಂ । ಆ । ಇಂದ್ರಂ । ವವೃತ್ಯಾಂ
ಅವಸೇ । ಸುವೃಕ್ತಿಽಭಿಃ ॥ ೧ ॥

॥ ಸಾಯಣಭಾಷ್ಯಂ ॥

ತ್ಯಂ ತಂ ಪ್ರಸಿದ್ಧಂ ಮೇಷಂ ಶತ್ರುಭಿಃ ಸಹ ಸ್ಪರ್ಧಮಾನಂ ಸ್ವರ್ವಿದಂ । ಸ್ವರಾದಿತ್ಯೋ ದ್ಯೌರ್ವಾ । ತಸ್ಯ ವೇದಿತಾರಂ ಲಬ್ಧಾರಂ ವಾ । ಯದ್ವಾ । ಸ್ವಃ ಸುಷ್ಟ್ವರಣೀಯಂ ಧನಂ । ತಸ್ಯ ಲಂಭಯಿತಾರಂ । ಏವಂಗುಣವಿಶಿಷ್ಟಮಿಂದ್ರಂ ಹೇ ಅಧ್ವರ್ಯೋ ಸು ಮಹಯ । ಸಮ್ಯಕ್ ಪೂಜಯ । ಯಸ್ಯೇಂದ್ರಸ್ಯ ಶತಂ ಶತಸಂಖ್ಯಾಕಾಃ ಸುಭ್ವಃ ಸ್ತೋತಾರಃ ಸಾಕಂ ಸಹೈವ ಯುಗಪದೇವೇರತೇ ಸ್ತುತೌ ಪ್ರವರ್ತಂತೇ । ಯದ್ವಾ ಯಸ್ಯೇಂದ್ರಸ್ಯ ರಥಂ ಶತಂ ಸುಭ್ವಃ ಶತಸಂಖ್ಯಾಕಾ ಅಶ್ವಾಃ ಸಾಕಂ ಸಹೇರತೇ। ಗಮಯಂತಿ । ತಮಿಂದ್ರಮವಸೇಽಸ್ಮತ್ಪ್ರರಕ್ಷಣಾಯ ಸುವೃಕ್ತಿಭಿಃ ಸುಷ್ಠ್ವಾವರ್ಜಕೈಃ ಸ್ತೋತ್ರೈಃ ರಥಮಾವವೃತ್ಯಾಂ । ರಥಂ ಪ್ರತ್ಯಾವರ್ತಯಾಮಿ । ಕೀದೃಶಂ ರಥಂ । ಹವನಸ್ಯದಂ । ಹವನಮಾಹ್ವಾನಂ ಯಾಗಂ ವಾ ಪ್ರತಿ ವೇಗೇನ ಗಚ್ಛಂತಂ । ವೇಗಗಮನೇ ದೃಷ್ಟಾಂತಃ । ಅತ್ಯಂ ನ ವಾಜಂ । ಗಮನಸಾಧನಮಶ್ವಮಿವ ॥ ಮಹಯ । ಮಹ ಪೂಜಾಯಾಂ । ಚುರಾದಿರದಂತಃ । ಸಂಹಿತಾಯಾಮನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ಸುಭ್ವಃ । ಸುಷ್ಠು ಭವಂತೀತಿ ಸುಭ್ವಃ ಸ್ತೋತಾರಃ । ಕ್ವಿಪ್ ಚೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಜಸ್ಯೋಃ ಸುಪೀತಿ ಯಣಾದೇಶಸ್ಯ ನ ಭೂಸುಧಿಯೋರಿತಿ ಪ್ರತಿಷೇಧೇ ಪ್ರಾಪ್ತೇ ಛಂದಸ್ಯುಭಯಥಾ । ಪಾ. ೬-೪-೮೬ । ಇತ್ಯುಭಯಥಾಭಾವಾದ್ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯ ಜಸೋಽನುದಾತ್ತಸ್ಯ ಸ್ವರಿತತ್ವಂ । ಈರತೇ । ಈರ ಗತೌ ಕಂಪನೇ ಚ । ಅದಾದಿತ್ವಾಚ್ಛಪೋ ಲುಕ್ । ಝಸ್ಯಾದಾದೇಶಃ । ಟೇರೇತ್ವಂ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ । ತತ್ರ ಹಿ ಪಂಚಮೀನಿರ್ದೇಶೇಽಪಿ ವ್ಯವಹಿತೇಽಪಿ ಕಾರ್ಯಮಿಷ್ಯತೇ । ಕಾ. ೮-೧-೬೬ । ಇತ್ಯುಕ್ತಂ । ಅತ್ಯಂ । ಅತ್ಯ ಇತ್ಯಶ್ವನಾಮ । ಅತ್ಯೋ ಹಯ ಇತಿ ಪಾಠಾತ್ । ವಾಜಂ । ವಾಜ್ಯತೇ ಗಮ್ಯತೇಽನೇನೇತಿ ವಾಜಃ । ವಜ ವ್ರಜ ಗತೌ । ಕರಣೇ ಘಞ್ । ಅಜಿವ್ರಜ್ಯೋಶ್ಚ । ಪಾ. ೭-೩-೬೦ । ಇತ್ಯತ್ರ ಚಶಬ್ದಸ್ಯಾನುಕ್ತಸಮುಚ್ಚಯಾರ್ಥತ್ವಾದ್ವಾಜೋ ವಾಜ್ಯಮಿತ್ಯತ್ರಾಪಿ ಕುತ್ವಾಭಾವ ಇತ್ಯುಕ್ತಂ । ಹವನಸ್ಯದಂ । ಸ್ಯಂದೂ ಪ್ರಸ್ರವಣೇ । ಸ್ಯದೋ ಜವೇ । ಪಾ. ೬-೪-೨೮ । ಇತಿ ವೇಗೇ ಗಮ್ಯಮಾನೇ ಘಞಂತೋ ನಿಪಾತಿತಃ । ಅತ ಏವ ನಲೋಪೋ ವೃದ್ಧ್ಯಭಾವಶ್ಚ । ನ ಚ ನ ಧಾತುಲೋಪ ಆರ್ಧಧಾತುಕೇ । ಪಾ. ೧-೧-೪ । ಇತಿ ವೃದ್ಧೇಃ ಪ್ರತಿಷೇಧಃ । ಇಗ್ಲಕ್ಷಣಾ ಹಿ ವೃದ್ಧಿಸ್ತತ್ರ ಪ್ರತಿಷಿಧ್ಯತೇ । ನ ಚೇಯಮಿಗ್ಲಕ್ಷಣಾ । ಘಞಂತೋ ಇತಿತ್ವಾದುತ್ತರಪದಸ್ಯಾದ್ಯುದಾತ್ತತ್ವಂ ।



CC-0. Jangamwadi Math Collection. Digitized by eGangotri

ಕೃದುತ್ತರಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ನವ್ಯತ್ಯಾಂ । ವೃತು ವರ್ತನೇ । ಲಿಙ್ ವ್ಯತ್ಯಯೇನ ಪರಸ್ಮೈಪದಂ । ಬಹುಳಂ ಛಂದಸೀತಿ ಶಪಃ ಶ್ಲುಃ । ದ್ವಿರ್ವಚನಾದಿ । ಯಾಸುಟೋ ಙಿತ್ವಾಲ್ಲಘೂಪಧಗುಣಾಭಾವಃ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುರ್ವೇ) ತ್ಯಂ—ಪ್ರಸಿದ್ಧನೂ । ಮೇಷಂ—ಶತ್ರುಗಳೊಡನೆ ಹೋರಾಡುವವನೂ । ಸ್ವರ್ವಿದಂ—ಸ್ವರ್ಗವನ್ನು ಅಥವಾ ಆದಿತ್ಯನನ್ನು ತಿಳಿಸತಕ್ಕವನೂ ಅಥವಾ ಹೊಂದತಕ್ಕವನೂ ಅಥವಾ ಧನವನ್ನು ಹೊಂದಿಸತಕ್ಕವನೂ ಆದ ಇಂದ್ರನನ್ನು । ಸು ಮಹಯ—ಚೆನ್ನಾಗಿ ಪೂಜಿಸು । ಯಸ್ಯ—ಯಾವ ಇಂದ್ರನ (ನ್ನು) ।ಶತಂ—ನೂರು ಸಂಖ್ಯೆಗಳುಳ್ಳ । ಸುಭ್ವಃ—ಸ್ತೋತೃಗಳು । ಸಾಕಂ—ಒಟ್ಟಿಗೆ ಸೇರಿಕೊಂಡು ಈರತೇ—ಸ್ತೋತ್ರಮಾಡುತ್ತಾರೋ । [ಅಥವಾ । ಯಸ್ಯ—ಯಾವ ಇಂದ್ರನ (ರಥವನ್ನು) । ಶತಂ— ನೂರು ಸಂಖ್ಯೆಗಳುಳ್ಳ । ಸುಭ್ವಃ—ಕುದುರೆಗಳು । ಸಾಕಂ—ಒಟ್ಟಿಗೆ ಸೇರಿಕೊಂಡು । ಈರತೇ—ಎಳೆಯುತ್ತವೆಯೋ ।] ಇಂದ್ರಂ—ಆ ಇಂದ್ರನನ್ನು । ಅವಸೇ—ನಮ್ಮ ರಕ್ಷಣೆಗಾಗಿ । ಅತ್ಯಂ ನ ವಾಜಂ—ವೇಗವಾಗಿ ಓಡುವ ಕುದುರೆಯಂತೆ । ಹವನಸ್ಯದಂ—ಆಹ್ವಾನವನ್ನು ಕುರಿತು ಅಥವಾ ಯಾಗವನ್ನು ಕುರಿತು ( ವೇಗವಾಗಿ ) ಓಡುವ । ರಥಂ—ರಥವನ್ನು । ಸುವೃಕ್ತಿಭಿಃ—ಪೂಜಾರ್ಹವಾದ ಸ್ತೋತ್ರಗಳಿಂದ । ಆ ವವೃತ್ಯಾಂ—ಹತ್ತುವಂತೆ ಮಾಡುವೆನು.

॥ ಭಾವಾರ್ಥ ॥

ಎಲೈ ಅಧ್ವರ್ಯುವೇ, ಶತ್ರುಗಳೊಡನೆ ಹೋರಾಡುವವನೂ, ಸ್ವರ್ಗವನ್ನು ತಿಳಿಯುವಂತೆಮಾಡುವವನೂ ಪ್ರಸಿದ್ಧನೂ ಆದ ಇಂದ್ರನನ್ನು ಚೆನ್ನಾಗಿ ಪೂಜಿಸು. ಆ ಇಂದ್ರನನ್ನು ನೂ (ರಾ) ರು ಸ್ತೋತೃಗಳು ಒಟ್ಟಿಗೆ ಸೇರಿಕೊಂಡು ಸ್ತೋತ್ರಮಾಡುತ್ತಾರೆ. ಅಂತಹ ಇಂದ್ರನನ್ನು ಪೂಜಾರ್ಹವಾದ ಸ್ತೋತ್ರಗಳಿಂದ ಪ್ರಾರ್ಥಿಸಿ ಕುದುರೆಯಂತೆ ವೇಗವಾಗಿ ಓಡುವ ರಥವನ್ನು ಹತ್ತಿಸಿ ನಮ್ಮ ರಕ್ಷಣೆಗಾಗಿ ನಮ್ಮ ಯಜ್ಞಾಭಿಮುಖವಾಗಿ ಬರುವಂತೆ ಮಾಡುವೆನು.

## English Translation.

Worship well that ram (Indra) who makes heaven known, whom a hundred worshippers at once are praising. I implore Indra with many prayers to ascend the car which hastens like a fleet horse to the Sacrifice for my protection.

॥ ವಿಶೇಷ ವಿಷಯಗಳು ॥

ತ್ಯಂ—ಇದು ಪ್ರಸಿದ್ಧಾರ್ಥಕವಾದ ತ್ಯದ್ ಶಬ್ದದ ದ್ವಿತೀಯೈಕವಚನ. ಪ್ರಸಿದ್ಧವಾದ ಎಂಬುದೇ ಇದರ ಅರ್ಥ.

ಮೇಷಂ—ಶತ್ರುಗಳೊಡನೆ ಸ್ಪರ್ಧಿಸುವ ಇಂದ್ರ. ( ಈ ಪದದ ವಿವರಣೆಯು, ೧-೫೧-೧ ರಲ್ಲಿ ವಿಶದವಾಗಿ ಕೊಡಲ್ಪಟ್ಟಿದೆ.)



CC-0. Jangamwadi Math Collection. Digitized by eGangotri

**ಸ್ವರ್ವಿದಂ**—ಸ್ವರಾದಿತ್ಯೋ ದ್ಯೌರ್ವಾ । ತಸ್ಯ ವೇದಿತಾರಂ ಲಬ್ಧಾರಂ ವಾ । ಯದ್ವಾ ಸುಷ್ಠು ಸ್ವರಣೀಯಂ ಧನಂ ತಸ್ಯ ಲಂಭಯಿತಾರಂ । ಸ್ವರ್ಗವನ್ನೂ, ಆದಿತ್ಯಲೋಕವನ್ನೂ ಹೊಂದಿ ಅಲ್ಲಿನ ಸಕಲ ವಿಷಯಗಳನ್ನೂ ತಿಳಿದಿರುವವನು, ಅಥವಾ ಪ್ರಶಸ್ತವಾದ ಐಶ್ವರ್ಯವನ್ನು ಯಜಮಾನರಿಗೆ ಕರುಣಿಸುವವನು ಎಂಬರ್ಥದಿಂದ ಈ ಪದವು ಇಂದ್ರನಿಗೆ ವಿಶೇಷಣವಾಗಿದೆ.

**ಶತಂ ಸುಭ್ವಃ ಸಾಕಮೀರತೇ** । ಇಲ್ಲಿ ಸುಭೂಶಬ್ದಕ್ಕೆ ಸ್ತೋತ್ರಮಾಡುವವರು, ಮತ್ತು ಕುದುರೆಗಳು ಎಂಬ ಎರಡರ್ಥವಿದೆ. ಇಂದ್ರನನ್ನು ನೂರುಜನ ಸ್ತುತಿಪಾಠಕರು ಒಟ್ಟಾಗಿ ಏಕಧ್ವನಿಯಲ್ಲಿ ಸ್ತುತಿಸುತ್ತಿರುವರು ಎಂದೂ, ಅಥವಾ ಇಂದ್ರನ ರಥವನ್ನು ನೂರು ಕುದುರೆಗಳು ಏಕಕಾಲದಲ್ಲಿ ವೇಗವಾಗಿ ಎಳೆಯುತ್ತಿವೆಯೆಂದೂ ಅರ್ಥ ಹೇಳಬಹುದಾಗಿದೆ.

**ಅತ್ಯಂ**—ಇದಕ್ಕೆ ಕುದುರೆ ಎಂದರ್ಥ. **ಅತ್ಯಃ ಹಯಃ** (ನಿ-೨-೨೭) ಎಂದು ನಿರುಕ್ತದಲ್ಲಿ ಹಯಾರ್ಥದಲ್ಲಿ ಇದು ಪಠಿತವಾಗಿದೆ.

**ವಾಜಂ**—ವಾಜ್ಯತೇ ಗಮ್ಯತೇ ಅನೇನ ಎಂಬ ಉತ್ಪತ್ತಿಯಿಂದ ವಾಜ ಶಬ್ದವು ವೇಗವಾಗಿ ಹೋಗುವ ಎಂಬರ್ಥವನ್ನು ಕೊಡುವುದು. **ಅತ್ಯಂ ನ ವಾಜಂ** ಎಂಬ ವಾಕ್ಯಕ್ಕೆ ಗಮನಸಾಧಕವಾದ ಕುದುರೆಯಂತೆ ಎಂಬರ್ಥವಿರುವುದು.

**ಸುವೃಕ್ತಿಭಿಃ**—ಎಲ್ಲಿದ್ದರೂ ಮನಸ್ಸನ್ನು ಆಕರ್ಷಿಸುವಂತಹ ಪ್ರಶಸ್ತವಾದ ಸ್ತೋತ್ರಗಳಿಗೆ ಸುವೃಕ್ತಿಗಳೆಂದು ಹೆಸರು.

॥ ವ್ಯಾಕರಣಪ್ರಕ್ರಿಯಾ ॥

**ಮಹಯ**—ಮಹ ಪೂಜಾಯಾಂ ಧಾತು. ಚುರಾದಿ. ಇದು ಅದಂತವಾದ ಧಾತು. ಲೋಟ್ ಮಧ್ಯಮಪುರುಷ ಏಕವಚನದ ಸಿಪಿಗೆ ಹಿ ಆದೇಶ. ಚುರಾದಿಗೆ ಸ್ವಾರ್ಥದಲ್ಲಿ **ಸತ್ಯಾಪಪಾಶ**—ಸೂತ್ರದಿಂದ ಣಿಚ್ **ಅತೋ ಲೋಪಃ** ಎಂಬುದರಿಂದ ಣಿಚ್ ಪರದಲ್ಲಿರುವಾಗ ಅಕಾರಲೋಪಃ ಶಪ್ ವಿಕರಣ. **ಅತೋ ಹೇಃ** ಎಂಬುದರಿಂದ ಹಿ ಲುಕ್. ಶಪ್ ನಿಮಿತ್ತಕವಾಗಿ ಣಿಚಿಗೆ ಗುಣಾಯಾದೇಶ. ಮಹಯ ಎಂದು ರೂಪವಾಗುತ್ತದೆ. **ಅನ್ಯೇಷಾಮಪಿ ದೃಶ್ಯತೇ** (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಸುಭ್ವಃ**—ಸುಷ್ಠು ಭವಂತಿ ಇತಿ ಸುಭ್ವಃ ಸ್ತೋತಾರಃ ಭೂ ಸತ್ತಾಯಾಂ ಧಾತು ಕ್ವಿಪ್ ಚ ಎಂಬುದರಿಂದ ಕ್ವಿಪ್. ಸುಭೂ ಶಬ್ದವಾಗುತ್ತದೆ. ಸು ಎಂಬ ಗತಿಯೊಡನೆ ಸಮಾಸವಾದಾಗ **ಗತಿಕಾರಕೋ**—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಇದಕ್ಕೆ ಜಸ್ ಪರದಲ್ಲಿರುವಾಗ **ಓಃ ಸುಪಿ** ಸೂತ್ರದಿಂದ ಪ್ರಾಪ್ತವಾದ ಯಣಾದೇಶಕ್ಕೆ **ನಭೂಸುಧಿಯೋಃ** (ಪಾ. ಸೂ. ೬-೪-೮೫) ಎಂಬುದರಿಂದ ಪ್ರತಿಷೇಧವು ಬರಬೇಕಾಗುತ್ತದೆ. ಆದರೆ **ಛಂದಸ್ಯುಭಯಥಾ** ಎಂಬುದರಿಂದ ನಿಷೇಧವು ಬಾರದಿರುವುದೂ ಇದೆಯಾದುದರಿಂದ ಉತ್ಸರ್ಗಸೂತ್ರದಿಂದ ಯಣಾದೇಶವು ಬರುತ್ತದೆ. ಊಕಾರಕ್ಕೆ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿ ಇದ್ದುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ಈರತೇ**—ಈರ ಗತೌ ಕಂಪನೇ ಚ ಧಾತು. ಅದಾದಿ. **ಅದಿಪ್ರಭೃತಿಭ್ಯಃ ಶಪಃ** ಸೂತ್ರದಿಂದ ಶಪ್ ಲುಕ್ಕಾಗುವುದರಿಂದ ಅಕಾರದ ಪರದಲ್ಲಿರದಿರುವುದರಿಂದ **ಆತ್ಮನೇಪದೇಷ್ವನತಃ** ಸೂತ್ರದಿಂದ ಝ ಪ್ರತ್ಯಯಕ್ಕೆ ಅದಾದೇಶ. **ಟಿತ ಆತ್ಮನೇಪದಾನಾಂ ಟೇರೇ** ಎಂಬುದರಿಂದ ಅದರ ಟಿಗೆ ಏತ್ವ ಈರತೇ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

ಅನುದಾತ್ತೇತ್ತ್ವದ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ. ಯಸ್ಯ ಎಂದು ಹಿಂದೆ ಯಚ್ಛಬ್ದಸಂಬಂಧ ವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಯದ್ಯಪಿ ಆ ನಿಷೇಧಸೂತ್ರ ದಲ್ಲಿ ಪಂಚಮೀ ನಿರ್ದೇಶಮಾಡಿರುವುದರಿಂದ ಯಚ್ಛಬ್ದದ ಅವ್ಯವಹಿತ ಪರದಲ್ಲಿರುವ ನಿಘಾತಕ್ಕೆ ನಿಷೇಧ ಬರಬೇಕು. ಆದರೆ ವ್ಯವಹಿತೇಽಪಿ ಕಾರ್ಯಮಿಷ್ಯತೇ (ಕಾ. ೮-೧-೬೬) ಎಂಬ ವಚನದಿಂದ ಇಲ್ಲಿ ವ್ಯವಧಾನ ವಿದ್ದರೂ ಕಾರ್ಯ ಬರುತ್ತದೆ.

ಅತ್ಯಂ—ಅತ್ಯ ಎಂದು ಕುದುರೆಯ ಹೆಸರು. ಅತ್ಯಃ ಹಯಃ (ನಿ. ೨-೨೭) ಎಂದು ಪರ್ಯಾಯ ವಾಗಿ ಪಾಠಮಾಡಿರುತ್ತಾರೆ.

ವಾಜಂ—ವಾಜ್ಯತೇ ಗಮ್ಯತೇಽನೇನೇತಿ ವಾಜಃ ವಜ ವ್ರಜ ಗತೌ ಧಾತು. ಕರಣಾರ್ಥದಲ್ಲಿ ಘಞ್ ಅತ ಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಅಜಿವ್ರಜ್ಯೋಶ್ಚ (ಪಾ. ಸೂ. ೭-೩-೬೦) ಎಂಬ ಸೂತ್ರದಲ್ಲಿ ಚ ಶಬ್ದವು ಅನುಕ್ತಸಮುಚ್ಚಾಯಕವಾದುದರಿಂದ ವಾಜಃ ವಾಜ್ಯಂ ಎಂಬೆಡೆಗಳಲ್ಲಿ ವಜ ಧಾತು ವಿಗೂ ಕುತ್ವವು ಬರುವುದಿಲ್ಲ ವಾಜ ಎಂದು ರೂಪವಾಗುತ್ತದೆ. ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯು- ದಾತ್ತಸ್ವರ ಬರುತ್ತದೆ.

ಹವನಸ್ಯದಂ—ಸ್ಯಂದೂ ಪ್ರಸ್ರವಣೇ ಧಾತು. ಸ್ಯದೋಜವೇ (ಪಾ. ಸೂ. ೬-೪-೨೮) ಸೂತ್ರದಲ್ಲಿ ವೇಗ ರೂಪಾರ್ಥವು ತೋರುತ್ತಿರುವಾಗ ಈ ಧಾತುವಿಗೆ ಘಞಂತವಾಗಿ ನಿಪಾತಮಾಡಿರುತ್ತಾರೆ. ಆದುದರಿಂದ ಸೂತ್ರಾಂತರದಿಂದ ಸಿದ್ಧವಾಗಿದ್ದರೂ ನಲೋಪವೂ ವೃದ್ಧ್ಯಭಾವವೂ ಸಿದ್ಧವಾಗುತ್ತದೆ. ನ ಧಾತುಲೋಪ ಆರ್ಧ- ಧಾತುಕೇ (ಪಾ. ಸೂ. ೧-೧,೪) ಎಂಬುದರಿಂದಲೇ ಇಲ್ಲಿ ವೃದ್ಧಿಪ್ರತಿಷೇಧವು ಸಿದ್ಧವಾದಾಗ ಅದಕ್ಕೋಸ್ಕರ ನಿಪಾ ತವನ್ನು ಏಕೆ ಸ್ವೀಕರಿಸಬೇಕು ಎಂದು ಶಂಕಿಸಬಹುದು. ಆದರೆ ಆ ಸೂತ್ರದಿಂದ ನಿಷೇಧಿಸುವುದು ಕೇವಲ ಇಕ್ ಲಕ್ಷಣವಾದ ವೃದ್ಧಿಯನ್ನು. ಇಲ್ಲಿ ಇಕ್‌ಲಕ್ಷಣವೃದ್ಧಿಯಲ್ಲ ಅತಉಪಧಾಯಾಃ ಎಂಬುದರಿಂದ ಅಕಾರಕ್ಕೆ ವೃದ್ಧಿ ಪ್ರಾಪ್ತಿ. ಆದುದರಿಂದ ನಿಪಾತವನ್ನೇ ಸ್ವೀಕರಿಸಬೇಕು. ಘಞ್ ಞಿತ್ತಾದುದರಿಂದ ಉತ್ತರಪದಕ್ಕೆ ಆದ್ಯುದಾತ್ತಸ್ವರ ಬರುತ್ತದೆ. ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರವು ಬರುತ್ತದೆ.

ವವೃತ್ಯಾಂ—ವೃತು ವರ್ತನೇ ಧಾತು. ಛಾಂದಿ ಆತ್ಮನೇಪದಿ ವ್ಯತ್ಯಯೋಬಹುಲಂ ಎಂಬುದರಿಂದ ಪರಸ್ಮೈಪದದ ಲಿಙ್‌ಪ್ರತ್ಯಯ ಬರುತ್ತದೆ. ಬಹುಲಂ ಛಂದಸಿ ಸೂತ್ರದಿಂದ ಶಪಿಗೆ ಶ್ಲು ವಿಕರಣ ಬರುತ್ತದೆ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ, ಅಭ್ಯಾಸಕ್ಕೆ ಹಲಾದಿಶೇಷ, ಉರದತ್ವ ಹಲಾದಿಶೇಷ ತಸ್‌ಥಸ್‌ಥ- ಸೂತ್ರದಿಂದ ಮಿಪಿಗೆ ಅಮಾದೇಶ ಲಿಙಿಗೆ ಯಾಸುಟ್‌ಪ—ಸೂತ್ರದಿಂದ ಯಾಸುಟಾಗಮ. ವವೃತ್ಯಾಂ ಎಂದು ರೂಪವಾಗುತ್ತದೆ. ಇಲ್ಲಿ ಯಾಸುಟಿಗೆ ಙಿದ್ವದ್ಭಾವ ಹೇಳಿರುವುದರಿಂದ ಪುಗಂತಲಘೂಪದಸ್ಯಚ ಸೂತ್ರದಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಸೂತ್ರದಿಂದ ನಿಘಾತ ಸ್ವರ ಬರುತ್ತದೆ.





CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಸ ಪರ್ವತೋ ನ ಧರುಣೇಷ್ವಚ್ಯುತಃ ಸಹಸ್ರಮೂತಿಸ್ತವಿಷೀಷು ವಾವೃಧೇ।
ಇಂದ್ರೋ ಯದ್ವೃತ್ರಮವಧೀನ್ನದೀವೃತಮುಬ್ಜನ್ನರ್ಣಾಂಸಿ ಜರ್ಹೃ-
ಷಾಣೋ ಅಂಧಸಾ ॥ ೨ ॥

॥ ಪದಪಾಠಃ ॥

ಸಃ । ಪರ್ವತಃ । ನ । ಧರುಣೇಷು । ಅಚ್ಯುತಃ । ಸಹಸ್ರಂಽಊತಿಃ । ತವಿಷೀಷು ।
ವವೃಧೇ ।
ಇಂದ್ರಃ । ಯತ್ । ವೃತ್ರಂ । ಅವಧೀತ್ । ನದೀಽವೃತಂ । ಉಬ್ಜನ್ । ಅರ್ಣಾಂಸಿ
ಜರ್ಹೃಷಾಣಃ । ಅಂಧಸಾ ॥ ೨ ॥

॥ಸಾಯಣಭಾಷ್ಯಂ॥

ಅಂಧಸಾ ಸೋಮಲಕ್ಷಣೇನಾನ್ನೇನ ಜರ್ಹೃಷಾಣೋಽತ್ಯರ್ಥಂ ಹೃಷ್ಯನ್ನಿಂದ್ರೋ ಯದ್ಯದಾ ವೃತ್ರಂ । ಕೀದೃಶಂ ವೃತ್ರಂ । ತ್ರಯಾಣಾಂ ಲೋಕಾನಾಮಾವರೀತಾರಮಸುರಮವಧೀತ್ । ಹತವಾನ್ । ಕಿಂ ಕುರ್ವನ್ನಿಂದ್ರಃ । ಅರ್ಣಾಂಸಿ ಜಲಾನಿ ನದೀವೃತಂ । ನದನಾನ್ನದ್ಯ ಆಪಃ । ತಾಸಾಮಾವರೀತಾರಂ । ಕಿಂ ಕುರ್ವನ್ನಿಂದ್ರಃ । ಅರ್ಣಾಂಸಿ ಜಲಾನ್ಯುಬ್ಜನ್ । ಅಧಃಪಾತಯನ್ । ತದಾನೀಂ ಸ ಇಂದ್ರಃ ಪರ್ವತೋ ನ ಪರ್ವವಾನ್ ಶಿಲೋಚ್ಚಯ ಇವ ಧರುಣೇಷು ಸರ್ವಸ್ಯ ಧಾರಕೇಷೂದಕೇಷು ಮಧ್ಯೇಽಚ್ಯುತಶ್ಚಲನರಾಹಿತ್ಯೇನ ಸ್ಥಿತಃ ಸಹಸ್ರಮೂತಿರ್ಬಹುವಿಧರಕ್ಷಣವಾನ್ ತವಿಷೀಷು ಬಲೇಷು ವಾವೃಧೇ । ಪ್ರವೃದ್ಧೋ ಬಭೂವ ॥ ಧರುಣೇಷು । ಧಾರಯತೇರ್ಣಿಲುಕ್ ಚೇತ್ಯುನಪ್ರತ್ಯಯಃ । ಪ್ರತ್ಯಯಸ್ವರಃ। ಸಹಸ್ರಮೂತಿಃ । ಸಹಸ್ರಮೂತಯೋ ಯಸ್ಯಾಸೌ । ಲುಗ-ಭಾವಶ್ಛಾಂದಸಃ । ವಾವೃಧೇ । ಸಂಹಿತಾಯಾಮಭ್ಯಾಸಸ್ಯಾನ್ಯೇಷಾಮಪಿ ದೃಶ್ಯತ ಇತಿ ದೀರ್ಘತ್ವಂ । ನದೀವೃತಂ । ನದೀಂ ವೃಣೋತೀತಿ ನದೀವೃತ್ । ಕ್ವಿಪ್ । ತುಗಾಗಮಃ । ಉಬ್ಜನ್ । ಉಬ್ಜ ಆರ್ಜವೇ । ವಿಕರಣಸ್ವರಃ । ಅರ್ಣಾಂಸಿ । ಉದಕೇ ನುಟ್ ಚ । ಉ. ೪-೧೯೬ । ಇತ್ಯರ್ತೇರಸುನ್ ಪ್ರತ್ಯಯಸ್ತತ್ಸನ್ನಿಯೋಗೇನ ನುಡಾಗಮಶ್ಚ । ನಿತ್ತ್ವಾದಾದ್ಯುದಾತ್ತತ್ವಂ । ಜರ್ಹೃಷಾಣಃ । ಹೃಷ ತುಷ್ಟೌ । ಯಙ್ಲುಗಂತಾದ್ವ್ಯತ್ಯಯೇನ ಶಾನಚ್ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಯದ್ವಾ । ಯಙಂತಾದೇವ ಶಾನಚಿ ಬಹುಲಂ ಛಂದಸೀತಿ ಶಪೋ ಲುಕ್ । ಛಂದಸ್ಯುಭಯಥೇತಿ ಶಾನಚ್ । ಆರ್ಧಧಾತುಕತ್ವಾದತೋಲೋಪಃ





CC-0. Jangamwadi Math Collection. Digitized by eGangotri

ಯಲೋಪಃ । ಸಾರ್ವಧಾತುಕತ್ವಾಚ್ಛಾಭ್ಯಸ್ತಸ್ಯಾದ್ಯುದಾತ್ತತ್ವಂ । ಅಂಧಸಾ । ಅಧ್ಯೈತ ಇತ್ಯಂಧಃ । ಅದೇರ್ನುಮ್ ಧಶ್ಚ । ಉ. ೪-೨೦೫ । ಇತ್ಯಸುನ್ । ಧಾತೋರ್ನುಮಾಗಮೋ ಧಕಾರಾಂತಾದೇಶಶ್ಚ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಅಂಧಸಾ—ಸೋಮರೂಪದ ಅನ್ನದಿಂದ। ಜರ್ಹೃಷಾಣಃ—ತೃಪ್ತಿಯನ್ನು ಹೊಂದುತ್ತ । ಇಂದ್ರಃ—ಇಂದ್ರನು । ಅರ್ಣಾಂಸಿ—ನೀರುಗಳನ್ನು । ಉಬ್ಜ—ಕೆಳಕ್ಕೆ ಸುರಿಸುತ್ತ । ನದೀವೃತಂ—ನೀರುಗಳಿಗೆ ಪ್ರತಿಬಂಧಕನಾದ । ವೃತ್ರಂ—(ಮೂರು ಲೋಕಗಳನ್ನೂ) ಆವರಿಸಿದ ವೃತ್ರನನ್ನು । ಯತ್—ಯಾವಾಗ । ಅವಧೀತ್—ಕೊಂದನೋ (ಆಗ) । ಸಃ—ಆ ಇಂದ್ರನು । ಪರ್ವತೋ ನ-(ಬಂಡೆಗಳ ಸಂಘಾತವಾದ) ಪರ್ವತದಂತೆ। ಧರುಣೇಷು—(ಸರ್ವ) ಧಾರಕಗಳಾದ ನೀರುಗಳ ಮಧ್ಯದಲ್ಲಿ । ಅಚ್ಯುತಃ—ಚಲನರಹಿತನಾಗಿ ( ಸ್ಥಿರವಾಗಿ) ನಿಂತುಕೊಂಡು । ಸಹಸ್ರಮೂತಿಃ—ಸಹಸ್ರಾರು ರಕ್ಷಣಾ ಸಾಧನಗಳೊಡನೆ । ತವಿಷೀಷು—ಬಲಗಳಲ್ಲಿ । ವಾವೃಧೇ—ವೃದ್ಧಿಹೊಂದಿದನು । (ಅತ್ಯಂತ ಪ್ರಬಲನಾದನು) ॥

॥ ಭಾವಾರ್ಥ ॥

ಯಜ್ಞಾನ್ನದಿಂದ ತೃಪ್ತಿಯನ್ನು ಹೊಂದುತ್ತ ಇಂದ್ರನು ನೀರುಗಳನ್ನು ಕೆಳಕ್ಕೆ ಸುರಿಸುತ್ತ ನೀರುಗಳಿಗೆ ಪ್ರತಿಬಂಧಕನಾದ ವೃತ್ರನನ್ನು ಕೊಂದಾಗ ಸರ್ವಾಧಾರಕಗಳಾದ ನೀರುಗಳ ಮಧ್ಯೆ ಪರ್ವತದಂತೆ ಚಲನರಹಿತನಾಗಿ ನಿಂತುಕೊಂಡು ಭಕ್ತರನ್ನು ಸಲಹುವ ಸಹಸ್ರಾರು ರಕ್ಷಣಾಸಾಧನಗಳೊಡನೆ ಅತ್ಯಂತ ಪ್ರಬಲನಾದನು.

## English Translation.

When Indra, who delights in the sacrificial food had slain the stream-obstructing Vritra, and was pouring down the waters, he stood firm amid the torrents like mountain, and endowed with a thousand means of protecting, increased in vigour.

॥ ವಿಶೇಷ ವಿಷಯಗಳು ॥

ಪರ್ವತೋ ನ—ಪರ್ವತದಂತೆ ಎಂಬರ್ಥವು ಇಲ್ಲಿರುವ ಇವಾರ್ಥಕದ ನಕಾರದ ಸಾಹಚರ್ಯದಿಂದ ಬಂದಿದೆ.

ಧರುಣೇಷು—ಸರ್ವಸ್ಯ ಧಾರಕೇಷೂದಕೇಷು ಮಧ್ಯೇ ಇಂದ್ರನು ವೃತ್ರಾಸುರನನ್ನು ಎದುರಿಸುವ ಸಂದರ್ಭದಲ್ಲಿ ನೀರಿನ ಮಧ್ಯದಲ್ಲಿ ಪರ್ವತದಂತೆ ಹೆದರದೆ ಸ್ಥಿರವಾಗಿ ನಿಂತಿದ್ದನು ಎಂದು ವರ್ಣಿಸಿರುವುದು

ಸಹಸ್ರಮೂತಿಃ—ಸಹಸ್ರಂ ಊತಯಃ ಯಸ್ಯ ಸಃ ಎಂಬ ವ್ಯುತ್ಪತ್ತಿಯಿಂದ ಅನೇಕವಿಧವಾದ ರಕ್ಷಣೆಯುಳ್ಳವನು ಎಂದಾಗುವುದು.



CC-0. Jangamwadi Math Collection. Digitized by eGangotri

ನದೀವೃತಂ—ನದನಾತ್ ನದ್ಯಃ । ತಾಸಾಮಾವರೀತಾರಂ । ಜಲರಾಶಿಯ ಮಧ್ಯದಲ್ಲಿದ್ದವನು ವೃತ್ರಾಸುರ. ಅಂತಹ ವೃತ್ರನನ್ನು ಇಂದ್ರನು ಸಂಹಾರಮಾಡಿದನು.

॥ ವ್ಯಾಕರಣಪ್ರಕ್ರಿಯಾ ॥

ಧರುಣೇಷು—ಧೃಞ್ ಅವಸ್ಥಾನೇ ಧಾತು. ಧಾರಯತೇರ್ಣಿಲುಕ್ ಚ ಎಂಬುದರಿಂದ ಉನ ಪ್ರತ್ಯಯ. ತನ್ನಿಮಿತ್ತಕವಾಗಿ ಧಾತುವಿಗೆ ಗುಣ. ರೇಫದ ಪರದಲ್ಲಿರುವುದರಿಂದ ನಕಾರಕ್ಕೆ ಅಟ್‌ಕುಪ್ವಾ—ಸೂತ್ರದಿಂದ ಣತ್ವ. ಧರುಣ ಶಬ್ದವಾಗುತ್ತದೆ. ಸಪ್ತಮೀ ಬಹುವಚನರೂಪ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ರೇಫದ ಪರದಲ್ಲಿರುವ ಉಕಾರಕ್ಕೆ ಉದಾತ್ತಸ್ವರ ಬರುತ್ತದೆ.

ಸಹಸ್ರಮೂತಿಃ—ಸಹಸ್ರಂ ಊತಯೋ ಯಸ್ಯ ಅಸೌ ಸಹಸ್ರಮೂತಿಃ ಸಮಾಸವಾದಾಗ ಸುಪೋ-ಧಾತು ಪ್ರಾತಿಪದಿಕಯೋಃ ಎಂಬುದರಿಂದ ವಿಭಕ್ತಿಗೆ ಲುಕ್ ಪ್ರಾಪ್ತವಾದರೂ ಛಾಂದಸವಾಗಿ ಇಲ್ಲಿ ಬರುವುದಿಲ್ಲ.

ವವೃಧೇ—ವೃಧು ವೃದ್ಧೌ ಧಾತು ಭ್ವಾದಿ. ಲಿಟ್ ಪ್ರಥಮಪುರುಷ ಏಕವಚನ ತ ಪ್ರತ್ಯಯಕ್ಕೆ ಲಿಟಸ್ತಝಯೋರೇಶಿರೇಚ್ ಸೂತ್ರದಿಂದ ಏಕಾದೇಶ ಬರುತ್ತದೆ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಹಲಾದಿಶೇಷ ಉರದತ್ವ ಪುನಃ ಹಲಾದಿಶೇಷ. ಅಸಂಯೋಗಾಲ್ಲಿಟ್‌ಕಿತ್ ಸೂತ್ರದಿಂದ ಕಿದ್ವದ್ಭಾವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ವವೃಧೇ ಎಂದು ರೂಪವಾಗುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ. ಸಂಹಿತಾದಲ್ಲಿ ಅಭ್ಯಾಸಕ್ಕೆ ಅನ್ಯೇಷಾಮಪಿ ದೃಶ್ಯತೇ ಎಂಬುದರಿಂದ ದೀರ್ಘ ಬರುತ್ತದೆ.

ನದೀವೃತಮ್—ನದೀಂ ವೃಣೋತಿ ಇತಿ ನದೀವೃತ್. ವೃಞ್ ವರಣೇ ಧಾತು. ಕ್ವಿಪ್‌ಚ ಎಂಬುದರಿಂದ ಕ್ವಿಪ್ ಹ್ರಸ್ವಸ್ಯಪಿತಿಕೃತಿತುಕ್ ಎಂಬುದರಿಂದ ಧಾತುವಿನ ಋಕಾರಕ್ಕೆ ತುಗಾಗಮ. ಕಿತ್ ಪ್ರತ್ಯಯ ಪರದಲ್ಲಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. ದ್ವಿತೀಯಾ ಏಕವಚನರೂಪ.

ಉಬ್ಜನ್—ಉಬ್ಜ ಆರ್ಜವೇ ಧಾತು ತುದಾದಿ ಲಡರ್ಥದಲ್ಲಿ ಶತೃಪ್ರತ್ಯಯ ತುದಾದಿಭ್ಯಃಶಃ ಎಂಬುದರಿಂದ ಶ ವಿಕರಣ. ಉಬ್ಜತ್ ಶಬ್ದವಾಗುತ್ತದೆ. ಪ್ರಥಮಾ ಏಕವಚನದಲ್ಲಿ ಉಗಿತ್ತಾದುದರಿಂದ ನುಮಾಗಮ. ಹಲ್‌ಙ್ಯಾದಿನಾ ಸುಲೋಪ ಸಂಯೋಗಾಂತಲೋಪ. ಉಬ್ಜನ್ ರೂಪವಾಗುತ್ತದೆ. ವಿಕರಣ ಸ್ವರದಿಂದ ಜಕಾರೋತ್ತರಾಕಾರ ಉದಾತ್ತವಾಗುತ್ತದೆ.

ಅರ್ಣಾಂಸಿ—ಋ ಗತೌ ಧಾತು. ಉದಕೇ ನುಟ್ ಚ (ಉ. ಸೂ. ೪-೬೩೬) ಎಂಬುದರಿಂದ ನೀರು ಎಂಬರ್ಥ ತೋರುವಾಗ ಋಧಾತುವಿಗೆ ಅಸುನ್ ಪ್ರತ್ಯಯವೂ ತತ್ಸಂನಿಯೋಗದಿಂದ ನುಡಾಗಮವೂ ಬರುತ್ತದೆ. ರೇಫದ ಪರದಲ್ಲಿ ನಕಾರವಿರುವುದರಿಂದ ರಷಾಭ್ಯಾಂ ಸೂತ್ರದಿಂದ ಣತ್ವ. ಅರ್ಣಸ್ ಎಂದು ಶಬ್ದವಾಗುತ್ತದೆ. ದ್ವಿತೀಯಾ ಬಹುವಚನದಲ್ಲಿ ಅರ್ಣಾಂಸಿ ಎಂದು ರೂಪವಾಗುತ್ತದೆ. ಅಸುನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಸೂತ್ರದಿಂದ ಆದ್ಯುದಾತ್ತವಾಗುತ್ತದೆ.

ಜರ್ಹೃಷಾಣಃ—ಹೃಷ ತುಷ್ಟೌ ಧಾತು. ಅತಿಶಯಾರ್ಥದಲ್ಲಿ ಯಙ್ ಅದಕ್ಕೆ ಯಙೋಽಚಿಚ ಸೂತ್ರದಿಂದ ಲುಕ್. ಸನಾದ್ಯಂತಾ ಧಾತವಃ ಎಂಬುದರಿಂದ ಅದಕ್ಕೆ ಧಾತುಸಂಜ್ಞಾ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ ಚುತ್ವದಿಂದ ಜಕಾರ. ರುಗ್ರಿಕೌಚ ಲುಕಿ (ಪಾ. ಸೂ. ೭-೪-೯೧) ಸೂತ್ರದಿಂದ ರುಕಾಗಮ ಜರ್ಹೃಷ್ ಎಂದಾಗುತ್ತದೆ. ಶತೃಪ್ರತ್ಯಯಕ್ಕೆ ಯೋಗ್ಯವಾಗಿದ್ದರೂ ವ್ಯತ್ಯಯೋ ಬಹುಲಂ ಎಂಬು



CC-0. Jangamwadi Math Collection. Digitized by eGangotri

ದರಿಂದ ಶಾನಚ್. ಷಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಅಟ್‌ಕುಪ್ವಾಙ್—ಸೂತ್ರದಿಂದ ಣತ್ವ. ಜರ್ಹೃ ಷಾಣ ಎಂದು ರೂಪವಾಗುತ್ತದೆ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತ ಸ್ವರ ಬರುತ್ತದೆ. ಅಥವಾ ಯಙಂತದ ಮೇಲೆ ಶಾನಚ್ ಬಹುಲಂಛಂದಸಿ ಎಂಬುದರಿಂದ ಶಪಿಗೆ ಲುಕ್. ಜರ್ಹೃಷ್ಯ+ಆನ ಎಂದಿರುವಾಗ ಛಂದಸ್ಯುಭಯಥಾ ಎಂಬುದರಿಂದ ಶಾನಚಿಗೆ ಆರ್ಧಧಾತುಕಸಂಜ್ಞೆ ಬರುವುದ ರಿಂದ ಅತೋಲೋಪ—ಎಂಬುದರಿಂದ ಯಙಿನ ಅಕಾರಕ್ಕೆ ಲೋಪವೂ ಯಸ್ಯಹಲಃ ಎಂಬುದರಿಂದ ಯಲೋ ಪವೂ ಬರುತ್ತನೆ. ಸಾರ್ವಧಾತುಕ ಸಂಜ್ಞೆಯೂ ಇರುವುದರಿಂದ ಅಭ್ಯಸ್ತಕ್ಕೆ ಆದ್ಯುದಾತ್ತಸ್ವರವು ಬರುತ್ತದೆ. ರೂಪವು ಹಿಂದಿನಂತೆಯೇ ಆಗುವುದು.

ಅಂಧಸಾ—ಅದ್ಯತೇ ಇತಿ ಅಂಧಃ. ಅದ ಭಕ್ಷಣೇ ಧಾತು. ಅದೇರ್ನುಮ್‌ಧಶ್ಚ (ಉ. ಸೂ. ೪-೬೪೯) ಎಂಬುದರಿಂದ ಧಾತುವಿಗೆ ನುಮಾಗಮ, ಅಸುನ್ ಪ್ರತ್ಯಯ, ಧಕಾರಾಂತಾದೇಶ. ಅಂಧಸ್ ಎಂದು ಸಾಂತಪದ ವಾಗುತ್ತದೆ. ತೃತೀಯಾ ಏಕವಚನರೂಪ. ಅಸುನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಸ ಹಿ ದ್ವರೋ ದ್ವರಿಷು ವವ್ರ ಊಧನಿ ಚನ್ದ್ರಬುಧ್ನೋ ಮದವೃದ್ಧೋ
ಮನೀಷಿಭಿಃ ।
ಇಂದ್ರಂ ತಮಹ್ವೇ ಸ್ವಪಸ್ಯಯಾ ಧಿಯಾ ಮಂಹಿಷ್ಠರಾತಿಂ ಸ ಹಿ ಪಪ್ರಿ-
ರನ್ಧಸಃ ॥ ೩ ॥

॥ ಪದಪಾಠಃ ॥

ಸಃ । ಹಿ । ದ್ವರಃ । ದ್ವರಿಷು । ವವ್ರಃ । ಊಧನಿ । ಚಂದ್ರಬುಧ್ನಃ । ಮದಽವೃದ್ಧಃ ।
ಮನೀಷಿಽಭಿಃ ।
ಇಂದ್ರಂ । ತಂ । ಅಹ್ವೇ । ಸುಽಅಪಸ್ಯಯಾ । ಧಿಯಾ । ಮಂಹಿಷ್ಠಽರಾತಿಃ । ಸಃ ।
ಹಿ । ಪಪ್ರಿಃ । ಅನ್ಧಸಃ ॥ ೩ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯ ||

ಸ ಪೂರ್ವೋಕ್ತಗುಣವಿಶಿಷ್ಟ ಇಂದ್ರೋ ದ್ವರಿಷ್ವಾವರೀತೃಷು ಶತ್ರುಷು ದ್ವರೋ ಹಿ ಅತಿಶಯೇನಾವರೀತಾ ಖಲು । ಶತ್ರುಜಯಶೀಲ ಇತ್ಯರ್ಥಃ । ಯಸ್ಮಾದೂಧನ್ಯುದ್ಧೃತಜಲವತ್ಯಂತರಿಕ್ಷೇ ವವ್ರಿಃ ಸಂಭಕ್ತೋ ವ್ಯಾಪ್ಯ ವರ್ತತೇ । ಅತ ಏವ ಚಂದ್ರಬುಧ್ನಃ । ಸರ್ವಾಸಾಂ ಪ್ರಜಾನಾಮಾಹ್ಲಾದಕಮೂಲಃ । ಅಂತರಿಕ್ಷಸ್ಯ ಸರ್ವಾಹ್ಲಾದಕತ್ವಾತ್ । ಮದವೃದ್ಧಃ । ಮಾದ್ಯಂತ್ಯೇಭಿರಿತಿ ಮದಾಃ ಸೋಮಾಃ। ತೈರ್ವರ್ಧಿತಃ । ಏವಂಭೂತೋ ಯ ಇಂದ್ರೋ ಮಂಹಿಷ್ಠರಾತಿಂ ಪ್ರವೃದ್ಧಧನಂ ಪ್ರವೃದ್ಧದಾನಂ ವಾ ತಮಿಂದ್ರಂ ಮನೀಷಿಭಿರ್ಮನಸ ಈಷಿತೃಭಿಃ ಪ್ರಾಜ್ಞೈರೃತ್ವಿಗ್ಭಿಃ ಸಹ ಸ್ವಪಸ್ಯಯಾ ಧಿಯಾ ಶೋಭನಕರ್ಮಯೋಗ್ಯಯಾ ಬುದ್ಧ್ಯಾ ಹ್ವೇ । ಆಹ್ವಯಾಮಿ । ಹಿ ಯಸ್ಮಾತ್ಸ ಇಂದ್ರೋಽಂಧಸೋಽನ್ನಸ್ಯಾಸ್ಮದಪೇಕ್ಷಿತಸ್ಯ ಪಪ್ರಿಃ ಪೂರಯಿತಾ ॥ ದ್ವರಃ ದ್ವೃ ಇತ್ಯೇಕೇ । ದ್ವರತ್ಯಾವೃಣೋತೀತಿ ದ್ವರಃ । ಪಚಾದ್ಯಚ್ । ಚಿತ್ಸ್ವರೇಣಾಂತೋದಾತ್ತತ್ವಂ । ದ್ವರಿಷು । ಅಚ ಇರಿತಿ ಕರ್ತರೀಪ್ರತ್ಯಯಃ । ವವ್ರಃ । ವೃಙ್ ಸಂಭಕ್ತೌ । ವ್ರಿಯತೇ ಸಂಭಜ್ಯತ ಇತಿ ವವ್ರಃ । ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಂ । ಪಾ. ೩-೩-೫೮-೪ । ಇತಿ ಪರಿಗಣನಸ್ಯೋಪಲಕ್ಷಣಾರ್ಥತ್ವಾತ್ ಕರ್ಮಣಿ ಕಪ್ರತ್ಯಯಃ । ದ್ವಿರ್ಭಾವಶ್ಛಾಂದಸಃ । ಊಧನಿ । ಉತ್ ಊರ್ಧ್ವಂ ಧ್ರಿಯತೇಽಸ್ಮಿನ್ ಜಲಮಿತ್ಯೂಧಃ । ಸಪ್ತಮ್ಯೇಕವಚನೇಽಸ್ಥಿದಧಿಸಕ್ಥ್ಯಕ್ಷ್ಣಾಮನಙುದಾತ್ತಃ ಛಂದಸ್ಯಪಿ ದೃಶ್ಯತೇ । ಪಾ. ೭-೧-೭೬ । ಇತಿ ದೃಶಿಗ್ರಹಣಾದೂಧಸ್‌ಶಬ್ದಸ್ಯಾಪ್ಯನಙಾದೇಶಃ । ಯದ್ವಾ । ಊಧಸೋಽನಙ್ । ಪಾ. ೫-೪-೧೩೧ । ಇತಿ ಸಮಾಸೇ ವಿಧೀಯಮಾನೋಽನಙಾದೇಶಶ್ಛಾಂದಸತ್ವಾತ್ಕೇವಲಾದಪಿ ಭವತಿ । ಚಂದ್ರಬುಧ್ನಃ । ಚದಿ ಆಹ್ಲಾದನೇ ದೀಪ್ತೌ ಚ । ಇದಿತ್ತ್ವಾನ್ನುಮ್ । ಸ್ಫಾಯಿತಂಚೀತ್ಯಾದಿನಾ ರಕ್ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ಮದವೃದ್ಧಃ । ಮದೀ ಹರ್ಷೇ । ಮದೋಽನುಪಸರ್ಗೇ ಇತಿ ಕರಣೇಽಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ಅಹ್ವೇ । ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಲುಙ್ಯಾತ್ಮನೇಪದೇಷ್ವನ್ಯತರಸ್ಯಾಂ । ಪಾ. ೩-೧-೫೪ । ಇತಿ ಚ್ಲೇರಙಾದೇಶಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಗುಣಃ । ಸ್ವಪಸ್ಯಯಾ । ಅಪ ಇತಿ ಕರ್ಮನಾಮ । ಶೋಭನಮಪಃ ಸ್ವಪಃ । ತದರ್ಹತೀತಿ ಸ್ವಪಸ್ಯಃ । ಛಂದಸಿ ಚೇತಿ ಯಪ್ರತ್ಯಯಃ । ಮಂಹಿಷ್ಠರಾತಿಂ । ಮಹಿ ವೃದ್ಧೌ । ಅತಿಶಯೇನ ಮಂಹಿತ್ರೀ ಮಂಹಿಷ್ಠಾ । ತುಶ್ಛಂದಸೀತೀಷ್ಠನ್ಪ್ರತ್ಯಯಃ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಮಂಹಿಷ್ಠಾ ರಾತಿರ್ಯಸ್ಯ । ಸ್ತ್ರಿಯಾಃ ಪುಂವತ್ । ಪಾ. ೬-೩-೩೪ । ಇತಿ ಪುಂವದ್ಭಾವಾದ್ಧ್ರಸ್ವತ್ವಂ । ಬಹುವ್ರೀಹೌ ಪ್ರಕೃತ್ಯೇತಿ ಪೂರ್ವಪದಪ್ರಕೃತಿಸ್ವರತ್ವಂ । ಪಪ್ರಿಃ । ಪ್ರಾ ಪಾಲನಪೂರಣಯೋಃ । ಆದೃಗಮಹನಜನ ಇತಿ ಕಿನ್‌ಪ್ರತ್ಯಯಃ । ಉದೋಷ್ಠ್ಯಪೂರ್ವಸ್ಯೇತ್ಯುತ್ವಸ್ಯ ಬಹುಳಂ ಛಂದಸೀತಿ ವಚನಾದಭಾವೇ ಯಣಾದೇಶಃ । ಲಿಡ್ವದ್ಭಾವಾದ್ದ್ವಿರ್ವಚನೇಽಚೀತಿ ಸ್ಥಾನಿವದ್ಭಾವೇ ಸತಿ ದ್ವಿರ್ಭಾವೋರದತ್ವಹಲಾದಿಶೇಷಾಃ । ನಿತ್ತ್ವಾದಾದ್ಯುದಾತ್ತತ್ವಂ ॥ ೩ ॥

|| ಪ್ರತಿಪದಾರ್ಥ ||

ಸ್ಯಃ—ಆ ಇಂದ್ರನು । ದ್ವರಿಷು — ಪ್ರತಿಬಂಧಕವನ್ನುಂಟುಮಾಡುವ ಶತ್ರುಗಳಲ್ಲಿ । ದ್ವರಃ ಹಿ— ( ಅತ್ಯಂತ ಪ್ರಬಲನಾಗಿ ) ಜಯಶಾಲಿಯಾಗಿದ್ದಾನಲ್ಲವೇ । ( ಆದ್ದರಿಂದಲೇ ) ಊಧನಿ— ( ಜಲಭರಿತ



CC-0. Jangamwadi Math Collection. Digitized by eGangotri

ಗಳಾದ ಮೇಘಗಳಿಂದ) ಕೂಡಿದ ಅಂತರಿಕ್ಷದಲ್ಲಿ । ವವ್ರಃ— ವ್ಯಾಪಿಸಿದ್ದಾನೆ । ಚಂದ್ರಬುಧ್ನಃ—(ಸಕಲರಿಗೂ) ಆಹ್ಲಾದಹೇತುವೂ । ಮದವೃದ್ಧಃ—ಸೋಮರಸದಿಂದ ವರ್ಧಿತನೂ ( ಆಗಿದ್ದಾನೆ ಇಂತಹ ಗುಣಗಳುಳ್ಳವನೂ ) ಮತ್ತು । ಮಂಹಿಷ್ಠರಾತಿಂ—ಅಧಿಕಧನವುಳ್ಳವನೂ ಅಥವಾ ದಾನಯುಕ್ತನೂ ಆದ । ತಂ ಇಂದ್ರಂ—ಆ ಇಂದ್ರನನ್ನು । ಮನೀಷಿಭಿಃ—ಪ್ರಾಜ್ಞರಾದ ಋತ್ವಿಕ್ಕುಗಳೊಡನೆ । ಸ್ವಪಸ್ಯಯಾ ಧಿಯಾ— ಪವಿತ್ರ ಕರ್ಮಗಳಿಗೆ ಯೋಗ್ಯವಾದ ಬುದ್ಧಿಯಿಂದ । ಅಹ್ವೇ—ಕರೆಯುತ್ತೇನೆ । ಹಿ— ಏತಕ್ಕೆಂದರೆ । ಸಃ—ಆ ಇಂದ್ರನು । ಅಂಧಸಃ—ನಮ್ಮಿಂದ ಅಪೇಕ್ಷಿತವಾದ ಅನ್ನಕ್ಕೆ । ಪಪ್ರಿಃ—ಪೂರಕನು (ನಮಗೆ ಅನ್ನವನ್ನು ಸಮೃದ್ಧಿಯಾಗಿ ಅನುಗ್ರಹಿಸುವವನು) ॥

॥ ಭಾವಾರ್ಥ ॥

ಆ ಇಂದ್ರನು ಅತ್ಯಂತ ಪ್ರಬಲರಾದ ಶತ್ರುಗಳನ್ನೂ ಜಯಿಸುವವನು. ಜಲಭರಿತಗಳಾದ ಮೇಘಗಳಿಂದ ಕೂಡಿದ ಅಂತರಿಕ್ಷದಲ್ಲಿ ವ್ಯಾಪಿಸಿರುವುದರಿಂದ ಆಹ್ಲಾದಹೇತುವಾಗಿದ್ದಾನೆ. ಇಂತಹ ಗುಣಪೂರಿತನೂ, ಸೋಮರಸವರ್ಧಿತನೂ, ದಾನಯುಕ್ತನೂ ಆದ ಇಂದ್ರನನ್ನು ಪ್ರಾಜ್ಞರಾದ ಋತ್ವಿಕ್ಕುಗಳೊಡನೆ ಪವಿತ್ರ ಕರ್ಮಗಳಿಗೆ ಯೋಗ್ಯವಾದ ಶುದ್ಧಬುದ್ಧಿಯಿಂದ ಪ್ರಾರ್ಥಿಸಿ ಕರೆಯುತ್ತೇನೆ. ಏತಕ್ಕೆಂದರೆ ಅವನು ನಮಗೆ ಸಮೃದ್ಧವಾಗಿ ಅನ್ನವನ್ನು ಅನುಗ್ರಹಿಸುತ್ತಾನೆ.

## English Translation.

He who is victorious over his enemies, who is spread through the dewy firmament, the root of happiness, who is exhilarated by the soma-juice; him I invoke, the most bountiful Indra along with learned priests with a mind disposed to pious adoration, for he is the bestower of abundant food.

॥ ವಿಶೇಷ ವಿಷಯಗಳು ॥

ಧ್ವರಃ—ಧ್ವರತಿ ಅವೃಣೋತೀತಿ ಧ್ವರಃ—ಅತಿಶಯವಾದ ರೀತಿಯಲ್ಲಿ ಆಕ್ರಮಿಸುವ ಶತ್ರು ಎಂದರ್ಥ ಧ್ವರಿಷು ಧ್ವರಃ ಹಿ ಎಂದು ಇಂದ್ರಪರವಾಗಿರುವ ಈ ವಾಕ್ಯಕ್ಕೆ ಪ್ರಬಲರಾದ ಶತ್ರುಗಳನ್ನೂ ಸಹ ಆಕ್ರಮಿಸಿ ಧ್ವಂಸಮಾಡುವವನು ಎಂದರ್ಥ.

ಊಧನಿ—ಇದಕ್ಕೆ ಉತ್ ಊರ್ಧ್ವಂ ಧ್ರಿಯತೇಽಸ್ಮಿನ್ ಜಲಂ ಎಂಬುದಾಗಿ ವ್ಯುತ್ಪತ್ತಿಯಿದೆ. ಇದರಿಂದ ಊರ್ಧ್ವಭಾಗದಲ್ಲಿ ಜಲರಾಶಿಗೆ ಆಧಾರವಾಗಿರುವ ಮೇಘವೇ ಈ ಪದದ ಅರ್ಥವಾಗುವುದು.

ಚಂದ್ರಬುಧ್ನಃ—ಚಂದ್ರನಂತೆ ಆಹ್ಲಾದಕರನಾಗಿರುವವನು. ಚದಿ ಆಹ್ಲಾದನೇ ದೀಪ್ತೌ ಚ ಎಂಬ ಧಾತುವಿನಿಂದ ನಿಷ್ಪನ್ನವಾದ ಚಂದ್ರಶಬ್ದವು ಆಹ್ಲಾದಾರ್ಥದಲ್ಲಿಯೂ, ದೀಪ್ತ್ಯರ್ಥದಲ್ಲಿಯೂ ಇಲ್ಲಿ ಬಳಸಲ್ಪಟ್ಟಿದೆ.

ಮದವೃದ್ಧಃ—ಹರ್ಷದಾಯಕವಾದ ಸೋಮರಸಪಾನದಿಂದ ವಿಶೇಷವಾಗಿ ಅಭಿವೃದ್ಧಿ ಹೊಂದಿದವನು ಇಂದ್ರನು.



CC-0. Jangamwadi Math Collection. Digitized by eGangotri

**ಮಂಹಿಷ್ಠರಾತಿಂ**—ಮಂಹಿಷ್ಠಾ ರಾತಿಃ ಯಸ್ಯ ಸಃ ಎಂಬ ವ್ಯುತ್ಪತ್ತಿಯಿಂದ ಇಂದ್ರನು ಅತಿಶಯವಾದ ಧನವುಳ್ಳವನು, ಅಥವಾ ವಿಶೇಷವಾಗಿ ದಾನನಮಾಡುವವನು ಎಂಬರ್ಥವು ತೋರಿಬರುವುದು. ರಾತಿಶಬ್ದಕ್ಕೆ ಐಶ್ವರ್ಯ ಮತ್ತು ದಾನ ಎಂಬ ಎರಡರ್ಥವಿದೆ.

**ಪಪ್ರಿಃ**—ಪ್ರಾ ಪಾಲನಪೂರಣಯೋಃ ಎಂಬ ಪೂರಣಾರ್ಥಕವಾದ ಪ್ರಾ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಪೂರ್ಣಗೊಳಿಸುವವನು ಎಂಬರ್ಥವಿರುವುದು.

॥ ವ್ಯಾಕರಣಪ್ರಕ್ರಿಯಾ ॥

**ಧ್ವರಃ**—ಧ್ವೃ ಇತ್ಯೇಕೇ ಎಂಬುದರಿಂದ ಪಾಠಾಂತರದಿಂದ ಸಿದ್ಧವಾದ ಧಾತು. ಧ್ವರತಿ ಆವೃಣೋತಿ ಇತಿ ಧ್ವರಃ ಪಚಾದಿಯಲ್ಲಿ ಸೇರಿರುವುದರಿಂದ **ನಂದಿಗ್ರಹಪಚಾದಿಭ್ಯಃ**—ಸೂತ್ರದಿಂದ ಅಚ್ ಪ್ರತ್ಯಯು ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ. ಧಾತುವಿಗೆ ಗುಣ ಬಂದರೆ ಧ್ವರಃ ಎಂದು ರೂಪವಾಗುತ್ತದೆ.

**ಧ್ವರಿಷು**—ಹಿಂದೆ ಹೇಳಿದ ಧಾತುವಿಗೇ **ಅಚಇಃ** (ಉ. ಸೂ. ೪-೫೭೮) ಸೂತ್ರದಿಂದ ಇ ಪ್ರತ್ಯಯ. ಧಾತುವಿಗೆ ತನ್ನಿಮಿತ್ತವಾಗಿ ಗುಣ ಧ್ವರಿ ಎಂದು ರೂಪವಾಗುತ್ತದೆ. ಸಪ್ತಮೀ ಬಹುವಚನರೂಪ.

**ವವ್ರಃ**—ವೃಙ್ ಸಂಭಕ್ತೌ ಧಾತು. ವ್ರಿಯತೇ ಸಂಭಜ್ಯತೇ ಇತಿ ವವ್ರಃ **ಘಞರ್ಥೇ ಕವಿಧಾನಂ ಸ್ಥಾಸ್ನಾಪಾವ್ಯಧಿಹನಿಯುಧ್ಯರ್ಥಮ್** (ಪಾ. ಸೂ. ೩-೩-೫೮-೪) ಎಂಬ ವಾರ್ತಿಕದಲ್ಲಿ ಪರಿಗಣನ ಮಾಡಿದರೂ ಪರಿಗಣನವು ಇತರೋಪಲಕ್ಷಣವಾದುದರಿಂದ ಈ ಧಾತುವಿಗೂ ಶವರ್ಮಾರ್ಥದಲ್ಲಿ ಕ ಪ್ರತ್ಯಯು ಬರುತ್ತದೆ. ಛಾಂದಸವಾಗಿ ಧಾತುವಿಗೆ ದ್ವಿತ್ವ ಬರುತ್ತದೆ. ಕಿತ್ತಾದುದರಿಂದ ಗುಣ ಬರುವುದಿಲ್ಲ. ವವ್ರಃ ಎಂದು ರೂಪವಾಗುತ್ತದೆ.

**ಊಧನಿ**—ಉತ್ ಊರ್ಧ್ವಂ ಧ್ರಿಯತೇಽಸ್ಮಿನ್ ಜಲಮಿತಿ ಊಧಃ ಸಕಾರಾಂತವಾದ ಶಬ್ದ. ಸಪ್ತಮೀ ಏಕವಚನ ಪರದಲ್ಲಿರುವಾಗ **ಅಸ್ಥಿದಧಿಸಕ್ಥ್ಯಕ್ಷ್ಣಾಮನಙುದಾತ್ತಃ ಛಂದಸ್ಯಪಿ ದೃಶ್ಯತೇ** (ಪಾ. ಸೂ. ೭-೧-೭೫-೭೬) ಎಂಬ ದೃಶಿ ಗ್ರಹಣದಿಂದ ಊಧಸ್ ಶಬ್ದಕ್ಕೂ ಅನಙಾದೇಶ ಬರುತ್ತದೆ. ಅಥವಾ **ಊಧಸೋಽನಙ್** (ಪಾ. ಸೂ. ೫-೪-೧೩೧) ಎಂಬುದರಿಂದ ಸಮಾಸದಲ್ಲಿ ವಿಧಿಸಲ್ಪಡುವ ಅನಙಾದೇಶವು ಛಾಂದಸವಾದುದರಿಂದ ಕೇವಲ ಊಧಸ್ ಶಬ್ದಕ್ಕೂ ಬರುತ್ತದೆ. ಙಿತ್ತಾದುದರಿಂದ **ಙಿಚ್ಚ** ಎಂಬುದರಿಂದ ಅಂತಾದೇಶವಾಗಿ ಬರುತ್ತದೆ. **ವಿಭಾಷಾಙಿಶ್ಯೋಃ** ಎಂಬುದಾದರೆ ಅಲ್ಲೋಪವು ಬರುವುದಿಲ್ಲ.

**ಚಂದ್ರಬುಧ್ನಃ**—ಚದಿ ಆಹ್ಲಾದನೇ ದೀಪ್ತೌ ಚ ಧಾತು. ಇದಿತ್ತಾದುದರಿಂದ **ಇದಿತೋನುಮ್ಧಾತೋಃ** ಎಂಬುದರಿಂದ ನುಮಾಗಮ. **ಸ್ಫಾಯಿತಞ್ಚಿ**—(ಉ. ಸೂ. ೨-೧೭೦) ಎಂಬುದರಿಂದ ರಕ್ ಪ್ರತ್ಯಯ. ಚಂದ್ರ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಆಮೇಲೆ ಬಹುವ್ರೀಹಿ ಸಮಾಸ. **ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ** ಎಂಬುದರಿಂದ ಸಮಾಸದಲ್ಲಿಯೂ ಆ ಸ್ವರವೇ ಉಳಿಯುತ್ತದೆ.

**ಮದವೃದ್ಧಃ**—ಮದೀ ಹರ್ಷೇ ಧಾತು. ಮಾದ್ಯಂತಿ ಏಭಿರಿತಿ ಮದಾಃ **ಮದೋಽನುಪಸರ್ಗೇ** (ಪಾ. ಸೂ. ೩-೩-೬೭) ಎಂಬುದರಿಂದ ಕೇವಲವಾಗಿರುವಾಗ ಕರಣಾರ್ಥದಲ್ಲಿ ಅಪ್ ಪ್ರತ್ಯಯ. ಅದು ಪಿತ್ತಾ



CC-0. Jangamwadi Math Collection. Digitized by eGangotri

ಮುದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ. ಆಗ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ. ಮಹ್ಯೈಃ ವೃದ್ಧಃ ಮದವೃದ್ಧಃ ತೃತೀಯಾ ಕರ್ಮಣಿ (ಪಾ. ಸೂ. ೬-೨-೪೮) ಸೂತ್ರದಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ.

ಅಹ್ವೇ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಛಂದಸಿ ಲುಙ್‌ಲಙ್‌ಲಿಟಃ ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಉತ್ತಮಪುರುಷ ಏಕವಚನದಲ್ಲಿ ಇಟ್ ಪ್ರತ್ಯಯ- ಆತ್ಮನೇಪದೇ-ಷ್ವನ್ಯತರಸ್ಯಾಂ (ಪಾ. ಸೂ. ೩-೧-೫೪) ಎಂಬ ಸೂತ್ರದಿಂದ ಚ್ಲಿ ವಿಕರಣಕ್ಕೆ ಅಙಾದೇಶ. ಆದೇಚ ಉಪದೇ-ಶೇಽಶಿತಿ ಎಂಬುದರಿಂದ ಧಾತುವಿಗೆ ಏಜಂತವಾದುದರಿಂದ ಆತ್ವ. ಅಙ್ ಪರದಲ್ಲಿರುವಾಗ ಆತೋಲೋಪ ಇಟಿ ಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಧಾತುವಿಗೆ ಅಡಾಗಮ. ಅಙಿನ ಅಕಾರಕ್ಕೆ ಗುಣ. ಅಹ್ವೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ಸ್ವಪಸ್ಯಯಾ—ಅಪಃ ಎಂಬುದು ಕರ್ಮದ ಹೆಸರು. ಶೋಭನಂ ಅಪಃ ಸ್ವಪಃ ತದರ್ಹತಿ ಇತಿ ಸ್ವಪಸ್ಯಃ ಛಂದಸಿ ಚ ಎಂಬುದರಿಂದ ಯೋಗ್ಯಾರ್ಥದಲ್ಲಿ ಯತ್ ಪ್ರತ್ಯಯ. ಸ್ತ್ರೀತ್ವ ವಿವಕ್ಷಾಮಾಡಿದಾಗ ಅಜಾ-ದ್ಯತಷ್ಟಾಪ್ ಎಂಬುದರಿಂದ ಟಾಪ್. ತೃತೀಯಾ ಏಕವಚನದ ರೂಪ.

ಮಂಹಿಷ್ಠರಾತಿಮ್—ಮಹಿ ವೃದ್ಧೌ ಧಾತು. ಇದಿತ್ತಾದುದರಿಂದ ಧಾತುವಿಗೆ ನುಮಾಗಮ. ಕರ್ತ್ರರ್ಥದಲ್ಲಿ ತೃಚ್. ಸ್ತ್ರೀತ್ವದಲ್ಲಿ ಋನ್ನೇಭ್ಯೋ ಙೀಪ್ ಎಂಬುದರಿಂದ ಙೀಪ್ ಮಂಹಿತ್ರೀ ಶಬ್ದವಾಗುತ್ತದೆ. ಅತಿಶಯೇನ ಮಂಹಿತ್ರೀ ಮಂಹಿಷ್ಠಾ ತುಶ್ಛಂದಸಿ (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. ಇಷ್ಠನ್ ಪರದಲ್ಲಿರುವಾಗ ತುರಿಷ್ಠೇಮೇಯಃಸು ಎಂಬುದರಿಂದ ತೃಚಿಗೆ ಲೋಪ. ನಿತ್ ಪ್ರತ್ಯಯಾಂತವಾದುದರಿಂದ ಮಂಹಿಷ್ಠಾ ಶಬ್ದವು ಆದ್ಯುದಾತ್ತವಾಗುತ್ತದೆ. ಮಂಹಿಷ್ಠಾ ರಾತಿರ್ಯಸ್ಯ ಮಂಹಿಷ್ಠರಾತಿಃ ಸ್ತ್ರಿಯಾಃ ಪುಂವತ್ (ಪಾ. ಸೂ. ೬-೩-೩೪) ಎಂಬುದರಿಂದ ಪುಂವದ್ಭಾವ ಬರುವುದರಿಂದ ಮಂಹಿಷ್ಠಾ ಎಂಬುದಕ್ಕೆ ಹ್ರಸ್ವ ಬರುತ್ತದೆ. ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಸಮಾಸದಲ್ಲಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಪಪ್ರಿಃ—ಪ್ರಾ ಪಾಲನಪೂರಣಯೋಃ ಧಾತು. ಜುಹೋತ್ಯಾದಿ. ಆದೃಗಮಹನಜನ (ಪಾ. ಸೂ. ೩-೨-೧೭೧) ಎಂಬುದರಿಂದ ಕಿನ್ ಪ್ರತ್ಯಯ. ಅದಕ್ಕೆ ಲಿಡ್ವದ್ಭಾವವಿರುವುದರಿಂದ ಧಾತುವಿಗೆ ದ್ವಿತ್ವ ಅಭ್ಯಾಸಕ್ಕೆ ಉರದತ್ವ, ಹಲಾದಿಶೇಷ. ಪಪ್ರ+ಇ ಎಂದಿರುವಾಗ ಉದೋಷ್ಠ್ಯಪೂರ್ವಸ್ಯ ಎಂಬುದರಿಂದ ಉತ್ವವು ಬಹುಲಂ ಛಂದಸಿ ಎಂಬುದರಿಂದ ಬಾರದಿರಲು ಯಣಾದೇಶ. ಪಪ್ರಿಃ ಎಂದು ರೂಪವಾಗುತ್ತದೆ. ಮೊದಲು ಯಣಾದೇಶ ಬಂದರೂ ದ್ವಿರ್ವಚನೇಽಚಿ ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಹಿಂದಿನಂತೆ ಪ್ರಕ್ರಿಯಾ ಬರುತ್ತದೆ. ಕಿನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಆ ಯಂ ಪೃಣನ್ತಿ ದಿವಿ ಸದ್ಮಬರ್ಹಿಷಃ ಸಮುದ್ರಂ ನ ಸುಭ್ವ೧ಃ ಸ್ವಾ ಅಭಿಷ್ಟಯಃ ।

ತಂ ವೃತ್ರಹತ್ಯೇ ಅನು ತಸ್ಥುರೂತಯಃ ಶುಷ್ಮಾ ಇಂದ್ರಮವಾತಾ ಅಹ್ರುತಪ್ಸವಃ ॥ ೪ ॥

॥ ಪದಪಾಠಃ ॥

ಆ । ಯಂ । ಪೃಣಂತಿ । ದಿವಿ । ಸದ್ಮಽಬರ್ಹಿಷಃ । ಸಮುದ್ರಂ । ನ । ಸುಽಭ್ವಃ । ಸ್ವಾಃ । ಅಭಿಷ್ಟಯಃ ।

ತಂ । ವೃತ್ರಽಹತ್ಯೇ । ಅನು । ತಸ್ಥುಃ । ಊತಯಃ । ಶುಷ್ಮಾಃ । ಇಂದ್ರಂ । ಅವಾತಾಃ । ಅಹ್ರುತಽಪ್ಸವಃ ॥ ೪ ॥

॥ ಸಾಯಣಭಾಷ್ಯ ॥

ಸದ್ಮ ಸದನಂ ಸ್ಥಾನಂ ಬರ್ಹಿಃ ತಚ್ಛಬ್ದೋಪಲಕ್ಷಿತೋ ಯಜ್ಞೋ ಯೇಷಾಂ ಸೋಮಾನಾಂ ತೇ ಸೋಮಾ ದಿವಿ ಸ್ವರ್ಗಲೋಕೇಽವಸ್ಥಿತಂ ಯಮಿಂದ್ರಮಾಪೃಣಂತಿ । ಆ ಸಮಂತಾತ್ಪೂರಯಂತಿ । ತತ್ರ ದೃಷ್ಟಾಂತಃ । ಸುಷ್ಠು ಭವಂತೀತಿ ಸುಭ್ವೋ ನದ್ಯಃ ಸಮುದ್ರಂ ನ । ಯಥಾ ನದ್ಯಃ ಸಮುದ್ರಂ ಪೂರಯಂತಿ ತದ್ವದಿತ್ಯರ್ಥಃ । ಕೀದೃಶ್ಯೋ ನದ್ಯಃ । ಸ್ವಾಃ । ಸಮುದ್ರಸ್ಯ ಸ್ವಭೂತಾಃ । ತಥಾ ಚಾಮ್ನಾಯತೇ । ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ । ತೈ.ಸಂ- ೪-೬-೨-೬ । ಇತಿ । ಅಭಿಷ್ಟಯಃ । ಅಭಿಮುಖ್ಯೇನ ಗಮನವತ್ಯ ಊತಯೋಽವಿತಾರೋ ಮರುತೋ ವೃತ್ರಹತ್ಯೇ ವೃತ್ರಹನನೇ ನಿಮಿತ್ತಭೂತೇ ಸತಿ ತಮಿಂದ್ರಮನುತಸ್ಥುಃ । ಅನುಲಕ್ಷ್ಯ ಸ್ಥಿತಾ ಬಭೂವುಃ । ಕೀದೃಶಾ ಮರುತಃ । ಶುಷ್ಮಾಃ । ಶತ್ರೂಣಾಂ ಶೋಷಯಿತಾರಃ । ಅವಾತಾಃ । ವಾಂತಿ ಪ್ರಾತಿಕೂಲ್ಯೇನ ಗಚ್ಛಂತೀತಿ ವಾತಾಃ ಶತ್ರವಃ । ತದ್ರಹಿತಾಃ । ಅಹ್ರುತಪ್ಸವೋಽಕುಟಿಲರೂಪಾಃ । ಶೋಭನಾವಯವಾ ಇತ್ಯರ್ಥಃ ॥ ಪೃಣಂತಿ । ಪೃ ಪಾಲನಪೂರಣಯೋಃ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ಶ್ನಾಭ್ಯಸ್ತಯೋರಾತ ಇತ್ಯಾಕಾರಲೋಪಃ । ಪ್ರತ್ಯಯಸ್ವರಃ । ಯದ್ವೃತ್ತಯೋಗಾದನಿಘಾತಃ । ಸದ್ಮಬರ್ಹಿಷಃ । ಷದ್ಲೃ ವಿಶರಣಗತ್ಯವಸಾದನೇಷು ಸೀದಂತ್ಯಸ್ಮಿನ್ನಿತಿ ಸದ್ಮ । ಸರ್ವಧಾತುಭ್ಯೋ ಮನಿನ್ । ಅಧಿಕರಣೇ ಮನಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ





CC-0. Jangamwadi Math Collection. Digitized by eGangotri

ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ಸುಭ್ವಃ। ಭವತೇಃ ಕ್ವಿಪ್ ಚೇತ್ರಿ ಕ್ವಿಪ್। ಕೃದುತ್ತರಪದಪ್ರಕೃತಿಸ್ವರತ್ವಂ ಜಸ್ಯೋಃ ಸುಪೀತಿ ಯಣಾದೇಶಸ್ಯ ನ ಭೂಸುಧಿಯೋರಿತಿ ಪ್ರತಿಷೇಧೇ ಪ್ರಾಪ್ತೇ ಛಂದಸ್ಯುಭಯಥೇತಿ ಯಣಾದೇಶಃ । ಉದಾತ್ತಸ್ವರಿತಯೋರ್ಯಣ ಇತ್ಯನುದಾತ್ತಸ್ಯ ಜಸಃ ಸ್ವರಿತತ್ವಂ । ಅಭಿಷ್ಟಯಃ । ಇಷ್ಟಯ ಏಷಣಾನಿ । ಉಪಸರ್ಗಾಚ್ಛಾಭಿವರ್ಜಮಿತಿ ವಚನಾದಭಿರಂತೋದಾತ್ತಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಏಮನಾದಿತ್ವಾತ್ಪರರೂಪತ್ವಂ । ವೃತ್ರಹತ್ಯೇ । ಹನಸ್ತ ಚೇತಿ ಹಂತೇರ್ಭಾವೇ ಕ್ಯಪ್ ತಕಾರಾಂತಾದೇಶಶ್ಚ । ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ। ಅಹ್ರುತಪ್ಸವಃ । ಹ್ವೃ ಕೌಟಿಲ್ಯೇ । ಅಸ್ಮಾನ್ನಿಷ್ಠಾಯಾಂ ಹ್ರು ಹ್ವರೇಶ್ಛಂದಸಿ । ಪಾ. ೭-೨-೩೧ । ಇತಿ ಹ್ರು ಆದೇಶಃ । ಪ್ಸಾ ಭಕ್ಷಣ ಇತ್ಯಸ್ಮಾದೌಣಾದಿಕೋ ಡುಪ್ರತ್ಯಯಃ । ನ ಹ್ರುತಪ್ಸವೋಽಹ್ರುತಪ್ಸವಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ೪ ॥

॥ ಪ್ರತಿಪದಾರ್ಥ ॥

ಸ್ವಾಃ—ತನ್ನ (ಸಮುದ್ರದ) ಬಳಗಗಳೇ ಆದ । ಸುಭ್ವಃ—ನದಿಗಳು । ಸಮುದ್ರಂ ನ—ಸಮುದ್ರವನ್ನು ಸೇರಿ (ನೀರಿನಿಂದ) ತುಂಬುವಂತೆ । ಸದ್ಮಬರ್ಹಿಷಃ—ಬರ್ಹಿಗಳಿಂದ ಕೂಡಿದ ಯಜ್ಞಗೃಹವೇ ಉತ್ಪತ್ತಿಸ್ಥಾನವಾಗಿ ಉಳ್ಳ ಸೋಮರಸಗಳು । ಯಂ—ಯಾವ ಇಂದ್ರನನ್ನು । ಆ ಪೃಣಂತಿ—ಸುತ್ತಲೂ ತುಂಬಿ (ತೃಪ್ತಿಪಡಿಸುತ್ತವೆಯೋ) । ತಂ—ಆ ಇಂದ್ರನನ್ನು । ಅಭಿಷ್ಟಯಃ—ಅಭಿಮುಖವಾಗಿ ಹೋಗತಕ್ಕವರೂ । ಶುಷ್ಮಾಃ—ಶತ್ರುಗಳ ನಾಶಕರೂ (ಅಥವಾ ಇಬ್ಬನಿಯನ್ನು ಹೀರುವವರೂ) । ಅವಾತಾಃ—ಪ್ರತಿಬಂಧಕವಿಲ್ಲದ ಗತಿಯುಳ್ಳವರೂ । ಅಹ್ರುತಪ್ಸವಃ—ವಿರೂಪವಿಲ್ಲದೆ ಶ್ರೇಷ್ಠವಾದ ಅವಯವಗಳುಳ್ಳವರೂ । ಊತಯಃ—ರಕ್ಷಕರೂ ಆದ ಮರುತ್ತಗಳು । ವೃತ್ರಹತ್ಯೇ—ವೃತ್ರಸಂಹಾರ ಸಂದರ್ಭದಲ್ಲಿ । ಅನುತಸ್ಥುಃ—(ಬೆಂಬಲಕೊಟ್ಟು) ಅನುಸರಿಸಿದರು.

॥ ಭಾವಾರ್ಥ ॥

ನದಿಗಳು ತಮ್ಮ ಪತಿಯಾದ ಸಮುದ್ರವನ್ನು ಸೇರಿ ನೀರಿನಿಂದ ತುಂಬುವಂತೆ ಯಜ್ಞಗೃಹದಲ್ಲಿ ಉತ್ಪನ್ನಗಳಾದ ಸೋಮರಸಗಳು ಇಂದ್ರನನ್ನು ತುಂಬಿ ತೃಪ್ತಿಪಡಿಸುತ್ತವೆ. ಇಬ್ಬನಿಯನ್ನು ಹೀರುವವರೂ ಶತ್ರುಗಳ ನಾಶಕರೂ, ಪ್ರತಿಬಂಧಕವಿಲ್ಲದೆ ಸ್ವತಂತ್ರವಾದ ಗಮನವುಳ್ಳವರೂ, ವಿರೂಪವಿಲ್ಲದೇ ಶ್ರೇಷ್ಠವಾದ ಅವಯವಗಳುಳ್ಳವರೂ ರಕ್ಷಕರೂ ಆದ ಮರುತ್ತುಗಳು ವೃತ್ರಸಂಹಾರಕಾಲದಲ್ಲಿ ಆ ಇಂದ್ರನನ್ನು ಅನುಸರಿಸಿ ಸಾವಧಾನದಿಂದ ಬೆಂಬಲ ಕೊಟ್ಟರು.

## English Translation.

That Indra, whom in heaven the libations sprinkled on the sacred grass replenish, as the kindred rivers hastening to it fill the ocean; that Indra whom the Maruts, the driers up of moisture, who are unobstructed, and of undistorted forms attended as helpers at the slaying of Vritra.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಆ ಪೃಣಂತಿ— ಎಲ್ಲ ರೀತಿಯಲ್ಲಿಯೂ ಪೂರ್ಣಗೊಳಿಸುತ್ತಾರೆ. ಪೄ ಧಾತುವಿಗೆ ಪಾಲನ, ಮತ್ತು ಪೂರಣ ಎರಡು ಅರ್ಥಗಳೂ ಇರುವುದರಿಂದ ಎಲ್ಲ ವಿಧದಿಂದಲೂ ರಕ್ಷಿಸುತ್ತಾರೆ ಎಂದೂ ಅರ್ಥಹೇಳಬಹುದು.

ಸದ್ಮಬರ್ಹಿಷಃ— ಸದ್ಮ ಸದನಂ ಸ್ಥಾನಂ ಬರ್ಹಿಶ್ಶಬ್ದೋಪಲಕ್ಷಿತೋ ಯಜ್ಞಃ ಯೇಷಾಂ ತೇ ಸದ್ಮಬರ್ಹಿಷಃ । ಯಜ್ಞದಲ್ಲಿ ಮುಖ್ಯಸ್ಥಾನವನ್ನು ಪಡೆದಿರುವ ಸೋಮವೆಂಬುದೇ ಈ ಪದದ ಅರ್ಥ.

ಸುಭ್ವಃ ಸಮುದ್ರಂ ನ— ನದಿಗಳು ಸಮುದ್ರವನ್ನು ತುಂಬಿಸುವಂತೆ ಸೋಮರಸಗಳು ಇಂದ್ರನನ್ನು ವೃದ್ಧಿಗೊಳಿಸುವುವು. ಸಮುದ್ರಾಯ ವಯುನಾಯ ಸಿಂಧೂನಾಂ ಪತಯೇ ನಮಃ (ತೈ.ಸಂ. ೪-೬-೨-೬) ಎಂಬ ಶ್ರುತಿಯೂ ನದಿಗಳಿಗೆ ಸಮುದ್ರ ನಿಧಿಗಳಂತಿರುವುದು ಎಂಬರ್ಥವನ್ನು ಸೂಚಿಸುವುದು.

ಅಭಿಸ್ವಯಃ— ಅಭಿಮುಖ್ಯೇನ ಗಮನವತ್ಯಃ— ಸಮುದ್ರಕ್ಕೆ ಎದುರಾಗಿ ಬರುವ ಸ್ವಭಾವವುಳ್ಳ ನದಿಗಳು ಎಂದರ್ಥವನ್ನು ಕೊಡುತ್ತಾ ಈ ಪದವು ಸ್ವಾಃ ಎಂಬ ಪದಕ್ಕೆ ವಿಶೇಷಣವಾಗಿದೆ.

ಅನುತಸ್ಥುಃ— ವೃತ್ರಾಸುರನ ವಧೆಯ ಕಾಲದಲ್ಲಿ ಮರುದ್ದೇವತೆಗಳು ಇಂದ್ರನನ್ನು ಬಿಡದೆ ಅನುಸರಿಸಿ ನಿಂತು ಯುದ್ಧಮಾಡಿದರು.

ಅಹ್ರುತಪ್ಸವಃ— ಅಕುಟಿಲರೂಪಾಃ ಶೋಭನಾವಯವಾ ಇತ್ಯರ್ಥಃ । ಸುಂದರವಾದ ರೂಪಿನಿಂದಲೂ ಅನುರೂಪಗಳಾದ ಅವಯವಗಳಿಂದಲೂ ಕೂಡಿದ್ದುವು ಎಂದರ್ಥವು.

ವ್ಯಾಕರಣಪ್ರಕ್ರಿಯಾ

ಪೃಣಂತಿ— ಪೄ ಪಾಲನಪೂರಣಯೋಃ ಧಾತು ಕ್ರ್ಯಾದಿ ಯೋರಿತಃ ಎಂಬುದರಿಂದ ಝಿಗೆ ಅಂತಾದೇಶ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾ ವಿಕರಣ. ಶ್ನಾಭ್ಯಸ್ತಯೋರಾತಃ ಸೂತ್ರದಿಂದ ಅಜಾದಿ ಙಿತ್ ಪ್ರತ್ಯಯ ಪರದಲ್ಲಿರುವುದರಿಂದ ಶ್ನಾ ಪ್ರತ್ಯಯದ ಆಕಾರಲೋಪ ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ. ಋಕಾರದ ಪರದಲ್ಲಿರುವುದರಿಂದ ಶ್ನಾ ನಕಾರಕ್ಕೆ ಣತ್ವ. ಪೃಣಂತಿ ಎಂದು ರೂಪವಾಗುತ್ತದೆ. ಯಮ್ ಎಂದು ಹಿಂದೆ ಯಚ್ಛಬ್ದದ ಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಸ್ವರ ಪ್ರತಿಷೇಧ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಣಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಸದ್ಮಬರ್ಹಿಷಃ— ಷದ್‌ಲೃ ವಿಶರಣಗತ್ಯವಸಾದನೇಷು ಧಾತು. ಸೀದಂತ್ಯಸ್ಮಿನ್ನಿತಿ ಸದ್ಮ. ಅಧಿಕರಣಾರ್ಥದಲ್ಲಿ ಉಣಾದಿಸಿದ್ಧವಾದ ಮನಿನ್ ಪ್ರತ್ಯಯ. ಧಾತ್ವಾದಿಗೆ ಸಕಾರ. ಸದ್ಮನ್ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಸದ್ಮ ಬರ್ಹಿಃ ಯೇಷಾಂ ತೇ. ಬಹುವ್ರೀಹಿಯಲ್ಲಿ ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರದಿಂದ ಹಿಂದಿನ ಸ್ವರವೇ ಉಳಿಯುತ್ತದೆ.

ಸುಭ್ವಃ— ಭೂ ಸತ್ತಾಯಾಂ ಧಾತು. ಕ್ವಿಪ್‌ಚ ಎಂಬುದರಿಂದ ಕ್ವಿಪ್ ಸು ಎಂಬ ಗತಿಯೊಡನೆ ಸಮಾಸವಾದಾಗ ಗತಿಕಾರಕೋಪಪದಾತ್‌ಕೃತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಊಕಾರ ಉದಾತ್ತವಾಗುತ್ತದೆ. ಜಸ್ ಪ್ರತ್ಯಯ ಪರದಲ್ಲಿರುವಾಗ ಓಃಸುಪಿ ಎಂಬುದರಿಂದ ಯಣಾದೇಶವು ಪ್ರಾಪ್ತವಾ



CC-0. Jangamwadi Math Collection. Digitized by eGangotri

ದಾಗ ನಭೂಸುಧಿಯೋಃ ಸೂತ್ರದಿಂದ ನಿಷೇಧ ಪ್ರಾಪ್ತವಾದರೆ **ಛಂದಸ್ಯುಭಯಥಾ** (ಪಾ. ಸೂ. ೬.೪.೮೬) ಎಂಬುದರಿಂದ ಪುನಃ ಯಣಾದೇಶ. ಆಗ ಉದಾತ್ತಸ್ಥಾನದಲ್ಲಿ ಬಂದ ಯಣಿನ ಪರದಲ್ಲಿರುವುದರಿಂದ **ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ.

**ಅಭಿಷ್ಟಯೇ**—ಇಷ್ಟಯಃ ಏಷಣಾನಿ. ಇಷ ಇಚ್ಛಾಯಾಂ ಧಾತು **ಸ್ತ್ರಿಯಾಂಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ಉಪಸರ್ಗಾಶ್ಚಾಭಿವರ್ಜಮ್** (ಫಿ. ಸೂ. ೮೧) ಎಂಬುದರಿಂದ ಅಭಿಯನ್ನು ಪ್ರತ್ಯೇಕಿಸಿರುವುದರಿಂದ ಅಭಿಯು ಅಂತೋದಾತ್ತವಾಗುತ್ತದೆ. ಅಭಿ ಎಂಬುದರೊಡನೆ ಬಹುವ್ರೀಹಿ ಸಮಾಸವಾದಾಗ ಪೂರ್ವಪದ ಪ್ರಕೃತಿಸ್ವರವು ಬರುವುದರಿಂದ ಹಿಂದಿನ ಸ್ವರವೇ ಉಳಿಯುತ್ತದೆ. ಅಭಿ+ಇಷ್ಟಿಃ ಎಂದಿರುವಾಗ ಏಮನ್ನಾದಿಯಲ್ಲಿ ಇದು ಸೇರಿರುವುದರಿಂದ ಪರರೂಪ ಬರುತ್ತದೆ.

**ವೃತ್ರಹತ್ಯೇ**—ಹನ ಹಿಂಸಾಗತ್ಯೋಃ ಧಾತು **ಹನಸ್ತ ಚ** (ಪಾ. ಸೂ. ೩-೧-೧೦೮) ಎಂಬುದರಿಂದ ಭಾವಾರ್ಥದಲ್ಲಿ ಕ್ಯಪ್, ಹನಿನ ನಕಾರಕ್ಕೆ ತಕಾರಾದೇಶ. ಹತ್ಯ ಎಂದು ರೂಪವಾಗುತ್ತದೆ. ಆಗ ಧಾತುವಿನ ಅಂತೋದಾತ್ತಸ್ವರವು ಉಳಿಯುತ್ತದೆ. ವೃತ್ರಸ್ಯ ಹತ್ಯಂ ವೃತ್ರಹತ್ಯಂ ತಸ್ಮಿನ್. ಸಮಾಸದಲ್ಲಿ ಕಾರಕಪೂರ್ವಪದವಾದುದರಿಂದ **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಅಹ್ರುತಪ್ಸವಃ**—ಹ್ವೃ ಕೌಟಿಲ್ಯೇ ಧಾತು. ಇದಕ್ಕೆ ನಿಷ್ಠಾತಕಾರವು ಪರದಲ್ಲಿರುವಾಗ **ಹ್ರು ಹ್ವರೇಶ್ಛಂದಸಿ** (ಪಾ. ಸೂ. ೭-೨-೩೧) ಎಂಬುದರಿಂದ ಹ್ರು ಆದೇಶ. ಹ್ರುತ ಎಂದು ರೂಪವಾಗುತ್ತದೆ. ಪ್ಸಾ ಭಕ್ಷಣೇ ಧಾತು. ಇದಕ್ಕೆ ಉಣಾದಿಸಿದ್ಧವಾದ ಡು ಪ್ರತ್ಯಯ. ಡಿತ್ತಾದುದರಿಂದ ಸಾಮರ್ಥ್ಯದಿಂದ ಧಾತುವಿನ ಟಿಗೆ ಲೋಪ. ಪ್ಸು ಎಂದಾಗುತ್ತದೆ. ನ ಹ್ರುತಪ್ಸವಃ ಅಹ್ರುತಪ್ಸವಃ ನಞ್ತತ್ಪುರುಷ ಸಮಾಸ. **ತತ್ಪುರುಷೇ ತುಲ್ಯಾರ್ಥ**—ಸೂತ್ರದಿಂದ ಅವ್ಯಯಪೂರ್ವಪದ ಪ್ರಕೃತಿಸ್ವರವು ಬರುತ್ತದೆ. ಪ್ರಥಮಾ ಬಹುವಚನರೂಪ.

॥ ಸಂಹಿತಾಪಾಠಃ ॥

ಅಭಿ ಸ್ವವೃಷ್ಟಿಂ ಮದೇ ಅಸ್ಯ ಯುಧ್ಯತೋ ರಘ್ವೀರಿವ ಪ್ರವಣೇ ಸಸ್ರುರೂತಯಃ ।
ಇಂದ್ರೋ ಯದ್ವಜ್ರೀ ಧೃಷಮಾಣೋ ಅಂಧಸಾ ಭಿನದ್ವಲಸ್ಯ ಪರಿಧೀಁರಿವ ತ್ರಿತಃ ॥ ೫ ॥

॥ ಪದಪಾಠಃ ॥

ಅಭಿ । ಸ್ವಽವೃಷ್ಟಿಂ । ಮದೇ । ಅಸ್ಯ । ಯುಧ್ಯತಃ । ರಘ್ವೀಃಽಇವ । ಪ್ರವಣೇ । ಸಸ್ರುಃ । ಊತಯಃ ।
ಇಂದ್ರಃ । ಯತ್ । ವಜ್ರೀ । ಧೃಷಮಾಣಃ । ಅಂಧಸಾ । ಭಿನತ್ । ವಲಸ್ಯ । ಪರಿಧೀನ್ಽಇವ । ತ್ರಿತಃ ॥ ೫ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯ ||

ಉತಯೋ ಮರುತೋ ಮದೇ ಸೋಮಪಾನೇನ ಹರ್ಷೇ ಸತ್ಯಸ್ಯೇಂದ್ರಸ್ಯ ಯುಧ್ಯತೋ ವೃತ್ರೇಣ ಸಹ ಯುಧ್ಯಮಾನಸ್ಯ ಪುರತಃ ಸ್ವವೃಷ್ಟಿಂ ಸ್ವಭೂತವೃಷ್ಟಿಮಂತಂ ವೃತ್ರಮಭಿ ಅಭಿಮುಖ್ಯೇನ ಸಸ್ರುಃ | ಜಗ್ಮುಃ | ರಘ್ವೀರಿವ ಪ್ರವಣೇ| ಯಥಾ ಗಮನಸ್ವಭಾವಾ ಅಪೋ ನಿಮ್ನದೇಶೇ ಗಚ್ಛಂತಿ | ಯದ್ಯ-ದಾಂಧಸಾ ಸೋಮಲಕ್ಷಣೇನಾನ್ನೇನ ಪೀತೇನ ಧೃಷಮಾಣಃ ಪ್ರಗಲ್ಭಃ ಸನ್ವಜ್ರೀ ವಜ್ರವಾನಿಂದ್ರೋ ವಲಸ್ಯ ಸಂವೃಣ್ವತ ಏತತ್ಸಂಜ್ಞಕಮಸುರಂ ಭಿನತ್ | ವ್ಯದಾರಯತ್ | ಅವಧೀದಿತ್ಯರ್ಥಃ | ತತ್ರ ದೃಷ್ಟಾಂತಃ | ತ್ರಿತಃ ಪರಿಧೀನಿವ | ದೇವಾನಾಂ ಹವಿರ್ಲೇಪನಿಘರ್ಷಣಾಯಾಗ್ನೇಃ ಸಕಾಶಾದಪ್-ಸ್ವೇಕತೋ ದ್ವಿತಸ್ತ್ರಿತ ಇತಿ ತ್ರಯಃ ಪುರುಷಾ ಜಜ್ಞಿರೇ | ತಥಾ ಚ ತೈತ್ತಿರೀಯೈಃ ಸಮಾಮ್ನಾತಂ | ಸೋಽಙ್ಗಾರೇಣಾಪಃ ಅಭ್ಯಪಾತಯತ್ | ತತ ಏಕತೋಽಜಾಯತ | ಸ ದ್ವಿತೀಯಮಭ್ಯಪಾತಯತ್ |ತತೋ ದ್ವಿತೋಽಜಾಯತ| ಸ ತೃತೀಯಮಭ್ಯಪಾತಯತ್ | ತತಸ್ತ್ರಿತೋಽಜಾಯತ | ೩-೨-೮-೧೦ | ಇತಿ | ತೇಷ್ವೇಕತಪಾನಾರ್ಥಂ ಪ್ರವೃತ್ತಸ್ಯ ಕೂಪೇ ಪತಿತಸ್ಯ ಪ್ರತಿರೋಧಾಯಾಸುರೈಃ ಪರಿಧಯಃ ಪರಿಧಾಯಕಾಃ ಕೂಪಸ್ಯಾಚ್ಛಾದಕಾ ಸ್ಥಾಪಿತಾಃ | ತಾನ್ಯಥಾಸ ಅಭಿನತ್ ತದ್ವತ್ || ಸ್ವವೃಷ್ಟಿಂ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ | ಯುಧ್ಯತಃ | ಯುಧ ಸಂಪ್ರಹಾರೇ | ದೈವಾದಿಕಃ | ವ್ಯತ್ಯಯೇನ ಶತೃ | ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ | ರಘ್ವೀಃ | ರಘಿ ಗತ್ಯರ್ಥಃ | ರಂಘಿಬಂಹ್ಯೋರ್ನ-ಲೋಪಶ್ಚ | ಉ. ೧-೨೯ | ಇತ್ಯುಪ್ರತ್ಯಯಃ | ವೋತೋ ಗುಣವಚನಾದಿತಿ ಙೀಷ್ | ಜಸಿ ವಾ ಛಂದ-ಸೀತಿ ಪೂರ್ವಸವರ್ಣದೀರ್ಘತ್ವಂ | ಙೀಷ್ಸ್ವರಃ ಶಿಷ್ಯತೇ | ಧೃಷಮಾಣಃ | ಞಿಧೃಷಾ ಪ್ರಾಗಲ್ಭ್ಯೇ | ಶ್ನುಪ್ರತ್ಯಯೇ ಪ್ರಾಪ್ತೇ ವ್ಯತ್ಯಯೇನ ಶ ಆತ್ಮನೇಪದಂ ಚ | ಅದುಪದೇಶಾಲ್ಲಸಾರ್ವಧಾತುಕಾನುದಾ-ತ್ತತ್ವೇ ವಿಕರಣಸ್ವರಃ ಶಿಷ್ಯತೇ | ಭಿನತ್ | ಲಙಃ ಬಹುಳಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ | ವಿಕರಣಸ್ವರಃ | ಯದ್ವೃತ್ತಯೋಗಾದನಿಘಾತಃ | ವಲಸ್ಯ | ವಲ ಸಂವರಣೇ | ವಲತಿ ಸಂವೃಣೋತಿ ಸರ್ವಮಿತಿ ವಲಃ | ಪಚಾದ್ಯಚ್ | ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತು-ರ್ಥ್ಯರ್ಥೇ ಷಷ್ಠೀ | ಪರಿಧೀನ್ | ಪರಿಧೀಯಂತ ಇತಿ ಪರಿಧಯಃ | ಉಪಸರ್ಗೇ ಘೋಃ ಕಿಃ | ಪಾ. ೩-೩-೯೨ | ಇತಿ ದಧಾತೇಃ ಕರ್ಮಣಿ ಕಿಪ್ರತ್ಯಯಃ | ಆತೋ ಲೋಪ ಇಟಿ ಚೇತ್ಯಾಕಾರಲೋಪಃ | ಕೃದುತ್ತರಪದಪ್ರಕೃತಿಸ್ವರತ್ವಂ || ೫ ||

| ಪ್ರತಿಪದಾರ್ಥ ||

ಊತಯಃ—(ಮಿತ್ರರಾದ) ಮರುತ್ತಗಳು | ಮದೇ—(ಸೋಮರಸಪಾನದಿಂದ) ಹರ್ಷಿತರಾಹಾಗ | ಯುಧ್ಯತಃ—(ವೃತ್ರನೊಂದಿಗೆ) ಯುದ್ಧಮಾಡುತ್ತಿದ್ದ | ಅಸ್ಯ—ಇಂದ್ರನ (ಮುಂಭಾಗದಲ್ಲಿ) | ಸ್ವವೃಷ್ಟಿಂ ಅಭಿ—ತನ್ನ ಸಂಬಂಧಿಯಾದ ಮಳೆಯನ್ನು ತಡೆದಿರುವ ವೃತ್ರನನ್ನು ಕುರಿತು (ಅವನ ಎದುರಾಗಿ) | ಪ್ರವಣೇ—ಇಳಿಜಾರು ಪ್ರದೇಶದಲ್ಲಿ | ರಘ್ವೀರಿವ—ನದಿಗಳು (ತಡೆಯಿಲ್ಲದೆ) ಹರಿಯುವಂತೆ | ಸಸ್ರುಃ—(ಯುದ್ಧಮಾಡುತ್ತ) ಓಡಿದರು | ಯತ್—ಯಾವಾಗ | ಅಂಧಸಾ—ಸೋಮರಸರೂಪವಾದ ಅನ್ನದಿಂದ (ಅದನ್ನು ಸೇವಿಸುವುದ ರಿಂದ) | ಧೃಷಮಾಣಃ—ಉತ್ಸಾಹಪೂರಿತನಾಗಿ (ಆದನೋ ೬ಗ) | ವಜ್ರೀ—ವಜ್ರಾಯುಧವನ್ನು ಹೊಂದಿದ ಇಂದ್ರಃ—ಇಂದ್ರನು | ತ್ರಿತಃ—ತ್ರಿತನು | ಪರಿಧೀನಿವ—(ತಾನು ಬಾವಿಗೆ ಬಿದ್ದಾಗ ಬಾವಿಯನ್ನು) ಮುಚ್ಚಳ ದಿಂದ ಮುಚ್ಚಿದ ರಾಕ್ಷಸರನ್ನು ಧ್ವಂಸಮಾಡಿದಂತೆ | ವಲಸ್ಯ—(ತನ್ನನ್ನು ಮುತ್ತಿದ) ವಲನೆಂಬ ರಾಕ್ಷಸನನ್ನು | ಭಿನತ್—ಸೀಳಿಕೊಂದನು ||



CC-0. Jangamwadi Math Collection. Digitized by eGangotri

|| ಭಾವಾರ್ಥ ||

ಮಿತ್ರರಾದ ಮರುತ್ತ್ತಗಳು ಸೋಮರಸಪಾನದಿಂದ ಹರ್ಷಿತರಾದಾಗ ವೃತ್ರನೊಡನೆ ಹೋರಾಡುತ್ತಿದ್ದ ಇಂದ್ರನನ್ನು ಹಿಂದೆ ಬಿಟ್ಟು ತಾವು ಅವನ ಮುಂಭಾಗದಲ್ಲಿ, ನದಿಗಳು ಇಳಿಜಾರು ಪ್ರದೇಶದಲ್ಲಿ ತಡೆಯಿಲ್ಲದೆ ಪ್ರವಹಿಸುವಂತೆ, ಅಪ್ರತಿಹತರಾಗಿ ಮಳೆಯನ್ನು ತಡೆದಿಟ್ಟಿರುವ ವೃತ್ರನ ಅಭಿಮುಖರಾಗಿ ಯುದ್ಧಮಾಡುತ್ತ ಓಡಿದರು. ತ್ರಿತನು ತಾನು ಬಾವಿಗೆ ಬಿದ್ದಾಗ ಮುಚ್ಚಳದಿಂದ ಬಾವಿಯನ್ನು ಮುಚ್ಚಿದ ರಾಕ್ಷಸರನ್ನು ಧ್ವಂಸ ಮಾಡಿದಂತೆ, ಸೋಮರಸರೂಪವಾದ ಅನ್ನ ಸೇವನದಿಂದ ಉತ್ಸಾಹಪೂರಿತನಾದ ಇಂದ್ರನು ತನ್ನನ್ನು ಮುತ್ತಿದ ವಲನೆಂಬ ರಾಕ್ಷಸನನ್ನು ಸೀಳಿಕೊಂಡನು.

## English Translation.

His allies, exhilarated by libations preceded him, warring against the withholder of the rain, as rivers rush down declivities. Indra animated by the sacrificial food, broke through the defences of Vala as did Trita through the coverings of the well.

|| ವಿಶೇಷ ವಿಷಯಗಳು ||

**ಸ್ವವೃಷ್ಟಿಂ**—ಸ್ವಭೂತವೃಷ್ಟಿಮಂತಂ ವೃತ್ರಂ ವೃಷ್ಟಿರೂಪದಲ್ಲಿ ತನ್ನ ಸೈನ್ಯವನ್ನು ಮುನ್ನುಗ್ಗಿಸುತ್ತಿದ್ದವನು, ವೃತ್ರಾಸುರನು.

**ರಘ್ವೀರಿವ ಪ್ರವಣೇ**—ಗತ್ಯರ್ಥಕವಾದ ರಘಿಧಾತುವಿನಿಂದ ನಿಷ್ಪನ್ನವಾದ ರಘೀಶಬ್ದವು ನದೀವಾಚಕವಾಗಿರುವುದು. ಪ್ರವಣಶಬ್ದವು ನಿಮ್ನ ಪ್ರದೇಶ (ಹಳ್ಳ) ಎಂಬರ್ಥವನ್ನು ಕೊಡುವುದು. ಮರುದ್ದೇವತೆಗಳು ವೃತ್ರಾಸುರನ ಎದುರಾಗಿ ಹಳ್ಳಕ್ಕೆ ನೀರುಹರಿಯುವಂತೆ ವೇಗವಾಗಿ ನುಗ್ಗಿಹೋದರು ಎಂದು ತಾತ್ಪರ್ಯವು.

**ತ್ರಿತಃ ಪರಿಧೀನಿವ**—ಇಲ್ಲಿ ಪ್ರಕೃತ ಸಂದರ್ಭಕ್ಕೆ ಕೊಟ್ಟಿರುವ ದೃಷ್ಟಾಂತವೊಂದು ತೋರಿಬರುವುದು. ಹಿಂದೇ ದೇವತೆಗಳಿಗೆ ಕೊಡಬೇಕಾದ ಹವಿರ್ಭಾಗವನ್ನು ಘರ್ಷಣಾದಿಗಳಿಂದ ಸಂಸ್ಕರಿಸುವುದಕ್ಕಾಗಿ, ಅಗ್ನಿಯ ಸಮೀಪದಲ್ಲಿಯೇ ಮೂರು ಜಲಕುಂಡಗಳು (ಬಾವಿಗಳು) ಸ್ಥಾಪಿತವಾದುವು. ಅದರಲ್ಲಿ ಕ್ರಮವಾಗಿ ಮೂವರು ಪುರುಷರು ಹುಟ್ಟಿದರು. ಇದಕ್ಕೆ ಶ್ರುತಿ ಹೀಗಿದೆ. ಸೋಂಗಾರೇಣಾಪಃ ಅಭ್ಯಪಾತಯತ್ | ತತ ಏಕತೋಽಜಾಯತ | ಸ ದ್ವಿತೀಯಮಭ್ಯಪಾತಯತ್ | ತತೋ ದ್ವಿತೋಽಜಾಯತ | ಸ ತೃತೀಯಮಭ್ಯಪಾತಯತ್ | ತತಸ್ತ್ರಿತೋಽಜಾಯತ | ( ತೈ. ಬ್ರಾ. ೩-೨-೮-೧೦ ) ಆ ಜಲಕೂಪದಿಂದ ನೀರನ್ನು ಕುಡಿಯಲು ಪ್ರವೇಶಿಸುವವರಿಗೆ ಅಡ್ಡಿಮಾಡಲು ರಾಕ್ಷಸರು ಮೂರು ಬಾವಿಗಳಿಗೂ ಮೂರು ಪರಿಧಿಗಳನ್ನು (ಆವರಣಗಳು) ಕಲ್ಪಿಸಿದರು. ಇಂದ್ರನು ಕ್ಷಣಮಾತ್ರದಲ್ಲಿ ಆ ಪರಿಧಿಗಳನ್ನು ಭೇದಿಸಿದನು. ಅದರಂತೆಯೇ ವೃತ್ರಾಸುರನ ಮುಂದಿನ ಸೈನ್ಯಪಂಕ್ತಿಗಳನ್ನು ನಿರ್ಭಯವಾಗಿ ಇಂದ್ರನು ಧ್ವಂಸಮಾಡಿದನು. ಪಾಶ್ಚಾತ್ಯಪಂಡಿತನಾದ Wilson ಎಂಬ ಪಂಡಿತನು ಪರಿಧೀರಿವ ತ್ರಿತಃ ಎಂಬ ಶಬ್ದಗಳ ವಿಷಯವಾಗಿ ಈರೀತಿ ಬರೆದಿರುತ್ತಾನೆ—

The text has only ಪರಿಧೀರಿವ ತ್ರಿತಃ and ತ್ರಿತಃ may mean triqle or threefold; making the phrase "as through triple coverings" or defences; whence Rosen has custodes veluti ☙



CC-0. Jangamwadi Math Collection. Digitized by eGangotri

tribus partibus constitutos; M. Langlois is more correct. in considering ತ್ರಿತಃ as a proper name; but it may be doubted if he has authority for rendering it by Soma—on libations qui porte le nom de Trita; or for the additional circumstances he narrates. The legent told by the scholiast and confirmed by other passages of the text, as well as by the version of the story found in NITIMANJARI, is wholly different. ಏಕತ, ದ್ವಿತ, and ತ್ರಿತ were three men produced in water by Agni for the purpose of removing or rubbing off the reliques of an oblation of clarified butter, the proper function of the sacred grass, to the three blades of which placed on the altar, the legend may owe its origin; but this does not appear from the narrative. The Scholiast following Taittiriyas says that Agni threw the cinders of the burnt offerings into water whence successively arose ಏಕತ, ದ್ವಿತ and ತ್ರಿತ, who, it elswhere appears, were therefore called APTYAS or sons of water (ಸೂಕ್ತ. ೫–೯) ತ್ರಿತ having on a subsequent occasion gone to Praw water from a well, fell into it, and the Asuras heaped coverings over the mouth of it to prevent his getting out; but he broke through them with ease. It is to this exploit that Indra's breaking through the defences of the Asura Vala is compared. The story is somewhat differently related in the NITIMANJARI. Three brothers, it is said ಏಕತ, ದ್ವಿತ and ತ್ರಿತ were travelling in a desert and being distressed by thirst, came to a well from which the youngest ತ್ರಿತ drew water and gave it to his brothers; in requital they threw him into the well, in order to appropriate his property and having covered the top with a cart-wheell left him in the well; in this extremity he prayed to all the gods to extricate him and by their-favour he made his escape- ಪರಿಧಿ, the term of the text, means a circumference, a circular covering or lid. Mr. Colebrooke, has briefly, but with his usual accuracy, cited his story in his account of the ಋಗ್ವೇದ (As Researches viii p. 388) Dr. Roth conceives ತ್ರಿತ to be the same as ತ್ರೈತನ, a name that occurs in a text of the Rik and converting the latter into a deification, he imagines him to be the original of Thraetona, the Zend form of Feridun, one of the heroes of the Shah-nama, and of ancient Persian tradition—Zeitschrift der D. Morgenlandischen Gesellschaft, vol. ii. p. 216. Professor Lassen seems disposed to adopt this identification—Indische Alterthumskunde, Additions. The identify of ತ್ರಿತ and ತ್ರೈತನತ, however, remains to be established, and the very stanza quoted by Dr. Roth as authority for the latter name, is explained in the NITIMANJARI in a very different sense from that which he has given. It is said, that the slaves of Dirghatamas, when he was old and blind, became insubordinate and attempted to destroy him, first by throwing him into the fire, whence he was saved by the Aswins, then into water, whence he was extricated by the same divinities; upon which ತ್ರೈತನ, one of the slaves wounded him on the head, breast, and arms, and then inflicted like injuries on himself of which he perished. After these events, the sage recited in praise of Aswins the hymn in which the verse occurs—

ತ ಮಾ ಗರನ್ನದ್ಯೋ ಮಾತೃತಮಾ ದಾಸಾ ಯದೀಂ ಸುಸಮುಬ್ಧಮವಾಧುಃ ।
ಶಿರೋ ಯದಸ್ಯ ತ್ರೈತನೋ ವಿತಕ್ಷತ್ಸ್ವಯಂ ದಾಸ ಉರೋ ಅಂಸಾವಪಿ ಗ್ಧ ॥
(ಋ. ಸಂ. ೧-೧೫೮-೫)

"Let not the maternal waters swallow me, since the slaves assailed this decrepit old man; in like manner as the slave ತ್ರೈತ್ರನ wounded his head, so has he struck it of himself and likewise his breast and shoulders" If this interpretation be correct there can be little relation between



CC-0. Jangamwadi Math Collection. Digitized by eGangotri

ತ್ರಿತ and ತ್ರೈತನ and between the latter and Feridun. The former term has, however, found admission as a numeral, and apparently also as a proper name into the Zend books.

ಅಂಧಸಾ—ಸೋಮಲಕ್ಷಣದಿಂದ ಕೂಡಿದ ಅನ್ನ. ಇದು ಯಜ್ಞದಲ್ಲಿ ಇಂದ್ರನಿಗೆ ಪ್ರತ್ಯೇಕವಾದ ಆಹುತಿಯಾಗಿ ಕೊಡಲ್ಪಡುವುದು. ಇದರಿಂದ ಇಂದ್ರನು ವಿಶೇಷ ಬಲಿಷ್ಠನಾಗುವನು.

ವಲಸ್ಯ—ವಲನ ವಿಷಯದಲ್ಲಿ ಭಾಷ್ಯಕಾರರು ಒಂದು ಇತಿಹಾಸವನ್ನು ಹೇಳಿರುವರು. ವಲನೆಂಬ ಅಸುರನು ದೇವತೆಗಳ ಗೋವುಗಳನ್ನು ಅಪಹರಿಸಿ ಒಂದು ಗುಹೆಯಲ್ಲಿ ಬಚ್ಚಿಟ್ಟಿದ್ದನು. ಆಗ ಇಂದ್ರನು ತನ್ನ ಸೈನ್ಯಸಹಾಯದಿಂದ ಆ ಗುಹೆಯನ್ನು ಮುತ್ತಿ ಅಲ್ಲಿದ್ದ ಗೋವುಗಳನ್ನು ಬಿಡಿಸಿದನು. ಈ ವಿಷಯವು ಯಜುರ್ವೇದದ ತೈತ್ತಿರೀಯ ಸಂಹಿತೆಯಲ್ಲಿ (೨-೧-೧-೧) ಈ ರೀತಿ ವಿವರಿಸಲ್ಪಟ್ಟಿರುವುದು.

> ಇಂದ್ರೋ ವಲಸ್ಯ ಬಿಲಮುಪೌರ್ಣೋತ್ಸ ಯ ಉತ್ತಮಃ ಪಶುರಾಸೀತ್ತಂ ಪೃಷ್ಠಂ ಪ್ರತಿ ಸಂಗೃಹ್ಯೋದಕ್ಖಿದತ್ತಗ್ಂ ಸಹಸ್ರಂ ಪಶವೋನೂದಾಯಸ್ತ್ಸ ಉನ್ನತೋऽಭವದ್ಯಃ ಪಶುಕಾಮಃ ಸ್ಯಾತ್ಸ ಏತಮೈಂದ್ರಮುನ್ನತಮಾ ಲಭೇತೇಂದ್ರಮೇವ ಸ್ವೇನ ಭಾಗಧೇಯೇನೋಪಧಾವತಿ ಸ ಏವಾಸ್ಮೈ ಪಶೂನ್ಪ್ರಯಚ್ಛತಿ ಪಶುಮಾನೇವ ಭವತ್ಯುನ್ನತೋ ಭವತಿ ॥

ಈ ವಿಷಯವು ಋಗ್ವೇದದ ಇತರ ಮಂತ್ರಗಳಲ್ಲಿಯೂ, ಇತರ ವೇದಗಳಲ್ಲಿಯೂ ಅಲ್ಲಲ್ಲಿ ವಿವರಿಸಲ್ಪಟ್ಟಿದೆ. ಋಗ್ವೇದದಲ್ಲಿ ಈ ವಲನ ವಿಷಯವು ಋ. ಸಂ. ೧-೬೨-೪; ೨-೧೧-೨೦; ೨-೧೪-೩; ೨-೧೫-೮; ೨-೧೨-೩; ೩-೨೪-೩; ೩-೩೦-೧೦; ೩-೩೪-೧೦; ೪-೫೦-೫; ೬-೧೮-೫; ೬-೩೯-೨; ೮-೧೪-೭; ೮-೨೪-೩೦; ೧೦-೬೨-೨; ೧೦-೬೭-೬; ೧೦-೬೮-೫; ೧೦-೬೮-೬; ೧೦-೬೮-೯; ೧೦-೬೮-೧೦; ೧೦-೧೩೮-೧ ಎಂಬ ಋಕ್ಕುಗಳಲ್ಲಿ ಪ್ರಸ್ತಾಪಿಸಲ್ಪಟ್ಟಿದೆ. ಈ ವಲನ ಸೈನಿಕರಿಗೆ ಪಣಿಗಳೆಂದು ಹೇಳುವ ರೂಢಿಯಿದೆ. ಇವರು ಗೋವುಗಳನ್ನು ಕದ್ದು ಗುಹೆಗಳಲ್ಲಿ ಬಚ್ಚಿಡುತ್ತಿದ್ದರೆಂದು ಅನೇಕ ಕಡೆಗಳಲ್ಲಿ ಹೇಳಿದೆ. ಈ ವಿಷಯವಾಗಿ ನಾವು ಹಿಂದೆ ಋ. ಸಂ. ಭಾಗ ೨ ಪೇಜು 228ರಲ್ಲಿ ವಿವರಿಸಿದೇವೆ.

॥ ವ್ಯಾಕರಣಪ್ರಕ್ರಿಯಾ ॥

ಸ್ತವೃಷ್ಟಿಮ್—ಸ್ತೀಯಾ ವೃಷ್ಟಿರ್ಯಸ್ಯ ಸಃ ತಮ್ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಯುಧ್ಯತಃ—ಯುಧ ಸಂಪ್ರಹಾರೇ ಧಾತು. ದಿವಾದಿ ವ್ಯತ್ಯಯೋ ಬಹುಲಂ ಎಂಬುದರಿಂದ ವ್ಯತ್ಯಯದಿಂದ ಶತೃ. ದಿವಾದಿಭ್ಯಃಶನ್ ಎಂಬುದರಿಂದ ಶ್ಯನ್ ವಿಕರಣ. ಯುಧ್ಯತ್ ಶಬ್ದವಾಗುತ್ತದೆ. ಷಷ್ಠೀ ಏಕವಚನರೂಪ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವಾದ ಶತೃ ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ರಘ್ವೀಃ—ರಘಿ ಗತೌ ಧಾತು. ಇದಿತ್ತಾದುದರಿಂದ ನುಮ್. ರಂಘಿಬಂಹ್ಯೋರ್ನಲೋಪಶ್ಚ (ಉ. ಸೂ. ೧-೨೯) ಎಂಬುದರಿಂದ ಉ ಪ್ರತ್ಯಯ. ತತ್ಸಂನಿಯೋಗದಿಂದ ನ ಲೋಪ. ರಘು ಶಬ್ದವಾಗು



CC-0. Jangamwadi Math Collection. Digitized by eGangotri

ತ್ರದೆ. ಸ್ತ್ರೀತ್ವದಲ್ಲಿ ವೋತೋ ಗುಣವಚನಾತ್ (ಪಾ. ಸೂ. ೪-೧-೪೪) ಎಂಬುದರಿಂದ ಜೀಷ್. ಉಕಾರಕ್ಕೆ ಯಣಾದೇಶ. ರಘ್ವೀ ಶಬ್ದದ ಮೇಲೆ ಜಸಿರುವಾಗ ವಾ ಛಂದಸಿ ಎಂಬುದರಿಂದ ಪೂರ್ವಸವರ್ಣದೀರ್ಘ. ಸಕಾರಕ್ಕೆ ರುತ್ವವಿಸರ್ಗ ಬಂದರೆ ರಘ್ವೀಃ ಎಂದು ರೂಪವಾಗುತ್ತದೆ.

ಧೃಷಮಾಣಃ—ಞಿಧೃಷಾ ಪ್ರಾಗಲ್ಭ್ಯೇ ಧಾತು. ವ್ಯತ್ಯಯದಿಂದ ಆತ್ಮನೇಪದದ ಶಾನಚ್. ಶ್ನು ವಿಕರಣವು ಪ್ರಾಪ್ತವಾದರೆ ಅಲ್ಲಿಯೂ ವ್ಯತ್ಯಯದಿಂದ ಶ ವಿಕರಣ ಬರುತ್ತದೆ. ಆನೇಮುಕ್ ಎಂಬುದರಿಂದ ವಿಕರಣಾಂತಕ್ಕೆ ಮುಕಾಗಮ. ಅಟ್‌ಕುಪ್ವಾಙ್—ಸೂತ್ರದಿಂದ ನಕಾರಕ್ಕೆ ಣತ್ವ. ಧೃಷಮಾಣ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ತಾಸ್ಯನುದಾತ್ತೇತ್ ಎಂಬುದರಿಂದ ಶಾನಚ್ ಅನುದಾತ್ತ. ವಿಕರಣಸ್ವರವು ಸತಿಶಿಷ್ಟವಾಗುವುದರಿಂದ ಷಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಭಿನತ್—ಭಿದಿರ್ ವಿದಾರಣೇ ಧಾತು. ರುಧಾದಿ ಲಙ ಪ್ರಥಮಪುರುಷ ಏಕವಚನದ ತಿಪಿನ ಇಕಾರಕ್ಕೆ ಇತಶ್ಚ ಎಂಬುದರಿಂದ ಲೋಪ. ರುಧಾದಿಭ್ಯಃ ಶ್ನಮ್ ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಭಿನದ್+ತ್ ಎಂದಿರುವಾಗ ಹಲ್‌ಙ್ಯಾದಿಸೂತ್ರದಿಂದ ತಲೋಪ. ವಾವಸಾನೇ ಎಂಬುದರಿಂದ ದಕಾರಕ್ಕೆ ಚರ್ತ್ವ. ಬಹುಲಂಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ವಿಕರಣಸ್ವರದಿಂದ ನಕಾರೋತ್ತರಾಕಾರವು ಉದಾತ್ತವಾಗುತ್ತದೆ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.

ವಲಸ್ಯ—ವಲ ಸಂವರಣೇ ಧಾತು. ವಲತಿ ಸಂವೃಣೋತಿ ಸರ್ವಂ ಇತಿ ವಲಃ ಪಚಾದಿರಾಕೃತಿಗಣವೆಂಬುದರಿಂದ ನಂದಿಗ್ರಹಪಚಾದಿಭ್ಯಃ— ಸೂತ್ರದಿಂದ ಅಚ್. ವಲ ಎಂದು ರೂಪವಾಗುತ್ತದೆ. ಕ್ರಿಯಾಗ್ರಹಣಂ ಕರ್ತವ್ಯಂ ಎಂಬ ವಚನದಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥ್ಯರ್ಥದಲ್ಲಿ ಷಷ್ಠೀ ಬಂದಿದೆ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಪರಿಧೀನ್— ಪರಿ ಧೀಯಂತೇ ಇತಿ ಪರಿಧಯಃ ಡುಧಾಞ್ ಧಾರಣಪೋಷಣಯೋಃ ಧಾತು. ಉಪಸರ್ಗೇಘೋಃ ಕಿಃ (ಪಾ. ಸೂ. ೩-೩-೯೨) ಎಂಬುದರಿಂದ ಉಪಸರ್ಗವು ಉಪಪದವಾಗಿರುವಾಗ ಕರ್ಮಾರ್ಥದಲ್ಲಿ ಕಿ ಪ್ರತ್ಯಯ. ಆತೋಲೋಪ ಇಟಿ ಚ ಎಂಬುದರಿಂದ ಆಕಾರಲೋಪ. ಪರಿಧಿ ಎಂದು ರೂಪವಾಗುತ್ತದೆ. ಪರಿ ಎಂಬ ಗತಿಯೊಡನೆ ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ಶಸ್ ಪರದಲ್ಲಿರುವಾಗ ಪೂರ್ವಸವರ್ಣದೀರ್ಘ. ತಸ್ಮಾಚ್ಛಸೋನಃ ಪುಂಸಿ ಎಂಬುದರಿಂದ ಶಸಿನ ಸಕಾರಕ್ಕೆ ನಕಾರಾದೇಶ. ಪರಿಧೀನ್ ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ಪರೀಂ ಘೃಣಾ ಚರತಿ ತಿತ್ವಿಷೇ ಶವೋಽಪೋ ವೃತ್ವೀ ರಜಸೋ ಬುಧ್ನಮಾಶಯತ್ ।
ವೃತ್ರಸ್ಯ ಯತ್ಪ್ರವಣೇ ದುರ್ಗೃಭಿಶ್ವನೋ ನಿಜಘಂಥ ಹನ್ವೋರಿಂದ್ರ ತನ್ಯತುಂ ॥ ೬ ॥





CC-0. Jangamwadi Math Collection. Digitized by eGangotri

॥ ಪದಪಾಠಃ ॥

ಪರಿ । ಈಂ । ಘೃಣಾ । ಚರತಿ । ತಿತ್ವಿಷೇ । ಶವಃ । ಅಪಃ । ವೃತ್ವೀ । ರಜಸಃ । ಬುಧ್ನಂ । ಆ । ಅಶಯತ್ ।

ವೃತ್ರಸ್ಯ । ಯತ್ । ಪ್ರವಣೇ । ದುಃಽಗೃಭಿಶ್ವನಃ । ನಿಽಜಘಂಥ । ಹನ್ವೋಃ । ಇಂದ್ರ । ತನ್ಯತುಂ ॥ ೬ ॥

॥ ಸಾಯಣಭಾಷ್ಯಂ ॥

ಯೋ ವೃತ್ರೋಽಪೋ ವೃತ್ವೀ । ಉದಕಾನ್ಯಾವೃತ್ಯ ರಜಸೋ ಬುಧ್ನಮಂತರಿಕ್ಷಸ್ಯೋಪರಿಪ್ರದೇಶಮಾಶಯತ್ । ಆಶ್ರಿತ್ಯಾಶೇತ । ತಸ್ಯ ವೃತ್ರಸ್ಯ ಪ್ರವಣೇ ಪ್ರಕರ್ಷೇಣ ವನನೀಯೇಽಂತರಿಕ್ಷೇ ವರ್ತಮಾನಸ್ಯ ದುರ್ಗೃಭಿಶ್ವನೋ ದುರ್ಗ್ರಹವ್ಯಾಪನಸ್ಯ । ತಸ್ಯ ಹಿ ವ್ಯಾಪನಂ ನ ಕೇನಾಪಿ ಗ್ರಹೀತುಂ ಶಕ್ಯತೇ। ಸ ಇಮಾಁ ಲೋಕಾನಾವೃಣೋದಿತಿ ಶ್ರುತೇಃ । ಏವಂಭೂತಸ್ಯ ವೃತ್ರಸ್ಯ ಹನ್ವೋರ್ಮುಖಪಾರ್ಶ್ವಯೋಃ ಹೇ ಇಂದ್ರ ಯದ್ಯದಾ ತನ್ಯತುಂ ಪ್ರಹಾರಂ ವಿಸ್ತಾರಯಂತಂ ಯದ್ವಾ ಶಬ್ದಕಾರಿಣಂ ವಜ್ರಂ । ತೃತೀಯಾರ್ಥೇ ದ್ವಿತೀಯಾ । ತನ್ಯತುನಾ ವಜ್ರೇಣ ನಿಜಘಂಥ । ನಿತರಾಂ ಪ್ರಜಹರ್ಥ । ತದಾನೀಮಿಮಾಮೇನಂ ತ್ವಾಮಿಂದ್ರಂ ಘೃಣಾ ಶತ್ರುಜಯಲಕ್ಷಣಾ ದೀಪ್ತಿಃ ಪರಿಚರತಿ । ಪರಿತೋ ವ್ಯಾಪ್ನೋತಿ । ತ್ವದೀಯಂ ಶವೋ ಬಲಂ ಚ ತಿತ್ವಿಷೇ । ಪ್ರದಿದೀಪೇ ॥ ತಿತ್ವಿಷೇ । ತ್ವಿಷ ದೀಪ್ತೌ । ಲಿಟಿ ಪ್ರತ್ಯಯಸ್ವರಃ । ತಿಙ್ಪರತ್ವಾನ್ನಿಘಾತಾಭಾವಃ । ವೃತ್ವೀ । ವೃಞ್ ವರಣೇ । ಸ್ನಾತ್ವ್ಯಾದಯಶ್ಚ । ಪಾ. ೭-೧-೪೯ । ಇತ್ಯಾದಿಗ್ರಹಣಾತ್ ಕ್ತ್ವಾಪ್ರತ್ಯಯಸ್ಯೇಕಾರಃ । ರಜಸಃ । ರಂಜ ರಾಗೇ । ರಜಂತ್ಯಸ್ಮಿನ್ ಗಂಧರ್ವಾದಯ ಇತಿ ರಜೋಽಂತರಿಕ್ಷಂ । ಅಸುನಿ ರಜಕರಜನರಜಃಸೂಪಸಂಖ್ಯಾನಂ । ಪಾ. ೬-೪-೨೪-೪ । ಇತಿ ನಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಅಶಯತ್ । ಶೀಙ್ಸ್ವಪ್ನೇ । ವ್ಯತ್ಯಯೇನ ಪರಸ್ಮೈಪದಂ । ಬಹುಲಂ ಛಂದಸೀತಿ ಶಪೋ ಲುಗಭಾವಃ । ದುರ್ಗೃಭಿಶ್ವನಃ । ಗ್ರಹ ಉಪಾದಾನೇ । ಶ್ವಿ ವ್ಯಾಪ್ತಾವಿತ್ಯನಯೋರ್ದುಃಶಬ್ದ ಉಪಪದೇ ಪೃಷೋದರಾದಿತ್ವಾದಭಿಮತರೂಪಸ್ವರಸಿದ್ಧಿಃ । ನಿಜಘಂಥ । ಹನ ಹಿಂಸಾಗತ್ಯೋಃ । ಲಿಟಿ ಥಲಿ ಕ್ರಾದಿನಿಯಮಾತ್ಪ್ರಾಪ್ತಸ್ಯೇಟ ಉಪದೇಶೇಽತ್ವತಃ । ಪಾ. ೭-೨-೬೨ । ಇತಿ ನಿಷೇಧಃ । ಅಭ್ಯಾಸಾಚ್ಚೇತ್ಯಭ್ಯಾಸಾದುತ್ತರಸ್ಯ ಹಕಾರಸ್ಯ ಘತ್ವಂ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ತಿಙಿ ಚೋದಾತ್ತವತೀತಿ ಗತೇರ್ನಿಘಾತಃ। ಯದ್ವೃತ್ತಯೋಗಾನ್ನಿಘಾತಾಭಾವಃ। ತನ್ಯತುಂ । ತನು ವಿಸ್ತಾರೇ । ಆಸ್ತಾಮ್ಯತ್ಯಂಜೀತ್ಯಾದಿನಾ ಉ. ೪-೨೧ । ಯತುಚ್ । ಯದ್ವಾ । ಸ್ತನ ಶಬ್ದ ಇತ್ಯಸ್ಮಾದ್ಬಹುಲವಚನಾದ್ಯತುಚ್ ಪ್ರತ್ಯಯೇ ಸಕಾರಲೋಪಃ ॥

॥ ಪ್ರತಿಪದಾರ್ಥ ॥

(ಯಃ—ಯಾವ ವೃತ್ರನು) । ಅಪಃ—ನೀರುಗಳನ್ನು । ವೃತ್ವೀ—ಆವರಿಸಿ (ತಡೆದು) । ರಜಸಃ ಬುಧ್ನಂ—ಅಂತರಿಕ್ಷದ ಮೇಲ್ಭಾಗವನ್ನು । ಅಶಯತ್—ಆಶ್ರಯಿಸಿ ಮಲಗಿದನೋ । ಪ್ರವಣೇ—ರಮ್ಯವಾದ



CC-0. Jangamwadi Math Collection. Digitized by eGangotri

ಅಂತರಿಕ್ಷದಲ್ಲಿ । ದುರ್ಗೃಭಿಶ್ವನಃ—(ಅವನ ಗತಿಯನ್ನು)ತಡೆಯಲಾಗದಂತೆ ವ್ಯಾಪಿಸಿದ । ವೃತ್ರಸ್ಯ—ಅವೃತ್ರನ । ಹನ್ವೋಃ—ಕೆನ್ನೆಗಳ ಮೇಲೆ । ಇಂದ್ರ—ಎಲೈ ಇಂದ್ರನೇ । ಯತ್—ಯಾವಾಗ । ತನ್ಯತುಂ—ಗಾಯವನ್ನುಂಟುಮಾಡುವ ಅಥವಾ ಶಬ್ದವನ್ನು ಮಾಡುವ (ವಜ್ರಾಯುಧದಿಂದ) । ನಿಜಘಂಥ—ಚೆನ್ನಾಗಿ ಹೊಡೆದೆಯೋ (ಆಗ) । ಈಮ್—ಈ ನಿನ್ನನ್ನು । ಘೃಣಾ—(ಶತ್ರುಜಯವನ್ನು ಸೂಚಿಸುವ) ಕಾಂತಿಯು । ಪರಿ ಚರತಿ—ಸುತ್ತಲೂ ವ್ಯಾಪಿಸುತ್ತದೆ (ಹರಡುತ್ತದೆ) । ಶವಃ—(ನಿನ್ನ) ಬಲವನ್ನು। ತಿತ್ವಿಷೇ—ಪ್ರಜ್ವಲಿಸುವಂತೆ ಮಾಡಿತು ॥

॥ ಭಾವಾರ್ಥ ॥

ಎಲೈ ಇಂದ್ರನೇ, ಯಾವಾಗ ವೃತ್ರನು ನೀರುಗಳನ್ನು ತಡೆದು ರಮ್ಯವಾದ ಅಂತರಿಕ್ಷವನ್ನಾಶ್ರಯಿಸಿ, ಯಾರಿಂದಲೂ ತಡೆಯಲಾಗದಂತೆ ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಮಲಗಿದನೋ ಆಗ ನೀನು ನಿನ್ನ ವಜ್ರಾಯುಧದಿಂದ ಅವನ ಕೆನ್ನೆಗಳ ಮೇಲೆ ಬಲವಾಗಿ ಹೊಡೆದೆ. ಆಗ ಶತ್ರುಜಯವನ್ನು ಸೂಚಿಸುವ ನಿನ್ನ ಕಾಂತಿಯು ಸುತ್ತಲೂ ವ್ಯಾಪಿಸಿ, ನಿನ್ನ ಬಲವನ್ನು ಪ್ರಜ್ವಲಿಸುವಂತೆ ಮಾಡಿ ನಿನ್ನ ಕೀರ್ತಿಯನ್ನು ಹರಡಿತು.

## English Translation.

O Indra, when you had smitten with your thunderbolt the cheeks of the wide-extended Vritra, who, having obstructed the waters, reposed in the region above the firmament, your fame spread afar, your prowess was renowned.

॥ ವಿಶೇಷ ವಿಷಯಗಳು ॥

ಈಂ—ಇದು ಏತಚ್ಛಬ್ದಾರ್ಥಕ ಶಬ್ದವಾಗಿದೆ. ಏನಂ ಎಂಬುದೇ ಇದರ ಅರ್ಥ. ಇಲ್ಲಿ ಇಂದ್ರನನ್ನು ವಿಶೇಷಿಸುವುದು.

ವೃತ್ರೀ—ವೃಞ್ ವರಣೆ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು, ಆವರಿಸುವಿಕೆ ಎಂಬರ್ಥವನ್ನು ಕೊಡುವುದು.

ರಜಸಃ ಬುಧ್ನಂ—ರಜಂತಿ ಅಸ್ಮಿನ್ ಗಂಧರ್ವಾದಯಃ ಇತಿ ರಜಃ ಅಂತರಿಕ್ಷಂ—ಇಲ್ಲಿ ಗಂಧರ್ವಾದಿಗಳ ಸಂಚಾರಕ್ಕೂ ವಿಹಾರಕ್ಕೂ ಆಶ್ರಯವಾಗಿರುವ ಅಂತರಿಕ್ಷವನ್ನು ಸರ್ವರೂಪದಲ್ಲಿಯೂ, ಊರ್ಧ್ವಭಾಗದಲ್ಲಿಯೂ ಆಶ್ರಯಿಸಿ ವೃತ್ರನು ವ್ಯಾಪಿಸಿದನು.

ಪ್ರವಣೇ ದುರ್ಗೃಭಿಶ್ವನಃ—ಹಾಗೆ ಅಂತರಿಕ್ಷದಲ್ಲಿ ವ್ಯಾಪಿಸಿ ನಿಂತ ವೃತ್ರಾಸುರನನ್ನು ತಡೆಯುವುದಕ್ಕೆ ಯಾರಿಂದಲೂ ಸಾಧ್ಯವಾಗಲಿಲ್ಲ. ಇಲ್ಲಿ ದುರ್ಗೃಭಿಶ್ವ ಎಂಬ ಪದಕ್ಕೆ ದುರ್ಗ್ರಹ ವ್ಯಾಪನ ಎಂದು ಅರ್ಥಮಾಡಿದ್ದಾರೆ. ಸ ಇಮಾನ್ ಲೋಕಾನವೃಣೋತ್ ಎಂಬ ಶ್ರುತಿಯು ಇದಕ್ಕೆ ಸಮರ್ಥಕವಾಗಿದೆ.

ತನ್ಯತುಂ—ತನ್ಯತು ಶಬ್ದಕ್ಕೆ ಸರ್ವತ್ರ ವ್ಯಾಪಿಸುವ ಅಥವಾ ಧ್ವನಿಮಾಡುವ ವಜ್ರಾಯುಧವೆಂದು ಅರ್ಥವಿದೆ. ಇಲ್ಲಿ ಈ ಶಬ್ದವು ದ್ವಿತೀಯಾ ವಿಭಕ್ತಿಯಲ್ಲಿದ್ದರೂ ತೃತೀಯಾ ವಿಭಕ್ತಿಯ ಅರ್ಥವನ್ನೇ ಕೊಡುವುದು.



CC-0. Jangamwadi Math Collection. Digitized by eGangotri

ಘೃಣಾ—ಈ ಶಬ್ದಕ್ಕೆ ಲೌಕಿಕವಾಗಿ ಕರುಣೆಯೆಂದರ್ಥವಿದ್ದರೂ ಇಲ್ಲಿ ಶತ್ರುಜಯಲಕ್ಷಣವಾದ ದೀಪ್ತಿ ಅಥವಾ ಕಾಂತಿ ಎಂದರ್ಥಮಾಡಬೇಕು.

|| ವ್ಯಾಕರಣಪ್ರಕ್ರಿಯಾ ||

ತಿತ್ವಿಷೇ—ತ್ವಿಷ ದೀಪ್ತೌ ಧಾತು. ಲಿಟನ ತ ಪ್ರತ್ಯಯಕ್ಕೆ ಲಿಟಸ್ತಝಯೋರೇಶಿರೇಚ್ ಎಂಬುದರಿಂದ ಏತ್ವ. ಧಾತುವಿಗೆ ಲಿಣ್ಣಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ತಿತ್ವಿಷೇ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ತಿತ್ವಿಷೇ ಎಂಬುದು ಅಂತೋದಾತ್ತವಾಗುತ್ತದೆ. ಚರತಿ ಎಂಬ ತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ವೃತ್ವೀ—ವೃಞ್ ವರಣೇ ಧಾತು. ಕ್ತ್ವಾ ಪ್ರತ್ಯಯ. ವೃತ್ವಾ ಎಂದಿರುವಾಗ ಸ್ನಾತ್ವ್ಯಾದಯಶ್ಚ (ಪಾ. ಸೂ. ೭-೧-೪೯) ಎಂಬಲ್ಲಿ ಆದಿಗ್ರಹಣದಿಂದ ಕ್ತ್ವಾ ಪ್ರತ್ಯಯಕ್ಕೆ ಈಕಾರಾಂತಾದೇಶವಾಗಿ ಬರುತ್ತದೆ ವೃತ್ವೀ ಎಂದಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ.

ರಜಸಃ—ರಂಜ ರಾಗೇ ಧಾತು. ರಜಂತಿ ಅಸ್ಮಿನ್ ಗಂಧರ್ವಾದಯಃ ಇತಿ ರಜಃ ಅಂತರಿಕ್ಷಮ್. ಸರ್ವಧಾತುನಿಮಿತ್ತಕವಾಗಿ ಬಂದ ಅಸುನ್ ಪರದಲ್ಲಿರುವಾಗ ರಜಕರಜನರಜಃಸೂಪಸಂಖ್ಯಾನಮ್ (ಪಾ. ೬-೪-೨೪-೪) ಎಂಬುದರಿಂದ ಧಾತುವಿನ ನಕಾರಕ್ಕೆ ಲೋಪ. ರಜಸ್ ಶಬ್ದವಾಗುತ್ತದೆ.

ಅಶಯತ್—ಶೀಙ್ ಸ್ವಪ್ನೇ ಧಾತು. ವ್ಯತ್ಯಯೋ ಬಹುಲಂ ಎಂಬುದರಿಂದ ಪರಸ್ಮೈಪದಪ್ರತ್ಯಯ ಬರುತ್ತದೆ. ಲಙ್ ಪ್ರಥಮಪುರುಷದ ತಿಗೆ ಇತಶ್ಚ ಎಂಬುದರಿಂದ ಅಂತ್ಯಲೋಪ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. ಧಾತುವಿಗೆ ಶಪ್ ನಿಮಿತ್ತಕವಾಗಿ ಗುಣ. ಅಯಾದೇಶ. ಅಂಗಕ್ಕೆ ಲಙ್ ನಿಮಿತ್ತಕವಾಗಿ ಅಡಾಗಮ, ಅಶಯತ್ ಎಂದಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ದುರ್ಗೃಭಿಶ್ವನಃ—ಗ್ರಹ ಉಪಾದಾನೇ ಧಾತು. ಅಶೂ ವ್ಯಾಪ್ತೌ ಧಾತು. ಈ ಎರಡು ಧಾತುಗಳಿಗೆ ದುಸ್ ಎಂಬುದು ಉಪಪದವಾಗಿರುವಾಗ ಪೃಷೋದರಾದೀನಿ ಯಥೋಪದಿಷ್ಟಮ್ ಎಂಬುದರಿಂದ ಇವು ಪೃಷೋದರಾದಿಯಲ್ಲಿ ಸೇರಿರುವುದರಿಂದ ವರ್ಣವಿಕಾರಾದಿಗಳಿಂದ ಅಭಿಮತರೂಪಸಿದ್ಧಿಯಾಗುತ್ತದೆ.

ನಿಜಘಂಥ—ಹನ ಹಿಂಸಾಗತ್ಯೋಃ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಪರಸ್ಮೈಪದಾನಾಂಣಲ್ ಎಂಬುದರಿಂದ ಸಿಪಿಗೆ ಥಲಾದೇಶ. ಕ್ರ್ಯಾದಿನಿಯಮದಿಂದ ಅನಿಟ್ಟಾದರೂ ಥಲಿಗೆ ಇಟ್ ಪ್ರಾಪ್ತವಾದರೆ ಉಪದೇಶೇಽತ್ವತಃ (ಪಾ. ಸೂ. ೭-೨-೬೨) ಸೂತ್ರದಿಂದ ಅಕಾರವುಳ್ಳ ಧಾತುವಾದುದರಿಂದ ಪುನಃ ಇಣ್ಣಿಷೇಧ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷಃ ಕುಹೋಶ್ಚುಃ ಎಂಬುದರಿಂದ ಚುತ್ವ. ಅದಕ್ಕೆ ಜಸ್ತ್ವ ಜಹನ್+ಥ ಎಂದಿರುವಾಗ ಅಭ್ಯಾಸಾಚ್ಚ (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನಿನ ಹಕಾರಕ್ಕೆ ಕುತ್ವದಿಂದ ಘಕಾರಾದೇಶ. ನಕಾರಕ್ಕೆ ಅನುಸ್ವಾರಪರಸವರ್ಣ. ಜಘಂಥ ಎಂದು ರೂಪವಾಗುತ್ತದೆ. ಥಲ್ ಲಿತ್ತಾದುದರಿಂದ ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ. ತಿಙಿಚೋದಾತ್ತವತಿ ಎಂಬುದರಿಂದ ಗತಿಗೆ (ನಿ) ಉದಾತ್ತವುಳ್ಳ ತಿಙಂತ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಯತ್ ಎಂದು ವ್ಯವಹಿತವಾದ ಸಂಬಂಧವಿದ್ದರೂ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಪ್ರತಿಷೇಧ (ತಿಙಂತಕ್ಕೆ)



CC-0. Jangamwadi Math Collection. Digitized by eGangotri

ತನ್ಯತುಂ— ತನು ವಿಸ್ತಾರೇ ಧಾತು. ಇದಕ್ಕೆ ಋತನ್ಯಞ್ಜಿ (ಉ. ಸೂ. ೪-೪೪೨) ಎಂಬುದರಿಂದ ಯತುಚ್ ಪ್ರತ್ಯಯ. ಅಥವಾ ಸ್ತನ ಶಬ್ದೇ ಧಾತು. ಉಣಾದಯೋಬಹುಲಮ್ ಎಂಬಲ್ಲಿ ಬಹುಲವಚನವಿರುವುದರಿಂದ ಯತುಚ್ ಪ್ರತ್ಯಯ. ಛಾಂದಸವಾಗಿ ಸಕಾರ ಲೋಪ. ತನ್ಯತು ಶಬ್ದವಾಗುತ್ತದೆ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಹ್ರದಂ ನ ಹಿ ತ್ವಾ ನ್ಯೃಷನ್ತ್ಯೂರ್ಮಯೋ ಬ್ರಹ್ಮಾಣೀಂದ್ರ ತವ ಯಾನಿ
ವರ್ಧಯಾ ।
ತ್ವಷ್ಟಾ ಚಿತ್ತೇ ಯುಜ್ಯಂ ವಾವೃಧೇ ಶವಸ್ತತಕ್ಷ ವಜ್ರಮಭಿಭೂತ್ಯೋ-
ಜಸಂ ॥ ೭ ॥

॥ ಪದಪಾಠಃ ॥

ಹ್ರದಂ । ನ । ಹಿ । ತ್ವಾ । ನಿಽಋಷನ್ತಿ । ಊರ್ಮಯಃ । ಬ್ರಹ್ಮಾಣಿ । ಇಂದ್ರ ।
ತವ । ಯಾನಿ । ವರ್ಧನಾ ।
ತ್ವಷ್ಟಾ । ಚಿತ್ । ತೇ । ಯುಜ್ಯಂ । ವವೃಧೇ । ಶವಃ । ತತಕ್ಷ । ವಜ್ರಂ । ಅಭಿಭೂ-
ತಿಽಓಜಸಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಯಾನಿ ಬ್ರಹ್ಮಾಣಿ ಸ್ತೋತ್ರಶಸ್ತ್ರರೂಪಾಣಿ ಮಂತ್ರಜಾತಾನಿ ತವ ವರ್ಧನಾ ವರ್ಧಯಿತೄಣಿ ತಾನಿ ತ್ವಾ ತ್ವಾಂ ನ್ಯೃಷಂತಿ ಹಿ । ನಿತರಾಂ ಪ್ರಾಪ್ನುವಂತ್ಯೇವ । ತತ್ರ ದೃಷ್ಟಾಂತಃ । ಊರ್ಮಯೋ ಜಲಪ್ರವಾಹಾ ಹ್ರದಂ ನ । ಯಥಾ ಜಲಾಶಯಂ ಪ್ರಾಪ್ನುವಂತಿ ತದ್ವತ್ । ತ್ವಷ್ಟಾ ಚಿತ್ ಸ ತ್ವಷ್ಟಾಪಿ ದೇವಸ್ತೇ ತವ ಯುಜ್ಯಂ ಯೋಗ್ಯಂ ಶವೋ ಬಲಂ ವವೃಧೇ । ಪ್ರಾವರ್ಧಯತ್ । ಅಪಿ ಚಾಭಿಭೂತ್ಯೋಜಸಂ ಶತ್ರೂಣಾಮಭಿಭವಿತೃಣಾಮೋಜಸಾ ಬಲೇನ ಯುಕ್ತಂ ವಜ್ರಂ ತತಕ್ಷ । ತೀಕ್ಷ್ಣೀಚಕಾರ ॥ ನ್ಯೃಷಂತಿ । ಋಷೀ ಗತೌ । ತೌದಾದಿಕಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ । ಹಿ ಚೇತಿ ನಿಘಾತಪ್ರತಿಷೇಧಃ । ಊರ್ಮಯಃ । ಋ ಗತೌ । ಋಚ್ಛಂತಿ ಗಚ್ಛಂತೀತ್ಯೂ-



CC-0. Jangamwadi Math Collection. Digitized by eGangotri

ರ್ಮಯಃ । ಅರ್ತೇರೂಚ । ಉ. ೪-೪೪ । ಇತಿ ಮಿಪ್ರತ್ಯಯಃ । ಗುಣೇ ಸತ್ಯೇಕಾರಸ್ಯೋಕಾರಾದೇಶಶ್ಚ । ಪ್ರತ್ಯಯಸ್ವರಃ । ವರ್ಧನಾ । ವೃಧು ವೃದ್ಧೌ । ವರ್ಧಂತ ಏಭಿರಿತಿ ವರ್ಧನಾ । ಕರಣೇ ಲ್ಯುಟ್ । ಶೇಶ್ಛಂದ. ಸೀತಿ ಶೇರ್ಲೋಪಃ । ತತಕ್ಷ । ತಕ್ಷೂ ತ್ವಕ್ಷೂ ತನೂಕರಣೇ । ಲಿಟಿ ಣಲಿ ಲಿತ್ಸ್ವರೇಣ ಪ್ರತ್ಯಯಾತ್ಪೂರ್ವ. ಸ್ಯೋದಾತ್ತತ್ವಂ । ಪಾದಾದಿತ್ವಾನ್ನಿಘಾತಾಭಾವಃ । ಅಭಿಭೂತ್ಯೋಜಸಂ । ಅಭಿಭೂಯತೇಽನೇನೇತ್ಯ- ಭಿಭೂತಿ । ಕರಣೇ ಕ್ತಿನ್ । ತಾದೌ ಚ ನಿತೀತಿ ಗತೇಃ ಪ್ರಕೃತಿಸ್ವರತ್ವಂ । ಅಭಿಭೂತ್ಯೋಜೋ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ ॥ ೭ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ಯಾನಿ ಬ್ರಹ್ಮಾಣಿ—ಯಾವ ಸ್ತೋತ್ರ (ಶಸ್ತ್ರ) ರೂಪಗಳಾದ ಮಂತ್ರಗಳು । ತವ—ನಿನ್ನ । ವರ್ಧನಾ—(ಮಹಿಮೆಯನ್ನು ಕೊಂಡಾಡಿ) ಬೆಳೆಸುವುವೋ ಅವು । ಊರ್ಮಯಃ— ಜಲಪ್ರವಾಹಗಳು । ಹ್ರದಂ ನ—ಸಾಗರವನ್ನು ಸೇರುವಂತೆ । ತ್ವಾ—ನಿನ್ನನ್ನು । ಸ್ಯಂದಂತಿ ಹಿ—ಸೇರಿಯೇ ಸೇರುತ್ತವೆ। ತ್ವಷ್ಟಾ ಚಿತ್-ತ್ವಷ್ಟೃವಾದರೋ । ತೇ—ನಿನ್ನ । ಯುಜ್ಯಂ-ಯೋಗ್ಯವಾದ । ಶವಃ—ಬಲವನ್ನು । ವವೃಧೇ—ವೃದ್ಧಿಯಾಗುವಂತೆ ಮಾಡಿದನು (ಮತ್ತು) । ಅಭಿಭೂತ್ಯೋಜಸಂ—(ಶತ್ರುಗಳನ್ನು) ಸೋಲಿಸುವ ಶಕ್ತಿಯಿಂದ ಕೂಡಿದ । ವಜ್ರಂ—ವಜ್ರಾಯುಧವನ್ನು । ತತಕ್ಷ—ಅತ್ಯಂತ ಹರಿತವಾಗುವಂತೆ ಮಾಡಿದನು

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಮಹಿಮೆಯನ್ನು ಕೊಂಡಾಡಿ ಬೆಳೆಸುವ ಸ್ತೋತ್ರರೂಪಗಳಿಂದ ಮಂತ್ರಗಳು, ಜಲಪ್ರವಾಹಗಳು ಸಾಗರವನ್ನು ಖಂಡಿತ ಸೇರುವಂತೆ, ನಿನ್ನನ್ನು ಸೇರಿಯೇ ಸೇರುತ್ತವೆ. ತ್ವಷ್ಟೃದೇವನಾದರೋ, ನಿನಗೆ ಯೋಗ್ಯವಾದ ಬಲವನ್ನು ವೃದ್ಧಿಯಾಗುವಂತೆ ಮಾಡಿದನು ಮತ್ತು ಶತ್ರುಗಳನ್ನೆಲ್ಲ ಸೋಲಿಸುವ ಶಕ್ತಿಯುಳ್ಳ ನಿನ್ನ ವಜ್ರಾಯುಧವನ್ನು ಅತ್ಯಂತ ಹರಿತವಾಗುವಂತೆ ಮಾಡಿದನು.

## English Translation.

O Indra, the hymns, that glorify you, attain you as rivulets flow into a lake. Twashtri has augmented your appropriate vigour; he has sharpened your bolt with overpowering might.

॥ ವಿಶೇಷ ವಿಷಯಗಳು ॥

ಹ್ರದಂ ನ—ಇವಾರ್ಥಕವಾದ ನ ಶಬ್ದ ಸಾಹಚರ್ಯದಿಂದ ಇದಕ್ಕೆ ಕೊಳವನ್ನು ಪ್ರವೇಶಿಸುವಂತೆ ಎಂದರ್ಥಬರುವುದು.

ಸ್ಯಂದಂತಿ—ಋಷೀ ಗತೌ ಎಂಬ ಗತ್ಯರ್ಥಕಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ನಿತರಾಂ ಪ್ರಾಪ್ನುವಂತಿ ತಡೆಯಿಲ್ಲದೆ ಪ್ರವೇಶಿಸುವುವು ಎಂಬರ್ಥವನ್ನು ಕೊಡುವುದು.

ತ್ವಷ್ಟಾ ಚಿತ್—ಸ ತ್ವಷ್ಟಾ ದೇವ ಏವ । ಇಲ್ಲಿ ಚಿತ್ ಎಂಬ ಶಬ್ದಕ್ಕೆ ಏವಶಬ್ದಾರ್ಥವಿದೆ. ಆ ತ್ವಷ್ಟೃದೇವತೆಯಾದರೋ ಎಂದರ್ಥ.


CC-0. Jangamwadi Math Collection. Digitized by eGangotri

ಅಭಿಭೂತ್ಯೋಜಸಂ— ಅಭಿಭೂತಿ+ಓಜಸಂ— ಅಭಿಭೂತಿ ಓಜೋ ಯಸ್ಯ ತತ್ । ಶತ್ರುಗಳನ್ನು ಮಂಕುಗೊಳಿಸುವ ಅಥವಾ ತಿರಸ್ಕರಿಸುವ ಸಾಮರ್ಥ್ಯವುಳ್ಳದ್ದು ಎಂದು ಇದು ವಜ್ರಾಯುಧವನ್ನು ವಿಶೇಷಿಸುವುದು. ಅಭಿಭೂಯತೇ ಅನೇನೇತಿ ಅಭಿಭೂತಿ ಎಂದು ವಿಗ್ರಹವು.

॥ ವ್ಯಾಕರಣಪ್ರಕ್ರಿಯಾ ॥

ನ್ಯೃಷಂತಿ— ನಿ+ಋಷಂತಿ ಋಷೀ ಗತೌ ಧಾತು. ತುದಾದಿ. ಝೋಂತಃ ಎಂಬುದರಿಂದ ಝಿಗೆ ಅಂತಾದೇಶ. ತುದಾದಿಭ್ಯಃ ಶಃ ಎಂಬುದರಿಂದ ಶವಿಕರಣ. ಅತೋಗುಣೇ ಸೂತ್ರದಿಂದ ಪರರೂಪ. ಋಷಂತಿ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು ತಾಸ್ಯನುದಾತ್ತೇತ್— ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ವಿಕರಣಸ್ವರವು ಉಳಿಯುತ್ತದೆ. ನ ಹಿ ಎಂದು ಹಿ ಶಬ್ದದ ಯೋಗವಿರುವುದರಿಂದ ಹಿಚ (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಪ್ರತಿಷೇಧ.

ಊರ್ಮಯಃ— ಋ ಗತೌ ಧಾತು. ಯಚ್ಛಂತಿ-ಗಚ್ಛಂತಿ ಇತಿ ಊರ್ಮಯಃ ಅರ್ತೇರೂಚ (ಉ. ಸೂ. ೪-೬೩೪) ಎಂಬುದರಿಂದ ಮಿ ಪ್ರತ್ಯಯ. ಮಿ ಪರದಲ್ಲಿರುವಾಗ ಧಾತುವಿಗೆ ಗುಣಬಂದಾಗ, ಅರಿನ ಅಕಾರಕ್ಕೆ ಊಕಾರಾದೇಶ. ಊರ್ಮಿ ಶಬ್ದವಾಗುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತ.

ವರ್ಧನಾ— ವೃಧು ವೃದ್ಧೌ ಧಾತು. ವರ್ಧತೇ ಏಭಿರಿತಿ ವರ್ಧನಾ. ಕರಣಾರ್ಥದಲ್ಲಿ ಲ್ಯುಟ್. ವರ್ಧನ ಶಬ್ದವಾಗುತ್ತದೆ. ಯುವೋರನಾಕೌ ಎಂಬುದರಿಂದ ಯು ಎಂಬುದಕ್ಕೆ ಅನಾದೇಶ. ಪ್ರಥಮಾ ಬಹುವಚನದಲ್ಲಿ ನುಮಾಗಮ ದೀರ್ಘ. ಶೇಶ್ಛಂದಸಿ ಬಹುಲಂ ಎಂಬುದರಿಂದ ಶಿಗೆ ಲೋಪ ಬಂದರೆ ವರ್ಧನಾ ಎಂದು ರೂಪವಾಗುತ್ತದೆ.

ತತಕ್ಷೇ—ತಕ್ಷೂ ತ್ವಕ್ಷೂ ತನೂಕರಣೇ ಧಾತು. ಲಿಟ್ ಪ್ರಥಮಪುರುಷದ ತಿಪಿಗೆ ಪರಸ್ಮೈಪದಾನಾಂ ಎಂಬುದರಿಂದ ಣಲಾದೇಶ. ಲಿಣ್ನಿಮಿತ್ತಕವಾಗಿ ಧಾತುವಿಗೆ ದ್ವಿತ್ವ' ಅಭ್ಯಾಸಕ್ಕೆ ಹಲಾದಿಶೇಷ. ಣಲ್ ಲಿತ್ತಾದುದರಿಂದ ಲಿತಿ ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಪಾದದ ಆದಿಯಲ್ಲಿರುವುದರಿಂದ ಅಪಾದಾದೌ ಎಂದು ನಿಷೇಧ ಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ಅಭಿಭೂತ್ಯೋಜಸಮ್— ಅಭಿಭೂಯತೇಽನೇನೇತಿ ಅಭಿಭೂತಿ. ಭೂ ಧಾತುವಿಗೆ ಕರಣಾರ್ಥದಲ್ಲಿ ಕ್ತಿನ್. ತಾದೌಚನಿತಿ (ಪಾ. ಸೂ. ೬-೨-೫೦) ಎಂಬುದರಿಂದ ಗತಿಗೆ (ಅಭಿ) ಪ್ರಕೃತಿಸ್ವರ ಬರುತ್ತದೆ. ಅಭಿಭೂತಿ ಓಜೋ ಯಸ್ಯ ತತ್ ಅಭಿಭೂತ್ಯೋಜಃ ತತ್ ಬಹುವ್ರೀಹಿಸಮಾಸ. ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್ ಎಂಬದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಜಘನ್ವಾ ಉ ಹರಿಭಿಃ ಸಂಭೃತಕ್ರತವಿನ್ದ್ರ ವೃತ್ರಂ ಮನುಷೇ ಗಾತು-
ಯನ್ನಪಃ
ಅಯಚ್ಛಥಾ ಬಾಹ್ವೋರ್ವಜ್ರಮಾಯಸಮಧಾರಯೋ ದಿವ್ಯಾ ಸೂರ್ಯಂ
ದೃಶೇ ॥ ೮ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಜಘನ್ವಾನ್ । ಊಂ ಇತಿ । ಹರಿಭಿಃ । ಸಂಭೃತಕ್ರತೋ ಇತಿ ಸಂಭೃತಕ್ರತೋ ।
ಇಂದ್ರ । ವೃತ್ರಂ । ಮನುಷೇ । ಗಾತುಯನ್ । ಅಪಃ ।
ಅಯಚ್ಛಥಾಃ । ಬಾಹ್ವೋಃ । ವಜ್ರಂ । ಆಯಸಂ । ಅಧಾರಯಃ । ದಿವಿ । ಆ ।
ಸೂರ್ಯಂ । ದೃಶೇ ॥ ೮ ॥

॥ ಸಾಯಣಭಾಷ್ಯ ॥

ಹೇ ಸಂಭೃತಕ್ರತೋ ಸಂಪಾದಿತಕರ್ಮನ್ ಸಂಪಾದಿತಪ್ರಜ್ಞ ವೇಂದ್ರ ಮನುಷೇ ಜನಾಯ ಗಾತುಯನ್ ಗಾತುಂ ಮಾರ್ಗಮಿಚ್ಛನ್ ವೃತ್ರಂ ಲೋಕಾನಾಮಾವರಕಮಸುರಂ ಹರಿಭಿರಶ್ವೈರ್ಯು-ಕ್ತಸ್ತ್ವಂ ಜಘನ್ವಾನ್ ಉ । ಹತವಾನ್ ಖಲು । ತದನಂತರಮಪೋ ವೃಷ್ಟ್ಯುದಕಾನಿ ಪ್ರಾವರ್ತಯ ಇತ್ಯಧ್ಯಾಹಾರಃ । ಬಾಹ್ವೋಸ್ತ್ವದೀಯಯೋರ್ಹಸ್ತಯೋರಾಯಸಮಯೋಮಯಂ ವಜ್ರಮಯಚ್ಛ-ಥಾಃ । ಅಗ್ರಹೀಃ । ಆಕಾರಃ ಸಮುಚ್ಚಯಾರ್ಥಃ । ಸೂರ್ಯಂ ಚ ದಿವಿ ದ್ಯುಲೋಕೇ ದೃಶೇ ದ್ರಷ್ಟುಂ ಸರ್ವೇಷಾಮಸ್ಮಾಕಂ ದರ್ಶನಾಯಾಧಾರಯಃ । ಸ್ಥಾಪಯಾಂ ಚಕೃಷೇ ॥ ಜಘನ್ವಾನ್ । ಹಂತೇರ್ಲಿಟಃ ಕ್ವಸುಃ । ವಿಭಾಷಾ ಗಮಹನವಿದವಿಶಾಂ । ಪಾ. ೭-೨-೬೮ । ಇತೀಡಾಗಮಸ್ಯ ವಿಕಲ್ಪೋಕ್ತೇರಭಾವಃ । ಗಾತುಯನ್ । ಗಾತುಮಿಚ್ಛಸಿ । ಛಂದಸಿ ಪರೇಚ್ಛಾಯಾಮಪೀತಿ ಕ್ಯಚ್ । ಕಾ. ೩-೧-೮-೨ । ನ ಛಂದಸ್ಯ ಪುತ್ರಸ್ಯೇತಿ ದೀರ್ಘಪ್ರತಿಷೇಧಃ । ಕ್ಯಜಂತಾಚ್ಛತರ್ಯದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಕ್ಯಚ ಏವ ಸ್ವರಃ ಶಿಷ್ಯತೇ । ಬಾಹ್ವೋಃ । ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತೇರುದಾತ್ತತ್ವಂ ॥ ೮ ॥

॥ ಪ್ರತಿಪದಾರ್ಥ ॥

ಸಂಭೃತಕ್ರತೋ—ಪವಿತ್ರಗಳಾದ ಕರ್ಮಗಳನ್ನು ನೆರವೇರಿಸಿದ ಅಥವಾ ಸಂಪಾದಿತವಾದ ಪ್ರಜ್ಞೆಯುಳ್ಳ । ಇಂದ್ರ—ಎಲೈ ಇಂದ್ರನೇ । ಮಾನುಷೇ—ಮಾನವನಲ್ಲಿಗೆ । ಗಾತುಯನ್—ಹೋಗಲು (ಮಾರ್ಗವನ್ನು ಹೊಂದಲು) ಇಚ್ಛಿಸಿದವನಾಗಿ । ವೃತ್ರಂ—ಲೋಕವನ್ನೆಲ್ಲ ಆವರಿಸಿದ ವೃತ್ರನನ್ನು । ಹರಿಭಿಃ—ಕುದುರೆಗಳಿಂದ ಕೂಡಿ (ನೀನು) । ಜಘನ್ವಾನ್ ಉ—ಕೊಂದೆಯಲ್ಲವೆ. (ಆ ಮೇಲೆ) । ಅಪಃ—ನೀರುಗಳನ್ನು (ಬಿಡಿಸಿಹರಿಸಿದೆ) । ಬಾಹ್ವೋಃ—ನಿನ್ನೆರಡು ಕೈಗಳಲ್ಲೂ । ಆಯಸಂ—ಕಬ್ಬಿಣದಿಂದ ಮಾಡಿದ । ವಜ್ರಂ—ವಜ್ರಾಯುಧವನ್ನು । ಅಯಚ್ಛಥಾಃ—ಹಿಡಿದುಕೊಂಡೆ ಮತ್ತು । ಆ ಸೂರ್ಯಂ—ಸೂರ್ಯನನ್ನೂ ಕೂಡ । ದಿವಿ—ಅಂತರಿಕ್ಷದಲ್ಲಿ । ದೃಶೇ—(ನಮಗೆ) ಗೋಚರವಾಗಲು । ಅಧಾರಯಃ—ಸ್ಥಾಪಿಸಿದೆ. (ನಮಗೆ ಕಾಣುವಂತೆ ಮಾಡಿದೆ).



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಪವಿತ್ರಗಳಾದ ಕರ್ಮಗಳನ್ನು ನೆರವೇರಿಸಿದ ಎಲೈ ಇಂದ್ರನೇ, ನೀನು ಮಾನವನಲ್ಲಿಗೆ ಹೋಗಲಿಚ್ಛಿಸಿದಾಗ ಮಾರ್ಗವನ್ನು ಆವರಿಸಿ ನಿಂತ ವೃತ್ರಾಸುರನನ್ನು ನಿನ್ನ ಕುದುರೆಗಳಿಂದ ಕೂಡಿಕೊಂಡು ಕೊಂದೆಯಲ್ಲವೆ. ಆಮೇಲೆ ನೀನು ನೀರುಗಳನ್ನು ವೃತ್ರನಿಂದ ಬಿಡಿಸಿ ಹರಿಸಿದೆ. ಕಬ್ಬಿಣದಿಂದ ಮಾಡಿದ ನಿನ್ನ ವಜ್ರಾಯುಧವನ್ನು ನಿನ್ನೆರಡು ಕೈಗಳಲ್ಲೂ ಹಿಡಿದುಕೊಂಡೆ. ಮತ್ತು ನಮಗೆಲ್ಲ ಕಾಣಿಸುವಂತೆ ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದೆ.

## English Translation.

Indra, performer of holy acts, desirous of going to man, you, with your horses has slain Vritra (has set free) the waters, have taken in your hands your thunderbolt of iron and have made the sun visible in the sky.

॥ ವಿಶೇಷ ವಿಷಯಗಳು ॥

**ಸಂಭೃತಕ್ರತೋ**—ಇಲ್ಲಿ ಕ್ರತುಶಬ್ದಕ್ಕೆ ಯಾಗ ಅಥವಾ ಪ್ರಜ್ಞೆ ಎಂದು ಎರಡರ್ಥವನ್ನೂ ಮಾಡಿದ್ದಾರೆ. ಸಕಲ ಯಾಗಾದಿ ಕರ್ಮಗಳನ್ನೂ ಹೊಂದಿರುವವನು ಅಥವಾ ಸಂಪೂರ್ಣಪ್ರಜ್ಞಾಶಾಲಿ ಎಂದು ಇಂದ್ರನಿಗೆ ವಿಶೇಷಾರ್ಥವನ್ನು ಈ ಪದವು ಕಲ್ಪಿಸುವುದು.

**ಮನುಷೇ**—ಷಕಾರಾಂತವಾದ ಮನುಶ್ಶಬ್ದವು ಇಲ್ಲಿ ಜನಸಮುದಾಯಕ್ಕೆ ಎಂಬರ್ಥವನ್ನು ಕೊಡುವುದು.

**ಗಾತುಯನ್**—ಗಾತುಂ ಮಾರ್ಗಮಿಚ್ಛನ್—ವೃಷ್ಟಿಯೇ ಇಲ್ಲದೆ ಕಂಗೆಟ್ಟಿದ್ದ ಜನತೆಗೆ ಸುಖವಾದ ಮಾರ್ಗವನ್ನು ಎಂದರೆ ವೃಷ್ಟಿಯನ್ನು ದೊರಕಿಸುವ ಮಾರ್ಗವನ್ನು ಉಂಟುಮಾಡುವುದಕ್ಕಾಗಿ ಎಂದು ಇಲ್ಲಿ ವಿಶೇಷಾರ್ಥವಿದೆ.

**ದೃಶೇ**—ದ್ರಷ್ಟುಂ ಸರ್ವೇಷಾಮಸ್ಮಾಕಂ ದರ್ಶನಾಯ । ಸಾಮಾನ್ಯರಿಗೂ ದರ್ಶನಯೋಗ್ಯತೆಯು ಲಭಿಸಲೆಂಬ ಉದ್ದೇಶದಿಂದ ಸೂರ್ಯನನ್ನು ಅಂತರಿಕ್ಷದಲ್ಲಿ ಸ್ಥಾಪಿಸಿದೆ ಎಂದು ಇಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

**ಜಘನ್ವಾನ್**—ಹನ ಹಿಂಸಾಗತ್ಯೋಃ ಧಾತು. ಛಂದಸಿ ಲಿಟ್ ಕ್ವಸುಶ್ಚ (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಹನ್+ವಸ್ ಎಂದಿರುವಾಗ ಲಿಣ್ಣಿಮಿತ್ತಕವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಕುಹೋಶ್ಚುಃ** ಎಂಬುದರಿಂದ ಹಕಾರಕ್ಕೆ ಚುತ್ವ, ಜಸ್ತ್ವ. ಅಭ್ಯಾಸಾಚ್ಚ (ಪಾ. ಸೂ. ೭-೩-೫೫) ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನಿನ ಹಕಾರಕ್ಕೆ ಕುತ್ವ. ವಿಭಾಷಾ ಗಮಹನವಿದವಿಶಾಮ್ (ಪಾ. ಸೂ. ೭-೨-೬೮) ಎಂಬುದರಿಂದ ವಿಕಲ್ಪವಾಗಿ ಪರದಲ್ಲಿರುವ ವಲಾದ್ಯಾರ್ಧಧಾತುಕಕ್ಕೆ ಇಡಾಗಮ ಹೇಳಿರುವುದರಿಂದ ಇಲ್ಲಿ ಇಟ್ ಬರುವುದಿಲ್ಲ. ಜಘನ್ವಸ್ ಶಬ್ದವಾಗುತ್ತದೆ. ಪ್ರಥಮಾ ಏಕವಚನ ಪರದಲ್ಲಿರುವಾಗ ಉಗಿ





CC-0. Jangamwadi Math Collection. Digitized by eGangotri

ತ್ವಾದುದರಿಂದ **ಉಗಿದಚಾಂ** ಸೂತ್ರದಿಂದ ನುಮಾಗಮ ಬರುತ್ತದೆ. **ಅತ್ವಸಂತಸ್ಯಚಾ**—ಎಂಬುದರಿಂದ ದೀರ್ಘ. **ಹಲ್ಙ್ಯಾಭ್ಯೋ**—ಸೂತ್ರದಿಂದ ಸುಲೋಪ. **ಸಂಯೋಗಾಂತಸ್ಯಲೋಪಃ** ಎಂಬುದರಿಂದ ಸಕಾರಲೋಪ. ಅದು ಅಸಿದ್ಧವಾದುದರಿಂದ **ನಲೋಪ**—ಸೂತ್ರದಿಂದ ನಕಾರಕ್ಕೆ ಲೋಪ ಬರುವುದಿಲ್ಲ. ಜಘನ್ವಾನ್ ಎಂದು ರೂಪ ವಾಗುತ್ತದೆ. ಪ್ರತ್ಯಯಸ್ವರದಿಂದ ಆಕಾರ ಉದಾತ್ತವಾಗುತ್ತದೆ.

**ಗಾತುಯನ್**—ಗಾತುಮಿಚ್ಛತಿ **ಛಂದಸಿ ಪರೇಚ್ಛಾಯಾಮಪಿ** (ಕಾ. ೩-೧-೮-೨) ಎಂಬುದರಿಂದ ಆತ್ಮಸಂಬಂಧಿಯಾಗದಿದ್ದರೂ ಪರೇಚ್ಛಾ ತೋರುತ್ತಿದ್ದರೂ ಕ್ಯಚ್ ಬರುತ್ತದೆ. ಗಾತುಯ ಎಂದು ಕ್ಯಜಂತವು ಧಾತು ಸಂಜ್ಞೆಯನ್ನು ಹೊಂದುತ್ತದೆ. **ನ ಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ಪೂರ್ವ ಪದಕ್ಕೆ ದೀರ್ಘ ಬರುವುದಿಲ್ಲ. ಕ್ಯಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ ಬರುತ್ತದೆ. ಗಾತುಯತ್ ಶಬ್ದ ವಾಗುತ್ತದೆ. ಪ್ರಥಮಾ ಸು ಪರದಲ್ಲಿರುವಾಗ **ಉಗಿದಚಾಂ**—ಸೂತ್ರದಿಂದ ನುಮಾಗಮ. ಸಂಯೋಗಾಂತ ಲೋಪ ದಿಂದ ತಕಾರಲೋಪ ಗಾತುಯನ್ ಎಂದು ರೂಪವಾಗುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವ ಧಾತುಕವು **ತಾಸ್ಯನುದಾತ್ತೇತ್** ಸೂತ್ರದಿಂದ ಅನುದಾತ್ತವಾಗುತ್ತದೆ. ಕ್ಯಚ್‌ಪ್ರತ್ಯಯಸ್ವರವು ಸತಿಶಿಷ್ಟ ವಾಗುವುದರಿಂದ ಯಕಾರೋತ್ತರಾಕಾರವು ಉದಾತ್ತವಾಗುತ್ತದೆ.

**ಅಯಚ್ಛಥಾಃ**—ದಾಣ್ ದಾನೇ ಧಾತು. ಲಙ್ ಮಧ್ಯಮಪುರುಷ ಏಕವಚನರೂಪ. **ಪಾಘ್ರಾ ಧ್ಮಾಸ್ಥಾ**—ಎಂಬುದರಿಂದ ಯಚ್ಛಾದೇಶ. ಪಾದದ ಆದಿಯಲ್ಲಿರುವುದರಿಂದ ನಿಘಾತಪ್ರತಿಷೇಧ ಬರುವುದರಿಂದ ಅಟಿನ ಆದ್ಯುದಾತ್ತಸ್ವರವು ಉಳಿಯುತ್ತದೆ.

**ಆಯಸಂ**—ಅಯಸಃ ಇದಂ ಆಯಸಂ । ವಿಕಾರಾರ್ಥದಲ್ಲಿ ಅಣ್‌ಪ್ರತ್ಯಯ. **ತದ್ಧಿತೇಷ್ವಚಾಂ**—ಎಂಬುದರಿಂದ ಆದಿವೃದ್ಧಿ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಅಧಾರಯಃ**—ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಟ್ ಉದಾತ್ತವಾದು ದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಬಾಹ್ವೋಃ**—ಬಾಹು ಶಬ್ದದ ಷಷ್ಠೀ ದ್ವಿವಚನಾಂತದರೂಪ. **ಉದಾತ್ತಯಣೋ ಹಲ್ ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ಹಲ್‌ಪೂರ್ವವಾಗಿ ಉದಾತ್ತಸ್ಥಾನದಲ್ಲಿ ಬಂದಿರುವ ಯಣಿನ ಪರದಲ್ಲಿರುವುದರಿಂದ ಓಸಿಗೆ ಉದಾತ್ತಸ್ವರ ಬರುತ್ತದೆ.

**ದೃಶೇ**—ದ್ರಷ್ಟುಂ ಎಂಬರ್ಥದಲ್ಲಿ **ದೃಶೇ ವಿಖ್ಯೇಚ** (ಪಾ. ಸೂ. ೩-೪-೧೧) ಎಂಬುದರಿಂದ ತುಮ ರ್ಥದಲ್ಲಿ ನಿಪಾತಿತವಾಗಿದೆ.

॥ ಸಂಹಿತಾಪಾಠಃ ॥

ಬೃಹತ್ಸ್ವಶ್ಚಂದ್ರಮಮವದ್ಯದುಕ್ಥ್ಯ೧ಮಕೃಣ್ವತ ಭಿಯಸಾ ರೋಹಣಂ ದಿವಃ ।

ಯನ್ಮಾನುಷಪ್ರಧನಾ ಇಂದ್ರಮೂತಯಃ ಸ್ವರ್ನೃಷಾಚೋ ಮರುತೋಽಮದನ್ನನು ॥ ೯ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಬೃಹತ್ । ಸ್ವಚಂದ್ರಂ । ಅಮವತ್ । ಯತ್ । ಉಕ್ಥ್ಯಂ । ಅಕೃಣ್ವತ ।
ಭಿಯಸಾ । ರೋಹಣಂ । ದಿವಃ ।

ಯತ್ । ಮಾನುಷಪ್ರಧನಾಃ । ಇಂದ್ರಂ । ಊತಯಃ । ಸ್ವಃ । ನೃಸಾಚಃ ।
ಮರುತಃ । ಅಮದನ್ । ಅನು ॥ ೯ ॥

॥ ಸಾಯಣಭಾಷ್ಯ ॥

ಬೃಹತ್ ಬೃಹತ್ಸಾಮ ಸ್ತೋತಾರೋ ಯಜಮಾನಾ ಭಿಯಸಾ ವೃತ್ರಭಯೇನ ಯದ್ಯದೋಕ್ಥ್ಯಮುಕ್ಥಾರ್ಹಂ ಸ್ತೋತ್ರಯೋಗ್ಯಮಕೃಣ್ವತ । ಅಕುರ್ವನ್ । ಕೀದೃಶಂ ಬೃಹತ್ಸಾಮ । ಸ್ವಶ್ಚಂದ್ರಂ । ಸ್ವಕೀಯೇನ ಚಂದ್ರೇಣಾಹ್ಲಾದಕೇನ ತೇಜಸಾ ಯುಕ್ತಂ ಅಮವತ್ । ಅಮತಿ ಶತ್ರೂನ್ ರುಜತ್ಯನೇನೇತ್ಯಮೋ ಬಲಂ । ತದುಕ್ತಂ । ದಿವಃ ಸ್ವರ್ಗಸ್ಯ ರೋಹಣಮಾರೋಹಣಹೇತುಭೂತಂ । ಏವಂವಿಧೇನ ಸ್ತೋತ್ರೇಣ ವೃತ್ರಾದ್ಭೀತಾ ಇಂದ್ರ ಇಂದ್ರಮಸ್ತೋಷತೇತ್ಯರ್ಥಃ । ಯದ್ಯದಾ ಮಾನುಷಪ್ರಧನಾಃ ಪ್ರಕೀರ್ಣಾನ್ಯಸ್ಮಿನ್ಧನಾನಿ ಭವಂತೀತಿ ನೈರುಕ್ತವ್ಯುತ್ಪತ್ತ್ಯಾ ಪ್ರಧನಮಿತಿ ಸಂಗ್ರಾಮನಾಮ । ನಿ. ೯-೨೩ ಮನುಷ್ಯಹಿತಸಂಗ್ರಾಮಾ ಊತಯಃ ಸ್ವರ್ದ್ಯುಲೋಕಸ್ಯ ರಕ್ಷಿತಾರೋ ಮರುತೋ ನೃಷಾಚಃ ಪ್ರಾಣರೂಪೇಣ ನೄನ್ಸೇವಮಾನಾ ಭೂತ್ವೇಂದ್ರಮಪಿ ತೇನೈವ ರೂಪೇಣಾನ್ವಮದನ್ । ಆನುಪೂರ್ವ್ಯೇಣ ಹರ್ಷಂ ಪ್ರಾಪಯನ್ । ತದಾನೀಂ ಸ ಇಂದ್ರೋ ವೃತ್ರವಧಂ ಪ್ರತ್ಯುದ್ಯುಕ್ತೋ ಬಭೂವೇತಿ ಶೇಷಃ ॥ ಸ್ವಶ್ಚಂದ್ರಂ । ಸ್ವಕೀಯಂ ಚಂದ್ರಂ ಯಸ್ಯ । ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರೇ । ಪಾ. ೬-೧-೧೫೧ । ಇತಿ ಸುಟ್ । ಛಂದಸ್ತ್ವೇನ ಶಕಾರಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಭಿಯಸಾ । ಭೀಶಬ್ದಸ್ಯ ತೃತೀಯೈಕವಚನೇ ಛಾಂದಸೋಽಸುಗಾಗಮಃ । ತಸ್ಯೋದಾತ್ತತ್ವಂ ಚ । ನೃಷಾಚಃ । ಷಚ ಸಮವಾಯೇ । ಅಯಂ ಸೇವನಾರ್ಥ ಇತಿ ಯಾಸ್ಕಃ । ವಹಶ್ಚ । ಪಾ. ೩-೨-೬೪ । ಇತ್ಯತ್ರ ಚಶಬ್ದಸ್ಯಾನುಕ್ತಸಮುಚ್ಚಯಾರ್ಥತ್ವಾದಸ್ಮಾದಪಿ ಣ್ವಿಪ್ರತ್ಯಯಃ । ಅಮದನ್ । ಮದೀ ಹರ್ಷೇ ಣಿಚಿ ಮದೀ ಹರ್ಷಗ್ಲಪನಯೋರಿತಿ ಘಟಾದಿಷು ಪಾಠಾನ್ಮಿತ್ತ್ವೇ ಸತಿ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ಲಙಿ ಛಂದಸ್ಯುಭಯಥೇತಿ ಶಪ ಆರ್ಧಧಾತುಕತ್ವಾತ್ ಣೇರನಿಟೀತಿ ಣಿಲೋಪಃ ॥ ೯ ॥

॥ ಪ್ರತಿಪದಾರ್ಥ ॥

ಭಿಯಸಾ—(ವೃತ್ರಾಸುರನ) ಭಯದಿಂದ । ಯತ್—ಯಾವಾಗ । (ಸ್ತೋತಾರಃ)—ಯಜ್ಞಕರ್ತರು (ಯಜಮಾನರು) । ಸ್ವಶ್ಚಂದ್ರಂ—ಆಹ್ಲಾದಕರವಾದ ತನ್ನ ತೇಜಸ್ಸಿನಿಂದ ಕೂಡಿದುದೂ । ಅಮವತ್—ಬಲಯುಕ್ತವಾದುದೂ । ದಿವಃ—ಸ್ವರ್ಗಕ್ಕೆ । ರೋಹಣಂ—ಹತ್ತಲು ಹೇತುಭೂತವಾದುದೂ ಆದ । ಬೃಹತ್—ಬೃಹತ್ ಸಾಮವೆಂಬ ಸ್ತೋತ್ರವನ್ನು । ಉಕ್ಥ್ಯಂ—ಸ್ತೋತ್ರಯೋಗ್ಯವನ್ನಾಗಿ । ಅಕೃಣ್ವತ—ಮಾಡಿದರೋ, ।



CC-0. Jangamwadi Math Collection. Digitized by eGangotri

ಯತ್—ಯಾವಾಗ | ಮಾನುಷಪ್ರಧನಾಃ—ಮನುಷ್ಯರಿಗಾಗಿ ಯುದ್ಧಮಾಡುವವರೂ | ಊತಯಃ ಸ್ವಃ—ದ್ಯುಲೋಕದ ರಕ್ಷಕರೂ ಆದ | ಮರುತಃ—ಮರುತ್ತುಗಳು | ನೃಷಾಚಃ—(ಪ್ರಾಣರೂಪದಿಂದ) ಮಾನವರನ್ನು ಸೇವಿಸುವವರಾಗಿ | ಇಂದ್ರಂ—ಇಂದ್ರನನ್ನೂ (ಕೂಡ ಅದೇ ರೂಪದಿಂದ) | ಅನು ಅಮದನ್—ಉತ್ತೇಜನಗೊಳಿಸಿದರು (ಆಗ ಇಂದ್ರನು ವೃತ್ರವಧಕ್ಕೆ ಉದ್ಯುಕ್ತನಾದನು) |

‖ ಭಾವಾರ್ಥ ‖

ವೃತ್ರಾಸುರನಿಂದ ಭಯಪಟ್ಟ ಯಜ್ಞಕರ್ತರು ಇಂದ್ರನ ಸಹಾಯವನ್ನಪೇಕ್ಷಿಸಿ ಆಹ್ಲಾದಕರವಾದ ತನ್ನ ತೇಜಸ್ಸಿನಿಂದ ಕೂಡಿದುದೂ, ಬಲಯುಕ್ತವಾದುದೂ, ಸ್ವರ್ಗಕ್ಕೆ ಹತ್ತಲು ಹೇತುಭೂತವಾದುದೂ ಸ್ತೋತ್ರಯೋಗ್ಯವೂ ಆದ ಬೃಹತ್ಸಾಮವನ್ನು ಗಾನಮಾಡಿದರು. ಆಗ ಮಾನವರಿಗಾಗಿ ಯುದ್ಧಮಾಡುವವರೂ ದ್ಯುಲೋಕದ ರಕ್ಷಕರೂ ಆದ ಮರುತ್ತುಗಳು ಮಾನವರನ್ನು ಸೇವಿಸುವವರಾಗಿ ಇಂದ್ರನನ್ನೂ ಉತ್ತೇಜನಗೊಳಿಸಿದರು. ಆಗ ಇಂದ್ರನು ವೃತ್ರವಧಕ್ಕೆ ಉದ್ಯುಕ್ತನಾದನು.

## English Translation.

Through fear of Vritra, your worshippers composed the suitable hymn of the Brihat Saman which is self-illuminating, strengthening and forming the staircase to heaven; on which his allies the Maruts, fighting for men (gaurdians) of heaven and protectors of mankind, excited Indra (to destroy Vritra).

‖ ವಿಶೇಷ ವಿಷಯಗಳು ‖

ಬೃಹತ್—ಬೃಹಚ್ಛಬ್ದಕ್ಕೆ ಕೇವಲ ಬೃಹತ್ಸಾಮ ಎಂಬರ್ಥವಿದ್ದರೂ ಲಕ್ಷಣದಿಂದ ಬೃಹತ್ಸಾಮವನ್ನು ಪಠಿಸುವ ಯಜಮಾನರು ಎಂದರ್ಥವನ್ನು ಹೇಳಬೇಕು.

ಸ್ವಕ್ಷತ್ರಂ ಅಮವತ್—ಆ ಬೃಹತ್ಸಾಮವು ಸ್ವಕೀಯವಾದ ಮತ್ತು ಆಹ್ಲಾದಕರವಾದ ಚಂದ್ರನಂತಿರುವ ತೇಜಸ್ಸಿನಿಂದ ಕೂಡಿದುದು. ಮತ್ತು ಶತ್ರುಗಳನ್ನು ಧ್ವಂಸಮಾಡುವ ಶಕ್ತಿಯುಳ್ಳದ್ದು.

ದಿವಃ ರೋಹಣಂ—ಮತ್ತು ಸ್ವರ್ಗವನ್ನು ಹೊಂದಿಸುವ ಶಕ್ತಿಯುಳ್ಳದ್ದು. ಇಂತಹ ಬೃಹತ್ಸಾಮಸ್ತೋತ್ರವನ್ನು ಯಜಮಾನರಿಗೆ ವೃತ್ರಾಸುರನಿಂದ ಉಂಟಾದ ಭಯವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಜಪಿಸಿದರು.

ಮಾನುಷಪ್ರಧನಾಃ—ಮನುಷ್ಯರಿಗೆ ಹಿತವಾಗುವ ಯುದ್ಧ ಎಂದರ್ಥ. ಪ್ರಧನ ಶಬ್ದಕ್ಕೆ ಪ್ರಕೀರ್ಣಾನ್ಯಸ್ಮಿನ್ ಧನಾನಿ ಭವಂತಿ (ನಿರು. ೯-೨೩) ನಿರುಕ್ತಕಾರರು ಯುದ್ಧವೆಂದು ಅರ್ಥಮಾಡಿರುವರು.

ನೃಷಾಚಃ—ಪ್ರಾಣರೂಪೇಣ ನೄನ್ ಸೇವಮಾನಾ ಭೂತ್ವಾ ಮರುದ್ದೇವತೆಗಳು ವೃತ್ರಾಸುರವಧಕಾಲದಲ್ಲಿ ಮನುಷ್ಯರನ್ನು ತಾವು ಪ್ರಾಣವಾಯುರೂಪದಲ್ಲಿದ್ದುಕೊಂಡು ಕಾಪಾಡಿದರು. ಆದ್ದರಿಂದಲೇ ಮರುತ್ತುಗಳಿಗೆ ನೃಷಾಚರೆಂದು ಹೆಸರಾಯಿತು. ಷಚ ಸಮವಾಯೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಸೇವನಾರ್ಥಕವೆಂದು ಅಯಂ ಸೇವನಾರ್ಥಃ ಎಂದು ಯಾಸ್ಕರು ಹೇಳಿದ್ದಾರೆ.



CC-0. Jangamwadi Math Collection. Digitized by eGangotri

‖ ವ್ಯಾಕರಣಪ್ರಕ್ರಿಯಾ ‖

ಸ್ವಶ್ಚಂದ್ರಮ್—ಸ್ವಕೀಯಂ ಚಂದ್ರಂ ಯಸ್ಯ ತತ್. ಸ್ವಶ್ಚಂದ್ರಮ್ । ಹ್ರಸ್ವಾಚ್ಚಂದ್ರೋತ್ತರ-
ಪದೇ ಮಂತ್ರೇ (ಪಾ. ಸೂ. ೬-೧-೧೫೧) ಎಂಬುದರಿಂದ ಸುಟ್. ಸ್ವಸ್ ಚಂದ್ರ ಎಂದಿರುವಾಗ ಸ್ತೋಃಶ್ಚು-
ನಾಶ್ಚುಃ ಎಂಬುದರಿಂದ ಚಕಾರ ಪರದಲ್ಲಿರುವುದರಿಂದ ಸಕಾರಕ್ಕೆ ಶ್ಚುತ್ವದಿಂದ ಶಕಾರಾದೇಶ. ಬಹುವ್ರೀಹಿಸಮಾಸ
ವಾದುದರಿಂದ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ.

ಅಮವತ್—ಅಮಃ ಅಸ್ಯ ಅಸ್ತಿ ಇತಿ ಅಮವತ್. ತದಸ್ಯಾಸ್ತ್ಯಸ್ಮಿನ್—ಸೂತ್ರದಿಂದ ಮತುಪ್.
ಅಕಾರದ ಪರದಲ್ಲಿರುವುದರಿಂದ ಮಾದುಪಧಾಯಾಶ್ಚ— ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ.

ಅಕೃಣ್ವತ—ಕೃವಿ ಹಿಂಸಾಕರಣಯೋಶ್ಚ ಧಾತು, ಸ್ವಾದಿ. ಇತ್ತಾದುದರಿಂದ ನುಮಾಗಮ. ವ್ಯತ್ಯಯ
ದಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಯದ್ವೃತ್ತಾನ್ನಿತ್ಯಂ ಎಂಬುದರಿಂದ ಯಚ್ಛಬ್ದ ಸಂಬಂಧವಿರುವುದರಿಂದ
ನಿಘಾತಸ್ವರ ಪ್ರತಿಷೇಧ.

ಭಿಯಸಾ—ಭೀ ಶಬ್ದಕ್ಕೆ ತೃತೀಯೈಕವಚನವು ಪರದಲ್ಲಿರುವಾಗ ಛಾಂದಸವಾಗಿ ಅಸುಕಾಗಮ ಬರು
ತ್ತದೆ. ಅದು ಉದಾತ್ತವಾಗುತ್ತದೆ. ಅಸ್ ಪರವಾದಾಗ ಈಕಾರಕ್ಕೆ ಇಯಙಾದೇಶ. ಭಿಯಸಾ ಎಂದು
ರೂಪವಾಗುತ್ತದೆ.

ದಿವಃ—ಊಡಿದಂಪದಾದಿ—ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ನೃಷಾಚಃ—ಷಚ ಸಮವಾಯೇ ಧಾತು. ಇದು ಸೇವನಾರ್ಥದಲ್ಲಿ ಇದೆಯೆಂದು ಯಾಸ್ಕರ ಮತ.
ವಹಶ್ಚ (ಪಾ. ಸೂ. ೩-೨-೬೪) ಎಂಬಲ್ಲಿ ಚಶಬ್ದವು ಅನುಕ್ತಸಮುಚ್ಚಾಯಕವಾದುದರಿಂದ ಇದರ ಮೇಲೂ
ಣ್ವಿ ಪ್ರತ್ಯಯ ಬರುತ್ತದೆ. ಣಿತ್ತಾದುದರಿಂದ ಅತಉಪಧಾಯಾಃ ಎಂಬುದರಿಂದ ಅಕಾರೋಪಧೆಗೆ ವೃದ್ಧಿ.
ವೇರಪೃಕ್ತಸ್ಯ ಎಂಬುದರಿಂದ ವಕಾರಕ್ಕೆ ಲೋಪ. ಪ್ರಥಮಾಬಹುವಚನದ ರೂಪ. ಗತಿಕಾರಕೋಪ-
ಪದಾತ್—ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಹೇತುಮತಿಚ ಎಂಬುದ
ಅಮದನ್—ಮದೀ ಹರ್ಷೇ ಧಾತು. ಪ್ರೇರಣಾರ್ಥ ತೋರುವುದರಿಂದ ಘಟಾದಯೋ
ರಿಂದ ಣಿಚ್. ಇದು ಮದೀ ಹರ್ಷಗ್ಲಪನಯೋಃ ಎಂದು ಘಟಾದಿಯಲ್ಲಿ ಪಠಿತವಾದುದರಿಂದ ಉಪಧಾವೃದ್ಧಿ
ಮಿತಃ ಎಂಬ ವಚನದಿಂದ ಮಿತ್ ಸಂಜ್ಞೆಯನ್ನು ಹೊಂದುತ್ತದೆ. ಆಗ ಣಿಚ್ ನಿಮಿತ್ತಕವಾಗಿ ಘೋಂತಃ
ಬಂದರೂ ಮಿತಾಂಹ್ರಸ್ವಃ (ಪಾ. ಸೂ. ೬-೪-೯೨) ಎಂಬುದರಿಂದ ಹ್ರಸ್ವ ಬರುತ್ತದೆ. ಲಙಿನ ಝಿಗೆ ಝೋಂತಃ
ಎಂಬುದರಿಂದ ಅಂತಾದೇಶ ಬಂದಾಗ ಇತಶ್ಚ ಎಂಬುದರಿಂದ ಇಕಾರಲೋಪ. ಛಂದಸ್ಯುಭಯಥಾ (ಪಾ.ಸೂ.
೩-೪-೧೧೭) ಎಂಬುದರಿಂದ ಶಪಿಗೆ ಆರ್ಧಧಾತುಕಸಂಜ್ಞೆ ಬರುವುದರಿಂದ ಣೇರನಿಟಿ ಎಂಬುದರಿಂದ ಅದು ಪರದ
ಲ್ಲಿರುವಾಗ ಣಿ ಲೋಪ ಬರುತ್ತದೆ. ಸಂಯೋಗಾಂತಲೋಪದಿಂದ ಪ್ರತ್ಯಯ ತಕಾರಲೋಪ. ಅಮದನ್
ಎಂದು ರೂಪವಾಗುತ್ತದೆ. ವ್ಯವಹಿತವಾದರೂ ಯಚ್ಛಬ್ದಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬು
ದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ದ್ಯೌಶ್ಚಿದಸ್ಯಾಮವಾ ಅಹೇಃ ಸ್ವನಾದಯೋಯವೀದ್ಭಿಯಸಾ ವಜ್ರ ಇಂದ್ರ ತೇ
ವೃತ್ರಸ್ಯ ಯದ್ಬದ್ಬಧಾನಸ್ಯ ರೋದಸೀ ಮದೇ ಸುತಸ್ಯ ಶವಸಾಭಿನಚ್ಛಿರಃ ೧೦

॥ ಪದಪಾಠಃ ॥

ದ್ಯೌಃ । ಚಿತ್ । ಅಸ್ಯ । ಅಮಽವಾನ್ । ಅಹೇಃ । ಸ್ವನಾತ್ । ಅಯೋಯವೀತ್ ।
ಭಿಯಸಾ । ವಜ್ರಃ । ಇಂದ್ರ । ತೇ ।
ವೃತ್ರಸ್ಯ । ಯತ್ । ಬದ್ಬಧಾನಸ್ಯ । ರೋದಸೀ ಇತಿ । ಮದೇ । ಸುತಸ್ಯ । ಶವಸಾ ।
ಅಭಿನತ್ । ಶಿರಃ ॥ ೧೦ ॥

॥ ಸಾಯಣಭಾಷ್ಯಂ ॥

ಅಮವಾನ್ಬಲವಾನ್ದ್ಯೌಶ್ಚಿತ್ ದ್ಯುಲೋಕೋಽಪ್ಯಸ್ಯಾಹೇರ್ವೃತ್ರಸ್ಯ ಸ್ವನಾಚ್ಛಬ್ದಾದ್ಭಿಯಸಾ ಭಯೇನಾಯೋಯವೀತ್ । ಅತ್ಯರ್ಥಂ ಪೃಥಗ್ಭೂತ ಆಸೀತ್ । ಅಕಂಪತೇತ್ಯರ್ಥಃ । ಹೇ ಇಂದ್ರ ತೇ ತವ ಸುತಸ್ಯಾಭಿಷವಾದಿಭಿಃ ಸಂಸ್ಕೃತಸ್ಯ ಸೋಮಸ್ಯ ಪಾನೇನ ಮದೇ ಹರ್ಷೇ ಜಾತೇ ಸತಿ ತ್ವದೀಯೋ ವಜ್ರೋ ರೋದಸೀ ದ್ಯಾವಾಪೃಥಿವ್ಯೌ ಬದ್ಬಧಾನಸ್ಯ ಬಾಧನಶೀಲಸ್ಯ ವೃತ್ರಸ್ಯ ಶಿರೋ ಯದ್ಯದಾ ಶವಸಾ ಬಲೇನಾಭಿನತ್ । ಅಚ್ಛಿನತ್ । ತದಾನೀಂ ದ್ಯುಲೋಕೋ ಭಯರಾಹಿತ್ಯೇನ ನಿಶ್ಚಲೋ ಬಭೂವೇತಿ ಶೇಷಃ ॥ ಅಯೋಯವೀತ್ । ಯು ಮಿಶ್ರಣಾಮಿಶ್ರಣಯೋಃ । ಅಸ್ಮಾದ್ಯಙ್ಲುಗಂತಾಲ್ಲಙಿ ಯಙೋ ವಾ । ಪಾ. ೭-೩-೯೪ । ಇತ್ಯಪೃಕ್ತಪ್ರತ್ಯಯಸ್ಯೇಡಾಗಮಃ । ಅಡಾಗಮ ಉದಾತ್ತಃ । ಬದ್ಬಧಾನಸ್ಯ । ಬಾಧೃ ವಿಲೋಡನೇ । ತಾಚ್ಛೀಲಕೇ ಚಾನಶಿ ಬಹುಲಂ ಛಂದಸೀತಿ ಶಪಃ ಶ್ಲುಃ । ಹಲಾದಿಶೇಷಾಭಾವೋ ಧಾತೋರ್ಹ್ರಸ್ವತ್ವಂ ಚ ಛಾಂದಸತ್ವಾತ್ । ಚಿತ ಇತ್ಯಂತೋದಾತ್ತತ್ವಂ ॥ ೧೦ ॥

॥ ಪ್ರತಿಪದಾರ್ಥ ॥

ಅಮವಾನ್—ಶಕ್ತಿಯುತವಾದ । ದ್ಯೌಶ್ಚಿತ್—ದ್ಯುಲೋಕವೂ ಕೂಡ । ಅಸ್ಯ ಅಹೇಃ—ಈ ವೃತ್ರಾಸುರನ । ಸ್ವನಾತ್—(ಮೊರೆಯುವ) ಶಬ್ದದಿಂದ । ಭಿಯಸಾ—ಭಯಗೊಂಡು । ಅಯೋಯವೀತ್—ಸೀಳಿಹೋಯಿತು । ಇಂದ್ರ—ಎಲೈ ಇಂದ್ರನೇ । ತೇ—ನಿನಗೆ । ಸುತಸ್ಯ—ಹಿಂಡಿ ಸಂಸ್ಕೃತವಾದ ಸೋಮರಸದ (ಪಾನದಿಂದ) । ಮದೇ—ಹರ್ಷವುಂಟಾದಾಗ । ವಜ್ರಃ—(ನಿನ್ನ) ವಜ್ರಾಯುಧವು । ರೋದಸೀ—ಪೃಥಿವ್ಯಂತ



CC-0. Jangamwadi Math Collection. Digitized by eGangotri

ರಿಕ್ಷಗಳೆರಡನ್ನೂ । ಬದ್‌ಬಧಾನಸ್ಯ—ಬಾಧಿಸುವ ಸ್ವಭಾವವುಳ್ಳ । ವೃತ್ರಸ್ಯ—ವೃತ್ರಾಸುರನ । ಶಿರಃ—ತಲೆಯನ್ನು । ಯತ್—ಯಾವಾಗ । ಶವಸಾ—ಶಕ್ತಿಯಿಂದ । ಅಭಿನತ್—ಸೀಳಿತೊ (ಆಗ ಅಂತರಿಕ್ಷದ ಕಂಪನವು ನಿಂತಿತು) ।

॥ ಭಾವಾರ್ಥ ॥

ಈ ವೃತ್ರಾಸುರನ ಮೊರೆಯುವ ಶಬ್ದದಿಂದ ಬಲಯುತವಾದ ಸ್ವರ್ಗಲೋಕವೂ ಕೂಡ ಭಯದಿಂದ ನಡುಗಿ ಸೀಳಿಹೋಯಿತು. ಆದರೆ, ಎಲೈ ಇಂದ್ರನೇ, ಹಿಂಡಿ ಸಂಸ್ಕೃತವಾದ ಸೋಮರಸದ ಪಾನದಿಂದ ನಿನಗೆ ಹರ್ಷವುಂಟಾದಾಗ ನಿನ್ನ ಬಲವಾದ ವಜ್ರಾಯುಧವು ಪೃಥಿವ್ಯಂತರಿಕ್ಷಗಳೆರಡನ್ನೂ ಬಾಧಿಸುವ ವೃತ್ರನ ತಲೆಯನ್ನು ಯಾವಾಗ ಸೀಳಿತೋ ಆಗ ಸ್ವರ್ಗದ ಕಂಪನವು ನಿಂತಿತು.

## English Translation.

The strong heaven was rent asunder with fear at the clamour of that Ahi (Vritra) when you, Indra, delighted by drinking the effused soma-juice struck with your thunderbolt vigorously the head of Vritra, the obstructer of heaven and earth.

### ವಿಶೇಷ ವಿಷಯಗಳು

ಅತ್ರೇದಮುಕ್ತಂ ಭವತಿ—ಯದಾ ದ್ಯಾವಾಪೃಥಿವ್ಯೋರಪಿ ಉಪದ್ರವಕಾರಿಣಂ ವೃತ್ರಮಿಂದ್ರೋಽವಧೀತ್ತದಾ ಪರಮಮಹಿಮಯುಕ್ತೋಽಪಿ ದ್ಯುಲೋಕೋಽಪಿ ಭಯೇನ ಚಕಂಪೇ । ತಥಾ ಮಹಾಬಲಯುಕ್ತಮಪೀಂದ್ರಸ್ಯ ವಜ್ರಂ ಸ್ವಕೃತಾದ್ವೃತ್ರಹನನಾದನಂತರಂ ದ್ಯುಲೋಕವದೇವ ಚಕಂಪೇ ॥ ಮುಖ್ಯಾಭಿಪ್ರಾಯವೇನೆಂದರೆ—ಸ್ವರ್ಗಲೋಕ ಭೂಲೋಕಗಳಿಗೆ ತೊಂದರೆಯನ್ನುಂಟುಮಾಡುತ್ತಿದ್ದ ವೃತ್ರನನ್ನು ಇಂದ್ರನು ಸಂಹಾರಮಾಡಿದಾಗ ಮಹಾಪ್ರಭಾವಯುಕ್ತವಾದ ಸ್ವರ್ಗಲೋಕವೂ ಸಹ ಭಯದಿಂದ ನಡಗುವಂತಾಯಿತು. ಹಾಗೆಯೇ ಇಂದ್ರನ ವಜ್ರಾಯುಧವೂ ಸಹ ಮಹಾಶಕ್ತಿಯುಳ್ಳದ್ದಾಗಿದ್ದರೂ ಸ್ವರ್ಗಲೋಕವು ಕಂಪಿಸಿದಂತೆ ತಾನೂ ಕಂಪಿಸಿತು ಎಂಬ ಅರ್ಥವನ್ನೂ ಹೇಳಬಹುದು.

ದ್ಯೌಶ್ಚಿತ್—ಅಂತರಿಕ್ಷವೂ ಕೂಡ. ಇಲ್ಲಿ ಚಿಚ್ಛಬ್ದಕ್ಕೆ ಅಪಿ ಶಬ್ದಾರ್ಥವಿದೆ.

ಅಯೋಯವೀತ್—ಯು ಮಿಶ್ರಣಾಮಿಶ್ರಣಯೋಃ ಎಂಬ ಧಾತುವಿನ ಯಙ್ ಲುಗಂತರೂಪವಾದ ಈ ಪದಕ್ಕೆ, ಇಲ್ಲಿ ನಡುಗಿಸಿತು ಅಥವಾ ಪ್ರತ್ಯೇಕಗೊಳಿಸಿತು ಎಂದರ್ಥವು.

ಬದ್ಬಧಾನಸ್ಯ—ಬಾಧೃ ವಿಲೋಡನೇ ಎಂಬ ಧಾತುವಿಗೆ ಚಾನಶ್ ಪ್ರತ್ಯಯ ಸೇರಿ, ಬಾಧಿಸುವ ಸ್ವಭಾವದವನು ಎಂದರ್ಥವಾಗುತ್ತದೆ.



CC-0. Jangamwadi Math Collection. Digitized by eGangotri

**ಸುತಸ್ಯ**—ಅಭಿಷವವ ಮೊದಲಾದ ಯಾಜ್ಞಿಕ ಸಂಸ್ಕಾರಗಳಿಂದ ಸಂಸ್ಕೃತವಾದ ಸೋಮಕ್ಕೆ ಸುತ ವೆಂಬು ಹೆಸರಾದರೂ, ಇಲ್ಲಿ ಪ್ರಕರಣವನ್ನನುಸರಿಸಿ ಸೋಮಪಾನದಿಂದ ಎಂದರ್ಥವನ್ನು ಹೇಳಬೇಕಾಗುವುದು.

|| ವ್ಯಾಕರಣಪ್ರಕ್ರಿಯಾ ||

**ಆಯೋಯವೀತ್**—ಯು ಮಿಶ್ರಣಾಮಿಶ್ರಣಯೋಃ ಧಾತು ಅದಾದಿ. ಇದಕ್ಕೆ ಅತಿಶಯಾರ್ಥ ತೋರುವಾಗ ಯಙ್. ಅದಕ್ಕೆ **ಯಙೋಽಚಿಚ** ಎಂಬುದರಿಂದ ಲುಕ್. ಇದಕ್ಕೆ ಲಙ್ ಪ್ರಥಮಪುರುಷ ಏಕ ವಚನ ಬಂದಾಗ ಇತಶ್ಚ ಎಂಬುದರಿಂದ ಇಕಾರಲೋಪ. **ಸನ್ಯಙೋಃ** ಎಂಬುದರಿಂದ ಧಾತುವಿಗೆ ಗುಣ. **ಗುಣೋಯಙ್ಲುಕೋಃ** ಎಂಬುದರಿಂದ ಅಭ್ಯಾಸಕ್ಕೆ ಗುಣ. **ಯಙೋವಾ** (ಪಾ. ಸೂ. ೭-೩-೯೪) ಎಂಬು ದರಿಂದ ಅಪೃಕ್ತ ಸಂಜ್ಞೆಯುಳ್ಳ ತ್ ಎಂಬುದಕ್ಕೆ ಈಡಾಗಮ. ಶಪ್ ಪರದಲ್ಲಿರುವಾಗ ಸಾರ್ವಧಾತುಕನಿಬಂಧನ ವಾಗಿ ಧಾತುವಿಗೆ ಗುಣ. ಅವಾದೇಶ. ಅಂಗಕ್ಕೆ ಲಙ್ ನಿಮಿತ್ತವಾಗಿ ಅಡಾಗಮ. ಅಯೋಯವೀತ್ ಎಂದು ರೂಪವಾಗುತ್ತದೆ. ಪಾದದ ಆದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವೆಂಬುದ ರಿಂದ ಆದ್ಯುದಾತ್ತವಾದ ಪದವಾಗುತ್ತದೆ.

**ಇಂದ್ರ**—**ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ಆಮಂತ್ರಿತ ನಿಘಾತಸ್ವರ ಬರುತ್ತದೆ.

ಬದ್ಬಧಾನಸ್ಯ ಬಾಧೃ ವಿಲೋಡನೇ ಧಾತು. **ತಾಚ್ಛೀಲ್ಯವಯೋವಚನೇಷು ಚಾನಶ್** (ಪಾ. ಸೂ. ೩-೨-೧೨೯) ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಛಾಂದಸವಾಗಿ ಹಲಾದಿಃಶೇಷಃ ಸೂತ್ರಕ್ಕೆ ಇಲ್ಲಿ ಪ್ರವೃತ್ತಿ ಬರುವುದಿಲ್ಲ. **ಹ್ರಸ್ವಃ** ಎಂಬುದರಿಂದ ಅಭ್ಯಾಸದ ಅನಂತ್ಯವಾದ ಅಚಿಗೆ ಹ್ರಸ್ವ. **ಝಲಾಂಜಶ್‌ಝಶಿ** ಎಂಬುದರಿಂದ ಧಕಾರಕ್ಕೆ ಜಸ್ತ್ವದಿಂದ ದಕಾರಾದೇಶ. ಬದ್ಬಧಾನ ಶಬ್ದ ವಾಗುತ್ತದೆ. ಷಷ್ಠೀಏಕವಚನಾಂತರೂಪ. ಚಾನಶ್ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತ ಸ್ವರ ಬರುತ್ತದೆ.

**ಅಭಿನತ್**—ಭಿದಿರ್ ವಿದಾರಣೇ ಧಾತು. ರುಧಾದಿ. ಲಙ್ ಪ್ರಥಮಪುರುಷ ಏಕವಚನದ ತಿಯ ಇಕಾರಕ್ಕೆ ಇತಶ್ಚ ಎಂಬುದರಿಂದ ಲೋಪ. **ರುಧಾದಿಭ್ಯಃ ಶ್ನಮ್** (ಪಾ. ಸೂ. ೩-೧-೭೮) ಎಂಬುದರಿಂದ ಶ್ನಮ್. ವಿಕರಣ ಮಿತ್ತಾದುದರಿಂದ **ಮಿದಚೋಂತ್ಯಾತ್‌ಪರಃ** ಎಂಬುದರಿಂದ ಅಂತ್ಯಾಚಿನಪರವಾಗಿ ಬರು ತ್ತದೆ. ಅಂಗಕ್ಕೆ ಅಡಾಗಮ. ಅಭಿನದ್‌ತ್ ಎಂದಿರುವಾಗ ಸಂಯೋಗಾಂತಲೋಪ ಬಂದರೆ ಅಭಿನತ್ ಎಂದು ರೂಪವಾಗುತ್ತದೆ. ವ್ಯವಹಿತವಾಗಿ ಯಚ್ಛಬ್ದ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಪ್ರತಿಷೇಧ ಬರುವುದರಿಂದ ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.





CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಯದಿನ್ನ್ವಿಂದ್ರ ಪೃಥಿವೀ ದಶಭುಜಿರಹಾನಿ ವಿಶ್ವಾ ತತನಂತ ಕೃಷ್ಟಯಃ ।
ಅತ್ರಾಹ ತೇ ಮಘವನ್ವಿಶ್ರುತಂ ಸಹೋ ದ್ಯಾಮನು ಶವಸಾ ಬರ್ಹಣಾ
ಭುವತ್ ॥ ೧೧ ॥

॥ ಪದಪಾಠಃ ॥

ಯತ್ । ಇತ್ । ನು । ಇಂದ್ರ । ಪೃಥಿವೀ । ದಶಭುಜಿಃ । ಅಹಾನಿ । ವಿಶ್ವಾ ।
ತತನಂತ । ಕೃಷ್ಟಯಃ ।
ಅತ್ರ । ಅಹ । ತೇ । ಮಘವನ್ । ವಿಶ್ರುತಂ । ಸಹಃ । ದ್ಯಾಂ । ಅನು । ಶವಸಾ ।
ಬರ್ಹಣಾ । ಭುವತ್ ॥ ೧೧ ॥

॥ ಸಾಯಣಭಾಷ್ಯಂ ॥

ಯದಿನ್ನು ಯದಾ ಖಲು ಪೃಥಿವೀ ದಶಭುಜಿರ್ದಶಗುಣಿತಾ ಭವೇತ್ । ಯದಿ ವಾ ಕೃಷ್ಟಯಃ ಧನವರ್ಜೀ ಮನುಷ್ಯಾ ವಿಶ್ವಾ ಸರ್ವಾಣ್ಯಹಾನಿ ತತನಂತ । ವಿಸ್ತಾರಯೇಯುಃ । ಹೇ ಮಘವನ್ । ಧನವನ್ನಿಂದ್ರ ಅತ್ರಾಹ ಅತ್ರೈವ ಪೂರ್ವೋಕ್ತೇಷ್ವೇವ ದೇಶಕಾಲಕರ್ತೃಕೇಷು ತೇ ತ್ವದೀಯಂ ಸಹೋ ವೃತ್ರವಧಾದಿಕಾರಣಂ ಬಲಂ ವಿಶ್ರುತಂ ವಿಖ್ಯಾತಂ ಪ್ರಸಿದ್ಧಂ । ಶವಸಾ ತ್ವದೀಯೇನ ಬಲೇನ ಕೃತಾ ಬರ್ಹಣಾ ವೃತ್ರಾದೇರ್ವಧರೂಪಾ ಕ್ರಿಯಾ ದ್ಯಾಮನು ಭುವತ್ । ಅನುಭವತಿ । ಯಥಾ ದ್ಯೌರ್ಮಹತೀ ತಥಾ ತ್ವತ್ಕೃತಂ ವೃತ್ರಾದೇರ್ಹಿಂಸನಮಪಿ ಮಹದಿತಿ ಭಾವಃ ॥ ತತನಂತ । ತನು ವಿಸ್ತಾರೇ । ಸ್ವರಿತೇತ್ತ್ವಾದಾತ್ಮನೇ ಪದಂ । ಲಿಙರ್ಥೇ ಲಙ್ಪ್ರತ್ಯಯೇ ಪ್ರಾಪ್ತೇ ವ್ಯತ್ಯಯೇನ ಶಪ್ । ಛಾಂದಸೋ ದ್ವಿರ್ಭಾವಃ । ಯದ್ವಾ । ಬಹುಲಂ ಛಂದಸೀತ್ಯುಪ್ರತ್ಯಯಸ್ಯ ಶ್ಲೌ ಸತಿ ಪುನರಪಿ ವ್ಯತ್ಯಯೇನ ಶಪ್ । ಬಹುಲಂ ಶಪಃ ಪಿತ್ತ್ವಾದನುದಾತ್ತತ್ವಂ । ತಿಙಶ್ಚ ಲಸಾರ್ವಧಾತುಕಸ್ವರೇಣ ಧಾತುಸ್ವರಃ ಶಿಷ್ಯತೇ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಯದ್ವೃತ್ತಯೋಗಾದನಿಘಾತಃ । ವಿಶ್ರುತಂ । ಶ್ರು ಶ್ರವಣೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ಬರ್ಹಣಾ । ವರ್ಹ ವಲ್ಹ ಪರಿಭಾಷಣಹಿಂಸಾದಾನೇಷು । ಅಸ್ಮಾದೌಣಾದಿಕಃ ಕ್ಯುಪ್ರತ್ಯಯಃ । ಬವಯೋರಭೇದ ಇತಿ ವಕಾರಸ್ಯ ಬತ್ವಂ । ಲಿತ್ಪ್ರತ್ಯಯಸ್ವರಃ । ನಿಬರ್ಹಯತೀತಿ ವಧಕರ್ಮಸು ಪಠಿತಂ ಚ । ಭುವತ್ । ಭೂ ಸತ್ತಾಯಾಂ । ಲೇಟ್ಯ-





CC-0. Jangamwadi Math Collection. Digitized by eGangotri

ಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋ-ಸ್ತಿಙೀತಿ ಗುಣಪ್ರತಿಷೇಧ ಉವಙಾದೇಶಃ ॥ ೧೧ ॥

॥ ಪ್ರತಿಪದಾರ್ಥ ॥

ಯದಿನ್ನು—ಒಂದು ವೇಳೆ । ಪೃಥಿವೀ—ಪೃಥಿವಿಯು । ದಶಭುಜಿಃ—(ಈಗಿರುವುದಕ್ಕಿಂತ) ಹತ್ತರಷ್ಟು ಬೆಳೆದರೂ । ಕೃಷ್ಟಯಃ—ಮನುಷ್ಯರೆಲ್ಲ । ವಿಶ್ವಾ ಅಹಾನಿ—ಪ್ರತಿದಿನವೂ । ತತನಂತ—ಅಧಿಕ ಸಂಖ್ಯೆಯಲ್ಲಿ ಬೆಳೆದರೂ ಸಹ । ಮಘವನ್—ಧನವಂತನಾದ । ಇಂದ್ರ—ಎಲೈ ಇಂದ್ರನೇ । ಅತ್ರಾಹ—ಈ ಬೆಳೆವಣಿಗೆಗಳಲ್ಲೆಲ್ಲ (ಅಷ್ಟೂ ಅಷ್ಟು ಹೆಚ್ಚಾಗಿ) । ತೇ—ನಿನ್ನ । ಸಹಃ—(ವೃತ್ರವಧಾದಿಗಳಿಗೆ ಕಾರಣವಾದ) ಬಲವು । ವಿಶ್ರುತಂ—ಹೆಸರುವಾಸಿಯಾಗುತ್ತದೆ। ಶವಸಾ—(ನಿನ್ನ) ಶಕ್ತಿಯಿಂದ (ಸಂಪಾದಿಸಿದ)। ಬರ್ಹಣಾ—(ವೃತ್ರವಧಾದಿರೂಪವಾದ) ಕಾರ್ಯಸಿದ್ಧಿಯು । ದ್ಯಾಮನು—ಅಂತರಿಕ್ಷವನ್ನನುಸರಿಸಿ (ಅದರಷ್ಟು ವಿಸ್ತಾರವಾಗಿ) । ಭುವತ್—(ಕೀರ್ತಿಯನ್ನು) ಅನುಭವಿಸುತ್ತದೆ. (ಆಗುತ್ತದೆ)

॥ ಭಾವಾರ್ಥ ॥

ಎಲೈ ಇಂದ್ರನೇ, ಒಂದುವೇಳೆ ಪೃಥವಿಯು ಈಗಿರುವುದಕಿಂತ ಹತ್ತರಷ್ಟು ಹೆಚ್ಚಾಗಿ ಬೆಳೆದರೂ, ಮನುಷ್ಯರೆಲ್ಲರೂ ಪ್ರತಿದಿನವೂ ಅಧಿಕ ಸಂಖ್ಯೆಯಲ್ಲಿ ವೃದ್ಧಿಹೊಂದಿದರೂ ಸಹ, ಈ ಬೆಳೆವಣಿಗೆಗೆ ಸಮನಾಗಿ ವೃತ್ರವಧಾದಿಗಳಿಗೆ ಕಾರಣವಾದ ನಿನ್ನ ಶಕ್ತಿಯೂ ಹೆಸರುವಾಸಿಯಾಗುತ್ತದೆ. ನಿನ್ನ ಸ್ವಶಕ್ತಿಯಿಂದ ಸಂಪಾದಿಸಿದ ವೃತ್ರವಧಾದಿರೂಪವಾದ ಈ ಕಾರ್ಯಸಿದ್ಧಿಯು ಅಂತರಿಕ್ಷದಷ್ಟು ವಿಸ್ತಾರವಾಗಿ ಹರಡಿದ ಕೀರ್ತಿಯನ್ನನುಭವಿಸುತ್ತದೆ

## English Translation.

O Indra, had the earth been tenfold (in its extent) and men multiplied every day, then, Maghavan, your prowess would have been properly renowned; the exploits, achieved by your might are vast like the sky.

॥ ವಿಶೇಷ ವಿಷಯಗಳು ॥

ಮುಖ್ಯಾಭಿಪ್ರಾಯವು—ಅತ್ರೇದಮುಕ್ತಂ । ಇಂದ್ರಸ್ಯ ವೃತ್ರಹನನಾದಿಕ್ರಿಯಾಯಾಂ ಪ್ರಕಾಶಿತೇನ ಪರಾಕ್ರಮೇಣ ಯದ್ಯಪಿ ತಸ್ಯ ಪ್ರಭಾವಃ ಪ್ರಸಿದ್ಧ ಏವಾಸ್ತಿ, ತದಪಿ ತಸ್ಯ ಪ್ರಸೇಧಯಿತ್ಯಾಣಾಂ ಮನುಷ್ಯಭಾವಜನ್ಯಾದಲ್ಪಾಯುಸ್ತ್ವಾತ್ತೇಷಾಂ ಚ ಸ್ಥಾನಭೂತಾಯಾಃ ಪೃಥಿವ್ಯಾ ಅಲ್ಪತ್ವಾತ್ತಸ್ಯ ಮಹಿಮಾ ದ್ಯುಲೋಕಾದಾಶ್ರಾವಯಿತುಂ ನ ಶಕ್ಯತೇ । ಯದಿ ತು ಪೃಥಿವೀ ದಶಗುಣಿತಾ ಭವೇತ್ಸಾ ಚ ಸ್ತೋತೃಭಿರ್ಮನುಷ್ಯೈಃ ಪರಿಪೂರ್ಣಾ ಸ್ಯಾತ್ ಸ್ತೋತಾರಶ್ಚ ಮರಣರಹಿತಾ ಭೂತ್ವಾಹರ್ನಿಶಮಿಂದ್ರಸ್ಯ ಸಹಸೋ ಮಹಿಮಾನಮೇವ ವರ್ಣಯೇಯುಸ್ತದೈವ ಸ ಸರ್ವಾಮಪಿ ದ್ಯಾಂ ವ್ಯಾಪ್ನುಯಾನ್ನ ಪ್ರಾಗಿತಿ ॥ ಇಂದ್ರನು ಮಾಡಿದ ವೃತ್ರಾಸುರವಧ ಮುಂತಾದ ಸಾಹಸ ಕೃತ್ಯಗಳು ಬಹಳ ಪ್ರಸಿದ್ಧವಾಗಿದ್ದರೂ ಅಲಪ್ಪಾಯುಗಳೂ, ಸಾವಿಗೀಡಾದವರೂ ಆದ ಮನುಷ್ಯರ ವಾಸಸ್ಥಾನವಾದ ಭೂಲೋಕದಿಂದ ಸ್ವರ್ಗಕ್ಕೆ ಮನುಷ್ಯರು



CC-0. Jangamwadi Math Collection. Digitized by eGangotri

ಮಾಡುವ ಸ್ತೋತ್ರಾದಿಗಳು ಕೇಳಿಸುವುದು ಅಸಂಭವವು. ಒಂದು ವೇಳೆ ಈಗಿರುವ ಭೂಮಿಯ ವಿಸ್ತಾರವು ಹತ್ತುಪಾಲಿನಷ್ಟು ಹೆಚ್ಚಾಗಿದ್ದು ಸ್ತೋತ್ರಮಾಡುವ ಮನುಷ್ಯರು ಮರಣರಹಿತರಾಗಿ ಬಹುಕಾಲ ಜೀವಿಸಿರು ವಂತಾದರೆ ಆಗ ಭೂಲೋಕದ ಮನುಷ್ಯರು ಮಾಡುವ ಇಂದ್ರನ ಸಾಹಸಕೃತ್ಯಗಳ ವರ್ಣನೆಯು ಸ್ವರ್ಗ ಲೋಕವನ್ನೆಲ್ಲಾ ವ್ಯಾಪಿಸಬಹುದು. ಇಲ್ಲದಿದ್ದರೆ ಅಸಾಧ್ಯವು. ಇಂದ್ರನ ಮಹಿಮೆಯು ಅಷ್ಟು ಅತಿಶಯ ವಾಗಿರುವುದು ಎಂದಭಿಪ್ರಾಯವು.

**ಯೆತ್-ಇತ್-ನು—ಯೆದಿನ್ನು** ಇಲ್ಲಿ, ಇತ್, ನು ಎಂಬ ಅವ್ಯಯಗಳು ಖಲು (ಅಷ್ಟೆ) ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿವೆ.

**ಬರ್ಹಣಾ—ವೃತ್ರಾದೇಃ ವಧರೂಪಾ ಕ್ರಿಯಾ**—ವರ್ಹಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ವಬಯೋರಭೇದಃ ಎಂಬ ಲೌಕಿಕ ಕ್ರಮವನ್ನು ಅನುಸರಿಸಿ ಬರ್ಹಣಾ ಎಂದಾಗಿದೆ. ನಿರುಕ್ತಕಾರರು ಬರ್ಹಣಾ (ನಿ. ೬-೧೯) ಎಂಬ ಸೂತ್ರದಲ್ಲಿ ವಧಕರ್ಮಾರ್ಥವಾಗಿ ಈ ಪದವನ್ನು ಪ್ರಯೋಗಿಸಿರುವರು.

**ದ್ಯಾಮನು ಭುವತ್**—ಅಂತರಿಕ್ಷದಷ್ಟು ದೊಡ್ಡದಾಗಿದೆ. ಎಂಬರ್ಥವು ಅನುಶಬ್ದದ ಸಾಹಚರ್ಯ ದಿಂದ ಬಂದಿದೆ. ಮತ್ತು ಭೂ ಧಾತುವಿನ ಲೇಡ್ರೂಪವನ್ನು ಶ್ರುತಿಯಲ್ಲಿ ನೋಡಬಹುದಾಗಿದೆ.

ವ್ಯಾಕರಣಪ್ರಕ್ರಿಯಾ

**ತತನಂತ**—ತನು ವಿಸ್ತಾರೇ ಧಾತು. ಸ್ವರಿತೇತ್ ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಛಂದಸಿಲುಙ್‌ಲಙ್‌ಲಿಟಃ ಎಂಬುದರಿಂದ ಲಿಙರ್ಥದಲ್ಲಿ ಲಙ್. ತನಾದಿಕೃಞ್ಭ್ಯ ಉಃ ಎಂಬುದರಿಂದ ಉ ವಿಕರಣವು ಪ್ರಾಪ್ತವಾದರೆ ವ್ಯತ್ಯಯೋಬಹುಲಂ ಎಂಬುದ ರಿಂದ ಶಪ್. ಬಹುವಚನದಲ್ಲಿ ಝುಕ್ಕೆ ಝೋಽಂತಃ ಎಂಬುದರಿಂದ ಅಂತಾದೇಶ. ಛಾಂದಸವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಶಪಿನ ಅಕಾರಕ್ಕೆ ಅತೋಗುಣೇ ಎಂಬುದರಿಂದ ಪರರೂಪ. ತತನಂತ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಅದುಪದೇಶದ ಪರದಲ್ಲಿರುವುದರಿಂದ ತಾಸ್ಯ-ನುದಾತ್ತೇತ್—ಸೂತ್ರದಿಂದ ಅನುದಾತ್ತವಾಗುವುದರಿಂದ ಧಾತುವಿನ ಅಂತೋದಾತ್ತಸ್ವರ ಉಳಿಯುತ್ತದೆ. ಯದ್ವೋಗವಿರುವುದರಿಂದ ನಿಘಾತಬರುವುದಿಲ್ಲ. ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ.

**ವಿಶ್ರುತಮ್**—ಶ್ರು ಶ್ರವಣೇ ಧಾತು. ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಕಿತ್ತಾದುದರಿಂದ ಗುಣ ನಿಷೇಧ. ಗತಿರನಂತರಃ (ಪಾ. ಸೂ. ೬-೨-೪೯) ಸೂತ್ರದಿಂದ ಗತಿಗೆ (ವಿ) ಪ್ರಕೃತಿಸ್ವರ ಬರುತ್ತದೆ.

**ಬರ್ಹಣಾ**—ವರ್ಹ ವಲ್ಹ ಪರಿಭಾಷಣ ಹಿಂಸಾಚ್ಛಾದನೇಷು ಧಾತು ಇದಕ್ಕೆ ಔಣಾದಿಕವಾದ ಕ್ಯು ಪ್ರತ್ಯಯ. ಯುವೋರನಾಕೌ ಎಂಬುದರಿಂದ ಅನಾದೇಶ. ವಬಯೋರಭೇದಃ ಎಂಬುದರಿಂದ ವಕಾರಸ್ಥಾನ ದಲ್ಲಿ ಬಕಾರ. ಬರ್ಹಣ್ ಎಂದಾಗುತ್ತದೆ. ಸ್ತ್ರೀತ್ವದಲ್ಲಿ ಅದಂತವಾದುದರಿಂದ ಟಾಪ್ ಬರುತ್ತದೆ. ಪ್ರತ್ಯಯ ಸ್ವರದಿಂದ ಹಕಾರೋತ್ತರಾಕಾರ ಉದಾತ್ತವಾಗುತ್ತದೆ. ನಿಬರ್ಹಯತಿ (ನಿರು. ೬-೧೯) ಎಂದು ವಧಕರ್ಮ ದಲ್ಲಿ ಪಠಿತವಾಗಿದೆ. (ನಾಶಮಾಡುವುದು ಎಂದರ್ಥ).



CC-0. Jangamwadi Math Collection. Digitized by eGangotri

ಮಘವನ್—ಪ್ರಕ್ರಿಯೆಯು ಪೂರ್ವದಲ್ಲಿ ಉಕ್ತವಾಗಿದೆ. ಆಮಂತ್ರಿತಸ್ಯ ಚ ಎಂಬುದರಿಂದ ನಿಘಾತಸ್ವರಬರುತ್ತದೆ.

ಭುವತ್—ಭೂ ಸತ್ತಾಯಾಂ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಲೇಟೋಡಾಟೌ ಎಂಬುದರಿಂದ ಅಡಾಗಮ. ಇತಶ್ಚ ಲೋಪಃ ಪರಸ್ಮೈಪದೇಷು (ಪಾ. ಸೂ. ೩-೪-೯೭) ಎಂಬುದರಿಂದ ತಿಪಿನ ಇಕಾರಕ್ಕೆ ಲೋಪ. ಭೂಸುವೋಸ್ತಿಙಿ (ಪಾ. ಸೂ. ೭-೩-೮೮) ಎಂಬುದರಿಂದ ಗುಣಪ್ರತಿಷೇಧ ಬರುವುದರಿಂದ ಅಚಿಶ್ನುಧಾತುಭ್ರುವಾಂ ಸೂತ್ರದಿಂದ ಉವಙಾದೇಶ. ಭುವತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತ್ವಮಸ್ಯ ಪಾರೇ ರಜಸೋ ವ್ಯೋಮನಃ ಸ್ವಭೂತ್ಯೋಜಾ ಅವಸೇ ಧೃಷನ್ಮನಃ ।
ಚಕೃಷೇ ಭೂಮಿಂ ಪ್ರತಿಮಾನಮೋಜಸೋಽಪಃ ಸ್ವಃ ಪರಿಭೂರೇಷ್ಯಾ ದಿವಂ ॥ ೧೨ ॥

॥ ಪದಪಾಠಃ ॥

ತ್ವಂ । ಅಸ್ಯ । ಪಾರೇ । ರಜಸಃ । ವಿಽಓಮನಃ । ಸ್ವಭೂತಿಽಓಜಾಃ । ಅವಸೇ । ಧೃಷತ್ಽಮನಃ ।
ಚಕೃಷೇ । ಭೂಮಿಂ । ಪ್ರತಿಽಮಾನಂ । ಓಜಸಃ । ಅಪಃ । ಸ್ವ೧ ರಿತಿ ಸ್ವಃ । ಪರಿಭೂಃ । ಏಷಿ । ಆ । ದಿವಂ ॥ ೧೨ ॥

॥ ಸಾಯಣಭಾಷ್ಯಂ ॥

ಹೇ ಧೃಷನ್ಮನಃ ಶತ್ರೂಣಾಂ ಧರ್ಷಕಮನೋಯುಕ್ತೇಂದ್ರ । ಅಸ್ಯಾಸ್ಮಾಭಿಃ ಪರಿದೃಶ್ಯಮಾನಸ್ಯ ವ್ಯೋಮನೋ ವ್ಯಾಪ್ತಸ್ಯಾಂತರಿಕ್ಷಸ್ಯ ರಜಸೋ ಲೋಕಸ್ಯ ಪಾರ ಉಪರಿಪ್ರದೇಶೇ ವರ್ತಮಾನಃ ಸ್ವಭೂತ್ಯೋಜಾಃ ಸ್ವಭೂತಬಲಸ್ತ್ವಮವಸೇಽಸ್ಮದ್ರಕ್ಷಣಾರ್ಥಂ ಭೂಮಿಂ ಭೂಲೋಕಂ ಚಕೃಷೇ ಕೃತವಾನಸಿ । ಕಿಂಚ ಓಜಸೋ ಬಲವತಾಂ ಬಲಸ್ಯ ಪ್ರತಿಮಾನಂ ಪ್ರತಿನಿಧಿರಭೂಃ । ತಥಾ ಸ್ವಃ ಸುಷ್ಠು



CC-0. Jangamwadi Math Collection. Digitized by eGangotri

ರಣೀಯಂ ಗಂತವ್ಯಂ । ಆಪ ಇತ್ಯಂತರಿಕ್ಷನಾಮ । ಅಪೋಂತರಿಕ್ಷಲೋಕಂ ಆ ದಿವಂ ದ್ಯುಲೋಕಂ ಚ ಪರಿಭೂಃ ಪರಿಗ್ರಹೀತಾ । ಪರಿಪೂರ್ವೋ ಭವತಿಃ ಪರಿಗ್ರಹಣಾರ್ಥಃ । ಏಷಿ ಪ್ರಾಪ್ನೋಷಿ ॥ ಅಸ್ಯ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ವ್ಯೋಮನಃ । ಅವತಿರ್ಗತ್ಯರ್ಥಃ । ಅವ ರಕ್ಷಣಗತಿಕಾನ್ತ್ಯಿತ್ಯಭಿಧಾನಾತ್ । ವಿಶೇಷೇಣ ಗಚ್ಛತಿ ವ್ಯಾಪ್ನೋತೀತಿ ವ್ಯೋಮ । ಯದ್ವಾ । ವೃಷ್ಟಿಪ್ರದಾನೇನ ವಿಶೇಷೇಣ ಪ್ರಾಣಿನೋಽವತಿ ರಕ್ಷತೀತಿ ವ್ಯೋಮ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ । ಜ್ವರತ್ವರೇತ್ಯಾದಿನೋಪಧಾಯಾ ವಕಾರಸ್ಯ ಚೋಟ್ । ಗುಣಃ । ದಾಸೀಭಾರಾದಿತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಯದ್ವಾ । ಭಾವೇ ಮನಿನ್ । ವಿವಿಧಮೋಮ ರಕ್ಷಣಂ ಯಸ್ಮಿನ್ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಯಣಾದೇಶ ಉದಾತ್ತಸ್ವರಿತಯೋರ್ಯಣ ಇತಿ ಪರಸ್ಯಾನುದಾತ್ತಸ್ಯ ಸ್ವರಿತತ್ವಂ । ಸ್ವಃ । ಸುಪೂರ್ವಾದರ್ತೇರನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಅವ್ಯಯಾದಾಪ್ಸುಪಃ । ಪಾ. ೨-೪-೮೨ । ಇತಿ ಸುಪೋ ಲುಕ್ । ನ್ಯಙ್ಸ್ವರೌ ಸ್ವರಿತೌ । ಫಿ. ೪.೬ । ಇತಿ ಸ್ವರಿತತ್ವಂ ॥

॥ ಪ್ರತಿಪದಾರ್ಥ ॥

ಧೃಷನ್ಮನಃ—(ಶತ್ರುನಾಶದಲ್ಲಿ) ಸ್ಥಿರಮನಸ್ಕನಾದ ಇಂದ್ರನೇ । ಅಸ್ಯ—ಈ (ನಮಗೆ ಗೋಚರನಾಗತಕ್ಕ) । ವ್ಯೋಮನಃ—(ಎಲ್ಲ ಕಡೆಯೂ) ವ್ಯಾಪಿಸಿರುವ । ರಜಸಃ—ಅಂತರಿಕ್ಷ ಲೋಕದ (ಅಂತರಿಕ್ಷವನ್ನೂ ಮೀರಿ) । ಪಾರೇ—ಮೇಲ್ಭಾಗದಲ್ಲಿ । ಸ್ವಭೂತ್ಯೋಜಾಃ—ನಿನ್ನ ಸ್ವಶಕ್ತಿಯಲ್ಲೇ ನೆಲಸಿ । ತ್ವಂ—ನೀನು । ಅವಸೇ—(ನಮ್ಮ) ರಕ್ಷಣೆಗಾಗಿ । ಭೂಮಿಂ—ಭೂಲೋಕವನ್ನು । ಚಕೃಷೇ—ಸೃಷ್ಟಿಸಿದ್ದೀಯೆ (ಮತ್ತು) ಓಜಸಃ—(ಪರಾಕ್ರಮಿಗಳ) ಬಲಕ್ಕೆ । ಪ್ರತಿಮಾನಂ—ಮಾದರಿಯಾಗಿದ್ದೀಯೆ (ಹಾಗೆಯೇ) । ಸ್ವಃ—ಸುಲಭವಾಗಿ ಸಂಚರಿಸಲು ಯೋಗ್ಯವಾದ । ಅಪಃ—ಅಂತರಿಕ್ಷವನ್ನೂ । ಆ ದಿವಂ—ದ್ಯುಲೋಕವನ್ನೂ ಕೂಡ । ಪರಿಭೂಃ—ಸುತ್ತುವರಿದು । ಏಷಿ—ವ್ಯಾಪಿಸಿದ್ದೀಯೆ ॥

॥ ಭಾವಾರ್ಥ ॥

ಶತ್ರುನಾಶದಲ್ಲಿ ಸ್ಥಿರಮನಸ್ಕನಾದ ಎಲೈ ಇಂದ್ರನೇ, ಎಲ್ಲ ಕಡೆಯೂ ವ್ಯಾಪಿಸಿರುವ ಈ ಅಂತರಿಕ್ಷಲೋಕವನ್ನೂ ಮೀರಿ ಅದರ ಮೇಲ್ಭಾಗದಲ್ಲಿ ನೀನು ನಿನ್ನ ಸ್ವಶಕ್ತಿಯಿಂದಲೇ ನೆಲಸಿ ನಮ್ಮ ರಕ್ಷಣೆಗಾಗಿ ಭೂಲೋಕವನ್ನೂ ಸೃಷ್ಟಿಸಿದ್ದೀಯೆ. ನೀನು ಪರಾಕ್ರಮಿಗಳ ಬಲಕ್ಕೆ ಮಾದರಿಯಾಗಿದ್ದೀಯೆ. ಮತ್ತು ಸುಲಭವಾಗಿ ಸಂಚರಿಸಲು ಯೋಗ್ಯವಾದ ಅಂತರಿಕ್ಷವನ್ನೂ ಮತ್ತು ದ್ಯುಲೋಕವನ್ನೂ ಸುತ್ತುವರಿದು ಎಲ್ಲೆಲ್ಲೂ ವ್ಯಾಪಿಸಿದ್ದೀಯೆ.

## English Translation.

Indra, bent upon destroying the enemies, living in your strength, above the wide-expanded firmament, you have made the earth for our preservation; you are the representative of the strong; you have encompassed the firmament and the sky as far as to the heavens.



CC-0. Jangamwadi Math Collection. Digitized by eGangotri

|| ವಿಶೇಷ ವಿಷಯಗಳು ||

ವ್ಯೋಮನಃ—ವಿಶೇಷೇಣ ಗಚ್ಛತಿ ವ್ಯಾಪ್ನೋತೀತಿ ವ್ಯೋಮ ಯದ್ವಾ ವೃಷ್ಟಿಪ್ರದಾನೇನ ವಿಶೇಷೇಣ ಪ್ರಾಣಿನೋಽವತಿ ರಕ್ಷತೀತಿವ್ಯೋಮ ಎಂಬ ಎರಡು ರೀತಿಯ ವ್ಯುತ್ಪತ್ತಿಯಿಂದ ಆಕಾಶವು ಸರ್ವವ್ಯಾಪಕವಾದದ್ದು. ಅಥವಾ ಪ್ರಾಣಿಗಳನ್ನು ವೃಷ್ಟಿಪ್ರದಾನದಿಂದ ರಕ್ಷಿಸಬಲ್ಲುದು ಎಂದರ್ಥವಾಗುವುದು. ವಿವಿಧಂ ಓಮ ರಕ್ಷಣಂ ಯಸ್ಮಿನ್ ಎಂಬ ವ್ಯುತ್ಪತ್ತಿಯಿಂದ ಸರ್ವರಕ್ಷಕವಾದದ್ದು ಎಂಬರ್ಥವನ್ನೂ ಹೇಳಬಹುದು.

ಸ್ವಭೂತ್ಯೋಜಾಃ—ತನ್ನದೇ ಆದ ಓಜಸ್ಸುಳ್ಳವನು. ಪರಾಪೇಕ್ಷೆಯಿಲ್ಲದವನು ಎಂದರ್ಥ.

ಸ್ವಃ—ಸುಷ್ಠು ಅರಣೀಯಂ ಗಂತವ್ಯಂ ಸುಲಭವಾಗಿ ಸಂಚರಿಸುವ ವಸ್ತು ನೀರು ಎಂದಾಗುವುದು. ಆದರೆ ಆ ಪದವು ಅಂತರಿಕ್ಷವಾಚಿಯಾಗಿರುವುದರಿಂದ (ನಿ. ೨-೧೦) ಇದಕ್ಕೂ ಅಂತರಿಕ್ಷವೆಂಬ ಅರ್ಥವನ್ನೇ ಹೇಳಬಹುದು.

ಪರಿಭೂಃ—ಪರಿಗ್ರಹಿಸಿದವನಾಗಿ—ಪರಿ ಎಂಬ ಉಪಸರ್ಗಪೂರ್ವಕವಾದ ಭೂಧಾತುವಿಗೆ ಇಲ್ಲಿ ಪರಿಗ್ರಹ ಎಂಬರ್ಥವಿರುತ್ತದೆ.

|| ವ್ಯಾಕರಣಪ್ರಕ್ರಿಯಾ ||

ಅಸ್ಯ—ಇದಂ ಶಬ್ದದ ಷಷ್ಠ್ಯಂತದ ರೂಪ. ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ವ್ಯೋಮನಃ—ಅವ ಧಾತುವು ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಅವ ರಕ್ಷಣಗತಿಕಾಂತಿ— ಎಂದು ಅನೇಕಾರ್ಥದಲ್ಲಿ ಪಠಿತವಾಗಿರುತ್ತದೆ. ವಿಶೇಷೇಣ ಗಚ್ಛತಿ ವ್ಯಾಪ್ನೋತಿ ಇತಿ ವ್ಯೋಮ ಅಥವಾ ವೃಷ್ಟಿಪ್ರದಾನೇನ ವಿಶೇಷೇಣ ಪ್ರಾಣಿನೋಽವತಿ ರಕ್ಷತೀತಿ ವ್ಯೋಮ (ಎಲ್ಲವನ್ನೂ ವ್ಯಾಪಿಸಿರುವುದು ಅಥವಾ ಮಳೆಯನ್ನು ಕೊಡುವುದರ ಮೂಲಕ ವಿಶೇಷವಾಗಿ ಪ್ರಾಣಿಗಳನ್ನು ರಕ್ಷಿಸುವುದು ಆಕಾಶ ಎಂದರ್ಥ) ಅನ್ಯೇಭ್ಯೋಽಪಿ ದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ಜ್ವರತ್ವರಸ್ರಿವಿ—(ಪಾ. ಸೂ- ೬-೪-೨೦) ಎಂಬುದರಿಂದ ಅವ್ ಎಂಬಲ್ಲಿರುವ ಉಪಧಾಭೂತ. ಅಕಾರಕ್ಕೂ ಅಂತ್ಯದ ವಕಾರಕ್ಕೂ ಒಟ್ಟಿಗೆ ಊಠಾದೇಶ ಬರುತ್ತದೆ. ಊ+ಮನ್ ಎಂದಿರುವಾಗ ಅರ್ಧಧಾತುಕನಿಮಿತ್ತಕವಾಗಿ ಊಕಾರಕ್ಕೆ ಗುಣ. ವಿ+ಓಮನ್ ಎಂದಿರುವಾಗ ಯಣಾದೇಶ. ವ್ಯೋಮನ್ ಶಬ್ದವಾಗುತ್ತದೆ. ದಾಸೀಭಾರಾದಿಯಲ್ಲಿ ಸೇರಿರುವುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ಅಥವಾ ಭಾವಾರ್ಥದಲ್ಲಿ ಮನಿನ್. ಹಿಂದಿನಂತೆ ಓಮ ಎಂದು ರೂಪವಾಗುತ್ತದೆ. ವಿವಿಧಂ ಓಮ ರಕ್ಷಣಂ ಯಸ್ಮಿನ್, ವ್ಯೋಮ. ಬಹುವ್ರೀಹಿಸಮಾಸವಾದುದರಿಂದ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಂ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ವಿ+ಓಮನ್ ಎಂಬಲ್ಲಿ ಉದಾತ್ತವಾದ ಇಕಾರಕ್ಕೆ ಯಣಾದೇಶ ಬಂದುದರಿಂದ ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ (ಪಾ. ಸೂ. ೮-೨-೪) ಎಂಬುದರಿಂದ ಯಣಿನ ಪರದಲ್ಲಿರುವ ಅನುದಾತ್ತವಾದ ಓಕಾರಕ್ಕೆ ಸ್ವರಿತಸ್ವರ ಬರುತ್ತದೆ.

ಚಕೃಷೇ—ಡುಕೃಞ್ ಕರಣೇ ಧಾತು. ಲಿಟ್ ಮಧ್ಯಮಪುರುಷ ಏಕವಚನದ ರೂಪ. ಏಕಾಚ-ಉಪದೇಶೇ—ಎಂಬುದರಿಂದ ಇಣ್ಣಿಷೇಧ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.



CC-0. Jangamwadi Math Collection. Digitized by eGangotri

ಸ್ವಃ—ಸು ಪೂರ್ವದಲ್ಲಿರುವ, ಋ ಗತೌ ಧಾತು. ಇದಕ್ಕೆ ಅನ್ಯೇಭ್ಯೋಽಪಿ ದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ವಿಚ್. ಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಗುಣ. ಸು+ಅರ್ ಎಂದಿರುವಾಗ ಯಣಾದೇಶ. ಸ್ವರಾದಿನಿಪಾತಮವ್ಯಯಮ್ ಎಂಬುದರಿಂದ ಅವ್ಯಯಸಂಜ್ಞಾ. ಅವ್ಯಯಾದಾಪ್ಸುಪಃ (ಪಾ. ಸೂ. ೨-೪-೮೨) ಎಂಬುದರಿಂದ ಪರದಲ್ಲಿರುವ ಸುವಿಗೆ ಲುಕ್ ಬರುತ್ತದೆ. ಸ್ವಃ ಎಂದು ಅವಸಾನದಲ್ಲಿ ವಿಸರ್ಗ ಬಂದಾಗ ರೂಪವಾಗುತ್ತದೆ. ನ್ಯಙ್ಸ್ವರೌ ಸ್ವರಿತೌ (ಫಿ. ಸೂ. ೭೪) ಎಂಬುದರಿಂದ ಸ್ವಃ ಎಂಬುದು ಸ್ವರಿತವಾಗುತ್ತದೆ.

ಏಷಿ—ಇಣ್ ಗತೌ ಧಾತು. ಅದಾದಿ ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಪಿಗೆ ಲುಕ್. ಸಿಪ್ ಸಾರ್ವಧಾತುಕನಿಬಂಧನವಾಗಿ ಧಾತುವಿಗೆ ಗುಣ. ಆದೇಶಪ್ರತ್ಯಯಯೋಃ ಎಂಬುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಏಷಿ ಎಂದು ರೂಪವಾಗುತ್ತದೆ. ಅತಿ ಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾ ಋಷ್ವವೀರಸ್ಯ ಬೃಹತಃ ಪತಿರ್ಭೂಃ ।
ವಿಶ್ವಮಾಪ್ರಾ ಅಂತರಿಕ್ಷಂ ಮಹಿತ್ವಾ ಸತ್ಯಮದ್ಧಾ ನಕಿರನ್ಯಸ್ತ್ವಾವಾನ್ ॥ ೧೩ ॥

॥ ಪದಪಾಠಃ ॥

ತ್ವಂ । ಭುವಃ । ಪ್ರತಿಮಾನಂ । ಪೃಥಿವ್ಯಾಃ । ಋಷ್ವಽವೀರಸ್ಯ । ಬೃಹತಃ । ಪತಿಃ । ಭೂಃ ।
ವಿಶ್ವಂ । ಆ । ಅಪ್ರಾಃ । ಅಂತರಿಕ್ಷಂ । ಮಹಿತ್ವಾ । ಸತ್ಯಂ । ಅದ್ಧಾ । ನಕಿಃ । ಅನ್ಯಃ । ತ್ವಾಽವಾನ್ ॥ ೧೩ ॥

॥ ಸಾಯಣಭಾಷ್ಯ ॥

ಭೂನಾಮ್ನ್ಯೇಕಾಹೇ ಮರುತ್ವತೀಯಶಸ್ತ್ರೇ ನಿವಿದ್ಧಾನೀಯಾತ್ಸೂಕ್ತಾತ್ಪುರಾ ತ್ವಂ ಭುವಃ ಪ್ರತಿಮಾನಮಿತ್ಯೇಷಾ ಶಂಸನೀಯಾ । ತಥೈವಾಸೂತ್ರಯತ್ । ಶಸ್ಯಮುಕ್ತಂ ಬೃಹಸ್ಪತಿಸವೇನ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾಃ । ಆ. ೯-೭ । ಇತಿ ॥



CC-0. Jangamwadi Math Collection. Digitized by eGangotri

ಹೇ ಇಂದ್ರ ತ್ವಂ ಪೃಥಿವ್ಯಾಃ ಪ್ರಥಿತಾಯಾ ವಿಸ್ತೀರ್ಣಾಯಾ ಭೂಮೇಃ ಪ್ರತಿಮಾನಂ ಭುವಃ | ಪ್ರತಿನಿಧಿರ್ಭವಸಿ | ಯಥಾ ಭೂರ್ಲೋಕೋ ಮಹಾನಚಿಂತ್ಯಶಕ್ತಿಃ | ಏವಂ ತ್ವಮಪೀತ್ಯರ್ಥಃ | ತಥಾ ಋಷ್ವವೀರಸ್ಯ | ವೀರಯಂತಿ ವಿಕ್ರಾಂತಾ ಭವಂತೀತಿ ವೀರಾ ದೇವಾಃ | ಋಷ್ವಾ ದರ್ಶನೀಯಾ ವೀರಾ ಯಸ್ಯ ಸ ತಥೋಕ್ತಃ | ತಸ್ಯ ಬೃಹತೋ ಬೃಂಹಿತಸ್ಯ ಪ್ರವೃದ್ಧಸ್ಯ ಸ್ವರ್ಗಲೋಕಸ್ಯ ಪತಿರ್ಭೂಃ | ಪಾಲಯಿತಾಸಿ | ತಥಾಂತರಿಕ್ಷಮಂತರಾ ಕ್ಷಾಂತಂ ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಮಾಕಾಶಂ ವಿಶ್ವಂ ಸರ್ವಮಪಿ ಮಹಿತ್ವಾ ಮಹತ್ವೇನ ಸತ್ಯಮಾಪ್ರಾಃ | ನಿಶ್ಚಯೇನ ಆ ಸಮಂತಾದಪೂರಯಃ | ಅತಸ್ತ್ವಾವಾನ್ ತ್ವತ್ಸದೃಶೋಽನ್ಯಃ ಕಶ್ಚಿನ್ನಕಿರಸ್ತಿ ನಾಸ್ತೀತಿ | ಯದೇತತ್ತದದ್ಧಾ ಸತ್ಯಮೇವ || ಭುವಃ | ಭವತೇರ್ಲೇಟಿ ಸಿಪ್ಯಡಾಗಮಃ | ಉವಙಾದೇಶಃ | ಪೃಥಿವ್ಯಾಃ | ಉದಾತ್ತಯಣೋ ಹಲ್ಪೂರ್ವಾದಿತಿ ವಿಭಕ್ತಿರುದಾತ್ತಾ | ಬೃಹತಃ | ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ | ಭೂಃ | ಛಾಂದಸೇ ವರ್ತಮಾನೇ ಲುಙ್ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ | ಅಪ್ರಾಃ | ಪ್ರಾ ಪೂರಣೇ | ಅದಾದಿಕಃ | ಲಙ್ಯಡಾಗಮಃ | ಮಹಿತ್ವಾ | ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ | ತ್ವಾವಾನ್ | ವತುಪ್ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯ ಉಪಸಂಖ್ಯಾನಂ | ಪಾ. ೫-೨-೩೯-೧ | ಇತಿ ಸಾದೃಶ್ಯಾರ್ಥೇ ವತುಪ್ | ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ | ಆ ಸರ್ವನಾಮ್ನ ಇತ್ಯಾತ್ವಂ | ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಪ್ರಾತಿಪದಿಕಸ್ವರ ಏವ ಶಿಷ್ಯತೇ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ತ್ವಂ—ನೀನು | ಪೃಥಿವ್ಯಾಃ—ವಿಸ್ತಾರವಾಗಿರುವ ಭೂಮಿಗೆ | ಪ್ರತಿಮಾನಂ ಭುವಃ—ಆದರ್ಶನಾಗಿದ್ದೀಯೆ | ಋಷ್ವವೀರಸ್ಯ—ಆಕರ್ಷಕವಾದ ವೀರರಿಂದ ಕೂಡಿದ್ದೂ (ದೇವತೆಗಳಿಂದ ಕೂಡಿದ್ದು) | ಬೃಹತಃ—ಮಹತ್ತಾದದ್ದೂ ಆದ ಸ್ವರ್ಗಲೋಕಕ್ಕೆ | ಪತಿರ್ಭೂಃ—ಪಾಲಕನಾಗಿದ್ದೀಯೆ (ಹಾಗೆಯೇ)| ಅಂತರಿಕ್ಷಂ ವಿಶ್ವಂ—ದ್ಯಾವಾಪೃಥಿವಿಗಳ ನಡುವೆ ಇರುವ ಸಮಸ್ತ ಆಕಾಶವನ್ನೂ | ಮಹಿತ್ವಾ—ನಿನ್ನ ಪ್ರಭಾವದಿಂದ | ಸತ್ಯಂ—ಖಂಡಿತವಾಗಿಯೂ | ಆ ಅಪ್ರಾಃ—ಸುತ್ತಲೂ ತುಂಬಿ (ಕೊಂಡಿ)ದ್ದೀಯೆ (ಆದ್ದರಿಂದ) | ತ್ವಾವಾನ್—ನಿನಗೆ ಸಮಾನನಾದ | ಅನ್ಯಃ—ಬೇರೊಬ್ಬನು | ನಕಿಃ—ಇಲ್ಲವೇ ಇಲ್ಲವೆಂಬುದು | ಅದ್ಧಾ—ಸತ್ಯವು ||

|| ಭಾವಾರ್ಥ ||

ಎಲೈ ಇಂದ್ರನೇ, ನೀನು ವಿಸ್ತಾರವಾಗಿ ಹರಡಿರುವ ಭೂಮಿಗೆ ಆದರ್ಶನಾಗಿದ್ದೀಯೆ. ಶ್ರೇಷ್ಠವಾಗಿಯೂ ವೀರರಾಗಿಯೂ ಇರುವ ದೇವತೆಗಳಿಂದ ಕೂಡಿದ್ದೂ ಮಹತ್ತಾದದ್ದೂ ಆದ ಸ್ವರ್ಗಕ್ಕೆ ಪಾಲಕನಾಗಿದ್ದೀಯೆ. ದ್ಯಾವಾಪೃಥಿವಿಗಳ ನಡುವೆ ಇರುವ ಸಮಸ್ತ ಆಕಾಶವನ್ನೂ ನಿನ್ನ ಪ್ರಭಾವದಿಂದ ಖಂಡಿತ ಸುತ್ತಲೂ ತುಂಬಿಕೊಂಡಿದ್ದೀಯೆ. ನಿನಗೆ ಸದೃಶನಾದವನು ಬೇರೊಬ್ಬನಿಲ್ಲವೆಂಬುದು ಸತ್ಯವೇ ಆಗಿರುವುದು.

English Translation.

You are the measure of the extended earth; you are the protector of the Swarga frequented by the goas; verily with your greatness, you fill all the firmament; for, there is none other like you.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಭೂಸಾವ್ನಿ ಎಂಬ ಒಂದು ದಿನದಲ್ಲಿ ಮಾಡುವ ಯಾಗವಿಶೇಷದಲ್ಲಿ ಮರುತ್ವತೀಯಶಸ್ತ್ರಮಂತ್ರಗಳನ್ನು ಪಠಿಸುವಾಗ ನಿವಿದ್ಧಾನೀಯಸೂಕ್ತ (ಆಹ್ವಾನ ಮಾಡುವ ಸೂಕ್ತ) ಪಠನಕ್ಕೆ ಮುಂಚಿತವಾಗಿ ತ್ವಂ ಭುವಃ ಪ್ರತಿಮಾನಂ ಎಂಬ ಈ ಋಕ್ಕನ್ನು ಹೇಳಬೇಕೆಂದು ಆಶ್ವಲಾಯನಶ್ರೌತಸೂತ್ರದ ಶಸ್ಯಮುಕ್ತ್ವಂ ಬೃಹಸ್ಪತಿ-ಸನೇಸ ತ್ವಂ ಭುವಃ ಪ್ರತಿಮಾನಂ ಪೃಥಿವ್ಯಾಃ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೯-೫).

ಪೃಥಿವ್ಯಾಃ—ಇಲ್ಲಿ ಪೃಥಿವೀ ಶಬ್ದವು ಅತ್ಯಂತ ವಿಶಾಲವಾದ ಭೂಮಿ ಎಂದರ್ಥವು.

ಪ್ರತಿಮಾನಂ ಭುವಃ— ಪ್ರತಿನಿಧಿಯಾಗಿದ್ದೀಯೆ. ಎಂದರೆ ಭೂಮಿಯು ಹೇಗೆ ಅಚಿಂತ್ಯವಾದ ಶಕ್ತಿಯುಳ್ಳದ್ದೋ ಅಷ್ಟೇ ಶಕ್ತಿಯು ನಿನ್ನಲ್ಲಿಯೂ ಇದೆ ಎಂದರ್ಥವು.

ಋಷ್ವವೀರಸ್ಯ—ಋಷ್ವಾಃ ದರ್ಶನೀಯಾಃ ವೀರಾಃ ದೇವಾಃ ಯಸ್ಯ ಸಃ ಋಷ್ವವೀರಃ ಎಂಬ ವ್ಯುತ್ಪತ್ತಿಯಿಂದ ಇಂದ್ರನು ಸುಂದರರೂ ಶೂರರೂ ಆದ ದೇವತೆಗಳುಳ್ಳವನು ಎಂಬರ್ಥವು ಸ್ಪಷ್ಟವಾಗುವುದು.

ಬೃಹತಃ—ಇದಕ್ಕೆ ಬೃಂಹಿತವಾದ ಎಂದರೆ ಅಭಿವೃದ್ಧಿ ಹೊಂದುತ್ತಿರುವ ಸ್ವರ್ಗಲೋಕದ ಎಂದರ್ಥ.

ಅಂತರಿಕ್ಷಂ—ಅಂತರಾ ಕ್ಷಾಂತಂ ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಂ ಆಕಾಶಂ । ಭೂಮಿ ಮತ್ತು ಸ್ವರ್ಗಲೋಕಗಳ ಮಧ್ಯೆ ಇರುವ ಅವಕಾಶವೇ ಅಂತರಿಕ್ಷವೆಂದು ಹೇಳಲ್ಪಡುವುದು.

ನಕಿಃ ಅದ್ಧಾ—ಇದೆ, ಇಲ್ಲ ಎಂಬ ಈ ಮಾತು ನಿಶ್ಚಯ. ನಕಿಃ ಎಂಬ ಪದಕ್ಕೆ ಅಸ್ತಿ ನಾಸ್ತೀತಿ ಯದೇತತ್ ತತ್ ಎಂದು ವಾಖ್ಯಾನಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

ಭುವಃ—ಭೂ ಸತ್ತಾಯಾಂ ಧಾತು. ಲೇಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ-ಲೋಪಃ ಪರಸ್ಮೈಪದೇಷು ಎಂಬುದರಿಂದ ಅದರ ಇಕಾರಕ್ಕೆ ಲೋಪ. ಉವಙಾದೇಶ. ಸಕಾರಕ್ಕೆ ರುತ್ವ ವಿಸರ್ಗ. ಭುವಃ ಎಂದಾಗುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಪೃಥಿವ್ಯಾಃ—ಪೃಥಿವೀ+ಙಸ್ ಎಂದಿರುವಾಗ ಆಣ್‌ನದ್ಯಾಃ ಎಂಬುದರಿಂದ ವಿಭಕ್ತಿಗೆ ಆಡಾಗಮ ಈಕಾರಕ್ಕೆ ಯಣಾದೇಶ. ಸಕಾರಕ್ಕೆ ರುತ್ವವಿಸರ್ಗ. ಪೃಥಿವ್ಯಾಃ ಎಂದು ರೂಪವಾಗುತ್ತದೆ. ಉದಾತ್ತ-ಯಣೋಹಲ್‌ಪೂರ್ವಾತ್ (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಬೃಹತಃ—ಷಷ್ಠೀ ಏಕವಚನಾಂತರೂಪ. ಬೃಹನ್ಮಹತೋರುಪಸಂಖ್ಯಾನಮ್ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಭೂಃ—ಭೂ ಸತ್ತಾಯಾಂ ಧಾತು. ಛಂದಸಿ ಲುಙ್‌ಲಙ್‌ಲಿಟಃ ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಚ್ಲಿಲುಙಿ ಎಂಬುದರಿಂದ ಪ್ರಾಪ್ತವಾದ ಚ್ಲಿಗೆ ಚ್ಲೇಃ ಸಿಚ್ ಎಂಬುದರಿಂದ ಸಿಚಾದೇಶ. ಗಾತಿಸ್ಥಾ—ಸೂತ್ರದಿಂದ ಸಿಚಿಗೆ ಲುಕ್. ಪ್ರತ್ಯಯಕ್ಕೆ ರುತ್ವ ವಿಸರ್ಗ. ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಆಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.





CC-0. Jangamwadi Math Collection. Digitized by eGangotri

ಆಪ್ರಾಃ—ಪ್ರಾ ಪೂರಣೇ ಧಾತು ಅದಾದಿ. ಲಙ್ ಮಧ್ಯಮಪುರುಷ ಏಕವಚನದ ಸಿಪಿಗೆ ಇಕಾರ ಲೋಪ. ಆದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಪಿಗೆ ಲುಕ್. ಅಂಗಕ್ಕೆ ಲಙ್ ನಿಮಿತ್ತಕವಾಗಿ ಆಡಾಗಮ. ತಿಙಂತನಿಘಾತಸ್ವರ ಬರುತ್ತದೆ.

ಮಹಿತ್ವಾ—ಸುಪಾಂ ಸುಲುಕ್ ಸವರ್ಣ—ಎಂಬುದರಿಂದ ತೃತೀಯಾ ವಿಭಕ್ತಿಗೆ ಡಾದೇಶ. ಡಿತ್ತಾದುದರಿಂದ ಟಿ ಲೋಪ.

ತ್ವಾವಾನ್—ವತುಪ್ ಪ್ರಕರಣೇ ಯುಷ್ಮದಸ್ಮದ್ಭ್ಯಾಂ ಛಂದಸಿ ಸಾದೃಶ್ಯೇ ಉಪಸಂಖ್ಯಾನಮ್ (ಪಾ. ಸೂ. ೫-೨-೩೯-೧) ಎಂಬುದರಿಂದ ಯುಷ್ಮಚ್ಛಬ್ದಕ್ಕೆ ಸಾದೃಶ್ಯಾರ್ಥದಲ್ಲಿ ವತುಪ್. ಯುಷ್ಮದ್+ವತ್ ಎಂದಿರುವಾಗ ಪ್ರತ್ಯಯೋತ್ತರಪದಯೋಶ್ಚ (ಪಾ. ಸೂ. ೭-೨-೯೮) ಎಂಬುದರಿಂದ ಯುಷ್ಮದಿನ ಮಪರ್ಯಂತಕ್ಕೆ ತ್ವಾದೇಶ. ಆಸರ್ವನಾಮ್ನಃ (ಪಾ. ಸೂ. ೬-೩-೯೧) ಸೂತ್ರದಿಂದ ವತುಪ್ ನಿಮಿತ್ತಕವಾಗಿ ಆಕಾರ ಅಂತಾದೇಶ. ತ್ವಾವತ್ ಶಬ್ದವಾಗುತ್ತದೆ. ಪ್ರಥಮೈಕವಚನದಲ್ಲಿ ಉಗಿತ್ತಾದುದರಿಂದ ಉಗಿದಚಾಂ ಎಂಬುದರಿಂದ ನುಮಾಗಮ. ಅತ್ವಸಂತಸ್ಯಚ—ಎಂಬುದರಿಂದ ಉಪಧಾದೀರ್ಘ. ಹಲ್ಙ್ಯಾದಿನಾ ಸುಲೋಪ. ಸಂಯೋಗಾಂತಸ್ಯಲೋಪಃ ಸೂತ್ರದಿಂದ ಅಂತ್ಯ ತಕಾರಕ್ಕೆ ಲೋಪ. ಅದು ಅಸಿದ್ಧವಾದುದರಿಂದ ನಲೋಪ ಬರುವುದಿಲ್ಲ. ತ್ವಾವಾನ್ ಎಂದು ರೂಪವಾಗುತ್ತದೆ. ವತುಪ್ ಪಿತ್ತಾದುದರಿಂದ ಅನುದಾತ್ತೌಸುಪ್ಪಿತೌ ಎಂಬುದರಿಂದ ಅನುದಾತ್ತ. ಆಗ ಪ್ರಾತಿಪದಿಕದ ಅಂತೋದಾತ್ತಸ್ವರವೇ ಉಳಿಯುತ್ತದೆ.

॥ ಸಂಹಿತಾಪಾಠಃ ॥

ನ ಯಸ್ಯ ದ್ಯಾವಾಪೃಥಿವೀ ಅನು ವ್ಯಚೋ ನ ಸಿಂಧವೋ ರಜಸೋ ಅಂತಮಾನಶುಃ ।
ನೋತ ಸ್ವವೃಷ್ಟಿಂ ಮದೇ ಅಸ್ಯ ಯುಧ್ಯತ ಏಕೋ ಅನ್ಯಚ್ಚಕೃಷೇ ವಿಶ್ವಮಾನುಷಕ್ ॥ ೧೪ ॥

॥ ಪದಪಾಠಃ ॥

ನ । ಯಸ್ಯ । ದ್ಯಾವಾಪೃಥಿವೀ ಇತಿ । ಅನು । ವ್ಯಚಃ । ನ । ಸಿಂಧವಃ । ರಜಸಃ । ಅಂತಂ । ಆನಶುಃ ।
ನ । ಉತ । ಸ್ವಽವೃಷ್ಟಿಂ । ಮದೇ । ಅಸ್ಯ । ಯುಧ್ಯತಃ । ಏಕಃ । ಅನ್ಯತ್ । ಚಕೃಷೇ । ವಿಶ್ವಂ । ಆನುಷಕ್ ॥ ೧೪ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯಂ ||

ಯಸ್ಯೇಂದ್ರಸ್ಯ ವ್ಯಚೋ ವ್ಯಾಪನಂ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ನಾನ್ವಾನಶಾತೇ ಪ್ರಾಪ್ತುಮಸಮರ್ಥೇ ಬಭೂವತುಃ । ತಥಾ ರಜಸೋಽಂತರಿಕ್ಷಲೋಕಸ್ಯೋಪರಿ ಸಿಂಧವಃ ಸ್ಯಂದನಶೀಲಾ ಅಪೋ ಯಸ್ಯೇಂದ್ರಸ್ಯ ತೇಜಸೋಽಂತಮವಸಾನಂ ನಾನಶುಃ ನ ಪ್ರಾಪುಃ । ಉತಾಪಿ ಚ ಸೋಮಪಾನೇನ ಮದೇ ಹರ್ಷೇ ಸತಿ ಸ್ವವೃಷ್ಟಿಂ ಸ್ವೀಕೃತವೃಷ್ಟಿಂ ವೃತ್ರಾದಿಂ ಯುಧ್ಯತೋ ಯುಧ್ಯಮಾನಸ್ಯೇಂದ್ರಸ್ಯ ಬಲಸ್ಯಾಂತಂ ವೃತ್ರಾದಯೋ ನ ಪ್ರಾಪುಃ । ಅತೋ ಹೇ ಇಂದ್ರ ಏಕಸ್ತ್ವಮನ್ಯತ್ತ್ವದ್ವ್ಯತಿರಿಕ್ತಂ ವಿಶ್ವಂ ಸರ್ವಂ ಭೂತಜಾತಮಾನುಷಕ್ ಆನುಷಕ್ತಂ ಚಕೃಷೇ । ಸಕಲಮಪಿ ಭೂತಜಾತಂ ತ್ವದಧೀನಮಭೂದಿತಿ ಭಾವಃ ॥ ದ್ಯಾವಾಪೃಥಿವೀ । ದ್ಯೌಶ್ಚ ಪೃಥಿವೀ ಚ ದಿವೋ ದ್ಯಾವಾ । ಪಾ. ೬-೩-೨೯ । ಇತಿ ದ್ಯಾವಾದೇಶ ಆದ್ಯುದಾತ್ತೋ ನಿಪಾತಿತಃ । ಪೃಥಿವೀಶಬ್ದಃ ಷಿದ್ಗೌರಾದಿಭ್ಯಶ್ಚೇತಿ ಙೀಷಂತೋಽನ್ತೋದಾತ್ತಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಅಪೃಥಿವೀರುದ್ರಪೂಷಮಂಥಿಷ್ವಿತಿ ಪರ್ಯುದಾಸಾನ್ನೋತ್ತರಪದೇಽನುದಾತ್ತಾದಾವಿತಿ ನಿಷೇಧಾಭಾವಃ । ವ್ಯಚಃ । ವ್ಯಚೇಃ ಕುಟಾದಿತ್ವಮನಸಿ । ಕಾ. ೧-೨-೧-೧ । ಇತಿ ವಚನಾತ್ ಙಿತ್ತ್ವಾಭಾವೇ ಸಂಪ್ರಸಾರಣಾಭಾವಃ । ಆನಶುಃ । ಅಶ್ನೋತೇರ್ವ್ಯತ್ಯಯೇನ ಪರಸ್ಮೈಪದಂ । ಅತ ಆದೇರಿತ್ಯಭ್ಯಾಸಸ್ಯಾತ್ವಂ । ಅಶ್ನೋತೇಶ್ಚೇತಿ ನುಡಾಗಮಃ ॥

|| ಪ್ರತಿಪದಾರ್ಥ ||

ಯಸ್ಯ—ಯಾವ ಇಂದ್ರನ । ವ್ಯಚಃ—ವ್ಯಾಪಿಸುವ ಶಕ್ತಿಯನ್ನು । ದ್ಯಾವಾಪೃಥಿವೀ—ಪೃಥಿವ್ಯಂತರಿಕ್ಷಗಳೆರಡೂ । ನ ಆನು—ಹೊಂದಲಸಮರ್ಥವಾದವೋ, (ಹಾಗೆಯೇ) । ರಜಸಃ—ಅಂತರಿಕ್ಷದ (ಮೇಲೆ ಹರಿಯುವ) । ಸಿಂಧವಃ—ನೀರಿನ ಪ್ರವಾಹಗಳು । ಅಂತಂ—(ಯಾವ ಇಂದ್ರನ ಪ್ರಭಾವದ) ಸೀಮೆಯನ್ನು । ನ ಆನಶುಃ—ಸೇರಲಿಲ್ಲವೋ, । ಉತ—ಮತ್ತು । ಮದೇ—(ಸೋಮಪಾನದಿಂದ) ಉತ್ತೇಜಿತನಾಗಿ । ಸ್ವವೃಷ್ಟಿಂ—ತನ್ನ ಮಳೆಯನ್ನು ತಡೆದ ವೃತ್ರನೊಡನೆ । ಯುಧ್ಯತಃ—ಯುದ್ಧಮಾಡತಕ್ಕ । ಅಸ್ಯ—ಅಂತಹ ಇಂದ್ರನ (ಶಕ್ತಿಯನ್ನು ಅವನ ಶತ್ರುಗಳು) । ನ ಪ್ರಾಪುಃ ಹೊಂದಲಿಲ್ಲವೋ (ಆದ್ದರಿಂದಲೇ) । (ಇಂದ್ರ—ಎಲೈ ಇಂದ್ರನೇ) । ಏಕಃ—ನೀನೊಬ್ಬನೇ । ಅನ್ಯತ್ ವಿಶ್ವಂ—(ನಿನ್ನೊಬ್ಬನನ್ನು ಬಿಟ್ಟು) ಉಳಿದ ಸಕಲ ಭೂತಗಳನ್ನೂ । ಆನುಷಕ್—ಅನುಕ್ರಮವಾಗಿ ।ಚಕೃಷೇ—(ನಿನ್ನಧೀನವಾಗಿರುವಂತೆ) ಸೃಷ್ಟಿಸಿದ್ದೀಯೆ ॥

|| ಭಾವಾರ್ಥ ||

ಇಂದ್ರನ ವ್ಯಾಪನಶಕ್ತಿಯನ್ನು ಅತ್ಯಂತ ವಿಸ್ತಾರವಾಗಿರುವ ಪೃಥಿವ್ಯಂತರಿಕ್ಷಗಳೆರಡೂ ಹೊಂದಲಸಮರ್ಥವಾದುವು. ಅಂತರಿಕ್ಷದ ಮೇಲೆ ಹರಿಯುವ ನೀರಿನ ಪ್ರವಾಹಗಳು ಇಂದ್ರನ ಪ್ರಭಾವದ ಸೀಮೆಯನ್ನು ಮುಟ್ಟಲಾಗಲಿಲ್ಲ. ಸೋಮರಸಪಾನದಿಂದ ಉತ್ತೇಜಿತನಾಗಿ ಮಳೆಯನ್ನು ತಡೆದ ವೃತ್ರನೊಡನೆ ಯುದ್ಧಮಾಡತಕ್ಕ ಕಾಲದಲ್ಲಿ ಅವನ ಶಕ್ತಿಯನ್ನು ಅವನ ಶತ್ರುಗಳು ಹೊಂದಲಾಗಲಿಲ್ಲ. ಆದ್ದರಿಂದ ಎಲೈ ಇಂದ್ರನೇ, ನಿನ್ನೊಬ್ಬನನ್ನು ಬಿಟ್ಟು ಉಳಿದ ಸಕಲ ಭೂತಗಳನ್ನೂ ಕೂಡ ನೀನು ನಿನ್ನಧೀನವಾಗಿರುವಂತೆ ಸೃಷ್ಟಿಸಿದ್ದೀಯೆ.



CC-0. Jangamwadi Math Collection. Digitized by eGangotri

## English Translation.

You, Indra, of whom heaven and earth have not attained the amptitude; of whose energy the waters flowing above the heavens have not reached the limit; of whom, when fighting with animation, created by the Soma against the withholder of the rains, his adversaries have not equalled the prowess; you alone have made everything else dependent on you.

### || ವಿಶೇಷ ವಿಷಯಗಳು ||

**ಮುಖ್ಯಾಭಿಪ್ರಾಯವು—ಯೋ ಭೂಲೋಕಾಂತರಿಕ್ಷಲೋಕದ್ಯುಲೋಕಾನ್ ವ್ಯಾಪ್ಯಾವಶೇಷಸ್ಥಿತಿ ಯಸ್ಯ ಚ ಬಲಂ ವೃತ್ರಹನನಪ್ರಸಂಗೇ ಕೇನಾಪಿ ಪರಿಮಿತತಯಾ ನ ಜ್ಞಾತಂ ಸ ಇಂದ್ರ ಏವ ವಿಶ್ವಸ್ಯೈತಸ್ಯ ವಸ್ತುಮಾತ್ರಸ್ಯ ನಿರ್ಮಾತಾ ಭವತೀತಿ ಭಾವಃ ||** ಇಂದ್ರನ ಬಲಪರಾಕ್ರಮಗಳು ಭೂಮ್ಯಂತರಿಕ್ಷ ಸ್ವರ್ಗಲೋಕಗಳನ್ನು ವ್ಯಾಪಿಸಿದ್ದರೂ ತುಂಬದೆ ಇನ್ನೂ ಉಳಿದಿರುವುದು. ಇಂತಹ ಇಂದ್ರನ ವೃತ್ರಹನನಾದಿ ಕಾರ್ಯಗಳ ಮಹಿಮೆಯು ಇಷ್ಟೇ ಸರಿ ಎಂಬುದನ್ನು ಯಾವ ಮನುಷ್ಯನೂ ಸರಿಯಾಗಿ ತಿಳಿಯಲಾರನು. ಇಂತಹ ಮಹಿಮೆಯುಳ್ಳ ಈ ಇಂದ್ರನೇ ಈ ವಿಶ್ವದಲ್ಲಿರುವ ಸಮಸ್ತ ವಸ್ತುಗಳನ್ನು ಸೃಷ್ಟಿಸಿರುವನು.

**ವ್ಯಚಃ—ವ್ಯಾಪನಂ ವ್ಯಚೇಃ ಕುಟಾದಿತ್ವಮನಸಿ** (ಕಾ. ೧-೨-೧-೧) ಎಂಬ ಸೂತ್ರಾನುಸಾರವಾಗಿ ಅಚ್ ಧಾತುವು ವ್ಯಚಃ ಎಂಬ ರೂಪವನ್ನು ಪಡೆದು ವ್ಯಾಪನೆಯೆಂಬ ಅರ್ಥವನ್ನು ಕೊಡುವುದು.

**ಸಿಂಧವಃ—ಸ್ಯಂದನಶೀಲಾ ಆಪಃ** ಸದಾ ಹರಿಯುವ ಸ್ವಭಾವವುಳ್ಳದ್ದು ನೀರು ಎಂಬರ್ಥವನ್ನು ಕೊಡುವುದು.

**ಸ್ವವೃಷ್ಟಿಂ**—ವೃಷ್ಟಿಯನ್ನು ತಡೆದು ನಿಲ್ಲಿಸುವ ಸಾಮರ್ಥ್ಯವುಳ್ಳ ವೃತ್ರಾದಿಗಳು ಎಂದರ್ಥವಾಗುವುದು.

**ಆನುಷಕ್—ಆನುಷಕ್ತಂ** ನಿಕಟಸಂಬಂಧವುಳ್ಳದ್ದನ್ನಾಗಿ ಎಂಬರ್ಥವು ಪ್ರಕಾಶಿತವಾಗುವುದು.

### || ವ್ಯಾಕರಣಪ್ರಕ್ರಿಯಾ ||

**ದ್ಯಾವಾಪೃಥಿವೀ—ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವೀ. ದಿವೋ ದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ಉತ್ತರಪದ ಪರದಲ್ಲಿರುವಾಗ ದ್ಯಾವಾದೇಶವು ಆದ್ಯುದಾತ್ತವಾಗಿ ನಿಪಾತಿತವಾಗಿದೆ. ಪೃಥಿವೀ ಶಬ್ದವು ಷಿದ್ಗೌರಾದಿಭ್ಯಶ್ಚ ಎಂಬುದರಿಂದ ಙೀಷ್‌ನ್ನು ಹೊಂದಿ ಅಂತೋದಾತ್ತವಾಗುತ್ತದೆ. **ದೇವತಾದ್ವಂದ್ವೇಚ** (ಪಾ. ಸೂ. ೬-೨-೧೪೧) ಎಂಬುದರಿಂದ ಸಮಾಸವಾದಾಗ ಉಭಯಪದ ಪ್ರಕೃತಿಸ್ವರವು ಬರುತ್ತದೆ. ಯದ್ಯಪಿ ಇಲ್ಲಿ **ನೋತ್ತರಪದೇಽನುದಾತ್ತಾದೌ** (ಪಾ. ಸೂ. ೬-೨-೧೪೨) ಎಂಬುದರಿಂದ ಅನುದಾತ್ತಾದಿಯಾದ ಪೃಥಿವೀ ಶಬ್ದವು ಪರದಲ್ಲಿರುವುದರಿಂದ ಉಭಯಪದಪ್ರಕೃತಿಸ್ವರಕ್ಕೆ ನಿಷೇಧ ಬರುತ್ತದೆ. ಆದರೂ—ಅಪೃಥಿವೀ ರುದ್ರಪೂಷಮಂಥಿಷು ಎಂದು ಅಲ್ಲಿ ನಿಷೇಧಮಾಡಿರುವುದರಿಂದ ಪೃಥಿವೀಶಬ್ದ ಪರದಲ್ಲಿರುವಾಗ ನಿಷೇಧ ಬರುವುದಿಲ್ಲ.

**ವ್ಯಚಃ—ವ್ಯಚ ವ್ಯಾಜೀಕರಣೇ** ಧಾತು. ತುದಾದಿ ಔಣಾದಿಕ ಅಸುನ್ ಪ್ರತ್ಯಯ. **ವ್ಯಚೇಃ ಕುಟಾದಿತ್ವಮನಸಿ** (ಕಾ. ೧-೨-೧-೧) ಎಂಬುದರಿಂದ ಅಸಿನಲ್ಲಿ ಪರ್ಯುದಾಸ ಮಾಡಿರುವುದರಿಂದ ಙಿತ್ವವು ಬರುವುದಿಲ್ಲ. ಆದುದರಿಂದ ಗ್ರಹಿಜ್ಯಾ—ಸೂತ್ರದಿಂದ ಸಂಪ್ರಸಾರಣವೂ ಬರುವುದಿಲ್ಲ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಆನಶುಃ—ಅಶೂ ವ್ಯಾಪ್ತೌ ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಪರಸ್ಮೈಪದ ಪ್ರತ್ಯಯವು ಬರುತ್ತದೆ. ಲಿಟ್ ಪ್ರಥಮಪುರುಷದ ಝಿಗೆ ಪರಸ್ಮೈಪದಾನಾಂ—ಸೂತ್ರದಿಂದ ಉಸಾದೇಶ ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಅತೋಗುಣೇ ಎಂಬುದಕ್ಕೆ ಬಾಧಕವಾಗಿ ಅತ ಆದೇಃ ಎಂಬುದರಿಂದ ಅಭ್ಯಾಸದ ಅಕಾರಕ್ಕೆ ದೀರ್ಘ. ಅಶ್ನೋತೇಶ್ಚ (ಪಾ. ಸೂ. ೭-೪-೭೨) ಎಂಬುದರಿಂದ ದೀರ್ಘಾಭ್ಯಾಸದ ಪರದ ವರ್ಣಕ್ಕೆ ನುಡಾಗಮ. ಆನಶುಃ ಎಂದು ರೂಪವಾಗುತ್ತದೆ. ಯಸ್ಯ ಎಂದು ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ ಯದ್ವೃತ್ತಾ—ಸೂತ್ರದಿಂದ ನಿಘಾತಪ್ರತಿಷೇಧ ಬರುವುದರಿಂದ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಯುಧ್ಯತಃ—ಯುಧ ಸಂಪ್ರಹಾರೇ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ದಿವಾದಿಭ್ಯಃ ಶ್ಯನ್ ಎಂಬುದರಿಂದ ಶ್ಯನ್ ವಿಕರಣ. ಯುಧ್ಯತ್ ಶಬ್ದವಾಗುತ್ತದೆ. ಷಷ್ಠೀಏಕವಚನಾಂತರೂಪ. ಆದುಪದೇಶದ ಪರದಲ್ಲಿರುವುದರಿಂದ ತಾಸ್ಯನುದಾತ್ತೇತ್ ಸೂತ್ರದಿಂದ ಲಸಾರ್ವಧಾತುಕವು ಅನುದಾತ್ತ. ಶ್ಯನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಚಕೃಷೇ—ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ಸರ್ವಾನುದಾತ್ತಸ್ವರ ಬರುತ್ತದೆ. ಲಿಟ್ ಮಧ್ಯಮಪುರುಷ ಏಕವಚನರೂಪ.

॥ ಸಂಹಿತಾಪಾಠಃ ॥

ಆರ್ಚನ್ನತ್ರ ಮರುತಃ ಸಸ್ಮಿನ್ನಾಜೌ ವಿಶ್ವೇ ದೇವಾಸೋ ಅಮದನ್ನನು ತ್ವಾ।
ವೃತ್ರಸ್ಯ ಯದ್ಭೃಷ್ಟಿಮತಾ ವಧೇನ ನಿ ತ್ವಮಿಂದ್ರಪ್ರತ್ಯಾನಂ ಜಘಂಥ
॥ ೧೫ ॥

॥ ಪದಪಾಠಃ ॥

ಆರ್ಚನ್ । ಅತ್ರ । ಮರುತಃ । ಸಸ್ಮಿನ್ । ಆಜೌ । ವಿಶ್ವೇ । ದೇವಾಸಃ । ಅಮದನ್ ।
ಅನು । ತ್ವಾ ।
ವೃತ್ರಸ್ಯ । ಯತ್ । ಭೃಷ್ಟಿಮತಾ । ವಧೇನ । ನಿ । ತ್ವಂ । ಇಂದ್ರ । ಪ್ರತಿ ।
ಆನಂ । ಜಘಂಥ ॥ ೧೫ ॥



CC-0. Jangamwadi Math Collection. Digitized by eGangotri

||ಸಾಯಣಭಾಷ್ಯಂ||

ಹೇ ಇಂದ್ರ ತ್ವಾಂ ಮರುತೋಽತ್ರಾಸ್ಮಿನ್ ಸಂಗ್ರಾಮ ಆರ್ಚನ್ | ಪ್ರಹರ ಭಗವೋ ಜಹಿ ವೀರಯಸ್ವ | ಐ. ಬ್ರಾ. ೩-೨೦ | ಇತ್ಯನೇನ ವಚನೇನಾಪೂಜಯನ್ | ಸಸ್ಮಿನ್ ತಸ್ಮಿನ್ ಯದ್ವಾ ಸರ್ವಸ್ಮಿನ್ನಾಜೌ ಸಂಗ್ರಾಮೇ ವಿಶ್ವೇ ದೇವಾಸಸ್ತೇ ಸರ್ವೇ ದಾನಾದಿಗುಣಯುಕ್ತಾ ಮರುತಸ್ತ್ವಾ ತ್ವಾಮನ್ವಮದನ್ | ಅನುಕ್ರಮೇಣ ಹರ್ಷಂ ಪ್ರಾಪಯನ್ | ಯದ್ವಾ | ತ್ವದೀಯಮುದಾನಂತರಂ ತೇಽಪಿ ಮದಂ ಪ್ರಾಪ್ತಾಃ | ಹೇ ಇಂದ್ರ ತ್ವಂ ಯದ್ಯದಾ ಭೃಷ್ಟಿಮತಾ | ಭ್ರಂಶಯತಿ ಶತ್ರೂನಿತಿ ಭೃಷ್ಟಿರಶ್ರಿಃ | ತದ್ವತಾ ವಧೇನ ಹನನಸಾಧನೇನ ವಜ್ರೇಣ | ಅಶ್ರಿಮತ್ತ್ವಂ ಚ ವಜ್ರಸ್ಯ ಬ್ರಾಹ್ಮಣೇ ಸಮಾಮ್ನಾತಂ | ವಜ್ರೋ ವಾ ಏಷ ಯದ್ಯೂಪಃ ಸೋಽಷ್ಟಾಶ್ರಿಃ ಕರ್ತವ್ಯೋಽಷ್ಟಾಶ್ರಿರ್ವೈ ವಜ್ರಃ | ಐ. ಬ್ರಾ. ೨-೧ | ಇತಿ | ತೇನ ವಜ್ರೇಣ ವೃತ್ರಸ್ಯಾನಂ ಪ್ರತಿ ಆನನಂ ಮುಖಂ ಪ್ರತಿ ಯದ್ವಾ ಶ್ವಾಸಹೇತು ಘ್ರಾಣಂ ಪ್ರತಿ ನಿ ಜಘಂಥ | ನಿತರಾಂ ಪ್ರಾಹಾರ್ಷೀಃ || ಆರ್ಚನ್ | ಅರ್ಚ ಪೂಜಾಯಾಂ | ಭೌವಾದಿಕಃ | ಆಡಾಗಮ ಉದಾತ್ತಃ | ಸಸ್ಮಿನ್ | ತದೋಃ ಸಃ ಸೌ | ಪಾ- ಸೂ. ೭-೨-೧೦೬ | ಇತಿ ವಿಧೀಯಮಾನಂ ಸತ್ವಂ ವ್ಯತ್ಯಯೇನ ಸಪ್ತಮ್ಯಾಮಪಿ ದ್ರಷ್ಟವ್ಯಂ | ಯದ್ವಾ | ಸರ್ವಸ್ಮಿನ್ನಿತ್ಯತ್ರ ವರ್ಣಲೋಪೋ ದ್ರಷ್ಟವ್ಯಃ| ದೇವಾಸಃ | ಆಜ್ಜಸೇರಸುಕ್ | ಅನಂ | ಆನನಂ | ವರ್ಣಲೋಪಶ್ಛಾಂದಸಃ | ಯದ್ವಾ | ಅನ ಪ್ರಾಣನೇ | ಅನ್ಯತೇಽನೇನೇತ್ಯಾನಂ | ಘ್ರಾಣಂ | ಕರಣೇ ಘಞ್ | ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ | ಜಘಂಥ | ಹನ ಹಿಂಸಾಗತ್ಯೋಃ | ಥಲ್ಯುಪದೇಶೇಽತ್ವತ ಇತೀಟ್‌ಪ್ರತಿಷೇಧಃ | ಅಭ್ಯಾಸಾಚ್ಚೇತ್ಯಭ್ಯಾಸಾದುತ್ತರಸ್ಯ ಹಕಾರಸ್ಯ ಘುತ್ವಂ | ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ||

|| ಪ್ರತಿಪದಾರ್ಥ ||

(ಹೇ ಇಂದ್ರ—ಎಲೈ ಇಂದ್ರನೇ | ತ್ವಾಂ—ನಿನ್ನನ್ನು) | ಮರುತಃ—ಮರುತ್ತುಗಳು | ಅತ್ರ—ಈ (ಯುದ್ಧ) ಕಾಲದಲ್ಲಿ | ಆರ್ಚನ್—ಪೂಜಿಸಿದರು | ಸಸ್ಮಿನ್ ಆಜೌ—ಆ (ಅಥವಾ ಎಲ್ಲ) ಯುದ್ಧಕಾಲದಲ್ಲಿ | ಇಂದ್ರ—ಎಲೈ ಇಂದ್ರನೇ | ತ್ವಂ—ನೀನು | ಯತ್—ಯಾವಾಗ| ಭೃಷ್ಟಿಮತಾ—ಚೂಪಾಗಿಯೂ | ವಧೇನ—ವಧಸಾಧನವಾಗಿಯೂ ಇರುವ ವಜ್ರಾಯುಧದಿಂದ | ವೃತ್ರಸ್ಯ—ವೃತ್ರನ | ಆನಂ ಪ್ರತಿ—ಮುಖವನ್ನು ಕುರಿತು ಅಥವಾ ಶ್ವಾಸಹೇತುವಾದ ನಾಸಿಕದ ಮೇಲೆ| ನಿಜಘಂಥ—ಚೆನ್ನಾಗಿ ಹೊಡದೆಯೋ (ಆಗ)| ವಿಶ್ವೇ ದೇವಾಸಃ—ಆ ಸಕಲ ಮರುದ್ದೇವತೆಗಳೂ | ತ್ವಾ—ನಿನ್ನನ್ನು | ಅನು ಅಮದನ್—ಅನುಕ್ರಮವಾಗಿ ಸಂತೋಷಗೊಳಿಸಿದರು ಅಥವಾ ಅನುಸರಿಸಿ ಕ್ರಮವಾಗಿ ಸಂತೋಷಗೊಂಡರು |

|| ಭಾವಾರ್ಥ ||

ಎಲೈ ಇಂದ್ರನೇ, ಈ ಯುದ್ಧಕಾಲದಲ್ಲಿ ಮರುತ್ತುಗಳು ನಿನ್ನನ್ನು ಪೂಜಿಸಿದರು. ಯುದ್ಧಮಾಡುವಾಗ ನೀನು ಚೂಪಾಗಿಯೂ, ಕೊಲ್ಲತಕ್ಕದ್ದಾಗಿಯೂ ಇರುವ ನಿನ್ನ ವಜ್ರಾಯುಧದಿಂದ ವೃತ್ರನ ಮುಖಕ್ಕೆ ಹೊಡೆದಾಗ ಎಲ್ಲ ಮರುದ್ದೇವತೆಗಳೂ ನಿನ್ನಂತೆಯೇ ಹರ್ಷಿತರಾದರು



CC-0. Jangamwadi Math Collection. Digitized by eGangotri

## English Translation.

The Maruts worshipped you in this battle ; all the gods in this engagement imitated you in exulation, when you had struck the face of Vritra with your sharp and fatal bolt.

॥ ವಿಶೇಷ ವಿಷಯಗಳು ॥

ಆರ್ಚನ್—ಮರುದ್ದೇವತೆಗಳು ಪ್ರಹರ ಭಗವೋ ಜಹಿ ವೀರಯಸ್ವ (ಐ. ಬ್ರಾ. ೩-೨೦) ಇತ್ಯಾದಿ ಸ್ತುತಿವಚನಗಳಿಂದ ಇಂದ್ರನನ್ನು ಪೂಜಿಸಿದರು.

ಅನು ಅಮದನ್—ಮರುತ್ತುಗಳು ಕ್ರಮವಾಗಿ ಇಂದ್ರನಿಗೆ ಸಂತೋಷವನ್ನುಂಟುಮಾಡಿದರು. ಅಥವಾ ಇಂದ್ರನು ಸಂತೋಷಪಟ್ಟಮೇಲೆ ತಾವೂ ಹರ್ಷಯುತರಾದರು ಎಂದು ಈ ಎರಡು ರೀತಿಯಲ್ಲಿಯೂ ಅರ್ಥ ಹೇಳಬಹುದು.

ಭೃಷ್ಟಿಮತಾ—ಭ್ರಂಶಯತಿ ಶತ್ರೂನ್ ಇತಿ ಭೃಷ್ಟಿಃ ತದ್ವತಾ—ಶತ್ರುಗಳನ್ನು ಧ್ವಂಸಮಾಡುವ ಅಲಗಿಗೆ ಭೃಷ್ಟಿ ಅಥವಾ ಅಶ್ರಿ ಎಂದು ಹೆಸರು. ವಜ್ರಾಯುಧವು ಅಂತಹ ಅಲುಗುಗಳುಳ್ಳದ್ದು. ಇದನ್ನೇ ವಜ್ರೋ ವಾ ಏಷ ಯದ್ಯೂಪಃ ಸೋಽಷ್ಟಾಶ್ರಿಃ ಕರ್ತವ್ಯೋಽಷ್ಟಾಶ್ರಿರ್ವೈ ವಜ್ರಃ (ಐ. ಬ್ರಾ ೨-೧) ಎಂಬ ಶ್ರುತಿಯು ತಿಳಿಸುವುದು.

ಆನಂ ಪ್ರತಿ—ಆನಶಬ್ದಕ್ಕೆ ಆನನ (ಮುಖ) ಅಥವಾ ಉಸಿರಾಡಲು ಸಾಧಕವಾದ ನಾಸಿಕ (ಮೂಗು) ಎಂಬ ಎರಡರ್ಥವಿದೆ. ಇಂದ್ರನು ವೃತ್ರಾಸುರನ ಮುಖದ ಮೇಲೋ ಅಥವಾ ಮೂಗಿನ ಮೇಲೋ ಬಲವಾಗಿ ಹೊಡೆದನು ಎಂದರ್ಥವಾಗುವುದು. ಆನನ ಶಬ್ದವು ವರ್ಣಲೋಪವಾಗಿ ವೇದದಲ್ಲಿ ಉಚ್ಚರಿತವಾದರೆ, ಮುಖವೆಂದೂ, ಅನ್ಯತೇ ಅನೇನ ಎಂದು ವ್ಯುತ್ಪತ್ತಿ ಮಾಡಿದರೆ ನಾಸಿಕವೆಂದೂ ಅರ್ಥವಾಗುವುದು.

॥ ವ್ಯಾಕರಣಪ್ರಕ್ರಿಯಾ ॥

ಆರ್ಚನ್—ಅರ್ಚ ಪೂಜಾಯಾಂ ಧಾತು. ಭ್ವಾದಿ ಲಙ್ ಪ್ರಥಮಪುರುಷ ಬಹುವಚನದಲ್ಲಿ ಝೋಂತಃ ಎಂಬುದರಿಂದ ಅಂತಾದೇಶ. ಇತಶ್ಚ ಎಂಬುದರಿಂದ ಅಲ್ಲಿ ಇಕಾರಲೋಪ. ಕರ್ತರಿಶಪ್ ಎಂಬುದರಿಂದ ಶಪ್ ವಿಕರಣ. ಅತೋಗುಣೇ ಎಂಬುದರಿಂದ ಪರರೂಪ. ಅಜಾದಿಯಾದುದರಿಂದ ಆಡಜಾದೀನಾಂ ಎಂಬುದರಿಂದ ಅಂಗಕ್ಕೆ ಆಡಾಗಮ. ಆಟಶ್ಚ ಸೂತ್ರದಿಂದ ವೃದ್ಧಿ. ಪಾದಾದಿಯಲ್ಲಿರುವುದರಿಂದ ನಿಘಾತ ಪ್ರತಿಷೇಧ ಬರುವುದರಿಂದ ಆಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

ಸಸ್ಮಿನ್—ತಸ್ಮಿನ್ ಎಂಬರ್ಥದಲ್ಲಿ ಸಸ್ಮಿನ್ ಎಂದಾಗುತ್ತದೆ. ತದೋಃ ಸಃ ಸಾವನಂತ್ಯಯೋಃ (ಪಾ. ಸೂ. ೭-೨-೧೦೬) ಎಂಬುದರಿಂದ ವಿಧಿಸಲ್ಪಡುವ ಸತ್ವವು ವ್ಯತ್ಯಯದಿಂದ ಸಪ್ತಮಿಯಲ್ಲೂ ಬರುತ್ತದೆ. ಅಥವಾ ಛಾಂದಸವಾಗಿ ಸರ್ವಸ್ಮಿನ್ ಎಂಬಲ್ಲಿ ವರ್ಣಲೋಪ ಬಂದರೆ ಸಸ್ಮಿನ್ ಎಂದು ರೂಪವಾಗುತ್ತದೆ.

ದೇವಾಸಃ—ದೇವ+ಜಸ್ ಎಂದಿರುವಾಗ ಆಜ್ಜಸೇರಸುಕ್ (ಪಾ. ಸು. ೭-೧-೫೦) ಎಂಬುವರಿಂದ ಅಸುಕಾಗಮ. ದೇವಾಸಸ್ ಎಂದಿರುವಾಗ ರುತ್ವ ವಿಸರ್ಗ ಬಂದರೆ ದೇವಾಸಃ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

ಅಮದನ್—ಮದೀ ಹರ್ಷೇ ಧಾತು. ಲಙ್ ಪ್ರಥಮಪುರುಷ ಬಹುವಚನದಲ್ಲಿ ಅಮದನ್ ಎಂದು ರೂಪವಾಗುತ್ತದೆ. ತಿಙಂತನಿಘಾತ ಸ್ವರ ಬರುತ್ತದೆ.

ಆನಮ್—ಆನನಮ್ ಎಂದಿರುವಾಗ ಛಾಂದಸವಾಗಿ ವರ್ಣಲೋಪ ಬರುವುದರಿಂದ ಆನಂ ಎಂದಾಗುತ್ತದೆ. ಅಥವಾ ಅನ ಪ್ರಾಣನೇ ಧಾತು. ಅನ್ಯತೇ ಅನೇನ ಇತಿ ಆನಮ್. ಕರಣಾರ್ಥದಲ್ಲಿ ಘಞ್ ಪ್ರತ್ಯಯ ಞಿತ್ತಾದುದರಿಂದ ಅತಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಆನಂ ಎಂದಾಗುತ್ತದೆ. ಕರ್ಷಾತ್ವತಃ—(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಜಘಂಥ—ಹನ ಹಿಂಸಾಗತ್ಯೋಃ ಧಾತು ಅದಾದಿ. ಲಿಟ್ ಮಧ್ಯಮಪುರುಷ ಏಕವಚನದ ಸಿಪಿಗೆ ಪರಸ್ಮೈಪದಾನಾಂ—ಎಂಬುದರಿಂದ ಥಲಾದೇಶ. ಥಲ್ ಪರದಲ್ಲಿರುವಾಗ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಕುಹೋಶ್ಚುಃ ಎಂಬುದರಿಂದ ಚುತ್ವ. ಅಭ್ಯಾಸಾಚ್ಚ ಎಂಬುದರಿಂದ ಅಭ್ಯಾಸದ ಪರದಲ್ಲಿರುವ ಹನಿನ ಹಕಾರಕ್ಕೆ ಕುತ್ವದಿಂದ ಘಕಾರಾದೇಶ ಉಪದೇಶೇಽತ್ವತಃ (ಪಾ. ಸೂ. ೭-೨-೬೨) ಸೂತ್ರದಿಂದ ಇಣ್ನಿಷೇಧ. ನಶ್ಚಾಪದಾಂತಸ್ಯಝಲಿ ಎಂಬುದರಿಂದ ನಕಾರಕ್ಕೆ ಅನುಸ್ವಾರ ಅನುಸ್ವಾರಸ್ಯ—ಸೂತ್ರದಿಂದ ಪರಸವರ್ಣದಿಂದ ನಕಾರಾದೇಶ. ಜಘನ್ಥ ಎಂದು ರೂಪವಾಗುತ್ತದೆ. ಥಲ್ ಲಿತ್ತಾದುದರಿಂದ ಲಿತಿ ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಘಕಾರೋತ್ತರಾಕಾರ ಉದಾತ್ತವಾಗುತ್ತದೆ.

—•—

# ಐವತ್ತಮೂರನೆಯ ಸೂಕ್ತವು

|| ಸಾಯಣಭಾಷ್ಯಂ ||

ನ್ಯೂ ಷ್ವಿತ್ಯೇಕಾದಶರ್ಚಂ ತೃತೀಯಂ ಸೂಕ್ತಂ । ದಶಮ್ಯೇಕಾದಶ್ಯೌ ತ್ರಿಷ್ಟುಭೌ । ಶಿಷ್ಟಾ ನವ ಜಗತ್ಯಃ । ಸವ್ಯ ಋಷಿಃ । ಇಂದ್ರೋ ದೇವತಾ । ತಥಾ ಚಾನುಕ್ರಾಂತಂ—ನ್ಯೂ ಷ್ವೇಕಾದಶಾಂತ್ಯೇ ತ್ರಿಷ್ಟುಭಾವಿತಿ । ಅತಿರಾತ್ರೇ ಪ್ರಥಮೇ ಪರ್ಯಾಯೇ ಬ್ರಾಹ್ಮಣಾಚ್ಛಂಸಿನಃ ಶಸ್ತ್ರ ಏತತ್ಸೂಕ್ತಂ । ತಥಾ ಚಾಸೂತ್ರಯದಾಚಾರ್ಯಃ । ನ್ಯೂ ಷು ವಾಚಮುಪ್ರ ಧೂತಸ್ಯ ಹರಿವಃ ಪಿಬೇಹೇತಿ ಯಾಜ್ಯಾ । ಆಶ್ವ. ೬-೪ ಇತಿ ||

ಅನುವಾದವು—ನ್ಯೂ ಷು, ಎಂಬ ಸೂಕ್ತವು ಹತ್ತನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಹತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸವ್ಯನು ಋಷಿಯು, ಇಂದ್ರನೇ ದೇವತೆಯು. ಹತ್ತು ಮತ್ತು ಹನ್ನೊಂದನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು. ಉಳಿದ ಋಕ್ಕುಗಳು ಜಗತೀಛಂದಸ್ಸಿನವು. ಅನುಕ್ರಮಣಿಕೆಯಲ್ಲಿ ನ್ಯೂ ಷ್ವೇಕಾದಶ್ಯಾಂತ್ಯೇ ತ್ರಿಷ್ಟುಭಾವಿತಿ ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದಲ್ಲಿ ಪ್ರಥಮಪರ್ಯಾಯದಲ್ಲಿ ಬ್ರಾಹ್ಮಣಾಚ್ಛಂಸಿಯೆಂಬ ಋತ್ವಿಜನು ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದಲ್ಲಿ ನ್ಯೂ ಷು ವಾಚಮುಪ್ರ ಧೂತಸ್ಯ ಹರಿವಃ ಪಿಬೇಹೇತಿ ಯಾಜ್ಯಾ ಎಂಬ ಸೂತ್ರವು ನಿರ್ದೇಶಿಸುವುದು (ಆ. ೬-೪).



CC-0. Jangamwadi Math Collection. Digitized by eGangotri

## ಸೂಕ್ತ ೫೩

ಮಂಡಲ—೧ ॥ ಅನುವಾಕ—೧೦ ॥ ಸೂಕ್ತ—೫೩ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ—೧೫, ೧೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥
ಋಷಿಃ—ಸವ್ಯ ಆಂಗಿರಸಃ ॥
ದೇವತಾ—ಇಂದ್ರಃ ॥
ಛಂದಃ—೧-೯ ಜಗತೀ | ೧೦, ೧೧ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ನ್ಯೂ೩ ಷು ವಾಚಂ ಪ್ರ ಮಹೇ ಭರಾಮಹೇ ಗಿರ ಇಂದ್ರಾಯ ಸದನೇ ವಿವಸ್ವತಃ |
ನೂ ಚಿದ್ಧಿ ರತ್ನಂ ಸಸತಾಮಿವಾವಿದನ್ನ ದುಷ್ಟುತಿರ್ದ್ರವಿಣೋದೇಷು ಶಸ್ಯತೇ ॥ ೧ ॥

ಪದಪಾಠಃ

ನಿ | ಊಂ ಇತಿ | ಸು | ವಾಚಂ | ಪ್ರ | ಮಹೇ | ಭರಾಮಹೇ | ಗಿರಃ | ಇಂದ್ರಾಯ | ಸದನೇ | ವಿವಸ್ವತಃ |
ನು | ಚಿತ್ | ಹಿ | ರತ್ನಂ | ಸಸತಾಂಽಇವ | ಅವಿದತ್ | ನ | ದುಃಽಸ್ತುತಿಃ | ದ್ರವಿಣಃಽದೇಷು | ಶಸ್ಯತೇ ॥ ೧ ॥

॥ ಸಾಯಣಭಾಷ್ಯಂ ॥

ಮಹೇ ಮಹತ ಇಂದ್ರಾಯ ಸು ವಾಚಂ ಶೋಭನಾಂ ಸ್ತುತಿಂ ನಿ ಪ್ರ ಭರಾಮಹೇ | ನಿತರಾಂ ಪ್ರಯುಂಜ್ಮಹೇ | ಉ ಇತಿ ಪಾದಪೂರಣಃ | ಯತೋ ವಿವಸ್ವತಃ ಪರಿಚರತೋ ಯಜಮಾನಸ್ಯ ಸದನೇ ಯಜ್ಞಗೃಹ ಇಂದ್ರಾಯ ಗಿರಃ ಸ್ತುತಯಃ ಕ್ರಿಯಂತೇ | ಹಿ ಯಸ್ಮಾತ್ಸ ಇಂದ್ರೋ ನೂ ಚಿತ್ ಕ್ಷಿಪ್ರಮೇವ ರತ್ನಂ ರಮಣೀಯಮಸುರಾಣಾಂ ಧನಮವಿದತ್ ವಿಂದತಿ | ತತ್ರ ದೃಷ್ಟಾಂತಃ | ಸಸತಾಮಿವ |





CC-0. Jangamwadi Math Collection. Digitized by eGangotri

ಯಥಾ ಸ್ವಪತಾಂ ಪುರುಷಾಣಾಂ ಧನಂ ಚೋರಃ ಕ್ಷಿಪ್ರಂ ಲಭತೇ ತದ್ವತ್ । ಅತೋಽಸ್ಮಭ್ಯಂ ಧನಂ ದಾತುಂ ಶಕ್ತ ಇತಿ ಭಾವಃ । ದ್ರವಿಣೋದೇಷು ಧನಸ್ಯ ದಾತೃಷು ಪುರುಷೇಷು ದುಷ್ಟುತಿರಸಮೀಚೀನಾ ಸ್ತುತಿರ್ನ ಶಸ್ಯತೇ ನಾಭಿಧೀಯತೇ । ಅತಃ ಸುವಾಚಂ ಪ್ರ ಭರಾಮಹ ಇತಿ ಪೂರ್ವೇಣ ಸಂಬಂಧಃ ॥ ನ್ಯೂ ಷು ಇತ್ಯಸ್ಯೋದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ತತ್ರೋದಾತ್ತಪರತ್ವಾತ್ಸಂಹಿತಾಯಾಂ ಕಂಪ್ಯತೇ । ಇಕಃ ಸುಞಿ । ಪಾ. ೬-೩-೧೩೪ । ಇತಿ ದೀರ್ಘತ್ವಂ । ಸುಞಃ ಇತಿ ಷತ್ವಂ । ಮಹೇ । ಮಹ ಪೂಜಾಯಾಮಿತ್ಯಸ್ಮಾತ್ ಕ್ವಿಪ್ಚೇತಿ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಯದ್ವಾ । ಮಹಚ್ಛಬ್ದಸ್ಯಾಚ್ಛಬ್ದಲೋಪಶ್ಛಾಂದಸಃ । ನೂ ಚಿತ್ । ಋಚಿ ತುನುಘೇತ್ಯಾದಿನಾ । ದೀರ್ಘಃ । ಸಸತಾಮಿವ । ಷಸ ಸ್ವಪ್ನೇ । ಅಸ್ಮಾಚ್ಛತ್ರಂತಾಪಂತೋದಾತ್ತಾತ್ಪರಸ್ಯಾ ವಿಭಕ್ತೇಃ ಶತು-ರನುಮಃ ಇತ್ಯುದಾತ್ತತ್ವಂ । ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ । ಪಾ. ೨-೧-೪-೨ । ಇತಿ ಸಮಾಸಃ । ಅವಿದತ್ । ವಿದ್ಲೃ ಲಾಭೇ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲುಙಿ ಪುಷಾದಿದ್ಯುತಾದೀತಿ ಚ್ಲೇರಙಾದೇಶಃ । ಅಡಾಗಮ ಉದಾತ್ತಃ । ಹಿ ಚೇತಿ ನಿಘಾತಪ್ರತಿ-ಷೇಧಃ । ದ್ರವಿಣೋದೇಷು । ದ್ರವಿಣಾನಿ ಧನಾನಿ ದದಾತೀತಿ ದ್ರವಿಣೋದಾಃ । ದ್ರು ಗತಾವಿತ್ಯಸ್ಮಾತ್ ದ್ರುದಕ್ಷಿಭ್ಯಾಮಿನನ್ । ಉ. ೨-೫೦ । ಇತೀನನ್ಪ್ರತ್ಯಯಾಂತೋ ದ್ರವಿಣಶಬ್ದಃ । ತಸ್ಮಿನ್ ಕರ್ಮ-ಣ್ಯುಪಪದ ಆತೋಽನುಪಸರ್ಗೇ ಕ ಇತಿ ಕಃ । ಪೂರ್ವಪದಸ್ಯ ಸುಗಾಗಮಶ್ಛಾಂದಸಃ । ಕೃದುತ್ತರಪದ-ಪ್ರಕೃತಿಸ್ವರತ್ವಂ । ಶಸ್ಯತೇ । ಶಂಸು ಸ್ತುತೌ । ಯಕ್ಯನಿದಿತಾಮಿತಿ ನಲೋಪಃ ॥

॥ ಭಾಷ್ಯಾರ್ಥ ॥

ಮಹೇ—ಅದ್ಭುತ ಪ್ರಭಾವವುಳ್ಳ । ಇಂದ್ರಾಯ—ಇಂದ್ರನಿಗೆ । ಸು ವಾಚಂ—ಶ್ರೇಷ್ಠವಾದ ಸ್ತೋತ್ರವನ್ನು । ನಿ ಪ್ರ ಭರಾಮಹೇ—ಸಂಪೂರ್ಣವಾಗಿ ಅರ್ಪಿಸುವೆವು । ವಿವಸ್ವತಃ—ಪೂಜಕನಾದ ಯಜಮಾನನ । ಸದನೇ—ಯಜ್ಞ ಗೃಹದಲ್ಲಿ । ಗಿರಃ—(ಇಂದ್ರನಿಗೆ) ಸ್ತೋತ್ರಗಳು (ಅರ್ಪಿತವಾಗುತ್ತವೆ) । ಹಿ—ಏತಕ್ಕೆಂದರೆ । (ಇಂದ್ರಃ—ಇಂದ್ರನು) । ನೂ ಚಿತ್—ಜಾಗ್ರತೆಯಾಗಿಯೇ । ರತ್ನಂ—(ರಾಕ್ಷಸರ) ರಮಣೀಯವಾದ ಧನವನ್ನು । ಸಸತಾಂ ಇವ—ನಿದ್ರೆಮಾಡುವ ಧನಿಕರ ಧನವನ್ನು (ಕಳ್ಳರು ಜಾಗ್ರತೆ) ಹೊಂದುವಂತೆ । ಅವಿದತ್—ಹೊಂದುತ್ತಾನೆ (ಅಪಹರಿಸುತ್ತಾನೆ ಮತ್ತು ನಮಗೆ ಕೊಡಲು ಶಕ್ತನಾಗುತ್ತಾನೆ) । ದ್ರವಿಣೋ-ದೇಷು—ಧನವನ್ನು ದಾನಮಾಡುವವರಲ್ಲಿ । ದುಷ್ಟುತಿಃ—ಅಯೋಗ್ಯಗಳಾದ ಸ್ತೋತ್ರಗಳು । ನ ಶಸ್ಯತೇ—ಗೌರವಿಸಲ್ಪಡುವುದಿಲ್ಲ ॥

॥ ಭಾವಾರ್ಥ ॥

ಇಂದ್ರನ ಪ್ರಭಾವವು ಅತ್ಯದ್ಭುತವಾದುದು. ಶ್ರೇಷ್ಠವಾದ ಸ್ತೋತ್ರಗಳನ್ನರ್ಪಿಸಿ ಅವನನ್ನು ತೃಪ್ತಿಪಡಿಸುವೆವು. ಯಜ್ಞಕರ್ತನಾದ ಯಜಮಾನನ ಯಜ್ಞ ಗೃಹದಲ್ಲಿ ಅವನಿಗೆ ಸ್ತೋತ್ರಗಳು ಅರ್ಪಿತವಾಗುವುವು. ಈ ಸ್ತೋತ್ರಗಳಿಂದ ಉತ್ತೇಜನ ಹೊಂದಿ ಅವನು ಬಹಳ ಜಾಗ್ರತೆಯಲ್ಲಿಯೇ ಕಳ್ಳರು ನಿದ್ರೆಮಾಡುವ ಧನಿಕನ ಧನವನ್ನು ಅಪಹರಿಸುವಂತೆ ರಾಕ್ಷಸರ ರಮಣೀಯಗಳಾದ ಧನಗಳನ್ನು ಅಪಹರಿಸಿ ನಮಗೆ ಹಂಚುವನು. ಧನದಾತರಲ್ಲಿ ಸ್ತೋತ್ರಗಳನ್ನು ಅಯೋಗ್ಯವಾದ ರೀತಿಯಲ್ಲಿ ಅರ್ಪಿಸಿದರೆ ಅವಕ್ಕೆ ಬೆಲೆಯಿಲ್ಲ.



CC-0. Jangamwadi Math Collection. Digitized by eGangotri

## English Translation.

We offer laudatory words to the mighty Indra; we offer filling praise to Indra in the house of the sacrificer engaged in the service. He (Indra) has quickly acquired riches, as a thief hastily carries off the property of the sleeping; Ill-expressed words are not praised among the grivers of wealth.

॥ ವಿಶೇಷ ವಿಷಯಗಳು ॥

ಮುಖ್ಯಾಭಿಪ್ರಾಯವು—ಅತ್ರೇದಮುಕ್ತಂ ಭವತಿ । ನಿದ್ರಿತಾಃ ಪುರುಷಾ ಇವ ಯದಾ ಮನುಷ್ಯಾ ಧನಂ ನೋಪೇಕ್ಷಂತೇ ತಪಸಿ ತೇಭ್ಯ ಇಂದ್ರಃ ಕ್ಷಿಪ್ರಂ ಧನಂ ದದಾತಿ । ಏತಾದೃಶೇಷು ಧನದೇಷು ವಿಷಯೇಷು ಚ ಸಮೀಚೀನಾ ಸ್ತುತಿಃ ಶಂಸ್ಯಾ ಭವತಿ । ಅತಃ ಕಾರಣಾತ್ಸಮೀಚೀನಾನಿ ಸ್ತೋತ್ರಾಣಿ ರಚಯಿತ್ವಾಸ್ಯ ನೋ ಯಜಮಾನಸ್ಯ ಯಜ್ಞಶಾಲಾಯಾಂ ಮಹತ ಇಂದ್ರಾಯೋರ್ಪಯಾಮೇತಿ ॥ ನಿದ್ರೆಮಾಡುತ್ತಿರುವ ಮನುಷ್ಯರಿಗೆ ದ್ರವ್ಯದ ವಿಷಯದಲ್ಲಿ ಯಾವ ಚಿಂತೆಯೂ ಇರುವುದಿಲ್ಲ. ಅದರಂತೆ ದ್ರವ್ಯ ವಿಷಯದಲ್ಲಿ ಗಮನವಿಲ್ಲದಿದ್ದರೂ ಇಂದ್ರನನ್ನು ಸ್ತುತಿಸುವ ಸ್ತೋತೃಗಳಿಗೆ ಇಂದ್ರನು ಬೇಗನೆ ಧನವನ್ನು ಕೊಟ್ಟೇಕೊಡುವನು. ಆದುದರಿಂದ ಯಜ್ಞಮಾಡುವ ಯಜಮಾನನ ಯಜ್ಞಶಾಲೆಯಲ್ಲಿ ಸ್ತೋತ್ರಾರ್ಹನಾದ ಇಂದ್ರನ ವಿಷಯದಲ್ಲಿ ಉತ್ತಮವಾದ ಸ್ತೋತ್ರಗಳನ್ನು ರಚಿಸಿ ಇಂದ್ರನಿಗೆ ಅರ್ಪಿಸೋಣ ಎಂಬ ಅಭಿಪ್ರಾಯವು ವ್ಯಕ್ತವಾಗುವುದು.

ನಿ+ಊ+ಸು= ನ್ಯೂಷು—ಇಲ್ಲಿ ನಿ ಎಂಬುದು ಉಪಸರ್ಗ. ಊಕಾರವು ಪಾದಪೂರಣಾರ್ಥಕವಾದುದು. ಅದಕ್ಕೆ ಯಾವ ಅರ್ಥವೂ ಇರುವುದಿಲ್ಲ. ಸು ಶಬ್ದಕ್ಕೆ ಶೋಭನವಾದ ಎಂದರ್ಥ. ಸು ಶಬ್ದವು ವಾಕ್ ಶಬ್ದಕ್ಕೆ ವಿಶೇಷಣವೆನಿಸಿದೆ.

ರತ್ನಂ—ರಮಣೀಯವಾದ ರಾಕ್ಷಸರ ಧನ ಎಂಬುದು ಇಲ್ಲಿ ಪ್ರಕರಣದಿಂದ ಲಭಿಸುವ ಅರ್ಥ.

ಸಸತಾಂ ಇವ—ಷಸ ಸ್ವಪ್ನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ನಿದ್ರೆಮಾಡುವವರ ಹಣದಂತೆ ಎಂದರ್ಥಕೊಡುವುದು. ಇಂದ್ರನು ರಾಕ್ಷಸರ ಧನವನ್ನೆಲ್ಲಾ ಅಪಹರಿಸಿ ಯಜಮಾನನೇ ಮೊದಲಾದ ಸತ್ಪುರುಷರಿಗೆ ಕೊಡುವನು ಎಂಬುದಕ್ಕೆ ಮೇಲಿನ ವಿಷಯವು ದೃಷ್ಟಾಂತವಾಗಿ ಕೊಡಲ್ಪಟ್ಟಿದೆ.

ದುಷ್ಟುತಿಃ—ಅಸಮೀಚೀನಾ ಸ್ತುತಿಃ—ಮನಸ್ಸಿಗೆ ಹಿತವಲ್ಲದ ಸ್ತೋತ್ರ ಎಂದರ್ಥ.

ದ್ರವಿಣೋದೇಷು—ದ್ರು ಗತೌ ಎಂಬ ಧಾತುವಿನಿಂದ ದ್ರವಿಣಶಬ್ದವು ಸಿದ್ಧವಾಗಿದೆ. ಅಂತಹ ದ್ರವಿಣ (ಚಂಚಲವಾದ ದ್ರವ್ಯ)ವನ್ನು ಕೊಡುವವರು ದ್ರವಿಣೋದರು. ದ್ರವ್ಯವನ್ನು ದಾನಮಾಡುವವರಲ್ಲಿ ಅಸಮೀಚೀನವಾದ ಸ್ತುತಿಯು ಫಲಕಾರಿಯಾಗಲಾರದು ಎಂಬುದು ಪ್ರಸಿದ್ಧವಾಗಿಯೇ ಇರುವುದು.

॥ ವ್ಯಾಕರಣಪ್ರಕ್ರಿಯಾ ॥

ನ್ಯೂ ಷು—ನಿ+ಊ ಎಂದಿರುವಾಗ ಯಣಾದೇಶ. ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ ಎಂಬುದರಿಂದ ಉದಾತ್ತಸ್ಥಾನಕ್ಕೆ ಯಣ್ ಬಂದಿರುವುದರಿಂದ ಅದರ ಮುಂದಿರುವ ಅನುದಾತ್ತವಾದ ಊ ಎಂಬುದಕ್ಕೆ ಸ್ವರಿತಸ್ವರ ಬರುತ್ತದೆ. ಆದಕ್ಕೆ ಷು ಎಂಬ ಉದಾತ್ತವು ಪರದಲ್ಲಿರುವುದರಿಂದ ಸಂಹಿತಾಪಾಠ



CC-0. Jangamwadi Math Collection. Digitized by eGangotri

ದಲ್ಲಿ ಪೂರ್ವಕ್ಕೆ ಕಂಪ ಬರುತ್ತದೆ. ಇಕಃ ಸುಞಿ (ಪಾ. ಸೂ. ೬-೩-೧೩೪) ಎಂಬುದರಿಂದ ಉ ಎಂಬುದಕ್ಕೆ ದೀರ್ಘ ಬರುತ್ತದೆ. ಸೂಞಃ (ಪಾ. ಸೂ. ೮-೩-೧೦೭) ಪೂರ್ವಪದದಲ್ಲಿರುವ ನಿಮಿತ್ತದ ಪರದಲ್ಲಿರುವ ನಿಪಾತವಾದ ಸುಞಿನ ಸಕಾರಕ್ಕೆ ಷತ್ವಬರುತ್ತದೆ-

ಮಹೇ—ಮಹ ಪೂಜಾಯಾಂ ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್. ಮಹ್ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಮಹೇ ಎಂದು ರೂಪವಾಗುತ್ತದೆ. ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಅಥವಾ ಮಹಚ್ಛಬ್ದದ ಅತಿಗೆ ಛಾಂದಸವಾಗಿ ಲೋಪ ಬರುತ್ತದೆ. ಆಗಲೂ ಹಿಂದಿನಂತೆಯೇ ಸ್ವರ.

ನೂ ಚಿತ್—ನು ಚಿತ್ ಎಂದಿರುವಾಗ ಋ ಚ ತು ನು ಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಸಸತಾಮಿವ—ಷಸ ಸ್ವಪ್ನೇ ಧಾತು. ಲಡರ್ಥದಲ್ಲಿ ಶತೃ. ಷಷ್ಠೀ ಬಹುವಚನದಲ್ಲಿ ಸಸತಾಂ ಎಂದು ರೂಪವಾಗುತ್ತದೆ. ಶತುರನುಮೋನದ್ಯಜಾದೀ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ. ಆಮೇಲೆ ಇವಶಬ್ದದಿಂದ ಸಮಾಸ. ಇವೇನ ವಿಭಕ್ತ್ಯಲೋಪಃ ಪೂರ್ವಪದಪ್ರಕೃತಿಸ್ವರತ್ವಂ ಚ (ಪಾ. ಸೂ. ೨-೧-೪-೨) ಎಂಬುದರಿಂದ ಸಮಾಸವಾದಾಗ ವಿಭಕ್ತಿಗೆ ಲೋಪವು ಬರುವುದಿಲ್ಲ. ಸಸತಾಮಿವ ಎಂದೇ ರೂಪವಾಗುತ್ತದೆ.

ಅವಿದನ್—ವಿದ್ಲೃ ಲಾಭೇ ಧಾತು. ಛಂದಸಿ ಲುಙ್‌ಲಙ್‌ಲಿಟಃ ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಪ್ರಥಮಪುರುಷವಚನಕ್ಕೆ ಅಂತಾದೇಶ ಬಂದಾಗ ಇತಶ್ಚ ಎಂಬುದರಿಂದ ಇಕಾರಲೋಪ. ಸಂಯೋಗಾಂತಲೋಪದಿಂದ ತಕಾರ ಲೋಪ. ಪುಷಾದಿದ್ಯುತಾದಿ—(ಪಾ. ಸೂ. ೩-೧-೫೫) ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಅಙಾದೇಶ. ಲುಙ್ ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ. ಹಿ ಎಂದು ಹಿಂದೆ ಇರುವುದರಿಂದ ಹಿಚ (ಪಾ. ಸೂ. ೮-೧-೩೪) ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುವುದರಿಂದ ಅಡಾಗಮದ ಉದಾತ್ತಸ್ವರವೇ ಉಳಿಯುತ್ತದೆ.

ದ್ರವಿಣೋದೇಷು—ದ್ರವಿಣಾನಿ ಧನಾನಿ ದದಾತಿ ಇತಿ ದ್ರವಿಣೋದಾಃ. ದ್ರು ಗತೌ ಧಾತು. ಇದಕ್ಕೆ ದ್ರುದಕ್ಷಿಭ್ಯಾಮಿನನ್ (ಉ. ಸೂ. ೨-೨೦೮) ಎಂಬುದರಿಂದ ಇನನ್ ಪ್ರತ್ಯಯ. ಪ್ರತ್ಯಯ ಪರದಲ್ಲಿರುವಾಗ ಧಾತುವಿಗೆ ಗುಣ. ರೇಫದ ಪರದಲ್ಲಿ ನಕಾರ ಬಂದುದರಿಂದ ಅಟ್‌ಕುಪ್ವಾಙ್—ಸೂತ್ರದಿಂದ ಣತ್ವ. ದ್ರವಿಣ ಎಂದು ಶಬ್ದವಾಗುತ್ತದೆ. ಕರ್ಮವಾಚಕವಾದ ದ್ರವಿಣಶಬ್ದವು ಉಪಪದವಾಗಿರುವಾಗ ಆತೋನುಪಸರ್ಗೇ ಕಃ (ಪಾ. ಸೂ. ೩-೨-೩) ಎಂಬುದರಿಂದ ದಾ ಧಾತುವಿಗೆ ಕ ಪ್ರತ್ಯಯ. ಕಿತ್ತಾದುದರಿಂದ ಅದು ಪರದಲ್ಲಿರುವಾಗ ಆತೋಲೋಪ ಇಟಿಚ (ಪಾ. ಸೂ. ೬-೪-೬೪) ಎಂಬುದರಿಂದ ದಾ ಧಾತುವಿನ ಆಕಾರಕ್ಕೆ ಲೋಪ. ಪೂರ್ವಪದವಾದ ದ್ರವಿಣ ಎಂಬುದಕ್ಕೆ ಛಾಂದಸವಾಗಿ ಸುಗಾಗಮ ಬರುತ್ತದೆ. ಅಂತಾದೇಶವಾಗಿ ಬರುವುದರಿಂದ ಅದಕ್ಕೆ ರುತ್ವ. ಹಶಿಚ ಎಂಬುದರಿಂದ ಉತ್ವ ಗುಣ. ದ್ರವಿಣೋದ ಎಂದು ರೂಪವಾಗುತ್ತದೆ. ಕಾರಕಪೂರ್ವಪದವಾಗಿರುವುದರಿಂದ ಗತಿಕಾರಕೋ—ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಸಪ್ತಮೀ ಬಹುವಚನಾಂತರೂಪ.

ಶಸ್ಯತೇ—ಶಂಸು ಸ್ತುತೌ ಧಾತು. ಕರ್ಮಣಿ ಲಟ್. ಸಾರ್ವಧಾತುಕೇ ಯಕ್ (ಪಾ. ಸೂ. ೩-೧-೬೭) ಎಂಬುದರಿಂದ ಯಕ್ ವಿಕರಣ ಕಿತ್ತಾದುದರಿಂದ ಅದು ಪರದಲ್ಲಿರುವಾಗ ಅನಿದಿತಾಂಹಲ—ಎಂಬುದ



CC-0. Jangamwadi Math Collection. Digitized by eGangotri

ರಿಂದ ಧಾತುವಿನ ಉಪಧಾನಕಾರಕ್ಕೆ ಲೋಪ. ಟಿತ ಆತ್ಮನೇಪದಾನಾಂ—ಸೂತ್ರದಿಂದ ಪ್ರತ್ಯಯಾಕಾರಕ್ಕೆ ಏತ್ವ. ಶಸ್ಯತೇ ಎಂದು ರೂಪವಾಗುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ದುರೋ ಅಶ್ವಸ್ಯ ದುರ ಇಂದ್ರ ಗೋರಸಿ ದುರೋ ಯವಸ್ಯ ವಸುನ
ಇನಸ್ಪತಿಃ।
ಶಿಕ್ಷಾನರಃ ಪ್ರದಿವೋ ಅಕಾಮಕರ್ಶನಃ ಸಖಾ ಸಖಿಭ್ಯಸ್ತಮಿದಂ ಗೃಣೀ-
ಮಸಿ ॥ ೨ ॥

॥ ಪದಪಾಠಃ ॥

ದುರಃ । ಅಶ್ವಸ್ಯ । ದುರಃ । ಇಂದ್ರ । ಗೋಃ । ಅಸಿ । ದುರಃ । ಯವಸ್ಯ । ವಸುನಃ ।
ಇನಃ । ಪತಿಃ ।
ಶಿಕ್ಷಾನರಃ । ಪ್ರದಿವಃ । ಅಕಾಮಕರ್ಶನಃ । ಸಖಾ । ಸಖಿಭ್ಯಃ । ತಂ । ಇದಂ ।
ಗೃಣೀಮಸಿ ॥ ೨ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಶ್ವಸ್ಯ ದುರೋ ದಾತಾಸಿ । ತಥಾ ಗೋಃ ಪಶ್ವಾದೇರ್ದುರೋ ದಾತಾಸಿ । ತಥಾ ಯವಸ್ಯ ಯವಾದೇರ್ಧಾನ್ಯಜಾತಸ್ಯ ದುರೋ ದಾತಾಸಿ । ವಸುನೋ ನಿವಾಸಹೇತೋರ್ಧನಸ್ಯೇನಃ ಸ್ವಾಮೀ ಪತಿಃ ಸರ್ವೇಷಾಂ ಪಾಲಯಿತಾ ಶಿಕ್ಷಾನರಃ । ಶಿಕ್ಷತಿರ್ದಾನಕರ್ಮಾ । ಶಿಕ್ಷಾಯಾ ದಾನಸ್ಯ ನೇತಾಸಿ । ಪ್ರದಿವಃ ಪುರಾಣಃ । ಪ್ರಗತಾ ದಿವೋ ದಿವಸಾ ಯಸ್ಮಿನ್ಸ ತಥೋಕ್ತಃ । ಅಕಾಮಕರ್ಶನಃ । ಕಾಮಾನ್ಕರ್ಶಯತಿ ನಾಶಯತೀತಿ ಕಾಮಕರ್ಶನಃ । ನ ಕಾಮಕರ್ಶನೋಽಕಾಮಕರ್ಶನಃ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಹವಿರ್ದತ್ತವತಾಂ ಯಜಮಾನಾನಾಂ ಕಾಮಾನಭಿಮತಫಲಪ್ರದಾನೇನ ಪೂರಯತೀತ್ಯರ್ಥಃ । ಸಖಿಭ್ಯಃ ಸಮಾನಖ್ಯಾನೇಭ್ಯ ಋತ್ವಿಗ್ಭ್ಯಃ ಸಖಾ ಸಖಿವದತ್ಯಂತಂ ಪ್ರಿಯಃ । ಏವಂಭೂತೋ ಯ ಇಂದ್ರಸ್ತಂ ಪ್ರತೀದಂ ಸ್ತೋತ್ರಲಕ್ಷಣಂ ವಚೋ ಗೃಣೀಮಸಿ ಬ್ರೂಮಹೇ ॥



CC-0. Jangamwadi Math Collection. Digitized by eGangotri

ಮುರಃ । ಡುದಾಞ್ ದಾನೇ । ಮಂದಿವಾಶಿಮಥಿಚತಿಚಂಕ್ಯಂಕಿಭ್ಯ ಉರಚ್ । ಉ. ೧-೩೮ । ಇತಿ ವಿಧೀಯಮಾನ ಉರಚ್‌ಪ್ರತ್ಯಯೋ ಬಹುಲವಚನಾದಸ್ಮಾದಪಿ ಭವತಿ । ಅತ ಏವಾಕಾರಲೋಪಃ । ಶಿಕ್ಷಾನರಃ । ಶಿಕ್ಷ ವಿದ್ಯೋಪಾದಾನೇ । ಗುರೋಶ್ಚ ಹಲಃ । ಪಾ. ೩-೩-೧೦೩ । ಇತ್ಯಕಾರಪ್ರತ್ಯಯಃ । ತತಷ್ಟಾಪ್ । ಷಷ್ಠೀಸಮಾಸಃ । ಸಮಾಸಸ್ಯೇತ್ಯಂತೋದಾತ್ತತ್ವಂ । ಗೃಣೀಮಸಿ । ಗೄ ಶಬ್ದೇ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ಇದಂತೋ ಮಸಿರಿತಿ ಮಸೇರಿಕಾರಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ (ನೀನು)। ಅಶ್ವಸ್ಯ—ಕುದುರೆಯು । ದುರಃ—ದಾತನಾಗಿಯೂ। ಗೋಃ—ಪಶ್ವಾದಿಗಳ । ದುರಃ—ದಾತನಾಗಿಯೂ । ಯವಸ್ಯ—ಜವೆಧಾನ್ಯದ । ದುರಃ—ದಾತನಾಗಿಯೂ । ಅಸಿ—ಆಗಿದ್ದೀಯೆ । ವಸುನಃ—(ನಿವಾಸಹೇತುವಾದ) ಧನಕ್ಕೆ । ಇನಃ—ಸ್ವಾಮಿಯಾಗಿಯೂ । ಪತಿಃ—(ಎಲ್ಲರಿಗೂ) ಪಾಲಕನಾಗಿಯೂ । ಶಿಕ್ಷಾನರಃ—ದಾತರಲ್ಲಿ ಮುಂದಾಳಾಗಿಯೂ, । ಪ್ರದಿವಃ—ಪ್ರಾಚೀನನಾಗಿಯೂ । ಅಕಾಮಕರ್ಶನಃ—(ಭಕ್ತರ) ಆಶಾಭಂಗಮಾಡದಿರುವವನಾಗಿಯೂ । ಸಖಿಭ್ಯಃ—ನಮ್ಮ ಸಖಿಗಳಿಂದ ಋತ್ವಿಕ್ಕುಗಳಿಗೆ । ಸಖಾ—ಬೇಕಾದವನಾಗಿಯೂ (ಇರುವ ಯಾವ ಇಂದ್ರನುಂಟೋ) । ತಂ—ಅವನನ್ನು ಕುರಿತು । ಇದಂ—ಈ ಸ್ತೋತ್ರರೂಪವಾದ ವಾಕ್ಕನ್ನು । ಗೃಣೀಮಸಿ—ಹೇಳುತ್ತೇವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಕುದುರೆಯನ್ನೂ, ಪಶುವನ್ನೂ, ಜವೆಧಾನ್ಯವನ್ನೂ ನಮಗೆ ದಾನಮಾಡುತ್ತೀಯೆ. ಯಾವ ಇಂದ್ರನು ಧನದ ಸ್ವಾಮಿಯಾಗಿಯೂ, ಸಕಲರ ಪಾಲಕನಾಗಿಯೂ, ದಾತರಲ್ಲಿ ಮುಂದಾಳಾಗಿಯೂ, ಪ್ರಾಚೀನನಾಗಿಯೂ, ಭಕ್ತರ ಆಶಾಭಂಗಮಾಡದಿರುವವನಾಗಿಯೂ, ನಮ್ಮ ಸಖಿಗಳಾದ ಋತ್ವಿಕ್ಕುಗಳಿಗೆ ಬೇಕಾದವನಾಗಿಯೂ ಇರುವನೋ, ಆ ಇಂದ್ರನನ್ನು ಕುರಿತು ನಮ್ಮ ಸ್ತೋತ್ರವನ್ನು ಪಠಿಸುವೆವು.

## English Translation.

Indra, you are the giver of horses, of cows, of barley, the lord and protector of wealth, the instrument of habitation, the foremost in liberality, the most ancient god; you do not disappoint the desires addressed to you; you are a friend to our friends; we praise such Indra.

॥ ವಿಶೇಷ ವಿಷಯಗಳು ॥

ದುರಃ—ದಾನಮಾಡುವವನು ಎಂಬುದು ಈ ಪದದ ಅರ್ಥ. ಇದು ಡುದಾಞ್ ದಾನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಇಂದ್ರನಿಗೆ ಸರ್ವದಾತೃತ್ವವನ್ನೂ ಈ ಪದವು ತಿಳಿಸುತ್ತದೆ.

ಯವಸ್ಯ—ಇಲ್ಲಿ ಯವಶಬ್ದಕ್ಕೆ ಕೇವಲ ಯವಧಾನ್ಯವಾಚಿತ್ವವಿದ್ದರೂ ಲಕ್ಷಣಾವೃತ್ತಿಯಿಂದ ಯವವೇ ಮೊದಲಾದ ಸಕಲ ಧಾನ್ಯಗಳು ಎಂಬರ್ಥವು ತೋರಿಬರುವುದು.



CC-0. Jangamwadi Math Collection. Digitized by eGangotri

ಶಿಕ್ಷಾನರಃ—ಶಿಕ್ಷತಿರ್ದಾನಕರ್ಮಾ (ನಿರು. ೩-೧೦) ಎಂಬ ನಿರುಕ್ತವಾಕ್ಯದಂತೆ ಶಿಕ್ಷಧಾತುವಿಗೆ ದಾನಮಾಡುವ ಕಾರ್ಯವೆಂಬ ಅರ್ಥವಿದೆ. ಶಿಕ್ಷ ವಿದ್ಯೋಪಾದಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ವಿದ್ಯಾದಿ ಸಕಲ ಗುಣಗಳಿಗೂ ಇಂದ್ರನು ದಾತೃವು ಎಂಬರ್ಥವನ್ನು ಸೂಚಿಸುವುದು.

ಪ್ರದಿವಃ—ಪ್ರಗತಾ ದಿವೋ ದಿವಸಾ ಯಸ್ಮಿನ್ ಸಃ ಎಂಬ ವ್ಯುತ್ಪತ್ತಿಯಿಂದ ಪ್ರದಿವ ಶಬ್ದಕ್ಕೆ ಅನಾದಿಯಾದವನು, ಮತ್ತು ಬಹುಕಾಲದಿಂದಿರುವವನು ಎಂಬರ್ಥವಿರುವುದು.

ಅಕಾಮಕರ್ಶನಃ—ಇಷ್ಟಾರ್ಥಗಳನ್ನು ನಾಶಗೊಳಿಸುವವನು ಕಾಮಕರ್ಶನನೆನಿಸುವನು. ಕಾಮಾನ್ ಕರ್ಶಯತಿ ನಾಶಯತಿ ಇತಿ ಕಾಮಕರ್ಶನಃ ನ ಕಾಮಕರ್ಶನಃ ಅಕಾಮಕರ್ಶನಃ. ಕೇಳಿದ ಇಷ್ಟಾರ್ಥಗಳನ್ನೆಲ್ಲಾ ಹವಿಸ್ಸನ್ನು ಅರ್ಪಿಸುವ ಯಾಗಕರ್ತೃಗಳಿಗೆ ಇಂದ್ರನು ದಯಪಾಲಿಸುವನು ಎಂಬುದೇ ಇದರ ತಾತ್ಪರ್ಯ.

|| ವ್ಯಾಕರಣಪ್ರಕ್ರಿಯಾ ||

ದುರಃ—ಡುದಾಞ್ ದಾನೇ ಧಾತು. ಉಣಾದಯೋಬಹುಲಂ ಎಂಬಲ್ಲಿ ಬಹುಲವಚನದಿಂದ ಮಂದಿವಾಶಿಮಥಿಚತಿ ಚಂಕ್ಯಂಕಿಭ್ಯ ಉರಚ್ (ಉ. ಸೂ. ೧-೩೮) ಎಂಬ ಸೂತ್ರದಿಂದ ವಿಧಿಸಲ್ಪಡುವ ಉರಚ್ ಪ್ರತ್ಯಯವು ಈ ಧಾತುವಿನ ಮೇಲೂ ಬರುತ್ತದೆ. ಉರಚ್ ಪ್ರತ್ಯಯ ಪರದಲ್ಲಿರುವಾಗ ಬಹುಲವಚನದಿಂದಲೇ ಧಾತುವಿನ ಆಕಾರಕ್ಕೆ ಲೋಪ. ದುರಃ ಎಂದು ರೂಪವಾಗುತ್ತದೆ. ಚಿತಃ ಎಂಬುದರಿಂದ ಅಂತೋದಾತ್ತ.

ಇಂದ್ರ—ಆಮಂತ್ರಿತಸ್ಯ ಚ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಅಸಿ—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ಏಕವಚನವು ಪರದಲ್ಲಿರುವಾಗ ತಾಸಸ್ತ್ಯೋರ್ಲೋಪಃ ಎಂಬುದರಿಂದ ಧಾತುವಿನ ಸಕಾರಕ್ಕೆ ಲೋಪ ಬರುತ್ತದೆ. ಅಸಿ ಎಂದಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಶಿಕ್ಷಾನರಃ—ಶಿಕ್ಷ ವಿದ್ಯೋಪಾದಾನೇ ಧಾತು. ಗುರೋಶ್ಚ ಹಲಃ (ಪಾ. ಸೂ. ೩-೩-೧೦೩) ಎಂಬುದರಿಂದ ಅಙ್ ಪ್ರತ್ಯಯ ಬರುತ್ತದೆ. ಸಂಯೋಗೇ ಗುರು ಎಂಬುದರಿಂದ ಸಂಯೋಗ ಪರದಲ್ಲಿರುವುದರಿಂದ ಇಕಾರ ಗುರುವಾಗುತ್ತದೆ. ಶಿಕ್ಷ ಎಂದಿರುವಾಗ ಸ್ತ್ರೀತ್ವದಲ್ಲಿ ಅದಂತನಿಮಿತ್ತವಾಗಿ ಟಾಪ್ ಬರುತ್ತದೆ. ಶಿಕ್ಷಾಯಾಃ ನರಃ ಎಂದು ಷಷ್ಠೀಸಮಾಸ. ಸಮಾಸಸ್ಯ (ಪಾ. ಸೂ. ೬-೧-೨೨೩) ಎಂಬುದರಿಂದ ಅಂತೋದಾತ್ತವಾಗುತ್ತದೆ.

ಅಕಾಮಕರ್ಶನಃ—ಕಾಮಾನ್ ಕರ್ಶಯತಿ ನಾಶಯತಿ ಇತಿ ಕಾಮಕರ್ಶನಃ. ಕರ್ತ್ರರ್ಥದಲ್ಲಿ ಲ್ಯುಟ್. ಯುವೋರನಾಕೌ ಎಂಬುದರಿಂದ ಅನಾದೇಶ. ಪುಗಂತಲಘೂಪಧಸ್ಯ ಎಂಬುದರಿಂದ ಧಾತೂಪಧೆಗೆ ವೃದ್ಧಿ. ನ ಕಾಮಕರ್ಶನಃ ಅಕಾಮಕರ್ಶನಃ ತತ್ಪುರುಷೇ ತುಲ್ಯಾರ್ಥ (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

ಗೃಣೀಮಸಿ—ಗೄ ಶಬ್ದೇ ಧಾತು ಕ್ರ್ಯಾದಿ. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾ ವಿಕರಣ. ಪ್ವಾದೀನಾಂ ಹ್ರಸ್ವಃ ಎಂಬುದರಿಂದ ಶ್ನಾ ಪರದಲ್ಲಿರುವಾಗ ಧಾತುವಿಗೆ ಹ್ರಸ್ವ ಬರುತ್ತದೆ. ಈಹಲ್ಯಘೋಃ (ಪಾ. ಸೂ. ೬-೪-೧೧೩) ಎಂಬುದು ಙಿತ್ತಾದ ಪ್ರತ್ಯಯ ಪರದಲ್ಲಿರುವುದರಿಂದ ಶ್ನಾ ಪ್ರತ್ಯಯಾಕಾರಕ್ಕೆ ಈತ್ವ ಬರುತ್ತದೆ. ಋವರ್ಣಾನ್ನಸ್ಯಣತ್ವಂ ವಾಚ್ಯಂ ಎಂಬುದರಿಂದ



CC-0. Jangamwadi Math Collection. Digitized by eGangotri

ನಕಾರಕ್ಕೆ ಣತ್ವ. ಗೃಣೀಮಸ್ ಎಂದಿರುವಾಗ ಇದಂತೋಮಸಿ (ಪಾ. ಸೂ. ೭-೧-೪೬) ಎಂಬುದರಿಂದ ಪ್ರತ್ಯಯಕ್ಕೆ ಇಕಾಗಮದಿಂದ ಗೃಣೀಮಸಿ ಎಂದು ರೂಪವಾಗುತ್ತದೆ. ತಿಙ್ಙತಿಙಃ ಎಂಬುದರಿಂದ ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಶಚೀವ ಇಂದ್ರ ಪುರುಕೃದ್ದ್ಯುಮತ್ತಮ ತವೇದಿದಮಭಿತಶ್ಚೇಕಿತೇ ವಸು ।
ಅತಃ ಸಂಗೃಭ್ಯಾಭಿಭೂತ ಆ ಭರ ಮಾ ತ್ವಾಯತೋ ಜರಿತುಃ ಕಾಮ-
ಮೂನಯೀಃ ॥ ೩ ॥

॥ ಪದಪಾಠಃ ॥

ಶಚೀऽವಃ । ಇಂದ್ರ । ಪುರುऽಕೃತ್ । ದ್ಯುಮತ್ऽತಮ । ತವ । ಇತ್ । ಇದಂ ।
ಅಭಿತಃ । ಚೇಕಿತೇ । ವಸು ।
ಅತಃ । ಸಂऽಗೃಭ್ಯ । ಅಭಿऽಭೂತೇ । ಆ । ಭರ । ಮಾ । ತ್ವಾऽಯತಃ । ಜರಿತುಃ ।
ಕಾಮಂ । ಊನಯೀಃ ॥ ೩ ॥

॥ ಸಾಯಣಭಾಷ್ಯ ॥

ಶಚೀವಃ । ಶಚೀತಿ ಪ್ರಜ್ಞಾನಾಮ । ಹೇ ಇಂದ್ರ ಶಚೀವಃ ಪ್ರಜ್ಞಾವನ್ ಪುರುಕೃತ್ ಪ್ರಭೂತಸ್ಯ ವೃತ್ರವಧಾದೇಃ ಕರ್ತಃ ದ್ಯುಮತ್ತಮಾತಿಶಯೇನ ದೀಪ್ತಿಮನ್ ಅಭಿತಃ ಸರ್ವತ್ರ ವರ್ತಮಾನಂ ವಸು ಧನಂ ಯದಸ್ತಿ ತದಿದಂ ತವೇತ್ ತವೈವ ಸ್ವಭೂತಮಿತಿ ಚೇಕಿತೇ ಭೃಶಮಸ್ಮಾಭಿರ್ಜ್ಞಾಯತೇ । ಅತಃ ಕಾರಣಾದ್ಧನಂ ಸಂಗೃಭ್ಯ ಸಮ್ಯಕ್ ಗೃಹೀತ್ವಾಭಿಭೂತೇ ಶತ್ರೂಣಾಮಭಿಭವಿತರಾಭರ । ಅಸ್ಮಭ್ಯಮಾಹರ । ದೇಹೀತ್ಯರ್ಥಃ । ತ್ವಾಯತಸ್ತ್ವಾಮಾತ್ಮನ ಇಚ್ಛತೋ ಜರಿತುಃ ಸ್ತೋತುಃ ಕಾಮಮಭಿಲಾಷಂ ಮೋನಯೀಃ । ಪರಿಹೀನಂ ಮಾ ಕಾರ್ಷೀಃ । ಪೂರಯೇತ್ಯರ್ಥಃ ॥ ಶಚೀವಃ । ಮತುವಸೋ ರುರಿತಿ ರುತ್ವಂ । ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ನ ಚಾಮಂತ್ರಿತಂ ಪೂರ್ವಮವಿದ್ಯಮಾನವದಿತ್ಯವಿದ್ಯಮಾನವತ್ತ್ವಂ । ಇತರೇಷ್ವಾಷ್ಟಮಿಕಂ ಸರ್ವಾನುದಾತ್ತತ್ವಂ । ನಾಮಂತ್ರಿತೇ ಸಮಾನಾಧಿಕರಣ ಇತಿ ನಿಷೇಧಾತ್ । ಚೇಕಿತೇ । ಕಿತ ಜ್ಞಾನೇ । ಅಸ್ಮಾದ್ಯಙಂತಾದ್ವರ್ತಮಾನೇ



CC-0. Jangamwadi Math Collection. Digitized by eGangotri

ಲಿಟ್ಯಮಂತ್ರೇ । ಪಾ. ೩-೧-೩೫ । ಇತಿ ನಿಷೇಧಾದಾಮ್ಪ್ರತ್ಯಯಾಭಾವೇ ಸತಿ ಲಿಟ ಆರ್ಧಧಾತುಕತ್ವಾದ-ಕೋಲೋಪಯಲೋಪೌ । ಸಂಗೃಭ್ಯ ಆಭರೇತ್ಯುಭಯತ್ರ ಹೃಗ್ರಹೋರ್ಭಶ್ಛಂದಸಿ ಪಾ. ೮-೨-೩೨-೧ । ಇತಿ ಭತ್ವಂ । ತ್ವಾಯತಃ । ತ್ವಾಮಾತ್ಮನ ಇಚ್ಛತಿ । ಸುಪ ಆತ್ಮನಃ ಕ್ಯಚ್ । ಪ್ರತ್ಯಯೋತ್ತರಪದಯೋಶ್ಚೇ-ತಿ ಮಪರ್ಯಂತಸ್ಯ ತ್ವಾದೇಶಃ । ಛಾಂದಸಮಾತ್ವಂ । ಕ್ಯಜಂತಾಲ್ಲಟಃ ಶತೃ । ತಸ್ಯಾದುಪದೇಶಾಲ್ಲಸಾ-ರ್ವಧಾತುಕಸ್ವರೇಣಾನುದಾತ್ತಸ್ಯೈಕಾದೇಶಸ್ವರೇಣೋದಾತ್ತತ್ವಂ । ಏಕಾದೇಶಸ್ವರೋಽಂತರಂಗಃ ಸಿದ್ಧೋ ಭವತೀತಿ ವಕ್ತವ್ಯಂ । ಪಾ. ೮-೨-೬-೧ । ಇತಿ ವಚನಾತ್ತಸ್ಯ ಸಿದ್ಧತ್ವೇ ಸತಿ ಶತುರನುಮ ಇತ್ಯಜಾದಿ-ವಿಭಕ್ತೇರುದಾತ್ತತ್ವಂ । ಕಾಮಂ । ಕಮು ಕಾಂತಾವಿತ್ಯಸ್ಮಾದ್ಭಾವೇ ಘಞ್ । ಕರ್ಷಾತ್ವತೆ ಇತ್ಯಂತೋದಾ-ತ್ತತ್ವೇ ಪ್ರಾಪ್ತೇ ವೃಷಾದಿಷು ಪಾಠಾದಾದ್ಯುದಾತ್ತತ್ವಂ । ಊನಯೀಃ । ಊನ ಪರಿಹಾಣೇ । ಚುರಾದಿಃ । ಲುಙಿ ಣಿಶ್ರಿದ್ರುಸ್ರುಭ್ಯಃ । ಪಾ. ೩-೧-೪೮ । ಇತಿ ಚ್ಲೇಶ್ಚಙಾದೇಶಸ್ಯ ನೋನಯತಿಧ್ವನಯತೀತ್ಯಾದಿನಾ । ಪಾ. ೩-೧-೫೧ । ಪ್ರತಿಷೇಧಃ । ಹ್ಮ್ಯಂತಕ್ಷಣೇತಿ । ಪಾ. ೭-೨-೫ । ಸಿಚಿ ವೃದ್ಧಿಪ್ರತಿಷೇಧಃ ॥

॥ ಪ್ರತಿಪದಾರ್ಥ ॥

ಶಚೀವಃ—ಪ್ರಜ್ಞಾವಂತನೂ । ಪುರುಕೃತ್—(ವೃತ್ರವಧಾದಿ) ಅದ್ಭುತ ಕರ್ಮಗಳನ್ನು ಮಾಡಿದ ವನೂ । ದ್ಯುಮತ್ತಮ—ಅತ್ಯಂತವಾಗಿ ಪ್ರಜ್ವಲಿಸುವವನೂ ಆದ । ಇಂದ್ರ—ಎಲೈ ಇಂದ್ರನೇ । ಅಭಿತಃ—ಸುತ್ತಲೂ (ಇರತಕ್ಕ) । ವಸು—ಧನವು (ಯಾವುದಿದೆಯೋ) । ಇದಂ—ಅದೆಲ್ಲ । ತವೇತ್—ನಿನ್ನದೇನೇ ಎಂದು । ಚೇಕಿತೇ—ನಮಗೆ ತಿಳಿದಿದೆ । ಅತಃ—ಆದ್ದರಿಂದ । ಸಂಗೃಹ್ಯ—(ಧನವನ್ನು) ಶೇಖರಿಸಿಕೊಂಡು । ಅಭಿ-ಭೂತೇ । ಶತ್ರುಗಳನ್ನು ಜಯಿಸಿದ ಇಂದ್ರನೇ । ಆ ಭರ—ನಮಗೆ ತಂದುಕೊಡು । ತ್ವಾಯತಃ—ನಿನ್ನನ್ನೇ ಅಪೇಕ್ಷಿಸಿದ (ನಂಬಿದ) । ಜರಿತುಃ—ಸ್ತೋತೃವಿಗೆ । ಕಾಮಂ—ಆಸೆಯನ್ನು । ಮಾ ಊನಯೀಃ—ಭಂಗ ಮಾಡಬೇಡ (ಪೂರೈಸು) ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಪ್ರಜ್ಞಾವಂತನು. ಅದ್ಭುತಕರ್ಮಗಳನ್ನು ಮಾಡಿದವನು. ಅತ್ಯಂತವಾಗಿ ಪ್ರಜ್ವಲಿಸುವವನು. ಈ ಸುತ್ತಲೂ ಹರಡಿರುವ ಈ ಧನವು ನಿನ್ನದೇ ಎಂದು ನಮಗೆ ತಿಳಿದಿದೆ. ಆದ್ದರಿಂದ ಆ ಧನವನ್ನೆಲ್ಲ ಶೇಖರಿಸಿಕೊಂಡು ನಮಗೆ ತಂದುಕೊಡು. ಶತ್ರುಜೇತೃವಾದ ಎಲೈ ಇಂದ್ರನೇ, ನಿನ್ನನ್ನೇ ನಂಬಿ ನಿನ್ನ ಸಹಾಯವನ್ನಪೇಕ್ಷಿಸಿದ ನಿನ್ನ ಭಕ್ತನ ಆಸೆಯನ್ನು ಭಂಗಮಾಡದೆ ಅದನ್ನು ಪೂರೈಸು.

## English Translation.

Wise and resplendent Indra, the achiever of mighty deeds, the riches that are spread around are known to be yours; having collected them (victor over your enemies) bring them to us, disappoint not the expectation of the worshipper who trusts in you.





CC-0. Jangamwadi Math Collection. Digitized by eGangotri

|| ವಿಶೇಷ ವಿಷಯಗಳು ||

ಮುಖ್ಯಾಭಿಪ್ರಾಯವು—ಅತ್ರ ಜಗತಿ ಯದ್ಧನಂ ದೃಶ್ಯತೇ ತತ್ಸರ್ವಂ ತವೈವಾಸ್ತಿ । ಅತಃ-ಕಾರಣಾದ್ಧೇ ಇಂದ್ರ, ತತ್ಸರ್ವಂ ತತ್ತತ್ಸ್ಥಾನಾದಾನೀಯಾಸ್ಮಭ್ಯಂ ದೇಹಿ। ಅಸ್ಮಾದೃಶಾನಾಂ ತವ ಸ್ತೋತೄಣಾಂ ಹ್ಯಭಿಲಾಷಂ ಪರಿಹೀನಂ ಕರ್ತುಂ ನಾರ್ಹಸೀತಿ ಭಾವಃ ॥ ಎಲೈ ಇಂದ್ರನೇ ಈ ಜಗತ್ತಿನಲ್ಲಿರುವ ಧನವೆಲ್ಲವೂ ನಿನ್ನದೇ ಆಗಿರುವುದು. ಆದುದರಿಂದ ಎಲ್ಲೆಲ್ಲಿ ಯಾವ ಯಾವ ಉತ್ತಮ ವಸ್ತುಗಳಿವೆಯೋ ಅವೆಲ್ಲವನ್ನೂ ತಂದು ನಮಗೆ ಕೊಡು. ನಿನ್ನನ್ನು ಸ್ತೋತ್ರಮಾಡುವ ನಮ್ಮಂತವರ ವಿಷಯದಲ್ಲಿ ಉದಾಸೀನತೆಯನ್ನು ತಾಳಬೇಡ.

ಶಚೀವಃ—ಇಲ್ಲಿ ಶಚೀ ಶಬ್ದಕ್ಕೆ ಪ್ರಜ್ಞೆ, ವಿಶೇಷ ತಿಳಿವಳಿಕೆ ಎಂದರ್ಥ. (ನಿ- ೨-೩೩)

ಪುರುಕೃತ್—ಪ್ರಭೂತವಾದ ಅಂದರೆ ಯಾರಿಂದಲೂ ಮಾಡಲಸಾಧ್ಯವಾದ ವೃತ್ರವಧರೂಪವಾದ ಕಾರ್ಯಗಳನ್ನು ಮಾಡಿದ ಇಂದ್ರನು ಎಂಬುದು ಈ ಪದದ ವಿಸ್ತೃತಾರ್ಥ.

ಚೇಕಿತೇ—ಕಿತ ಜ್ಞಾನೇ ಎಂಬ ಧಾತುವಿನಿಂದ ಆಗಿರುವ ಈ ರೂಪವು ಬಹಳವಾಗಿ ನಮ್ಮಿಂದ ತಿಳಿಯಲ್ಪಟ್ಟಿದೆ ಎಂಬರ್ಥವನ್ನು ಕೊಡುವುದು.

ಆ ಭರ—ಇಲ್ಲಿ ಆ ಎಂಬ ಉಪಸರ್ಗಕ್ಕೆ ಅಸ್ಮಭ್ಯಂ ಭರ ಅಂದರೆ ನಮಗೆ ವಿಶೇಷರೀತಿಯಲ್ಲಿ ದಯಪಾಲಿಸು ಎಂದರ್ಥವಿದೆ.

ತ್ವಾಯತಃ—ತ್ವಾಮಾತ್ಮನಃ ಇಚ್ಛತಃ—ನಿನ್ನನ್ನೇ ಅಂದರೆ ನಿನ್ನ ಅನುಗ್ರಹವನ್ನೇ ಸಂಪೂರ್ಣವಾಗಿ ಅಪೇಕ್ಷಿಸುವ ನನಗೆ ಎಂದರ್ಥವಾಗುವುದು.

|| ವ್ಯಾಕರಣಪ್ರಕ್ರಿಯಾ ||

ಶಚೀವಃ—ಶಚೀ ಅಸ್ಯ ಅಸ್ತಿ ಇತಿ ಶಚೀವಃ. ಮತುವಸೋ ರುಃ ಸಂಬುದ್ಧೌ (ಪಾ. ಸೂ. ೮-೩-೧) ಎಂಬುದರಿಂದ ರುತ್ವ. ಭೋಭಗೋ—ಸೂತ್ರದಿಂದ ಯತ್ವ. (ಇಕಾರಪರದಲ್ಲಿರುವಾಗ) ಲೋಪಃ-ಶಾಕಲ್ಯಸ್ಯ ಎಂಬುದರಿಂದ ಅದಕ್ಕೆ ಲೋಪ. ಕೇವಲವಿರುವಾಗ ಖರವಸಾನಯೋರ್ವಿ—ಸೂತ್ರದಿಂದ ವಿಸರ್ಗ. ಆಮಂತ್ರಿತಸಂಜ್ಞೆ ಬರುತ್ತದೆ, ಪಾದಾದಿಯಲ್ಲಿರುವುದರಿಂದ ಆಮಂತ್ರಿತಸ್ಯ ಎಂಬ ಆರನೇ ಅಧ್ಯಾಯದ ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ. ಮುಂದಿರುವ ಸಮಾನಾಧಿಕರಣವಾದ ಇಂದ್ರ ಮುಂತಾದ ಆಮಂತ್ರಿತಗಳಿಗೆ ಎಂಟನೇ ಅಧ್ಯಾಯದ ಆಮಂತ್ರಿತಸ್ಯಚ ಎಂಬ ಸೂತ್ರದಿಂದ ಸರ್ವಾನುದಾತ್ತಸ್ವರ ಬರುತ್ತದೆ. ನಿಘಾತಸ್ವರ ಹೇಳುವಾಗ ಪದಾತ್‌ಪರಕತ್ವವನ್ನು (ಒಂದು ಪದವು ಪೂರ್ವದಲ್ಲಿರಬೇಕು) ಹೇಳಿರುತ್ತಾರೆ. ಆಗ ಆಮಂತ್ರಿತಂ ಪೂರ್ವಮವಿದ್ಯಮಾನವತ್ ಎಂಬುದರಿಂದ ಶಚೀವಃ ಎಂಬುದು ಇದ್ದರೂ ಇಲ್ಲದಂತೆ ಆಗುವುದು ಎಂದಿರುವುದರಿಂದ ಇಂದ್ರಾದಿಗಳಿಗೆ ನಿಘಾತಸ್ವರವನ್ನು ಹೇಳುವುದು ಹೇಗೆ? ಎಂದು ಆಶಂಕೆ ಉಂಟಾಗುತ್ತದೆ. ಆದರೆ ಇವೆಲ್ಲವೂ ಏಕಾರ್ಥವಾಚಕಗಳಾದುದರಿಂದ ನಾಮಂತ್ರಿತೇ ಸಮಾನಾಧಿಕರಣೇ ಸಾಮಾನ್ಯವಚನಂ (ಪಾ. ಸೂ. ೮-೧-೭೩) ಎಂದು ನಿಷೇಧಮಾಡಿರುವುದರಿಂದ ಶಚೀವಃ ಎಂಬುದಕ್ಕೆ ಅವಿದ್ಯಮಾನವದ್ಭಾವವಿಲ್ಲದಿರುವುದರಿಂದ ಪದದ ಪರದಲ್ಲಿ ಇಂದ್ರಾದಿಗಳು ಬಂದುದರಿಂದ ಹಿಂದಿನ ಸ್ವರಕ್ಕೆ ಬಾಧವಿಲ್ಲ.

ಚೇಕಿತೇ—ಕಿತ ಜ್ಞಾನೇ ಧಾತು ಭ್ವಾದಿ. ಅತಿಶಯಾರ್ಥವು ತೋರುವಾಗ ಧಾತೋರೇಕಾಚಃ ಎಂಬುದರಿಂದ ಯಙ್. ಯಙಂತದ ಮೇಲೆ ವರ್ತಮಾನಾರ್ಥದಲ್ಲಿ ಛಂದಸಿಲುಙ್‌ಲಙ್‌ಲಿಟಃ ಎಂಬುದರಿಂದ



CC-0. Jangamwadi Math Collection. Digitized by eGangotri

ಲಿಟ್. ಯದ್ಯಪಿ ಪ್ರತ್ಯಯಾಂತವಾದುದರಿಂದ ಆಮ್ ಬರಬೇಕಾಗುತ್ತದೆ. ಆದರೆ ಕಾಸ್ಪ್ರತ್ಯಯಾದಾಮ-ಮಂತ್ರೇ ಲಿಟಿ ಎಂಬಲ್ಲಿ ಅಮಂತ್ರೇ ಎಂದು ನಿಷೇಧಮಾಡಿರುವುದರಿಂದ ಆಮ್ ಬರುವುದಿಲ್ಲ. ಲಿಟಿಗೆ ಆರ್ಧಧಾತುಕಸಂಜ್ಞೆ ಇರುವುದರಿಂದ ಅತೋಲೋಪಃ ಎಂಬುದರಿಂದ ಯಜಿನ ಅಕಾರಕ್ಕೆ ಲೋಪ. ಯಸ್ಯ ಹಲಃ ಎಂಬುದರಿಂದ ಯಲೋಪ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಯಜಿಗೆ ಸ್ಥಾನಿವದ್ಭಾವವಿರುವುದರಿಂದ ಗುಣೋಯಙ್ಲುಕೋಃ (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಲಿಟಸ್ತಝಯೋಃ—ಸೂತ್ರದಿಂದ ತಪ್ರತ್ಯಯಕ್ಕೆ ಏಶ್ ಆದೇಶ. ಚೇಕಿತೇ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ಸಂಗೃಭ್ಯ । ಆಭರ । ಗ್ರಹ ಉಪಾದಾನೇ ಧಾತು ಲ್ಯಪ್. ಹೃಞ್ ಹರಣೇ ಧಾತು. ಲೋಟ್ ಮಧ್ಯಮಪುರುಷಏಕವಚನರೂಪ. ಎರಡು ಕಡೆಗಳಲ್ಲಿಯೂ ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭಕಾರಾದೇಶ.

ತ್ವಾಯತಃ—ತ್ವಾಂ ಆತ್ಮನಃ ಇಚ್ಛತಿ ತ್ವಾಯತ್. ಆತ್ಮಸಂಬಂಧಿ ಇಚ್ಛಾರ್ಥದಲ್ಲಿ ಸುಪಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಕ್ಯಚ್. ಯುಷ್ಮದ್+ಯ ಎಂದಿರುವಾಗ ಪ್ರತ್ಯಯೋತ್ತರಪದಯೋಶ್ಚ (ಪಾ. ಸೂ. ೭-೨-೯೮) ಎಂಬುದರಿಂದ ಪ್ರತ್ಯಯನಿಮಿತ್ತಕವಾಗಿ ಮಪರ್ಯಂತಕ್ಕೆ ತ್ವ ಆದೇಶ. ಶೇಷೇ ಲೋಪಃ ಎಂಬುದರಿಂದ ಮಪರ್ಯಂತದ ಶೇಷಕ್ಕೆ ಲೋಪ. ಛಾಂದಸವಾಗಿ ಆಕಾರ ಅಂತಾದೇಶವಾಗಿ ಬರುತ್ತದೆ. ತ್ವಯ ಎಂಬುದು ಸನಾದ್ಯಂತಾಧಾತವಃ ಎಂಬುದರಿಂದ ಧಾತು ಸಂಜ್ಞೆಯನ್ನು ಹೊಂದುತ್ತದೆ. ಇದಕ್ಕೆ ಲಡರ್ಥದಲ್ಲಿ ಶತೃ. ಅತೋಗುಣೇ ಎಂಬುದರಿಂದ ಪರರೂಪ ಏಕಾದೇಶ. ತ್ವಾಯತ್ ಶಬ್ದವಾಗುತ್ತದೆ. ಅದುಪದೇಶ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ ತಾಸ್ಯನುದಾತ್ತೇತ್ ಸೂತ್ರದಿಂದ ಅನುದಾತ್ತ. ಕ್ಯಚ್ ಚಿತ್ತಾದುದರಿಂದ ಅಂತೋದಾತ್ತ. ಇದರೊಡನೆ ಅನುದಾತ್ತಕ್ಕೆ ಏಕಾದೇಶ ಬಂದುದರಿಂದ ಏಕಾದೇಶ ಉದಾತ್ತೇನೋದಾತ್ತಃ (ಪಾ. ಸೂ. ೮-೨-೫) ಎಂಬುದರಿಂದ ಅದು ಉದಾತ್ತವಾಗುತ್ತದೆ. ಏಕಾದೇಶಸ್ವರೋಂತರಂಗಃ ಸಿದ್ಧೋ ಭವತೀತಿ ವಕ್ತವ್ಯಮ್ (ಪಾ. ಸೂ. ೮-೨-೬-೧) ಎಂಬ ವಚನದಿಂದ ಅಸಿದ್ಧಕಾಂಡದಲ್ಲಿ ಅದು ಪಠಿತವಾದರೂ ಸಿದ್ಧವಾಗುತ್ತದೆ. ಷಷ್ಠೀಏಕವಚನದಲ್ಲಿ ತ್ವಾಯತಃ ಎಂದು ರೂಪವಾಗುತ್ತದೆ. ಉದಾತ್ತಪರದಲ್ಲಿ ವಿಭಕ್ತಿ ಬಂದುದರಿಂದ ಶತುರನುಮೋನದ್ಯಜಾದೀ—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಕಾಮಮ್—ಕಮು ಕಾಂತೌ ಧಾತು. ಭಾವಾರ್ಥದಲ್ಲಿ ಘಞ್ ಞಿತ್ತಾದುದರಿಂದ ಅತಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಕಾಮ ಎಂದು ರೂಪವಾಗುತ್ತದೆ. ಕರ್ಷಾತ್ವತಃ ಸೂತ್ರದಿಂದ ಅಂತೋದಾತ್ತಸ್ವರವು ಪ್ರಾಪ್ತವಾದರೆ ವೃಷಾದಿಯಲ್ಲಿ ಸೇರಿರುವುದರಿಂದ ವೃಷಾದೀನಾಂಚ (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

ಊನಯೀಃ—ಊನ ಪರಿಹಾಣೇ ಧಾತು ಚುರಾದಿ. ಲುಙ್ ಮಧ್ಯಮಪುರುಷ ಏಕವಚನ ಪರದಲ್ಲಿರುವಾಗ ಣಿಶ್ರಿದ್ರುಸ್ರುಭ್ಯಃ ಕರ್ತರಿಚಙ್ (ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶವು ಪ್ರಾಪ್ತವಾದರೆ ಅದಕ್ಕೆ ನೋನಯತಿಧ್ವನಯತಿ—(ಪಾ. ಸೂ. ೩-೧-೫೧) ಎಂಬ ಸೂತ್ರದಿಂದ ಪ್ರತಿಷೇಧ ಬರುತ್ತದೆ. ಚ್ಲೇಃ ಸಿಚ್ ಎಂಬುದರಿಂದ ಚ್ಲಿಗೆ ಸಿಚ್. ಆರ್ಧಧಾತುಕಸ್ಯೇಡ್ವಲಾದೇಃ ಎಂಬುದರಿಂದ ಅದಕ್ಕೆ ಇಡಾಗಮ. ಅಸ್ತಿಸಿಚೋಽಪೃಕ್ತೇ ಸೂತ್ರದಿಂದ ಪ್ರತ್ಯಯಕ್ಕೆ ಈಡಾಗಮ. ಇಟಈಟಿ ಎಂಬುದರಿಂದ ಸಿಚಿಗೆ ಲೋಪ. ಣಿಚಿಗೆ



CC-0. Jangamwadi Math Collection. Digitized by eGangotri

ಗುಣಾಯಾದೇಶ ಹ್ಮ್ಯಂತಕ್ಷಣಶ್ವಸ—(ಪಾ. ಸೂ. ೭-೨-೫) ಎಂಬುದರಿಂದ ವೃದ್ಧಿಪ್ರತಿಷೇಧ ಬರುತ್ತದೆ. ಬಹುಲಂ ಛಂದಸಿ ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ. ಪ್ರತ್ಯಯಸ್ವರಕ್ಕೆ ರುತ್ವವಿಸರ್ಗಬಂದರೆ ಊನಯೀ ಎಂದು ರೂಪವಾಗುತ್ತದೆ.

॥ ಸಂಹಿತಾಪಾಠಃ ॥

ಏಭಿರ್ದ್ಯುಭಿಃ ಸುಮನಾ ಏಭಿರಿಂದುಭಿರ್ನಿರುಂಧಾನೋ ಅಮತಿಂ ಗೋಭಿರಶ್ವಿನಾ ।
ಇಂದ್ರೇಣ ದಸ್ಯುಂ ದರಯಂತ ಇಂದುಭಿರ್ಯುತದ್ವೇಷಸಃ ಸಮಿಷಾ ರಭೇಮಹಿ ॥ ೪ ॥

॥ ಪದಪಾಠಃ ॥

ಏಭಿಃ । ದ್ಯುಽಭಿಃ । ಸುಽಮನಾಃ । ಏಭಿಃ । ಇಂದುಽಭಿಃ । ನಿಃಽರುಂಧಾನಃ । ಅಮತಿಂ । ಗೋಭಿಃ । ಅಶ್ವಿನಾ ।
ಇಂದ್ರೇಣ । ದಸ್ಯುಂ । ದರಯಂತಃ । ಇಂದುಽಭಿಃ । ಯುತಽದ್ವೇಷಸಃ । ಸಂ । ಇಷಾ । ರಭೇಮಹಿ ॥ ೪ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಏಭಿರಸ್ಮಾಭಿರ್ದತ್ತೈ
ಪುರೋವರ್ತಿಭಿಸ್ತುಭ್ಯಂ ದತ್ತೈರ್ದ್ಯುಭಿರ್ದೀಪ್ತೈಶ್ಚರುಪುರೋಡಾಶಾದಿಭಿಃ ಏಭಿರಿಂದುಭಿಃ
ಯಾ ದತ್ತೈಃ ಪಶುಭಿರಶ್ವಿನಾಶ್ವಯುಕ್ತೇನ ಧನೇನ ಚ ನಿರುಂಧಾನೋ ನಿವರ್ತಯನ್ ಸುಮನಾಃ
ಶೋಭನಮನಾ ಭವ । ವಯಮಿಂದುಭಿರಸ್ಮಾಭಿರ್ದತ್ತೈಃ ಸೋಮೈಃ ಪ್ರೀತೇನೇಂದ್ರೇಣ ದಸ್ಯು-
ಮುಪಕ್ಷಪಯಿತಾರಂ ಶತ್ರುಂ ದರಯಂತೋ ಹಿಂಸಂತೋಽತ ಏವ ಯುತದ್ವೇಷಸಃ ಪೃಥಗ್ಭೂತಶತ್ರುಕಾ
ಭೂತ್ವೇಷೇಂದ್ರದತ್ತೇನಾನ್ನೇನ ಸಂ ರಭೇಮಹಿ । ಸಂರಬ್ಧಾ ಭವೇಮ । ಸಂಗಚ್ಛೇಮಹೀತ್ಯರ್ಥಃ ॥
ಸುಮನಾಃ । ಶೋಭನಂ ಮನೋ ಯಸ್ಯ । ಸೋರ್ಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾ-
ತ್ತತ್ವಂ । ನಿರುಂಧಾನಃ । ರುಧಿರ್ ಆವರಣೇ । ಸ್ವರಿತೇತ್ವಾದಾತ್ಮನೇಪದಂ । ಶ್ನಸೋರಲ್ಲೋಪ ಇ-



CC-0. Jangamwadi Math Collection. Digitized by eGangotri

ತ್ಯಕಾರಲೋಪಃ | ಚಿತ ಇತ್ಯಂತೋದಾತ್ತತ್ವಂ | ಕೃದುತ್ತರಪದಪ್ರಕೃತಿಸ್ವರತ್ವಂ |ಅಮತಿಂ | ಮಂತವ್ಯಾ ಮತಿರೈಶ್ವರ್ಯಂ | ನ ಮತಿರಮತಿಃ | ಅವ್ಯಯೇಪೂರ್ವಪದಪ್ರಕೃತಿಸ್ವರತ್ವಂ | ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ | ಅಶ್ವಿನಾ | ಅಶ್ವೋಽಸ್ಯಾಸ್ತೀತ್ಯಶ್ವಿ ಧನಂ | ಮತ್ವರ್ಥೀಯ ಇನಿಃ ||

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ಏಭಿಃ ದ್ಯುಭಿಃ—(ನಮ್ಮಿಂದ ಅರ್ಪಿತಗಳಾದ) ಈ ಪ್ರಕಾಶಮಾನಗಳಾದ ಪುರೋಡಾಶಾದಿಗಳಿಂದಲೂ | ಏಭಿಃ ಇಂದುಭಿಃ—ಈ ಸೋಮರಸಗಳಿಂದಲೂ (ತೃಪ್ತನಾಗಿ) | ಅಮತಿಂ—( ನಮ್ಮ ) ದಾರಿದ್ರ್ಯವನ್ನು | ಗೋಭಿಃ—ಪಶುಗಳನ್ನು ಕೊಡೋಣದರಿಂದಲೂ | ಅಶ್ವಿನಾ—ಅಶ್ವರೂಪವಾದ ಧನವನ್ನು ಕೊಡೋಣದರಿಂದಲೂ | ನಿರುಂಧಾನಃ—ನಾಶಪಡಿಸುತ್ತ | ಸುಮನಾಃ—ಅನುಗ್ರಹವುಳ್ಳ ಮನಸ್ಸುಳ್ಳವನಾಗಿ (ಆಗು) | (ವಯಂ—ನಾವು) | ಇಂದುಭಿಃ—(ನಮ್ಮಿಂದ ಅರ್ಪಿತವಾದ) ಸೋಮರಸ (ಪಾನ) ದಿಂದ ತೃಪ್ತನಾದ) | ಇಂದ್ರೇಣ—ಇಂದ್ರನಿಂದ | ದಸ್ಯುಂ—ನಾಶಕನಾದ ಶತ್ರುವನ್ನು | ದರಯಂತಃ—ಹಿಂಸಿಸುತ್ತ | ಯುತದ್ವೇಷಸಃ—ಶತ್ರುವಿನಿಂದ ಮುಕ್ತರಾಗಿ | ಇಷಾ—(ಇಂದ್ರದತ್ತವಾದ) ಅನ್ನದಿಂದ | ಸಂ ರಭೇಮಹಿ—ಒಟ್ಟಿಗೆ ಸೇರಿ ಸುಖಪಡುವೆವು.

|| ಭಾವಾರ್ಥ ||

ಎಲೈ ಇಂದ್ರನೇ, ನಮ್ಮಿಂದ ಅರ್ಪಿತಗಳಾದ ಈ ಪುರೋಡಾಶಾದಿಗಳಿಂದಲೂ ಸೋಮರಸಗಳಿಂದಲೂ ತೃಪ್ತನಾಗಿ, ನಮಗೆ ಪಶು, ಅಶ್ವ ಮುಂತಾದ ಧನದಾನಗಳಿಂದ ನಮ್ಮ ದಾರಿದ್ರ್ಯವನ್ನು ನಾಶಪಡಿಸಿ ನಮ್ಮಲ್ಲಿ ಅನುಗ್ರಬುದ್ಧಿಯುಳ್ಳವನಾಗಿ ಆಗು. ನಮ್ಮಿಂದ ಅರ್ಪಿತವಾದ ಸೋಮರಸದಿಂದ ತೃಪ್ತನಾದ ಇಂದ್ರನ ಸಹಾಯದಿಂದ ನಾವು ನಾಶಕನಾದ ಶತ್ರುವನ್ನು ಹಿಂಸಿಸಿ ಅವನಿಂದ ಮುಕ್ತರಾಗಿ ಇಂದ್ರದತ್ತವಾದ ಅನ್ನವನ್ನು ನಾವೆಲ್ಲ ಒಟ್ಟಿಗೆ ಅನುಭವಿಸುವೆವು.

## English Translation.

Propitiated by these offerings, by these libations, drive away poverty with gifts of wealth consisting of catte and horses and be delighted; Indra, may we, subduing our enemy, and relieved from foes by our libations enjoy together abundant food.

|| ವಿಶೇಷ ವಿಷಯಗಳು ||

ಮುಖ್ಯಾಭಿಪ್ರಾಯವು—ದೀಪ್ತಿಮತೋ ಯಾನ್ಸೋಮಾನ್ ವಯಮರ್ಪಯಾಮಸ್ತಾನ್ ಪೀತ್ವೇಂದ್ರಃ ಪ್ರಸನ್ನೋ ಭವಿಷ್ಯತಿ | ಅಪಿ ಚಾಸ್ಮಾಕಂ ಶತ್ರುಹನನಾಯ ಸಾಹಾಯ್ಯಂ ಕರಿಷ್ಯತಿ ತೇನ ವಯಂ ನಿಶ್ಶತ್ರವಃ ಕೃತಾ ಅನ್ನಸಂಪನ್ನಾ ಭವೇಮೇತ್ಯರ್ಥಃ | ಏಭಿರಿತ್ಯಸ್ಯ ದ್ವಿರುಕ್ತಿರಾದರಾರ್ಥೇತ್ಯನುಸಂಧೇಯಂ || ಪ್ರಕಾಶಮಾನವಾದ ಸೋಮರಸವನ್ನು ಪಾನಮಾಡುವುದರಿಂದ ಇಂದ್ರನು ಪ್ರಸನ್ನನಾಗಿ ನಮಗೆ ಶತ್ರುಸಂಹಾರ ಕಾರ್ಯದಲ್ಲಿ ಸಹಾಯಮಾಡುವುದರಿಂದ ನಮಗೆ ಶತ್ರುಬಾಧೆಯು ತಪ್ಪುವುದಲ್ಲದೆ ಆಹಾರಾದಿಗಳೂ



CC-0. Jangamwadi Math Collection. Digitized by eGangotri

ನಮಗೆ ಸಮೃದ್ಧವಾಗಿ ದೊರೆಯುವವು ಎಂದರ್ಥವು. ಈ ಋಕ್ಕಿನಲ್ಲಿ ಏಭಿಃ ಎಂಬ ಪದವು ಎರಡಾವರ್ತಿ ಪಠಿತವಾಗಿರುವುದರಿಂದ ಇಂದ್ರನಿಗೆ ಸ್ತೋತ್ರಮಾಡುವವರ ವಿಷಯದಲ್ಲಿ ಆದರಾತಿಶಯವನ್ನು ಸೂಚಿಸುವುದಾಗಿರುವುದು-

ದ್ಯುಭಿಃ—ದೀಪ್ತೈಃ ಚರುಪುರೋಡಾಶಾದಿಭಿಃ—ಪ್ರಕಾಶಕರಗಳಾದ ಪುರೋಡಾಶವೇ ಮೊದಲಾದುವುಗಳಿಂದ ಎಂಬ ಈ ಅರ್ಥವು ಲಕ್ಷಣಾವೃತ್ತಿಯಿಂದ ಬರುವುದಾಗಿದೆ.

ಅಮತಿಂ—ಮಂತವ್ಯಾ ಮತಿಃ ಐಶ್ವರ್ಯಂ ನ ಮತಿಃ ಅಮತಿಃ ಈ ವ್ಯುತ್ಪತ್ತಿಯಿಂದ ಈ ಪದವು ದಾರಿದ್ರ್ಯ ಎಂಬರ್ಥವನ್ನು ಕೊಡುವುದು.

ಇಂದುಭಿಃ—ಈ ಪದಕ್ಕೆ ಯಜ್ಞದಲ್ಲಿ ಪ್ರಕಾಶಕವಸ್ತುಗಳೆನಿಸಿದ ಸೋಮಪುರೋಡಾಶಾದಿಗಳಿಂದ ಎಂಬರ್ಥವಿರುವುದು.

ಯುತದ್ವೇಷಸಃ—ದ್ವೇಷಮಾಡುವ ಶತ್ರುಗಳನ್ನು ದೂರಮಾಡುವವರು ಅಂದರೆ ಸಂಪೂರ್ಣವಾಗಿ ಶತ್ರುಗಳನ್ನು ಧ್ವಂಸಮಾಡುವವರು ಎಂದರ್ಥವಿರುವುದು.

ಅಶ್ವಿನಾ—ಅಶ್ವೋಽಸ್ಯಾಸ್ತೀತಿ ಅಶ್ವಿ ಧನಂ--ಈರೀತಿ ವಿವರಿಸುವುದರಿಂದ, ಕುದುರೆಯೇ ಮೊದಲಾದ ಸಕಲ ಐಶ್ವರ್ಯಗಳು ಎಂದರ್ಥವಾಗುವುದು.

॥ ವ್ಯಾಕರಣಪ್ರಕ್ರಿಯಾ ॥

ಸುಮನಾಃ—ಶೋಭನಂ ಮನಃ ಯಸ್ಯ ಸಃ ಸುಮನಾಃ । ಸೋರ್ಮನಸೀ ಅಲೋಮೋಷಸೀ (ಪಾ. ಸೂ. ೬-೨-೧೧೭) ಎಂಬುದರಿಂದ ಸುವಿನ ಪರದಲ್ಲಿ ಅಸಂತ ಬಂದುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ನಿರುಂಧಾನಃ—ರುಧಿರ್ ಆವರಣೇ ಧಾತು. ಸ್ವರಿತೇತ್ ಸ್ವರಿತಞಿತಃ—ಸೂತ್ರದಿಂದ ಆತ್ಮನೇಪದದ ಶಾನಚ್ ಬರುತ್ತದೆ. ಶಾನಚ್‌ಪರದಲ್ಲಿರುವಾಗ ರುಧಾದಿಭ್ಯಃ ಶ್ನಮ್ ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರದಲ್ಲಿ ಬರುತ್ತದೆ. ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಎಂಬುದರಿಂದ ಶ್ನಮಿನ ಅಕಾರಕ್ಕೆ ಲೋಪ. ನಿರುಂಧಾನ ಎಂದು ರೂಪವಾಗುತ್ತದೆ. ಶಾನಚ್ ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ನಿ ಎಂಬ ಗತಿಯೊಡನೆ ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಅಮತಿಮ್—ಮಂತವ್ಯಾ ಮತಿಃ ಐಶ್ವರ್ಯಮ್. ಮನ ಧಾತುವಿಗೆ ಕ್ತಿನ್. ಕಿತ್ತಾದುದರಿಂದ ಅನುದಾತ್ತೋಪದೇಶ ಸೂತ್ರದಿಂದ ನಕಾರಕ್ಕೆ ಲೋಪ. ನ ಮತಿಃ ಅಮತಿಃ ತುತ್ಪುರುಷೇ ತುಲ್ಯಾರ್ಥ—ಸೂತ್ರದಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಅಮತಿಂ ನಿರುಂಧಾನಃ ಇತ್ಯಾದಿ ಸ್ಥಳದಲ್ಲಿ ಕರ್ತೃಕರ್ಮಣೋಃ ಕೃತಿ ಎಂಬುದರಿಂದ ಷಷ್ಠಿಯು ಪ್ರಾಪ್ತವಾದರೆ ನಲೋಕಾವ್ಯಯ—(ಪಾ. ಸೂ. ೨-೩-೬೯) ಎಂಬುದರಿಂದ ಲಾದೇಶವಾದುದರಿಂದ ಷಷ್ಠೀನಿಷೇಧ ಬರುತ್ತದೆ.

ಅಶ್ವಿನಾ— ಅಶ್ವಃ ಅಸ್ಯ ಅಸ್ತಿ ಇತಿ ಅಶ್ವಿ. ಧನಮ್. ಮತ್ವರ್ಥದಲ್ಲಿ ಅತ ಇನಿಠನೌ (ಪಾ. ಸೂ. ೫-೧-೧೧೫) ಎಂಬುದರಿಂದ ಇನಿ ಪ್ರತ್ಯಯ. ಪ್ರತ್ಯಯಸ್ವರದಿಂದ ಇಕಾರ ಉದಾತ್ತ. ತೃತೀಯಾ ಏಕವಚನ ರೂಪ.



CC-0. Jangamwadi Math Collection. Digitized by eGangotri

ದರಯಂತಃ—ದ್ರಾ ಭಯೇ ಧಾತು. ಣಿಜಂತದ ಮೇಲೆ ಶತೃಪ್ರತ್ಯಯ. ಇದು ಘಟಾದಿಯಲ್ಲಿ ಸೇರಿರುವುದರಿಂದ ಅದಕ್ಕೆ ಮಿತ್ ಸಂಜ್ಞಾ ಇರುವುದರಿಂದ ಣಿಚಿನಲ್ಲಿ ವೃದ್ಧಿಬಂದಾಗ ಮಿತಾಂ ಹ್ರಸ್ವಃ ಎಂಬುದರಿಂದ ಹ್ರಸ್ವ ಬರುತ್ತದೆ. ಣಿಚಿಗೆ ಶಪ್ ನಿಮಿತ್ತಕವಾಗಿ ಗುಣಾಯಾದೇಶ ಬಂದರೆ ದರಯತ್ ಶಬ್ದವಾಗುತ್ತದೆ. ಣಿಚ್ ಸ್ವರದಿಂದ ರೇಫೋತ್ತರಾಕಾರ ಉದಾತ್ತವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಉಗಿತ್ತಾದುದರಿಂದ ನುಮಾಗಮ ಬರುವುದರಿಂದ ದರಯಂತಃ ಎಂದು ರೂಪವಾಗುತ್ತದೆ.

ರಭೇಮಹಿ—ರಭ ರಾಭಸ್ಯೇ ಧಾತು. ಭ್ವಾದಿ ಲಿಙ್ ಉತ್ತಮಪುರುಷ ಬಹುವಚನದಲ್ಲಿ ಮಹಿಙ್ ಪ್ರತ್ಯಯ. ಲಿಙಃ ಸೀಯುಟ್ ಎಂಬುದರಿಂದ ಮಹಿಙಿಗೆ ಸೀಯುಟಾಗಮ. ಕರ್ತರಿಶಪ್ ಎಂಬುದರಿಂದ ಶಪ್ ವಿಕರಣ. ಲಿಙಃ ಸಲೋಪೋಽನಂತ್ಯಸ್ಯ ಎಂಬುದರಿಂದ ಸೀಯುಟಿನ ಸಕಾರಕ್ಕೆ ಲೋಪ. ಗುಣ. ರಭೇಮಹಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಸಮಿಂದ್ರ ರಾಯಾ ಸಮಿಷಾ ರಭೇಮಹಿ ಸಂ ವಾಜೇಭಿಃ ಪುರುಶ್ಚಂದ್ರೈ-
ರಭಿದ್ಯುಭಿಃ ।
ಸಂ ದೇವ್ಯಾ ಪ್ರಮತ್ಯಾ ವೀರಶುಷ್ಮಯಾ ಗೋಅಗ್ರಯಾಶ್ವಾವತ್ಯಾ
ರಭೇಮಹಿ ॥ ೫ ॥

॥ ಪದಪಾಠಃ ॥

ಸಂ । ಇಂದ್ರ । ರಾಯಾ । ಸಂ । ಇಷಾ । ರಭೇಮಹಿ । ಸಂ । ವಾಜೇಭಿಃ ।
ಪುರುಽಚಂದ್ರೈಃ । ಅಭಿದ್ಯುಽಭಿಃ ।
ಸಂ । ದೇವ್ಯಾ । ಪ್ರಽಮತ್ಯಾ । ವೀರಽಶುಷ್ಮಯಾ । ಗೋಽಅಗ್ರಯಾ । ಅಶ್ವಽವತ್ಯಾ ।
ರಭೇಮಹಿ ॥ ೫ ॥

॥ ಸಾಯಣಭಾಷ್ಯ ॥

ಹೇ ಇಂದ್ರ ರಾಯಾ ಧನೇನ ವಯಂ ಸಂ ರಭೇಮಹಿ । ಸಂಗಚ್ಛೇಮಹಿ ॥ ತಥೇಷಾನ್ನೇನ ಸಂ ರಭೇಮಹಿ । ತಥಾ ವಾಜೇಭಿರ್ಬಲೈಃ ಸಂ ರಭೇಮಹಿ । ಕೀದೃಶೈರ್ವಾಜೈಃ । ಪುರುಶ್ಚಂದ್ರೈಃ ಪುರೂಣಾಂ ಬಹೂನಾಮಾಹ್ಲಾದಕೈಃ ಅಭಿದ್ಯುಭಿರಭಿತೋ ದೀಪ್ಯಮಾನೈಃ । ಕಿಂಚ ದೇವ್ಯಾ ದ್ಯೋತ-



CC-0. Jangamwadi Math Collection. Digitized by eGangotri

ಮಾನಯಾ ಪ್ರಮತ್ಯಾ ತ್ವದೀಯಯಾ ಪ್ರಕೃಷ್ಟಬುದ್ಧ್ಯಾ ಸಂ ರಭೇಮಹಿ । ಕೀದೃಶ್ಯಾ । ವೀರಶುಷ್ಮಯಾ । ವೀರಂ ವಿಶೇಷೇಣ ಶತ್ರೂಣಾಂ ಕ್ಷೇಪಣಸಮರ್ಥಂ ಶುಷ್ಮಂ ಬಲಂ ಯಸ್ಯಾಃ ಸಾ ತಥೋಕ್ತಾ । ಗೋಅಗ್ರಯಾ । ಸ್ತೋತೃಭ್ಯೋ ದಾನಾರ್ಥಮಗ್ರೇ ಪ್ರಮುಖತ ಏವ ಗಾವೋ ಯಸ್ಯಾಃ ಸಾ ತಥೋಕ್ತಾ । ಅಶ್ವಾವತ್ಯಾಶ್ವೈರುಪೇತಯಾ ॥ ರಾಯಾ । ಊಡಿದಮಿತ್ಯಾದಿನಾ ವಿಭಕ್ತೇರುದಾತ್ತತ್ವಂ । ಪುರುಶ್ಚಂದ್ರೈಃ । ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರ ಇತಿ ಸುಟ್ । ಶ್ಚುತ್ವೇನ ಶಕಾರಃ । ಸಮಾಸಸ್ವರಃ । ಅಭಿದ್ಯುಭಿಃ । ಅಭಿಗತಾ ದ್ಯಾರ್ದೀಪ್ತಿರ್ಯೇಷಾಂ । ಅತ್ರ ದಿವ್ಯಶಬ್ದೋ ದೀಪ್ತಿಂ ಲಕ್ಷಯತಿ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ ॥ ದೇವ್ಯಾ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಪ್ರಮತ್ಯಾ । ತಾದೌ ನಿತೀತಿ ಗತೇಃ ಪ್ರಕೃತಿಸ್ವರತ್ವಂ । ಉತ್ತರಯೋರ್ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಸರ್ವತ್ರ ವಿಭಾಷಾ ಗೋಃ । ಪಾ. ಸೂ. ೬-೧-೧೨೨ । ಇತಿ ಗೋಅಗ್ರಯೇತ್ಯತ್ರ ಪ್ರಕೃತಿಭಾವಃ । ಅಶ್ವಾವತ್ಯಾ । ಮಂತ್ರೇ ಸೋಮಾಶ್ವೇಂದ್ರಿಯೇತಿ ಮತುಪಿ ದೀರ್ಘತ್ವಂ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ರಾಯಾ—ಧನದೊಂದಿಗೆ । (ವಯಂ—ನಾವು) । ಸಂ ರಭೇಮಹಿ—ಸ್ವಾಮ್ಯವನ್ನು ಪಡೆಯೋಣ । ಇಷಾ—ಅನ್ನದೊಡನೆ । ಸಂ (ರಭೇಮಹಿ)—ಸಂಬಂಧವನ್ನು ಹೊಂದೋಣ । ಪುರುಶ್ಚಂದ್ರೈಃ—ಬಹಳ ಜನರಿಗೆ ಆಹ್ಲಾದಕರವಾದವೂ । ಅಭಿದ್ಯುಭಿಃ—ಸುತ್ತಲೂ ಪ್ರಕಾಶಮಾನವಾದುದೂ ಆದ । ವಾಜೇಭಿಃ—ಶಕ್ತಿಗಳಿಂದ । ಸಂ (ರಭೇಮಹಿ)—ಕೂಡಿಕೊಳ್ಳೋಣ । ದೇವ್ಯಾ—ಪ್ರಜ್ವಲಿಸುತ್ತಿರುವುದೂ । ವೀರಶುಷ್ಮಯಾ—ಶತ್ರುನಾಶಕವಾದ ಬಲವುಳ್ಳದ್ದೂ । ಗೋಅಗ್ರಯಾ—(ದಾನಕ್ಕಾಗಿ) ಮುಂದೆ ಇಟ್ಟುಕೊಂಡಿರುವ ಗೋವುಳ್ಳದ್ದೂ । ಅಶ್ವಾವತ್ಯಾ—ಅಶ್ವಗಳಿಂದ ಕೂಡಿದುದೂ ಆದ । ಪ್ರಮತ್ಯಾ—ನಿನ್ನ ಶ್ರೇಷ್ಠವಾದ ಬುದ್ಧಿಯೊಡನೆ । ಸಂ ರಭೇಮಹಿ—ಸಂಪೂರ್ಣವಾಗಿ ಸಂಬಂಧವನ್ನು ಪಡೆಯೋಣ (ಸಂಪೂರ್ಣವಾದ ವೃದ್ಧಿಯನ್ನು ಹೊಂದೋಣ) ।

॥ ಭಾವಾರ್ಥ ॥

ಎಲೈ ಇಂದ್ರನೇ, ನಾವು ಧನವನ್ನೂ, ಅನ್ನವನ್ನೂ ಸಂಪೂರ್ಣವಾಗಿ ಪಡೆದು ಮತ್ತು ಅವುಗಳ ಸ್ವಾಮ್ಯವನ್ನು ಹೊಂದಿ ಬಹು ಜನರಿಗೆ ಆಹ್ಲಾದಕರವೂ, ಸುತ್ತಲೂ ಪ್ರಕಾಶಿಸುವುದೂ ಆದ ಶಕ್ತಿಗಳನ್ನು ಪಡೆಯುವಂತೆ ಅನುಗ್ರಹಿಸು. ಪ್ರಜ್ವಲಿಸುತ್ತಿರುವುದೂ, ಶತ್ರುನಾಶಕವಾದ ಬಲವುಳ್ಳದ್ದೂ, ದಾನಕ್ಕಾಗಿ ಮುಂದೆ ಗೋವನ್ನಿಟ್ಟುಕೊಂಡಿರುವುದೂ ಮತ್ತು ಅಶ್ವಯುಕ್ತವಾದುದೂ ಆದ ನಿನ್ನ ಶ್ರೇಷ್ಠವಾದ ಬುದ್ಧಿಯೊಡನೆ ಸೇರಿ ವೃದ್ಧಿಯನ್ನು ಹೊಂದುವಂತೆಯೂ ಅನುಗ್ರಹಿಸು.

English Translation.

Indra, may we become possessed of riches and of food; and with energies agreeable to many, and shinning around, may we prosper through your divine power, the source of prowess, of cattle and of horses.



CC-0. Jangamwadi Math Collection. Digitized by eGangotri

ವಿಶೇಷ ವಿಷಯಗಳು

ಪುರುಶ್ಚಂದ್ರೈಃ—ಚದಿ ಆಹ್ಲಾದನೇ ಎಂಬ ಧಾತುಜನ್ಯವಾದ ಚಂದ್ರಶಬ್ದಕ್ಕೆ ಕೇವಲ ಆಹ್ಲಾದಕ ವಸ್ತು ಎಂದರ್ಥ. ಪುರುಶಬ್ದಕ್ಕೆ ಇಲ್ಲಿ ಬಹಳವಾದ ಅಥವಾ ಅತಿಶಯವಾದ ಎಂಬರ್ಥವಿದೆ. ಆದ್ದರಿಂದ ಅತಿಶಯವಾಗಿ ಆಹ್ಲಾದಕವೆನಿಸಿರುವ ವಸ್ತುಗಳಿಂದ ಎಂಬುದು ಈ ಪದದ ಪೂರ್ಣಾರ್ಥ.

ಅಭಿದ್ಯುಭಿಃ—ಇಲ್ಲಿರುವ ದಿವ್ ಶಬ್ದಕ್ಕೆ ದೀಪ್ತಿ ಎಂಬುದು ಲಕ್ಷ್ಯಾರ್ಥ. ಅಭಿಗತಾ ದ್ಯಾವಃ ಯೇಷಾಂ ತೇ ಎಂಬ ವ್ಯುತ್ಪತ್ತಿಯಿಂದ ಸುತ್ತಲೂ ಪ್ರಕಾಶಿಸುವ ವಸ್ತುಗಳು ಎಂದರ್ಥವಾಗುವುದು.

ವೀರಶುಷ್ಮಯಾ—ಇದು ಪ್ರಮತ್ಯಾ (ಇಂದ್ರನ ಪ್ರಶಸ್ತವಾದ ಬುದ್ಧಿ) ಎಂಬುದಕ್ಕೆ ವಿಶೇಷಣವಾಗಿದೆ. ವೀರಂ ವಿಶೇಷೇಣ ಶತ್ರೂಣಾಂ ಕ್ಷೇಪಣಸಮರ್ಥಂ ಶುಷ್ಮಂ ಬಲಂ ಯಸ್ಯಾಸ್ಸಾ ಎಂದು ವಿವರಣೆಮಾಡಿ, ಇಂದ್ರನ ಬುದ್ಧಿಯು ಶತ್ರುಗಳ ಮಿತಿಮೀರಿದ ಬಲವನ್ನೆಲ್ಲಾ ನಾಶಗೊಳಿಸಬಲ್ಲುದು ಎಂಬ ತಾತ್ಪರ್ಯವನ್ನು ವಿಶದಪಡಿಸಿರುವರು.

ಗೋಅಗ್ರಯಾ—ತನ್ನನ್ನು ಹವಿರ್ದಾನಾದಿಗಳಿಂದ ತೃಪ್ತಿಪಡಿಸಿ ಸ್ತೋತ್ರಮಾಡುವವರಿಗೆ ಮೊದಲು ಗೋವೇ ಮೊದಲಾದ ಸಂಪತ್ತನ್ನು ಕೊಡತಕ್ಕ ಔದಾರ್ಯವು ಇಂದ್ರನಲ್ಲಿದೆ. ಇಂತಹ ಸ್ವಭಾವವುಳ್ಳದ್ದು ಇಂದ್ರನ ಪ್ರಮತಿ (ಬುದ್ಧಿ).

॥ ವ್ಯಾಕರಣಪ್ರಕ್ರಿಯಾ ॥

ರಾಯಾ—ರೈ+ಆ ಎಂದಿರುವಾಗ ಏಚೋಽಯವಾಯಾವಃ ಎಂಬುದರಿಂದ ಆಯಾದೇಶ. ಊಡಿದಂಪದಾದಿ (ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಪುರುಶ್ಚಂದ್ರೈಃ—ಹ್ರಸ್ವಾಚ್ಚಂದ್ರೋತ್ತರಪದೇ ಮಂತ್ರೇ (ಪಾ. ಸೂ. ೬-೧-೧೫೧) ಎಂಬುದರಿಂದ ಚಂದ್ರಶಬ್ದಕ್ಕೆ ಸುಡಾಗಮ. ಚಕಾರ ಪರದಲ್ಲಿರುವುದರಿಂದ ಸ್ತೋಃಶ್ಚುನಾಶ್ಚುಃ ಎಂಬುದರಿಂದ ಸುಚಿನ ಸಕಾರಕ್ಕೆ ಶ್ಚುತ್ವದಿಂದ ಶಕಾರಾದೇಶ. ಪುರೂಣಾಂ ಚಂದ್ರಾಃ ಪುರುಶ್ಚಂದ್ರಾಃ ತೈಃ ಸಮಾಸಸ್ಯ ಎಂಬುದರಿಂದ ಅಂತೋದಾತ್ತವಾಗುತ್ತದೆ.

ಅಭಿದ್ಯುಭಿಃ—ಅಭಿಗತಾ ದ್ಯಾವೋದೀಪ್ತಿಃ ಯೇಷಾಂ ಅಭಿದಿವಃ ತೈಃ ಅಭಿದ್ಯುಭಿಃ. ಇಲ್ಲಿ ದಿವ್ ಶಬ್ದವು ದೀಪ್ತಿ ಎಂಬ ಅರ್ಥವನ್ನು ಲಕ್ಷಣಾವೃತ್ತಿಯಿಂದ ಬೋಧಿಸುತ್ತದೆ. ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ದೇವ್ಯಾ—ದೇವೀ ಶಬ್ದದ ತೃತೀಯಾ ಏಕವಚನರೂಪ. ಉದಾತ್ತಯಣೋ ಹಲ್ಪೂರ್ವಾತ್ (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಪ್ರಮತ್ಯಾ—ಮನ ಜ್ಞಾನೇ ಧಾತು. ಸ್ತ್ರಿಯಾಂಕ್ತಿನ್ ಎಂಬುದರಿಂದ ಕ್ತಿನ್ ಪ್ರತ್ಯಯ. ಅನುದಾತ್ತೋಪದೇಶ ಸೂತ್ರದಿಂದ ಅನುನಾಸಿಕ ನಕಾರಕ್ಕೆ ಲೋಪ. ಪ್ರ ಎಂಬುದರೊಡನೆ ಸಮಾಸವಾದಾಗ ತಾದೌಚನಿತಿ (ಪಾ. ಸೂ. ೬-೨-೫೦) ಎಂಬುದರಿಂದ ನಿತ್ತಾದ ತಾದಿ ಪ್ರತ್ಯಯಾಂತ ಪರದಲ್ಲಿರುವುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಆದ್ಯುದಾತ್ತವಾದ ಪದವಾಗುತ್ತದೆ.

ವೀರಶುಷ್ಮಯಾ—ವೀರಂ ಶುಷ್ಮಂ ಯಸ್ಯಾಃ ಸಾ. ವೀರಶುಷ್ಮಾ ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

**ಗೋಅಗ್ರಯಾ**—ಗಾವಃ ಅಗ್ರೇ ಯಸ್ಯಾಃ ಸಾ ಗೋಅಗ್ರಾ ತಯಾ. ಬಹುವ್ರೀಹಿಸಮಾಸವಾದುದರಿಂದ ಹಿಂದಿನಂತೆ ಸ್ವರ. **ಸರ್ವತ್ರವಿಭಾಷಾ ಗೋಃ** (ಪಾ. ಸೂ. ೬-೧-೧೨೨) ಎಂಬುದರಿಂದ ಪ್ರಕೃತಿಭಾವ ಬರುವುದರಿಂದ ಓಕಾರಕ್ಕೆ ಅವಾದೇಶ ಬರುವುದಿಲ್ಲ.

**ಅಶ್ವಾವತ್ಯಾ**—ಅಶ್ವಾಃ ಅಸ್ಯಾಃ ಸಂತಿ ಇತಿ ಅಶ್ವಾವತೀ. **ತದಸ್ಯಾಸ್ತ್ಯಸ್ಮಿನ್ನಿತಿಮತುಪ್** ಸೂತ್ರದಿಂದ ಮತುಪ್. ಆಕಾರ ಪರದಲ್ಲಿರುವುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಸ್ತ್ರೀತ್ವದಲ್ಲಿ **ಉಗಿತಶ್ಚ** ಎಂಬುದರಿಂದ ಙೀಪ್. **ಮಂತ್ರೇಸೋಮಾಶ್ವೇಂದ್ರಿಯ**—(ಪಾ. ಸೂ. ೬-೩-೧೩೧) ಎಂಬುದರಿಂದ ಮತುಪ್ ಪರದಲ್ಲಿರುವಾಗ ಪೂರ್ವದ ಅಶ್ವ ಶಬ್ದಕ್ಕೆ ದೀರ್ಘ. ಅಶ್ವಾವತೀ ಎಂದು ರೂಪವಾಗುತ್ತದೆ. ತೃತೀಯಾ ಏಕವಚನರೂಪ.

॥ ಸಂಹಿತಾಪಾಠಃ ॥

ತೇ ತ್ವಾ ಮದಾ ಅಮದನ್ತಾನಿ ವೃಷ್ಣ್ಯಾ ತೇ ಸೋಮಾಸೋ ವೃತ್ರಹತ್ಯೇಷು ಸತ್ಪತೇ ।
ಯತ್ಕಾರವೇ ದಶ ವೃತ್ರಾಣ್ಯಪ್ರತಿ ಬರ್ಹಿಷ್ಮತೇ ನಿ ಸಹಸ್ರಾಣಿ ಬರ್ಹಯಃ ॥ ೬ ॥

॥ ಪದಪಾಠಃ ॥

ತೇ । ತ್ವಾ । ಮದಾಃ । ಅಮದನ್ । ತಾನಿ । ವೃಷ್ಣ್ಯಾ । ತೇ । ಸೋಮಾಸಃ । ವೃತ್ರಽಹತ್ಯೇಷು । ಸತ್ಽಪತೇ ।
ಯತ್ । ಕಾರವೇ । ದಶ । ವೃತ್ರಾಣಿ । ಅಪ್ರತಿ । ಬರ್ಹಿಷ್ಮತೇ । ನಿ । ಸಹಸ್ರಾಣಿ । ಬರ್ಹಯಃ ॥ ೬ ॥

॥ ಸಾಯಣಭಾಷ್ಯಂ ॥

ಹೇ ಸತ್ಪತೇ ಸತಾಂ ಪಾಲಯಿತರಿಂದ್ರ ವೃತ್ರಹತ್ಯೇಷು ವೃತ್ರಹನನೇಷು ನಿಮಿತ್ತಭೂತೇಷು ಸತ್ಸು ತೇ ಪೂರ್ವೋಕ್ತಾ ಮದಾ ಮಾದಕಾ ಮರುತಸ್ತ್ವಾ ತ್ವಾಮಮದನ್ । ಅಮದಯನ್ । ಹರ್ಷಂ ಪ್ರಾಪಯನ್ । ತಾನಿ ಪೂರ್ವೋಕ್ತಾನಿ ವೃಷ್ಣ್ಯಾ ವೃಷ್ಣಃ ಸೇಚನಸಮರ್ಥಸ್ಯ ತವ ಸಂಬಂಧೀನಿ ಚರುಪು-



CC-0. Jangamwadi Math Collection. Digitized by eGangotri

ರೋಡಾಶಾದೀನಿ ಹವೀಂಷಿ ತ್ವಾಮಮದರ್ನ । ತೇ ಸೋಮಾಸಃ ಪ್ರಸಿದ್ಧಾಃ ಸೋಮಾಶ್ಚ ತ್ವಾಮಮ- ದನ್ । ಯದ್ಯದಾ ಕಾರವೇ ಸ್ತುತಿಕರ್ತ್ರೇ ಬರ್ಹಿಷ್ಮತೇ ಯಜ್ಞವತೇ ಯಜಮಾನಾಯ ದಶ ಸಹ- ಸ್ರಾಣ್ಯಪರಿಮಿತಾನಿ ವೃತ್ರಾಣ್ಯಾವರಕಾಣ್ಯುಪದ್ರವಜಾತಾನ್ಯಪ್ರತಿ ಶತ್ರುಭಿರಪ್ರತಿಗತಸ್ತ್ವಂ ನಿಬರ್ಹಯಃ ನ್ಯವಧೀಃ । ತದಾನೀಮಿತಿ ಪೂರ್ವೇಣ ಸಂಬಂಧಃ ॥ ವೃಷ್ಣ್ಯಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಬರ್ಹಯಃ । ಬರ್ಹಯತಿರ್ಹಿಂಸಾಕರ್ಮಾ । ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಶಪಃ ಪಿತ್ತ್ವಾದನುದಾತ್ತತ್ವೇ ಣಿಚ ಏವ ಸ್ವರಃ ಶಿಷ್ಯತೇ । ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

ಸತ್ಪತೇ—ಸತ್ಪುರುಷರ ಪಾಲಕನಾದ ಇಂದ್ರನೇ । ವೃತ್ರಹತ್ಯೇಷು—ವೃತ್ರನನ್ನು ಕೊಲ್ಲುವ ಸಂದರ್ಭಗಳಲ್ಲಿ । ತೇ—ಹಿಂದೆ ವರ್ಣಿತಗಳಾದ । ಮದಾಃ—ಮಾದಕ ಸಂಪತ್ತುಳ್ಳ (ಸುಹೃತ್ತುಗಳಾದ) ಮರುತ್ತ ಗಳು । ತ್ವಾ—ನಿನ್ನನ್ನು । ಅಮದರ್ನ—ಸಂತೋಷಗೊಳಿಸಿದರು । ಯತ್—ಯಾವಾಗ । ಕಾರವೇ—ಸ್ತುತಿ ಕರ್ತನೂ । ಬರ್ಹಿಷ್ಮತೇ—ಯಜ್ಞವುಳ್ಳವನೂ (ಸಂಪಾದಕನೂ) ಆದ ಯಜಮಾನನಿಗೆ । ದಶ ಸಹಸ್ರಾಣಿ— ಹತ್ತು ಸಹಸ್ರ (ಅಸಂಖ್ಯಾಕಗಳಾದ) । ವೃತ್ರಾಣಿ—ವಿಘ್ನಕರಗಳಾದ ತೊಂದರೆಗಳನ್ನು । ಅಪ್ರತಿ—ಶತ್ರುಗಳ ತಡೆಯಿಲ್ಲದೆ ಮುಂದೆ ನುಗ್ಗಿದ ನೀನು । ನಿ ಬರ್ಹಯಃ—ಸಂಪೂರ್ಣವಾಗಿ ನಾಶಮಾಡಿದೆಯೋ (ಆಗ) । ತಾನಿ ವೃಷ್ಣ್ಯಾ (ವೃತ್ರವಧ ಸಂದರ್ಭಗಳಲ್ಲಿ ಅರ್ಪಿತಗಳಾದ) ಆ ಚರುಪುರೋಡಾಶಾದಿ ಹವಿಸ್ಸುಗಳೂ । ತೇ ಸೋ- ಮಾಸಃ—ಪ್ರಸಿದ್ಧಗಳಾದ ಆ ಸೋಮರಸಗಳೂ । (ತ್ವಾಂ ಅಮದರ್ನ—ನಿನ್ನನ್ನು ಹರ್ಷಗೊಳಿಸಿದವು) ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಸತ್ಪುರುಷರಪಾಲಕನು. ಸತ್ಪುರುಷರ ಹಿಂಸಕನಾದ ವೃತ್ರನನ್ನು ಕೊಲ್ಲುವ ಸಂದರ್ಭದಲ್ಲಿ ನಿನ್ನ ಸ್ನೇಹಿತರಾದ ಮರುತ್ತಗಳು ನಿನ್ನನ್ನು ಹರ್ಷಗೊಳಿಸಿದರು. ಯಾವಾಗ ನೀನು ನಿನ್ನನ್ನು ಸ್ತೋತ್ರಮಾಡುವವನೂ, ಯಜ್ಞಮಾಡಿ ಹವಿಸ್ಸನ್ನರ್ಪಿಸುವವನೂ ಆದ ಯಜಮಾನನ ಅಸಂಖ್ಯಾಕಗಳಾದ ವಿಘ್ನಗಳನ್ನು ಶತ್ರುಗಳಿಂದ ತಡೆಯಲ್ಪಡದೇ ನಾಶಮಾಡಿದೆಯೋ ಆಗ ಯಜಮಾನರು ಅರ್ಪಿಸಿದ ಚರುಪುರೋಡಾಶಾದಿ ಹವಿಸ್ಸುಗಳೂ, ಪ್ರಸಿದ್ಧಗಳಾದ ಆ ಸೋಮರಸಗಳೂ ನಿನ್ನನ್ನು ಹರ್ಷಗೊಳಿಸಿದವು.

## English Translation.

O protector of the pious, they, who were your allies (the Maruts) gladdened you while you were engaged in slaying Vritra ; those oblations and libations gladdened you, when you, unimpeded by foes destroyed the ten thousand obstacles opposed to him who praised you and offered you oblations.

॥ ವಿಶೇಷ ವಿಷಯಗಳು ॥

ಯದಾ ಯದೇಂದ್ರಃ ಸ್ತೋತೃಪಾಸಕಾನಾಂ ಶತ್ರೂನ್ ಹಂತಿ ತದಾ ತದಾ ತೈರುಪಾಸಕೈಃ ಸಮ- ರ್ಪಿತಾನ್ ಸೋಮಾನ್ ಚರುಪುರೋಡಾಶಾದೀನಿ ಚ ಅನ್ನಾನಿ ಭಕ್ಷಯಿತ್ವಾ ಹೃಷ್ಟಃ ಸನ್ನೇವ ಹಂತಿ ।



CC-0. Jangamwadi Math Collection. Digitized by eGangotri

ಕಸ್ಮಾದಥುನಾಪ್ಯಾಗತ್ಯಾಸ್ಮಾಕಂ ಸೋಮಾದೀನಿ ಭಕ್ಷಯಿತುಮರ್ಹತೀತ್ಯರ್ಥಃ ॥ ಇಂದ್ರನು ಸ್ತೋತ್ರಮಾಡುವವರ ಶತ್ರುಗಳನ್ನು ಸಂಹಾರ ಮಾಡಿದ ಮೇಲೆ ಉಪಾಸಕರಿಂದ ಅರ್ಪಿಸಲ್ಪಟ್ಟ ಸೋಮರಸ, ಚರುಪುರೋಡಾಶಾದಿಗಳು, ಅನ್ನ ಮುಂತಾದವುಗಳನ್ನು ಭಕ್ಷಿಸಿ ತೃಪ್ತನಾಗುವನು. ಆದುದರಿಂದ ಈಗ ನಾವು ಸಿದ್ಧಪಡಿಸಿರುವ ಸೋಮಾದಿಗಳನ್ನು ಸ್ವೀಕರಿಸಿ ನಮಗೆ ಪ್ರಸನ್ನನಾಗಬೇಕೆಂದು ಪ್ರಾರ್ಥಿಸಲಾಗಿರುವುದು.

ವೃತ್ರ ಹತ್ಯೇಷು—ಈ ಪದಕ್ಕೆ ವೃತ್ರಾಸುರನನ್ನು ನಾಶಗೊಳಿಸುವ ಕಾರ್ಯನಿಮಿತ್ತವಾಗಿ ಎಂದರ್ಥ. ಇಲ್ಲಿರುವ ಸಪ್ತಮೀ ವಿಭಕ್ತಿಯು ನಿಮಿತ್ತಾರ್ಥದಲ್ಲಿ ಉಪಯುಕ್ತವಾಗಿದೆ.

ಮದಾಃ—ಈ ಶಬ್ದಕ್ಕೆ ಇಂದ್ರನಿಗೆ ಸಮಯದಲ್ಲಿ ಸಹಾಯಮಾಡಿ ಸಂತೋಷವನ್ನು ಹೆಚ್ಚಿಸುವ ಮರುತ್ತುಗಳು ಎಂದರ್ಥ.

ವೃಷ್ಣ್ಯಾ—ವೃಷ್ಣ್ಯಾದಿಗಳನ್ನು ದಯಪಾಲಿಸುವವನು ಇಂದ್ರ. ಅವನಿಗೆ ವೃಷ್ಣಿ ಎಂದು ಹೆಸರು. ಇಂದ್ರನಿಗೆ ಸಲ್ಲುವ ಚರು ಪುರೋಡಾಶಾದಿಗಳಿಗೆ ವೃಷ್ಣ್ಯ ಎಂದು ಹೆಸರು.

ಬರ್ಹಿಷ್ಮತೇ—ಬರ್ಹಯತಿರ್ಹಿಂಸಾಕರ್ಮಾ (ನಿ. ೩-೧೯) ಎಂಬ ನಿರುಕ್ತಸೂತ್ರದಂತೆ ಬರ್ಹಿಶ್ಶಬ್ದಕ್ಕೆ ಯಾಗ ಎಂದರ್ಥವಾಗುವುದು. ಯಾಗದಲ್ಲಿ ಮುಖ್ಯ ದೀಕ್ಷಿತನಾದವನಿಗೆ ಬರ್ಹಿಷ್ಮಾನ್ ಎಂದಾಗುವುದು.

ಅಪ್ರತಿ—ಶತ್ರುಭಿರಪ್ರತಿಗತಸ್ತ್ವಂ—ಶತ್ರುಗಳೊಡನೆ ಯುದ್ಧಮಾಡಿ ಎಂದೂ ಹಿಮ್ಮೆಟ್ಟದವನು ನೀನು ಎಂದು ಇಂದ್ರನನ್ನು ಹೊಗಳುವ ಶಬ್ದ. ಇಲ್ಲಿ ಪ್ರತಿಶಬ್ದಕ್ಕೆ ಎದುರಿಸುವವನು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

ತ್ವಾ—ಯುಷ್ಮಚ್ಛಬ್ದದ ದ್ವಿತೀಯಾ ಏಕವಚನದಲ್ಲಿ ತ್ವಾಮೌ ದ್ವಿತೀಯಾಯಾಃ (ಪಾ. ಸೂ. ೮-೧-೨೩) ಎಂಬುದರಿಂದ ಅನುದಾತ್ತವಾದ ತ್ವಾ ಎಂಬ ಆದೇಶವು ಸಂಪೂರ್ಣಕ್ಕೆ ಬರುತ್ತದೆ.

ಅಮದನ್—ಮದೀ ಹರ್ಷೇ. ಧಾತು. ಣಿಜರ್ಥವು ಧಾತ್ವರ್ಥಾಂತರ್ಭಾವಿತವಾಗಿದೆ. ಲಙ್ ಪ್ರಥಮಪುರುಷ ಬಹುವಚನದರೂಪ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

ವೃಷ್ಣ್ಯಾ—ನಪುಂಸಕದಲ್ಲಿ ಜಶ್ಶಸೋಃ ಶಿಃ ಎಂಬುದರಿಂದ ಜಸಿಗೆ ಶಿ ಆದೇಶ. ನಪುಂಸಕಸ್ಯ ಝಲಚಃ ಎಂಬುದರಿಂದ ನುಮಾಗಮ. ಸರ್ವನಾಮಸ್ಥಾನೇಚಾಸಂಬುದ್ಧೌ ಎಂಬುದರಿಂದ ನಾಂತದ ಉಪಧೆಗೆ ದೀರ್ಘ. ಶೇಶ್ಛಂದಸಿ ಬಹುಲಂ (ಪಾ. ಸೂ. ೬-೧-೭೦) ಎಂಬುದರಿಂದ ಶಿಗೆ ಲೋಪ.

ವೃತ್ರಹತ್ಯೇಷು—ವೃತ್ರಸ್ಯ ಹತ್ಯಾನಿ. ವೃತ್ರಹತ್ಯಾನಿ ತೇಷು. ಹನ ಹಿಂಸಾಗತ್ಯೋಃ ಧಾತು. ಹನಸ್ತ ಚ (ಪಾ. ಸೂ. ೩-೧-೧೦೮) ಎಂಬುದರಿಂದ ಉಪಸರ್ಗಭಿನ್ನವಾದ ಸುಬಂತವು ಉಪಪದವಾಗಿರುವುದರಿಂದ ಭಾವಾರ್ಥದಲ್ಲಿ ಕ್ಯಪ್ ಪ್ರತ್ಯಯವೂ ತತ್ಸಂನಿಯೋಗದಿಂದ ನಕಾರಕ್ಕೆ ತಕಾರಾದೇಶವೂ ಬರುತ್ತವೆ. ಕ್ಯಪ್ ಪಿತ್ತಾದುದರಿಂದ ಧಾತುಸ್ವರದಿಂದ ಆದ್ಯುದಾತ್ತ. ಕಾರಕಪೂರ್ವಪದವಾದುದರಿಂದ ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಬರ್ಹಯೇಃ—ಬರ್ಹಯತಿರ್ಹಿಂಸಾಕರ್ಮಾ ( ನಿರು. ೩-೧೯ ) ಎಂಬುದರಿಂದ ಬರ್ಹಧಾತುವು ಹಿಂಸಾರ್ಥದಲ್ಲಿದೆ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಬರ್ಹಯಃ ಎಂದು ರೂಪವಾಗುತ್ತದೆ. ಬಹುಲಂ



CC-0. Jangamwadi Math Collection. Digitized by eGangotri

ಛಂದಸ್ಯುಭಯಥಾ ಎಂಬುದರಿಂದ ಆರ್ಧಧಾತುಕವಾಗಿ ಅಡಾಗಮ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತ. ಆಗ ಣಿಚಿನ ಸ್ವರವೇ ಶಿಷ್ಟವಾಗುವುದರಿಂದ ಪ್ರಧಾನವಾಗುತ್ತದೆ. ಹಕಾರೋತ್ತರಾಕಾರವು ಉದಾತ್ತವಾಗುತ್ತದೆ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ ನಿಪಾತೈರ್ಯದ್ಯದಿ (ಪಾ. ಸೂ. ೮-೧-೩೦) ಎಂಬುದರಿಂದ ತಿಙಂತನಿಘಾತಸ್ವರ ಪ್ರತಿಷೇಧ ಬರುತ್ತದೆ.

॥ ಸಂಹಿತಾಪಾಠಃ ॥

ಯುಧಾ ಯುಧಮುಪ ಘೇದೇಷಿ ಧೃಷ್ಣುಯಾ ಪುರಾ ಪುರಂ ಸಮಿದಂ
ಹಂಸ್ಯೋಜಸಾ ।
ನಮ್ಯಾ ಯದಿಂದ್ರ ಸಖ್ಯಾ ಪರಾವತಿ ನಿಬರ್ಹಯೋ ನಮುಚಿಂ ನಾಮ
ಮಾಯಿನಂ ॥ ೭ ॥

॥ ಪದಪಾಠಃ ॥

ಯುಧಾ । ಯುಧಂ । ಉಪ । ಘ । ಇತ್ । ಏಷಿ । ಧೃಷ್ಣುऽಯಾ । ಪುರಾ । ಪುರಂ ।
ಸಂ । ಇದಂ । ಹಂಸಿ । ಓಜಸಾ ।
ನಮ್ಯಾ । ಯತ್ । ಇಂದ್ರ । ಸಖ್ಯಾ । ಪರಾऽವತಿ । ನಿऽಬರ್ಹಯಃ । ನಮುಚಿಂ ।
ನಾಮ । ಮಾಯಿನಂ ॥ ೭ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಧೃಷ್ಣುಯಾ ಶತ್ರೂಣಾಂ ಧರ್ಷಕಸ್ತ್ವಂ ಯುಧಾ ಯುದ್ಧೇನ ಸಂಬದ್ಧಂ ಯುದ್ಧಂ ಯುದ್ಧಮುಪ ಘೇದೇಷಿ ಉಪೈವ ಗಚ್ಛಸಿ । ಸರ್ವದಾ ಯುದ್ಧಶೀಲೋ ಭವಸೀತ್ಯರ್ಥಃ । ಘ ಇತಿ ಪಾದಪೂರಣಃ । ಶತ್ರೂಣಾಮಸುರಾಣಾಂ ಪುರಾ ಪುರೇಣ ನಗರೇಣ ಸಹೇದಂ ಪುರೋವರ್ತಿ ಪುರಂ ಶತ್ರುನಗರಮೋಜಸಾ ಬಲೇನ ಸಂ ಹಂಸಿ । ಸಮ್ಯಗ್ವಿನಾಶಯಸಿ । ಶತ್ರೂಣಾಂ ಪುರಾಣ್ಯಭೈತ್ಸೀರಿತ್ಯರ್ಥಃ । ಹೇ ಇಂದ್ರ ತ್ವಂ ನಮ್ಯಾ ಶತ್ರುಷು ನಮನಶೀಲೇನ ಸಖ್ಯಾ ಸಹಾಯಭೂತೇನ ವಜ್ರೇಣ ಪರಾವತಿ ದೂರದೇಶೇ ನಮುಚಿಂ ನಾಮಾನಯಾ ಸಂಜ್ಞಯಾ ಪ್ರಸಿದ್ಧಂ ಮಾಯಿನಂ ಮಾಯಾವಿನಮಸುರಂ ಯದ್ಯ-


CC-0. Jangamwadi Math Collection. Digitized by eGangotri

ಸ್ತ್ವಾನ್ನಿಬರ್ಹಯಃ ನಿತರಾಮಹಿಂಸೀಃ । ಅತಸ್ತ್ವಮೇವಂ ಸ್ತೂಯಸ ಇತ್ಯರ್ಥಃ ॥ ಯುಧಾ । ಯುಧ ಸಂಪ್ರಹಾರೇ । ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ । ಏಷಿ । ಇಣ್ ಗತೌ । ಅದಾದಿತ್ವಾಚ್ಛಪೋಲುಕ್ । ಧೃಷ್ಣುಯಾ । ಞಿಧೃಷಾ ಪ್ರಾಗಲ್ಭ್ಯೇ । ತ್ರಸಿಗೃಧಿಧೃಷಿಕ್ಷಿಪೇಃ ಕ್ನುರಿತಿ ಕ್ನುಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಸುಪಾಂ ಸುಲುಗಿತಿ ಸೋರ್ಯಾಜಾದೇಶಃ । ಚಿತ ಇತ್ಯಂತೋದಾತ್ತತ್ವಂ । ಪುರಾ । ಪೄ ಪಾಲನಪೂರಣಯೋಃ । ಪೂರಯತಿ ರಾಜ್ಞಾಮಭಿಮತಾನೀತಿ । ಕ್ವಿಪ್ಚೇತಿ ಕ್ವಿಪ್ । ಉದೋಷ್ಠ್ಯಪೂರ್ವಸ್ಯೇತ್ಯುತ್ವಂ । ಸಾವೇಕಾಚ ಇತಿ ವಿಭಕ್ತಿರುದಾತ್ತಾ । ಹಂಸಿ । ಹಂತೇರ್ಲಟಿ ಸಿಪ್ಯದಾದಿತ್ವಾಚ್ಛಪೋ ಲುಕಿ ನಶ್ಚಾಪದಾಂತಸ್ಯ ಝಲಿ । ಪಾ. ಸೂ. ೮-೩-೨೪ । ಇತ್ಯನುಸ್ವಾರಃ । ನಮ್ಯಾ । ಣಮು ಪ್ರಹ್ವತ್ವೇ । ಔಣಾದಿಕ ಇನ್ಪ್ರತ್ಯಯಃ । ಸುಪಾಂ ಸುಲುಗಿತಿ ತೃತೀಯಾಯಾ ಡ್ಯಾದೇಶಃ । ಟಿಲೋಪಃ । ಸಖ್ಯಾ । ಶೇಷೋ ಘ್ಯಸಖಿ । ಪಾ. ಸೂ. ೧-೪-೭ । ಇತಿ ಘಿಸಂಜ್ಞಾಪ್ರತಿಷೇಧಾನ್ನಾಭಾವಾಭಾವೇ ಯಣಾದೇಶಃ । ನಮುಚಿಂ । ಇಂದ್ರೇಣ ಸಹ ಯುದ್ಧಂ ನ ಮುಂಚತೀತಿ ನಮುಚಿಃ । ಔಣಾದಿಕಃ । ಕ್ವಿಪ್ರತ್ಯಯಃ ನಭ್ರಾಣ್ನಪಾದಿತ್ಯಾದಿನಾ ನಞಃ ಪ್ರಕೃತಿಭಾವಃ । ನಞ್ ನ ಗತಿರ್ನ ಚ ಕಾರಕಮಿತಿ ಕೃದುತ್ತರಪದಪ್ರಕೃತಿಸ್ವರತ್ವಾಭಾವೇಽವ್ಯಯ ಪೂರ್ವಪದಪ್ರಕೃತಿಸ್ವರತ್ವಂ । ಮಾಯಿನಂ । ಮಾಯಾಶಬ್ದಸ್ಯ ವ್ರೀಹ್ಯಾದಿಷು ಪಾಠಾತ್ಮತ್ವರ್ಥೀಯ ಇನಿಃ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಧೃಷ್ಣುಯಾ—(ಶತ್ರುಗಳನ್ನು) ಸದೆಬಡಿಯುವ ನೀನು । ಯುಧಾ—ಯುದ್ಧದಿಂದ । ಯುಧಂ—ಯುದ್ಧಕ್ಕೆ । ಉಪ ಘೇದೇಷಿ—ಸಮೀಪಿಸಿ ಬರುತ್ತೀಯೆ (ಯಾವಾಗಲೂ ಯುದ್ಧಶೀಲನಾಗಿಯೇ ಇದ್ದೀಯೆ) । ಪುರಾ—(ಶತ್ರುಗಳ) ನಗರಗಳೊಡನೆ । ಇದಂ ಪುರಂ—ಈ (ಮುಂದುಗಡೆ ಇರುವ) ಪಟ್ಟಣವನ್ನು । ಓಜಸಾ—ನಿನ್ನ ಬಲದಿಂದ । ಸಂ ಹಂಸಿ—ಸಂಪೂರ್ಣವಾಗಿ ನಾಶಮಾಡುತ್ತೀಯೆ । ಇಂದ್ರ—ಎಲೈ ಇಂದ್ರನೇ (ನೀನು) । ನಮ್ಯಾ—(ಶತ್ರುಗಳನ್ನು) ಬಗ್ಗಿಸುವುದೂ । ಸಖ್ಯಾ—(ಯಾವಾಗಲೂ ನಿನಗೆ) ಸಹಾಯಕವಾಗಿರುವುದೂ ಆದ ವಜ್ರಾಯುಧದಿಂದ । ಪರಾವತಿ—ದೂರದೇಶದಲ್ಲಿ । ನಮುಚಿಂ ನಾಮ—ನಮುಚಿಯೆಂಬ ಹೆಸರುಳ್ಳ । ಮಾಯಿನಂ—ಮೋಸಗಾರನಾದ ರಾಕ್ಷಸನನ್ನು । ಯತ್—ಯಾವಕಾರಣದಿಂದ । ನಿಬರ್ಹಯಃ—ನಿಶ್ಶೇಷವಾಗಿ ನಾಶಮಾಡಿದೆಯೋ (ಆದ್ದರಿಂದಲೇ ನೀನು ಸ್ತುತ್ಯನಾಗಿರುವೆ) ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಶತ್ರುಗಳನ್ನು ಸದೆಬಡಿದು, ಯುದ್ಧದಿಂದ ಯುದ್ಧಕ್ಕೆ ನುಗ್ಗಿ ನಿನ್ನ ಶಕ್ತಿಯಿಂದ ಒಂದಾದಮೇಲೊಂದಾಗಿ ಅನೇಕ ಪಟ್ಟಣಗಳನ್ನು ನಾಶಮಾಡಿದ್ದೀಯೆ. ಎಲೈ ಇಂದ್ರನೇ, ನೀನು ಶತ್ರುಗಳನ್ನು ನಮ್ರರನ್ನಾಗಿ ಮಾಡುವುದೂ ನಿನಗೆ ಸಹಾಯಕವಾಗಿರುವುದೂ ಆದ ವಜ್ರಾಯುಧದಿಂದ ದೂರದೇಶದಲ್ಲಿ ನಮುಚಿಯೆಂಬ ಮೋಸಗಾರನಾದ ರಾಕ್ಷಸನನ್ನು ಕೊಂದಿದ್ದರಿಂದ ನೀನು ಸ್ತುತ್ಯನಾದೆ.

## English Translation.

Humiliator of adversaries, you go from battle to battle, and destroy, by your might city after city; with you foe-prostrating associate (the thunderbolt) you Indra, did slay afar off the deceiver named Namuchi.



CC-0. Jangamwadi Math Collection. Digitized by eGangotri

|| ವಿಶೇಷವಿಷಯಗಳು ||

**ನಮುಚಿಂ**—ಇಂದ್ರೇಣ ಸಹ ಯುದ್ಧಂ ನ ಮುಂಚತೀತಿ ನಮುಚಿಃ ತಂ | ಇಂದ್ರನೊಡನೆ ಯುದ್ಧಮಾಡುವುದನ್ನು ಬಿಡುವವನಲ್ಲವಾದ್ದರಿಂದ ಇವನಿಗೆ ನಮುಚಿಯೆಂದು ಹೆಸರು. ನಮುಚಿಯೆಂಬುವನು ಒಬ್ಬ ರಾಕ್ಷಸನು. ಇವನು ಮಹಾಬಲವುಳ್ಳವನಾದುದರಿಂದ ಇಂದ್ರನು ಇವನೊಡನೆ ಯುದ್ಧಮಾಡಿ ಜಯಿಸುವುದು ಬಹಳ ಕಷ್ಟವಾಯಿತು. ಈ ವಿಷಯದಲ್ಲಿ ತೈತ್ತಿರೀಯ ಬ್ರಾಹ್ಮಣದಲ್ಲಿ ಒಂದು ಉಪಾಖ್ಯಾನವಿರುವುದು—

ಇಂದ್ರೋ ವೃತ್ರಗ್ಂ ಹತ್ವಾ | ಅಸುರಾನ್ ಪರಾಭಾವ್ಯ | ನಮುಚಿಮಾಸುರಂ ನಾಲಭತ |
ತಗ್ ಶಚ್ಯಾಗೃಹ್ಣಾತ್ | ತೌ ಸಮಲಭೇತಾಂ | ಸೋಽಸ್ಮಾದಭಿಶುನತರೋಽಭವತ್ |
ಸೋಽಬ್ರವೀತ್ | ಸಂಧಾಗ್ಂ ಸಂದಧಾವಹೈ| ಅಥ ತ್ವಾವಸ್ರಕ್ಷ್ಯಾಮಿ | ನ ಮಾ ಶುಷ್ಕೇಣ
ನಾರ್ದ್ರೇಣ ಹನಃ | ನ ದಿವಾ ನ ನಕ್ತಮಿತಿ | ಸ ಏತಮಪಾಂ ಫೇನಮಸಿಂಚತ್ |
ನ ವಾ ಏಷ ಶುಷ್ಕೋ ನಾರ್ದ್ರೋ ವ್ಯುಷ್ಟಾಸೀತ್ | ಅನುದಿತಃ ಸೂರ್ಯಃ | ನ ವಾ
ಏತದ್ದಿವಾ ನ ನಕ್ತಂ | ತಸ್ಯೈತಸ್ಮಿನ್ ಲೋಕೇ | ಅಪಾಂ ಫೇನೇನ ಶಿರ ಉದವರ್ತ-
ಯತ್ | ತದೇನಮನ್ವವರ್ತತ | ಮಿತ್ರದ್ರುಗಿತಿ | ಸ ಏತಾನಪಾಮಾರ್ಗಾನಜನಯತ್ |
ತಾನಜುಹೋತ್ | ತೈರ್ವೈ ಸ ರಕ್ಷಾಗ್ಂಸ್ಯಪಾಹತ | ಯದಪಮಾರ್ಗಹೋಮೋ ಭವತಿ|
ರಕ್ಷಸಾಮಪಹತ್ಯೈ ||

(ತೈ. ಬ್ರಾ. ೧-೭-೧)

ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದ ಮೇಲೆ ಇನ್ನೂ ಇತರ ರಾಕ್ಷಸರನ್ನೂ ಸಂಹಾರಮಾಡಿದನು.
ಆದರೆ ನಮುಚಿಯೆಂಬ ರಾಕ್ಷಸನನ್ನು ಜಯಿಸಲಾಗಲಿಲ್ಲ. ಇವನು ಮಹಾ ಬಲಶಾಲಿಯಾಗಿದ್ದನು. ಯಾವ
ವಿಧವಾದ ಆಯುಧಗಳಿಗೂ ಜಗ್ಗಲಿಲ್ಲ. ಆದುದರಿಂದ ಇಂದ್ರನು ಅವನನ್ನು ತನ್ನ ಶರೀರ ಬಲದಿಂದಲೇ ಗೆಲ್ಲ
ಬೇಕೆಂದು ಬಯಸಿ ಅವನೊಡನೆ ಮಲ್ಲಯುದ್ಧವನ್ನು ಪ್ರಾರಂಭಿಸಿದನು. ಆದರೂ ಯುದ್ಧಮಾಡಿದಂತೆಲ್ಲ ನಮು
ಚಿಯ ಬಲವೇ ವೃದ್ಧಿಯಾಗುತ್ತಿತ್ತು. ಇಂದ್ರನು ಅವನ ಹಿಡಿತದಿಂದ ತಪ್ಪಿಸಿಕೊಳ್ಳಲಾಗಲಿಲ್ಲ. ಆಗ ಇಂದ್ರನು
ತನ್ನನ್ನು ಬಿಡಬೇಕೆಂದು ನಮುಚಿಯನ್ನು ಕೇಳಲು ಆಗ ಆ ಅಸುರನು ಇಂದ್ರನನ್ನು ಕುರಿತು—ಎಲೈ ಇಂದ್ರನೇ,
ನಿನ್ನನ್ನು ಬಿಡಬೇಕಾದರೆ ನಾನು ಹೇಳಿದಂತೆ ಕೇಳಬೇಕು. ಈಗ ನಾವು ಒಬ್ಬರಿಗೊಬ್ಬರು ಸಂಧಿಯನ್ನು ಮಾಡಿ
ಕೊಳ್ಳೋಣ. ನೀನು ಮತ್ತೆ ನನ್ನೊಡನೆ ಯಾವುದಾದರೂ ತಂತ್ರದಿಂದ ಯುದ್ಧಮಾಡಿ ನನ್ನನ್ನು ಕೊಲ್ಲಬೇ
ಕೆಂದು ಇಚ್ಛಿಸಬಹುದು. ಅಂತಹ ಸಂದರ್ಭದಲ್ಲಿ ನೀನು ನನ್ನನ್ನು ಕೊಲ್ಲಬೇಕೆಂದು ಉಪಯೋಗಿಸುವ ಆಯು
ಧವು ಹಸಿಯಾಗಿರಕೂಡದು. ಒಣಗಿರಲೂಕೂಡದು. ಹಗಲಿನಲ್ಲಿ ನನ್ನನ್ನು ಕೊಲ್ಲಕೂಡದು, ರಾತ್ರಿಯಲ್ಲಿಯೂ
ಕೊಲ್ಲಕೂಡದು. ಈ ನಿಯಮಗಳಿಗೆ ನೀನು ಒಪ್ಪಿದಿಯಾದರೆ ನಿನ್ನನ್ನು ಬಿಡುವೆನು ಎಂದು ಹೇಳಿದನು.
ಇಂದ್ರನು ಹಾಗೆಯೇ ಆಗಲೆಂದೊಪ್ಪಿ ಅವನ ಹಿಡಿತದಿಂದ ಬಿಡಿಸಿಕೊಂಡು ಇವನನ್ನು ಹೇಗೆ ಜಯಿಸಬೇಕೆಂದು
ಆಲೋಚಿಸತೊಡಗಿದನು. ಕೆಲವುಕಾಲದ ಮೇಲೆ ಇಂದ್ರನು ಒಂದು ಉಪಾಯವನ್ನು ಯೋಚಿಸಿದನು. ಸಮು
ದ್ರದ ನೊರೆಯು ಅವನ ದೃಷ್ಟಿಗೆ ಬಿದ್ದಿತು. ಈ ನೊರೆಯು ಹಸಿಯೂ ಅಲ್ಲ ಒಣಗಿದುದೂ ಇಲ್ಲ. ಆದುದರಿಂದ
ಇದನ್ನೇ ಆಯುಧವನ್ನಾಗಿ ಮಾಡಿಕೊಂಡು ನಮುಚಿಯನ್ನು ಸಂಹರಿಸುವೆನು. ರಾತ್ರಿಯು ಕಳೆದು ಉಷಃ
ಕಾಲವು ಪ್ರಾರಂಭವಾಗಿ ಸೂರ್ಯನು ಉದಯಿಸುವುದಕ್ಕೆ ಮೊದಲು ಚೆನ್ನಾಗಿ ಬೆಳಕಾಗಿರುವುದು. ಆ ಕಾಲವು
ಕತ್ತಲೆಯಿಲ್ಲದ್ದರಿಂದ ರಾತ್ರಿಯೂ ಅಲ್ಲ, ಸೂರ್ಯನು ಉದಯಿಸಿರುವುದಿಲ್ಲವಾದ್ದರಿಂದ ಹಗಲೂ ಅಲ್ಲ. ಇಂತಹ
ಕಾಲದಲ್ಲಿ ನಮುಚಿಯೊಡನೆ ಯುದ್ಧಮಾಡಿ ನೀರಿನ ನೊರೆಯಿಂದ ನಿರ್ಮಿತವಾದ ಆಯುಧದಿಂದ ಅವನನ್ನು



CC-0. Jangamwadi Math Collection. Digitized by eGangotri

ಕೊಂದರೆ ನಾನು ಮಾತಿಗೆ ತಪ್ಪಿದಂತಾಗುವುದಿಲ್ಲ ಎಂದು ನಿಶ್ಚಯಿಸಿ ಅದರಂತೆ ನಮುಚಿಯೊಡನೆ ಯುದ್ಧಮಾಡಿ ಆ ನೊರೆಯಿಂದ ಅವನ ಶಿರಸ್ಸನ್ನು ಕತ್ತರಿಸಿದನು. ಆದರೂ ಆ ದೈತ್ಯನು ಮೃತನಾಗದೆ ಇಂದ್ರನನ್ನು ಕೊಲ್ಲುವುದಕ್ಕಾಗಿ ಅವನನ್ನು ಅಟ್ಟಿಸಿಕೊಂಡು ಬಂದನು. ಎಲೈ ಮಿತ್ರದ್ರೋಹಿಯಾದ ಇಂದ್ರನೇ, ನಿಲ್ಲು. ನಿಲ್ಲು ನೀನು ನನ್ನನ್ನು ಕೊಲ್ಲುವುದಿಲ್ಲವೆಂದು ಮಾತುಕೊಟ್ಟು ಈಗ ಇಂತಹ ಮಿತ್ರದ್ರೋಹಕರವಾದ ಕೆಲಸವನ್ನು ಮಾಡಿರುತ್ತೀಯೆ. ನಿನ್ನನ್ನು ಈಗಲೂ ಕೊಲ್ಲದೆ ಬಿಡುವುದಿಲ್ಲ ಎಂದನು. ಆಗ ಇಂದ್ರನು ಹೆದರಿ ಅಪಾಮಾರ್ಗವೆಂಬ ವೃಕ್ಷವಿಶೇಷವನ್ನು ಸೃಷ್ಟಿಸಿ ಅದರ ಸಮಿತ್ತುಗಳಿಂದ ಅಗ್ನಿಯಲ್ಲಿ ವೀರ್ಯವೃದ್ಧಿಗಾಗಿ ಹೋಮಮಾಡಿದನು. ಅದರಿಂದ ಇಂದ್ರನ ಬಲವು ಅಧಿಕವಾಗಿ ಆ ನಮುಚಿಯನ್ನು ಸಂಹಾರಮಾಡಿದನು. ಆದುದರಿಂದ ರಾಕ್ಷಸರ ಬಾಧೆಯಿಂದ ಪಾರಾಗಬೇಕೆಂದು ಬಯಸುವವರು ಅಪಾಮಾರ್ಗ ಸಮಿತ್ತುಗಳಿಂದ ಹೋಮಮಾಡಬೇಕು ಎಂದಿರುವುದು. ಈ ನಮುಚಿಯ ಹೆಸರು ಋಗ್ವೇದದಲ್ಲಿ ಈ ಋಕ್ಕಿನಲ್ಲಲ್ಲದೆ—

ಯಃ ಪಿಪ್ರುಂ ನಮುಚಿಂ ಯೋ ರುಧಿಕ್ರಾಂ ತಸ್ಮಾ ಇಂದ್ರಾಯಾಂಧಸೋ ಜುಹೋತ ।

(ಋ. ಸಂ. ೨-೧೪-೫)

ನಿವೇಶನೇ ಶತತಮಾವಿವೇಷೀರಹಞ್ಚ ವೃತ್ರಂ ನಮುಚಿಮುತಾಹನ್ ।

(ಋ. ಸಂ. ೭-೧೯-೫)

ತ್ವಂ ಜಘಂಥ ನಮುಚಿಂ ಮಖಸ್ಯುಂ ದಾಸಂ ಕೃಣ್ವಾನ ಋಷಯೇ ವಿಮಾಯಂ ।

(ಋ. ಸಂ. ೧೧-೭೩-೭)

ಅತ್ರಾ ದಾಸಸ್ಯ ನಮುಚೇಃ ಶಿರೋ ಯದವರ್ತಯೋ ಮನವೇ ಗಾತುಮಿಚ್ಛನ್ ।

(ಋ. ಸ. ೫-೩೦-೭)

ಯುಜಂ ಹಿ ಮಾಮಕೃಥಾ ಆದಿದಿಂದ್ರ ಶಿರೋ ದಾಸಸ್ಯ ನಮುಚೇರ್ಮಥಾಯನ್ ।

(ಋ. ಸಂ. ೫-೩೦-೮)

ಪ್ರ ಶ್ಯೇನೋ ನ ಮದಿರಮಂಶುಮಸ್ಮೈ ಶಿರೋ ದಾಸಸ್ಯ ನಮುಚೇರ್ಮಥಾಯನ್ ।

(ಋ. ಸಂ. ೬-೨೦-೬)

ಅಪಾಂ ಫೇನೇನ ನಮುಚೇಃ ಶಿರ ಇಂದ್ರೋದವರ್ತಯಃ ।

(ಋ. ಸಂ. ೮-೧೪-೧೩)

ಯುವಂ ಸುರಾಮಮಶ್ವಿನಾ ನಮುಚಾವಾಸುರೇ ಸಚಾ ।

(ಋ. ಸಂ. ೧೦-೧೩೧-೪)

ಎಂಬ ಋಕ್ಕುಗಳಲ್ಲಿರುವುದು. ಮತ್ತೆಲ್ಲಿಯೂ ಇರುವುದಿಲ್ಲ.

ಮುಖ್ಯಾಭಿಪ್ರಾಯವು—ಯದಾ ಇಂದ್ರಃ ಸ್ವೋಪಾಸಕಸ್ಯ ನಮಿನಾಮ್ನ ಋಷೇ ರಕ್ಷಣಾರ್ಥಂ ನಮುಚಿನಾಮಾನಮಸುರಂ ಹತವಾನ್ ತದಾ ತೇನ ನಮುಚಿನಾ ಸಹೈಕಸ್ಮಾದ್ಯುದ್ಧಾದನಂತರಮನ್ಯದ್ಯುದ್ಧಮೇವಂ ಪ್ರಕಾರೇಣಾನೇಕಾನಿ ಯುದ್ಧಾನಿ ಚಕಾರ, ತಥೈಕಸ್ಮಾನ್ನಗರಾದನಂತರಮನ್ಯನ್ನಗರಮೇವಂ ಪ್ರಕಾರೇಣ ನಮುಚೇಃ ಸರ್ವಾಣ್ಯಪಿ ನಗರಾಣಿ ಹತವಾನಿತ್ಯರ್ಥಃ ॥ ಇಂದ್ರನು ತನ್ನನ್ನು ಸ್ತೋತ್ರಮಾಡುವ ನಮಿ ಎಂಬ ಋಷಿಯನ್ನು ಸಂರಕ್ಷಿಸುವುದಕ್ಕಾಗಿ ನಮುಚಿಯೆಂಬ ಅಸುರನೊಡನೆ ಅನೇಕಾವರ್ತಿ ಯುದ್ಧಮಾಡಿದನೆಂದೂ ಯುದ್ಧಮಾಡಿದಾಗಲೆಲ್ಲಾ ಅವನ ನಗರಗಳನ್ನು ಒಂದಾಗುತ್ತಲೊಂದನ್ನು ನಾಶಮಾಡಿ ಕಡೆಗೆ ಅವ



CC-0. Jangamwadi Math Collection. Digitized by eGangotri

ನನ್ನು ಸಂಹಾರಮಾಡಿದನೆಂದು ಪೂರ್ವೇತಿಹಾಸವಿರುವುದು. ಇಲ್ಲಿ ಕೆಲವರು ಸಖ್ಯಾ ಎಂಬ ಶಬ್ದಕ್ಕೆ ಇಂದ್ರನಿಗೆ ಸ್ನೇಹಿತನಾದ ನಮಿ ಎಂಬ ಋಷಿಯೆಂದು ಅರ್ಥಮಾಡುವರು. ಭಾಷ್ಯಕಾರರು ಇಂದ್ರನಿಗೆ ಸ್ನೇಹಿತನಂತಿರುವ (ಎಂದರೆ ಪ್ರೀತಿಪಾತ್ರವಾದ) ವಜ್ರಾಯುಧದಿಂದ ಎಂದು ಅರ್ಥಮಾಡಿರುವರು.

ಘ ಇತ್ ಏಷಿ—ಇಲ್ಲಿ ಘಕಾರವು ಕೇವಲ ಪಾದಪೂರಣಾರ್ಥಕ. ಅದಕ್ಕೆ ಯಾವ ಅರ್ಥವೂ ಇಲ್ಲ.

ಧೃಷ್ಣುಯಾ—ಇದು ಯುಧಾ ಎಂಬ ಪದಕ್ಕೆ ವಿಶೇಷಣವಾಗಿದೆ. ಞಿಧೃಷಾ ಪ್ರಾಗಲ್ಭೇ ಎಂಬ ಧಾತುವಿನಿಂದ ನಿಷ್ಪನ್ನವಾದ ಧೃಷ್ಣುಶಬ್ದಕ್ಕೆ ಪ್ರಗಲ್ಭವಾದ ರೀತಿಯಲ್ಲಿ ಶತ್ರುಗಳನ್ನು ನಾಶಪಡಿಸುವಿಕೆ ಎಂಬರ್ಥವು ಸ್ಪಷ್ಟವಾಗುವುದು.

ನಮ್ಯಾ—ಶತ್ರುಗಳು ಬಗ್ಗುವಂತೆ ಮಾಡುವ ಎಂಬರ್ಥದಿಂದ ಈ ಶಬ್ದವು ವಜ್ರವಾಚಕವಾದ ಸಖ್ಯಾ ಎಂಬ ಪದಕ್ಕೆ ವಿಶೇಷಣವಾಗಿದೆ. ಕೆಲವರು ಈ ಶಬ್ದಕ್ಕೆ ನಮಿ ಎಂಬ ಋಷಿಯೊಡನೆ ಎಂದಭಿಪ್ರಾಯ ಪಡುವರು.

## ॥ ವ್ಯಾಕರಣಪ್ರಕ್ರಿಯಾ ॥

ಯುಧಾ—ಯುಧ ಸಂಪ್ರಹಾರೇ ಧಾತು. ಸಂಪದಾದಿಭ್ಯಃಕ್ವಿಪ್ ಎಂಬುದರಿಂದ ಕ್ವಿಪ್. ತೃತೀಯಾ ಏಕವಚನದರೂಪ. ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಿನ ಪರದಲ್ಲಿ ರುವುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಏಷಿ—ಇಣ್ ಗತೌ ಧಾತು. ಲಟ್ ಮಧ್ಯಮಪುರುಷದಲ್ಲಿ ಸಿಪ್. ಅದಿಪ್ರಭೃತಿಭ್ಯಃಶಪಃ ಎಂಬುದ ರಿಂದ ಶಪಿಗೆ ಲುಕ್. ಸಾರ್ವಧಾತುಕ ಸಿಪ್ ನಿಬಂಧನವಾಗಿ ಧಾತುವಿಗೆ ಗುಣ. ಇಕ್ ಪರದಲ್ಲಿರುವುದರಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಏಷಿ ಎಂದಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಧೃಷ್ಣುಯಾ—ಞಿಧೃಷಾ ಪ್ರಾಗಲ್ಭ್ಯೇ ಧಾತು. ತ್ರಸಿಗೃಧಿ ಧೃಷಿಕ್ಷಿಪೇಃ ಕ್ನುಃ (ಪಾ. ಸೂ. ೩-೧-೧೪೦) ಎಂಬುದರಿಂದ ಕ್ನು ಪ್ರತ್ಯಯು. ಕಿತ್ತಾದುದರಿಂದ ಗುಣ ಬರುವುದಿಲ್ಲ. ಧೃಷ್ಣುಃ ಎಂದು ರೂಪ ವಾಗುತ್ತದೆ. ಪ್ರಥಮಾ ಸುವಿಗೆ ಸುಪಾಂಸುಲುಕ್ ಎಂಬುದರಿಂದ ಯಾಜಾದೇಶ. ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಪುರಾ—ಪ್ೃ ಪಾಲನಪೂರಣಯೋಃ ಧಾತು. ಪೂರಯತಿ ರಾಜ್ಞಾ ಅಭಿಮತಾನೀತಿ ಪುರಾ. ಕ್ವಿಪ್‌ಚೆ ಎಂಬುದರಿಂದ ಕ್ವಿಪ್. ಉದೋಷ್ಠ್ಯಪೂರ್ವಸ್ಯ (ಪಾ. ಸೂ. ೭-೧-೧೦೨) ಎಂಬುದರಿಂದ ಧಾತುವಿಗೆ ಉತ್ವ. ಉರಣ್‌ರಪರಃ ಎಂಬುದರಿಂದ ರಪರವಾಗಿ ಬರುತ್ತದೆ. ತೃತೀಯಾ ಏಕವಚನದಲ್ಲಿ ಪುರಾ ಎಂದು ರೂಪವಾಗುತ್ತದೆ. ಪುರ್ ಶಬ್ದವಾಗುತ್ತದೆ. ಸಾವೇಕಾಚಸ್ತೃತೀಯಾದಿಃ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಹಂಸಿ—ಹನ ಹಿಂಸಾಗತ್ಯೋಃ ಧಾತು. ಲಣ್ಮಧ್ಯಮಪುರುಷೈಕವಚನದಲ್ಲಿ ಸಿಪ್ ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಪಿಗೆ ಲುಕ್. ನಶ್ಚಾಪದಾಂತಸ್ಯ ಝಲಿ (ಪಾ. ಸೂ. ೮-೩-೨೪) ಎಂಬುದರಿಂದ ಅಪ ದಾಂತವಾದುದರಿಂದ ನಕಾರಕ್ಕೆ ಅನುಸ್ವಾರ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ನಮ್ಯಾ—ಣಮು ಪ್ರಹ್ವತ್ವೇ ಧಾತು. ಉಣಾದಿಸಿದ್ಧವಾದ ಇನ್ ಪ್ರತ್ಯಯ ಬಂದರೆ ನಮಿ ಎಂದಾ ಗುತ್ತದೆ. ತೃತೀಯಾ ಏಕವಚನದಲ್ಲಿ ವಿಭಕ್ತಿಗೆ ಸುಪಾಂಸುಲುಕ್ ಎಂಬುದರಿಂದ ಡ್ಯಾದೇಶ ಬರುತ್ತದೆ. ಡಿತ್ತಾದುದರಿಂದ ನಮಿ ಎಂಬಲ್ಲಿ ಟಿಲೋಪಬರುತ್ತದೆ. ನಮ್ಯಾ ಎಂದು ರೂಪವಾಗುತ್ತದೆ.





CC-0. Jangamwadi Math Collection. Digitized by eGangotri

ಸಖ್ಯಾ—ಶೇಷೋ ಘ್ಯಸಖಿ (ಪಾ. ಸೂ. ೧-೪-೭) ಎಂಬ ಘಿ ಸಂಜ್ಞಾವಿಧಾಯಕ ಸೂತ್ರದಲ್ಲಿ ಅಸಖಿ ಎಂದು ನಿಷೇಧಮಾಡಿರುವುದರಿಂದ ಸಖಿ ಶಬ್ದಕ್ಕೆ ಘಿ ಸಂಜ್ಞಾ ಬರುವುದಿಲ್ಲ. ಇದರಿಂದ ಆಙೋನಾಽಸ್ತ್ರಿಯಾಂ ಎಂಬುದರಿಂದ ತೃತೀಯಾ ಏಕವಚನಕ್ಕೆ ನಾಭಾವ ಬರುವುದಿಲ್ಲ. ಯಣಾದೇಶದಿಂದ ಸಖ್ಯಾ ಎಂದು ರೂಪ ವಾಗುತ್ತದೆ.

ನಮುಚಿಮ್—ಇಂದ್ರೇಣ ಸಹ ಯುದ್ಧಂ ನ ಮುಂಚತೀತಿ ನಮುಚಿಃ (ಇಂದ್ರನೊಡನೆ ಯುದ್ಧವನ್ನು ಬಿಡದಿರುವವನು) ಮುಚ್ಲೃ ಮೋಕ್ಷಣೇ. ಧಾತು ಓಣಾದಿಕ ಕಿ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ನಞ್ ಸಮಾಸವಾದಾಗ ನಭ್ರಾಣ್ನಪಾತ್ (ಪಾ. ಸೂ. ೬-೩-೭೫) ಎಂಬುದರಿಂದ ನಞಿಗೆ ಪ್ರಕೃತಿಭಾವ ಬರುತ್ತದೆ. ನಞ್ ನ ಗತಿಃ ನಚ ಕಾರಕಮ್ ಎಂಬ ವಚನದಿಂದ ಕೃದುತ್ತರಪದಪ್ರಕೃತಿಸ್ವರ ಬರಲು ನಿಮಿತ್ತ ವಿಲ್ಲದಿರುವುದರಿಂದ ಅವ್ಯಯ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಮಾಯಿನಮ್—ಮಾಯಾ ಶಬ್ದವು ವ್ರೀಹ್ಯಾದಿಯಲ್ಲಿ ಪಠಿತವಾದುದರಿಂದ ವ್ರೀಹ್ಯಾದಿಭ್ಯಶ್ಚ (ಪಾ. ಸೂ. ೫-೨-೧೧೬) ಎಂಬುದರಿಂದ ಮತ್ವರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ. ಯಸ್ಯೇತಿಚ ಸೂತ್ರದಿಂದ ಇನಿ ಪರದಲ್ಲಿರುವಾಗ ಆಕಾರಲೋಪ. ಮಾಯಿನ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ. ಪ್ರತ್ಯಯ ಸ್ವರದಿಂದ ಇಕಾರವು ಉದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ತ್ವಂ ಕರಂಜಮುತ ಪರ್ಣಯಂ ವಧೀಸ್ತೇಜಿಷ್ಠಯಾತಿಥಿಗ್ವಸ್ಯ ವರ್ತನೀ ।
ತ್ವಂ ಶತಾ ವಂಗೃದಸ್ಯಾಭಿನತ್ಪುರೋಽನಾನುದಃ ಪರಿಷೂತಾ ಋಜಿಶ್ವನಾ ॥ ೮ ॥

॥ ಪದಪಾಠಃ ॥

ತ್ವಂ । ಕರಂಜಂ । ಉತ । ಪರ್ಣಯಂ । ವಧೀಃ । ತೇಜಿಷ್ಠಯಾ । ಅತಿಥಿಽಗ್ವಸ್ಯ ವರ್ತನೀ ।
ತ್ವಂ । ಶತಾ । ವಂಗೃದಸ್ಯ । ಅಭಿನತ್ । ಪುರಃ । ಅನನುಽದಃ । ಪರಿಽಸೂತಾಃ । ಋಜಿಶ್ವನಾ ॥ ೮ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯ ॥

ಹೇ ಇಂದ್ರ ತ್ವಂ ಕರಂಜಮೇತತ್ಸಂಜ್ಞಕಮಸುರಮುತಾಪಿ ಚ ಪರ್ಣಯಮೇತನ್ನಾಮಾನಮಸುರಂ ಚಾತಿಥಿಗ್ವಸ್ಯೈತತ್ಸಂಜ್ಞಸ್ಯ ರಾಜ್ಞಃ ಪ್ರಯೋಜನಾಯ ತೇಜಿಷ್ಠಯಾತಿಶಯೇನ ತೇಜಸ್ವಿನ್ಯಾ ವರ್ತನೀ ವರ್ತನ್ಯಾ ಶತ್ರುಪ್ರೇರಣಕುಶಲಯಾ ಶಕ್ತ್ಯಾ ವಧೀಃ । ಹತವಾನಸಿ । ತಥಾನನುದಃ । ಅನು ಪಶ್ಚಾದ್ದ್ಯತಿ ಖಂಡಯತೀತ್ಯನುದೋಽನುಚರಃ । ತಾದೃಶೋಽನುಚರರಹಿತ ಏಕ ಏವ ತ್ವಮೃಜಿಶ್ವನೈತತ್ಸಂಜ್ಞಕೇನ ರಾಜ್ಞಾ ಪರಿಷೂತಾಃ ಪರಿತೋಽವಷ್ಟಬ್ಧಾಃ ಶತಾ ಶತಾನಿ ಶತಸಂಖ್ಯಾಕಾ ವಂಗೃದಸ್ಯೈತತ್ಸಂಜ್ಞಕಸ್ಯಾಸುರಸ್ಯ ಪುರಃ ಪುರಾಣಿ ನಗರಾಣ್ಯಭಿನತ್ । ಬಿಭಿದಿಷೇ ॥ ವಧೀಃ । ಹಂತೇರ್ಲುಙಿ ಸಿಪಿ ಲುಙಿ ಚೇತಿ ವಧಾದೇಶಃ । ತಸ್ಯಾದಂತತ್ವಾದ್ವೃದ್ಧ್ಯಭಾವಃ । ಪಾ. ೭-೩-೩೫ । ಅತ ಏವಾನೇಕಾಚ್ತ್ವಾದಿಟ್‌ಪ್ರತಿಷೇಧಾಭಾವಃ । ಪಾ. ೭-೨-೧೦ । ಇಟ ಈಟೀತಿ ಸಿಚೋ ಲೋಪಃ । ತೇಜಿಷ್ಠಯಾ । ತೇಜಸ್‌ಶಬ್ದಾದಸ್ಮಾಯಾಮೇಧೇತಿ ಮತ್ವರ್ಥೀಯೋ ವಿನಿಃ । ತಸ್ಮಾದಾತಿಶಾಯನಿಕ ಇಷ್ಠನಿ ವಿನ್ಮತೋರ್ಲುಗಿತಿ ವಿನೋ ಲುಕ್ । ಟೇರಿತಿ ಟಿಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ವರ್ತನೀ । ವೃತ್ಯತೇ ಪ್ರೇರ್ಯತೇಽನಯೇತಿ ವರ್ತನೀ । ಕರಣೇ ಲ್ಯುಟ್ । ಟಿತ್ತ್ವಾತ್ ಙೀಪ್ । ಪಾ. ೪-೧-೧೫ । ಸುಪಾಂ ಸುಲುಗಿತಿ ವಿಭಕ್ತೇಃ ಪೂರ್ವಸವರ್ಣದೀರ್ಘತ್ವಂ । ವ್ಯತ್ಯಯೇನಾಂತೋದಾತ್ತತ್ವಂ । ಅಭಿನತ್ । ಭಿದಿರ್ ವಿದಾರಣೇ । ಲಙಿ ಸಿಪಿ ರುಧಾದಿತ್ವಾಚ್ ಶ್ನಮ್ । ಇತಶ್ಚೇತೀಕಾರಲೋಪಃ । ಹಲ್ಙ್ಯಾಬ್ಭ್ಯ ಇತಿ ಸಕಾರಲೋಪಃ । ಅನನುದಃ । ದೋ ಅವಖಂಡನೇ । ಆದೇಚ ಇತ್ವಂ । ಆತಶ್ಚೋಪಸರ್ಗ ಇತಿ ಕಪ್ರತ್ಯಯಃ । ನಾಸ್ತ್ಯನುದೋಽಸ್ಯೇತಿ ಬಹುವ್ರೀಹೌ ನಞ್‌ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸಂಹಿತಾಯಾಂ ದೀರ್ಘಶ್ಛಾಂದಸಃ । ಪರಿಷೂತಾಃ । ಷೂ ಪ್ರೇರಣೇ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವಂ—ನೀನು । ಕರಂಜಂ—ಕರಂಜನೆಂಬ ಅಸುರನನ್ನೂ । ಉತ—ಮತ್ತು । ಪರ್ಣಯಂ—ಪರ್ಣಯನೆಂಬ ಅಸುರನನ್ನೂ । ಅತಿಥಿಗ್ವಸ್ಯ—ಅತಿಥಿಗ್ವನೆಂಬ ದೊರೆಯ (ಪ್ರಯೋಜನಕ್ಕಾಗಿ) ತೇಜಿಷ್ಠಯಾ—ತೇಜಸ್ವಿಯಾದುದೂ । ವರ್ತನೀ—(ಶತ್ರುವನ್ನು) ಕೆರಳಿಸುವುದೂ ಆದ ಶಕ್ತಿಯಿಂದ । ವಧೀಃ—ಕೊಂದಿದ್ದೀಯೆ (ಹಾಗೆಯೇ) ಅನನುದಃ—ಅನುಚರರ ಸಹಾಯವಿಲ್ಲದೆ । ತ್ವಂ—ನೀನು (ಒಬ್ಬನೇ) । ಋಜಿಶ್ವನಾ—ಋಜಿಶ್ವನೆಂಬ ದೊರೆಯಿಂದ । ಪರಿಷೂತಾಃ—ಸುತ್ತಲೂ ಮುತ್ತಲ್ಪಟ್ಟ । ವಂಗೃದಸ್ಯ—ವಂಗೃದನೆಂಬ ಅಸುರನ । ಶತಾ—ನೂರು । ಪುರಃ—ಪಟ್ಟಣಗಳನ್ನು । ಅಭಿನತ್—ಧ್ವಂಸಮಾಡಿದೆ ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಕರಂಜನೆಂಬ ಅಸುರನನ್ನೂ ಮತ್ತು ಪರ್ಣಯನೆಂಬ ಅಸುರನನ್ನೂ ಅತಿಥಿಗ್ವನೆಂಬ ದೊರೆಯ ಪ್ರಯೋಜನಕ್ಕಾಗಿ ನಿನ್ನ ತೇಜಸ್ವಿಯಾದ ಅಸ್ತ್ರದಿಂದ ಕೊಂದಿದ್ದೀಯೆ. ಹಾಗೆಯೇ ಇತರರ ಸಹಾಯವಿಲ್ಲದೇ ನೀನೊಬ್ಬನೇ ಋಜಿಶ್ವನು ಮುತ್ತಿದ ವಂಗೃದನೆಂಬ ಅಸುರನ ನೂರು ಪಟ್ಟಣಗಳನ್ನು ಧ್ವಂಸ ಮಾಡಿದೆ.



CC-0. Jangamwadi Math Collection. Digitized by eGangotri

## English Translation.

You have slain Karanja and Parnaya with your bright gleaming spear in the cause of Atithigwa; unaided, you demolished the hundred cities of Vangrida when besieged by Rijiswan.

|| ವಿಶೇಷ ವಿಷಯಗಳು ||

**ಕರಂಜಂ ಪರ್ಣಯಂ**—ಕರಂಜವೆಂಬ ಒಂದು ವೃಕ್ಷವಿಶೇಷವಿರುವುದು. (Pongamia glabra) ಇಲ್ಲಿ ಕರಂಜನೆಂಬ ಒಬ್ಬ ದೈತ್ಯನ ಹೆಸರಾಗಿರುವುದು. ಈ ಶಬ್ದವೂ ಮತ್ತು ಪರ್ಣಯ ಎಂಬ ಶಬ್ದವೂ ಈ ಋಕ್ಕಿನಲ್ಲಿಯೂ—

**ಯತ್ಪರ್ಣಯಘ್ನ ಉತ ವಾ ಕರಂಜಹೇ ಪ್ರಾಹಂ ಮಹೇ ವೃತ್ರಹತ್ಯೇ ಅಶುಶ್ರವಿ ।**

(ಋ. ಸಂ. ೧೦-೪೮-೮)

ಎಂಬ ಋಕ್ಕಿನಲ್ಲಿಯೂ ಮಾತ್ರ ಪಠಿತವಾಗಿರುವುದು. ಈ ಋಕ್ಕಿನಲ್ಲಿಯೂ ಸಹ ಇಂದ್ರನು ಕರಂಜನೆಂಬ ಅಸುರನನ್ನು ಸಂಹಾರಮಾಡಿದ ಸಂದರ್ಭದಲ್ಲಿ ಪರ್ಣಯ ಎಂಬ ದೈತ್ಯನ ಹೆಸರೂ ಉಕ್ತವಾಗಿರುವುದು. ಇವರ ವಿಷಯ ನಮಗೆ ಹೆಚ್ಚು ತಿಳಿಯದು.

**ಅತಿಥಿಗ್ವಸ್ಯ**—ಒಬ್ಬ ರಾಜನ ಹೆಸರು. ಇವನ ವಿಷಯವಾಗಿ ನಾವು ೧೭೪ ನೆಯ|ಪೇಜಿನಲ್ಲಿ ಬರೆದಿರುವ ವಿವರಣೆಯನ್ನು ನೋಡಿ.

**ವರ್ತನೀ**—ತೃತೀಯಾ ವಿಭಕ್ತ್ಯರ್ಥದಲ್ಲಿ ಪ್ರಥಮಾ ಬಂದಿದೆ. ಶತ್ರುವನ್ನು ಧ್ವಂಸಮಾಡುವ ಶಕ್ತಿಯಿಂದ ಎಂಬುದೇ ಇದರ ಅರ್ಥ. **ವೃತ್ಯತೇ ಪ್ರೇರ್ಯತೇ ಅನೇನೇತಿ ವರ್ತನೀ** ಎಂದು ಇದರ ವಿವರಣೆ.

**ಅನನುದಃ**—**ಅನು ಪಶ್ಚಾತ್ ದ್ಯತಿ ಖಂಡಯತೀತಿ ಅನುದಃ ಅನುಚರಃ** ಎಂಬ ವ್ಯುತ್ಪತ್ತಿಯಿಂದ ಅನುದ ಶಬ್ದವು ಸೇವಕನೆಂಬ ಅರ್ಥಕೊಡುವುದು. ಆ ರೀತಿಯಾದ ಯಾವ ಸೇವಕರ ಸಹಾಯವೂ ಇಲ್ಲದೆ ಶತ್ರುಗಳನ್ನು ನಾಶಮಾಡುವವನು ಇಂದ್ರನು ಎಂಬರ್ಥವು ಈ ಅನುದಃ ಎಂಬ ಪದದಿಂದ ತೋರುವುದು. **ನಾಸ್ತಿ ಅನುದಃ ಯಸ್ಯ ಅನನುದಃ** ಎಂಬುದೇ ಇದರ ವಿಗ್ರಹವಾಕ್ಯ. ಸಂಹಿತೆಯಲ್ಲಿ ಕಂಡುಬರುವ ದೀರ್ಘವು ವ್ಯಾಕರಣ ನಿಯಮಕ್ಕೆ ಸೇರಿದುದಲ್ಲ. ಕೇವಲ ಛಂದಸ್ಸಿಗೆ ಸಂಬಂಧಿಸಿದುದು.

**ವಙ್ಗೃದಸ್ಯ**—ಈ ಹೆಸರಿನವನು ಒಬ್ಬ ರಾಕ್ಷಸನು. ಇವನ ಹೆಸರು ಈ ಋಕ್ಕಿನಲ್ಲಲ್ಲದೆ ಬೇರೆಲ್ಲಿಯೂ ಪಠಿತವಾಗಿಲ್ಲವಾದ್ದರಿಂದ ಇವನ ವಿಷಯವನ್ನು ಹೆಚ್ಚಾಗಿ ತಿಳಿಯಲು ಸಾಧ್ಯವಿಲ್ಲ.

**ಋಜಿಶ್ವನಾ**—ಋಜಿಶ್ವನೆಂಬುವನು ಒಬ್ಬ ರಾಜನು. ಇವನ ವಿಷಯವಾಗಿ ನಾವು ೧೯೯ ನೇ ಪೇಜಿನಲ್ಲಿ ಬರೆದಿರುವುದನ್ನು ನೋಡಿ.

**ಪರಿಷೂತಾ**—ಸೂ ಪ್ರೇರಣೆ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಸುತ್ತಲೂ ಆಕ್ರಮಿಸಲ್ಪಟ್ಟಿರುವುದು ಎಂದರ್ಥವು.



CC-0. Jangamwadi Math Collection. Digitized by eGangotri

|| ವ್ಯಾಕರಣಪ್ರಕ್ರಿಯಾ ||

**ವಧೀಃ**— ಹನ ಹಿಂಸಾಗತ್ಯೋಃ ಧಾತು. ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಲುಙಿ ಚ ಎಂಬುದರಿಂದ ಧಾತುವಿಗೆ ವಧಾದೇಶ. ಇದು ಅದಂತ ವಾದುದರಿಂದ **ಅತೋಹಲಾದೇಃ** ( ಪಾ. ಸೂ. ೭-೨-೭ ) ಎಂಬುದರಿಂದ ವೃದ್ಧಿ ಬರುವುದಿಲ್ಲ. ಅದುದ ರಿಂದಲೇ ಅನೇಕಾಚಾದುದರಿಂದ **ಏಕಾಚಉಪದೇಶೇನುದಾತ್ತಾತ್** (ಪಾ.ಸೂ. ೭-೨-೧೦) ಎಂಬುದರಿಂದ ಪರದ ಆರ್ಧಧಾತುವಾದ ಸಿಚಿಗೆ ಇಣ್ನಿಷೇಧ ಬರುವುದಿಲ್ಲ. **ಆರ್ಧಧಾತುಕಸ್ಯೇಡ್ವಲಾದೇಃ** ಎಂಬುದರಿಂದ ಸಿಚಿಗೆ ಇಡಾಗಮ. **ಅಸ್ತಿ ಸಿಚೋಽಪೃಕ್ತೇ** ಸೂತ್ರದಿಂದ ಅಪೃಕ್ತವಾದ ಸಿಪಿಗೆ ಈಡಾಗಮ. ಇಟ ಈಟಿ ಸೂತ್ರ ದಿಂದ ಸಿಚಿಗೆ ಲೋಪ. **ಬಹುಲಂಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ವಧೀಃ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ತೇಜಿಷ್ಠಯಾ**— ತೇಜಸ್ ಶಬ್ದ ಅಸಂತವಾದುದರಿಂದ **ಅಸ್ಮಾಯಾಮೇಧಾ**— (ಪಾ. ಸೂ. ೫-೨-೧೨೧) ಎಂಬುದರಿಂದ ಮತ್ವರ್ಥದಲ್ಲಿ ವಿನಿಪ್ರತ್ಯಯ. ತೇಜಸ್ವಿನ್ ಎಂತಾಗುತ್ತದೆ. ಇದರ ಮೇಲೆ ಅತಿ ಶಯಾರ್ಥದಲ್ಲಿ **ಅತಿಶಾಯನೇ ತಮಬಿಷ್ಠನೌ** (ಪಾ. ಸೂ. ೫-೩-೫೫) ಎಂಬುದರಿಂದ ಇಷ್ಠನ್ ಪ್ರತ್ಯಯ. ಇಷ್ಠನ್ ಪರದಲ್ಲಿರುವಾಗ **ವಿನ್ಮತೋರ್ಲುಕ್** (ಪಾ. ಸೂ. ೫-೩-೬೫) ಎಂಬುದರಿಂದ ವಿನ್ನಿಗೆ ಲುಕ್. **ಟೇಃ** (ಪಾ. ಸೂ. ೬-೪-೧೪೩) ಎಂಬುದರಿಂದ ತೇಜಸಿನ ಟಿಗೆ ಲೋಪ. ಸ್ತ್ರೀತ್ವದಲ್ಲಿ ಅದಂತನಿಬಂಧನವಾದ ಟಾಪ್. ತೇಜಿಷ್ಠಾ ಎಂದು ರೂಪವಾಗುತ್ತದೆ. ಇಷ್ಠನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯು ದಾತ್ತವಾಗುತ್ತದೆ. ತೃತೀಯಾ ಏಕವಚನರೂಪ.

**ವರ್ತನೀ**— ವೃತ್ಯತೇ ಪ್ರೇರ್ಯತೇ ಅನಯಾ ಇತಿ ವರ್ತನೀ. ಕರಣಾರ್ಥದಲ್ಲಿ ಲ್ಯುಟ್ **ಯುವೋ- ರನಾಕೌ** ಎಂಬುದರಿಂದ ಅನಾದೇಶ ಬರುತ್ತದೆ. ಲ್ಯುಟ್ ಟಿತ್ತಾದುದರಿಂದ ಸ್ತ್ರೀತ್ವದಲ್ಲಿ **ಟಿಡ್ಢಾಣಞ್** (ಪಾ. ಸೂ. ೪-೧-೧೫) ಸೂತ್ರದಿಂದ ಙೀಪ್. ವರ್ತನೀ+ಅ ಎಂದಿರುವಾಗ **ಸುಪಾಂಸುಲುಕ್** ಸೂತ್ರದಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ. ವರ್ತನೀ ಎಂದು ರೂಪವಾಗುತ್ತದೆ. **ವ್ಯತ್ಯಯೋಬಹುಲಂ** ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಅಭಿನತ್**— ಭಿದಿರ್ ವಿದಾರಣೇ ಧಾತು. ರುಧಾದಿ. ಲಙಿನ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಇಕಾರಲೋಪ. **ರುಧಾದಿಭ್ಯಃ ಶ್ನಮ್** ಎಂಬುದರಿಂದ ಶ್ನಮ್ ವಿಕರಣ. **ಮಿದ- ಚೋಂತ್ಯಾತ್ಪರಃ** ಎಂಬುದರಿಂದ ಮಿತ್ತಾದುದರಿಂದ ಧಾತುವಿನ ಅಂತ್ಯಾಚಿನಪರವಾಗಿ ಬರುತ್ತದೆ. **ಹಲ್- ಙ್ಯಾಭ್ಯೋ**— ಸೂತ್ರದಿಂದ ಅಪೃಕ್ತಸಕಾರಲೋಪ. **ವಾವಸಾನೇ** ಎಂಬುದರಿಂದ ಧಾತ್ವಂತ್ಯ ದಕಾರಕ್ಕೆ ಚರ್ತ್ವ. ಅಂಗಕ್ಕೆ ಅಡಾಗಮ. ಅಭಿನತ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅನನುದಃ**— ದೋ ಅವಖಂಡನೇ ಧಾತು. **ಆದೇಚಉ**— (ಪಾ. ಸೂ. ೬-೧-೪೫) ಸೂತ್ರದಿಂದ ಧಾತು ವಿಗೆ ಆತ್ವ. **ಆತಶ್ಚೋಪಸರ್ಗೇ** (ಪಾ. ಸೂ. ೩-೧-೧೩೬) ಎಂಬುದರಿಂದ ಅನು ಎಂಬ ಉಪಸರ್ಗವು ಉಪ- ಪದವಾಗಿರುವಾಗ ಧಾತುವಿಗೆ ಕ ಪ್ರತ್ಯಯ. **ಆತೋಲೋಪಇಟಿಚ** ಎಂಬುದರಿಂದ ಆಕಾರಲೋಪ. ಅನುದ ಎಂದು ರೂಪವಾಗುತ್ತದೆ. ನಾಸ್ತಿ ಅನುದಃ ಅಸ್ಯ ಇತಿ ಅನನುದಃ **ನಲೋಪೋನಞಃ** ಎಂಬುದರಿಂದ ನಞ



CC-0. Jangamwadi Math Collection. Digitized by eGangotri

ನಕಾರಕ್ಕೆ ಲೋಪವಾದಾಗ ತಸ್ಮಾನ್ನುಡಚಿ (ಪಾ. ಸೂ. ೬-೩-೭೪) ಎಂಬುದರಿಂದ ಅಚಿಗೆ ನುಡಾಗಮ. ಬಹುವ್ರೀಹಿ ಸಮಾಸವಾದುದರಿಂದ ನಞ್ಸುಭ್ಯಾಂ ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ. ಸಂಹಿತಾದಲ್ಲಿ ಛಾಂದಸವಾಗಿ ದೀರ್ಘಬರುವುದರಿಂದ ಅನಾನುದಃ ಎಂದು ರೂಪವಾಗುತ್ತದೆ.

ಪರಿಷೂತಾಃ—ಷೂ ಪ್ರೇರಣೇ ಧಾತು. ಕರ್ಮಾರ್ಥದಲ್ಲಿ ಕ್ತ ಪ್ರತ್ಯಯ ಕಿತ್ತಾದುದರಿಂದ ಗುಣ ಬರುವುದಿಲ್ಲ. ಉಪಸರ್ಗಾತ್ಸು ಸೂತ್ರದಿಂದ ಷತ್ವಬರುತ್ತದೆ. ಗತಿರನಂತರಃ (ಪಾ. ಸೂ ೬-೨-೪೯) ಎಂಬುದರಿಂದ ಗತಿಗೆ (ಪರಿ) ಪ್ರಕೃತಿಸ್ವರ ಬರುತ್ತದೆ.

॥ ಸಾಯಣಭಾಷ್ಯ ॥

ತ್ವಮೇತಾಞ್ಜನರಾಜ್ಞೋ ದ್ವಿರ್ದಶಾಬಂಧುನಾ ಸುಶ್ರವಸೋಪಜಗ್ಮುಷಃ।
ಷಷ್ಟಿಂ ಸಹಸ್ರಾ ನವತಿಂ ನವ ಶ್ರುತೋ ನಿ ಚಕ್ರೇಣ ರಥ್ಯಾ ದುಷ್ಪದಾವೃಣಕ್ ॥ ೯ ॥

ಪದಪಾಠಃ

ತ್ವಂ । ಏತಾನ್ । ಜನರಾಜ್ಞಃ । ದ್ವಿಃ । ದಶ । ಅಬಂಧುನಾ । ಸುಶ್ರವಸಾ । ಉಪಜಗ್ಮುಷಃ ।
ಷಷ್ಟಿಂ । ಸಹಸ್ರಾ । ನವತಿಂ । ನವ । ಶ್ರುತಃ । ನಿ । ಚಕ್ರೇಣ । ರಥ್ಯಾ । ದುಃಪದಾ । ಅವೃಣಕ್ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಶ್ರುತೋ ವಿಶ್ರುತಃ ಪ್ರಖ್ಯಾತಸ್ತ್ವಂ ದ್ವಿರ್ದಶ ವಿಂಶತಿಸಂಖ್ಯಾಕಾನಬಂಧುನಾ ಬಂಧುರಹಿತೇನ ಸಹಾಯರಹಿತೇನ ಸುಶ್ರವಸೈತತ್ಸಂಜ್ಞಕೇನ ರಾಜ್ಞಾ ಯುದ್ಧಾರ್ಥಮುಪಜಗ್ಮುಷ ಉಪಗತವತ ಏತಾನೇವಂವಿಧಾನ್ ಜನರಾಜ್ಞೋ ಜನಪದಾನಾಮಧಿಪತೀನ್ । ಷಷ್ಟಿಮಿತ್ಯಾದಿನಾ ತೇಷಾಂ ರಾಜ್ಞಾಮನುಚರಸಂಖ್ಯೋಚ್ಯತೇ । ಷಷ್ಟಿಂ ಸಹಸ್ರಾ ಸಹಸ್ರಾಣಾಂ ಷಷ್ಟಿಂ ನವತಿಂ ನವ ನವಸಂಖ್ಯೋತ್ತರಾಂ ನವತಿಂ । ತಾನ್ ರಾಜ್ಞ ಈದೃಕ್ಸಂಖ್ಯಾಕಾನನುಚರಾಂಶ್ಚ ರಥ್ಯಾ ರಥಸಂಬಂಧಿನಾ ದುಷ್ಪದಾ ದುಷ್ಪ್ರಪದನೇನ । ಶತ್ರುಭಿಃ ಪ್ರಾಪ್ತುಮಶಕ್ಯೇನೇತ್ಯರ್ಥಃ । ಈದೃಶೇನ ಚಕ್ರೇಣ ನ್ಯವೃಣಕ್ ನ್ಯವರ್ಜಯಃ । ತ್ವಾಂ ಸ್ತುವತಃ ಸುಶ್ರವಸೋ ಜಯಾರ್ಥಂ ತ್ವಮಾಗತ್ಯ ತದೀಯಾನ್ ಶತ್ರೂನಜೈಷೀ-



CC-0. Jangamwadi Math Collection. Digitized by eGangotri

ರಿತ್ಯರ್ಥಃ ॥ ಜನರಾಜ್ಞಃ ಸಮಾಸಾಂತವಿಧೇರನಿತ್ಯತ್ವಾಟ್ಟಜ್ ಪ್ರತ್ಯಯೋಭಾವಃ । ಪಾ. ೫-೪-೯೧ । ಪರಿ. ೮೪ । ರಾಜರ್ಶಬ್ದೋ ರಾಜ್ಯ ದೀಪ್ತಾವಿತ್ಯಸ್ಮಾತ್ಕನಿನ್ಪ್ರತ್ಯಯಾಂತ ಆದ್ಯುದಾತ್ತಃ । ಕೃದುತ್ತರಪದಪ್ರಕೃತಿಸ್ವರತ್ವೇನ ಸ ಏವ ಶಿಷ್ಯತೇ । ಅಬಂಧುನಾ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಸುಶ್ರವಸಾ । ಶೋಭನಂ ಶ್ರವೋಽನ್ನಂ ಯಸ್ಯ । ಆದ್ಯುದಾತ್ತಂ ದ್ವ್ಯಚ್ಛಂದಸೀತ್ಯುತ್ತರಪದಾದ್ಯುದಾತ್ತತ್ವಂ । ಉಪಜಗ್ಮುಷಃ । ಗಮೇರ್ಲಿಟಃ ಕ್ವಸುಃ । ಶಸಿ ಭಸಂಜ್ಞಾಯಾಂ ವಸೋಃ ಸಂಪ್ರಸಾರಣಮಿತಿ ಸಂಪ್ರಸಾರಣಂ । ಪರಪೂರ್ವತ್ವಂ । ಗಮಹನಮಿತ್ಯಾದಿನೋಪಧಾಲೋಪಃ । ಶಾಸಿವಸಿಘಸೀನಾಂ ಚೇತಿ ಷತ್ವಂ । ಕೃದುತ್ತರಪದಪ್ರಕೃತಿಸ್ವರತ್ವೇನ ಕ್ವಸೋರೇವ ಸ್ವರಃ ಶಿಷ್ಯತೇ । ರಥ್ಯಾ । ರಥಸ್ಯೇದಂ ರಥ್ಯಂ । ರಥಾದ್ಯತ್ । ಪಾ. ೪-೩-೧೨೧ । ಇತಿ ಯತ್ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ದುಷ್ಪದಾ । ಪದ ಗತೌ ಈಷದ್ದುಃಸುಷ್ವಿತಿ ಖಲ್ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಪೂರ್ವವದ್ವಿಭಕ್ತೇರಾಕಾರಃ । ಅವೃಣಕ್ । ವೃಜೀ ವರ್ಜನೇ । ರೌಧಾದಿಕಃ ಲಙಿ ಮಧ್ಯಮೈಕವಚನೇ ಹಲ್ಙ್ಯಾಬ್ಭ್ಯ ಇತಿ ಸಿಪೋ ಲೋಪಃ । ಚೋಃಕುರಿತಿ ಕುತ್ವಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ಶ್ರುತಃ—(ಲೋಕ) ಪ್ರಸಿದ್ಧನಾದ । ತ್ವಂ—ನೀನು । ಅಬಂಧುನಾ—ನಿಸ್ಸಹಾಯಕನಾದ । ಸುಶ್ರವಸಾ—ಸುಶ್ರವಸ್ಸೆಂಬ ದೊರೆಯೊಂದಿಗೆ । ಉಪಜಗ್ಮುಷಃ—(ಯುದ್ಧಕ್ಕೆ ) ಹೋದ । ಏತಾನ್—ಅಂತಹ । ದ್ವಿರ್ದಶ—ಇಪ್ಪತ್ತು । ಜನರಾಜ್ಞಃ—ದೇಶದ ದೊರೆಗಳನ್ನೂ । ಷಷ್ಟಿಂ ಸಹಸ್ರಾ—ಅರವತ್ತು ಸಹಸ್ರವೂ ಮತ್ತು । ನವತಿಂ ನವ—ತೊಂಭತೊಂಭತ್ತು ಸಂಖ್ಯೆಗಳುಳ್ಳ (ರಾಜರ ಅನುಚರರನ್ನೂ) । ರಥ್ಯಾ—(ನಿನ್ನ) ರಥಕ್ಕೆ ಸೇರಿದ । ದುಷ್ಪದಾ—(ಶತ್ರುಗಳಿಂದ) ಸಮೀಪಿಸಲಸಾಧ್ಯವಾದ । ಚಕ್ರೇಣ—ಚಕ್ರದಿಂದ । ನಿ ಅವೃಣಕ್—ಉರುಳಿಸಿದೆ ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಲೋಕಪ್ರಸಿದ್ಧನು. ಯಾವಾಗ ನಿಸ್ಸಹಾಯಕನಾದ ಸುಶ್ರವಸ್ಸೆಂಬ ದೊರೆಯೊಡನೆ ಇಪ್ಪತ್ತು ದೇಶದ ದೊರೆಗಳೂ ಅವರ ಅರವತ್ತು ಸಹಸ್ರ ಮತ್ತು ತೊಂಭತ್ತೊಂಭತ್ತು ಅನುಚರರೊಡನೆ ಯುದ್ಧಕ್ಕೆ ನುಗ್ಗಿಹೋದರೋ ಆಗ ನೀನು ಆ ಶತ್ರುಗಳಿಂದ ಸಮೀಪಿಸಲಸಾಧ್ಯವಾದ ನಿನ್ನ ರಥಚಕ್ರದಿಂದ ಅವರನ್ನೆಲ್ಲಲ್ಲಉರುಳಿಸಿದೆ.

## English Translation.

O renowned Indra, you overthrew, by your not-to-be-overtaken chariot-wheel, the twenty kings of men, who had come against Susravas, unaided, and their sixty-thousand and ninety and nine followers.

॥ ವಿಶೇಷ ವಿಷಯಗಳು ॥

ಸುಶ್ರವಸಾ—ಸುಶ್ರವಸ್ ಎಂಬುವನು ಇಂದ್ರನಿಗೆ ಬೇಕಾದವನಾದ ಒಬ್ಬ ರಾಜನು. ಇವನ ವಿಷಯವು ನನಗೆ ಹೆಚ್ಚಾಗಿ ತಿಳಿಯದು. ಪಂಚವಿಂಶ ಬ್ರಾಹ್ಮಣದಲ್ಲಿ (೧೪-೬-೮) ಸುಶ್ರವಸ್ ಎಂಬುವನು ಉಪಗು



CC-0. Jangamwadi Math Collection. Digitized by eGangotri

ಸುಶ್ರವಸ ಎಂಬುವನ ತಂದೆಯೆಂದೂ, ಸುಶ್ರವಾಃ ಕೌಸ್ಯಃ ಎಂಬುವನು ಶತಪಥ ಬ್ರಾಹ್ಮಣದಲ್ಲಿ (೧೦-೫-೫-೧) ಒಬ್ಬ ಆಚಾರ್ಯನೆಂದೂ ಸುಶ್ರವಾಃ ವರ್ಷಗಣ್ಯಃ ಎಂಬುವನು ವೃಷಗಣನ ವಂಶದವನೂ, ಒಬ್ಬ ಆಚಾರ್ಯ ಪುರುಷನೂ ಪ್ರಾತರಹ್ನ ಕೌಹಲನೆಂಬುವನ ಶಿಷ್ಯನೂ ಆಗಿದ್ದನೆಂದು ವಂಶಬ್ರಾಹ್ಮಣದಲ್ಲಿ (೧೦-೭೫-೫) ಹೇಳಿರುವುದು. ಪ್ರಸಕ್ತ ಋಕ್ಕಿನಲ್ಲಿ ಹೇಳಿರುವ ಸುಶ್ರವಸನು ಇವರಲ್ಲಿ ಯಾರೆಂಬುದು ಸ್ಪಷ್ಟವಾಗಿಲ್ಲ.

ಅಬಂಧುನಾ ಶುಶ್ರವಸಾ—ಸುಶ್ರವಸ್ಸೆಂಬುವನು ಒಬ್ಬ ರಾಜನು. ಆತನಿಗೆ ಯಾವ ವಿಧವಾದ ಸಹಾಯವಾಗಲೀ ಸಹಾಯಮಾಡುವ ಬಂಧುಗಳಾಗಲಿ ಇರಲಿಲ್ಲ. ಇಂದ್ರನನ್ನು ಸ್ತುತಿಸಿ ಇಂದ್ರನ ಸಹಾಯದಿಂದ ತಾನು ಯುದ್ಧದಲ್ಲಿ ಜಯವನ್ನು ಪಡೆದನು.

ಶೋಭನಂ ಶ್ರವಃ ಅನ್ನಂ ಯಸ್ಯ ಸಃ—ಶ್ರೇಷ್ಠವಾದದ್ದು, ಸಂಪತ್ತುಳ್ಳವನು ಎಂದರ್ಥವನ್ನು ವಿವರಿಸಿದ್ದಾರೆ.

ಜನರಾಜ್ಞಃ—ಭೂಪತಿಗಳು ಎಂದರ್ಥ. ಇಲ್ಲಿ ಜನಶಬ್ದಕ್ಕೆ ಜನಪದ, ದೇಶ ಎಂದರ್ಥ.

ಷಷ್ಟಿಂ ಸಹಸ್ರಾ ನವತಿಂ ನವ—ಸುಶ್ರವಸ್ಸಿನ ಮೇಲೆ ಯುದ್ಧಕ್ಕೆ ಬಂದ ರಾಜರು ಅರುವತ್ತು ಸಾವಿರದ ತೊಂಬತ್ತೊಂಬತ್ತು ಸೈನಿಕರೊಡನೆ ಕೂಡಿ ಯುದ್ಧಕ್ಕೆ ಬಂದರು.

ದುಷ್ಪದಾ—ಪದ ಗತೌ—ಎಂಬ ಧಾತುವಿನಿಂದ ಪದ ಶಬ್ದಕ್ಕೆ ಗತ್ಯರ್ಥವು ತೋರುವುದು. ಆದರೆ ಇಲ್ಲಿ ಪದಶಬ್ದಕ್ಕೆ ಪ್ರಾಪ್ತಿರೂಪವಾದ ಅರ್ಥವನ್ನಿಟ್ಟುಕೊಂಡು, ಶತ್ರುಗಳಿಂದ ಸುಲಭವಾಗಿ ಹೊಂದಲು ಅಸಾಧ್ಯವಾದ ಎಂದರ್ಥಮಾಡಿರುವರು,

ರಥ್ಯಾ—ರಥಸಂಬಂಧಿಯಾದ ಎಂಬರ್ಥದ ಈ ಪದವು ಇಂದ್ರನ ಚಕ್ರಕ್ಕೆ ವಿಶೇಷಣವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

ಜನರಾಜ್ಞಃ—ಜನಾನಾಂ ರಾಜಾ ಎಂದು ಸಮಾಸಮಾಡಿದಾಗ ರಾಜಾಹಃ ಸಖಿಭ್ಯಃ ಟಚ್ (ಪಾ. ಸೂ. ೫-೪-೯೧) ಎಂಬುದರಿಂದ ಟಚ್ ಪ್ರಾಪ್ತವಾದರೆ ಸಮಾಸಾಂತವಿಧಿರನಿತ್ಯಃ (ಪರಿ. ೮೪) ಎಂಬುದರಿಂದ ಇಲ್ಲಿ ಬರುವುದಿಲ್ಲ. ಷಷ್ಠೀಏಕವಚನಾಂತರೂಪ. ಇಲ್ಲಿ ರಾಜನ್ ಶಬ್ದವು ರಾಜೃ ದೀಪ್ತೌ ಎಂಬ ಧಾತುವಿಗೆ ಕನಿನ್ ಪ್ರತ್ಯಯ ಮಾಡುವುದರಿಂದ ಸಿದ್ಧವಾದುದರಿಂದ ಆದ್ಯುದಾತ್ತವಾಗುತ್ತದೆ. ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರದಿಂದ ಅದೇ ಉಳಿಯುತ್ತದೆ.

ಅಬಂಧುನಾ—ನ ವಿದ್ಯತೇ ಬಂಧುಃ ಯಸ್ಯ ಅಬಂಧುಃ ತೇನ. ಬಹುವ್ರೀಹಿ ಸಮಾಸವಾದುದರಿಂದ ನಞ್ಸುಭ್ಯಾಂ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಸುಶ್ರವಸಾ—ಶೋಭನಂ ಶ್ರವಃ ಅನ್ನಂ ಯಸ್ಯ ಸುಶ್ರವಾಃ ತೇನ. ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಸುವಿನ ಪರದಲ್ಲಿರುವ ದ್ವ್ಯಚ್ಕವಾದ ಉತ್ತರಪದವು ಆದ್ಯುದಾತ್ತವಾಗುತ್ತದೆ ಎಂಬುದರಿಂದ ಉಪಪದ ಆದ್ಯುದಾತ್ತಸ್ವರ ಬರುತ್ತದೆ.

ಉಪಜಗ್ಮುಷಃ—ಗಮ್ಲೃ ಗತೌ ಧಾತು. ಕ್ವಸುಶ್ಚ (ಪಾ. ಸೂ. ೩-೨-೧೦೭) ಎಂಬುದರಿಂದ ಲಿಟಿಗೆ ಕ್ವಸು ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಚುತ್ವ ಗಮಹನಜನ— (ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧೆಗೆ ಲೋಪ. ಉಪಜಗ್ಮ್ವಸ್ ಶಬ್ದವಾಗುತ್ತದೆ. ಶಸ್



CC-0. Jangamwadi Math Collection. Digitized by eGangotri

ಪರದಲ್ಲಿರುವಾಗ **ವಸೋಃ ಸಂಪ್ರಸಾರಣಂ** (ಪಾ. ಸೂ. ೬-೪-೧೩೧) ಎಂಬುದರಿಂದ ವಕಾರಕ್ಕೆ ಸಂಪ್ರಸಾರಣ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ವಸಿನ ಸಕಾರಕ್ಕೆ ಷತ್ವ. ಶಸಿನ ಸಕಾರಕ್ಕೆ ರುತ್ವವಿಸರ್ಗ. ಉಪಜಗ್ಮುಷಃ ಎಂದು ರೂಪವಾಗುತ್ತದೆ. ಗತಿಪೂರ್ವಪದವಾಗಿರುವುದರಿಂದ **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರದಿಂದ ವಸುವಿನ ಸ್ವರ ಉಳಿಯುತ್ತದೆ.

**ರಥ್ಯಾ**—ರಥಸ್ಯ ಇದಂ ರಥ್ಯಮ್. ರಥಾದ್ಯತ್ (ಪಾ. ಸೂ. ೪-೩-೧೨೧) ಎಂಬುದರಿಂದ ಯತ್ ಪ್ರತ್ಯಯ. ಸ್ವರಿತವು ಪ್ರಾಪ್ತವಾದರೆ **ಯತೋಽನಾವಃ** (ಪಾ. ಸೂ. ೬-೧-೨೧೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತೃತೀಯಾ ಏಕವಚನ ಪರದಲ್ಲಿರುವಾಗ **ಸುಪಾಂಸುಲುಕ್** ಎಂಬುದರಿಂದ ವಿಭಕ್ತಿಗೆ ಆಕಾರಾದೇಶ. ರಥ್ಯಾ ಎಂದು ರೂಪವಾಗುತ್ತದೆ.

**ದುಷ್ಪದಾ**—ಪದ ಗತೌ ಧಾತು. ಈಷದ್ದುಃಸುಷು (ಪಾ. ಸೂ. ೩-೩-೧೨೬) ಎಂಬುದರಿಂದ ಖಲ್ ಪ್ರತ್ಯಯ. ದುಷ್ಪದ ಶಬ್ದವಾಗುತ್ತದೆ. ಖಲ್ ಲಿತ್ತಾದುದರಿಂದ ಲಿತಿ ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಇಲ್ಲಿಯೂ ತೃತೀಯಾದ ಟಾ ವಿಭಕ್ತಿಗೆ **ಸುಪಾಂಸುಲುಕ್** ಸೂತ್ರದಿಂದ ಆಕಾರಾದೇಶ.

**ಅವೃಣಕ್**—ವೃಜೀ ವರ್ಜನೇ ಧಾತು. ರುಧಾದಿ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ರುಧಾದಿಭ್ಯಃ ಶ್ನಮ್ ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನಪರವಾಗಿ ಬರುತ್ತದೆ. ಋಕಾರದ ಪರದಲ್ಲಿರುವುದರಿಂದ ಶ್ನಮಿನ ನಕಾರಕ್ಕೆ ಣತ್ವ. ಹಲಿನ ಪರದಲ್ಲಿರುವುದರಿಂದ **ಹಲ್ಙ್ಯಾಭ್ಯೋ**—ಸೂತ್ರದಿಂದ ಪ್ರತ್ಯಯಕ್ಕೆ ಲೋಪ. **ಚೋಃ ಕುಃ** ಎಂಬುದರಿಂದ ಧಾತ್ವಂತ್ಯದ ಜಕಾರಕ್ಕೆ ಕುತ್ವ. **ವಾವಸಾನೇ** ಎಂಬುದರಿಂದ ಚರ್ತ್ವ. ಅಂಗಕ್ಕೆ ಲಙ್ ಮಿತ್ತವಾಗಿ ಅಡಾಗಮ. ಅವೃಣಕ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

---

॥ ಸಂಹಿತಾಪಾಠಃ ॥

ತ್ವಮಾವಿಥ ಸುಶ್ರವಸಂ ತವೋತಿಭಿಸ್ತವ ತ್ರಾಮಭಿರಿಂದ್ರ ತೂರ್ವ-
ಯಾಣಂ ।
ತ್ವಮಸ್ಮೈ ಕುತ್ಸಮತಿಥಿಗ್ವಮಾಯುಂ ಮಹೇ ರಾಜ್ಞೇ ಯೂನೇ ಅರಂ-
ಧನಾಯಃ ॥ ೧೦ ॥





CC-0. Jangamwadi Math Collection. Digitized by eGangotri

॥ ಪದಪಾಠಃ ॥

ತ್ವಂ । ಆವಿಥ । ಸುಽಶ್ರವಸಂ । ತವ । ಊತಿಽಭಿಃ । ತವ । ತ್ರಾಮಽಭಿಃ । ಇಂದ್ರ ।
ತೂರ್ವಯಾಣಂ ।
ತ್ವಂ । ಅಸ್ಮೈ । ಕುತ್ಸಂ । ಅತಿಥಿಽಗ್ವಂ । ಆಯುಂ । ಮಹೇ । ರಾಜ್ಞೇ । ಯೂನೇ ।
ಅರಂಧನಾಯಃ ॥ ೧೦ ॥

॥ ಸಾಯಣಭಾಷ್ಯ ॥

ಹೇ ಇಂದ್ರ ತ್ವಂ ತವೋತಿಭಿಸ್ತ್ವದೀಯೈಃ ಪಾಲನೈಃ ಸುಶ್ರವಸಂ ಪೂರ್ವೋಕ್ತಂ ರಾಜಾನಮಾವಿಥ ರರಕ್ಷಿಥ । ತಥಾ ತೂರ್ವಯಾಣಮೇತನ್ನಾಮಾನಂ ರಾಜಾನಂ ತವ ತ್ರಾಮಭಿಸ್ತ್ವದೀಯೈಸ್ತ್ರಾಯಕೈಃ ಪಾಲಕೈರ್ಬಲೈರಾವಿಥೇತಿ ಶೇಷಃ । ಕಿಂಚ ತ್ವಂ ಮಹೇ ಮಹತೇ ಯೂನೇ ತರುಣಾಯಾಸ್ಮೈ ಸುಶ್ರವಸೇ ರಾಜ್ಞೇ ಕುತ್ಸಾದೀಂಸ್ತ್ರೀನ್ರಾಜ್ಞೋಽರಂಧನಾಯಃ । ವಶಮನಯಃ । ರಧ್ಯತಿರ್ವಶಗಮನೇ । ನಿ. ೬-೩೨ । ಇತಿ ಯಾಸ್ಕಃ ॥ ತ್ರಾಮಭಿಃ । ತ್ರೈಙ್ ಪಾಲನೇ । ಆದೇಚ ಇತ್ಯಾತ್ವಂ । ಆತೋ ಮನಿನ್ನಿತಿ ಮನಿನ್ । ನಿತ್ವಾದಾದ್ಯುದಾತ್ತತ್ವಂ । ಅರಂಧನಾಯಃ । ರಂಧನಂ ವಶೀಕರಣಂ ಕರೋತಿ ರಂಧನಯತಿ । ತತ್ಕರೋತಿ । ಸೂ. ೩-೧-೨೬-೫ । ಇತಿ ಣಿಚ್ । ಇಷ್ಠವಣ್ಣೌ ಪ್ರಾತಿಪದಿಕಸ್ಯ । ಸೂ. ೬-೪-೧೫೫-೧ । ಇತೀಷ್ಠವದ್ಭಾವಾಟ್ಟಿಲೋಪಃ । ಲಙಿ ಸಿಪಿ ದೀರ್ಘಶ್ಛಾಂದಸಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ತವ—ನಿನ್ನ । ಊತಿಭಿಃ—ಒತ್ತಾಸೆಯಿಂದ । ಸುಶ್ರವಸಂ—ಸುಶ್ರವಸ್ಸೆಂಬ ರಾಜನನ್ನು । ಆವಿಥ—ಕಾಪಾಡಿದೆ । ತೂರ್ವಯಾಣಂ—ತೂರ್ವಯಾಣನೆಂಬ ರಾಜನನ್ನೂ । ತವ—ನಿನ್ನ । ತ್ರಾಮಭಿಃ—ರಕ್ಷಣಾಸಹಾಯದಿಂದ (ಉಳಿಸಿದೆ ಅಲ್ಲದೆ) । ತ್ವಂ—ನೀನು । ಯೂನೇ—ಯುವಕನಾದರೂ । ಮಹೇ—ಪ್ರಭಾವಯುತನಾದ । ಅಸ್ಮೈ—ಈ ಸುಶ್ರವಸ್ಸೆಂಬ । ರಾಜ್ಞೇ—ದೊರೆಗೆ । ಕುತ್ಸಂ—ಕುತ್ಸನನ್ನೂ । ಅತಿಥಿಗ್ವಂ—ಅತಿಥಿಗ್ವನನ್ನೂ । ಆಯುಂ—ಆಯುವನ್ನೂ (ಈ ಮೂರು ದೊರೆಗಳನ್ನು) । ಅರಂಧನಾಯಃ—ಅಧೀನರಾಗಿರುವಂತೆ ಮಾಡಿದೆ ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಿನ್ನ ಒತ್ತಾಸೆಯಿಂದ ಸುಶ್ರವಸ್ಸೆಂಬ ರಾಜನನ್ನು ಕಾಪಾಡಿದೆ. ತೂರ್ವಯಾಣನೆಂಬ ರಾಜನನ್ನೂ ನಿನ್ನ ರಕ್ಷಣಾಸಹಾಯದಿಂದ ಉಳಿಸಿದೆ. ಅಲ್ಲದೇ ನೀನು ಈ ಸುಶ್ರವಸ್ಸು ಯುವಕನಾದರೂ ಪ್ರಭಾವಯುತನಾದುದರಿಂದ, ಈ ದೊರೆಗೆ ಕುತ್ಸ, ಅತಿಥಿಗ್ವ ಮತ್ತು ಆಯು ಎಂಬ ಮೂರು ದೊರೆಗಳೂ ಅಧೀನರಾಗಿರುವಂತೆ ಮಾಡಿದೆ.



CC-0. Jangamwadi Math Collection. Digitized by eGangotri

## English Translation.

Indra, you have preserved Susravas by your protection, Tnrvayana by your help ; you have made kutsa, Atithigwa, and Ayu subject to the mighty, though youthful Susravas.

|| ವಿಶೇಷ ವಿಷಯಗಳು ||

ಅತಿಥಿಗ್ವಂ—೧೭೪ನೇ ಪೇಜಿನಲ್ಲಿ ಇವನ ವಿಷಯವಾಗಿ ಬರೆದಿರುವುದನ್ನು ನೋಡಿ.

ಕುತ್ಸಂ—ಇವನ ವಿಷಯವನ್ನು ೧೭೩ನೇ ಪೇಜಿನಲ್ಲಿ ವರ್ಣಿಸಲಾಗಿರುವುದು.

ಆಯುಂ—ಆಯುವೆಂಬ ಒಬ್ಬ ರಾಜನು ಸಕ್ಥ ಎಂಬ ಜನಾಂಗದ ರಾಜನಾಗಿದ್ದನೆಂದು ತಿಳಿಯಬರುವುದು. ಇವನನ್ನು ತೂರ್ವಯಾಣನೆಂಬುವನು ಇಂದ್ರನ ಸಹಾಯದಿಂದ ಸೋಲಿಸಿದನೆಂದೇ ಇಲ್ಲಿ ಹೇಳಿದೆ. ಇವನ ಹೆಸರು ಋ. ಸಂ. ೬-೧೧-೪ ; ೬-೧೮-೧೩ ; ೮-೫೩-೨ ; ೧೦-೨೦-೭ ಎಂಬ ಋಕ್ಕುಗಳಲ್ಲಿ ಪಠಿತವಾಗಿದೆ.

ತವ ಊತಿಭಿಃ—ಊತಿ ಶಬ್ದಕ್ಕೆ ರಕ್ಷಣೆ ಎಂದರ್ಥವಿದ್ದರೂ ಇಲ್ಲಿ ಲಕ್ಷಣಾವೃತ್ತಿಯಿಂದ ರಕ್ಷಣೆಕೊಡುವ ಕಾರ್ಯವಿಶೇಷಗಳಿಂದ ಎಂದರ್ಥ ಮಾಡಬೇಕು.

ತೂರ್ವಯಾಣಂ—ಇಂದ್ರನಿಂದ ರಕ್ಷಣೆಪಡೆದ ಒಬ್ಬ ರಾಜನ ಹೆಸರು ಇದು. ಇವನು ಅತಿಥಿಗ್ವ, ಆಯು, ಕುತ್ಸ ಎಂಬುವರ ಶತ್ರುವೆಂದು ಋ. ಸಂ. ೨-೧೪-೭ರಲ್ಲಿಯೂ ಇವನು ಸಕ್ಥರೆಂಬ ಜನಾಂಗದ ರಾಜನೆಂದು ಋ. ಸಂ. ೧೦-೬೧-೨ರಲ್ಲಿಯೂ ಹೇಳಿದೆ. ಇವನ ಹೆಸರು ಋ. ಸಂ. ೧-೧೭೪-೩ ; ೬-೧೮-೧೩ ಎಂಬ ಋಕ್ಕುಗಳಲ್ಲಿಯೂ ಪಠಿತವಾಗಿದೆ.

ತ್ರಾಮಭಿಃ—ತ್ರೈಙ್ ಪಾಲನೇ ಎಂಬ ಧಾತುಜನ್ಯವಾದ ಈ ಪದವು ಆಶ್ರಿತರನ್ನು ರಕ್ಷಿಸುವ ಸೈನ್ಯಗಳಿಂದ ಎಂಬ ವಿಶೇಷಾರ್ಥವನ್ನು ಕೊಡುವುದು.

ರಾಜ್ಞೇ—ಸುಶ್ರವಸ್ಸೆಂಬ ರಾಜನಿಗೆ ಎಂಬುದು ಈ ಪದದ ಅರ್ಥ.

ಅರಂಧನಾಯಃ—ವಶಮಾಡಿಕೊಂಡೆ ಎಂಬುದು ಇದರ ಅರ್ಥ. ರಧ್ಯತಿರ್ವಶಗಮನೇ (ನಿ. ೬-೩೨) ಎಂಬ ಯಾಸ್ಕರ ಅಭಿಪ್ರಾಯದಂತೆ ರಂಧನಂ ವಶೀಕರಣಂ ಕರೋತಿ ರಂಧನಯತಿ ಎಂದು ಈ ಪದಕ್ಕೆ ಅರ್ಥವನ್ನು ವಿವರಿಸಿರುವರು.

|| ವ್ಯಾಕರಣಪ್ರಕ್ರಿಯಾ ||

ಆವಿಥ—ಅವ ರಕ್ಷಣೇ ಧಾತು. ಲಿಟ್ ಮಧ್ಯಮಪುರುಷಏಕವಚನಕ್ಕೆ ಪರಸ್ಮೈಪದಾನಾಂ—ಎಂಬುದರಿಂದ ಥಲಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಅತಆದೇಃ ಎಂಬುದರಿಂದ ಅದಕ್ಕೆ ದೀರ್ಘ. ಆರ್ಧಧಾತುಕಸ್ಯೇಡ್ವಲಾದೇಃ ಎಂಬುದರಿಂದ ಥಲಿಗೆ ಇಡಾಗಮ. ಆವಿಥ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸುಶ್ರವಸಮ್—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ದ್ವಿತೀಯಾ ಏಕವಚನಾಂತರೂಪ.



CC-0. Jangamwadi Math Collection. Digitized by eGangotri

ತ್ರಾಮಭಿಃ—ತ್ರೈಙ್ ಪಾಲನೇ ಧಾತು. ಆದೇಚಉಪದೇಶೇಽಶಿತಿ (ಪಾ. ಸೂ. ೬-೧-೪೫) ಎಂಬುದರಿಂದ ಧಾತುವಿಗೆ ಆತ್ವ. ಆತೋಮನಿನ್‌ಕ್ವನಿಪ್‌ವನಿಪಶ್ಚ (ಪಾ. ಸೂ. ೩-೨-೭೪) ಎಂಬುದರಿಂದ ಮನಿನ್ ಪ್ರತ್ಯಯ. ತ್ರಾಮನ್ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ತೃತೀಯಾ ಬಹುವಚನದಲ್ಲಿ ನ ಲೋಪಃ ಪ್ರಾತಿಪದಿಕಾಂತಸ್ಯ (ಪಾ. ಸೂ. ೮-೨-೭) ಎಂಬುದರಿಂದ ನಲೋಪವಾಗುತ್ತದೆ.

ಅಸ್ಮೈ—ಇದಂ ಶಬ್ದಕ್ಕೆ ಅನ್ವಾದೇಶವಿಷಯದಲ್ಲಿ ಇದಮೋಽನ್ವಾದೇಶೇಽಶನುದಾತ್ತಸ್ತೃತೀಯಾದೌ ಎಂಬುದರಿಂದ ಅನುದಾತ್ತವಾದ ಅಶಾದೇಶ ಬರುತ್ತದೆ. ಶಿತ್ತ್ವಾದುದರಿಂದ ಸರ್ವಾದೇಶವಾಗುತ್ತದೆ. ಅನುದಾತ್ತೌಸುಪ್ಪಿತೌ ಎಂಬುದರಿಂದ ವಿಭಕ್ತಿಯು ಅನುದಾತ್ತವಾಗುತ್ತದೆ.

ಅರುಂಧನಾಯಃ—ರಂಧನಂ ವಶೀಕರಣಂ ಕರೋತಿ ರಂಧನಯತಿ. ತತ್ಕರೋತಿ ತದಾಚಷ್ಟೆ (ಪಾ. ಸೂ. ೩-೧-೨೬-೫) ಎಂಬುದರಿಂದ ಪ್ರಾತಿಪದಿಕದ ಮೇಲೆ ಧಾತ್ವರ್ಥ ವಿವಕ್ಷಾಮಾಡಿದಾಗ ಣಿಚ್. ಣಿಚ್ ಪರದಲ್ಲಿರುವಾಗ ಇಷ್ಠವಣ್ಣೌ ಪ್ರಾತಿಪದಿಕಸ್ಯ (ಪಾ. ಸೂ. ೬-೪-೧೫೫-೧) ಎಂಬುದರಿಂದ ಇಷ್ಠವದ್ಭಾವ ಬರುತ್ತದೆ. ಇಷ್ಠನ್ ಪರದಲ್ಲಿರುವಾಗ ಯಾವಯಾವ ಕಾರ್ಯಗಳು ಬರುತ್ತವೆಯೋ ಅವೆಲ್ಲವೂ ಣಿಚ್ ಪರದಲ್ಲಿರುವಾಗಲೂ ಬರುವುವು ಎಂದರ್ಥ. ಪ್ರಕೃತದಲ್ಲಿ ಟಿಲೋಪಮಾತ್ರ ಬರುತ್ತದೆ. ರುಂಧನಿ ಎಂಬ ಣಿಜಂತವು ಸನಾದ್ಯಂತಾ ಧಾತವಃ ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಕರ್ತರಿಶಪ್ ಎಂಬುದರಿಂದ ಶಪ್. ಶಪ್ ನಿಮಿತ್ತಕವಾಗಿ ಣಿಚಿಗೆ (ಧಾತುವಿನ ಇಕಿಗೆ) ಗುಣ. ಅಯಾದೇಶ ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಅಂಗಕ್ಕೆ ಲಙ್‌ನಿಮಿತ್ತಕವಾಗಿ ಅಡಾಗಮ. ಅರುಂಧನಯಃ ಎಂದು ರೂಪವಾಗುತ್ತದೆ. ದೀರ್ಘವು ಛಾಂದಸವಾಗಿ ಬರುವುದರಿಂದ ಅರುಂಧನಾಯಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಯ ಉದೃಚೀಂದ್ರ ದೇವಗೋಪಾಃ ಸಖಾಯಸ್ತೇ ಶಿವತಮಾ ಅಸಾಮ ।
ತ್ವಾಂ ಸ್ತೋಷಾಮ ತ್ವಯಾ ಸುವೀರಾ ದ್ರಾಘೀಯ ಆಯುಃ ಪ್ರತರಂ
ದಧಾನಾಃ ॥ ೧೧ ॥

॥ ಪದಪಾಠಃ ॥

ಯೇ । ಉತ್ಽಋಚಿ । ಇಂದ್ರ । ದೇವಽಗೋಪಾಃ । ಸಖಾಯಃ । ತೇ । ಶಿವಽತಮಾಃ । ಅಸಾಮ ।
ತ್ವಾಂ । ಸ್ತೋಷಾಮ । ತ್ವಯಾ । ಸುಽವೀರಾಃ । ದ್ರಾಘೀಯಃ । ಆಯುಃ । ಪ್ರಽತರಂ । ದಧಾನಾಃ ॥ ೧೧ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯಂ ||

ಹೇ ಇಂದ್ರ ಯೇ ವಯಂ ಉದೃಚ್ಯುದರ್ಕೇ ಯಜ್ಞಸಮಾಪ್ತೌ ವರ್ತಮಾನಾ ದೇವಗೋಪಾ ದೇವೈಃ ಪಾಲಿತಾಸ್ಸ್ಮೇ ತವ ಸಖಾಯಃ ಸಖಿವದತ್ಯಂತಂ ಪ್ರಿಯಾ ಅತ ಏವ ಶಿವತಮಾ ಅಸಾಮ ಅತಿಶಯೇನ ಕಲ್ಯಾಣಾ ಅಭೂಮ, ತೇ ವಯಂ ಯಜ್ಞಸಮಾಪ್ತ್ಯುತ್ತರಕಾಲಮಪಿ ತ್ವಾಂ ಸ್ತೋಷಾಮ ಸ್ತವಾಮ । ಅಸ್ಮಾಭಿಃ ಸ್ತುತೇನ ತ್ವಯಾ ಸುವೀರಾಃ ಶೋಭನಪುತ್ರವಂತಃ ಸಂತೋ ದ್ರಾಘೀಯೋಽತಿಶಯೇನ ದೀರ್ಘಮಾಯುರ್ಜೀವನಂ ಪ್ರತರಂ ಪ್ರಕೃಷ್ಟತರಂ ಯಥಾ ಭವತಿ ತಥಾ ದಧಾನಾ ಧಾರಯಂತೋ ಭೂಯಾಸ್ಮ ॥ ದೇವಗೋಪಾಃ । ದೇವಾ ಗೋಪಾ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಸಾಮ । ಅಸ ಭುವಿ । ಲುಙರ್ಥೇ ಲೋಟ್ಯಾಡುತ್ತಮಸ್ಯ ಪಿಚ್ಚೇತಿ ಪಿದ್ವದ್ಭಾವಾತ್ಪಿಚ್ಚ ಙಿನ್ನೇತಿ ಙಿತ್ತ್ವಾಭಾವೇ ಶ್ನಸೋರಲ್ಲೋಪ ಇತ್ಯಕಾರಲೋಪಾಭಾವಃ । ಪಿತ್ತ್ವಾದೇವ ತಿಙೋಽನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಸ್ತೋಷಾಮ । ಸ್ತೌತೇರ್ಲೋಟಿ ಸಿಬ್ಬಹುಲಂ ಲೇಟೀತಿ ಬಹುಲಗ್ರಹಣಾತ್ ಲೋಟ್ಯಪಿ ಸಿಪ್ । ತಸ್ಯ ಪಿತ್ತ್ವಾದ್ಗುಣಃ । ಸುವೀರಾಃ । ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವಂ । ದ್ರಾಘೀಯಃ । ದೀರ್ಘಶಬ್ದಾದೀಯಸುನಿ ಪ್ರಿಯಸ್ಥಿರೇತ್ಯಾದಿನಾ । ಪಾ. ೬-೪-೧೫೭ । ದ್ರಾಘಾದೇಶಃ । ನಿತ್ತ್ವಾದಾದ್ಯುದಾತ್ತತ್ವಂ । ಪ್ರತರಂ । ಪ್ರಶಬ್ದಾತ್ತರಪ್ಯಮು ಚ ಛಂದಸಿ । ಪಾ. ಸೂ. ೫-೪-೧೨ । ಇತ್ಯದ್ರವ್ಯಪ್ರಕರ್ಷೇಽಮುಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತತ್ವಂ । ದಧಾನಾಃ । ದಧಾತೇಃ ಶಾನಚ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । ಯೇ—ಯಾವ ನಾವು । ದೇವಗೋಪಾಃ—ದೇವತೆಗಳಿಂದ ರಕ್ಷಿಸಲ್ಪಟ್ಟವರಾಗಿ । ಉದೃಚಿ—ಯಜ್ಞದ ಕೊನೆಯಲ್ಲಿ । ತೇ—ನಿನ್ನ । ಶಿವತಮಾಃ—ಅತ್ಯಂತ ಅದೃಷ್ಟಶಾಲಿಗಳಾದ । ಸಖಾಯಃ—ಸ್ನೇಹಿತರಾಗಿ । ಅಸಾಮ—ಇರುವೆವೋ (ಆ ನಾವು) । ತ್ವಾಂ—ನಿನ್ನನ್ನು । ಸ್ತೋಷಾಮ—(ಯಜ್ಞ ಸಮಾಪ್ತಿಯಾದರೂ) ಸ್ತುತಿಸುತ್ತೇವೆ । ತ್ವಯಾ—(ಸ್ತುತನಾದ) ನಿನ್ನಿಂದ । ಸುವೀರಾಃ—ಶ್ರೇಷ್ಠರಾದ ಸಂತತಿಗಳುಳ್ಳವರಾಗಿ । ದ್ರಾಘೀಯಃ—ದೀರ್ಘವಾದದ್ದೂ । ಪ್ರತರಂ—ಅತ್ಯಂತ ಉಚ್ಛ್ರಾಯಸ್ಥಿತಿಯಲ್ಲಿಡುವಂತಹುದೂ ಆದ । ಆಯುಃ—ಆಯುಸ್ಸನ್ನು । ದಧಾನಾಃ—ಹೊಂದಿದವರಾಗಿ (ಇರುವೆವು) ॥

|| ಭಾವಾರ್ಥ ||

ಎಲೈ ಇಂದ್ರನೇ, ನಾವು ದೇವತೆಗಳಿಂದ ರಕ್ಷಿಸಲ್ಪಟ್ಟು ಯಜ್ಞದ ಕೊನೆಯಲ್ಲಿ ನಿನ್ನ ಅತ್ಯಂತ ಅದೃಷ್ಟಶಾಲಿಗಳಾದ ಸ್ನೇಹಿತರಾಗಿರುವೆವು. ನಿನ್ನ ಅನುಗ್ರಹದಿಂದ ಶ್ರೇಷ್ಠವಾದ ಸಂತತಿಗಳನ್ನೂ, ದೀರ್ಘವಾದದ್ದೂ, ಉಚ್ಛ್ರಾಯಸ್ಥಿತಿಯನ್ನುಂಟುಮಾಡುವುದೂ ಆದ ಆಯುಸ್ಸನ್ನು ಹೊಂದುವುದರಿಂದ ಯಜ್ಞದ ಅಂತ್ಯದಲ್ಲೂ ನಿನ್ನನ್ನು ಸ್ತೋತ್ರಮಾಡುತ್ತೇವೆ.

English Translation.

Protected by the gods, remain, Indra, at the close of the sacrifice, your most fortunate friends ; we praise you, for we enjoy through you excellent offspring and a long and prosperious life,



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಉದೃಚಿ—ಯಜ್ಞಸಮಾಪ್ತಿ ಕಾಲದಲ್ಲಿ ಎಂದರ್ಥ.

ಯೇ—ಪ್ರಕರಣಾನುರೋಧವಾಗಿ ಇಲ್ಲಿ ಯಚ್ಛಬ್ದಕ್ಕೆ ಅಸ್ಮಚ್ಛಬ್ದಾರ್ಥವನ್ನೇ ಹೇಳಬೇಕು.

ದೇವಗೋಪಾಃ—ದೇವಾಃ ಗೋಪಾಃ ರಕ್ಷಕಾಃ ಯೇಷಾಂ ದೇವತೆಗಳಿಂದ ರಕ್ಷಣೆಯನ್ನು ಪಡೆದು ಜೀವಿಸುವೆವು ಎಂಬುದೇ ಇದರ ಪೂರ್ಣಾರ್ಥ.

ಸುವೀರಾಃ—ಶೋಭನರಾದ ಪುತ್ರರುಳ್ಳವರು ಎಂಬರ್ಥದಿಂದ, ಇಂದ್ರನನ್ನು ಯಜ್ಞಸಮಾಪ್ತಿಯಲ್ಲಿಯೂ ಸ್ತುತಿಸುವವರು ಪುತ್ರಸಂಪತ್ತನ್ನು ಪಡೆಯುವರು ಎಂಬ ಫಲಶ್ರುತಿಯು ಇಲ್ಲಿ ವ್ಯಕ್ತವಾಗುವುದು.

ದ್ರಾಘೀಯಃ—ಅತಿಶಯವಾದ ಅವಧಿಯುಳ್ಳದ್ದು. ಇದು ಆಯುಸ್ಸಿಗೆ ವಿಶೇಷಣವಾಗಿರುವುದರಿಂದ ದೀರ್ಘಕಾಲ ಎಂಬರ್ಥವನ್ನು ಹೇಳಬೇಕು.

ವ್ಯಾಕರಣಪ್ರಕ್ರಿಯಾ

ದೇವಗೋಪಾಃ—ದೇವಾ ಗೋಪಾ ಯೇಷಾಂ ದೇವಗೋಪಾಃ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರವು ಬರುತ್ತದೆ.

ಅಸಾಮ—ಅಸ ಭುವಿ ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಲುಙರ್ಥದಲ್ಲಿ ಲೋಟ್. ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಲೋಟೋಲಙ್ವತ್ ಎಂದುದರಿಂದ ಲಙ್ವದ್ಭಾವವಿರುವುದರಿಂದ ನಿತ್ಯಂಙಿತಃ ಎಂಬುದರಿಂದ ಉತ್ತಮದ ಮಸಿನ ಸಕಾರಕ್ಕೆ ಲೋಪ. ಆಡುತ್ತಮಸ್ಯಪಿಚ್ಚ (ಪಾ. ಸೂ. ೩-೪-೯೨) ಎಂಬುದರಿಂದ ಮಸಿಗೆ ಆಡಾಗಮ ಬರುತ್ತದೆ. ಙಿಚ್ಚಪಿನ್ನ- ಪಿಚ್ಚಙಿನ್ನ ಎಂದು ಭಾಷ್ಯದಲ್ಲಿ ಹೇಳಿರುವುದರಿಂದ ಆಟಿಗೆ ಪಿತ್ವವನ್ನು ಹೇಳಿರುವುದರಿಂದ ಸಾರ್ವಧಾತುಕಮಪಿತ್ ಎಂಬುದರಿಂದ ಙಿದ್ವದ್ಭಾವ ಬರುವುದಿಲ್ಲ. ಆದುದರಿಂದ ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಎಂಬುದರಿಂದ ಅಸಿನ ಅಕಾರಕ್ಕೆ ಲೋಪ ಬರುವುದಿಲ್ಲ. ಪಿತ್ವ ಹೇಳಿರುವುದರಿಂದಲೇ ತಿಙ್ ಅನುದಾತ್ತವಾಗುವುದರಿಂದ ಧಾತುವಿನ ಸ್ವರವೇ ಉಳಿಯುತ್ತದೆ.

ಸ್ತೋಷಾಮ—ಷ್ಟುಞ್ ಸ್ತುತೌ ಧಾತು. ಅದಾದಿ. ಲೋಡುತ್ತಮ ಬಹುವಚನದಲ್ಲಿ ಹಿಂದಿನಂತೆಯೇ ಮಸ್. ಅದರ ಸಕಾರಕ್ಕೆ ಲೋಪ. ಸಿಬ್ಬಹುಲಂ ಲೇಟಿ (ಪಾ. ಸೂ. ೩-೧-೩೪) ಎಂಬಲ್ಲಿ ಬಹುಲಗ್ರಹಣಮಾಡಿರುವುದರಿಂದ ಲೋಟಿನಲ್ಲಿಯೂ ಸಿಪ್ ಬರುತ್ತದೆ. ಪಿತ್ತಾದುದರಿಂದ ಧಾತುವಿಗೆ ಗುಣ. ಇಕಿನ ಪರದಲ್ಲಿರುವುದರಿಂದ ಪ್ರತ್ಯಯ ಸಿಪಿನ ಸಕಾರಕ್ಕೆ ಷತ್ವ. ಆಡುತ್ತಮಸ್ಯ ಸೂತ್ರದಿಂದ ಆಡಾಗಮ. ಸ್ತೋಷಾಮ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸುವೀರಾಃ—ಶೋಭನಾಃ ವೀರಾಃ ಯೇಷಾಂ ಸುವೀರಾಃ ವೀರವೀರ್ಯೌಚ (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ದ್ರಾಘೀಯಃ—ದೀರ್ಘಶಬ್ದದ ಮೇಲೆ ಅತಿಶಯಾರ್ಥದಲ್ಲಿ ಗುಣವಾಚಕವಾದುದರಿಂದ ದ್ವಿವಚನವಿಭಜ್ಯೋಪಪದೇ ಸೂತ್ರದಿಂದ ಈಯಸುಸ್ ಇದು ಪರದಲ್ಲಿರುವಾಗ ಪ್ರಿಯಸ್ಥಿರೋರು (ಪಾ. ಸೂ ೬-೪-೧೫೭) ಎಂಬುದರಿಂದ ದೀರ್ಘಶಬ್ದಕ್ಕೆ ದ್ರಾಘ ಎಂಬ ಆದೇಶ ಬರುತ್ತದೆ. ಯಸ್ಯೇತಿಚ ಎಂಬುದರಿಂದ ಅಕಾರಲೋಪವಾದರೆ ದ್ರಾಘೀಯಃ ಎಂದು ರೂಪವಾಗುತ್ತದೆ. ನಿತ್‌ಪ್ರತ್ಯಯಾಂತವಾದುದರಿಂದ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪ್ರತರಂ—ಪ್ರ ಶಬ್ದದ ಮೇಲೆ ತರಪ್ ಇರುವಾಗ ಅಮು ಚ ಚ್ಛಂದಸಿ (ಪಾ. ಸೂ. ೫-೪-೧೨) ಎಂಬುದರಿಂದ ಅದ್ರವ್ಯಗತಪ್ರಕರ್ಷವು ತೋರುತ್ತಿರುವಾಗ ಅಮು ಪ್ರತ್ಯಯ ಬರುತ್ತದೆ. ಪ್ರತರಂ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ದಧಾನಾಃ—ಡುಧಾಞ್ ಧಾರಣಪೋಷಣಯೋಃ ಧಾತು. ಲಡರ್ಥದಲ್ಲಿ ಶಾನಚ್ ಜುಹೋತ್ಯಾದಿಭ್ಯಃ ಶ್ಲುಃ ಎಂಬುದರಿಂದ ಶ್ಲುಃ ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ ಜಸ್ತ್ವ. ದಧಾನ ಎಂದು ರೂಪವಾಗುತ್ತದೆ. ಅಭ್ಯಸ್ತಾನಾಮಾದಿಃ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

---

# ಐವತ್ತನಾಲ್ಕನೆಯ ಸೂಕ್ತವು

॥ಸಾಯಣಭಾಷ್ಯಂ॥

ಮಾ ನ ಇತಿ ಏಕಾದಶರ್ಚಂ ಚತುರ್ಥಂ ಸೂಕ್ತಂ। ಷಷ್ಠ್ಯಷ್ಟಮೀನವಮ್ಯೇಕಾದಶ್ಯಸ್ತ್ರಿಷ್ಟುಭಃ। ಶಿಷ್ಟಾಃ ಸಪ್ತ ಜಗತ್ಯಃ। ಸವ್ಯ ಋಷಿಃ। ಇಂದ್ರೋ ದೇವತಾ। ತಥಾ ಚಾನುಕ್ರಾಂತಂ। ಮಾ ನೋಽಂತ್ಯಾ ತ್ರಿಷ್ಟುಪ್ ಷಷ್ಠ್ಯಷ್ಟಮೀ ನವಮೀ ಚೇತಿ। ಅತಿರಾತ್ರೇ ಪ್ರಥಮೇ ಪರ್ಯಾಯೇಽಚ್ಛಾವಾಕಶಸ್ತ್ರ ಇದಂ ಸೂಕ್ತಂ। ತಥಾ ಚ ಸೂತ್ರಿತಂ। ಮಾನೋ ಅಸ್ಮಿನ್ಮಘವನ್ನಿಂದ್ರ ಪಿಬ ತುಭ್ಯಂ ಸುತೋ ಮದಾಯೇತಿ ಯಾಜ್ಯಾ। ಆ. ೬-೪। ಇತಿ॥

ಅನುವಾದವು—ಮಾ ನಃ ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹನ್ನೊಂದು ಋಕ್ಕುಗಳಿರುವುವು. ಈ ಸೂಕ್ತದ ಆರು, ಎಂಟು, ಒಂಭತ್ತು, ಹನ್ನೊಂದನೆಯ ಋಕ್ಕುಗಳು ತ್ರಿಷ್ಟುಪ್‌ಛಂದಸ್ಸಿನವು ಉಳಿದ ಏಳು ಋಕ್ಕುಗಳು ಜಗತೀಛಂದಸ್ಸಿನವು. ಈ ಸೂಕ್ತಕ್ಕೆ ಸವ್ಯನು ಋಷಿಯು. ಇಂದ್ರನು ದೇವತೆಯು. ಅನುಕ್ರಮಣಿಕೆಯಲ್ಲಿ ಮಾ ನೋಽಂತ್ಯಾ ತ್ರಿಷ್ಟುಪ್‌ಷಷ್ಠ್ಯಷ್ಟಮೀ ಚೇತಿ ಎಂದು ಹೇಳಿರುವುದು. ಅತಿರಾತ್ರವೆಂಬ ಯಾಗದಲ್ಲಿ ಪ್ರಥಮಪರ್ಯಾಯದಲ್ಲಿ ಅಚ್ಛಾವಾಕನೆಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಮಾ ನೋ ಅಸ್ಮಿನ್ಮಘವನ್ನಿಂದ್ರ ಪಿಬ ತುಭ್ಯಂ ಸುತೋ ಮದಾಯೇತಿ ಯಾಜ್ಯಾ ಎಂಬ ಸೂತ್ರದಿಂದ ವಿವೃತವಾಗಿರುವುದು. (ನಿ. ೬-೪)



CC-0. Jangamwadi Math Collection. Digitized by eGangotri

## ಸೂಕ್ತ—೫೪

ಮಂಡಲ—೧ ॥ ಅನುವಾಕ—೧೦ ॥ ಸೂಕ್ತ—೫೪ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ—೧೭, ೧೮ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೧ ॥

ಋಷಿಃ—ಸವ್ಯ ಆಂಗಿರಸಃ ॥

ದೇವತಾ—ಇಂದ್ರಃ ॥

ಛಂದಃ—೧-೫, ೭, ೧೦ ಜಗತೀ । ೬, ೮, ೯, ೧೧ ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ಮಾ ನೋ ಅಸ್ಮಿನ್ಮಘವನ್ಪೃತ್ಸ್ವಂಹಸಿ ನಹಿ ತೇ ಅಂತಃ ಶವಸಃ ಪರೀಣಶೇ । ಅಕ್ರಂದಯೋ ನದ್ಯೋ೩ ರೋರುವದ್ವನಾ ಕಥಾ ನ ಕ್ಷೋಣೀರ್ಭಿಯಸಾ ಸಮಾರತ ॥ ೧ ॥

॥ ಪದಪಾಠಃ ॥

ಮಾ । ನಃ । ಅಸ್ಮಿನ್ । ಮಘವನ್ । ಪೃತ್ಽಸು । ಅಂಹಸಿ । ನಹಿ । ತೇ । ಅಂತಃ । ಶವಸಃ । ಪರಿಽನಶೇ ।
ಅಕ್ರಂದಯಃ । ನದ್ಯಃ । ರೋರುವತ್ । ವನಾ । ಕಥಾ । ನ । ಕ್ಷೋಣೀಃ । ಭಿಯಸಾ । ಸಂ । ಆರತ ॥ ೧ ॥

॥ ಸಾಯಣಭಾಷ್ಯಂ ॥

ಹೇ ಮಘವನ್ ಧನವನ್ನಿಂದ್ರ ಅಸ್ಮಿನ್ ಪರಿದೃಶ್ಯಮಾನೇಽಂಹಸಿ ಪಾಪೇ ಪೃತ್ಸು ಪೃತನಾಸು ಪಾಪಫಲಭೂತೇಷು ಸಂಗ್ರಾಮೇಷು ಚ ನೋಽಸ್ಮಾನ್ಮಾ ಪ್ರಕ್ಷೈಪ್ಸೀರಿತಿ ಶೇಷಃ । ಯಸ್ಮಾತ್ತೇ ತವ ಶವಸೋ ಬಲಸ್ಯಾಂತೋಽವಸಾನಂ ಪರೀಣಶೇ ಪರಿತೋ ವ್ಯಾಪ್ತುಂ ನ ಹಿ ಶಕ್ಯತೇ । ಸರ್ವೋಽಪಿ ಜನಸ್ತ್ವದೀಯಂ ಬಲಮತಿಕ್ರಮಿತುಂ ನ ಶಕ್ನೋತೀತ್ಯರ್ಥಃ । ತಸ್ಮಾತ್ತ್ವಮಂತರಿಕ್ಷೇ ವರ್ತಮಾನೋ ರೋರುವತ್ ಅತ್ಯರ್ಥಂ ಶಬ್ದಂ ಕುರ್ವನ್ ನದ್ಯೋಃ ನದೀರ್ವನಾ ತತ್ಸಂಬಂಧೀನ್ಯುದಕಾನಿ ಚಾಕ್ರಂದಯಃ ।



CC-0. Jangamwadi Math Collection. Digitized by eGangotri

ಶಬ್ದಯಸಿ । ಕ್ಷೋಣೀಃ ಕ್ಷೋಣ್ಯಃ । ಕ್ಷೋಣೀತಿ ಪೃಥಿವೀನಾಮ । ತದುಪಲಕ್ಷಿತಾಸ್ತ್ರಯೋ ಲೋಕಾ ಭಿಯಸಾ ತ್ವದ್ಭಯೇನ ಕಥಾ ಕಥಂ ನ ಸಮಾರತ । ನ ಸಂಗಚ್ಛಂತೇ । ತ್ವದೀಯಂ ಬಲಮವಲೋಕ್ಯ ತ್ರಯೋಽಪಿ ಲೋಕಾ ಬಿಭ್ಯತೀತಿ ಭಾವಃ ॥ ಪೃತ್ಸು । ಪದಾದಿಷು ಮಾಂಸ್ಪೃತ್ಸ್ನೂನಾಮುಪಸಂಖ್ಯಾನಂ । ಪಾ. ೩-೧-೬೩-೧ । ಇತಿ ಪೃತನಾಶಬ್ದಸ್ಯ ಪೃದ್ಭಾವಃ । ಪರೀಣಶೇ । ನಶತಿರ್ವ್ಯಾಪ್ತಿಕರ್ಮಾ । ಕೃತ್ಯಾರ್ಥೇ ತವೈಕೇನಿತಿ ಕೇನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ನಿಪಾತಸ್ಯ ಚೇತಿ ಪೂರ್ವಪದಸ್ಯ ದೀರ್ಘತ್ವಂ । ನದ್ಯಃ । ದ್ವಿತೀಯಾರ್ಥೇ ಪ್ರಥಮಾ । ರೋರುವತ್ । ರು ಶಬ್ದೇ । ಯಙ್ಲುಗಂತಾಲ್ಲಟಃ ಶತೃ । ಅದಾದಿವಚ್ಚೇತಿ ವಚನಾಚ್ಛಪೋ ಲುಕ್ । ಶತುರ್ಙಿತ್ತ್ವಾದ್ಗುಣಾಭಾವ ಉವಙಾದೇಶಃ । ನಾಭ್ಯಸ್ತಾಚ್ಛತುರಿತಿ ನುಮ್ಪ್ರತಿಷೇಧಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಕಥಾ । ಥಾ ಹೇತೌ ಚ ಚ್ಛಂದಸೀತಿ ಕಿಂ ಶಬ್ದಾತ್ಪ್ರಕಾರವಚನೇ ಥಾಪ್ರತ್ಯಯಃ । ತಸ್ಯ ವಿಭಕ್ತಿಸಂಜ್ಞಾಯಾಂ ಕಿಮಃ ಕಃ । ಪಾ. ೭-೨-೧೦೩ । ಇತಿ ಕಾದೇಶಃ । ಆರತ । ಋ ಗತೌ । ಸಮೋ ಗಮ್ಯೃಚ್ಛಿಭ್ಯಾಮಿತ್ಯಾತ್ಮನೇಪದಂ । ಛಾಂದಸೇ ವರ್ತಮಾನೇ ಲಙ್ಯದಾದಿತ್ವಾಚ್ಛಪೋ ಲುಕ್ । ಋಸ್ಯಾದಾದೇಶಃ । ಆಡಾಗಮೋ ವೃದ್ಧಿಶ್ಚ ॥

॥ ಪ್ರತಿಪದಾರ್ಥ ॥

ಮಘವನ್—ಧನವಂತನಾದ ಇಂದ್ರನೇ । ಅಸ್ಮಿನ್ ಅಂಹಸಿ—(ಸ್ಪಷ್ಟವಾಗಿ ಕಾಣುವ) ಈ ಪಾಪದಲ್ಲಿಯೂ । ಪೃತ್ಸು—ಅಧಿಕವಾಗಿ ಪಾಪಾತ್ಮಕಗಳಾಗಿರುವ ಈ ಯುದ್ಧಗಳಲ್ಲೂ । ನಃ—ನಮ್ಮನ್ನು । ಮಾ (ಪ್ರಕ್ಷೈಪ್ಸೀಃ)—ಬಲಾತ್ಕರಿಸಬೇಡ. (ಏತಕ್ಕೆಂದರೆ) । ತೇ—ನಿನ್ನ । ಶವಸಃ—ಬಲದ । ಅಂತಃ—ಅವಧಿಯನ್ನು ಪರೀಣಶೇ—ಮೀರಿವ್ಯಾಪಿಸುವುದಕ್ಕೆ । ನ ಹಿ—ಸಾಧ್ಯವೇ ಇಲ್ಲ. । (ನೀನು ಅಂತರಿಕ್ಷದಲ್ಲಿ ನಿಂತುಕೊಂಡು) ರೋರುವತ್—ಗರ್ಜಿಸುವ ಶಬ್ದವನ್ನು ಮಾಡುತ್ತ । ನದ್ಯಃ—ನದಿಗಳನ್ನೂ । ವನಾ—ಅವುಗಳ ನೀರುಗಳನ್ನೂ ಅಕ್ರಂದಯಃ—ಶಬ್ದಮಾಡಿಸುತ್ತೀಯೇ । ಕ್ಷೋಣೀಃ—ಪೃಥಿವ್ಯಾದಿಮೂರು ಲೋಕಗಳೂ । ಭಿಯಸಾ—ನಿನ್ನ ಭಯದಿಂದ । ಕಥಾ—ಹೇಗೆತಾನೇ । ನ ಸಮಾರತ—ತುಂಬಿಕೊಳ್ಳುವುದಿಲ್ಲ ?

॥ ಭಾವಾರ್ಥ ॥

ಎಲೈ ಧನವಂತನಾದ ಇಂದ್ರನೇ, ಕಣ್ಣಿಗೆ ಕಾಣತಕ್ಕ ಈ ಪಾಪಕೃತ್ಯದಲ್ಲೂ, ಪಾಪಾತ್ಮಕಗಳಾಗಿರುವ ಈ ಯುದ್ಧಗಳಲ್ಲೂ ನಮ್ಮನ್ನು ಬಲಾತ್ಕರಿಸಬೇಡ. ಏತಕ್ಕೆಂದರೆ ನಿನ್ನ ಬಲದ ಅವಧಿಯನ್ನು ಮೀರುವುದಕ್ಕೆ ಯಾರಿಗೂ ಸಾಧ್ಯವೇ ಇಲ್ಲ. ನೀನು ಅಂತರಿಕ್ಷದಲ್ಲಿದ್ದುಕೊಂಡು ನೀನೂ ಗರ್ಜಿಸುವ ಶಬ್ದವನ್ನು ಮಾಡುತ್ತ ನದಿಗಳನ್ನೂ ಅವುಗಳ ನೀರುಗಳನ್ನೂ ಶಬ್ದಮಾಡಿಸುತ್ತೀಯೆ. ಇಂತಹ ಪ್ರಭಾವವುಳ್ಳ ನಿನಗೆ ಪೃಥಿವ್ಯಾದಿ ಮೂರು ಲೋಕಗಳೂ ಹೇಗೆ ತಾನೇ ಭಯಪಡುವುದಿಲ್ಲ?

Engish Transation.

O Maghaven, do not throw us into this iniquity, into these sinful conflicts, for the limit of your strength cannot be measured ; you are shouting in the heavens and making the waters of the rivers roar; why shall not the earth be filled with terror ?





CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಕೆಲವರು ಈರೀತಿ ಹೇಳುತ್ತಾರೆ.—ಕಂಚಿತ್ಸಂಗ್ರಾಮರೂಪಸಂಪ್ರಾಣಸಂಕಟಪ್ರಸಂಗಮುದ್ದಿಶ್ಯ ವಚನಮಿದಂ ಸವ್ಯಸ್ಯ । ಯ ಇಂದ್ರೋ ವೃತ್ರಂ ಭಿತ್ವಾ ಸಗರ್ಜನೇನ ತಥಾ ಲೋಕಾಂಶ್ಚ ಭಯಹೇತುತ್ವಾತ್ಸಮಾಸಯತಾ ಮಹತಾ ಮೇಘಜಲವರ್ಷಣೇನ ತೆಜ್ಜಾತಾ ನದೀರ್ಮಹದಶಬ್ದಯೇತ್ ತೇನ ಚ ಸ್ವಬಲಮನಂತಮಿತ್ಯಾವಿರಭಾವಯೆತ್ ಸೋಽಸ್ಮಿನ್ದಾರುಣ ಪ್ರಸಂಗೇಽಸ್ಮಾಕಂ ಪ್ರಾಣಸಂಕಟಸ್ಯ ನಿವಾರಕೋ ಭವಿಷ್ಯತೀತಿ ಭಾಗವತಂ ॥ ಯುದ್ಧಭಯವು ಒದಗಿದಾಗ ಸೂಕ್ತದ ಋಷಿಯಾದ ಸವ್ಯನು ಹೇಳುವ ವಚನವಿದು. ಇಂದ್ರನು ವೃತ್ರಾಸುರನನ್ನು ಸಂಹಾರಮಾಡಿದಾಗ ಲೋಕವನ್ನೆಲ್ಲಾ ಭಯಪಡಿಸುವಂತೆ ಮಹಾ ಶಬ್ದದಿಂದಲೂ ಗುಡುಗು ಮಿಂಚುಗಳಿಂದಲೂ ಯುಕ್ತವಾದ ಮಹಾವೃಷ್ಟಿಯುಂಟಾಯಿತು. ಅದರಿಂದ ಒಂದು ದೊಡ್ಡ ನದಿಯು ಮಹಾ ರಭಸವಾಗಿ ಗರ್ಜಿಸುತ್ತಾ ಹರಿಯತೊಡಗಿತು. ಅದನ್ನು ನೋಡಿ ಸವ್ಯನು ಹೆದರಿ ತನ್ನನ್ನು ಕಾಪಾಡಬೇಕೆಂದು ಇಂದ್ರನನ್ನು ಈ ರೀತಿ ಸ್ತೋತ್ರಮಾಡಿರುವನೆಂದು ಭಾಗವತ ಪುರಾಣಾದಿಗಳಲ್ಲಿ ಉಕ್ತವಾಗಿದೆ.

ಪೃತ್ಸು—ಪಾಪಫಲಭೂತವಾದ ಯುದ್ಧದಲ್ಲಿ ಎಂಬುದು ಇದರ ಅರ್ಥ. ಸೇನಾವಾಚಕವಾದ ಪೃತನಾ ಶಬ್ದಕ್ಕೆ ಪೃದ್ಭಾವ ಬಂದು ಪೃತ್ಸು ಎಂಬ ರೂಪವಾಗಿದೆ.

ಪರೀಣಶೇ—ಪರಿತೋ ವ್ಯಾಪ್ತುಂ । ಇಲ್ಲಿ ಪರಿ ಎಂಬ ಉಪಸರ್ಗಪೂರ್ವಕವಾದ ನಶ್ ಧಾತುವಿಗೆ ವ್ಯಾಪ್ತಿರೂಪವಾದ ಕ್ರಿಯೆಯನ್ನು ಅರ್ಥವಾಗಿ ಕಲ್ಪಿಸಿದ್ದಾರೆ. ಸುತ್ತಲೂ ವ್ಯಾಪಿಸುವುದಕ್ಕೆ ಎಂಬುದು ಇದರ ಅರ್ಥ.

ನದ್ಯಃ—ಇದು ತೃತೀಯಾವಿಭಕ್ತ್ಯರ್ಥದಲ್ಲಿ ಪ್ರಥಮಾಂತವಾಗಿ ಪ್ರಯೋಗಿಸಲ್ಪಟ್ಟಿದೆ.

ವನಾ—ಜಲಾರ್ಥಕವಾದ ವನಶಬ್ದವು ಇಲ್ಲಿ ದೀರ್ಘಾಂತವಾಗಿದ್ದು ನದೀ ಸಂಬಂಧವಾದ ಜಲ ಎಂದರ್ಥಕೊಡುತ್ತಿದೆ.

ಕ್ಷೋಣೀ—ಈ ಶಬ್ದಕ್ಕೆ ಸಾಮಾನ್ಯವಾಗಿ ಭೂಮಿಯೆಂದರ್ಥವಿದ್ದರೂ, ಇಲ್ಲಿ ಭೂಮ್ಯುಪಲಕ್ಷಿತವಾದ ಮೂರು ಲೋಕಗಳು ಎಂದರ್ಥ ಹೇಳಬೇಕು.

॥ ವ್ಯಾಕರಣಪ್ರಕ್ರಿಯಾ ॥

ಪೃತ್ಸು—ಪೃತನಾಶಬ್ದ ಸಪ್ತಮೀ ಬಹುವಚನದಲ್ಲಿ ಪದ್ದಾದಿಷು ಮಾಂಸ್ ಪೃತ್ ಸ್ನೂನಾಮುಪಸಂಖ್ಯಾನಮ್ (ಪಾ. ಸೂ. ೬-೧-೬೩-೧) ಎಂಬುದರಿಂದ ಇದಕ್ಕೆ ಪೃತ್ ಎಂಬ ಆದೇಶ ಬರುತ್ತದೆ. ಪೃತ್ಸು ಎಂದು ರೂಪವಾಗುತ್ತದೆ.

ಪರೀಣಶೇ—ಣಶ ಅದರ್ಶನೇ ಧಾತು. ಇಲ್ಲಿ ವ್ಯಾಪ್ತಿಕರ್ಮಕವಾಗಿದೆ. ಕೃತ್ಯಾರ್ಥೇ ತವೈಕೇನ್ (ಪಾ. ಸೂ. ೩.೪-೧೪) ಎಂಬುದರಿಂದ ಕೇನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಣಶೇ ಎಂಬುದು ಪರದಲ್ಲಿರುವಾಗ ಪರಿ ಎಂಬ ನಿಪಾತಕ್ಕೆ ನಿಪಾತಸ್ಯಚ (ಪಾ. ಸೂ. ೬-೩-೧೩೬) ಎಂಬುದರಿಂದ ದೀರ್ಘ ಬರುತ್ತದೆ.

ನದ್ಯಃ—ನದೀ ಶಬ್ದ. ಜಸ್ ಪರದಲ್ಲಿರುವಾಗ ದೀರ್ಘಾಜ್ಜಸಿಚ ಎಂಬುದರಿಂದ ಪೂರ್ವಸವರ್ಣ ದೀರ್ಘನಿಷೇಧ. ಯಣಾದೇಶ. ಇಲ್ಲಿ ದ್ವಿತೀಯಾರ್ಥದಲ್ಲಿ ಪ್ರಥಮಾ ಬಂದಿದೆ.



CC-0. Jangamwadi Math Collection. Digitized by eGangotri

ರೋರುವತ್—ರು ಶಬ್ದೇ ಧಾತು. ಅತಿಶಯಾರ್ಥದಲ್ಲಿ ಯಙ್ ಯಙೋಽಚಿಚ ಎಂಬುದರಿಂದ ಅದಕ್ಕೆ ಲುಕ್ ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಗುಣೋಯಙ್‌ಲುಕೋಃ ಎಂಬುದರಿಂದ ಅಭ್ಯಾಸಕ್ಕೆ ಗುಣ. ಸನಾದ್ಯಂತಾಧಾತವಃ ಎಂಬುದರಿಂದ ಯಙ್‌ಲುಗಂತವಾದ ರೋರು ಎಂಬುದಕ್ಕೆ ಧಾತುಸಂಜ್ಞಾ. ಇದರ ಮೇಲೆ ಲಡರ್ಥವಲ್ಲಿ ಶತೃ. ಯಙ್‌ಲುಕಿನಲ್ಲಿ ಅದಾದಿವಚ್ಚ ಎಂದು ಅತಿದೇಶ ಮಾಡಿರುವುದರಿಂದ ಪ್ರಾಪ್ತವಾದ ಶಪಿಗೆ ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ಲುಕ್. ಆಗ ಸಾರ್ವಧಾತುಕಮಪಿತ್ ಸೂತ್ರ ದಿಂದ ಶತೃ ಙಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ರೋರು+ಅತ್ ಎಂದಿರುವಾಗ ಅಚಿಶ್ನು ಧಾತುಭ್ರುವಾಂ ಸೂತ್ರದಿಂದ ಉಕಾರಕ್ಕೆ ಉವಙಾದೇಶ. ರೋರುವತ್ ಎಂದಾಗುತ್ತದೆ. ನಾಭ್ಯಸ್ತಾಚ್ಛತುಃ (ಪಾ. ಸೂ. ೭-೧-೭೮) ಎಂಬುದರಿಂದ ಸರ್ವನಾಮಸ್ಥಾನಪರದಲ್ಲಿದ್ದರೂ ನುಮಾಗಮ ಬರುವುದಿಲ್ಲ. ಹಲ್ ಙ್ಯಾಭ್ಯೋ—ಸೂತ್ರದಿಂದ ಸುಲೋಪವಾದರೆ ರೋರುವತ್ ಎಂದು ರೂಪವಾಗುತ್ತದೆ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಕಥಾ—ಕಿಮ್ ಶಬ್ದ. ಪ್ರಕಾರಾರ್ಥವು ತೋರುತ್ತಿರುವಾಗ ಥಾ ಹೇತೌಚಚ್ಛಂದಸಿ (ಪಾ. ಸೂ. ೫-೩-೨೬) ಎಂಬುದರಿಂದ ಥಾ ಪ್ರತ್ಯಯ. ಪ್ರಾಗ್ದಿಶೋವಿಭಕ್ತಿಃ ಎಂಬುದರಿಂದ ಈ ಪ್ರತ್ಯಯಕ್ಕೆ ವಿಭಕ್ತಿಸಂಜ್ಞೆ ಇರುವುದರಿಂದ ಕಿಮಃಕಃ (ಪಾ. ಸೂ. ೭-೨-೧೦೩) ಎಂಬುದರಿಂದ ಕಿಮ್ ಶಬ್ದಕ್ಕೆ ಕ ಎಂಬ ಆದೇಶ. ಕಥಾ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ.

ಅರತೆ—ಋ ಗತೌ ಧಾತು. ಸಮ್ ಪೂರ್ವಕವಾದುದರಿಂದ ಸಮೋಗಮ್ಯೃಚ್ಛಿಭ್ಯಾಂ (ಪಾ. ಸೂ. ೧-೩-೨೯) ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ವರ್ತಮಾನಾರ್ಥದಲ್ಲಿ ಛಂದಸಿ ಲುಙ್‌ಲಙ್ ಲಿಟಃ ಎಂಬುದರಿಂದ ಲಙ್. ಪ್ರಥಮಪುರುಷ ಬಹುವಚನದ ಝ ಪ್ರತ್ಯಯಕ್ಕೆ ಆತ್ಮನೇಪದೇಷ್ವನತಃ ಎಂಬು ದರಿಂದ ಅದಾದೇಶ. ಅದಾದಿಯಲ್ಲಿ ಸೇರುವುದರಿಂದ ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ಶಪಿಗೆ ಲುಕ್. ಆಡಜಾದೀನಾಂ ಎಂಬುದರಿಂದ ಅಂಗಕ್ಕೆ ಆಡಾಗಮ. ಆಟಶ್ಚ ಸೂತ್ರದಿಂದ ವೃದ್ಧಿ. ಆರತ ಎಂದು ರೂಪ ವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಅರ್ಚಾ ಶಕ್ರಾಯ ಶಾಕಿನೇ ಶಚೀವತೇ ಶೃಣ್ವಂತಮಿಂದ್ರಂ ಮಹಯ
ನ್ನಭಿ ಷ್ಟುಹಿ ।
ಯೋ ಧೃಷ್ಣುನಾ ಶವಸಾ ರೋದಸೀ ಉಭೇ ವೃಷಾ ವೃಷತ್ವಾ ವೃಷ-
ಭೋ ನ್ಯೃಂಜತೇ ॥ ೨ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಅರ್ಚ । ಶಕ್ರಾಯ । ಶಾಕಿನೇ । ಶಚೀಽವತೇ । ಶೃಣ್ವಂತಂ । ಇಂದ್ರಂ । ಮಹಯನ್ । ಅಭಿ । ಸ್ತುಹಿ ।

ಯಃ । ಧೃಷ್ಣುನಾ । ಶವಸಾ । ರೋದಸೀ ಇತಿ । ಉಭೇ ಇತಿ । ವೃಷಾ । ವೃಷತ್ವಾ । ವೃಷಭಃ । ನಿಽಋಂಜತೇ ॥ ೨ ॥

॥ ಸಾಯಣಭಾಷ್ಯಂ ॥

ಹೇ ಅಧ್ವರ್ಯೋ ಶಾಕಿನೇ ಶಕ್ತಿಯುಕ್ತಾಯ ಶಚೀವತೇ ಪ್ರಜ್ಞಾವತೇ ಶಕ್ರಾಯೇಂದ್ರಾಯಾರ್ಚ । ಏವಂವಿಧಮಿಂದ್ರಂ ಪೂಜಯ । ಕಿಂಚ ಸ್ತುತೀಃ ಶೃಣ್ವಂತಂ ಸವಿಾಚೀನೇಯಂ ಸ್ತುತಿರಿತಿ ಜಾನಂತಂ ತಮಿಂದ್ರಂ ಮಹಯನ್ ಪೂಜಯನ್ನಭಿಷ್ಟುಹಿ । ಆಭಿಮುಖ್ಯೇನ ತಸ್ಯ ಸ್ತೋತ್ರಂ ಕುರು । ಯ ಇಂದ್ರೋ ಧೃಷ್ಣುನಾ ಶತ್ರೂಣಾಂ ಧರ್ಷಕೇಣ ಶವಸಾ ಬಲೇನೋಭೇ ರೋದಸೀ ದ್ಯಾವಾಪೃಥಿವ್ಯೌ ನ್ಯೃಂಜತೇ ನಿತರಾಂ ಪ್ರಸಾಧಯತಿ । ಋಂಜತಿಃ ಪ್ರಸಾಧನಕರ್ಮಾ । ನಿ. ೬-೨೧ । ಇತಿ ಯಾಸ್ಕಃ । ಸ ಇಂದ್ರೋ ವೃಷಾ ಸೇಚನಸಮರ್ಥೋ ವೃಷತ್ವಾ ವೃಷತ್ವೇನಾನೇನೈವ ಸೇಚನಸಾಮರ್ಥ್ಯೇನ ವೃಷಭೋ ವರ್ಷಿತಾ ಕಾಮಾನಾಂ ಯದ್ವಾ. ವೃಷ್ಟ್ಯುದಕಾನಾಂ ॥ ಅರ್ಚ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ದ್ವ್ಯಚೋಽತಸ್ತಿಙ ಇತಿ ದೀರ್ಘತ್ವಂ । ಶಾಕಿನೇ । ಶಕ್ತಿಃ ಶಾಕಃ । ಶಕ್ಲೃ ಶಕ್ತೌ । ಭಾವೇ ಘಞ್ । ಮತ್ವರ್ಥೀಯ ಇನಿಃ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ಅಭಿ ಷ್ಟುಹಿ । ಸ್ತೌತೇರದಾದಿತ್ವಾಚ್ಛಪೋ ಲುಕ್ । ಉಪಸರ್ಗಾತ್ಸುನೋತೀತಿ ಷತ್ವಂ । ಷ್ಟುನಾ ಷ್ಟುರಿತಿ ಷ್ಟುತ್ವಂ । ವೃಷತ್ವಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ನ್ಯೃಂಜತೇ । ಋಜಿ ಭೃಜೀ ಭರ್ಜನೇ । ಇದಿತ್ತ್ವಾನ್ನುಮ್ । ಶಪಿ ಪ್ರಾಪ್ತೇ ವ್ಯತ್ಯಯೇನ ಶಃ ॥

॥ ಪ್ರತಿಪದಾರ್ಥ ॥

(ಎಲೈ ಅಧ್ವರ್ಯುವೇ) ಶಾಕಿನೇ—ಶಕ್ತಿವಂತನೂ । ಶಚೀವತೇ—ಪ್ರಜ್ಞಾವಂತನೂ ಆದ । ಶಕ್ರಾಯ—ಇಂದ್ರನಿಗೆ । ಅರ್ಚ—ಪೂಜೆಯನ್ನರ್ಪಿಸು । ಶೃಣ್ವಂತಂ—(ನಿಮ್ಮ ಸ್ತೋತ್ರಗಳನ್ನು) ಕೇಳುತ್ತಿರುವ ಇಂದ್ರನನ್ನು । ಮಹಯನ್—ಪೂಜಿಸುತ್ತ । ಅಭಿ ಷ್ಟುಹಿ—ಅವನ ಅಭಿಮುಖವಾಗಿದ್ದು ಸ್ತೋತ್ರಮಾಡು. । ಯಃ—ಯಾವ ಇಂದ್ರನು । ಧೃಷ್ಣುನಾ—(ಶತ್ರುಗಳನ್ನು) ಸದೆಬಡಿಯುವ । ಶವಸಾ—ಬಲದಿಂದ । ಉಭೇ ರೋದಸೀ—ದ್ಯಾವಾಪೃಥಿವಿಗಳೆರಡನ್ನೂ । ನ್ಯೃಂಜತೇ—ಅತ್ಯಂತವಾಗಿ ಅಲಂಕರಿಸುತ್ತಾನೋ । (ಸಃ—ಆ ಇಂದ್ರನು) ವೃಷಾ—(ಮಳೆಯನ್ನು) ಸುರಿಸಲು ಸಮರ್ಥನು । ವೃಷತ್ವಾ—ಈ ಸೇಚನ ಸಾಮರ್ಥ್ಯದಿಂದಲೇ । ವೃಷಭಃ—(ನಮ್ಮ) ಇಷ್ಟಾರ್ಥಗಳನ್ನು ಕೊಡುವವನು ಅಥವಾ ವೃಷ್ಟ್ಯುದಕಗಳ ದಾತನು. (ಎಂದು ಪ್ರಸಿದ್ಧಿಯು)



CC-0. Jangamwadi Math Collection. Digitized by eGangotri

|| ಭಾವಾರ್ಥ ||

ಎಲೈ ಅಧ್ವರ್ಯುವೇ, ಶಕ್ತಿವಂತನೂ ಪ್ರಜ್ಞಾವಂತನೂ ಆದ ಇಂದ್ರನಿಗೆ ಪೂಜೆಯನ್ನರ್ಪಿಸು. ನಿಮ್ಮ ಸ್ತೋತ್ರಗಳನ್ನು ಕೇಳುತ್ತಿರುವ ಇಂದ್ರನನ್ನು ಪೂಜಿಸುತ್ತ ಅವನ ಅಭಿಮುಖವಾಗಿ ನಿಂತು ಸ್ತೋತ್ರಮಾಡು. ಶತ್ರುಗಳನ್ನು ಸದೆಬಡಿಯುವ ಬಲದಿಂದ ದ್ಯಾವಾಪೃಥಿವಿಗಳೆರಡನ್ನೂ ಅಲಂಕರಿಸತಕ್ಕ ಇಂದ್ರನು ಮಳೆಯನ್ನು-ಸುರಿಸಲು ಸಮರ್ಥನು. ಮತ್ತು ತನ್ನ ಸಾಮರ್ಥ್ಯದಿಂದ ನಮ್ಮ ಇಷ್ಟಾರ್ಥಗಳನ್ನು ಕೊಡುವವನು.

English Translation.

Adore the wise and powerful Indra; adoring the listening Indra, praise him who adorns both heaven and earth by his irresestible might, he is the sender of showers, and by his bounty gratifies our desires.

|| ವಿಶೇಷ ವಿಷಯಗಳು ||

ಶಾಕಿನೇ—ಶಕ್ಲೃ ಶಕ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಶಾಕಶಬ್ದಕ್ಕೆ ಶಕ್ತಿ ಎಂದರ್ಥ. ಶಾಕವುಳ್ಳವನು ಶಾಕೀ ಎಂದರೆ ಸಂಪೂರ್ಣವಾದ ಶಕ್ತಿಯುಳ್ಳವನು ಎಂದರ್ಥ.

ಶೃಣ್ವಂತಂ—ಇದು ಇಂದ್ರ ಶಬ್ದಕ್ಕೆ ವಿಶೇಷಣವಾಗಿದೆ. ತನ್ನನ್ನು ಸ್ತುತಿಸುವವರ ಸ್ತೋತ್ರವನ್ನು ಮನಸ್ಸಿಟ್ಟು ಕೇಳುವವನು ಎಂದು ಅರ್ಥ.

ಅಭಿ ಷ್ಟುಹಿ—ಎದುರಿನಲ್ಲಿ ನಿಂತು ಅವನ ಸ್ತೋತ್ರವನ್ನು ಮಾಡು.

ಉಭೇ ರೋದಸೀ—ಎರಡಾದ ದ್ಯಾವಾಪೃಥಿವಿಗಳು. ಇಲ್ಲಿ ರೋದಶ್ಶಬ್ದದ ಮೇಲಿರುವ ದ್ವಿವಚನದಿಂದಲೇ ಉಭೇ ಎಂಬ ಪದದ ಅರ್ಥವು ಪ್ರತೀತವಾಗುತ್ತಿದ್ದರೂ ಮತ್ತೆ ಉಭಶಬ್ದ ಪ್ರಯೋಗವು ಸ್ಪಷ್ಟಾರ್ಥವಾಗಿದೆ ಎಂದು ತಿಳಿಯಬೇಕು.

ನ್ಯೃಂಜತೇ—ನಿತರಾಂ ಪ್ರಸಾಧಯತಿ । ಋಜಿ ಭೃಜೀ ಭರ್ಜನೇ ಎಂಬ ಧಾತುವಿನಿಂದ ನಿಷ್ಪನ್ನವಾಗಿ ನಿ ಎಂಬ ಉಪಸರ್ಗದಿಂದ ಕೂಡಿದ ಈ ಕ್ರಿಯಾಪದಕ್ಕೆ ಅಲಂಕಾರ ಹೊಂದುತ್ತದೆ ಎಂದರ್ಥ ಬರುವುದು. ಅದಕ್ಕೆ ಋಂಜತಿಃ ಪ್ರಸಾಧನಕರ್ಮಾ (ನಿ. ೬-೨೧) ಎಂಬ ನಿರುಕ್ತವೇ ಪ್ರಮಾಣವಾಗಿದೆ.

ವೃಷಾ—ವೃಷ್ಟಿಯನ್ನು ಸುರಿಸುವವನು.

ವೃಷತ್ವಾ—ವೃಷ್ಟಿಸೇಚನ ರೂಪವಾದ ಸಾಮರ್ಥ್ಯವುಳ್ಳವನು.

ವೃಷಭಃ—ಯಾಗಕರ್ತೃಗಳ ಇಷ್ಟಾರ್ಥಗಳನ್ನು ಸಲ್ಲಿಸುವವನು. ಅಥವಾ ವೃಷ್ಟಿರೂಪವಾದ ಉಪಕಾರದಿಂದ ಎಲ್ಲರನ್ನೂ ತೃಪ್ತಿಪಡಿಸುವವನು. (ಇಂದ್ರ)

|| ವ್ಯಾಕರಣಪ್ರಕ್ರಿಯಾ ||

ಅರ್ಚ—ಅರ್ಚ ಪೂಜಾಯಾಂ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಸೇರ್ಹ್ಯಪಿಚ್ಚ ಎಂಬುದರಿಂದ ಅದಕ್ಕೆ ಹಿ ಆದೇಶ. ಕರ್ತರಿ ಶಪ್ ಸೂತ್ರದಿಂದ ಶಪ್ ವಿಕರಣ. ಅಕಾರದ ಪರದಲ್ಲಿರುವುದರಿಂದ ಅತೋಹೇಃ ಎಂಬುದರಿಂದ ಹಿಗೆ ಲುಕ್. ಅರ್ಚ ಎಂದು ರೂಪವಾಗುತ್ತದೆ. ಪಾದಾದಿಯಲ್ಲಿ



CC-0. Jangamwadi Math Collection. Digitized by eGangotri

ಇರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್ ಪಿತ್ತಾದುದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ಧಾತುವಿನ ಸ್ವರವೇ ಉಳಿಯುತ್ತದೆ. ದ್ವ್ಯಚೋಽತಸ್ತಿಙಃ (ಪಾ. ಸೂ. ೬-೩-೧೩೫) ಎಂಬುದರಿಂದ ಸಂಹಿತಾದಲ್ಲಿ ಅಂತ್ಯಕ್ಕೆ ದೀರ್ಘ ಬರುತ್ತದೆ.

ಶಾಕಿನೇ—ಶಕ್ತಿಃ ಶಾಕಃ ಶಕ್ಲೃ ಶಕ್ತೌ ಧಾತು. ಭಾವಾರ್ಥದಲ್ಲಿ ಘಞ್ಪ್ರತ್ಯಯ. ಞಿತ್ತಾದುದರಿಂದ ಅತ ಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ. ಶಾಕಃ ಅಸ್ಯ ಅಸ್ತಿ (ಶಕ್ತಿಯು ಇವನಿಗೆ ಇದೆ) ಎಂಬ ಮತ್ವರ್ಥವಲ್ಲಿ ಅತ ಇನಿಠನೌ (ಪಾ. ಸೂ. ೫-೨-೧೧೫) ಎಂಬುದರಿಂದ ಇನಿ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಅಕಾರಕ್ಕೆ ಲೋಪ. ಶಾಕಿನ್ ಶಬ್ದವಾಗುತ್ತದೆ. ಚತುರ್ಥೀ ಏಕವಚನರೂಪ. ಕ್ರಿಯಾಗ್ರಹಣಂ ಕರ್ತವ್ಯಂ ಎಂಬ ವಚನದಿಂದ ಕರ್ಮಕ್ಕೆ ಸಂಪ್ರದಾನ ಸಂಜ್ಞೆ ಬರುವುದರಿಂದ ಚತುರ್ಥೀ ವಿಭಕ್ತಿ ಬಂದಿದೆ.

ಅಭಿ ಷ್ಟುಹಿ—ಷ್ಟುಞ್ ಸ್ತುತೌ ಧಾತು. ಲೋಟ್ ಮಧ್ಯಮಪುರುಷದ ಸಿಪಿಗೆ ಹಿ ಆದೇಶ ಬರುತ್ತದೆ ಆದಕ್ಕೆ ಅಪಿತ್ವ ಹೇಳಿರುವುದರಿಂದ ತನ್ನಿಮಿತ್ತಕವಾಗಿ ಧಾತುವಿಗೆ ಗುಣ ಬರುವುದಿಲ್ಲ. ಅದಾದಿಯಾದುದರಿಂದ ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ಶಪಿಗೆ ಲುಕ್. ಸ್ತುಹಿ ಎಂದು ರೂಪವಾಗುತ್ತದೆ. ಅಭಿ ಎಂಬ ಉಪಸರ್ಗದ ಸಂಬಂಧವಿರುವಾಗ ಉಪಸರ್ಗಾತ್ ಸುನೋತಿ (ಪಾ. ಸೂ. ೮-೩-೬೫) ಎಂಬ ಸೂತ್ರದಿಂದ ಧಾತುಸಂಬಂಧಿ ಸಕಾರಕ್ಕೆ ಷತ್ವ ಬರುತ್ತದೆ. ಷಕಾರ ಸಂಬಂಧ ತಕಾರಕ್ಕೆ ಬಂದುದರಿಂದ ಷ್ಟುನಾಷ್ಟುಃ ಎಂಬುದರಿಂದ ಷ್ಟುತ್ವದಿಂದ ಟಕಾರಾದೇಶ. ಷ್ಟುಹಿ ಎಂದಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ಧೃಷ್ಣುನಾ—ಞಿಧೃಷಾ ಪ್ರಾಗಲ್ಭ್ಯೇ ಧಾತು. ತ್ರಸಿಗೃಧಿಧೃಷಿಕ್ಷಿಪೇಃ ಕ್ನುಃ ಎಂಬುದರಿಂದ ಕ್ನುಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ತೃತೀಯಾ ಏಕವಚನದಲ್ಲಿ ಘಿಸಂಜ್ಞಾ ಇರುವುದರಿಂದ ನಾಭಾವ. ಪ್ರತ್ಯಯ ಸ್ವರ ಬರುತ್ತದೆ.

ವೃಷತ್ವಾ—ವೃಷು ಸೇಚನೇ ಧಾತು. ಭಾವಾರ್ಥದಲ್ಲಿ ತ್ವ ಪ್ರತ್ಯಯ ತೃತೀಯಾದಲ್ಲಿ ಸುಪಾಂಸುಲುಕ್ ಎಂಬುದರಿಂದ ವಿಭಕ್ತಿಗೆ ಆಕಾರ ಆದೇಶ. ವೃಷತ್ವಾ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸ್ಮೃಞ್ಜತೇ—ಋಜಿ ಭೃಜೀ ಭರ್ಜನೇ ಧಾತು. ಇದಿತ್ತಾದುದರಿಂದ ಇದಿತೋನುಮ್‌ಧಾತೋಃ ಎಂಬುದರಿಂದ ಧಾತುವಿಗೆ ನುಮಾಗಮ. ವ್ಯತ್ಯಯೋ ಬಹುಲಂ ಎಂಬುದರಿಂದ ಶಪಿಗೆ ಶ ವಿಕರಣ ಬರುತ್ತದೆ. ಋಂಜತೇ ಎಂದು ರೂಪವಾಗುತ್ತದೆ. ಉಪಸರ್ಗ ಸಂಬಂಧ ಬಂದಾಗ ಅದರ ಇಕಾರಕ್ಕೆ ಯಣಾದೇಶ. ಅದುಪದೇಶದ ಪರದಲ್ಲಿರುವುದರಿಂದ ತಾಸ್ಯನುದಾತ್ತೇತ್ ಸೂತ್ರದಿಂದ ಲಸಾರ್ವ ಧಾತುಕವು ಅನುದಾತ್ತ. ಆಗ ವಿಕರಣಸ್ವರ ಬರುತ್ತದೆ. ಹಿಂದೆ ಯಃ ಎಂದು ಯಚ್ಛಬ್ದದ ಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅರ್ಚಾ ದಿವೇ ಬೃಹತೇ ಶೂಷ್ಯಂ೧ ವಚಃ ಸ್ವಕ್ಷತ್ರಂ ಯಸ್ಯ ಧೃಷತೋ ಧೃಷನ್ಮನಃ ।
ಬೃಹಚ್ಛ್ರವಾ ಅಸುರೋ ಬರ್ಹಣಾ ಕೃತಃ ಪುರೋ ಹರಿಭ್ಯಾಂ ವೃಷಭೋ ರಥೋ ಹಿ ಷಃ ॥ ೩ ॥

॥ ಪದಪಾಠಃ ॥

ಅರ್ಚ । ದಿವೇ । ಬೃಹತೇ । ಶೂಷ್ಯಂ । ವಚಃ । ಸ್ವಽಕ್ಷತ್ರಂ । ಯಸ್ಯ । ಧೃಷತಃ । ಧೃಷತ್ । ಮನಃ ।
ಬೃಹತ್ಽಶ್ರವಾಃ । ಅಸುರಃ । ಬರ್ಹಣಾ । ಕೃತಃ । ಪುರಃ । ಹರಿಽಭ್ಯಾಂ । ವೃಷಭಃ । ರಥಃ । ಹಿ । ಸಃ ॥ ೩ ॥

॥ ಸಾಯಣಭಾಷ್ಯ ॥

ಹೇಸ್ತೋತಃ ದಿವೇ ದೀಪ್ತಾಯ ಬೃಹತೇ ಮಹತೇ ಇಂದ್ರಾಯ ಶೂಷ್ಯಂ । ಶೂಷಮಿತಿ ಸುಖ-
ನಾಮ । ತತ್ರ ಸಾಧು ಶೂಷ್ಯಂ । ತಾದೃಶಂ ಸ್ತುತಿಲಕ್ಷಣಂ ವಚೋಽರ್ಚ । ಉಚ್ಚಾರಯ । ಯಸ್ಯೇಂದ್ರ-
ಸ್ಯ ಧೃಷತಃ ಶತ್ರೂನ್ಧರ್ಷಯತಃ ಸ್ವಕ್ಷತ್ರಂ ಸ್ವಭೂತಬಲವನ್ಮನೋ ಧೃಷತ್ ಧೃಷ್ಟಂ ಭವತಿ । ಹಿ ಷಃ
ಸ ಹಿ ಸ ಖಲ್ವಿಂದ್ರೋ ಬೃಹಚ್ಛ್ರವಾಃ ಪ್ರಭೂತಯಶಾ ಅಸುರಃ ಶತ್ರೂಣಾಂ ನಿರಸಿತಾ । ಯದ್ವಾ । ಅಸುಃ
ಪ್ರಾಣೋ ಬಲಂ ವಾ । ತದ್ವಾನ್ । ರೋ ಮತ್ವರ್ಥೀಯಃ । ಅಥವಾ । ಅಸವಃ ಪ್ರಾಣಾಃ । ತೇನ ಚಾ-
ಪೋ ಲಕ್ಷ್ಯಂತೇ । ಪ್ರಾಣಾ ವಾ ಆಪಃ । ತೈ. ಬ್ರಾ. ೩-೨-೫-೨ । ಇತಿ ಶ್ರುತೇಃ । ತಾನ್ರಾತಿ ದದಾತೀತ್ಯ-
ಸುರಃ । ಬರ್ಹಣಾ ಶತ್ರೂಣಾಂ ನಿಬರ್ಹಯಿತಾ ಹರಿಭ್ಯಾಮಶ್ವಿಭ್ಯಾಂ ಪುರಸ್ಕೃತಃ ಪೂಜಿತಃ ವೃಷಭಃ
ಕಾಮಾನಾಂ ವರ್ಷಿತಾ ರಥೋ ರಂಹಣಶೀಲಃ ॥ ಶೂಷ್ಯಂ । ತತ್ರ ಸಾಧುರಿತಿ ಯತ್ । ಸರ್ವೇ ವಿಧಯಶ್ಛಂ-
ದಸಿ ವಿಕಲ್ಪ್ಯಂತ ಇತಿ ಯತೋಽನಾವ ಇತ್ಯಾದ್ಯುದಾತ್ತತ್ವಾಭಾವೇ ತಿತ್ಸ್ವರಿತಂ ಇತಿ ಸ್ವರಿತತ್ವಂ ।
ಧೃಷತಃ । ಞಿಧೃಷಾ ಪ್ರಾಗಲ್ಭ್ಯೇ । ವ್ಯತ್ಯಯೇನ ಶಃ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಬೃಹ-
ಚ್ಛ್ರವಾಃ । ಬೃಹಚ್ಛ್ರವೋ ಯಸ್ಯ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಅಸುರಃ । ಅಸು
ಕ್ಷೇಪಣೇ । ಅಸೇರುರನ್ । ಉ. ೧-೪೩ । ಇತ್ಯುರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಬರ್ಹಣಾ ।
ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ಪುರಃ । ಪೂರ್ವಾಧರೇತ್ಯಾದಿನಾಸಿಪ್ರತ್ಯಯಾಂತೋದಾತ್ತಃ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

(ಎಲೈ ಸ್ತೋತೃವೇ) ದಿವೇ—ಪ್ರಕಾಶಮಾನನೂ | ಬೃಹತೇ—ಅದ್ಭುತನೂ ಆದ ಇಂದ್ರನಿಗೆ | ಶೂಷ್ಯಂ—ಹರ್ಷದಾಯಕವಾದ | ವಚಃ—(ಸ್ತೋತ್ರರೂಪವಾದ) ವಾಕ್ಯನ್ನು | ಅರ್ಚ—(ಅರ್ಪಿಸು.) ಪಠಿಸು. | ಧೃಷತಃ—(ಶತ್ರುಗಳನ್ನು) ಭಯಪಡಿಸತಕ್ಕ ಅಥವಾ ನಿರ್ಭೀತನಾದ | ಯಸ್ಯ—ಯಾವ ಇಂದ್ರನ ಸ್ವಕ್ಷತ್ರಂ—ಸ್ವಶಕ್ತಿಯಿಂದ ಸ್ಥಿರವಾದ | ಮನಃ—ಮನಸ್ಸು | ಧೃಷತ್—(ಏಕಾಗ್ರ ಬುದ್ಧಿಯಿಂದ) ನೆಲೆಸಿದೆಯೋ | ಹಿ ಸಃ—ಅದೇ ಇಂದ್ರನು | ಬೃಹಚ್ಛ್ರವಾಃ—ಅಧಿಕವಾದ ಯಶಸ್ಸುಳ್ಳವನು. | ಅಸುರಃ—ಮಳೆಯನೀರನ್ನು ಸುರಿಸುವವನು. | ಬರ್ಹಣಾ—ಶತ್ರುಗಳನ್ನು ಹೊಡೆದೋಡಿಸುವವನು. | ರಥಃ—(ಈಕಡೆ) ಸಂಚರಿಸತಕ್ಕವನು. (ನಮ್ಮಕಡೆ ಬರತಕ್ಕವನು.)

|| ಭಾವಾರ್ಥ ||

ಎಲೈ ಸ್ತೋತೃವೇ, ಪ್ರಕಾಶಮಾನನೂ, ಅದ್ಭುತನೂ ಆದ ಇಂದ್ರನಿಗೆ ಹರ್ಷದಾಯಕವಾದ ಸ್ತೋತ್ರವನ್ನರ್ಪಿಸು. ಶತ್ರುಗಳನ್ನು ಭಯಪಡಿಸಿ ತಾನು ನಿರ್ಭೀತನಾದ ಯಾವ ಇಂದ್ರನ ಸ್ಥಿರವಾದ ಮನಸ್ಸು ಏಕಾಗ್ರ ಬುದ್ಧಿಯಿಂದ ನೆಲೆಸಿದೆಯೋ ಆ ಇಂದ್ರನು ಅಧಿಕವಾದ ಯಶಸ್ಸುಳ್ಳವನು. ಮಳೆಯ ನೀರನ್ನು ಸುರಿಸುವವನು. ಶತ್ರುಗಳನ್ನು ಹೊಡೆದೋಡಿಸಿ ನಮ್ಮ ಕಡೆಗೆ ಬರತಕ್ಕವನು.

## English Translation.

Offer pleasant laudations to the great and illustrious Indra, who is the victor of enemies and is firm-minded by his own strength. He, of great renown is obeyed by his horses, the showerer of bounties and impetuous, drives away the Asuras and enemies.

ದಿವೇ—ಅಂತರಿಕ್ಷವಾಚಕವಾದ ದಿವ್ ಶಬ್ದಕ್ಕೆ ಇಲ್ಲಿ ದೀಪ್ತ್ಯರ್ಥಕವಿದೆ. ಇದು ಬೃಹಚ್ಛಬ್ದಕ್ಕೆ ವಿಶೇಷಣವಾಗಿದೆ.

ಶೂಷ್ಯಮ್—ಶೂಷಂ ಎಂದರೆ ಸುಖ ಎಂದರ್ಥ. ಸುಖವನ್ನುಂಟುಮಾಡುವ ಸ್ತೋತ್ರವೇ ಶೂಷ್ಯವೆನಿಸುವುದು.

ಅಸುರಃ—ಶತ್ರುಗಳನ್ನು ನಿರಸನ ಮಾಡುವವನು. ಅಥವಾ ಅಸುಃ ಪ್ರಾಣೋ ಬಲಂ ವಾ ತದ್ವಾನ್ ಅಸುರಃ ಎಂದು ವಿವರಿಸಿದರೆ ವಿಶೇಷ ಬಲವುಳ್ಳವನು ಎಂದಾಗುವುದು. ಅಥವಾ ಅಸವಃ ಎಂದರೆ ಪ್ರಾಣಗಳು ಎಂದರ್ಥ. ಅದಕ್ಕೇ ನೀರೂ ಎಂದರ್ಥವಿದೆ. ಪ್ರಾಣಾ ವಾ ಆಪಃ (ತೈ. ಬ್ರಾ. ೩-೨-೫-೨) ಎಂಬ ಶ್ರುತಿಯೇ ಇದಕ್ಕೆ ಪ್ರಮಾಣ. ಅಂತಹ ನೀರನ್ನು ರಾತಿ ದದಾತಿ ಅಂದರೆ ವೃತ್ರಾದಿ ರಾಕ್ಷಸರು ಆಗಾಗ ಮೇಘರೂಪದಿಂದಿದ್ದು ಭೂಮಿಗೆ ಜಲರೂಪದಿಂದ ಬೀಳುತ್ತಿದ್ದರು. ಅಂತಹವರನ್ನು ಕೊಲ್ಲುವವನು. ಅಥವಾ ಸ್ವಯಂ ವೃಷ್ಟಿಯನ್ನು ಭೂಮಿಗೆ ಕರೆಸುವವನು (ಇಂದ್ರ).

ಬರ್ಹಣಾ—ಶತ್ರುಗಳನ್ನು ದಿಕ್ಕಾಪಾಲಾಗಿ ಚದುರಿಸುವವನು,

ವೃಷಭಃ—ಇಷ್ಟಾರ್ಥಗಳನ್ನು ವೃಷ್ಟಿಯಂತೆ ಕರುಣಿಸುವವನು.

ರಥಃ—ರಂಹಣಶೀಲಃ ವೇಗವಾಗಿ ಚಲಿಸುವ ಸ್ವಭಾವವುಳ್ಳವನು. ಶತ್ರುಗಳನ್ನು ಆಕ್ರಮಿಸವವನು. (ಇಂದ್ರ).



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

ದಿವೇ—ದಿವ್ ಶಬ್ದದ ಚತುರ್ಥೀಏಕವಚನಾಂತರೂಪ. ಊಡಿದಂ ಪದಾದಿ— (ಪಾ. ಸೂ. ೬-೧-೧೭೧). ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಶೂಷ್ಯಂ— ಶೂಷೇ ಸಾಧು ಶೂಷ್ಯಂ ತತ್ರ ಸಾಧುಃ (ಪಾ. ಸೂ. ೪-೪-೯೮) ಎಂಬುದರಿಂದ ಯತ್ ಪ್ರತ್ಯಯ. ಯಾದಿಯಾದುದರಿಂದ ಭಸಂಜ್ಞೆ ಬರುತ್ತದೆ. ಯಸ್ಯೇತಿಚ ಸೂತ್ರದಿಂದ ಅಕಾರಲೋಪ. ಶೂಷ್ಯ ಎಂದು ರೂಪವಾಗುತ್ತದೆ. ಯತ್ ತಿತ್ತಾದುದರಿಂದ ಯತೋಽನಾವಃ ಎಂಬುದರಿಂದ ಆದ್ಯುದಾತ್ತಸ್ವರವು ಪ್ರಾಪ್ತವಾದರೆ ಸರ್ವೇ ವಿಧಯಶ್ಛಂದಸಿ ವಿಕಲ್ಪ್ಯಂತೇ ಎಂಬ ವಚನದಿಂದ ಇಲ್ಲಿ ಅದ್ಯುದಾತ್ತಸ್ವರ ಬರುವುದಿಲ್ಲ. ತಿತ್ಸ್ವರಿತಂ (ಪಾ. ಸೂ. ೬-೧-೧೮೫) ಎಂಬುದರಿಂದ ಸ್ವರಿತಸ್ವರವು ಬರುತ್ತದೆ.

ಧೃಷತಃ—ಞಿ ಧೃಷಾ ಪ್ರಾಗಲ್ಭ್ಯೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ವ್ಯತ್ಯಯೋಬಹುಲಂ ಎಂಬುದರಿಂದ ಶಪಿಗೆ ಬದಲಾಗಿ ಶವಿಕರಣ. ಆದುದರಿಂದ ಲಘೂಪಧಗುಣ ಬರುವುದಿಲ್ಲ. ಸಾರ್ವಧಾತುಕಮಪಿತ್ ಎಂಬುದರಿಂದ ಅನು ಙಿತ್ತಾಗುತ್ತದೆ. ಅತೋಗುಣೇ ಎಂಬುದರಿಂದ ಪರರೂಪ. ಧೃಷತ್ ಶಬ್ದವಾಗುತ್ತದೆ. ಷಷ್ಠೀ ಏಕವಚನರೂಪ. ಶತುರನುಮೋನದ್ಯಜಾದೀ (ಪಾ. ಸೂ. ೬-೧-೧೭೩) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಬೃಹಚ್ಛ್ರವಾಃ—ಬೃಹತ್ ಶ್ರವಃ ಯಸ್ಯ ಬೃಹಚ್ಛ್ರವಾಃ ಬಹುವ್ರೀಹಿ ಸಮಾಸವಾದುದರಿಂದ ಬಹುವ್ರೀಹೌ ಪ್ರಕೃತ್ಯಾಪೂರ್ವಪದಂ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಅಸುರಃ—ಅಸುಕ್ಷೇಪಣೇ ಧಾತು. ದಿವಾದಿ. ಅಸೇರುರನ್ (ಉ. ಸೂ. ೧-೪೨) ಎಂಬುದರಿಂದ ಉರನ್ ಪ್ರತ್ಯಯ. ಅಸುರ ಎಂದಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಬರ್ಹಣಾ—ಸುಪಾಂಸುಲುಕ್— ಸೂತ್ರದಿಂದ ತೃತೀಯಾ ದ್ವಿವಚನಕ್ಕೆ ಆಕಾರ ಬರುತ್ತದೆ.

ಪುರಃ—ಪೂರ್ವಾಧರಾವರಾಣಾಂ—(ಪಾ. ಸೂ. ೫-೩-೩೯) ಎಂಬುದರಿಂದ ಅಸ್ತಾತ್ಯರ್ಥದಲ್ಲಿ ಅಸಿ ಪ್ರತ್ಯಯ. ತತ್ಸಂನಿಯೋಗದಿಂದ ಪೂರ್ವಶಬ್ದಕ್ಕೆ ಪುರ್ ಎಂಬ ಆದೇಶ ಬರುತ್ತದೆ. ಪುರಸ್ ಎಂತಾಗುತ್ತದೆ. ರುತ್ವವಿಸರ್ಗಗಳು ಬಂದರೆ ಪುರ್ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ತ್ವಂ ದಿವೋ ಬೃಹತಃ ಸಾನು ಕೋಪಯೋಽವ ತ್ಮನಾ ಧೃಷತಾ ಶಂಬರಂ ಭಿನತ್ ।

ಯನ್ಮಾಯಿನೋ ವ್ರಂದಿನೋ ಮಂದಿನಾ ಧೃಷಚ್ಛಿತಾಂ ಗಭಸ್ತಿಮಶನಿಂ ಪೃತನ್ಯಸಿ ॥ ೪ ॥





CC-0. Jangamwadi Math Collection. Digitized by eGangotri

‖ ಪದಪಾಠಃ ‖

ತ್ವಂ । ದಿವಃ । ಬೃಹತಃ । ಸಾನು । ಕೋಪಯಃ । ಅವ । ತ್ಮನಾ । ಧೃಷತಾ ।
ಶಂಬರಂ । ಭಿನತ್ ।
ಯತ್ । ಮಾಯಿನಃ । ವ್ರಂದಿನಃ । ಮಂದಿನಾ । ಧೃಷತ್ । ಶಿತಾಂ । ಗಭಸ್ತಿಂ ।
ಅಶನಿಂ । ಪೃತನ್ಯಸಿ ‖ ೪ ‖

‖ ಸಾಯಣಭಾಷ್ಯಂ ‖

ಹೇ ಇಂದ್ರ ತ್ವಂ ಬೃಹತೋ ಮರುತೋ ದಿವೋ ದ್ಯುಲೋಕಸ್ಯ ಸಾನು ಸಮುಚ್ಛ್ರಿತಮುಪರಿಪ್ರದೇಶಂ ಕೋಪಯಃ । ಅಕಂಪಯಃ । ಧೃಷತಾ ಶತ್ರೂಣಾಂ ಧರ್ಷಯಿತ್ರಾ ತ್ಮನಾತ್ಮನಾ ಸ್ವಯಮೇವ ಶಂಬರಮೇತತ್ಸಂಜ್ಞಮಸುರಮವಾಭಿನತ್ । ಅವಧೀಃ । ಯದ್ಯದಾ ವ್ರಂದಿನಃ ಶತ್ರೂನ್ ಜೇತುಂ ಮೃದುಭಾವಂ ಪ್ರಾಪ್ತಾನ್ । ಯದ್ವಾ । ವೃಂದಂ ಸಮೂಹಃ । ಅಸುರಸಮೂಹವತಃ । ಮಾಯಿನೋ ಮಾಯಾವಿನೋಽಸುರಾನ್ಮಂದಿನಾ ಹೃಷ್ಟೇನ ಧೃಷತ್ ಧೃಷತಾ ಪ್ರಾಗಲ್ಭ್ಯಂ ಪ್ರಾಪ್ನುವತಾ ಮನಸಾ ಯುಕ್ತಸ್ತ್ವಂ ಶಿತಾಂ ತೀಕ್ಷ್ಣೀಕೃತಾಂ ಗಭಸ್ತಿಂ ಹಸ್ತೇನ ಗೃಹೀತಾಂ । ಯದ್ವಾ । ಗಭಸ್ತಿರಿತಿ ರಶ್ಮಿನಾಮ । ತದ್ವತೀಮಶನಿಂ ವಜ್ರಂ ಪೃತನ್ಯಸಿ । ತಾನಸುರಾನ್ ಜೇತುಂ ಪೃತನಾರೂಪೇಣೇಚ್ಛಸಿ । ತಾನ್ಪ್ರತಿ ಪ್ರೇರಯಸೀತ್ಯರ್ಥಃ । ತದಾನೀಂ ಬೃಹತೋ ದಿವಃ ಸಾನು ಕೋಪಯ ಇತಿ ಪೂರ್ವೇಣಾನ್ವಯಃ ‖ ಕೋಪಯಃ । ಕುಪ ಕೋಪೇ । ಣ್ಯಂತಾಲ್ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ತ್ಮನಾ । ಮಂತ್ರೇಷ್ವಾಙ್ಯಾದೇರಾತ್ಮನ ಇತ್ಯಾಕಾರಲೋಪಃ । ಧೃಷತ್ । ಸುಪಾಂ ಸುಲುಗಿತಿ ತೃತೀಯಾಯಾ ಲುಕ್ । ಶಿತಾಂ । ಶೋ ತನೂಕರಣೇ । ನಿಷ್ಠಾಯಾಂ ಶಾಚ್ಛೋರನ್ಯತರಸ್ಯಾಂ । ಪಾ. ೭-೪-೪೧ । ಇತೀಕಾರಾದೇಶಃ । ಪೃತನ್ಯಸಿ । ಪೃತನಾಶಬ್ದಾತ್ಸುಪ ಆತ್ಮನಃ ಕ್ಯಚ್ । ಕವ್ಯಧ್ವರಪೃತನಸ್ಯೇಂತ್ಯಲೋಪಃ । ಪ್ರತ್ಯಯಸ್ವರಃ ‖

‖ ಪ್ರತಿಪದಾರ್ಥ ‖

(ಎಲೈ ಇಂದ್ರನೇ) ಧೃಷತಾ— (ಶತ್ರುವಿಗೆ) ಆಘಾತವನ್ನುಂಟುಮಾಡತಕ್ಕ । ತ್ಮನಾ— ಸ್ವಶಕ್ತಿಯಿಂದಲೇ (ನೀನೇ) । ಶಂಬರಂ— ಶಂಬರನೆಂಬ ರಾಕ್ಷಸನನ್ನು । ಅವಾಭಿನತ್— ಧ್ವಂಸಮಾಡಿದ್ದೀಯೆ । ಯತ್— ಯಾವಾಗ । ವ್ರಂದಿನಃ— (ತಮ್ಮ) ಶತ್ರುಗಳನ್ನು ಜಯಿಸಲು ಮೃದುಭಾವವನ್ನು ಹೊಂದಿದ ಅಥವಾ ಸಮೂಹದಿಂದ ಒಟ್ಟಿಗೆ ಸೇರಿದ । ಮಾಯಿನಃ— ಮೋಸಗಾರರಾದ ರಾಕ್ಷಸರನ್ನು । ಮಂದಿನಾ—ಹರ್ಷಿತವಾದದ್ದೂ । ಧೃಷತ್ (ಧೃಷತಾ)—(ಶತ್ರುನಾಶಕ್ಕೆ) ದೃಢನಿಶ್ಚಯಮಾಡಿದ್ದೂ ಆದ ಮನಸ್ಸಿನಿಂದ ಕೂಡಿದ (ನೀನು) । ಶಿತಾಂ— ತೀಕ್ಷ್ಣವಾದದ್ದೂ । ಗಭಸ್ತಿಂ— ಕಿರಣಗಳಿಂದ ವ್ಯಾಪ್ತವಾದದ್ದೂ ಅಥವಾ ಕೈಯಿನಿಂದ ಹಿಡಿದಿದ್ದೂ ಆದ । ಅಶನಿಂ— ವಜ್ರಾಯುಧವನ್ನು । ಪೃತನ್ಯಸಿ— (ಆ ಅಸುರರ ಮೇಲ್ಕೆ) ತೀವ್ರವಾಗಿ ಎಸೆದೆಯೋ, (ಆಗ) । ತ್ವಂ— ನೀನು । ಬೃಹತಃ— ಅತಿ ಮಹತ್ತಾದ । ದಿವಃ— ದ್ಯುಲೋಕದ । ಸಾನು— ಶಿಖರಪ್ರದೇಶವನ್ನು । ಕೋಪಯಃ— ನಡುಗಿಸಿದೆ.



CC-0. Jangamwadi Math Collection. Digitized by eGangotri

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಶತ್ರುನಾಶಕವಾದ ನಿನ್ನ ಸ್ವಶಕ್ತಿಯಿಂದಲೇ ಶಂಬರನೆಂಬ ರಾಕ್ಷಸನನ್ನು ಧ್ವಂಸ ಮಾಡಿದ್ದೀಯೆ. ಯಾವಾಗ ನಿನ್ನ ಶತ್ರುಗಳು ನಿನ್ನನ್ನು ಜಯಿಸಲು ಒಟ್ಟಿಗೆ ಸೇರಿದರೋ ಆಗ ಆ ಮಾಯಾವಿಗಳನ್ನು ನಿನ್ನ ಹೃಷ್ಟವಾದ ಮತ್ತು ದೃಢನಿಶ್ಚಯವುಳ್ಳ ಮನಸ್ಸಿನಿಂದ ತೀಕ್ಷ್ಣವಾದದ್ದೂ ಮತ್ತು ಕಿರಣಗಳಿಂದ ವ್ಯಾಪ್ತವಾದದ್ದೂ ಆದ ವಜ್ರಾಯುಧವನ್ನು ಆ ಅಸುರರ ಮೇಲೆ ತೀವ್ರವಾಗಿ ಎಸೆದೆ. ಆ ರಭಸದಿಂದ ನೀನು ಅತಿ ಮಹತ್ತಾದ ದ್ಯುಲೋಕದ ಶಿಖರಪ್ರದೇಶವನ್ನು ನಡುಗಿಸಿದೆ.

## English Translation.

You have shaken the summit of the spacious heavens; you have yourself killed Sambara by your foe-destroying might; you have hurled with exulting and determined mind the sharp and bright-eyed thunderbolt against the assembled Asuras.

### ವಿಶೇಷ ವಿಷಯಗಳು

ಇದಮುಕ್ತಂ ಭವತಿ । ಅನೇಕಮಾಯಾವ್ಯನುಚರಯುಕ್ತಃ ಶಂಬರ ಇಂದ್ರೇಣ ಸಹ ಯುದ್ಧಾಯಾಜಗಾಮ । ತದಾ ಹಸ್ತಗ್ರಹಣೋಚಿತಂ ತೀಕ್ಷ್ಣಂ ವಜ್ರಂ ಗೃಹೀತ್ವಾ ಸೋಮಪಾನೇನ ಜಾತಹರ್ಷ ಇಂದ್ರೋ ಧೈರ್ಯಯುಕ್ತಮನಾಃ ಸನ್ ಶಂಬರೇಣ ಸಹ ಯುದ್ಧಂ ಕೃತ್ವಾ ತಂ ಜಘಾನ । ತಸ್ಮಿನ್ಸಮಯೇ ಮಹಾನ್ ದ್ಯುಲೋಕೋಽಪಿ ಇಂದ್ರಭಿಯಸಾ ಚಕಂಪ ಇತಿ। ಮಾಯಾವಿಗಳೂ ದುಷ್ಟೋಪಾಯಚತುರರೂ ಆದ ಅನೇಕ ಅನುಚರರಿಂದ ಕೂಡಿ ಶಂಬರಾಸುರನು ಇಂದ್ರನೊಡನೆ ಯುದ್ಧಮಾಡಬೇಕೆಂದು ಬಂದನು ಆಗ ಇಂದ್ರನು ಸೋಮಪಾನಮಾಡಿ ಅದರಿಂದುಂಟಾದ ಹರ್ಷದಿಂದ ಧೈರ್ಯೋತ್ಸಾಹಗಳಿಂದ ಯುಕ್ತನಾಗಿ ಹರಿತವಾದ ತನ್ನ ವಜ್ರಾಯುಧವನ್ನು ಕೈಯಲ್ಲಿ ಹಿಡಿದು ಶಂಬರನೊಡನೆ ಯುದ್ಧಮಾಡಿ ಅವನನ್ನು ಕೊಂದನು. ಆ ಕಾಲದಲ್ಲಿ ಇಂದ್ರನ ಆರ್ಭಟದಿಂದ ಬಹು ದೊಡ್ಡದಾದ ಸ್ವರ್ಗಲೋಕವೂ ಸಹ ಭಯದಿಂದ ತತ್ತರಿಸಿತು.

ದಿವಃ ಸಾನು— ಸ್ವರ್ಗಲೋಕದ ಮೇಲುಭಾಗ. ಲೌಕಿಕವಾಗಿ ಸಾನುಶಬ್ದಕ್ಕೆ ಬೆಟ್ಟದ ತಪ್ಪಲು ಪ್ರದೇಶವೆಂದಿದ್ದರೂ ಇಲ್ಲಿ ಊರ್ಧ್ವಭಾಗವೆಂದು ಹೇಳಿದ್ದಾರೆ.

ತ್ಮನಾ—ಆತ್ಮನ್ ಶಬ್ದವು ಛಾಂದಸವಾಗಿ ಅಕಾರದಿಂದ ಬೇರೆಯಾಗಿ ಆತ್ಮನ್ ಶಬ್ದಾರ್ಥವನ್ನೇ ಕೊಡುವುದಾಗಿದೆ.

ಶಂಬರಂ—ಶಂಬರಾಸುರನೆಂಬವನು ಪ್ರಸಿದ್ಧನಾದ ರಾಕ್ಷಸ. ಇವನನ್ನು ಮನ್ಮಥನು ಕೊಂದನೆಂದು ಪುರಾಣದಲ್ಲಿ ಅನೇಕರೀತಿಯ ಕಥೆಗಳಿವೆ.

ವೃಂದಿನಃ—ಇದು ಮಾಯಿನಃ ಎಂಬ ಪದಕ್ಕೆ ವಿಶೇಷಣ. ಶತ್ರುಗಳನ್ನು ಗೆಲ್ಲುವುದಕ್ಕೋಸ್ಕರ ಕಪಟದಿಂದ ಮೃದುಭಾವವನ್ನು ಹೊಂದಿರುವವರು, ಅಥವಾ ಸರ್ವದಾ ಅಸುರಸಮೂಹವುಳ್ಳವರು.

ಮಂದಿನಾ—ಹೃಷ್ಟವಾದ ಮನಸ್ಸುಳ್ಳವನು. ಇದು ಇಂದ್ರನಿಗೆ ವಿಶೇಷಣವಾಗಿದೆ.



CC-0. Jangamwadi Math Collection. Digitized by eGangotri

ಧೃಷತಾ—ಶತ್ರುಧ್ವಂಸಮಾಡುವಂತಹ ನಿಸ್ಸ್ಮರಸ್ವಭಾವದಿಂದ ಕೂಡಿದವನು. (ಇಲ್ಲಿ ಇಂದ್ರನನ್ನು ಹೊಗಳುವ ಪ್ರಕರಣವಿದೆ)

ಗಭಸ್ತಿಂ—ಹಸ್ತೇನ ಗೃಹೀತಾ | ಯದ್ವಾ | ಗಭಸ್ತಿಃ ಇತಿ ರಶ್ಮಿನಾಮ ತದ್ವತೀಂ | ಇಂದ್ರನ ಕೈಯಿಂದ ಹಿಡಿಯಲ್ಪಡತಕ್ಕುದು, ಮತ್ತು ಪ್ರಕಾಶಮಾನವಾದ ಕಿರಣಗಳುಳ್ಳುದ್ದು ವಜ್ರಾಯುಧ.

ಪೃತನ್ಯಸಿ—ಸಂಗ್ರಾಮ ಅಥವಾ ಸೈನ್ಯ ಈ ಎರಡರ್ಥವೂ ಪೃತನಾಶಬ್ದಕ್ಕುಂಟು. ಇಲ್ಲಿ ವಜ್ರಾಯುಧವನ್ನು ಸೈನ್ಯವನ್ನಾಗಿ ಮಾಡಿಕೊಳ್ಳುವೆ ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

ಕೋಪಯಃ—ಕುಪ ಕೋಪೇ ಧಾತು. ಚುರಾದಿ. ಣ್ಯಂತದಮೇಲೆ ಲಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಣಿಚ್‌ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ ಬರುತ್ತದೆ. ಶಪ್ ನಿಮಿತ್ತಕವಾಗಿ ಣಿಚಿಗೆ ಗುಣಾಯಾದೇಶಗಳು ಬರುತ್ತವೆ. ಪ್ರತ್ಯಯಕ್ಕೆ ರುತ್ವವಿಸರ್ಗ ಬಂದರೆ ಕೋಪಯಃ ಎಂದು ರೂಪವಾಗುತ್ತದೆ. ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ತ್ಮನಾ—ಆತ್ಮನ್ ಶಬ್ದದ ತೃತೀಯಾ ಏಕವಚನಾಂತರೂಪ. ಆತ್ಮನಾ ಎಂದಿರುವಾಗ ಮಂತ್ರೇಷ್ವಾಙ್ಯಾದೇರಾತ್ಮನಃ (ಪಾ. ಸೂ. ೬-೪-೧೪೧) ಎಂಬುದರಿಂದ ಆಕಾರಕ್ಕೆ ಲೋಪಬರುತ್ತದೆ.

ಮಾಯಿನಃ — ಮಾಯಾ ಶಬ್ದವು ವ್ರೀಹ್ಯಾದಿಯಲ್ಲಿ ಪಠಿತವಾದುದರಿಂದ ವ್ರೀಹ್ಯಾದಿಭ್ಯಶ್ಚ— ಎಂಬುದರಿಂದ ಇನಿ ಪ್ರತ್ಯಯ ಬರುತ್ತದೆ. ಯಸ್ಯೇತಿಚ ಎಂಬುದರಿಂದ ಆಕಾರಕ್ಕೆ ಲೋಪ. ತೃತೀಯಾ ಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಇಕಾರವು ಉದಾತ್ತವಾಗುತ್ತದೆ.

ವೃಂದಿನಃ—ವೃಂದ ಮಸ್ಯಾಸ್ತೀತಿ ವೃಂದೀ. ಮತ್ವರ್ಥದಲ್ಲಿ ಅತ ಇನಿಠನೌ ಎಂಬುದರಿಂದ ಇನಿ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಅಕಾರಲೋಪ. ತೃತೀಯಾ ಬಹುವಚನಾಂತರೂಪ. ಪ್ರತ್ಯಯದ ಆದ್ಯುದಾತ್ತ ಸ್ವರದಿಂದ ಮಧ್ಯೋದಾತ್ತವಾಗುತ್ತದೆ.

ಧೃಷತ್—ಞಿಧೃಷಾ ಪ್ರಾಗಲ್ಭ್ಯೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ವ್ಯತ್ಯಯದಿಂದ ಶಪಿಗೆ ಶವಿಕರಣ. ಅತೋಗುಣೇ ಎಂಬುದರಿಂದ ಪರರೂಪ. ಧೃಷತ್ ಎಂದು ರೂಪವಾಗುತ್ತದೆ. ತೃತೀಯಾ ಏಕವಚನದಲ್ಲಿ ಸುಪಾಂ ಸುಲುಕ್—ಎಂಬುದರಿಂದ ವಿಭಕ್ತಿಗೆ ಲುಕ್. ವಿಕರಣಸ್ವರ ಸತಿಶಿಷ್ಟವಾಗುತ್ತದೆ.

ಶಿತಾಮ್—ಶೋ ತನೂಕರಣೇ ಧಾತು. ಕರ್ಮಣಿಯಲ್ಲಿ ನಿಷ್ಠಾ ಎಂಬುದರಿಂದ ಕ್ತಪ್ರತ್ಯಯ. ಶೋ+ತ ಎಂದಿರುವಾಗ ಅತ್ವಕ್ಕೆ ಅಪವಾದವಾಗಿ ಶಾಚ್ಛೋರನ್ಯತರಸ್ಯಾಮ್ (ಪಾ. ಸೂ. ೭-೪-೪೧) ಎಂಬುದರಿಂದ ವಿಕಲ್ಪವಾಗಿ ಇಕಾರಾದೇಶ ಬರುತ್ತದೆ. ಸ್ತ್ರೀತ್ವದಲ್ಲಿ ಅಜಾದ್ಯತಷ್ಟಾಪ್ ಎಂಬುದರೀದ ಟಾಪ್. ಪ್ರತ್ಯಯಸ್ವರದಿಂದ ಅಂತೋದಾತ್ತ. ಶಿತಾ ಎಂದು ರೂಪವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

ಪೃತನ್ಯಸಿ—ಪೃತನಾಂ ಆತ್ಮನಃ ಇಚ್ಛತಿ ಪೃತನ್ಯತಿ. ಸುಪ ಆತ್ಮನಃ ಕ್ಯಚ್ (ಪಾ. ಸೂ. ೩-೧-೮) ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. ಪೃತನಾ+ಯ ಎಂದಿರುವಾಗ ಕವ್ಯಧ್ವರಪೃತನ—(ಪಾ. ಸೂ. ೭-೪-೩೯) ಎಂಬುದರಿಂದ ಅಂತಲೋಪ ಬರುತ್ತದೆ. ಸನಾದ್ಯಂತಾಧಾತವಃ ಎಂಬುದರಿಂದ ಪೃತನ್ಯ ಎಂಬ ಕ್ಯಜಂತಕ್ಕೆ



CC-0. Jangamwadi Math Collection. Digitized by eGangotri

ಧಾತುಸಂಜ್ಞೆ ಬರುತ್ತದೆ. ಇದರಮೇಲೆ ಲಟ್ ಮಧ್ಯಮಪುರುಷ ಸಿಪ್ ಕರ್ತರಿಶಪ್ ಎಂಬುದರಿಂದ ಶಪ್. ಅತೋ ಗುಣೇ ಎಂಬುದರಿಂದ ಪರರೂಪ. ವೃತನ್ಯಸಿ ಎಂದು ರೂಪವಾಗುತ್ತದೆ. ಯತ್ ಎಂದು ಆದಿಯಲ್ಲಿ ಯತ್ಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಪ್ರತಿಷೇಧ ಬರುತ್ತದೆ. ಪ್ರತ್ಯಯಸ್ವರದಿಂದ ಯಕಾರೋತ್ತರ ಅಕಾರವು ಉದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ನಿಯದ್ವೃಣಕ್ಷಿ ಶ್ವಸನಸ್ಯ ಮೂರ್ಧನಿ ಶುಷ್ಣಸ್ಯ ಚಿದ್ವ್ರಂದಿನೋ ರೋರುವದ್ವನಾ ।
ಪ್ರಾಚೀನೇನ ಮನಸಾ ಬರ್ಹಣಾವತಾ ಯದದ್ಯಾ ಚಿತ್ಕೃಣವಃ ಕಸ್ತ್ವಾ ಪರಿ ॥ ೫ ॥

ಪದಪಾಠಃ

ನಿ । ಯತ್ । ವೃಣಕ್ಷಿ । ಶ್ವಸನಸ್ಯ । ಮೂರ್ಧನಿ । ಶುಷ್ಣಸ್ಯ । ಚಿತ್ । ವ್ರಂದಿನಃ । ರೋರುವತ್ । ವನಾ ।
ಪ್ರಾಚೀನೇನ । ಮನಸಾ । ಬರ್ಹಣಾವತಾ । ಯತ್ । ಅದ್ಯ । ಚಿತ್ । ಕೃಣವಃ । ಕಃ । ತ್ವಾ । ಪರಿ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ರೋರುವತ್ ಮೇಘೈರತ್ಯರ್ಥಂ ಶಬ್ದಯನ್ ಶ್ವಸನಸ್ಯ ।ಅಂತರಿಕ್ಷೇ ಶ್ವಸಿತೀತಿ ಶ್ವಸನೋ ವಾಯುಃ । ತಸ್ಯ ವ್ರಂದಿನಃ ಸ್ವಕಿರಣೈರಾಮ್ರಫಲಾದೀನ್ಮೃದುಭಾವಂ ಪ್ರಾಪಯತಃ ಶುಷ್ಣಸ್ಯ ಚಿತ್ ರಸಾನಾಂ ಶೋಷಯಿತುರಾದಿತ್ಯಸ್ಯಾಪಿ ಮೂರ್ಧನ್ಯುಪರಿಪ್ರದೇಶೇ ವನಾ ವನಾನ್ಯುದಕಾನಿ ಯದ್ಯಸ್ಮಾನ್ನಿವೃಣಕ್ಷಿ ಆವರ್ಜಯಸಿ । ಪ್ರಾಪಯಸೀತ್ಯರ್ಥಃ । ವಾಯುನಾ ಸೂರ್ಯಕಿರಣೈಶ್ಚ ವೃಷ್ಟಾ ಅಪಃ ಸೂರ್ಯಸ್ಯೋಪರಿ ಪುನರವಸ್ಥಾಪ್ಯಂತೇ । ತದೇವಾವಸ್ಥಾಪನಮಿಂದ್ರಃ ಕರೋತೀತ್ಯುಪಚರ್ಯತೇ । ಪ್ರಾಚೀನೇನ ಪ್ರಕರ್ಷೇಣ ಗಂತ್ರಾ । ಅಪರಾಙ್ಮುಖೇನೇತ್ಯರ್ಥಃ। ಬರ್ಹಣಾವತಾ । ನಿಬರ್ಹಯತೀತಿ ವಧಕರ್ಮಸು ಪಾಠಾದ್ಬರ್ಹಣಾ ಶತ್ರೂಣಾಂ ಹಿಂಸಾ । ತದ್ವತಾ । ಏವಂಭೂತೇನ ಮನಸಾ ಯುಕ್ತಸ್ತ್ವಂ ಯದ್ಯಸ್ಮಾದದ್ಯಾಚಿದದ್ಯಾಪಿ ಕೃಣವಃ । ಘರ್ಮಕಾಲೇ ಸೂರ್ಯಸ್ಯೋಪರಿ ಭೌಮಾನ್ ರಸಾನವಸ್ಥಾಪಯಸಿ ವರ್ಷಾಸು ಚ ವರ್ಷಯಸೀತಿ । ಯಸ್ಮಾದೇತತ್ಕುರುಷೇ ತಸ್ಮಾತ್ಕಾರಣಾತ್ತ್ವಾ ತ್ವಾಂ ಪರ್ಯುಪರಿ ಕೋ ವರ್ತತೇ ನ ಕೋಪೀತ್ಯರ್ಥಃ । ಅತಸ್ತ್ವಮೇವ ಸರ್ವಾಧಿಕ ಇತಿ ಭಾವಃ ॥ ವೃಣಕ್ಷಿ। ವೃಜೀ ವರ್ಜನೇ । ರೌಧಾದಿಕಃ । ಸಿಪಃ ಪಿತ್ವಾದನುದಾತ್ತತ್ವೇ ವಿಕರಣಸ್ವರಃ । ಯದ್ವೃತ್ತಯೋ-



CC-0. Jangamwadi Math Collection. Digitized by eGangotri

ಗಾದನಿಘಾತಃ । ಪ್ರಾಚೀನೇನ । ಪ್ರಪೂರ್ವಾದಂಚತೇರ್ಋತ್ವಿಗಿತ್ಯಾದಿನಾ ಕ್ವಿನ್ । ಅನಿದಿತಾಮಿತಿ ನಲೋಪಃ । ವಿಭಾಷಾಂಚೇರದಿಕ್ಸ್ತ್ರಿಯಾಮಿತಿ ಸ್ವಾರ್ಥೇ ಖಃ । ಖಸ್ಯೇನಾದೇಶಃ । ಅಚ ಇತ್ಯಕಾರಲೋಪೇ ಚಾವಿತಿ ದೀರ್ಘತ್ವಂ । ಖಪ್ರತ್ಯಯಸ್ಯ ಸತಿ ಶಿಷ್ಟತ್ವಾತ್ತದಾದೇಶಸ್ಯೋಪದೇಶಿವದ್ಭಾವೇನೇಕಾರ ಉದಾತ್ತಃ। ಅದ್ಯಾ ಚಿತ್ । ನಿಪಾತಸ್ಯ ಚೇತಿ ದೀರ್ಘತ್ವಂ । ಕೃಣವಃ । ಕೃವಿ ಹಿಂಸಾಕರಣಯೋಃ । ಇದಿತ್ವಾನ್ನುಮ್ । ಲೇಟಿ ಸಿಪ್ಯಡಾಗಮಃ । ಧಿನ್ವಿಕೃಣ್ವ್ಯೋರಚ್ಚೇತ್ಯುಪ್ರತ್ಯಯಃ । ವಕಾರಸ್ಯಾಕಾರಾದೇಶಶ್ಚ । ತಸ್ಯಾತೋ ಲೋಪೇ ಸತಿ ಸ್ಥಾನಿವದ್ಭಾವಾಲ್ಲಘೂಪಧಗುಣಾಭಾವಃ । ಗುಣಾವಾದೇಶೌ। ಆಗಮಾನುದಾತ್ತತ್ವೇ ವಿಕರಣಸ್ವರಃ । ಅತ್ರ ನಿರುಕ್ತಂ। ವೃಂದೀ ವೃಂದತೇರ್ವೃಧ್ನೋಭಾವಕರ್ಮಣಃ। ನಿವೃಣಕ್ಷಿ ಯಚ್ಛ್ವಸನಸ್ಯ ಮೂರ್ಧನಿ ಶಬ್ದಕಾರಿಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತೂ ರೋರೂಯಮಾಣೋ ವನಾನೀತಿ ವಾ ಧನಾನೀತಿ ವಾ । ನಿರು ೫-೧೬ । ಇತಿ । ಧನಾನೀತಿ ಪಕ್ಷೇ ಮೇಘಸ್ಯ ಧನಾನೀತಿ ವ್ಯಾಖ್ಯೇಯಂ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ, ನೀನು) ರೋರುವತ್—(ಮೇಘಗಳಿಂದ) ಗರ್ಜನಶಬ್ದವಮಾಡುತ್ತ । ಶ್ವಸನಸ್ಯ—ವಾಯುವಿನ ಮತ್ತು । ವೃಂದಿನಃ—(ಫಲಗಳನ್ನು) ಪಕ್ವಮಾಡಿಸುವವನೂ । ಶುಷ್ಣಸ್ಯ ಚಿತ್—ರಸಗಳನ್ನು ಹೀರುವವನೂ ಆದ ಸೂರ್ಯನ । ಮೂರ್ಧನಿ—ನೆತ್ತಿಯ ಮೇಲೆ । ವನಾ—ನೀರುಗಳನ್ನು । ಯತ್—ಯಾವಕಾರಣದಿಂದ ( ಯಾವಪ್ರಭಾವದಿಂದ ) । ನಿ ವೃಣಕ್ಷಿ—ಸುರಿಸುತ್ತೀಯೋ (ಸುರಿಸಿದ್ದೀಯೆ ಅದೂ ಅಲ್ಲದೆ) । ಪ್ರಾಚೀನೇನ—ಪ್ರಕರ್ಷವಾದ (ಸ್ಥಿರವಾದ) ಗಮನವುಳ್ಳದ್ದೂ । ಬರ್ಹಣಾವತಾ—ಶತ್ರುನಾಶದಲ್ಲಿ ತತ್ಪರವಾದದ್ದೂ ಆದ । ಮನಸಾ—ಮನಸ್ಸಿನಿಂದ ಕೂಡಿ (ನೀನು) । ಯತ್—ಯಾವಕಾರಣದಿಂದ । ಅದ್ಯಾ ಚಿತ್—ಈಗಲೂ ಕೂಡ । ಕೃಣವಃ—(ಮೇಲೆಹೇಳಿದ ಅಸಾಧಾರಣ ಕಾರ್ಯಗಳನ್ನು) ಮಾಡುತ್ತಿರುತ್ತೀಯೋ (ಆ ಕಾರಣದಿಂದ) । ತ್ವಾ ಪರಿ—ನಿನ್ನನ್ನು ಮೀರಿ । ಕಃ—ಯಾವನು ( ಇದ್ದಾನೆ) ॥

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ಗರ್ಜನಶಬ್ದಮಾಡುತ್ತ ವಾಯುವಿನ ತಲೆಯಮೇಲೂ; ಮತ್ತು ಫಲಗಳನ್ನು ಪಕ್ವಮಾಡಿಸುವವನೂ, ರಸಗಳನ್ನು ಹೀರುವವನೂ ಆದ ಸೂರ್ಯನ ನೆತ್ತಿಯಮೇಲೂ ನೀರುಗಳನ್ನು ಸುರಿಸುವುದರಿಂದಲೂ, ಮತ್ತು ಈಗಲೂ ಕೂಡ ನಿನ್ನ ಪ್ರಕರ್ಷಗಮನವುಳ್ಳದ್ದೂ, ಶತ್ರುನಾಶದಲ್ಲಿ ತತ್ಪರವಾದದ್ದೂ ಆದ ಮನಸ್ಸಿನಿಂದ ಕೂಡಿ ಮೇಲಿನ ಅಸಾಧಾರಣ ಕೆಲಸವನ್ನು ಮಾಡುತ್ತಿರುವುದರಿಂದ ನಿನ್ನನ್ನು ಮೀರಿದ ಪ್ರಭಾವವುಳ್ಳವರು ಯಾರು?

## English Translation.

Loud-shouting (Indra) you have poured the rain upon the wind and on the head of the maturing and absorbing (sun). Who is above you in the work that you, endowed with a mind, unaltered and bent upon destroying enemies have done to-day?



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಇದಮುಕ್ತಂ ಭವತಿ । ಇಂದ್ರಃ ಪುರಾ ಅಪ್‌ಶೋಷಣರೂಪಸ್ಯಾಸುರಸ್ಯ ಶುಷ್ಣನಾಮಕಸ್ಯ ಮೂರ್ಧಾನಂ ತದುಪರಿ ಮೇಘೋದಕಾನಾಂ ವೃಷ್ಟಿಂ ಕೃತ್ವಾ ಬಿಭೇದೇತಿ ಋಷಿವಚನೇಷು ಪ್ರಸಿದ್ಧಿಃ। ತಥೈವ ತನ್ಮೂರ್ಧಚ್ಛೇದನಂ । ಅಧುನಾಪಿ ಯದಿ ಕಾಮಯೇತ ತತ್ಕರ್ತುಂ ಶಕ್ನೋತಿ । ಏವಂ ಸತಿ ಕೋಽಸ್ತಿ ನಾಮ ಇಂದ್ರಾದಪಿ ಗರೀಯಾನ್ ? ನ ಕೋಽಪೀತ್ಯರ್ಥಃ ॥ ಪೂರ್ವದಲ್ಲಿ ಇಂದ್ರನು ಶುಷ್ಣನೆಂಬ ಹೆಸರಿನ ಅಸುರನನ್ನು ಸಂಹಾರಮಾಡಿದಾಗ ನೀರನ್ನು ಹೀರಿ ಎಲ್ಲವನ್ನು ಒಣಗಿಸುವ ಸ್ವಭಾವವುಳ್ಳ ಈ ಶುಷ್ಣಾಸುರನ ತಲೆಯಮೇಲೆ ಮೇಘದಿಂದ ಜಲವನ್ನು ಸುರಿಯುವಂತೆ ಮಾಡಿ ಅವನನ್ನು ಸಂಹಾರಮಾಡಿದನೆಂದು ಋಷಿವಚನವಿರುವುದು. ಈಗಲೂ ಇಂದ್ರನು ಇಷ್ಟಪಟ್ಟರೆ ಅಂತಹ ಕಾರ್ಯವನ್ನು ಮಾಡಲು ಸಮರ್ಥನಾಗಿರುವನು. ಹೀಗಿರುವಾಗ ಇಂದ್ರನಿಗಿಂತಲೂ ಹೆಚ್ಚಾದ ಶಕ್ತಿಸಾಮರ್ಥ್ಯಗಳುಳ್ಳವನು ಯಾವನು ತಾನೇ ಇರುವನು ? ಯಾರೂ ಇಲ್ಲವೆಂದಭಿಪ್ರಾಯವು.

ರೋರುವತ್—ಮೇಘಗಳ ಸಹಾಯದಿಂದ ವಿಶೇಷವಾಗಿ ಗರ್ಜಿಸುವವನು, ಇಂದ್ರನು.

ಶ್ವಸನಸ್ಯ—ಅಂತರಿಕ್ಷೇ ಶ್ವಸಿತೀತಿ ಶ್ವಸನಃ ವಾಯುಃ ಅಂತರಿಕ್ಷದಲ್ಲಿ ಉಸಿರುಬಿಡುವವನು ಎಂದರೆ ಸಂಚರಿಸುವವನು ಎಂಬರ್ಥದಲ್ಲಿ ಈ ಶಬ್ದವು ವಾಯುಶಬ್ದವಾಚ್ಯವಾಗಿದೆ.

ವ್ರಂದಿನಃ, ಶುಷ್ಣಸ್ಯ—ಈ ಎರಡು ಪದಗಳೂ ಸೂರ್ಯಾರ್ಥಕಗಳಾಗಿವೆ. ತನ್ನ ಕಿರಣಗಳ ಸಹಾಯದಿಂದ ಮಾವಿನಹಣ್ಣೇ ಮೊದಲಾದ ಕಠಿನ ವಸ್ತುಗಳನ್ನು ಮೃದುವಾಗಿ ಮಾಡುವವನು. ಹಾಗೂ ಈ ಭೂಮಿಯಲ್ಲಿ ಕಂಡುಬರುವ ಸಮಸ್ತ ರಸಗಳನ್ನೂ ಒಣಗಿಸುವವನು. ಈ ಎರಡು ವಿಧಗಳಾದ ಸಾಮರ್ಥ್ಯವೂ ಸೂರ್ಯನಲ್ಲಿರುವುದು. ಬಿಸಿಲುಕಾಲದಲ್ಲಿ ಭೂಗತವಾದ ಸಕಲರಸವನ್ನೂ ಸೂರ್ಯನ ಮೂಲಕ ಹೀರಿ ವರ್ಷಾಕಾಲದಲ್ಲಿ ಮತ್ತೆ ಸೂರ್ಯನಿಗೆ ಕೊಡುವ ಸಾಮರ್ಥ್ಯವು ಇಂದ್ರನಿಗೆ ಇರುವುದರಿಂದಲೇ ಇಂದ್ರನು ಸರ್ವಶ್ರೇಷ್ಠನೆಂದು ಹೇಳಲ್ಪಟ್ಟಿದೆ.

ವೃಣಕ್ಷಿ—ಆವರ್ಜಯಸಿ । ಸೂರ್ಯನಿಂದಲೂ ವಾಯುವಿನಿಂದಲೂ ಭೂಮಿಗೆ ಬಿದ್ದ ವೃಷ್ಟಿಯು ಮತ್ತೆ ಆವಿಯರೂಪದಿಂದ ಸೂರ್ಯನನ್ನೂ ವಾಯುವನ್ನೂ ಸೇರುವುದಷ್ಟೆ. ಈ ಕಾರ್ಯವು ಇಂದ್ರನಿಂದಲೇ ಆಗುವುದೆಂದು ಇಂದ್ರನನ್ನು ಸ್ತುತಿಸಲಾಗಿರುವುದು.

ಬರ್ಹಣಾವತಾ—ಬರ್ಹಣಾಶಬ್ದವು ಹಿಂಸಾರ್ಥದಲ್ಲಿ ಪಠಿತವಾಗಿರುವುದರಿಂದ ಬರ್ಹಣಾವತಾ ಎಂದರೆ ಹಿಂಸೆಯನ್ನುಂಟುಮಾಡುವುದು ಎಂದರ್ಥ. ಇದು ಇಂದ್ರನ ಮನಸ್ಸಿಗೆ ಅನ್ವಯಿಸುವುದು.

ಕೃಣವಃ—ಕೃವಿ ಹಿಂಸಾಕರಣಯೋಶ್ಚ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು, ಇಷ್ಟು ಅರ್ಥವನ್ನು ಕೊಡುವುದು.

ವ್ರಂದಿನಃ ಶುಷ್ಣಸ್ಯ—ಈ ಪದಗಳ ವಿವರಣೆಯು ನಿರುಕ್ತದಲ್ಲಿ ಈ ರೀತಿ ಹೇಳಲ್ಪಟ್ಟಿದೆ. ವ್ರಂದೀ ವ್ರಂದತೇರ್ಮೃದೂಭಾವಕರ್ಮಣಃ ಶುಷ್ಣಸ್ಯಾದಿತ್ಯಸ್ಯ ಚ ಶೋಷಯಿತೃ ರೋರೂಯಮಾಣೋ ವನಾನೀತಿ ವಾ ಧನಾನೀತಿ ವಾ (ನಿರು. ೫-೧೬).



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

ವೃಣಕ್ಷಿ—ವೃಜೀ ವರ್ಜನೇ ಧಾತು ರುಧಾದಿ. ಲಟ್‌ಮಧ್ಯಮಪುರುಷ ಏಕವಚನದಲ್ಲಿ ಸಿಪ್. ರುಧಾದಿಭ್ಯಃ ಶ್ನಮ್ ಎಂಬುದರಿಂದ ಶ್ನಮ್ ವಿಕರಣ. ಮಿತ್ತಾದುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ವೃನಜ್+ಸಿ ಎಂದಿರುವಾಗ ಚೋಃಕುಃ ಎಂಬುದರಿಂದ ಜಕಾರಕ್ಕೆ ಕುತ್ವದಿಂದ ಗಕಾರಾದೇಶ. ಖರಿಚ ಎಂಬುದರಿಂದ ಚರ್ತ್ವದಿಂದ ಕಕಾರ. ತಕಾರದಪರದಲ್ಲಿ ಸಕಾರ ಬಂದುದರಿಂದ ಆದೇಶಪ್ರತ್ಯಯಯೋಃ ಎಂಬುದರಿಂದ ಸಕಾರಕ್ಕೆ ಷತ್ವ. ಕಷಸಂಬಂಧ ಬಂದಾಗ ಕ್ಷಕಾರವಾಗುತ್ತದೆ. ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಋವರ್ಣಾನ್ನಸ್ಯ ಣತ್ವಂ ವಾಚ್ಯಂ ಎಂಬ ವಚನದಿಂದ ಣಕಾರಾದೇಶ. ವೃಣಕ್ಷಿ ಎಂದು ರೂಪವಾಗುತ್ತೆ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ವಿಕರಣಸ್ವರದಿಂದ ಮಧ್ಯೋದಾತ್ತವಾಗುತ್ತದೆ. ಸಿಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ಪ್ರಾಚೀನೇನ—ಪ್ರ ಉಪಸರ್ಗಪೂರ್ವಕವಾದ ಅಂಚು ಧಾತುವಿಗೆ ಋತ್ವಿಕ್ ದಧೃಕ್ (ಪಾ. ಸೂ. ೩-೨-೫೯) ಎಂಬುದರಿಂದ ಕ್ವಿನ್ ಪ್ರತ್ಯಯ. ಅನಿದಿತಾಂಹಲ ಉಪಧಾಯಾಃ ಕ್ಙಿತಿ ಎಂಬುದರಿಂದ ಉಪಧಾಭೂತನಕಾರಕ್ಕೆ ಲೋಪ. ಪ್ರಾಚ್ ಎಂದಿರುವಾಗ ವಿಭಾಷಾಂಚೇರದಿಕ್ ಸ್ತ್ರಿಯಾಂ (ಪಾ. ಸೂ. ೫-೪-೮) ಎಂಬುದರಿಂದ ಸ್ವಾರ್ಥದಲ್ಲಿ ಖ ಪ್ರತ್ಯಯ ಬರುತ್ತದೆ. ಅದಕ್ಕೆ ಆಯನೇಯೀನೀ ಎಂಬುದರಿಂದ ಈನಾದೇಶ. ಅಚಃ (ಪಾ. ಸೂ. ೬-೪-೧೩೮) ಲುಪ್ತನಕಾರವುಳ್ಳ ಅಂಚು ಧಾತುವಿನ ಅಕಾರಕ್ಕೆ ಲೋಪಬರುತ್ತದೆ ಎಂಬುದರಿಂದ ಭಸಂಜ್ಞಾ ಇರುವುದರಿಂದ ಅಕಾರಕ್ಕೆ ಲೋಪ. ಚೌ ಎಂಬುದರಿಂದ ಲುಪ್ತಾಕಾರನಕಾರವುಳ್ಳ ಅಂಚು ಧಾತುವು ಪರದಲ್ಲಿರುವುದರಿಂದ ಪೂರ್ವಪದಕ್ಕೆ ದೀರ್ಘಬಂದರೆ ಪ್ರಾಚೀನ ಎಂದು ಶಬ್ದವಾಗುತ್ತದೆ. ಇಲ್ಲಿ ಖ ಪ್ರತ್ಯಯವು ಸತಿಶಿಷ್ಟವಾಗುವುದರಿಂದ ಅದಕ್ಕೆ ಬಂದಿರುವ ಈನಾದೇಶಕ್ಕೆ ಉಪದೇಶವದ್ಭಾವ ಇರುವುದರಿಂದ ಈಕಾರವು ಉದಾತ್ತವಾಗುತ್ತದೆ. ಪ್ರಾಚೀನೇನ ತೃತೀಯಾ ಏಕವಚನರೂಪ.

ಅದ್ಯಾಚಿತ್—ಅದ್ಯ ಎಂಬುದು ನಿಪಾತ. ನಿಪಾತಸ್ಯ ಚ ಎಂಬುದರಿಂದ ದೀರ್ಘ ಬರುತ್ತದೆ.

ಕೃಣವಃ—ಕೃವಿ ಹಿಂಸಾಕರಣಯೋಶ್ಚ. ಧಾತು ಇದಿತ್ತಾದುದರಿಂದ ಇದಿತೋನುಮ್ ಧಾತೋಃ ಎಂಬುದರಿಂದ ಧಾತುವಿಗೆ ನುಮಾಗಮ. ಲೇಟ್ ಮಧ್ಯಮಪುರುಷಏಕವಚನದಲ್ಲಿ ಸಿಪ್. ಲೇಟೋಽಡಾಟೌ ಎಂಬುದರಿಂದ ಅದಕ್ಕೆ ಅಡಾಗಮ. ಧಿನ್ವಿಕೃಣ್ವ್ಯೋರಚ ಎಂಬುದರಿಂದ ಉ ಪ್ರತ್ಯಯ. ಧಾತುವಿನ ವಕಾರಕ್ಕೆ ಅಕಾರಾದೇಶ. ಅತೋಲೋಪಃ ಎಂಬುದರಿಂದ ಅದಕ್ಕೆ ಲೋಪ. ಅಲೋಪಕ್ಕೆ ಅಚಃಪರಸ್ಮಿನ್ ಪೂರ್ವವಿಧೌ ಎಂಬುದರಿಂದ ಸ್ಥಾನಿವದ್ಭಾವ ಬರುವುದರಿಂದ ಪುಗಂತಲಘೂಪಧಸ್ಯ ಚ ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಕೃನು+ಅಸ್ ಎಂದಿರುವಾಗ ಋಕಾರದ ಪರದಲ್ಲಿರುವುದರಿಂದ ನಕಾರಕ್ಕೆ ಣತ್ವ. ಅಸ್ ನಿಮಿತ್ತಕವಾಗಿ ಉ ಪ್ರತ್ಯಯಕ್ಕೆ ಗುಣ. ಅವಾದೇಶ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ಕೃಣವಃ ಎಂದು ರೂಪವಾಗುತ್ತದೆ. ಆಗಮಾ ಅನುದಾತ್ತಾಃ ಎಂಬುದರಿಂದ ಅಡಾಗಮ ಅನುದಾತ್ತ. ವಿಕರಣಸ್ವರ ಸತಿಶಿಷ್ಟವಾಗುವುದರಿಂದ ಣಕಾರೋತ್ತರಾಕಾರವು ಉದಾತ್ತವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ಇಲ್ಲಿ ನಿರುಕ್ತದಲ್ಲಿ ಇನ್ನೊಂದು ರೀತಿಯಿಂದ ಪ್ರಕ್ರಿಯೆಯನ್ನು ತೋರಿಸಿರುತ್ತಾರೆ. ವ್ಯಡೂಭಾವಕ್ರಿಯೆಯಲ್ಲಿ ವೃಂದ ಧಾತುವಿದೆ. ತಾಚ್ಛೀಲ್ಯದಲ್ಲಿ ಅದಕ್ಕೆ ಣಿನಿ ಪ್ರತ್ಯಯ. ವೃಂದಿನಃ ಎಂದು ಬಹುವಚನದಲ್ಲಿ ರೂಪವಾಗುತ್ತದೆ. ನಿವೃಣಕ್ತಿ ಯತ್ ಶೃಣಸ್ಯ ಮೂರ್ಧ್ನ ಶಬ್ದಕಾರಿಣಃ ಶುಷ್ಣಸ್ಯ ಆದಿತ್ಯಸ್ಯ ಚ ಶೋಷ-

ಯಿತೂ ರೋರೂಯಮಾಣೋ ವನಾನೀತಿ ಧನಾನೀತಿ ವಾ (ನಿರು. ೫-೧೫-೧೬) ಎಂದು ಅನ್ವಯಕ್ರಮವನ್ನು ಹೇಳಿರುತ್ತಾರೆ. ಧನಾನೀತಿ ಪಕ್ಷೇ ಮೇಘಸ್ಯ ಧನಾನೀತಿ ವ್ಯಾಖ್ಯೇಯಮ್ (ಮೇಘದ ಜಲವೆಂದರ್ಥ).

॥ ಸಂಹಿತಾಪಾಠಃ ॥

ತ್ವಮಾವಿಥ ನರ್ಯಂ ತುರ್ವಶಂ ಯದುಂ ತ್ವಂ ತುರ್ವೀತಿಂ ವಯ್ಯಂ
ಶತಕ್ರತೋ ।
ತ್ವಂ ರಥಮೇತಶಂ ಕೃತ್ವ್ಯೇ ಧನೇ ತ್ವಂ ಪುರೋ ನವತಿಂ ದಂಭಯೋ
ನವ ॥ ೬ ॥

॥ ಪದಪಾಠಃ ॥

ತ್ವಂ । ಆವಿಥ । ನರ್ಯಂ । ತುರ್ವಶಂ । ಯದುಂ । ತ್ವಂ । ತುರ್ವೀತಿಂ । ವಯ್ಯಂ ।
ಶತಕ್ರತೋ ಇತಿ ಶತಽಕ್ರತೋ ।
ತ್ವಂ । ರಥಂ । ಏತಶಂ । ಕೃತ್ವ್ಯೇ । ಧನೇ । ತ್ವಂ । ಪುರಃ । ನವತಿಂ । ದಂಭಯಃ ।
ನವ ॥ ೬ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಂ ನರ್ಯಾದೀಂಸ್ತ್ರೀನ್ರಾಜ್ಞ ಆವಿಥ ರರಕ್ಷಿಥ । ತಥಾ ಹೇ ಶತಕ್ರತೋ ಬಹುವಿಧಕರ್ಮನ್ ಬಹುವಿಧಪ್ರಜ್ಞ ವಾ ತ್ವಂ ವಯ್ಯಂ ವಯ್ಯಕುಲಜಂ ತುರ್ವೀತಿನಾಮಾನಂ ರಾಜಾನಮಾವಿಥೇತ್ಯೇವ । ಅಪಿ ಚ ತ್ವಂ ರಥಂ ರಂಹಣಸ್ವಭಾವಮೇತತ್ಸಂಜ್ಞಮೃಷಿಮೇತಶಮೇತತ್ಸಂಜ್ಞಕಂ ಧನೇ ಧನನಿಮಿತ್ತೇ ಸಂಗ್ರಾಮೇ ಕೃತ್ವ್ಯೇ ಕರ್ತವ್ಯೇ ಸತ್ಯಾವಿಥೇತಿ ಶೇಷಃ । ಯದ್ವಾ । ಪೂರ್ವೋಕ್ತಾನಾಂ ರಾಜ್ಞಾಂ ರಥಂ । ಏತಶಃ ಇತ್ಯಶ್ವನಾಮ । ಏತಶಮಶ್ವಂ ಚ ರರಕ್ಷಿಥೇತಿ ಯೋಜ್ಯಂ । ತಥಾ ತ್ವಂ ಶಂಬರಸ್ಯ ನವತಿಂ ನವ ನವೋತ್ತರನವತಿಸಂಖ್ಯಾಕಾಃ ಪುರಃ ಪುರಾಣಿ ದಂಭಯಃ ವ್ಯನೀನಶಃ ॥ ಏತಶಂ । ಏತಿ ಗಚ್ಛತೀತ್ಯೇತಶಃ । ಇಣ್ ಗತೌ । ಇಣಸ್ತಶಂತಶಸುನೌ । ಉ. ಸೂ. ೩-೧೪೯ ಇತಿ ತಶನ್ಪ್ರತ್ಯಯಃ । ಗುಣಃ । ಕೃತ್ವ್ಯೇ । ಕರ್ತವ್ಯ ಇತ್ಯಸ್ಯ ಶಬ್ದಸ್ಯ ವರ್ಣವಿಕಾರಃ ಪೃಷೋದರಾದಿತ್ವಾತ್ ॥





CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ) ತ್ವಂ—ನೀನು । ನರ್ಯಂ—(ದೊರೆಗಳಾದ) ನರ್ಯನನ್ನೂ । ತುರ್ವಶಂ—ತುರ್ವಶನನ್ನೂ । ಯದುಂ—ಯದುವನ್ನೂ । ಆವಿಥ—ರಕ್ಷಿಸಿರುವೆ । (ಹಾಗೆಯೇ) ಶತಕ್ರತೋ—ಅನೇಕಕರ್ಮಕಾರಿಯಾದ ಅಥವಾ ಬಹು ವಿಧವಾದ ಪ್ರಜ್ಞೆಯುಳ್ಳ (ಇಂದ್ರನೇ) । ತ್ವಂ—ನೀನು । ವಯ್ಯಂ—ವಯ್ಯವಂಶೋತ್ಪನ್ನನಾದ । ತುರ್ವೀತಿಂ—ತುರ್ವೀತಿಯೆಂಬ ದೊರೆಯನ್ನೂ (ರಕ್ಷಿಸಿರುವೆ) । ತ್ವಂ—ನೀನು । ರಥಂ—(ಅವರ) ರಥಗಳನ್ನೂ । ಏತಶಂ—ಕುದುರೆಗಳನ್ನೂ ಅಥವಾ [ರಥಂ—ರಥನೆಂಬ ಋಷಿಯನ್ನೂ । ಏತಶಂ—ಏತಶನೆಂಬ ಋಷಿಯನ್ನೂ] । ಧನೇ—ಧನನಿಮಿತ್ತವಾದ ಯುದ್ಧವು । ಕೃತ್ವ್ಯೇ—(ಅವಶ್ಯವಾಗಿ) ನಡೆಯಲೇಬೇಕಾದ ಸಂದರ್ಭದಲ್ಲಿ (ಕಾಪಾಡಿರುವೆ) । ತ್ವಂ—ನೀನು (ಶಂಬರಸ್ಯ—ಶಂಬರನ) । ನವತಿಂ ನವ—ತೊಂಭತ್ತೊಂಭತ್ತು । ಪುರಃ—ಪಟ್ಟಣಗಳನ್ನು । ದಂಭಯಃ—ಧ್ವಂಸಮಾಡಿದೆ

॥ ಭಾವಾರ್ಥ ॥

ಶತಕ್ರತುವಾದ ಎಲೈ ಇಂದ್ರನೇ, ನೀನು ನರ್ಯ, ತುರ್ವಶ ಮತ್ತು ಯದು ಎಂಬ ದೊರೆಗಳನ್ನೂ ಹಾಗೆಯೇ ವಯ್ಯವಂಶೋತ್ಪನ್ನನಾದ ತುರ್ವೀತಿಯೆಂಬ ದೊರೆಯನ್ನೂ ರಕ್ಷಿಸಿರುವೆ. ಅವರ ರಥಗಳನ್ನೂ ಕುದುರೆಗಳನ್ನೂ ಸಹ ಧನನಿಮಿತ್ತವಾಗಿ ಅತ್ಯವಶ್ಯವಾಗಿ ಮಾಡಬೇಕಾದ ಯುದ್ಧದಲ್ಲಿ ಕಾಪಾಡಿರುವೆ. ಮತ್ತು ಶಂಬರನ ತೊಂಭತ್ತೊಂಭತ್ತು ಪಟ್ಟಣಗಳನ್ನು ಧ್ವಂಸಮಾಡಿರುವೆ.

## English Translation.

You have protected Narya, Turvasa, Yadu and Turviti, of the race of Vayya; you have protected their chariots and horses in a battle undertaken for necessary wealth; you have destroyed the ninety-nine cities (of Sambara).

॥ ವಿಶೇಷ ವಿಷಯಗಳು ॥

ತುರ್ವಶಂ, ಯದುಂ—ಇವರ ವಿಷಯವಾಗಿ ನಾವು ಋ. ಸಂ. ಭಾಗ ೪, ಪೇಜು ೨೪೦-೨೪೨ರಲ್ಲಿ ಬರೆದಿರುವುದನ್ನು ನೋಡಿ.

ತುರ್ವೀತಿಂ—ಋ. ಸಂ. ಭಾಗ ೪, ಪೇಜು ೨೪೪ರಲ್ಲಿ ಇವನ ವಿಷಯವು ವರ್ಣಿತವಾಗಿರುವುದು.

ನರ್ಯಂ—ಒಬ್ಬ ರಾಜನ ಹೆಸರು. ಇವನ ಹೆಸರು ಈ ಋಕ್ಕಿನಲ್ಲಿಯೂ ಋ. ಸಂ. ೧-೧೧೨-೯ರಲ್ಲಿಯೂ ಪಠಿತವಾಗಿರುವುದು. ಬೇರೆಲ್ಲಿಯೂ ಇಲ್ಲವಾದ್ದರಿಂದ ಹೆಚ್ಚು ವಿಷಯಗಳು ನಮಗೆ ತಿಳಿದುಬಂದಿಲ್ಲ.

ಶತಕ್ರತೋ—ಬಹುವಿಧವಾದ ಕರ್ಮಗಳುಳ್ಳವನು, ಅಥವಾ ನಾನಾ ರೀತಿಯ ಪ್ರಜ್ಞೆಯುಳ್ಳವನು, ಅಥವಾ ನೂರು ಯಾಗಗಳನ್ನು ಮಾಡಿದವನು. ಇಂದ್ರ ಎಂದು ನಾನಾರೀತಿ ಅರ್ಥಮಾಡಿರುವರು.



CC-0. Jangamwadi Math Collection. Digitized by eGangotri

ವಯ್ಯಂ ತುರ್ವೀತಿಂ—ವಯ್ಯವೆಂಬುದು ಒಂದು ವಂಶಕ್ಕೆ ಸಂಬಂಧಿಸಿದ ಹೆಸರು. ಅದರಲ್ಲಿ ಜನಿಸಿದವನು ತುರ್ವೀತಿ ಎಂಬ ರಾಜ. ಅವನನ್ನು ಇಂದ್ರನು ರಾಕ್ಷಸರ ಬಾಧೆಯಿಂದ ತಪ್ಪಿಸಿ ಕಾಪಾಡಿದನು.

ಏತಶಂ ರಥಂ—ರಥ, ಏತಶ ಈ ಎರಡು ಶಬ್ದಗಳೂ ಬೇರೆ ಬೇರೆ ರಾಜರ ಹೆಸರನ್ನೂ ಸೂಚಿಸುತ್ತವೆ. ಅಥವಾ ರಥ ಶಬ್ದವು ಹಿಂದೆ ಹೇಳಿದ ಕೆಲವು ರಾಜರ ರಥ ಎಂಬರ್ಥವನ್ನೂ, ಏತಶ ಶಬ್ದವು ಕುದುರೆ ಎಂಬರ್ಥವನ್ನೂ ಕೊಡುವುದೆಂದೂ ಹೇಳಬಹುದು. ಕುದುರೆ ಎಂಬರ್ಥದಲ್ಲಿ ಏತಿ ಗಚ್ಛತೀತಿ ಏತಶಃ ಎಂದು ವ್ಯುತ್ಪತ್ತಿ ಮಾಡಬೇಕು.

ನವತಿಂ ನವ—ಇದಕ್ಕೆ ತೊಂಬತ್ತೊಂಭತ್ತು ಎಂದರ್ಥ. ಪುರಃ ಎಂಬ ಪದಕ್ಕೆ ಇದು ವಿಶೇಷಣವಾಗಿದೆ. ಶಂಬರಾಸುರನಿಗೆ ತೊಂಬತ್ತೊಂಭತ್ತು ಪಟ್ಟಣಗಳಿದ್ದುವು. ಅವೆಲ್ಲವನ್ನೂ ಇಂದ್ರನು ಧ್ವಂಸಮಾಡಿದನು ಎಂದು ಇಲ್ಲಿ ಇಂದ್ರನನ್ನು ಸ್ತುತಿಸಲಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

ಆವಿಥ—ಅವ ರಕ್ಷಣೇ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಪ್ರತ್ಯಯಕ್ಕೆ ಥಲಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಅತಆದೇಃ ಎಂಬುದರಿಂದ ದೀರ್ಘ. ಪ್ರತ್ಯಯಕ್ಕೆ ಇಡಾಗಮ ಆವಿಥ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಶತಕ್ರತೋ—ಆಮಂತ್ರಿತಸ್ಯ ಚ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಏತಶಮ್—ಏತಿ ಗಚ್ಛತಿ ಇತಿ ಏತಶಃ ಇಣ್ ಗತೌ ಧಾತು ಅದಾದಿ. ಇಣಸ್ತಶಂತಶಸುನೌ (ಉ. ಸೂ. ೩-೪೫೨) ಎಂಬುದರಿಂದ ತಶನ್ ಪ್ರತ್ಯಯ. ತಶನ್ ಪರದಲ್ಲಿರುವಾಗ ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಧಾತುವಿಗೆ ಗುಣ. ಏತಶ ಎಂದು ರೂಪವಾಗುತ್ತದೆ. ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಕೃತ್ವ್ಯೇ—ಪೃಷೋದರಾದೀನಿ ಯಥೋಪದಿಷ್ಟಂ ಎಂದುದರಿಂದ ಕರ್ತವ್ಯೇ ಎಂಬುದು ಅದರಲ್ಲಿ ಸೇರಿರುವುದರಿಂದ ವರ್ಣವಿಕಾರ ಲೋಪಗಳಿಂದ ಕೃತ್ವ್ಯೇ ಎಂದು ರೂಪವಾಗುತ್ತದೆ.

ದಂಭಯಃ—ದಂಭು ದಂಭೇ ಧಾತು ಚುರಾದಿ. ಲಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಕರ್ತರಿಶಪ್ ಎಂಬುದರಿಂದ ಣಿಜಂತದಮೇಲೆ ಶಪ್. ಣಿಚಿಗೆ ಶಬ್ನಿಮಿತ್ತಕವಾಗಿ ಗುಣ. ಅಯಾದೇಶ, ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ಬಹುಲಂ ಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ದಂಭಯಃ ಎಂದು ರೂಪವಾಗುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಸ ಘಾ ರಾಜಾ ಸತ್ಪತಿಃ ಶೂಶುವಜ್ಜನೋ ರಾತಹವ್ಯಃ ಪ್ರತಿ ಯಃ ಶಾಸ-
ಮಿನ್ವತಿ ।
ಉಕ್ಥಾ ವಾ ಯೋ ಅಭಿಗೃಣಾತಿ ರಾಧಸಾ ದಾನುರಸ್ಮಾ ಉಪರಾ ಪಿ-
ನ್ವತೇ ದಿವಃ ॥ ೭ ॥

॥ ಪದಪಾಠಃ ॥

ಸಃ । ಘ । ರಾಜಾ । ಸತ್ಽಪತಿಃ । ಶೂಶುವತ್ । ಜನಃ । ರಾತಽಹವ್ಯಃ । ಪ್ರತಿ ।
ಯಃ । ಶಾಸಂ । ಇನ್ವತಿ ।
ಉಕ್ಥಾ । ವಾ । ಯಃ । ಅಭಿಽಗೃಣಾತಿ । ರಾಧಸಾ । ದಾನುಃ । ಅಸ್ಮೈ । ಉಪರಾ ।
ಪಿನ್ವತೇ । ದಿವಃ ॥ ೭ ॥

॥ ಸಾಯಣಭಾಷ್ಯಂ ॥

ಸ ಘ ಸ ಖಲು ಜನೋ ಜಾತೋ ರಾಜಾ ರಾಜಮಾನಃ ಸತ್ಪತಿಃ ಸತಾಂ ಪಾಲಯಿತಾ ಯಜಮಾನಃ ಶೂಶುವತ್ । ಆತ್ಮಾನಂ ವರ್ಧಯತಿ । ಯ ಇಂದ್ರಂ ಪ್ರತಿ ರಾತಹವ್ಯೋ ದತ್ತಹವಿಷ್ಕಃ ಸನ್ ಶಾಸಮಿಂದ್ರಕರ್ತೃಕಮನುಶಾಸನಂ ಯದ್ವಾ ತಸ್ಯ ಸ್ತುತಿಮಿನ್ವತಿ ವ್ಯಾಪ್ನೋತಿ । ಉಕ್ಥಾ ವೋಕ್ಥಾನಿ ಶಸ್ತ್ರಾಣಿ ವಾ ಯಃ ಸ್ತೋತಾ ರಾಧಸಾ ಹವಿರ್ಲಕ್ಷಣೇನಾನ್ನೇನ ಸಹಾಭಿಗೃಣಾತಿ ತಸ್ಯಾಭಿಮುಖೀಕರಣಾಯ ಶಂಸತಿ । ಅಸ್ಮೈ ಸ್ತೋತ್ರೇ ದಾನುರಭಿಮತಫಲಪ್ರದಾತೇಂದ್ರ ಉಪರೋಪರಾನ್ಮೇಘಾನ್ । ಉಪರ ಇತಿ ಮೇಘನಾಮ । ಸ ಚ ಯಾಸ್ಕೇನೈವಂ ನಿರುಕ್ತಃ । ಉಪರ ಉಪಲೋ ಮೇಘೋ ಭವತ್ಯುಪರಮಂತೇಽಸ್ಮಿನ್ನಭ್ರಾಣ್ಯುಪರತಾ ಆಪ ಇತಿ ವಾ । ನಿರು ೨-೨೧ । ಇತಿ । ತಾನ್ ಮೇಘಾನ್ ದಿವಃ ಸಕಾಶಾತ್ಪಿನ್ವತೇ । ಸೇಚಯತಿ । ದೋಗ್ಧೀತಿ ಯಾವತ್ ॥ ಘ ಋಚಿ ತುನುಘೇತ್ಯಾದಿನಾ ದೀರ್ಘಃ । ಸತ್ಪತಿಃ । ಸತಾಂ ಪತಿಃ ಸತ್ಪತಿಃ । ಪತ್ಯಾವೈಶ್ವರ್ಯ ಇತಿ ಪೂರ್ವಪದಪ್ರಕೃತಿಸ್ವರತ್ವಂ । ಶೂಶುವತ್ । ಟುಓಶ್ವಿ ಗತಿವೃದ್ಧ್ಯೋಃ । ಣ್ಯಂತಾದ್ವರ್ತಮಾನೇ ಲುಙಿ ಚ್ಲೇಶ್ಚಙಾದೇಶೇ ಸಂಪ್ರಸಾರಣಂ ಸಂಪ್ರಸಾರಣಾಶ್ರಯಂ ಚ ಬಲೀಯಃ । ಮ. ೬-೧-೧೭-೨ । ಇತ್ಯಂತರಂಗಮಪಿ ವೃದ್ಧ್ಯಾದಿಕಂ ಬಾಧಿತ್ವಾ ಣೌ ಚ ಸಂಶ್ಚಙೋಃ । ಪಾ. ೬-೧-೩೧ । ಇತಿ ಸಂಪ್ರಸಾರಣಂ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾದ್ವೃದ್ಧ್ಯಭಾವೇ ದ್ವಿರ್ವಚನಾದಿ । ಉವಙಾದೇಶಃ । ರಾತಹವ್ಯಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಶಾಸಂ । ಶಾಸು ಅನುಶಿಷ್ಟಾವಿತ್ಯಸ್ಮಾದ್ಭಾವೇ ಘಞ್ ಕರ್ಷಾತ್ವತ ಇತ್ಯಂತೋದಾತ್ತತ್ವೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ವೃಷಾದಿರ್ವಾ ದ್ರಷ್ಟವ್ಯಃ । ಸಹ್ಯಾಕೃತಿಗಣ ಇತ್ಯುಕ್ತಂ । ಯದ್ವಾ । ಶಸ್ಸು ಸ್ತುತಾವಿತ್ಯಸ್ಮಾದ್ಘಞಿ ವ್ಯತ್ಯಯೇನ ನಲೋಪಃ ।



CC-0. Jangamwadi Math Collection. Digitized by eGangotri

ಇನ್ವತಿ । ಇವಿ ವ್ಯಾಪ್ತೌ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಯದ್ವೃತ್ತಯೋಗಾದನಿಘಾತಃ । ಅಭಿಗೃಣಾತಿ । ಗೄ ಶಬ್ದೇ । ಕ್ರ್ಯಾದಿಕಃ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ತಿಪಃ ಪಿತ್ತ್ವಾದನುದಾತ್ತತ್ವೇ ವಿಕರಣಸ್ವರಃ । ಪೂರ್ವವನ್ನಿಘಾತಾಭಾವಃ । ಉಪರಾ । ಸುಪಾಂ ಸುಲುಗಿತಿ ಶಸಃ ಪೂರ್ವಸವರ್ಣದೀರ್ಘತ್ವಂ । ಪಿನ್ವತೇ । ಪಿವಿ ಮಿವಿ ಣಿವಿ ಸೇಚನೇ । ವ್ಯತ್ಯಯೇನಾತ್ಮನೇಪದಂ ॥

॥ ಪ್ರತಿಪದಾರ್ಥ ॥

ಯಃ—ಯಾವನು । (ಇಂದ್ರಂ) ಪ್ರತಿ—ಇಂದ್ರನನ್ನು ಕುರಿತು । ರಾತಹವ್ಯಃ—ಹವಿಸ್ಸನ್ನು ಅರ್ಪಿಸುತ್ತ । ಶಾಸಂ—ಇಂದ್ರನ ಆಜ್ಞೆಯನ್ನು ಅಥವಾ ಸ್ತೋತ್ರವನ್ನು । ಇನ್ವತಿ—ನೆರವೇರಿಸುತ್ತಾನೋ, ಮತ್ತು ಯಃ—ಯಾವನು । ಉಕ್ಥಾ ವಾ—ಉಕ್ಥವನ್ನಾಗಲಿ ಅಥವಾ ಶಸ್ತ್ರವನ್ನಾಗಲಿ (ಉಕ್ಥರೂಪವಾದ ಅಥವಾ ಶಸ್ತ್ರರೂಪವಾದ ಮಂತ್ರವನ್ನು) । ರಾಧಸಾ—ಹವಿಸ್ಸಿನರೂಪದ ಅನ್ನದೊಡನೆ । ಅಭಿಗೃಣಾತಿ—(ತನ್ನ) ಅಭಿಮುಖವಾಗಿ ಮಾಡಿಕೊಳ್ಳಲು ಪಠಿಸುತ್ತಾನೋ । ಸ ಘ—ಅದೇ । ಜನಃ—ಮಾನವನೂ । ರಾಜಾ—ಪ್ರಕಾಶಿಸುವವನೂ । ಸತ್ಪತಿಃ—ಸಜ್ಜನರ ಪಾಲಕನೂ ಆದ ಯಜಮಾನನು । ಶೂಶುವತ್—(ತನ್ನನ್ನು) ವೃದ್ಧಿಪಡಿಸಿಕೊಳ್ಳುತ್ತಾನೆ । ಅಸ್ಮೈ—ಇಂತಹ ಸ್ತೋತೃವಿಗಾಗಿ । ದಾನುಃ—ಇಷ್ಟಾರ್ಥಗಳನ್ನು ಕೊಡತಕ್ಕ ಇಂದ್ರನು । ಉಪರಾ—ಮೇಘಗಳನ್ನು । ದಿವಃ—ಅಂತರಿಕ್ಷದಿಂದ । ಪಿನ್ವತೇ—(ಮಳೆಯನ್ನು) ಸುರಿಸುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ಯಾವ ಸ್ತೋತೃವು ಇಂದ್ರನಿಗೆ ಹವಿಸ್ಸನ್ನು ಅರ್ಪಿಸುತ್ತ ಉಕ್ಥ ಮತ್ತು ಶಸ್ತ್ರಮಂತ್ರಗಳನ್ನು ಆ ಹವಿಸ್ಸಿನರೂಪದ ಅನ್ನದೊಡನೆ ಪಠಿಸುತ್ತಾನೆಯೋ ಆ ಮಾನವನೂ, ಪ್ರಕಾಶಿಸುವವನೂ ಮತ್ತು ಸಜ್ಜನರ ಪಾಲಕನೂ ಆದ ಯಜಮಾನನು ವೃದ್ಧಿಯನ್ನು ಹೊಂದುತ್ತಾನೆ. ಮತ್ತು ಇಂತಹ ಸ್ತೋತೃವಿಗಾಗಿ ಇಷ್ಟಾರ್ಥಪ್ರದನಾದ ಇಂದ್ರನು ಅಂತರಿಕ್ಷದಿಂದ ಮೇಘಗಳನ್ನು ಕರೆದು ಮಳೆಯನ್ನು ಸುರಿಸುತ್ತಾನೆ.

## English Translation.

That eminent person, the cherisher of the pious, advances his own prosperity, who while offering oblations to Indra, sings his praise; or who, along with the offerings he presents, recites hymns in honour of him; for him the bounteous Indra causes the clouds to rain from heaven.

॥ ವಿಶೇಷ ವಿಷಯಗಳು ॥

ಇದಮುಕ್ತಂ ಭವತಿ । ಯೋ ಜನೋ ದತ್ತಹವಿಷ್ಕಃ ಸನ್ ತಥಾ ದತ್ತರಾಧಾಃ ಸನ್ನಿಂದ್ರಸ್ಯ ಶಾಸನಂ ಪಾಲಯತಿ ತಥಾ ತಸ್ಯ ಸ್ತುತೀರ್ಗಾಯತಿ ಸ ನಿಃಸಂಶಯಂ ಸತ್ಪತೀ ರಾಜಾ ಭೂತ್ವಾ ವರ್ಧತೇ ತದರ್ಥೇ ಚ ದಿವ್ಯಾ ಮೇಘೋದಕವೃಷ್ಟಿರ್ವಿಪುಲಂ ಯಥಾ ತಥಾ ಪತತೀತಿ ॥ ಯಜ್ಞಮಾಡುವ ಯಾವ ಯಜಮಾನನು ಇಂದ್ರನಿಗೆ ಹವಿರಾದಿಗಳನ್ನು ಅರ್ಪಿಸಿ ಅವನ ಆಜ್ಞೆಯನ್ನು ಸಂಪಾಲಿಸುತ್ತಾ ಸ್ತೋತ್ರಾದಿಗ



CC-0. Jangamwadi Math Collection. Digitized by eGangotri

ಳಿಂದ ಇಂದ್ರನನ್ನು ಸಂತೋಷಗೊಳಿಸುವನೋ ಅಂತಹ ಯಜಮಾನನು ರಾಜನಾಗುವನು. ಅವನ ಅನುಕೂಲಕ್ಕಾಗಿ ಮೇಘವು ವಿಶೇಷವಾಗಿ ವೃಷ್ಟಿಯನ್ನು ಸುರಿಸುವುದು. ಈ ವಿಷಯದಲ್ಲಿ ಸಂಶಯವಿಲ್ಲ ಎಂದಭಿಪ್ರಾಯವು.

ಘಾ—ಇದು ಘ ಶಬ್ದ. ಇದಕ್ಕೆ ಖಲು (ಅಷ್ಟೆ, ಆದರೋ) ಎಂದರ್ಥ- ಋಚಿ ತುನುಘ ಎಂಬ ಸೂತ್ರದಿಂದ ಸಂಹಿತೆಯಲ್ಲಿ ದೀರ್ಘ ಬಂದಿದೆ.

ಸತ್ಪತಿಃ—ಇಲ್ಲಿ ಸತ್ಪುರುಷರನ್ನು ಕಾಪಾಡುವವನು, ಯಾಗದೀಕ್ಷಿತನಾದ ಯಜಮಾನನು ಎಂದರ್ಥವು

ಶುಶೂವತ್—ಟು ಓಶ್ವಿ ಗತಿವೃದ್ಧ್ಯೋಃ ಎಂಬ ವೃದ್ಧ್ಯರ್ಥಕವಾದ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು, ತನ್ನನ್ನೇ ತಾನು ವೃದ್ಧಿಪಡಿಸಿಕೊಳ್ಳುವನು ಎಂಬರ್ಥವನ್ನು ಸೂಚಿಸುವುದು.

ರಾತಹವ್ಯಃ—ರಾತಂ ಹವ್ಯಂ ಯೇನ ಸಃ ಎಂಬ ವ್ಯುತ್ಪತ್ತಿಯಿಂದ ಹವಿಸ್ಸನ್ನು ದೇವತೆಗಳಿಗೆ ಅರ್ಪಿಸಿದವನು ಎಂದರ್ಥವಾಗುವುದು.

ಶಾಸಂ—ಶಾಸು ಅನುಶಿಷ್ಟೌ ಎಂಬ ಧಾತುವಿನಿಂದ ಉಂಟಾದ ಈ ಶಬ್ದವು ಇಂದ್ರನ ಅಪ್ಪಣೆ ಎಂದೂ ಅಥವಾ ಇಂದ್ರನ ಸ್ತುತಿ ಎಂದೂ ಅರ್ಥಕೊಡುವುದು.

ರಾಧಸಾ—ಹವಿರ್ಲಕ್ಷಣದಿಂದ ಕೂಡಿದ ಅನ್ನದಿಂದ.

ಉಕ್ಥಾ ವಾ—ಇಲ್ಲಿ ಉಕ್ಥಶಬ್ದಕ್ಕೆ ಶಸ್ತ್ರಗಳೆಂಬ ಮಂತ್ರವಿಶೇಷಗಳು ಎಂದರ್ಥ.

ಉಪರಾ—ಉಪರಾ ಎಂಬುದು ಮೇಘದ ಹೆಸರು. ಇದಕ್ಕೆ ಉಪರ ಉಪಲೋ ಮೇಘೋ ಭವತ್ಯುಪರಮತೇಽಸ್ಮಿನ್ನಭ್ರಾಣ್ಯುಪರತಾ ಆಪ ಇತಿ ವಾ (ನಿರು. ೨-೨೧) ಎಂಬ ನಿರುಕ್ತವು ಪ್ರಮಾಣವಾಗಿದೆ.

ದಾನುಃ—ಯಜಮಾನರು ಕೇಳಿಕೊಳ್ಳುವ ಸಕಲ ಇಷ್ಟಾರ್ಥಗಳನ್ನೂ ಕೊಡುವವನು ಇಂದ್ರನು.

॥ ವ್ಯಾಕರಣಪ್ರಕ್ರಿಯಾ ॥

ಘ—ಋಚಿ ತುನುಘ—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಸತ್ಪತಿಃ—ಸತಾಂ ಪತಿಃ ಸತ್ಪತಿಃ ಪತ್ಯಾವೈಶ್ವರ್ಯೇ (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಶೂಶುವತ್—ಟು ಓಶ್ವಿ ಗತಿವೃದ್ಧ್ಯೋಃ ಧಾತು ಹೇತುಮತಿಚ ಎಂಬುದರಿಂದ ಪ್ರಯೋಜಕವ್ಯಾಪಾರವು ತೋರುವುದರಿಂದ ಣಿಚ್. ಸನಾದ್ಯಂತಾಧಾತವಃ ಸೂತ್ರದಿಂದ ಣಿಜಂತಕ್ಕೆ ಧಾತುಸಂಜ್ಞಾ. ವರ್ತಮಾನಾರ್ಥದಲ್ಲಿ ಛಂದಸಿಲುಙ್‌ಲಙ್‌ಲಿಟಃ ಎಂಬುದರಿಂದ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್. ಇತಶ್ಚ ಎಂಬುದರಿಂದ ಇಕಾರಲೋಪ. ಚ್ಲಿಲುಙಿ ಎಂಬುದರಿಂದ ಪ್ರಾಪ್ತವಾದ ಚ್ಲಿಗೆ ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್ (ಪಾ- ಸೂ. ೩-೧-೪೮) ಎಂಬುದರಿಂದ ಚಙ್. ಧಾತುವಿನ ಆದಿಯಲ್ಲಿರುವ ಟು ಮತ್ತು ಓ ಎಂಬುದು ಇತ್ತಾಗುತ್ತದೆ. ಆದುದರಿಂದ ತಸ್ಯಲೋಪಃ ಎಂಬುದರಿಂದ ಅದಕ್ಕೆ ಲೋಪ. ಣಿಚ್ ಪರದಲ್ಲಿರುವಾಗ ಅಂತರಂಗವಾದುದರಿಂದ ವೃದ್ಧಿಯು ಪ್ರಾಪ್ತವಾದರೆ ಸಂಪ್ರಸಾರಣಂ ತದಾಶ್ರಯಂಚಕಾರ್ಯಂ ಚ ಬಲೀಯಃ (ಪಾ. ಮ. ೬-೧-೧೭-೨) ಎಂಬುದರಿಂದ ಅಂತರಂಗವಾದ ವೃದ್ಧ್ಯಾದಿಯನ್ನು ಬಾಧಿಸಿ ಣೌಚಸಂಶ್ಚಙೋಃ (ಪಾ. ಸೂ. ೬-೧-೩೧) ಎಂಬುದರಿಂದ ಧಾತುವಿನ ವಕಾರಕ್ಕೆ ಸಂಪ್ರಸಾರಣ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವ



CC-0. Jangamwadi Math Collection. Digitized by eGangotri

ರೂಪ. ಶು+ಇ+ಅ+ತ್ ಎಂದಿರುವಾಗ ಸಂಜ್ಞಾಪೂರ್ವಕೋವಿಧಿರನಿತ್ಯಃ ಎಂಬ ವಚನದಿಂದ ವೃದ್ಧಿಯು ಬಾರದಿರುವಾಗ ಚಙ್‌ನಿಮಿತ್ತಕವಾದ ದ್ವಿತ್ವ. ಣೇರನಿಟಿ ಎಂಬುದರಿಂದ ಣಿ ಲೋಪ. ಶುಶು+ಅತ್ ಎಂದಿರುವಾಗ ಸನ್ವಲ್ಲಘುನಿಚಙ್‌ಪರೇನಗ್ಲೋಪೇ ಎಂಬುದರಿಂದ ಸನ್ವದ್ಭಾವ ಬರುವುದರಿಂದ ದೀರ್ಘೋಲಘೋಃ (ಪಾ. ಸೂ. ೭-೪-೯೪) ಎಂಬುದರಿಂದ ಅಭ್ಯಾಸದ ಲಘುವಿಗೆ ದೀರ್ಘ. ಚಙಿನ ಅಕಾರನಿಮಿತ್ತಕವಾಗಿ ಅಚಿಶ್ನುಧಾತುಭ್ರುವಾಂ—ಸೂತ್ರದಿಂದ ಪೂರ್ವದ ಉಕಾರಕ್ಕೆ ಉವಙಾದೇಶ. ಶೂಶುವತ್ ಎಂದು ರೂಪವಾಗುತ್ತದೆ. ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ- ತಿಙಂತನಿಘಾತಸ್ವರ ಬರುತ್ತದೆ.

ರಾತಹವ್ಯಃ—ರಾತಂ ಹವ್ಯಂ ಯೇನ ರಾತಹವ್ಯಃ | ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದದಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ರಾ ಆದಾನೇ ಧಾತು. ಕ್ತಪ್ರತ್ಯಯ. ಪ್ರತ್ಯಯಸ್ವರದಿಂದ ಅಂತೋದಾತ್ತ.

ಶಾಸಮ್—ಶಾಸು ಅನುಶಿಷ್ಟೌ. ಧಾತು. ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಕರ್ಷಾತ್ವತೋಃ—(ಪಾ. ಸೂ. ೬-೧-೧೫೯) ಎಂಬುದರಿಂದ ಅಂತೋದಾತ್ತವು ಪ್ರಾಪ್ತವಾದರೆ ವ್ಯತ್ಯಯೋ ಬಹುಲಂ ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಅಥವಾ ವೃಷಾದಿಯು ಆಕೃತಿಗಣವಾದುದರಿಂದ ವೃಷಾದೀನಾಂಚ (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಅಥವಾ ಶಂಸು ಸ್ತುತೌ ಧಾತು. ಇದಕ್ಕೆ ಭಾವಾರ್ಥದಲ್ಲಿ ಘಞ್. ವ್ಯತ್ಯಯದಿಂದ ನಿಮಿತ್ತವಿಲ್ಲದಿದ್ದರೂ ನಲೋಪವಾಗುತ್ತದೆ. ಅತ ಉಪಧಾಯಾಃ ಎಂಬುದರಿಂದ ಉಪಧಾಕಾರಕ್ಕೆ ವೃದ್ಧಿ. ಶಾಸ ಎಂದಾಗುತ್ತದೆ.

ಇನ್ವತಿ—ಇವಿ ವ್ಯಾಪ್ತೌ. ಧಾತು. ಭ್ವಾದಿ ಇದಿತೋನುಮ್ ಧಾತೋಃ ಎಂಬುದರಿಂದ ನುಮಾಗಮ. ಕರ್ತರಿಶಪ್ ಎಂಬುದರಿಂದ ಶಪ್ವಿಕರಣ. ಲಟಿನ ತಿಪ್ ಪರದಲ್ಲಿರುವಾಗ ಇನ್ವತಿ ಎಂದು ರೂಪವಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರವು ಉಳಿಯುತ್ತದೆ. ಯಃ ಎಂದು ಹಿಂದೆ ಯಚ್ಛಬ್ದಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತ ಪ್ರತಿಷೇಧ.

ಅಭಿಗೃಣಾತಿ—ಗೃ ಶಬ್ದೇ. ಧಾತು. ಕ್ರ್ಯಾದಿ. ಲಟಿನಲ್ಲಿ ತಿಪ್ ಪ್ರತ್ಯಯ ಪರದಲ್ಲಿರುವಾಗ ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾವಿಕರಣ. ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆಹ್ರಸ್ವ. ಋವರ್ಣಾನ್ನಸ್ಯಣತ್ವಂ ವಾಚ್ಯಂ ಎಂಬುದರಿಂದ ನಕಾರಕ್ಕೆ ಣತ್ವ. ಗೃಣಾತಿ ಎಂದು ರೂಪವಾಗುತ್ತದೆ. ತಿಪ್ ಪಿತ್ತಾದುದರಿಂದ ಅನುದಾತ್ತೌ ಸುಪ್ಪಿತೌ ಎಂಬುದರಿಂದ ಅನುದಾತ್ತವಾಗುವುದರಿಂದ ವಿಕರಣಸ್ವರವು ಉಳಿಯುತ್ತದೆ. ಇಲ್ಲಿಯೂ ಯಃ ಎಂದು ಹಿಂದೆ ಇರುವುದರಿಂದ ನಿಘಾತಸ್ವರ ಬರುವುದಿಲ್ಲ.

ಉಪರಾ—ಉಪರ+ಶಸ್ ಎಂದಿರುವಾಗ ಸುಪಾಂಸುಲುಕ್—ಸೂತ್ರದಿಂದ ಪೂರ್ವಸವರ್ಣದೀರ್ಘ ಬರುತ್ತದೆ.

ಪಿನ್ವತೇ—ಪಿವಿ, ಣಿವಿ, ಮಿವಿ, ಸೇಚನೇ. ಧಾತು. ಇದಿತ್ತಾದುದರಿಂದ ನುಮಾಗಮ. ವ್ಯತ್ಯಯೋ ಬಹುಲಂ ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಟಿತಆತ್ಮನೇಪದಾನಾಂ—ಸೂತ್ರದಿಂದ ಎತ್ವ. ಪಿನ್ವತೇ ಎಂದು ರೂಪವಾಗುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.





CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸಮಂ ಕ್ಷತ್ರಮಸಮಾ ಮನೀಷಾ ಪ್ರ ಸೋಮಪಾ ಅಪಸಾ ಸಂತು ನೇಮೇ ।

ಯೇ ತ ಇಂದ್ರ ದದುಷೋ ವರ್ಧಯಂತಿ ಮಹಿ ಕ್ಷತ್ರಂ ಸ್ಥವಿರಂ ವೃಷ್ಣ್ಯಂ ಚ ॥ ೮ ॥

॥ ಪದಪಾಠಃ ॥

ಅಸಮಂ । ಕ್ಷತ್ರಂ । ಅಸಮಾ । ಮನೀಷಾ । ಪ್ರ । ಸೋಮಽಪಾಃ । ಅಪಸಾ । ಸಂತು । ನೇಮೇ ।

ಯೇ । ತೇ । ಇಂದ್ರ । ದದುಷಃ । ವರ್ಧಯಂತಿ । ಮಹಿ । ಕ್ಷತ್ರಂ । ಸ್ಥವಿರಂ । ವೃಷ್ಣ್ಯಂ । ಚ ॥ ೮ ॥

॥ ಸಾಯಣಭಾಷ್ಯ ॥

ಇಂದ್ರಸ್ಯ ಕ್ಷತ್ರಂ ಬಲಮಸಮಂ ।ನ ಕೇನಚಿತ್ಸಮಂ । ಸರ್ವಾಧಿಕಮಿತ್ಯರ್ಥಃ । ತಥಾ ಮನೀಷಾ ಬುದ್ಧಿಶ್ಚಾಸಮಾ । ನ ಕಸ್ಯಾಪಿ ಬುದ್ಧ್ಯಾ ಸಮಾನಾ । ಸರ್ವಂ ವಸ್ತು ವಿಷಯೀಕರೋತೀತ್ಯರ್ಥಃ । ನೇಮ ಇತಿ ಸರ್ವನಾಮಶಬ್ದ ಏತಚ್ಛಬ್ದಸಮಾನಾರ್ಥಃ ನೇಮ ಏತೇ ಸೋಮಪಾಃ ಸೋಮಸ್ಯ ಪಾತಾರೋ ಯಜಮಾನಾ ಅಪಸಾ ಕರ್ಮಣಾ ಪ್ರ ಸಂತು । ಪ್ರವೃದ್ಧಾ ಭವಂತು । ಹೇ ಇಂದ್ರ ತೇ ತವ ದದುಷೋ ಹವಿರ್ದತ್ತವಂತೋ ಯೇ ತ್ವದೀಯಂ ಮಹಿ ಮಹತ್ ಕ್ಷತ್ರಂ ಬಲಂ ಸ್ಥವಿರಂ ಸ್ಥೂಲಂ ಪ್ರವೃದ್ಧಂ ವೃಷ್ಣ್ಯಂ ವೃಷತ್ವಂ ಪುಂಸ್ತ್ವಂ ಚ ವರ್ಧಯಂತಿ ಪ್ರವೃದ್ಧಂ ಕುರ್ವಂತಿ । ಯದ್ವಾ । ದದುಷೋ ಯಜಮಾನೇಭ್ಯೋ ಯಾಗಫಲಂ ದತ್ತವತಸ್ತವೇತಿ ಯೋಜನೀಯಂ ॥ ನೇಮೇ । ಸರ್ವನಾಮತ್ವಾಜ್ಜಸಃ ಶೀಭಾವೇ ಗುಣಃ । ಪಾ. ಸೂ- ೭-೧-೧೭। ತ್ವಸಮಸಿಮನೇಮೇತ್ಯನುಚ್ಚಾನಿ ।ಫಿ.ಸು- ೪-೧೦। ಇತಿ ಸರ್ವಾನುದಾತ್ತತ್ವೇ ಪ್ರಾಪ್ತೇ ವ್ಯತ್ಯಯೇನಾದ್ಯುದಾತ್ತತ್ವಂ । ದದುಷಃ । ದದಾತೇರ್ಲಿಟಃ ಕ್ವಸುಃ । ಜಸೋ ವ್ಯತ್ಯಯೇನ ಶಸಾದೇಶಃ । ಸಂಪ್ರಸಾರಣಂ ಸಂಪ್ರಸಾರಣಾಶ್ರಯಂ ಚ ಬಲೀಯ ಇತೀಡಾಗಮಾತ್ಪೂರ್ವಮೇವ ಸಂಪ್ರಸಾರಣಂ । ಶಾಸಿವಸಿಘಸೀನಾಂ ಚೇತಿ ಷತ್ವಂ । ಪ್ರತ್ಯಯಸ್ವರಃ । ಮಹಿ । ಮಹೇರೌಣಾದಿಕ ಇನ್ಪ್ರತ್ಯಯಃ ಸ್ಥವಿರಂ। ಅಜಿರಶಿಶಿರೇತ್ಯಾದಿನಾ । ಉ. ಸೂ- ೧-೫೪ । ತಿಷ್ಠತೇಃ ಕಿರಚ್ಪ್ರತ್ಯಯಾಂತೋ ನಿಪಾತಿತಃ ॥



CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

(ಇಂದ್ರಸ್ಯ—ಇಂದ್ರನ)। ಕ್ಷತ್ರಂ—ಬಲವು। ಅಸಮಂ—ಅಸಮಾನವಾದುದು (ಎಲ್ಲರ ಬಲಕ್ಕೂ ಮೀರಿದುದು)। ಮನೀಷಾ—ಬುದ್ಧಿಯೂ (ಕೂಡ)। ಅಸಮಾ—ಅಸಮಾನವಾದುದು। ನೇಮೇ ಸೋಮಪಾಃ—ಸೋಮರಸಪಾನಮಾಡತಕ್ಕ ಈ ಯಜಮಾನರು। ಅಪಸಾ—ತಮ್ಮ ಪವಿತ್ರಕರ್ಮಗಳಿಂದ। ಪ್ರ ಸಂತು—ಪ್ರವೃದ್ಧರಾಗಲಿ (ಇಂದ್ರನಿಗೆ ಸಮಾನವಾದ ಬಲವನ್ನೂ, ಬುದ್ಧಿಯನ್ನೂ ಹೊಂದಲಿ)। ಇಂದ್ರ—ಎಲೈ ಇಂದ್ರನೇ ತೇ—ನಿನ್ನ ಅಥವಾ ಹವಿರ್ದಾತರಾದ ಯಜ್ಞಕರ್ತರಿಗೆ ಸರಿಯಾದ ಫಲಗಳನ್ನು ಕೊಡುವ ನಿನ್ನ। ದದುಷಃ—ಹವಿರ್ದಾತರು। ಯೇ—ಯಾವ ಯಜಮಾನರು। ಮಹಿ—ನಿನ್ನ ಮಹತ್ತಾದ। ಬಲಂ—ಶಕ್ತಿಯನ್ನೂ। ಸ್ಥವಿರಂ—ಸ್ಥೂಲವಾದ। ವೃಷ್ಣ್ಯಂಚ—ಪುರುಷ ಶಕ್ತಿಯನ್ನೂ ಕೂಡ। ವರ್ಧಯಂತಿ—ವೃದ್ಧಿಯಾಗುವಂತೆ ಮಾಡುತ್ತಾರೆಯೋ ಅವರು ಪ್ರವೃದ್ಧರಾಗಲಿ.

॥ ಭಾವಾರ್ಥ ॥

ಎಲೈ ಇಂದ್ರನೇ, ನಿನ್ನ ಬಲವು ಅಸಮಾನವಾದುದು. ನಿನ್ನ ಬುದ್ಧಿಯೂ ಅಸಮಾನವಾದುದು. ಸೋಮರಸಪಾನಮಾಡತಕ್ಕ ಈ ಯಜಮಾನರು ತಮ್ಮ ಪವಿತ್ರ ಕರ್ಮಗಳಿಂದ ಪ್ರವೃದ್ಧರಾಗಲಿ ಮತ್ತು ಇಂದ್ರನಿಗೆ ಸಮಾನವಾದ ಬಲವನ್ನೂ ಬುದ್ಧಿಯನ್ನೂ ಹೊಂದಲಿ. ಎಲೈ ಇಂದ್ರನೇ, ನಿನಗೆ ಹವಿಸ್ಸನ್ನು ಅರ್ಪಿಸುವ ಯಜ್ಞಕರ್ತರು ನಿನ್ನ ಮಹತ್ತಾದ ಶಕ್ತಿಯನ್ನು ಮತ್ತು ನಿನ್ನ ಸ್ಥೂಲವಾದ ಪುರುಷಶಕ್ತಿಯನ್ನೂ ಸಹ ವೃದ್ಧಿಯಾಗುವಂತೆ ಮಾಡುತ್ತಾರೆ.

English Translation.

Peerless is his power ; peerless is his wisdom ; may these drinkers of the soma-juice become equal to him by the pious act, for they, Indra, who present oblations, to your augment your vast strength and your manly vigour.

॥ ವಿಶೇಷ ವಿಷಯಗಳು ॥

ಕ್ಷತ್ರಂ-ಅಸಮಂ—ಇಂದ್ರನ ಕ್ಷಾತ್ರಧರ್ಮ ಎಂದರೆ ಶತ್ರುಗಳನ್ನು ಧ್ವಂಸಮಾಡುವ ಸಾಮರ್ಥ್ಯವು ಎಲ್ಲರಿಗಿಂತಲೂ ಅಧಿಕವಾದದ್ದು. ಶೌರ್ಯಾದಿಗುಣಗಳಲ್ಲಿ ಇಂದ್ರನನ್ನು ಹೋಲುವವರು ಯಾರು ಇಲ್ಲವೆಂದು ತಾತ್ಪರ್ಯ.

ನೇಮೇ—ಇದು ಸರ್ವನಾಮಶಬ್ದ. ಏತತ್ (ಇದು) ಶಬ್ದದ ಅರ್ಥವೇ ಇದರ ಅರ್ಥ. ನೇಮೇ ಎಂದರೆ ಇವು ಎಂದರ್ಥ.

ಸೋಮಪಾಃ—ಸೋಮರಸವನ್ನು ಪಾನಮಾಡುವವರು, ಯಜಮಾನರು.

ಅಪಸಾ—ಅಪಶ್ಶಬ್ದಕ್ಕೆ ಯಾಗಾದಿ ಕರ್ಮಗಳು ಎಂದರ್ಥ. (ನಿ. ೩-೧)

ದದುಷಃ—ಇದು ಪ್ರಥಮಾ ಬಹುವಚನವಾಗಿಯೂ, ಷಷ್ಠೀ ವಿಭಕ್ತಿಯ ಏಕವಚನವಾಗಿಯೂ ಇರುವುದೆಂದು ತಿಳಿಯಬೇಕು. ಪ್ರಥಮಾ ಬಹುವಚನವಾದಾಗ ಹವಿಸ್ಸನ್ನು ಕೊಡುವವರು ಎಂಬರ್ಥವನ್ನೂ, ಷಷ್ಠೀ





CC-0. Jangamwadi Math Collection. Digitized by eGangotri

ಕವಚನದಲ್ಲಿ, ಇಂದ್ರನಿಗೆ ವಿಶೇಷಣವಾಗಿ, ಯಜಮಾನರಿಗೆ ಯಾಗಫಲವನ್ನು ಕೊಡುವ ಇಂದ್ರನು ಎಂಬರ್ಥ ದಲ್ಲಿಯೂ ಉಪಯೋಗಿಸಲ್ಪಡುವುದು.

‖ ವ್ಯಾಕರಣಪ್ರಕ್ರಿಯಾ ‖

**ಸೋಮಪಾಃ**—ಸೋಮಂ ಪಿಬಂತಿ ಇತಿ ಸೋಮಪಾಃ ಪಾ ಪಾನೇ ಧಾತು. ಕ್ವಿಪ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಸಂತು**—ಅಸ ಭುವಿ. ಧಾತು ಅದಾದಿ. **ಝೋಽಂತಃ** ಎಂಬುದರಿಂದ ಅಂತಾದೇಶ. **ಏರುಃ** ಎಂಬುದ ರಿಂದ ಉತ್ವ. **ಶ್ನಸೋರಲ್ಲೋಪಃ** (ಪಾ. ಸೂ. ೬-೪-೧೧೧) ಎಂಬುದರಿಂದ ಧಾತುವಿನ ಅಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

**ನೇಮೇ**—ಸರ್ವಾದಿಯಲ್ಲಿ ಸೇರಿರುವುದರಿಂದ **ಸರ್ವಾದೀನಿಸರ್ವನಾಮಾನಿ** ಎಂಬುದರಿಂದ ಸರ್ವ ನಾಮಸಂಜ್ಞೆ ಬರುತ್ತದೆ. ಜಸ್ ಪರದಲ್ಲಿರುವಾಗ **ಜಸಃ ಶೀ** (ಪಾ. ಸೂ. ೭-೧-೧೭) ಎಂಬುದರಿಂದ ಜಸಿಗೆ ಶೀ ಆದೇಶ. **ಅನೇಕಾಲ್ ಶಿತ್ ಸರ್ವಸ್ಯ** ಎಂಬುದರಿಂದ ಸರ್ವಾದೇಶವಾಗಿ ಬರುತ್ತದೆ. **ಆದ್ಗುಣಃ** ಎಂಬು ದರಿಂದ ಗುಣ. ನೇಮೇ ಎಂದು ರೂಪವಾಗುತ್ತದೆ. **ತ್ವ ಸಮ ಸಿಮ ನೇಮೇತ್ಯನುಚ್ಚಾನಿ** (ಫಿ. ಸೂ. ೭೮) ಎಂಬುದರಿಂದ ಸರ್ವಾನುದಾತ್ತತ್ವವು ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ.

**ದದುಷಃ**—ಡುದಾಞ್ ದಾನೇ ಧಾತು. ಲಿಟಿಗೆ **ಕ್ವಸುಶ್ಚ** (ಪಾ. ಸೂ. ೩-೧-೧೦೭) ಎಂಬುದ ರಿಂದ ಕ್ವಸು ಪ್ರತ್ಯಯ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ದದಾ+ವಸ್ ಎಂದಿರುವಾಗ **ಆತೋ-ಲೋಪ ಇಟಿ ಚ** ಎಂಬುದರಿಂದ ಆಕಾರ ಲೋಪ. ದದ್ವಸ್ ಶಬ್ದವಾಗುತ್ತದೆ. **ವ್ಯತ್ಯಯೋ ಬಹುಲಂ** ಎಂಬುದರಿಂದ ಜಸಿಗೆ ಶಸಾದೇಶ. ಆಗ **ಆರ್ಧಧಾತುಕಸ್ಯೇಡ್ವಲಾದೇಃ** ಸೂತ್ರದಿಂದ ಇಡಾಗಮವೂ **ವಸೋಃ-ಸಂಪ್ರಸಾರಣಮ್** ಎಂಬುದರಿಂದ ವಕಾರಕ್ಕೆ ಸಂಪ್ರಸಾರಣವೂ ಪ್ರಾಪ್ತವಾದರೆ **ಸಂಪ್ರಸಾರಣಂ ಸಂಪ್ರಸಾರಣಾ-ಶ್ರಯಂ ಚ ಬಲೀಯಃ** ಎಂಬ ವಚನದಿಂದ ಇಡಾಗಮಕ್ಕಿಂತಲೂ ಪೂರ್ವದಲ್ಲಿ ಸಂಪ್ರಸಾರಣವೇ ಬರುತ್ತದೆ. **ಸಂಪ್ರಸಾರಣಾಚ್ಚ** ಎಂಬುದರಿಂದ ಅಕಾರಕ್ಕೆ ಪೂರ್ವರೂಪ. **ಶಾಸಿವಸಿಘಸೀನಾಂಚ** (ಪಾ. ಸೂ. ೮-೩-೬೦) ಎಂಬುದರಿಂದ ವಸಿನ ಸ್‌ಕಾರಕ್ಕೆ ಷತ್ವ. ದದುಷಃ ಎಂದು ರೂಪವಾಗುತ್ತದೆ. ಪ್ರತ್ಯಯದ ಆದ್ಯುದಾತ್ತ ಸ್ವರ ದಿಂದ ದದುಷಃ ಎಂಬುದು ಮಧ್ಯೋದಾತ್ತವಾಗುತ್ತದೆ.

**ಮಹಿ**—ಮಹ ಪೂಜಾಯಾಂ ಧಾತು. ಇದಕ್ಕೆ ಉಣಾದಿಸಿದ್ಧವಾದ ಇನ್ ಪ್ರತ್ಯಯ. ನಿತ್ ಪ್ರತ್ಯಯಾಂತವಾದುದರಿಂದ ಮಹಿ ಎಂಬುದ ಆದ್ಯುದಾತ್ತವಾಗುತ್ತದೆ.

**ಸ್ಥವಿರಮ್**—ಷ್ಠಾ ಗತಿನಿವೃತ್ತೌ ಧಾತು. ಇದಕ್ಕೆ **ಅಜಿರಶಿಶಿರ ಶಿಥಿಲ ಸ್ಥಿರ ಸ್ಫಿರ ಸ್ಥವಿರ ಖದಿರಾಃ** (ಉ. ಸೂ. ೧-೫೩) ಎಂಬುದರಿಂದ ಕಿರಚಪ್ರತ್ಯಯ ಬಂದು ನಿಪಾತಿತವಾಗಿದೆ. ಇತರ ಶಾಸ್ತ್ರಗಳಿಂದ ಬಾರದಿರುವ ಕಾರ್ಯಗಳನ್ನು ಸೇರಿಸಿ ಉಚ್ಚಾರಮಾಡುವುದೇ ನಿಪಾತ. ಆದುದರಿಂದಲೇ ಆದ್ಯುದಾತ್ತಸ್ವರ ಬರುತ್ತದೆ.

---



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ತುಭ್ಯೇದ್ರೇತೇ ಬಹುಲಾ ಅದ್ರಿದುಗ್ಧಾಶ್ಚಮೂಷದಶ್ಚಮುಸಾ ಇಂದ್ರಪಾನಾಃ।
ವ್ಯಶ್ನುಹಿ ತರ್ಪಯಾ ಕಾಮಮೇಷಾಮಥಾ ಮನೋ ವಸುದೇಯಾಯ
ಕೃಷ್ವ ॥ ೯ ॥

॥ ಪದಪಾಠಃ ॥

ತುಭ್ಯ । ಇತ್ । ಏತೇ । ಬಹುಲಾಃ । ಅದ್ರಿಽದುಗ್ಧಾಃ । ಚಮೂಽಸದಃ । ಚಮುಸಾಃ
ಇಂದ್ರಽಪಾನಾಃ ।
ವಿ । ಅಶ್ನುಹಿ । ತರ್ಪಯ । ಕಾಮಂ । ಏಷಾಂ । ಅಥ । ಮನಃ । ವಸುಽದೇಯಾ-
ಯ । ಕೃಷ್ವ ॥ ೯ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತುಭ್ಯೇತ್ ತುಭ್ಯಮೇವ ಚಮಸಾಃ । ಚಮ್ಯಂತೇ ಭಕ್ಷ್ಯಂತ ಇತಿ ಚಮಸಾಃ
ಸೋಮಾಃ । ಏತೇ ಸೋಮಾಸ್ತ್ವದರ್ಥಂ ಸಂಪಾದಿತಾಃ । ಕೀದೃಶಾ ಇತ್ಯಾಹ । ಬಹುಲಾಃ ಪ್ರಭೂತಾ
ಅದ್ರಿದುಗ್ಧಾ ಅದ್ರಿಭಿರ್ಗ್ರಾವಭಿರಭಿಷುತಾಶ್ಚಮೂಷದಶ್ಚಮೂಷು ಚಮಸೇಷ್ವವಸ್ಥಿತಾ ಇಂದ್ರಪಾನಾ
ಇಂದ್ರಸ್ಯ ಪಾನೇನ ಸುಖಕರಾಃ । ಅತಸ್ತ್ವಂ ತಾನ್ವ್ಯಶ್ನುಹಿ । ವ್ಯಾಪ್ನುಹಿ । ವ್ಯಾಪ್ಯ ಚೈಷಾಂ ತ್ವದೀ-
ಯಾನಾಮಿಂದ್ರಿಯಾಣಾಂ ಕಾಮಮಭಿಲಾಷಂ ತೈಸ್ತರ್ಪಯ ಪೂರಯೇತಿ ಯಾವತ್ । ಅಥಾನಂ-
ತರಂ ವಸುದೇಯಾಯಾಸ್ಮಭ್ಯಮಭಿಮತಧನಪ್ರದಾನಾಯ ತ್ವದೀಯಂ ಮನಃ ಕೃಷ್ವ ಕುರುಷ್ವ ॥
ತುಭ್ಯ । ಛಾಂದಸೋ ಮಲೋಪಃ । ಅದ್ರಿದುಗ್ಧಾಃ । ದುಹೇಃ ಕರ್ಮಣಿ ನಿಷ್ಠಾ । ತೃತೀಯಾ ಕರ್ಮಣೀತಿ
ಪೂರ್ವಪದಪ್ರಕೃತಿಸ್ವರತ್ವಂ । ಚಮೂಷದಃ । ಚಮು ಅದನೇ । ಚಮಂತ್ಯನೇನೇತಿ ಚಮೂಃ । ಕೃಷಿ-
ಚಮಿತನೀತ್ಯಾದಿನಾ । ಉ. ಸೂ. ೧-೮೧ । ಔಣಾದಿಕಃ ಊಪ್ರತ್ಯಯಃ । ಚಮೂಷು ಸೀದಂತೀತಿ
ಚಮೂಷದಃ । ಸತ್ಸೂದ್ವಿಷೇತ್ಯಾದಿನಾ ಕ್ವಿಪ್ । ಪೂರ್ವಪದಾತ್ । ಪಾ. ಸೂ. ೮-೩-೧೦೬ । ಇತಿ ಷತ್ವಂ ।
ಕೃದುತ್ತರಪದಪ್ರಕೃತಿಸ್ವರತ್ವಂ । ಇಂದ್ರಪಾನಾಃ । ಕರ್ಮಣಿ ಚ ಯೇನ ಸಂಸ್ಪರ್ಶಾತ್ । ಪಾ. ಸೂ.
೩-೩-೧೧೬ । ಇತಿ ಪಿಬತೇಃ ಕರ್ಮಣಿ ಲ್ಯುಟ್ । ಅಶ್ನುಹಿ । ವ್ಯತ್ಯಯೇನ ಪರಸ್ಮೈಪದಂ । ವಸುದೇ-
ಯಾಯ । ಡುದಾಞ್ ದಾನೇ । ಅಸ್ಮಾದಚೋ ಯದಿತಿ ಭಾವೇ ಯತ್ । ಈದ್ಯತಿ । ಪಾ. ೬-೪-೬೫ ।
ಇತೀಕಾರಾದೇಶಃ । ಗುಣಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ।
ಕೃಷ್ವ । ಡುಕೃಞ್ ಕರಣೇ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

(ಎಲೈ ಇಂದ್ರನೇ) ತುಭ್ಯೇತ್—ನಿನಗಾಗಿಯೇ । ಬಹುಲಾಃ—ಅಧಿಕವಾಗಿರುವುವೂ । ಅದ್ರಿ. ದುಗ್ಧಾಃ-ಕಲ್ಲುಗಳಿಂದ ಜಜ್ಜಿ ಹಿಂಡಲ್ಪಟ್ಟವೂ । ಚಮೂಷದಃ—ಸೌಟುಗಳಲ್ಲಿರುವುವೂ । ಇಂದ್ರಪಾನಾಃ—ಇಂದ್ರ ನಿಂದ ಕುಡಿಯಲು ಯೋಗ್ಯವಾದವೂ ಆದ । ಏತೇ ಚಮಸಾಃ—ಈಸೋಮರಸಗಳು (ಸಂಪಾದಿತಗಳಾಗಿವೆ)। ವೃಶ್ಚುಹಿ—(ನೀನು ಅವನ್ನು) ಸಂಪೂರ್ಣವಾಗಿ ಕುಡಿ (ಮತ್ತು)। ಏಷಾಂ—ನಿನ್ನ ಇಂದ್ರಿಯಗಳ । ಕಾಮಂ— ಅಭಿಲಾಷೆಯನ್ನು । ತರ್ಪಯ—ತೃಪ್ತಿಪಡಿಸು । ಅಥ—ಅನಂತರ । ವಸುದೇಯಾಯ—(ನಮಗೆ) ಅನುಗ್ರ ಹಿಸಬೇಕಾದ ದ್ರವ್ಯದಲ್ಲಿ । ಮನಃ—(ನಿನ್ನ) ಮನಸ್ಸನ್ನು । ಕೃಷ್ವ—ಮಾಡು ||

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಕುಡಿಯಲು ಯೋಗ್ಯವಾದ ಈ ಸೋಮರಸಗಳು ಕಲ್ಲುಗಳಿಂದ ಜಜ್ಜಿ ಅಧಿಕವಾಗಿ ಹಿಂಡಲ್ಪಟ್ಟು ಸೌಟುಗಳಲ್ಲಿ ಸಿದ್ಧವಾಗಿರುವುವು. ಇವನ್ನು ಯಥೇಚ್ಛವಾಗಿ ಕುಡಿದು ನಿನ್ನ ಇಂದ್ರಿಯಗಳ ಅಭಿ ಲಾಷೆಯನ್ನು ತೃಪ್ತಿಪಡಿಸು. ಅನಂತರ ನಮಗೆ ಅನುಗ್ರಹಿಸಬೇಕಾದ ದ್ರವ್ಯದ ವಿಷಯದಲ್ಲಿ ಮನಸ್ಸುಮಾಡು.

## English Translation.

These copious Soma-juices expressed with stones and contained in ladles, are prepared for you; they are the beverage of Indra; drink them; Satiate your appetite with them; and then fix your mind on the wealth that is to be given to us.

|| ವಿಶೇಷ ವಿಷಯಗಳು ||

ತುಭ್ಯೇತ್—ತುಭ್ಯ-ಇತ್—ಯುಷ್ಮಚ್ಛಬ್ದದ ಚತುರ್ಥೀ ಏಕವಚನದ ತುಭ್ಯಂ ಎಂಬ ರೂಪವು ವೇದದಲ್ಲಿ ಅನುಸ್ವಾರ (ಮಕಾರವು) ಲೋಪವಾಗಿ ಪ್ರಯೋಗಿಸಲಾಗಿರುವುದು.

ಚಮಸಾಃ—ಚಮ್ಯಂತೇ ಭಕ್ಷ್ಯಂತೇ ಇತಿ ಚಮಸಾಃ ಸೋಮಾಃ—ದೇವತೆಗಳಿಗೆ ಭಕ್ಷಿಸಲು ಯೋಗ್ಯವಾದ ಸೋಮರಸಕ್ಕೆ ಚಮಸವೆಂದು ಹೆಸರು.

ಅದ್ರಿದುಗ್ಧಾಃ—ಇಲ್ಲಿ ಅದ್ರಿ ಶಬ್ದಕ್ಕೆ ಕಲ್ಲು ಎಂದರ್ಥ. ಕಲ್ಲುಗಳ ಸಹಾಯದಿಂದ ಜಜ್ಜಿ ಹಿಂಡಲ್ಪಟ್ಟ ಸೋಮರಸ ಎಂದು ಅರ್ಥವಾಗುವುದು.

ಚಮೂಷದಃ—ಚಮೂಷು ಚಮಸೇಷು ಅವಸ್ಥಿತಾಃ—ಸೌಟನಂತಿರುವ ಮರದಿಂದ ಮಾಡಲ್ಪಟ್ಟ ಚಮಸವೆಂಬ ಪಾತ್ರೆಗಳಲ್ಲಿರುವ.

ಇಂದ್ರಪಾನಾಃ—ಇಂದ್ರನು ಪಾನಮಾಡುವುದಕ್ಕೆ ಯೋಗ್ಯವಾದ ಸೋಮರಸವು. ಇದು ಚಮಸಾಃ ಎಂಬ ಪದಕ್ಕೆ ವಿಶೇಷಣವಾಗಿದೆ.



CC-0. Jangamwadi Math Collection. Digitized by eGangotri

**ವಸುದೇಯಾಯ**—ಸೋಮರಸದಿಂದ ನಿನ್ನನ್ನು ತೃಪ್ತಿಪಡಿಸಿದ ನಮಗೆ ಇಷ್ಟಾರ್ಥಗಳನ್ನು ಅಂದರೆ ಧನಕನಕಾದಿಗಳನ್ನು ಕೊಡುವುದಕ್ಕಾಗಿ.

**ಕೃಷ್ವ**—ಕೃಣುಷ್ವ ಎಂಬ ಕ್ರಿಯಾರೂಪದಲ್ಲಿ ಬಹುಲಂ ಛಂದಸಿ ಎಂಬ ಸೂತ್ರಾನುಸಾರವಾಗಿ ವಿಕರಣಪ್ರತ್ಯಯವೆನಿಸಿದ ಮಧ್ಯಗತವಾದ ನುಕಾರವು ಲೋಪವಾಗಿದೆ. ಮನಸ್ಸುಮಾಡು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

**ತುಭ್ಯ**—**ತುಭ್ಯಮಹ್ಯೌ ಙಯಿ** (ಪಾ. ಸೂ. ೭-೨-೯೫) ಎಂಬುದರಿಂದ ಯುಷ್ಮಚ್ಛಬ್ದದ ಮಪರ್ಯಂತಕ್ಕೆ ಙೇ (ಚತುರ್ಥೀಏಕವಚನ) ಪರದಲ್ಲಿರುವಾಗ ತುಭ್ಯ ಎಂಬ ಆದೇಶಬರುತ್ತದೆ. **ಙೇ ಪ್ರಥಮಯೋರಮ್** ಎಂಬುದರಿಂದ ವಿಭಕ್ತಿಗೆ ಅಮಾದೇಶ. **ಶೇಷೇಲೋಪಃ** ಎಂಬುದರಿಂದ ಅದಿಗೆ ಲೋಪ. **ಅಮಿಪೂರ್ವಃ** ಎಂಬುದರಿಂದ ಪೂರ್ವರೂಪ. ತುಭ್ಯಮ್ ಎಂದು ರೂಪವಾಗುತ್ತದೆ. ಛಾಂದಸವಾಗಿ ಮಕಾರಲೋಪ ಬರುತ್ತದೆ.

**ಅದ್ರಿದುಗ್ಧಃ**—ದ್ರುಹ ಜಿಘಾಂಸಾಯಾಂ ಧಾತು. ಕರ್ಮಾರ್ಥದಲ್ಲಿ ಕ್ತಪ್ರತ್ಯಯ. **ಹೋಢಃ** ಎಂಬುದರಿಂದ ಢತ್ವಪ್ರಾಪ್ತವಾದರೆ **ವಾದ್ರುಹಮುಹ**—ಸೂತ್ರದಿಂದ ಘತ್ವ. **ಝಷಸ್ತಥೋಃ** ಎಂಬುದರಿಂದ ತಕಾರಕ್ಕೆ ಧಕಾರಾದೇಶ. **ಝಲಾಂಜಶ್‌ಝಶಿ** ಎಂಬುದರಿಂದ ಘಕಾರಕ್ಕೆ ಗಕಾರಾದೇಶ. ಅದ್ರಿಭಿಃ ದುಗ್ಧಃ **ತೃತೀಯಾ ಕರ್ಮಣಿ** (ಪಾ. ಸೂ. ೬-೨-೪೮) ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರಕ್ಕೆ ಅಪವಾದವಾಗಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಚಮೂಷದಃ**—ಚಮು ಅದನೇ ಧಾತು. ಚಮಂತಿ ಅನೇನ ಇತಿ ಚಮೂಃ **ಕೃಷಿಚಮಿತನಿ** (ಉ. ಸೂ. ೧-೮೧) ಎಂಬುದರಿಂದ ಔಣಾದಿಕವಾದ ಉ ಪ್ರತ್ಯಯ. ಚಮೂಷು ಸೀದಂತಿ ಇತಿ ಚಮೂಷದಃ ಚಮೂಸದ್ ಶಬ್ದ **ಸತ್ಸೂದ್ವಿಷ** (ಪಾ. ಸೂ. ೩-೨-೬೧) ಎಂಬುದರಿಂದ ದಲ್ಲ ಧಾತ್‌ವಿಗೆ ಕ್ವಿನ್ ಪ್ರತ್ಯಯ. **ಪೂರ್ವಪದಾತ್‌ಸಂಜ್ಞಾಯಾಮಗಃ** (ಪಾ. ಸೂ. ೮-೩-೧೦೬) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ. **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ. ವಾಗುತ್ತದೆ.

**ಇಂದ್ರಪಾನಾಃ**—**ಕರ್ಮಣಿ ಚ ಯೇನ ಸಂಸ್ಪರ್ಶಾತ್‌ಕರ್ತುಃ ಶರೀರಸುಖಂ** (ಪಾ. ಸೂ. ೩-೩-೧೧೬) ಎಂಬುದರಿಂದ ಪಾ ಪಾನೇ ಧಾತುವಿಗೆ ಕರ್ಮ ಉಪಪದವಾಗಿರುವಾಗ ಲ್ಯುಟ್. **ಯುವೋರನಾಕೌ** ಎಂಬುದರಿಂದ ಅನಾದೇಶ. ಇಂದ್ರಪಾನ ಎಂದಾಗುತ್ತದೆ.

**ಅಶ್ನುಹಿ**—ಅಶೂ ವ್ಯಾಪ್ತೌ ಧಾತು. ಸ್ವಾದಿ. **ವ್ಯತ್ಯಯೋ ಬಹುಲಂ** ಎಂಬುದರಿಂದ ಪರಸ್ಮೈಪದಪ್ರತ್ಯಯ ಬರುತ್ತದೆ. ಲೋಟ್ ಮಧ್ಯಮಪುರುಷಏಕವಚನದ ಸಿಪಿಗೆ ಹಿ ಆದೇಶ ಬರುತ್ತದೆ. **ಸ್ವಾದಿಭ್ಯಃ ಶ್ನುಃ** ಎಂಬುದರಿಂದ ಶ್ನು ವಿಕರಣ. ಅಶ್ನುಹಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

**ವಸುದೇಯಾಯ**—ಡುದಾಞ್ ದಾನೇ ಧಾತು. ಇದಕ್ಕೆ **ಅಚೋಯತ್** (ಪಾ. ಸೂ. ೩-೧-೯೭) ಎಂಬುದರಿಂದ ಅಜಂತಧಾತುವಾದುದರಿಂದ ಯತ್ ಪ್ರತ್ಯಯ. ಇದು ಭಾವಾರ್ಥದಲ್ಲಿ ಬರುತ್ತದೆ. **ಈದ್ಯತಿ** (ಪಾ. ಸೂ. ೬-೪-೬೫) ಯತ್ ಪರದಲ್ಲಿರುವಾಗ ಧಾತುವಿನ ಆಕಾರಕ್ಕೆ ಈಕಾರ ಬರುತ್ತದೆ ಎಂಬುದರಿಂದ ಈಕಾರಾದೇಶ. ದೀ+ಯ ಎಂದಿರುವಾಗ ಯತ್ ನಿಮಿತ್ತಕವಾಗಿ ಧಾತುವಿನ ಈಕಾರಕ್ಕೆ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಗುಣ. **ಯತೋಽನಾವಃ** ಎಂಬುದರಿಂದ ಆದ್ಯುದಾತ್ತವಾಗುತ್ತದೆ. ವಸುವೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಕೃಷ್ವ—ಡು ಕೃಞ್ ಕರಣೇ ಧಾತು. ಞಿತ್ತ್ವಾದುದರಿಂದ ಉಭಯಪದೀ. ಲೋಟ್ ಮಧ್ಯಮ ಪುರುಷ ಏಕವಚನದಲ್ಲಿ ಥಾಸಃ ಸೇ ಎಂಬುದರಿಂದ ಸೇ ಆದೇಶ. ಬಹುಲಂಛಂದಸಿ ಎಂಬುದರಿಂದ ವಿಕರಣ ವಾದ ಉ ಪ್ರತ್ಯಯಕ್ಕೆ ಲುಕ್. ಸವಾಭ್ಯಾಂ ವಾಮೌ (ಪಾ. ಸೂ. ೩-೪-೯೧) ಎಂಬುದರಿಂದ ಸಕಾರ ಬಂದುದ ರಿಂದ ಆದೇಶಪ್ರತ್ಯಯಯೋಃ ಎಂಬುದರಿಂದ ಷತ್ವ. ಸಾರ್ವಧಾತುಕಮಪಿತ್ ಎಂಬುದರಿಂದ ಙಿದ್ವದ್ಭಾವ ವಿರುವುದರಿಂದ ಇಕಿಗೆ ಗುಣ ಬರುವುದಿಲ್ಲ. ಕೃಷ್ವ ಎಂದು ರೂಪವಾಗುತ್ತದೆ. ತಿಙತಿಙಃ ಎಂಬುದರಿಂದ ನಿಘಾತ ಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಅಪಾಮತಿಷ್ಠದ್ಧರುಣಹ್ವರಂ ತಮೋಽಂತರ್ವೃತ್ರಸ್ಯ ಜಠರೇಷು ಪರ್ವತಃ ।
ಅಭೀಮಿಂದ್ರೋ ನದ್ಯೋ ವವ್ರಿಣಾ ಹಿತಾ ವಿಶ್ವಾ ಅನುಷ್ಠಾಃ ಪ್ರವಣೇಷು ಜಿಘ್ನತೇ ॥ ೧೦ ॥

ಪದಪಾಠಃ

ಅಪಾಂ । ಅತಿಷ್ಠತ್ । ಧರುಣಽಹ್ವರಂ । ತಮಃ । ಅಂತಃ । ವೃತ್ರಸ್ಯ । ಜಠರೇಷು । ಪರ್ವತಃ ।
ಅಭಿ । ಈಂ । ಇಂದ್ರಃ । ನದ್ಯಃ । ವವ್ರಿಣಾ । ಹಿತಾಃ । ವಿಶ್ವಾಃ । ಅನುಽಸ್ಥಾಃ । ಪ್ರವಣೇಷು । ಜಿಘ್ನತೇ ॥ ೧೦ ॥

॥ ಸಾಯಣಭಾಷ್ಯ ॥

ಅಪಾಂ ವೃಷ್ಟ್ಯುದಕಾನಾಂ ಧರುಣಹ್ವರಂ । ಧರುಣಶಬ್ದೋ ಧಾರಾವಾಚನಃ । ಧಾರಾನಿರೋಧಕಂ ತಮೋಽಂಧಕಾರಮತಿಷ್ಠತ್ । ಅಯಮೇವಾರ್ಥಃ ಸ್ಪಷ್ಟೀಕ್ರಿಯತೇ । ವೃತ್ರಸ್ಯ ಲೋಕತ್ರಯಾವರಿತುರಸುರಸ್ಯ ಜಠರೇಷೂದರಪ್ರದೇಶೇಷ್ವಂತರ್ಮಧ್ಯೇ ಪರ್ವತಃ ಪರ್ವವಾನ್ಮೇಘೋಽಭೂತ್ । ಅತಸ್ತಮೋರೂಪೇಣ ವೃತ್ರೇಣ ಮೇಘಸ್ಯಾವೃತತ್ವಾದ್ವೃಷ್ಟ್ಯುದಕಮಪ್ಯಾವೃತಮಿತ್ಯುಚ್ಯತೇ । ಈಮಿಮಾಃ ಪೂರ್ವೋಕ್ತಾ ನದ್ಯೋ ನದೀರಪಃ । ಸದನಾನ್ನದ್ಯ ಇತಿ ವ್ಯುತ್ಪತ್ತ್ಯಾ ನದೀಶಬ್ದೇನಾಪ ಉಚ್ಯಂತೇ । ವವ್ರಿಣಾವರಕೇಣ ವೃತ್ರೇಣ ಹಿತಾಃ ಪಿಹಿತಾ ವಿಶ್ವಾ ವ್ಯಾಪನೀರನುಷ್ಠಾ ಅನುಕ್ರಮೇಣ ತಿಷ್ಠಂತೀಃ । ಏವಂ ವಿಧಾ ಅಪ ಇಂದ್ರಃ ಪ್ರವಣೇಷು ನಿಮ್ನೇಷು ಭೂಪ್ರದೇಶೇಷ್ವಭಿಜಿಘ್ನತೇ ಅಭಿಗಮಯತಿ ॥ ವವ್ರಿಣಾ । ವೃಞ್ ವರಣ ಇತ್ಯಸ್ಮಾದಾದೃಗಮಹನಜನ ಇತಿ ಕಿಪ್ರತ್ಯಯಃ । ಲಿಡ್ವದ್ಭಾವಾದ್ದ್ವಿರ್ಭಾವಾದಿ । ಯಣಾದೇಶಃ । ಪ್ರತ್ಯಯಸ್ವರಃ । ಅನುಷ್ಠಾಃ । ಆತಶ್ಚೋಪಸರ್ಗ ಇತಿ ತಿಷ್ಠತೇಃ ಕಪ್ರತ್ಯಯಃ । ಉಪ-



CC-0. Jangamwadi Math Collection. Digitized by eGangotri

ಸರ್ಗಾತ್ಸ್ಸನೋತೀತಿ ಷತ್ವಂ । ಜಿಘ್ನತೇ । ಹಂತೇರ್ಗತ್ಯರ್ಥಾದ್ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ಶಪಃ ಶ್ಲುಃ । ಅರ್ತಿಪಿಪರ್ತ್ಯೋಶ್ಚೇತಿ ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ ॥

॥ ಪ್ರತಿಪದಾರ್ಥ ॥

ಅಪಾಂ—(ಮಳೆಯ) ನೀರುಗಳ । ಧರುಣಹ್ವರಂ—ಪ್ರವಾಹಗಳನ್ನು ತಡೆಯುವ । ತಮಃ—ಅಂಧಕಾರವು । ಅತಿಷ್ಠತ್—ನೆಲೆಸಿತು । ವೃತ್ರಸ್ಯ—(ಲೋಕತ್ರಯವನ್ನೂ ಆವರಿಸಿದ) ವೃತ್ರಾಸುರನ । ಜಠರೇಷು—ಉದರಪ್ರದೇಶಗಳಲ್ಲಿ । ಅಂತಃ—ಮಧ್ಯಭಾಗದಲ್ಲಿ । ಪರ್ವತಃ— ಮೇಘವು ( ತಿರೋಹಿತವಾಯಿತು ) । ವವ್ರಿಣಾ—(ಎಲ್ಲವನ್ನೂ ಆವರಿಸಿದ) ವೃತ್ರನಿಂದ । ಹಿತಾಃ—ಮುಚ್ಚಿಡಲ್ಪಟ್ಟ ( ಅಂತಹ ) । ವಿಶ್ವಾಃ—ಸಮಸ್ತವಾದ । ಅನುಷ್ಠಾಃ—ಅನುಕ್ರಮವಾಗಿರುವ । ಈಂ ನದ್ಯಃ — ಈ ನೀರುಗಳನ್ನು । ಇಂದ್ರಃ—ಇಂದ್ರನು । ಪ್ರವಣೇಷು—(ಭೂಮಿಯ) ತಗ್ಗು ಪ್ರದೇಶಗಳಲ್ಲಿ । ಅಭಿ ಜಿಘ್ನತೇ—ಸುತ್ತಲೂ ಹರಿಯುವಂತೆ ಮಾಡುತ್ತಾನೆ.

॥ ಭಾವಾರ್ಥ ॥

ವೃತ್ರನು ಮೂರು ಲೋಕಗಳನ್ನೂ ಆವರಿಸಿದುದರಿಂದ ನೀರುಗಳ ಪ್ರವಾಹಗಳನ್ನು ತಡೆಯುವ ಅಂಧಕಾರವು ನೆಲೆಸಿತು. ವೃತ್ರನ ಉದರಪ್ರದೇಶದ ಮಧ್ಯಭಾಗದಲ್ಲಿ ಮೇಘವು ಮರೆಯಾಯಿತು. ವೃತ್ರನು ಹೀಗೆ ನೀರುಗಳನ್ನೆಲ್ಲ ಮುಚ್ಚಿದಾಗ ಇಂದ್ರನು ಆ ಸಮಸ್ತ ನೀರನ್ನೂ ಅನುಕ್ರಮವಾಗಿ ಬಿಡಿಸಿ ಭೂಮಿಯ ತಗ್ಗು ಪ್ರದೇಶಗಳಲ್ಲಿ ಸುತ್ತಲೂ ಹರಿಯುವಂತೆ ಮಾಡಿದನು.

## English Translation.

The darkness obstructed the current of the waters, the cloud was within the belly of Vritra, but Indra precipitated all the waters which the obstructor had concealed, in succession, down to the hollows (of the earth).

॥ ವಿಶೇಷವಿಷಯಗಳು ॥

ಅತ್ರೇದಮುಕ್ತಂಭವತಿ । ಪುರಾ ಕಿಲ ಜಲಾನಾಂ ವರ್ಷಕಂ ಮೇಘಂ ವೃತ್ರಃ ಸ್ವೋದರೇ ನಿಧಾಯ ಸಕಲಂ ಜಗತ್ ತಿಮಿರಾವೃತಂ ಕೃತ್ವಾ ಮೇಘೋದಕಾನಿ ನಿರುದ್ಧವಾನ್ । ತದಾ ಇಂದ್ರಸ್ತದುದರಸ್ಥಂ ಮೇಘರೂಪಂ ಪರ್ವತಂ ಭಿತ್ವಾ ತತ್ರಸ್ಥಾನ್ಯುದಕಾನಿ ಭೂಮೌ ಪಾತಿತವಾನಿತಿ ॥ ಪೂರ್ವದಲ್ಲಿ ವೃತ್ರಾಸುರನು ವೃಷ್ಟಿಯನ್ನು ಸುರಿಸುವ ಮೇಘವನ್ನು ತನ್ನ ಉದರದಲ್ಲಿ ಇಟ್ಟುಕೊಂಡು ಸಕಲ ಜಗತ್ತಿಗೂ ಕತ್ತಲೆಯುಂಟಾಗುವಂತೆ ಮಾಡಿದನು. ಮತ್ತು ಮೇಘವು ಮಳೆಯನ್ನು ಹುಯ್ಯದಿರುವಂತೆ ತಡೆಗಟ್ಟಿದನು. ಆಗ ಇಂದ್ರನು ವೃತ್ರಾಸುರನ ಉದರದಲ್ಲಿ ಪರ್ವತಾಕಾರದಂತೆ ಇದ್ದ ಮೇಘವನ್ನು ಭೇದಿಸಿ ಅದರಲ್ಲಿದ್ದ ಉದಕವನ್ನು ಮಳೆಯರೂಪದಿಂದ ಭೂಮಿಯ ಮೇಲೆ ಬೀಳುವಂತೆ ಮಾಡಿದನು.

ಧರುಣಹ್ವರಂ—ಇಲ್ಲಿ ಧರುಣ ಶಬ್ದಕ್ಕೆ ಧಾರೆ (ನೀರಿನ) ಎಂದರ್ಥ. ಅದನ್ನು ತಡೆಯುವುದು ಧರುಣಹ್ವರವು. ಇಲ್ಲಿ ಇದು ಕತ್ತಲೆ (ತಮಶ್ಶಬ್ದಕ್ಕೆ) ಗೆ ವಿಶೇಷಣವಾಗಿರುವುದು. ವೃತ್ರನು ಅಂತರಿಕ್ಷವನ್ನೆಲ್ಲಾ ವ್ಯಾಪಿಸಿ ಅಂಧಕಾರವನ್ನುಂಟುಮಾಡಿ ಭೂಮಿಗೆ ಬರುವ ಮಳೆಯನ್ನು ತಡೆದುಬಿಟ್ಟನು.



CC-0. Jangamwadi Math Collection. Digitized by eGangotri

ಈಮ್—ಇದು ಇದಂ ಶಬ್ದದ ಬಹುವಚನದ ಅರ್ಥವನ್ನು ಕೊಡುವುದು. ನದ್ಯಃ ಎಂಬ ಶಬ್ದಕ್ಕೆ ವಿಶೇಷಣವಾಗಿದೆ.

ನದ್ಯಃ—ನದನಾತ್ ನದ್ಯಃ ಎಂಬ ವ್ಯುತ್ಪತ್ತಿಯಿಂದ ನದೀ ಶಬ್ದಕ್ಕೆ ಜಲ ಎಂದರ್ಥ.

ವವ್ರಿಣಾ—ಸಮಸ್ತ ಲೋಕವನ್ನೂ ಮೇಘರೂಪದಿಂದ, ತಮೋರೂಪದಿಂದ ಆವರಿಸುವವನು. ವೃತ್ರಾಸುರ ಇವನಿಂದ.

ಅನುಷ್ಠಾಃ ಅನು ಕ್ರಮೇಣ ತಿಷ್ಠಂತೀತಿ ಅನುಷ್ಠಾಃ—ತಡೆದಿದ್ದ ನೀರು ಕ್ರಮವಾಗಿ ಹರಿಯುವಂತಾಗುವುದು ಎಂಬರ್ಥವನ್ನು ಈಪದವು ಸೂಚಿಸುವುದು.

ಪ್ರವಣೇಷು—ಹಳ್ಳವಾದ ಭೂಮಿಯಲ್ಲಿ ಎಂದರ್ಥ. ವೃತ್ರಾಸುರನನ್ನು ಸಂಹರಿಸಿ ಒಂದೇ ಕಡೆ ಶೇಖರವಾಗಿದ್ದ ಜಲರಾಶಿಯನ್ನುತಗ್ಗಾದ ಪ್ರದೇಶದಲ್ಲಿ ಹರಿಯುವಂತೆ ಮಾಡಿದನು ಎಂದರ್ಥವು.

## ॥ ವ್ಯಾಕರಣಪ್ರಕ್ರಿಯಾ ॥

ಅತಿಷ್ಠತ್—ಷ್ಠಾ ಗತಿನಿವೃತ್ತೌ ಧಾತು. ಭ್ವಾದಿ. ಲಙ್ ಪ್ರಥಮಪುರುಷಏಕವಚನದ ತಿಪಿಗೆ ಇತಶ್ಚ ಎಂಬುದರಿಂದ ಅಂತ್ಯಲೋಪ. ಶಪ್ ಪರದಲ್ಲಿರುವಾಗ ಪಾಘ್ರಾಧ್ಮಾಸ್ಥಾಮ್ನಾ (ಪಾ. ಸೂ. ೭-೩-೭೮) ಎಂಬುದರಿಂದ ಧಾತುವಿಗೆ ತಿಷ್ಠ ಎಂಬ ಆದೇಶ. ಲಙ್ ನಿಮಿತ್ತಕವಾಗಿ ಅಂಗಕ್ಕೆ ಅಡಾಗಮ. ಅತಿಷ್ಠತ್ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.

ವವ್ರಿಣಾ—ವೃಞ್ ವರಣೇ ಧಾತು. ಆದೃಗಮಹನಜನ (ಪಾ. ಸೂ. ೩-೨-೧೭೧) ಎಂಬುದರಿಂದ ಕಿ ಪ್ರತ್ಯಯ. ಲಿಟ್ಚ ಎಂದು ಸೂತ್ರದಲ್ಲಿ ಲಿಡ್ವದ್ಭಾವ ಹೇಳಿರುವುದರಿಂದ ಧಾತುವಿಗೆ ತನ್ನಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಉರತ್ ಎಂಬುದರಿಂದ ಅತ್ವ. ರಪರವಾಗಿ ಬರುವುದರಿಂದ ಹಲಾದಿಃಶೇಷಃ ಸೂತ್ರದಿಂದ ಆದಿಹಲ್‌ಶೇಷ. ವವೃ+ಇ ಎಂದಿರುವಾಗ ಯಣಾದೇಶ. ವವ್ರಿ ಎಂದು ಇಕಾರಾಂತಶಬ್ದವಾಗುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಅಂತೋದಾತ್ತವಾದ ಶಬ್ದವಾಗುತ್ತದೆ. ತೃತೀಯಾಏಕವಚನರೂಪ.

ಹಿತಾಃ—ಡುಧಾಞ್ ಧಾರಣಪೋಷಣಯೋಃ ಧಾತು. ತಿಷ್ಠಾ (ಕ್ತ) ಪರದಲ್ಲಿರುವಾಗ ದಧಾತೇರ್ಹಿಃ (ಪಾ. ಸೂ. ೭-೪-೪೨) ಎಂಬುದರಿಂದ ಧಾತುವಿನ ಹಿ ಆದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತ. ಪ್ರಥಮಾ ಬಹುವಚನಾಂತರೂಪ.

ಅನುಷ್ಠಾಃ—ಅನು ಎಂಬ ಉಪಸರ್ಗವು ಉಪಪದವಾಗಿರುವಾಗ ಷ್ಠಾ ಧಾತುವಿಗೆ ಆತಶ್ಚೋಪಸರ್ಗೇ (ಪಾ. ಸೂ. ೩-೩-೧೦೬) ಎಂಬುದರಿಂದ ಕ ಪ್ರತ್ಯಯ. ಆತೋಲೋಪ ಇಟಿಚ ಸೂತ್ರದಿಂದ ಕ ಪರದಲ್ಲಿರುವಾಗ ಧಾತುವಿನ ಆಕಾರಕ್ಕೆ ಲೋಪ. ಉಪಸರ್ಗಾತ್‌ಸುನೋತಿ (ಪಾ. ಸೂ. ೮-೩-೬೫) ಎಂಬುದರಿಂದ ಉಪಸರ್ಗದ ಉಕಾರಪರದಲ್ಲಿರುವುದರಿಂದ ಧಾತುವಿನ ಸಕಾರಕ್ಕೆ ಷಕಾರಾದೇಶ. ಷ್ಟುತ್ವದಿಂದ ಥಕಾರಕ್ಕೆ ಠಕಾರಾದೇಶ. ಪ್ರತ್ಯಯಸ್ವರದಿಂದ ಅಂತೋದಾತ್ತ ಬಹುವಚನಾಂತರೂಪ.

ಜಿಘ್ನತೇ—ಹನ ಹಿಂಸಾಗತ್ಯೋಃ ಧಾತು. ಇಲ್ಲಿ ಗತ್ಯರ್ಥದಲ್ಲಿ ಸ್ವೀಕೃತವಾಗಿದೆ. ವ್ಯತ್ಯಯೋ ಬಹುಲಂ ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಅದಾದಿಯಲ್ಲಿರುವುದರಿಂದ ಶಪಿಗೆ ಲುಕ್ ಪ್ರಾಪ್ತವಾದರೆ ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾ



CC-0. Jangamwadi Math Collection. Digitized by eGangotri

ಸಶ್ಚೆ ಕುಹೋಶ್ಚುಃ ಎಂಬುದರಿಂದ ಚುತ್ವ ಜಸ್ತ್ವ. ಜಹನ್+ತೇ ಎಂದಿರುವಾಗ, ಅಪಿತ್ ಸಾರ್ವಧಾತುಕವಾದುದರಿಂದ ತೇ ಎಂಬುದಕ್ಕೆ ಙಿದ್ವದ್ಭಾವ ಬರುತ್ತದೆ. ಅದರಿಂದ ಗಮಹನಜನ—(ಪಾ. ಸೂ. ೬-೪-೯೮) ಎಂಬುದರಿಂದ ಉಪಧಾಲೋಪ. ಧಾತುವಿನ ಹಕಾರಕ್ಕೆ ಹೋಹಂತೇ—ಸೂತ್ರದಿಂದ ಕುತ್ವ. ಅಥವಾ ಅಭ್ಯಾಸಾಚ್ಚ ಎಂಬುದರಿಂದ ಕುತ್ವದಿಂದ ಘಕಾರಾದೇಶ. ಅತಿಪಿಪರ್ತ್ಯೋಶ್ಚ ಎಂಬುದರಿಂದ ವಿಹಿತವಾದ ಇತ್ವವು ಬಹುಲಂ ಛಂದಸಿ (ಪಾ. ಸೂ. ೭-೪-೭೮) ಎಂಬುದರಿಂದ ಇಲ್ಲಿ ಅಭ್ಯಾಸಕ್ಕೆ ಇತ್ವ ಬರುತ್ತದೆ. ಜಿಘ್ನತೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಸ ಶೇವೃಧಮಧಿ ಧಾ ದ್ಯುಮ್ನಮಸ್ಮೇ ಮಹಿ ಕ್ಷತ್ರಂ ಜನಾಷಾಳಿಂದ್ರ
ತವ್ಯಂ ।
ರಕ್ಷಾ ಚ ನೋ ಮಘೋನಃ ಪಾಹಿ ಸೂರೀನ್ರಾಯೇ ಚ ನಃ ಸ್ವಪತ್ಯಾ
ಇಷೇ ಧಾಃ ॥ ೧೧ ॥

॥ ಪದಪಾಠಃ ॥

ಸಃ । ಶೇಽವೃಧಂ । ಅಧಿ । ಧಾಃ । ದ್ಯುಮ್ನಂ । ಅಸ್ಮೇ ಇತಿ । ಮಹಿ । ಕ್ಷತ್ರಂ ।
ಜನಾಷಾಟ್ । ಇಂದ್ರ । ತವ್ಯಂ ।
ರಕ್ಷ । ಚ । ನಃ । ಮಘೋನಃ । ಪಾಹಿ । ಸೂರೀನ್ । ರಾಯೇ । ಚ । ನಃ ।
ಸುಽಅಪತ್ಯೈ । ಇಷೇ । ಧಾಃ ॥ ೧೧ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ಸ ತ್ವಮಸ್ಮೇ ಅಸ್ಮಾಸು ದ್ಯುಮ್ನಂ ಯಶೋಽಧಿ ಧಾಃ । ಅಧಿನಿಧೇಹಿ । ಕೀದೃಶಮಿತ್ಯಾಹ । ಶೇವೃಧಂ । ಶಂ ಶಮನಂ । ರೋಗಾಣಾಂ ಶಮನೇ ಸತಿ ಯದ್ವರ್ಧತೇ ತಾದೃಶಂ । ತಥಾ ಮಹಿ ಮಹತ್ ಜನಾಷಾಟ್ ಶತ್ರುಜನಾನಾಮಭಿಭವಿತೃ ತವ್ಯಂ ಪ್ರವೃದ್ಧಂ ಕ್ಷತ್ರಂ ಬಲಂ ಚಾಧಿ ಧಾ ಇತಿ ಶೇಷಃ । ಕಿಂಚ ಹೇ ಇಂದ್ರ ನೋಽಸ್ಮಾನ್ಮಘೋನೋ ಧನವತಃ ಕೃತ್ವಾ ರಕ್ಷ । ಪಾಲಯ । ಸೂರೀನ್





CC-0. Jangamwadi Math Collection. Digitized by eGangotri

ವಿದುಷೋಽಸ್ಮಾನಪಿ ಪಾಹಿ । ಪಾಲಯ । ತಥಾ ರಾಯೇ ಧನಾಯ ಚ ಸ್ವಪತ್ಯೈ ಶೋಭನಪುತ್ರಯುಕ್ತಾ. ಯೇಷೇಽನ್ನಾಯ ಚ ನೋಽಸ್ಮಾನ್ಧಾಃ । ಧೇಹಿ । ಸ್ಥಾಪಯ ॥ ಧಾಃ । ಛಂದಸಿ ಲುಙ್ಲಙ್ಲಿಟ ಇತಿ ಪ್ರಾರ್ಥನಾಯಾಂ ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡ. ಭಾವಃ । ಅಸ್ಮೇ । ಸುಪಾಂ ಸುಲುಗಿತ್ಯಸ್ಮಚ್ಛಬ್ದಾತ್ಸಪ್ತಮ್ಯಾಃ ಶೇಆದೇಶಃ । ಜನಾಷಾಟ್ । ಜನಾನ್ ಸಹತ ಇತಿ ಜನಾಷಾಟ್ । ಛಂದಸಿ ಸಹಃ । ಪಾ. ೩-೨-೬೩ । ಇತಿ ಣ್ವಿಃ । ಅತ ಉಪಧಾ. ಯಾ ಇತಿ ವೃದ್ಧಿಃ । ಸಹೇಃ ಸಾಡಃ ಸಃ । ಪಾ. ೮-೩-೫೬ । ಇತಿ ಷತ್ವಂ । ಅನ್ಯೇಷಾಮಪಿ ದೃಶ್ಯತ ಇತಿ ಪೂರ್ವಪದದೀರ್ಘಃ । ತವ್ಯಂ । ತವತಿರ್ವೃದ್ಧ್ಯರ್ಥಃ । ಸೌತ್ರೋ ಧಾತುಃ । ಅಚೋ ಯದಿತಿ ಯತ್ । ಗುಣೇ ಧಾತೋಸ್ತನ್ನಿಮಿತ್ತಸ್ಯೈವ । ಪಾ. ೬-೧-೮೦ । ಇತ್ಯವಾದೇಶಃ । ಯತೋಽನಾವ ಇತ್ಯಾದ್ಯುದಾತ್ತತ್ವಂ । ರಕ್ಷ । ರಕ್ಷ ಪಾಲನೇ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ದ್ವ್ಯಚೋಽತಸ್ತಿ. ಙ ಇತಿ ದೀರ್ಘತ್ವಂ । ಮಘೋನಃ । ಶ್ವಯುವಮಘೋನಾಮತದ್ಧಿತ ಇತಿ ಶಸಿ ಸಂಪ್ರಸಾರಣಂ । ಪಾ. ಹಿ । ಅದಾದಿತ್ವಾಚ್ಛಪೋ ಲುಕ್ । ಹೇರಪಿತ್ತ್ವಾತ್ತಸ್ಯೈವ ಸ್ವರಃ ಶಿಷ್ಯತೇ । ಮಘೋನ ಇತ್ಯಸ್ಯ ವಾಕ್ಯಾಂತರಗತತ್ವಾನ್ನಿಘಾತಾಭಾವಃ । ಸ್ವಪತ್ಯೈ । ಶೋಭನಾನ್ಯಪತ್ಯಾನಿ ಯಸ್ಯಾಃ ಸಾ ತಥೋಕ್ತಾ । ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಜಸಾದಿಷು ಛಂದಸಿ ವಾವಚನಮಿತಿ ಯಾಡಾಪಃ । ಪಾ. ೭-೩-೧೧೩ । ಇತಿ ಯಾಡಾಗಮಾಭಾವೇ ವೃದ್ಧಿರೇಚಿ । ಪಾ. ೬-೧-೮೮ । ಇತಿ ವೃದ್ಧಿಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ, । ಸಃ—ಆ ನೀನು । ಅಸ್ಮೇ—ನಮ್ಮಲ್ಲಿ । ಶೇವೃಧಂ—ವೃದ್ಧಿಹೊಂದ ತಕ್ಕ । ದ್ಯುಮ್ನಂ—ಯಶಸ್ಸನ್ನು । ಅಧಿ ಧಾಃ—ಇಟ್ಟು ಅನುಗ್ರಹಿಸು (ಹಾಗೆಯೇ) । ಮಹಿ—ಮಹತ್ತಾದುದೂ । ಜನಾಷಾಟ್— ಶತ್ರುಗಳನ್ನು ಸೋಲಿಸತಕ್ಕದ್ದೂ । ತವ್ಯಂ—ಪ್ರವೃದ್ಧವಾಗತಕ್ಕದ್ದೂ ಆದ । ಕ್ಷತ್ರಂ—ಬಲವನ್ನು । (ಅಧಿ ಧಾಃ—ಇಡು) । (ಮತ್ತು) (ಇಂದ್ರ—ಎಲೈ ಇಂದ್ರನೇ) । ನಃ—ನಮ್ಮನ್ನು । ಮಘೋನಃ—ಧನವಂತರನ್ನಾಗಿ ಮಾಡಿ । ರಕ್ಷ—ಪಾಲಿಸು । ಚ —ಮತ್ತು । ಸೂರೀನ್—ವಿದ್ಯಾವಂತರಾದ ಇತರರನ್ನೂ । ಪಾಹಿ—ಕಾಪಾಡು । ರಾಯೇ—ಧನಕ್ಕೂ । ಸ್ವಪತ್ಯೈ—ಶ್ರೇಷ್ಠರಾದ ಪುತ್ರರಿಂದೊಡಗೂಡಿದ । ಇಷೇ ಚ—ಅನ್ನಕ್ಕೂ ಕೂಡ । ನಃ—ನಮ್ಮನ್ನು । ಧಾಃ—ಸ್ಥಾಪಿಸು (ಧನವನ್ನೂ ಅನ್ನವನ್ನೂ ಹೊಂದುವಂತೆ ಮಾಡು)

॥ ಭಾವಾರ್ಥ ॥

ಎಲೈ ಇಂದ್ರನೇ, ನಮಗೆ ವಿಸ್ತಾರವಾಗಿ ಹರಡತಕ್ಕ ಯಶಸ್ಸನ್ನೂ ಮತ್ತು ಮಹತ್ತಾದುದೂ ಶತ್ರುಗಳನ್ನು ಸೋಲಿಸತಕ್ಕದ್ದೂ, ಪ್ರವೃದ್ಧವಾಗತಕ್ಕದ್ದೂ ಆದ ಬಲವನ್ನೂ ಕೊಟ್ಟು ಅನುಗ್ರಹಿಸು. ನಮ್ಮನ್ನು ಧನವಂತರನ್ನಾಗಿ ಮಾಡಿ ಪಾಲಿಸು. ಇತರ ವಿದ್ಯಾವಂತರನ್ನೂ ಸಲಹು. ನಮಗೆ ಧನವನ್ನೂ ಮತ್ತು ಶ್ರೇಷ್ಠರಾದ ಪುತ್ರರಿಂದ ಕೂಡಿದ ಅನ್ನವನ್ನೂ ಕೊಟ್ಟು ಅನುಗ್ರಹಿಸು.

## English Translation.

Bestow upon us, Indra, increasing reputation; (bestow upon us) great augmenting and foe-subduing strength; protect us by making us rich; cherish the wise; and confer upon us wealth with excellent progeny and food.



CC-0. Jangamwadi Math Collection. Digitized by eGangotri

ವಿಶೇಷ ವಿಷಯಗಳು

ಅಸ್ಮೇ—ಇದು ಅಸ್ಮಚ್ಛಬ್ದದ ಸಪ್ತಮೀ ಬಹುವಚನದ ರೂಪ. ಅಸ್ಮಾಸು (ನಮ್ಮಲ್ಲಿ) ಎಂಬರ್ಥದಲ್ಲಿ ಇದು ಪ್ರಯೋಗಿಸಲ್ಪಟ್ಟಿದೆ. ಈ ಶಬ್ದವು ಎಲ್ಲಾ ವಿಭಕ್ತಿಗಳ ಅರ್ಥದಲ್ಲಿಯೂ ಉಪಯೋಗಿಸಲ್ಪಡುವುದು.

ಶೇವೃಧಂ—ಶಂ ಶಮನಂ । ರೋಗಾಣಾಂ ಶಮನೇ ಸತಿ ಯತ್ ವರ್ಧತೇ ತಾದೃಶಂ—ವ್ಯಾಧಿಯು ನಿವಾರಣೆಯಾದ ಮೇಲೆ ರೋಗಿಯು ಅಭಿವೃದ್ಧಿಯಾದಂತೆ, ನಮ್ಮ ಕೀರ್ತಿಯು ಅಭಿವೃದ್ಧಿ ಹೊಂದಲಿ.

ಜನಾಷಾಟ್—ಶತ್ರು ಜನರನ್ನು ತಿರಸ್ಕರಿಸುವುದು. ಇದು ಕ್ಷತ್ರಂ ಎಂಬ ಪದಕ್ಕೆ ವಿಶೇಷಣವಾಗಿದೆ. ಜನಾನ್ ಸಹತೇ ಇತಿ ಜನಾಷಾಟ್ ಎಂಬುದೇ ಇದರ ವ್ಯುತ್ಪತ್ತಿ.

ಮಘೋನಃ — ಮಘಶಬ್ದಕ್ಕೆ ಐಶ್ವರ್ಯವೆಂಬರ್ಥವಿರುವುದರಿಂದ ನಮ್ಮನ್ನು ಐಶ್ವರ್ಯವಂತರನ್ನಾಗಿ ಮಾಡು ಎಂದು ಪ್ರಾರ್ಥಿಸುವಾಗ ಈ ಶಬ್ದವು ಅಸ್ಮಾನ್ ಎಂಬ ಶಬ್ದಕ್ಕೆ ವಿಶೇಷಣವಾಗಿದೆ.

ಸ್ವಪತ್ಯೈ—ಶೋಭನಾನಿ ಅಪತ್ಯಾನಿ ಯಸ್ಯಾಃ—ಶೋಭನರಾದ ಪುತ್ರಾದಿಗಳುಳ್ಳದ್ದು. ಈ ಪದವು ಇಷೇ, (ಅನ್ನಾಯ) ಎಂಬ ಪದಕ್ಕೆ ವಿಶೇಷಣವಾಗಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಧಾಃ—ಡುಧಾಞ್ ಧಾರಣಪೋಷಣಯೋಃ ಧಾತು. ಪ್ರಾರ್ಥನಾರೂಪ ಅರ್ಥದಲ್ಲಿ ಛಂದಸಿ ಲುಙ್ ಲಙ್‌ಲಿಟಃ ಎಂಬುದರಿಂದ ಲಙ್. ಮಧ್ಯಮಪುರುಷದ ಸಿಪಿನ ಇಕಾರಕ್ಕೆ ಇತಶ್ಚ ಎಂಬುದರಿಂದ ಲೋಪ. ಚ್ಲೇಃಸಿಚ್ ಎಂಬುದರಿಂದ ಪ್ರಾಪ್ತವಾದ ಸಿಚಿಗೆ ಗಾತಿಸ್ಥಾಘುಪಾ—(ಪಾ. ಸೂ. ೨-೪-೭೭) ಎಂಬುದರಿಂದ ಲುಕ್ ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ ಬಂದರೆ ಧಾಃ ಎಂದು ರೂಪವಾಗುತ್ತದೆ. ನಿಘಾತಸ್ವರ ಬರುತ್ತದೆ.

ಅಸ್ಮೇ—ಅಸ್ಮಚ್ಛಬ್ದಕ್ಕೆ ಸಪ್ತಮೀ ಏಕವಚನ ಪರದಲ್ಲಿರುವಾಗ ಸುಪಾಂ ಸುಲುಕ್—ಸೂತ್ರದಿಂದ ಸಪ್ತಮೀ ವಿಭಕ್ತಿಗೆ ಶೇ ಆದೇಶ. ಶೇಷೇಲೋಪಃ ಎಂಬುದರಿಂದ ಮಪರ್ಯಂತದ ಮೇಲಿರುವ ಅದಿಗೆ ಲೋಪ ಬಂದರೆ ಅಸ್ಮೇ ಎಂದು ರೂಪವಾಗುತ್ತದೆ.

ಜನಾಷಾಟ್—ಜನಾನ್ ಸಹತೇ ಇತಿ ಜನಾಷಾಟ್. ಛಂದಸಿ ಸಹಃ (ಪಾ. ಸೂ. ೩-೨-೬೩) ಎಂಬುದರಿಂದ (ಷಹ ಮರ್ಷಣೇ) ಷಹ ಧಾತುವಿಗೆ ಣ್ವಿ ಪ್ರತ್ಯಯ. ಣಿತ್ತಾದುದರಿಂದ ಅತ ಉಪಧಾಯಾಃ ಎಂಬುದರಿಂದ ಧಾತುವಿನ ಉಪಧಾ ಅಕಾರಕ್ಕೆ ವೃದ್ಧಿ. ಜನಸಾಹ್ ಎಂದಿರುವಾಗ ಪ್ರಥಮಾಏಕವಚನದಲ್ಲಿ ಸಹೇಃ ಸಾಡಃ ಸಃ (ಪಾ. ಸೂ. ೮-೩-೫೬) ಎಂಬುದರಿಂದ ಧಾತುವಿನ ಸಕಾರಕ್ಕೆ ಷತ್ವ. ಅನ್ಯೇಷಾಮಪಿ ದೃಶ್ಯತೇ ಎಂಬುದರಿಂದ ಪೂರ್ವಪದಕ್ಕೆ ದೀರ್ಘ. ಜನಾಷಾಹ್+ಸ್ ಎಂದಿರುವಾಗ ಹಲ್‌ಙ್ಯಾಭ್ಯೋ—ಸೂತ್ರದಿಂದ ಸು ಲೋಪ. ಹೋಢಃ ಎಂಬುದರಿಂದ ಹಕಾರಕ್ಕೆ ಢಕಾರಾದೇಶ. ಝಲಾಂ ಜಶೋಂತೇ ಸೂತ್ರದಿಂದ ಅದಕೆ ಜಸ್ತ್ವದಿಂದ ಡಕಾರಾದೇಶ. ವಾವಸಾನೇ ಎಂಬುದರಿಂದ ವಿಕಲ್ಪವಾಗಿ ಚರ್ತ್ವ. ಜನಾಷಾಟ್ ಎಂದು ರೂಪವಾಗುತ್ತದೆ. ಗತಿಕಾರಕ— ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ತವ್ಯಮ್—ವೃದ್ಧ್ಯರ್ಥದಲ್ಲಿ ತು ಎಂಬ ಧಾತುವು ಸೂತ್ರಮಾತ್ರದಿಂದ ನಿರ್ದಿಷ್ಟವಾಗಿದೆ. ಇದಕ್ಕೆ ಅಚೋಯತ್ (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ಯತ್ ಪರದಲ್ಲಿರುವಾಗ ಧಾತುವಿಗೆ



CC-0. Jangamwadi Math Collection. Digitized by eGangotri

ಆರ್ಧಧಾತುಕನಿಮಿತ್ತವಾಗಿ ಗುಣ. ಆಗ ಯತ್ ಪ್ರತ್ಯಯನಿಮಿತ್ತಕವಾಗಿಯೇ ಓಕಾರರೂಪ ಏಚ್ ಬಂದ ಅದಕ್ಕೆ ಯಾದಿಯಾದ ಯತ್ ಪರದಲ್ಲಿ ಬಂದುದರಿಂದ ಧಾತೋಸ್ತನ್ನಿಮಿತ್ತಸ್ಯೈವ (ಪಾ. ಸೂ. ೬-೧-೮೦) ಎಂಬುದರಿಂದ ಅವಾದೇಶ ಬರುತ್ತದೆ. ಯತೋಽನಾವಃ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ರಕ್ಷ—ರಕ್ಷ ಪಾಲನೇ ಧಾತು. ಲೋಟ್ ಮಧ್ಯಮಪುರುಷದ ಸಿಪಿಗೆ ಹಿ ಆದೇಶ. ಶಪ್ ವಿಕರಣ ಬಂದಾಗ ಅಕಾರದ ಪರದಲ್ಲಿ ಹಿ ಬಂದುದರಿಂದ ಅತೋಹೇಃ ಎಂಬುದರಿಂದ ಹಿಗೆ ಲುಕ್. ರಕ್ಷ ಎಂದಾಗುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. ಪಾದದ ಆದಿಯಲ್ಲಿರುವುದ ರಿಂದ ಅಪಾದಾದೌ ಎಂದು ನಿಷೇಧಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ದ್ವ್ಯಚೋಽತಸ್ತಿಙಃ (ಪಾ. ಸೂ. ೬-೩-೧೩೫) ಎಂಬುದರಿಂದ ದ್ವ್ಯಚ್ಕವಾದುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಮಘೋನಃ—ಮಘವನ್ ಶಬ್ದಕ್ಕೆ ದ್ವಿತೀಯಾಬಹುವಚನ ಪರದಲ್ಲಿರುವಾಗ ಭಸಂಜ್ಞಾ ಇರುವುದ ರಿಂದ ಶ್ವಯುವಮಘೋನಾಮತದ್ಧಿತೇ (ಪಾ. ಸೂ. ೬-೪-೧೩೩) ಎಂಬುದರಿಂದ ಸಂಪ್ರಸಾರಣ. ಸಂಪ್ರಸಾರ ಣಾಚ್ಚ ಎಂಬುದರಿಂದ ಪೂರ್ವರೂಪ. ಮಘ+ಉನ್+ಅಸ್ ಎಂದಿರುವಾಗ ಗುಣ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗಗಳು ಬಂದರೆ ಮಘೋನಃ ಎಂದು ರೂಪವಾಗುತ್ತದೆ.

ಪಾಹಿ—ಪಾ ರಕ್ಷಣೇ ಧಾತು ಅದಾದಿ. ಲೋಣ್ಮಧ್ಯಮದಲ್ಲಿ ಸಿಪಿಗೆ ಹಿ ಆದೇಶ. ಅದಿಪ್ರಭೃತಿಭ್ಯಃ ಶಪಃ ಎಂಬುದರಿಂದ ಶಬ್ಲುಕ್. ಹಿಗೆ ಅಪಿತ್ವವಿಧಾನಮಾಡಿರುವುದರಿಂದ ಪ್ರತ್ಯಯ ಸ್ವರ ಬರುತ್ತದೆ. ಪಾಹಿ ಎಂಬುದು ಅಂತೋದಾತ್ತವಾಗುತ್ತದೆ. ಮಘೋನಃ ಎಂಬ ಆತಿಙಂತವು ಪೂರ್ವದಲ್ಲಿದ್ದರೂ ಅದು ಬೇರೆ ವಾಕ್ಯ ಸಂಬಂಧಿಯಾದುದರಿಂದ, ಪಾಹಿ ಘಟಿತವಾಕ್ಯದ ಆದಿಯಲ್ಲಿ ಇದು ಬಂದುದರಿಂದ ನಿಘಾತಸ್ವರ ಬರುವುದಿಲ್ಲ.

ಸ್ವಪತ್ಯೈ—ಶೋಭನಾನಿ ಅಪತ್ಯಾನಿ ಯಸ್ಯಾಃ ಸಾ. ಸ್ವಪತ್ಯಾ. ಇದಕ್ಕೆ ಚತುರ್ಥೀ ಏಕವಚನದ ಙೇ ಪರದಲ್ಲಿರುವಾಗ ಜಸಾದಿಷು ಛಂದಸಿ ವಾ ವಚನಮ್ ಎಂಬ ವಚನದಿಂದ ಯಾಡಾಪಃ (ಪಾ. ಸೂ. ೭-೩-೧೧೩) ಎಂಬುದರಿಂದ ಯಾಡಾಗಮವು ಬಾರದಿರುವಾಗ ಏಚ್ ಪರದಲ್ಲಿರುವುದರಿಂದ ವೃದ್ಧಿರೇಚಿ (ಪಾ. ಸೂ. ೬-೧-೮೮) ಎಂಬುದರಿಂದ ವೃದ್ಧಿ ಬಂದರೆ ಸ್ವಪತ್ಯೈ ಎಂದು ರೂಪವಾಗುತ್ತದೆ. ನಞ್ಸುಭ್ಯಾಂ ಎಂಬು ದರಿಂದ ಉತ್ತರಪದ ಅಂತೋದಾತ್ತಸ್ವರ ಬರುತ್ತದೆ. ಏಕಾದೇಶ ಉದಾತ್ತೇನೋದಾತ್ತಃ ಎಂಬುದರಿಂದ ವಿಭಕ್ತಿಯೊಡನೆ ಏಕಾದೇಶ ವೃದ್ಧಿಬಂದಾಗಲೂ ಐಕಾರವು ಉದಾತ್ತವಾಗುತ್ತದೆ. ಮಂತ್ರದಲ್ಲಿ ಐಕಾರಕ್ಕೆ ಇಕಾರ ಪರದಲ್ಲಿರುವುದರಿಂದ ಏಚೋಽಯವಾಯಾವಃ ಎಂಬುದರಿಂದ ಆಯಾದೇಶ ಬರುತ್ತದೆ. ಆಗ ವಿಕಲ್ಪವಾಗಿ ಯಲೋಪವಾಗುತ್ತದೆ.

**ಐವತ್ತ ನಾಲ್ಕನೆಯ ಸೂಕ್ತವು ಸಮಾಪ್ತವು.**





CC-0. Jangamwadi Math Collection. Digitized by eGangotri

# ಐವತ್ತೈದನೆಯ ಸೂಕ್ತವು

ದಿವಶ್ಚಿದಸ್ಯೇತ್ಯಷ್ಟರ್ಚಂ ಪಂಚಮಂ ಸೂಕ್ತಂ ಸವ್ಯಸ್ಯಾರ್ಷಮೈಂದ್ರಂ ಜಾಗತಂ। ತಥಾ ಚಾನುಕ್ರಾಂತಂ। ದಿವಶ್ಚಿದಷ್ಟೌ ಜಾಗತಂ ಹೀತಿ। ಹೀತ್ಯಭಿಧಾನಾತ್ತುಹ್ಯಾದಿಪರಿಭಾಷಯೋತ್ತರೇ ದ್ವೇ ಚ ಸೂಕ್ತೇ ಜಾಗತೇ॥ ಅತಿರಾತ್ರೇ ಪ್ರಥಮೇ ಪರ್ಯಾಯೇ ಮೈತ್ರಾವರುಣಶಸ್ತ್ರ ಇದಂ ಸೂಕ್ತಂ। ಸೂತ್ರಿತಂ ಚ। ದಿವಶ್ಚಿದಸ್ಯೇತಿ ಪರ್ಯಾಸಃ ಸ ನೋ ನವ್ಯೇಭಿರಿತಿ ಚ। ಆ. ೬-೪। ಇತಿ। ವಿಷುವತಿ ನಿಷ್ಕೇವಲ್ಯೇಽಪ್ಯೇತತ್ಸೂಕ್ತಂ। ಸೂತ್ರಿತಂ ಚ। ಶಂಸೇದೇವೋತ್ತರಾಣಿ ಷಟ್ ದಿವಶ್ಚಿದಸ್ಯ। ಆ. ೮-೬। ಇತಿ। ಸಮೂಳ್ಹಸ್ಯ ದಶರಾತ್ರಸ್ಯ ದ್ವಿತೀಯೇ ಛಂದೋಮೇಽಪಿ ನಿಷ್ಕೇವಲ್ಯ ಏತತ್ಸೂತ್ರಿತಂ। ತ್ವಂ ಮಹಾಁ ಇಂದ್ರ ಯೋ ಹ ದಿವಶ್ಚಿದಸ್ಯ ತ್ವಂ ಮಹಾಁ ಇಂದ್ರ ತುಭ್ಯಮಿತಿ ನಿಷ್ಕೇವಲ್ಯಂ। ಆ. ೮-೭। ಇತಿ॥

ಅನುವಾದವು—ದಿವಶ್ಚಿದಸ್ಯ ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಐದನೆಯ ಸೂಕ್ತವು. ಇದರಲ್ಲಿ ಎಂಟು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸವ್ಯನು ಋಷಿಯು, ಇಂದ್ರನು ದೇವತೆಯು, ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ-ದಿವಶ್ಚಿದಷ್ಟೌ ಜಾಗತಂ ಹೀತಿ ಎಂದು ಹೇಳಿರುವುದು. ಸೂತ್ರದಲ್ಲಿ ಹಿ ಎಂಬ ಪದಪ್ರಯೋಗವು ಮುಂದಿನ ಎರಡು ಸೂಕ್ತಗಳೂ ಜಗತೀಛಂದಸ್ಕವೆಂಬರ್ಥವನ್ನು ಸೂಚಿಸುವುದು. ಅತಿರಾತ್ರವೆಂಬ ಯಾಗದಲ್ಲಿ ಪ್ರಥಮಪರ್ಯಾಯದಲ್ಲಿ ಮೈತ್ರಾವರುಣ ಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದು. ಈ ವಿಷಯವು ಆಶ್ವಲಾಯನಶ್ರೌತಸೂತ್ರದ—ದಿವಶ್ಚಿದಸ್ಯೇತಿ ಪರ್ಯಾಸಃ ಸನೋ ನವ್ಯೇಭಿರಿತಿ ಚ ಎಂಬ ಸೂತ್ರದಲ್ಲಿ ನಿರ್ದೇಶಿಸಲ್ಪಟ್ಟಿರುವುದು. (ಆ. ೬-೪) ವಿಷುವತ್ಸಂಜ್ಞಯಾಗದಲ್ಲಿಯೂ ನಿಷ್ಕೇವಲ್ಯಶಸ್ತ್ರ ಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ಶಂಸೇದೇವೋತ್ತರಾಣಿ ಷಡ್ದಿವಶ್ಚಿದಸ್ಯ ಎಂಬ ಸೂತ್ರವು ನಿರ್ದೇಶಿಸುವುದು. (ಆ. ೮-೬) ಸಮೂಳ್ಹವೆಂಬ ದಶರಾತ್ರಯಾಗದಲ್ಲಿಯೂ ದ್ವಿತೀಯಛಂದೋಮಾಮಂತ್ರ ಪಠನಕಾಲದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಲ್ಲಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ತ್ವಂ ಮಹಾಁ ಇಂದ್ರ ಯೋ ಹ ದಿವಶ್ಚಿದಸ್ಯ ತ್ವಂ ಮಹಾಁ ಇಂದ್ರ ತುಭ್ಯಮಿತಿ ನಿಷ್ಕೇವಲ್ಯಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೭).

## ಸೂಕ್ತ—೫೫

ಮಂಡಲ—೧॥ ಅನುವಾಕ—೧೦॥ ಸೂಕ್ತ—೫೫॥
ಅಷ್ಟಕ—೧॥ ಅಧ್ಯಾಯ—೪॥ ವರ್ಗ—೧೯, ೨೦॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೮॥
ಋಷಿಃ—ಸವ್ಯ ಆಂಗಿರಸಃ॥
ದೇವತಾ—ಇಂದ್ರಃ॥
ಛಂದಃ—ಜಗತೀ।

॥ ಸಂಹಿತಾಪಾಠಃ॥

ದಿವಶ್ಚಿದಸ್ಯ ವರಿಮಾ ವಿ ಪಪ್ರಥ ಇಂದ್ರಂ ನ ಮಹ್ನಾ ಪೃಥಿವೀ ಚನ ಪ್ರತಿ। ಭೀಮಸ್ತುವಿಷ್ಮಾಂಚರ್ಷಣಿಭ್ಯ ಆತಪಃ ಶಿಶೀತೇ ವಜ್ರಂ ತೇಜಸೇ ನ ವಂಸಗಃ ॥೧॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ದಿವಃ । ಚಿತ್ । ಅಸ್ಯ । ವರಿಮಾ । ವಿ । ಪಪ್ರಥೇ । ಇಂದ್ರಂ । ನ । ಮಹ್ನಾ । ಪೃಥಿವೀ । ಚನ । ಪ್ರತಿ ।

ಭೀಮಃ । ತುವಿಷ್ಮಾನ್ । ಚರ್ಷಣಿಽಭ್ಯಃ । ಆಽತಪಃ । ಶಿಶೀತೇ । ವಜ್ರಂ । ತೇಜಸೇ । ನ । ವಂಸಗಃ ॥ ೧ ॥

॥ಸಾಯಣಭಾಷ್ಯಂ॥

ಅಸ್ಯೇಂದ್ರಸ್ಯ ವರಿಮೋರುತ್ವಂ ಪ್ರಭಾವಂ ದಿವಶ್ಚಿತ್ ದ್ಯುಲೋಕಾದಪಿ ವಿ ಪಪ್ರಥೇ। ವಿಸ್ತೀರ್ಣಂ ಬಭೂವ । ಪೃಥಿವೀ ಚನ ಪೃಥಿವ್ಯಪಿ ಚ ಮಹ್ನಾ ಮಹಿಮ್ನಾ ಮಹತ್ತ್ವೇನೇಂದ್ರಂ ನ ಪ್ರತಿ ಭವತಿ । ಭೂಮಿರಪೀಂದ್ರಸ್ಯ ಪ್ರತಿನಿಧಿರ್ನ ಭವತಿ । ತತೋಽಪಿ ಸ ಗರೀಯಾನಿತ್ಯರ್ಥಃ । ಭೀಮಃ ಶತ್ರೂಣಾಂ ಭಯಂಕರಸ್ತುವಿಷ್ಮಾನ್ ಪ್ರಜ್ಞಾವಾನ್ ಬಲವಾನ್ವಾ ಚರ್ಷಣಿಭ್ಯೋ ಮನುಷ್ಯೇಭ್ಯಃ ಸ್ತೋತೃಭ್ಯಸ್ತೇಷಾಮರ್ಥಾಯ ಶತ್ರೂಣಾಮಾತಪ ಆಸಮಂತಾತ್ತಾಪಕಾರೀ । ಏವಂವಿಧಃ ಸ ಇಂದ್ರೋ ವಜ್ರಂ ವರ್ಜನಶೀಲಮಾಯುಧಂ ತೇಜಸೇ ತೈಕ್ಷ್ಣ್ಯಾಯ ಶಿಶೀತೇ ತನೂಕರೋತಿ । ತೀಕ್ಷ್ಣೀಕರೋತಿ । ತತ್ರ ದೃಷ್ಟಾಂತಃ । ವಂಸಗೋ ನ । ವನನೀಯಗತಿಮಾನ್ವೃಷಭೋ ಯಥಾ ಸ್ವಶೃಂಗೇ ಯುದ್ಧಾರ್ಥಂ ತೀಕ್ಷ್ಣೀಕರೋತಿ ತದ್ವತ್॥ ದಿವಃ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ವರಿಮಾ । ಉರುಶಬ್ದಾತ್ ಪೃಥ್ವಾದಿಲಕ್ಷಣ ಇಮನಿಚ್ । ಪ್ರಿಯಸ್ಥಿರೇತ್ಯಾದಿನೋರುಶಬ್ದಸ್ಯ ವರಾದೇಶಃ । ಪಪ್ರಥೇ । ಪ್ರಥ ಪ್ರಖ್ಯಾನೇ । ಮಹ್ನಾ ಮಹಿಮ್ನಾ । ವರ್ಣಲೋಪಶ್ಛಾಂದಸಃ । ಯದ್ವಾ । ಮಹೇರೌಣಾದಿಕಃ ಕನಿಪ್ರತ್ಯಯಃ । ಪ್ರತ್ಯಯಸ್ವರೇಣಾಂತೋದಾತ್ತಃ । ತೃತೀಯೈಕವಚನೇಽಲ್ಲೋಪೋಽನ ಇತ್ಯಕಾರಲೋಪಃ । ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ । ಪ್ರತಿ । ಪ್ರತಿಃ ಪ್ರತಿನಿಧಿಪ್ರತಿದಾನಯೋರಿತಿ ಪ್ರತಿನಿಧೌ ಕರ್ಮಪ್ರವಚನೀಯತ್ವಂ । ಕರ್ಮಪ್ರವಚನೀಯಯುಕ್ತೇ । ಪಾ. ೨-೩.೮ । ಇತೀಂದ್ರಶಬ್ದಾದ್ದ್ವಿತೀಯಾ । ಪ್ರತಿನಿಧಿಪ್ರತಿದಾನೇ ಚ ಯಸ್ಮಾತ್ । ಪಾ. ೨-೩-೧೧ । ಇತಿ ಪಂಚಮೀ ತು ಛಾಂದಸತ್ವಾನ್ನ ಭವತಿ । ಭೀಮಃ । ಞಿಭೀ ಭಯ ಇತ್ಯಸ್ಮಾದ್ಧ್ರಿಯಃ ಷುಗ್ವಾ । ಉ. ೧-೧೪೭ । ಇತಿ ಮಕ್ಪ್ರತ್ಯಯಃ । ಭೀಮೋ ಬಿಭ್ಯತ್ಯಸ್ಮಾದಿತಿ ಯಾಸ್ಕಃ । ನಿ. ೧-೨೦ । ಆತಪಃ । ತಪತೀತಿ ತಪಃ । ಪಚಾದ್ಯಚ್ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಶಿಶೀತೇ । ಶೋ ತನೂಕರಣೇ । ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ವಿಕರಣಸ್ಯ ಶ್ಲುಃ । ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ । ಈ ಹಲ್ಯಘೋರಿತೀತ್ವಂ । ಅನಜಾದಾವಪಿ ಲಸಾರ್ವಧಾತುಕೇ ವ್ಯತ್ಯಯೇನಾಭ್ಯಸ್ತಾದ್ಯುದಾತ್ತತ್ವಂ । ಪಾ. ೬-೧-೧೮೯ । ವಂಸಗಃ । ವನ ಷಣ ಸಂಭಕ್ತಾವಿತ್ಯಸ್ಮಾತ್ಕರ್ಮಣ್ಯೌಣಾದಿಕಃ ಸಪ್ರತ್ಯಯಃ । ವಂಸಂ ವನನೀಯಂ ಗಚ್ಛತೀತಿ ವಂಸಗಃ । ಡೋಽನ್ಯತ್ರಾಪಿ ದೃಶ್ಯತೇ । ಪಾ. ೩-೨-೪೮ । ಇತಿ ಗಮೇರ್ಡಪ್ರತ್ಯಯಃ । ದಿವೋದಾಸಾದಿತ್ವಾತ್ಪೂರ್ವಪದಾದ್ಯುದಾತ್ತತ್ವಂ ॥



CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

ಅಸ್ಯ—ಈ ಇಂದ್ರನ | ವರಿಮಾ—ವೈಶಾಲ್ಯವು ಅಥವಾ ಮಹತ್ತ್ವವು | ದಿವಶ್ಚಿತ್—ದ್ಯುಲೋಕಕ್ಕಿಂತಲೂ | ವಿ ಪಪ್ರಥೇ—ಹೆಚ್ಚು ವಿಸ್ತಾರವಾಯಿತು | ಪೃಥಿವೀ ಚನ—ಪೃಥ್ವಿಯೂ ಕೂಡ | ಮಹ್ನಾ—ಮಹತ್ವದಿಂದ| ಇಂದ್ರಂ—ಇಂದ್ರನನ್ನು | ನ ಪ್ರತಿ—ಅನುಕರಿಸುವುದಿಲ್ಲ. (ಅವನಿಗೆ ಸಮಾನವಾಗುವುದಿಲ್ಲ) | ಭೀಮಃ—(ಶತ್ರುಗಳಿಗೆ) ಭಯಂಕರನೂ | ತುವಿಷ್ಮಾನ್—ಪ್ರಜ್ಞಾವಂತನೂ ಅಥವಾ ಬಲವಂತನೂ ಮತ್ತು | ಚರ್ಷಣಿಭ್ಯಃ—ಸ್ತೋತ್ರಮಾಡತಕ್ಕ ಮನುಷ್ಯರಿಗಾಗಿ | ಆತಪಃ—(ಶತ್ರುಗಳಿಗೆ) ಸುತ್ತಲೂ ಹಿಂಸೆ ಮಾಡುವವನೂ ಆದ ಇಂದ್ರನು | ವಜ್ರಂ—ವಜ್ರಾಯುಧವನ್ನು | ತೇಜಸೇ—ಹರಿತವಾಗುವುದಕ್ಕಾಗಿ | ವಂಸಗಃ ನ—ಆಕರ್ಷಕವಾದ ಗತಿಯುಳ್ಳ ವೃಷಭವು (ತನ್ನ ಕೊಂಬನ್ನು) ಉಜ್ಜುವಂತೆ | ಶಿಶೀತೇ—ಮಸೆಯುತ್ತಾನೆ.

॥ ಭಾವಾರ್ಥ ॥

ಈ ಇಂದ್ರನ ವೈಶಾಲ್ಯವು ದ್ಯುಲೋಕಕ್ಕಿಂತಲೂ ಹೆಚ್ಚು ವಿಸ್ತಾರವಾದುದು. ಪೃಥಿವಿಯೂ ಕೂಡ ಮಹತ್ವದಲ್ಲಿ ಇಂದ್ರನನ್ನನುಕರಿಸುವುದಿಲ್ಲ. ಭಯಂಕರನೂ, ಅತ್ಯಂತ ಬಲಶಾಲಿಯೂ, ತನ್ನ ಭಕ್ತರನ್ನು ತೊಂದರೆ ಮಾಡುವ ಶತ್ರುಗಳ ನಾಶಕನೂ ಆದ ಇಂದ್ರನು ತನ್ನ ವಜ್ರಾಯುಧವನ್ನು ಹರಿತ ಮಾಡುವುದಕ್ಕಾಗಿ ವೃಷಭವು ತನ್ನ ಕೊಂಬನ್ನು ಉಜ್ಜುವಂತೆ, ಅದನ್ನು ಮಸೆಯುತ್ತಾನೆ.

## English Translation.

The power of Indra was vaster than heaven; earth could not equal Indra in bulk; formidable and most mighty, he has been ever the afflicter (of the enmies of) those men (who worship him); he whets his thunderbolt for sharpness, as a bull (his horns)

॥ ವಿಶೇಷ ವಿಷಯಗಳು ॥

ದ್ಯಾವಾಪೃಥಿವೀಭ್ಯಾಮಪೀಂದ್ರಸ್ಯ ಮಹಿಮಾ ಗರೀಯಾನ್ ತಥೇಂದ್ರೋ ಭೀಮಾದಿಗುಣವಿಶಿಷ್ಟಃ ಸನ್ ಸ್ವಬಲಸ್ಯ ದರ್ಶಯಿತೃ ವಜ್ರಂ ಹಸ್ತೇ ಧಾರಯತೀತ್ಯರ್ಥಃ ॥ ಇಂದ್ರನ ಶಕ್ತಿಸಾಮರ್ಥ್ಯಗಳು ಅಥವಾ ಮಹಿಮೆಯು ದ್ಯಾವಾಪೃಥಿವೀಗಳಿಗಿಂತ (ಭೂಲೋಕ ಸ್ವರ್ಗಲೋಕಗಳಿಗಿಂತ) ಎಷ್ಟೋ ಹೆಚ್ಚಿನದು. ಆದರೂ ಇಂದ್ರನು ತನ್ನ ಸ್ವಬಲಪರಾಕ್ರಮಗಳನ್ನು ಪ್ರದರ್ಶಿಸುವುದಕ್ಕಾಗಿ ವಜ್ರಾಯುಧವನ್ನು ತನ್ನ ಕೈಯ್ಯಲ್ಲಿ ಧರಿಸುವನು.

ವರಿಮಾ—ಉರುತ್ವಂ ಉರುಶಬ್ದದಮೇಲೆ ನಿಷ್ಪನ್ನವಾದ ಈ ಶಬ್ದವು ಸರ್ವಶ್ರೇಷ್ಠನಾದದ್ದು ಎಂಬರ್ಥವನ್ನು ಕೊಡುವುದು.

ಪೃಥಿವೀ ಚನ ಪ್ರತಿ—ಭೂಮಿಯೂ ಸಹ ಸಮನೆನಿಸುವುದಿಲ್ಲ. ಇಂದ್ರನಿಗೆ ಭೂಮಿಯು ಸರಿಸಮವಾಗುವುದಿಲ್ಲ. ಭೂಮಿಗಿಂತಲೂ ಇಂದ್ರನು ಮಹಿಮಾಶಾಲಿ ಎಂದಭಿಪ್ರಾಯವು.



CC-0. Jangamwadi Math Collection. Digitized by eGangotri

ಭೀಮಃ— ಶತ್ರುಗಳಿಗೆ ಭಯಂಕರನಾದವನು. ಭಯಾರ್ಥಕವಾದ ಭೀಧಾತುವಿನಿಂದ ನಿಷ್ಪನ್ನವಾದ ಶಬ್ದ ಇದು. ಇದಕ್ಕೆ ಭೀಮೋ ಬಿಭ್ಯತ್ಯಸ್ಮಾತ್ (ನಿರು. ೧-೨೦) ಎಂದು ವ್ಯುತ್ಪತ್ತಿಮಾಡಿ, ಯಾರಿಂದ ಇತರರು ಬಹಳವಾಗಿ ಹೆದರುತ್ತಾರೆಯೋ ಅವರು ಭೀಮರೆನಿಸಿಕೊಳ್ಳುವರು ಎಂದ ಅರ್ಥಮಾಡಿದ್ದಾರೆ.

ತುವಿಷ್ಮಾನ್—ಪ್ರಜ್ಞಾಶಾಲಿಯು ಎಂದರ್ಥ. ಬಲಿಷ್ಠನೂ ಎಂದು ಅರ್ಥಮಾಡಿದ್ದಾರೆ.

ತೈಜಸೇ ಶಿಶೀತೇ—ವಜ್ರಾಯುಧವು ಹರಿತವಾಗುವುದಕ್ಕಾಗಿ ಇಂದ್ರನು ಅದನ್ನು ಮಸೆಯುತ್ತಿದ್ದಾನೆ. ಶಿಶೀತೇ ಎಂಬ ಪದಕ್ಕೆ ಸೂಕ್ಷ್ಮವನ್ನಾಗಿ ಮಾಡುವುದು (ತನೂಕರಣೆ) ಎಂಬರ್ಥವಿದ್ದರೂ ಇಲ್ಲಿ ಮಸೆದು ಚೂಪಾಗಿ ಮಾಡುವುದು ಎಂದು ವಿವರಿಸಿದ್ದಾರೆ.

ವಂಸಗಃ—ವನ ಷಣ ಸಂಭಕ್ತೌ ಎಂಬ ಧಾತುವಿನಿಂದ ನಿಷ್ಪನ್ನವಾಗಿ, ವಂಸಂ ವನನೀಯಂ ಗಚ್ಛತೀತಿ ವಂಸಗಃ ಎಂಬ ಅರ್ಥವನ್ನು ಕೊಡುತ್ತಿದೆ. ಮಸೆಯುತ್ತಾ ಹೋಗುವುದು ಎತ್ತು ಎಂಬುದು ಇದರ ಅರ್ಥ. ಗೂಳಿಯು ಮತ್ತೊಂದು ಗೂಳಿಯೊಡನೆ ಹೋರಾಡುವಾಗ ತನ್ನ ಕೋಡನ್ನು ಅದು ಮಸೆದುಕೊಂಡು ಹೋಗುವಂತೆ ಇಂದ್ರನು ರಾಕ್ಷಸರ ಮೇಲೆ ಯುದ್ಧಮಾಡುವಾಗ ವಜ್ರಾಯುಧವನ್ನು ಹರಿತವಾಗಿ ಮಾಡಿಕೊಂಡು ಹೋಗುತ್ತಾನೆಂಬುದು ತಾತ್ಪರ್ಯಾರ್ಥ.

॥ ವ್ಯಾಕರಣಪ್ರಕ್ರಿಯಾ ॥

ದಿವಃ —ದಿವ್ ಶಬ್ದದ ಪಂಚಮೀ ಏಕವಚನದ ರೂಪ. ಊಡಿದಂಪದಾದಿ—ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ವರಿಮಾ—ಉರು ಶಬ್ದ. ಇದು ಪೃಥ್ವಾದಿಯಲ್ಲಿ ಸೇರಿರುವುದರಿಂದ ಪೃಥ್ವಾದಿಭ್ಯಃ ಇಮನಿಜ್ವಾ (ಪಾ. ಸೂ. ೫-೧-೧೨೨) ಎಂಬುದರಿಂದ ಅತಿಶಯಾರ್ಥದಲ್ಲಿ ಇಮನಿಚ್. ಇದು ಪರದಲ್ಲಿರುವಾಗ ಪ್ರಿಯಸ್ಥಿರಸ್ಫಿರ (ಪಾ. ಸೂ. ೬-೪-೧೫೭) ಸೂತ್ರದಿಂದ ಉರುಶಬ್ದಕ್ಕೆ ವರಾದೇಶ ಬರುತ್ತದೆ. ವರಿಮನ್ ಶಬ್ದವಾಗುತ್ತದೆ. ಪ್ರಥಮಾಏಕವಚನದಲ್ಲಿ ನಾಂತಲಕ್ಷಣ ದೀರ್ಘದಿಂದ ವರಿಮಾ ಎಂದು ರೂಪವಾಗುತ್ತದೆ. ಚಿತಃ ಸೂತ್ರದಿಂದ ಅಂತೋದಾತ್ತವಾಗುತ್ತದೆ.

ಪಪ್ರಥೇ—ಪ್ರಥ ಪ್ರಖ್ಯಾನೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಏಶಾದೇಶ ಬರುತ್ತದೆ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

ಮಹ್ನಾ—ಮಹಿಮ್ನಾ ಎಂದಾಗಬೇಕು. ಛಾಂದಸವಾಗಿ ಇಕಾರಮಕಾರಗಳು ಲೋಪವಾಗುತ್ತವೆ. ಅಥವಾ ಮಹ ಪೂಜಾಯಾಂ ಧಾತು. ಇದಕ್ಕೆ ಔಣಾದಿಕವಾದ ಕನಿ ಪ್ರತ್ಯಯ- ಮಹನ್ ಶಬ್ದವಾಗುತ್ತದೆ. ತೃತೀಯಾ ಏಕವಚನದಲ್ಲಿ ಅಲ್ಲೋಪೋಽನಃ ಎಂಬುದರಿಂದ ಅನಿನ ಅಕಾರಕ್ಕೆ ಲೋಪ ಬರುತ್ತದೆ. ಪ್ರತ್ಯಯ ಸ್ವರದಿಂದ ಅಂತೋದಾತ್ತವಾಗುತ್ತದೆ. ಅನುದಾತ್ತವಾದ ವಿಭಕ್ತಿನಿಮಿತ್ತಕವಾಗಿ ಉದಾತ್ತವಾದ ಕನಿ ಪ್ರತ್ಯಯದ ಅಕಾರವು ಲುಪ್ತವಾದುದರಿಂದ ಉದಾತ್ತನಿವೃತ್ತಿಸ್ವರದಿಂದ ವಿಭಕ್ತಿಯೂ ಉದಾತ್ತವಾಗುತ್ತದೆ.

ಪ್ರತಿ—ಪ್ರತಿಃ ಪ್ರತಿನಿಧಿಪ್ರತಿದಾನಯೋಃ (ಪಾ.ಸೂ. ೧-೪-೯೨) ಎಂಬುದರಿಂದ ಪ್ರತಿನಿಧಿ (ಸದೃಶ) ರೂಪಾರ್ಥದಲ್ಲಿ ಪ್ರತಿಗೆ ಕರ್ಮಪ್ರವಚನೀಯಸಂಜ್ಞೆ ಬರುತ್ತದೆ. ಆಗ ಕರ್ಮಪ್ರವಚನೀಯಯುಕ್ತೇ ದ್ವಿತೀಯಾ (ಪಾ. ಸೂ. ೨-೩-೮) ಸೂತ್ರದಿಂದ ಅದರ ಸಂಬಂಧವಿರುವ ಇಂದ್ರಶಬ್ದದ ಮೇಲೆ ದ್ವಿತೀಯಾ



CC-0. Jangamwadi Math Collection. Digitized by eGangotri

ವಿಭಕ್ತಿ ಬರುತ್ತದೆ. ವಾಸ್ತವವಾಗಿ ಇಲ್ಲಿ ಪ್ರತಿನಿಧಿಪ್ರತಿದಾನೇ ಚ ಯಸ್ಮಾತ್ (ಪಾ. ಸೂ. ೨-೩-೧೧) ಎಂಬುದರಿಂದ ಪಂಚಮಿಯು ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ ಛಾಂದಸವಾಗಿ ಬರುವುದಿಲ್ಲ.

ಭೀಮಃ—ಞಿಭೀ ಭಯೇ ಧಾತು. ಜುಹೋತ್ಯಾದಿ ಇದಕ್ಕೆ ಭಿಯಃ ಷುಗ್ವಾ (ಉ.ಸೂ. ೧-೧೪೫) ಎಂಬುದರಿಂದ ಮಕ್‌ಪ್ರತ್ಯಯ. ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಭೀಮ ಎಂದು ರೂಪವಾಗುತ್ತದೆ. ಭೀಮೋ ಬಿಭ್ಯತ್ಯಸ್ಮಾತ್ (ನಿರು. ೧-೨೦) ಎಂದು ಯಾಸ್ಕರು ಹೇಳಿರುತ್ತಾರೆ. ಯಾವನಿಂದ ಹೆದರುತ್ತಾರೋ ಅವನು ಭೀಮನು ಎಂದರ್ಥ.

ಆತಪಃ—ತಪತೀತಿ ತಪಃ ಪಚಾದಿಯಲ್ಲಿ ಸೇರಿರುವುದರಿಂದ ನಂದಿಗ್ರಹಪಚಾದಿಭ್ಯೋ ಸೂತ್ರದಿಂದ ತಪ ಧಾತುವಿಗೆ ಅಚ್ ಪ್ರತ್ಯಯ. ಅಚ್ ಪ್ರತ್ಯಯಾಂತವಾದುದರಿಂದ ಥಾಥಘಞ್‌ಕ್ತಾಜ—(ಪಾ. ಸೂ. ೬-೨-೧೪೪) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಶಿಶೀತೇ—ಶೋ ತನೂಕರಣೇ ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಲಟನಲ್ಲಿ ಆತ್ಮನೇಪದಪ್ರತ್ಯಯ ಬರುತ್ತದೆ. ಬಹುಲಂ ಛಂದಸಿ (ಪಾ. ಸೂ. ೨-೪-೭೬) ಎಂಬುದರಿಂದ ವಿಕರಣಕ್ಕೆ ಶ್ಲು ಬರುತ್ತದೆ. ಆದೇಚ ಉಪದೇಶೇಽಶಿತಿ ಸೂತ್ರದಿಂದ ಧಾತುವಿಗೆ ಆತ್ವ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಬಹುಲಂ ಛಂದಸಿ (ಪಾ. ಸೂ. ೭-೪-೭೮) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಪ್ರತ್ಯಯದ ಅಕಾರಕ್ಕೆ ಟಿತ ಆತ್ಮನೇಪದಾ—ಸೂತ್ರದಿಂದ ಏತ್ವ. ಶಿಶಾ+ತೇ ಎಂದಿರುವಾಗ ಅಪಿತ್ ಸಾರ್ವಧಾತುಕವಾದ ತೇ ಎಂಬುದು ಙಿತ್ತಾದುದರಿಂದ ಈಹಲ್ಯಘೋಃ (ಪಾ. ಸೂ. ೬-೪-೧೧೩) ಎಂಬುದರಿಂದ ಧಾತುವಿನ ಆಕಾರಕ್ಕೆ ಈತ್ವ. ಶಿಶೀತೇ ಎಂದು ರೂಪವಾಗುತ್ತದೆ. ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬಲ್ಲಿ ಅಜಾದಿಯಾದ ಲಸಾರ್ವಧಾತುಕವು ಪರದಲ್ಲಿರುವಾಗ ಅಭ್ಯಸ್ತದ ಆದಿಗೆ ಉದಾತ್ತತ್ವವನ್ನು ಹೇಳಿದರೂ ವ್ಯತ್ಯಯದಿಂದ ಅನಜಾದಿಯಲ್ಲಿಯೂ ಇಲ್ಲಿ ಅಭ್ಯಸ್ತಾದ್ಯುದಾತ್ತಸ್ವರ ಬರುತ್ತದೆ.

ವಂಸಗಃ—ವನ ಷಣ ಸಂಭಕ್ತೌ ಧಾತು. ಇದಕ್ಕೆ ಕರ್ಮಣಿಯಲ್ಲಿ ಔಣಾದಿಕವಾದ ಸ ಪ್ರತ್ಯಯ ಬರುತ್ತದೆ. ನಶ್ಚಾಪದಾಂತಸ್ಯ—ಸೂತ್ರದಿಂದ ನಕಾರಕ್ಕೆ ಅನುಸ್ವಾರ ಬಂದರೆ ವಂಸ ಎಂದು ರೂಪವಾಗುತ್ತದೆ. ವಂಸಂ ವನನೀಯಂ ಗಚ್ಛತೀತಿ ವಂಸಗಃ. ಗಮ್ಲೃ ಗತೌ ಧಾತು. ಇದಕ್ಕೆ ಡೋಽನ್ಯತ್ರಾಪಿ ದೃಶ್ಯತೇ (ಪಾ. ಮ. ೩-೨-೪೮) ಎಂಬುದರಿಂದ ಡ ಪ್ರತ್ಯಯ ಡಿತ್ತಾದುದರಿಂದ ಭ ಸಂಜ್ಞಾ ಇಲ್ಲದಿದ್ದರೂ ಧಾತುವಿನ ಟಿಗೆ ಲೋಪಬರುತ್ತದೆ. ವಂಸಗ ಎಂದು ಶಬ್ದವಾಗುತ್ತದೆ. ಇದು ದಿವೋದಾಸಾದಿಯಲ್ಲಿ ಸೇರಿರುವುದರಿಂದ ಕೃದುತ್ತರಪದಪ್ರಕೃತಿಸ್ವರವು ಬಾಧಿತವಾಗಿ ಪೂರ್ವಪದಾದ್ಯುದಾತ್ತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಸೋ ಅರ್ಣವೋ ನ ನದ್ಯಃ ಸಮುದ್ರಿಯಃ ಪ್ರತಿ ಗೃಭ್ಣಾತಿ ವಿಶ್ರಿತಾ ವರೀಮಭಿಃ ।
ಇಂದ್ರಃ ಸೋಮಸ್ಯ ಪೀತಯೇ ವೃಷಾಯತೇ ಸನಾತ್ಸ ಯುಧ್ಮ ಓಜಸಾ ಪನಸ್ಯತೇ ॥ ೨ ॥





CC-0. Jangamwadi Math Collection. Digitized by eGangotri

॥ ಪದಪಾಠಃ ॥

ಸಃ । ಅ॒ರ್ಣ॒ವಃ । ನ । ನ॒ದ್ಯಃ᳚ । ಸ॒ಮು॒ದ್ರಿಯಃ॑ । ಪ್ರತಿ॑ । ಗೃ॒ಭ್ಣಾ॒ತಿ॒ । ವಿಽಶ್ರಿ॑ತಾಃ ।
ವರೀ॑ಮಭಿಃ ।

ಇಂದ್ರಃ॑ । ಸೋಮ॑ಸ್ಯ । ಪೀ॒ತಯೇ᳚ । ವೃ॒ಷ॒ಽಯ॒ತೇ॒ । ಸ॒ನಾತ್ । ಸಃ । ಯು॒ಧ್ಮಃ ।
ಓಜ॑ಸಾ । ಪ॒ನ॒ಸ್ಯ॒ತೇ॒ ॥ ೨ ॥

॥ ಸಾಯಣಭಾಷ್ಯಂ ॥

ಸ ಇಂದ್ರಃ ಸಮುದ್ರಿಯಃ । ಸಮುದ್ದ್ರವಂತ್ಯಸ್ಮಾದಾಪ ಇತಿ ಸಮುದ್ರೋಂತರಿಕ್ಷಂ । ತತ್ರ ಭವಃ ಸಮುದ್ರಿಯಃ । ಏವಂಭೂತಃ ಸನ್ ವರೀಮಭಿಃ ಸ್ವಕೀಯೈಃ ಸಂವರಣೈರ್ಯದ್ವೋರುತ್ವೈರ್ವಿಶ್ರಿತಾ ವ್ಯಾಪ್ತಾ ನದ್ಯೋ ನದೀಃ ಶಬ್ದಕಾರಿಣೀರ್ವೃತ್ರೇಣಾವೃತಾ ಅಪೋಽರ್ಣವೋ ನ ಸಮುದ್ರ ಇವ ಪ್ರತಿ ಗೃಭ್ಣಾತಿ । ಸ್ವೀಕೃತ್ಯ ವವರ್ಷೇತಿ ಭಾವಃ । ಸಚೇಂದ್ರಃ ಸೋಮಸ್ಯ ಪೀತಯೇ ಪಾನಾಯ ವೃಷಾಯತೇ ವೃಷ ಇವಾಚರತಿ । ಹರ್ಷಯುಕ್ತೋ ವರ್ತತ ಇತ್ಯರ್ಥಃ । ತಥಾ ಸ ಇಂದ್ರೋ ಯುಧ್ಮೋ ಯೋದ್ಧಾ ಸನಾಚ್ಚಿರಾದೇವ ಯದ್ವಾ ಸನಾತನ ಓಜಸಾ ಬಲಕೃತೇನ ವೃತ್ರವಧಾದಿರೂಪೇಣ ಕರ್ಮಣಾ ಪನಸ್ಯತೇ ಪನಃ ಸ್ತೋತ್ರಮಿಚ್ಛತಿ ॥ ಅರ್ಣವಃ । ಅರ್ಣಸೋ ಲೋಪಶ್ಚ । ಕಾ. ೫-೨-೧೦೯-೩ । ಮತ್ವರ್ಥೀಯೋ ವಪ್ರತ್ಯಯಃ ಸಲೋಪಶ್ಚ । ಪ್ರತ್ಯಯಸ್ವರಃ । ನದ್ಯಃ । ನದ ಅವ್ಯಕ್ತೇ ಶಬ್ದೇ ಇತ್ಯಸ್ಮಾತ್ಕರ್ತರಿ ಪಚಾದ್ಯಚ್ । ಚಿತ ಇತ್ಯಂತೋದಾತ್ತತ್ವಂ । ನದಟ್ । ಪಾ. ೩-೧-೧೩೪ । ಇತಿ ಟಿತ್ತ್ವೇನ ಪಾಠಾತ್ ಟಿಡ್ಢಾಣಞಿತಿ ಙೀಪ್ । ಯಸ್ಯೇತಿ ಲೋಪೇ ಉದಾತ್ತನಿವೃತ್ತಿಸ್ವರೇಣ ಙೀಪ ಉದಾತ್ತತ್ವಂ । ಜಸಿ ಯಣಾದೇಶೇ ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ । ದ್ವಿತೀಯಾರ್ಥೇ ಪ್ರಥಮಾ । ಅನಯಾ ವ್ಯುತ್ಪತ್ತ್ಯಾ ನದ್ಯ ಇತ್ಯಾಪ ಉಚ್ಯಂತೇ । ತಥಾ ಚ ಶ್ರೂಯತೇ ಅಹಾವನದತಾ ಹತೇ ತಸ್ಮಾದಾ ನದ್ಯೋ ನಾಮ ಸ್ಥ ತಾ ವೋ ನಾಮಾನಿ ಸಿಂಧವಃ । ಅಥ. ೩-೧೩-೧ । ಇತಿ । ಸಮುದ್ರಿಯಃ । ಸಮುದ್ರಾಭ್ರಾದ್ಘಃ । ಪಾ. ೪-೪-೧೧೮ । ಇತಿ ಭವಾರ್ಥೇ ಘಪ್ರತ್ಯಯಃ । ಘಸ್ಯೇಯಾದೇಶಃ । ತಸ್ಯೋಪದೇಶಿವದ್ವಚನಾದಾದ್ಯುದಾತ್ತತ್ವಂ । ಗೃಭ್ಣಾತಿ । ಹೃಗ್ರಹೋರ್ಭ ಇತಿ ಭತ್ವಂ । ವಿಶ್ರಿತಾಃ । ಶ್ರಿಞ್ ಸೇವಾಯಾಂ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ । ವರೀಮಭಿಃ । ವೃಞ್ ವರಣ ಇತ್ಯಸ್ಮಾದೌಣಾದಿಕ ಈಮನಿನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಯದ್ವಾ ಉರುಶಬ್ದಾದಿಮನಿಚಿ ದೀರ್ಘ ಆದ್ಯುದಾತ್ತತ್ವಂ ಚ ಛಾಂದಸತ್ವಾತ್ । ವೃಷಾಯತೇ । ಕರ್ತುಃ ಕ್ಯಙ್ ಸಲೋಪಶ್ಚ । ಪಾ. ೩-೧-೧೧ । ಇತ್ಯಾಚಾರಾರ್ಥೇ ಕ್ಯಙ್ । ಙಿತ್ತ್ವಾದಾತ್ಮನೇಪದಂ । ಅಕೃತ್ಸಾರ್ವಧಾತುಕಯೋರಿತಿ ದೀರ್ಘಃ । ಯುಧ್ಮಃ । ಯುಧ ಸಂಪ್ರಹಾರ ಇತ್ಯಸ್ಮಾದಿಷಿಯುಧೀಂಧಿದಸಿಶ್ಯಾಧೂಸೂಭ್ಯೋ ಮಗಿತಿ ಮಕ್ । ಪನಸ್ಯತೇ । ಪನ ಸ್ತುತೌ । ಪನನಂ ಪನಃ । ತದಿಚ್ಛತಿ ಪನಸ್ಯತಿ । ವ್ಯತ್ಯಯೇನಾತ್ಮನೇಪದಂ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ಸಃ—ಇಂದ್ರನು | ಸಮುದ್ರಿಯಃ—ಅಂತರಿಕ್ಷದಲ್ಲಿ ಉತ್ಪನ್ನನಾಗಿ (ನೆಲಿಸಿ) | ವರೀಮಭಿಃ—ತನ್ನ ಮಹತ್ವದ ಶಕ್ತಿಯಿಂದ | ವಿಶ್ರಿತಾಃ—ಸುತ್ತಲೂ ಹರಡಿರುವ | ನದ್ಯಃ—ನೀರುಗಳನ್ನು | ಅರ್ಣವೋ ನ—ಸಮುದ್ರದಂತೆ | ಪ್ರತಿಗೃಭ್ಣಾತಿ—ಸ್ವೀಕರಿಸುತ್ತಾನೆ (ಸ್ವೀಕರಿಸಿ ಮಳೆಯನ್ನು ಸುರಿಸುತ್ತಾನೆ) | ಇಂದ್ರಃ—ಇಂದ್ರನು | ಸೋಮಸ್ಯ ಪೀತಯೇ—ಸೋಮರಸಪಾನಕ್ಕಾಗಿ | ವೃಷಾಯತೇ—ವೃಷಭದಂತೆ ಹುರುಬಿನಿಂದ ಬರುತ್ತಾನೆ (ಹಾಗೆಯೇ) | ಯುಧ್ಮಃ—ಯೋದ್ಧನಾದ | ಸಃ—ಆ ಇಂದ್ರನು | ಸನಾತ್—ಬಹಳ ಕಾಲದಿಂದಲೂ ಅಥವಾ ಯಾವಾಗಲೂ | ಓಜಸಾ—(ವೃತ್ರವಧಾದಿರೂಪವಾದ) ತನ್ನ ಪರಾಕ್ರಮದ ಕೆಲಸಗಳಿಗಾಗಿ | ಪನಸ್ಯತೇ—ಸ್ತೋತ್ರವನ್ನಪೇಕ್ಷಿಸುತ್ತಾನೆ ||

|| ಭಾವಾರ್ಥ ||

ಇಂದ್ರನು ಅಂತರಿಕ್ಷದಲ್ಲಿ ನೆಲಿಸಿ ತನ್ನ ಮಹತ್ವದ ಶಕ್ತಿಯಿಂದ ಸುತ್ತಲೂ ಹರಡಿರುವ ನೀರುಗಳನ್ನು ಸಮುದ್ರವು ನದಿಗಳನ್ನು ಸ್ವೀಕರಿಸುವಂತೆ ಗ್ರಹಿಸುತ್ತಾನೆ. ಮತ್ತು ಸೋಮರಸಪಾನಕ್ಕಾಗಿ ವೃಷಭದಂತೆ ಹರ್ಷದಿಂದಲೂ ಹುರುಬಿನಿಂದಲೂ ಬರುತ್ತಾನೆ. ಯೋದ್ಧನಾದ ಆ ಇಂದ್ರನು ಯಾವಾಗಲೂ ತನ್ನ ಪರಾಕ್ರಮದ ಪ್ರಶಂಸೆಯನ್ನಪೇಕ್ಷಿಸುತ್ತಾನೆ.

## English Translation.

The firmament-abiding Indra grasps the wide-spread waters with his comprehensive faculties as the ocean receives the rivers; he rushes (impetuous) as a bull, to drink of the soma-juice; he, the warrior ever covets praise for his prowess.

|| ವಿಶೇಷ ವಿಷಯಗಳು ||

ಅತ್ರೇದಮುಕ್ತಂ ಭವತಿ | ಇಂದ್ರಃ ಸೋಮಸ್ಯ ಪಾನೇ ಪ್ರಭೂತಮೇವ ತೃಷ್ಣಾಲುರ್ಭವತಿ | ಅತ ಏವಾನೇಕೈರುಪಾಸಕೈರರ್ಪಿತಾನ್ ಸೋಮಾನ್- ಸಮುದ್ರೋ ನದೀರಿವ ಸ್ವೀಕರೋತಿ | ಸೋಮಂ ಪೀತ್ವಾ ಚ ಸ್ತುತ್ಯರ್ಹಾಣಿ ವೃತ್ರಹನನಾದೀನಿ ಕರ್ಮಾಣಿ ಕರೋತೀತಿ || ಇಂದ್ರನು ಯಥೇಷ್ಟವಾಗಿ ಸೋಮಪಾನಮಾಡಿದವನಾದರೂ ಅವನಿಗೆ ಮತ್ತೆ ಸೋಮಪಾನದಲ್ಲಿ ಆಶೆ ಇದ್ದೇ ಇರುವುದು. ಆದುದರಿಂದ ತನ್ನನ್ನು ಉಪಾಸನೆ ಮಾಡುವ ಅನೇಕಮಂದಿ ಯಜ್ಞಕರ್ತರು ಅರ್ಪಿಸುವ ಸೋಮರಸವೆಲ್ಲವನ್ನು, ನದಿಯ ನೀರುಗಳನ್ನು ಸಮುದ್ರವು ಸ್ವೀಕರಿಸುವಂತೆ, ಸ್ವೀಕರಿಸುವನು. ಸೋಮಪಾನಾನಂತರ ಎಲ್ಲರಿಂದಲೂ ಪ್ರಶಂಸಿಸಲ್ಪಡುವ ವೃತ್ರವಧಾದಿಸಾಹಸಕಾರ್ಯಗಳನ್ನು ಮಾಡುವನು ಎಂದಭಿಪ್ರಾಯವು.

ಸಮುದ್ರಿಯಃ—ಸಮುದ್ರವಂತಿ ಅಸ್ಮಾದಾಪಃ ಇತಿ ಸಮುದ್ರಂ ಅಂತರಿಕ್ಷಂ, ತತ್ರ ಭವಃ ಸಮುದ್ರಿಯಃ—ಭೂಮಿಗೆ ನೀರನ್ನು ಒದಗಿಸುವುದು ಅಂತರಿಕ್ಷ. ಈ ಪದವು ಇಂದ್ರನಿಗೆ ವಿಶೇಷಣ. ವೃತ್ರಾಸುರನನ್ನು ಧ್ವಂಸಮಾಡಲು ಇಂದ್ರನು ಅಂತರಿಕ್ಷಗತನಾಗಿ ಜಲರೂಪದಿಂದಿದ್ದ ವೃತ್ರನನ್ನು ಧ್ವಂಸಮಾಡಿದನು.



CC-0. Jangamwadi Math Collection. Digitized by eGangotri

ನದ್ಯಃ—ನದ ಅವ್ಯಕ್ತೇ ಶಬ್ದೇ ಎಂಬ ಧಾತುವಿನಿಂದ ಉಂಟಾದ ನದೀಶಬ್ದವು. ಶಬ್ದಮಾಡುವ ನೀರು ಎಂಬರ್ಥವನ್ನು ಕೊಡುವುದು. ಇದೇ ಅರ್ಥವನ್ನು ಅಹಾವನದತಾ ಹತೇ ತಸ್ಮಾದಾ ನದ್ಯೋ ನಾಮ ಸ್ಥ ತಾ ವೋ ನಾಮಾನಿ ಸಿಂಧವಃ (ತೈ. ಸಂ. ೫-೬-೧-೨) ಎಂಬ ಶ್ರುತಿಯು ವ್ಯಕ್ತಪಡಿಸುವುದು.

ವೃಷಾಯತೇ—ವೃಷ ಇವಾಚರತಿ। ಹರ್ಷಯುಕ್ತೋ ವರ್ತತೇ ಇತ್ಯರ್ಥಃ ಇಂದ್ರನು ವೃಷಭ ದಂತೆ ಇರುತ್ತಾನೆ. ಅಂದರೆ ಸಂತೋಷದಿಂದಿರುತ್ತಾನೆ ಎಂದರ್ಥವು.

ಪನಸ್ಯತೇ—ಪನಃ ಸ್ತೋತ್ರಮಿಚ್ಛತಿ—ಸ್ತೋತ್ರವನ್ನು ಅಪೇಕ್ಷಿಸುವನು. ಸ್ತೋತ್ರರೂಪನಾದ ಅರ್ಥವನ್ನು ಕೊಡುವ ಪನನ ಶಬ್ದವೇ ಪನಶಬ್ದವಾಗಿದೆ.

॥ ವ್ಯಾಕರಣಪ್ರಕ್ರಿಯಾ ॥

ಅರ್ಣವಃ—ಅರ್ಣಸ್ ಶಬ್ದ. ಇದಕ್ಕೆ ಮತ್ವರ್ಥದಲ್ಲಿ ಅರ್ಣಸೋ ಲೋಪಶ್ಚ (ಕಾ. ೫-೨-೧೦೯-೨) ಎಂಬುದರಿಂದ ವ ಪ್ರತ್ಯಯ ಆದರೊಡನೆ ಪ್ರಕೃತಿಯ ಸಕಾರಕ್ಕೂ ಲೋಪಬರುತ್ತದೆ. ಅರ್ಣವ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ನದ್ಯಃ—ನದ ಅವ್ಯಕ್ತೇ ಶಬ್ದೇ ಧಾತು. ಪಚಾದಿಯಲ್ಲಿ ಸೇರಿರುವುದರಿಂದ ಕರ್ತ್ರರ್ಥದಲ್ಲಿ ನಂದಿಗ್ರಹ-ಪಚಾದಿಭ್ಯೋ—ಸೂತ್ರದಿಂದ ಅಚ್ ಪ್ರತ್ಯಯ. ಪ್ರತ್ಯಯ ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ. ನಂದಿಗ್ರಹ—(ಪಾ. ಸೂ. ೩-೧-೧೩೪ ಗ) ಎಂಬ ಹಿಂದಿನ ಸೂತ್ರದಲ್ಲಿ ನದಟ್ ಎಂದು ಗಣದಲ್ಲಿ ಪರಿಗಣನೆ ಮಾಡಿರುವುದರಿಂದ ಟಿತ್ತಾಗುತ್ತದೆ. ಇದರಿಂದ ಟಿಡ್ಢಾಣಞ್—(ಪಾ. ಸೂ. ೪-೧-೧೫) ಸೂತ್ರದಿಂದ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಈ ಪರದಲ್ಲಿ ಬಂದುದರಿಂದ ನದ ಎಂಬಲ್ಲಿರುವ ಅಕಾರಕ್ಕೆ ಯಸ್ಯೇತಿಚ ಸೂತ್ರದಿಂದ ಲೋಪ ಬರುತ್ತನೆ. ಆಗ ಅನುದಾತ್ತಸ್ಯ ಚ ಯತ್ರೋದಾತ್ತಲೋಪಃ ಎಂಬುದರಿಂದ ಈಕಾರರೂಪಾನುದಾತ್ತವು ಪರದಲ್ಲಿರುವಾಗ ಉದಾತ್ತಾಕಾರಕ್ಕೆ ಲೋಪಬಂದುದರಿಂದ ಈಕಾರವು ಉದಾತ್ತವಾಗುತ್ತದೆ. ಜಸ್ ಪರದಲ್ಲಿರುವಾಗ ಯಣಾದೇಶ. ಉದಾತ್ತಸ್ಥಾನಿಕಯಣಾದೇಶದ ಪರದಲ್ಲಿ ವಿಭಕ್ತಿ ಬಂದುದರಿಂದ ಉದಾತ್ತಸ್ವರಿತಯೋರ್ಯಣ ಸ್ವರಿತೋನುದಾತ್ತಸ್ಯ ಸೂತ್ರದಿಂದ ವಿಭಕ್ತಿಗೆ ಸ್ವರಿತ ಸ್ವರ ಬರುತ್ತದೆ. ವಿವಕ್ಷಾತಃ ಕಾರಕಾಣಿ ಭವಂತಿ ಎಂಬುದರಿಂದ ದ್ವಿತೀಯಾರ್ಥದಲ್ಲಿ ಪ್ರಥಮಾ ಬಂದಿದೆ. ಕರ್ತ್ರರ್ಥದಲ್ಲಿ ಪ್ರತ್ಯಯ ನಿರ್ವಚನ ಮಾಡಿರುವುದರಿಂದ ನದ್ಯಃ ಎಂದರೆ ನೀರು ಎಂದರ್ಥವಾಗುತ್ತದೆ ಇದು ಶ್ರುತ್ಯಂತರದಲ್ಲೂ ಸ್ವೀಕೃತವಾಗಿದೆ. "ಅಹಾವನದತಾ ಹತೇ । ತಸ್ಮಾದಾ ನದ್ಯೋನಾಮ ಸ್ಥ ತಾ ವೋ ನಾಮಾನಿ ಸಿಂಧವಃ" (ತೈ. ಸಂ. ೫-೬-೧-೨) ಎಂದು ನೀರು ಎಂಬರ್ಥದಲ್ಲಿ ಪ್ರಯುಕ್ತವಾಗಿದೆ.

ಸಮುದ್ರಿಯಃ—ಸಮುದ್ರಾಭ್ರಾದ್ಘಃ (ಪಾ. ಸೂ. ೪-೪-೧೧೮) ಎಂಬುದರಿಂದ ಭಾವಾರ್ಥದಲ್ಲಿ ಘ ಪ್ರತ್ಯಯ. ಆಯನೇಯೀ—ಸೂತ್ರದಿಂದ ಅದಕ್ಕೆ ಇಯಾದೇಶ ಬರುತ್ತದೆ. ಇಯಾದೇಶಕ್ಕೆ ಉಪದೇಶವದ್ಭಾವದಿಂದ ಘತ್ವವಿರುವುದರಿಂದ ಪ್ರತ್ಯಯಸ್ವರದಿಂದ ಇಕಾರವು ಉದಾತ್ತವಾಗುತ್ತದೆ.

ಗೃಭ್ಣಾತಿ—ಗ್ರಹ ಉಪಾದಾನೇ ಧಾತು. ಕ್ರ್ಯಾದಿ ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಲಟನಲ್ಲಿ ಶ್ನಾ ವಿಕರಣ. ಗ್ರಹಿಜ್ಯಾ—ಸೂತ್ರದಿಂದ ಶ್ನಾ ಙಿತ್ತಾದುದರಿಂದ ಧಾತುವಿನ ಋಕಾರಕ್ಕೆ ಸಂಪ್ರಸಾರಣ ಬರುತ್ತದೆ. ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಗೃಭ್ಣಾತಿ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

**ವಿಶ್ರಿತಾಃ**—ಶ್ರಿಞ್ ಸೇವಾಯಾಂ ಧಾತು. ಕರ್ಮಣಿಯಲ್ಲಿ ನಿಷ್ಠಾಪ್ರತ್ಯಯ ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ವಿ ಎಂಬ ಗತಿಯೊಡನೆ ಸಮಾಸವಾದಾಗ **ಗತಿರನಂತರಃ** (ಪಾ. ಸೂ. ೬-೨-೪೯) ಎಂಬುದರಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ. ಬಹುವಚನದಲ್ಲಿ ವಿಶ್ರಿತಾಃ ಎಂಬುದು ಆದ್ಯುದಾತ್ತವಾದ ಪದವಾಗುತ್ತದೆ.

**ವರೀಮಭಿಃ**—ವೃಞ್ ವರಣೇ ಧಾತು. ಇದಕ್ಕೆ ಉಣಾದಿಸಿದ್ಧವಾದ ಈಮನಿನ್ ಪ್ರತ್ಯಯ. ಪ್ರತ್ಯಯನಿಮಿತ್ತಕವಾಗಿ ಧಾತುವಿಗೆ ಗುಣ ವರೀಮನ್ ಶಬ್ದವಾಗುತ್ತದೆ. ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಎಂಬುದರಿಂದ ಆದ್ಯುದಾತ್ತವಾಗುತ್ತದೆ. ತೃತೀಯಾ ಬಹುವಚನದಲ್ಲಿ **ನಲೋಪಃ ಪ್ರಾತಿಪದಿಕಾಂತಸ್ಯ** ಎಂಬುದರಿಂದ ನಲೋಪ ಬಂದಾಗ ವರೀಮಭಿಃ ಎಂದು ರೂಪವಾಗುತ್ತದೆ. ಅಥವಾ ಹಿಂದೆ ವಿವರಿಸಿದಂತೆ ಉರುಶಬ್ದಕ್ಕೆ ಅತಿಶಯಾರ್ಥದಲ್ಲಿ ಇಮನಿಚ್ ಪ್ರತ್ಯಯ. ಪ್ರಕೃತಿಗೆ ವರಾದೇಶ. ಆಗ ಇಕಾರಕ್ಕೆ ದೀರ್ಘವನ್ನೂ, ಆದ್ಯುದಾತ್ತಸ್ವರವನ್ನೂ ಛಾಂದಸವಾಗಿ ಹೇಳಬೇಕು.

**ವೃಷಾಯತೇ**—ವೃಷ ಇವ ಆಚರತಿ ವೃಷಾಯತೇ. **ಕರ್ತುಃ ಕ್ಯಙ್ ಸಲೋಪಶ್ಚ** (ಪಾ. ಸೂ. ೩-೧-೧೧) ಎಂಬುದರಿಂದ ಆಚಾರಾರ್ಥದಲ್ಲಿ ಕ್ಯಙ್ ಪ್ರತ್ಯಯ. **ಅನುದಾತ್ತ ಙಿತ ಆತ್ಮನೇಪದಂ** ಎಂಬುದರಿಂದ ಆತ್ಮನೇ ಪದಪ್ರತ್ಯಯ ಬರುತ್ತದೆ. ವೃಷ+ಯ ಎಂದಿರುವಾಗ **ಅಕೃತ್ ಸಾರ್ವಧಾತುಕಯೋರ್ದೀರ್ಘಃ** (ಪಾ. ಸೂ. ೭-೪-೨೫) ಎಂಬುದರಿಂದ ಅಜಂತವಾದ ವೃಷ ಎಂಬುದಕ್ಕೆ ದೀರ್ಘ ಬರುತ್ತದೆ.

**ಯುಧ್ಮಃ**—ಯುಧ ಸಂಪ್ರಹಾರೇ ಧಾತು. **ಇದಕ್ಕೆ ಇಷಿ ಯುಧೀಂಧಿ ದಸಿ ಶ್ಯಾಧೂ ಸೂಭ್ಯೋ ಮಕ್** ಎಂಬುದರಿಂದ ಮಕ್ ಪ್ರತ್ಯಯ ಯುಧ್ಮ ಎಂದಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಪನಸ್ಯತೇ**—ಪನ ಸ್ತುತೌ ಧಾತು ಭ್ವಾದಿ. ಪನನಂ ಪನಃ ತತ್ ಇಚ್ಛತಿ ಪನಸ್ಯತೇ **ಸುಪ ಆತ್ಮನಃ ಕ್ಯಚ್** ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್. **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಪನಸ್ಯತೇ ಎಂದು ಲಟಿನಲ್ಲಿ ರೂಪವಾಗುತ್ತದೆ. ತಿಙಂತ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತ್ವಂ ತಮಿಂದ್ರ ಪರ್ವತಂ ನ ಭೋಜಸೇ ಮಹೋ ನೃಮ್ಣಸ್ಯ ಧರ್ಮಣಾಮಿರಜ್ಯಸಿ ।
ಪ್ರ ವೀರ್ಯೇಣ ದೇವತಾತಿ ಚೇಕಿತೇ ವಿಶ್ವಸ್ಮಾ ಉಗ್ರಃ ಕರ್ಮಣೇ ಪುರೋಹಿತಃ ॥ ೩ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತ್ವಂ । ತಂ । ಇಂದ್ರ । ಪರ್ವತಂ । ನ । ಭೋಜಸೇ । ಮಹಃ । ನೃಮ್ಣಸ್ಯ । ಧರ್ಮಣಾಂ । ಇರಜ್ಯಸಿ ।

ಪ್ರ । ವೀರ್ಯೇಣ । ದೇವತಾ । ಅತಿ । ಚೇಕಿತೇ । ವಿಶ್ವಸ್ಮೈ । ಉಗ್ರಃ । ಕರ್ಮಣೇ । ಪುರಃಽಹಿತಃ ॥ ೩ ॥

॥ ಸಾಯಣಭಾಷ್ಯ ॥

ಹೇ ಇಂದ್ರ ತ್ವಂ ಭೋಜಸೇ ಭೋಜನಾಯ ಪರ್ವತಂ ಪರ್ವವಂತಂ ಮೇಘಂ ನಾಕಾರ್ಷೀಃ। ನ ಹಿ ಹತೋ ಭುಂಕ್ತೇ । ಇಂದ್ರೋ ಹಿ ವರ್ಷಣಾರ್ಥಂ ಮೇಘಂ ವಜ್ರೇಣ ಹಂತಿ । ತಥಾ ಮಹೋ ಮಹತೋ ನೃಮ್ಣಸ್ಯ ಧನಸ್ಯ ಧರ್ಮಣಾಂ ಧಾರಯಿತೄಣಾಂ ಕುಬೇರಾದೀನಾಮಿರಜ್ಯಸಿ । ಈಶಿಷೇ । ಇರಜ್ಯತಿರೈಶ್ವರ್ಯಕರ್ಮಾ । ಸ ಇಂದ್ರೋ ದೇವತಾ ವೀರ್ಯೇಣಾತ್ಯತಿಶಯಿತ ಇತಿ ಪ್ರ ಚೇಕಿತೇ ಪ್ರಕರ್ಷೇಣಾಸ್ಮಾಭಿರ್ಜ್ಞಾತೋ ಬಭೂವ। ಸ ಚೋಗ್ರ ಉದ್ಗೂರ್ಣ ಇಂದ್ರೋ ವಿಶ್ವಸ್ಮೈ ಸರ್ವಸ್ಮೈ ವೃತ್ರವಧಾದಿರೂಪಾಯ ಕರ್ಮಣೇ ದೇವೈಃ ಪುರೋಹಿತಃ, ಪುರಸ್ತಾದವಸ್ಥಾಪಿತಃ ॥ ಧರ್ಮಣಾಂ । ಧೃಞ್ ಧಾರಣೇ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ಕರ್ತರಿ ಮನಿನ್ । ನಿತ್ತ್ವಾದಾದ್ಯುದಾತ್ತತ್ವಂ । ಇರಜ್ಯಸಿ । ಇರಜ್ ಈರ್ಷ್ಯಾಯಾಂ । ಐಶ್ವರ್ಯ ಇತ್ಯೇಕೇ । ಕಂಡ್ವಾದಿತ್ವಾದ್ಯಕ್ । ವೀರ್ಯೇಣ । ಶೂರ ವೀರ ವಿಕ್ರಾಂತೌ । ಚುರಾದಿಃ । ಅಚೋ ಯದಿತಿ ಯತ್ । ಣಿಲೋಪಃ । ಬಹುವ್ರೀಹೌ ವೀರವೀರ್ಯೌ ಚೇತ್ಯುತ್ತರಪದಾದ್ಯುದಾತ್ತತ್ವವಿಧಾನಸಾಮರ್ಥ್ಯಾದ್ಯತೋಽನಾವ ಇತ್ಯಾದ್ಯುದಾತ್ತತ್ವಾಭಾವೇ ತಿತ್ಸ್ವರಿತ ಇತಿ ಸ್ವರಿತತ್ವಂ । ತಸ್ಮಿನ್ಹಿ ಸತ್ಯಾದ್ಯುದಾತ್ತಂ ದ್ವ್ಯಚ್ಛಂದಸೀತ್ಯನೇನೈವ ಸಿದ್ಧತ್ವಾತ್ ಪುನರ್ವೀರ್ಯಗ್ರಹಣಮನರ್ಥಕಂ ಸ್ಯಾದಿತ್ಯುಕ್ತಂ । ದೇವತಾ । ದೇವ ಏವ ದೇವತಾ । ದೇವಾತ್ತಲ್ । ಪಾ. ೫-೪-೨೭ । ಇತಿ ಸ್ವಾರ್ಥೇ ತಲ್ಪ್ರತ್ಯಯಃ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಚೇಕಿತೇ। ಕಿತ ಜ್ಞಾನೇ। ಅಸ್ಮಾದ್ಯಙಂತಾಚ್ಚೇಕಿತ್ಯತೇಃ ಕರ್ಮಣಿ ಲಿಟ್ಯತೋಲೋಪಯಲೋಪೌ । ಪುರೋಹಿತಃ । ಪುರಸ್ ಶಬ್ದಸ್ಯಾಸಿಪ್ರತ್ಯಯಾಂತಸ್ಯ ತದ್ಧಿತಶ್ಚಾಸರ್ವವಿಭಕ್ತಿರಿತ್ಯವ್ಯಯತ್ವೇವ ಪುರೋಽವ್ಯಯಮಿತಿ ಗತಿಸಂಜ್ಞಾಯಾಂ ಗತಿರನಂತರ ಇತಿ ಪೂರ್ವಪದಪ್ರಕೃತಿಸ್ವರತ್ವಂ ॥

|| ಪ್ರತಿಪದಾರ್ಥ ||

ಇಂದ್ರ—ಎಲೈ ಇಂದ್ರನೇ । ತ್ವಂ—ನೀನು । ಭೋಜಸೇ—(ನಿನ್ನ ಸ್ವಂತ) ಸುಖಾನುಭವಕ್ಕಾಗಿ । ತಂ ಪರ್ವತಂ—ಆ ಮೇಘವನ್ನು । ನ—(ವಜ್ರಾಯುಧದಿಂದ) ಹೊಡೆಯಲಿಲ್ಲ (ಮನುಷ್ಯರಿಗೆ ಮಳೆಸುರಿಸುವುದಕ್ಕಾಗಿ ಮೇಘವನ್ನು ಸೀಳಿದೆ) । ಮಹಃ—ಮಹತ್ತಾದ । ನೃಮ್ಣಸ್ಯ—ಧನಕ್ಕೆ । ಧರ್ಮಣಾಂ—ಅಧಿಪತಿಗಳಾದ

ಕುಬೇರಾದಿಗಳಿಗೆ । ಇರಜ್ಯಸಿ—ಒಡೆಯನಾಗಿದ್ದೀಯೆ । ದೇವತಾ—ದೇವತಾಸ್ವರೂಪವುಳ್ಳ ಇಂದ್ರನು । ವೀರ್ಯೇಣ—ಪರಾಕ್ರಮದಿಂದ । ಅತಿ—(ಎಲ್ಲರನ್ನೂ) ಮೀರಿಸುತ್ತಾನೆ (ಎಂಬುದು) । ಪ್ರಚೇಕಿತೇ—(ನಮಗೆ) ಚನ್ನಾಗಿ ತಿಳಿದಿದೆ । ಉಗ್ರಃ—ಆತ್ಮಾಭಿಮಾನಿಯಾದ ಇಂದ್ರನು (ಪರಾಕ್ರಮಿಯಾದ)। ವಿಶ್ವಸ್ಮೈ ಕರ್ಮಣೇ—(ವೃತ್ರವಧಾದಿರೂಪವಾದ) ಸಮಸ್ತ ವೀರ್ಯಕೃತ್ಯಗಳಿಗೂ । ಪುರೋಹಿತಃ—(ದೇವತೆಗಳಲ್ಲಿ) ಮುಂದಾಳಾಗಿದ್ದಾನೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಿನ್ನ ಸ್ವಂತ ಸುಖಾನುಭವಕ್ಕಾಗಿ ಮೇಘವನ್ನು ವಜ್ರಾಯುಧದಿಂದ ಹೊಡೆಯಲಿಲ್ಲ. ಅದರೆ ಮಳೆಸುರಿಸುವುದಕ್ಕಾಗಿ ಹೊಡೆದೆ. ನೀನು ಪ್ರಭೂತವಾದ ಧನಕ್ಕೆ ಅಧಿಪತಿಗಳಾದ ಕುಬೇರಾದಿಗಳಿಗೆ ಒಡೆಯನಾಗಿದ್ದೀಯೆ. ದೇವತಾ ಸ್ವರೂಪವುಳ್ಳ ಇಂದ್ರನು ತನ್ನ ಪರಾಕ್ರಮದಿಂದ ಎಲ್ಲರನ್ನೂ ಮೀರಿಸುತ್ತಾನೆಂಬುದು ನಮಗೆ ತಿಳಿದಿದೆ. ಪರಾಕ್ರಮಿಯಾದ ಇಂದ್ರನು ಸಮಸ್ತವೀರ್ಯಕೃತ್ಯಗಳಿಗೂ ದೇವತೆಗಳ ಮುಂದಾಳಾಗಿದ್ದಾನೆ.

## English Translation.

Indra, you have not set open the cloud for your own enjoyment; you rule over the great lords of riches; that Divinity (Indra) has been, by his own trength, greatly known to us, that fierce (Indra) has been, on account of his exploits, leader of all the gods.

॥ ವಿಶೇಷ ವಿಷಯಗಳು ॥

ಭೋಜಸೇ—ಭೋಜನಾಯ—ಸಕಾರಾಂತ ಭೋಜಸ್ ಶಬ್ದವು ವೇದದಲ್ಲಿ ಭೋಜನ ಎಂಬರ್ಥವನ್ನು ಕೊಡುವುದು.

ಪರ್ವತಂ—ಪರ್ವವಂತಂ ಮೇಘಂ—ತೃಪ್ತಿಪಡಿಸುವುದು. ಜಲದಾನಾದಿಗಳಿಂದ ಜನರನ್ನು ಆನಂದಗೊಳಿಸುವುದು. ಪರ್ವವಾನ್ ಪರ್ವತಃ ಪರ್ವ ಪುನಃ ಪೃಣಾತೇಃ ಪ್ರೀಣಾತೇರ್ವಾ । ಅರ್ಧಮಾಸಪರ್ವ—ದೇವಾನಸ್ಮಿನ್ ಪ್ರೀಣಂತೀತಿ (ನಿರು. ೧–೨೦) ಎಂಬ ಈ ನಿರುಕ್ತವಚನವು ಮೇಲಿನ ಅರ್ಥವನ್ನು ಸಮರ್ಥಿಸುವುದು.

ನೃಮ್ಣಸ್ಯ—ಈ ಪದಕ್ಕೆ ಧನವೆಂಬ ಅರ್ಥವಿದೆ. (ನಿ.೩-೯)

ಇರಜ್ಯಸಿ—ಅಪೇಕ್ಷಿಸುತ್ತೀಯೆ ಎಂಬುದು ಇದರ ಅರ್ಥವಾದರೂ ಇರಜ್-ಈರ್ಷ್ಯಾಯಾಂ ಎಂಬ ಈರ್ಷ್ಯಾರ್ಥಕವಾದ ಧಾತುವಿಗೆ ಐಶ್ವರ್ಯೇ ಇತ್ಯೇಕೇ ಎಂದು ಕೆಲವರು ಐಶ್ವರ್ಯರೂಪವಾದ ಅರ್ಥವನ್ನು ಹೇಳುತ್ತಾರಾದ್ದರಿಂದ ಈ ಪದಕ್ಕೆ ಐಶ್ವರ್ಯವನ್ನು ಬಯಸುತ್ತೀಯೆ ಎಂದರ್ಥವಿವರಣೆ ಮಾಡಿದ್ದಾರೆ.

ಪ್ರಚೇಕಿತೇ—ಪ್ರಕರ್ಷೇಣ ಅಸ್ಮಾಭಿರ್ಜ್ಞಾತೋ ಬಭೂವ—ನಮ್ಮಿಂದ ವಿಶೇಷವಾಗಿ ತಿಳಿಯಲ್ಪಟ್ಟಿರುವನು. ಕಿತ ಜ್ಞಾನೇ ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ ಇದು.



CC-0. Jangamwadi Math Collection. Digitized by eGangotri

ಉಗ್ರಃ—ಉದ್ಗೂರ್ಣ ಇಂದ್ರಃ—ಶತ್ರುಗಳನ್ನು ಎದುರಿಸುವ ಇಂದ್ರನು ಎಂಬುದು ಇದರ ಪ್ರಾಕರಣಿಕವಾದ ಅರ್ಥ.

ವ್ಯಾಕರಣಪ್ರಕ್ರಿಯಾ

ಧರ್ಮಣಾಮ್—ಧೃಞ್ ಧಾರಣೇ ಧಾತು. ಅನ್ಯೇಭ್ಯೋಽಪಿದೃಶ್ಯಂತೇ ಎಂಬುದರಿಂದ ಕರ್ತರಿಯಲ್ಲಿ ಮನಿನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಉರಣ್ರಪರಃ ಸೂತ್ರದಿಂದ ರಪರವಾಗಿ ಅರ್ ಗುಣ ಬರುತ್ತದೆ ಧರ್ಮನ್ ಶಬ್ದವಾಗುತ್ತದೆ. ಷಷ್ಠೀ ಬಹುವಚನದಲ್ಲಿ ಧರ್ಮಣಾಮ್ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಇರಜ್ಯಸಿ—ಇರಜ್ ಈರ್ಷ್ಯಾಯಾಂ ಧಾತು ಕಂಡ್ವಾದಿ. ಐಶ್ವರ್ಯೇ ಎಂದು ಕೆಲವರು ಅರ್ಥ ಹೇಳುತ್ತಾರೆ. ಕಂಡ್ವಾದಿಭ್ಯೋಯಕ್ (ಪಾ. ಸೂ. ೩-೧-೨೭) ಎಂಬುದರಿಂದ ಸ್ವಾರ್ಥದಲ್ಲಿ ಯಕ್. ಸನಾದ್ಯಂತಾಧಾತವಃ ಸೂತ್ರದಿಂದ ಯಕ್ ಸನಾದಿಯಲ್ಲಿ ಸೇರಿರುವುದರಿಂದ ಯಗಂತಕ್ಕೆ ಧಾತುಸಂಜ್ಞಾ. ಲಟ್ ಮಧ್ಯಮಪುರುಷ ಏಕವಚನದಲ್ಲಿ ಇರಜ್ಯಸಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವೀರ್ಯೇಣ—ಶೂರ ವೀರ ವಿಕ್ರಾಂತೌ ಧಾತು ಚುರಾದಿ. ಇದಕ್ಕೆ ಸತ್ಯಾಪಪಾಶ—ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್ ಬರುತ್ತದೆ. ಣಿಜಂತದ ಮೇಲೆ ಅಚೋಯತ್ (ಪಾ. ಸೂ. ೩-೧-೯೭) ಎಂಬುದರಿಂದ ಯತ್ ಪ್ರತ್ಯಯ. ಣೇರನಿಟಿ ಎಂಬುದರಿಂದ ಯತ್ ಪರದಲ್ಲಿರುವಾಗ ಣಿಚಿಗೆ ಲೋಪ. ವೀರ್ಯಶಬ್ದವಾಗುತ್ತದೆ. ತೃತೀಯಾ ಏಕವಚನಾಂತರೂಪ. ಇಲ್ಲಿ ಮೊದಲು ಯತೋಽನಾವಃ (ಪಾ. ಸೂ. ೬-೧-೨೧೩) ಎಂಬುದರಿಂದ ಯತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾಗುತ್ತದೆ. ಆದರೆ ಬಹುವ್ರೀಹಿಯಲ್ಲಿ ವೀರ್ಯಶಬ್ದವು ಉತ್ತರಪದವಾಗಿರುವಾಗ ವೀರವೀರ್ಯೌಚ (ಪಾ. ಸೂ. ೬-೨-೧೨೦) ಎಂಬುದರಿಂದ ಉತ್ತರಪದಾದ್ಯುದಾತ್ತತ್ವವಿಧಾನವನ್ನು ಪುನಃ ಪ್ರಾರಂಭಿಸಿರುವುದರಿಂದ ಇಲ್ಲಿ ಯತ್ ಸ್ವರವು ಬರುವುದಿಲ್ಲವೆಂದು ಜ್ಞಾಪಿತವಾಗುತ್ತದೆ. ಆಗ ತಿತ್‌ಸ್ವರಿತಮ್ (ಪಾ. ಸೂ. ೬-೧-೧೮೫) ಎಂಬುದರಿಂದ ಪ್ರತ್ಯಯ ತಿತ್ತಾದುದರಿಂದ ಸ್ವರಿತಸ್ವರ ಬರುತ್ತದೆ. ಯತೋಽನಾವಃ ಸೂತ್ರದಿಂದ ಆದ್ಯುದಾತ್ತಸ್ವರವು ಸಿದ್ಧವಾಗುವುದಾದರೆ ವೀರವೀರ್ಯೌಚ ಸೂತ್ರವು ವ್ಯರ್ಥವಾಗಬೇಕಾಗುತ್ತದೆ. ಆದ್ಯುದಾತ್ತಂ ದ್ವ್ಯಚ್ ಛಂದಸಿ (ಪಾ. ಸೂ. ೬-೨-೧೧೯) ಎಂಬುದರಿಂದಲೇ ಸಮಾಸದಲ್ಲಿ ಆದ್ಯುದಾತ್ತಸ್ವರ ಬರುವಾಗ ಪುನಃ ಸೂತ್ರಾರಂಭವು ಏಕೆ? ವ್ಯರ್ಥವೆಂದೇ ಆಗಬೇಕಾಗುತ್ತದೆ. ಆದುದರಿಂದ ಸ್ವರಿತವೇ ಇಲ್ಲಿ ಬರುವುದು.

ದೇವತಾ—ದೇವ ಏವ ದೇವತಾ. ದೇವಾತ್ತಲ್ (ಪಾ. ಸೂ. ೫-೪-೨೭) ಎಂಬುದರಿಂದ ದೇವಶಬ್ದದಮೇಲೆ ಸ್ವಾರ್ಥದಲ್ಲಿ ತಲ್ ಪ್ರತ್ಯಯ. ತಲಂತಂಸ್ತ್ರಿಯಾಂ ಎಂಬ ವಚನದಿಂದ ಸ್ತ್ರೀಲಿಂಗವಾಗಿಯೇ ಇರುವುದು. ಲಿತಿ (ಪಾ. ಸೂ. ೬-೧-೧೯೩) ಸೂತ್ರದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ಚೇಕಿತೇ—ಕಿತ ಜ್ಞಾನೇ ಧಾತು. ಭೃಶಾರ್ಥ (ಅತಿಶಯ) ತೋರುವಾಗ ಯಙ್. ಸನ್ಯಙೋಃ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಗುಣೋಯಙ್‌ಲುಕೋಃ ಎಂಬುದರಿಂದ ಅಭ್ಯಾಸಕ್ಕೆ ಗುಣ. ಚೇಕಿತ್ಯ ಎಂಬುದು ಸನಾದ್ಯಂತಾ ಧಾತವಃ ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದು



CC-0. Jangamwadi Math Collection. Digitized by eGangotri

ತ್ತದೆ. ಯಜಂತದ ಮೇಲೆ ಕರ್ಮಣಿಯಲ್ಲಿ ಲಿಟ್. ಲಿಟಗೆ ಲಿಟ್ಚ ಸೂತ್ರದಿಂದ ಆರ್ಧಧಾತುಕ ಸಂಜ್ಞೆ ಇರುವುದರಿಂದ ಅತೋಲೋಪಃ ಎಂಬುದರಿಂದ ಯಜಿನ ಅಕಾರಕ್ಕೆ ಲೋಪ. ಯಸ್ಯಹಲಃ (ಪಾ. ಸೂ. ೬.೪.೪೯) ಎಂಬುದರಿಂದ ಯಕಾರಕ್ಕೆ ಲೋಪ. ಲಿಟಸ್ತಝಯೋ—ಸೂತ್ರದಿಂದ ತ ಪ್ರತ್ಯಯಕ್ಕೆ ಏಶಾದೇಶ. ಜೇಕಿತೇ ಎಂದು ರೂಪವಾಗುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಪುರೋಹಿತಃ—ಪೂರ್ವಶಬ್ದಕ್ಕೆ ಅಸ್ತಾತ್ಯರ್ಥದಲ್ಲಿ ಪೂರ್ವಾಧರಾವರಾಣಾಂ—(ಪಾ. ಸೂ. ೫-೩-೩೯) ಎಂಬುದರಿಂದ ಅಸಿ ಪ್ರತ್ಯಯ. ಪ್ರಕೃತಿಗೆ ಪುರ್ ಆದೇಶ. ಪುರಸ್ ಎಂಬುದು ತದ್ಧಿತಶ್ಚಾಸರ್ವವಿಭಕ್ತಿಃ (ಪಾ. ಸೂ. ೧-೧-೩೮) ಎಂಬುದರಿಂದ ಅವ್ಯಯ ಸಂಜ್ಞೆಯನ್ನು ಹೊಂದುವುದರಿಂದ ಪುರೋಽವ್ಯಯಂ (ಪಾ.ಸೂ. ೧-೪-೬೭) ಎಂಬುದರಿಂದ ಗತಿ ಸಂಜ್ಞಾ ಬರುತ್ತದೆ. ಆಗ ಗತಿರನಂತರಃ (ಪಾ. ಸೂ. ೬-೨-೪೯) ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಸ ಇದ್ವನೇ ನಮುಸ್ಯುಭಿರ್ವಚಸ್ಯತೇ ಚಾರು ಜನೇಷು ಪ್ರಬ್ರುವಾಣ
ಇಂದ್ರಿಯಂ ।
ವೃಷಾ ಛಂದುರ್ಭವತಿ ಹರ್ಯತೋ ವೃಷಾ ಕ್ಷೇಮೇಣ ಧೇನಾಂ
ಮಘವಾ ಯದಿನ್ವತಿ ॥ ೪ ॥

ಪದಪಾಠಃ

ಸಃ । ಇತ್ । ವನೇ । ನಮಸ್ಯುಽಭಿಃ । ವಚಸ್ಯತೇ । ಚಾರು । ಜನೇಷು ।
ಪ್ರಽಬ್ರುವಾಣಃ । ಇಂದ್ರಿಯಂ ।
ವೃಷಾ । ಛಂದುಃ । ಭವತಿ । ಹರ್ಯತಃ । ವೃಷಾ । ಕ್ಷೇಮೇಣ । ಧೇನಾಂ ।
ಮಘಽವಾ । ಯತ್ । ಇನ್ವತಿ ॥ ೪ ॥

॥ ಸಾಯಣಭಾಷ್ಯಂ ॥

ಸ ಇತ್ ಸ ಏವೇಂದ್ರೋ ವನೇಽರಣ್ಯೇ ನಮಸ್ಯುಭಿರ್ನಮಸಾ ಸ್ತೋತ್ರೇಣ ಪೂಜಯಿತೃಭಿ-ರ್ಋಷಿಭಿರ್ವಚಸ್ಯತೇ । ವಚ ಇಚ್ಛನ್ ಕ್ರಿಯತೇ । ಸ್ತೂಯತ ಇತ್ಯರ್ಥಃ । ಯದ್ವಾ । ವಚಃ ಸ್ತೋತ್ರ-





CC-0. Jangamwadi Math Collection. Digitized by eGangotri

ಮಾತ್ಮನ ಇಚ್ಛತಿ । ಸ ಚೇಂದ್ರ ಆತ್ಮೀಯೇಷು ಜನೇಷ್ವಿಂದ್ರಿಯಂ ಸ್ವವೀರ್ಯಂ ಪ್ರಬ್ರುವಾಣಃ ಪ್ರಕಟಯನ್ ಚಾರು ವರ್ತತೇ । ಕಿಂಚ ಸ ವೃಷಾ ಕಾಮಾನಾಂ ವರ್ಷಕೋ ಹರ್ಯತಃ ಪ್ರೇಪ್ಸಾವತೋ ಯಿಯಕ್ಷತಶ್ಛಂದುರುಪಚ್ಛಂದಯಿತಾ ಭವತಿ। ಯಿಯಕ್ಷತಾಂ ಪುರುಷಾಣಾಂ ಯಾಗೇ ರುಚಿಮುತ್ಪಾದಯತೀತಿ ಭಾವಃ । ವೃಷಾ ಹವಿಷಾಂ ವರ್ಷಯಿತಾ । ಹವಿಷ್ಪ್ರದಾತೇತ್ಯರ್ಥಃ । ಮಘವಾ ಧನವಾನ್ । ಏವಂಭೂತೋಯಜಮಾನಃ ಕ್ಷೇಮೇಣೇಂದ್ರಕೃತೇನ ರಕ್ಷಣೇನ ಯುಕ್ತಃ ಸನ್ ಯದ್ಯದಾ ಧೇನಾಂ ಸ್ತುತಿಲಕ್ಷಣಾಂ ವಾಚಮಿನ್ವತಿ ಪ್ರೇರಯತಿ । ತದಾನೀಂ ಛಂದುರ್ಭವತೀತಿ ಪೂರ್ವೇಣಾನ್ವಯಃ । ಯದ್ವಾ । ಮಘವಾ ವೃಷೇಂದ್ರಃ ಕ್ಷೇಮೇಣ ಕ್ಷೇಪಕರೇಣ ಮನಸಾ ಧೇನಾಂ ಯಜಮಾನೈಃ ಕೃತಾಂ ಸ್ತುತಿಂ ಯದ್ಯಸ್ಮಾದಿನ್ವತಿ ವ್ಯಾಪ್ನೋತಿ । ತಸ್ಮಾದಿತಿ ಯೋಜ್ಯಂ ॥ ನಮಸ್ಯುಭಿಃ । ನಮೋವರಿವ ಇತಿ ಪೂಜಾರ್ಥೇ ಕ್ಯಚ್ । ಕ್ಯಾಚ್ಛಂದಸೀತ್ಯುಪ್ರತ್ಯಯ । ವಚಸ್ಯತೇ । ವಚ ಇಚ್ಛತಿ ವಚಸ್ಯತಿ । ತಂ ವಚಸ್ಯಂತಂ ಕುರ್ವಂತಿ ಮುನಯೋ ವಚಸ್ಯಯಂತಿ । ವಚಸ್ಯಯತೇಃ ಕರ್ಮಣಿ ಯಕ್ಯತೋಲೋಪಯಲೋಪೌ । ಯದ್ವಾ। ವಚಸ್ಯತೇರ್ವ್ಯತ್ಯಯೇನಾತ್ಮನೇಪದಂ । ಪ್ರಬ್ರುವಾಣಃ । ಬ್ರೂಞ್ ವ್ಯಕ್ತಾಯಾಂ ವಾಚಿ । ಲಟಃ ಶಾನಚ್ । ಅದಾದಿತ್ವಾಚ್ಛಪೋ ಲುಕ್ । ಶಾನಚೋ ಙಿತ್ವಾದ್ಗುಣಾಭಾವ ಉವಙ್ । ಚಿತ್ಸ್ವರೇಣಾಂತೋದಾತ್ತಃ । ಇಂದ್ರಿಯಂ । ಇಂದ್ರಸ್ಯ ಲಿಂಗಮಿಂದ್ರಿಯಂ । ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟಮಿಂದ್ರಸೃಷ್ಟಮಿಂದ್ರಜುಷ್ಟಮಿಂದ್ರದತ್ತಮಿತಿ ವಾ । ಪಾ. ೫-೨-೯೩. । ಇತಿ ಲಿಂಗಾದಿಷ್ವರ್ಥೇಷ್ವಿಂದ್ರಶಬ್ದಾತ್ ಘಚ್‌ಪ್ರತ್ಯಯೋ ನಿಪಾತ್ಯತೇ । ಅಂತೋಽಂತೋದಾತ್ತತ್ವಂ । ಇನ್ವತಿ । ಇವಿ ವ್ಯಾಪ್ತೌ । ಶಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ಸ್ವರಃ। ಯದ್ವೃತ್ತಯೋಗಾದನಿಘಾತಃ ॥

॥ ಪ್ರತಿಪದಾರ್ಥ ॥

ಸ ಇತ್—ಅದೇ ಇಂದ್ರನು । ವನೇ—ಅರಣ್ಯದಲ್ಲಿ । ನಮಸ್ಯುಭಿಃ—ನಮಸ್ಕಾರಪೂರ್ವಕವಾಗಿ ಪೂಜಿಸುವ ಋಷಿಗಳಿಂದ । ವಚಸ್ಯತೇ—ಸ್ತುತಿಸಲ್ಪಡುತ್ತಾನೆ ಅಥವಾ ಸ್ತುತನಾಗಲು ಇಚ್ಛಿಸುತ್ತಾನೆ । ಜನೇಷು—(ತನ್ನವರಾದ) ಮಾನವರಲ್ಲಿ । ಇಂದ್ರಿಯಂ—ಸ್ವವೀರ್ಯವನ್ನು । ಪ್ರಬ್ರುವಾಣಃ—ಪ್ರಕಟಸುತ್ತ । ಚಾರು—ರಮ್ಯನಾಗಿದ್ದಾನೆ । ವೃಷಾ—ಹವಿರ್ದಾತನಾಗಿಯೂ । ಮಘವಾ—ಧನವಂತನಾಗಿಯೂ ಇರುವ ಯಜಮಾನನು । ಕ್ಷೇಮೇಣ—(ಇಂದ್ರದತ್ತವಾದ) ರಕ್ಷಣೆಯಿಂದ ಕೂಡಿ । ಯತ್—ಯಾವಾಗ । ಧೇನಾಂ—ಸ್ತುತಿರೂಪವಾದ ವಾಕ್ಯನ್ನು। ಇನ್ವತಿ—ಅರ್ಪಿಸುತ್ತಾನೋ (ಆಗ)। ವೃಷಾ—(ಇಷ್ಟಾರ್ಥಗಳನ್ನು) ದಯಪಾಲಿಸುವ ಇಂದ್ರನು। ಹರ್ಯತಃ—(ಅವುಗಳನ್ನು ಪಡೆಯಲು) ಯಜ್ಞಮಾಡಲಿಚ್ಛಿಯುಳ್ಳ ಯಜಮಾನನಿಗೆ । ಛಂದುಃ—ಹರ್ಷ (ತೃಪ್ತಿ)ದಾಯಕನಾಗಿ । ಭವತಿ—ಆಗುತ್ತಾನೆ [ಅಥವಾ । ಮಘವಾ—ಧನವಂತನೂ । ವೃಷಾ—ಇಷ್ಟಾರ್ಥಪ್ರದನೂ ಆದಇಂದ್ರನು। ಕ್ಷೇಮೇಣ—ಕ್ಷೇಮವನ್ನುಂಟುಮಾಡುವ ಮನಸ್ಸಿನಿಂದ । ಧೇನಾಂ—(ಯಜಮಾನನಿಂದ ಅರ್ಪಿಸಲ್ಪಟ್ಟ) ಸ್ತೋತ್ರವನ್ನು । ಯತ್—ಯಾವಕಾರಣದಿಂದ । ಇನ್ವತಿ—ಸಂಪೂರ್ಣವಾಗಿ ಪಡೆಯುತ್ತಾನೋ (ಅದ್ದರಿಂದ) ಹರ್ಯತಃ—ಯಜ್ಞಮಾಡಲಿಚ್ಛಿಯುಳ್ಳ ಯಜಮಾನನಿಗೆ । ಛಂದುಃ—ಹರ್ಷ (ತೃಪ್ತಿ) ದಾಯಕನಾಗಿ । ಭವತಿ—ಆಗುತ್ತಾನೆ ]

॥ ಭಾವಾರ್ಥ ॥

ಅದೇ ಇಂದ್ರನು ಅರಣ್ಯದಲ್ಲಿ ತನ್ನನ್ನು ಪೂಜಿಸುವ ಋಷಿಗಳಿಂದ ಸ್ತುತಿಸಲ್ಪಡುತ್ತಾನೆ. ತನ್ನವರಾದ ಮಾನವರಲ್ಲಿ ತನ್ನ ರಮ್ಯವಾದ ವೀರ್ಯವನ್ನು ಪ್ರಕಟಿಸುತ್ತಾನೆ. ಹವಿರ್ದಾತನಾಗಿಯೂ ಧನವಂತನಾಗಿಯೂ

ಇರುವ ಯಜಮಾನನು ಇಂದ್ರದತ್ತವಾದ ರಕ್ಷಣೆಯಿಂದ ಕೂಡಿ ಯಾವಾಗ ಸ್ತುತಿರೂಪವಾದ ವಾಕ್ಯನ್ನು ಅರ್ಪಿಸುತ್ತಾನೋ, ಆಗ ಇಷ್ಟಾರ್ಥಪ್ರದನಾದ ಇಂದ್ರನು ಅವುಗಳನ್ನು ಪಡೆಯಲು ಯಜ್ಞಮಾಡಲಿಚ್ಛೆಯುಳ್ಳ ಯಜಮಾನನಿಗೆ ತೃಪ್ತಿದಾಯಕನಾಗಿ ಆಗುತ್ತಾನೆ.

## Engish Transation.

He is praised by adoring (sages) in the forest, he stands beautifully by anouncing his own strength amongst men, when protected by Indra, a wealthy sacrificer, the offerer of oblation, recites laudatory verses, Indra, the showerer of desires, engages him who is desirous of performing a sacrifice in that rite.

|| ವಿಶೇಷ ವಿಷಯಗಳು ||

**ನಮಸ್ಯುಭಿಃ**—ನಮಸಾ ಸ್ತೋತ್ರೇಣ ಪೂಜಯಿತೃಭಿಃ ಋಷಿಭಿಃ | ಕೇವಲ ಸ್ತೋತ್ರದಿಂದಲೇ ತೃಪ್ತಿಪಡಿಸುವ ಋಷಿಗಳಿಂದ ಎಂದರ್ಥ. ಸ್ತುತಿಪ್ರಿಯನಾದ ಇಂದ್ರನು ಅರಣ್ಯದಲ್ಲಿ ಋಷಿಗಳು ಮಾಡುವ ಸ್ತುತಿವಚನಗಳಿಂದಲೇ ತೃಪ್ತನಾಗುವನು.

**ವಚಸ್ಯತೇ**—ವಚ ಇಚ್ಛತಿ ವಚಸ್ಯತಿ | ತಂ ವಚಸ್ಯಂತಂ ಕುರ್ವಂತಿ ಮುನಯೋ ವಚಸ್ಯಯಂತಿ ಇಲ್ಲಿ ವಚಶ್ಶಬ್ದಕ್ಕೆ ಸ್ತೋತ್ರವೆಂದು ಅರ್ಥಮಾಡಿ, ಸ್ತೋತ್ರವನ್ನು ಅಪೇಕ್ಷಿಸುವವನು ಎಂದರ್ಥಮಾಡಿದ್ದಾರೆ. ಮತ್ತು ಇಂದ್ರನು ಸ್ತುತಿಪ್ರಿಯನಾಗುವಂತೆ ಮಾಡುವವರು ಮುನಿಗಳು ಎಂಬರ್ಥವೂ ಇಲ್ಲಿಉಪಾತ್ತವಾಗಿದೆ.

**ಹರ್ಯತಃ**—ಪ್ರೇಪ್ಸಾವತೋ ಯಿಯಕ್ಷತಃ | ಸ್ವಂತ ಇಚ್ಛೆಯಿಂದ ಯಾಗ ಮಾಡುವವನು.

**ಛಂದುಃ ಭವತಿ**—ಉಪಚ್ಛಂದಯಿತಾ ಭವತಿ—ಯಾಗ ಮಾಡುವವನಿಗೆ ಯಾಗ ಕರ್ಮದಲ್ಲಿ ರುಚಿಯನ್ನುಂಟುಮಾಡುವವನು ಇಂದ್ರನು ಎಂಬರ್ಥವು ಇಲ್ಲಿ ಸ್ಪಷ್ಟವಾಗಿದೆ.

**ವೃಷಾ**—ಇಲ್ಲಿ ವೃಷಾ ಎಂಬ ಶಬ್ದವು ಇಷ್ಟಾರ್ಥಗಳನ್ನು ಕೊಡುವವನು ಎಂಬರ್ಥದಲ್ಲಿ ಇಂದ್ರನ ಪರವಾಗಿಯೂ, ಹವಿಸ್ಸನ್ನರ್ಪಿಸುವವನು ಎಂಬರ್ಥದಲ್ಲಿ ಯಜಮಾನನ ಪರವಾಗಿಯೂ ಇರುವುದು.

**ಧೇನಾಂ**—ಸ್ತುತಿಯನ್ನು ಪ್ರದರ್ಶಿಸುವ ವಾಕ್ಯ ಎಂದರ್ಥ. ಇಂದ್ರನಿಗೆ ಪ್ರಿಯವಾದ ಸ್ತುತಿವಚನಗಳನ್ನು ಹೇಳುವವನು ಯಾಗಮಾಡುವ ಜನರಿಗೆ ಆನಂದವನ್ನುಂಟುಮಾಡುವನು ಎಂಬ ಪ್ರಕರಣದಲ್ಲಿ ಈ ಶಬ್ದವು ಬಂದಿದೆ.

|| ವ್ಯಾಕರಣಪ್ರಕ್ರಿಯಾ ||

**ನಮಸ್ಯುಭಿಃ**—ನಮಸ್ ಎಂಬುದು ಸಾಂತ ಅವ್ಯಯ. ಪೂಜಾರ್ಥ ತೋರುವಾಗ ನಮೋವರಿವಶ್ಚಿತ್ರಙಃ ಕ್ಯಚ್ (ಪಾ. ಸೂ. ೩-೧-೧೯) ಎಂಬುದರಿಂದ ಕ್ಯಚ್ ಪ್ರತ್ಯಯ. ಸನಾದ್ಯಂತಾಧಾತವಃ ಎಂಬುದರಿಂದ ನಮಸ್ಯ ಎಂಬುದು ಧಾತುಸಂಜ್ಞೆಯನ್ನು ಹೊಂದುತ್ತದೆ. ಕ್ಯಾಚ್ಛಂದಸಿ (ಪಾ. ಸೂ. ೩-೨-೧೭೦)



CC-0. Jangamwadi Math Collection. Digitized by eGangotri

ಎಂಬುದರಿಂದ ಛಂದಸ್ಸಿನಲ್ಲಿ ಕ್ಯಜಂತದ ಮೇಲೆ ಉ ಪ್ರತ್ಯಯ. ಉ ಪರವಾದಾಗ **ಅತೋಲೋಪಃ** ಎಂಬುದ ರಿಂದ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ನಮಸ್ಯು ಎಂಬುದು ಅಂತೋದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ.

**ವಚಸ್ಯತೇ**—ವಚಃ ಇಚ್ಛತಿ ವಚಸ್ಯತಿ. **ಸುಪಆತ್ಮನಃಕ್ಯಚ್** ಎಂಬುದರಿಂದ ಇಚ್ಛಾರ್ಥದಲ್ಲಿ ಕ್ಯಚ್ ಪ್ರತ್ಯಯ. ತಂ ವಚಸ್ಯಂತಂ ಕುರ್ವಂತಿ ಮುನಯಃ ವಚಸ್ಯಯಂತಿ. **ಹೇತುಮತಿಚ** ಎಂಬುದರಿಂದ ಕ್ಯಜಂತದ ಮೇಲೆ ಣಿಚ್. ಣಿಜಂತದ ಮೇಲೆ ಕರ್ಮಣಿಯಲ್ಲಿ ಯಕ್ ಬಂದಾಗ **ಣೇರನಿಟಿ** ಸೂತ್ರದಿಂದ ಣಿಚಿಗೆ ಲೋಪ. **ಯಸ್ಯಹಲಃ** ಎಂಬುದರಿಂದ ಕ್ಯಚಿನ ಯಕಾರಕ್ಕೆ ಲೋಪ. **ಅತೋಲೋಪಃ** ಸೂತ್ರದಿಂದ ಉಳಿದ ಅಕಾರಕ್ಕೆ ಲೋಪ. ವಚಸ್ಯತೇ ಎಂದು ರೂಪವಾಗುತ್ತದೆ. ಅಥವಾ ಕೇವಲ ಕ್ಯಚ್ ಬಂದಾಗ ವಚಸ್ಯ ಎಂದು ರೂಪವಾಗುತ್ತದೆ. ನಿಮಿತ್ತವಿಲ್ಲದಿದ್ದರೂ **ವ್ಯತ್ಯಯೋ ಬಹುಲಂ** ಎಂಬುದರಿಂದ ಆತ್ಮನೇಪದ ಪ್ರತ್ಯಯ ಬರುತ್ತದೆ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಪ್ರಬ್ರುವಾಣಃ**—ಬ್ರೂಞ್ ವ್ಯಕ್ತಾಯಾಂ ವಾಚಿ. ಧಾತು ಞಿತ್ತಾದುದರಿಂದ ಉಭಯಪದೀ ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಶಪ್ ಪ್ರಾಪ್ತವಾದರೆ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಅದಕ್ಕೆ ಲುಕ್. **ಸಾರ್ವಧಾತುಕಮಪಿತ್** ಎಂಬುದರಿಂದ ಶಾನಚ್ ಙಿತ್ತಾದುದರಿಂದ ತನ್ನಿಮಿತ್ತವಾಗಿ ಧಾತುವಿಗೆ ಗುಣ ಬರುವುದಿಲ್ಲ. ಆಗ **ಅಚಿಶ್ನುಧಾತುಭ್ರುವಾಂ**—ಸೂತ್ರದಿಂದ ಉವಙಾದೇಶ. **ಅಟ್‌ಕುಪ್ವಾಙ್**—ಸೂತ್ರದಿಂದ ಶಾನಚಿನ ನಕಾರಕ್ಕೆ ಣತ್ವ. ಬ್ರುವಾಣಃ ಎಂದು ರೂಪವಾಗುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ. ಪ್ರ ಎಂಬುದರೊಡನೆ ಸಮಾಸವಾದಾಗ **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದಪ್ರಕೃತಿ ಸ್ವರ ಬರುತ್ತದೆ.

**ಇಂದ್ರಿಯಮ್**—ಇಂದ್ರಸ್ಯ ಲಿಂಗಂ ಇಂದ್ರಿಯಮ್. **ಇಂದ್ರಿಯಮಿಂದ್ರಲಿಂಗಮಿಂದ್ರದೃಷ್ಟಮಿಂದ್ರ ಸೃಷ್ಟಮಿಂದ್ರಜುಷ್ಟಮಿಂದ್ರದತ್ತಮಿತಿವಾ** (ಪಾ. ಸೂ. ೫-೨-೯೩) ಎಂಬುದರಿಂದ ಲಿಂಗಾದ್ಯರ್ಥ ತೋರುವಾಗ ಇಂದ್ರಶಬ್ದದ ಮೇಲೆ ಘಚ್ ಪ್ರತ್ಯಯವು ನಿಪಾತಿತವಾಗಿದೆ. ಘ ಎಂಬುದಕ್ಕೆ ಇಯಾದೇಶ. ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ.

**ಇನ್ವತಿ**—ಇವಿ ವ್ಯಾಪ್ತೌ ಧಾತು. **ಇದಿತೋನುಮ್‌ಧಾತೋಃ** ಎಂಬುದರಿಂದ ನುಮಾಗಮ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿ ಪ್ರತ್ಯಯ. **ಕರ್ತರಿಶಪ್** ಸೂತ್ರದಿಂದ ಶಪ್. ವಿಕರಣವೂ ಪ್ರತ್ಯಯವೂ ಪಿತ್ತಾದುದರಿಂದ **ಅನುದಾತ್ತೌ ಸುಪ್ಪಿತೌ** ಎಂಬುದರಿಂದ ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಂ** ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಸ ಇನ್ಮಹಾನಿ ಸಮಿಥಾನಿ ಮಜ್ಮನಾ ಕೃಣೋತಿ ಯುಧ್ಮ ಓಜಸಾ ಜನೇಭ್ಯಃ ।
ಅಧಾ ಚನ ಶ್ರದ್ದಧತಿ ತ್ವಿಷೀಮತ ಇಂದ್ರಾಯ ವಜ್ರಂ ನಿಘನಿಘ್ನತೇ ವಧಂ ॥ ೫ ॥

॥ ಪದಪಾಠಃ ॥

ಸಃ । ಇತ್ । ಮಹಾನಿ । ಸಂಽಇಥಾನಿ । ಮಜ್ಮನಾ । ಕೃಣೋತಿ । ಯುಧ್ಮಃ । ಓಜಸಾ । ಜನೇಭ್ಯಃ ।
ಅಧ । ಚನ । ಶ್ರತ್ । ದಧತಿ । ತ್ವಿಷಿಮತೇ । ಇಂದ್ರಾಯ । ವಜ್ರಂ । ನಿಽಘನಿಘ್ನತೇ । ವಧಂ ॥ ೫ ॥

॥ ಸಾಯಣಭಾಷ್ಯಂ ॥

ಸ ಇತ್ ಸ ಏವೇಂದ್ರೋ ಯುಧ್ಮೋ ಯೋದ್ಧಾ ಮಹಾನಿ ಸಮಿಥಾನಿ ಮಹತಃ ಸಂಗ್ರಾಮಾನ್ಮಜ್ಮನಾ ಸರ್ವಸ್ಯ ಶೋಧಕೇನೌಜಸಾ ಬಲೇನ ಕೃಣೋತಿ । ಕರೋತಿ । ಕಿಮರ್ಥಂ । ಜನೇಭ್ಯಃ । ಸ್ತೋತೃಜನಾರ್ಥಂ । ಯದೇಂದ್ರೋ ವಧಂ ಹನನಸಾಧನಂ ವಜ್ರಮಾಯುಧಂ ಮೇಘೇಷು ನಿಘನಿಘ್ನತೇ । ನಿಹಂತಿ ಅಧಾ ಚನ ಅನಂತರಮೇವ ತ್ವಿಷೀಮತೇ ದೀಪ್ತಿಮತ ಇಂದ್ರಾಯ ಸರ್ವೇ ಜನಾಃ ಶ್ರದ್ದಧತಿ । ಶ್ರದಿತಿ ಸತ್ಯನಾಮ । ಇಂದ್ರೋ ಬಲವಾನಿತಿ ಯದುಚ್ಯತೇ ತತ್ಸತ್ಯಮೇವೇತಿ ಸರ್ವೇ ಪ್ರತಿಪದ್ಯಂತೇ ॥ ಮಹಾನಿ । ಮಹಾಂತೀತ್ಯಸ್ಯ ತಕಾರಲೋಪಶ್ಛಾಂದಸಃ । ಯದ್ವಾ । ಮಹ್ಯಂತೇ ಪೂಜ್ಯಂತ ಇತಿ ಮಹಾನಿ ಪ್ರವೃದ್ಧಾನಿ । ಘಞರ್ಥೇ ಕವಿಧಾನಮಿತಿ ಕಃ । ಪ್ರತ್ಯಯಸ್ವರಃ । ಸಮಿಥಾನಿ । ಇಣ್ ಗತೌ । ಸಂಯಂತಿ ಸಂಗಚ್ಛಂತೇಽಸ್ಮಿನ್ವೀರಾ ಇತಿ ಸಮಿಥಾನಿ ಸಂಗ್ರಾಮಾಃ । ಸಮೀಣಃ । ಉ. ೨.೧೧ । ಇತಿ ಥಕ್ಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಮಜ್ಮನಾ । ಟುಮಸ್ಜೋ ಶುದ್ಧೌ । ಮನಿಪ್ರತ್ಯಯಃ । ಝಲಾಂ ಜಶ್ ಝಶಿ । ಪಾ. ೮-೪.೫೩ । ಇತಿ ಸಕಾರಸ್ಯ ಜಶ್ತ್ವಂ ದಕಾರಃ । ತತಶ್ಚುತ್ವಂ ಜಕಾರಃ । ಪ್ರತ್ಯಯಸ್ವರಃ । ಅಧ । ಛಾಂದಸಂ ಧತ್ವಂ । ನಿಪಾತಸ್ಯ ಚೇತಿ ಸಾಂಹಿತಿಕೋ ದೀರ್ಘಃ । ತ್ವಿಷೀಮತೇ । ತ್ವಿಷ ದೀಪ್ತೌ । ಇಗುಪಧಾತ್ಕಿತ್ ಸರ್ವಧಾತುಭ್ಯ ಇತೀನ್ಪ್ರತ್ಯಯಃ । ಅನ್ಯೇಷಾಮಪಿ ದೃಶ್ಯತ ದ್ಯುದಾತ್ತತ್ವಂ । ಮತುಪಃ ಪಿತ್ತ್ವಾದನುದಾತ್ತತ್ವೇ ಕದೇವ ಶಿಷ್ಯತೇ ।



CC-0. Jangamwadi Math Collection. Digitized by eGangotri

ಇತಿ ಸಾಂಹಿತಿಕೋ ದೀರ್ಘಃ | ನಿಘನಿಘ್ನತೇ | ಹಂತೇರ್ವ್ಯತ್ಯಯೇನಾತ್ಮನೇಪದಂ ಬಹುವಚನಂ ಚ | ಬಹುಲಂ ಛಂದಸೀತಿ ಶಪಃ ಶ್ಲುಃ | ಗಮಹನೇತ್ಯಾದಿನೋಪಧಾಲೋಪಃ | ಅಭ್ಯಾಸಸ್ಯ ಘುತ್ವಂ | ನಿಗಾ. ಗಮಶ್ಚ ಆಗನೀಗಂತೀತಿ ಚ | ಪಾ. ೭-೪-೬೫ | ಇತೀಚೆಶಬ್ದಃ ಪ್ರಕಾರಾರ್ಥ ಇತ್ಯುಕ್ತತ್ವಾದ್ದಾಧ. ರ್ತ್ಯಾದಾವೇತದ್ದ್ರಷ್ಟವ್ಯಂ ||

॥ ಪ್ರತಿಪದಾರ್ಥ ॥

ಯುಧ್ಮಃ—ಯೋಧನಾದ | ಸ ಇತ್—ಅದೇ ಇಂದ್ರನು | ಮಹಾನಿ—ಅದ್ಭುತಗಳಾದ | ಸಮಿ. ಥಾನಿ—ಯುದ್ಧಗಳನ್ನು | ಮಜ್ಮನಾ—(ಸಕಲವನ್ನೂ) ಶೋಧಿಸತಕ್ಕ (ಶತ್ರುಗಳನ್ನು ನಿರ್ಮೂಲಮಾಡತಕ್ಕ) | ಓಜಸಾ—ಶಕ್ತಿಯಿಂದ | ಜನೇಭ್ಯಃ—(ತನ್ನ) ಭಕ್ತಜನರ ಹಿತಕ್ಕಾಗಿ | ಕೃಣೋತಿ—ಮಾಡುತ್ತಾನೆ (ಯಾವಾಗ ಇಂದ್ರನು) | ವಧಂ—ವಧಕಾರಿಯಾದ | ವಜ್ರಂ—ತನ್ನ ವಜ್ರಾಯುಧವನ್ನು | ನಿಘನಿಘ್ನತೇ—(ಮೇಘಗಳಲ್ಲಿ) ಬಿರುಸಾಗಿ ಎಸೆಯುತ್ತಾನೆಯೋ | ಅಧಾ ಚನ—ಆ ಒಡನೆಯೇ | ತ್ವಿಷೀಮತೇ—ಪ್ರಜ್ವಲಿ. ಸುವ | ಇಂದ್ರಾಯ—ಇಂದ್ರನಿಗೆ | ಶ್ರದ್ದಧತಿ—(ಸಕಲರೂ ಸಹ ಇಂದ್ರನು ನಿಜವಾದ ಪರಾಕ್ರಮವುಳ್ಳವನು ಎಂದು) ನಂಬಿಕೆಯನ್ನು ಸೂಚಿಸುವ ಭಕ್ತಿಯನ್ನು ತೋರಿಸುತ್ತಾರೆ ||

|| ಭಾವಾರ್ಥ ||

ಯೋಧನಾದ ಇಂದ್ರನು ತನ್ನ ಭಕ್ತರ ಹಿತಕ್ಕಾಗಿ ಶತ್ರುಗಳಿಂದ ಪ್ರತಿಭಟಿಸಲಶಕ್ಯವಾದ ಶಕ್ತಿಯಿಂದ ಅದ್ಭುತಗಳಾದ ಯುದ್ಧಗಳನ್ನು ಮಾಡುತ್ತಾನೆ. ಯಾವಾಗ ಇಂದ್ರನು ವಧಕಾರಿಯಾದ ತನ್ನ ವಜ್ರಾಯುಧವನ್ನು ಬಿರುಸಾಗಿ ಎಸೆಯುತ್ತಾನೆಯೋ ಆ ಒಡನೆಯೇ ಸಕಲರೂ ಸಹ ಪ್ರಜ್ವಲಿಸುವ ಇಂದ್ರನಿಗೆ ಅವನ ಪರಾಕ್ರಮದಲ್ಲಿ ನಂಬಿಕೆಯಿಡುವ ಭಕ್ತಿಯನ್ನು ಸೂಚಿಸುತ್ತಾರೆ.

## English Translation.

Indra, the warrior, engages in many great conflicts for man with his all-purifying prowess; when he hurls his fatal thunderbolt, every one immediately has faith in the resplendent Indra (as being highly powerful).

|| ವಿಶೇಷ ವಿಷಯಗಳು ||

ಇತ್—ಇದು ಏವ ಎಂಬ ಪದದ ಅರ್ಥವನ್ನು ಕೊಡುವ ಅವ್ಯಯ.

ಯುಧ್ಮಃ—ಯೋಧ್ಧಾ | ಯುದ್ಧಮಾಡುವವನು

ಸಮಿಥಾನಿ—ಸಂಯಂತಿ ಸಂಗಚ್ಛಂತೇಽಸ್ಮಿನ್ ವೀರಾ ಇತಿ ಸಮಿಥಾನಿ ಸಂಗ್ರಾಮಾಃ—ವೀರರಾದವರು ಒಟ್ಟುಗೂಡಿ ನಡೆಸುವ ಯುದ್ಧಗಳು ಎಂದರ್ಥ.

ಮಜ್ಮನಾ—ಟುಮಸ್ಜೋ ಶುದ್ಧೌ ಎಂಬ ಧಾತುವಿನಿಂದ ಹುಟ್ಟಿದ ಈ ಶಬ್ದಕ್ಕೆ ಸರ್ವವನ್ನೂ ಶೋಧಿಸುವುದು ಎಂಬರ್ಥವನ್ನು ಕೊಡುವುದು.



CC-0. Jangamwadi Math Collection. Digitized by eGangotri

ಅಧಾ ಚನ—ಈ ಪದಸಮೂಹವು ಅನಂತರದಲ್ಲಿಯೇ ಎಂಬ ನಿಶ್ಚಿತಾರ್ಥವನ್ನು ಕೊಡುವುದು.

ಶ್ರದ್ಧಧತಿ—ಶ್ರತ್ ಇತಿ ಸತ್ಯನಾಮ ಇಂದ್ರನು ಬಲಿಷ್ಠನಾದವನು ಎಂದು ಹೇಳಿದರೆ ಅದನ್ನು ನಿಜ ನೆಂದು ನಂಬುವರು.

ತ್ವಿಷೀಮತೇ—ಕಾಂತಿಯುಕ್ತನಾದ ಇಂದ್ರನಿಗೆ ಎಂದರ್ಥವು.

॥ ವ್ಯಾಕರಣಪ್ರಕ್ರಿಯಾ ॥

ಮಹಾನಿ—ಮಹತ್ ಶಬ್ದ. ನಪುಂಸಕದಲ್ಲಿ ಬಹುವಚನಕ್ಕೆ ಶಿ ಆದೇಶ ಬಂದಾಗ ಮಹಾಂತಿ ಎಂದು ರೂಪವಾಗುತ್ತದೆ. ಛಾಂದಸವಾಗಿ ಅಲ್ಲಿ ತಕಾರಲೋಪ ಬಂದರೆ ಮಹಾನಿ ಎಂದು ರೂಪವಾಗುತ್ತದೆ. ಅಥವಾ ಮಹ್ಯಂತೇ ಪೂಜ್ಯಂತೇ ಇತಿ ಮಹಾನಿ ಪ್ರವೃದ್ಧಾನಿ (ಉತ್ಕೃಷ್ಟವಾದವುಗಳು) ಘಞರ್ಥೇಕವಿಧಾನಮ್ ಎಂಬುದರಿಂದ ಕ ಪ್ರತ್ಯಯ. ಮಹ ಶಬ್ದವಾಗುತ್ತದೆ. ನಪುಂಸಕದಲ್ಲಿ ನುಮಾಗಮ ದೀರ್ಘ. ಪ್ರತ್ಯಯಸ್ವರ ದಿಂದ ಹಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಸಮಿಥಾನಿ—ಇಣ್ ಗತೌ ಧಾತು. ಸಂಯಂತಿ ಸಂಗಚ್ಛಂತೇಽಸ್ಮಿನ್ ವೀರಾ ಇತಿ ಸಮಿಥಾನಿ ಸಂಗ್ರಾಮಾಃ ॥ (ವೀರರು ಸೇರುವ ಸ್ಥಳ) ಸಮೀಣಃ (ಉ. ಸೂ. ೪-೫೩೨) ಎಂಬುದರಿಂದ ಸಮ್ ಉಪಪದವಾಗಿ ರುವಾಗ ಇಣ್ ಧಾತುವಿಗೆ ಥಕ್ ಪ್ರತ್ಯಯ. ಕಿತ್ತಾದುದರಿಂದ ಪ್ರತ್ಯಯನಿಮಿತ್ತಕವಾಗಿ ಧಾತುವಿಗೆ ಗುಣ ಬರುವುದಿಲ್ಲ. ಸಮಿಥ ಶಬ್ದವಾಗುತ್ತದೆ. ಥಾಥಘಞ್ (ಪಾ. ಸೂ. ೬-೨-೧೪೪) ಎಂಬುದರಿಂದ ಸಮಾಸದಲ್ಲಿ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಮಜ್ಮನಾ—ಟುಮಸ್ಜೋ ಶುದ್ಧೌ ಧಾತು. ಮನಿ ಪ್ರತ್ಯಯ. ಮಸ್ಜ್+ಮನ್ ಎಂದಿರುವಾಗ ಝಲಾಂ ಜಶ್ ಝಶಿ (ಪಾ. ಸೂ. ೮-೪-೫೩) ಎಂಬುದರಿಂದ ಸಕಾರಕ್ಕೆ ಜಶ್ತ್ವದಿಂದ ದಕಾರಾದೇಶ. ಸ್ತೋಃ-ಶ್ಚುನಾಶ್ಚುಃ ಸೂತ್ರದಿಂದ ಜಕಾರಯೋಗವಿರುವುದರಿಂದ ಶ್ಚುತ್ವದಿಂದ ಜಕಾರಾದೇಶ. ಪ್ರತ್ಯಯಸ್ವರದಿಂದ ಮಸ್ನಿನ ಅಕಾರವು ಉದಾತ್ತವಾಗುತ್ತದೆ. ತೃತೀಯಾಏಕವಚನಾಂತರೂಪ.

ಅಧ—ಅಥ ಎಂದಿರುವಾಗ ಛಾಂದಸವಾಗಿ ಥಕಾರಕ್ಕೆ ಧತ್ವ. ನಿಪಾತಸ್ಯ ಚ (ಪಾ. ಸೂ. ೬-೩-೧೩೬) ಎಂಬುದರಿಂದ ಇದಕ್ಕೆ ನಿಪಾತಸಂಜ್ಞೆ ಇರುವುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ತ್ವಿಷೀಮತೇ—ತ್ವಿಷ ದೀಪ್ತೌ ಧಾತು. ಇನ್ ಸರ್ವಧಾತುಭ್ಯಃ (ಉ. ಸೂ. ೪-೫೫೭) ಎಂಬುದ ರಿಂದ ಇನ್ ಪ್ರತ್ಯಯ. ತ್ವಿಷಿನ್ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ತ್ವಿಷೀ ಅಸ್ಯ ಅಸ್ತಿ ಎಂಬರ್ಥದಲ್ಲಿ ತದಸ್ಯಾಸ್ತ್ಯಸ್ಮಿನ್ ಸೂತ್ರದಿಂದ ಮತುಪ್ ಪ್ರತ್ಯಯ. ಮತುಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಪೂರ್ವೋಕ್ತವಾದ ಸ್ವರವೇ ಉಳಿಯುತ್ತದೆ. ತ್ವಿಷಿಮತ್ ಎಂದಿ ರುವಾಗ ಅನ್ಯೇಷಾಮಪಿ ದೃಶ್ಯತೇ ಎಂಬುದರಿಂದ ಸಂಹಿತಾದಲ್ಲಿ ಪೂರ್ವಪದಕ್ಕೆ ದೀರ್ಘ. ಚತುರ್ಥೀ ಏಕ ವಚನದಲ್ಲಿ ತ್ವಿಷೀಮತೇ ಎಂದು ರೂಪವಾಗುತ್ತದೆ.

ನಿಘನಿಘ್ನತೇ—ಹನ ಹಿಂಸಾಗತ್ಯೋಃ ಧಾತು. ವ್ಯತ್ಯಯೋಬಹುಲಂ ಎಂಬುದರಿಂದ ಆತ್ಮನೇ ಪದಪ್ರತ್ಯಯವೂ ಬಹುವಚನವೂ ಬರುತ್ತದೆ. ಬಹುಲಂಛಂದಸಿ ಎಂಬುದರಿಂದ ಶಪಿಗೆ ಶ್ಲು ಆದೇಶ ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಗಮಹನಜನ—(ಪಾ. ಸೂ. ೬-೪-೯೮) ಎಂಬುದರಿಂದ ಧಾತುವಿನ ಉಪಧಾ ಭೂತ ಅಕಾರಕ್ಕೆ ಲೋಪ. ಛಾಂದಸವಾಗಿ ಅಭ್ಯಾಸಕ್ಕೆ ಘತ್ವವೂ ನಿಕ್ ಆಗಮವೂ ಬರುತ್ತವೆ. ಹೋಹಂತೇಃ



CC-0. Jangamwadi Math Collection. Digitized by eGangotri

ಸೂತ್ರದಿಂದ ಧಾತುವಿನ ಹಕಾರಕ್ಕೆ ಕುತ್ವದಿಂದ ಘಕಾರಾದೇಶ. ಅನಕಾರದ ಪದದಲ್ಲಿರುವುದರಿಂದ ಆತ್ಮನೇಪದೇಷ್ವನತಃ ಸೂತ್ರದಿಂದ ಝ ಪ್ರತ್ಯಯಕ್ಕೆ ಅತಾದೇಶ. ನಿಘನಿಘ್ನತೇ ಎಂದು ರೂಪವಾಗುತ್ತದೆ. ಆಗನೀಗಂತೀತಿ ಚ (ಪಾ. ಸೂ. ೭-೪-೬೫) ಎಂಬಲ್ಲಿ ಇತಿ ಶಬ್ದವು ಪ್ರಕಾರಾರ್ಥದಲ್ಲಿ (ಇದರಂತೆ ಇರುವುದು) ಇದೆ ಎಂಬುದರಿಂದ ದಾಧರ್ತಿ. ಇತ್ಯಾದಿ ರೂಪಗಳು ಛಂದಸ್ಸಿನಲ್ಲಿ ಮಾತ್ರ ಇರುವಂತೆಯೇ ಇದನ್ನೂ ಆ ಗಣದಲ್ಲಿ ಸೇರಿಸಿ ಛಾಂದಸಕಾರ್ಯಗಳನ್ನು ಹೇಳಬೇಕು.

॥ ಸಂಹಿತಾಪಾಠಃ ॥

ಸ ಹಿ ಶ್ರವಸ್ಯುಃ ಸದನಾನಿ ಕೃತ್ರಿಮಾ ಕ್ಷ್ಮಯಾ ವೃಧಾನ ಓಜಸಾ ವಿನಾಶಯನ್ ।

ಜ್ಯೋತೀಂಷಿ ಕೃಣ್ವನ್ನವೃಕಾಣಿ ಯಜ್ಯವೇಽವ ಸುಕ್ರತುಃ ಸರ್ತವಾ ಅಪಃ ಸೃಜತ್ ॥ ೬ ॥

॥ ಪದಪಾಠಃ ॥

ಸಃ । ಹಿ । ಶ್ರವಸ್ಯುಃ । ಸದನಾನಿ । ಕೃತ್ರಿಮಾ । ಕ್ಷ್ಮಯಾ । ವೃಧಾನಃ । ಓಜಸಾ । ವಿಽನಾಶಯನ್ ।

ಜ್ಯೋತೀಂಷಿ । ಕೃಣ್ವನ್ । ಅವೃಕಾಣಿ । ಯಜ್ಯವೇ । ಅವ । ಸುಽಕ್ರತುಃ । ಸರ್ತವೈ । ಅಪಃ । ಸೃಜತ್ ॥ ೬ ॥

॥ ಸಾಯಣಭಾಷ್ಯ ॥

ಶ್ರವಸ್ಯುರನ್ನಂ ಯಶೋ ವಾತ್ಮನ ಇಚ್ಛನ್ ಕೃತ್ರಿಮಾ ಕೃತ್ರಿಮಾಣಿ ಕ್ರಿಯಯಾ ನಿರ್ವೃತ್ತಾನಿ ಸದನಾನ್ಯಸುರಪುರಾಣ್ಯೋಜಸಾ ಬಲೇನ ವಿನಾಶಯನ್ ಕ್ಷ್ಮಯಾ ಭೂಮ್ಯಾ ಸಮಾನಂ ವೃಧಾನೋ ವರ್ಧನಶೀಲಃ । ಯದ್ವಾ । ಕ್ಷ್ಮಯೇತ್ಯೋಜೋವಿಶೇಷಣಂ । ಶತ್ರೂಣಾಮಭಿಭವಿತ್ರಾ ಬಲೇನೇತ್ಯರ್ಥಃ । ಜ್ಯೋತೀಂಷಿ ಸೂರ್ಯಾದೀನಿ ವೃತ್ರೇಣಾವೃತಾನ್ಯವೃಕಾಣಿ ವೃಕೇಣಾವರಕೇಣ ತೇನ ರಹಿತಾನಿ ಕೃಣ್ವನ್ । ಕುರ್ವನ್ ಸುಕ್ರತುಃ ಶೋಭನಕರ್ಮಸಹಿತ ಏವಂವಿಧಃ ಸ ಖಲ್ವಿಂದ್ರೋ ಯಜ್ಯವೇ ಯಷ್ಟ್ರೇ ಯಜಮಾನಾಯ ತದರ್ಥಂ ಸರ್ತವೈ ಸರಣಾಯಾಪೋ ವೃಷ್ಟಿಲಕ್ಷಣಾನ್ಯುದಕಾನ್ಯವಾಸೃಜತ್ । ವೃಷ್ಟಿಂ ಕೃತವಾನಿತ್ಯರ್ಥಃ ॥ ಕೃತ್ರಿಮಾ । ಡುಕೃಞ್ ಕರಣೇ । ಡ್ವಿತಃ ಕ್ತ್ರಿಃ । ಪಾ. ೩-೩-೮೮ । ಇತಿ ಭಾವೇ ಕ್ತ್ರಿ-



CC-0. Jangamwadi Math Collection. Digitized by eGangotri

ಪ್ರತ್ಯಯಃ । ಕ್ತ್ರೇರ್ಮಮ್ನಿತ್ಯಂ । ಪಾ. ೪.೪-೨೦ । ಇತಿ ನಿರ್ವೃತ್ತಾರ್ಥೇ ಮಪ್ । ತಸ್ಯ ಪಿತ್ತ್ವಾದನು-ದಾತ್ತತ್ವೇ ಕ್ತ್ರಿಪ್ರತ್ಯಯಸ್ವರ ಏವ ಶಿಷ್ಯತೇ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಕ್ಷ್ಮಯಾ । ಕ್ಷಮೂಷ್ ಸಹನೇ । ಕ್ಷಮತೇ ಪ್ರಾಣಿಜಾತಕೃತಮುಪದ್ರವಮಿತಿ ಕ್ಷಮಾ । ಷಿದ್ಭಿದಾದಿಭ್ಯೋಽಙ್ । ಪಾ. ೩-೩-೧೦೪ । ಇತ್ಯಙ್ಪ್ರತ್ಯಯಃ । ತತಷ್ಟಾಪ್ । ವ್ಯತ್ಯಯೇನ ಧಾತೋರುಪಧಾಲೋಪಃ । ಛಾಂ-ದಸಂ ವಿಭಕ್ತ್ಯುದಾತ್ತತ್ವಂ । ಯದ್ವಾ । ಅಯಂ ಧಾತುರಭಿಭವಾರ್ಥಃ । ಷಹ ಅಭಿಭವ ಇತಿ ಸಹನಸ್ಯಾ-ಭಿಭವಾರ್ಥತ್ವಾತ್ । ಅಸ್ಮಾದೌಣಾದಿಕೋ ಮನಿನ್ । ವ್ಯತ್ಯಯೇನ ಸ್ತ್ರೀಲಿಂಗತಾ । ಮನಃ । ಪಾ. ೪-೧-೧೧ । ಇತಿ ಙೀಪೋ ನಿಷೇಧೇ । ಡಾಬುಭಾಭ್ಯಾಮನ್ಯತರಸ್ಯಾಂ । ಪಾ. ೪-೧-೧೩ । ಇತಿ ಡಾಪ್ । ಟಿಲೋಪಃ । ವೃಧಾನಃ । ತಾಚ್ಛೀಲಿಕಶ್ಚಾನಶ್ । ಬಹುಲಂ ಛಂದಸೀತಿ ಶಪೋ ಲುಕ್ । ಚಿತ ಇತ್ಯಂ-ತೋದಾತ್ತತ್ವಂ । ಅವೃಕಾಣಿ । ವೃಞ್ ವರಣೇ । ಸೃವೃಭೂಶುಷಿಮುಷಿಭ್ಯಃ ಕಿತ್ । ಉ. ೩-೪೧ । ಇತಿ ಕಪ್ರತ್ಯಯಃ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ಯಜ್ಯವೇ । ಯಜಿಮನಿ-ಶುಂಧಿದಸಿಜನಿಭ್ಯೋ ಯುರಿತಿ ಯುಪ್ರತ್ಯಯಃ । ವೃಷಾದೇರಾಕೃತಿಗಣತ್ವಾದಾದ್ಯುದಾತ್ತತ್ವಂ । ಸುಕ್ರತುಃ । ಬಹುವ್ರೀಹೌ ಕ್ರತ್ವಾದಯಶ್ಚೇತ್ಯುತ್ತರಪದಾದ್ಯುದಾತ್ತತ್ವಂ । ಸರ್ತವೈ । ಸೃ ಗತೌ । ಕೃತ್ಯಾರ್ಥೇ ತವೈ-ಕೇನಿತಿ ಭಾವೇ ತವೈಪ್ರತ್ಯಯಃ । ಗುಣಃ । ಅಂತಶ್ಚ ತವೈ ಯುಗಪತ್ । ಪಾ. ೬-೧-೨೦೦ । ಇತ್ಯಾದ್ಯಂತ-ಯೋರ್ಯುಗಪದುದಾತ್ತತ್ವಂ । ಅಪಃ । ಊಡಿದಮಿತಿ ಶಸ ಉದಾತ್ತತ್ವಂ । ಸೃಜತ್ । ಲಙ್ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥

॥ ಪ್ರತಿಪದಾರ್ಥ ॥

ಶ್ರವಸ್ಯುಃ—ಅನ್ನವನ್ನು ಅಥವಾ ಯಶಸ್ಸನ್ನು ಅಪೇಕ್ಷಿಸುತ್ತಲೂ । ಕೃತ್ರಿಮಾ—ಚೆನ್ನಾಗಿ ಕಟ್ಟಿದ । ಸದನಾನಿ—(ರಾಕ್ಷಸರ) ಮನೆಗಳನ್ನು । ಓಜಸಾ—ತನ್ನ ಬಲದಿಂದ । ವಿನಾಶಯನ್—ನಾಶಪಡಿಸುತ್ತಲೂ । ಕ್ಷ್ಮಯಾ—ಪೃಥ್ವಿಗೆ ಸಮಾನವಾಗಿ ಅಥವಾ ತನ್ನ ಶಕ್ತಿಗೆ ಸಮಾನವಾಗಿ । ವೃಧಾನಃ—ವಿಸ್ತಾರವಾಗಿ ಬೆಳೆಯು ತ್ತಲೂ । ಜ್ಯೋತೀಂಷಿ—ಸೂರ್ಯಾದಿ ಜ್ಯೋತಿರ್ಮಂಡಲಗಳನ್ನೂ । ಅವೃಕಾಣಿ—(ವೃತ್ರರೂಪವಾದ) ಮರೆ ಯಿಲ್ಲದಿರುವಂತಹವುಗಳನ್ನಾಗಿ । ಕೃಣ್ವನ್—ಮಾಡುತ್ತಲೂ । ಸುಕ್ರತುಃ—ಶ್ರೇಷ್ಠವಾದ ಕರ್ಮದಿಂದ ಕೂಡಿಯೂ ಇರುವ । ಸ ಹಿಃ—ಅದೇ ಇಂದ್ರನು । ಯಜ್ಯವೇ—ಯಾಗಮಾಡತಕ್ಕ ಯಜಮಾನನಿಗಾಗಿ । ಸರ್ತವೈ—ಹರಿ ಯುವುದಕ್ಕೆ । ಅಪಃ—(ವೃಷ್ಟಿರೂಪವಾದ) ನೀರುಗಳನ್ನು । ಅವ ಸೃಜತ್—ಬಿಡಿಸಿದನು (ಮಳೆಯನ್ನು ಸುರಿ ಸಿದನು).

॥ ಭಾವಾರ್ಥ ॥

ಯಶಸ್ಸನ್ನು ಅಪೇಕ್ಷಿಸುತ್ತಲೂ, ತನ್ನ ಬಲದಿಂದ ಭದ್ರವಾಗಿ ಕಟ್ಟಿದ ರಾಕ್ಷಸರ ಮನೆಗಳನ್ನು ನಾಶಪಡಿ ಸುತ್ತಲೂ, ಪೃಥ್ವಿಗೆ ಸಮಾನವಾಗಿ ವಿಸ್ತಾರವಾಗಿ ಬೆಳೆಯುತ್ತಲೂ, ಸೂರ್ಯಾದಿ ಜ್ಯೋತಿರ್ಮಂಡಲಗಳನ್ನೂ ವೃತ್ರ ರೂಪವಾದ ಮರೆಯಿಂದ ತಪ್ಪಿಸುತ್ತಲೂ ಮತ್ತು ಶ್ರೇಷ್ಠವಾದ ಕರ್ಮಗಳನ್ನು ಮಾಡುತ್ತಲೂ ಇರತಕ್ಕ ಅದೇ ಇಂದ್ರನು ಯಾಗಮಾಡತಕ್ಕ ಯಜಮಾನನ ಉಪಯೋಗಕ್ಕೆ ಮಳೆಯನ್ನು ಸುರಿಸಿ ನೀರನ್ನು ಹರಿಸಿದನು.





CC-0. Jangamwadi Math Collection. Digitized by eGangotri

## English Translation.

Desiring of fame, destroying the well-built houses of the Asuras with his power, expanding like the earth and setting the (heavenly) luminaries free from concealment, he, the performer of good deeds enables the waters to flow for the sake of his worshippers.

॥ ವಿಶೇಷ ವಿಷಯಗಳು ॥

ಶ್ರವಸ್ಯುಃ—ಅನ್ನಂ ಯಶೋ ವಾತ್ಮನ ಇಚ್ಛನ್—ಅನ್ನವನ್ನಾಗಲಿ ಕೀರ್ತಿಯನ್ನಾಗಲಿ ಅಪೇಕ್ಷಿಸುವವನು.

ಕೃತ್ರಿಮೊ—ಕೃತ್ರಿಮಾಣಿ ಕ್ರಿಯಯಾ ನಿರ್ವೃತ್ತಾನಿ—ಕಲ್ಪನೆ ಮಾಡಿದುದು. ಸ್ವಪ್ರಯತ್ನದಿಂದ ಸಾಧಿಸಿದುದು ಎಂದರ್ಥ.

ಷ್ಟ್ರ್ಯಯಾ—ಶತ್ರುಗಳನ್ನು ನಾಶಗೊಳಿಸುವ ಬಲ ಎಂದರ್ಥ. ಇದು ಓಜಸಾ ಎಂಬ ಪದಕ್ಕೆ ವಿಶೇಷಣವಾಗಿದೆ,

ಜ್ಯೋತೀಂಷಿ ಅವೃಕಾಣಿ—ವೃತ್ರಾಸುರನು ಅಂತರಿಕ್ಷಗತನಾಗಿ ಸೂರ್ಯಾದಿ ಸಕಲ ಗ್ರಹಗಳನ್ನೂ ಆವರಿಸಿದ್ದನು. ಇಂದ್ರನು ಅಂತಹ ವೃತ್ರಾಸುರನನ್ನು ಕೊಂದು ಗ್ರಹಗಳಿಗೆ ವೃತ್ರನಿಂದ ಬಂದಿದ್ದ ಸಮಸ್ತ ಪೀಡೆಯನ್ನೂ ಪರಿಹರಿಸಿದನು. ಅಂದರೆ ವೃತ್ರನಿಂದ ಬಂದಿದ್ದ ಸಮಸ್ತ ಆವರಣಗಳನ್ನೂ ನಾಶಮಾಡಿದನು ಎಂದು ತಾತ್ಪರ್ಯ.

ಯಜ್ಯವೇ—ಯಷ್ಟ್ರೇ—ಯಾಗ ಮಾಡುವ ಯಜಮಾನನಿಗೆ ಎಂದರ್ಥ.

ಸರ್ತವೈ—ಸೃಗತೌ ಎಂಬ ಧಾತುನಿಷ್ಪನ್ನವಾದ ಈ ಶಬ್ದವು ಸಂಚಾರಕ್ಕಾಗಿ ಹರಿಯುವುದಕ್ಕಾಗಿ ಎಂಬರ್ಥವನ್ನು ಸೂಚಿಸುವುದು.

॥ ವ್ಯಾಕರಣಪ್ರಕ್ರಿಯಾ ॥

ಶ್ರವಸ್ಯುಃ—ಶ್ರವಃ ಅನ್ನಂ ಆತ್ಮನಃ ಇಚ್ಛತಿ ಶ್ರವಸ್ಯತಿ. ಸುಪ ಆತ್ಮನಃ ಕ್ಯಚ್ ಎಂಬುದರಿಂದ ಕ್ಯಚ್. ಶ್ರವಸ್ಯತಿ ಇತಿ ಶ್ರವಸ್ಯುಃ ಕ್ಯಾಚ್ಛಂದಸಿ ಎಂಬುದರಿಂದ ಉ ಪ್ರತ್ಯಯ. ಅತೋಲೋಪಃ ಸೂತ್ರದಿಂದ ಉಪರವಾದಾಗ ಕ್ಯಚಿನ ಅಕಾರಕ್ಕೆ ಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಕೃತ್ರಿಮಾ—ಡುಕೃಞ್ ಕರಣೇ ಧಾತು. ಇಲ್ಲಿ ಡು ಎಂಬುದು ಆದಿರ್ಞಿಟುಡವಃ ಎಂಬುದರಿಂದ ಇತ್ತಾಗುತ್ತದೆ. ತಸ್ಯಲೋಪಃ ಸೂತ್ರದಿಂದ ಅದಕ್ಕೆ ಲೋಪ. ಡ್ವಿತಃ ಕ್ತ್ರಿಃ (ಪಾ. ಸೂ. ೩.೩-೮೮) ಡು ಇತ್ತಾದ ಧಾತುಗಳಿಗೆ ಭಾವಾರ್ಥದಲ್ಲಿ ಕ್ತ್ರಿ ಪ್ರತ್ಯಯ ಬರುತ್ತದೆ ಎಂಬುದರಿಂದ ಈ ಧಾತುವಿಗೆ ಕ್ತ್ರಿ ಪ್ರತ್ಯಯ. ಕ್ತ್ರೇರ್ಮಮ್ ನಿತ್ಯಂ (ಪಾ. ಸೂ. ೪-೪-೨೦) ಎಂಬುದರಿಂದ ನಿವೃತ್ತಾರ್ಥದಲ್ಲಿ ತ್ರಿಪ್ರತ್ಯಯಾಂತವಾದುದರಿಂದ ಮಪ್. ತ್ರಿ ಪ್ರತ್ಯಯ ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಕೃತ್ರಿಮ ಎಂದು ರೂಪವಾಗುತ್ತದೆ. ಇಲ್ಲಿ ಮಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಕ್ತ್ರಿಪ್ರತ್ಯಯಸ್ವರವೇ ಉಳಿಯುತ್ತದೆ. ನಪುಂಸಕದ ಬಹುವಚನದಲ್ಲಿ ಶಿ ಆದೇಶಬಂದಾಗ ಶೇಶ್ಛಂದಸಿಬಹುಲಂ ಎಂಬುದರಿಂದ ಶಿಗೆ ಲೋಪ.



CC-0. Jangamwadi Math Collection. Digitized by eGangotri

ಕ್ಷ್ಮಯಾ—ಕ್ಷಮೂಷ್ ಸಹನೇ ಧಾತು. ಕ್ಷಮತೇ ಪ್ರಾಣಿಜಾತಕೃತಮುಪದ್ರವಂ ಇತಿ ಕ್ಷಮಾ. ಷಿದ್‌ಭಿದಾದಿಭ್ಯೋಽಙ್ (ಪಾ. ಸೂ. ೩-೩-೧೦೪) ಎಂಬುದರಿಂದ ಇದು ಷಿತ್ತಾದುದರಿಂದ ಅಙ್ ಪ್ರತ್ಯಯ. ಕ್ಷಮ ಎಂದು ಅದಂತವಾದಾಗ ಅಜಾದ್ಯತಷ್ಟಾಪ್ ಸೂತ್ರದಿಂದ ಸ್ತ್ರೀತ್ವದಲ್ಲಿ ಟಾಪ್. ವ್ಯತ್ಯಯದಿಂದ ಧಾತುವಿನ ಉಪಧೆಗೆ (ಅಕಾರ) ಲೋಪ. ಕ್ಷ್ಮಾ ಶಬ್ದವಾಗುತ್ತದೆ. ತೃತೀಯಾಏಕವಚನದಲ್ಲಿ ಕ್ಷ್ಮಯಾ ಎಂದು ರೂಪವಾಗುತ್ತದೆ. ಛಾಂದಸವಾಗಿ ವಿಭಕ್ತಿಗೆ ಉದಾತ್ತಸ್ವರಬರುತ್ತದೆ. ಅಥವಾ ಈ ಧಾತುವು ಅಭಿಭವ (ತಿರಸ್ಕಾರ) ಎಂಬರ್ಥದಲ್ಲಿ ಇದೆ. ಷಹ ಅಭಿಭವೇ ಎಂಬುದರಿಂದ ಸಹನ ಎಂಬುದಕ್ಕೆ ಅಭಿಭವ ಎಂಬರ್ಥವು ದೃಷ್ಟವಾಗಿದೆ. ಇದಕ್ಕೆ ಔಣಾದಿಕವಾದ ಮನಿನ್ ಪ್ರತ್ಯಯ. ವ್ಯತ್ಯಯೋ ಬಹುಲಂ ಎಂಬುದರಿಂದ ಸ್ತ್ರೀಲಿಂಗತ್ವವು ಬರುತ್ತದೆ. ನಾಂತವಾದುದರಿಂದ ಸ್ತ್ರೀತ್ವದಲ್ಲಿ ಙೀಪ್ ಪ್ರಾಪ್ತವಾದರೆ ಮನಃ (ಪಾ. ಸೂ. ೪-೧-೧೧) ಎಂಬುದರಿಂದ ಙೀಪಿಗೆ ಪ್ರತಿಷೇಧ ಬರುತ್ತದೆ. ಆಗ ಡಾಬುಭಾಭ್ಯಾಮನ್ಯತರಸ್ಯಾಮ್ (ಪಾ. ಸೂ. ೪-೧-೧೩) ಎಂಬುದರಿಂದ ಡಾಪ್ ಪ್ರತ್ಯಯ ಡಿತ್ತಾದುದರಿಂದ ಟಿಗೆ ಲೋಪವಾಗುತ್ತದೆ. ಹಿಂದಿನಂತೆ ತೃತೀಯೈಕವಚನದಲ್ಲಿ ರೂಪವಾಗುತ್ತದೆ.

ವೃಧಾನಃ—ವೃಧು ವೃದ್ಧೌ ಧಾತು. ತಾಚ್ಛೀಲ್ಯ ತೋರುವಾಗ ತಾಚ್ಛೀಲ್ಯವಯೋ—ಸೂತ್ರದಿಂದ ಚಾನಶ್ ಪ್ರತ್ಯಯ. ಶಪ್ ಪ್ರಾಪ್ತವಾದರೆ ಬಹುಲಂಛಂದಸಿ ಎಂಬುದರಿಂದ ಅದಕ್ಕೆ ಲುಕ್. ಚಾನಶಿಗೆ ಙಿದ್ವದ್ಭಾವವಿರುವುದರಿಂದ ಲಘೂಪಧಗುಣ ಬರುವುದಿಲ್ಲ. ಚಿತಃ ಎಂಬುದರಿಂದ ಚಾನಶ್ ಚಿತ್ತಾದುದರಿಂದ ಅಂತೋದಾತ್ತಸ್ವರ ಬರುತ್ತದೆ.

ಅವೃಕಾಣಿ—ವೃಙ್ ವರಣೇ ಧಾತು. ಸೃವೃಭೂಶುಷಿಮುಷಿಭ್ಯಃಕಕ್ (ಉ. ಸೂ. ೩-೩೧) ಎಂಬುದರಿಂದ ಕಕ್ ಪ್ರತ್ಯಯ. ಕಿತ್ತಾದುದರಿಂದ ಧಾತುವಿಗೆ ಗುಣಬರುವುದಿಲ್ಲ. ನ ವಿದ್ಯಂತೇ ವೃಕಾಣಿ ಯೇಷಾಂ. ಬಹುವ್ರೀಹಿಯಲ್ಲಿ ನಞ್‌ಸುಭ್ಯಾಂ ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಯಜ್ಯವೇ—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಇದಕ್ಕೆ ಯಜಿಮನಿ ಶುಂಧಿದಸಿ ಜನಿಭ್ಯೋ ಯುಃ (ಉ. ಸೂ. ೨-೩೦೦) ಎಂಬುದರಿಂದ ಯು ಪ್ರತ್ಯಯ. ಯಜ್ಯು ಶಬ್ದವಾಗುತ್ತದೆ. ಚತುರ್ಥೀಏಕವಚನಾಂತರೂಪ. ಪ್ರತ್ಯಯಸ್ವರದಿಂದ ಅಂತೋದಾತ್ತವು ಪ್ರಾಪ್ತವಾದರೆ, ವೃಷಾದಿಯು ಆಕೃತಿಗಣವಾದುದರಿಂದ ಅದರಲ್ಲಿ ಸೇರಿರುವುದರಿಂದ ವೃಷಾದೀನಾಂಚ (ಪಾ. ಸೂ. ೬-೧-೨೦೩) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಸುಕ್ರತುಃ—ಶೋಭನಃ ಕ್ರತುಃ ಯಸ್ಯ ಸಃ ಸುಕ್ರತುಃ ಬಹುವ್ರೀಹಿಯಲ್ಲಿ ಕ್ರತ್ವಾದಯಶ್ಚ (ಪಾ.ಸೂ. ೬-೨-೧೧೮) ಎಂಬುದರಿಂದ ಉತ್ತರಪದಾಂತೋದಾತ್ತವು ಬಾಧಿತವಾಗಿ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

ಸರ್ತವೈ—ಸೃ ಗತೌ ಧಾತು. ಕೃತ್ಯಾರ್ಥೇ ತವೈಕೇನ್ (ಪಾ. ಸೂ. ೩-೪-೧೪) ಎಂಬುದರಿಂದ ಭಾವಾರ್ಥದಲ್ಲಿ ತವೈ ಪ್ರತ್ಯಯ. ಆರ್ಧಧಾತುಕಸಂಜ್ಞೆ ಇರುವುದರಿಂದ ತನ್ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವು ಪ್ರಾಪ್ತವಾದರೆ ಅಂತಶ್ಚ ತವೈಯುಗಪತ್ (ಪಾ. ಸೂ. ೬-೧-೨೦೦) ಎಂಬುದರಿಂದ ಆದ್ಯಂತಕ್ಕೆ ಏಕಕಾಲದಲ್ಲಿ ಉದಾತ್ತಸ್ವರ ಬರುತ್ತದೆ.

ಅಪಃ—ಅಪ್ ಶಬ್ದ ದ್ವಿತೀಯಾಬಹುವಚನದರೂಪ. ಊಡಿದಂಪದಾದಿ (ಪಾ. ಸೂ. ೬-೧-೧೭೧) ಎಂಬುದರಿಂದ ಶಸ್ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಸೃಜತ್—ಸೃಜ ವಿಸರ್ಗೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ತುದಾದಿಭ್ಯಃ ಶಃ ಎಂಬುದರಿಂದ ಶ ವಿಕರಣ. ಸಾರ್ವ-



CC-0. Jangamwadi Math Collection. Digitized by eGangotri

ಧಾತುಕಮಪಿಚ್ ಎಂಬುದರಿಂದ ಅದಕ್ಕೆ ಙಿದ್ವದ್ಭಾವವಿರುವುದರಿಂದ ಲಘೂಪದಗುಣ ಬರುವುದಿಲ್ಲ. ಬಹುಲಂ-ಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

॥ ಸಂಹಿತಾಪಾಠಃ ॥

ದಾನಾಯ ಮನಃ ಸೋಮಪಾವನ್ನಸ್ತು ತೇಽರ್ವಾಂಚಾ ಹರೀ ವಂದನ-
ಶ್ರುದಾ ಕೃಧಿ ।
ಯಮಿಷ್ಠಾಸಃ ಸಾರಥಯೋ ಯ ಇಂದ್ರ ತೇ ನ ತ್ವಾ ಕೇತಾ ಆ
ದಭ್ನುವಂತಿ ಭೂರ್ಣಯಃ ॥ ೭ ॥

॥ ಪದಪಾಠಃ ॥

ದಾನಾಯ । ಮನಃ । ಸೋಮಽಪಾವನ್ । ಅಸ್ತು । ತೇ । ಅರ್ವಾಂಚಾ । ಹರೀ
ಇತಿ । ವಂದನಽಶ್ರುತ್ । ಆ । ಕೃಧಿ ।
ಯಮಿಷ್ಠಾಸಃ । ಸಾರಥಯಃ । ಯೇ । ಇಂದ್ರ । ತೇ । ನ । ತ್ವಾ । ಕೇತಾಃ ।
ಆ । ದಭ್ನುವಂತಿ । ಭೂರ್ಣಯಃ ॥ ೭ ॥

॥ ಸಾಯಣಭಾಷ್ಯಂ ॥

ಹೇ ಸೋಮಪಾವನ್ ಸೋಮಸ್ಯ ಪಾತರಿಂದ್ರ ತೇ ತ್ವದೀಯಂ ಮನೋ ದಾನಾ-ಯಾಸ್ಮದಭಿಮತಫಲಪ್ರದಾನಾಯಾಸ್ತು । ಭವತು । ಹೇ ವಂದನಶ್ರುತ್ । ವಂದನಾನಾಂ ಸ್ತುತೀನಾಂ ಶ್ರೋತಃ ಹರೀ ತ್ವದೀಯಾವಶ್ವಾವರ್ವಾಂಚಾಸ್ಮದ್ಯಜ್ಞಾಭಿಮುಖಾವಾ ಕೃಧಿ । ಆಭಿಮುಖ್ಯೇನ ಕುರು । ಹೇ ಇಂದ್ರ ತೇ ತವ ಸ್ವಭೂತಾ ಯೇ ಸಾರಥಯಃ ಸಂತಿ ತೇ ಯಮಿಷ್ಠಾಸೋಽತಿಶಯೇನ ಯಂತಾರಃ । ಅಶ್ವನಿಯಮನಕುಶಲಾ ಇತ್ಯರ್ಥಃ। ಯಸ್ಮಾದೇವಂ ತಸ್ಮಾತ್ಕೇತಾಃ ಪ್ರಾತಿಕೂಲ್ಯಜ್ಞಾತಾರೋ ಭೂರ್ಣಯಃ ಸ್ವಕೀಯಾಯುಧಾದೀನಾಂ ಭರ್ತಾರಃ । ಯದ್ವಾ । ಭೀತಾಸ್ಸಂತಃ ಶತ್ರವಸ್ತ್ವಾ ತ್ವಾಂ ನಾ ದಭ್ನುವಂತಿ ।



CC-0. Jangamwadi Math Collection. Digitized by eGangotri

ನ ಹಿಂಸಂತಿ ॥ ಸೋಮಪಾವನ್ । ಆತೋ ಮನಿನ್ಕ್ವನಿಪ್ ವನಿಪ್ । ಅಸಂಬುದ್ಧಾವಿತಿ ಪರ್ಯುದಾಸಾದ್ದೀ-ರ್ಘಾಭಾವಃ । ಅರ್ವಾಂಚಾ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ವಂದನಶ್ರುತ್ । ವದಿ ಅಭಿವಾದ-ನಸ್ತುತ್ಯೋಃ । ಇದಿತ್ತ್ವಾನ್ನುಮ್ । ಭಾವೇ ಲ್ಯುಟ್ । ತೇಷಾಂ ಶ್ರೋತಾ । ಶ್ರು ಶ್ರವಣೇ। ಕ್ವಿಪಿ ತುಗಾ-ಗಮಃ । ಯಮಿಷ್ಠಾಸಃ । ಯಂತುಃ ಶಬ್ದಾತ್ತುಶ್ಛಂದಸೀತೀಷ್ಠನ್ಪ್ರತ್ಯಯಃ । ತುರಿಷ್ಠೇಮೇಯಃಸ್ವಿತಿ ತೃಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ಆಜ್ಜಸೇರಸುಗಿತ್ಯಸುಕ್ । ಕೇತಾಃ । ಕಿತ ಜ್ಞಾನೇ । ಚಿಕೇತತಿ ಪ್ರತಿಕೂಲಂ ಜಾನಂತೀತಿ ಕೇತಾಃ । ಪಚಾದ್ಯಚ್ । ವೃಷಾದೇರಾಕೃತಿಗಣತ್ವಾದಾದ್ಯುದಾತ್ತತ್ವಂ। ಯದ್ವಾ । ಪ್ರತಿಕೂಲತಯಾ ಜ್ಞಾಯಂತ ಇತಿ ಕೇತಾಃ । ಕರ್ಮಣಿ ಘಞ್ । ಞಿತ್ತ್ವಾದಾದ್ಯುದಾತ್ತತ್ವಂ। ದಭ್ನುವಂತಿ । ದನ್ಭು ದಂಭೇ । ಸ್ವಾದಿತ್ವಾಚ್ಛ್ನುಃ । ತಸ್ಯ ಙಿತ್ತ್ವಾದನಿದಿತಾಮಿತಿ ನಲೋಪಃ। ಸಂಯೋ-ಗಪೂರ್ವತ್ವೇನ ಹುಶ್ನುವೋರಿತಿ ಯಣಾದೇಶಾಭಾವೇಽಚಿ ಶ್ನುಧಾತ್ವಿತ್ಯಾದಿನೋವಙಾದೇಶಃ । ಭೂರ್ಣ-ಯಃ । ಭೃಞ್ ಭರಣೇ । ಘೃಣಿಃ ಪೃಶ್ನಿರಿತ್ಯಾದೌ । ಉ. ೪-೫೨ । ಅಸ್ಮಾನ್ನಿಪ್ರತ್ಯಯಾಂತೋ ನಿಪಾತ್ಯತೇ । ಋತ ಉತ್ವಂ ದೀರ್ಘಶ್ಚ । ಯದ್ವಾ । ಭ್ಯಾ ಭಯ ಇತ್ಯಸ್ಮಾತ್ಕೃತ್ಯಲ್ಯುಟೋ ಬಹುಲಮಿತಿ ಕರ್ತರಿ ಕ್ತಿನ್ಯುದೋಷ್ಠ್ಯಪೂರ್ವಸ್ಯೇತ್ಯುತ್ವಂ । ಹಲಿ ಚೇತಿ ದೀರ್ಘಃ । ಋಕಾರಲ್ವಾದಿಭ್ಯಃ ಕ್ತಿನ್ನಿಷ್ಠಾವದ್ಭವತಿ । ಪಾ. ೮-೨-೪೪-೧ । ಇತಿ ನಿಷ್ಠಾವದ್ಭಾವಾನ್ನತ್ವಂ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಸೋಮಪಾರ್ವ—ಸೋಮರಸವನ್ನು ಪಾನಮಾಡತಕ್ಕ ಎಲೈ ಇಂದ್ರನೇ । ತೇ—ನಿನ್ನ । ಮನಃ—ಮನಸ್ಸು । ದಾನಾಯ—(ನಮ್ಮ ಇಷ್ಟಾರ್ಥಗಳನ್ನು) ದಯಪಾಲಿಸಲು । ಅಸ್ತು—ಆಗಲಿ (ಒಲಿಯಲಿ) । ವಂದನಶ್ರುತ್—(ನಮ್ಮ) ಸ್ತೋತ್ರಗಳನ್ನು ಕೇಳತಕ್ಕ ಎಲೈ ಇಂದ್ರನೇ । ಹರೀ—ನಿನ್ನ ಕುದುರೆಗಳನ್ನು । ಅರ್ವಾಂಚಾ—(ನಮ್ಮ) ಯಜ್ಞಾಭಿಮುಖವಾಗಿ । ಆ ಕೃಧಿ—ಬರುವಂತೆ ಮಾಡು । ಇಂದ್ರ—ಎಲೈ ಇಂದ್ರನೇ। ತೇ—ನಿನ್ನ । ಯೇ ಸಾರಥಯಃ—ಯಾವ ಸಾರಥಿಗಳಿದ್ದಾರೋ (ಅವರು) । ಯಮಿಷ್ಠಾಸಃ—ಕುದುರೆಗಳನ್ನು ಸ್ವಾಧೀನದಲ್ಲಿಟ್ಟುಕೊಂಡು ಓಡಿಸತಕ್ಕವರು (ಆದ್ದರಿಂದ) । ಕೇತಾಃ—ತಂತ್ರಿಗಳೂ ಅಥವಾ ಕಪಟಿಗಳೂ (ನಿನ್ನ ಶಕ್ತಿಯನ್ನು) ತಿಳಿದವರೂ । ಭೂರ್ಣಯಃ—(ತಮ್ಮ) ಆಯುಧಗಳನ್ನು ಹಿಡಿದವರೂ ಅಥವಾ ನಿನ್ನ ಶಕ್ತಿಗೆ ಭಯಗೊಂಡವರೂ ಕ್ರೂರಿಗಳೂ ಆದ ಶತ್ರುಗಳು । ತ್ವಾ—ನಿನ್ನನ್ನು । ನ ಆ ದಭ್ನುವಂತಿ—ಹಿಂಸೆ ಮಾಡಲಾರರು (ಜಯಿಸಲಾರರು).

। ಭಾವಾರ್ಥ ।

ಸೋಮರಸಪಾನಮಾಡತಕ್ಕ ಎಲೈ ಇಂದ್ರನೇ, ನಿನ್ನ ಮನಸ್ಸು ನಮ್ಮ ಇಷ್ಟಾರ್ಥಗಳನ್ನನುಗ್ರಹಿಸಲ ಒಲಿಯಲಿ. ನಮ್ಮ ಸ್ತೋತ್ರಗಳನ್ನು ಕೇಳತಕ್ಕವನೇ, ನಿನ್ನ ಕುದುರೆಗಳನ್ನು ನಮ್ಮ ಯಜ್ಞಾಭಿಮುಖವಾಗಿ ಓಡಿಬರುವಂತೆ ಮಾಡು. ಎಲೈ ಇಂದ್ರನೇ, ನಿನ್ನ ಸಾರಥಿಗಳು ನಿನ್ನ ಕುದುರೆಗಳನ್ನು ಸ್ವಾಧೀನದಲ್ಲಿಟ್ಟು ಕೊಂಡು ಓಡಿಸುವುದರಲ್ಲಿ ನಿಪುಣರು. ನಿನ್ನ ಶಕ್ತಿಯನ್ನು ಅರಿತವರೂ ಕ್ರೂರಿಗಳೂ ಆದ ನಿನ್ನ ಶತ್ರುಗಳು ನಿನ್ನನ್ನು ಜಯಿಸಲಾರರು.



CC-0. Jangamwadi Math Collection. Digitized by eGangotri

## English Translation.

Drinker of the soma-juice, may your mind be disposed to grant our desires; hearer of praises, let your horses be present (at our sacrifice); your charioteers are experts in restraining your horses; thererore, (your enemies) cherishing malevolent feeligs against you and carrying arms cannot injure you.

॥ ವಿಶೇಷ ವಿಷಯಗಳು ॥

ಸೋಮಪಾವನ್—ಸೋಮಪಾಶಬ್ದಕ್ಕೆ ಸೋಮಪಾನಮಾಡುವ ಇಂದ್ರನು ಎಂದರ್ಥ. ಸೋಮಪಾ ಶಬ್ದದ ಸಂಬೋಧನಪ್ರಥಮಾವಿಭಕ್ತಿಯರೂಪ ಸೋಮಪಾವನ್ ಎಂದಾಗುವುದು. ಎಲೈ ಸೋಮಪಾನ ಮಾಡುವ ಇಂದ್ರನೇ ಎಂದರ್ಥ.

ವಂದನಶ್ರುತ್—ವಂದನಾನಾಂ ಸ್ತುತೀನಾಂ ಶ್ರೋತಃ—ಈ ಪದವೂ ಸಂಬೋಧನ ಪ್ರಥಮಾ ವಿಭಕ್ತಿಯ ಏಕವಚನ. ವಂದನಶಬ್ದಕ್ಕೆ ಸ್ತೋತ್ರ, ಸ್ತುತಿ ಎಂದರ್ಥ. ಸ್ತುತಿಯನ್ನು ಕೇಳುವುದರಲ್ಲಿ ಅತ್ಯಾಸಕ್ತನು ಎಂದರ್ಥವಾಗುವುದು.

ಅರ್ವಾಞ್ಚಾ ಹರೀ—ಎಲೈ ಇಂದ್ರನೇ, ನಿನ್ನ ಬಲಿಷ್ಠವಾದ ಕುದುರೆ ನಮ್ಮ ಯಜ್ಞಾಭಿಮುಖವಾಗಲಿ ಎಂದರೆ ನಾವು ಮಾಡುವ ಯಾಗಕ್ಕೆ ನೀನು ರಥಸಹಿತನಾಗಿ ಬಂದು ಹವಿಸ್ಸನ್ನು ಸ್ವೀಕರಿಸು ಎಂದು ಪ್ರಾರ್ಥಿಸುವ ಪ್ರಕರಣವಿದು.

ಕೇತಾಃ—ಪ್ರಾತಿಕೂಲ್ಯಜ್ಞಾತಾರಃ—ಚಿಕೇತತಿ ಪ್ರತಿಕೂಲಂ ಜಾನಂತೀತಿ ಕೇತಾಃ । ಯದ್ವಾ । ಪ್ರತಿಕೂಲತಯಾ ಜ್ಞಾಯಂತೇ ಇತಿ ಕೇತಾಃ । ಎಲ್ಲವನ್ನೂ ವಿರುದ್ಧವಾಗಿ ಭಾವಿಸುವವರು. ಶತ್ರುಗಳು ಎಂದರ್ಥ.

ಭೂರ್ಣಯಃ—ಆಯುಧಗಳಿಗೆ ಯಜಮಾನರಾದವರು ಅಥವಾ ಹೆದರಿದ ಶತ್ರುಗಳು ಎಂದು ಎರಡು ರೀತಿಯಾಗಿಯೂ ಅರ್ಥಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

ಸೋಮಪಾವನ್—ಪಾ ಪಾನೇ ಧಾತು. ಆತೋಮನಿನ್‌ಕ್ವನಿಪ್ (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ಸೋಮಪಾವನ್ ಶಬ್ದವಾಗುತ್ತದೆ. ಸಂಬುದ್ಧಿಯಲ್ಲಿ ಸರ್ವನಾಮಸ್ಥಾನೇಚಾಸಂಬುದ್ಧೌ ಎಂಬಲ್ಲಿ ಅಸಂಬುದ್ಧೌ ಎಂದು ಪರ್ಯುದಾಸ ಮಾಡಿರುವುದರಿಂದ ನಾಂತೋಪಧೆಗೆ ದೀರ್ಘ ಬರುವುದಿಲ್ಲ. ಹಲ್‌ಙ್ಯಾಭ್ಯೋ—ಸೂತ್ರದಿಂದ ಸುಲೋಪ. ನಙಿಸಂಬುದ್ಧ್ಯೋಃ ಎಂದು ನಿಷೇಧಮಾಡಿರುವುದರಿಂದ ನಲೋಪ ಬರುವುದಿಲ್ಲ. ಆಮಂತ್ರಿತಸ್ಯಚ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಅರ್ವಾಂಚಾ—ಅರ್ವಾಂಚ್+ಔ ಎಂದಿರುವಾಗ ಸುಪಾಂಸುಲುಕ್ ಎಂಬುದರಿಂದ ವಿಭಕ್ತಿಗೆ ಆಕಾರಾದೇಶ.

ವಂದನಶ್ರುತ್—ವದಿ ಅಭಿವಾದನಸ್ತುತ್ಯೋಃ ಧಾತು. ಇದಿತೋನುಮ್‌ಧಾತೋಃ ಎಂಬುದರಿಂದ ನುಮಾಗಮ. ಭಾವಾರ್ಥದಲ್ಲಿ ಲ್ಯುಟ್ ಪ್ರತ್ಯಯ. ಯುವೋರನಾಕೌ ಸೂತ್ರದಿಂದ ಅದಕ್ಕೆ ಅನಾದೇಶ.


CC-0. Jangamwadi Math Collection. Digitized by eGangotri

ವಂದನಾನಾಂ ಶ್ರೋತಾ ವಂದನಶ್ರುತ್. ಶ್ರು ಶ್ರವಣೇ ಧಾತು. ಕ್ವಿಪ್ ಚ ಎಂಬದರಿಂದ ಕ್ವಿಪ್. ಹ್ರಸ್ವಸ್ಯ ಪಿತಿಕೃತಿತುಕ್ ಎಂಬುದರಿಂದ ತುಕಾಗಮ. ಸಂಬುಧ್ಯಂತರೂಪ. ಆಮಂತ್ರಿತಸ್ಯಚ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಯಮಿಷ್ಠಾಸಃ—ಯಮ ಉಪರಮೇ ಧಾತು. ಕರ್ತರಿಯಲ್ಲಿ ತೃಚ್ ಪ್ರತ್ಯಯ ಯಂತೃ ಎಂದಾಗುತ್ತದೆ. ತುಶ್ಛಂದಸಿ (ಪಾ. ಸೂ. ೫-೩-೫೯) ಎಂಬುದರಿಂದ ಇದಕ್ಕೆ ಇಷ್ಠನ್ ಪ್ರತ್ಯಯ. ತುರಿಷ್ಠೇಮೇಯಃಸು (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪರವಾದಾಗ ತೃಚಿಗೆ ಲೋಪ. ಯಮಿಷ್ಠ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾ ಬಹುವಚನದಲ್ಲಿ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಗಾಗಮ. ಯಮಿಷ್ಠಾಸಃ ಎಂದು ರೂಪವಾಗುತ್ತದೆ.

ಕೇತಾಃ—ಕಿತ ಜ್ಞಾನೇ ಧಾತು. ಚಿಕೇತತಿ ಪ್ರತಿಕೂಲಂ ಜಾನಂತಿ ಇತಿ ಕೇತಾಃ. ಈ ಧಾತುವು ಪಚಾದಿಯಲ್ಲಿ ಸೇರಿರುವುದರಿಂದ ನಂದ್ಯಿಗ್ರಹಪಚಾದಿಭ್ಯಃ ಸೂತ್ರದಿಂದ ಅಚ್ ಪ್ರತ್ಯಯ. ಅದನ್ನು ನಿಮಿತ್ತೀಕರಿಸಿ ಪುಗಂತಲಘೂಪಧಸ್ಯ ಚ ಸೂತ್ರದಿಂದ ಧಾತುವಿನ ಲಘೂಪಧೆಗೆ ಗುಣ. ಚಿತಃ ಸೂತ್ರದಿಂದ ಅಂತೋದಾತ್ತವು ಪ್ರಾಪ್ತವಾದರೆ ವೃಷಾದಿ ಆಕೃತಿಗಣವೆಂಬುದರಿಂದ ಅದರಲ್ಲಿದೆಯೆಂದು ಆದ್ಯುದಾತ್ತಸ್ವರ ಬರುತ್ತದೆ. ಅಥವಾ ಪ್ರತಿಕೂಲತಯಾ ಜ್ಞಾಯಂತೇ ಇತಿ ಕೇತಾಃ ಕರ್ಮಣಿಯಲ್ಲಿ ಘಞ್ ಪ್ರತ್ಯಯ. ಆಗ ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ದಭ್ನುವಂತಿ—ದಂಭು ದಂಭೇ ಧಾತು ಸ್ವಾದಿ ಲಟ್ ಪ್ರಥಮಪುರುಷ ಬಹುವಚನದಲ್ಲಿ ಝೋಽಂತಃ ಎಂಬುದರಿಂದ ಅಂತಾದೇಶ. ಸ್ವಾದಿಭ್ಯಃ ಶ್ನುಃ ಸೂತ್ರದಿಂದ ಶ್ನು ವಿಕರಣ. ಸಾರ್ವಧಾತುಕಮಪಿತ್ ಎಂಬುದರಿಂದ ವಿಕರಣಕ್ಕೆ ಙಿದ್ವದ್ಭಾವವಿರುವುದರಿಂದ ಅನಿದಿತಾಂ ಹಲಉ—ಸೂತ್ರದಿಂದ ಧಾತುವಿನ ಉಪಧೆಯಾದ ನಕಾರಕ್ಕೆ ಲೋಪ. ಶ್ನುವಿಕರಣಕ್ಕೆ ಸಂಯೋಗಪೂರ್ವದಲ್ಲಿರುವುದರಿಂದ ಹುಶ್ನುವೋಃ ಸಾರ್ವಧಾತುಕೇ (ಪಾ. ಸೂ. ೬-೪-೮೭) ಸೂತ್ರದಿಂದ ಯಣಾದೇಶ ಬರುವುದಿಲ್ಲ. ಆಗ ಅಚಿಶ್ನುಧಾತುಭ್ರುವಾಂ—ಸೂತ್ರದಿಂದ ಅಜಾದಿಪ್ರತ್ಯಯ ಪರದಲ್ಲಿರುವುದರಿಂದ ಉವಙಾದೇಶ. ದಭ್ನುವಂತಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಭೂರ್ಣಯಃ—ಭೃಞ್ ಭರಣೇ ಧಾತು. ಘೃಣಪೃಶ್ನಿಪಾರ್ಷ್ಣಿ—(ಪಾ. ಸೂ. ೪-೫೨) ಎಂಬಲ್ಲಿ ನಿಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಶಾಸ್ತ್ರಾಂತರದಿಂದ ಪ್ರಾಪ್ತಿ ಇಲ್ಲದಿದ್ದರೂ ನಿಪಾತದಿಂದಲೇ ಯಕಾರಕ್ಕೆ ಉತ್ವವೂ ದೀರ್ಘವೂ ಬರುತ್ತವೆ. ಅಥವಾ ಭ್ಯಾ ಭಯೇ ಧಾತು. ಕೃತ್ಯಲ್ಯುಟೋ ಬಹುಲಂ ಎಂಬಲ್ಲಿ ಬಹುಲಗ್ರಹಣವಿರುವುದರಿಂದ ಕರ್ತರಿಯಲ್ಲಿ ಕ್ತಿನ್ ಪ್ರತ್ಯಯ. ಆಗ ಉದೋಷ್ಠ್ಯಪೂರ್ವಸ್ಯ (ಪಾ. ಸೂ. ೭-೧-೧೦೨) ಎಂಬುದರಿಂದ ಋಕಾರಕ್ಕೆ ಉತ್ವ ಬರುತ್ತದೆ. ಹಲಿಚ ಎಂಬುದರಿಂದ ಉಪಧಾಭೂತ ಇಕಿಗೆ ದೀರ್ಘ. ಋಕಾರಲ್ವಾದಿಭ್ಯಃ ಕ್ತಿನ್ನಿಷ್ಠಾವದ್ಭವತಿ (ಪಾ. ಸೂ. ೮-೨-೪೪-೧) ಎಂಬ ವಚನದಿಂದ ನಿಷ್ಠಾವದ್ಭಾವ ಹೇಳಿರುವುದರಿಂದ ರೇಫದ ಪರದಲ್ಲಿ ತಕಾರ ಬಂದಿರುವುದರಿಂದ ನತ್ವ ಬರುತ್ತದೆ. ರಷಾಭ್ಯಾಂ—ಸೂತ್ರದಿಂದ ಅದಕ್ಕೆ ಣತ್ವ. ಭೂರ್ಣಿಶಬ್ದವಾಗುತ್ತದೆ. ಪ್ರಥಮಾ ಬಹುವಚನಾಂತರೂಪ. ಞ್ನಿತ್ಯಾದಿರ್ನಿತ್ಯಂ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಪ್ರುಕ್ಷಿತಂ ವಸು ಬಿಭರ್ಷಿ ಹಸ್ತಯೋರಷಾಳ್ಹಂ ಸಹಸ್ತನ್ವಿ ಶ್ರುತೋ ದಧೇ ।
ಆವೃತಾಸೋಽವತಾಸೋ ನ ಕರ್ತೃಭಿಸ್ತನೂಷು ತೇ ಕ್ರತವ ಇಂದ್ರ ಭೂರಯಃ ॥ ೮ ॥

॥ ಪದಪಾಠಃ ॥

ಅಪ್ರಽಕ್ಷಿತಂ । ವಸು । ಬಿಭರ್ಷಿ । ಹಸ್ತಯೋಃ । ಅಷಾಳ್ಹಂ । ಸಹಃ । ತನ್ವಿ । ಶ್ರುತಃ । ದಧೇ ।
ಆಽವೃತಾಸಃ । ಅವತಾಸಃ । ನ । ಕರ್ತೃಽಭಿಃ । ತನೂಷು । ತೇ । ಕ್ರತವಃ । ಇಂದ್ರ । ಭೂರಯಃ ॥ ೮ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತ್ವಮಪ್ರಕ್ಷಿತಂ ಪ್ರಕ್ಷಯರಹಿತಂ ವಸು ಧನಂ ಹಸ್ತಯೋರ್ಬಿಭರ್ಷಿ । ಸ್ತೋತೃಭ್ಯೋ ದಾತುಂ ಧಾರಯಸಿ । ತಥಾ ಶ್ರುತಃ ಪ್ರಖ್ಯಾತೋ ಭವ ತನ್ವ್ಯಾತ್ಮೀಯೇ ಶರೀರೇಽಷಾಳ್ಹಂ ಶತ್ರುಭಿರನಭಿಭೂತಂ ಸಹೋ ಬಲಂ ದಧೇ । ಧಾರಯತಿ । ತ್ವದೀಯಾಸ್ತನವಃ ಕರ್ತೃಭಿರ್ವೃತ್ರಾದೇರಸುರಸ್ಯ ವಧಂ ಕುರ್ವದ್ಭಿರ್ಬಲಕೃತ್ಯೈಃ ಕರ್ಮಭಿರಾವೃತಾಸ ಆವೃತಾಃ । ಬಲಕೃತಾನಿ ಸರ್ವಾಣಿ ಕರ್ಮಾಣ್ಯೇತಸ್ಯ ಶರೀರಮಾವೃತ್ಯಾವತಿಷ್ಠಂತೇ । ತತ್ರ ದೃಷ್ಟಾಂತಃ । ಅವತಾಸೋ ನ । ಅವತ ಇತಿ ಕೂಪನಾಮ । ಯಥಾ ಕೂಪಾ ಜಲೋದ್ಧರಣಾಯ ಪ್ರವೃತ್ತೈಃ ಪ್ರಾಣಿಭಿರಾವ್ರಿಯಂತೇ ತದ್ವತ್ । ಯಸ್ಮಾದೇವಂ ತಸ್ಮಾತ್ ಹೇ ಇಂದ್ರ ತೇ ತವ ಶರೀರೇಷು ಕ್ರತವಃ ಕರ್ಮಾಣಿ ಭೂರಯೋ ಬಹೂನಿ ವಿದ್ಯಂತೇ ॥ ಅಪ್ರಕ್ಷಿತಂ । ಕ್ಷಿ ಕ್ಷಯೇ ಇತ್ಯಸ್ಮಾದ್ಭಾವೇ ನಿಷ್ಠಾ । ಅಣ್ಯದರ್ಥೇ । ಪಾ. ೬-೪-೬೦ । ಇತಿ ಪರ್ಯುದಾಸಾದ್ದೀರ್ಘಾಭಾವಃ । ಅತ ಏವ ಕ್ಷಿಯೋ ದೀರ್ಘಾದಿತಿ ನಿಷ್ಠಾನತ್ವಾಭಾವಃ । ಪ್ರಕೃಷ್ಟಂ ಕ್ಷಿತಂ ಯಸ್ಯ ತತ್ಪ್ರಕ್ಷಿತಂ । ನ ಪ್ರಕ್ಷಿತಮಪ್ರಕ್ಷಿತಂ । ಅವ್ಯಯಪೂರ್ವಪದಪ್ರಕೃತಿಸ್ವರತ್ವಂ । ಬಿಭರ್ಷಿ । ಡುಭೃಞ್ ಧಾರಣಪೋಷಣಯೋಃ । ಲಟಿ ಸಿಪಿ ಶಪಃ ಶ್ಲುಃ । ಭೃಞಾಮಿದಿತ್ಯಭ್ಯಾಸಸ್ಯೇತ್ವಂ । ಅಷಾಳ್ಹಂ । ಷಹ ಅಭಿಭವ ಇತ್ಯಸ್ಮಾನ್ನಿಷ್ಠಾಯಾಂ ತಕಾರಾದೌ ಪ್ರತ್ಯಯೇ ತೀಷಸಹ । ಪಾ. ೭-೨-೪೮ । ಇತೀಟೋ ವಿಕಲ್ಪಿತತ್ವಾತ್



CC-0. Jangamwadi Math Collection. Digitized by eGangotri

ಯಸ್ಯ ವಿಭಾಷೇತೀಟ್ಪ್ರತಿಷೇಧಃ । ಢತ್ವಧತ್ವಷ್ಟುತ್ವಢಲೋಪೇಷು ಸಹಿವಹೋರೋದವರ್ಣಸ್ಯೇ-ತ್ಯೋತ್ವೇ ಪ್ರಾಪ್ತೇ ಸಾಢ್ಯೈ ಸಾಢ್ವಾ ಸಾಢೇತಿ ನಿಗಮೇ । ಪಾ. ೬-೩-೧೧೩ । ಇತಿ ನಿಪಾತನಾದಾತ್ವಂ । ಯದುಕ್ತಂ ಸಾಢೇತಿ ತೃಜಂತಮೇತದಿತಿ ತದುಪಲಕ್ಷಣಾರ್ಥಂ ದ್ರಷ್ಟವ್ಯಂ । ತನ್ವಿ । ಜಸಾದಿಷು ಛಂದಸಿ ವಾವಚನಮಿತಿ ಅಚ್ಚಿ ಘೇಃ । ಪಾ. ೭-೩-೧೧೯ । ಇತ್ಯತ್ವೌತ್ವಯೋರಭಾವೇ ಯಣಾದೇಶಃ । ಉದಾತ್ತ-ಸ್ವರಿತಯೋರ್ಯಣ ಇತಿ ವಿಭಕ್ತೇಃ ಸ್ವರಿತತ್ವಂ । ಉದಾತ್ತಯಣೋ ಹಲ್ಪೂರ್ವಾದಿತ್ಯುದಾತ್ತತ್ವಂ ತು ಛಾಂದಸತ್ವಾನ್ನ ಪ್ರವರ್ತತೇ ॥

॥ ಪ್ರತಿಪದಾರ್ಥ ॥

(ಎಲೈ ಇಂದ್ರನೇ, ನೀನು) ಅಪ್ರಕ್ಷಿತಂ—ಕ್ಷಯರಹಿತವಾದ । ವಸು—ಧನವನ್ನು । ಹಸ್ತಯೋಃ—ನಿನ್ನೆರಡು ಕೈಗಳಲ್ಲಿಯೂ । ಬಿಭರ್ಷಿ—(ನಮಗೆ ಕೊಡುವುದಕ್ಕಾಗಿ) ಹಿಡಿದುಕೊಂಡಿದ್ದೀಯೆ । ಶ್ರುತಃ—ಪ್ರಖ್ಯಾತನಾದ ನೀನು । ತನ್ವಿ—ನಿನ್ನ ಶರೀರದಲ್ಲಿ । ಅಷಾಳ್ಹಂ—(ಶತ್ರುಗಳಿಂದ) ಪ್ರತಿಭಟಿಸಲಸಾಧ್ಯವಾದ । ಸಹಃ—ಬಲವನ್ನು । ದಧೇ—ಹೊಂದಿದ್ದೀಯೆ (ನಿನ್ನ ಅವಯವಗಳು) । ಕರ್ತ್ಯಭಿಃ—(ವೃತ್ರಾದಿವಧರೂಪವಾದ) ವೀರ್ಯಕೃತ್ಯಗಳಿಂದ । ಅವತಾಸೋ ನ—(ನೀರಿಗಾಗಿ ಬಂದಿರುವವರಿಂದ) ಬಾವಿಯು ಸುತ್ತಲೂ ಆವೃತವಾಗಿರುವಂತೆ। ಆವೃತಾಸಃ—ತುಂಬಿವೆ (ಆದ್ದರಿಂದ) । ಇಂದ್ರ—ಎಲೈ ಇಂದ್ರನೇ । ತೇ—ನಿನ್ನ (ಶರೀರಗಳಲ್ಲಿ) । ಕ್ರತವಃ—ವೀರ್ಯಕರ್ಮಗಳು । ಭೂರಯಃ—ಹೇರಳವಾಗಿವೆ.

॥ ಭಾವಾರ್ಥ ॥

ಎಲೈ ಇಂದ್ರನೇ, ನೀನು ನಮಗೆ ಕೊಡುವುದಕ್ಕಾಗಿ ನಿನ್ನೆರಡು ಕೈಗಳಲ್ಲಿಯೂ ಅಕ್ಷಯವಾದ ಧನವನ್ನು ಹಿಡಿದಿದ್ದೀಯೆ. ಪ್ರಖ್ಯಾತನಾದ ನಿನ್ನ ಶರೀರದಲ್ಲಿ ಶತ್ರುಗಳಿಂದ ಪ್ರತಿಭಟಿಸಲಸಾಧ್ಯವಾದ ಬಲವಿದೆ. ನೀರಿಗಾಗಿ ಬಂದಿರುವವರಿಂದ ಬಾವಿಯು ಸುತ್ತಲೂ ಆವೃತವಾಗಿರುವಂತೆ ನಿನ್ನ ಅವಯವಗಳು ಸುತ್ತಲೂ ಹೇರಳವಾದ ವೀರ್ಯಕೃತ್ಯಗಳಿಂದ ತುಂಬಿವೆ.

English Translation.

You hold in you hands unexhausted wealth; renowned Indra, you have irresistible strength in your body; your limbs are invested with (glorious) exploits, as wells (are surrounded by those who come for water); Indra, you have many exploits in your body.

॥ ವಿಶೇಷ ವಿಷಯಗಳು ॥

ಅಪ್ರಕ್ಷಿತಂ— ಪ್ರಕೃಷ್ಟಂ ಕ್ಷಿತಂ ಯಸ್ಯ ತತ್-ಪ್ರಕ್ಷಿತಂ ನ ಪ್ರಕ್ಷಿತಂ ಅಪ್ರಕ್ಷಿತಂ ಪ್ರಕ್ಷಯಸಹಿತಂ ಎಂದರೆ ಯಾವರೀತಿಯ ನಾಶವೂ ಆಗದ ಸ್ಥಿರವಾದ ಹಣ ಎಂದರ್ಥ.

ತನ್ವಿ—ತನ್ನ ಶರೀರದಲ್ಲಿ ಎಂದರ್ಥ. ತನು ಶಬ್ದವು ವೇದದಲ್ಲಿ ತನ್ ಎಂಬ ರೂಪದಿಂದ ಅಲ್ಲಲ್ಲಿ ಪ್ರಯೋಗಿಸಲ್ಪಡುವುದು.





CC-0. Jangamwadi Math Collection. Digitized by eGangotri

ಅಷಾಳ್ಹಂ—ಶತ್ರುಗಳಿಂದ ತಿರಸ್ಕರಿಸಲ್ಪಡದಿರುವುದು. ಇದು ಜಲಶಬ್ದಕ್ಕೆ ವಿಶೇಷಣವಾಗಿದೆ.

ಕರ್ತ್ವಭಿಃ—ವೃತ್ರನೇ ಮೊದಲಾದ ರಾಕ್ಷಸರ ಸಂಹಾರ ಮೊದಲಾದ ಸಾಹಸಕೃತ್ಯಗಳಿಂದ ; ಪರಾಕ್ರಮಗಳಿಂದ.

ಅವತಾಸೋ ನ—ಅವತಶಬ್ದಕ್ಕೆ ಬಾವಿ ಎಂದರ್ಥ. (ನಿರು. ೩-೧೯) ನಿರುಕ್ತದಲ್ಲಿ ಅವತವೇ ಮೊದಲಾದ ಹದಿನಾಲ್ಕು ಶಬ್ದಗಳನ್ನು ಕೂಪವಾಚಕಗಳಾಗಿ ಪಾಠಮಾಡಿದ್ದಾರೆ. ನೀರನ್ನು ಒಯ್ಯುವುದಕ್ಕಾಗಿ ಜನರು ಬಾವಿಯನ್ನು ಸುತ್ತುಗಟ್ಟುವಂತೆ, ಸಮಸ್ತಕರ್ಮಗಳೂ ಬಲಿಷ್ಠಗಳಾಗಲು ನಿನ್ನನ್ನು ಆಶ್ರಯಿಸುವುವು ಎಂದು ಇಂದ್ರನನ್ನು ಸ್ತುತಿಸಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಅಪ್ರಕ್ಷಿತಮ್—ಕ್ಷಿ ಕ್ಷಯೇ ಧಾತು. ಇದಕ್ಕೆ ಭಾವಾರ್ಥದಲ್ಲಿ ನಿಷ್ಠಾಪ್ರತ್ಯಯ (ಕ್ತ) ನಿಷ್ಠಾಯಾಮಣ್ಯದರ್ಥೇ (ಪಾ. ಸೂ. ೬-೪-೬೦) ಸೂತ್ರದಲ್ಲಿ ಅಣ್ಯದರ್ಥೇ ಎಂದು ನಿಷೇಧ ಮಾಡಿರುವುದರಿಂದ ಇಲ್ಲಿ ಣ್ಯದರ್ಥವಾದ ಭಾವ ತೋರುವುದರಿಂದ ನಿಷ್ಠಾಪರವಾದಾಗ ಬರುವ ದೀರ್ಘವು ಬರುವುದಿಲ್ಲ. ದೀರ್ಘಬಾರದಿರುವುದರಿಂದಲೇ ಕ್ಷಿಯೋದೀರ್ಘಾತ್ (ಪಾ. ಸೂ. ೮-೨-೪೬) ಎಂಬುದರಿಂದ ನಿಷ್ಠಾತಕಾರಕ್ಕೆ ನತ್ವ ಬರುವುದಿಲ್ಲ. ಪ್ರಕೃಷ್ಟಂ ಕ್ಷಿತಂ ಯಸ್ಯ ತತ್ ಪ್ರಕ್ಷಿತಮ್. ನ ಪ್ರಕ್ಷಿತಮ್ ಅಪ್ರಕ್ಷಿತಮ್. ತತ್ಪುರುಷೇತುಲ್ಯಾರ್ಥ ಸೂತ್ರದಿಂದ ಅವ್ಯಯಪೂರ್ವಪದಪ್ರಕೃತಿಸ್ವರ ಬರುತ್ತದೆ.

ಹಭರ್ಷಿ—ಡುಭೃಞ್ ಧಾರಣಪೋಷಣಯೋಃ ಧಾತು. ಜುಹೋತ್ಯಾದಿ ಲಟ್ ಮಧ್ಯಮಪುರುಷದಲ್ಲಿ ಸಿಪ್ ಪ್ರತ್ಯಯ. ಜುಹೋತ್ಯಾದಿಭ್ಯಃ ಶ್ಲುಃ ಎಂಬುದರಿಂದ ಶ್ಲು ವಿಕರಣ. ಶ್ಲೌ ಸೂತ್ರದಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಜಶ್ತ್ವ. ಭೃಞಾಮಿತ್ (ಪಾ. ಸೂ. ೭-೪-೭೬) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಸಿಪ್ ನಿಮಿತ್ತವಾಗಿ ಧಾತುವಿಗೆ ಗುಣ. ರೇಫದ ಪರದಲ್ಲಿರುವುದರಿಂದ ಆದೇಶಪ್ರತ್ಯಯಯೋಃ ಸೂತ್ರದಿಂದ ಪ್ರತ್ಯಯ ಸಕಾರಕ್ಕೆ ಷತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಷಾಳ್ಹಮ್—ಷಹ ಅಭಿಭವೇ ಧಾತು. ಇದಕ್ಕೆ ನಿಷ್ಠಾಪ್ರತ್ಯಯಪರವಾದಾಗ ತ್ರಿಷಸಹಲುಭ (ಪಾ. ಸೂ. ೭-೨-೪೮) ಸೂತ್ರದಲ್ಲಿ ಇಷಧಾತುವಿನಪರಪ್ರತ್ಯಯಕ್ಕೆ ಇಡ್ವಿಕಲ್ಪ ಹೇಳಿರುವುದರಿಂದ ಯಸ್ಯವಿಭಾಷಾ (ಪಾ. ಸೂ. ೭-೨-೧೫) ಎಂಬುದರಿಂದ ಕ್ತಪ್ರತ್ಯಯಕ್ಕೆ ಇಣ್ನಿಷೇಧ. ಧಾತುವಿನ ಆದಿಗೆ ಸಕಾರಾದೇಶ. ಸಹ್+ತ ಎಂದಿರುವಾಗ ಹೋಢಃ ಸೂತ್ರದಿಂದ ಹಕಾರಕ್ಕೆ ಢಕಾರಾದೇಶ. ಝಷಸ್ತಥೋಃ—ಸೂತ್ರದಿಂದ ತಕಾರಕ್ಕೆ ಧಕಾರಾದೇಶ. ಷ್ಟುನಾಷ್ಟುಃ ಎಂಬುದರಿಂದ ಅದಕ್ಕೆ ಢಕಾರಾದೇಶ. ಢೋಢೇಲೋಪಃ ಎಂಬುದರಿಂದ ಪೂರ್ವಢಕಾರಕ್ಕೆ ಲೋಪ. ಸಢ್ ಎಂದಿರುವಾಗ ಸಹಿವಹೋರೋದವರ್ಣಸ್ಯ ಎಂಬುದರಿಂದ ಅಕಾರಕ್ಕೆ ಓತ್ವವು ಪ್ರಾಪ್ತವಾದರೆ, ಸಾಢ್ಯೈಂ ಸಾಢ್ವಾ ಸಾಢೇತಿ ನಿಗಮೇ (ಪಾ. ಸೂ. ೬-೩-೧೧೩) ಎಂದು ನಿಪಾತಮಾಡಿರುವುದರಿಂದ ಅತ್ವ ಬರುತ್ತದೆ. ಯದ್ಯಪಿ ಆ ಸೂತ್ರದಲ್ಲಿ ಸಾಢಾ ಎಂಬುದು ತೃಜಂತವೆಂದು ಹೇಳಲ್ಪಟ್ಟಿದೆ. ಆದರೆ ಅದು ಉಪಲಕ್ಷಣ ಎಂದು ತಿಳಿಯಬೇಕು. ಇದರಿಂದ ಇತರ ವಿಷಯದಲ್ಲಿ ಆ ರೂಪವಾಗುತ್ತದೆ ಎಂದಾಗುತ್ತದೆ.



CC-0. Jangamwadi Math Collection. Digitized by eGangotri

ತನ್ವಿ—ತನು ಶಬ್ದ. ಸಪ್ತಮೀ ಏಕವಚನ ಙಿ ವಿಭಕ್ತಿ ಪರವಾದಾಗ ಶೇಷೋಘ್ಯಸಖಿ (ಪಾ. ಸೂ. ೧-೪-೧೧೯) ಎಂಬುದರಿಂದ ಘಿಸಂಜ್ಞಾ ಇರುವುದರಿಂದ ಅತ್ವ ಔತ್ವಗಳು ಪ್ರಾಪ್ತವಾದರೆ ಜಸಾದಿಷು ಛಂದಸಿ-ವಾವಚನಮ್ ಎಂಬ ವಚನಾಂತರದಿಂದ ವಿಕಲ್ಪವೆಂಬುದರಿಂದ ಇಲ್ಲಿ ಬರುವುದಿಲ್ಲ. ಆಗ ಯಣಾದೇಶ. ಉದಾತ್ತ ಸ್ಥಾನದಲ್ಲಿ ಯಣಾದೇಶ ಬಂದುದರಿಂದ ಅದರ ಪರದಲ್ಲಿ ವಿಭಕ್ತಿ ಇರುವುದರಿಂದ ಉದಾತ್ತಸ್ವರಿತಯೋರ್ಯಣಃ ಎಂಬುದರಿಂದ ವಿಭಕ್ತಿಗೆ ಸ್ವರಿತಸ್ವರ ಬರುತ್ತದೆ. ಯದ್ಯಪಿ ಉದಾತ್ತಸ್ಥಾನಕ್ಕೆ ಬಂದಿರುವ ಯಣಿನ ಪೂರ್ವದಲ್ಲಿ ಹಲ್ ಇರುವುದರಿಂದ ಉದಾತ್ತಯಣೋಹಲ್ಪೂರ್ವಾತ್ ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರಬೇಕಾಗುತ್ತದೆ. ಆದರೆ ಛಾಂದಸವಾಗಿ ಇಲ್ಲಿ ಬರುವುದಿಲ್ಲ.

ದಧೇ—ಡುಧಾಞ್ ಧಾರಣಪೋಷಣಯೋಃ ಧಾತು. ಛಾಂದಸವಾದ ಲಿಟ್ ದ್ವಿತ್ವ. ಆತೋಲೋಪ ಇಟಿಚ ಸೂತ್ರದಿಂದ ಆಕಾರಲೋಪ ಲಿಜಂತನಿಘಾತಸ್ವರ ಬರುತ್ತದೆ.

ಐವತ್ತ ಐದನೆಯ ಸೂಕ್ತವು ಸಮಾಪ್ತವು.



# ಐವತ್ತಾರನೆಯ ಸೂಕ್ತವು

—

॥ ಸಾಯಣಭಾಷ್ಯ ॥

ಏಷ ಪ್ರ ಪೂರ್ವೀರಿತಿ ಷಡೃಚಂ ಷಷ್ಠಂ ಸೂಕ್ತಂ ಸವ್ಯಸ್ಯಾರ್ಷಮೈಂದ್ರಂ ಜಾಗತಮಿತ್ಯುಕ್ತಂ । ಅನುಕ್ರಾಂತಂ ಚ । ಏಷ ಪ್ರ ಷಡಿತಿ ॥ ವಿಷುವತಿ ನಿಷ್ಕೇವಲ್ಯ ಏತತ್ಸೂಕ್ತಂ ಶಂಸನೀಯಂ । ವಿಷುವಾನ್ದಿವಾಕೀರ್ತ್ಯ ಇತಿ ಖಂಡೇ ಸೂತ್ರಿತಂ । ಏಷ ಪ್ರ ಪೂರ್ವೀರ್ವೃಷಾಮದಃ ಪ್ರ ಮಂಹಿಷ್ಠಾಯ । ಆ. ೮.೬ । ಇತಿ ॥

ಅನುವಾದವು—ಏಷ ಪ್ರ ಪೂರ್ವೀ ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಆರನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸವ್ಯನು ಋಷಿಯು, ಇಂದ್ರನು ದೇವತೆಯು, ಜಗತೀಛಂದಸ್ಸು. ಅನುಕ್ರಮಣಿಕೆಯಲ್ಲಿ ಏಷ ಪ್ರ ಷಡಿತಿ ಎಂದು ಹೇಳಿರುವುದು. ವಿಷುವತಿಯಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ವಿಷುವಾನ್ದಿವಾಕೀರ್ತ್ಯ ಎಂಬ ಖಂಡದಲ್ಲಿ ಏಷ ಪ್ರ ಪೂರ್ವೀರ್ವೃಷಾಮದಃ ಪ್ರ ಮಂಹಿಷ್ಠಾಯ ಎಂಬ ಸೂತ್ರವು ನಿರ್ದೇಶಿಸುವುದು. (ಆ. ೮-೬)



CC-0. Jangamwadi Math Collection. Digitized by eGangotri

## ಸೂಕ್ತ—೫೬

ಮಂಡಲ—೧ ॥ ಅನುವಾಕ—೧೦ ॥ ಸೂಕ್ತ—೫೬ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೨೧॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಸವ್ಯ ಆಂಗಿರಸಃ ॥
ದೇವತಾ—ಇಂದ್ರಃ ।
ಛಂದಃ—ಜಗತೀ ।

ಏಷ ಪ್ರ ಪೂರ್ವೀರವ ತಸ್ಯ ಚಮ್ರಿಷೋಽತ್ಯೋ ನ ಯೋಷಾಮುದಯಂ-
ಸ್ತ ಭುರ್ವಣಿಃ ।
ದಕ್ಷಂ ಮಹೇ ಪಾಯಯತೇ ಹಿರಣ್ಯಯಂ ರಥಮಾವೃತ್ಯಾ ಹರಿಯೋಗ-
ಮೃಭ್ವಸಂ ॥ ೧ ॥

॥ ಪದಪಾಠಃ ॥

ಏಷಃ । ಪ್ರ । ಪೂರ್ವೀಃ । ಅವ । ತಸ್ಯ । ಚಮ್ರಿಷಃ । ಅತ್ಯಃ । ನ । ಯೋಷಾಂ ।
ಉತ್ । ಅಯಂಸ್ತ । ಭುರ್ವಣಿಃ ।
ದಕ್ಷಂ । ಮಹೇ । ಪಾಯಯತೇ । ಹಿರಣ್ಯಯಂ । ರಥಂ । ಆಽವೃತ್ಯ । ಹರಿ-
ಯೋಗಂ । ಋಭ್ವಸಂ ॥ ೧ ॥

॥ ಸಾಯಣಭಾಷ್ಯಂ ॥

ಭುರ್ವಣಿರತ್ತೈಷ ಇಂದ್ರಸ್ತಸ್ಯ ಯಜಮಾನಸ್ಯ ಪೂರ್ವೀಃ ಪ್ರಭೂತಾಶ್ಚಮ್ರಿಷಶ್ಚಮೂಷು ಚಮಸೇಷ್ವವಸ್ಥಿತಾಃ ಸೋಮಲಕ್ಷಣಾ ಇಷಃ ಪ್ರಾವೋದಯಂಸ್ತ । ಪ್ರಕರ್ಷೇಣ ಪಾನಾರ್ಥಮುದ್ಧರತಿ । ತತ್ರ ದೃಷ್ಟಾಂತಃ । ಅತ್ಯೋ ನ ಯೋಷಾಂ । ಯಥಾಶ್ವೋ ವಡವಾಂ ಕ್ರೀಡಾರ್ಥಮುಪಯಚ್ಛತಿ । ಸ ಚೇಂದ್ರೋ ಹಿರಣ್ಯಯಂ ಸುವರ್ಣಮಯಂ ಹರಿಯೋಗಂ ಹರಿಭ್ಯಾಂ ಯುಕ್ತಮೃಭ್ವಸಮುರು ಭಾಸ-ಮಾನಂ ರಥಮಾವೃತ್ಯಾವಸ್ಥಾಪ್ಯ ಮಹೇ ಮಹತೇ ವೃತ್ರವಧಾದಿರೂಪಾಯ ಕರ್ಮಣೇ ದಕ್ಷಂ ಪ್ರವೃದ್ಧ-ಮಾತ್ಮಾನಂ ಸೋಮಂ ಪಾಯಯತೇ । ಪಾನಂ ಕಾರಯತಿ ॥ ಪೂರ್ವೀಃ । ಪೄ ಪಾಲನಪೂರಣಯೋಃ ।



CC-0. Jangamwadi Math Collection. Digitized by eGangotri

ಪೃಭಿದಿವ್ಯಧೀತ್ಯಾದಿನಾ । ಉ ೧-೨೪ । ಕುಪ್ರತ್ಯಯಃ । ಉದೋಷ್ಠ್ಯಪೂರ್ವಸ್ಯೇತ್ಯುತ್ವಂ । ಪುರುಶಬ್ದಾದ್ವೋತೋ ಗುಣವಚನಾದಿತಿ ಙೀಷ್ । ಯಣಾದೇಶಃ । ಹಲಿ ಚೇತಿ ದೀರ್ಘತ್ವಂ । ಪ್ರತ್ಯಯಸ್ವರಃ । ಚಮ್ರಿಷಃ । ಚಮು ಅದನ ಇತ್ಯಸ್ಮಾತ್ಕೃಷಿಚಮಿತನಿಧನೀತ್ಯಾದಿನಾ । ಉ. ೧-೮೦ । ಊಪ್ರತ್ಯಯಾಂತಶ್ಚಮೂಶಬ್ದಃ । ತಸ್ಯಾಂ ವರ್ತಮಾನಾ ಇಷಶ್ಚಮ್ರಿಷಃ । ವಕಾರಸ್ಯ ರೇಫಶ್ಛಾಂದಸಃ । ಕೃದುತ್ತರಪದಪ್ರಕೃತಿಸ್ವರತ್ವಂ । ಅಯಂಸ್ತ । ಛಾಂದಸೇ ವರ್ತಮಾನೇ ಲುಙ್ ವ್ಯತ್ಯಯೇನಾತ್ಮನೇಪದಂ । ಏಕಾಚ ಇತೀಟ್ಪ್ರತಿಷೇಧಃ ।ಭುರ್ವಣಿಃ । ಭುರ್ವತಿರತ್ತಿಕರ್ಮೇತಿ ಯಾಸ್ಕಃ । ನಿ. ೬-೨೩ । ಧಾತುಪಾಠೇ ತು ಭರ್ವ ಹಿಂಸಾಯಾಮಿತಿ ಪಠ್ಯತೇ । ಅಸ್ಮಾದೌಣಾದಿಕೋಽನಿಪ್ರತ್ಯಯಃ । ಆಕಾರಸ್ಯೋಕಾರಶ್ಛಾಂದಸಃ । ಪಾಯಯತೇ । ಪಾ ಪಾನೇ । ಶಾಛಾಸಾಹ್ವಾವ್ಯಾವೇಪಾಂ ಯುಕ್ । ಪಾ. ೭-೩-೩೭ । ಇತಿ ಹೇತುಮತಿ ಣಿಚಿ ಯುಗಾಗಮಃ । ಣಿಚಶ್ಚ । ಪಾ. ೧-೩-೭೪ । ಇತ್ಯಾತ್ಮನೇಪದಂ । ಹಿರಣ್ಯಯಂ । ಋತ್ವ್ಯವಾಸ್ತ್ವ್ಯೇತ್ಯಾದಿನಾ ಹಿರಣ್ಯಶಬ್ದಾದುತ್ತರಸ್ಯ ಮಯಟೋ ಮಶಬ್ದಲೋಪೋ ನಿಪಾತ್ಯತೇ। ಹರಿಯೋಗಂ। ಹರ್ಯೋರ್ಯೋಗೋ ಯೋಜನಂ ಯಸ್ಮಿನ್ । ಹರಿಶಬ್ದ ಇನ್ಪ್ರತ್ಯಯಾಂತ ಆದ್ಯುದಾತ್ತಃ । ಸ ಏವ ಬಹುವ್ರೀಹಿಸ್ವರೇಣ ಶಿಷ್ಯತೇ । ಋಭ್ವಸಂ । ಉರುಭಾಸಮಿತ್ಯಸ್ಯ ಪೃಷೋದರಾದಿತ್ವಾದೃಭ್ವಸಾದೇಶಃ ॥

॥ ಪ್ರತಿಪದಾರ್ಥ ॥

ಭುರ್ವಣಿಃ—ಭಕ್ಷಕನಾದ । ಏಷಃ—ಇಂದ್ರನು । ಯೋಷಾಂ—ಹೆಣ್ಣುಕುದುರೆಯನ್ನು (ಕಂಡು) । ಅತ್ಯೋ ನ—ಗಂಡುಕುದುರೆಯು (ಕ್ರೀಡಿಸಲು ಉತ್ಸಾಹದಿಂದ) ಮುನ್ನುಗ್ಗುವಂತೆ । ತಸ್ಯ—ಯಜಮಾನನ । ಪೂರ್ವೀಃ—ಅಧಿಕವಾದುವೂ । ಚಮ್ರಿಷಃ—ಸೌಟುಗಳಲ್ಲಿರುವುವೂ ಆದ ಸೋಮರಸರೂಪಗಳಾದ ಅನ್ನಗಳನ್ನು (ಕುಡಿಯಲು) । ಪ್ರ ಅವ ಉದಯಂಸ್ತ—ಉತ್ಸಾಹದಿಂದ ಆವಿರ್ಭವಿಸಿದ್ದಾನೆ । ಹಿರಣ್ಯಯಂ—ಸುವರ್ಣನಿರ್ಮಿತವಾದದ್ದೂ । ಹರಿಯೋಗಂ—ಕುದುರೆಗಳಿಂದ ಕೂಡಿದ್ದೂ । ಋಭ್ವಸಂ—ಹೆಚ್ಚು ಪ್ರಕಾಶಮಾನವಾದದ್ದೂ ಆದ । ರಥಂ—ರಥವನ್ನು । ಆವೃತ್ಯ—ಹತ್ತಿಕುಳಿತು । ಮಹೇ—(ವೃತ್ರವಧಾದಿ) ಮಹಾಕಾರ್ಯಗಳಿಗೆ । ದಕ್ಷಂ—ಸಮರ್ಥವಾದ ತನಗೆ (ಉದರಕ್ಕೆ) । ಪಾಯಯತೇ—(ಸೋಮರಸವನ್ನು) ಕುಡಿಸುತ್ತಾನೆ ॥

॥ ಭಾವಾರ್ಥ ॥

ಭಕ್ಷಕನಾದ ಇಂದ್ರನು ಹೆಣ್ಣುಕುದುರೆಯನ್ನು ಕಂಡು ಗಂಡುಕುದುರೆಯು ಕ್ರೀಡಿಸಲು ಉತ್ಸಾಹದಿಂದ ಮುನ್ನುಗ್ಗುವಂತೆ ಯಜಮಾನನಿಂದ ಅರ್ಪಿತವಾದ ಅತ್ಯಧಿಕವಾದುದೂ, ಸೌಟುಗಳಲ್ಲಿರುವುದೂ ಆದ ಸೋಮರಸವನ್ನು ಕುಡಿಯಲು ಉತ್ಸಾಹದಿಂದ ಎದ್ದಿದ್ದಾನೆ. ಸುವರ್ಣನಿರ್ಮಿತವಾದದ್ದೂ, ಕುದುರೆಗಳಿಂದ ಕೂಡಿದ್ದೂ ಮತ್ತು ಹೆಚ್ಚು ಪ್ರಕಾಶಮಾನವಾದದ್ದೂ ಆದ ರಥವನ್ನು ಹತ್ತಿಕುಳಿತು ಸೋಮರಸವನ್ನು ಪಾನಮಾಡಿ ತನ್ನನ್ನು ವೃತ್ರವಧಾದಿ ಮಹಾಕಾರ್ಯಗಳಿಗೆ ಸಮರ್ಥನಾಗುವಂತೆ ಮಾಡಿಕೊಳ್ಳುತ್ತಾನೆ.

English Translation.

Voracious (Indra) has risen up, as a horse (approaches) a mare, to partake of the copious libitations (contained) in the sacrificial ladles; having stayed his well-horsed, golden and splendid chariot, he plies himself, capable of heroic (actions with the beverage).



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

**ಪೂರ್ವೀಃ**—ಪೄ ಪಾಲನಪೂರಣಯೋಃ ಎಂಬ ಧಾತುವಿನಿಂದ ಉಂಟಾದ ಈ ಶಬ್ದವು ಬಹಳವಾದ ಅಥವಾ ಅತಿಶಯವಾದ ಎಂಬರ್ಥವನ್ನು ಕೊಡುವುದು.

**ಚಮ್ರಿಷಃ**—ಚಮ್ವಾಂ ವರ್ತಮಾನಾ ಇಷಃ—ಚಮ್ರಿಷಃ—ಎಂಬ ವ್ಯುತ್ಪತ್ತಿಯಂತೆ, ಚಮೂ ಎಂದರೆ ಚಮಸಪಾತ್ರೆಯಲ್ಲಿರುವ ಸೋಮ ಲಕ್ಷಣದಿಂದ ಕೂಡಿದ ಅನ್ನ. ಇಷ ಶಬ್ದವನ್ನು ನಿರುಕ್ತದಲ್ಲಿ (ನಿಂ. ೨-೯) ಅನ್ನಪರ್ಯಾಯಪದಗಳಲ್ಲಿ ಪಾಠಮಾಡಿದ್ದಾರೆ.

**ಅತ್ಯೋ ನ ಯೋಷಾಂ**—ಇಲ್ಲಿ ಅತ್ಯಶಬ್ದಕ್ಕೆ ಅಶ್ವವೆಂದರ್ಥ. ಗಂಡುಕುದುರೆಯು ಕ್ರೀಡಾರ್ಥವಾಗಿ (ಹೆಣ್ಣುಕುದುರೆಯನ್ನು) ಅಪೇಕ್ಷಿಸುವಂತೆ, ಇಂದ್ರನು ಸೋಮಲಕ್ಷಣವಿಶಿಷ್ಟವಾದ ಹವಿಸ್ಸನ್ನು ಬಯಸುತ್ತಾನೆ.

**ಹರಿಯೋಗಂ**—ಹರ್ಯೋಃ ಯೋಗಃ ಯೋಜನಂ ಯಸ್ಮಿನ್ ಎರಡು ಕುದುರೆಗಳಿಂದ ಹೂಡಲ್ಪಟ್ಟದ್ದು, ಎಂದರ್ಥ. ಇದೂ ಹಿರಣ್ಯಯಂ, ಋಭ್ವಸಂ (ವಿಶೇಷವಾಗಿ ಪ್ರಕಾಶಿಸುವುದು) ಎಂಬ ಪದಗಳು ಇಂದ್ರನ ರಥಕ್ಕೆ ವಿಶೇಷಣಗಳಾಗಿವೆ.

**ಭುರ್ವಣಿಃ**—ತಿನ್ನುವವನು ಎಂದರ್ಥ. **ಭುರ್ವತಿರತ್ತಿಕರ್ಮಾ** (ನಿರು. ೯-೨೩) ಎಂದು ಭರ್ವ ಹಿಂಸಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ತಿನ್ನುವವನು ಎಂದರ್ಥವನ್ನು ನಿರುಕ್ತಕಾರರು ಹೇಳಿರುವರು.

॥ ವ್ಯಾಕರಣಪ್ರಕ್ರಿಯಾ ॥

**ಪೂರ್ವೀಃ**—ಪೄ ಪಾಲನಪೂರಣಯೋಃ ಧಾತು. ಇದಕ್ಕೆ **ಪೄಭಿದಿ ವ್ಯಧಿ** (ಉ. ಸೂ. ೧-೨೩) ಎಂಬುದರಿಂದ ಕು ಪ್ರತ್ಯಯ. **ಉದೋಷ್ಠ್ಯಪೂರ್ವಸ್ಯ** (ಪಾ. ಸೂ. ೭-೧-೧೦೨) ಎಂಬುದರಿಂದ ಧಾತುವಿಗೆ ಉತ್ವ. **ಉರಣ್ರಪರಃ** ಸೂತ್ರದಿಂದ ಋಕಾರಸ್ಥಾನಕ್ಕೆ ಬರುವುದರಿಂದ ರಪರವಾಗಿ ಬರುತ್ತದೆ. ಪುರು ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವವಿವಕ್ಷಾಮಾಡಿದಾಗ **ವೋತೋಗುಣವಚನಾತ್** (ಪಾ. ಸೂ. ೪-೧-೪೪) ಎಂಬುದರಿಂದ ಙೀಷ್. ಈ ಪರವಾದಾಗ ಯಣಾದೇಶ. ಆಗ **ಹಲಿಚ** (ಪಾ. ಸೂ. ೮-೨-೭೭) ಸೂತ್ರದಿಂದ ರೇಫಾಂತದ ಉಪಧೆಗೆ ದೀರ್ಘ. ಪೂರ್ವೀ ಎಂದು ರೂಪವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

**ಚಮ್ರಿಷಃ**—ಚಮು ಅದನೇ ಧಾತು. ಇದಕ್ಕೆ **ಕೃಷಿಚಮಿತನಿಧನಿ**—(ಉ. ಸೂ. ೧-೮೧) ಎಂಬುದರಿಂದ ಊ ಪ್ರತ್ಯಯ. ಚಮೂ ಶಬ್ದವಾಗುತ್ತದೆ. ಇದು ನಿತ್ಯಸ್ತ್ರೀಲಿಂಗ ಶಬ್ದ. ಚಮ್ವಾಂ ವರ್ತಮಾನಾ ಇಷಃ ಚಮ್ವಿಷಃ ಸಂಹಿತಾದಲ್ಲಿ ವಕಾರಕ್ಕೆ ರೇಫಾದೇಶವು ಛಾಂದಸವಾಗಿ ಬರುತ್ತದೆ. ಕಾರಕಉಪಪದವಾಗಿ ಸಮಾಸವಾದುದರಿಂದ ಗತಿಕಾರಕೋಪಪದಾತ್‌ಕೃತ್ ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಅಯಂಸ್ತ**—ಯಮು ಉಪರಮೇ ಧಾತು. ವರ್ತಮಾನಾರ್ಥದಲ್ಲಿ **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲುಙ್ **ವ್ಯತ್ಯಯೋಬಹುಲಂ** ಸೂತ್ರದಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಪ್ರಥಮಪುರುಷ ಏಕವಚನಪರವಾದಾಗ **ಚ್ಲೇಃಸಿಚ್** ಸೂತ್ರದಿಂದ ಸಿಚ್ **ಏಕಾಚಉಪದೇಶೇನುದಾತ್ತಾತ್** ಎಂಬುದರಿಂದ



CC-0. Jangamwadi Math Collection. Digitized by eGangotri

ಏಕಾಚಾದುದರಿಂದ ಸಿಚಿಗೆ ಇಡಾದೇಶಪ್ರತಿಷೇಧ ಬರುತ್ತದೆ. **ನಶ್ಚಾಪದಾಂತಸ್ಯ**—ಸೂತ್ರದಿಂದ ಮಕಾರಕ್ಕೆ ಅನುಸ್ವಾರಾದೇಶ. ಅಂಗಕ್ಕೆ ಅಡಾಗಮ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಭುರ್ವಣಿಃ**—ಭುರ್ವತಿರತ್ತಿಕರ್ಮಾ (ನಿರು. ೯-೨೩) ಇತಿ ಯಾಸ್ಕಃ. ಇವರ ಮತದಲ್ಲಿ ಭುರ್ವ ಎಂಬುದು ಧಾತುಸ್ವರೂಪವಾಗುತ್ತದೆ. ಆದರೆ ಧಾತುಪಾಠದಲ್ಲಿ ಭರ್ವ ಹಿಂಸಾಯಾಂ ಎಂದು ಪಠಿತವಾಗಿದೆ. ಇದಕ್ಕೆ ಔಣಾದಿಕವಾದ ಅನಿಪ್ರತ್ಯಯ. ಧಾತುವಿನ ಅಕಾರಕ್ಕೆ ಉಕಾರವು ಛಾಂದಸವಾಗಿ ಸ್ವೀಕರಿಸಬೇಕು. **ಅಟ್ಕುಪ್ವಾಙ್** ಸೂತ್ರದಿಂದ ರೇಫನಿಮಿತ್ತವಾಗಿ ಪ್ರತ್ಯಯ ನಕಾರಕ್ಕೆ ಣಕಾರಾದೇಶ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

**ಪಾಯಯತೇ**—ಪಾ ಪಾನೇ ಧಾತು. **ಹೇತುಮತಿಚ** ಎಂಬುದರಿಂದ ಪ್ರೇರಣಾವ್ಯಾಪಾರ ತೋರುವುದರಿಂದ ಣಿಚ್. **ಣಿಚಶ್ಚ** (ಪಾ. ಸೂ. ೧-೩-೭೪) ಎಂಬುದರಿಂದ ವ್ಯಾಪಾರಜನ್ಯಫಲವು ಕರ್ತೃಗಾಮಿಯಾಗುವಾಗ ಣಿಜಂತದ ಮೇಲೆ ಆತ್ಮನೇಪದಪ್ರತ್ಯಯ ಬರುತ್ತದೆ. ಣಿಚ್ ಪರದಲ್ಲಿರುವಾಗ ಶಾಚ್ಛಾಸಾಹ್ವಾವ್ಯಾವೇಪಾಂ ಯುಕ್ (ಪಾ. ಸೂ. ೭-೩-೩೭) ಎಂಬುದರಿಂದ ಧಾತುವಿಗೆ ಯುಕಾಗಮ. ಣಿಚಿಗೆ ಶಪ್ ಪರವಾದಾಗ ಗುಣ ಅಯಾದೇಶ. **ಟಿತಆತ್ಮನೇ**—ಸೂತ್ರದಿಂದ ಪ್ರತ್ಯಯಕ್ಕೆ ಏತ್ವ. ತಿಙಂತನಿಘಾತಸ್ವರ ಬರುತ್ತದೆ.

**ಹಿರಣ್ಯಯಂ**—ಹಿರಣ್ಯ ಶಬ್ದದಮೇಲೆ ವಿಕಾರಾರ್ಥದಲ್ಲಿ ಮಯಟ್ ಪ್ರತ್ಯಯ. **ಋತ್ವ್ಯವಾಸ್ತ್ವ್ಯ**—(ಪಾ. ಸೂ. ೬-೪-೧೭೫) ಎಂಬುದರಿಂದ ಮಯಟಿನ ಮ ಶಬ್ದಕ್ಕೆ ಲೋಪವು ನಿಪಾತಿತವಾಗಿದೆ.

**ಹರಿಯೋಗಮ್**—ಹರ್ಯೋಃ ಯೋಗಃ ಯೋಜನಂ ಯಸ್ಮಿನ್. ಬಹುವ್ರೀಹಿ ಸಮಾಸ. ಹರಿಶಬ್ದವು ಇನ್ ಪ್ರತ್ಯಯಾಂತವಾದುದರಿಂದ **ಞ್ನಿತ್ಯಾದಿರ್ನಿತ್ಯಂ** ಸೂತ್ರದಿಂದ ಆದ್ಯುದಾತ್ತ. ಸಮಾಸದಲ್ಲಿ **ಬಹುವ್ರೀಹೌಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರದಿಂದ ಹರಿಶಬ್ದದ ಸ್ವರವೇ ಉಳಿಯುತ್ತದೆ.

**ಋಭ್ವಸಮ್**—ಉರು ಅಧಿಕಂ ಭಾಃ ಯಸ್ಯ ಸಃ ಉರುಭಾಃ ತಂ ಉರುಭಾಸಮ್. ಇದು ಪೃಷೋದರಾದಿಯಲ್ಲಿ ಪಠಿತವಾದುದರಿಂದ **ಪೃಷೋದರಾದೀನಿ ಯಥೋಪದಿಷ್ಟಮ್** (ಪಾ. ಸೂ. ೬-೩-೧೦೯) ಎಂಬುದರಿಂದ ಋಭ್ವಸಾದೇಶಬರುತ್ತದೆ.

॥ ಸಂಹಿತಾಪಾಠಃ ॥

ತಂ ಗೂರ್ತಯೋ ನೇಮನ್ನಿಷಃ ಪರೀಣಸಃ ಸಮುದ್ರಂ ನ ಸಂಚರಣೇ ಸ-
ನಿಷ್ಯವಃ ।
ಪತಿಂ ದಕ್ಷಸ್ಯ ವಿದಥಸ್ಯ ನೂ ಸಹೋ ಗಿರಿಂ ನ ವೇನಾ ಅಧಿ ರೋಹ ತೇ-
ಜಸಾ ॥ ೨ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತಂ । ಗೂರ್ತಯಃ । ನೇಮನ್ऽಇಷಃ । ಪರೀಣಸಃ । ಸಮುದ್ರಂ । ನ । ಸಂऽಚರಣೇ । ಸನಿಷ್ಯವಃ ।

ಪತಿಂ । ದಕ್ಷಸ್ಯ । ವಿದಥಸ್ಯ । ನು । ಸಹಃ । ಗಿರಿಂ । ನ । ವೇನಾಃ । ಅಧಿ । ರೋಹ । ತೇಜಸಾ ॥ ೨ ॥

॥ ಸಾಯಣಭಾಷ್ಯಂ ॥

ಗೂರ್ತಯಃ ಸ್ತೋತಾರೋ ನೇಮನ್ನಿಷೋ ನಮಸ್ಕಾರಪೂರ್ವಂ ಗಚ್ಛಂತಃ । ಯದ್ವಾ । ನೀತ-ಹವಿಷ್ಕಾಃ ಪರೀಣಸಃ ಪರಿತೋ ವ್ಯಾಪ್ನುವಂತಃ । ಏವಂಗುಣವಿಶಿಷ್ಟಾ ಯಜಮಾನಾಸ್ತಮಿಂದ್ರಂ ಸ್ತುತಿ-ಭಿರಧಿರೋಹಂತಿ । ಸ್ತುವಂತ ಇತ್ಯರ್ಥಃ । ತತ್ರ ದೃಷ್ಟಾಂತಃ । ಸನಿಷ್ಯವಃ ಸನಿಂ ಧನಮಾತ್ಮನ ಇಚ್ಛಂತೋ ವಣಿಜೋ ಧನಾರ್ಥಂ ಸಂಚರಣೇ ಸಂಚಾರೇ ನಿಮಿತ್ತಭೂತೇ ಸತಿ ಸಮುದ್ರಂ ನ । ಯಥಾ ನಾವಾ ಸಮುದ್ರಮಧಿರೋಹಂತಿ ಏವಂ ಸ್ತೋತಾರೋಽಪಿ ಸ್ವಾಭಿಮತಧನಲಾಭಾಯೇಂದ್ರಂ ಸ್ತುವಂತೀತಿ ಭಾವಃ। ಹೇ ಸ್ತೋತಸ್ತ್ವಂ ಚ ದಕ್ಷಸ್ಯ ಪ್ರವೃದ್ಧಸ್ಯ ವಿದಥಸ್ಯ ಯಜ್ಞಸ್ಯ ಪತಿಂ ಪಾಲಯಿತಾರಂ ಸಹಃ ಸಹ-ಸ್ವಂತಂ ಬಲವಂತಮಿಂದ್ರಂ ತೇಜಸಾ ದೇವತಾಪ್ರಕಾಶಕೇನ ಸ್ತೋತ್ರೇಣ ನು ಕ್ಷಿಪ್ರಮಧಿ ರೋಹ । ಸ್ತುಹೀತಿ ಯಾವತ್ । ತತ್ರ ದೃಷ್ಟಾಂತಃ । ವೇನಾಃ ಕಾಂತಾಃ ಸ್ತ್ರಿಯೋ ಗಿರಿಂ ನ । ಯಥಾ ಪರ್ವತಂ ಸ್ವಾಭಿಮತಪುಷ್ಪೋಪಚಯಾರ್ಥಮಧಿರೋಹಂತಿ ॥ ಗೂರ್ತಯಃ । ಗೄ ಶಬ್ದೇ । ಗೃಣಂತಿ ಸ್ತುವಂತೀತಿ ಗೂರ್ತಯಃ । ಕ್ತಿಚ್ಕ್ತೌ ಚೇತಿ ಕರ್ತರಿ ಕ್ತಿಚ್ । ಬಹುಲಂ ಛಂದಸೀತ್ಯುತ್ವಂ । ಹಲಿ ಚೇತಿ ದೀರ್ಘಃ । ಚಿತ ಇತ್ಯಂತೋದಾತ್ತತ್ವಂ। ನೇಮನ್ನಿಷಃ। ಣಮು ಪ್ರಹ್ವತ್ವ ಇತ್ಯಸ್ಮಾಚ್ಛತರಿ ವ್ಯತ್ಯಯೇನೈತ್ವಂ । ತಕಾರಸ್ಯ ನಕಾರಾದೇಶಶ್ಚ । ನಮಂತ ಇಷ್ಯಂತೀಂದ್ರಂ ಪ್ರಾಪ್ನುವಂತೀತಿ ನೇಮನ್ನಿಷಃ । ಇಷು ಗತಾವಿತ್ಯಸ್ಮಾತ್ ಕ್ವಿಪ್ ಚೇತಿ ಕ್ವಿಪ್ । ಕೃದುತ್ತರಪದಪ್ರಕೃತಿಸ್ವರತ್ವಂ । ಯದ್ವಾ । ಣೀಞ್ ಪ್ರಾಪಣ ಇತ್ಯಸ್ಮಾದರ್ತಿಸ್ತು-ಸ್ವಿತ್ಯಾದಿನಾ ಮನ್ಪ್ರತ್ಯಯಃ । ಬಹುಲವಚನಾನ್ನಕಾರಸ್ಯೇತ್ಸಂಜ್ಞಾಭಾವಃ । ನೀತಾಃ ಪ್ರತ್ತಾ ಇಷೋ ಯೇಷಾಂ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ಪರೀಣಸಃ । ಣಸ ಕೌಟಿಲ್ಯ ಇತ್ಯಯಂ ಧಾತುರ್ಗತ್ಯರ್ಥೋ ಧಾತೂನಾಮನೇಕಾರ್ಥತ್ವಾತ್ । ಪರಿತೋ ನಸಂತಿ ಗಚ್ಛಂತೀತಿ ಪರಿ-ಣಸಃ । ಕ್ವಿಪ್ಚೇತಿ ಕ್ವಿಪ್ । ನಿಪಾತಸ್ಯ ಚೇತಿ ಪೂರ್ವಪದಸ್ಯ ದೀರ್ಘತ್ವಂ । ಉಪಸರ್ಗಾದಸಮಾಸೇಽಪೀತಿ ಣತ್ವಂ । ವ್ಯತ್ಯಯೇನಾದ್ಯುದಾತ್ತತ್ವಂ। ಯದ್ವಾ। ನಶತಿರ್ಗತಿಕರ್ಮಾ । ಅಸ್ಮಾತ್ಪೂರ್ವವತ್ ಕ್ವಿಪಿ ಶಕಾ-ರಸ್ಯ ಸಕಾರಃ । ಸನಿಷ್ಯವಃ । ಷಣು ದಾನ ಇತ್ಯಸ್ಮಾದಿನ್ಸರ್ವಧಾತುಭ್ಯ ಇತಿ ಕರ್ಮಣೀನ್ಪ್ರತ್ಯಯಃ । ಸನಿಮಾತ್ಮನ ಇಚ್ಛಂತೀತಿ ಕ್ಯಚಿ । ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಮಸುಗ್ವಕ್ತವ್ಯಃ । ಸುಗಾ-ಗಮೋಽಪಿ ವಕ್ತವ್ಯಃ । ಪಾ. ೭-೧-೫೧-೩ । ಇತಿ ಸುಕ್ । ಕ್ಯಾಚ್ಛಂದಸೀತ್ಯುಪ್ರತ್ಯಯಃ । ನು । ಋಚಿ ತುನುಘೇತಿ ಸಾಂಹಿತಿಕೋ ದೀರ್ಘಃ । ಸಹಃ । ಅಸ್ಮಾದುತ್ತರಸ್ಯ ಮತುಪಶ್ಛಾಂದಸೋ ಲುಕ್ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ಗೂರ್ತಯಃ—ಸ್ತೋತೃಗಳೂ | ನೇಮನ್ನಿಷಃ—ನಮಸ್ಕಾರಪೂರ್ವಕವಾಗಿ ಹೋಗುವವರೂ ಅಥವಾ ಹವಿಸ್ಸನ್ನು ಹೊಂದಿದವರೂ | ಪರೀಣಸಃ—ಸುತ್ತಲೂ ಗುಂಪುಕಟ್ಟಿಕೊಂಡವರೂ ಆದ ಯಜಮಾನರು | ತಂ—ಆ ಇಂದ್ರನನ್ನು | ಸನಿಷ್ಯವಃ—ಧನವನ್ನಪೇಕ್ಷಿಸುವ ವರ್ತಕರು | ಸಂಚರಣೇ—ಧನಕ್ಕಾಗಿ ಸಂಚಾರಮಾಡುವ ಕಾಲದಲ್ಲಿ | ಸಮುದ್ರಂ ನ—( ದೋಣಿಗಳ ಮೂಲಕ ) ಗುಂಪುಕಟ್ಟಿಕೊಂಡು ಸಮುದ್ರವನ್ನು ಸೇರುವಂತೆ (ಸ್ತುತಿಗಳಮೂಲಕ ಸೇರುತ್ತಾರೆ ಎಲೈ ಸ್ತೋತೃವೇ) | ದಕ್ಷಸ್ಯ—ಶಕ್ತಿವಂತನಾಗಿಯೂ | ವಿದಥಸ್ಯ—ಪವಿತ್ರವಾದ ಯಜ್ಞಕ್ಕೆ | ಪತಿಂ—ಪಾಲಕನಾಗಿಯೂ | ಸಹಃ—ಬಲವಂತನಾಗಿಯೂ ಇರುವ ಇಂದ್ರನನ್ನು | ತೇಜಸಾ—(ದೇವತೆಗಳನ್ನು) ಪ್ರಕಾಶಪಡಿಸುವ ಸ್ತೋತ್ರದಿಂದ | ಮೇನಾಃ—ರಮಣಿಯರು | ಗಿರಿಂ ನ—(ಪುಷ್ಪಾರ್ಥವಾಗಿ) ಪರ್ವತವನ್ನು ಹತ್ತುವಂತೆ | ಸು—ಜಾಗ್ರತೆಯಾಗಿ | ಅಧಿ ರೋಹ—(ಸ್ತೋತ್ರದ ಮೂಲಕ) ಮೇಲೇರಿ ಇಂದ್ರನನ್ನು ಸಮೀಪಿಸು ||

|| ಭಾವಾರ್ಥ ||

ಧನವನ್ನಪೇಕ್ಷಿಸುವ ವರ್ತಕರು ಧನಸಂಚಯದಕಾಲದಲ್ಲಿ ಗುಂಪುಕಟ್ಟಿಕೊಂಡು ದೋಣಿಗಳ ಮೂಲಕ ಸಮುದ್ರವನ್ನು ಸೇರುವಂತೆ, ಹವಿಸ್ಸನ್ನು ಹೊಂದಿದ ಸ್ತೋತೃಗಳು ಸುತ್ತಲೂ ಗುಂಪುಕಟ್ಟಿಕೊಂಡು ಸ್ತೋತ್ರಗಳ ಮೂಲಕ ಇಂದ್ರನನ್ನು ಸೇರುತ್ತಾರೆ. ಎಲೈ ಸ್ತೋತೃವೇ, ರಮಣಿಯರು ಪುಷ್ಪಾರ್ಥವಾಗಿ ಪರ್ವತವನ್ನು ಹತ್ತುವಂತೆ, ನೀನೂ ಸಹ ಶಕ್ತಿವಂತನೂ, ಪವಿತ್ರವಾದ ಯಜ್ಞದ ಪಾಲಕನೂ, ಬಲವಂತನೂ ಆದ ಇಂದ್ರನನ್ನೂ ದೇವತೆಗಳ ಪ್ರಕಾಶಕವಾದ ಸ್ತೋತ್ರದ ಮೂಲಕ ಮೇಲೇರಿ ಸಮೀಪಿಸು.

## English Translation.

He adorers, bearing oblations, thronging round (him) as (merchants) covetous of gain crowd the ocean (in vessels) on a voyage; ascend quickly, with a hymn to the powerful Indra, the protector of the solemn sacrifice as women (climb) a mountain.

|| ವಿಶೇಷವಿಷಯಗಳು ||

ಗೂರ್ತಯಃ—ಗೃಣಂತಿ ಸ್ತುವಂತೀತಿ ಗೂರ್ತಯಃ ಎಂದು ಇದರ ವ್ಯುತ್ಪತ್ತಿ. ಗೃ ಶಬ್ದೇ ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ ಇದು. ಇದಕ್ಕೆ ಸ್ತೋತ್ರಮಾಡುವವರು ಎಂದರ್ಥ.

ನೇಮನ್ನಿಷಃ—ನಮಂತಃ ಇಷ್ಯಂತಿ ಇಂದ್ರಂ ಪ್ರಾಪ್ನುವಂತೀತಿ ನೇಮನ್ನಿಷಃ ಎಂದು ಈ ಪದದ ವಿಗ್ರಹವಾಕ್ಯ. ಇದಕ್ಕೆ ನಮಸ್ಕಾರಪೂರ್ವಕವಾಗಿ ಇಂದ್ರನ ಸಮೀಪಕ್ಕೆ ಹೋಗುವವರು, ಅಥವಾ ಹವಿಸ್ಸನ್ನು ಒಯ್ದು ಇಂದ್ರನಿಗೆ ಕೊಡುವವರು ಎಂದೂ ಎರಡು ರೀತಿಯಲ್ಲಿಯೂ ಅರ್ಥಮಾಡಿರುತ್ತಾರೆ.

ಪರೀಣಸಃ—ಪರಿತೋ ನಸಂತಿ ಗಚ್ಛಂತೀತಿ ಪರೀಣಸಃ ಪರಿತೋ ವ್ಯಾಪ್ನುವಂತಃ ಏವಂ ಗುಣವಿಶಿಷ್ಟಾ ಯಜಮಾನಾಃ | ಯಾಗಾಚರಣೆಗಾಗಿ ಸರ್ವತ್ರ ವ್ಯಾಪಿಸಿ ಇಂದ್ರಾದಿ ದೇವತೆಗಳನ್ನು ಸ್ತುತಿಸುತ್ತಾ ಯಜ್ಞವನ್ನು ಮುಂದುವರಿಸುವ ಯಜಮಾನರು ಎಂದರ್ಥ.



CC-0. Jangamwadi Math Collection. Digitized by eGangotri

ಸನಿಷ್ಯವಃ—ಸನಿಂ ಧನಮಾತ್ಮನ ಇಚ್ಛಂತೋ ವಣಿಜಃ—ದ್ರವ್ಯಾರ್ಜನೆಗಾಗಿ ಪಾತೊರೆಯುವ ವರ್ತಕರು (ವೈಶ್ಯರು) ಎಂದರ್ಥ. ಧನಾರ್ಜನೆಗೆ ತೊಡಗಿದವರು ದೋಣಿಯ ಮೇಲೆ ಕುಳಿತು ಸಮುದ್ರದಲ್ಲಿ ಸಂಚರಿಸುವಂತೆ, ಯಜಮಾನರು ತಮ್ಮ ಇಷ್ಟಾರ್ಥಪ್ರಾಪ್ತಿಗಾಗಿ ಇಂದ್ರನನ್ನು ಸ್ತುತಿಸುವರು ಎಂಬುದು ಈ ಪ್ರಕರಣಕ್ಕೆ ಸಂಬಂಧಿಸಿದ ತಾತ್ಪರ್ಯ.

ಸಹಃ—ಇದಕ್ಕೆ ಸಹಸ್ವಂತಂ, ಬಲವಂತಂ ಅಂದರೆ ಅತಿಶಯವಾದ ಬಲವುಳ್ಳವನು ಎಂದರ್ಥ ಮಾಡಿದ್ದಾರೆ.

ವೇನಾಃ ಗಿರಿಂ ನ—ಸ್ತ್ರೀಯರು ಪುಷ್ಪಾಪಚಯಾರ್ಥವಾಗಿ ಪರ್ವತವನ್ನು ಹತ್ತುವಂತೆ, ಇಷ್ಟಾರ್ಥ ಪ್ರಾಪ್ತಿಗಾಗಿ ಇಂದ್ರನನ್ನು ಸರ್ವದಾ ಸ್ತೋತ್ರಮಾಡು ಎಂದು ಇಲ್ಲಿ ದೃಷ್ಟಾಂತಪೂರ್ವಕವಾಗಿ ಇಂದ್ರನನ್ನು ಸ್ತುತಿಸಿರುವ ಸನ್ನಿವೇಶವಿದೆ.

|| ವ್ಯಾಕರಣಪ್ರಕ್ರಿಯಾ ||

ಗೂರ್ತಯಃ—ಗೄ ಶಬ್ದೇ ಧಾತು. ಗೃಣಂತಿ ಸ್ತುವಂತಿ ಇತಿ ಗೂರ್ತಯಃ (ಸ್ತೋತ್ರಮಾಡುವವರು) ಕ್ತಿಚ್ ಕ್ತೌ ಚ ಸಂಜ್ಞಾಯಾಂ (ಪಾ. ಸೂ: ೩-೩-೧೭೪) ಎಂಬುದರಿಂದ ಈ ಧಾತುವಿಗೆ ಕರ್ತರಿಯಲ್ಲಿ ಕ್ತಿಚ್ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ಧಾತುವಿಗೆ ಉತ್ವ. ಉರಣ್ರಪರಃ ಸೂತ್ರದಿಂದ ರಪರವಾಗಿ ಬರುತ್ತದೆ. ಆಗ ಹಲಿಚ (ಪಾ. ಸೂ. ೮-೨-೭೭) ಎಂಬುದರಿಂದ ರೇಫಾಂತದ ಉಪಧೆಗೆ ದೀರ್ಘ. ಗೂರ್ತಿ ಶಬ್ದವಾಗುತ್ತದೆ. ಪ್ರತ್ಯಯ ಚಿತ್ತಾದುದರಿಂದ ಚಿತಃ (ಪಾ. ಸೂ. ೬-೧-೧೬೩) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಪ್ರಥಮಾ ಬಹುವಚನದಲ್ಲಿ ಜಸಿಚ ಎಂಬುದರಿಂದ ಅಂಗಕ್ಕೆ ಗುಣ, ಅಯಾದೇಶ.

ನೇಮನ್ನಿಷಃ—ಣಮು ಪ್ರಹ್ವತ್ವೇ ಶಬ್ದೇ ಚ ಧಾತು. ಲಡರ್ಥದಲ್ಲಿ ಶತೃಪ್ರತ್ಯಯ. ಇದು ಪರವಾದಾಗ ವ್ಯತ್ಯಯೋ ಬಹುಲಂ ಎಂಬುದರಿಂದ ಧಾತುವಿನ ಅಕಾರಕ್ಕೆ ಏತ್ವ ತಕಾರಕ್ಕೆ ನಕಾರಾದೇಶ. ನಮಂತಃ ಇಸ್ಯಂತಿ ಇಂದ್ರಂ ಪ್ರಾಪ್ನುವಂತಿ ಇತಿ ನೇಮನ್ನಿಷಃ. ಇಷು ಗತೌ ಧಾತು. ಇದಕ್ಕೆ ಕ್ವಿಪ್‌ಚ (ಪಾ. ಸೂ. ೩-೨-೭೬) ಎಂಬುದರಿಂದ ಕ್ವಿಪ್ ಪ್ರತ್ಯಯ. ನೇಮನ್ನಿಷ್ ಶಬ್ದವಾಗುತ್ತದೆ. ಗತಿಕಾರಕೋಪಪದಾತ್‌ಕೃತ್ ಸೂತ್ರದಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಅಥವಾ ಣೀಞ್ ಪ್ರಾಪಣೇ ಧಾತು. ಅದಕ್ಕೆ ಅರ್ತಿಸ್ತುಸು (ಉ. ಸೂ. ೧-೧೩೭) ಎಂಬುದರಿಂದ ಮನ್ ಪ್ರತ್ಯಯ. ಛಂದಸ್ಸಿನಲ್ಲಿ ಬಹುಲವಚನವಿರುವುದರಿಂದ ಮನ್ನಿನ ನಕಾರಕ್ಕೆ ಹಲಂತ್ಯಮ್ ಸೂತ್ರದಿಂದ ಇತ್ಸಂಜ್ಞೆ ಬರುವುದಿಲ್ಲ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ನೇಮನ್ ಎಂದಾಗುತ್ತದೆ. ನೀತಾಃ ಪ್ರಾಪ್ತಾಃ ಇಷೋ ಯೇಷಾಮ್. ಬಹುವ್ರೀಹಿಯಲ್ಲಿ ಪರಾದಿಶ್ಛಂದಸಿ ಬಹುಲಂ (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ಪರೀಣಸಃ—ಣಸ ಕೌಟಿಲ್ಯೇ ಧಾತು. ಇದು ಇಲ್ಲಿ ಧಾತುಗಳಿಗೆ ಅನೇಕಾರ್ಥವಿರುವುದರಿಂದ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಪರಿತೋ ನಸಂತಿ ಗಚ್ಛಂತಿ ಇತಿ ಪರೀಣಸಃ. ಕ್ವಿಪ್ ಚ ಎಂಬುದರಿಂದ ಕ್ವಿಪ್. ನಿಪಾತಸ್ಯ ಚ (ಪಾ. ಸೂ. ೬-೩-೧೩೬) ಎಂಬುದರಿಂದ ನಿಪಾತವಾದ ಪೂರ್ವಪದಕ್ಕೆ ದೀರ್ಘ. ಪರೀಣಸ್ ಶಬ್ದವಾಗುತ್ತದೆ. ಉಪಸರ್ಗಾದಸಮಾಸೇಽಪಿಣೋಪದೇಶಸ್ಯ ಸೂತ್ರದಿಂದ ಧಾತುವಿನ ನಕಾರಕ್ಕೆ ಣತ್ವ ಬಂದಿದೆ. ಕೃದುತ್ತರಪದಪ್ರಕೃತಿಸ್ವರವು ಪ್ರಾಪ್ತವಾದರೆ ವ್ಯತ್ಯಯದಿಂದ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ನಶಧಾತು ಗತ್ಯರ್ಥದಲ್ಲಿದೆ. ಇದಕ್ಕೆ ಹಿಂದಿನಂತೆ ಕ್ವಿಪ್ ಪ್ರತ್ಯಯ ಛಾಂದಸವಾಗಿ ಶಕಾರಕ್ಕೆ ಸಕಾರಾದೇಶ.



CC-0. Jangamwadi Math Collection. Digitized by eGangotri

ಸನಿಷ್ಯವಃ—ಷಣು ದಾನೇ ಧಾತು. ಇದಕ್ಕೆ ಇನ್‌ಸರ್ವಧಾತುಭ್ಯಃ ಎಂಬ ಉಣಾದಿಸೂತ್ರದಿಂದ ಕರ್ಮಣಿಯಲ್ಲಿ ಇನ್ ಪ್ರತ್ಯಯ. ಧಾತ್ವಾದಿಗೆ ಸಕಾರಾದೇಶ ಸನಿ ಶಬ್ದವಾಗುತ್ತದೆ. ಸನಿಂ ಆತ್ಮನಃ ಇಚ್ಛತಿ ಎಂಬರ್ಥದಲ್ಲಿ ಸುಪಆತ್ಮನಃ ಕ್ಯಚ್ ಸೂತ್ರದಿಂದ ಕ್ಯಚ್. ಕ್ಯಚ್ ಪರದಲ್ಲಿರುವಾಗ ಸರ್ವಪ್ರಾತಿಪದಿಕೇಭ್ಯೋ ಲಾಲಸಾಯಾಂ ಸುಗ್ವಕ್ತವ್ಯಃ ಸುಗಾಗಮೋಽಪಿವಕ್ತವ್ಯಃ (ಕಾ. ೭-೧-೫೧-೩) ಎಂಬ ವಚನದಿಂದ ಸನಿ ಎಂಬುದಕ್ಕೆ ಸುಗಾಗಮ. ಇಕಾರದ ಪರದಲ್ಲಿರುವುದರಿಂದ ಷತ್ವ. ಸನಿಷ್ಯ ಎಂಬುದು ಸನಾದ್ಯಂತಾ ಧಾತವಃ ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ ಕ್ಯಾಚ್ಛಂದಸಿ ಎಂಬುದರಿಂದ ಉ ಪ್ರತ್ಯಯ. ಅತೋಲೋಪಃ ಎಂಬುದರಿಂದ ಕ್ಯಚಿನ ಅಕಾರಕ್ಕೆ ಲೋಪ. ಸನಿಷ್ಯು ಎಂದು ಉಕಾರಾಂತಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಪ್ರಥಮಾಬಹುವಚನದಲ್ಲಿ ಜಸಿಚ ಎಂಬುದರಿಂದ ಗುಣ ಅವಾದೇಶ.

ಘ—ಋಚಿ ತುನುಘ—ಎಂಬುದರಿಂದ ಸಂಹಿತಾದಲ್ಲಿ ದೀರ್ಘಬರುತ್ತದೆ.

ಸಹಃ—ಸಹಃ ಅಸ್ಯ ಅಸ್ತಿ ಇತಿ ಸಹಸ್ವಾನ್. ತದಸ್ಯಾಸ್ತ್ಯ—ಸೂತ್ರದಿಂದ ಮತುಪ್ ಪ್ರತ್ಯಯ. ಸಂಹಿತಾದಲ್ಲಿ ಛಾಂದಸವಾಗಿ ಮತುಪ್ ಪ್ರತ್ಯಯಕ್ಕೆ ಲುಕ್ ಬಂದಿದೆ.

ರೋಹ—ರುಹ ಬೀಜಜನ್ಮನಿ ಪ್ರಾದುರ್ಭಾವೇ ಧಾತು. ಲೋಟ್ ಮಧ್ಯಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಸ ತುರ್ವಣಿರ್ಮಹಾँ ಅರೇಣು ಪೌಂಸ್ಯೇ ಗಿರೇರ್ಭೃಷ್ಟಿರ್ನ ಭ್ರಾಜತೇ ತುಜಾ ಶವಃ ।
ಯೇನ ಶುಷ್ಣಂ ಮಾಯಿನಮಾಯಸೋ ಮದೇ ದುಧ್ರ ಆಭೂಷು ರಾಮಯನ್ನಿ ದಾಮನಿ ॥ ೩ ॥

ಪದಪಾಠಃ

ಸಃ । ತುರ್ವಣಿಃ । ಮಹಾನ್ । ಅರೇಣು । ಪೌಂಸ್ಯೇ । ಗಿರೇಃ । ಭೃಷ್ಟಿಃ । ನ । ಭ್ರಾಜತೇ । ತುಜಾ । ಶವಃ ।
ಯೇನ । ಶುಷ್ಣಂ । ಮಾಯಿನಂ । ಆಯಸಃ । ಮದೇ । ದುಧ್ರಃ । ಆಭೂಷು । ರಮಯತ್ । ನಿ । ದಾಮನಿ ॥ ೩ ॥



CC-0. Jangamwadi Math Collection. Digitized by eGangotri

॥ಸಾಯಣಭಾಷ್ಯಂ॥

ಸ ಇಂದ್ರಸ್ತುರ್ವಣಿಃ ಶತ್ರೂಣಾಂ ಹಿಂಸಿತಾ ಕ್ಷಿಪ್ರಕಾರೀ ವಾ । ತುರ್ವಣಿಸ್ತೂರ್ಣವನಿರಿತಿ ಯಾಸ್ಕಃ । ನಿ. ೬-೧೪ । ತೂರ್ಣಸಂಭಜನ ಇತಿ ತಸ್ಯಾರ್ಥಃ । ಮಹಾನ್ಪ್ರವೃದ್ಧಶ್ಚ ಭವತಿ । ತಸ್ಯೇಂದ್ರಸ್ಯ ಶವೋ ಬಲಂ ಪೌಂಸ್ಯೇ ವೀರೈಃ ಪುರುಷೈಃ ಕರ್ತವ್ಯೇ ಸಂಗ್ರಾಮೇಽರೇಣ್ವನವದ್ಯಂ ತುಜಾ ಶತ್ರೂಣಾಂ ಹಿಂಸಕಂ ಸತ್ ಭ್ರಾಜತೇ । ದೀಪ್ಯತೇ । ತತ್ರ ದೃಷ್ಟಾಂತಃ । ಗಿರೇಃ ಪರ್ವತಸ್ಯ ಭೃಷ್ಟಿರ್ನ ಶೃಂಗಮಿವ। ತದ್ಯಥೋನ್ನತಂ ಸದ್ದೀಪ್ಯತೇ ತದ್ವತ್ । ಆಯಸೋಽಯೋಮಯಕವಚಯುಕ್ತದೇಹೋ ದುಧ್ರೋ ದುಷ್ಟಾನಾಂ ಶತ್ರೂಣಾಂ ಧರ್ತಾವಸ್ಥಾಪಯಿತಾ ಏವಂಭೂತ ಇಂದ್ರೋ ಮದೇ ಸೋಮಪಾನೇನ ಹರ್ಷೇ ಸತಿ ಯೇನ ಬಲೇನ ಶುಷ್ಣಂ ಸರ್ವಸ್ಯ ಶೋಷಕಮಸುರಂ ಮಾಯಿನಂ ಮಾಯಾವಿನಮಾಭೂಷು ಕಾರಾಗೃಹೇಷು ದಾಮನಿ ಬಂಧಕೇ ನಿಗಡೇ ನಿ ರಮಯತ್ ನ್ಯವಾಸಯತ್ । ತತ್ಬಲಮಿತಿ ಪೂರ್ವೇಣಾನ್ವಯಃ ॥ ತುರ್ವಣಿಃ । ತುರ್ವೀ ಹಿಂಸಾರ್ಥಃ । ಅಸ್ಮಾದೌಣಾದಿಕೋಽನಿಪ್ರತ್ಯಯಃ । ಅರೇಣು । ರೇಣುವದಾಚ್ಛಾದಕತ್ವಾದ್ರೇಣುಶಬ್ದೇನಾವದ್ಯಮುಚ್ಯತೇ । ಬಹುವ್ರೀಹೌ ನಞ್ಸುಭ್ಯಾಮಿತ್ಯುತ್ತರಪದಾಂತೋದಾತ್ತತ್ವಂ । ತುಜಾ । ತುಜ ಹಿಂಸಾಯಾಂ । ಇಗುಪಧಲಕ್ಷಣಃ ಕಃ । ಸುಪಾಂ ಸುಲುಗಿತಿ ವಿಭಕ್ತೇರಾಕಾರಃ । ದುಧ್ರಃ । ದುಷ್ಟಾನ್ ಧ್ರಿಯತೇಽವಸ್ಥಾಪಯತೀತಿ ದುಧ್ರಃ । ಧೃಙ್ ಅವಸ್ಥಾನೇ ಇತ್ಯಸ್ಮಾದಂತರ್ಭಾವಿತಣ್ಯರ್ಥಾನ್ಮೂಲವಿಭುಜಾದಿತ್ವಾತ್ಕಪ್ರತ್ಯಯಃ । ಪಾ. ೩-೨-೫-೨ । ಯಣಾದೇಶಃ । ರೇಫಲೋಪಶ್ಛಾಂದಸಃ । ರಮಯತ್ । ಅಮಂತತ್ವಾನ್ಮಿತ್ತ್ವೇ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ । ಛಾಂದಸಃ ಸಂಹಿತಾಯಾಂ ದೀರ್ಘಃ ॥

॥ ಪ್ರತಿಪದಾರ್ಥ ॥

ಸಃ—ಇಂದ್ರನು । ತುರ್ವಣಿಃ—ಶತ್ರುಹಿಂಸಕನಾಗಿಯೂ ಅಥವಾ ಶೀಘ್ರವಾಗಿ ಕೆಲಸಮಾಡತಕ್ಕವನಾಗಿಯೂ ಮತ್ತು । ಮಹಾನ್—ಪ್ರಭಾವಯುತನಾಗಿಯೂ ಇದ್ದಾನೆ । ಆಯಸಃ—ಉಕ್ಕಿನ ಕವಚವನ್ನು ಧರಿಸಿದ ದೇಹವುಳ್ಳವನೂ । ದುಧ್ರಃ—ದುಷ್ಟ ಶತ್ರುಗಳನ್ನು ದಮನಮಾಡತಕ್ಕವನೂ ಆದ ಇಂದ್ರನು । ಮದೇ—ಸೋಮರಸಪಾನದಿಂದ ಹರ್ಷಿತನಾದಾಗ । ಯೇನ—ಯಾವ ಬಲದಿಂದ । ಶುಷ್ಣಂ—ಸರ್ವಶೋಷಕನೂ । ಮಾಯಿನಂ—ಮೋಸಗಾರನೂ ಆದ ರಾಕ್ಷಸನನ್ನು । ಆಭೂಷು—ಕಾರಾಗೃಹದಲ್ಲಿ । ದಾಮನಿ—ಬಂಧಕವಾದ ಸಂಕೋಲೆಯಲ್ಲಿ । ನಿರಮಯತ್—ಸಿಕ್ಕಿರುವಂತೆ ಮಾಡಿದನೋ । ಶವಃ—ಆ ಬಲವು । ಪೌಂಸ್ಯೇ—ವೀರರು ನಡಿಸತಕ್ಕ ಯುದ್ಧದಲ್ಲಿ । ಅರೇಣು—ದೋಷರಹಿತವಾಗಿಯೂ । ತುಜಾ—ಶತ್ರುಹಿಂಸಕವಾಗಿಯೂ ಇದ್ದು । ಗಿರೇಃ—ಪರ್ವತದ । ಭೃಷ್ಟಿರ್ನ—ಶಿಖರದೋಪಾದಿಯಲ್ಲಿ । ಭ್ರಾಜತೇ—ಪ್ರಕಾಶಿಸುತ್ತದೆ ॥

॥ ಭಾವಾರ್ಥ ॥

ಇಂದ್ರನು ಶೀಘ್ರಕರ್ಮಕಾರಿಯಾಗಿಯೂ ಪ್ರಭಾವಯುತನಾಗಿಯೂ ಇದ್ದಾನೆ. ಉಕ್ಕಿನ ಕವಚವನ್ನು ಧರಿಸಿದ ದೇಹವುಳ್ಳವನೂ, ದುಷ್ಟಶತ್ರುಗಳನ್ನು ದಮನಮಾಡತಕ್ಕವನೂ ಆದ ಇಂದ್ರನು ಸೋಮರಸಪಾನದಿಂದ ಹರ್ಷಿತನಾದಾಗ ಯಾವ ಶಕ್ತಿಯಿಂದ ಸರ್ವಶೋಷಕನೂ ಮೋಸಗಾರನೂ ಆದ ರಾಕ್ಷಸನನ್ನು ಕಾರಾಗೃಹದಲ್ಲಿ ಬಂಧಕವಾದ ಸಂಕೋಲೆಯಲ್ಲಿ ಸಿಕ್ಕಿರುವಂತೆ ಮಾಡಿದನೋ ಆ ಬಲವು ವೀರರು ನಡಿಸತಕ್ಕ ಯುದ್ಧಕಾಲದಲ್ಲಿ ದೋಷರಹಿತವಾಗಿಯೂ, ಶತ್ರುಹಿಂಸಕವಾಗಿಯೂ ಇದ್ದು ಪರ್ವತದ ಶಿಖರದೋಪಾದಿಯಲ್ಲಿ ಪ್ರಕಾಶಿಸುತ್ತದೆ.



CC-0. Jangamwadi Math Collection. Digitized by eGangotri

## English Translation.

He is quick in actions and mighty; his faultless and destructive prowess shines in manly (conflict) like the peak of a mountain (afar) with which clothed in iron (armour), he, the suppressor of the malignant, when exhilarated by the soma-juice; cast the whily sushna into prison and into bonds.

### || ವಿಶೇಷ ವಿಷಯಗಳು ||

ತುರ್ವಣಿಃ—ಶತ್ರೂಣಾಂ ಹಿಂಸಿತಾ ಕ್ಷಿಪ್ರಕಾರೀ ವಾ ತುರ್ವಣಿಸ್ತೂರ್ಣವನಿಃ (ನಿರು. ೬-೧೪) ತೂರ್ಣಂಹಿ ಯಃ ಸಂಭಜತೇ—ಜಾಗ್ರತೆಯಾಗಿ ಸ್ತುತಿಸುವವನು ಎಂದರ್ಥ. "ಸತುರ್ವಣಿರ್ಮಹಾಂ ಅರೇಣು" (ಋ. ಸಂ. ೧-೫೬-೩) ಎಂಬುದಾಗಿ ತುರ್ವಣಿ ಶಬ್ದವು. ಇಂದ್ರನು ತನ್ನನ್ನು ಸ್ತುತಿಸುವವನಿಗೆ ಜಾಗ್ರತೆಯಾಗಿ ಫಲಕೊಡುವನೆಂಬರ್ಥವನ್ನು ಅಲ್ಲಲ್ಲಿ ಸೂಚಿಸುವುದು.

ಪೌಂಸ್ಯೇ—ಈ ಪದಕ್ಕೆ ವೀರೈಃ ಪುರುಷೈಃ ಕರ್ತವ್ಯೇ ಸಂಗ್ರಾಮೇ ಎಂದು ಅರ್ಥವನ್ನು ವಿವರಿಸಿ. ವೀರರು ಮಾಡುವ ಯುದ್ಧವೆಂದು ಅರ್ಥಮಾಡಿದ್ದಾರೆ.

ಅರೇಣು—ಅನವದ್ಯಂ—ವ್ಯರ್ಥವಲ್ಲದ್ದು.

ತುಜಾ—ತುಜ-ಹಿಂಸಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಶತ್ರುಗಳಿಗೆ ಹಿಂಸೆಯನ್ನು ಕೊಡತಕ್ಕದ್ದು ಎಂಬರ್ಥವನ್ನು ಕೊಡುವುದು.

ಗಿರೇಃಭೃಷ್ಟಿರ್ನ—ಪರ್ವತದ ಶಿಖರದಂತೆ ಎಂದರ್ಥ. ಇಲ್ಲಿ ನ ಶಬ್ದಕ್ಕೆ ಇವಾರ್ಥಕತ್ವವಿರುವುದು.

ದುಧ್ರಃ—ಧೃಜ್ ಅವಸ್ಥಾನೇ ಎಂಬ ಧಾತುನಿಷ್ಪನ್ನವಾದ ಈ ಶಬ್ದವು ಶತ್ರುಗಳನ್ನು ಶಿಕ್ಷಿಸಿ ಅವರವರ ಸ್ಥಳದಲ್ಲಿಯೇ ನಿಲ್ಲಿಸುವವನು ಎಂಬರ್ಥವನ್ನು ಕೊಡುವುದು.

### || ವ್ಯಾಕರಣಪ್ರಕ್ರಿಯಾ ||

ತುರ್ವಣಿಃ—ತುರ್ವೀ ಧಾತುವು ಹಿಂಸಾರ್ಥದಲ್ಲಿದೆ. ಇದಕ್ಕೆ ಔಣಾದಿಕವಾದ ಅನಿ ಪ್ರತ್ಯಯ. ಅಟ್‌ಕುಪ್ವಾಙ್‌ನುಮ್ ಸೂತ್ರದಿಂದ ಪ್ರತ್ಯಯ ನಕಾರಕ್ಕೆ ಣತ್ವ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಮಧ್ಯೋದಾತ್ತವಾದ ಶಬ್ದವಾಗುತ್ತದೆ.

ಅರೇಣು—ರೇಣುವದಾಚ್ಛಾದಕತ್ವಾತ್ ರೇಣುಶಬ್ದೇನ ಅವದ್ಯಂ ಉಚ್ಯತೇ. (ಧೂಳಿಯಂತೆ ಮುಚ್ಚುವುದರಿಂದ ಶ್ರೇಷ್ಠವಾದುದು ಎಂದು ತಾತ್ಪರ್ಯ) ಬಹುವ್ರೀಹಿ ಸಮಾಸ. ನಞ್‌ಸುಭ್ಯಾಮ್ (ಪಾ. ಸೂ. ೬-೨-೧೭೨) ಎಂಬುದರಿಂದ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಭ್ರಾಜತೇ—ಭ್ರಾಜೃ ದೀಪ್ತೌ ಧಾತು. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ.

ತುಜಾ—ತುಜ ಹಿಂಸಾಯಾಂ ಧಾತು. ಇತ್ ಉಪಧೆಯಾಗಿರುವುದರಿಂದ ಇಗುಪಧಜ್ಞಾಪ್ರೀಕಿರಃ ಕಃ (ಪಾ. ಸೂ. ೩-೧-೧೩೫) ಎಂಬುದರಿಂದ ಕಪ್ರತ್ಯಯ ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರಥಮಾಸುಪರವಾದಾಗ ಸುಪಾಂ ಸುಲುಕ್ ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.



CC-0. Jangamwadi Math Collection. Digitized by eGangotri

**ಮಾಯಿನಮ್**—ಮಾಯಾ ಅಸ್ಯ ಅಸ್ತಿ ಎಂಬ ಮತ್ವರ್ಥದಲ್ಲಿ **ವ್ರೀಹ್ಯಾದಿಭ್ಯಶ್ಚ** (ಪಾ. ಸೂ. ೫-೨-೧೧೬) ಎಂಬುದರಿಂದ ಇನಿಪ್ರತ್ಯಯ. **ಯಸ್ಯೇತಿಚ** ಸೂತ್ರದಿಂದ ಅಕಾರಲೋಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ದುಧ್ರಃ**—ದುಷ್ಟಾನ್ ಧ್ರಿಯತೇ ಅವಸ್ಥಾಪಯತಿ ಇತಿ ದುಧ್ರಃ ಧೃಞ್ ಅವಸ್ಥಾನೇ ಧಾತು. ಇದು ಅಂತರ್ಭಾವಿತಣ್ಯರ್ಥಕವಾಗಿರುವಾಗ (ಣಿಜರ್ಥ ಧಾತ್ವರ್ಥದಲ್ಲಿ ಸೇರಿರುವಾಗ) ಮೂಲವಿಭುಜಾದಿಯಲ್ಲಿ ಸೇರಿರುವುದರಿಂದ **ಕಪ್ರಕರಣೇ ಮೂಲವಿಭುಜಾದಿಭ್ಯ ಉಪಸಂಖ್ಯಾನಮ್** (ಪಾ. ಸೂ. ೩-೨-೫-೨) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಯಣಾದೇಶ ದುರ್ ಉಪಸರ್ಗದ ರೇಫಕ್ಕೆ ಛಾಂದಸವಾಗಿ ಲೋಪ ಬರುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ.

**ರಮಯತ್**—ರಮು ಕ್ರೀಡಾಯಾಂ ಧಾತು. ಪ್ರೇರಣಾರ್ಥತೋರುವಾಗ **ಹೇತುಮತಿಚ** ಎಂಬುದರಿಂದ ಣಿಚ್. **ಅತಉಪಧಾಯಾಃ** ಸೂತ್ರದಿಂದ ಉಪಧಾವೃದ್ಧಿ. ಅಮಂತವಾದುದರಿಂದ ಜನೀಜ್ರ್‍ಯಷ್ಕ್ನಸು ಎಂಬುದರಿಂದ ಇದು ಅಮಂತವಾದುದರಿಂದ ಮಿತ್ ಸಂಜ್ಞಾ ಬರುತ್ತದೆ. ಆಗ ಮಿತಾಂಹ್ರಸ್ವಃ (ಪಾ. ಸೂ. ೬-೪-೯೨) ಎಂಬುದರಿಂದ ಉಪಧಾ ಹ್ರಸ್ವ. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಸೂತ್ರದಿಂದ ಇಕಾರ ಲೋಪ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಬಹುಲಂ-ಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಯೇನ ಎಂದು ಹಿಂದೆ ಸಂಬಂಧವಿರುವುದರಿಂದ **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ನಿಘಾತಪ್ರತಿಷೇಧ. ಣಿಚ್ ಸ್ವರದಿಂದ ಮಕಾರೋತ್ತರಾಕಾರ ಉದಾತ್ತವಾಗುತ್ತದೆ. ಸಂಹಿತಾಪಾಠದಲ್ಲಿ ಛಾಂದಸವಾಗಿ ಆದಿ ದೀರ್ಘ ಬರುತ್ತದೆ.

॥ ಸಂಹಿತಾಪಾಠಃ ॥

ದೇವೀ ಯದಿ ತವಿಷೀ ತ್ವಾವೃಧೋತಯ ಇಂದ್ರಂ ಸಿಷಕ್ತ್ಯುಷಸಂ ನ
ಸೂರ್ಯಃ ।
ಯೋ ಧೃಷ್ಣುನಾ ಶವಸಾ ಬಾಧತೇ ತಮ ಇಯರ್ತಿ ರೇಣುಂ ಬೃಹದ-
ರ್ಹರಿಷ್ವಣಿಃ ॥ ೪ ॥

॥ ಪದಪಾಠಃ ॥

ದೇವೀ । ಯದಿ । ತವಿಷೀ । ತ್ವಾವೃಧಾ । ಊತಯೇ । ಇಂದ್ರಂ । ಸಿಸಕ್ತಿ । ಉ-
ಷಸಂ । ನ । ಸೂರ್ಯಃ ।
ಯಃ । ಧೃಷ್ಣುನಾ । ಶವಸಾ । ಬಾಧತೇ । ತಮಃ । ಇಯರ್ತಿ । ರೇಣುಂ । ಬೃಹತ್ ।
ಅರ್ಹರಿಽಸ್ವನಿಃ ॥ ೪ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯಂ ||

ಯ ಇಂದ್ರೋ ಧೃಷ್ಣುನಾ ಧರ್ಷಕೇಣ ಶವಸಾ ಬಲೇನ ತಮುಸ್ತಮೋರೂಪಂ ವೃತ್ರಾದಿಮಸುರಂ ಬಾಧತೇ ಹಿನಸ್ತಿ ಊತಯೇ ರಕ್ಷಣಾಯ ತ್ವಾವೃಧಾ ತ್ವಯಾ ಸ್ತೋತ್ರಾ ವರ್ಧಿತಂ ತಮಿಂದ್ರಂ ದೇವೀ ತವಿಷೀ ದ್ಯೋತಮಾನಂ ಬಲಂ ಯದಿ ಯದಾ ಸಿಷಕ್ತಿ ಸಮವೈತಿ | ಸೇವತ ಇತಿ ಯಾಸ್ಕಃ | ಸೂರ್ಯ ಉಷಸಂ ನ ಯಥೋಷೋದೇವತಾಂ ಸೇವತೇ | ನಿತ್ಯ ತತ್ಸಂಬದ್ಧೋ ಭವತೀತ್ಯರ್ಥಃ | ತದಾನೀಮರ್ಹರಿಷ್ವಣಿಃ | ಗಚ್ಛಂತೋ ಹರಂತೀತ್ಯರ್ಹರಯಃ ಶತ್ರವಃ | ತೇಷಾಂ ವ್ಯಥೋತ್ಪಾದನೇನ ಸ್ವನಯಿತಾ ಶಬ್ದಯಿತೇಂದ್ರೋ ರೇಣುಂ ರೇಷಣಂ ಹಿಂಸನಂ ಬೃಹತ್ಪ್ರಭೂತಮಿಯರ್ತಿ | ಶತ್ರೂನ್ ಗಮಯತಿ || ತ್ವಾವೃಧಾ | ತ್ವಯಾ ವರ್ಧತ ಇತಿ ತ್ವಾವೃತ್ | ಕ್ವಿಪ್ಚೇತಿ ಕ್ವಿಪ್ | ಪ್ರತ್ಯಯೋತ್ತರಪದಯೋಶ್ಚೇತಿ ಮಪರ್ಯಂತಸ್ಯ ತ್ವಾದೇಶಃ | ಛಾಂದಸಂ ದಕಾರಸ್ಯಾತ್ವಂ | ಸುಪಾಂ ಸುಲುಗಿತಿ ದ್ವಿತೀಯಾಯಾ ಆಕಾರಃ | ಸಿಷಕ್ತಿ | ಷಚ ಸಮವಾಯೇ | ಬಹುಲಂ ಛಂದಸೀತಿ ಶಪಃ ಶ್ಲುಃ | ಬಹುಲಂ ಛಂದಸೀತ್ಯಭ್ಯಾಸಸ್ಯೇತ್ವಂ | ಇಯರ್ತಿ | ಋ ಸೃ ಗತೌ | ಜೌಹೋತ್ಯಾದಿಕಃ | ಅಸ್ಮಾದಂತರ್ಭಾವಿತಣ್ಯರ್ಥಾಲ್ಲಟ್ | ಶಪಃ ಶ್ಲುರ್ದ್ವಿರ್ಭಾವೋರದತ್ವಹಲಾದಿಶೇಷಾಃ | ಅರ್ತಿಪಿಪರ್ತ್ಯೋಶ್ಚೇತ್ಯಭ್ಯಾಸಸ್ಯೇತ್ವಂ | ಅಭ್ಯಾಸಸ್ಯಾಸವರ್ಣೇ | ಪಾ. ೬-೪-೭೮ | ಇತೀಯಜಾದೇಶಃ | ಅನುದಾತ್ತೇ ಚೇತ್ಯಭ್ಯಾಸಸ್ಯಾದ್ಯುದಾತ್ತತ್ವಂ | ಪೂರ್ವಪದಸ್ಯ ವಾಕ್ಯಾಂತರಗತತ್ವೇನ ಸದಾದಪರತ್ವಾನ್ನಿಘಾತಾಭಾವಃ | ರೇಣುಂ | ರೀ ಗತಿರೇಷಣಯೋಃ | ಅಸ್ಮಾದೌಣಾದಿಕೋ ನುಪ್ರತ್ಯಯಃ | ಅರ್ಹರಿಷ್ವಣಿಃ | ಅರ್ತೇರನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ | ಅರೋ ಗಚ್ಛಂತಶ್ಚೇಮೇ ಹರಯಶ್ಚೇತ್ಯರ್ಹರಯಃ | ತೇಷಾಂ ಸ್ವನಯಿತಾ | ಸ್ವಮು ಸ್ವನ ಧ್ವನ ಶಬ್ದೇ | ಅಸ್ಮಾಣ್ಣ್ಯಂತಾದೌಣಾದಿಕ ಇಸ್ಪ್ರತ್ಯಯಃ | ಣೇರನಿಟೀತಿ ಣಿಲೋಪಃ | ಘಟಾದಿತ್ವಾನ್ಮಿತ್ತ್ವೇ ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ | ಕೃದುತ್ತರಪದಪ್ರಕೃತಿಸ್ವರತ್ವಂ ||

|| ಪ್ರತಿಪದಾರ್ಥ ||

ಯಃ—ಯಾವ ಇಂದ್ರನು | ಧೃಷ್ಣುನಾ—(ಶತ್ರುವನ್ನು) ದಮನಮಾಡತಕ್ಕ | ಶವಸಾ—ಬಲದಿಂದ | ತಮುಃ—ತಮೋರೂಪವಾದ ವೃತ್ರಾದಿ ಅಸುರರನ್ನು | ಬಾಧತೇ—ಹಿಂಸಿಸುತ್ತಾನೋ (ಮತ್ತು) | ಊತಯೇ—ರಕ್ಷಣೆಗಾಗಿ | ತ್ವಾ ವೃಧಾ—ಸ್ತೋತೃವಾದ ನಿನ್ನಿಂದ ವರ್ಧಿತನಾಗುತ್ತಾನೋ | (ತಂ) ಇಂದ್ರಂ—ಆ ಇಂದ್ರನನ್ನು | ದೇವೀ—ದಿವ್ಯವಾದುದೂ | ತವೀಷೀ—ಪ್ರಕಾಶಮಾನವಾದುದೂ ಆದ ಶಕ್ತಿಯು | ಯದಿ—ಯಾವಾಗ | ಸೂರ್ಯಃ—ಸೂರ್ಯದೇವನು | ಉಷಸಂ ನ—ಉಷೋದೇವಿಯನ್ನು ಸೇವಿಸುವಂತೆ | ಸಿಷಕ್ತಿ—ಸೇವಿಸುತ್ತದೆಯೋ (ಆಗ) ಅರ್ಹರಿಷ್ವಣಿಃ—(ನೋವನ್ನುಂಟುಮಾಡುವುದರಿಂದ) ಶತ್ರುಗಳನ್ನು ಗಟ್ಟಿಯಾಗಿ ಕೂಗಿಕೊಳ್ಳುವಂತೆ ಮಾಡುವ ಇಂದ್ರನು | ರೇಣುಂ—ನೋವನ್ನು | ಬೃಹತ್—ಅಧಿಕವಾಗಿ | ಇಯರ್ತಿ—(ಶತ್ರುವಿಗೆ) ಉಂಟುಮಾಡುತ್ತಾನೆ ||

|| ಭಾವಾರ್ಥ ||

ಶತ್ರುದಮನವನ್ನು ಮಾಡತಕ್ಕ ಶಕ್ತಿಯಿಂದ ತಮೋರೂಪವಾದ ವೃತ್ರಾದಿಗಳನ್ನು ಹಿಂಸಿಸುವವನೂ ಮತ್ತು ರಕ್ಷಣೆಗಾಗಿ ನಿನ್ನಿಂದ ವರ್ಧಿತನಾಗುವವನೂ ಆದ ಇಂದ್ರನನ್ನು ಯಾವಾಗ ದಿವ್ಯವಾದುದೂ, ಪ್ರಕಾಶಮಾನವಾದುದೂ ಆದ ಶಕ್ತಿಯು ಸೂರ್ಯನು ಉಷೋದೇವಿಯನ್ನು ಸೇವಿಸುವಂತೆ ಸೇವಿಸುತ್ತದೆಯೋ ಆಗ ಆ ಇಂದ್ರನು ಶತ್ರುವಿಗೆ ಅಧಿಕವಾದ ನೋವನ್ನುಂಟುಮಾಡಿ ಗಟ್ಟಿಯಾಗಿ ಕೂಗಿಕೊಳ್ಳುವಂತೆ ಮಾಡುತ್ತಾನೆ.



CC-0. Jangamwadi Math Collection. Digitized by eGangotri

## English Translation.

Divine strength waits, like the sun, upon the dawn, upon that Indra, who is made more powerful for protection by you, (his worshipper), who with resolute vigour resists the gloom, and inflicts severe castigation upon his enemies, making them cry aloud (with pain).

॥ ವಿಶೇಷ ವಿಷಯಗಳು ॥

ತ್ವಾವೃಧಾ—ತ್ವಯಾ ವರ್ಧತೇ ಇತಿ ತ್ವಾವೃತ್—ಈ ಪದಕ್ಕೆ ಸ್ತೋತ್ರಮಾಡುವ ನಿನ್ನಿಂದ ವೃದ್ಧಿ ಹೊಂದಲ್ಪಡುವವನು ಎಂದರ್ಥ ಮಾಡಿದ್ದಾರೆ.

ಸಿಷಕ್ತಿ—ಸಮವೈತಿ—ಸೇವತೇ ಇತಿ ಯಾಸ್ಕಃ (ನಿರು. ೩-೨೧) ಷಚ ಸಮವಾಯೇ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಒಟ್ಟುಗೂಡುತ್ತದೆ ಎಂಬರ್ಥ ಕೊಡುವಂತಿದ್ದರೂ, ನಿರುಕ್ತದಲ್ಲಿ ಸೇವಿಸುತ್ತಾನೆ ಎಂಬರ್ಥವನ್ನು ಹೇಳಿರುವರು. ಸಿಷಕ್ತು ಸಚತೇ ಇತಿ ಸೇವಮಾನಸ್ಯ । ಸನಃ ಸಿಷಕ್ತು ಯಸ್ತುರಃ (ಋ. ೦. ೧-೧೮-೨) ಎಂಬ ಋಕ್ಕಿನಲ್ಲಿ ಹೇಳಿರುವಂತೆ ಸಿಷಕ್ತು—ಸಚತೇ ಏತೇ ನಾಮನೀ ಸೇವಮಾನಸ್ಯ ಎಂದು ವಿವರಿಸಿರುವರು.

ಅರ್ಹರಿಷ್ವಣಿಃ—ಗಚ್ಛಂತೋ ಹರಂತೀತಿ ಅರ್ಹರಯಃ ಶತ್ರವಃ । ತೇಷಾಂ ವ್ಯಥೋತ್ಪಾದನೇನ ಸ್ವನಯಿತಾ ಶಬ್ದಯಿತಾ ಇಂದ್ರಃ—ಹೋಗುತ್ತಲೇ ಸರ್ವವನ್ನೂ ಪ್ರತಿಕಕ್ಷಿಯಿಂದ ಕಸಿದುಕೊಂಡು ಹೋಗುವವರು ಶತ್ರುಗಳು. ಅಂತಹ ದ್ರೋಹಿಗಳಿಗೆ ಸರಿಯಾದ ಶಿಕ್ಷೆಮಾಡಿ ಅವರು ವ್ಯಥೆಯಿಂದ ಕೂಗಿಕೊಳ್ಳುವಂತೆ ಮಾಡುವವನಿಗೆ ಅರ್ಹರಿಷ್ವಣಿಃ ಎಂದು ಹೆಸರು.

ರೇಣುಂ—ರೇಷಣಂ-ಹಿಂಸನಂ—ಇಂದ್ರನ ತನ್ನ ಶತ್ರುಗಳಿಗೆ ಹೆಚ್ಚಾದ ಹಿಂಸೆಯನ್ನು ಕೊಡುವನು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

ತ್ವಾವೃಧಾ—ತ್ವಯಾ ವರ್ಧತೇ ಇತಿ ತ್ವಾವೃತ್. ವೃಧು ವರ್ಧನೇ ಧಾತು. ಕ್ವಿಪ್ ಚ ಎಂಬುದರಿಂದ ಕ್ವಿಪ್ ಪ್ರತ್ಯಯ. ಯುಷ್ಮದ್+ವೃಧ್ ಎಂದಿರುವಾಗ ಪ್ರತ್ಯಯೋತ್ತರಪದಯೋಶ್ಚ ಎಂಬುದರಿಂದ ಉತ್ತರಪದವನ್ನು ನಿಮಿತ್ತೀಕರಿಸಿ ಯುಷ್ಮಚ್ಛಬ್ದದ ಪರ್ಯಂತಕ್ಕೆ ತ್ವ ಎಂಬಆದೇಶ. ಶೇಷೇಲೋಪಃ ಸೂತ್ರದಿಂದ ಲೋಪಪ್ರಾಪ್ತವಾದರೆ ಛಾಂದಸವಾಗಿ ಅದಿನ ದಕಾರಕ್ಕೆ ಆಕಾರಾದೇಶ. ತ್ವಾವೃಧ್ ಶಬ್ದವಾಗುತ್ತದೆ. ದ್ವಿತೀಯಾ ಏಕವಚನಪರವಾದಾಗ ಸುಪಾಂ ಸುಲುಕ್ ಸೂತ್ರದಿಂದ ವಿಭಕ್ತಿಗೆ ಆಕಾರಾದೇಶ.

ಸಿಷಕ್ತಿ—ಷಚ ಸಮವಾಯೇ ಧಾತು. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಶ್ಲು ಆದೇಶ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಬಹುಲಂ ಛಂದಸಿ ಎಂಬುದರಿಂದ ಅಭ್ಯಾಸದ ಅಕಾರಕ್ಕೆ ಇತ್ವ. ಚೋಃಕುಃ ಸೂತ್ರದಿಂದ ಧಾತು ಚಕಾರಕ್ಕೆ ಕಕಾರಾದೇಶ. ಯದಿ ಎಂದು ಹಿಂದೆ ಸಂಬಂಧವಿರುವುದರಿಂದ ನಿಪಾತೈರ್ಯದಿ—(ಪಾ. ಸೂ. ೮-೧-೩೦) ಎಂಬು



CC-0. Jangamwadi Math Collection. Digitized by eGangotri

ದರಿಂದ ನಿಘಾತಸ್ವರ ಪ್ರತಿಷೇಧ. ಅನುದಾತ್ತೇಚ (ಪಾ. ಸೂ. ೬-೧-೧೯೦) ಎಂಬುದರಿಂದ ಅಭ್ಯಸ್ತದ ಆದಿಗೆ ಉದಾತ್ತ ಬರುತ್ತದೆ.

ಬಾಧತೇ— ಬಾಧೃ ಲೋಡನೇ. ಲೋಡನಂ ಪ್ರತೀಘಾತಃ ಲಟ್ ಪ್ರಥಮಪುರುಷಏಕವಚನರೂಪ. ಯಃ ಎಂಬುದರ ಸಂಬಂಧವಿರುವುದರಿಂದ ನಿಘಾತಪ್ರತಿಷೇಧ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

ಇಯರ್ತಿ— ಋ ಸೃ ಗತೌ ಧಾತು ಜುಹೋತ್ಯಾದಿ. ಣಿಜರ್ಥವು ಧಾತ್ವರ್ಥಾಂತರ್ಭೂತವಾಗಿದೆ. ಲಟ್ ಪ್ರಥಮಪುರುಷಏಕವಚನದಲ್ಲಿ ತಿಪ್ರತ್ಯಯ. ಜುಹೋತ್ಯಾದಿಭ್ಯಃ ಶ್ಲುಃ ಎಂಬುದರಿಂದ ಶಪಿಗೆ ಶ್ಲುವಿಕರಣ. ಶ್ಲೌ ಸೂತ್ರದಿಂದ ಧಾತುವಿಗೆ ದ್ವಿತ್ವ. ಉರತ್ ಎಂಬುದರಿಂದ ಅಭ್ಯಾಸದ ಋಕಾರಕ್ಕೆ ಅತ್ವ. ರಪರವಾಗಿ ಬರುವುದರಿಂದ ಹಲಾದಿಶೇಷ. ಅರ್ತಿಪಿಪರ್ತ್ಯೋಶ್ಚ (ಪಾ. ಸೂ. ೭-೪-೭೭) ಎಂಬುದರಿಂದ ಅಭ್ಯಾಸಕ್ಕೆ ಇತ್ವ. ಇ ಋ+ತಿ ಎಂದಿರುವಾಗ ಅಭ್ಯಾಸಸ್ಯಾಸವರ್ಣೇ (ಪಾ. ಸೂ. ೬-೪-೭೮) ಎಂಬುದರಿಂದ ಅಸವರ್ಣ ಅಚ್ ಪರದಲ್ಲಿರುವುದರಿಂದ ಇಕಾರಕ್ಕೆ ಇಯಙಾದೇಶ. ಧಾತು ಋಕಾರಕ್ಕೆ ಸಾರ್ವಧಾತುಕನಿಮಿತ್ತವಾಗಿ ಗುಣ. ಇಯರ್ತಿ ಎಂದು ರೂಪವಾಗುತ್ತದೆ. ಅನುದಾತ್ತೇಚ ಎಂಬುದರಿಂದ ಅಭ್ಯಾಸಕ್ಕೆ ಆದ್ಯುದಾತ್ತಸ್ವರ ಬರುತ್ತದೆ. ಪೂರ್ವಪದವು ವಾಕ್ಯಾಂತರದಲ್ಲಿ ಸಂಬದ್ಧವಾದುದರಿಂದ ಪದದಪರದಲ್ಲಿ ಬಾರದಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ರೇಣುಮ್— ರೀ ಗತಿರೇಷಣಯೋಃ ಧಾತು. ಇದಕ್ಕೆ ಔಣಾದಿಕವಾದ ನು ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ಅಟ್‌ಕುಪ್ವಾಙ್— ಸೂತ್ರದಿಂದ ಪ್ರತ್ಯಯಕ್ಕೆ ಣತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತ.

ಅರ್ಹರಿಷ್ವಣಿಃ— ಋ ಗತೌ ಧಾತು. ಅನ್ಯೇಭ್ಯೋಽಪಿದೃಶ್ಯಂತೇ ಎಂಬುದರಿಂದ ವಿಚ್ ಪ್ರತ್ಯಯ. ಧಾತುವಿಗೆ ತನ್ನಿಮಿತ್ತವಾಗಿ ಗುಣ. ಅರ್ ಶಬ್ದವಾಗುತ್ತದೆ. ಅರಃ ಗಚ್ಛಂತಶ್ಚೇನೋ ಹರಯಶ್ಚ ಇತಿ ಅರ್ಹರಯಃ. ತೇಷಾಂ ಸ್ವನಯಿತಾ. ಸ್ಯಮು ಸ್ವನ ಧ್ವನ ಶಬ್ದೇ ಧಾತು. ಈ ಧಾತುವಿಗೆ ಹೇತುಮತಿಚ ಸೂತ್ರದಿಂದ ಪ್ರೇರಣಾವ್ಯಾಪಾರತೋರುವುದರಿಂದ ಣಿಚ್. ಣಿಜಂತದಮೇಲೆ ಔಣಾದಿಕವಾದ ಇನ್ ಪ್ರತ್ಯಯ. ಣೇರನಿಟಿ (ಪಾ. ಸೂ. ೬-೪-೫೧) ಎಂಬುದರಿಂದ ಣಿಚಿಗೆ ಲೋಪ. ಇದು ಘಟಾದಿಯಲ್ಲಿ ಸೇರಿರುವುದರಿಂದ ಘಟಾದಯೋಮಿತಃ ಎಂಬುದರಿಂದ ಮಿತ್ ಸಂಜ್ಞೆಯನ್ನು ಹೊಂದುತ್ತದೆ. ಆಗ ಣಿಚ್ ನಿಮಿತ್ತವಾಗಿ ಬಂದ ಉಪಧಾವೃದ್ಧಿಗೆ (ಆಕಾರಕ್ಕೆ) ಮಿತಾಂಹ್ರಸ್ವಃ (ಪಾ. ಸೂ. ೬-೪-೯೨) ಎಂಬುದರಿಂದ ಹ್ರಸ್ವ. ಅರ್ಹರಿಸ್ವನಿ ಎಂದಿರುವಾಗ ಧಾತುಸಕಾರಕ್ಕೆ ಮೂರ್ಧನ್ಯಾದೇಶ. ತನ್ನಿಮಿತ್ತವಾಗಿ ನಕಾರಕ್ಕೆ ಣತ್ವ. ಸ್ವನಿ ಎಂಬುದು ನಾಂತಪ್ರತ್ಯಯವಾದುದರಿಂದ ಆದ್ಯುದಾತ್ತವಾಗುತ್ತದೆ. ಸಮಾಸವಾದಾಗ ಅರ್ಹರಿ ಎಂಬುದು ಕಾರಕಪೂರ್ವಪದವಾದುದರಿಂದ ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.





CC-0. Jangamwadi Math Collection. Digitized by eGangotri

|| ಸಂಹಿತಾಪಾಠಃ ||

ವಿ ಯತ್ತಿರೋ ಧರುಣಮಚ್ಯುತಂ ರಜೋಽತಿಷ್ಠಿಪೋ ದಿವ ಆತಾಸು ಬ-
ರ್ಹಣಾ |
ಸ್ವರ್ಮೀಳ್ಹೇ ಯನ್ಮದ ಇಂದ್ರ ಹರ್ಷ್ಯಾಹನ್ವೃತ್ರಂ ನಿರಪಾಮೌಬ್ಜೋ
ಅರ್ಣವಂ || ೫ ||

|| ಪದಪಾಠಃ ||

ವಿ | ಯತ್ | ತಿರಃ | ಧರುಣಂ | ಅಚ್ಯುತಂ | ರಜಃ | ಅತಿಷ್ಠಿಪಃ | ದಿವಃ | ಆ-
ತಾಸು | ಬರ್ಹಣಾ |
ಸ್ವಃಽಮೀಳ್ಹೇ | ಯತ್ | ಮದೇ | ಇಂದ್ರ | ಹರ್ಷ್ಯಾ | ಅಹನ್ | ವೃತ್ರಂ | ನಿಃ |
ಅಪಾಂ | ಔಬ್ಜಃ | ಅರ್ಣವಂ || ೫ ||

|| ಸಾಯಣಭಾಷ್ಯಂ ||

ಯದ್ಯದಾ ತಿರೋ ವೃತ್ರೇಣ ತಿರೋಹಿತಂ ಧರುಣಂ ಸರ್ವಸ್ಯ ಪ್ರಾಣಿಜಾತಸ್ಯ ಧಾರಕಮ-ಚ್ಯುತಂ ವಿನಾಶರಹಿತಂ ರಜ ಉದಕಂ ದಿವೋ ದ್ಯುಲೋಕಾದಾತಾಸು | ಆತಾ ಇತಿ ದಿಙ್ನಾಮ | ಆತಾಸು ವಿಸ್ತೃತಾಸು ದಿಕ್ಷು ಹೇ ಇಂದ್ರ ಬರ್ಹಣಾ ಹಂತಾ ತ್ವಂ ವ್ಯತಿಷ್ಠಿಪೋ ವಿವಿಧಂ ಸ್ಥಾಪಯಾಂ ಚಕೃಷೇ | ತಥಾ ಯದ್ಯದಾ ಸ್ವರ್ಮೀಳ್ಹೇ | ಮೀಳ್ಹಮಿತಿ ಧನನಾಮ | ಸ್ವಃ ಸುಷ್ಠು ಗಂತವ್ಯಂ ಮೀಳ್ಹಂ ಧನಂ ಯಸ್ಮಿನ್ ತಸ್ಮಿನ್ಸಂಗ್ರಾಮೇ ಮದೇ ತವ ಸೋಮಪಾನೇನ ಹರ್ಷೇ ಸತಿ ಹರ್ಷ್ಯಾ ಹೃಷ್ಟಯಾ ಶಕ್ತ್ಯಾ ವೃತ್ರಮಾವರಕಮಸುರಮಹನ್ ತ್ವಮವಧೀಃ | ತದಾನೀಮಪಾಂ ಪೂರ್ಣಮರ್ಣವಂ ಮೇಘಂ ನಿರೌಬ್ಜಃ | ವರ್ಷಣಾಭಿಮುಖಮಧೋಮುಖಮಕಾರ್ಷೀಃ | ವೃಷ್ಟೇರಾವರಕಂ ವೃತ್ರಂ ಹತ್ವಾ ವೃಷ್ಟಿ-ಜಲೇನ ಭೂಮಿಂ ನ್ಯಸ್ಯೈಕ್ಷೇರಿತಿ ತಾತ್ಪರ್ಯಾರ್ಥಃ || ಅತಿಷ್ಠಿಪಃ | ತಿಷ್ಠತೇರ್ಣ್ಯಂತಾಲ್ಲುಙಿ ಚ್ಲೇಶ್ಚಙಾ-ದೇಶಃ | ಣಿಲೋಪಃ | ತಿಷ್ಠತೇರಿತ್ | ಪಾ. ೭-೪-೫ | ಇತ್ಯುಪಧಾಯಾ ಇತ್ವಂ | ಚಙಿ ಪಾ. ೬-೧-೧೧ | ಇತಿ ದ್ವಿರ್ವಚನೇ ಶರ್ಪೂರ್ವಾಃ ಖಯ ಇತಿ ಥಕಾರಃ ಶಿಷ್ಯತೇ | ಚರ್ತ್ವೇನ ತಕಾರಃ | ಅಡಾಗಮ ಉದಾತ್ತಃ | ಯದ್ವೃತ್ತಯೋಗಾದನಿಘಾತಃ | ಬರ್ಹಣಾ | ಸುಪಾಂ ಸುಲುಗಿತಿ ಸೋರಾಕಾರಃ | ಸ್ವರ್ಮೀಳ್ಹೇ | ಮಿಹ ಸೇಚನೇ | ನಿಷ್ಠಾ | ಹೋ ಢಃ | ಪಾ. ೮-೨-೩೧ | ಇತಿ ಢತ್ವಂ | ಝಷಸ್ತಥೋ-

ರ್ಘೋಢಧ ಇತಿ ತಕಾರಸ್ಯ ಧತ್ವಂ । ತಸ್ಯ ಷ್ಟುತ್ವೇ ಢೋ ಢೇ ಲೋಪಃ । ಪಾ. ೮-೩-೧೩ । ಇತಿ ಢಲೋಪಃ । ಢ್ರಲೋಪೇ ಪೂರ್ವಸ್ಯ । ಪಾ. ೬-೩-೧೧೧ । ಇತಿ ದೀರ್ಘತ್ವಂ । ಸ್ವಂತ್ಯೇತತ್ ಸ್ವಜ್ಸ್ವರಾ ಸ್ವರಿತಾವಿತಿ ಸ್ವರ್ಯತೇ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇನ ತದೇವ ಶಿಷ್ಯತೇ । ಅಹನ್ । ಹಂತೇರ್ಲಙಿ ಮಧ್ಯಮೈಕವಚನೇ ಹಲ್ಙ್ಯಾಭ್ಯ ಇತಿ ಸೇರ್ಲೋಪಃ । ಯದ್ವೃತ್ತಯೋಗಾದನಿಘಾತಃ । ಔಬ್ಜಃ । ಉಬ್ಜ ಆರ್ಜವೇ । ಅಜ್ಯಾಡಾಗಮೋ ವೃದ್ಧಿಶ್ಚ ॥

॥ ಪ್ರತಿಪದಾರ್ಥ ॥

ಬರ್ಹಣಾ—(ಶತ್ರು) ಹಂತಕನಾದ । ಇಂದ್ರ—ಇಂದ್ರನೇ । ಯತ್—ಯಾವಾಗ । ತಿರಃ—ವೃತ್ರನಿಂದ ಮರೆಸಲ್ಪಟ್ಟ । ಧರುಣಂ—(ಸಕಲ ಪ್ರಾಣಿಗಳಿಗೂ) ಜೀವಾತುವಾಗಿರುವುದೂ । ಅಚ್ಯುತಂ—ನಾಶರಹಿತವಾಗಿರುವುದೂ ಆದ । ರಜಃ—ನೀರನ್ನು । ದಿವಃ—ದ್ಯುಲೋಕದಿಂದ । ಆತಾಸು—ವಿಸ್ತಾರವಾದ ನಾನಾ ದಿಕ್ಕುಗಳಲ್ಲಿ । ವಿ ಅತಿಷ್ಠಿಪಃ—ನಾನಾ ಕಡೆಯೂ ಹರಡಿ ಸ್ಥಾಪಿಸಿದೆಯೋ (ಹಾಗೆಯೇ) । ಯತ್—ಯಾವಾಗ । ಸ್ವರ್ಮೀಳ್ಹೇ—ಹೆಚ್ಚು ಧನವನ್ನು ಹೊಂದಲು ನಡೆಸಿದ ಸಂಗ್ರಾಮದಲ್ಲಿ । ಮದೇ—(ಸೋಮಪಾನದಿಂದ) ನಿನಗೆ ಹರ್ಷವಾದಾಗ । ಹರ್ಷ್ಯಾ—ಹರ್ಷಪೂರಿತವಾದ ಶಕ್ತಿಯಿಂದ । ವೃತ್ರಂ—(ಎಲ್ಲವನ್ನೂ ಮರೆಸಿದ) ವೃತ್ರನನ್ನು । ಅಹನ್—ಕೊಂದೆಯೋ (ಆಗ) । ಅಪಾಂ—ನೀರಿನಿಂದ ತುಂಬಿದ । ಅರ್ಣವಂ—ಸಮುದ್ರದಂತಿರುವ ಮೇಘವನ್ನು । ನಿಃ ಔಬ್ಜಃ—ಕೆಳಕ್ಕೆ ಕಳುಹಿಸಿ ಮಳೆಯನ್ನು ಬರಮಾಡಿದೆ.

॥ ಭಾವಾರ್ಥ ॥

ಶತ್ರುಹಂತಕನಾದ ಎಲೈ ಇಂದ್ರನೇ, ಯಾವಾಗ ನೀನು ಲೋಕಕ್ಕೆ ಜೀವಾತುವಾಗಿರುವುದೂ, ನಾಶರಹಿತವಾಗಿರುವುದೂ ಆದ ನೀರನ್ನು ವೃತ್ರನ ಮರೆಯಿಂದ ಬಿಡಿಸಿ ದ್ಯುಲೋಕದಿಂದ ವಿಸ್ತಾರವಾದ ನಾನಾ ದಿಕ್ಕುಗಳಲ್ಲಿಯೂ ಬಿದ್ದು ಎಲ್ಲೆಲ್ಲಿಯೂ ಹರಡಿಸಿದೆಯೋ ಮತ್ತು ಯಾವಾಗ ಧನಾರ್ಥವಾದ ಸಂಗ್ರಾಮದಲ್ಲಿ ನೀನು ಸೋಮಪಾನ ಮಾಡಿ ನಿನ್ನ ಹರ್ಷಪೂರಿತವಾದ ಶಕ್ತಿಯಿಂದ ವೃತ್ರನನ್ನು ಕೊಂದೆಯೋ, ಆಗ ಮೇಘದಿಂದ ನೀರನ್ನು ಸುರಿಸಿ ನೀರಿನ ಸಮುದ್ರವನ್ನುಂಟುಮಾಡಿದೆ.

## English Translation.

When you, destroying India, distributed the hidden, life-sustaining, undecaying waters through the different quarters of the heaven, then, animated (by the Soma-juice) you engaged in battle, and with exulting (prowess) slew Vritra and sent down an ocean of waters.

॥ ವಿಶೇಷ ವಿಷಯಗಳು ॥

ತಿರಃ—ಇದು ಜಲಶಬ್ದವಾಚಕವಾದ ರಜಶ್ಶಬ್ದಕ್ಕೆ ವಿಶೇಷಣ, ವೃತ್ರಾಸುರನಿಂದ ಆಚ್ಛಾದಿತವಾದದ್ದು ಎಂದು ಇದರ ಅರ್ಥ.



CC-0. Jangamwadi Math Collection. Digitized by eGangotri

ಆಶಾಸು—ನಿರುಕ್ತದಲ್ಲಿ ಆಶಾಃ, ಆಶಾಃ ಎಂಬುದಾಗಿ ಎಂಟು ಪದಗಳನ್ನು ದಿಗ್ವಾಚಕಗಳಾಗಿ ಹೇಳಿರುವರು. ವಿಶಾಲವಾದ ದಿಕ್ಕುಗಳಲ್ಲಿ ಎಂದರ್ಥ.

ಸ್ವಮೀಳ್ಹೇ—ಮೀಳ್ಹಂ ಇತಿ ಧನನಾಮ | ಸ್ವಃ ಸುಷ್ಠು ಗಂತವ್ಯಂ ಮೀಳ್ಹಂ ಧನಂ ಯಸ್ಮಿನ್ ತಸ್ಮಿನ್ ಸಂಗ್ರಾಮೇ—ದ್ರವ್ಯವನ್ನು ಸಂಪಾದಿಸುವಂತಹ ಯುದ್ಧ ಎಂದರ್ಥ. ಮೀಳ್ಹಶಬ್ದವು ನಿರುಕ್ತದಲ್ಲಿ ಧನಪರ್ಯಾಯಪದವಾಗಿ ಪಠಿತವಾಗಿದೆ.

ಔಬ್ಜಃ—ವರ್ಷಣಾಭಿಮುಖಮಧೋಮುಖಮಕಾರ್ಷೀಃ—ವೃಷ್ಟಿಗೆ ಪ್ರತಿಬಂಧಕನಾಗಿದ್ದ ವೃತ್ರಾಸುರನನ್ನು ಕೊಂದು ಮಳೆಯನ್ನು ಅಧೋಮುಖವಾಗಿ ಮಾಡಿ ಅಂದರೆ ಭೂಮಿಗೆ ಮಳೆಯನ್ನು ಕರೆಸಿ ಭೂಲೋಕವನ್ನು ಉಳಿಸಿದೆ ಎಂಬುದು ಇಲ್ಲಿಯ ತಾತ್ಪರ್ಯಾರ್ಥ.

|| ವ್ಯಾಕರಣಪ್ರಕ್ರಿಯಾ ||

ಅತಿಷ್ಠಿಪಃ—ಷ್ಠಾ ಗತಿನಿವೃತ್ತೌ ಧಾತು. ಪ್ರೇರಣಾ ತೋರುವುದರಿಂದ ಹೇತುಮತಿಚ ಎಂಬುದರಿಂದ ಣಿಚ್. ಧಾತುವಿನ ಆದಿಗೆ ಸಕಾರಾದೇಶ. ಆದಂತವಾದುದರಿಂದ ಣಿಚ್ ಪರವಾದಾಗ ಅರ್ತಿಹ್ರೀ—(ಪಾ. ಸೂ. ೭-೩-೩೬) ಎಂಬುದರಿಂದ ಧಾತುವಿಗೆ ಪುಗಾಗಮ. ಣಿಜಂತದ ಮೇಲೆ ಲುಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಸೂತ್ರದಿಂದ ಅದರ ಇಕಾರಕ್ಕೆ ಲೋಪ. ಚ್ಲಿ ಪ್ರಾಪ್ತವಾದಾಗ ಣಿಶ್ರಿದ್ರುಸ್ರು—(ಪಾ. ಸೂ. ೩-೧-೪೮) ಎಂಬುದರಿಂದ ಚ್ಲಿಗೆ ಚಙಾದೇಶ. ಣೇರನಿಟಿ ಸೂತ್ರದಿಂದ ಚಙ್‌ನಿಮಿತ್ತವಾಗಿ ಣಿಚಿಗೆ ಲೋಪ. ಚಙಿ (ಪಾ. ಸೂ. ೬-೧-೧೧) ಸೂತ್ರದಿಂದ ಧಾತುವಿಗೆ ದ್ವಿತ್ವ. ಹ್ರಸ್ವಃ ಸೂತ್ರದಿಂದ ಅಭ್ಯಾಸಕ್ಕೆ ಹ್ರಸ್ವ. ಶರ್ಪೂರ್ವಾಃ ಖಯಃ (ಪಾ. ಸೂ. ೭-೪-೬೧) ಎಂಬುದರಿಂದ ಅಭ್ಯಾಸದಲ್ಲಿ ಥಕಾರ ಉಳಿಯುತ್ತದೆ. ತಿಷ್ಠತೇರಿತ್ (ಪಾ. ಸೂ. ೭-೪-೫) ಎಂಬುದರಿಂದ ಣಿಚ್ ಪರವಾದಾಗ ಧಾತುವಿನ ಉಪಧೆಗೆ ಇತ್ವ ಬರುವುದರಿಂದ ಸ್ಥಿಪ್ ಶಬ್ದಕ್ಕೆ ದ್ವಿತ್ವ. ಅಭ್ಯಾಸದಲ್ಲಿ ಥಿ ಎಂದು ಉಳಿದಿರುವಾಗ ಅಭ್ಯಾಸೇ ಚರ್ಚ ಎಂಬುದರಿಂದ ಅದಕ್ಕೆ ತಕಾರಾದೇಶ. ಅಲ್ಲಿರುವ ಇಕಾರವನ್ನು ನಿಮಿತ್ತೀಕರಿಸಿ . ಧಾತುಸಕಾರಕ್ಕೆ ಮೂರ್ಧನ್ಯಾದೇಶ (ಷತ್ವ) ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ಅಂಗಕ್ಕೆ ಅಡಾಗಮ. ಅತಿಷ್ಠಿಪಃ ಎಂದು ರೂಪವಾಗುತ್ತದೆ. ಯತ್ ಎಂದು ಹಿಂದೆ ಇರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

ಬರ್ಹಣಾ—ಸುಪಾಂ ಸುಲುಕ್—ಸೂತ್ರದಿಂದ ಸುವಿಗೆ ಆಕಾರಾದೇಶ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

ಸ್ವಮೀರ್ಳ್ಹೇ—ಮಿಹ ಸೇಚನೇ ಧಾತು. ಕರ್ಮಣಿಯಲ್ಲಿ ಕ್ತ ಪ್ರತ್ಯಯ. ಮಿಹ್+ತ ಎಂದಿರುವಾಗ ಹೋ ಢಃ (ಪಾ. ಸೂ. ೮-೨-೩೧) ಎಂಬುದರಿಂದ ಝಲ್ ಪರದಲ್ಲಿರುವುದರಿಂದ ಹಕಾರಕ್ಕೆ ಢಕಾರಾದೇಶ. ಝಷಸ್ತಥೋರ್ಧೋಽಧಃ (ಪಾ. ಸೂ. ೮-೨-೪೦) ಎಂಬುದರಿಂದ ತಕಾರಕ್ಕೆ ಧಕಾರಾದೇಶ. ಢಕಾರ ಸಂಬಂಧವಿರುವುದರಿಂದ ಷ್ಟುನಾಷ್ಟುಃ ಸೂತ್ರದಿಂದ ಅದಕ್ಕೆ ಷ್ಟುತ್ವದಿಂದ ಢಕಾರಾದೇಶ. ಆಗ ಢೋಢೇಲೋಪಃ (ಪಾ. ಸೂ. ೮-೩-೧೩) ಎಂಬುದರಿಂದ ಪೂರ್ವ ಢಕಾರಕ್ಕೆ ಲೋಪ. ಢಲೋಪಕ್ಕೆ ನಿಮಿತ್ತವಾದುದು (ಢಕಾರ) ಪರದಲ್ಲಿರುವಾಗ ಢ್ರಲೋಪೇ ಪೂರ್ವಸ್ಯ (ಪಾ. ಸೂ. ೬-೩-೧೧೧) ಎಂಬುದರಿಂದ ಪೂರ್ವದಲ್ಲಿರುವ ಅಣಿಗೆ



CC-0. Jangamwadi Math Collection. Digitized by eGangotri

ದೀರ್ಘ. ಸ್ವಃ ಸುಷ್ಠು ಗಂತವ್ಯಂ ವೀಳ್ಹಂ ಧನಂ ಯಸ್ಮಿನ್ ಸಃ ಸ್ವವೀರ್ಳ್ಹಃ ತಸ್ಮಿನ್. ಸ್ವರ್ ಎಂಬುದು ಸ್ವಜ್‌ಸ್ವರೌ ಸ್ವರಿತೌ (ಫಿ. ಸೂ. ೭೪) ಎಂಬುದರಿಂದ ಸ್ವರಿತವಾಗುತ್ತದೆ. ಹಿಂದೆ ಹೇಳಿದಂತೆ ಬಹುವ್ರೀಹಿ ಸಮಾಸದಲ್ಲಿ ಬಹುವ್ರೀಹೌಪ್ರಕೃತ್ಯಾಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುವುದರಿಂದ ಸ್ವರಿತವೇ ಉಳಿಯುತ್ತದೆ. ಸಪ್ತಮೀ ಏಕವಚನಾಂತರೂಪ.

ಅಹನ್—ಹನ ಹಿಂಸಾಗತ್ಯೋಃ ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಅದಿಪ್ರಭೃತಿಭ್ಯಃ ಶಪಃ ಸೂತ್ರದಿಂದ ಶಪಿಗೆ ಲುಕ್. ಹಲ್-ಙ್ಯಾಭ್ಯೋ ಸೂತ್ರದಿಂದ ಸಿಪಿಗೆ ಲೋಪ. ಅಂಗಕ್ಕೆ ಅಡಾಗಮ. ಯದ್ವೃತ್ತಾನ್ನಿತ್ಯಂ ಎಂಬುದರಿಂದ ಹಿಂದೆ ಯತ್ ಎಂದಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತ ವಾಗುತ್ತದೆ.

ಔಬ್ಜಃ—ಉಬ್ಜ ಆರ್ಜವೇ ಧಾತು. ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಇಕಾರ ಲೋಪ ಕರ್ತರಿಶಪ್ ಎಂಬುದರಿಂದ ಶಪ್ ವಿಕರಣ. ಆಡಜಾದೀನಾಂ ಎಂಬುದರಿಂದ ಅಂಗಕ್ಕೆ ಆಡಾಗಮ. ಆಟಶ್ಚ ಎಂಬುದರಿಂದ ವೃದ್ಧಿ. ಪ್ರತ್ಯಯಸಕಾರಕ್ಕೆ ರುತ್ವವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತ್ವಂ ದಿವೋ ಧರುಣಂ ಧಿಷ ಓಜಸಾ ಪೃಥಿವ್ಯಾ ಇಂದ್ರ ಸದನೇಷು ಮಾ-
ಹಿನಃ ।
ತ್ವಂ ಸುತಸ್ಯ ಮದೇ ಅರಿಣಾ ಅಪೋ ವಿ ವೃತ್ರಸ್ಯ ಸಮಯಾ ಪಾಷ್ಯಾ-
ರುಜಃ ॥ ೬ ॥

॥ ಭಾವಾರ್ಥ ॥

ತ್ವಂ । ದಿವಃ । ಧರುಣಂ । ಧಿಷೇ । ಓಜಸಾ । ಪೃಥಿವ್ಯಾಃ । ಇಂದ್ರ । ಸದನೇಷು ।
ಮಾಹಿನಃ ।
ತ್ವಂ । ಸುತಸ್ಯ । ಮದೇ । ಅರಿಣಾಃ । ಅಪಃ । ವಿ । ವೃತ್ರಸ್ಯ । ಸಮಯಾ ।
ಪಾಷ್ಯಾ । ಅರುಜಃ ॥ ೬ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯ ||

ಹೇ ಇಂದ್ರ ಮಾಹಿನಃ ಪ್ರವೃದ್ಧಸ್ತ್ವಂ ದಿವೋ ದ್ಯುಲೋಕಾತ್ಪೃಥಿವ್ಯಾಃ ಸದನೇಷು ಪ್ರದೇಶೇ. ಷ್ವೋಜಸಾ ಬಲೇನ ಧರುಣಂ ಸರ್ವಸ್ಯ ಜಗತೋ ಧಾರಕಂ ವೃಷ್ಟಿಜಲಂ ಧಿಷೇ | ದಧಿಷೇ | ಸ್ಥಾಪಯಸಿ | ಯಸ್ಮಾತ್ತ್ವಂ ಸುತಸ್ಯ ಸೋಮಸ್ಯ ಪಾನೇನ ಮದೇ ಹರ್ಷೇ ಸತ್ಯಪೋ ಜಲಾನ್ಯರಿಣಾ ಮೇಘಾನ್ನಿರಗ. ಮಯಃ ವೃತ್ರಸ್ಯಾವರಕಂ ವೃತ್ರಂ ಚ ಸಮಯಾ ಧೃಷ್ಟಯಾ ಪಾಷ್ಯಾ ಶಿಲಯಾ ಯದ್ವಾ ಶಕ್ತ್ಯಾ ವ್ಯರುಜೋ ವಿಶೇಷೇಣಾಭಾಂಕ್ಷೀಃ || ಧಿಷೇ | ದಧಾತೇಶ್ಛಾಂದಸೋ ವರ್ತಮಾನೇ ಲಿಟ್ | ದ್ವಿರ್ವಚನ. ಪ್ರಕರಣೇ ಛಂದಸಿ ವೇತಿ ವಕ್ತವ್ಯಂ | ಕಂ. ೬-೧-೮-೧ | ಇತಿ ವಚನಾದ್ದ್ವಿರ್ವಚನಾಭಾವಃ | ಕ್ರಾದಿ. ನಿಯಮಾದಿಡಾಗಮ ಆತೋ ಲೋಪ ಇಟಿ ಚೇತ್ಯಾಕಾರಲೋಪಃ | ಮಾಹಿನಃ | ಮಹೇರಿನಣ್ ಚ | ಉ. ೨-೫೬ | ಇತಿ ಮಹ ಪೂಜಾಯಾಮಿತ್ಯಸ್ಮಾದೌಣಾದಿಕ ಇನಣ್ಪ್ರತ್ಯಯಃ | ಅತ ಉಪಧಾಯಾ ಇತಿ ವೃದ್ಧಿಃ | ಅರಿಣಾಃ | ರೀ ಗತಿರೇಷಣಯೋಃ ಕ್ರ್ಯಾದಿಕಃ | ಲಙ ಸಿಪಿ ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ | ಸಮಯಾ | ಷಮಷ್ಟಮ ವೈಕ್ಲವ್ಯೇ | ಸಮತೀತಿ ಸಮಾ | ಪಚಾದ್ಯಚ್ | ಚಿತ ಇತ್ಯಂತೋ. ದಾತ್ತತ್ವಂ | ಪಾಷ್ಯಾ | ಪಿಷ್ಲೃ ಸಂಚೂರ್ಣನ ಇತ್ಯಸ್ಮಾದೌಣಾದಿಕ ಇನ್ಪ್ರತ್ಯಯಃ | ಬಹುಲವಚನಾ. ದುಪಧಾಯಾ ಆಕಾರಃ | ಕೃದಿಕಾರಾದಕ್ತಿನಃ | ಪಾ. ೪-೧-೪೫ | ಇತಿ ಙೀಷ್ | ಪ್ರತ್ಯಯಸ್ವರೇಣಾಂ. ತೋದಾತ್ತಃ | ತೃತೀಯೈಕವಚನೇ ಯಣಾದೇಶೇ ಸತ್ಯುದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ | ಅರುಜಃ | ರುಜೋ ಭಂಗೇ | ತೌದಾದಿಕಃ | ಶಸ್ಯ ಙಿತ್ತ್ವಾದ್ಗುಣಾಭಾವಃ ||

|| ಪ್ರತಿಪದಾರ್ಥ ||

ಇಂದ್ರ— ಎಲೈ ಇಂದ್ರನೇ | ಮಾಹಿನಃ—ಅದ್ಭುತನಾದ (ಪೂಜ್ಯನಾದ) | ತ್ವಂ—ನೀನು | ದಿವಃ— ದ್ಯುಲೋಕದಿಂದ | ಪೃಥಿವ್ಯಾಃ—ಭೂಮಿಯ | ಸದನೇಷು—(ನಾನಾ) ಪ್ರದೇಶಗಳಲ್ಲಿ | ಓಜಸಾ—(ನಿನ್ನ) ಶಕ್ತಿಯಿಂದ | ಧರುಣಂ—(ಸಕಲ ಜಗತ್ತಿಗೂ) ಧಾರಕವಾದ ನೀರನ್ನು (ಜೀವಾತುವಾದ) | ಧಿಷೇ—ಸ್ಥಾಪಿಸು ತ್ತೀಯೆ. | ತ್ವಂ—ನೀನು | ಸುತಸ್ಯ—ಸೋಮರಸದ (ಪಾನದಿಂದ) | ಮದೇ—ಸಂತೋಷವುಂಟಾದಾಗ | ಅಪಃ—ನೀರುಗಳನ್ನು | ಅರಿಣಾಃ—(ಮೇಘಗಳಿಂದ) ಹೊರಡಿಸಿದೆ | ವೃತ್ರಸ್ಯ—ವೃತ್ರನನ್ನು | ಸಮಯಾ— ಕಠಿಣವಾದ (ಘನೀಭೂತವಾದ) | ಪಾಷ್ಯಾ—ಶಿಲೆಯಿಂದ ಅಥವಾ ಶಕ್ತಿಯಿಂದ | ವಿ ಅರುಜಃ—ಚೆನ್ನಾಗಿ ಧ್ವಂಸಮಾಡಿದೆ.

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಅದ್ಭುತವಾದ ಶಕ್ತಿಯಿಂದ ನೀನು ದ್ಯುಲೋಕದಿಂದ ಭೂಮಿಯ ನಾನಾಪ್ರದೇಶ ಗಳಲ್ಲಿ ಸಕಲ ಜಗತ್ತಿಗೂ ಜೀವಾತುವಾದ ಮಳೆಯ ನೀರನ್ನು ಸುರಿಸಿ ಸ್ಥಾಪಿಸುತ್ತೀಯೆ. ಸೋಮರಸದ ಪಾನ ದಿಂದ ನಿನಗೆ ಸಂತೋಷವುಂಟಾದಾಗ ಮೇಘಗಳಿಂದ ನೀರನ್ನು ಹೊರಡಿಸಿದೆ. ಮತ್ತು ವೃತ್ರನನ್ನು ಕಠಿಣವಾದ ಶಿಲೆಯಿಂದ ಹೊಡೆದು ಧ್ವಂಸಮಾಡಿದೆ.

## English Translation.

O mighty Indra, you sent down from heaven, by your power, upon the realms of earth, the world-sustaining rain; exhilarated by the (soma-juice) you have expelled the waters (from the clouds) and have crushed Vritra by a solid rock.



CC-0. Jangamwadi Math Collection. Digitized by eGangotri

### ವಿಶೇಷ ವಿಷಯಗಳು

**ಮಾಹಿನಃ**—ಮಹ ಪೂಜಾಯಾಂ ಎಂಬ ಧಾತುವಿನಿಂದ ನಿಷ್ಪನ್ನವಾದ ಶಬ್ದ ಇದು. ಅಭಿವೃದ್ಧಿ ಹೊಂದುವವನು, ಅಥವಾ ಪೂಜ್ಯನು ಎಂಬರ್ಥದಲ್ಲಿ ಇದು ಇಂದ್ರ ಶಬ್ದಕ್ಕೆ ವಿಶೇಷಣವಾಗಿರುವುದು.

**ಧರುಣಂ**—ಸರ್ವಸ್ಯ ಜಗತೋ ಧಾರಕಂ ವೃಷ್ಟಿಜಲಂ—ಸಮಸ್ತ ಜಗತ್ತಿಗೂ ಆಧಾರಭೂತವಾದ ವೃಷ್ಟಿಯ ಜಲ ಎಂದು ಇಲ್ಲಿಯ ವಿಶೇಷಾರ್ಥ.

**ಸಮಯೋ**—ಸಮಮಿತಿ ಸಮಾ ಷಮ-ಷ್ಟಮ-ಅವೈಕಲ್ಯೇ ಎಂಬ ಧಾತುವಿನಿಂದ ಈ ಶಬ್ದವು ನಿಷ್ಪನ್ನವಾಗಿದೆ. ಸ್ಥಿರವಾದ ಅಥವಾ ಪ್ರಬಲವಾದ ಎಂಬುದು ಇದರ ಅರ್ಥ.

**ಪಾಷ್ಯಾ**—ಈ ಶಬ್ದಕ್ಕೆ ಕಲ್ಲು ಅಥವಾ ಶಕ್ತಿ ಎಂಬ ಎರಡರ್ಥವೂ ಉಂಟು.

**ವಿ ಆರುಜಃ**—ವಿಶೇಷವಾದ ರೀತಿಯಲ್ಲಿ ನಾಶಮಾಡಿದೆಯಲ್ಲವೇ. ರುಜ-ಭಂಗೇ ಎಂಬ ಧಾತುವಿನ ಕ್ರಿಯಾರೂಪ ಇದು.

### ವ್ಯಾಕರಣಪ್ರಕ್ರಿಯಾ

**ದಿವಃ**—ಊಡಿದಂಪದಾದಿ ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಧಿಷೇ**—ಡುಧಾಞ್ ಧಾರಣಪೋಷಣಯೋಃ ಧಾತು. ಛಂದಸಿಲುಙ್ಲಙ್ಲಿಟಃ ಎಂಬುದರಿಂದ ವರ್ತಮಾನಾರ್ಥದಲ್ಲಿ ಲಿಟ್. ಮಧ್ಯಮಪುರುಷ ಏಕವಚನದಲ್ಲಿ ಥಾಸ್ ಪ್ರತ್ಯಯ. ಥಾಸಃಸೇ ಸೂತ್ರದಿಂದ ಅದಕ್ಕೆ ಸೇ ಆದೇಶ. ದ್ವಿರ್ವಚನಪ್ರಕರಣೇ ಛಂದಸಿ ವೇತಿ ವಕ್ತವ್ಯಮ್ (ಪಾ. ೬-೧-೮-೧) ಎಂಬ ವಚನದಿಂದ ಲಿಣ್ನಿಮಿತ್ತವಾದ ದ್ವಿತ್ವ ಬರುವುದಿಲ್ಲ. ಕೃಸೃಭೃವೃ—ಸೂತ್ರದಲ್ಲಿ ಏಕಾಚಾದ ಧಾತುಗಳಿಗೆ ಲಿಟನಲ್ಲಿ ಇಣ್ನಿಷೇಧ ಬರುವುದಾದರೆ ಆಸೂತ್ರಪಠಿತವಾದವುಗಳಿಗೆ ಮಾತ್ರವೆಂದು ನಿಯಮ ಮಾಡಿರುವುದರಿಂದ ಧಾಞ್-ಧಾತುವು ಅನಿಟ್ಟಾದರೂ ಲಿಟನಲ್ಲಿ ಇಡಾಗಮ ಬರುತ್ತದೆ. ಇಕಾರದ ಪರದಲ್ಲಿರುವುದರಿಂದ ಆದೇಶಪ್ರತ್ಯಯಯೋಃ ಎಂಬುದರಿಂದ ಪ್ರತ್ಯಯಸಕಾರಕ್ಕೆ ಷತ್ವ. ಇಡಾದಿ. ಪ್ರತ್ಯಯ ಪರದಲ್ಲಿರುವುದರಿಂದ ಆತೋಲೋಪಇಟಿಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಧಿಷೇ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಾಹಿನಃ**—ಮಹ ಪೂಜಾಯಾಂ ಧಾತು. ಇದಕ್ಕೆ ಮಹೇರಿನಣ್ಚ (ಉ. ಸೂ. ೨-೨೧೪) ಎಂಬುದರಿಂದ ಔಣಾದಿಕವಾದ ಇನಣ್ ಪ್ರತ್ಯಯ. ಅತಉಪಧಾಯಾಃ ಎಂಬುದರಿಂದ ಪ್ರತ್ಯಯ ಣಿತ್ತಾದುದರಿಂದ ತನ್ನಿಮಿತ್ತವಾಗಿ ಧಾತುವಿನ ಉಪಧೆಗೆ ವೃದ್ಧಿ. ಮಾಹಿನ್ ಶಬ್ದವಾಗುತ್ತದೆ. ಅನಿನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅರಿಣಾಃ**—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ ಲಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದರ ಇಕಾರಕ್ಕೆ ಲೋಪ. ಪ್ವಾದಿಯಲ್ಲಿ ಸೇರಿರುವುದರಿಂದ ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಧಾತುವಿಗೆ ಹ್ರಸ್ವ ಬರುತ್ತದೆ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾ ವಿಕರಣ. ಅಟ್ಕುಪ್ವಾಙ್ ಸೂತ್ರದಿಂದ ಅಲ್ಲಿ ಉಳಿಯುವ ನಾ.ಎಂಬುದಕ್ಕೆ ಣತ್ವ. ಪ್ರತ್ಯಯ ಸಕಾರಕ್ಕೆ ರುತ್ವವಿಸರ್ಗ. ಲಙ್ಲಙ್ಲೃಙ್ಕ್ಷ್ವಡುದಾತ್ತಃ ಸೂತ್ರದಿಂದ ಅಂಗಕ್ಕೆ ಅಡಾಗಮ. ಅರಿಣಾಃ ಎಂಬುದು ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಸೂತ್ರದಿಂದ ಸರ್ವಾನುದಾತ್ತವಾಗುತ್ತದೆ.



CC-0. Jangamwadi Math Collection. Digitized by eGangotri

ಸಮುಯಾ—ಷಮು ಷ್ಟಮು ಅವೈಕಲ್ಯೇ ಧಾತು. ಸಮುತೀತಿ ಸಮಾ ನಂದಿಗ್ರಹಪಚಾದಿಭ್ಯಃ ಸೂತ್ರದಿಂದ ಅಚ್ ಪ್ರತ್ಯಯ. ಧಾತುವಿನ ಆದಿಗೆ ಸಕಾರಾದೇಶ. ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನಾಂತರೂಪ.

ಪಾಷ್ಯಾ—ಪಿಷ್ಲೃ ಸಂಚೂರ್ಣನೇ ಧಾತು. ಸರ್ವಧಾತುಭ್ಯ ಇನ್ (ಉ. ಸೂ. ೪-೫೫೭) ಎಂಬುದರಿಂದ ಇನ್ ಪ್ರತ್ಯಯ. ಉಣಾದಿಯಲ್ಲಿ ಬಹುಲವಚನವಿರುವುದರಿಂದ ಧಾತುವಿನ ಉಪಧೆಗೆ ಇಕಾರಕ್ಕೆ ಆಕಾರಾದೇಶ. ಸ್ತ್ರೀತ್ವವಿವಕ್ಷಾಮಾಡಿದಾಗ ಕೃದಿಕಾರಾದಕ್ತಿನಃ (ಪಾ. ಸೂ. ೪-೧-೪೫ ಗ) ಕ್ತಿನ್ ಭಿನ್ನವಾದ ಇಕಾರಾಂತ ಕೃದಂತದ ಪ್ರಾದಿಪದಕಕ್ಕೆ ಙೀಷ್ ಎಂಬುದರಿಂದ ಇಲ್ಲಿ ಙೀಷ್ ಬರುತ್ತದೆ. ಪಾಷೀ ಶಬ್ದದ ತೃತೀಯಾ ಏಕವಚನಾಂತರೂಪ. ಪ್ರತ್ಯಯಸ್ವರದಿಂದ ಅಂತೋದಾತ್ತ. ಇದಕ್ಕೆ ವಿಭಕ್ತಿಪರವಾದಾಗ ಯಣಾದೇಶ ಬಂದುದರಿಂದ ಉದಾತ್ತಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ (ಪಾ. ಸೂ. ೮-೨-೪) ಎಂಬುದರಿಂದ ಸ್ವರಿತ ಬರುತ್ತದೆ.

ಅರುಜಃ—ರುಜೋ ಭಂಗೇ ಧಾತು. ತುದಾದಿ. ಲಙ್ ಮಧ್ಯಮಪುರುಷಏಕವಚನದಲ್ಲಿ ಸಿಪ್. ಇತಶ್ಚ ಸೂತ್ರದಿಂದ ಇಕಾರಲೋಪ. ತುದಾದಿಭ್ಯಃಶಃ ಸೂತ್ರದಿಂದ ಶ ವಿಕರಣ. ಸಾರ್ವಧಾತುಕಮಪಿತ್ ಸೂತ್ರದಿಂದ ಅದು ಙಿತ್ತಾದುದರಿಂದ ಪುಗಂತಲಘೂಪಧಸ್ಯಚ ಸೂತ್ರದಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅಂಗಕ್ಕೆ ಲಙ್ ನಿಮಿತ್ತವಾಗಿ ಅಡಾಗಮ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಅರುಜಃ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಸೂತ್ರದಿಂದ ನಿಘಾತಸ್ವರ ಬರುತ್ತದೆ.

ಐವತ್ತಾರನೆಯ ಸೂಕ್ತವು ಸಮಾಪ್ತವು.

## ಐವತ್ತೇಳನೆಯ ಸೂಕ್ತವು

ಪ್ರ ಮಂಹಿಷ್ಠಾಯೇತಿ ಷಡೃಚಂ ಸಪ್ತಮಂ ಸೂಕ್ತಂ ಸವ್ಯಸ್ಯಾರ್ಷಮೈಂದ್ರಂ ಜಾಗತಂ। ತಥಾ ಚಾನುಕ್ರಾಂತಂ। ಪ್ರ ಮಂಹಿಷ್ಠಾಯೇತಿ॥ ವಿಷುವತಿ ನಿಷ್ಕೇವಲ್ಯ ಇದಂ ಸೂಕ್ತಂ ಶಂಸನೀಯಂ। ಸೂತ್ರಿತಂ ಚ। ಪ್ರ ಮಂಹಿಷ್ಠಾಯ ತ್ಯಮೂಷುಸ್ವಿತೀಹ ತಾರ್ಕ್ಷ್ಯಮಂತತಃ॥ ಆ. ೮-೬ ಇತಿ ॥ ಉಕ್ಥ್ಯಸಂಸ್ಥೇ ಕ್ರತೌ ತೃತೀಯಸವನೇ ಬ್ರಾಹ್ಮಣಾಚ್ಛಂಸಿನ ಏತತ್ಸೂಕ್ತಂ। ಸೂತ್ರಿತಂ ಚ। ಸರ್ವಾಃ ಕಕುಭಃ ಪ್ರ ಮಂಹಿಷ್ಠಾಯೋದಪ್ರುತಃ। ಆ. ೬-೧। ಇತಿ॥

ಅನುವಾದವು—ಪ್ರ ಮಂಹಿಷ್ಠಾಯ ಎಂಬ ಈ ಸೂಕ್ತವು ಹತ್ತನೆಯ ಅನುವಾಕದಲ್ಲಿ ಏಳನೆಯ ಸೂಕ್ತವು. ಇದರಲ್ಲಿ ಆರು ಋಕ್ಕುಗಳಿರುವವು. ಈ ಸೂಕ್ತಕ್ಕೆ ಸವ್ಯನೆಂಬುವನು ಋಷಿಯು. ಇಂದ್ರನು ದೇವತೆಯು. ಜಗತೀ ಛಂದಸ್ಸು. ಅನುಕ್ರಮಣಿಕೆಯಲ್ಲಿ ಪ್ರ ಮಂಹಿಷ್ಠಾಯೇತಿ ಎಂದು ಹೇಳಿರುವುದು ವಿಷುವತ್ಸಂಜ್ಞಯಾಗದಲ್ಲಿ ನಿಷ್ಕೇವಲ್ಯಶಸ್ತ್ರಮಂತ್ರಗಳಿಗಾಗಿ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನ ಶ್ರೌತಸೂತ್ರದ ಪ್ರ ಮಂಹಿಷ್ಠಾಯ ತ್ಯಮೂ ಷ್ವಿತೀಹ ತಾರ್ಕ್ಷ್ಯಮಂತತಃ ಎಂಬ ಸೂತ್ರವು ನಿರ್ದೇಶಿಸುವುದು. (ಆ. ೮-೬) ಉಕ್ಥಸಂಸ್ಥೆಯೆಂಬ ಕ್ರತುವಿನಲ್ಲಿಯೂ ತೃತೀಯಸವನದಲ್ಲಿ ಬ್ರಾಹ್ಮಣಾಚ್ಛಂಸಿಯೂ ಈ ಸೂಕ್ತವನ್ನು ಪಠಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ಸರ್ವಾಃ ಕಕುಭಃ ಪ್ರ ಮಂಹಿಷ್ಠಾಯೋದಪ್ರುತಃ ಎಂಬ ಸೂತ್ರದಿಂದ ವಿವೃತವಾಗಿರುವುದು (ಆ. ೬-೧).



CC-0. Jangamwadi Math Collection. Digitized by eGangotri

## ಸೂಕ್ತ—೫೭

ಮಂಡಲ—೧ ॥ ಅನುವಾಕ—೧೦ ॥ ಸೂಕ್ತ—೫೭ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೨೨॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೬ ॥
ಋಷಿಃ—ಸವ್ಯ ಆಂಗಿರಸಃ ॥
ದೇವತಾ—ಇಂದ್ರಃ ।
ಛಂದಃ—ಜಗತೀ ।

॥ ಸಂಹಿತಾಪಾಠಃ ॥

ಪ್ರ ಮಂಹಿಷ್ಠಾಯ ಬೃಹತೇ ಬೃಹದ್ರಯೇ ಸತ್ಯಶುಷ್ಮಾಯ ತವಸೇ
ಮತಿಂ ಭರೇ ।
ಅಪಾಮಿವ ಪ್ರವಣೇ ಯಸ್ಯ ದುರ್ಧರಂ ರಾಧೋ ವಿಶ್ವಾಯು ಶವಸೇ
ಅಪಾವೃತಂ ॥ ೧ ॥

॥ ಪದಪಾಠಃ ॥

ಪ್ರ । ಮಂಹಿಷ್ಠಾಯ । ಬೃಹತೇ । ಬೃಹತ್ಽರಯೇ । ಸತ್ಯಽಶುಷ್ಮಾಯ । ತವಸೇ ।
ಮತಿಂ । ಭರೇ ।
ಅಪಾಂಽಇವ । ಪ್ರವಣೇ । ಯಸ್ಯ । ದುಃಽಧರಂ । ರಾಧಃ । ವಿಶ್ವಽಆಯು । ಶವಸೇ ।
ಅಪಽವೃತಂ ॥ ೧ ॥

॥ ಸಾಯಣಭಾಷ್ಯ ॥

ಮಂಹಿಷ್ಠಾಯ । ಮಂಹತಿರ್ದಾನಕರ್ಮೇತಿ ಯಾಸ್ಕಃ । ನಿ. ೧-೭ । ದಾತೃತಮಾಯ ಬೃಹತೇ ಗುಣೈರ್ಮಹತೇ ಬೃಹದ್ರಯೇ ಮಹಾಧನಾಯ ಸತ್ಯಶುಷ್ಮಾಯಾವಿತಥಬಲಾಯ ತವಸ ಆಕಾರತಃ ಪ್ರವೃದ್ಧಾಯ । ಏವಂಗುಣವಿಶಿಷ್ಟಾಯೇಂದ್ರಾಯ ಮತಿಂ ಮನನೀಯಾಂ ಸ್ತುತಿಂ ಪ್ರ ಭರೇ । ಪ್ರಕರ್ಷೇಣ ಸಂಪಾದಯಾಮಿ । ಯಸ್ಯೇಂದ್ರಸ್ಯ ಬಲಂ ದುರ್ಧರಮನ್ಯೈರ್ಧರ್ತುಮಶಕ್ಯಂ । ತತ್ರ ದೃಷ್ಟಾಂತಃ । ಪ್ರವಣೇ ನಿಮ್ನಪ್ರದೇಶೇಽಪಾಮಿವ । ಯಥಾ ಜಲಾನಾಂ ವೇಗಃ ಕೇನಾಪ್ಯವಸ್ಥಾಪಯಿತುಂ ನ ಶಕ್ಯತೇ




CC-0. Jangamwadi Math Collection. Digitized by eGangotri

ತದ್ವತ್ । ತಥಾ ರಾಧೋ ಧನಂ ವಿಶ್ವಾಯು ಸರ್ವೇಷು ವ್ಯಾಪ್ತಂ ಶವಸೇ ಸ್ತೋತೄಣಾಂ ಬಲಾಯ ಯೇನೇಂದ್ರೇಣಾಪಾವೃತಂ । ಅಪಗತಾವರಣಂ ಕ್ರಿಯತೇ ತಸ್ಮೈಇಂದ್ರಸ್ಯೇತಿ ಪೂರ್ವೇಣ ಸಂಬಂಧಃ ॥ ಮಂಹಿಷ್ಠಾಯ । ಅತಿಶಯೇನ ಮಂಹಿತಾ ಮಂಹಿಷ್ಠಃ । ತುಶ್ಛಂದಸೀತೀಷ್ಠನ್ಪ್ರತ್ಯಯಃ । ತುರಿಷ್ಠೇಮೇಯಸ್ಸ್ವಿತಿ ತೃಲೋಪಃ । ಬೃಹತೇ । ಬೃಹನ್ಮಹತೋರುಪಸಂಖ್ಯಾನಮಿತಿ ವಿಭಕ್ತೇರುದಾತ್ತತ್ವಂ । ಉತ್ತರಯೋರ್ಬಹುವ್ರೀಹಿಸ್ವರಃ । ಮತಿಂ । ಮಂತ್ರೇ ವೃಷೇತ್ಯಾದಿನಾ ಕ್ತಿನ್ನುದಾತ್ತತ್ವಂ । ಅನುದಾತ್ತೋಪದೇಶೇತ್ಯಾದಿನಾನುನಾಸಿಕಲೋಪಃ । ದುರ್ಧರಂ । ಧೃಞ್ ಧಾರಣೇ । ಈಷದ್ದುಃಸುಷ್ವಿತಿ ಕರ್ಮಣಿ ಖಲ್ । ವಿಶ್ವಾಯು । ವಿಶ್ವಸ್ಮಿನ್ಸರ್ವಸ್ಮಿನ್ನಾಯು ಗಮನಂ ಯಸ್ಯ ತದ್ವಿಶ್ವಾಯು । ಛಂದಸೀಣಃ । ಉ. ೧-೨ । ಇತ್ಯುಣ್ಪ್ರತ್ಯಯಃ । ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತಿ ಪೂರ್ವಪದಾಂತೋದಾತ್ತತ್ವಂ । ಅಪಾವೃತಂ । ಕರ್ಮಣಿ ನಿಷ್ಠಾ । ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಯಸ್ಯ—ಯಾವ ಇಂದ್ರನ (ಬಲವು) । ಪ್ರವಣೇ—(ಯಾರಿಂದಲೂ ತಡೆಗಟ್ಟಲು ಸಾಧ್ಯವಿಲ್ಲದೇ) ನಿಮ್ನಪ್ರದೇಶದಲ್ಲಿ (ಹರಿಯುವ) । ಅಪಾಂ ಇವ—ನೀರುಗಳ ಪ್ರವಾಹದಂತೆ । ದುರ್ಧರಂ—(ಶತ್ರುಗಳಿಂದ) ಪ್ರತಿಭಟಿಸಲು ಸಾಧ್ಯವಿಲ್ಲವೋ ಮತ್ತು । ರಾಧಃ—(ಯಾವ ಇಂದ್ರನ) ಧನವು । ವಿಶ್ವಾಯು—ಸಕಲರಲ್ಲಿಯೂ ಹರಡಿ । ಶವಸೇ—(ಭಕ್ತರ) ಬಲಸಂಪಾದನೆಗಾಗಿ । ಅಪಾವೃತಂ—ತೆರೆಯಲ್ಪಟ್ಟದೆಯೋ ಅಂತಹ । ಮಂಹಿಷ್ಠಾಯ—ಅತ್ಯಂತ ಉದಾರವಾದ ದಾನಿಯೂ । ಬೃಹತೇ—ಗುಣಗಳಿಂದ ದೊಡ್ಡವನೂ । ಬೃಹದ್ರಯೇ—ಸಮೃದ್ಧವಾದ ಧನವಂತನೂ । ಸತ್ಯಶುಷ್ಮಾಯ—ಸಾರ್ಥಕವಾದ ಪರಾಕ್ರಮವುಳ್ಳವನೂ । ತವಸೇ—ಪ್ರಭಾವಶಾಲಿಯೂ ಆದ ಇಂದ್ರನಿಗೆ । ಮತಿಂ—ಪೂಜ್ಯವಾದ ಸ್ತೋತ್ರವನ್ನು । ಪ್ರ ಭರೇ—ಶ್ರೇಷ್ಠವಾಗಿ ಸಂಪಾದಿಸುತ್ತೇನೆ. (ಪಠಿಸುತ್ತೇನೆ)

॥ ಭಾವಾರ್ಥ ॥

ನಿಮ್ನ ಪ್ರದೇಶದಲ್ಲಿ ಹರಿಯುವ ನೀರಿನ ಪ್ರವಾಹವು ಯಾರಿಂದಲೂ ತಡೆಗಟ್ಟಲು ಸಾಧ್ಯವಿಲ್ಲದಿರುವಂತೆ ಇಂದ್ರನ ಶಕ್ತಿಯು ಶತ್ರುಗಳಿಂದ ಪ್ರತಿಭಟಿಸಲಸಾಧ್ಯವಾದುದು. ಅವನ ಧನವು ಸಕಲ ಭಕ್ತರ ಬಲಸಂಪಾದನೆಗಾಗಿ ಸಕಲರಲ್ಲಿಯೂ ಹರಡುವಂತೆ ತೆರೆದಿಟ್ಟದೆ. ಅತ್ಯಂತ ಉದಾರವಾದ ದಾನಿಯೂ, ಗುಣಗಳಿಂದ ದೊಡ್ಡವನೂ, ಸಮೃದ್ಧವಾದ ಧನವಂತನೂ, ಸಾರ್ಥಕವಾದ ಪರಾಕ್ರಮವುಳ್ಳವನೂ ಮತ್ತು ಪ್ರಭಾವಶಾಲಿಯೂ ಆದ ಇಂದ್ರನಿಗೆ ಪೂಜ್ಯವಾದ ಸ್ತೋತ್ರವನ್ನರ್ಪಿಸುತ್ತೇನೆ.

## English Translation.

I offer the most desirable praise to the most bountiful, the great, the opulent, the highly powerful and stately Indra, whose irresistible impetuosity is like the rush of waters down a precipice, and by whom, widely diffused wealth is laid open (to his worshippers) to sustain their strength.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

**ಮಂಹಿಷ್ಠಾಯ—ಮಂಹತಿರ್ದಾನಕರ್ಮಾ** (ನಿರು. ೧-೭) **ಅತಿಶಯೇನ ಮಂಹಿತಾ ಮಂಹಿಷ್ಠಃ** ಎಂಬುದು ಇದರ ವ್ಯುತ್ಪತ್ತಿ. ಮಂಹತಿ ಶಬ್ದಕ್ಕೆ ದಾನಮಾಡುವ ಕೆಲಸನೆಂದು ನಿರುಕ್ತಕಾರರು ನಿಶ್ಚಯ ಮಾಡಿರುತ್ತಾರೆ. ಇಲ್ಲಿ ದಾನಮಾಡುವವರಲ್ಲಿ ಅತ್ಯಂತ ಶ್ರೇಷ್ಠನೆಂದರ್ಥ.

**ಸತ್ಯಶುಷ್ಮಾಯ—ಸತ್ಯಂ ಶುಷ್ಮಂ ಯಸ್ಯ** ಎಂಬ ವಿವರಣೆಯಿಂದ ವ್ಯರ್ಥವಿಲ್ಲದ ಶಕ್ತಿಯುಳ್ಳವನು ಎಂದರ್ಥವಾಗುವುದು.

**ತವಸೇ**—ಮಹತ್ತಾದ ಆಕಾರವುಳ್ಳವನು. ಇದು ಇಂದ್ರನಿಗೆ ವಿಶೇಷಣವಾಗಿರುವುದು.

**ಪ್ರವಣೇ ಅಪಾಮಿವ**—ಹಳ್ಳಕ್ಕೆ ಹರಿಯುವ ನೀರಿನಂತೆ, ಅತಿಶಯವಾದ ಬಲವುಳ್ಳವನು ಇಂದ್ರ. ಇಲ್ಲಿ ಇಂದ್ರನ ಶಕ್ತಿಯನ್ನು ಯಾರೂ ತಡೆಯಲಾರರೆಂಬ ಪ್ರಶಂಸಾವಾಕ್ಯದಲ್ಲಿ ಹಳ್ಳಕ್ಕೆ ಹರಿಯುವ ನೀರಿನ ವೇಗವು ದೃಷ್ಟಾಂತವಾಗಿ ಕೊಡಲ್ಪಟ್ಟಿದೆ.

**ವಿಶ್ವಾಯುಃ—ವಿಶ್ವಸ್ಮಿನ್ ಸರ್ವಸ್ಮಿನ್ ಆಯುಃ ಗಮನಂ ಯಸ್ಯೈತತ್** ಪ್ರಪಂಚದ ಸರ್ವಪ್ರದೇಶದಲ್ಲಿಯೂ ವ್ಯಾಪಿಸಲ್ಪಟ್ಟಿರುವ ವಸ್ತು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಮಂಹಿಷ್ಠಾಯ**—ಮಹಿ ವೃದ್ಧೌ ಧಾತು. ತೃಚ್ ಪ್ರತ್ಯಯ. ಇದಿತ್ತ್ವಾದುದರಿಂದ ನಮಾಗಮ. ಮಂಹಿತೃಶಬ್ದವಾಗುತ್ತದೆ. ಅತಿಶಯೇನಮಂಹಿತಾ ಮಂಹಿಷ್ಠಃ **ತುಶ್ಛಂದಸಿ** (ಪಾ. ಸೂ. ೫-೩-೫೯) ಎಂಬುದರಿಂದ ಇಷ್ಠನ್ ಪ್ರತ್ಯಯ. **ತುರಿಷ್ಠೇಮೇಯಸ್ಸು** (ಪಾ. ಸೂ. ೬-೪ ೧೫೪) ಎಂಬುದರಿಂದ ಇಷ್ಠನ್ ಪ್ರತ್ಯಯ ಪರದಲ್ಲಿರುವಾಗ ತೃಚಿಗೆ ಲೋಪ. ಮಂಹಿಷ್ಠಶಬ್ದವಾಗುತ್ತದೆ. ಇಷ್ಠನ್ ನಿತ್ತ್ವಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಬೃಹತೇ**—ಬೃಹಚ್ಛಬ್ದ. ಚತುರ್ಥೀ ಏಕವಚನಾಂತರೂಪ. **ಬೃಹನ್ಮಹತೋರುಪಸಂಖ್ಯಾನಮ್** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಬೃಹದ್ರಯೇ ಮತ್ತು ಸತ್ಯಶುಷ್ಮಾಯ ಎಂಬ ಎರಡು ಶಬ್ದಗಳು ಬಹುವ್ರೀಹಿ ಸಮಾಸದಿಂದ ನಿಷ್ಪನ್ನವಾಗಿವೆ. ಆಗ **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಮತಿಮ್**—ಮನ ಜ್ಞಾನೇ ಧಾತು. **ಸ್ತ್ರಿಯಾಂ ಕ್ತಿನ್** ಎಂಬುದರಿಂದ ಕ್ತಿನ್ ಪ್ರತ್ಯಯ. **ಅನುದಾತ್ತೋಪದೇಶ** (ಪಾ. ಸೂ. ೬-೪-೩೭) ಎಂಬುದರಿಂದ ಧಾತುವಿನ ಅನುನಾಸಿಕಕ್ಕೆ (ನಕಾರ) ಲೋಪ. **ಮಂತ್ರೇವೃಷೇಷಪಚ** (ಪಾ. ಸೂ. ೩-೩-೯೬) ಸೂತ್ರದಿಂದ ಕ್ತಿನ್ ಪ್ರತ್ಯಯವು ಉದಾತ್ತವಾಗುತ್ತದೆ. ದ್ವಿತೀಯಾ ಏಕವಚನದಲ್ಲಿ **ಅಮಿಪೂರ್ವಃ** ಸೂತ್ರದಿಂದ ಪೂರ್ವರೂಪ ಬಂದಾಗ **ಏಕಾದೇಶಉದಾತ್ತೇನೋದಾತ್ತಃ** (ಪಾ. ಸೂ. ೮-೨-೫) ಸೂತ್ರದಿಂದ ಉದಾತ್ತವಾಗುತ್ತದೆ.

**ಭರೇ**—ಭೃಞ್ ಭರಣೇ ಧಾತು. ಲಡುತ್ತಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಅಪಾಮ್— ಊಡಿದಂಪದಾದಿ— ಸೂತ್ರದಿಂದ ಷಷ್ಠೀಬಹುವಚನ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ದುರ್ಧರಮ್—ಧೃಞ್ ಧಾರಣೇ ಧಾತು ಈಷದ್ದುಃಸುಷುಕೃ (ಪಾ. ಸೂ. ೩-೩-೧೨೬) ಎಂಬುದರಿಂದ ಕೃಚ್ಛ್ರಾರ್ಥದಲ್ಲಿ ದುಸ್ ಉಪಪದವಾಗಿರುವಾಗ ಖಲ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ಉರಣ್ರಪರಃ ಸೂತ್ರದಿಂದ ರಪರವಾಗಿ ಬರುತ್ತದೆ. ಲಿತಿ ಸೂತ್ರದಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ವಿಶ್ವಾಯುಃ—ವಿಶ್ವಸ್ಮಿನ್=ಸರ್ವಸ್ಮಿನ್ ಆಯುಃ ಗಮನಂ ಯಸ್ಯ ತತ್ ವಿಶ್ವಾಯುಃ. ಇಣ್ ಗತೌ ಧಾತು. ಇದಕ್ಕೆ ಛಂದಸೀಣಃ (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ ಅಚೋಞ್ಣಿತಿ ಸೂತ್ರದಿಂದ ಧಾತುವಿನ ಇಕಾರಕ್ಕೆ ವೃದ್ಧಿ. ಆಯಾದೇಶ ಆಯುಃ ಶಬ್ದವಾಗುತ್ತದೆ. ವಿಶ್ವ ಶಬ್ದದೊಡನೆ ಬಹುವ್ರೀಹಿಸಮಾಸವಾದಾಗ ಬಹುವ್ರೀಹೌ ವಿಶ್ವಂಸಂಜ್ಞಾಯಾಂ (ಪಾ. ಸೂ. ೬-೨-೧೦೬) ಎಂಬುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಅಪಾವೃತಮ್—ವೃಞ್ ವರಣೇ ಧಾತು. ಕರ್ಮಣಿಯಲ್ಲಿ ಕ್ತಪ್ರತ್ಯಯ ಕಿತ್ತಾದುದರಿಂದ ಧಾತುವಿನ ಇಕಿಗೆ ಗುಣ ಬರುವುದಿಲ್ಲ. ಗತಿರನಂತರಃ (ಪಾ. ಸೂ. ೬-೨-೪೯) ಸೂತ್ರದಿಂದ ಗತಿಗೆ ಪ್ರಕೃತಿಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಅಧ ತೇ ವಿಶ್ವಮನು ಹಾಸದಿಷ್ಟಯ ಆಪೋ ನಿಮ್ನೇವ ಸವನಾ ಹವಿಷ್ಮತಃ।
ಯತ್ಪರ್ವತೇ ನ ಸಮಶೀತ ಹರ್ಯತ ಇಂದ್ರಸ್ಯ ವಜ್ರಃ ಶ್ನಥಿತಾ ಹಿರಣ್ಯಯಃ ॥ ೨ ॥

|| ಪದಪಾಠಃ ||

ಅಧ । ತೇ । ವಿಶ್ವಂ । ಅನು । ಹ । ಅಸತ್ । ಇಷ್ಟಯೇ । ಆಪಃ । ನಿಮ್ನಾಇವ । ಸವನಾ । ಹವಿಷ್ಮತಃ ।
ಯತ್ । ಪರ್ವತೇ । ನ । ಸಂಅಶೀತ। ಹರ್ಯತಃ। ಇಂದ್ರಸ್ಯ । ವಜ್ರಃ । ಶ್ನಥಿತಾ। ಹಿರಣ್ಯಯಃ ॥ ೨ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಅಥ ಹಾನಂತರಮೇವ ಹೇ ಇಂದ್ರ ವಿಶ್ವಂ ಸರ್ವಮಿದಂ ಜಗತ್ತೇ ತವ ಸಂಬಂಧಿನ ಇಷ್ಟಯೇ ಯೋಗಾಯೋನ್ವಸತ್ । ಅನ್ವಭವತ್ । ಯದ್ವಾ । ಇಷ್ಟಯೇ ಹವಿರಾದಿಭಿಸ್ತವ ಪ್ರಾಪ್ತಯ ಇತಿ ಯೋಜ್ಯಂ । ಹವಿಷ್ಕೃತೋ ಯಜಮಾನಸ್ಯ ಸವನಾ ಸವನಾನಿ ಯಜ್ಞಜಾತಾನಿ ನಿಮ್ನೇವ ನಿಮ್ನಾನಿ ಭೂಸ್ಥಲಾನ್ಯಾಪ ಇವ ತ್ವಾಂ ಸಂಭಜಂತ ಇತಿ ಶೇಷಃ । ಹರ್ಯತಃ ಶತ್ರುವಧಂ ಪ್ರೇಪ್ಸತ ಇಂದ್ರಸ್ಯ । ಹರ್ಯತಿಃ ಪ್ರೇಪ್ಸಾಕರ್ಮೇತಿ ಯಾಸ್ಕಃ । ನಿ. ೭-೧೭ । ಯದ್ವಾ । ಹರ್ಯತಃ ಶೋಭನಃ । ಹಿರಣ್ಯಯೋ ಹಿರಣ್ಮಯಃ ಶ್ನಥಿತಾ ಶತ್ರೂಣಾಂ ಹಿಂಸನಶೀಲೋ ವಜ್ರಃ ಪರ್ವತೇ ಪರ್ವವತಿ ಶಿಲೋಚ್ಚಯೇ ವೃತ್ರೇ ವಾ ಯದ್ಯದಾ ನ ಸಮಶೀತ ಸಂಸುಪ್ತೋ ನಾಭವತ್ । ಕಿಂತು ಜಾಗರಿತಃ ಸನ್ನವಧೀದಿತ್ಯರ್ಥಃ । ಯದೇಂದ್ರೇಣ ಪ್ರೇರಿತೋ ವಜ್ರೋಽಪ್ರತಿಹತಃ ಸನ್ವೃತ್ರಮವಧೀತ್ತದಾಪ್ರಭೃತ್ಯೇವ ತಂ ಯಷ್ಟುಂ ಸರ್ವೇ ಯಜಮಾನಾಃ ಪ್ರಾವರ್ತಿಷತೇತಿ ಭಾವಃ ॥ ಅಥ । ಛಾಂದಸಂ ಧತ್ವಂ । ಅಸತ್ । ಅಸ್ತೇರ್ಲಙಿ ಬಹುಲಂ ಛಂದಸೀತಿ ಶಪೋ ಲುಗಭಾವಃ । ಇಷ್ಟಯೇ । ಯಜತೇರ್ಭಾವೇ ಕ್ತಿನಿ ವಚಿಸ್ವಪೀತ್ಯಾದಿನಾ ಸಂಪ್ರಸಾರಣಂ । ವ್ರಶ್ಚಾದಿನಾ ಷತ್ವಂ । ವ್ಯತ್ಯಯೇನಾಂತೋದಾತ್ತತ್ವಂ । ಯದ್ವಾ । ಇಷ ಗತಾವಿತ್ಯಸ್ಮಾದ್ಭಾವೇ ಕ್ತಿನಿ ಮಂತ್ರೇ ವೃಷೇಷೇತಿ ತಸ್ಯೋದಾತ್ತತ್ವಂ । ನಿಮ್ನೇವ ಸವನಾ । ಶೇಶ್ಛಂದಸೀತಿ ಶೇರ್ಲೋಪಃ । ಸಮಶೀತ । ಶೀಙ್ ಸ್ವಪ್ನೇ । ಲಙಃ ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾತ್ ಶೀಙಃ ಸಾರ್ವಧಾತುಕೇ । ಪಾ. ೭-೪-೨೧ । ಇತಿ ಗುಣಾಭಾವಃ । ಹರ್ಯತಃ । ಹರ್ಯ ಗತಿಕಾಂತ್ಯೋಃ । ಭೃಮೃದೃಶೀತ್ಯಾದಿನಾತಚ್ಪ್ರತ್ಯಯಃ । ಶ್ನಥಿತಾ । ಶ್ನಥ ಕ್ನಥ ಕ್ರಥ ಹಿಂಸಾರ್ಥಾಃ । ತಾಚ್ಛೀಲಿಕಸ್ತೃನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಹರ್ಯತಃ—(ಶತ್ರು) ವಧವನ್ನು ನಿರೀಕ್ಷಿಸಿದ । ಇಂದ್ರಸ್ಯ—ಇಂದ್ರನ । ಹಿರಣ್ಯಯಃ—ಸುವರ್ಣ ನಿರ್ಮಿತವಾದದ್ದೂ । ಶ್ನಥಿತಾ—ಶತ್ರುಗಳನ್ನು ನಾಶಮಾಡತಕ್ಕದ್ದೂ ಆದ । ವಜ್ರಃ—ವಜ್ರಾಯುಧವು । ಪರ್ವತೇ—ಪರ್ವತದಲ್ಲಿ ಅಥವಾ ವೃತ್ರನಮೇಲೆ ಬೀಸಿ ಎಸೆದಾಗ । ಯತ್—ಯಾವಾಗ । ನ ಸಮಶೀತ—ಮಲಗಿ ನಿದ್ರೆ ಮಾಡಲಿಲ್ಲವೋ (ಅಂದರೆ ಚುರುಕಾಗಿದ್ದು ಶತ್ರುವನ್ನು ಕೊಂದಿತೋ) ಆಗ । ಅಥ ಹ—ಒಡನೆಯೇ । ವಿಶ್ವಂ—ಸಕಲ ಜಗತ್ತೂ । ತೇ—ನಿನ್ನನ್ನು ಉದ್ದೇಶಿಸಿ । ಇಷ್ಟಯೇ—ಯಾಗಕ್ಕಾಗಿ । ಅಸತ್ ಸಿದ್ಧವಾಯಿತು । ಹವಿಷ್ಕೃತಃ—ಯಜಮಾನನ । ಸವನಾ—ಪೂಜೆಗಳು (ಹವಿಸ್ಸುಗಳು) । ನಿಮ್ನೇವ ಆಪಃ—ನಿಮ್ನ ಪ್ರದೇಶದಲ್ಲಿ ಹರಿಯುವ ನೀರಿನಂತೆ । (ತಡೆಯಿಲ್ಲದೆ ನಿನ್ನನ್ನು ಸೇರಿದವು) ॥

॥ ಭಾವಾರ್ಥ ॥

ಇಲೈ ಇಂದ್ರನೇ, ನೀನು ಶತ್ರುವಧವನ್ನಪೇಕ್ಷಿಸಿದಾಗ ನಿನ್ನ ಸುವರ್ಣನಿರ್ಮಿತವಾದದ್ದೂ, ಶತ್ರುಗಳನ್ನು ನಾಶಮಾಡತಕ್ಕದ್ದೂ ಆದ ವಜ್ರಾಯುಧವು ವೃತ್ರಾಸುರನ ಮೇಲೆ ಬೀಸಿ ಎಸೆದಾಗ ಸ್ವಲ್ಪವೂ ಸಾವಕಾಶವಿಲ್ಲದೇ ಶತ್ರುವನ್ನು ಕೊಂದಿತು. ಆ ಒಡನೆಯೇ ಸಕಲ ಜಗತ್ತೂ ಸಹ ನಿನ್ನನ್ನು ಉದ್ದೇಶಿಸಿ ಯಾಗಮಾಡಲನುವಾಯಿತು. ಯಜಮಾನನ ಹವಿಸ್ಸುಗಳು ನಿಮ್ನ ಪ್ರದೇಶದಲ್ಲಿ ಹರಿಯುವ ನೀರಿನಂತೆ ತಡೆಯಿಲ್ಲದೇ ನಿನ್ನನ್ನು ಸೇರಿದವು.



CC-0. Jangamwadi Math Collection. Digitized by eGangotri

## English Translation.

Indra, this entire universe was engaged in your sacrifice; the oblations of the sacrificer flowed like water falling to a depth; the beautiful, golden, fatal thunderbolt of Indra did not sleep upon the mountain.

‖ ವಿಶೇಷ ವಿಷಯಗಳು ‖

ಅಧ—ಅಥಶಬ್ದವು ಅಥ (ಅನಂತರ) ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಇಷ್ಟಯೇ—ಯಾಗಕ್ಕಾಗಿ ಅಥವಾ ಹವಿಸ್ಸೇ ಮೊದಲಾದುವುಗಳಿಂದ ಕೂಡಿ ನಿನ್ನನ್ನು ಪೂಜಿಸುವುದಕ್ಕಾಗಿ ಎಂದು ಎರಡು ರೀತಿಯಲ್ಲಿಯೂ ಅರ್ಥಮಾಡಿರುವರು.

ಸವನಾ—ಈ ಶಬ್ದಕ್ಕೆ ಕೇವಲ ಯಜ್ಞವಾಚಕತ್ವವಿದ್ದರೂ ಇಲ್ಲಿ ಲಕ್ಷಣಾವೃತ್ತಿಯಿಂದ ಯಾಗದಲ್ಲಿ ಉಂಟಾದ ಸಕಲ ಕರ್ಮಗಳೂ ಎಂದರ್ಥವಾಗುವುದು.

ಹರ್ಯತಃ—ಶತ್ರುವಧಂ ಪ್ರೇಪ್ಸತಃ—ಹರ್ಯತಿಃಪ್ರೇಪ್ಸಾಕರ್ಮಾ (ನಿರು. ೭-೧೭) ಎಂಬ ನಿರುಕ್ತರೀತಿಯಾಗಿ ಹರ್ಯಗತಿಕಾಂತ್ಯೋಃ ಎಂಬ ಗತಿ ಮತ್ತು ಕಾಂತ್ಯರ್ಥಕವಾದ ಹರ್ಯಧಾತುವಿಗೆ ತನಗೆ ಅಭೀಪ್ಸವಾದ ಕರ್ಮ ಎಂದರ್ಥವು ಸ್ಪಷ್ಟಪಡುವುದು. ಮತ್ತು ಈ ಶಬ್ದಕ್ಕೆ ಪ್ರಶಸ್ತವಾದ ಎಂದರ್ಥವನ್ನೂ ಹೇಳಿರುವರು.

ಶ್ನಥಿತಾ—ಶತ್ರುಗಳನ್ನು ಹಿಂಸಿಸುವ ಸ್ವಭಾವವುಳ್ಳದ್ದು ವಜ್ರಾಯುಧ. ಈ ಪದವು ವಜ್ರಾಯುಧಕ್ಕೆ ವಿಶೇಷಣವಾಗಿದೆ. ಇಂದ್ರನಿಂದ ಪ್ರೇರಿತವಾದ ವಜ್ರಾಯುಧವು ಶತ್ರುಗಳನ್ನು ನಿರ್ಮೂಲ ಮಾಡಿದಮೇಲೆ ಸರ್ವರೂ ಯಜ್ಞಕರ್ಮದಿಂದ ಇಂದ್ರನನ್ನು ತೃಪ್ತಿಪಡಿಸಲು ಪ್ರಾರಂಭಿಸಿದರು ಎಂಬುದು ಇಲ್ಲಿಯ ತಾತ್ಪರ್ಯಾರ್ಥ.

‖ ವ್ಯಾಕರಣಪ್ರಕ್ರಿಯಾ ‖

ಅಧ—ಅಥ ಎಂದಿರುವಾಗ ಸಂಹಿತಾದಲ್ಲಿ ಛಾಂದಸವಾಗಿ ಧತ್ವಬರುತ್ತದೆ.

ಆಸತ್—ಅಸ ಭುವಿ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಸೂತ್ರದಿಂದ ಇಕಾರಲೋಪ. ಬಹುಲಂಛಂದಸಿ ಎಂಬುದರಿಂದ ಶಪಿಗೆ ಲುಕ್ ಬರುವುದಿಲ್ಲ. ಬಹುಲಂ ಛಂದಸ್ಯಮಾಙ್ಯೋಗೇಽಪಿ ಸೂತ್ರದಿಂದ ಅಡಾಗಮ ಬರುವುದಿಲ್ಲ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಇಷ್ಟಯೇ—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ವಚಿಸ್ವಪಿಯಜಾದೀನಾಂ (ಪಾ. ಸೂ. ೬-೧-೧೫) ಎಂಬುದರಿಂದ ಧಾತುವಿಗೆ (ಯಕಾರ) ಸಂಪ್ರಸಾರಣಾಚ್ಚ ಸೂತ್ರದಿಂದ ಪೂರ್ವರೂಪ. ಇಜ್+ತಿ ಎಂದಿರುವಾಗ ವ್ರಶ್ಚಭ್ರಸ್ಜ ಎಂಬುದರಿಂದ ಜಕಾರಕ್ಕೆ ಷತ್ವ. ಷಕಾರಯೋಗ ಬಂದುದರಿಂದ ಪ್ರತ್ಯಯ ತಕಾರಕ್ಕೆ ಷ್ಟುತ್ವದಿಂದ ಟಕಾರಾದೇಶ ಇಷ್ಟಿ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದರೂ ವ್ಯತ್ಯಯದಿಂದ ಅಂತೋದಾತ್ತಸ್ವರ ಬರುತ್ತದೆ. ಅಥವಾ ಇಷ ಗತೌ ಧಾತು. ಇದಕ್ಕೆ ಭಾವಾರ್ಥದಲ್ಲಿ ಕ್ತಿನ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ.



CC-0. Jangamwadi Math Collection. Digitized by eGangotri

ಪ್ರತ್ಯಯಕ್ಕೆ ಹಿಂದಿನಂತೆ ಷ್ಟುತ್ವ. ಮಂತ್ರೇವೃಷೇಷ (ಪಾ. ಸೂ. ೩-೩-೯೬) ಎಂಬುದರಿಂದಕ್ತಿನ್ನಿಗೆ ಉದಾತ್ತ ಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

ನಿಮ್ನೇವ ಸವನಾ—ನಿಮ್ನಾ ಸವನಾ ಈ ಎರಡು ಶಬ್ದಗಳು ನಪುಂಸಕ ಬಹುವಚನದಲ್ಲಿ ಸಿದ್ಧವಾಗುತ್ತವೆ. ಶೇಶ್ಛಂದಸಿಬಹುಲಂ (ಪಾ. ಸೂ. ೬-೧-೭೦) ಎಂಬುದರಿಂದ ಅಲ್ಲಿ ಜಸಿಗೆ ಆದೇಶವಾಗಿ ಬಂದ ಶಿಗೆ ಲೋಪ.

ಸಮಶೀತ—ಶೀಙ್ ಸ್ವಪ್ನೇ ಧಾತು ಅದಾದಿ. ಲಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಸಾರ್ವಧಾತುಕಮಪಿತ್ ಸೂತ್ರದಿಂದ ಇದು ಙಿದ್ವದ್ಭಾವವನ್ನು ಹೊಂದುತ್ತದೆ. ಅದಿಪ್ರಭೃತಿಭ್ಯಃಶಪಃ ಎಂಬುದರಿಂದ ಶಪಿಗೆ ಲುಕ್. ಇಲ್ಲಿ ಶೀಙಃ ಸಾರ್ವಧಾತುಕೇ ಗುಣಃ (ಪಾ. ಸೂ. ೭-೪-೨೧) ಸೂತ್ರದಿಂದ ಗುಣವು ಪ್ರಾಪ್ತವಾದರೆ ಸಂಜ್ಞಾಪೂರ್ವಕೋ ವಿಧಿರನಿತ್ಯಃ (ಪರಿ. ೯೫) ಎಂಬುದರಿಂದ ಅದು ಬರುವುದಿಲ್ಲ. ಅಂಗಕ್ಕೆ ಅಡಾಗಮ. ಅಶೀತ ಎಂದು ರೂಪವಾಗುತ್ತದೆ. ಯತ್ ಎಂದು ಹಿಂದೆ ಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಮ್ ಸೂತ್ರದಿಂದ ನಿಘಾತಪ್ರತಿಷೇಧ ಬರುತ್ತದೆ. ಅಡಾಗಮದ ಉದಾತ್ತಸ್ವರ-ಉಳಿಯುತ್ತದೆ.

ಹರ್ಯತಃ—ಹರ್ಯ ಗತಿಕಾಂತ್ಯೋಃ ಧಾತು. ಭೃಮೃದೃಶಿಯಜಿ—(ಉ. ಸೂ. ೩-೩೯೦) ಎಂಬುದರಿಂದ ಅತಚ್‌ಪ್ರತ್ಯಯ. ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ.

ಶ್ನಥಿತಾ—ಶ್ನಥ ಕ್ನಥ ಕ್ರಥ ಹಿಂಸಾರ್ಥಾಃ ಧಾತು. ತಾಚ್ಛೀಲ್ಯಾರ್ಥದಲ್ಲಿ ತೃನ್ ಪ್ರತ್ಯಯ. ಆರ್ಧಧಾತುಕಸ್ಯೇಡ್ವಲಾದೇಃ ಸೂತ್ರದಿಂದ ಅದಕ್ಕೆ ಇಡಾಗಮ. ಶ್ನಥಿತೃ ಶಬ್ದವಾಗುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಸು ಪರವಾದರೆ ಋದುಶನಸ್ಪು—ಸೂತ್ರದಿಂದ ಅನಙಾದೇಶ. ಅಪ್‌ತೃನ್‌ತೃಚ್ ಸೂತ್ರದಿಂದ ಉಪಧಾದೀರ್ಘ. ಹಲ್‌ಙ್ಯಾದಿ ಸೂತ್ರದಿಂದ ಸುಲೋಪ. ನಲೋಪಃಪ್ರಾ— ಸೂತ್ರದಿಂದ ನಲೋಪ.

॥ ಸಂಹಿತಾಪಾಠಃ ॥

ಅಸ್ಮೈ॑ ಭೀಮಾಯ॒ ನಮ॑ಸಾ ಸಮ॑ಧ್ವರ ಉಷೋ॒ ನ ಶು॑ಭ್ರ॒ ಆ ಭ॑ರಾ

ಪನೀ॑ಯಸೇ ।

ಯಸ್ಯ॒ ಧಾಮ॒ ಶ್ರವ॑ಸೇ॒ ನಾಮೇಂದ್ರಿ॒ಯಂ ಜ್ಯೋತಿ॒ರಕಾ॑ರಿ ಹ॒ರಿತೋ॒

ನಾಯ॑ಸೇ ॥ ೩ ॥

ಪದಪಾಠಃ

ಅ॒ಸ್ಮೈ । ಭೀ॒ಮಾಯ॑ । ನಮ॑ಸಾ । ಸಂ । ಅ॒ಧ್ವ॒ರೇ । ಉಷಃ॑ । ನ । ಶು॒ಭ್ರೇ॒ । ಆ

ಭ॒ರ॒ । ಪನೀ॑ಯಸೇ ।

ಯಸ್ಯ॑ । ಧಾಮ॑ । ಶ್ರವ॑ಸೇ । ನಾಮ॑ । ಇ॒ಂದ್ರಿ॒ಯಂ । ಜ್ಯೋತಿಃ॑ । ಅಕಾ॑ರಿ ।

ಹ॒ರಿತಃ॑ । ನ । ಅಯ॑ಸೇ ॥ ೩ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಹೇ ಉಷ ಉಷೋದೇವತೇ ಶುಭ್ರೇ ಶೋಭನೇ ತ್ವಂ ಭೀಮಾಯ ಶತ್ರೂಣಾಂ ಭಯಂಕರಾಯ ಪನೀಯಸೇಽತಿಶಯೇನ ಸ್ತೋತವ್ಯಾಯಾಸ್ಮಾ ಇಂದ್ರಾಯಾಧ್ವರೇ ಹಿಂಸಾರಹಿತೇಽಸ್ಮಿನ್ಯಾಗೇ। ನೇತಿ ಸಂಪ್ರತ್ಯರ್ಥೇ। ತಥಾ ಚ ಯಾಸ್ಕಃ। ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗ ಇಹೇವ ನಿಧೇಹಿ। ನಿ. ೭-೩೧। ಇತಿ। ಸಂಪ್ರತೀದಾನೀಂ ನಮಸಾ ನಮೋ ಹವಿರ್ಲಕ್ಷಣಮನ್ನಂ ಸಮಾ ಭರ। ಸಮ್ಯಕ್ ಸಂಪಾದಯ। ಧಾಮ ಸರ್ವಸ್ಯ ಧಾರಕಂ ನಾಮ ಸ್ತೋತೃಷು ನಮನಶೀಲಂ ಪ್ರಸಿದ್ಧಂ ವೇಂದ್ರಿಯಮಿಂದ್ರತ್ವಸ್ಯ ಪರಮೈಶ್ವರ್ಯಸ್ಯ ಲಿಂಗಂ ಯಸ್ಯೇಂದ್ರಸ್ಯೈವಂವಿಧಂ ಜ್ಯೋತಿಃ ಶ್ರವಸೇಽನ್ನಾಯ ಹವಿರ್ಲಕ್ಷಣಾನ್ನಲಾಭಾರ್ಥಮಯಸ ಇತಿಸ್ತತೋ ಗಮನಾಯಾಕಾರಿ। ಕ್ರಿಯತೇ ಹರಿತೋ ನ। ಯಥಾಶ್ವಾನ್ಸಾದಿನಃ ಸ್ವಾಭಿಲಷಿತದೇಶಂ ಗಮಯಂತಿ ತದ್ವದಿಂದ್ರೋಽಪಿ ಸ್ವಾಭಿಮತಹವಿರ್ಲಾಭಾಯ ಸ್ವಕೀಯಂ ತೇಜೋ ಗಮಯತೀತಿ ಭಾವಃ॥ ಉಷಃ। ಪಾದಾದಿತ್ವಾನ್ನಿಘಾತಾಭಾವಃ। ಶುಭ್ರೇ। ಶುಭ ದೀಪ್ತೌ। ಸ್ಫಾಯಿತಂಚೀತ್ಯಾದಿನಾ ರಕ್। ಭರ। ಹೃಗ್ರಹೋರ್ಭ ಇತಿ ಭತ್ವಂ। ದ್ವ್ಯಚೋಽತಸ್ತಿಙ ಇತಿ ದೀರ್ಘಃ। ಪನೀಯಸೇ। ಪನತೇಃ ಸ್ತುತ್ಯರ್ಥಾದ್ಬಹುಲವಚನಾತ್ಕರ್ಮಣ್ಯಸುನ್। ತಸ್ಮಾದಾತಿಶಾಯನಿಕ ಈಯಸುನಿ ಟೇರಿತಿ ಟಿಲೋಪಃ। ಅಕಾರಿ। ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಕರ್ಮಣಿ ಲುಙ್। ಯದ್ವೃತ್ತಯೋಗಾದನಿಘಾತಃ। ಅಡಾಗಮ ಉದಾತ್ತಃ। ಅಯಸೇ। ಅಯ ಗತಾವಿತ್ಯಸ್ಮಾದ್ಭಾವೇಽಸುನ್॥

॥ ಪ್ರತಿಪದಾರ್ಥ ॥

ಶುಭ್ರೇ—ಪಾವನಳಾದ। ಉಷಃ—ಎಲೈ ಉಷೋದೇವತೆಯೇ। ಭೀಮಾಯ—(ಶತ್ರುಗಳಿಗೆ) ಭಯಂಕರನಾಗಿಯೂ। ಪನೀಯಸೇ—ಅತ್ಯಂತ ಸ್ತೋತ್ರಾರ್ಹನಾಗಿಯೂ ಇರುವ। ಅಸ್ಮೈ—ಈ ಇಂದ್ರನಿಗೆ। ಅಧ್ವರೇ—ಹಿಂಸಾರಹಿತವಾದ ಈ ಯಾಗದಲ್ಲಿ। ನ—ಈಗ। ನಮಸಾ—ಹವಿಸ್ಸಿನರೂಪದ ಅನ್ನವನ್ನು। ಸಮಾಭರ—ಚೆನ್ನಾಗಿ ಸಂಪಾದಿಸು। ಧಾಮ—(ಸಕಲರಿಗೂ) ಆಧಾರವಾಗಿಯೂ। ನಾಮ—ಪ್ರಶಸ್ತವಾಗಿಯೂ। ಇಂದ್ರಿಯಂ—ಇಂದ್ರನ ಅಸಾಧಾರಣವಾದ ಲಕ್ಷಣಸೂಚಕವಾಗಿಯೂ ಇರುವ। ಜ್ಯೋತಿಃ—(ಇಂದ್ರನ) ತೇಜಸ್ಸು। ಶ್ರವಸೇ—ಹವಿಸ್ಸಿನರೂಪದ ಅನ್ನಕ್ಕಾಗಿ। ಹರಿತೋ ನ—(ಸಾರಥಿಯು)ಕುದುರೆಗಳನ್ನು ತನ್ನ ಇಷ್ಟಕ್ಕನುಸಾರವಾಗಿ ಹೊಡೆಯುವಂತೆ। ಅಯಸೇ—ನಾನಾ ಕಡೆಗಳ ಸಂಚಾರಕ್ಕೆ ಮನಸ್ಸುಮಾಡುವಂತೆ)। ಅಕಾರಿ—ಮಾಡಲ್ಪಡುತ್ತದೆ.

॥ ಭಾವಾರ್ಥ ॥

ಪಾವನಳಾದ ಎಲೈ ಉಷೋದೇವತೆಯೇ, ಶತ್ರುಗಳಿಗೆ ಭಯಂಕರನಾಗಿಯೂ, ಅತ್ಯಂತ ಸ್ತೋತ್ರಾರ್ಹನಾಗಿಯೂ ಇರುವ ಈ ಇಂದ್ರನಿಗೆ ಹಿಂಸಾರಹಿನಾದ ಈ ಯಾಗದಲ್ಲಿ ಹವಿಸ್ಸಿನ ರೂಪದ ಅನ್ನವನ್ನು ಚೆನ್ನಾಗಿ ಸಂಪಾದಿಸು. ಸಕಲರಿಗೂ ಆಧಾರವಾಗಿಯೂ, ಪ್ರಶಸ್ತವಾಗಿಯೂ, ಇಂದ್ರನ ಅಸಾಧಾರಣವಾದ ಲಕ್ಷಣವನ್ನು ಸೂಚಿಸುವುದಾಗಿಯೂ ಇರುವ ಇಂದ್ರನ ತೇಜಸ್ಸು, ಸಾರಥಿಯು ಕುದುರೆಗಳದ್ನು ತನ್ನಿಷ್ಟಕ್ಕನುಸಾರವಾಗಿ ಹೊಡೆಯುವಂತೆ ಹವಿಸ್ಸಿನ ಸಂಚಯನಕ್ಕಾಗಿ ನಾನಾಕಡೆಗೆ ಸಂಚರಿಸುವಂತೆ ಮಾಡಲ್ಪಡುತ್ತದೆ.

## English Transation.

Beautiful Ushas, now present the oblation in this rite to the formidable, praise-deserving Indra, whose all-sustaining, celebrated and characteristic radiance has impelled him hither and thither, (in quest) of (sacrificial) food, as a charioteer drives his horses (in various directions).

|| ವಿಶೇಷ ವಿಷಯಗಳು ||

ಉಷಃ—ಇದು ಉಷೋನಾಮಕವಾದ ದೇವತೆಯ ಹೆಸರು. ನಿರುಕ್ತದಲ್ಲಿ (ನಿ. ೨-೧೯) ಉಷೋದೇವಗೆತೆ ಹದಿನಾರು ನಾಮಾಂತರಗಳನ್ನು ಹೇಳಿರುವರು. ರಾತ್ರೇರೇವ ಹ್ಯಪರಃ ಕಾಲಃ ಉಷ ಆಖ್ಯೋ ಭವತೀತಿ ರಾತ್ರಿನಾಮಭ್ಯ ಉತ್ತರಾಣಿ ಉಷೋನಾಮಾನಿ ಎಂಬುದಾಗಿ ಉಷಶ್ಶಬ್ದನಿರ್ವಚನ ಮಾಡುತ್ತಾ, "ಇದಂ ಶ್ರೇಷ್ಠಂ ಜ್ಯೋತಿಷಾಂ ಜ್ಯೋತಿರಾಗಾಚ್ಚಿತ್ರಃ ಪ್ರಕೇತೋ ಅಜನಿಷ್ಟ ವಿಭ್ವಾ । ಯಥಾ ಪ್ರಸೂತಾ ಸವಿತುಸ್ಸವಾಯ ಏವಾ ರಾತ್ರ್ಯುಷಸೇ ಯೋನಿಮಾರೈಕ್" ಮಂತ್ರದಲ್ಲಿರುವ ಉಷಶ್ಶಬ್ದಾರ್ಥವನ್ನು ಸ್ಪಷ್ಟವಾಗಿ ವಿವರಿಸಿರುವರು. ಒಟ್ಟಿನಲ್ಲಿ ರಾತ್ರಿಯ ಅಪರಾರ್ಧದ ಕಾಲಕ್ಕೆ ಉಷಃಕಾಲವೆಂದೂ, ಆ ಕಾಲಾಭಿಮಾನದೇವತೆಯೇ ಉಷಸ್ಸೆಂದೂ ವಿವರಿಸಿರುತ್ತಾರೆ.

ಪನೀಯಸೇ—ಸ್ತುತ್ಯರ್ಥಕವಾದ ಪನ್ ಧಾತುವಿಗೆ ಅತಿಶಾಯನಿಕಾರ್ಥದಲ್ಲಿ ಪ್ರತ್ಯಯವು ಸೇರಿ ಅತಿಶಯವಾದ ಸ್ತುತಿಗೆ ಪಾತ್ರನಾದವನು ಎಂದರ್ಥವಾಗುವುದು.

ನ—ಇಲ್ಲಿನ ನಶಬ್ದಕ್ಕೆ ಸಂಪ್ರತಿ ಅಂದರೆ ಈಗ ಎಂದರ್ಥ. ನಿರುಕ್ತದಲ್ಲಿ (ನಿರು. ೭-೩೧) ಅಸ್ತ್ಯುಪಮಾರ್ಥಸ್ಯ ಸಂಪ್ರತ್ಯರ್ಥೇ ಪ್ರಯೋಗ ಇಹೇವ ನಿಧೇಹಿ ಎಂದು ಹೇಳಿ ನಶಬ್ದಕ್ಕೆ ಇವಾರ್ಥಕತ್ವವನ್ನೂ, ಸಂಪ್ರತ್ಯರ್ಥಕತ್ವವನ್ನೂ ನಿರೂಪಣೆ ಮಾಡಿರುವರು.

ಇಂದ್ರಿಯಂ—ಇಂದ್ರತ್ವಸ್ಯ ಪರಮೈಶ್ವರ್ಯಸ್ಯ ಲಿಂಗಂ ಯಸ್ಯ ಇಂದ್ರಸ್ಯ ಏವಂವಿಧಂ । ಇದು ಇಂದ್ರನ ತೇಜಸ್ಸು ಎಂಬರ್ಥವನ್ನು ಸೂಚಿಸುವುದು. ಇಂದ್ರನಲ್ಲಿರುವ ಪರಮೈಶ್ವರ್ಯಸೂಚಕವಾದ ಅಂಶವನ್ನು ತೋರ್ಪಡಿಸುವ ತೇಜಸ್ಸೇ ಇದು. ಹವಿರ್ಲಕ್ಷಣವಿಶಿಷ್ಟವಾದ ಯಜ್ಞಭಾಗವನ್ನು ಇಂದ್ರನು ತನ್ನ ತೇಜಸ್ಸಿನ ಮೂಲಕ ಸ್ವೀಕರಿಸುತ್ತಾನೆ.

ಹರಿತೋ ನ—ಇಲ್ಲಿ ಕುದುರೆಗಳಂತೆ ಎಂದರ್ಥವು. ಸವಾರರು ತಮಗೆ ಇಷ್ಟಬಂದಕಡೆಗೆ ತಮ್ಮ ಕುದುರೆಗಳನ್ನು ನಡೆಸಿಕೊಂಡು ಹೋಗುವಂತೆ, ಇಂದ್ರನು ಹವಿರ್ಭಾಗವನ್ನು ಸ್ವೀಕರಿಸುವುದಕ್ಕಾಗಿ ತನ್ನ ತೇಜಸ್ಸನ್ನು ಅಲ್ಲಿಗೆ ಕಳುಹಿಸುವನು.

॥ ವ್ಯಾಕರಣಪ್ರಕ್ರಿಯಾ ॥

ಅಸ್ಮೈ—ಇದಮ್ ಶಬ್ದ ಚತುರ್ಥೀ ಏಕವಚನಾಂತರೂಪ. ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಉಷಃ—ಸಂಬುದ್ಧ್ಯಂತರೂಪ ಪದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಆಮಂತ್ರಿತಸ್ಯ (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಶುಭ್ರೇ—ಶುಭ ದೀಪ್ತೌ ಧಾತು. ಸ್ಫಾಯಿತಂಚಿವಂಚಿಶಕಿ—(ಉ. ಸೂ. ೨.೧೭೦) ಎಂಬುದರಿಂದ ರಕ್ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಶುಭ್ರ ಶಬ್ದವಾಗುತ್ತದೆ. ಸ್ತ್ರೀತ್ವದಲ್ಲಿ ಟಾಪ್ ಸಂಬುದ್ಧ್ಯಂತರೂಪ. ಆಮಂತ್ರಿತಸ್ಯಚ (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

ಭರ—ಹೃಞ್ ಹರಣೇ ಧಾತು. ಲೋಟ್ ಮಧ್ಯಮಪುರುಷೈಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. ಅತೋಹೇಃ ಸೂತ್ರದಿಂದ ಹಿಗೆ ಲುಕ್. ಶಪ್ ನಿಮಿತ್ತವಾಗ ಧಾತುವಿಗೆ ಗುಣ. ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ದ್ವ್ಯಚೋಽತಸ್ತಿಙಃ (ಪಾ. ಸೂ. ೬-೩-೧೩೫) ಎಂಬುದರಿಂದ ಇದು ದ್ವ್ಯಚ್ಕವಾಗಿರುವುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಪನೀಯಸೇ—ಪನ ವ್ಯವಹಾರೇ ಸ್ತುತೌ ಚ ಧಾತು. ಇಲ್ಲಿ ಸ್ತುತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಉಣಾದಿಯಲ್ಲಿ ಬಹುಲವಚನವಿರುವುದರಿಂದ ಕರ್ಮಣಿಯಲ್ಲಿ ಸರ್ವಧಾತುನಿಬಂಧನವಾದ ಅಸುನ್ ಪ್ರತ್ಯಯ ಬರುತ್ತದೆ. ಪನಸ್ ಶಬ್ದವಾಗುತ್ತದೆ. ಅತಿಶಯೇನ ಪನಃ ಎಂದು ಅರ್ಥ ವಿವಕ್ಷಾಮಾಡಿದಾಗ ದ್ವಿವಚನವಿಭಜ್ಯೋಪ—ಸೂತ್ರದಿಂದ ಅತಿಶಾಯನಿಕವಾದ ಈಯಸುನ್ ಪ್ರತ್ಯಯ. ಈಯಸುನ್ ಪರವಾದಾಗ ಟೇಃ ಎಂಬುದರಿಂದ ಪನಸ್ ಪ್ರಕೃತಿಯ ಟಿಗೆ (ಅಸ್) ಲೋಪ. ಪನೀಯಸ್ ಶಬ್ದವಾಗುತ್ತದೆ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀಏಕವಚನಾಂತರೂಪ.

ಇಂದ್ರಿಯಮ್—ಇಂದ್ರಿಯಮಿಂದ್ರಲಿಂಗ (ಪಾ. ಸೂ. ೫-೨-೯೩) ಎಂಬುದರಿಂದ ಇಂದ್ರ ಶಬ್ದಕ್ಕೆ ಘಚ್ ಪ್ರತ್ಯಯವು ನಿಪಾತಿತವಾಗಿದೆ. ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

ಅಕಾರಿ—ಡುಕೃಞ್ ಕರಣೇ ಧಾತು. ಛಂದಸಿಲುಙ್ ಲಙ್‌ಲಿಟಃ ಎಂಬುದರಿಂದ ವರ್ತಮಾನಾರ್ಥದಲ್ಲಿ ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಚಿಣ್‌ಭಾವಕರ್ಮಣೋಃ (ಪಾ. ಸೂ ೩-೧-೬೬) ಎಂಬುದರಿಂದ ಲುಙ್‌ನಲ್ಲಿ ಪ್ರಾಪ್ತವಾದ ಚ್ಲಿಗೆ ಚಿಣಾದೇಶ. ಚಿಣೋಲುಕ್ ಎಂಬುದರಿಂದ ಚಿಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಣಿತ್ತಾದುದರಿಂದ ಚಿಣ್ ಪರವಾದಾಗ ಧಾತುವಿಗೆ ವೃದ್ಧಿ. ಲುಙ್‌ನಿಮಿತ್ತವಾಗಿ ಅಡಾಗಮ. ಅಕಾರಿ ಎಂದು ರೂಪವಾಗುತ್ತದೆ. ಯಸ್ಯ ಎಂದು ಹಿಂದೆ ಸಂಬಂಧವಿರುವುದರಿಂದ ಯದ್ವೃತ್ತಾನ್ನಿತ್ಯಂ ಎಂಬುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಅಡಾಗಮ ಉದಾತ್ತವೆಂಬುದರಿಂದ ಆದ್ಯುದಾತ್ತವಾದ ಪದವಾಗುತ್ತದೆ.

ಅಯಸೇ—ಅಯ ಗತೌ ಧಾತು. ಭಾವಾರ್ಥದಲ್ಲಿ ಸರ್ವಧಾತುಭ್ಯೋಽಸುನ್ ಎಂಬುದರಿಂದ ಅಸುನ್ ಪ್ರತ್ಯಯ ಅಯಸ್ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

॥ ಸಂಹಿತಾಪಾಠಃ ॥

ಇಮೇ ತ ಇಂದ್ರ ತೇ ವಯಂ ಪುರುಷ್ಟುತ ಯೇ ತ್ವಾರಭ್ಯ ಚರಾಮಸಿ ಪ್ರಭೂವಸೋ ।
ನಹಿ ತ್ವದನ್ಯೋ ಗಿರ್ವಣೋ ಗಿರಃ ಸಘತ್ಕ್ಷೋಣೀರಿವ ಪ್ರತಿ ನೋ ಹರ್ಯ ತದ್ವಚಃ ॥ ೪ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಇಮೇ । ತೇ । ಇಂದ್ರ । ತೇ । ವಯಂ । ಪುರುಽಸ್ತುತ । ಯೇ । ತ್ವಾ । ಆಽರಭ್ಯ । ಚರಾಮಸಿ । ಪ್ರಭುವಸೋ ಇತಿ ಪ್ರಭುಽವಸೋ ।

ನಹಿ । ತ್ವತ್ । ಅನ್ಯಃ । ಗಿರ್ವಣಃ । ಗಿರಃ । ಸಘತ್ । ಕ್ಷೋಣೀಃಽಇವ ಪ್ರತಿ । ನಃ । ಹರ್ಯ । ತತ್ । ವಚಃ ॥ ೪ ॥

॥ ಸಾಯಣಭಾಷ್ಯ ॥

ಹೇ ಇಂದ್ರ ಪ್ರಭೂವಸೋ ಪ್ರಭೂತಧನ ಅತ ಏವ ಪುರುಷ್ಟುತ ಪುರುಭಿರ್ಬಹುಭಿರ್ಯಜಮಾನೈಃ ಸ್ತುತ ಯೇ ಚ ವಯಂ ತ್ವಾ ತ್ವಾಮಾರಭ್ಯಾತ್ರ್ಯಯತಯಾವಲಂಬ್ಯ ಚರಾಮಸಿ ಚರಾಮೋ ಯಾಗೇ ವರ್ತಾಮಹೇ ತ ಇಮೇ ವಯಂ ತೇ ತವ ಸ್ವಭೂತಾಃ । ಹೇ ಗಿರ್ವಣೋ ಗೀರ್ಭಿರ್ವನನೀಯೇಂದ್ರ ತ್ವದನ್ಯಸ್ತ್ವತ್ತೋಽನ್ಯಃ ಕಶ್ಚಿದಪಿ ಗಿರಃ ಸ್ತುತೀರ್ನಹಿ ಸಘತ್ । ನ ಹಿ ಪ್ರಾಪ್ನೋತಿ । ಅತಸ್ತ್ವಂ ನೋಽಸ್ಮಾಕಂ ತತ್ಸ್ತುತಿಲಕ್ಷಣಂ ವಚಃ ಪ್ರತಿ ಹರ್ಯ । ಕಾಮಯಸ್ವ । ಕ್ಷೋಣೀರಿವ । ಯಥಾ ಕ್ಷೋಣೀ ಪೃಥಿವೀ ಸ್ವಕೀಯಾನಿ ಭೂತಜಾತಾನಿ ಕಾಮಯತೇ ॥ ಚರಾಮಸಿ । ಇದಂತೋ ಮಸಿಃ । ಸಘತ್ । ಸಘ ಹಿಂಸಾರ್ಥಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ । ಯದ್ವೃತ್ತಯೋಗಾದನಿಘಾತಃ । ಸಘತ್ । ಸಘ ಹಿಂಸಾರ್ಥಃ ... ಅತ್ರ ಪ್ರಾಪ್ತ್ಯರ್ಥೋ ಧಾತೂನಾಮನೇಕಾರ್ಥತ್ವಾತ್ । ಲೇಟ್ಯಡಾಗಮಃ । ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಪಾದಾದಿತ್ವಾನ್ನಿಘಾತಾಭಾವಃ । ಕ್ಷೋಣೀರಿವ । ಹಲ್ಙ್ಯಾಬ್ಭ್ಯಃ ಇತಿ ಸುಲೋಪಾಭಾವಶ್ಛಾಂದಸಃ ॥

॥ ಪ್ರತಿಪದಾರ್ಥ ॥

ಪ್ರಭೂವಸೋ—ಸಮೃದ್ಧವಾದ ಧನವುಳ್ಳವನೂ । ಪುರುಷ್ಟುತ—(ಆದ್ದರಿಂದಲೇ) ಬಹು ಜನರಿಂದ ಸ್ತುತಿಸಲ್ಪಡುವವನೂ ಆದ । ಇಂದ್ರ—ಎಲೈ ಇಂದ್ರನೇ । ಯೇ—ಯಾವ ನಾವು । ತ್ವಾ—ನಿನ್ನನ್ನು । ಆರಭ್ಯ—ಆಶ್ರಯಿಸಿ । ಚರಾಮಸಿ—ಯಾಗದಲ್ಲಿ (ನಿನ್ನ ಸಮೀಪದಲ್ಲಿ)ರುತ್ತೇವೆಯೋ । ತೇ ಇಮೇ ವಯಂ—ಆ ನಾವು । ತೇ—ನಿನ್ನವರೇ ಆಗಿದ್ದೇವೆ । ಗಿರ್ವಣಃ—ಸ್ತುತಿಪ್ರೀತನಾದ ಇಂದ್ರನೇ । ತ್ವದನ್ಯಃ—ನಿನಗಿಂತ ಬೇರೆ ಯಾರೂ । ಗಿರಃ—ಸ್ತುತಿಗಳನ್ನು । ನಹಿ ಸಘತ್—ಹೊಂದುವುದಿಲ್ಲ (ಆದ್ದರಿಂದ) । ನಃ—ನಮ್ಮ । ತತ್—ಆ ಸ್ತುತಿರೂಪವಾದ । ವಚಃ—ವಾಕ್ಯಗಳನ್ನು । ಕ್ಷೋಣೀರಿವ—ಪೃಥಿವಿಯು (ತನ್ನಲ್ಲಿ ಉತ್ಪನ್ನವಾದ ಭೂತಗಳನ್ನು) ಪ್ರೀತಿಸುವಂತೆ (ಪೋಷಿಸುವಂತೆ) । ಪ್ರತಿ ಹರ್ಯ—ಪ್ರೀತಿಸು.



CC-0. Jangamwadi Math Collection. Digitized by eGangotri

|| ಭಾವಾರ್ಥ ||

ಎಲೈ ಇಂದ್ರನೇ, ನೀನು ಸಮೃದ್ಧವಾದ ಧನವುಳ್ಳವನು. ಮತ್ತು ಬಹುಜನರಿಂದ ಸ್ತುತಿಸಲ್ಪಡುವವನು. ನಾವು ನಿನ್ನನ್ನೇ ಆಶ್ರಯಿಸಿ ಯಾಗದಲ್ಲಿ ನಿನ್ನ ಸಮೀಪದಲ್ಲೇ ಇರುವುದರಿಂದ ನಿನ್ನವರೇ ಆಗಿದ್ದೇವೆ. ನೀನು ಸ್ತುತಿಪ್ರೀತನಾದುದರಿಂದ ನಿನ್ನನ್ನು ಬಿಟ್ಟು ಇತರರಿಗೂ ನಮ್ಮ ಸ್ತುತಿಗಳು ಹೋಗುವುದಿಲ್ಲ. ಪೃಥಿವಿಯು ತನ್ನಲ್ಲಿ ಉತ್ಪನ್ನವಾದ ಸಕಲ ಭೂತಗಳನ್ನೂ ಪೋಷಿಸುವಂತೆ ನೀನೂ ನಮ್ಮ ಆ ಸ್ತುತಿರೂಪಗಳಾದ ವಾಕ್ಕುಗಳನ್ನು ಪ್ರೀತಿಸಿ ಬೆಳಸು.

## English Translation.

Much-praised and most opulent Indra, we are those, who relying on your favour, approach you; accepter of praise, no other than you receives our commendations; be pleased (with our address) as the earth (cherishes her creatures).

|| ವಿಶೇಷವಿಷಯಗಳು ||

ಪ್ರಭೂವಸೋ—ಪ್ರಭೂತಂ ವಸು ಯಸ್ಯ ಎಂಬ ವ್ಯುತ್ಪತ್ತಿಯಂತೆ ವಿಶೇಷವಾದ ಐಶ್ವರ್ಯವುಳ್ಳವನು. ಅಥವಾ ತನ್ನ ಐಶ್ವರ್ಯವನ್ನು ಸರ್ವದಾ ಹೆಚ್ಚಿಸಿಕೊಳ್ಳುವವನು ಎಂಬರ್ಥವು ಈ ಪದದಿಂದ ವ್ಯಕ್ತವಾಗಿದೆ.

ಪುರುಷ್ಟುತ—ಪುರುಭಿಃ ಬಹುಭಿಃ ಯಜಮಾನೈಃ ಸ್ತುತ—ಯಾಗದಲ್ಲಿ ದೀಕ್ಷೆವಹಿಸಿರುವ ಸಮಸ್ತ ಯಜಮಾನರಿಂದಲೂ ಸ್ತುತಿಸಲ್ಪಡುವವನು

ಗಿರ್ವಣಃ—ಗೀರ್ಭಿಃ ವನನೀಯಃ—ಸ್ತುತಿವಚನಗಳಿಂದ ಸರ್ವದಾ ಸ್ತುತಿಸಲ್ಪಡುವವನು.

ನಹಿ ಸಘತ್—ನಹಿ ಪ್ರಾಪ್ನೋತಿ—ಸಘ ಹಿಂಸಾಯಾಂ ಎಂಬ ಹಿಂಸಾರ್ಥಕಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ಹಿಂಸಿಸುವುದಿಲ್ಲ ಎಂದರ್ಥವನ್ನು ಕೊಡಬೇಕಾಗಿದ್ದರೂ, ಧಾತೂನಾಮನೇಕಾರ್ಥತ್ವಾತ್ ಎಂಬ ವಾಕ್ಯದಂತೆ ಇಲ್ಲಿ ಹೊಂದುವುದಿಲ್ಲ ಎಂಬರ್ಥವನ್ನು ಸೂಚಿಸಿದ್ದಾರೆ.

ಪ್ರತಿ ನೋ ಹರ್ಯ ತದ್ವಚಃ—ನಾವು ಹೇಳುವ ಸ್ತುತಿಯಲ್ಲಿ ನೀನು ವಿಶೇಷವಾದ ಪ್ರೀತಿಯನ್ನಿಡು. ಇದಕ್ಕೆ ದೃಷ್ಟಾಂತವಾಗಿ, ಭೂಮಿಯು ತನ್ನಲ್ಲಿರುವ ಸಮಸ್ತ ಪ್ರಾಣಿಗಳನ್ನು ಹೇಗೆ ಪ್ರೀತಿಸಿ ಪೋಷಿಸುವುದೋ ಹಾಗೆ ನೀನು ನಮ್ಮ ಸ್ತುತಿವಚನಗಳನ್ನು ಆದರದಿಂದ ಕೇಳಿ ನಮ್ಮನ್ನು ಸಂರಕ್ಷಿಸು ಎಂದಭಿಪ್ರಾಯವು.

|| ವ್ಯಾಕರಣಪ್ರಕ್ರಿಯಾ ||

ಪುರುಷ್ಟುತ—ಪುರುಭಿಃ ಬಹುಭಿಃ ಸ್ತುತಃ ಪುರುಷ್ಟುತಃ | ಷ್ಟುಞ್ ಸ್ತುತೌ ಧಾತು ಅದಾದಿ. ಕರ್ಮಣಿಯಲ್ಲಿ ಕ್ತಪ್ರತ್ಯಯ. ಸಂಬುದ್ಧ್ಯಂತರೂಪ ಆಮಂತ್ರಿತಸ್ಯಚ (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಆರಭ್ಯ—ರಭ ರಾಭಸ್ಯೇ ಧಾತು ಭ್ವಾದಿ. ಇದು ಸಾಮಾನ್ಯವಾಗಿ ಆಙ್ ಪೂರ್ವವಾಗಿಯೇ ಇರುತ್ತದೆ. ಸಮಾಸೇ ನಞ್‌ಪೂರ್ವೇ—ಸೂತ್ರದಿಂದ ಕ್ತ್ವಾಪ್ರತ್ಯಯಕ್ಕೆ ಲ್ಯಬಾದೇಶ. ಪಿತ್ತಾದುದರಿಂದ ಅನುದಾತ್ತವಾಗುತ್ತದೆ.

ಚರಾಮಸಿ—ಚರ ಗತಿಭಕ್ಷಣಯೋಃ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಕರ್ತರಿಶಪ್ ಸೂತ್ರದಿಂದ ಶಪ್ ವಿಕರಣ. ಅತೋದೀರ್ಘೋಯಞಿ ಎಂಬುದರಿಂದ ವಿಕರಣವಿಶಿಷ್ಟಾಂಗಕ್ಕೆ ದೀರ್ಘ. ಇದಂತೋಮಸಿಃ (ಪಾ. ಸೂ. ೭-೧-೪೬) ಎಂಬುದರಿಂದ ಪ್ರತ್ಯಯಕ್ಕೆ ಇಕಾಗಮ. ಯೇ ಎಂದು ಹಿಂದೆ ಯಚ್ಛಬ್ದವಿರುವುದರಿಂದ ನಿಘಾತಸ್ವರ ಪ್ರತಿಷೇಧ ಬರುತ್ತದೆ. ಶಪ್ ಪಿತ್ತಾದುದರಿಂದ ಅನುದಾತ್ತ. ಅನುದಾತ್ತೋಪದೇಶದಪರದಲ್ಲಿರುವುದರಿಂದ ಲಸಾರ್ವಧಾತುಕವು (ಮಸಿ) ಅನುದಾತ್ತ. ಆಗ ಧಾತುಸ್ವರ ಉಳಿಯುತ್ತದೆ.

ಸಘುತ್—ಷಘ ಹಿಂಸಾಯಾಂ ಧಾತು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ಇಲ್ಲಿ ಇದು ಪ್ರಾಪ್ತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಧಾತ್ವಾದೇಃಷಃಸಃ ಎಂಬುದರಿಂದ ಆದಿ ಷಕಾರಕ್ಕೆ ಸಕಾರಾದೇಶ. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇತಶ್ಚಲೋಪಃ ಪರಸ್ಮೈಪದೇಷು ಎಂಬುದರಿಂದ ಆದರ ಇಕಾರಕ್ಕೆ ಲೋಪ. ಲೇಟೋಡಾಟೌ (ಪಾ. ಸೂ. ೩-೪-೯೪) ಎಂಬುದರಿಂದ ಅದಕ್ಕೆ ಅಡಾಗಮ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ ಲುಕ್. ಪದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯ ಪಿತ್ತಾದುದರಿಂದ ಅನುದಾತ್ತ. ಧಾತುಸ್ವರದಿಂದ ಆದ್ಯುದಾತ್ತವಾಗುತ್ತದೆ.

ಕ್ಷೋಣೀರಿವ—ಕ್ಷೋಣೀ ಶಬ್ದವು ಙ್ಯಂತವಾದುದರಿಂದ ನಿತ್ಯಸ್ತ್ರೀಲಿಂಗ. ಇದಕ್ಕೆ ಸು ಪರವಾದಾಗ ಹಲ್‌ಙ್ಯಾಭ್ಯೋ ಸೂತ್ರದಿಂದ ಸುವಿಗೆ ಲೋಪ ಪ್ರಾಪ್ತವಾಗುತ್ತದೆ. ಆದರೆ ಇಲ್ಲಿ ಛಾಂದಸವಾಗಿ ಲೋಪ ಬರುವುದಿಲ್ಲ. ಸಸಜುಷೋರುಃ ಎಂಬುದರಿಂದ ಅದಕ್ಕೆ ರುತ್ವ.

ಹರ್ಯ—ಹರ್ಯ ಗತಿಕಾಂತ್ಯೋಃ ಧಾತು. ಕಾಂತಿ ಎಂದರೆ ಇಚ್ಛಾ. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. ಅದಕ್ಕೆ ಹಿ ಆದೇಶ. ವಿಕರಣ ಬಂದಾಗ ಅಕಾರದ ಪರದಲ್ಲಿರುವುದರಿಂದ ಅತೋಹೇಃ ಎಂಬುದರಿಂದ ಅದಕ್ಕೆ ಲುಕ್. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಭೂರಿ ತ ಇಂದ್ರ ವೀರ್ಯಂ ತವ ಸ್ಮಸ್ಯಸ್ಯ ಸ್ತೋತುರ್ಮಘವನ್ಕಾಮ-
ಮಾ ಪೃಣ ।
ಅನು ತೇ ದ್ಯೌರ್ಬೃಹತೀ ವೀರ್ಯಂ ಮಮ ಇಯಂ ಚ ತೇ ಪೃಥಿವೀ
ನೇಮ ಓಜಸೇ ॥ ೫ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಭೂರಿ । ತೇ । ಇಂದ್ರ । ವೀರ್ಯಂ । ತವ । ಸ್ಮಸಿ । ಅಸ್ಯ । ಸ್ತೋತುಃ । ಮಘಽವನ್ ।
ಕಾಮಂ । ಆ । ಪೃಣ ।

ಅನು । ತೇ । ದ್ಯೌಃ । ಬೃಹತೀ । ವೀರ್ಯಂ । ಮಮೇ । ಇಯಂ । ಚ । ತೇ ।
ಪೃಥಿವೀ । ನೇಮೇ । ಓಜಸೇ ॥ ೫ ॥

॥ ಸಾಯಣಭಾಷ್ಯಂ ॥

ಹೇ ಇಂದ್ರ ತೇ ತವ ವೀರ್ಯಂ ಸಾಮರ್ಥ್ಯಂ ಭೂರಿ ಬಹು । ನ ಕೇನಾಪ್ಯವಚ್ಛೇತ್ತುಂ ಶಕ್ಯತೇ । ತಾದೃಶಸ್ಯ ತವ ವಯಂ ಸ್ಮಸಿ । ಸ್ವಭೂತಾ ಭವಾಮಃ । ಹೇ ಮಘವನ್ನಸ್ಯ ಸ್ತೋತುಃ ತ್ವಾಂ ಸ್ತುವತೋ ಯಜಮಾನಸ್ಯ ಕಾಮಮಭಿಲಾಷಮಾ ಪೃಣ । ಆಪೂರಯ । ಬೃಹತೀ ದ್ಯೌರ್ಮಹಾನ್ ದ್ಯುಲೋಕೋಽಪಿ ತೇ ತವ ವೀರ್ಯಮನು ಮಮೇ । ಅನ್ವಮಂಸ್ತ । ಇಂದ್ರೇಣ ಸಹಾವಸ್ಥಾನಾದಿಯಂ ಚೇಯಮಪಿ ಪೃಥಿವೀ ತೇ ತವೌಜಸೇ ಬಲಾಯ ನೇಮೇ । ಪ್ರಹ್ವೀಬಭೂವ । ತ್ವದ್ಬಲಾದ್ಭೀತಾ ಸತ್ಯಧ ಏವ ವರ್ತತ ಇತಿ ಭಾವಃ ॥ ಸ್ಮಸಿ । ಅಸ ಭುವಿ । ಲಟ್ ಶ್ನಸೋರಲ್ಲೋಪ ಇತ್ಯಕಾರಲೋಪಃ । ಇದಂತೋ ಮಸಿಃ । ಪೃಣ । ಪೃಣ ಪ್ರೀಣನೇ । ಅತ್ರ ಪ್ರೀತಿಹೇತುತಯಾ ಪೂರಣಂ ಲಕ್ಷ್ಯತೇ । ತುದಾದಿತ್ವಾಚ್ಛಪ್ರತ್ಯಯಃ । ತಸ್ಯ ಙಿತ್ತ್ವಾದ್ಗುಣಾಭಾವಃ । ಮಮೇ । ಮಾಙ್ ಮಾನೇ ಶಬ್ದೇ ಚ । ಙಿತ್ತ್ವಾದಾತ್ಮನೇಪದಂ । ಲಿಟ್ಯಾತೋ ಲೋಪ ಇಟಿ ಚೇತ್ಯಾಕಾರಲೋಪಃ । ನೇಮೇ । ಣಮು ಪ್ರಹ್ವತ್ವೇ । ಲಿಟ್ಯತ ಏಕಹಲ್ಮಧ್ಯ ಇತ್ಯೇತ್ವಾಭ್ಯಾಸಲೋಪೌ । ತಿಙ್ಙತಿಙ ಇತಿ ನಿಘಾತಃ ॥

॥ ಪ್ರತಿಪದಾರ್ಥ ॥

ಇಂದ್ರ—ಎಲೈ ಇಂದ್ರನೇ । ತೇ—ನಿನ್ನ । ವೀರ್ಯಂ—ಪರಾಕ್ರಮವು । ಭೂರಿ—ಅಧಿಕವಾದುದು । ತವ—(ಅಂತಹ) ನಿನ್ನ (ಸಂಬಂಧಿಗಳಾಗಿ) । ಸ್ಮಸಿ—(ನಾವು) ಇದ್ದೇವೆ । ಮಘವನ್—ಎಲೈ ಇಂದ್ರನೇ । ಅಸ್ಯ ಸ್ತೋತುಃ—ನಿನ್ನನ್ನು ಸ್ತೋತ್ರಮಾಡತಕ್ಕ ಈ ಯಜಮಾನನ । ಕಾಮಂ—ಅಭಿಲಾಷೆಯನ್ನು । ಆ ಪೃಣ—ಪೂರೈಸು । ಬೃಹತೀ—ಮಹತ್ತಾದ । ದ್ಯೌಃ—ದ್ಯುಲೋಕವು । ತೇ—ನಿನ್ನ । ವೀರ್ಯಂ—ಪರಾಕ್ರಮವನ್ನು । ಅನು ಮಮೇ—ಅಂಗೀಕರಿಸಿದೆ । ಇಯಂ ಚ ಪೃಥಿವೀ—ಈ ಪೃಥ್ವಿಯೂ ಸಹ । ತೇ—ನಿನ್ನ । ಓಜಸೇ—ಶಕ್ತಿಗೆ (ಶಕ್ತಿಯ ಮುಂದೆ) । ನೇಮೇ—(ನಮ್ರಳಾಗಿ) ಬಗ್ಗಿದೆ.



CC-0. Jangamwadi Math Collection. Digitized by eGangotri

|| ಭಾವಾರ್ಥ ||

ಎಲೈ ಇಂದ್ರನೇ, ನಿನ್ನ ಪರಾಕ್ರಮವು ಅತ್ಯಧಿಕವಾದುದು. ನಾವು ಅಂತಹ ನಿನ್ನ ಸಂಬಂಧಿಗಳಾಗಿ ನಿನ್ನವರೇ ಆಗಿದ್ದೇವೆ. ಎಲೈ ಇಂದ್ರನೇ, ನಿನ್ನನ್ನು ಸ್ತುತಿಸತಕ್ಕ ಈ ಯಜಮಾನನ ಅಭಿಲಾಷೆಯನ್ನು ಪೂರೈಸು. ಮಹತ್ತಾದ ದ್ಯುಲೋಕವು ನಿನ್ನ ಪರಾಕ್ರಮವನ್ನು ಅಂಗೀಕರಿಸಿದೆ. ಈ ಪೃಥ್ವಿಯೂ ಸಹ ನಿನ್ನ ಶಕ್ತಿಯ ಮುಂದೆ ನಮ್ರವಾಗಿ ಬಗ್ಗಿದೆ.

## English Translation.

Indra, great is your prowess; we are yours; satisfy, Maghavan, the desires of this your worshipper; the vast heaven has acknowledged your might; this earth has been bowed down through your vigour.

|| ವಿಶೇಷ ವಿಷಯಗಳು ||

ಸ್ಮಸಿ—ಸ್ವಭೂತಾ ಭವಾಮಃ । ಇದು ಅಸ ಭುವಿ ಎಂಬ ಧಾತುವಿನಿಂದ ಅಕಾರಲೋಪವಾಗಿ ನಿಷ್ಪನ್ನವಾಗಿದೆ. ನಿನ್ನವರಾಗಿ ಆಗುವೆವು ಎಂದು ಇದರ ಅರ್ಥ.

ಆ ಪೃಣ—ಆಪೂರಯ—ಪೃಣ-ಪ್ರೀಣನೇ ಎಂಬ ಧಾತುವಿನಿಂದ ಉಂಟಾದ ಈ ಶಬ್ದವು ಪ್ರೀತಿ ಹೇತುಕವೆಂಬ ಅರ್ಥವನ್ನು ಕೊಡುವುದಾದರೂ, ಲಕ್ಷಣಾವೃತ್ತಿಯಿಂದ ಪೂರಣಾರ್ಥವನ್ನು ಕಲ್ಪಿಸಿರುವರು. ಸಂಪೂರ್ಣವಾಗಿ ನಮ್ಮ ಇಷ್ಟಾರ್ಥಗಳನ್ನು ಪೂರೈಸು ಎಂದು ಇದರ ತಾತ್ಪರ್ಯಾರ್ಥ.

ನೇಮೇ—ಣಮು-ಪ್ರಹ್ವತ್ವೇ ಎಂಬ ಧಾತುವಿನಿಂದ ಹುಟ್ಟಿದ ರೂಪ ಇದು. ನಿನ್ನ ಬಲದಿಂದ ಹೆದರಿದ ಭೂಮಿಯು ನಿನಗೆ ನಮ್ರವಾಗಿರುವುದು ಎಂದು ಇಂದ್ರನನ್ನು ಸ್ತುತಿಸಲಾಗಿದೆ.

|| ವ್ಯಾಕರಣಪ್ರಕ್ರಿಯಾ ||

ಸ್ಮಸಿ—ಅಸ ಭುವಿ ಧಾತು ಅದಾದಿ. ಲಟ್ ಮಧ್ಯಮಪುರುಷ ಬಹುವಚನದಲ್ಲಿ ಮಸ್ ಪ್ರತ್ಯಯ. ಅದಿಪ್ರಭೃತಿಭ್ಯಃ ಶಪಃ ಸೂತ್ರದಿಂದ ಶಪಿಗೆ ಲುಕ್. ಸಾರ್ವಧಾತುಕಮಪಿತ್ ಎಂಬುದರಿಂದ ಪ್ರತ್ಯಯವು ಙಿದ್ವದ್ಭಾವವನ್ನು ಹೊಂದುವುದರಿಂದ ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಎಂಬುದರಿಂದ ಮಸ್ ಪರವಾದಾಗ ಅಸಿನ ಅಕಾರಕ್ಕೆ ಲೋಪ. ಇದಂತೋ ಮಸಿ ಎಂಬುದರಿಂದ ಮಸಿಗೆ ಇಕಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಸ್ಯ—ಇದಮ್ ಶಬ್ದ ಷಷ್ಠೀಏಕವಚನಾಂತರೂಪ. ಊಡಿದಂಪದಾದಿ ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಸ್ತೋತುಃ—ಷ್ಟುಞ್ ಸ್ತುತೌ ಧಾತು. ಕರ್ತ್ರರ್ಥದಲ್ಲಿ ತೃಚ್ ಪ್ರತ್ಯಯ. ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನಾಂತರೂಪ.



CC-0. Jangamwadi Math Collection. Digitized by eGangotri

ಪೃಣ—ಪೃಣ ಪ್ರೀಣನೇ ಧಾತು. ಇಲ್ಲಿ ಪ್ರೀತಿ ಹೇತುವಾದ ಪೂರಣಾರ್ಥವು ಲಕ್ಷಣಾವೃತ್ತಿಯಿಂದ ತೋರುತ್ತದೆ. ಲೋಟ್ ಮಧ್ಯಮಪುರುಷದ ಸಿಪಿಗೆ ಹಿ ಆದೇಶ. ತುದಾದಿಭ್ಯಃ ಶಃ ಸೂತ್ರದಿಂದ ಶ ವಿಕರಣ. ಸಾರ್ವಧಾತುಕಮಪಿತ್ ಸೂತ್ರದಿಂದ ಅದು ಙಿತ್ತಾದುದರಿಂದ ಪುಗಂತಲಘೂಪಧಸ್ಯ ಚ ಸೂತ್ರದಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಅತೋಹೇಃ ಸೂತ್ರದಿಂದ ಹಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

ಮಮೇ—ಮಾಙ್ ಮಾನೇ ಶಬ್ದೇಚ ಧಾತು. ಙಿತ್ತಾದುದರಿಂದ ಅನುದಾತ್ತ. ಙಿತ ಆತ್ಮನೇಪದಮ್ ಎಂಬುದರಿಂದ ಆತ್ಮನೇ ಪದಪ್ರತ್ಯಯವನ್ನು ಹೊಂದುತ್ತದೆ. ಲಿಟ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯಕ್ಕೆ ಲಿಟಃತಝಯೋರೇಶಿರೇಚ್ ಎಂಬುದರಿಂದ ಏಶಾದೇಶ. ಶಿತ್ತಾದುದರಿಂದ ಸರ್ವಾದೇಶವಾಗಿ ಬರುತ್ತದೆ. ಲಿಣ್ಣಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಅಸಂಯೋಗಾಲ್ಲಿಟ್‌ಕಿತ್ ಎಂಬುದರಿಂದ ಪ್ರತ್ಯಯವು ಕಿತ್ತಾದುದರಿಂದ ಅದು ಪರವಾದಾಗ ಅತೋಲೋಪ ಇಟಿಚ (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ತಿಙಂತನಿಘಾತಸ್ವರ ಬರುತ್ತದೆ.

ನೇಮೇ— ಣಮು ಪ್ರಹ್ವತ್ವೇ (ಶಬ್ದೇಚ) ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಏಶಾದೇಶ. ಕಿತ್ತಾದುದರಿಂದ ದ್ವಿತ್ವ ಬಂದಾಗ ಧಾತುವಿನ ಅಕಾರವು ಅಸಂಯುಕ್ತ ಹಲ್ ಮಧ್ಯದಲ್ಲಿರುವುದರಿಂದ ಅತ ಏಕಹಲ್‌ಮಧ್ಯೇಽನಾದೇಶಾದೇರ್ಲಿಟಿ (ಪಾ. ಸೂ. ೬-೪-೧೨೦) ಎಂಬುದರಿಂದ ಧಾತುವಿನ ಅಕಾರಕ್ಕೆ ಏತ್ವವೂ ಅಭ್ಯಾಸಕ್ಕೆ ಲೋಪವೂ ಬರುತ್ತನೆ. ನೇಮೇ ಎಂದು ರೂಪವಾಗುತ್ತದೆ. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತ್ವಂ ತಮಿಂದ್ರ ಪರ್ವತಂ ಮಹಾಮುರುಂ ವಜ್ರೇಣ ವಜ್ರಿನ್ಪರ್ವಶಶ್ಚಕರ್ತಿಥ ।
ಅವಾಸೃಜೋ ನಿವೃತಾಃ ಸರ್ತವಾ ಅಪಃ ಸತ್ರಾ ವಿಶ್ವಂ ದಧಿಷೇ ಕೇವಲಂ ಸಹಃ ॥ ೬ ॥

॥ ಪದಪಾಠಃ ॥

ತ್ವಂ । ತಂ । ಇಂದ್ರ । ಪರ್ವತಂ । ಮಹಾಂ । ಉರುಂ । ವಜ್ರೇಣ । ವಜ್ರಿನ್ । ಪರ್ವಽಶಃ । ಚಕರ್ತಿಥ ।
ಅವ । ಅಸೃಜಃ । ನಿಽವೃತಾಃ । ಸರ್ತವೈ । ಅಪಃ । ಸತ್ರಾ । ವಿಶ್ವಂ । ದಧಿಷೇ । ಕೇವಲಂ । ಸಹಃ ॥ ೬ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಹೇ ವಜ್ರಿನ್ವಜ್ರವನ್ನಿಂದ್ರ ತ್ವಂ ತಂ ಪ್ರಸಿದ್ಧಂ ಮಹಾಮಾಯೊಮತೋ ಮಹಾಂತಮುರುಂ ವಿಸ್ತೀರ್ಣಂ ಪರ್ವತಂ ಪರ್ವವಂತಂ ಮೇಘಂ ವೃತ್ರಾಸುರಂ ವಾ ವಜ್ರೇಣಾಯುಧೇನ ಪರ್ವಶಃ ಪರ್ವಣಿ ಪರ್ವಣಿ ಚಕರ್ತಿಥ । ಶಕಲೀಚಕೃಷೇ । ತೇನ ಮೇಘೇನ ನಿವೃತಾ ಆವೃತಾ ಅಪಃ ಸರ್ತವೈ ಸರಣಾಯ ಗಮನಾಯ ಅವಾಸೃಜಃ । ಅವಾಙ್ಮುಖಮುಸ್ರಾಕ್ಷೀಃ । ಅತಸ್ತ್ವಮೇವ ಕೇವಲಂ ವಿಶ್ವಂ ವ್ಯಾಪ್ತಂ ಸಹೋ ಬಲಂ ದಧಿಷೇ । ಧಾರಯಸಿ । ನಾನ್ಯಃ ಕಶ್ಚಿದಿತಿ । ಯದೇತತ್ತತ್ಸತ್ರಾ ಸತ್ಯಮೇವ । ಸತ್ರೇತಿ ಸತ್ಯನಾಮ । ಸತ್ರೇತ್ಥೇತಿ ತನ್ನಾಮಸು ಪಾಠಾತ್ ॥ ಮಹಾಂ । ಮಹಾಂತಂ । ನಕಾರತಕಾರಯೋ-ರ್ಲೋಪಶ್ಛಾಂದಸಃ । ಚಕರ್ತಿಥ । ಕೃತೀ ಛೇದನೇ । ಲಿಟಿ ಥಲ್ಯಭ್ಯಾಸಸ್ಯೋರದತ್ವಹಲಾದಿಶೇಷಚು-ತ್ವಾನಿ । ಸರ್ತವೈ । ಕೃತ್ಯಾರ್ಥೇ ತವೈಕೇನಿತಿ ಭಾವೇ ತವೈಪ್ರತ್ಯಯಃ । ಕೃನ್ಮೇಜಂತಃ । ಪಾ. ೧-೧-೩೯ । ಇತ್ಯವ್ಯಯತ್ವೇಽವ್ಯಯಾದಾಪ್ಸುಪ ಇತಿ ಸುಪೋ ಲುಕ್ । ಅಂತಶ್ಚ ತವೈ ಯುಗಪದಿತ್ಯಾದ್ಯಂತಯೋ-ರ್ಯುಗಪದುದಾತ್ತತ್ವಂ । ದಧಿಷೇ । ಲಿಟಿ ಕ್ರಾದಿನಿಯಮಾದಿಟ್ ॥

॥ ಪ್ರತಿಪದಾರ್ಥ ॥

ವಜ್ರಿನ್—ವಜ್ರಾಯುಧವುಳ್ಳ । ಇಂದ್ರ—ಇಂದ್ರನೇ । ತ್ವಂ—ನೀನು । ತಂ—ಆ ಪ್ರಸಿದ್ಧವಾದ । ಮಹಾಂ—ಮಹತ್ತಾದುದೂ । ಉರುಂ—ವಿಸ್ತಾರವಾದುದೂ ಆದ । ಪರ್ವತಂ—ಮೇಘವನ್ನು ಅಥವಾ ವೃತ್ರನನ್ನು । ವಜ್ರೇಣ—ನಿನ್ನ ವಜ್ರಾಯುಧದಿಂದ । ಪರ್ವಶಃ—ಪ್ರತಿಯೊಂದು ಏಣುಗಳಲ್ಲಿಯೂ । ಚಕರ್ತಿಥ—ಚೂರುಚೂರಾಗಿ ಸೀಳಿದ್ದೀಯೆ । ನಿವೃತಾಃ—(ಆ ಮೇಘದಿಂದ) ಆವರಿಸಲ್ಪಟ್ಟ । ಅಪಃ—ನೀರುಗಳನ್ನು । ಸರ್ತವೈ—ಹರಿಯುವುದಕ್ಕಾಗಿ । ಅವಾಸೃಜಃ—ಕೆಳಕ್ಕೆ ಸುರಿಸಿದೆ (ಆದ್ದರಿಂದ) । ಕೇವಲಂ—ನೀನೊಬ್ಬನೇ । ವಿಶ್ವಂ ಸಹಃ—ಸಕಲ ಶಕ್ತಿಯನ್ನೂ । ದಧಿಷೇ—ಹೊಂದಿದ್ದೀಯೆಂಬುದು । ಸತ್ರಾ—ಸತ್ಯವು.

॥ ಭಾವಾರ್ಥ ॥

ವಜ್ರಾಯುಧಧಾರಿಯಾದ ಎಲೈ ಇಂದ್ರನೇ, ನೀನು ಮಹತ್ತಾದುದೂ, ವಿಸ್ತಾರವಾದುದೂ ಆದ ಪ್ರಸಿದ್ಧವಾದ ಆ ಮೇಘವನ್ನು ನಿನ್ನ ವಜ್ರಾಯುಧದಿಂದ ಚೂರು ಚೂರಾಗಿ ಸೀಳಿದೆ. ಅದರಿಂದ ಆವರಿಸಲ್ಪಟ್ಟ ನೀರುಗಳನ್ನು ಹರಿಯುವುದಕ್ಕಾಗಿ ಕೆಳಕ್ಕೆ ಸುರಿಸಿದೆ. ಆದ್ದರಿಂದ ಸಕಲ ಶಕ್ತಿಯನ್ನೂ ನೀನೊಬ್ಬನೇ ಹೊಂದಿದ್ದೀಯೆಂಬುದು ಸತ್ಯವಾದ ವಿಷಯವಾಗಿದೆ.

## English Translation.

Weilder of the thunderbolt, you have shattered with your bolt, the broad and massive cloud into fragments, and have sent down the waters that were confined in it, to flow (at will); verily you alone possess all power.

॥ ವಿಶೇಷ ವಿಷಯಗಳು ॥

ಮಹಾಂ—ವಿಸ್ತಾರದಲ್ಲಿ ಹೆಚ್ಚು ದೊಡ್ಡದಾದದ್ದು.





CC-0. Jangamwadi Math Collection. Digitized by eGangotri

**ಪರ್ವತಂ**—ಈ ಪದಕ್ಕೆ ಮೇಘವೆಂದೂ (ನಿ. ೨-೨೧) ಮೇಘರೂಪದಿಂದ ಇರುವ ವೃತ್ರಾಸುರನೆಂದೂ, ಪರ್ವತವೆಂದೂ ಅರ್ಥಗಳಿರುವುವು. **ಪರ್ವವಾನ್ ಪರ್ವತಃ । ಪರ್ವ ಪುನಃ ಪ್ರೀಣಾತೇರ್ವಾ । ದೇವಾನ್. ಸ್ಮಿನ್ ಪ್ರೀಣಂತೀತಿ । ಮೇಘೋಽಪಿ ಗಿರಿರೇತಸ್ಮಾದೇವ ।** (ನಿ. ೧-೨೦) ಎಂದು ಯಾಸ್ಕರು ಹೇಳಿರುವರು.

**ಸತ್ರಾ**—ಇದು ಸತ್ಯವೆಂಬ ಅರ್ಥವನ್ನು ಸೂಚಿಸುವುದು. **ಸತ್ರಾ ಇತ್ಥಾ** (ನಿ. ೩-೧೦) ಎಂಬುದಾಗಿ ಸತ್ರಾಶಬ್ದವನ್ನು ಸತ್ಯಪರ್ಯಾಯಪದವನ್ನಾಗಿ ಪಾಠಮಾಡಿದ್ದಾರೆ.

**ಪರ್ವಶಃ**-**ಪರ್ವಣಿ ಪರ್ವಣಿ** ಖಂಡಖಂಡವಾಗಿ ಎಂದರ್ಥ.

|| ವ್ಯಾಕರಣಪ್ರಕ್ರಿಯಾ ||

**ಮಹಾನ್**—ಮಹಚ್ಛಬ್ದ. ದ್ವಿತೀಯಾ ಏಕವಚನದಲ್ಲಿ ಮಹಾಂತಂ ಎಂದು ರೂಪವಾಗುತ್ತದೆ. ಸಂಹಿತಾದಲ್ಲಿ ನಕಾರತಕಾರಗಳಿಗೆ ಛಾಂದಸವಾಗಿ ಲೋಪಬರುತ್ತದೆ.

**ಪರ್ವಶಃ**—**ಸಂಖ್ಯೈಕವಚನಾಚ್ಚ ವೀಪ್ಸಾಯಾಂ** (ಪಾ. ಸೂ. ೫-೪-೪೩) ಎಂಬುದರಿಂದ ವೀಪ್ಸಾ ತೋರುವಾಗ ಏಕತ್ವವಿಶಿಷ್ಟಾರ್ಥವಾಚಕವಾದ ಪರ್ವ ಶಬ್ದಕ್ಕೆ ಶಸ್ ಪ್ರತ್ಯಯ.

**ಚಕರ್ತಿಥ**—ಕೃತೀ ಛೇದನೇ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ **ಪರಸ್ಮೈಪದಾನಾಂ** ಸೂತ್ರದಿಂದ ಥಲಾದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಉರತ್** ಎಂಬುದರಿಂದ ಅತ್ವ. ರಪರವಾಗಿ ಬರುವುದರಿಂದ ಪುನಃ ಹಲಾದಿಶೇಷ. **ಕುಹೋಶ್ಚುಃ** ಎಂಬುದರಿಂದ ಚುತ್ವದಿಂದ ಕಕಾರಾದೇಶ. **ಆರ್ಧಧಾತುಕಸ್ಯೇ**—ಸೂತ್ರದಿಂದ ಥಲಿಗೆ ಇಡಾಗಮ. **ಪುಗಂತಲಘೂಪಧಸ್ಯ ಚ** ಎಂಬುದರಿಂದ ಧಾತುವಿನ ಲಘೂಪಧೆಗೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಸೃಜಃ** ಸೃಜ.ವಿಸರ್ಗೇ ಧಾತು ತುದಾದಿ. ಲಙ್ ಮಧ್ಯಮಪುರುಷ ಏಕವಚನದರೂಪ. ಶ ವಿಕರಣ ಙಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಸರ್ತವೈ**—ಸೃ ಗತೌ ಧಾತು. ಇದಕ್ಕೆ **ಕೃತ್ಯಾರ್ಥೇ ತವೈಕೇನ್** (ಪಾ. ಸೂ. ೩-೪-೧೪) ಎಂಬುದರಿಂದ ಭಾವಾರ್ಥದಲ್ಲಿ ತವೈ ಪ್ರತ್ಯಯ. **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿನ ಇಕಿಗೆ ಗುಣ. **ಕೃನ್ಮೇಜಂತಃ** (ಪಾ. ಸೂ. ೧-೧-೩೯) ಮಕಾರಾಂತ ಏಜಂತವಾದ ಕೃತ್ ಪ್ರತ್ಯಯವು ಅಂತದಲ್ಲಿರುವ ಶಬ್ದಸ್ವರೂಪವು ಅವ್ಯಯ ಸಂಜ್ಞೆಯನ್ನು ಹೊಂದುತ್ತದೆ ಎಂಬುದರಿಂದ ಇಲ್ಲಿ ಐಕಾರಾಂತವಾದುದರಿಂದ ಅವ್ಯಯತ್ವವು ಬಂದಾಗ ಇದರ ಪರದಲ್ಲಿ ಬಂದ ಚತುರ್ಥಿಗೆ **ಅವ್ಯಯಾದಾಪ್ಸುಪಃ** (ಪಾ. ಸೂ. ೨-೪-೮೨) ಎಂಬುದರಿಂದ ಲುಕ್ ಬರುತ್ತದೆ. **ಅಂತಶ್ಚ ತವೈ ಯುಗಪತ್** (ಪಾ. ಸೂ. ೬-೧-೨೦೦) ಎಂಬುದರಿಂದ ಪ್ರತ್ಯಯಾಂತದ ಅದ್ಯಂತಕ್ಕೆ ಏಕಕಾಲದಲ್ಲಿ ಉದಾತ್ತಸ್ವರ ಬರುತ್ತದೆ.

**ದಧಿಷೇ** — ಡುಧಾಞ್ ಧಾರಣಪೋಷಣಯೋಃ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ಲಿಟ್. ಮಧ್ಯಮಪುರುಷ ಏಕವಚನದಲ್ಲಿ **ಥಾಸಃಸೇ** ಸೂತ್ರದಿಂದ ಸೇ ಆದೇಶ. ಲಿಣ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಜಸ್ತ್ವ. [illegible] ಅನಿಟ್ಟಾದರೂ ಲಿಟಿನಲ್ಲಿ ಇದಕ್ಕೆ

ಇಟ್ ಬರುತ್ತದೆ. ಪ್ರತ್ಯಯಕ್ಕೆ ಅಸಂಯೋಗಾಲ್ಲಿಟ್ ಕಿತ್ ಎಂಬುದರಿಂದ ಕಿತ್ವ ಬರುವುದರಿಂದ ಆತೋ-ಲೋಪ ಇಟಿಚ ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ಇಣಿನ ಪರದಲ್ಲಿರುವುದರಿಂದ ಪ್ರತ್ಯಯ ಸಕಾರಕ್ಕೆ ಆದೇಶಪ್ರತ್ಯಯಯೋಃ ಸೂತ್ರದಿಂದ ಷತ್ವ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

ಐವತ್ತ ಏಳನೆಯ ಸೂಕ್ತವು ಸಮಾಪ್ತವು.

# ಐವತ್ತೆಂಟನೆಯ ಸೂಕ್ತವು

|| ಸಾಯಣಭಾಷ್ಯಂ ||

ಏಕಾದಶಾನುವಾಕೇ ಸಪ್ತ ಸೂಕ್ತಾನಿ । ತತ್ರ ನೂ ಚಿದಿತಿ ನವರ್ಚಂ ಪ್ರಥಮಂ ಸೂಕ್ತಂ ಗೌತಮಸ್ಯ ನೋಧಸ ಆರ್ಷಮಾಗ್ನೇಯಂ । ಆದ್ಯಾಃ ಪಂಚ ಜಗತ್ಯಃ । ಶಿಷ್ಟಾಶ್ಚತಸ್ರಸ್ತ್ರಿಷ್ಟುಭಃ । ತಥಾ ಚಾನುಕ್ರಾಂತಂ । ನೂ ಚಿನ್ನವ ನೋಧಾ ಗೌತಮ ಆಗ್ನೇಯಂ ಹಿ ಚತುಸ್ತ್ರಿಷ್ಟುಬಂತಮಿತಿ । ಹೀತಿ ವಚನಾದುತ್ತರೇ ಚ ದ್ವೇ ಸೂಕ್ತೇ ಅಗ್ನಿದೇವತಾಕೇ ॥ ಅಭಿಪ್ಲವಷಡಹಸ್ಯ ಪಂಚಮೇಽಹನ್ಯಾಗ್ನಿಮಾರುತೇ ಇದಂ ಜಾತವೇದಸ್ಯಂ ನಿವಿದ್ಧಾನಂ । ತೃತೀಯಸ್ಯೇತಿ ಖಂಡೇ ಸೂತ್ರಿತಂ । ಪೃಕ್ಷಸ್ಯ ವೃಷ್ಣೋ ವೃಷ್ಣೇ ಶರ್ಧಾಯ ನೂ ಚಿತ್ಸಹೋಜಾ ಇತ್ಯಾಗ್ನಿಮಾರುತಂ । ಆ. ೭-೭ । ಇತಿ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತಾವಾಶ್ವಿನಶಸ್ತ್ರೇ ಚ ಜಾಗತೇ ಛಂದಸ್ಯಾದಿತಃ ಪಂಚರ್ಚಃ । ಸೂತ್ರಿತಂ ಚ । ತ್ವಮಗ್ನೇ ಪ್ರಥಮೋ ಅಂಗಿರಾ ನೂ ಚಿತ್ಸಹೋಜಾ ಅಮೃತೋ ನಿ ತುಂದತ ಇತಿ ಪಂಚ । ಆ. ೪-೧೩ । ಇತಿ ॥

ಅನುವಾದವು— ಈ ಸೂಕ್ತದಿಂದ ಪ್ರಥಮಮಂಡಲದ ಹನ್ನೊಂದನೆಯ ಅನುವಾಕವು ಪ್ರಾರಂಭವಾಗುವುದು. ಈ ಅನುವಾಕದಲ್ಲಿ ಏಳು ಸೂಕ್ತಗಳಿರುವವು. ಅವುಗಳಲ್ಲಿ ನೂ ಚಿತ್ ಎಂಬ ಈ ಸೂಕ್ತವು ಮೊದಲನೆಯದು: ಇದರಲ್ಲಿ ಒಂಭತ್ತು ಋಕ್ಕುಗಳಿರುವವು. ಈ ಸೂಕ್ತಕ್ಕೆ ಗೋತಮಪುತ್ರನಾದ ನೋಧಾಃ ಎಂಬುವನು ಋಷಿಯು. ಅಗ್ನಿಯೇ ದೇವತೆಯು. ಈ ಸೂಕ್ತದ ಮೊದಲಿನ ಐದು ಋಕ್ಕುಗಳು ಜಗತೀಛಂದಸ್ಸಿನವು. ಉಳಿದ ನಾಲ್ಕು ಋಕ್ಕುಗಳು ತ್ರಿಷ್ಟುಪ್ ಛಂದಸ್ಸಿನವು. ಅನುಕ್ರಮಣಿಕೆಯಲ್ಲಿ ನೂ ಚಿನ್ನವ ನೋಧಾ ಗೌತಮ ಆಗ್ನೇಯಂ ಹಿ ಚತುಸ್ತ್ರಿಷ್ಟುಬಂತಮಿತಿ ಎಂದು ಹೇಳಿರುವುದು. ಹಿ ಎಂಬ ಪದಪ್ರಯೋಗದಿಂದ ಮುಂದಿನ ಎರಡು ಸೂಕ್ತಗಳು ಅಗ್ನಿದೇವತಾಕವೆಂದು ಸೂಚಿತವಾಗುವುದು. ಅಭಿಪ್ಲವಷಡಹವೆಂಬ ಯಾಗದ ಐದನೆಯ ದಿವಸದಲ್ಲಿ ಆಗ್ನಿಮಾರುತಮಂತ್ರಗಳಲ್ಲಿ ಜಾತವೇದಸ್ಸಂಬಂಧವಾದ ನಿವಿದ್ಧಾನ ಮಂತ್ರಗಳಿಗಾಗಿ ಈ ಸೂಕ್ತವನ್ನು ಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ ತೃತೀಯಸ್ಯ ಎಂಬ ಖಂಡದ ಪೃಕ್ಷಸ್ಯ ವೃಷ್ಣೋ ವೃಷ್ಣೇ ಶರ್ಧಾಯ ನೂ ಚಿತ್ಸಹೋಜಾ ಇತ್ಯಾಗ್ನಿಮಾರುತಂ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೭) ಮತ್ತು ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತು ಮತ್ತು ಆಶ್ವಿನ ಶಸ್ತ್ರಮಂತ್ರಗಳಲ್ಲಿ ಜಗತೀಛಂದಸ್ಸಿನ ಮಂತ್ರಗಳಿಗಾಗಿ ಈ ಸೂಕ್ತದ ಮೊದಲನೆಯ ಐದು ಋಕ್ಕುಗಳ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ತ್ವಮಗ್ನೇ ಪ್ರಥಮೋ ಅಂಗಿರಾ ನೂ ಚಿತ್ಸಹೋಜಾ ಅಮೃತೋ ನಿ ತುಂದತ ಇತಿ ಪಂಚ ಎಂಬ ಸೂತ್ರವು ನಿರ್ದೇಶಿಸುವುದು. (ಆ. ೪-೧೩)



CC-0. Jangamwadi Math Collection. Digitized by eGangotri

## ಸೂಕ್ತ—೫೮

ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೫೮ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೨೩, ೨೪॥
ಸೂಕ್ತದಲ್ಲಿರುವ ಋಕ್ಸಂಖ್ಯೆ— ೯
ಋಷಿಃ—ನೋಧಾ ಗೌತಮಃ ॥
ದೇವತಾ—ಅಗ್ನಿಃ ॥
ಛಂದಃ—೧-೫ ಜಗತೀ । ೬-೯ ತ್ರಿಷ್ಟುಪ್

॥ ಸಂಹಿತಾಪಾಠಃ ॥

ನೂ ಚಿತ್ಸಹೋಜಾ ಅಮೃತೋ ನಿ ತುಂದತೇ ಹೋತಾ ಯದ್ದೂತೋ ಅಭವದ್ವಿವಸ್ವತಃ ।
ವಿ ಸಾಧಿಷ್ಠೇಭಿಃ ಪಥಿಭೀ ರಜೋ ಮಮ ಆ ದೇವತಾತಾ ಹವಿಷಾ ವಿವಾಸತಿ ॥ ೧ ॥

॥ ಪದಪಾಠಃ ॥

ನು । ಚಿತ್ । ಸಹಃಽಜಾಃ । ಅಮೃತಃ । ನಿ । ತುಂದತೇ । ಹೋತಾ । ಯತ್ । ದೂತಃ । ಅಭವತ್ । ವಿವಸ್ವತಃ ।
ವಿ । ಸಾಧಿಷ್ಠೇಭಿಃ । ಪಥಿಽಭಿಃ । ರಜಃ । ಮಮೇ । ಆ । ದೇವಽತಾತಾ । ಹವಿಷಾ । ವಿವಾಸತಿ ॥ ೧ ॥

॥ ಸಾಯಣಭಾಷ್ಯ ॥

ಸಹೋಜಾಃ ಸಹಸಾ ಬಲೇನ ಜಾತಃ । ಅಗ್ನಿರ್ಹಿ ಬಲೇನ ಮಥ್ಯಮಾನೋಽರಣ್ಯೋಃ ಸಕಾಶಾಜ್ಜಾಯತೇ । ಅಮೃತೋ ಮರಣರಹಿತಃ । ಏವಂಭೂತೋಽಗ್ನಿರ್ನೂ ಚಿತ್ ಕ್ಷಿಪ್ರಮೇವ ನಿ ತುಂದತೇ । ನಿತರಾಂ ವ್ಯಥಯತಿ । ಉತ್ಪನ್ನಮಾತ್ರಸ್ಯಾಗ್ನೇಃ ಸ್ಪ್ರಷ್ಟುಮಶಕ್ಯತ್ವಾತ್ । ಯದ್ವಾ । ನಿರ್ಗಚ್ಛತಿ । ತುಂದತಿರ್ಗತ್ಯರ್ಥಃ ಸೌತ್ರೋ ಧಾತುಃ । ಯದ್ಯದಾ ಹೋತಾ ದೇವಾನಾಮಾಹ್ವಾತಾ ಹೋಮನಿಷ್ಪಾದಕೋ ವಾಯಮಗ್ನಿರ್ವಿವಸ್ವತಃ ಪರಿಚರತೋ ಯಜಮಾನಸ್ಯ ದೇವಾನ್ಪ್ರತಿ ಹವಿರ್ವಹನಾಯ ದೂತೋಽಭವತ್ ಹವಿರ್ವಹನೇ ನಿಯುಕ್ತೋ ಭವತಿ ತದಾನೀಂ ಸಾಧಿಷ್ಠೇಭಿಃ ಸಮೀಚೀನೈಃ ಪಥಿಭಿ-



CC-0. Jangamwadi Math Collection. Digitized by eGangotri

ಮಾರ್ಗೈರ್ಗಚ್ಛನ್ ರಜೋಽಂತರಿಕ್ಷಲೋಕಂ ವಿ ಮಮೇ | ನಿರ್ಮಮೇ | ಪೂರ್ವಂ ವಿದ್ಯಮಾನಮಪ್ಯಂತರಿಕ್ಷಮಸತ್ಕಲ್ಪಮಭೂತ್ | ಇದಾನೀಂ ತಸ್ಯ ತೇಜಸಾ ಪ್ರಕಾಶಮಾನಂ ಸದುತ್ಪನ್ನಮಿವ ದೃಶ್ಯತೇ | ಕಿಂಚ | ದೇವತಾತೇತಿ ಯಜ್ಞನಾಮ | ದೇವತಾತಾ ದೇವತಾತೌ ಯಜ್ಞೇ ಹವಿಷಾ ಚರುಪುರೋಡಾಶಾದಿಲಕ್ಷಣೇನ ದೇವಾನಾ ವಿವಾಸತಿ | ಪರಿಚರತಿ || ಅಮೃತಃ | ಮೃತಂ ಮರಣಮಸ್ಯ ನಾಸ್ತೀತಿ ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ | ತುಂದತೇ | ತುದ ವ್ಯಥನೇ | ಸ್ವರಿತೇತ್ತ್ವಾದಾತ್ಮನೇಪದಂ | ನಕಾರೋಪಜನಶ್ಛಾಂದಸಃ | ಸಾಧಿಷ್ಠೇಭಿಃ | ವಾಢಶಬ್ದಾದಾತಿಶಾಯನಿಕ ಇಷ್ಠನ್ಯಂತಿಕವಾಢಯೋರ್ನೇದಸಾಧೌ | ಪಾ. ೫-೩-೬೩ | ಇತಿ ಸಾಧಾದೇಶಃ | ಬಹುಲಂ ಛಂದಸೀತಿ ಭಿಸ ಐಸಭಾವಃ | ನಿತ್ತ್ವಾದಾದ್ಯುದಾತ್ತತ್ವಂ | ದೇವತಾತಾ | ಸರ್ವದೇವಾತ್ತಾತಿಲ್ | ಪಾ. ೪-೪-೧೪೨ | ಇತಿ ಸ್ವಾರ್ಥಿಕಸ್ತಾತಿಲ್ಪ್ರತ್ಯಯಃ | ತೇನ ಚ ತತ್ಸಂಬಂಧೀ ಯಜ್ಞೋ ಲಕ್ಷ್ಯತೇ | ಯದ್ವಾ | ದೇವಾನ್ಹವಿಷಾ ಆ ವಿವಾಸತೀತಿ ಯೋಜ್ಯಂ | ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ | ಲಿತ್ಸ್ವರೇಣ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ ||

|| ಪ್ರತಿಪದಾರ್ಥ ||

ಸಹೋಜಾಃ—(ಘರ್ಷಣ) ಶಕ್ತಿಯಿಂದ ಉತ್ಪನ್ನನಾದವನೂ | ಅಮೃತಃ—ಮರಣರಹಿತನೂ ಆದ ಅಗ್ನಿಯು | ನೂ ಚಿತ್—ಜಾಗ್ರತೆಯಾಗಿಯೇ | ನಿ ತುಂದತೇ—ಆವಿರ್ಭವಿಸುತ್ತಾನೆ (ಅಥವಾ ಸುಡುತ್ತಾನೆ) | ಯತ್—ಯಾವಾಗ | ಹೋತಾ—ದೇವತೆಗಳನ್ನು ಕರೆಯತಕ್ಕ ಅಥವಾ ಹೋಮಸಂಪಾದಕನಾದ ಅಗ್ನಿಯು | ವಿವಸ್ವತಃ—ಯಜಮಾನನಿಗೆ (ದೇವತೆಗಳಿಗೆ ಹವಿಸ್ಸನ್ನು ತಲಪಿಸಲು) | ದೂತಃ ಅಭವತ್—ದೂತನಾದನೋ (ಆಗ) ಸಾಧಿಷ್ಠೇಭಿಃ—ಅನುಕೂಲಗಳಾದ | ಪಥಿಭಿಃ—ದಾರಿಗಳಿಂದ (ಸಂಚರಿಸುತ್ತ) | ರಜಃ—ಅಂತರಿಕ್ಷವನ್ನು | ವಿ ಮಮೇ—ನಿರ್ಮಿಸಿದನು (ಕತ್ತಲಾಗಿದ್ದ ಅಂತರಿಕ್ಷವನ್ನು ಬೆಳಗಿಸಿದನು ಮತ್ತು) | ದೇವತಾತಾ—ಯಜ್ಞದಲ್ಲಿ | ಹವಿಷಾ—ಹವಿಸ್ಸಿನಿಂದ | ಆ ವಿವಾಸತಿ—(ದೇವತೆಗಳನ್ನು) ಪೂಜಿಸುತ್ತಾನೆ.

|| ಭಾವಾರ್ಥ ||

ಶಕ್ತಿಯಿಂದ ಉತ್ಪನ್ನನಾದವನೂ ಮರಣರಹಿತನೂ ಆದ ಅಗ್ನಿಯು ಜಾಗ್ರತೆಯಾಗಿ ಆವಿರ್ಭವಿಸುತ್ತಾನೆ. ದೇವತೆಗಳನ್ನು ಯಜ್ಞಕ್ಕೆ ಕರೆಯುವ ಅಗ್ನಿಯು ಯಾವಾಗ ಯಜಮಾನನ ದೂತನಾದನೋ ಆಗ ಅನುಕೂಲಗಳಾದ ದಾರಿಯಿಂದ ಸಂಚರಿಸುತ್ತ ಅಂತರಿಕ್ಷವನ್ನು ಬೆಳಗಿದ್ದಾನೆ. ಮತ್ತು ಯಜ್ಞದಲ್ಲಿ ಹವಿಸ್ಸಿನಿಂದ ದೇವತೆಗಳನ್ನು ಪೂಜಿಸುತ್ತಾನೆ.

## English Translation.

The immortal Agni, generated by great strength, quickly issues forth, when he became the invoker of the gods and the messenger (of the sacrificer); he, going by suitable paths created the firmament; he worships (the gods) in the sacrifice with oblations.



CC-0. Jangamwadi Math Collection. Digitized by eGangotri

‖ ವಿಶೇಷ ವಿಷಯಗಳು ‖

**ಸಹೋಜಾಃ**—ಸಹಸಾ ಬಲೇನ ಜಾತಃ—ಮಂತ್ರಪೂತವಾಗಿ ಅರಣಿಗಳಲ್ಲಿ ಬಲಪ್ರಯೋಗ ಮಾಡುವುದರಿಂದ ಅಗ್ನಿಯುತ್ಪತ್ತಿಯಾಗುವುದು. ಆದುದರಿಂದಲೇ ಅಗ್ನಿಗೆ ಬಲಜಾತ ಅಥವಾ ಸಹೋಜಸ್ಸೆಂಬ ಹೆಸರು ಬಂದಿರುವುದು.

**ಅಮೃತಃ**—ಮೃತಂ ಮರಣಂ ಅಸ್ಯ ನಾಸ್ತೀತಿ-ಅಮೃತಃ ಮರಣರಹಿತನಾದವನು ಎಂದರ್ಥ. ಇದು ಅಗ್ನಿಗೆ ವಿಶೇಷಣವಾಗಿದೆ.

**ನೂ ಚಿತ್**—ಇವೆರಡೂ ಅವ್ಯಯಗಳು. ಜಾಗ್ರತೆಯಾಗಿಯೇ ಎಂದು ಇವುಗಳ ಅರ್ಥ. ಚಿತ್ ಶಬ್ದವು ಏವಕಾರಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

**ನಿ ತುಂದತೇ**—ನಿತರಾಂ ವ್ಯಥಯತಿ ಅಥವಾ ನಿರ್ಗಚ್ಛತಿ—ಅರಣಿಯಿಂದ ಹುಟ್ಟಿದ ಅಗ್ನಿಯನ್ನು ಯಾರಿಂದಲೂ ಸ್ಪರ್ಶಿಸುವುದಕ್ಕೆ ಸಾಧ್ಯವಿಲ್ಲ. ಒಂದುವೇಳೆ ಮುಟ್ಟಿದರೆ ವ್ಯಥೆಯನ್ನುಂಟುಮಾಡುವುದು. ಅಥವಾ ಅರಣಿಯಿಂದ ಹೊರಹೊರಟು, ತಾನು ಮೊದಲು ಅಡಗಿದ್ದ ಸ್ವರೂಪವನ್ನು ವ್ಯಕ್ತಪಡಿಸುವುದು. ಹೀಗೆಂದು ಎರಡು ರೀತಿಯಿಂದಲೂ ಅರ್ಥವಿವರಣೆ ಮಾಡಿದ್ದಾರೆ. ಇಲ್ಲಿ ಹಿಂಸಾರ್ಥಕವಾದ ತುದ ಧಾತುವಿಗೆ ಗತ್ಯರ್ಥವನ್ನು ಕಲ್ಪಿಸಿದ್ದಾರೆ.

**ಹೋತಾ**—ಯಜ್ಞದಲ್ಲಿ ಸಮಸ್ತ ದೇವತೆಗಳನ್ನೂ ಆಹ್ವಾನಿಸುವವನು ಹೋತೃವೆನಿಸಿಕೊಳ್ಳುವನು. ಇಲ್ಲಿ ಹಾಗೆ ದೇವತೆಗಳನ್ನು ಅಗ್ನಿಯೇ ಕರೆಯುವನು ಎಂಬರ್ಥದಲ್ಲಿ ಅಗ್ನಿಯನ್ನೇ ಹೋತೃವೆಂದು ಹೇಳಿರುವರು.

**ವಿವಸ್ವತಃ**—ಯಜ್ಞದಲ್ಲಿ ಮಂತ್ರಪೂರ್ವಕವಾಗಿ ದೇವತೆಗಳಿಗೆ ಯಜಮಾನನು ಕೊಟ್ಟ ಹವಿಸ್ಸನ್ನು ಅಗ್ನಿಯು ಆಯಾ ದೇವತೆಗಳಿಗೆ ತಲಪಿಸುವನು. ಅಗ್ನಿಯನ್ನು ಸೇವೆಮಾಡತಕ್ಕ ಯಜಮಾನನ ಎಂದರ್ಥವು.

**ದೇವತಾತಾ**—ಇದು ಯಜ್ಞದ ಹೆಸರು. ನಿರುಕ್ತ (೩-೧೯)ದಲ್ಲಿ ಯಜ್ಞವಾಚಕಗಳಾಗಿ ಹದಿನೈದು ಪರ್ಯಾಯಪದಗಳನ್ನು ಪಾಠಮಾಡಿದ್ದಾರೆ. **ಯಜ್ಞನಾಮಾನ್ಯುತ್ತರಾಣಿ ಪಂಚದಶ.** ಈ ಪದವು ಪ್ರಥಮಾ ವಿಭಕ್ತಿಯಲ್ಲಿದ್ದರೂ ಸಪ್ತಮ್ಯರ್ಥದಲ್ಲಿ ಪ್ರಯುಕ್ತವಾಗಿದೆ.

‖ ವ್ಯಾಕರಣಪ್ರಕ್ರಿಯಾ ‖

**ನೂ**—**ಋಚಿತುನುಘ**—(ಪಾ. ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಅಮೃತಃ**—ಮೃತಂ ಮರಣಂ ಅಸ್ಯ ನಾಸ್ತಿ ಇತಿ ಅಮೃತಃ ಬಹುವ್ರೀಹಿಸಮಾಸಮಾಡಿದಾಗ ನಞೋ ಜರಮರಮಿತ್ರಮೃತಾಃ (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ತುಂದತೇ**—ತುದ ವ್ಯಥನೇ ಧಾತು. ಸ್ವರಿತೇತ್ತಾದುದರಿಂದ ಸ್ವರಿತಞಿತಃ ಕ—ಸೂತ್ರದಿಂದ ಆತ್ಮನೇ ಪದಪ್ರತ್ಯಯ ಬರುತ್ತದೆ. **ಟಿತಆತ್ಮನೇಪದಾನಾಂ ಟೇರೇ** ಎಂಬುದರಿಂದ ಏಕವಚನ ತಪ್ರತ್ಯಯಕ್ಕೆ ಏತ್ವ. **ತುದಾದಿಭ್ಯಃ ಶಃ** ಎಂಬುದರಿಂದ ಶ ವಿಕರಣ. ಇದು ಙಿತ್ತಾದುದರಿಂದ ಧಾತುವಿನ ಲಘೂಪಧೆಗೆ ಗುಣ ಬರು


CC-0. Jangamwadi Math Collection. Digitized by eGangotri

ವುದಿಲ್ಲ. ಇಲ್ಲಿ ನಕಾರಾಗಮವು ಛಾಂದಸವಾಗಿ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಅಭವತ್—ಭೂ ಸತ್ತಾಯಾಂ ಧಾತು. ಲಙ್ ಪ್ರಥಮಪುರುಷ ಏಕವಚನರೂಪ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮವು ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಸಾಧಿಷ್ಠೇಭಿಃ—ಬಾಢ ಶಬ್ದಕ್ಕೆ ಅತಿಶಯಾರ್ಥವಿವಕ್ಷಾಮಾಡಿದಾಗ ಇಷ್ಠನ್ ಪ್ರತ್ಯಯ. ಇದು ಪರವಾದಾಗ ಅಂತಿಕಬಾಢಯೋರ್ನೇದಸಾಧೌ (ಪಾ. ಸೂ. ೫-೩-೬೩) ಎಂಬುದರಿಂದ ಬಾಢ ಶಬ್ದಕ್ಕೆ ಸಾಧಾದೇಶ. ಟೇಃ ಎಂಬುದರಿಂದ ಆಕಾರಕ್ಕೆ ಲೋಪ. ಸಾಧಿಷ್ಠ ಶಬ್ದವಾಗುತ್ತದೆ. ಇದಕ್ಕೆ ಭಿಸ್ ಪರವಾದಾಗ ಬಹುಲಂಛಂದಸಿ ಎಂಬುದರಿಂದ ಭಿಸಿಗೆ ಐಸಾದೇಶ ಬರುವುದಿಲ್ಲ. ಬಹುವಚನೇ ಝಲ್ಯೇತ್ ಸೂತ್ರದಿಂದ ಅಕಾರಕ್ಕೆ ಏತ್ವ. ಪ್ರತ್ಯಯಸಕಾರಕ್ಕೆ ರುತ್ವ ವಿಸರ್ಗ. ಇಷ್ಠನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ದೇವತಾತಾ—ದೇವಶಬ್ದದಮೇಲೆ ಸ್ವಾರ್ಥದಲ್ಲಿ ಸರ್ವದೇವಾತ್ತಾತಿಲ್ (ಪಾ. ಸೂ. ೪-೪-೧೪೨) ಎಂಬುದರಿಂದ ತಾತಿಲ್ ಪ್ರತ್ಯಯ. ದೇವತಾತಿ ಶಬ್ದವಾಗುತ್ತದೆ. ಇಲ್ಲಿ ದೇವತಾ ಸಂಬಂಧಿ ಯಜ್ಞವು ಲಕ್ಷಣಾವೃತ್ತಿಯಿಂದ ಬೋಧಿತವಾಗುತ್ತದೆ. ಅಥವಾ ದೇವಾನ್ ಹವಿಷಾ ಆ ವಿವಾಸತಿ ಇತಿ ಯೋಜ್ಯಮ್. (ದೇವತೆಗಳನ್ನು ಹವಿಸ್ಸಿನಿಂದ ಇಲ್ಲಿ ಸೇವಿಸುತ್ತಾನೆ ಎಂದು ಕ್ರಿಯಾಪದದೊಡನೆ ಸಂಬಂಧವನ್ನು ಹೇಳಬೇಕು.) ದ್ವಿತೀಯಾ ವಿಭಕ್ತಿಗೆ ಸುಪಾಂಸುಲುಕ್ ಸೂತ್ರದಿಂದ ಡಾದೇಶ. ಡಿತ್ತಾದುದರಿಂದ ಪ್ರಾತಿಪದಿಕದ ಟಿಗೆ ಲೋಪ. ದೇವತಾತಾ ಎಂದು ರೂಪವಾಗುತ್ತದೆ. ತಾತಿಲ್ ಲಿತ್ತಾದುದರಿಂದ ಲಿತಿ ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ.

ವಿವಾಸತಿ—ವಿವಾಸ ಧಾತುವು ಪರಿಚರಣಾರ್ಥದಲ್ಲಿದೆ. ಲಟ್ ಪ್ರಥಮಪುರುಷ ಏಕವಚನದರೂಪ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಆ ಸ್ವಮದ್ಮ ಯುವಮಾನೋ ಅಜರಸ್ತೃಷ್ವವಿಷ್ಯನ್ನತಸೇಷು ತಿಷ್ಠತಿ ।
ಅತ್ಯೋ ನ ಪೃಷ್ಠಂ ಪ್ರುಷಿತಸ್ಯ ರೋಚತೇ ದಿವೋ ನ ಸಾನು ಸ್ತನಯನ್ನಚಿಕ್ರದತ್ ॥ ೨ ॥

॥ ಪದಪಾಠಃ ॥

ಆ । ಸ್ವಂ । ಅದ್ಮ । ಯುವಮಾನಃ । ಅಜರಃ । ತೃಷು । ಅವಿಷ್ಯನ್ । ಅತಸೇಷು । ತಿಷ್ಠತಿ ।
ಅತ್ಯಃ । ನ । ಪೃಷ್ಠಂ । ಪ್ರುಷಿತಸ್ಯ । ರೋಚತೇ । ದಿವಃ । ನ । ಸಾನು । ಸ್ತನಯನ್ । ಅಚಿಕ್ರದತ್ ॥ ೨ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯ ॥

ಅಜರೋ ಜರಾರಹಿತೋಽಯಮಗ್ನಿಃ ಸ್ವಂ ಸ್ವಕೀಯಮದ್ಮಾದನೀಯಂ ತೃಣಗುಲ್ಮಾದಿಕಂ ಯುವಮಾನಃ ಸ್ವಕೀಯಜ್ವಾಲಯಾ ಸಂಮಿಶ್ರಯನ್ ತದನಂತರಂ ಚಾವಿಷ್ಯನ್ ಭಕ್ಷಯಂಶ್ಚ । ಅವಿಷ್ಯನ್ನಿತ್ಯೇತದತ್ತಿಕರ್ಮಸು ಪಠಿತಂ । ಏವಂಭೂತೋಽಗ್ನಿಸ್ತೃಷು ಕ್ಷಿಪ್ರಮೇವಾತಸೇಷು ಪ್ರಭೂತೇಷು ಕಾಷ್ಠೇಷ್ವಾ ತಿಷ್ಠತಿ । ಆರೋಹತಿ । ಅತ್ರಾತಸಶಬ್ದಃ ಕಾಷ್ಠವಾಚೀ । ಅತಸಂ ನ ಶುಷ್ಕಂ । ಋಗ್ವೇ. ೪-೪-೪ । ಇತಿ ದರ್ಶನಾತ್ । ಪ್ರುಷಿತಸ್ಯ ದಗ್ಧುಮಿತಸ್ತತಃ ಪ್ರವೃತ್ತಸ್ಯಾಗ್ನೇಃ ಪೃಷ್ಠಮುಪರ್ಯವಸ್ಥಿತಂ ಜ್ವಾಲಾಜಾಲಮತ್ಯೋ ನ ರೋಚತೇ । ಯಥಾ ಸತತಗಮನಶೀಲೋಽಶ್ವ ಇತಸ್ತತೋ ಗಚ್ಛನ್ ಶೋಭತೇ ಏವಮಗ್ನೇರ್ಜ್ವಾಲಾಪಿ ಸರ್ವತ್ರ ಗಚ್ಛಂತೀ ಶೋಭತ ಇತಿ ಭಾವಃ । ತದಾನೀಂ ದಿವೋ ದ್ಯುಲೋಕಸ್ಯ ಸಂಬಂಧಿ ಸಾನು ಸಮುಚ್ಛ್ರಿತಮಭ್ರಂ ಸ್ತನಯನ್ನ ಶಬ್ದಯನ್ನಿವಾಚಿಕ್ರದತ್ । ಗಂಭೀರಂ ಶಬ್ದಮಾತ್ಮಾನಮಚೀಕರತ್ ॥ ಯುವಮಾನಃ । ಯು ಮಿಶ್ರಣೇ । ವ್ಯತ್ಯಯೇನಾತ್ಮನೇಪದಂ । ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ತಸ್ಯ ಬಹುಲಂ ಛಂದಸೀತಿ ಲುಗಭಾವಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರ ಏವ ಶಿಷ್ಯತೇ । ಅಜರಃ । ಬಹುವ್ರೀಹೌ ನಞೋ ಜರಮರಮಿತ್ರಮೃತಾ ಇತ್ಯುತ್ತರಪದಾದ್ಯುದಾತ್ತತ್ವಂ । ಅಚಿಕ್ರದತ್ । ಕದಿ ಕ್ರದಿ ಕ್ಲದಿ ಆಹ್ವಾನೇ ರೋದನೇ ಚ । ಅಸ್ಮಾಣ್ಣ್ಯಂತಾಲ್ಲುಙಿ ಚಙ್ಯಾಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ । ದ್ವಿರ್ಭಾವಹಲಾದಿಶೇಷಸನ್ವದ್ಭಾವೇತ್ತ್ವಾನಿ ॥

॥ ಪ್ರತಿಪದಾರ್ಥ ॥

ಅಜರಃ—ಮುಪ್ಪಿಲ್ಲದ ಅಗ್ನಿಯು । ಸ್ವಂ—ತನ್ನ । ಅದ್ಮ—ಭಕ್ಷ್ಯವನ್ನು । ಯುವಮಾನಃ—(ತನ್ನ ಜ್ವಾಲೆಯೊಂದಿಗೆ) ಸೇರಿಸಿಕೊಂಡು । ಅವಿಷ್ಯನ್—ಭಕ್ಷಿಸುತ್ತಾ । ತೃಷು—ಜಾಗ್ರತೆಯಾಗಿಯೇ । ಅತಸೇಷು—ಒಣಗಿದ ಕಟ್ಟಿಗೆಗಳಲ್ಲಿ । ಆ ತಿಷ್ಠತಿ—ಹತ್ತುತ್ತಾನೆ । ಪ್ರುಷಿತಸ್ಯ—ದಹಿಸಲು ಸುತ್ತಲೂ ಹರಡಿರುವ ಅಗ್ನಿಯ । ಪೃಷ್ಠಂ—ಮೇಲೆದ್ದಿರುವ ಜ್ವಾಲೆಯು । ಅತ್ಯೋ ನ—ಯಾವಾಗಲೂ ಸಂಚರಿಸುವ ಸ್ವಭಾವವುಳ್ಳ ಕುದುರೆಯಂತೆ। ರೋಚತೇ—ಶೋಭಿಸುತ್ತದೆ (ಆಗ) । ದಿವಃ—ದ್ಯುಲೋಕದ । ಸಾನು—ಶಿಖರಪ್ರದೇಶದಲ್ಲಿರುವ (ಮೇಘವು) । ಸ್ತನಯನ್ ನ—ಶಬ್ದಮಾಡುವಂತೆ । ಅಚಿಕ್ರದತ್—(ಗಂಭೀರವಾಗಿ) ಶಬ್ದಮಾಡಿತು (ಮಾಡುತ್ತದೆ).

॥ ಭಾವಾರ್ಥ ॥

ಮುಪ್ಪಿಲ್ಲದ (ಎದರೆ ಆರಿಹೋಗದಿರುವ) ಅಗ್ನಿಯು ತನ್ನ ಭಕ್ಷ್ಯವಾದ ತೃಣಗುಲ್ಮಾದಿಗಳನ್ನು ತನ್ನ ಜ್ವಾಲೆಯೊಂದಿಗೆ ಸೇರಿಸಿಕೊಂಡು ಭಕ್ಷಿಸುತ್ತ ಜಾಗ್ರತೆಯಾಗಿಯೇ ಒಣಗಿದ ಕಟ್ಟಿಗೆಗಳಲ್ಲಿ ಹತ್ತಿ ಉರಿಯುತ್ತದೆ. ದಹಿಸಲು ಸುತ್ತಲೂ ಹರಡಿರುವ ಅಗ್ನಿಯ ಜ್ವಾಲೆಯು ಯಾವಾಗಲೂ ಸಂಚರಿಸುವ ಸ್ವಭಾವವುಳ್ಳ ಕುದುರೆಯಂತೆ ಶೋಭಿಸುತ್ತದೆ. ಅಗ್ನಿಯು ಆಗ ದ್ಯುಲೋಕದ ಶಿಖರಪ್ರದೇಶದಲ್ಲಿರುವ ಮೇಘವು ಶಬ್ದಮಾಡುವಂತೆ ಗಂಭೀರವಾಗಿ ಶಬ್ದಮಾಡುತ್ತದೆ.

## English Translation.

Undecaying Agni, combining his food (with his flame) and devouring it quickly, ascends the dry wood; (the blaze) situate on the back (of Agni) spreading hither and thither for consuming, shines like a horse and roars like a roaring (cloud) in the height of heaven.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

**ಅದ್ಮ**—ಅದನೀಯಂ ತೃಣಗುಲ್ಮಾದಿಕಂ—ಅಗ್ನಿಗೆ ಆಹಾರವಾಗಿರುವ ತೃಣಗುಲ್ಮಾದಿಗಳಿಗೆ ಇಲ್ಲಿ ಅದ್ಮ ಎಂಬ ಹೆಸರು. ತಿನ್ನುವುದಕ್ಕೆ ಅಥವಾ ದಹಿಸುವುದಕ್ಕೆ ಯೋಗ್ಯವಾದ ವಸ್ತುವು.

**ಯುವಮಾನಃ** ಅವಿಷ್ಯನ್—ಸ್ವಕೀಯೆಜ್ವಾಲಯಾ ಸಂಮಿಶ್ರಯನ್ ತದನಂತರಂ ಚ-ಭಕ್ಷಯನ್—ತನ್ನ ಆಹಾರವಾದ ತೃಣಾದಿಗಳನ್ನು ಯಜ್ಞದಲ್ಲಿ ಹವಿಸ್ಸಿನೊಡನೆ ಬೆರಸಿ ಭಕ್ಷಿಸುವವನು ಅಗ್ನಿ. ಅವಿಷ್ಯನ್ ಎಂಬ ಪದವನ್ನು ನಿರುಕ್ತಕಾರರು ಅತ್ತಿಕರ್ಮದಲ್ಲಿ ಅಂದರೆ ಭಕ್ಷಣಾರ್ಥದಲ್ಲಿ ಪಾಠಮಾಡಿರುವರು (ನಿ. ರು. ೨-೮).

**ಅತಸೇಷು**—ಹೆಚ್ಚಾದ ಕಟ್ಟಿಗೆಯೇ ಮೊದಲಾದುವುಗಳಲ್ಲಿ ಅತಸ ಶಬ್ದವು ಕಾಷ್ಠವಾಚಿಯಾಗಿ ಅತಸಂ ನ ಶುಷ್ಕಮ್ (ಋ. ಸಂ. ೪-೪-೪) ಎಂದು ಹೇಳಲಾಗಿದೆ.

**ಪ್ರುಷಿತಸ್ಯ**—ದಗ್ಧುಮಿತಸ್ತತಃ ಪ್ರವೃತ್ತಸ್ಯಾಗ್ನೇಃ—ಸರ್ವವನ್ನೂ ದಹಿಸುವ ಸ್ವಭಾವವುಳ್ಳ ಅಗ್ನಿಯು ಅಲ್ಲಲ್ಲಿ ಹರಡುವುದು. ಈ ಅರ್ಥದಲ್ಲಿ ಅಗ್ನಿಗೆ ಪ್ರುಷಿತನೆಂಬ ಹೆಸರು ಬಂದಿದೆ.

**ಅತ್ಯೋ ನ ರೋಚತೇ**—ಇಲ್ಲಿ ಅತ್ಯಶಬ್ದವು ಅಶ್ವಾರ್ಥಕವಾಗಿದೆ. ನ ಶಬ್ದಕ್ಕೆ ಇವಾರ್ಥಕತ್ವವುಂಟು. ಕುದುರೆಯು ಅಲ್ಲಲ್ಲಿ ಸಂಚರಿಸುತ್ತಾ ಹೇಗೆ ಶೋಭಿಸುವುದೋ, ಅದೇರೀತಿ ಅಗ್ನಿಯು ತನ್ನ ಜ್ವಾಲಾವರಣದಿಂದ ಸರ್ವತ್ರ ವ್ಯಾಪಿಸಿ ಪ್ರಕಾಶಿಸುತ್ತಾನೆ ಎಂದು ತಾತ್ಪರ್ಯಾರ್ಥ.

॥ ವ್ಯಾಕರಣಪ್ರಕ್ರಿಯಾ ॥

**ಅದ್ಮ**—ಅದ ಭಕ್ಷಣೇ ಧಾತು. ಔಣಾದಿಕಮನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

**ಯುವಮಾನಃ**—ಯು ಮಿಶ್ರಣೆ (ಅಮಿಶ್ರಣೇಚ) ಧಾತು. ಅದಾದಿ ವ್ಯತ್ಯಯೋಬಹುಲಂ ಎಂಬುದರಿಂದ ಆತ್ಮನೇ ಪದವಾಗುತ್ತದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಕರ್ತರಿಶಪ್ ಸೂತ್ರದಿಂದ ಶಪ್ ಪ್ರಾಪ್ತವಾದರೆ ವ್ಯತ್ಯಯದಿಂದ ಶ ವಿಕರಣ ಬರುತ್ತದೆ. ಅದಕ್ಕೆ ಬಹುಲಂಛಂದಸಿ ಎಂಬುದರಿಂದ ಲುಕ್ ಬರುವುದಿಲ್ಲ. ಅಚಿಶ್ನುಧಾತುಭ್ರುವಾಂ ಸೂತ್ರದಿಂದ ಶ ವಿಕರಣ ಪರವಾದಾಗ ಙಿತ್ತಾದುದರಿಂದ ಗುಣ ಬಾರದಿರುವಾಗ ಉವಙಾದೇಶ. ಆನೇಮುಕ್ (ಪಾ. ಸೂ. ೭-೨-೮೨) ಎಂಬುದರಿಂದ ಅಜಂತಾಂಗಕ್ಕೆ ಮುಕಾಗಮ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಆನ) ತಾಸ್ಯನುದಾತ್ತೇತ್ (ಪಾ. ಸೂ. ೬-೧-೧೮೬) ಎಂಬುದರಿಂದ ಅನುದಾತ್ತವಾಗುತ್ತದೆ. ಆಗ ವಿಕರಣಸ್ವರ ಉಳಿಯುತ್ತದೆ. ವಕಾರೋತ್ತರಾಕಾರ ಉದಾತ್ತವಾಗುತ್ತದೆ.

**ಅಜರಃ**—ನ ವಿದ್ಯತೇ ಜರಾ ಯಸ್ಯ ಸಃ ಅಜರಃ. ಬಹುವ್ರೀಹಿಸಮಾಸದಲ್ಲಿ ನಞ್ಸೋ ಜರಮರಮಿತ್ರಮೃತಾಃ (ಪಾ. ಸೂ. ೬-೨-೧೧೬) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ತಿಷ್ಠತಿ**—ಷ್ಠಾ ಗತಿನಿವೃತ್ತೌ ಧಾತು. ಲಟ್ ಪ್ರಥಮಪುರುಷಏಕವಚನದರೂಪ. ಪ್ರಾಘ್ರಾಧ್ಮಾ—ಸೂತ್ರದಿಂದ ಶಪ್ ಪರವಾದಾಗ ಪ್ರಕೃತಿಗೆ ತಿಷ್ಠ ಎಂಬ ಆದೇಶ. ತಿಙಂತನಿಘಾತಸ್ವರ ಬರುತ್ತದೆ.





CC-0. Jangamwadi Math Collection. Digitized by eGangotri

ಅಚಿಕ್ರದತ್—ಕದಿ ಕ್ರದಿ ಕ್ಲದಿ ಆಹ್ವಾನೇ ರೋದನೇ ಚ ಧಾತು. ಆಗಮಶಾಸನಮನಿತ್ಯಮ್ ಎಂಬುದರಿಂದ ಇದಿತ್ತಾದರೂ ನುಮಾಗಮ ಬರುವುದಿಲ್ಲ. ಪ್ರೇರಣಾರ್ಥ ತೋರುವುದರಿಂದ ಹೇತುಮತಿಚ ಎಂಬುದರಿಂದ ಣಿಚ್. ಣಿಜಂತದ ಮೇಲೆ ಲುಙ್. ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಲೋಪ. ಚ್ಲಿ ಲುಙಿ ಸೂತ್ರದಿಂದ ಪ್ರಾಪ್ತವಾದ ಚ್ಲಿಗೆ ಣಿಶ್ರಿದ್ರುಸ್ರುಭ್ಯಃ ಕರ್ತರಿ ಚಙ್ (ಪಾ. ಸೂ. ೩-೧-೪೮) ಎಂಬುದರಿಂದ ಚಙಾದೇಶ. ಚಙಿ (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಕುಹೋಶ್ಚುಃ ಎಂಬುದರಿಂದ ಚುತ್ವ. ಸನ್ವಲ್ಲಘುನಿಚಙ್ ಸೂತ್ರದಿಂದ ಸನ್ವದ್ಭಾವ ಬರುವುದರಿಂದ ಸನ್ಯತಃ ಎಂಬುದರಿಂದ ಅಭ್ಯಾಸಾಕಾರಕ್ಕೆ ಇತ್ವ. ಸಂಯುಕ್ತಾಕ್ಷರ ಪರದಲ್ಲಿರುವುದರಿಂದ ಲಘುಸಂಜ್ಞೆ ಇಲ್ಲದಿರುವುದರಿಂದ ದೀರ್ಘ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ತಿಙಂತನಿಘಾತಸ್ವರ ಬರುತ್ತದೆ.

‖ ಸಂಹಿತಾಪಾಠಃ ‖

ಕ್ರಾಣಾ ರುದ್ರೇಭಿರ್ವಸುಭಿಃ ಪುರೋಹಿತೋ ಹೋತಾ ನಿಷತ್ತೋ ರ-
ಯಿಷಾಳಮರ್ತ್ಯಃ ।
ರಥೋ ನ ವಿಕ್ಷ್ವೃಂಜಸಾನ ಆಯುಷು ವ್ಯಾನುಷಗ್ವಾರ್ಯಾ ದೇವ
ಋಣ್ವತಿ ‖ ೩ ‖

‖ ಪದಪಾಠಃ ‖

ಕ್ರಾಣಾ । ರುದ್ರೇಭಿಃ । ವಸುಽಭಿಃ । ಪುರಃಽಹಿತಃ । ಹೋತಾ । ನಿಽಸತ್ತಃ । ರಯಿ-
ಷಾಟ್ । ಅಮರ್ತ್ಯಃ ।
ರಥಃ । ನ । ವಿಕ್ಷು । ಋಂಜಸಾನಃ । ಆಯುಷು । ವಿ । ಆನುಷಕ್ । ವಾರ್ಯಾ ।
ದೇವಃ । ಋಣ್ವತಿ ‖ ೩ ‖

‖ ಸಾಯಣಭಾಷ್ಯಂ ‖

ಕ್ರಾಣಾ ಹವಿರ್ವಹನಂ ಕುರ್ವಾಣೋ ರುದ್ರೇಭೀ ರುದ್ರೈರ್ವಸುಭಿಶ್ಚ ಪುರೋಹಿತಃ ಪುರಸ್ಕೃತೋ ಹೋತಾ ದೇವಾನಾಮಾಹ್ವಾತಾ ನಿಷತ್ತೋ ಹವಿಃಸ್ವೀಕರಣಾಯ ದೇವಯಜನೇ ನಿಷಣ್ಣೋ ರಯಿಷಾಟ್ ರಯೀಣಾಂ ಶತ್ರುಧನಾನಾಮಭಿಭವಿತಾಮರ್ತ್ಯೋ ಮರಣರಹಿತಃ । ಏವಂಭೂತೋ ದೇವೋ ದ್ಯೋತಮಾನೋಽಗ್ನಿರ್ವಿಕ್ಷು ಪ್ರಜಾಸು ಲೌಕಿಕಜನೇಷು ರಥೋ ನ ರಥ ಇವಾಯುಷು ಯಜಮಾನಲಕ್ಷಣೇಷು ಮನುಷ್ಯೇಷ್ವೃಂಜಸಾನಃ ಸ್ತೂಯಮಾನೋ ವಾರ್ಯಾ ವಾರ್ಯಾಣಿ ಸಂಭಜನೀಯಾನಿ ಧನಾನ್ಯಾನುಷಕ್ ಆನುಷಕ್ತಂ ಯಥಾ ಭವತಿ ತಥಾ ವ್ಯೃಣ್ವತಿ । ವಿಶೇಷೇಣ ಪ್ರಾಪಯತಿ । ಯದ್ವಾ ।

ವಾರ್ಯಾಣಿ ವರಣೀಯಾನಿ ಹವೀಂಷಿ ಸ್ವಯಂ ಪ್ರಾಪ್ನೋತಿ ॥ ಕ್ರಾಣಾ | ಕರೋತೇಃ ಶಾನಚಿ ಬಹುಲಂ-
ಛಂದಸೀತಿ ವಿಕರಣಸ್ಯ ಲುಕ್ | ಶಾನಚೋ ಙಿತ್ತ್ವಾದ್ಗುಣಾಭಾವೇ ಯಣಾದೇಶಃ | ಚಿತ ಇತ್ಯಂತೋ-
ದಾತ್ತತ್ವಂ | ಸುಪಾಂ ಸುಲುಗಿತಿ ಸೋಃ ಪೂರ್ವಸವರ್ಣದೀರ್ಘತ್ವಂ | ನಿಷತ್ತಃ | ಷದ್ಲೃ ವಿಶರಣಗತ್ಯ-
ವಸಾದನೇಷು | ಅಸ್ಮಾತ್ಕರ್ಮಣಿ ನಿಷ್ಠಾ | ನಸತ್ತನಿಷತ್ತೇತ್ಯಾದಿನಾ | ಪಾ. ೮-೨-೬೧ | ನಿಷ್ಠಾನತ್ವಾ-
ಭಾವೋ ನಿಪಾತಿತಃ | ಗತಿರನಂತರ ಇತಿ ಗತೇಃ ಪ್ರಕೃತಿಸ್ವರತ್ವಂ | ರಯಿಷಾಟ್ | ಷಹ ಅಭಿಭವೇ |
ಛಂದಸಿ ಸಹಃ | ಪಾ. ೩-೨-೬೩ | ಇತಿ ಣ್ವಿಃ | ಸಹೇಃ ಸಾಡಃ ಸಃ | ಪಾ. ೮-೩-೫೬ | ಇತಿ ಷತ್ವಂ |
ಋಂಜಸಾನಃ | ಋಂಜತಿಃ ಸ್ತುತಿಕರ್ಮಾ | ಅಸಾನಜಿತ್ಯನುವೃತ್ತಾವೃಂಜಿವೃಧಿಮಂದಿಸಹಿಭ್ಯಃ ಕಿತ್ |
ಉ. ೨-೮೭ | ಇತಿ ಕರ್ಮಣ್ಯಸಾನಚ್‌ಪ್ರತ್ಯಯಃ | ಚಿತ ಇತ್ಯಂತೋದಾತ್ತತ್ವಂ | ಆಯುಷು |
ಆಯವ ಇತಿ ಮನುಷ್ಯನಾಮ | ಇಣ್ ಗತಾವಿತ್ಯಸ್ಮಾಚ್ಛಂದಸೀಣ ಇತ್ಯುಣ್ಪ್ರತ್ಯಯಃ | ವೃದ್ಧ್ಯಾಯಾ-
ದೇಶೌ | ವಾರ್ಯಾ | ವೃಞ್ ಸಂಭಕ್ತೌ | ಋಹಲೋರ್ಣ್ಯತ್ | ತಿತ್ಸ್ವರಿತೇ ಪ್ರಾಪ್ತೇ ಈಡವಂದವೃಶಂ-
ಸದುಹಾಂ ಣ್ಯತ ಇತ್ಯಾದ್ಯುದಾತ್ತತ್ವಂ | ಶೇಶ್ಛಂದಸೀತಿ ಶೇರ್ಲೋಪಃ | ಋಣ್ವತಿ | ರಿವಿ ಗತೌ | ವ್ಯತ್ಯ-
ಯೇನ ಸಂಪ್ರಸಾರಣಂ | ಇದಿತ್ತ್ವಾನ್ನುಮ್ | ಕರ್ತರಿ ಶಪ್ ॥

॥ ಪ್ರತಿಪದಾರ್ಥ ॥

ಕ್ರಾಣಾ—(ಹವಿಸ್ಸನ್ನು) ವಹಿಸುವವನೂ | ರುದ್ರೇಭಿಃ—ರುದ್ರರಿಂದಲೂ | ವಸುಭಿಃ—ವಸುಗ
ಳಿಂದಲೂ | ಪುರೋಹಿತಃ—ಪೂಜಿಸಲ್ಪಡುವವನೂ | ಹೋತಾ—ದೇವತೆಗಳನ್ನು (ಯಜ್ಞಕ್ಕೆ) ಕರೆಯುವವನೂ |
ನಿಷತ್ತಃ—(ಯಜ್ಞದಲ್ಲಿ ಅಗ್ರಾಸನವಹಿಸಿ) ಕುಳಿತುಕೊಳ್ಳುವವನೂ | ರಯಿಷಾಟ್—(ಶತ್ರುಗಳ) ಧನವನ್ನು
ಜಯಿಸಿ ಹಂಚುವವನೂ | ಅಮರ್ತ್ಯಃ—ಮರಣರಹಿತನೂ ಆದ | ದೇವಃ—ಪ್ರಕಾಶಮಾನನಾದ ಅಗ್ನಿಯು |
ವಿಕ್ಷು—ಪ್ರಜೆಗಳಲ್ಲಿ | ರಥೋ ನ—ರಥಗಳು ಪೂಜಿಸಲ್ಪಡುವಂತೆ | ಆಯುಷು—ಯಜಮಾನರೂಪರಾದ
ಮನುಷ್ಯರಲ್ಲಿ | ಋಂಜಸಾನಃ—ಸ್ತುತನಾಗಿ | ವಾರ್ಯಾ—ಅಪೇಕ್ಷಿತಗಳಾದ ಹವಿಸ್ಸುಗಳನ್ನು | ಆನುಷಕ್—
ಅನುಕ್ರಮವಾಗಿಯೂ | ವಿ ಋಣ್ವತಿ—ಅಧಿಕವಾಗಿಯೂ ಪಡೆಯುತ್ತಾನೆ ಅಥವಾ ಅಪೇಕ್ಷಿತಗಳಾದ ಧನಗಳನ್ನು
ಯಜಮಾನರಿಗೆ ಒದಗಿಸುತ್ತಾನೆ.

॥ ಭಾವಾರ್ಥ ॥

ಹವಿರ್ವಾಹಕನೂ, ರುದ್ರರಿಂದಲೂ ವಸುಗಳಿಂದಲೂ ಪೂಜಿತನೂ, ದೇವತೆಗಳನ್ನು ಯಜ್ಞಕ್ಕೆ ಕರೆಯು
ವವನೂ, ಯಜ್ಞದಲ್ಲಿ ಅಗ್ರಾಸನವನ್ನು ವಹಿಸುವವನೂ, ಶತ್ರುಧನಗಳನ್ನು ಜಯಿಸಿ ಹಂಚುವವನೂ, ಮರಣ
ರಹಿತನೂ ಮತ್ತು ಪ್ರಕಾಶಮಾನನೂ ಆದ ಅಗ್ನಿಯು, ಪ್ರಜೆಗಳಿಂದ ರಥಗಳು ಪೂಜಿಸಲ್ಪಡುವಂತೆ ಯಜಮಾನ
ರೂಪದಲ್ಲಿರುವ ಮಾನವರಿಂದ ಸ್ತುತನಾಗಿ ಅನುಕ್ರಮವಾಗಿ ಅರ್ಪಿಸಿದ ಮತ್ತು ಅಪೇಕ್ಷಿತಗಳಾದ ಹವಿಸ್ಸುಗಳನ್ನು
ಅಧಿಕವಾಗಿ ಪಡೆಯುತ್ತಾನೆ.

## English Translation.

The immortal and effulgent Agni, the bearer of oblations, placed in front of all by the Rudras and Vasus, the invoker (of the gods) who is present at a sacrifice and conquers the wealth (of the enemies), lauded by his worshippers, and admired like a chariot amongst mankind, accepts the oblations that are successively presented.



CC-0. Jangamwadi Math Collection. Digitized by eGangotri

|| ವಿಶೇಷ ವಿಷಯಗಳು ||

**ಕ್ರಾಣಾ—ಹವಿರ್ವಹನಂ ಕುರ್ವಾಣಃ**—ಹವಿಸ್ಸನ್ನು ಯಜ್ಞದಲ್ಲಿ ದೇವತೆಗಳಿಗೆ ಒಯ್ಯುವವನು.

**ನಿಷತ್ತಃ—ಹವಿಃಸ್ವೀಕರಣಾಯ ದೇವಯಜನೇ , ನಿಷಣ್ಣಃ**—ದೇವತೋದ್ದೇಶಕವಾಗಿ ನಡೆಸುವ ಸಕಲ ಯಾಗಕರ್ಮಗಳಲ್ಲಿಯೂ ಅಗ್ನಿಯು ಹವಿಸ್ಸನ್ನು ಸ್ವೀಕರಿಸಲು ಸಿದ್ಧನಾಗಿ ಕುಳಿತಿರುವನು.

**ರಯಿಷಾಟ್**—ಷಹ ಅಭಿಭವೇ ಎಂಬ ಅಭಿಭವಾರ್ಥಕ (ತಿರಸ್ಕಾರ)ವಾದ ಷಹ ಧಾತುವಿನಿಂದ ನಿಷ್ಪನ್ನವಾದ ಷಾಟ್ ಎಂಬ ಶಬ್ದವು ತಿರಸ್ಕರಿಸುವವನು ಎಂಬರ್ಥವನ್ನು ಕೊಡುವುದು. ರಯಿ ಶಬ್ದಕ್ಕೆ ಇಲ್ಲಿ ಶತ್ರುಧನವೆಂದು ಹೆಸರು. ಶತ್ರುಗಳ ದ್ರವ್ಯವನ್ನು ಸಂಪೂರ್ಣವಾಗಿ ನಾಶಗೊಳಿಸುವನು ಎಂದರೆ ಗೆದ್ದು ತರುವನು ಎಂದರ್ಥ.

**ವಿಷ್ಟು ರಥೋ ನ—ಪ್ರಜಾಸು ಲೌಕಿಕಜನೇಷು**—ಲೋಕವ್ಯವಹಾರದಲ್ಲಿ ತೊಡಗಿರುವ ಜನರಿಗೆ ರಥವು ಹೇಗೆ ಇಷ್ಟಾರ್ಥಸಾಧಕವಾಗುವುದೋ ಅದೇರೀತಿ ಯಜ್ಞದಲ್ಲಿ ಯಜಮಾನರಿಗೆ ತಮ್ಮ ಇಷ್ಟದಂತೆ ಆಯಾ ದೇವತೆಗಳಿಗೆ ಯಜ್ಞಭಾಗವನ್ನು ಒದಗಿಸುವುದರಲ್ಲಿ ಅಗ್ನಿಯು ವಿಶೇಷ ಸಹಾಯಕನಾಗುವನು.

**ಆಯುಷು—ಯಜಮಾನಲಕ್ಷಣೇಷು ಮನುಷ್ಯೇಷು**—ಇಲ್ಲಿ ಆಯುಶ್ಶಬ್ದವು ಮನುಷ್ಯವಾಚಿಯಾಗಿ ನಿರುಕ್ತದಲ್ಲಿ ಪಠಿತವಾಗಿದೆ (ನಿರು. ೨-೩-೧೭).

**ವಿ ಋಣ್ವತಿ**—ರಿವಿ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದವು ವಿಶೇಷರೀತಿಯಿಂದ ಹೊಂದಿಸುವುದು ಎಂಬರ್ಥವನ್ನು ಕೊಡುವುದು.

ವ್ಯಾಕರಣಪ್ರಕ್ರಿಯಾ

**ಕ್ರಾಣಾ**—ಡುಕೃಞ್ ಕರಣೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಬಹುಲಂ ಛಂದಸಿ ಎಂಬುದರಿಂದ ವಿಕರಣಕ್ಕೆ (ಉ) ಲುಕ್. ಅಪಿತ್ ಸಾರ್ವಧಾತುಕವಾದುದರಿಂದ ಙಿದ್ವದ್ಭಾವವಿರುವುದರಿಂದ ಶಾನಚ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಬರುವುದಿಲ್ಲ ಯಣಾದೇಶ. ರೇಫನಿಮಿತ್ತವಾಗಿ ಅಟ್‌ಕುಪ್ವಾಙ್ ಸೂತ್ರದಿಂದ ಶಾನಚಿನ ನಕಾರಕ್ಕೆ ಣತ್ವ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸು ಪರವಾದಾಗ ಸುಪಾಂಸುಲುಕ್ ಎಂಬುದರಿಂದ ವಿಭಕ್ತಿಗೆ ಪೂರ್ವಸವರ್ಣದೀರ್ಘ. ಕ್ರಾಣಾ ಎಂದು ರೂಪವಾಗುತ್ತದೆ.

**ನಿಷತ್ತಃ**—ಷದಲೃ-ವಿಶರಣಗತ್ಯವಸಾದನೇಷು ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತ ಪ್ರತ್ಯಯ. ದಕಾರದಪರದಲ್ಲಿ ಬಂದುದರಿಂದ ನಿಷ್ಠಾತಕಾರಕ್ಕೆ ಣತ್ವವು ಪ್ರಾಪ್ತವಾದರೆ ನಸತ್ತನಿಷತ್ತ (ಪಾ. ಸೂ. ೮-೨-೬೧) ಎಂಬುದರಿಂದ ನಿಷ್ಠಾನತ್ವಾಭಾವವು ನಿಪಾತಿತವಾಗಿದೆ. ಉಪಸರ್ಗಾತ್—ಸೂತ್ರದಿಂದ ಧಾತು ಸಕಾರಕ್ಕೆ ಷತ್ವ. ಗತಿರನಂತರಃ ಎಂಬುದರಿಂದ ಗತಿಗೆ (ನಿ) ಪ್ರಕೃತಿಸ್ವರ ಬರುತ್ತದೆ.

**ರಯಿಷಾಟ್** || ಷಹ ಅಭಿಭವೇ ಧಾತು. ಛಂದಸಿ ಸಹಃ ( ಪಾ. ಸೂ. ೩-೨-೬೩) ಎಂಬುದರಿಂದ ಣ್ವಿ ಪ್ರತ್ಯಯ. ಣಿತ್ತಾದುದರಿಂದ ಅತಉಪಧಾಯಾಃ ಎಂಬುದರಿಂದ ಧಾತುವಿನ ಉಪಧೆಗೆ ವೃದ್ಧಿ ಬರುತ್ತದೆ. ಪ್ರಥಮಾ ಸು ಪರವಾದಾಗ ಹೋಢಃ ಸೂತ್ರದಿಂದ ಢತ್ವ. ಝಲಾಂ ಜಶೋಂತೇ ಸೂತ್ರದಿಂದ ಜಶ್ತ್ವ. ವಾವಸಾನೇ ಎಂಬುದರಿಂದ ವಿಕಲ್ಪವಾಗಿ ಚರ್ತ್ವ. ಪದಾಂತ ವಿಷಯದಲ್ಲಿ ಸಹೇಃ ಸಾಡಃ ಸಃ (ಪಾ. ಸೂ. ೮-೩-೫೬) ಎಂಬುದರಿಂದ ಸಕಾರಕ್ಕೆ ಷತ್ವ ರಯಿಷಾಟ್ ಎಂದು ರೂಪವಾಗುತ್ತದೆ.



CC-0. Jangamwadi Math Collection. Digitized by eGangotri

ಋಙ್ಜಸಾನಃ—ಋಂಜ ಧಾತುವು ಸ್ತುತ್ಯರ್ಥದಲ್ಲಿದೆ. ಹಿಂದಿನ ಸೂತ್ರದಿಂದ ಅಸಾನಚ್ ಎಂದು ಅನುವೃತ್ತವಾಗುವಾಗ ಋಞ್ಜಿವೃಧಿಮಂದಿ ಸಹಿಭ್ಯಃ ಕಿತ್ (ಉ. ಸೂ. ೨-೨೪೪) ಎಂಬುದರಿಂದ ಕರ್ಮಣಿ ಯಲ್ಲಿ ಅಸಾನಚ್ ಪ್ರತ್ಯಯ. ಚಿತಃ ಎಂಬುದರಿಂದ ಇದು ಚಿತ್ತಾದುದರಿಂದ ಅಂತೋದಾತ್ತವಾಗುತ್ತದೆ.

ಆಯುಷು—ಆಯವಃ ಇತಿ ಮನುಷ್ಯನಾಮ (ನಿರು. ೨-೩-೧೭) ಇದು ಮನುಷಪರ್ಯಾಯವಾಚಿ ಎಂದು ತಾತ್ಪರ್ಯ. ಇಣ್ ಗತೌ ಧಾತು. ಇದಕ್ಕೆ ಛಂದಸೀಣಃ (ಉ. ಸೂ. ೧-೨) ಎಂಬುದರಿಂದ ಉಣ್ ಪ್ರತ್ಯಯ. ಣಿತ್ತಾದುದರಿಂದ ಅಚೋಞ್ಣಿತಿ ಸೂತ್ರದಿಂದ ಧಾತುವಿಗೆ ವೃದ್ಧಿ. ಆಯಾದೇಶ. ಆಯು ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ಅಂತೋದಾತ್ತ. ಸಪ್ತಮೀ ಬಹುವಚನಾಂತರೂಪ.

ವಾರ್ಯಾ—ವೃಞ್ ಸಂಭಕ್ತೌ ಧಾತು. ಋಹಲೋರ್ಣ್ಯತ್ (ಪಾ. ಸೂ. ೩-೧-೧೨೪) ಎಂಬುದರಿಂದ ಣ್ಯತ್ ಪ್ರತ್ಯಯ. ಣಿತ್ತಾದುದರಿಂದ ಅಚೋಞ್ಣಿತಿ ಸೂತ್ರದಿಂದ ಧಾತುವಿಗೆ ವೃದ್ಧಿ. ವಾರ್ಯಾ ಎಂದು ರೂಪವಾಗುತ್ತದೆ. ತಿತ್ತಾದುದರಿಂದ ಸ್ವರಿತವು ಪ್ರಾಪ್ತವಾದರೆ ಈಡವಂದವೃಶಂಸ (ಪಾ. ಸೂ. ೬-೧-೨೧೪) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ನಪುಂಸಕ ಬಹುವಚನದಲ್ಲಿ ಶಿ ಆದೇಶ ಬಂದಾಗ ಶೇಶ್ಛಂದಸಿ-ಬಹುಲಂ ಎಂಬುದರಿಂದ ಶಿ ಗೆ ಲೋಪ ಬರುತ್ತದೆ.

ಋಣ್ವತಿ—ರಿವಿ ಗತೌ ಧಾತು. ಇದಿತೋನುಮ್ ಧಾತೋಃ ಎಂಬುದರಿಂದ ನುಮಾಗಮ. ವ್ಯತ್ಯಯದಿಂದ ಸಂಪ್ರಸಾರಣ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಲಟ್ ಪ್ರಥಮಪುರುಷಏಕವಚನ ಪರವಾದಾಗ ಕರ್ತರಿಶಪ್ ಸೂತ್ರದಿಂದ ಶಪ್ ವಿಕರಣ. ಋವರ್ಣಾನ್ನಸ್ಯ—ಣತ್ವಂ ವಾಚ್ಯಂ ಎಂಬುದರಿಂದ ನುವಿನ ನಕಾರಕ್ಕೆ ಣತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ವಿ ವಾತಜೂತೋ ಅತಸೇಷು ತಿಷ್ಠತೇ ವೃಥಾ ಜುಹೂಭಿಃ ಸೃಣ್ಯಾ ತುವಿಷ್ವಣಿಃ ।
ತೃಷು ಯದಗ್ನೇ ವನಿನೋ ವೃಷಾಯಸೇ ಕೃಷ್ಣಂ ತ ಏಮ ರುಶದೂರ್ಮೇ ಅಜರ ॥ ೪ ॥

ಪದಪಾಠಃ

ವಿ । ವಾತಽಜೂತಃ । ಅತಸೇಷು । ತಿಷ್ಠತೇ । ವೃಥಾ । ಜುಹೂಭಿಃ । ಸೃಣ್ಯಾ । ತುವಿಽಸ್ವನಿಃ ।
ತೃಷು । ಯತ್ । ಅಗ್ನೇ । ವನಿನಃ । ವೃಷಽಯಸೇ । ಕೃಷ್ಣಂ । ತೇ । ಏಮ । ರುಶತ್ಽಊರ್ಮೇ । ಅಜರ ॥ ೪ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ವಾತಜೂತೋ ವಾಯುನಾ ಪ್ರೇರಿತಸ್ತುವಿಷ್ವಣಿರ್ಮಹಾಸ್ವನಃ ಏವಂಭೂತೋಽಗ್ನಿರ್ಜುಹೂಭಿಃ ಸ್ವಕೀಯಾಭಿರ್ಜಿಹ್ವಾಭಿಃ ಸೃಣ್ಯಾ ಸರಣಶೀಲೇನ ತೇಜಃಸಮೂಹೇನ ಚ ಯುಕ್ತಃ ಸನ್ । ವೃಥೇತ್ಯನಾಯಾಸವಚನಃ । ವೃಥಾನಾಯಾಸೇನೈವಾತಸೇಷೂನ್ನತೇಷು ವೃಕ್ಷೇಷು ವಿ ತಿಷ್ಠತೇ । ವಿಶೇಷೇಣ ತಿಷ್ಠತಿ । ಹೇ ಅಗ್ನೇ ಯದ್ಯದಾ ವನಿನೋ ವನಸಂಬಂಧಾನ್ವೃಕ್ಷಾನ್ದಗ್ಧುಂ ವೃಷಾಯಸೇ ವೃಷವದಾಚರಸಿ ದಹಸೀತ್ಯರ್ಥಃ । ಹೇ ರುಶದೂರ್ಮೇ ದೀಪ್ತಜ್ವಾಲ ಅಜರ ಜರಾರಹಿತಾಗ್ನೇ ತೇ ತವೈವ ಗಮನಮಾರ್ಗಃ ಕೃಷ್ಣಂ ಕೃಷ್ಣವರ್ಣೋ ಭವತಿ ॥ ವಾತಜೂತಃ । ಜೂ ಇತಿ ಸೌತ್ರೋ ಧಾತುಃ । ವಾತೇನ ಜೂತೋ ವಾತಜೂತಃ । ತೃತೀಯಾ ಕರ್ಮಣೀತಿ ಪೂರ್ವಪದಪ್ರಕೃತಿಸ್ವರತ್ವಂ । ವಿ ತಿಷ್ಠತೇ । ಸಮವಪ್ರವಿಭ್ಯಃ ಸ್ಥ ಇತ್ಯಾತ್ಮನೇಪದಂ । ಜುಹೂಭಿಃ । ಹು ದಾನಾದನಯೋಃ । ಹೂಯತೇಽತ ಆಸ್ವಿತಿ ಜುಹೂಃ । ಹುವಃ ಶ್ಲುವಚ್ಚ । ಉ. ೨-೬೦ । ಇತಿ ಕ್ವಿಪ್ । ಚಕಾರಾದ್ದೀರ್ಘಃ । ಶ್ಲುವದ್ಭಾವಾದ್ದ್ವಿರ್ಭಾವಾದಿ । ಧಾತೋರಿತ್ಯಂತೋದಾತ್ತತ್ವಂ । ಸೃಣ್ಯಾ । ಸೃ ಗತೌ । ಸರತೀತಿ ಸೃಣಿಃ । ಸೃವೃಷಿಭ್ಯಾಂ ಕಿತ್ । ಉ. ೪-೪೯ । ಇತಿ ನಿಪ್ರತ್ಯಯಃ । ಏಮ । ಏತ್ಯನೇನೇತ್ಯೇಮ ಮಾರ್ಗಃ । ಇಣ್ ಗತಾವಿತ್ಯಸ್ಮಾತ್ಕರಣ ಔಣಾದಿಕೋ ಮನಿನ್ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ವಾತಜೂತಃ—ವಾಯುವಿನಿಂದ ಪ್ರೇರಿತನೂ । ತುವಿಷ್ವಣಿಃ—ಗರ್ಜಿಸುವ ಶಬ್ದವುಳ್ಳವನೂ ಆದ ಅಗ್ನಿಯು । ಜುಹೂಭಿಃ—ತನ್ನ ಜ್ವಾಲೆಗಳಿಂದಲೂ । ಸೃಣ್ಯಾ—ಪ್ರಸರಿಸುವ ತೇಜಸ್ಸಿನಿಂದಲೂ ಕೂಡಿ । ವೃಥಾ—ಶ್ರಮವಿಲ್ಲದೇ । ಅತಸೇಷು—(ಉನ್ನತವಾದ) ಕಾಷ್ಠವೃಕ್ಷಗಳಲ್ಲಿ । ವಿ ತಿಷ್ಠತೇ—ವ್ಯಾಪಿಸಿಕೊಂಡು ನಿಲ್ಲುತ್ತಾನೆ । ರುಶದೂರ್ಮೇ—ಭಯಂಕರವಾದ ಜ್ವಾಲೆಯುಳ್ಳವನೂ । ಅಜರ—ಮುಪ್ಪಿಲ್ಲದವನೂ ಆದ । ಅಗ್ನೇ—ಎಲೈ ಅಗ್ನಿಯೇ । ಯತ್—ಯಾವಾಗ । ವನಿನಃ—ವನವೃಕ್ಷಗಳನ್ನು (ಸುಡುವುದಕ್ಕೆ) । ತೃಷು—ಜಾಗ್ರತೆಯಾಗಿ । ವೃಷಾಯಸೇ—ಎತ್ತಿನಂತೆ ಮುಂದೆ ನುಗ್ಗುತ್ತೀಯೋ (ಆಗ) । ತೇ—ನಿನ್ನ । ಏಮ—(ನೀನು) ಸಂಚಾರ ಮಾಡಿದ ಮಾರ್ಗವು । ಕೃಷ್ಣಂ—ಕಪ್ಪಾಗಿ ಆಗುತ್ತದೆ.

॥ ಭಾವಾರ್ಥ ॥

ವಾಯುವಿನಿಂದ ಪ್ರೇರಿತನೂ ಮತ್ತು ಗರ್ಜಿಸುವ ಶಬ್ದವುಳ್ಳವನೂ ಆದ ಅಗ್ನಿಯು ತನ್ನ ಜ್ವಾಲೆಗಳಿಂದಲೂ ಮತ್ತು ಪ್ರಸರಿಸುವ ತೇಜಸ್ಸಿನಿಂದಲೂ ಕೂಡಿಕೊಂಡು ಅನಾಯಾಸವಾಗಿ ಉನ್ನತವಾದ ಕಾಷ್ಠವೃಕ್ಷಗಳನ್ನು ವ್ಯಾಪಿಸಿ ದಹಿಸುತ್ತಾನೆ. ಭಯಂಕರವಾದ ಜ್ವಾಲೆಯುಳ್ಳವನೂ, ಮುಪ್ಪಿಲ್ಲದವನೂ ಆದ ಎಲೈ ಅಗ್ನಿಯೇ, ವನ ವೃಕ್ಷಗಳನ್ನು ದಹಿಸಲು ನೀನು ವೃಷಭದಂತೆ ಮುನ್ನುಗ್ಗಿದಾಗ ನಿನ್ನ ಸಂಚಾರಮಾರ್ಗವು ಕಪ್ಪಗೆ ಆಗುತ್ತದೆ.



CC-0. Jangamwadi Math Collection. Digitized by eGangotri

## English Translation.

Urged on by the wind, and roaring loudly, Agni easily sits upon the trees with his burning tongue and deffusive energy; when, undecaying and fiercely-blazing Agni, you rush rapidly like a bull amongst the forest trees, your bath is blackened.

॥ ವಿಶೇಷ ವಿಷಯಗಳು ॥

ವಾತಜೂತಃ—ವಾತೇನ ಜೂತಃ—ವಾಯುವಿನಿಂದ ಪ್ರೇರಿತನಾಗಿ ಎಂದರ್ಥ. ಜೂಧಾತುವು ಕೇವಲ ಸೂತ್ರಧಾತುವು. ಲೌಕಿಕ ಪ್ರಯೋಗದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.

ತುವಿಷ್ವಣಿಃ—ಮಹಾಸ್ವನಃ—ಹವಿಸ್ಸನ್ನು ಸ್ವೀಕರಿಸುವ ಕಾಲದಲ್ಲಿ ಅಗ್ನಿಯು ಛಟಛಟಾತ್ಕಾರದಿಂದ ಶಬ್ದಮಾಡುತ್ತಿರುವವನು. ಆದ್ದರಿಂದಲೇ ಇಲ್ಲಿ ಅಗ್ನಿಯು ಧ್ವನಿವಿಶಿಷ್ಟನೆಂದೂ, ಆ ಧ್ವನಿಗೆ ವಾಯುವು ಕಾರಣನೆಂದೂ ಹೇಳಲಾಗಿದೆ.

ಸೃಣ್ಯಾ—ಸರತೀತಿ ಸೃಣಿಃ—ಇಲ್ಲಿ ಗತ್ಯರ್ಥಕವಾದ ಸೃಧಾತುವಿನಿಂದ ಉಂಟಾದ ಈ ಶಬ್ದವು ಅಗ್ನಿಯು ಎಲ್ಲವನ್ನೂ ವ್ಯಾಪಿಸಿ ದಹಿಸುವವನು ಎಂಬುದನ್ನು ಸೂಚಿಸುವುದು.

ವೃಥಾ—ಇಲ್ಲಿ ವೃಥಾಶಬ್ದವು ಅನಾಯಾಸವೆಂಬರ್ಥವನ್ನು ಸೂಚಿಸುವುದು.

ವನಿನೋ ವೃಷಾಯಸೇ—ವನಸಂಬಂಧವಾದ ಮರಗಳನ್ನು ಸುಡುವುದರಲ್ಲಿ ವೃಷಭನಂತೆ ಅಂದರೆ ಗೂಳಿಯಂತೆ ಮುಂದುವರಿಯುವೆ. ಎಂದರೆ ಯಾವ ವಸ್ತುವನ್ನು ದಹಿಸಬೇಕಾದರೂ ನೀನು ಅನಾಯಾಸವಾಗಿ ಅಲ್ಪವಾದ ಶಕ್ತಿಯಿಂದಲೇ ಮುಂದುವರಿಯುವೆ. ಯಾವ ಕಾರ್ಯಸಾಧನೆಗೂ ನಿನ್ನ ಪೂರ್ಣಶಕ್ತಿ ಬೇಕಿಲ್ಲವೆಂದೇ ಭಾವಾರ್ಥ.

ರುಶದೂರ್ಮೇ—ರುಶಂತಃ ಊರ್ಮಯಃ ಯಸ್ಯ—ಪ್ರಕಾಶಮಾನನಾದ ಜ್ವಾಲೆಯುಳ್ಳವನು ದೀಪ್ತಿಜ್ವಾಲನು ಎಂದು ಅಗ್ನಿಯನ್ನು ಇಲ್ಲಿ ಸ್ತುತಿಸಿದೆ.

ಏಮ—ಏತ್ಯನೇನೇತಿ ಏಮ—ಇಣ್ ಗತೌ ಎಂಬ ಧಾತುವಿನಿಂದ ನಿಷ್ಪನ್ನವಾದ ಈ ಶಬ್ದಕ್ಕೆ ಮಾರ್ಗವೆಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

ವಾತಜೂತಃ—ಜೂ ಎಂಬುದು ಸೂತ್ರನಿರ್ದಿಷ್ಟವಾದ ಧಾತು. ಇದಕ್ಕೆ ಕ್ತ ಪ್ರತ್ಯಯ. ವಾತೇನ ಜೂತಃ ವಾತಜೂತಃ. ತೃತೀಯಾ ಕರ್ಮಣಿ (ಪಾ. ಸೂ. ೬-೨-೪೮) ಎಂಬುದರಿಂದ ಸಮಾಸದಲ್ಲಿ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

**ವಿತಿಷ್ಠತೇ**—ಷ್ಠಾ ಗತಿನಿವೃತ್ತೌ ಧಾತು. ಪರಸ್ಮೈಪದೀ **ಸಮವಪ್ರವಿಭ್ಯಃಸ್ಥಃ** (ಪಾ. ಸೂ. ೧-೩-೨೨) ಎಂಬುದರಿಂದ ವಿ ಉಪಸರ್ಗ ಪೂರ್ವದಲ್ಲಿರುವುದರಿಂದ ಆತ್ಮನೇಪದಪ್ರತ್ಯಯ ಬರುತ್ತದೆ. ಲಟ್ ಪ್ರಥಮಪುರುಷ ಏಕವಚನದಲ್ಲಿ **ಟಿತಆತ್ಮನೇಪದಾನಾಂ**—ಎಂಬುದರಿಂದ ಏತ್ವ. **ಪಾಘ್ರಾಧ್ಮಾಸ್ಥಾ**—ಸೂತ್ರದಿಂದ ಪ್ರಕೃತಿಗೆ ತಿಷ್ಠ ಎಂಬ ಆದೇಶ. ತಿಙಂತನಿಘಾತಸ್ವರ ಬರುತ್ತದೆ.

**ಜುಹೂಭಿಃ**—ಹು ದಾನಾದನಯೋಃ ಧಾತು. ಹೂಯತೇ ಆಸು ಇತಿ ಜುಹ್ವಃ. **ಹುವಃ ಶ್ಲುವಚ್ಚ** (ಉ. ಸೂ. ೨-೨೧೮) ಎಂಬುದರಿಂದ ಕ್ವಿಪ್ ಪ್ರತ್ಯಯ. ಚಕಾರದಿಂದ ದೀರ್ಘ ಬರುತ್ತದೆ. ಆದಕ್ಕೆ ಶ್ಲುವ ದ್ಭಾವ ಹೇಳಿರುವುದರಿಂದ ಶ್ಲ ಎಂಬುದರಿಂದ ಬರುವ ದ್ವಿತ್ವ ಇದಕ್ಕೂ ಬರುತ್ತದೆ. **ಹ್ರಸ್ವಃ** ಎಂಬುದರಿಂದ ಅಭ್ಯಾಸಕ್ಕೆ ಹ್ರಸ್ವ. **ಕುಹೋಶ್ಚುಃ** ಸೂತ್ರದಿಂದ ಚುತ್ವ. ಜುಹೂ ಶಬ್ದವಾಗುತ್ತದೆ. ಪ್ರತ್ಯಯ ಸರ್ವವೂ ಲುಪ್ತವಾಗುವುದರಿಂದ **ಧಾತೋಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸೃಣ್ಯಾ**—ಸೃ ಗತೌ ಧಾತು. ಸರತಿ ಇತಿ ಸೃಣಿಃ **ಸೃವೃಷಿಭ್ಯಾಂಕಿತ್** (ಉ. ಸೂ. ೪-೪೮೯) ಎಂಬು ದರಿಂದ ನಿಪ್ರತ್ಯಯ. ಕಿದ್ವದ್ಭಾವ ಹೇಳಿರುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಋಕಾರದ ಪರದಲ್ಲಿ ಬಂದುದರಿಂದ ನಕಾರಕ್ಕೆ ಣತ್ವ.

**ವೃಷಾಯಸೇ**—ವೃಷವತ್ ಆಚರಿಸಿ ವೃಷಾಯಸೇ. ವೃಷಶಬ್ದದ ಮೇಲೆ **ಉಪಮಾನಾದಾಚಾರೇ** ಎಂಬುದರಿಂದ ಆಚಾರಾರ್ಥದಲ್ಲಿ ಕ್ಯಙ್ ಪ್ರತ್ಯಯ. ಙಿತ್ತಾದುದರಿಂದ ಆತ್ಮನೇಪದಿಯಾಗುತ್ತದೆ. ಯದ್ಯೋಗ ವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಕ್ಯಙ್ ಪ್ರತ್ಯಯಸ್ವರ ಉಳಿಯುತ್ತದೆ. ಲಸಾರ್ವಧಾತುಕವು ಅನು ದಾತ್ತವಾಗುತ್ತದೆ.

**ಏಮ**—ಏತ್ಯನೇನೇತಿ ಏಮ ಮಾರ್ಗ. ಇಣ್ ಗತೌ ಧಾತು. ಇದಕ್ಕೆ ಕರಣಾರ್ಥದಲ್ಲಿ ಉಣಾದಿ ಸಿದ್ಧವಾದ ಮನಿನ್ ಪ್ರತ್ಯಯ. ಧಾತುವಿಗೆ ತನ್ನಿಮಿತ್ತವಾಗಿ ಗುಣ. ಏಮನ್ ಶಬ್ದವಾಗುತ್ತದೆ. ನಪುಂಸಕ ಪ್ರಥಮಾ ಸು ಪರವಾದಾಗ **ಸ್ವಮೋರ್ನಪುಂಸಕಾತ್** ಸೂತ್ರದಿಂದ ಸುಲೋಪ. **ನಲೋಪಃ ಪ್ರಾತಿಪದಿ-ಕಾಂತಸ್ಯ** ಸೂತ್ರದಿಂದ ನಲೋಪ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.



॥ ಸಂಹಿತಾಪಾಠಃ ॥

ತ್ವೇಪುರ್ಜಂಭೋ ವನ ಆ ವಾತಚೋದಿತೋ ಯೂಥೇ ನ ಸಾಹ್ವಾಁ ಅವ
ವಾತಿ ವಂಸಗಃ ।
ಅಭಿವ್ರಜನ್ನಕ್ಷಿತಂ ಪಾಜಸಾ ರಜಃ ಸ್ಥಾತುಶ್ಚರಥಂ ಭಯತೇ ಪತತ್ರಿಣಃ
॥ ೫ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತಪುಃಽಜಂಭಃ । ವನೇ । ಆ । ವಾತಽಚೋದಿತಃ । ಯೂಥೇ । ನ । ಸಹ್ವಾನ್ ।
ಅವ । ವಾತಿ । ವಂಸಗಃ ।
ಅಭಿಽವ್ರಜನ್ । ಅಕ್ಷಿತಂ । ಪಾಜಸಾ । ರಜಃ । ಸ್ಥಾತುಃ । ಚರಥಂ । ಭಯತೇ ।
ಪತತ್ರಿಣಃ ॥ ೫ ॥

॥ ಸಾಯಣಭಾಷ್ಯಂ ॥

ತಪುರ್ಜಂಭಃ । ತಪೂಂಷಿ ಜ್ವಾಲಾ ಏವ ಜಂಭಾ ಆಯುಧಾನಿ ಮುಖಾನಿ ವಾ ಯಸ್ಯ ಸ ತಥೋಕ್ತಃ । ವಾತಚೋದಿತೋ ವಾಯುನಾ ಪ್ರೇರಿತಃ । ಏವಂಭೂತೋಽಗ್ನಿರ್ಯೂಥೇ ಜ್ವಾಲಾಸಮೂಹೇ ಸತ್ಯಕ್ಷಿತಮಕ್ಷೀಣಂ ರಜ ಆರ್ದ್ರವೃಕ್ಷಾಂತರ್ಗತಮುದಕಂ ಪಾಜಸಾ ತೇಜೋಬಲೇನಾಭಿವ್ರಜನ್ ಆಭಿಮುಖ್ಯೇನ ಗಚ್ಛನ್ವನೇಽರಣ್ಯೇ ಸಾಹ್ವಾನ್ ಸರ್ವಮಭಿಭವನ್ ಆ ಅಭಿಮುಖ್ಯೇನಾವ ವಾತಿ । ವ್ಯಾಪ್ನೋತಿ । ತತ್ರ ದೃಷ್ಟಾಂತಃ । ವಂಸಗೋ ನ । ಯಥಾ ವನನೀಯಗತಿರ್ವೃಷೋ ಗೋಯೂಥೇ ಸರ್ವಮಭಿಭವನ್ವರ್ತತೇ ತದ್ವತ್ । ಯಸ್ಮಾದೇವಂ ತಸ್ಮಾತ್ಪತತ್ರಿಣಃ ಪತನವತೋಽಗ್ನೇಃ ಸಕಾಶಾತ್ಸ್ಥಾತುಃ ಸ್ಥಾವರಂ ಚರಥಂ ಚ ಜಂಗಮಂ ಚ ಭಯತೇ । ಬಿಭೇತಿ ॥ ಸಾಹ್ವಾನ್ । ದಾಶ್ವಾನ್ಸಾಹ್ವಾನಿತಿ ಕ್ವಸುಪ್ರತ್ಯಯಾಂತೋ ನಿಪಾತಿತಃ । ದೀರ್ಘಾದಟಿ ಸಮಾನಪಾದ ಇತಿ ಸಂಹಿತಾಯಾಂ ನಕಾರಸ್ಯ ರುತ್ವಂ । ಆತೋಽಟಿ ನಿತ್ಯಮಿತಿ ಸಾನುನಾಸಿಕ ಆಕಾರಃ । ಯತ್ವಲೋಪೌ । ಹ್ರಸ್ವತ್ವಂ ಛಾಂದಸಂ । ಸ್ಥಾತುಃ । ಕಮಿಮನಿಜನೀತ್ಯಾದಿನಾ । ಉ. ೧-೭೩ । ವಿಹಿತಸ್ತುಪ್ರತ್ಯಯೋ ಬಹುಲವಚನಾತ್ತಿಷ್ಠತೇರಪಿ ಭವತಿ । ಯದ್ವಾ । ಸ್ಥಾತುರನಂತರಂ ಚರಥಂ ಭಯತೇ । ಪ್ರಥಮಂ ಸ್ಥಿತ್ವಾ ಸ್ಥಾವರಂ ಬಿಭೇತಿ ಪಶ್ಚಾಚ್ಚರಥಮಿತ್ಯರ್ಥಃ । ಚರಥಂ । ಚರ ಗತ್ಯರ್ಥಃ । ಅಸ್ಮಾದೌಣಾದಿಕೋಽಥಪ್ರತ್ಯಯಃ । ಭಯತೇ । ಞಿಭೀ ಭಯೇ । ವ್ಯತ್ಯಯೇನಾತ್ಮನೇಪದಂ । ಬಹುಲಂ ಛಂದಸೀತಿ ಶ್ಲೋರಭಾವಃ । ಗುಣಾವಾದೇಶೌ ॥

॥ ಪ್ರತಿಪದಾರ್ಥ ॥

ತಪುರ್ಜಂಭಃ—ಜ್ವಾಲೆಗಳೇ ಆಯುಧಗಳಾಗಿ ಉಳ್ಳವನೂ । ವಾತಚೋದಿತಃ—ವಾಯುವಿನಿಂದ ಪ್ರೇರಿತನೂ ಆದ ಅಗ್ನಿಯು । ಯೂಥೇ—ಜ್ವಾಲಾಸಮೂಹವಿರಲು । ಅಕ್ಷಿತಂ—ಇಂಗದಿರುವ ಮತ್ತು । ರಜಃ—ವದ್ದೆಯಾಗಿರುವ (ವೃಕ್ಷದಲ್ಲಿರುವ) ನೀರನ್ನು ಕುರಿತು । ಪಾಜಸಾ—(ತನ್ನ) ತೇಜೋಬಲದಿಂದ । ಅಭಿವ್ರಜನ್—ಎದುರಾಗಿ ನುಗ್ಗುತ್ತಾ । ಸಾಹ್ವಾನ್—ಎಲ್ಲರನ್ನು ಜಯಿಸಿ । ವನೇ—ಕಾಡಿನಲ್ಲಿ । ವಂಸಗಃ ನ—ಆಕರ್ಷಕವಾದ ಗತಿಯುಳ್ಳ ಎತ್ತಿನಂತೆ ವಿಜಯಿಯಾಗಿ । ಅವ ವಾತಿ—ಸುತ್ತಲೂ ತುಂಬಿಕೊಳ್ಳುತ್ತಾನೆ (ಆದ್ದರಿಂದಲೇ) । ಪತತ್ರಿಣಃ—ಹಾರುವಂತೆ ಮುನ್ನುಗ್ಗುವ ಅಗ್ನಿಯಿಂದ । ಸ್ಥಾತುಃ—ಸ್ಥಾವರವಾದ ಜಗತ್ತೂ । ಚರಥಂ—ಜಂಗಮವಾದ ಜಗತ್ತೂ ಅಥವಾ ಸ್ಥಾವರ ಜಗತ್ತಿನನಂತರ ಜಂಗಮವಾದ ಜಗತ್ತು । ಭಯತೇ—ಭಯಪಡುತ್ತದೆ.





CC-0. Jangamwadi Math Collection. Digitized by eGangotri

|| ಭಾವಾರ್ಥ ||

ಜ್ವಾಲಾರೂಪದಲ್ಲಿರುವ ಆಯುಧವುಳ್ಳವನೂ, ವಾಯುವಿನಿಂದ ಪ್ರೇರಿತನೂ ಆದ ಅಗ್ನಿಯು ತನ್ನ ಜ್ವಾಲಾಸಮೂಹದೊಂದಿಗೂ, ತೇಜೋಬಲದೊಂದಿಗೂ ಸಹ ವೃಕ್ಷಗಳಲ್ಲಿ ಇಂಗದಿರುವ ನೀರಿಗಭಿಮುಖವಾಗಿ ಮುನ್ನುಗ್ಗುತ್ತಾನೆ. ತನ್ನೆದುರಿಗೆ ಸಿಕ್ಕಿದ ಸಮಸ್ತವನ್ನೂ ಜಯಿಸಿ, ಕಾಡಿನ ವೃಷಭವು ಗೋ ಸಮೂಹದಲ್ಲಿ ಸಮಸ್ತವನ್ನೂ ಜಯಿಸಿ ವಿಜಯಿಯಾಗಿ ತನ್ನ ಆಕರ್ಷಕವಾದ ಗತಿಯಿಂದ ಮೆರೆಯುವಂತೆ ಅಗ್ನಿಯೂ ಸಹ ಕಾಡಿನ ಸುತ್ತಲೂ ವಿಜಯಿಯಾಗಿ ತುಂಬಿಕೊಳ್ಳುತ್ತಾನೆ. ಹಾರುವಂತೆ ಮುನ್ನುಗ್ಗುವ ಅಗ್ನಿಗೆ ಸ್ಥಾವರ ಮತ್ತು ಜಂಗಮರೂಪವಾದ ಸಮಸ್ತ ಜಗತ್ತೂ ಸಹ ಭಯಪಡುತ್ತದೆ.

## English Translation.

The flame-weaponed and breeze-excited Agni, assailing the unexhaled moisture (of the trees) with all his strength, in a volume of fire, rushes triumphant (against all things) in the forest, like a bull, and all, whether stationary or moveable, are afraid of him as he flies along.

|| ವಿಶೇಷ ವಿಷಯಗಳು ||

**ತಪುರ್ಜಂಭಃ**—ತಪೂಂಷಿ ಜ್ವಾಲಾ ಏವ ಜಂಭಾ ಆಯುಧಾನಿ ಮುಖಾನಿ ವಾ ಯಸ್ಯ ಸ ತಥೋಕ್ತಃ—ಅಗ್ನಿಗೆ ಜ್ವಾಲೆಯೇ ಆಯುಧಗಳು. ಅಥವಾ ಜ್ವಾಲೆಯಿಂದಲೇ ಸರ್ವವನ್ನೂ ಸ್ವೀಕರಿಸುವನಾದ್ದರಿಂದ ಅಗ್ನಿಗೆ ಜ್ವಾಲೆಗಳೇ ಮುಖಗಳಾಗಿವೆ ಎಂದು ವಿವರಿಸಿದ್ದಾರೆ. (ಋ.ಸಂ. ಭಾಗ. ೪ ಪೇಜು 234 ನೋಡಿ.)

**ರಜಃ**—ಆರ್ದ್ರವೃಕ್ಷಾಂತರ್ಗತಮುದಕಂ—ಅಗ್ನಿಯು ತನ್ನ ಜ್ವಾಲಾಸಮೂಹದಿಂದ ವೃಕ್ಷಾಂತರ್ಗತವಾದ ಜಲಸಮೂಹವನ್ನು (ಹಸಿವನ್ನು) ಒಣಗಿಸಿ ನಿಸ್ಸಾರವನ್ನಾಗಿ ಮಾಡಿ ದಹಿಸಿಬಿಡುವುದು. ಇಲ್ಲಿ ಜಲಾರ್ಥದಲ್ಲಿ ರಜಶ್ಶಬ್ದಪ್ರಯೋಗವಿದೆ.

**ವಂಸಗಃ ನ**—ವನನೀಯಗತಿಃ ವೃಷಃ ಗೋಯೂಥೇ ಸರ್ವಮಭಿಭವನ್ ವರ್ತತೇ ತದ್ವತ್—ಧೈರ್ಯದಿಂದ ಸಂಚಾರಮಾಡುವ ಸ್ವಭಾವವುಳ್ಳದ್ದು ಗೂಳಿ. ಅಂತಹ ಗೂಳಿಯು ಗೋವುಗಳ ಸಮೂಹದಲ್ಲಿ ಯಾವುದನ್ನೂ ಲಕ್ಷ್ಯಮಾಡದೆ ಸಂಚರಿಸುವಂತೆ ಸ್ಥಾವರಜಂಗಮಾತ್ಮಕವಾದ ಯಾವ ವಸ್ತುಗಳನ್ನೂ ಲಕ್ಷಿಸದೆ ಅಗ್ನಿಯು ಎಲ್ಲವನ್ನೂ ದಹಿಸುವುದು.

**ಸ್ಥಾತುಃ ಚರಥಂ ಚ**—ಸ್ಥಾವರಗಳಾದ ಅಂದರೆ ಚಲಿಸದೆ ಸ್ಥಿರವಾಗಿ ನಿಂತಿರುವ ವೃಕ್ಷಾದಿಗಳು, ಚರಥಂ ಅಂದರೆ ಸಂಚರಿಸುವ ಪ್ರಾಣಿಗಳು. ಇಲ್ಲಿ ಮೊದಲು ಸ್ಥಾವರ ವಸ್ತುಗಳನ್ನು ದಹಿಸಿ ಅನಂತರ ಚರ (ಜಂಗಮ) ವಸ್ತುಗಳನ್ನು ಸುಡುವನೆ ಎಂದೂ ಸ್ತುತಿಸಿರುವರು. ಚರಥಂ ಎಂಬ ಪದದಲ್ಲಿರುವ ಚರಧಾತುವಿಗೆ ಗತ್ಯರ್ಥವಿದೆ. ಈ ಋಕ್ಕಿನಲ್ಲಿ ದಾವಾಗ್ನಿ ಅಥವಾ ಕಾಡುಕಿಚ್ಚನ್ನು ವರ್ಣಿಸಲಾಗಿರುವುದು.

|| ವ್ಯಾಕರಣಪ್ರಕ್ರಿಯಾ ||

**ಸಾಹ್ವಾನ್**—ದಾಶ್ವಾನ್ ಸಾಹ್ವಾನ್ ಮೀ—(ಪಾ. ಸೂ. ೬-೧-೧೨) ಎಂಬುದರಿಂದ ಕ್ವಸ್ವಪ್ರತ್ಯಯಾಂತಕವಾಗಿ ನಿಪಾತಿತವಾಗಿದೆ. ಸಾಹ್ವಾನ್+ಅವ ಎಂದಿರುವಾಗ ದೀರ್ಘಾದಟಿ ಸಮಾನಪಾದೇ (ಪಾ.



CC-0. Jangamwadi Math Collection. Digitized by eGangotri

ಸೂ. ೮.೩-೯) ಎಂಬುದರಿಂದ ಅಕಾರವನ್ನು ನಿಮಿತ್ತೀಕರಿಸಿ ನಕಾರಕ್ಕೆ ರುತ್ವ. ಆತೋಽಟಿ ನಿತ್ಯಮ್ ಎಂಬುದರಿಂದ ಪೂರ್ವದಲ್ಲಿರುವ ಆಕಾರಕ್ಕೆ ಅನುನಾಸಿಕತ್ವ. ಭೋಭಗೋಅ—ಸೂತ್ರದಿಂದ ರುತ್ವಕ್ಕೆ ಯತ್ವ ಲೋಪಃ ಶಾಕಲ್ಯಸ್ಯ ಎಂಬುದರಿಂದ ಆ ಯಕಾರಕ್ಕೆ ಲೋಪ.

ವಾತಿ—ವಾ ಗತಿಗಂಧನಯೋಃ ಧಾತು ಅದಾದಿ. ಲಟ್ ಪ್ರಥಮಪುರುಷ ಏಕವಚನರೂಪ. ತಿಙಂತ ನಿಘಾತಸ್ವರ ಬರುತ್ತದೆ.

ಸ್ಥಾತುಃ—ಷ್ಠಾ ಗತಿನಿವೃತ್ತೌ ಧಾತು. ಉಣಾದಿಯಲ್ಲಿ ಬಹುಲವಚನವಿರುವುದರಿಂದ ಕಮಿಮನಿಜನಿ (ಉ. ಸೂ. ೧-೨-೨) ಎಂಬುದರಿಂದ ವಿಧಿಸಲ್ಪಡುವ ತು ಪ್ರತ್ಯಯವು ಇದಕ್ಕೂ ಬರುತ್ತದೆ. ಅಥವಾ ಇದಕ್ಕೆ ತೃಚ್ ಪ್ರತ್ಯಯ. ಸ್ಥಾತೃ ಶಬ್ದವಾಗುತ್ತದೆ. ಆಗ ಸ್ಥಾತುರನಂತರಂ ಚರಥಂ ಭಯತೇ ಎಂದು ಅನ್ವಯ. ಪ್ರಥಮಂ ಸ್ಥಾತೃ ಸ್ಥಾವರಂ ಬಿಭೇತಿ ಪಶ್ಚಾತ್ ಚರಥಮಿತ್ಯರ್ಥಃ (ಮೊದಲು ಸ್ಥಾವರವೂ ಅನಮೇಲೆ ಜಂಗಮವೂ ಹೆದರುತ್ತದೆ ಎಂದು ಅನ್ವಯಮಾಡಬೇಕು.) ಪಂಚಮೀ ಏಕವಚನರೂಪವಾಗುತ್ತದೆ.

ಚರಥಮ್—ಚರ ಗತಿಭಕ್ಷಣಯೋಃ ಧಾತು. ಇಲ್ಲಿ ಗತ್ಯರ್ಥದಲ್ಲಿ ಪ್ರಯುಕ್ತವಾಗಿದೆ. ಇದಕ್ಕೆ ಔಣಾದಿಕವಾದ ಅಥ ಪ್ರತ್ಯಯ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

ಭಯತೇ—ಞಿಭೀ ಭಯೇ ಧಾತು. ವ್ಯತ್ಯಯೋಬಹುಲಂ ಸೂತ್ರದಿಂದ ಆತ್ಮನೇಪದಪ್ರತ್ಯಯ. ಬರುತ್ತದೆ. ಜುಹೋತ್ಯಾದಿಕವಾದರೂ ಬಹುಲಂ ಛಂದಸಿ ಎಂಬುದರಿಂದ ಶ್ಲು ಬರುವುದಿಲ್ಲ. ಕರ್ತರಿಶಪ್ ಸೂತ್ರದಿಂದ ಶಪ್. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅಚ್ ಪರದಲ್ಲಿರುವುದರಿಂದ ಅದಕ್ಕೆ ಅಯಾದೇಶ. ಟಿತಆತ್ಮನೇಪದಾನಾಂ-- ಸೂತ್ರದಿಂದ ಪ್ರತ್ಯಯಕ್ಕೆ ಏತ್ವ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

—❧—

॥ ಸಂಹಿತಾಪಾಠಃ ॥

ದಧುಷ್ಟ್ವಾ ಭೃಗವೋ ಮಾನುಷೇಷ್ವಾ ರಯಿಂ ನ ಚಾರುಂ ಸುಹವಂ ಜನೇಭ್ಯಃ ।
ಹೋತಾರಮಗ್ನೇ ಅತಿಥಿಂ ವರೇಣ್ಯಂ ಮಿತ್ರಂ ನ ಶೇವಂ ದಿವ್ಯಾಯ ಜನ್ಮನೇ ॥ ೬ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ದಧುಃ । ತ್ವಾ । ಭೃಗವಃ । ಮಾನುಷೇಷು । ಆ । ರಯಿಂ । ನ । ಚಾರುಂ । ಸು-ಹವಂ । ಜನೇಭ್ಯಃ ।

ಹೋತಾರಂ । ಅಗ್ನೇ । ಅತಿಥಿಂ । ವರೇಣ್ಯಂ । ಮಿತ್ರಂ । ನ । ಶೇವಂ । ದಿವ್ಯಾಯ ಜನ್ಮನೇ ॥ ೬ ॥

॥ ಸಾಯಣಭಾಷ್ಯಂ ॥

ಹೇ ಅಗ್ನೇ ತ್ವಾ ತ್ವಾಂ ಮಾನುಷೇಷು ಮನುಷ್ಯೇಷು ಮಧ್ಯೇ ಭೃಗವ ಏತತ್ಸಂಜ್ಞಾ ಮಹರ್ಷಯೋ ದಿವ್ಯಾಯ ಜನ್ಮನೇ ದೇವತ್ವಪ್ರಾಪ್ತಯೇ ಚಾರುಂ ರಯಿಂ ನ ಶೋಭನಂ ಧನಮಿವಾ ದಧುಃ। ಆಧಾನಸಂಭಾರೇಷು ಮಂತ್ರೈಃ ಸ್ಥಾಪನೇನ ಸಮುಸ್ಕುರ್ವನ್ । ಕೀದೃಶಂ ತ್ವಾಂ । ಜನೇಭ್ಯಃ ಸುಹವಂ ಯಜಮಾನಾರ್ಥಮಾಹ್ವಾತುಂ ಸುಶಕಂ ಹೋತಾರಂ ದೇವಾನಾಮಾಹ್ವಾತಾರಂ ಅತಿಥಿಮತಿಥಿವತ್ಪೂಜ್ಯಂ । ಯದ್ವಾ । ದೇವಯಜನದೇಶೇಷು ಸತತಂ ಗಂತಾರಂ । ವರೇಣ್ಯಂ ವರಣೀಯಂ ಮಿತ್ರಂ ನ ಶೇವಂ । ಯಥಾ ಸಖಾ ಸುಖಕರೋ ಭವತಿ ತದ್ವತ್ ಸುಖಕರಮಿತ್ಯರ್ಥಃ ॥ ಧಧುಃ । ಲಿಟ್ಯುಸ್ಯಾತೋ ಲೋಪ ಇಟಿ ಚೇತ್ಯಾಕಾರಲೋಪಃ । ಯುಷ್ಮತ್ತತ್ತತಕ್ಷುಃಷ್ವಂತಃಪಾದಮಿತಿ ವಿಸರ್ಜನೀಯಸ್ಯ ಷತ್ವಂ । ಸುಹವಂ । ಹ್ವಯತೇರೀಷದ್ದುಃಸುಷ್ವಿತಿ ಖಲ್ । ಬಹುಲಂ ಛಂದಸೀತಿ ಸಂಪ್ರಸಾರಣಂ । ಪರಪೂರ್ವತ್ವಂ । ಗುಣಾವಾದೇಶೌ । ಲಿತೀತಿ ಪ್ರತ್ಯಯಾತ್ಪೂರ್ವಸ್ಯೋದಾತ್ತತ್ವಂ । ಕೃದುತ್ತರಪದಪ್ರಕೃತಿಸ್ವರತ್ವಂ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಜನೇಭ್ಯಃ—ಯಜಮಾನರಿಗಾಗಿ । ಸುಹವಂ—ಚೆನ್ನಾಗಿ ಯಜ್ಞಮಾಡುವ ಶಕ್ತಿಯುಳ್ಳವನೂ । ಹೋತಾರಂ—(ಯಜ್ಞಕ್ಕೆ) ದೇವತೆಗಳನ್ನು ಕರೆಯುವವನೂ । ಅತಿಥಿಂ—(ಶ್ರೇಷ್ಠನಾದ) ಅತಿಥಿಯೂ (ಅಥವಾ ಯಜ್ಞದೇಶಕ್ಕೆ ಆಗಾಗ್ಗೆ ಬರುವವನೂ) । ವರೇಣ್ಯಂ—ಇಷ್ಟತಮನಾದ । ಮಿತ್ರಂ ನ—ಸ್ನೇಹಿತನಂತೆ । ಶೇವಂ—ಸುಖಕರನೂ ಆದ । ತ್ವಾ—ನಿನ್ನನ್ನು । ಮಾನುಷೇಷು—ಮಾನವರ ನಡುವೆ । ಭೃಗವಃ—ಭೃಗುಋಷಿಗಳು । ದಿವ್ಯಾಯ ಜನ್ಮನೇ—ದೇವಾತ್ಮಕವಾದ ಜನ್ಮವನ್ನು ಪಡೆಯಲು । ಚಾರುಂ ರಯಿಂ ನ—ಮನೋಹರವಾದ ನಿಧಿಯಂತೆ । ಆ ದಧುಃ—ಇಟ್ಟು ಆದರಿಸಿದರು.

॥ ಭಾವಾರ್ಥ ॥

ಎಲೈ ಅಗ್ನಿಯೇ, ನೀನು ಯಜಮಾನರಿಗಾಗಿ ಯಾಗಮಾಡುವವನು. ಯಜ್ಞಕ್ಕೆ ದೇವತೆಗಳನ್ನು ಕರೆಯುವವನು. ಪ್ರಿಯನಾದ ಅತಿಥಿಯು. ಇಷ್ಟತಮನಾದ ಸ್ನೇಹಿತನಂತೆ ಸುಖದಾಯಕನು. ಇಂತಹ

ನಿನ್ನನ್ನು ಮಾನವರ ನಡುವೆ ಭೃಗುಋಷಿಗಳು ತಾವು ದೇವತಾತ್ಮಕವಾದ ಜನ್ಮವನ್ನು ಪಡೆಯಲು ಮನೋಹರವೂ ಇಷ್ಟತಮವೂ ಆದ ನಿಧಿಯಂತೆ ಇಟ್ಟುಕೊಂಡು ಪೋಷಿಸಿ ಆದರಿಸಿದರು.

## English Translation.

The Bhrigus amongst men, for the sake of being born as gods, cherished you like a costly treasure. Agni, you sacrifice for men, you are the invoker of the gods, the welcome guest at sacrifices and you are to be esteemed like a loving friend.

|| ವಿಶೇಷ ವಿಷಯಗಳು ||

ಭೃಗವಃ—ಭೃಗುವೆಂಬ ಋಷಿಯ ವಂಶದಲ್ಲಿ ಉತ್ಪನ್ನರಾದವರು.

ದಿವ್ಯಾಯ ಜನ್ಮನೇ—ದೇವಭಾವವನ್ನು ಹೊಂದುವುದಕ್ಕಾಗಿ ಅಂದರೆ ಸ್ವರ್ಗಫಲವನ್ನು ಅನುಭವಿಸಲು ಎಂದರ್ಥ.

ಚಾರುಂ ರಯಿಂ ನ—ಸರ್ವಜನಾಹ್ಲಾದಕವಾದ ಹಣದಂತೆ ಎಲ್ಲರೂ ನಿನ್ನನ್ನು ಸೇವಿಸುವರು ಎಂದರ್ಥ. ಹಣವು ಎಲ್ಲರಿಗೂ ಬೇಕಾದ ವಸ್ತುವು.

ಸುಹವಂ— ಯಜಮಾನಾರ್ಥಮಾಹ್ವಾತುಂ ಸುಶಕಂ—ಯಜಮಾನನಿಗಾಗಿ ಸಕಲ ದೇವತೆಗಳನ್ನೂ ಸುಲಭವಾಗಿ ಆಹ್ವಾನಿಸುವುದಕ್ಕೆ.

ಅತಿಥಿಂ—ಅತಿಥಿಯಂತೆ ಪೂಜ್ಯನು. ಅಥವಾ ದೇವಯಜನ ದೇಶಗಳಲ್ಲಿ ಸದಾ ಸಂಚರಿಸುವವನು ಎಂದರ್ಥ.

ಮಿತ್ರಂ ನ ಶೇವಂ—ಮಿತ್ರನಂತೆ ಸುಖಕರನು ಎಂದರ್ಥ. ಹೇಗೆ ಪ್ರಿಯಸ್ನೇಹಿತನು ಸುಖವನ್ನು ಬಯಸುವನೋ ಆದರಂತೆ ಅಗ್ನಿಯೂ ಯಜಮಾನನಿಗೆ ಸುಖಪ್ರದನು ಎಂದು ಭಾವವು.

|| ವ್ಯಾಕರಣಪ್ರಕ್ರಿಯಾ ||

ದಧುಃ—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಬಹುವಚನಕ್ಕೆ ಪರಸ್ಮೈಪದಾನಾಂ—ಸೂತ್ರದಿಂದ ಉಸಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಜಸ್ತ್ವ ಅಸಂಯೋಗಾಲ್ಲಿಟ್‌ಕಿತ್ ಸೂತ್ರದಿಂದ ಪ್ರತ್ಯಯವು ಕಿತ್ತಾಗುತ್ತದೆ. ಆಗ ಆತೋಲೋಪಇಟಿಚ ಎಂಬುದರಿಂದ ಆಕಾರಕ್ಕೆ ಲೋಪ. ಪ್ರತ್ಯಯ ಸಕಾರಕ್ಕೆ ರುತ್ವ ವಿಸರ್ಗ. ದಧುಃ ಎಂದು ರೂಪವಾಗುತ್ತದೆ. ತ್ವಾ ಪರವಾದಾಗ ಯುಷ್ಮತ್ತತಕ್ಷುಷ್ವಂತಃ ಪಾದಮ್ (ಪಾ. ಸೂ. ೮-೩-೧೦೩) ಎಂಬುದರಿಂದ ವಿಸರ್ಜನೀಯಕ್ಕೆ ಷತ್ವ ಬರುತ್ತದೆ.

ಸುಹವಮ್—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಇದಕ್ಕೆ ಸು ಉಪಪದವಾದಾಗ ಈಷದ್ದುಃಸುಷುಕೃಚ್ಛ್ರಾ—(ಪಾ. ಸೂ. ೩-೩-೧೨೬) ಎಂಬುದರಿಂದ ಖಲ್ ಪ್ರತ್ಯಯ. ನಿಮಿತ್ತವಿಲ್ಲದಿದ್ದರೂ



CC-0. Jangamwadi Math Collection. Digitized by eGangotri

ಬಹುಲಂ ಛಂದಸಿ ಎಂಬುದರಿಂದ ಸಂಪ್ರಸಾರಣ. ಹು+ಏ+ಅ ಎಂದಿರುವಾಗ ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಆಗ ಪ್ರತ್ಯಯನಿಮಿತ್ತವಾಗಿ ಧಾತುವಿನ ಉಕಾರಕ್ಕೆ ಗುಣ. ಅವಾದೇಶ. ಲಿತಿ (ಪಾ. ಸೂ. ೬-೧-೧೯೩) ಎಂಬುದರಿಂದ ಪ್ರತ್ಯಯದ ಪೂರ್ವಕ್ಕೆ ಉದಾತ್ತಸ್ವರ ಬರುತ್ತದೆ. ಗತಿಸಂಜ್ಞೆಯುಳ್ಳ ಸು ಎಂಬುದರೊಡನೆ ಸಮಾಸವಾದಾಗ ಗತಿಕಾರಕೋಪಪದಾತ್ ಕೃತ್ ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

ಹೋತಾರಮ್—ಹು ದಾನಾದನಯೋಃ ಧಾತು. ತೃನ್ ಪ್ರತ್ಯಯ. ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ದ್ವಿತೀಯಾ ಏಕವಚನ ಪರವಾದಾಗ ಋತೋಙಿ ಸರ್ವನಾಮಸ್ಥಾನಯೋಃ ಎಂಬುದರಿಂದ ಋಕಾರಕ್ಕೆ ಗುಣ. ಅಪ್ತೃನ್ತೃಚ್ ಸೂತ್ರದಿಂದ ಉಪಧಾದೀರ್ಘ.

---

॥ ಸಂಹಿತಾಪಾಠಃ ॥

ಹೋತಾರಂ ಸಪ್ತ ಜುಹ್ವೋ೩ ಯಜಿಷ್ಠಂ ಯಂ ವಾಘತೋ ವೃಣತೇ
ಅಧ್ವರೇಷು ।
ಅಗ್ನಿಂ ವಿಶ್ವೇಷಾಮರತಿಂ ವಸೂನಾಂ ಸಪರ್ಯಾಮಿ ಪ್ರಯಸಾ ಯಾಮಿ
ರತ್ನಂ ॥ ೭ ॥

॥ ಪದಪಾಠಃ ॥

ಹೋತಾರಂ । ಸಪ್ತ । ಜುಹ್ವಃ । ಯಜಿಷ್ಠಂ । ಯಂ । ವಾಘತಃ । ವೃಣತೇ ।
ಅಧ್ವರೇಷು ।
ಅಗ್ನಿಂ । ವಿಶ್ವೇಷಾಂ । ಅರತಿಂ । ವಸೂನಾಂ । ಸಪರ್ಯಾಮಿ । ಪ್ರಯಸಾ ।
ಯಾಮಿ । ರತ್ನಂ ॥ ೭ ॥

॥ಸಾಯಣಭಾಷ್ಯಂ॥

ಸಪ್ತ ಸಪ್ತಸಂಖ್ಯಾಕಾ ಜುಹ್ವೋ ಹೋತಾರೋ ವಾಘತ ಋತ್ವಿಜೋಽಧ್ವರೇಷು ಯಾಗೇಷು ಯಜಿಷ್ಠಂ ಯಷ್ಟೃತಮಂ ಹೋತಾರಂ ದೇವಾನಾಮಾಹ್ವಾತಾರಂ ಯಮಗ್ನಿಂ ವೃಣತೇ ಸಂಭಜಂತೇ ವಿಶ್ವೇಷಾಂ ಸರ್ವೇಷಾಂ ವಸೂನಾಮರತಿಂ ಪ್ರಾಪಯಿತಾರಂ ತಮಗ್ನಿಂ ಪ್ರಯಸಾ ಹವಿರ್ಲಕ್ಷಣೇನಾನ್ನೇನ ಸಪರ್ಯಾಮಿ । ಪರಿಚರಾಮಿ । ರತ್ನಂ ರಮಣೀಯಂ [illegible] ಫಲಂ ಚ ಯಾಮಿ । ಯಾಚಾಮಿ ॥



CC-0. Jangamwadi Math Collection. Digitized by eGangotri

ವೃಣತೇ । ವೃಙ್ ಸಂಭಕ್ತೌ । ಕ್ರ್ಯಾದಿಃ । ಪ್ರತ್ಯಯಸ್ವರಃ । ಅರತಿಂ । ಋ. ಗತಿಪ್ರಾಪಣಯೋಃ । ಅಸ್ಮಾದೌಣಾದಿಕೋ ವಹಿವಸ್ಯರ್ತಿಭ್ಯಶ್ಚಿತ್ । ಉ. ೪-೬೦ । ಇತ್ಯತಿಪ್ರತ್ಯಯಃ । ಚಿತ್ತ್ವಾದಂತೋದಾತ್ತತ್ವಂ । ಸಪರ್ಯಾಮಿ । ಸಪರ್ಯತಿಃ ಪರಿಚರಣಕರ್ಮಾ । ಸಪರ ಪೂಜಾಯಾಮಿತಿ ಧಾತುಃ ಕಂಡ್ವಾದಿಃ । ಅತೋ ಯಕ ಏವ ಸ್ವರಃ ಶಿಷ್ಯತೇ । ಪಾದಾದಿತ್ವಾನ್ನಿಘಾತಾಭಾವಃ । ಯಾಮಿ । ಯಾಚಾಮಿತ್ಯಸ್ಯ ವರ್ಣಲೋಪಶ್ಛಾಂದಸಃ ॥

॥ ಪ್ರತಿಪದಾರ್ಥ ॥

ಸಪ್ತ—ಏಳು ಜನ । ಜುಹ್ವಃ—ಹೋತೃಸ್ಥಾನದಲ್ಲಿರುವ । ವಾಘತಃ—ಋತ್ವಿಕ್ಕುಗಳು । ಅಧ್ವರೇಷು—ಯಾಗಗಳಲ್ಲಿ । ಯಜಿಷ್ಠಂ—ಪೂಜ್ಯತಮನೂ । ಹೋತಾರಂ—(ದೇವತೆಗಳನ್ನು ಯಜ್ಞಕ್ಕೆ) ಕರೆಯುವವನೂ ಆದ । ಯಂ—ಯಾವ ಅಗ್ನಿಯನ್ನು । ವೃಣತೇ—ಆರಿಸಿ ಪೂಜಿಸುತ್ತಾರೋ (ಅಂತಹ) । ವಿಶ್ವೇಷಾಂ—ಸಕಲವಾದ । ವಸೂನಾಂ—ಧನಗಳಿಗೂ । ಅರತಿಂ—ದಾತನಾದ । ಅಗ್ನಿಂ—ಅಗ್ನಿಯನ್ನು । ಪ್ರಯಸಾ—ಹವಿಸ್ಸಿನ ರೂಪದಲ್ಲಿರುವ ಅನ್ನದಿಂದ । ಸಪರ್ಯಾಮಿ—ಪೂಜಿಸುತ್ತೇನೆ (ಮತ್ತು) । ರತ್ನಂ—ರಮಣೀಯವಾದ ಯಜ್ಞಫಲವನ್ನು (ಐಶ್ವರ್ಯವನ್ನು) । ಯಾಮಿ—ಬೇಡುತ್ತೇನೆ ॥

॥ ಭಾವಾರ್ಥ ॥

ಹೋತೃ ಸ್ಥಾನದಲ್ಲಿರುವ ಏಳು ಜನ ಋತ್ವಿಕ್ಕುಗಳು ಯಾಗಗಳಲ್ಲಿ ಪೂಜ್ಯತಮನೂ, ದೇವತೆಗಳನ್ನು ಯಜ್ಞಕ್ಕೆ ಕರೆಯುವವನೂ ಆದ ಯಾವ ಅಗ್ನಿಯನ್ನು ಆಹ್ವಾನಿಸಿ ಪೂಜಿಸುತ್ತಾರೋ ಅಂತಹ ಸಕಲ ಧನದಾತನಾದ ಅಗ್ನಿಯನ್ನು ಹವಿಸ್ಸಿನರೂಪದಲ್ಲಿರುವ ಅನ್ನದಿಂದ ಪೂಜಿಸುತ್ತೇನೆ. ಅಲ್ಲದೆ ರಮಣೀಯವಾದ ಐಶ್ವರ್ಯಕ್ಕಾಗಿ ಬೇಡುತ್ತೇನೆ.

## English Translation.

I worship with oblations that Agni whom the seven invoking priests invite as the invoker of the gods; who is most worthy of adoration at sacrifies, and who is the giver of all riches; I solicit of him riches;

### ವಿಶೇಷ ವಿಷಯಗಳು

ಸಪ್ತ ಜುಹ್ವಃ—ಏಳು ಸಂಖ್ಯೆಯ ಹೋತೃಗಳು. ಯಜ್ಞದಲ್ಲಿ ದೇವತೆಗಳನ್ನು ಆಹ್ವಾನಿಸುವುದಕ್ಕಾಗಿ ಏಳು ಜನ ಋತ್ವಿಕ್ಕುಗಳಿಂದ ಕೂಡಿದ ಹೋತೃವರ್ಗವಿರುವುದು.

ವಾಘತಃ—ಋತ್ವಿಕ್ಕುಗಳು. ಭಾರತಾಃ ಕರವಃ ಮೊದಲಾದ ಎಂಟು ಋತ್ವಿಙ್ನಾಮಗಳ ಮಧ್ಯದಲ್ಲಿ ವಾಘತಃ ಎಂಬ ಶಬ್ದವು ಪಠಿತವಾಗಿರುವುದರಿಂದ ವಾಘತಃ ಎಂದರೆ ಋತ್ವಿಕ್ಕುಗಳು ಎಂದರ್ಥವು. (ನಿ. ೩-೧೮)



CC-0. Jangamwadi Math Collection. Digitized by eGangotri

ಯಜಿಷ್ಠಂ—ಯಾಗಮಾಡುವವರಲ್ಲಿ ಅತ್ಯಂತಶ್ರೇಷ್ಠರಾದವರು.

ವಸೂನಾಂ ಅರತಿಂ—ಸಂಪೂರ್ಣ ಐಶ್ವರ್ಯವನ್ನು ಹೊಂದಿಸುವವನು ಅಗ್ನಿಪುರುಷ.

ಸಪರ್ಯಾಮಿ—ಸೇವಿಸುವೆನು. ಸಪರ್ಯತಿಃ ಪರಿಚರಣಕರ್ಮಾ ಸಪರ ಪೂಜಾಯಾಂ ಎಂಬು ಧಾತು ವಿನಿಂದ ಉತ್ಪನ್ನವಾದ ಶಬ್ದ ಇದು.

ಯಾಮಿ—ಯಾಚಾಮಿ ಎಂಬ ಕ್ರಿಯಾರೂಪದಲ್ಲಿ ಮಧ್ಯಮವರ್ಣ ಲೋಪವಾಗಿ, ಅದೇ ಅರ್ಥದಲ್ಲಿ ಈ ಪದವು ಪ್ರಯೋಗಿಸಲ್ಪಟ್ಟಿದೆ.

॥ ವ್ಯಾಕರಣಪ್ರಕ್ರಿಯಾ ॥

ಯಜಿಷ್ಠಮ್—ಯಷ್ಟೃ ಶಬ್ದ. ತುಶ್ಛಂದಸಿ ಎಂಬುದರಿಂದ ಅತಿಶಯಾರ್ಥದಲ್ಲಿ ಇಷ್ಠನ್ ಪ್ರತ್ಯಯ. ತುರಿಷ್ಠೇಮೇಯಃಸು ಎಂಬುದರಿಂದ ಇಷ್ಠನ್ ಪರವಾದಾಗ ತೃಚಿಗೆ ಲೋಪ. ಇಷ್ಠನ್ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ.

ವೃಣತೇ—ವೃಙ್ ಸಂಭಕ್ತೌ ಧಾತು. ಕ್ರ್ಯಾದಿ ಲಟ್ ಪ್ರಥಮಪುರುಷದಲ್ಲಿ ಝ ಪ್ರತ್ಯಯ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾ ವಿಕರಣ. ಆತ್ಮನೇಪದೇಷ್ವನತಃ ಸೂತ್ರದಿಂದ ಝ ಪ್ರತ್ಯಯಕ್ಕೆ ಅತಾದೇಶ. ಸಾರ್ವಧಾತುಕಮಪಿತ್ ಸೂತ್ರದಿಂದ ಇದಕ್ಕೆ ಙಿದ್ವದ್ಭಾವವಿರುವುದರಿಂದ ಶ್ನಾಭ್ಯಸ್ತಯೋರಾತಃ ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ. ಶ್ನಾ ಪ್ರತ್ಯಯವೂ ಙಿತ್ತಾದುದರಿಂದ ಧಾತುವಿನ ಋಕಾರಕ್ಕೆ ಗುಣ ಬರುವುದಿಲ್ಲ. ವೃಣತೇ ಎಂದು ರೂಪವಾಗುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಪ್ರತ್ಯಯಸ್ವರದಿಂದ ಮಧ್ಯೋದಾತ್ತವಾಗುತ್ತದೆ.

ಅರತಿಮ್—ಋ ಗತಿಪ್ರಾಪಣಯೋಃ ಧಾತು. ಇದಕ್ಕೆ ಔಣಾದಿಕವಾದ ವಹಿವಸ್ಯರ್ತಿಭ್ಯಶ್ಚಿತ್ (ಉ. ಸೂ. ೪-೫೦೦) ಎಂಬುದರಿಂದ ಅತಿ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ಉರಣ್ರಪರಃ ಸೂತ್ರದಿಂದ ರಪರವಾಗಿ ಬರುತ್ತದೆ. ಪ್ರತ್ಯಯಕ್ಕೆ ಚಿತ್ವ ಅತಿದೇಶಮಾಡಿರುವುದರಿಂದ ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ಸಪರ್ಯಾಮಿ—ಸಪರ್ಯತಿಃ ಪರಿಚರಣಕರ್ಮಾ. (ಸೇವಾರ್ಥದಲ್ಲಿದೆ) ಸಪರ ಪೂಜಾಯಾಂ ಎಂದು ಈ ಧಾತುವು ಕಂಡ್ವಾದಿಯಲ್ಲಿ ಪಠಿತವಾಗಿದೆ. ಕಂಡ್ವಾದಿಭ್ಯೋಯಕ್ (ಪಾ. ಸೂ. ೩-೧-೨೭) ಎಂಬುದರಿಂದ ಕಂಡ್ವಾದಿಗಳಿಗೆ ಸ್ವಾರ್ಥದಲ್ಲಿ ಯಕ್ ಬರುತ್ತದೆ. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. ಅತೋಲೋಪಃ ಸೂತ್ರದಿಂದ ಯಕ್ ಪರವಾದಾಗ ಅಕಾರಕ್ಕೆ ಲೋಪ. ಅತೋದೀರ್ಘೋಯಞಿ ಸೂತ್ರದಿಂದ ಮಿ ನಿಮಿತ್ತವಾಗಿ ಅದಂತಾಂಗಕ್ಕೆ ದೀರ್ಘ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಯಕ್ ಸ್ವರವು ಉಳಿಯುವುದರಿಂದ ಯಕಾರೋತ್ತರಾಕಾರವು ಉದಾತ್ತವಾಗುತ್ತದೆ.

ಯಾಮಿ—ಟುಯಾಚೃ ಯಾಚ್ಞಾಯಾಂ ಧಾತು, ಉಭಯಪದೀ. ಲಟ್ ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. ಯಾಚಾಮಿ ಎಂದಿರುವಾಗ ಮಧ್ಯ ಚಕಾರಕ್ಕೆ ಛಾಂದಸವಾಗಿ ಲೋಪ ಬರುತ್ತದೆ.

|| ಸಂಹಿತಾಪಾಠಃ ||

ಅಚ್ಛಿದ್ರಾ ಸೂನೋ ಸಹಸೋ ನೋ ಅದ್ಯ ಸ್ತೋತೃಭ್ಯೋ ಮಿತ್ರಮಹಃ
ಶರ್ಮ ಯಚ್ಛ ।
ಅಗ್ನೇ ಗೃಣಂತಮಂಹಸ ಉರುಷ್ಯೋರ್ಜೋ ನ ಪಾತ್ಪೂರ್ಭಿರಾಯ-
ಸೀಭಿಃ ॥ ೮ ॥

|| ಪದಪಾಠಃ ||

ಅಚ್ಛಿದ್ರಾ । ಸೂನೋ ಇತಿ । ಸಹಸಃ । ನಃ । ಅದ್ಯ । ಸ್ತೋತೃಭ್ಯಃ । ಮಿತ್ರಮಹಃ ।
ಶರ್ಮ । ಯಚ್ಛ ।
ಅಗ್ನೇ । ಗೃಣಂತಂ । ಅಂಹಸಃ । ಉರುಷ್ಯ । ಊರ್ಜಃ । ನಪಾತ್ । ಪೂಃಽಭಿಃ ।
ಆಯಸೀಭಿಃ ॥ ೮ ॥

|| ಸಾಯಣಭಾಷ್ಯಂ ||

ಹೇ ಸಹಸಃ ಸೂನೋ ಬಲಸ್ಯ ಪುತ್ರ । ಬಲೇನ ಹಿ ಮಥ್ಯಮಾನೋಽಗ್ನಿರ್ಜಾಯತೇ । ಮಿತ್ರ-ಮಹೋಽನುಕೂಲದೀಪ್ತಿಮನ್ನಗ್ನೇ ನೋಽಸ್ಮಭ್ಯಂ ಸ್ತೋತೃಭ್ಯೋಽದ್ಯಾಸ್ಮಿನ್ಕರ್ಮಣ್ಯಚ್ಛಿದ್ರಾಚ್ಛೇದ್ಯಾನಿ ಛಿದ್ರರಹಿತಾನಿ ವಾ ಶರ್ಮ ಶರ್ಮಾಣಿ ಸುಖಾನಿ ಯಚ್ಛ । ದೇಹಿ । ಕಿಂಚ ಹೇ ಊರ್ಜೋ ನಪಾತ್ ಅನ್ನಸ್ಯ ಪುತ್ರ । ಭುಕ್ತೇ-ನಾನ್ನೇನ ಜಠರಾಗ್ನೇಃ ಪ್ರವರ್ಧನಾದಗ್ನೇರನ್ನಪುತ್ರತ್ವಂ । ಏವಂವಿಧಾಗ್ನೇ ಗೃಣಂತಂ ತ್ವಾಂ ಸ್ತುವಂತ-ಮಾಯಸೀಭಿರ್ವ್ಯಾಪ್ತೈಃ । ಯದ್ವಾ । ಆಯೋವದ್ದೃಢತರೈಃ । ಪೂರ್ಭಿಃ ಪಾಲನೈರಂಹಸಃ ಪಾಪಾದು-ರುಷ್ಯ । ರಕ್ಷ । ಉರುಷ್ಯತೀ ರಕ್ಷಾಕರ್ಮಾ । ನಿ. ೫-೨೩ । ಇತಿ ಯಾಸ್ಕಃ ॥ ಅಚ್ಛಿದ್ರಾ । ಶೇಶ್ಛಂದಸೀತಿ ಶೇರ್ಲೋಪಃ । ಸೂನೋ ಸಹಸಃ । ಪರಮಪಿ ಚ್ಛಂದಸೀತಿ ಪರಸ್ಯ ಷಷ್ಠ್ಯಂತಸ್ಯ ಪೂರ್ವಾಮಂತ್ರಿತಾಂಗ-ವದ್ಭಾವೇ ಸತಿ ಪದದ್ವಯಸಮುದಾಯಸ್ಯಾಷ್ಟಮಿಕಂ ಸರ್ವಾನುದಾತ್ತತ್ವಂ । ಶರ್ಮ । ಸುಪಾಂ ಸುಲು-ಗಿತಿ ವಿಭಕ್ತೇರ್ಲುಕ್ । ಊರ್ಜೋ ನಪಾತ್ । ನ ಪಾತಯತೀತಿ ನಪಾತ್ । ನಭ್ರಾಣ್ನಪಾದಿತಿ ನಞಃ ಪ್ರಕೃತಿಭಾವಃ । ಸುಬಾಮಂತ್ರಿತ ಇತಿ ಷಷ್ಠ್ಯಂತಸ್ಯ ಪರಾಂಗವದ್ಭಾವೇ ಸತಿ ಪಾದಾದಿತ್ವಾದಾಷ್ಟಮಿಕ-ನಿಘಾತಾಭಾವೇ ಷಾಷ್ಠಿಕಮಾಮಂತ್ರಿತಾದ್ಯುದಾತ್ತತ್ವಂ । ಪೂರ್ಭಿಃ । ಪೄ ಪಾಲನಪೂರಣಯೋರಿತ್ಯಸ್ಮಾ-ತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ಉತ್ವದೀರ್ಘೌ । ಸಾವೇಕಾಚ ಇತಿ ವಿಭಕ್ತೇರುದಾತ್ತತ್ವಂ ॥





CC-0. Jangamwadi Math Collection. Digitized by eGangotri

‖ ಪ್ರತಿಪದಾರ್ಥ ‖

ಸಹಸಃ ಸೂನೋ—ಶಕ್ತಿಯ ಪುತ್ರನೂ । ಮಿತ್ರಮಹಃ—ಅನುಕೂಲವಾದ ತೇಜಸ್ಸುಳ್ಳವನೂ ಆದ ಎಲೈ ಅಗ್ನಿಯೇ । ನಃ ಸ್ತೋತೃಭ್ಯಃ—ಸ್ತೋತೃಗಳಾದ ನಮಗೆ । ಅದ್ಯ—ಈ ಯಾಗಕರ್ಮದಲ್ಲಿ । ಅಚ್ಛಿದ್ರಾ—ತಡೆಯಿಲ್ಲದ (ಅವಿಚ್ಛಿನ್ನಗಳಾದ) । ಶರ್ಮ—ಸುಖಗಳನ್ನು । ಯಚ್ಛ—ಕೊಡು (ಮತ್ತು) । ಊರ್ಜೋ ನಪಾತ್—ಅನ್ನದ ಪುತ್ರನಾದ । ಅಗ್ನೇ—ಅಗ್ನಿಯೇ । ಗೃಣಂತಂ—(ನಿನ್ನನ್ನು) ಸ್ತೋತ್ರ ಮಾಡುವ ಭಕ್ತನನ್ನು । ಆಯಸೀಭಿಃ—ವಿಸ್ತಾರವಾದ ಅಥವಾ ಕಬ್ಬಿಣದಂತೆ ಘನವಾದ । ಪೂರ್ಭಿಃ—ರಕ್ಷಣೆಗಳ ಮೂಲಕ । ಅಂಹಸಃ—ಪಾಪದಿಂದ । ಉರುಷ್ಯ—ಕಾಪಾಡು ‖

‖ ಭಾವಾರ್ಥ ‖

ಶಕ್ತಿಪುತ್ರನೂ, ಅನುಕೂಲವಾದ ತೇಜಸ್ಸುಳ್ಳವನೂ ಆದ ಎಲೈ ಅಗ್ನಿಯೇ, ಸ್ತೋತೃಗಳಾದ ನಮಗೆ ಈ ಯಾಗಕರ್ಮದಲ್ಲಿ ಅವಿಚ್ಛಿನ್ನಗಳಾದ ಸುಖಗಳನ್ನು ದಯಪಾಲಿಸು. ಅನ್ನಪುತ್ರನಾದ ಅಗ್ನಿಯೇ, ನಿನ್ನನ್ನು ಸ್ತೋತ್ರಮಾಡುವ ನಿನ್ನ ಭಕ್ತನನ್ನು ಕಬ್ಬಿಣದಂತೆ ದೃಢವಾದ ರಕ್ಷಣೆಗಳ ಮೂಲಕ ಪಾಪದಿಂದ ಕಾಪಾಡು.

## English Translation.

Son of strength, favourably-shining Agni, grant to your adorers, on this occasion, uninterrupted happiness; offspring of food, preserve him who praises you from sin with guards of iron.

‖ ವಿಶೇಷ ವಿಷಯಗಳು ‖

ಸಹಸಃ ಸೂನೋ—ಇದು ಅಗ್ನಿವಾಚಕವಾದ ಶಬ್ದದ ಸಂಬೋಧನೆ. ಬಲಪ್ರಯೋಗದಿಂದಲೇ ಅರಣಿಯ ಸಹಾಯದಿಂದ ಅಗ್ನಿಯನ್ನು ಉತ್ಪತ್ತಿ ಮಾಡುವುದಾದುದರಿಂದ, ಬಲಪುತ್ರತ್ವವು ಅಗ್ನಿಗೆ ಸಿದ್ಧಿಸಿದಂತಾಯಿತು.

ಮಿತ್ರಮಹ—ಮಿತ್ರಂ ಮಹಃ ಯಸ್ಯ । ಅನುಕೂಲವಾದ ಕಾಂತಿಯುಳ್ಳವನು. ಎಂದರೆ ಅಗ್ನಿಯು ಯಜ್ಞದಲ್ಲಿ ತನ್ನ ಕಾಂತಿಯಿಂದ ಯಾರಿಗೂ ತೊಂದರೆ ಕೊಡುವವನಲ್ಲ ಎಂದು ತಾತ್ಪರ್ಯ.

ಊರ್ಜೋ ನ ಪಾತ್—ನ ಪಾತಯತೀತಿ ನಪಾತ್ ಅನ್ನಸ್ಯ ಪುತ್ರಃ । ಮಾನವರು ತಾವು ತಿಂದ ಅನ್ನದಿಂದ ಜಠರಾಗ್ನಿಯನ್ನು ಹೆಚ್ಚಿಸಿಕೊಳ್ಳುವರು. ಆಗ ಅನ್ನದಿಂದ ವೃದ್ಧಿಹೊಂದುವ ಶಕ್ತಿ ಅಗ್ನಿಗೆ ಬಂದಿತು. ಆದ್ದರಿಂದಲೇ ಅನ್ನಪುತ್ರನು ಅಗ್ನಿಯು ಎಂದು ಹೇಳಬೇಕು.

ಆಯಸೀಭಿಃ—ವ್ಯಾಪ್ತೈಃ ಯದ್ವಾ ಅಯೋವತ್ ದೃಢತರೈಃ । ಎಂದರೆ ಈ ಪದಕ್ಕೆ ಸರ್ವವ್ಯಾಪ್ತಗಳಾದ, ಅಥವಾ ಕಬ್ಬಿಣದಂತೆ ದೃಢತರಗಳಾದ ಎಂಬ ಎರಡು ಅರ್ಥಗಳನ್ನೂ ಇಲ್ಲಿ ಕಲ್ಪಿಸಿದ್ದಾರೆ.

ಉರುಷ್ಯ—ರಕ್ಷಿಸು—ಉರುಷ್ಯತೀ ರಕ್ಷಾಕರ್ಮಾ (ನಿರು. ೫-೨೩) ಎಂದು ನಿರುಕ್ತದಲ್ಲಿ, ಉರುಧಾತುವಿಗೆ ರಕ್ಷಣೆ ಎಂಬರ್ಥವನ್ನು ಸೂಚಿಸಿದ್ದಾರೆ.



CC-0. Jangamwadi Math Collection. Digitized by eGangotri

|| ವ್ಯಾಕರಣಪ್ರಕ್ರಿಯಾ ||

ಅಚ್ಛಿದ್ರಾ—ನ ಛಿದ್ರಾಣಿ ಅಚ್ಛಿದ್ರಾಣಿ. ಸಂಹಿತಾದಲ್ಲಿ ಶೇಶ್ಛಂದಸಿ ಬಹುಲಂ ಎಂಬುದರಿಂದ ಶಿಗೆ ಲೋಪ.

ಸೂನೋ ಸಹಸಃ—ಪರಮಪಿ ಛಂದಸಿ ಎಂಬ ವಚನದಿಂದ ಆಮಂತ್ರಿತಕ್ಕೆ ಪರದಲ್ಲಿದ್ದರೂ ಸಹಸಃ ಎಂಬ ಷಷ್ಠ್ಯಂತಪದವು ಪೂರ್ವದ ಆಮಂತ್ರಿತಕ್ಕೆ ಅಂಗವಾಗುವುದರಿಂದ ಆಮಂತ್ರಿತಸ್ಯ ಚ ಎಂಬ ಅಷ್ಟಮಿಕ ಸೂತ್ರದಿಂದ ಬರುವ ನಿಘಾತಸ್ವರವು ಪದದ್ವಯ ಸಮುದಾಯಕ್ಕೆ ಬರುತ್ತದೆ.

ಶರ್ಮ—ಶರ್ಮಾಣಿ ಎಂದು ದ್ವಿತೀಯಾ ಬಹುವಚನದಲ್ಲಿ ರೂಪವಾಗುತ್ತದೆ. ಸುಪಾಂಸುಲುಕ್ ಸೂತ್ರದಿಂದ ವಿಭಕ್ತಿಗೆ ಲುಕ್ ಬಂದಿದೆ.

ಯಚ್ಛ—ದಾಣ್ ದಾನೇ ಧಾತು. ಲೋಟ್ ಮಧ್ಯಮಪುರುಷ ಏಕವಚನಲ್ಲಿ ಸಿಪಿಗೆ ಹಿ ಆದೇಶ. ಪಾಘ್ರಾಧ್ಮಾ ಸೂತ್ರದಿಂದ ಯಚ್ಛಾದೇಶ ಬರುತ್ತದೆ. ಶಪ್ ವಿಕರಣ ಅದಂತದ ಪರದಲ್ಲಿರುವುದರಿಂದ ಹಿಗೆ ಲುಕ್ ತಿಙಂತನಿಘಾತಸ್ವರ ಬರುತ್ತದೆ.

ಊರ್ಜೋನಪಾತ್—ನ ಪಾತಯತಿ ಇತಿ ನಪಾತ್. ನಭ್ರಾಣ್ನಪಾತ್ ನಾಸತ್ಯಾ—(ಪಾ. ಸೂ. ೬.೩-೭೫) ಎಂಬುದರಿಂದ ನಞಿಗೆ ಪ್ರಕೃತಿಭಾವ. ಸುಬಾಮಂತ್ರಿತೇ ಪರಾಂಗವತ್ಸ್ವರೇ (ಪಾ. ಸೂ. ೨-೧-೨) ಎಂಬುದರಿಂದ ಷಷ್ಠ್ಯಂತಕ್ಕೆ ಪರಾಂಗವದ್ಭಾವವಿರುವುದರಿಂದ ಇದು ಪಾದದ ಆದಿಯಲ್ಲಿ ಬಂದುದರಿಂದ ಅಷ್ಟಮಿಕ ನಿಘಾತಸ್ವರ ಬರುವುದಿಲ್ಲ. ಆಗ ಆಮಂತ್ರಿತಸ್ಯ (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಪೂರ್ಭಿಃ—ಪ್ರಾ ಪಾಲನ ಪೂರಣಯೋಃ ಧಾತು. ಇದಕ್ಕೆ ಸಂಪದಾದಿಭ್ಯಃಕ್ವಿಪ್ ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. ಉದೋಷ್ಠ್ಯಪೂರ್ವಸ್ಯ (ಪಾ. ಸೂ. ೭-೧-೧೦೨) ಎಂಬುದರಿಂದ ಉತ್ವ. ಋಕಾರದ ಸ್ಥಾನಕ್ಕೆ ಬರುವುದರಿಂದ ರಪರವಾಗಿ ಬರುತ್ತದೆ. ಭಿಸ್ ಪರವಾದಾಗ ಹಲಿಚ ಎಂಬುದರಿಂದ ಉಪಧಾಭೂತವಾದ ಇತಿಗೆ ದೀರ್ಘ. ಸಾವೇಕಾಚಸ್ತೃತೀಯಾದಿಃ (ಪಾ. ಸೂ. ೬-೧-೧೬೮) ಎಂಬುದರಿಂದ ಏಕಾಚಾದುದರಿಂದ ಪರದಲ್ಲಿರುವ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

---

|| ಸಂಹಿತಾಪಾಠಃ ||

ಭವಾ ವರೂಥಂ ಗೃಣತೇ ವಿಭಾವೋ ಭವಾ ಮಘವನ್ಮಘವದ್ಭ್ಯಃ ಶರ್ಮ |
ಉರುಷ್ಯಾಗ್ನೇ ಅಂಹಸೋ ಗೃಣಂತಂ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ || ೯ ||



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಭವ । ವರೂಥಂ । ಗೃಣತೇ । ವಿಭಾಽವಃ । ಭವ । ಮಘಽವನ್ । ಮಘವತ್ಽಭ್ಯಃ । ಶರ್ಮ ।

ಉರುಷ್ಯ । ಅಗ್ನೇ । ಅಂಹಸಃ । ಗೃಣಂತಂ । ಪ್ರಾತಃ । ಮಕ್ಷು । ಧಿಯಾಽವಸುಃ ಜಗಮ್ಯಾತ್ ॥ ೯ ॥

॥ ಸಾಯಣಭಾಷ್ಯ ॥

ಹೇ ವಿಭಾವೋ ವಿಶಿಷ್ಟಪ್ರಕಾಶಾಗ್ನೇ ಗೃಣತೇ ತ್ವಾಂ ಸ್ತುವತೇ ಯಜಮಾನಾಯ । ವರೂಥಮಿತಿ ಗೃಹನಾಮ । ವರೂಥಮನಿಷ್ಟನಿವಾರಕಂ ಗೃಹಂ ಭವ । ಹೇ ಮಘವನ್ ಧನವನ್ನಗ್ನೇ ಮಘವದ್ಭ್ಯೋ ಹವಿರ್ಲಕ್ಷಣಧನಯುಕ್ತೇಭ್ಯೋ ಯಜಮಾನೇಭ್ಯಃ ಶರ್ಮ ಸುಖಂ ಯಥಾ ಭವತಿ ತಥಾ ಭವ। ಹೇ ಅಗ್ನೇ ಗೃಣಂತಂ ಸ್ತುವಂತಮಂಹಸಃ ಪಾಪಕಾರಿಣಃ ಶತ್ರೋರುರುಷ್ಯ । ರಕ್ಷ । ಧಿಯಾವಸುಃ ಕರ್ಮಣಾ ಬುದ್ಧ್ಯಾ ವಾ ಪ್ರಾಪ್ತಧನೋಽಗ್ನಿಃ ಪ್ರಾತರಿವಾನೀಮಿವ ಪರೇದ್ಯುರಪಿ ಮಕ್ಷು ಶೀಘ್ರಂ ಜಗಮ್ಯಾತ್ । ಆಗಚ್ಛತು ॥ ವರೂಥಂ । ವೃಞ್ ವರಣೇ । ಜ್ಯಾವೃಞ್ಭ್ಯಾಮೂಥನ್ । ಉ. ೨.೬ । ಇತ್ಯೂಥನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ಗೃಣತೇ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ। ವಿಭಾವಃ । ವಿಶಿಷ್ಟಾ ಭಾ ವಿಭಾಃ । ಅತೋ ಮನಿನ್ನಿತಿ ವಿಚ್ । ತದಸ್ಯಾಸ್ತೀತಿ ಮತುಪ್ । ಮಾದುಪಧಾಯಾ ಇತಿ ಮತುಪೋ ವತ್ವಂ । ಮತುವಸೋ ರುಂತಿ ನಕಾರಸ್ಯ ರುತ್ವಂ । ಮಘವದ್ಭ್ಯಃ । ಮಘವಾ ಬಹುಲಂ । ಪಾ. ೬-೪-೧೨೮ । ಇತಿ ಮಘವಞ್ಛಬ್ದಸ್ಯ ತೃಆದೇಶಃ । ಸ ಚ ಸಾನುಬಂಧಕೃತಮನೇಕಾಲ್ತ್ವಂ । ಪರಿ. ೬ ಮ. ೧-೧-೫೫ । ಇತಿ ವಚನಾತ್ ಅಲೋಽಂತ್ಯಸ್ಯ । ಪಾ. ೧-೧-೫೨ । ಇತ್ಯಂತಸ್ಯ ಭವತಿ । ಮಕ್ಷು । ಋಚಿ ತುನುಘಮಕ್ಷ್ವಿತಿ ದೀರ್ಘಃ । ಧಿಯಾವಸುಃ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಪೂರ್ವಪದಸ್ಯ ಸಾವೇಕಾಚ ಇತಿ ವಿಭಕ್ತಿರುದಾತ್ತಾ । ಲುಗಭಾವಶ್ಛಾಂದಸಃ । ಜಗಮ್ಯಾತ್। ಗಮ್ಲೃ ಸೃಪ್ಲೃ ಗತೌ । ಲಿಙಿ ಬಹುಲಂ ಛಂದಸೀತಿ ಶಪಃ ಶ್ಲುಃ ॥

॥ ಪ್ರತಿಪದಾರ್ಥ ॥

ವಿಭಾವಃ—ವಿಶೇಷವಾದ ಪ್ರಕಾಶವುಳ್ಳ ಅಗ್ನಿಯೇ । ಗೃಣತೇ—ನಿನ್ನನ್ನು ಸ್ತೋತ್ರಮಾಡುವ ಯಜಮಾನನಿಗೆ । ವರೂಥಂ—(ಅನಿಷ್ಟವನ್ನು ತಪ್ಪಿಸುವ) ಮನೆ (ಆಸರೆ)ಯಾಗಿ । ಭವ—ಆಗು । ಮಘವನ್—ಧನವಂತನಾದ ಅಗ್ನಿಯೇ । ಮಘವದ್ಭ್ಯಃ—(ಹವಿಸ್ಸಿನ ರೂಪದ) ಧನವಂತರಾದ ಯಜಮಾನರಿಗೆ । ಶರ್ಮ—ಸುಖವುಂಟಾಗುವಂತೆ (ಸುಖದಾಯಕನಾಗಿ) । ಭವ— ಆಗು । ಅಗ್ನೇ—ಎಲೈ ಅಗ್ನಿಯೇ । ಗೃಣಂತಂ—ಸ್ತೋತ್ರಮಾಡುವವನನ್ನು । ಅಂಹಸಃ—ಪಾಪಕಾರಿಯಾದ ಶತ್ರುವಿನಿಂದ । ಉರುಷ್ಯ—ಕಾಪಾಡು । ಧಿಯಾ

ವಸುಃ—ಪವಿತ್ರವಾದ ಕರ್ಮದಿಂದ ಅಥವಾ ಬುದ್ಧಿಯಿಂದ ಧನವಂತನಾದ ಅಗ್ನಿಯು | ಪ್ರಾತಃ—(ಈಗಿನಂತೆ) ಬೆಳಗ್ಗೆ (ಯೂ) | ಮಕ್ಷು—ಜಾಗ್ರತೆಯಾಗಿ | ಜಗಮ್ಯಾತ್—ಬರಲಿ ||

|| ಭಾವಾರ್ಥ ||

ವಿಶೇಷವಾದ ಪ್ರಕಾಶವುಳ್ಳ ಎಲೈ ಅಗ್ನಿಯೇ, ನಿನ್ನನ್ನು ಸ್ತೋತ್ರಮಾಡುವ ಯಜಮಾನನಿಗೆ ಆಸರೆಯಾಗಿರು. ಧನವಂತನಾದ ಎಲೈ ಅಗ್ನಿಯೆ, ಹವಿಸ್ಸಿನರೂಪದ ಧನವನ್ನು ಹೊಂದಿರುವ ಯಜ್ಞಕರ್ತರಿಗೆ ಸುಖದಾಯಕನಾಗಿ ಆಗು. ಎಲೈ ಅಗ್ನಿಯೇ, ನಿನ್ನನ್ನು ಸ್ತೋತ್ರಮಾಡುವವರನ್ನು ಪಾಪದಿಂದ (ಪಾಪಕಾರಿಯಾದ ಶತ್ರುವಿನಿಂದ) ಕಾಪಾಡು. ಪವಿತ್ರವಾದ ಕರ್ಮರೂಪದ ಧನವನ್ನು ಹೊಂದಿದ ಅಗ್ನಿಯು ಬೆಳಗ್ಗೆಯೂ ಜಾಗ್ರತೆಯಾಗಿ ದಯಮಾಡಲಿ.

## English Translation.

Agni of various rays, be a house to him who praises you; wealthy Agni, be a source of happiness to the wealthy (sacrificers); protect, Agni, your worshippers from sin ; may Agni who is rich with righteous deeds, come to us speedily in the morning.

|| ವಿಶೇಷ ವಿಷಯಗಳು ||

ವಿಭಾವಃ—ವಿಶೇಷರೀತಿಯಲ್ಲಿ ಪ್ರಕಾಶಿಸುವ ಅಗ್ನಿ. ವಿಶಿಷ್ಟಾ ಭಾಃ ವಿಭಾಃ ಎಂಬುದು ಇದರ ವ್ಯುತ್ಪತ್ತಿ.

ವರೂಥಂ—ವರೂಥ ಶಬ್ದವು ಗೃಹಪರ್ಯಾಯ ಪದಗಳಲ್ಲಿ ಸೇರಿದೆ. ಲೌಕಿಕವಾಗಿ ವರೂಥ ಶಬ್ದಕ್ಕೆ ರಥವೆಂಬ ಅರ್ಥವಿದೆ. ಗೃಹನಾಮಾನ್ಯುತ್ತರಾಣಿ ದ್ವಾವಿಂಶತಿಃ ಎಂದು (೩-೧೩) ನಿರುಕ್ತದಲ್ಲಿ ಇಪ್ಪತ್ತೆರಡು ಪದಗಳನ್ನು ಗೃಹವಾಚಕಗಳಾಗಿ ಬರೆದಿದ್ದಾರೆ. ಇಲ್ಲಿ ವರೂಥಶಬ್ದಕ್ಕೆ ಅನಿಷ್ಟನಿವಾರಕವಾದ ಗೃಹವೆಂಬ ಅರ್ಥವಿದೆ.

ಧಿಯೋವಸುಃ—ಕರ್ಮಣಾ ಬುದ್ಧ್ಯಾ ವಾ ಪ್ರಾಪ್ತಧನೋಽಗ್ನಿಃ | ಕ್ರಿಯೆಯಿಂದಾಗಲಿ ಬುದ್ಧಿಶಕ್ತಿಯಿಂದಾಗಲಿ, ಸಂಪೂರ್ಣವಾದ ಐಶ್ವರ್ಯವನ್ನು ಸಂಪಾದಿಸುವವನು ಅಗ್ನಿ. ಧಿಯಾ ವಸುಃ ಯಸ್ಯ ಎಂಬ ವಿಗ್ರಹವಾಕ್ಯದಲ್ಲಿ ತೃತೀಯಾ ವಿಭಕ್ತಿಯು ಲೋಪವಾಗದಿರುವುದು ಕೇವಲ ಛಾಂದಸ.

ಮಕ್ಷು ಜಗಮ್ಯಾತ್—ಶೀಘ್ರಂ ಆಗಚ್ಛತು. ಗಮ್ಲೃ ಸೃಪ್ಲೃ ಗತೌ ಎಂಬ ಧಾತುವಿನಿಂದ ಉತ್ಪನ್ನವಾದ ಕ್ರಿಯಾರೂಪ ಇದು.

|| ವ್ಯಾಕರಣಪ್ರಕ್ರಿಯಾ ||

ಭವ—ಭೂ ಸತ್ತಾಯಾಂ ಧಾತು. ಲೋಟ್ ಮಧ್ಯಮಪುರುಷಏಕವಚನರೂಪ. ದ್ವ್ಯಚೋಽತಸ್ತಿಙಃ ಎಂಬುದರಿಂದ ಸಂಹಿತಾದಲ್ಲಿ ಅಂತ್ಯ ದೀರ್ಘ.



CC-0. Jangamwadi Math Collection. Digitized by eGangotri

**ವರೂಥಮ್**—ವೃಞ್ ವರಣೇ ಧಾತು. **ಜೃವೃಞ್ಭ್ಯಾಮೂಥನ್** (ಉಃ ಸೂ. ೨-೧೬೩) ಎಂಬುದರಿಂದ ಇದಕ್ಕೆ ಊಥನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ರಪರವಾಗಿ ಬರುತ್ತದೆ. ಪ್ರತ್ಯಯ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಗೃಣತೇ**—ಗೄ ಶಬ್ದೇ ಧಾತು. (ಇಲ್ಲಿ ಸ್ತೋತ್ರಾರ್ಥದಲ್ಲಿದೆ) ಲಡರ್ಥದಲ್ಲಿ ಶತೃಪ್ರತ್ಯಯ. **ಕ್ರ್ಯಾದಿಭ್ಯಃ ಶ್ನಾ** ಎಂಬುದರಿಂದ ಶ್ನಾ ವಿಕರಣ. **ಪ್ವಾದೀನಾಂ ಹ್ರಸ್ವಃ** ಎಂಬುದರಿಂದ ಧಾತುವಿಗೆ ಹ್ರಸ್ವ. ಶತೃ ಋತ್ತಾದುದರಿಂದ **ಶ್ನಾಭ್ಯಸ್ತ**—ಎಂಬುದರಿಂದ ಶ್ನಾ ಪ್ರತ್ಯಯದ ಆಕಾರಕ್ಕೆ ಲೋಪ. ಋಕಾರವನ್ನು ನಿಮಿತ್ತೀಕರಿಸಿ ನಕಾರಕ್ಕೆ ಣತ್ವ. ಗೃಣತ್ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ. **ಶತುರನುಮೋ ನದ್ಯಜಾದೀ** ಎಂಬುದರಿಂದ ನುಮ್ ಶೂನ್ಯವಾದುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ವಿಭಾವಃ**—ವಿಶಿಷ್ಟಾ ಭಾಃ ವಿಭಾಃ. ಭಾ ದೀಪ್ತೌ ಧಾತು. **ಆತೋಮನಿನ್**—(ಪಾ. ಸೂ. ೩-೨-೭೪) ಎಂಬುದರಿಂದ ವಿಚ್ ಪ್ರತ್ಯಯ. ವಿಚಿನಲ್ಲಿ ಸರ್ವವೂ ಲೋಪವಾಗುತ್ತದೆ. ವಿಭಾಃ ಅಸ್ಯ ಅಸ್ತಿ ಇತಿ ವಿಭಾವನ್. **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಆಕಾರದ ಪರದಲ್ಲಿ ಬಂದುದರಿಂದ **ಮಾದುಪಧಾಯಾಶ್ಚ ಮತೋ**—(ಪಾ. ಸೂ. ೮-೨-೯) ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಸಂಬುದ್ಧಿ ಸುಪರವಾದಾಗ **ಮತುವಸೋರುಃ ಸಂಬುದ್ಧೌ** (ಪಾ. ಸೂ. ೮-೩-೧) ಎಂಬುದರಿಂದ ನಕಾರಕ್ಕೆ ರುತ್ವ. **ಆಮಂತ್ರಿತಸ್ಯಚ** (ಪಾ. ಸೂ. ೮-೧-೧೯) ಎಂಬುದರಿಂದ ನಿಘಾತಸ್ವರ ಬರುತ್ತದೆ.

**ಮಘವದ್ಭ್ಯಃ**—**ಮಘವಾ ಬಹುಲಂ** (ಪಾ. ಸೂ. ೬-೪-೧೨೮) ಎಂಬುದರಿಂದ ಮಘವನ್ ಶಬ್ದಕ್ಕೆ ತೃ ಎಂಬುದು ಅಂತಾದೇಶವಾಗಿ ಬರುತ್ತದೆ. ತೃ ಎಂಬಲ್ಲಿ ಋಕಾರ ಇತ್ ಸಂಜ್ಞೆಯಿಂದ ಲೋಪವಾಗುತ್ತದೆ. **ನಾನುಬಂಧಕೃತಮನೇಕಾಲ್ತ್ವಮ್** (ಪರಿಭಾಷಾ ೬) ಇತ್ ಸಂಜ್ಞೆಯುಳ್ಳವರ್ಣವನ್ನು ನಿಮಿತ್ತೀಕರಿಸಿ ಅನೇಕಾಲ್ತ್ವವನ್ನು ಹೇಳಬಾರದು ಎಂಬ ವಚನದಿಂದ ಇಲ್ಲಿ ತೃ ಎಂಬುದು ಸರ್ವಾದೇಶವಾಗಿ ಬರುವುದಿಲ್ಲ. ಆದುದರಿಂದ ಹಿಂದೆ ಹೇಳಿದಂತೆ **ಅಲೋಂತ್ಯಸ್ಯ** (ಪಾ. ಸೂ. ೧-೧-೫೨) ಎಂಬುದರಿಂದ ಅಂತ್ಯಕ್ಕೆ ಬರುತ್ತದೆ.

**ಉರುಷ್ಯ**—ಉರುಷ್ಯ ಎಂಬ ಧಾತುವು ರಕ್ಷಣಾರ್ಥದಲ್ಲಿದೆ. ಲೋಟ್ ಮಧ್ಯಮಪುರುಷ ಏಕವಚನದರೂಪ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

**ಮಕ್ಷೂ**—**ಋಚಿತುನುಘ**—ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಧಿಯಾವಸುಃ**—ಧಿಯಾ ವಸು ಯಸ್ಯ ಸಃ ಧಿಯಾವಸುಃ ಬಹುವ್ರೀಹಿಸಮಾಸ. ಛಾಂದಸವಾಗಿ ಸಮಾಸದಲ್ಲಿ ಸುಪಿಗೆ ಲುಕ್ ಬರುವುದಿಲ್ಲ. ಧಿಯಾ ಎಂಬುದು **ಸಾವೇಕಾಚಸ್ತೃತೀಯಾದಿಃ** ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುವುದರಿಂದ ಅಂತೋದಾತ್ತವಾಗುತ್ತದೆ. **ಬಹುವ್ರೀಹೌಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬಂದಾಗ ಅದೇ ಉಳಿಯುತ್ತದೆ.

**ಜಗಮ್ಯಾತ್**—ಗಮ್ಲೃ ಸೃಪ್ಲೃ ಗತೌ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ** ಸೂತ್ರದಿಂದ ಅಂತ್ಯಲೋಪ. **ಬಹುಲಂ ಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಕುಹೋಶ್ಚುಃ** ಸೂತ್ರದಿಂದ ಗಕಾರಕ್ಕೆ ಜಕಾರಾದೇಶ. **ಯಾಸುಟ್ ಪರಸ್ಮೈಪದೇಷು** ಸೂತ್ರದಿಂದ ಲಿಙಿಗೆ ಯಾಸುಟಾಗಮ. **ಸುಟ್ತಿಥೋಃ**



CC-0. Jangamwadi Math Collection. Digitized by eGangotri

ಎಂಬುದರಿಂದ ತಕಾರಕ್ಕೆ ಸುಡಾಗಮ. ಲಿಜಃಸಲೋಪೋನಂತ್ಯಸ್ಯ ಎಂಬುದರಿಂದ ಅನಂತ್ಯವಾದ ಎರಡು ಸಕಾರಗಳಿಗೂ ಲೋಪ. ಆತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರಬರುತ್ತದೆ.

ಐವತ್ತ ಎಂಟನೆಯ ಸೂಕ್ತ ಸಮಾಪ್ತವು.

# ಐವತ್ತೊಂಭತ್ತನೆಯ ಸೂಕ್ತವು

॥ ಸಾಯಣಭಾಷ್ಯಂ ॥

ವಯಾ ಇದಿತಿ ಸಪ್ತರ್ಚಂ ದ್ವಿತೀಯಂ ಸೂಕ್ತಂ ನೋಧಸ ಆರ್ಷಂ ತ್ರೈಷ್ಟುಭಂ । ವೈಶ್ವಾನರಗುಣಕೋಽಗ್ನಿರ್ದೇವತಾ । ತಥಾ ಚಾನುಕ್ರಾಂತಂ । ವಯಾ ಇತ್ಸಪ್ತ ವೈಶ್ವಾನರೀಯಮಿತಿ ॥ ಸೂಕ್ತವಿನಿಯೋಗೋ ಲಿಂಗಾದವಗಂತವ್ಯಃ ॥

ಅನುವಾದವು—ವಯಾ ಇತ್ ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಎರಡನೆಯ ಸೂಕ್ತವು. ಇದರಲ್ಲಿ ಏಳು ಋಕ್ಕುಗಳಿರುವವು. ಈ ಸೂಕ್ತಕ್ಕೆ ನೋಧಾ ಗೌತಮನೆಂಬುವನು ಋಷಿಯು. ತ್ರಿಷ್ಟುಪ್ ಛಂದಸ್ಸು. ವೈಶ್ವಾನರನಾಮಕನಾದ ಅಗ್ನಿಯು ದೇವತೆಯು. ಅನುಕ್ರಮಣಿಕೆಯಲ್ಲಿ ವಯಾ ಇತ್ಸಪ್ತ ವೈಶ್ವಾನರೀಯಮಿತಿ ಎಂದು ಹೇಳಿರುವುದು. ಸೂಕ್ತದ ವಿನಿಯೋಗವನ್ನು ಅರ್ಥಾನುಸಾರವಾಗಿ ತಿಳಿದುಕೊಳ್ಳಬೇಕು.

## ಸೂಕ್ತ—೫೯

ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೫೯ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೨೫ ॥
ಸೂಕ್ತದಲ್ಲಿರುವ ಋಕ್ಸಂಖ್ಯೆ—೭
ಋಷಿಃ—ನೋಧಾ ಗೌತಮಃ ॥
ದೇವತಾ—ಅಗ್ನಿರ್ವೈಶ್ವಾನರಃ ॥
ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವ॒ಯಾ ಇದ॑ಗ್ನೇ ಅ॒ಗ್ನಯ॑ಸ್ತೇ ಅ॒ನ್ಯೇ ತ್ವೇ ವಿಶ್ವೇ॑ ಅ॒ಮೃತಾ॑ ಮಾದಯಂತೇ
ವೈಶ್ವಾ॑ನರ॒ ನಾಭಿ॑ರಸಿ ಕ್ಷಿ॒ತೀನಾಂ ಸ್ಥೂಣೇ॑ವ ಜನಾ॑ಁ ಉಪ॒ಮಿದ್ಯ॑ಯಂಥ ॥ ೧ ॥



CC-0. Jangamwadi Math Collection. Digitized by eGangotri

ಪದಪಾಠಃ

ವಯಾಃ । ಇತ್ । ಅಗ್ನೇ । ಅಗ್ನಯಃ । ತೇ । ಅನ್ಯೇ । ತ್ವೇ ಇತಿ । ವಿಶ್ವೇ । ಅಮೃತಾಃ । ಮಾದಯಂತೇ ।

ವೈಶ್ವಾನರ । ನಾಭಿಃ । ಅಸಿ । ಕ್ಷಿತೀನಾಂ । ಸ್ಥೂಣಾಽಇವ । ಜನಾನ್ । ಉಪಮಿತ್ । ಯಯಂಥ ॥ ೧ ॥

॥ ಸಾಯಣಭಾಷ್ಯಂ ॥

ವಯಾಃ ಶಾಖಾ ವೇತೇರ್ವಾತಾಯನಾ ಭವಂತೀತಿ ಯಾಸ್ಕಃ । ನಿ. ೧-೪ । ಹೇ ಅಗ್ನೇ ಯೇಽನ್ಯೇಽಗ್ನಯಃ ಸಂತಿ ತೇ ಸರ್ವೇಽಪಿ ತೇ ತವ ವಯಾ ಇತ್ ಶಾಖಾ ಏವ । ತತಸ್ತ್ವತ್ತೋಽನ್ಯೇ ನ ಸಂತೀತಿ ಭಾವಃ । ಕಿಂಚ ತ್ವೇ ತ್ವಯಿ ಸತಿ ವಿಶ್ವೇ ಸರ್ವೇಽಮೃತಾ ಅಮರಣಧರ್ಮಾಣೋ ದೇವಾ ಮಾದಯಂತೇ । ಹೃಷ್ಯಂತಿ । ನ ಹಿ ತ್ವದ್ವ್ಯತಿರೇಕೇಣ ತೈರ್ಜೀವಿತುಂ ಶಕ್ಯತೇ । ಹೇ ವೈಶ್ವಾನರ ವಿಶ್ವೇಷಾಂ ನರಾಣಾಂ ಜಾತರರೂಪೇಣ ಸಂಬಂಧಿನ್ನಗ್ನೇ ಕ್ಷಿತೀನಾಂ ಮನುಷ್ಯಾಣಾಂ ನಾಭಿಃ ಸಂನದ್ಧಾಸಿ । ಅವಸ್ಥಾಪಕೋ ಭವಸಿ । ಅತಸ್ತ್ವಮುಪಮಿದುಪಸ್ಥಾಪಯಿತಾ ಸನ್ । ಯದ್ವಾ । ಉಪಮಿದಿತ್ಯೇತದ್ದೃಷ್ಟಾಂತವಿಶೇಷಣಂ । ಜನಾನ್ಯಯಂಥ । ಆಧಾರಯಃ । ತತ್ರ ದೃಷ್ಟಾಂತಃ । ಉಪಮಿದುಪನಿಖಾತಾ ಸ್ಥೂಣೇವ । ವಂಶಧಾರಣಾರ್ಥಂ ನಿಖಾತಃ ಸ್ತಂಭೋ ಯಥಾ ಗೃಹೋಪರಿಸ್ಥಂ ವಂಶಂ ಧಾರಯತಿ ತದ್ವತ್ ॥ ವೈಶ್ವಾನರ । ವಿಶ್ವೇ ಚೇಮೇ ನರಾ ವಿಶ್ವಾನರಾಃ । ನರೇ ಸಂಜ್ಞಾಯಾಂ । ಪಾ- ೬-೩-೧೨೯ । ಇತಿ ಪೂರ್ವಪದಸ್ಯ ದೀರ್ಘಃ । ತತ್ಸಂಬಂಧೀ ವೈಶ್ವಾನರಃ । ತಸ್ಯೇದಮಿತ್ಯಣ್ । ನಾಭಿಃ । ನಹೋ ಮಶ್ಚ । ಉ. ೪-೧೨೫ । ಇತೀಞ್ಪ್ರತ್ಯಯೋ , ಭಕಾರಶ್ಚಾಂತಾದೇಶಃ । ಞಿತ್ತ್ವಾದಾದ್ಯುದಾತ್ತತ್ವಂ । ಅಸಿ । ತಾಸಸ್ತ್ಯೋರ್ಲೋಪ ಇತಿ ಸಲೋಪಃ । ಕ್ಷಿತೀನಾಂ । ಕ್ಷಿ ನಿವಾಸಗತ್ಯೋಃ । ಅಸ್ಮಾತ್ ಕ್ತಿಚ್‌ಕ್ತೌ ಚ ಸಂಜ್ಞಾಯಾಮಿತಿ ಕ್ತಿಚ್ । ಅಂತೋದಾತ್ತಾತ್ಕ್ತಿಚ್ಛಬ್ದಾದುತ್ತರಸ್ಯ ನಾಮೋ ನಾಮನ್ಯತರಸ್ಯಾಮಿತ್ಯುದಾತ್ತತ್ವಂ । ಉಪಮಿತ್ । ಡುಮಿಞ್ ಪ್ರಕ್ಷೇಪಣೇ । ಅಸ್ಮಾದುಪಪೂರ್ವಾದ್ಬಹುಲವಚನಾತ್ಕರ್ಮಣಿ ಕ್ವಿಪ್ । ತುಗಾಗಮಃ । ಯಯಂಥ । ಯಮ ಉಪರಮೇ । ಲಿಟಿ ಥಲಿ ಕ್ರಾದಿನಿಯಮಾದಿಟಿ ಪ್ರಾಪ್ತೇ ಉಪದೇಶೇಽತ್ವತಃ । ಪಾ. ೭-೨-೬೨ । ಇತಿ ಪ್ರತಿಷೇಧಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಅನ್ಯೇ ಅಗ್ನಯಃ—ಇತರ ಯಾವ ಅಗ್ನಿಗಳಿರುವರೋ ಅವರೆಲ್ಲರೂ । ತೇ—ನಿನ್ನ । ವಯಾ ಇತ್—ಶಾಖೆಗಳೇ । ತ್ವೇ—ನೀನಿರಲು । ವಿಶ್ವೇ ಅಮೃತಾಃ—ಮರಣರಹಿತರಾದ ಸಮಸ್ತ ದೇವತೆಗಳೂ । ಮಾದಯಂತೇ—ಸಂತೋಷಪಡುತ್ತಾರೆ । ವೈಶ್ವಾನರ—ಮಾನವರಲ್ಲೆಲ್ಲಾ ಜಾತ

ರಾಗ್ನಿರೂಪದಿಂದ ಇರುವ ಎಲೈ ಅಗ್ನಿಯೇ | ಕ್ಷಿತೀನಾಂ—ಮಾನವರ | ನಾಭಿಃ ಅಸಿ—ಹೊಕ್ಕಳುರೂಪದಲ್ಲಿ ಕೇಂದ್ರೀಕೃತನಾಗಿದ್ದೀಯೆ (ಆದ್ದರಿಂದಲೇ) ಉಪಮಿತ್—ಆಳವಾಗಿ ನೆಡಲ್ಪಟ್ಟ | ಸ್ಥೂಣೇವ—ಸ್ತಂಭವು (ಮನೆಯನ್ನು) ಭದ್ರವಾಗಿ ಹಿಡಿದಿರುವಂತೆ | ಜನಾನ್—ಮನುಷ್ಯರನ್ನು ಯಯಂಥ—ಅವಲಂಬನವನ್ನು ಕೊಟ್ಟು ಹಿಡಿದಿದ್ದೀಯೆ ||

|| ಭಾವಾರ್ಥ ||

ಎಲೈ ಅಗ್ನಿದೇವನೇ, ವಿಶ್ವದಲ್ಲಿ ಇತರ ಯಾವ ಯಾವ ಅಗ್ನಿಗಳಿರುವರೋ ಅವರೆಲ್ಲರೂ ನಿನ್ನ ಶಾಖೆಗಳೇ ಆಗಿರುವರು. ನಿನ್ನಿಂದಲೇ ಅವರೆಲ್ಲರೂ ಮರಣರಹಿತರಾಗಿ ಸಂತೋಷಪಡುತ್ತಾರೆ. ನೀನು ಜಾಠರ ರೂಪದಿಂದ ಸಕಲ ಮಾನವರಲ್ಲೂ ನಾಭಿಯಲ್ಲಿ ಕೇಂದ್ರಿತನಾಗಿದ್ದೀಯೆ. ಆದ್ದರಿಂದಲೇ ಆಳವಾಗಿ ನೆಟ್ಟ ಸ್ತಂಭವು ಮನೆಯ ಮೇಲ್ಛಾವಣಿಯನ್ನು ಭದ್ರವಾಗಿ ಹಿಡಿದಿರುವಂತೆ ನೀನು ಮನುಷ್ಯರಿಗೆಲ್ಲ ಅವಲಂಬನವನ್ನು ಕೊಟ್ಟು ಹಿಡಿದು ನಿಲ್ಲಿಸಿದ್ದೀಯೆ.

## English Translation.

O Agni, whatever other fires there may be, they are but ramifications of you ; all the immortals rejoice in you ; you Vaiswanara, are the navel of men and uphold them like a deep-planted column.

|| ವಿಶೇಷವಿಷಯಗಳು ||

ವಯಾಃ—ವಯಾ ಶ್ಯಾಖಾ ವೇತೇರ್ವಾತಾಯನಾ ಭವಂತಿ (ನಿರು. ೧-೪) ಎಂಬ ನಿರುಕ್ತದಂತೆ ವಯಶ್ಶಬ್ದಕ್ಕೆ ಶಾಖೆ ಎಂದರ್ಥ. ವಯಶ್ಶಬ್ದವನ್ನು ಶಾಖಾಶಬ್ದಪರ್ಯಾಯವನ್ನಾಗಿ ಪಠಿಸಿದ್ದಾರೆ. ವಯಾಃಶಾಖಾಃ ಇತಿ ಪರ್ಯಾಯವಚನಃ—ಎಂದು ನಿರುಕ್ತದಲ್ಲಿ ವಿವರಣೆ ಇದೆ.

ಮಾದಯಂತೇ—ಹೃಷ್ಯಂತಿ| ದೇವತೆಗಳು ಅತಿಶಯವಾದ ರೀತಿಯಲ್ಲಿ ಸಂತೋಷಪಡಬೇಕಾದರೆ ಅಗ್ನಿ ಸಹಾಯ ಬೇಕೇ ಬೇಕು. ಅಗ್ನಿ ಸಹಾಯವಿಲ್ಲದೆ ಅವರು ತೃಪ್ತಿಪಡಲಾರರು ಎಂಬುದೇ ಭಾವಾರ್ಥ.

ವೈಶ್ವಾನರ—ವಿಶ್ವೇ ಚೇಮೇ ನರಾ ವಿಶ್ವಾನರಾಃ ತತ್ಸಂಬಂಧೀ ವೈಶ್ವಾನರಃ—ಸಮಸ್ತ ಮಾನವರ ಹೃದಯದಲ್ಲಿಯೂ ಜಠರಾಗ್ನಿಯ ರೂಪದಿಂದಿರುವವನು ಅಗ್ನಿಯು ಎಂದು ವೈಶ್ವಾನರ ಪದದ ವಿವರಣೆ.

ಉಪಮಿತ್—ಸ್ಥಾಪನೆ ಮಾಡುವವನು. ಈ ಪದವನ್ನು ಅಗ್ನಿಗೂ ಅಥವಾ ಇಲ್ಲಿ ದೃಷ್ಟಾಂತವಾಗಿ ಕೊಟ್ಟಿರುವ ಸ್ಥಾಣುವಿಗೂ ವಿಶೇಷಣವನ್ನಾಗಿ ಮಾಡಬಹುದು. ಮನೆಯ ಛಾವಣಿಯನ್ನು ಹೊರುವುದಕ್ಕಾಗಿ ನೆಟ್ಟಕಂಬವು ಮನೆಯ ಭಾರವನ್ನೆಲ್ಲಾ ಹೊರುವಂತೆ ಮಾನವರ ಜಠರದಲ್ಲಿ ನಿಂತು ಸರ್ವರ ಪ್ರಾಣಕ್ಕೂ ಆಶ್ರಯನಾಗಿರುವ ಎಂಬುದು ಈ ಪದದಿಂದ ತೋರಿಬರುವ ವಿವರಣೆ.





CC-0. Jangamwadi Math Collection. Digitized by eGangotri

‖ ವ್ಯಾಕರಣಪ್ರಕ್ರಿಯಾ ‖

**ಮಾದಯಂತೇ**—ಮದ ತೃಪ್ತಿಯೋಗೇ ಧಾತು. ಚುರಾದಿ. **ಸತ್ಯಾಪಪಾಶ**—ಸೂತ್ರದಿಂದ ಸ್ವಾರ್ಥದಲ್ಲಿ ಣಿಚ್. **ಅತ ಉಪಧಾಯಾಃ** ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ. ಲಟ್ ಪ್ರಥಮಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವೈಶ್ವಾನರ**—ವಿಶ್ವೇ ಚ ಇಮೇ ನರಾಶ್ಚ ವಿಶ್ವಾನರಾಃ **ನರೇಸಂಜ್ಞಾಯಾಂ** (ಪಾ. ಸೂ. ೬-೩-೧೨೯) ಎಂಬುದರಿಂದ ಸಂಜ್ಞಾತೋರುವಾಗ ನರಶಬ್ದ ಪರವಾದುದರಿಂದ ಪೂರ್ವಪದಕ್ಕೆ ದೀರ್ಘ. ವಿಶ್ವಾನರಸ್ಯ ಅಯಂ ವೈಶ್ವಾನರಃ ತತ್ಸಂಬಂಧಿ ಎಂಬರ್ಥದಲ್ಲಿ **ತಸ್ಯೇದಮ್** (ಪಾ. ಸೂ. ೪-೩-೧೨೦) ಎಂಬುದರಿಂದ ಅಣ್ ಪ್ರತ್ಯಯ. ಣಿತ್ತಾದುದರಿಂದ **ತದ್ಧಿತೇಷ್ವಚಾಮಾದೇಃ** ಎಂಬುದರಿಂದ ಆದಿವೃದ್ಧಿ. ಸಂಬುದ್ಧಿಯಲ್ಲಿ **ಏಙ್‌ಹ್ರಸ್ವಾತ್ ಸಂಬುದ್ಧೇಃ** ಸೂತ್ರದಿಂದ ಸುಲೋಪ. ಪಾದಾದಿಯಲ್ಲಿರುವುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ. **ಆಮಂತ್ರಿತಸ್ಯ** (ಪಾ. ಸೂ. ೬-೧-೧೯೮) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ನಾಭಿಃ**—ಣಹ ಬಂಧನೇ ಧಾತು. **ಣೋನಃ** ಎಂಬುದರಿಂದ ಣಕಾರಕ್ಕೆ ನಕಾರಾದೇಶ. **ನಹೋ-ಭಶ್ಚ** (ಉ. ಸೂ. ೪-೫೬೫) ಎಂಬುದರಿಂದ ಇಞ್ ಪ್ರತ್ಯಯ. ತತ್ಸಂನಿಯೋಗದಿಂದ ಭಕಾರವು ಅಂತಾದೇಶವಾಗಿ ಬರುತ್ತದೆ. ಞಿತ್ತಾದುದರಿಂದ **ಅತಉಪಧಾಯಾಃ** ಸೂತ್ರದಿಂದ ಧಾತುವಿನ ಉಪಧೆಗೆ ವೃದ್ಧಿ. **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಅಸಿ**—ಅಸ ಭುವಿ ಧಾತು. ಲಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. ಸಾದಿಪ್ರತ್ಯಯಪರವಾದುದರಿಂದ **ತಾಸಸ್ತ್ಯೋರ್ಲೋಪಃ** (ಪಾ. ಸೂ. ೭-೪-೫೦) ಎಂಬುದರಿಂದ ಅಸಿನ ಸಕಾರಕ್ಕೆ ಲೋಪ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಕ್ಷಿತೀನಾಮ್**—ಕ್ಷಿ ನಿವಾಸಗತ್ಯೋಃ ಧಾತು. ಇದಕ್ಕೆ ಸಂಜ್ಞಾತೋರುವಾಗ **ಕ್ತಿಚ್‌ಕ್ತೌಚ ಸಂಜ್ಞಾ-ಯಾಮ್** (ಪಾ. ಸೂ. ೩-೩-೧೭೪) ಎಂಬುದರಿಂದ ಕ್ತಿಚ್ ಪ್ರತ್ಯಯ ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. **ಚಿತಃ** ಎಂಬುದರಿಂದ ಕ್ಷಿತಿ ಶಬ್ದವು ಅಂತೋದಾತ್ತವಾಗುತ್ತದೆ. ಷಷ್ಠೀ ಬಹುವಚನದಲ್ಲಿ ಆಮ್ ಪ್ರತ್ಯಯ. **ಹ್ರಸ್ವನದ್ಯಾಪೋನುಟ್** ಸೂತ್ರದಿಂದ ಆಮಿಗೆ ನುಡಾಗಮ. **ನಾಮಿ** ಸೂತ್ರದಿಂದ ಹ್ರಸ್ವಾಂಗಕ್ಕೆ ದೀರ್ಘ. ಆಗ **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ಅಂತೋದಾತ್ತದ ಪರದಲ್ಲಿರುವ ನಾಮಿಗೆ ಉದಾತ್ತಸ್ವರ ಬರುತ್ತದೆ.

**ಜನಾನ್**—ದ್ವಿತೀಯಾ ಬಹುವಚನಾಂತರೂಪ. ಇದಕ್ಕೆ ಉಪ ಪರವಾದಾಗ **ದೀರ್ಘಾದಟಿ ಸಮಾನಪಾದೇ** ಎಂಬುದರಿಂದ ನಕಾರಕ್ಕೆ ರುತ್ವ. **ಆತೋಽಟಿನಿತ್ಯಮ್** ಸೂತ್ರದಿಂದ ಪೂರ್ವಾಕಾರಕ್ಕೆ ಅನುನಾಸಿಕಭಾವ.

**ಉಪಮಿತ್**—ಡುಮಿಞ್ ಪ್ರಕ್ಷೇಪಣೇ ಧಾತು. ಇದಕ್ಕೆ ಉಪ ಎಂಬುದು ಪೂರ್ವದಲ್ಲಿರುವಾಗ ಬಹುಲವಚನದಿಂದ ಕರ್ಮಣಿಯಲ್ಲಿ ಕ್ವಿಪ್ ಪ್ರತ್ಯಯ. **ಹ್ರಸ್ವಸ್ಯಪಿತಿಕೃತಿ ತುಕ್** ಎಂಬುದರಿಂದ ಧಾತುವಿಗೆ ತುಕಾಗಮ. **ಗತಿಕಾರಕೋಪಪದಾತ್ ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.

**ಯೆಯಂಥ**—ಯಮ ಉಪರಮೇ ಧಾತು. ಲಿಟ್ ಮಧ್ಯಮಪುರುಷ ಏಕವಚನದಲ್ಲಿ **ಪರಸ್ಮೈಪದಾನಾಂ**—ಸೂತ್ರದಿಂದ ಸಿಪಿಗೆ ಥಲಾದೇಶ. **ಅನಿಟ್ತ್ವಾದಪರೋ ಕ್ರಾದಿನಿಯಮ**ದಿಂದ ಥಲಿನಲ್ಲಿ ಇಟ್ ಪ್ರಾಪ್ತವಾದರೆ

ಉಪದೇಶೇತ್ವತಃ (ಪಾ. ಸೂ. ೭-೨-೬೨) ಎಂಬುದರಿಂದ ಉಪದೇಶಕಾಲದಲ್ಲಿ ಅಕಾರವುಳ್ಳ ಧಾತುವಾದುದರಿಂದ ಪುನಃ ಇಣ್ಣಿಷೇಧ ಬರುತ್ತದೆ. ಮಕಾರಕ್ಕೆ ನಶ್ಚಾಪದಾಂ—ಸೂತ್ರದಿಂದ ಅನುಸ್ವಾರ. ಅನುಸ್ವಾರಸ್ಯಯಯಿ ಪರಸವರ್ಣಃ ಎಂಬುದರಿಂದ ಪರಸವರ್ಣದಿಂದ ನಕಾರಾದೇಶ. ಅತಿಜಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಅಥಾಭವದರತೀ ರೋದಸ್ಯೋಃ।
ತಂ ತ್ವಾ ದೇವಾಸೋಽಜನಯಂತ ದೇವಂ ವೈಶ್ವಾನರ ಜ್ಯೋತಿರಿದಾ-
ರ್ಯಾಯ ॥ ೨ ॥

॥ ಪದಪಾಠಃ ॥

ಮೂರ್ಧಾ । ದಿವಃ । ನಾಭಿಃ । ಅಗ್ನಿಃ । ಪೃಥಿವ್ಯಾಃ । ಅಥ । ಅಭವತ್ । ಅರತಿಃ ।
ರೋದಸ್ಯೋಃ ।
ತಂ । ತ್ವಾ । ದೇವಾಸಃ । ಅಜನಯಂತ । ದೇವಂ । ವೈಶ್ವಾನರ । ಜ್ಯೋತಿಃ । ಇತ್ ।
ಆರ್ಯಾಯ ॥ ೨ ॥

॥ ಸಾಯಣಭಾಷ್ಯ ॥

ವಿಷುವತ್ಸಂಜ್ಞೇಽಹನ್ಯಾಗ್ನಿಮಾರುತೇ ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಇತಿ ವೈಕಲ್ಪಿಕೋಽನುರೂಪಸ್ತೃಚಃ । ವಿಷುವಾನ್ದಿವಾಕೀರ್ತ್ಯ ಇತಿ ಖಂಡೇ ಸೂತ್ರಿತಂ । ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಇತಿ ವಾ । ಆ. ೮-೬ । ಇತಿ ॥

ಅಯಮಗ್ನಿರ್ದಿವೋ ದ್ಯುಲೋಕಸ್ಯ ಮೂರ್ಧಾ ಶಿರೋವತ್ಪ್ರಧಾನಭೂತೋ ಭವತಿ । ಪೃಥಿವ್ಯಾ ಭೂಮೇಶ್ಚ ನಾಭಿಃ ಸಂನಾಹಕಃ । ರಕ್ಷಕ ಇತ್ಯರ್ಥಃ । ಅಥಾನಂತರಂ ರೋದಸ್ಯೋರ್ದ್ಯಾವಾಪೃಥಿವ್ಯೋರಯಮರತಿರಧಿಪತಿರಭವತ್ । ಹೇ ವೈಶ್ವಾನರ ತಂ ತಾದೃಶಂ ದೇವಂ ದಾನಾದಿಗುಣಯುಕ್ತಂ ತ್ವಾ ತ್ವಾಂ ದೇವಾಸಃ ಸರ್ವೇ ದೇವಾ ಆರ್ಯಾಯ ವಿದುಷೇ ಮನವೇ ಯಜಮಾನಾಯ ವಾ ಜ್ಯೋತಿರಿತ್ ಜ್ಯೋತೀರೂಪಮೇವಾಜನಯಂತ । ಉದಪಾದಯನ್ ॥ ಮೂರ್ಧಾ । ಮೂರ್ತಮಸ್ಮಿನ್ಧೀಯತ ಇತಿ ಮೂರ್ಧಾ । ಉ. ೧.೧೫೬ । ಶ್ವನ್ನುಕ್ಷನ್ನಿತ್ಯಾದೌ ನಿಪಾತನಾದ್ರೂಪಸಿದ್ಧಿಃ । ಪೃಥಿವ್ಯಾಃ । ಪೃಥಿವೀಶಬ್ದಃ ಷಿದ್ಗೌರಾದಿಭ್ಯಶ್ಚೇತಿ ಙೀಷ್ಪ್ರತ್ಯಯಾಂತೋಽಂತೋದಾತ್ತಃ । ಅಜನಯಂತ । ಜನೀಜೃಷ್ಕ್ನಸುರಂಜೋಽಮಂತಾಶ್ಚ । ಧಾ. ೧೯-೬೩,೬೭ । ಇತಿ ಮಿತ್ತ್ವಾನ್ಮಿತಾಂ ಹ್ರಸ್ವ ಇತಿ ಹ್ರಸ್ವತ್ವಂ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ಅಗ್ನಿಃ—ಅಗ್ನಿ ದೇವನು | ದಿವಃ—ದ್ಯುಲೋಕಕ್ಕೆ | ಮೂರ್ಧಾ—(ಪ್ರಧಾನವಾದ) ಶಿರಃಪ್ರಾಯನಾಗಿಯೂ | ಪೃಥಿವ್ಯಾಃ—ಭೂಮಿಗೆ | ನಾಭಿಃ—(ಕೇಂದ್ರದ) ಹೊಕ್ಕಳು ರೂಪದಲ್ಲಿ (ಸಂರಕ್ಷಕನಾಗಿಯೂ) | ಅಥ—ಮತ್ತು | ರೋದಸ್ಯೋಃ—ದ್ಯಾವಾಪೃಥಿವಿಗಳಿಗೆ | ಅರತಿಃ—ಅಧಿಪತಿಯಾಗಿಯೂ | ಅಭವತ್—ಆಗಿದ್ದಾನೆ | ವೈಶ್ವಾನರ—ಎಲೈ ಅಗ್ನಿಯೇ | ತಂ—ಅಂತಹ | ದೇವಂ—ದಾನಾದಿಗುಣಗಳಿಂದ ಕೂಡಿದ| ತ್ವಾ—ನಿನ್ನನ್ನು | ದೇವಾಸಃ—ಸಕಲದೇವತೆಗಳೂ | ಆರ್ಯಾಯ—ಪ್ರಾಜ್ಞನಾದ ಮನುವಿಗಾಗಿ ಅಥವಾ ಯಜಮಾನನಿಗಾಗಿ | ಜ್ಯೋತಿರಿತ್—ಜ್ಯೋತಿಯರೂಪದಲ್ಲಿ | ಅಜನಯಂತ—ಸೃಷ್ಟಿಮಾಡಿದರು ||

|| ಭಾವಾರ್ಥ ||

ಅಗ್ನಿದೇವನು ದ್ಯುಲೋಕಕ್ಕೆ ಶಿರಸ್ಸಿನಂತೆ ಪ್ರಧಾನನಾಗಿಯೂ ಭೂಲೋಕಕ್ಕೆ ಹೊಕ್ಕಳಿನಂತೆ ಸಂರಕ್ಷಕನಾಗಿಯೂ ಮತ್ತು ದ್ಯಾವಾಪೃಥಿವಿಗಳೆರಡಕ್ಕೂ ಅಧಿಪತಿಯಾಗಿಯೂ ಆಗಿದ್ದಾನೆ. ಎಲೈ ಅಗ್ನಿಯೇ, ನೀನು ದಾನಾದಿಗುಣಗಳಿಂದ ಕೂಡಿದವನು. ನಿನ್ನನ್ನು ಸಕಲ ದೇವತೆಗಳೂ ಸಹ ಪ್ರಾಜ್ಞನಾದ ಯಜಮಾನನಿಗಾಗಿ ಜ್ಯೋತಿಯ ರೂಪದಲ್ಲಿ ಸೃಷ್ಟಿಮಾಡಿದರು.

## English Transation.

Agni, the head of heaven, the navel of earth, became the ruler over earth and heaven; all the gods created you, Vaiswanara, in the shape of light for the Arya.

|| ವಿಶೇಷ ವಿಷಯಗಳು ||

ವಿಷುವತ್ಸಂಜ್ಞವೆಂಬ ಯಾಗದಲ್ಲಿ ಆಗ್ನಿಮಾರುತ ಶಸ್ತ್ರಮಂತ್ರಪಠನಮಾಡುವಾಗ ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಎಂದು ಮೊದಲಾಗುವ ಮೂರು ಋಕ್ಕುಗಳನ್ನು ವೈಕಲ್ಪಿಕವಾಗಿ ಪಠಿಸಬಹುದೆಂದು ಆಶ್ವಲಾಯನಶ್ರೌತಸೂತ್ರದ ವಿಷುವಾನ್ದಿವಾಕೀರ್ತ್ಯ ಎಂಬ ಖಂಡದಲ್ಲಿ ಮೂರ್ಧಾನಂ ದಿವೋ ಅರತಿಂ ಪೃಥಿವ್ಯಾ ಮೂರ್ಧಾ ದಿವೋ ನಾಭಿರಗ್ನಿಃ ಪೃಥಿವ್ಯಾ ಇತಿ ವಾ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೮-೬)

ಮೂರ್ಧಾ—ಶಿರೋವತ್ಪ್ರಧಾನಭೂತೋ ಭವತಿ—ತಲೆಯಂತೆ ಎಲ್ಲ ದೇವತೆಗಳಿಗೂ ಪ್ರಧಾನಭೂತನಾಗಿದ್ದೀಯೆ. ಇದೇ ಅರ್ಥವನ್ನು ಮೂರ್ತಮಸ್ಮಿನ್ ಧೀಯತೇ ಇತಿ ಮೂರ್ಧಾ (ನಿರು. ೭-೨೭) ಎಂದು ನಿರುಕ್ತಕಾರರು ಸಮರ್ಥಿಸಿರುವರು.

ಆರ್ಯಾಯ—ವಿದ್ವಾಂಸನಿಗೆ, ಮನುವಿಗೆ, ಯಜಮಾನನಿಗೆ ಹೀಗೇ ಮೂರರ್ಥವನ್ನೂ ಇಲ್ಲಿ ವಿವರಿಸಿದ್ದಾರೆ

ಜ್ಯೋರಿತ್—ಜ್ಯೋತೀರೂಪಮೇವ—ಇಲ್ಲಿ ಇತ್ ಶಬ್ದವು ಏವಕಾರಾರ್ಥದಲ್ಲಿ ನಿರೂಪಿತವಾಗಿದೆ. ಜ್ಯೋತಿಯೇ ಆಗಿದ್ದೀಯೆ ಎಂಬುದು ಇದರ ಅರ್ಥ.



CC-0. Jangamwadi Math Collection. Digitized by eGangotri

|| ವ್ಯಾಕರಣಪ್ರಕ್ರಿಯಾ ||

ಮೂರ್ಧಾ—ಮೂರ್ತಮಸ್ಮಿನ್ ಧೀಯತೇ ಇತಿ ಮೂರ್ಧಾ. (ನಿರು. ೭-೨೭) ಎಂದು ಯಾಸ್ಕರು ನಿರ್ವಚನ ಮಾಡಿರುತ್ತಾರೆ. ಶ್ವನ್ನುಕ್ಷನ್ (ಉ. ಸೂ. ೧-೧೫೭) ಎಂಬುದರಿಂದ ನಿಪಾತಿತವಾದುದರಿಂದ ರೂಪ ಸಿದ್ಧಿಯಾಗುತ್ತದೆ.

ದಿವಃ— ಊಡಿದಂಪದಾದಿ—ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಪೃಥಿವ್ಯಾಃ—ಪೃಥಿವೀಶಬ್ದವು. ಷಿದ್ಗೌರಾದಿಭ್ಯಶ್ಚ (ಪಾ. ಸೂ. ೪-೧-೪೧) ಎಂಬುದರಿಂದ ಙೀಷ್ ಪ್ರತ್ಯಯಾಂತವಾದುದರಿಂದ ಅಂತೋದಾತ್ತವಾಗುತ್ತದೆ. ಷಷ್ಠೀ ಏಕವಚನಾಂತರೂಪ. ಉದಾತ್ತ ಯಣೋಹಲ್ ಪೂರ್ವಾತ್ ಸೂತ್ರದಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಅಭವತ್—ಭೂ ಸತ್ತಾಯಾಂ ಧಾತು ಲಙ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತ ಸ್ವರ ಬರುತ್ತದೆ.

ದೇವಾಸಃ—ದೇವ ಶಬ್ದಕ್ಕೆ ಜಸ್ ಪರವಾದಾಗ ಆಜ್ಜಸೇರಸುಕ್ ಎಂಬುದರಿಂದ ಜಸಿಗೆ ಅಸು ಕಾಗಮ.

ಅಜನಯಂತ—ಜನೀ ಪ್ರಾದುರ್ಭಾವೇ ಧಾತು. ಪ್ರೇರಣಾತೋರುವುದರಿಂದ ಹೇತುಮತಿಚ ಎಂಬುದರಿಂದ ಣಿಚ್ ಬರುತ್ತದೆ. ಅತಉಪಧಾಯಾಃ ಸೂತ್ರದಿಂದ ಧಾತುವಿನ ಉಪಧಾ ಆಕಾರಕ್ಕೆ ವೃದ್ಧಿ. ಜಾನಿ ಎಂಬುದು ಸನಾದ್ಯಂತಾಧಾತವಃ ಎಂಬುದರಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಲಙ್ ಪ್ರಥಮ ಪುರುಷ ಬಹುವಚನದಲ್ಲಿ ಝ ಪ್ರತ್ಯಯಕ್ಕೆ ಝೋಂತಃ ಎಂಬುದರಿಂದ ಅಂತಾದೇಶ. ಜನೀ ಜ್ಯಾಷ್‌ಕ್ನಸು-ರಂಜೋಮಂತಾಶ್ಚ ಎಂಬುದರಿಂದ ಈ ಧಾತುವಿಗೆ ಮಿತ್ ಸಂಜ್ಞಾ ಬರುವುದರಿಂದ ಮಿತಾಂಹ್ರಸ್ವಃ (ಪಾ. ಸೂ. ೬-೪-೯೨) ಎಂಬುದರಿಂದ ಉಪಧಾಹ್ರಸ್ವ. ಣಿಚಿಗೆ ಶಪ್ ನಿಮಿತ್ತವಾಗಿ ಗುಣ ಅಯಾದೇಶ. ಲಙ್ ನಿಮಿತ್ತ ವಾಗಿ ಅಂಗಕ್ಕೆ ಅಡಾಗಮ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ನಾಭಿಃ, ವೈಶ್ವಾನರ—ಹಿಂದಿನ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.



|| ಸಂಹಿತಾಪಾಠಃ ||

ಆ ಸೂರ್ಯೇ ನ ರ॒ಶ್ಮಯೋ᳚ ಧ್ರು॒ವಾಸೋ᳚ ವೈಶ್ವಾ॒ನ॒ರೇ ದ॑ಧಿ॒ರೇ᳚ಽಗ್ನಾ ವಸೂ᳚ನಿ ।

ಯಾ ಪರ್ವ॑ತೇ॒ಷ್ವೋಷ॑ಧೀ॒ಷ್ವ॒ಪ್ಸು ಯಾ ಮಾನು॑ಷೇ॒ಷ್ವಸಿ॒ ತಸ್ಯ॒ ರಾಜಾ᳚ ॥ ೩ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಆ । ಸೂರ್ಯೇ । ನ । ರಶ್ಮಯಃ । ಧ್ರುವಾಸಃ । ವೈಶ್ವಾನರೇ । ದಧಿರೇ । ಅಗ್ನಾ । ವಸೂನಿ ।

ಯಾ । ಪರ್ವತೇಷು । ಓಷಧೀಷು । ಅಪ್ಸು । ಯಾ । ಮಾನುಷೇಷು । ಅಸಿ । ತಸ್ಯ । ರಾಜಾ ॥ ೩ ॥

॥ ಸಾಯಣಭಾಷ್ಯಂ ॥

ಅಗ್ನಾ ವೈಶ್ವಾನರೇಽಗ್ನೌ ವಸೂನಿ ಧನಾನ್ಯಾ ದಧಿರೇ । ಆಹಿತಾನಿ ಸ್ಥಾಪಿತಾನಿ ಬಭೂವುಃ । ತತ್ರ ದೃಷ್ಟಾಂತಃ । ಧ್ರುವಾಸೋ ನಿಶ್ಚಲಾ ರಶ್ಮಯಃ ಕಿರಣಾಃ ಸೂರ್ಯೇ ನ ಯಥಾ ಸೂರ್ಯೆ ಆಧೀಯಂತೇ ತದ್ವತ್ । ಅತಸ್ತ್ವಂ ಪರ್ವತಾದಿಷು ಯಾನಿ ಧನಾನಿ ವಿದ್ಯಂತೇ ತಸ್ಯ ಧನಜಾತಸ್ಯ ರಾಜಾಸಿ । ಅಧಿಪತಿರ್ಭವಸಿ ॥ ಅಗ್ನಾ । ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ಯಾ । ಶೇಶ್ಛಂದಸಿ ಬಹುಲಮಿತಿ ಶೇರ್ಲೋಪಃ । ಓಷಧೀಷು । ಉಷ ದಾಹೇ । ಓಷಃ ಪಾಕಃ । ಭಾವೇ ಘಞ್ । ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ಓಷ ಆಸು ಧೀಯತ ಇತ್ಯೋಷಧಯಃ । ಕರ್ಮಣ್ಯಧಿಕರಣೇ ಚೇತಿ ಕಿಪ್ರತ್ಯಯಃ । ದಾಸೀಭಾರಾದಿಷು ಪಠಿತತ್ವಾತ್ಪೂರ್ವಪದಪ್ರಕೃತಿಸ್ವರತ್ವಂ । ಸಪ್ತಮೀಬಹುವಚನ ಓಷಧೇಶ್ಚ ವಿಭಕ್ತಾವಪ್ರಥಮಾಯಾಂ । ಪಾ. ೬-೩-೧೩೨ । ಇತಿ ದೀರ್ಘಃ । ಅಪ್ಸು । ಊಡಿದಮಿತಿ ವಿಭಕ್ತೇರುದಾತ್ತತ್ವಂ ॥

॥ ಪ್ರತಿಪದಾರ್ಥ ॥

ವೈಶ್ವಾನರೇ ಅಗ್ನಾ—ವೈಶ್ವಾನರರೂಪದಲ್ಲಿರುವ ಅಗ್ನಿಯಲ್ಲಿ । ವಸೂನಿ—(ಸಕಲ) ಧನಗಳೂ । ಧ್ರುವಾಸಃ—ಶಾಶ್ವತಗಳಾದ । ರಶ್ಮಯಃ—ಕಿರಣಗಳು । ಸೂರ್ಯೇ ನ—ಸೂರ್ಯನಲ್ಲಿ ಸ್ಥಾಪಿತಗಳಾಗಿರುವಂತೆ । ಆ ದಧಿರೇ—ನಿಕ್ಷೇಪಗಳಂತೆ ಸ್ಥಾಪಿತಗಳಾಗಿವೆ (ಆದ್ದರಿಂದ ನೀನು) । ಪರ್ವತೇಷು—ಪರ್ವತಗಳಲ್ಲಿಯೂ । ಓಷಧೀಷು—ಮೂಲಿಕೆಗಳಲ್ಲಿಯೂ । ಅಪ್ಸು—ನೀರುಗಳಲ್ಲಿಯೂ । ಮಾನುಷೇಷು—ಮಾನವರಲ್ಲಿಯೂ । ಯಾ—ಯಾವ ಧನಗಳಿವೆಯೋ । ತಸ್ಯ—ಆ ಸಕಲಧನ ಸಮೂಹಕ್ಕೂ । ರಾಜಾ ಅಸಿ—ಅಧಿಪತಿಯಾಗಿದ್ದೀಯೆ.

॥ ಭಾವಾರ್ಥ ॥

ಶಾಶ್ವತಗಳಾದ ಕಿರಣಗಳು ಸೂರ್ಯನಲ್ಲಿ ಸ್ಥಾಪಿತಗಳಾಗಿರುವಂತೆ ಸಕಲಧನಗಳೂ ವೈಶ್ವಾನರ ರೂಪದಲ್ಲಿರುವ ಅಗ್ನಿಯಲ್ಲಿ ನಿಕ್ಷೇಪಗಳಂತೆ ಸ್ಥಾಪಿತಗಳಾಗಿವೆ. ಆದ್ದರಿಂದ ಎಲೈ ಅಗ್ನಿಯೇ, ನೀನು ಪರ್ವತಗಳಲ್ಲಿಯೂ- ಮೂಲಿಕೆಗಳಲ್ಲಿಯೂ, ನೀರುಗಳಲ್ಲಿಯೂ ಮತ್ತು ಮಾನವರಲ್ಲಿಯೂ ಯಾವ ಧನಗಳಿವೆಯೋ ಆ ಸಕಲ ಧನಗಳಿಗೂ ಒಡೆಯನಾಗಿದ್ದೀಯೆ.



CC-0. Jangamwadi Math Collection. Digitized by eGangotri

## English Translation.

Treasures were deposited in Agni, Vaiswanara, like the permanent rays (of light) the Sun; You are the sovereign of all the treasures that exist in the mountains, in the herbs, in the waters, or amongst men

|| ವಿಶೇಷ ವಿಷಯಗಳು ||

ಅಗ್ನಾ—ಇಲ್ಲಿ ಹೇ ಅಗ್ನೇ ಎಂಬರ್ಥದಲ್ಲಿ ಸಂಬೋಧನ ಪ್ರಥಮಾವಿಭಕ್ತಿಗೆ ಆಕಾರಾದೇಶವು ಬಂದಿದೆ.

ಆ ದಧಿರೇ—ಆಹಿತಾನಿ ಸ್ಥಾಪಿತಾನಿ ಬಭೂವುಃ ಸಂಪೂರ್ಣವಾಗಿ ನಿಲ್ಲಿಸಲ್ಪಟ್ಟವು.

ಸೂರ್ಯೇನ—ನಿಶ್ಚಲವಾದ ಕಿರಣಗಳು ಸೂರ್ಯನಲ್ಲಿ ಹೇಗೆ ಅಡಗಿವೆಯೋ, ಅದರಂತೆ ನಿನ್ನಲ್ಲಿ ಸಮಸ್ತ ಧನಜಾತವೂ ಅಡಗಿರುವುದು ಎಂಬುದು ಪ್ರಕೃತ ಅಗ್ನಿಸ್ತುತಿಗೆ ದೃಷ್ಟಾಂತವಾಗಿರುವುದು.

ಓಷಧೀಷು—ಉಷ-ದಾಹೇ ಎಂಬ ಧಾತುವಿನಿಂದ ನಿಷ್ಪನ್ನವಾದ ರೂಪ ಇದು. ಓಷಃ ಎಂದರೆ ಪಾಕ ಎಂದರ್ಥ. ಓಷಃ ಆಸು ಧೀಯಂತೆ ಇತಿ ಓಷಧಯಃ ಎಂಬ ವ್ಯುತ್ಪತ್ತಿಯಂತೆ ಸಕಲ ವಿಧವಾದ ಗುಣವೂ ಪಾಕಜನ್ಯವಾಗಿರುವುದು ಎಂಬರ್ಥವು ಓಷಧ ಪದಕ್ಕೆ ನಿರೂಪಿಸಲ್ಪಟ್ಟಿದೆ.

|| ವ್ಯಾಕರಣಪ್ರಕ್ರಿಯಾ ||

ಧ್ರುವಾಸಃ—ಪ್ರಥಮಾ ಬಹುವಚನದಲ್ಲಿ ಜಸಿಗೆ ಆಜ್ಜಸೇರಸುಕ್ ಎಂಬುದರಿಂದ ಅಸುಕಾಗಮ.

ದಧಿರೇ—ಡುಧಾಞ್ ಧಾರಣಪೋಷಣಯೋಃ ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಲಿಟಸ್ತಝಯೋರೇಶಿರೇಚ್ ಎಂಬುದರಿಂದ ಇರೇಚಾದೇಶ. ತಿಙಂತನಿಘಾತಸ್ವರ ಬರುತ್ತದೆ.

ಅಗ್ನಾ—ಅಗ್ನಿಶಬ್ದಕ್ಕೆ ಸಪ್ತಮೀ ಏಕವಚನ ಪರವಾದಾಗ ಸುಪಾಂ ಸುಲುಕ್ ಸೂತ್ರದಿಂದ ವಿಭಕ್ತಿಗೆ ಡಾದೇಶ. ಡಿತ್ ಸಾಮರ್ಥ್ಯದಿಂದ ಟಿಗೆ ಲೋಪ.

ಯಾ—ಯಚ್ಛಬ್ದ. ನಪುಂಸಕ ಬಹುವಚನದಲ್ಲಿ ಜಸಿಗೆ ಶಿ ಆದೇಶ ಬಂದಾಗ ಶೇಶ್ಛಂದಸಿ ಬಹುಲಂ ಎಂಬುದರಿಂದ ಶಿಗೆ ಲೋಪ.

ಓಷಧೀಷು—ಉಷ ದಾಹೇ ಧಾತು. ಓಷಃ ಪಾಕಃ ಭಾವಾರ್ಥದಲ್ಲಿ ಘಞ್ ಪ್ರತ್ಯಯ. ಪ್ರತ್ಯಯ ನಿಮಿತ್ತವಾಗಿ ಧಾತುವಿನ ಲಘೂಪಧೆಗೆ ಗುಣ. ಞಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಓಷಃ ಆಸು ಧೀಯತೇ ಇತಿ ಓಷಧಯಃ. ಕರ್ಮಣ್ಯಧಿಕರಣೇಚ (ಪಾ. ಸೂ. ೩-೩-೯೩) ಎಂಬುದರಿಂದ ಅಧಿಕರಣಾರ್ಥದಲ್ಲಿ ಕಿ ಪ್ರತ್ಯಯ. ಆತೋಲೋಪ ಇಟಿಚ ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. ದಾಸೀಭಾರಾದಿಯಲ್ಲಿ ಪಠಿತವಾದುದರಿಂದ ಪೂರ್ವಪದಪ್ರಕೃತಿಸ್ವರಬರುತ್ತದೆ.

ಅಪ್ಸು—ಅಪ್‌ಶಬ್ದದ ಸಪ್ತಮೀ ಬಹುವಚನಾಂತರೂಪ. ಊಡಿದಂಪದಾದಿ—(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಅಸಿ—ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ಯಾ ಎಂದು ಹಿಂದೆ ಸಂಬಧವಿರುವುದರಿಂದ ನಿಘಾತ ಸ್ವರ ಬರುವುದಿಲ್ಲ. ಧಾತುವಿನ ಸ್ವರವು ಉಳಿಯುವುದರಿಂದ ಆದ್ಯುದಾತ್ತವಾಗುತ್ತದೆ.

॥ ಸಂಹಿತಾಪಾಠಃ ॥

ಬೃಹತೀ ಇವ ಸೂನವೇ ರೋದಸೀ ಗಿರೋ ಹೋತಾ ಮನುಷ್ಯೋ೩ ನ ದಕ್ಷಃ ।

ಸ್ವರ್ವತೇ ಸತ್ಯಶುಷ್ಮಾಯ ಪೂರ್ವೀರ್ವೈಶ್ವಾನರಾಯ ನೃತಮಾಯ ಯಹ್ವೀಃ ॥ ೪ ॥

॥ ಪದಪಾಠಃ ॥

ಬೃಹತೀ ಇವೇತಿ ಬೃಹತೀಽಇವ । ಸೂನವೇ । ರೋದಸೀ ಇತಿ । ಗಿರಃ । ಹೋತಾ । ಮನುಷ್ಯಃ । ನ । ದಕ್ಷಃ ।

ಸ್ವಃಽವತೇ । ಸತ್ಯಽಶುಷ್ಮಾಯ । ಪೂರ್ವೀಃ । ವೈಶ್ವಾನರಾಯ । ನೃಽತಮಾಯ । ಯಹ್ವೀಃ ॥ ೪ ॥

॥ ಸಾಯಣಭಾಷ್ಯಂ ॥

ರೋದಸೀ ದ್ಯಾವಾಪೃಥಿವ್ಯೌ ಸೂನವೇ ಸ್ವಪುತ್ರಾಯ ವೈಶ್ವಾನರಾಯ ಬೃಹತೀ ಇವ ಪ್ರಭೂತೇ ಇವಾಭೂತಾಂ । ವೈಶ್ವಾನರಸ್ಯ ದ್ಯಾವಾಪೃಥಿವ್ಯೋಃ ಪುತ್ರತ್ವಂ ಮಂತ್ರಾಂತರೇ ಸ್ಪಷ್ಟಮವಗಮ್ಯತೇ । ಉಭಾ ಪಿತರಾ ಮಹಯನ್ನಜಾಯತಾಗ್ನಿರ್ದ್ಯಾವಾಪೃಥಿವೀ ಭೂರಿರೇತಸೇತಿ। ಋಗ್ವೆ. ೩-೩-೧೧ । ಇತಿ। ಮಹತೋ ವೈಶ್ವಾನರಸ್ಯಾವಸ್ಥಾನಾಯ ದ್ಯಾವಾಪೃಥಿವ್ಯೌ ವಿಸ್ತೃತೇ ಜಾತೇ ಇತ್ಯರ್ಥಃ । ಕಿಂಚಾಯಂ ಹೋತಾ ದಕ್ಷಃ ಸಮರ್ಥಃ ಪೂರ್ವೀರ್ಬಹುವಿಧಾ ಯಹ್ವೀರ್ಮಹತೀರ್ಗಿರಃ ಸ್ತುತೀರ್ವೈಶ್ವಾನರಾಯಾಗ್ನಯೇ ಪ್ರಾಯುಂಕ್ತೇತಿ ಶೇಷಃ । ಕೀದೃಶಾಯ । ಸ್ವರ್ವತೇ । ಶೋಭನಗಮನಯುಕ್ತಾಯ । ಸತ್ಯಶುಷ್ಮಾಯಾವಿತಥಬಲಾಯ । ನೃತಮಾಯಾತಿಶಯೇನ ಸರ್ವೇಷಾಂ ನೇತ್ರೇ । ತತ್ರ ದೃಷ್ಟಾಂತಃ । ಮನುಷ್ಯೋ ನ । ಯಥಾ ಮನುಷ್ಯೋ ಲೌಕಿಕೋ ವಂದೀ ದಾತಾರಂ ಪ್ರಭುಂ ಬಹುವಿಧಯಾ ಸ್ತುತ್ಯಾ ಸ್ತೌತಿ ತದ್ವತ್ ॥ ಮನುಷ್ಯಃ । ಮನೋರ್ಜಾತಾವಞ್ಯತೌ ಷುಕ್ಚೇತಿ ಜಾತೌ ಗಮ್ಯಮಾನಾಯಾಂ ಮನುಶಬ್ದಾದ್ಯತ್ ಷುಗಾಗಮಶ್ಚ । ತಿತ್ಸ್ವರಿತ ಇತಿ ಸ್ವರಿತತ್ವಂ । ಯತೋಽನಾವ ಇತ್ಯಾದ್ಯುದಾತ್ತತ್ವಂ ನ ಭವತಿ । ತತ್ರ ಹಿ ದ್ವ್ಯಜಿತ್ಯನುವರ್ತತೇ । ಸ್ವರ್ವತೇ । ಸುಪೂರ್ವಾದರ್ತೇರ್ಭಾವೇ ವಿಚ್ । ತತೋ ಮತುಪ್ । ಮಾದುಪಧಾಯಾ ಇತಿ ವತ್ವಂ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ರೋದಸೀ—ದ್ಯಾವಾಪೃಥಿವಿಗಳೆರಡೂ | ಸೂನವೇ—(ವೈಶ್ವಾನರ ರೂಪದಲ್ಲಿರುವ) ತಮ್ಮ ಮಗನಿಗಾಗಿ | ಬೃಹತೀ ಇವ—ವಿಸ್ತೃತಗಳಾದವೋ ಎಂಬಂತಾದವು | ದಕ್ಷಃ—ಸಮರ್ಥನಾದ | ಹೋತಾ—ಹೋತೃವು | ಸ್ವರ್ವತೇ—ಆಕರ್ಷಕವಾದ ಗಮನವುಳ್ಳವನೂ | ಸತ್ಯಶುಷ್ಮಾಯ—ಸಾರ್ಥಕವಾದ ಬಲವುಳ್ಳವನೂ | ಸ್ವತವಸೇ—ಶ್ರೇಷ್ಠನಾದ ಮಾರ್ಗದರ್ಶಕನೂ ಆದ | ವೈಶ್ವಾನರಾಯ—ಅಗ್ನಿಗೆ | ಮನುಷ್ಯೋ ನ—(ರಾಜನ ಗುಣಗಳನ್ನು ಹೊಗಳಿ) ಲೌಕಿಕನಾದ ಹೊಗಳುಭಟನು ಸ್ತೋತ್ರಮಾಡುವಂತೆ | ಪೂರ್ವೀಃ—ಪುರಾತನವೂ ಅಥವಾ ಬಹುವಿಧವಾದುವೂ | ಯಹ್ವೀಃ—ಮಹತ್ತಾದುವೂ ಆದ | ಗಿರಃ—ಸ್ತೋತ್ರಗಳನ್ನು (ಅರ್ಪಿಸುತ್ತಾನೆ) ||

|| ಭಾವಾರ್ಥ ||

ದ್ಯಾವಾಪೃಥಿವಿಗಳೆರಡೂ ತಮ್ಮ ಮಗನಾದ ಅಗ್ನಿಗಾಗಿ ವಿಸ್ತೃತಗಳಾದಂತೆ ಕಂಡುಬಂದವು. ಸಮರ್ಥನಾದ ಹೋತೃವು ಲೌಕಿಕನಾದ ಹೊಗಳುಭಟನು ರಾಜನ ಗುಣಗಳನ್ನು ವರ್ಣಿಸಿ ಸ್ತೋತ್ರಮಾಡುವಂತೆ ಆಕರ್ಷಕವಾದ ಗಮನವುಳ್ಳವನೂ ಸಾರ್ಥಕವಾದ ಬಲವುಳ್ಳವನೂ ಮತ್ತು ಶ್ರೇಷ್ಠನಾದ ಮಾರ್ಗದರ್ಶಕನೂ ಆದ ಅಗ್ನಿಗೆ ಪುರಾತನವೂ ಮತ್ತು ಮಹತ್ತಾದವೂ ಆದ ಸ್ತೋತ್ರಗಳನ್ನೂ ಅರ್ಪಿಸುತ್ತಾನೆ.

## English Translation.

Heaven and earth expanded as it were for their son. The experienced sacrificer recites, like a bard, many ancient and copious praises addressed to the graceful-moving, truly-vigorous and all-guiding Vaiswanara.

|| ವಿಶೇಷವಿಷಯಗಳು ||

ಸೂನವೇ—ಇಲ್ಲಿ ದ್ಯಾವಾಪೃಥಿವಿಗಳಿಗೆ ಅಗ್ನಿಯು ಮಗನು ಎಂಬರ್ಥವಿದೆ. ಇದಕ್ಕೆ ಪ್ರಮಾಣವಾಗಿ ಉಭಾ ಪಿತರಾ ಮಹಯನ್ನಜಾಯತಾಗ್ನಿರ್ದ್ಯಾವಾಪೃಥಿವೀ ಭೂರಿ ರೇತಸಾ (ಋ. ಸಂ. ೩-೩-೧೧) ಎಂಬ ಶ್ರುತಿಯು ಅಗ್ನಿಗೆ ದ್ಯಾವಾಪೃಥಿವಿಗಳೇ ಮಾತಾಪಿತೃಗಳು ಎಂದು ಹೇಳುತ್ತಿದೆ. ಎಂದರೆ ಮಹತ್ಪರಿಣಾಮವುಳ್ಳ ಅಗ್ನಿಯು ವಿಸ್ತಾರವಾಗಿ ಹರಡುವುದಕ್ಕಾಗಿ, ಭೂಮ್ಯಂತರಿಕ್ಷಗಳು ಬಹು ವಿಸ್ತಾರಗಳಾದುವು. ಈ ಅರ್ಥದಲ್ಲಿ ದ್ಯಾವಾಪೃಥಿವಿಗಳು ಅಗ್ನಿಗೆ ಮಾತಾಪಿತೃಸ್ಥಾನದಲ್ಲಿವೆ ಎಂದು ವರ್ಣಿತವಾಗಿದೆ.

ಸ್ವರ್ವತೇ-ಸತ್ಯಶುಷ್ಮಾಯ—ಈ ಎರಡು ಶಬ್ದಗಳೂ ಅಗ್ನಿಯ ಗಮನ ವಿಶೇಷವನ್ನು ತಿಳಿಸುವುವು. ಅಗ್ನಿಯ ನಡಗೆಯು ಶೋಭನವಾಗಿದ್ದರೂ, ವಿಶೇಷಬಲವುಳ್ಳದ್ದು ಎಂದು ಅಗ್ನಿಯನ್ನು ಸ್ತುತಿಸಿರುವುದು.

ಮನುಷ್ಯೋ ನ—ಮನುಷ್ಯನಂತೆ ಎಂದರ್ಥ. ಇದು ಈ ಪ್ರಕರಣದಲ್ಲಿ ದೃಷ್ಟಾಂತವಾಗಿದೆ. ಲೋಕದಲ್ಲಿ ಮಾನವನು ಹೇಗೆ ಹೊಗಳುಭಟನಾಗಿದ್ದು ದ್ರವ್ಯವನ್ನು ಕೊಡುವ ಪ್ರಭುವನ್ನು ಯಾವರೀತಿ





CC-0. Jangamwadi Math Collection. Digitized by eGangotri

ನಾನಾ ಸ್ತುತಿವಚನಗಳಿಂದ ತೃಪ್ತಿಪಡಿಸುವನೋ ಆದರಂತೆ, ಹೋತೃವು ಅಗ್ನಿಯನ್ನು ಅನೇಕ ಸ್ತೋತ್ರಗಳಿಂದ ಸ್ತೋತ್ರಮಾಡುವನು.

|| ವ್ಯಾಕರಣಪ್ರಕ್ರಿಯಾ ||

**ಮನುಷ್ಯಃ**—**ಮನೋರ್ಜಾತಾವಞ್ಯತೌ ಷುಕ್ ಚ** (ಪಾ. ಸೂ. ೪-೧-೧೬೧) ಎಂಬುದರಿಂದ ಮನು ಶಬ್ದಕ್ಕೆ ಯತ್ ಪ್ರತ್ಯಯ. ತತ್ಸಂನಿಯೋಗದಿಂದ ಷುಕಾಗಮ. ಜಾತಿಯು ಗಮ್ಯಮಾನವಾಗಿದೆ. ಮನುಷ್ಯ ಎಂದು ರೂಪವಾಗುತ್ತದೆ. **ತಿತ್‌ಸ್ವರಿತಮ್** (ಪಾ. ಸೂ. ೬-೧-೧೮೫) ಎಂಬುದರಿಂದ ಪ್ರತ್ಯಯಕ್ಕೆ ಸ್ವರಿತಸ್ವರ ಬರುತ್ತದೆ. ಯದ್ಯಪಿ ಇಲ್ಲಿ **ಯತೋಽನಾವಃ** ಎಂಬುದರಿಂದ ಆದ್ಯುದಾತ್ತಸ್ವರ ಬರಬೇಕಾಗುತ್ತದೆ. ಆದರೆ ಆ ಸೂತ್ರದಲ್ಲಿ **ದ್ವ್ಯಚಃ** ಎಂಬುದಕ್ಕೆ ಅನುವೃತ್ತಿ ಇರುವುದರಿಂದ ಇಲ್ಲಿ ಅನೇಕಾಚ್ ಇರುವುದರಿಂದ ಆ ಸೂತ್ರದಿಂದ ಉಕ್ತಸ್ವರ ಬರುವುದಲ್ಲ.

**ಸ್ವರ್ವತೇ**—ಋ ಗತೌ ಧಾತು. ಸು ಪೂರ್ವದಲ್ಲಿರುವಾಗ ಈ ಧಾತುವಿಗೆ ಭಾವಾರ್ಥದಲ್ಲಿ ವಿಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ ಸ್ವರ್ ಎಂದು ರೂಪವಾಗುತ್ತದೆ. ಸ್ವರ್ ಅಸ್ಯ ಅಸ್ತಿ ಎಂದು ಅರ್ಥವಿವಕ್ಷಾ ಮಾಡಿದಾಗ **ತದಸ್ಯಾಸ್ತಿ**—ಎಂಬುದರಿಂದ ಮತುಪ್ ಪ್ರತ್ಯಯ. ಸ್ವರ್ ಎಂಬಲ್ಲಿ ಅಕಾರ ಉಪಧೆಯಾಗಿರುವುದರಿಂದ ಆದರ ಪರದಲ್ಲಿ ಮತುಪ್ ಬಂದುದರಿಂದ **ಮಾದುಪಧಾಯಾಶ್ಚ**—ಎಂಬುದರಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಸ್ವರ್ವತ್ ಶಬ್ದವಾಗುತ್ತದೆ. **ನ್ಯಙ್ ಸ್ವರೌ ಸ್ವರಿತೌ** ಎಂಬುದರಿಂದ ಸ್ವರ್ ಎಂಬುದಕ್ಕೆ ಸ್ವರಿತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

**ಸತ್ಯಶುಷ್ಮಾಯ**—**ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್** ಎಂಬುದರಿಂದ ಸಮಾಸಸ್ವರವು ಬಾಧಿತವಾಗಿ ಪೂರ್ವಪದಪ್ರಕೃತಿಸ್ವರ ಬರುತ್ತದೆ.

**ಪೂರ್ವೀಃ**—ಪೄ ಪಾಲನಪೂರಣಯೋಃ ಧಾತು. **ಪೄಭಿದಿವ್ಯಧಿ**—(ಉ. ಸೂ. ೧-೨೩) ಎಂಬುದರಿಂದ ಕು ಪ್ರತ್ಯಯ. **ಉದೋಷ್ಠ್ಯಪೂರ್ವಸ್ಯ** ಎಂಬುದರಿಂದ ಋಕಾರಕ್ಕೆ ಉತ್ವ. ಪುರು ಎಂದು ರೂಪವಾಗುತ್ತದೆ. ಇದು ಗುಣವಾಚಕವಾದುದರಿಂದ **ವೋತೋಗುಣವಚನಾತ್** ಎಂಬುದರಿಂದ ಸ್ತ್ರೀತ್ವದಲ್ಲಿ ಙೀಷ್. ಉದಾತ್ತ ಉಕಾರಕ್ಕೆ ಯಣಾದೇಶ. **ಹಲಿಚ** ಎಂಬುದರಿಂದ ದೀರ್ಘ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಸಂಹಿತಾಪಾಠಃ

ದಿವಶ್ಚಿತ್ತೇ ಬೃಹತೋ ಜಾತವೇದೋ ವೈಶ್ವಾನರ ಪ್ರ ರಿರಿಚೇ ಮಹಿತ್ವಂ ।
ರಾಜಾ ಕೃಷ್ಟೀನಾಮಸಿ ಮಾನುಷೀಣಾಂ ಯುಧಾ ದೇವೇಭ್ಯೋ ವರಿವಶ್ಚಕರ್ಥ ॥ ೫ ॥



CC-0. Jangamwadi Math Collection. Digitized by eGangotri

|| ಪದಪಾಠಃ ||

ದಿವಃ । ಚಿತ್ । ತೇ । ಬೃಹತಃ । ಜಾತಽವೇದಃ । ವೈಶ್ವಾನರ । ಪ್ರ । ರಿರಿಚೇ । ಮಹಿಽತ್ವಂ ।

ರಾಜಾ । ಕೃಷ್ಟೀನಾಂ । ಅಸಿ । ಮಾನುಷೀಣಾಂ । ಯುಧಾ । ದೇವೇಭ್ಯಃ । ವರಿವಃ । ಚಕರ್ಥ ॥ ೫ ॥

|| ಸಾಯಣಭಾಷ್ಯಂ ||

ಹೇ ಜಾತವೇದೋ ಜಾತಾನಾಂ ವೇದಿತರ್ವೈಶ್ವಾನರಾಗ್ನೇ ತೇ ತವ ಮಹಿತ್ವಂ ಮಹಾತ್ಮ್ಯಂ ಬೃಹತೋ ಮಹತೋ ದಿವಶ್ಚಿತ್ ದ್ಯುಲೋಕಾದಪಿ ಪ್ರ ರಿರಿಚೇ । ಪ್ರವವೃಧೇ । ಕಿಂಚ ತ್ವಂ ಮಾನುಷೀಣಾಂ ಮನೋರ್ಜಾತಾನಾಂ ಕೃಷ್ಟೀನಾಂ ಪ್ರಜಾನಾಂ ರಾಜಾಸಿ । ಅಧಿಪತಿರ್ಭವಸಿ । ತಥಾ ವರಿವೋಽಸುರೈರಪಹೃತಂ ಧನಂ ಯುಧಾ ಯುದ್ಧೇನ ದೇವೇಭ್ಯಶ್ಚಕರ್ಥ । ದೇವಾಧೀನಮಕಾರ್ಷೀಃ ॥ ವೈಶ್ವಾನರ । ಪಾದಾದಿತ್ವಾದಾಷ್ಟಮಿಕನಿಘಾತಾಭಾವಃ । ರಿರಿಚೇ । ರಿಚಿರ್ ವಿರೇಚನೇ । ಅತ್ರೋಪಸರ್ಗವಶಾತ್ತದ್ವಿಪರೀತ ಆಧಿಕ್ಯೇ ವರ್ತತೇ । ಕೃಷ್ಟೀನಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ಮಾನುಷೀಣಾಂ । ಮಾನುಷಶಬ್ದೋ ಮನೋರ್ಜಾತಾವಿತ್ಯಞ್ಪ್ರತ್ಯಯಾಂತಃ । ಜಾತಿಲಕ್ಷಣೇ ಙೀಷಿ ಪ್ರಾಪ್ತೇ ತದಪವಾದತಯಾ ಶಾರ್ಙ್ಗರವಾದ್ಯಞ ಇತಿ ಙೀನ್ । ನಿತ್ತ್ವಾದಾದ್ಯುದಾತ್ತತ್ವಂ । ಙ್ಯಾಶ್ಛಂದಸಿ ಬಹುಲಂ । ಪಾ. ೬-೧-೧೭೮ । ಇತಿ ಬಹುಲವಚನಾನ್ನಾಮ ಉದಾತ್ತಸ್ಯಾಭಾವಃ । ಯುಧಾ । ಯುಧ ಸಂಪ್ರಹಾರ ಇತ್ಯಸ್ಮಾತ್ಸಂಪದಾದಿಲಕ್ಷಣೋ ಭಾವೇ ಕ್ವಿಪ್ । ವರಿವ ಇತಿ ಧನನಾಮ । ನಬ್ವಿಷಯಸ್ಯೇತ್ಯಾದ್ಯುದಾತ್ತತ್ವಂ ॥

|| ಪ್ರತಿಪದಾರ್ಥ ||

ಜಾತವೇದಃ—ಉತ್ಪನ್ನವಾದ ಸಕಲವನ್ನೂ ತಿಳಿದ । ವೈಶ್ವಾನರ—ಎಲೈ ಅಗ್ನಿಯೇ । ತೇ—ನಿನ್ನ । ಮಹಿತ್ವಂ—ಮಾಹಾತ್ಮ್ಯವು । ಬೃಹತಃ—ವಿಸ್ತಾರವಾದ । ದಿವಶ್ಚಿತ್—ದ್ಯುಲೋಕಕ್ಕಿಂತಲೂ । ಪ್ರ ರಿರಿಚೇ—ಅತ್ಯಧಿಕವಾಗಿ ಬೆಳೆಯಿತು (ಮತ್ತು ನೀನು) । ಮಾನುಷೀಣಾಂ—ಮನುವಿನಿಂದ ಉತ್ಪನ್ನರಾದ । ಕೃಷ್ಟೀನಾಂ—ಪ್ರಜೆಗಳಿಗೆಲ್ಲ । ರಾಜಾ ಅಸಿ—ಅಧಿಪತಿಯಾಗಿದ್ದೀಯೆ (ಹಾಗೆಯೇ) । ವರಿವಃ—(ಅಸುರರಿಂದ ಅಪಹೃತವಾದ) ಧನವನ್ನು । ಯುಧಾ—ಯುದ್ಧದಿಂದ । ದೇವೇಭ್ಯಃ—ದೇವತೆಗಳಿಗಾಗಿ । ಚಕರ್ಥ—(ಪುನಃ) ಗಳಿಸಿದೆ ॥

|| ಭಾವಾರ್ಥ ||

ಎಲೈ ಅಗ್ನಿಯೇ, ನೀನು ಉತ್ಪನ್ನವಾದ ಸಕಲ ವಸ್ತುಗಳನ್ನೂ ತಿಳಿದವನು. ನಿನ್ನ ಮಾಹಾತ್ಮ್ಯವು ವಿಸ್ತಾರವಾದ ದ್ಯುಲೋಕಕ್ಕಿಂತಲೂ ಅತ್ಯಧಿಕವಾಗಿ ಬೆಳೆದಿದೆ. ಮತ್ತು ನೀನು ಮನುವಿನಿಂದ ಉತ್ಪನ್ನರಾದ



CC-0. Jangamwadi Math Collection. Digitized by eGangotri

ಸಕಲ ಪ್ರಜೆಗಳಿಗೂ ಅಧಿಪತಿಯಾಗಿದ್ದೀಯೆ. ಹಾಗೆಯೇ ಅಸುರರಿಂದ ಅಪಹೃತವಾದ ಧನವನ್ನು ಅವರೊಡನೆ ಯುದ್ಧಮಾಡಿ ಪುನಃ ದೇವತೆಗಳಿಗಾಗಿ ಗಳಿಸಿಕೊಟ್ಟೆ.

## English Translation.

Vaiswanara, who knows all that are born, your magnitude has exceeded that of the spacious heaven; you are the monarch of Manu-descended men; you have regained for the gods in battle, the wealth (carried off by the Asuras)

### || ವಿಶೇಷವಿಷಯಗಳು ||

ಜಾತವೇದಃ—ಜಾತಾನಾಂ ವೇದಿತಃ—ಹುಟ್ಟಿದ ಸಮಸ್ತ ವಸ್ತುಗಳನ್ನು ತಿಳಿದವನು ಅಥವಾ ಸಮಸ್ತರಿಂದ ತಿಳಿಯಲ್ಪಡುವವನು.

ವೈಶ್ವಾನರ—ಸಮಸ್ತ ಮಾನವರ ಹೃದಯದಲ್ಲಿಯೂ ಜಠರಾಗ್ನಿಯರೂಪದಿಂದ ನೆಲಸಿರುವವನು (ಅಗ್ನಿ).

ವರಿವಃ—ಅಸುರೈರಪಹೃತಂ ಧನಂ ಶತ್ರುಗಳಿಂದ ಅಪಹೃತವಾಗಿದ್ದ ಧನವನ್ನು ಯುದ್ಧಮಾಡಿ ಮತ್ತೆ ಅದನ್ನು ದೇವತೆಗಳಿಗೆ ಕೊಡಿಸಿದೆ ಎಂದು ಅಗ್ನಿಯನ್ನು ಪ್ರಾರ್ಥಿಸಲಾಗಿದೆ. ವರಿವ ಶಬ್ದವು ನಿರುಕ್ತದಲ್ಲಿ ಮಘಂ ರೇಕ್ಣಃ ಮೊದಲಾದ ಇಪ್ಪತ್ತೆಂಟು ಧನಪರ್ಯಾಯಪದಗಳಲ್ಲಿ ಪಠಿತವಾಗಿದೆ. (ನಿರು. ೩-೯).

### ॥ ವ್ಯಾಕರಣಪ್ರಕ್ರಿಯಾ ॥

ವೈಶ್ವಾನರ—ಇದರ ಪ್ರಕ್ರಿಯಾ ಇದೇ ಸೂಕ್ತದ ಒಂದನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ. ಪಾದಾದಿಯಲ್ಲಿರುವುದರಿಂದ ಆಷ್ಟಮಿಕ ನಿಘಾತಸ್ವರ ಬರುವುದಿಲ್ಲ. ಆಮಂತ್ರಿತಸ್ಯ ಎಂಬ ಷಾಷ್ಠ ಸೂತ್ರದಿಂದ ಆದ್ಯುದಾತ್ತಸ್ವರ ಬರುತ್ತದೆ.

ರಿರಿಚೇ—ರಿಚಿರ್ ವಿರೇಚನೇ ಧಾತು. ಉಪಸರ್ಗೇಣ ಧಾತ್ವರ್ಥಃ ಬಲಾದನ್ಯಃ ಪ್ರತೀಯತೇ ಎಂಬ ವಚನವನ್ನು ಅನುಸರಿಸಿ ಇಲ್ಲಿ ಪ್ರ ಎಂಬ ಉಪಸರ್ಗ ಸಂಬಂಧದಿಂದ ಹಿಂದೆ ಹೇಳಿದ ಧಾತ್ವರ್ಥಕ್ಕೆ ವಿಪರೀತವಾಗಿ ಅಧಿಕ್ಯಾರ್ಥದಲ್ಲಿ ಇದೆ. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಪ್ರತ್ಯಯಕ್ಕೆ ಏಶಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಕೃಷ್ಟೀನಾಮ್—ಷಷ್ಠಿಯಲ್ಲಿ ಹ್ರಸ್ವನದ್ಯಾಪೋನುಟ್ ಎಂಬುದರಿಂದ ಆಮಿಗೆ ನುಟ್. ನಾಮಿ ಸೂತ್ರದಿಂದ ಅಜಂತಾಂಗಕ್ಕೆ ದೀರ್ಘ. ನಾಮನ್ಯತರಸ್ಯಾಮ್ (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

ಮಾನುಷೀಣಾಮ್—ಮನೋರ್ಜಾತಾವಞ್ಯಾತೌ ಷುಕ್ ಚ ಎಂಬುದರಿಂದ ಅಞ್ ಪ್ರತ್ಯಯಾಂತವಾದುದು ಮಾನುಷ ಶಬ್ದ. ಇದಕ್ಕೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ ಜಾತೇರಸ್ತ್ರೀವಿಷಯಾದಯೋಪಧಾತ್



CC-0. Jangamwadi Math Collection. Digitized by eGangotri

(ಪಾ. ಸೂ. ೪-೧-೬೩) ಎಂಬುದರಿಂದ ಜಾತಿಲಕ್ಷಣವಾದ ಙೀಷ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಶಾರ್ಙ್ಗರವಾದ್ಯಞೋ ಙೀನ್ (ಪಾ. ಸೂ. ೪-೧-೭೩) ಎಂಬುದರಿಂದ ಙೀನ್ ಪ್ರತ್ಯಯ ಬರುತ್ತದೆ. ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ ಷಷ್ಠೀಬಹುವಚನಾಂತರೂಪ. ಇಲ್ಲಿ ನಾಮನ್ಯತರಸ್ಯಾಂ ಎಂಬುದರಿಂದ ನಾಮಿಗೆ ಉದಾತ್ತಸ್ವರವು ಪ್ರಾಪ್ತವಾಗುತ್ತದೆ. ಆದರೆ ಙ್ಯಂತದ ಪರದಲ್ಲಿರುವುದರಿಂದ ಙ್ಯಾಶ್ಛಂದಸಿ ಬಹುಲಂ (ಪಾ. ಸೂ. ೬-೧-೧೭೮) ಎಂಬಲ್ಲಿ ಬಹುಲಗ್ರಹಣದಿಂದ ಇಲ್ಲಿ ಉದಾತ್ತಸ್ವರ ಬರುವುದಿಲ್ಲ.

ಯುಧಾ –ಯುಧ ಸಂಪ್ರಹಾರೇ ಧಾತು. ಸಂಪದಾದಿಯಲ್ಲಿ ಸೇರಿರುವುದರಿಂದ ಸಂಪದಾದಿಭ್ಯಃ ಕ್ವಿಪ್ ಎಂಬುದರಿಂದ ಭಾವಾರ್ಥದಲ್ಲಿ ಕ್ವಿಪ್. ಯುಧ್ ಶಬ್ದವಾಗುತ್ತದೆ. ತೃತೀಯಾ ಏಕವಚನಾಂತರೂಪ ಸಾವೇಕಾಚಸ್ತೃತೀಯಾದಿಃ ಎಂಬುದರಿಂದ ಏಕಾಚಾದುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ವರಿವಃ—ವರಿವಸ್ ಶಬ್ದ ಧನ ಎಂಬ ಅರ್ಥವನ್ನು ತಿಳಿಸುತ್ತದೆ. ಇದು ನಿತ್ಯನಪುಂಸಕಲಿಂಗವಾದುದರಿಂದ ನಬ್ವಿಷಯಸ್ಯ (ಫಿ. ಸೂ. ೨೬) ಎಂಬುದರಿಂದ ಆದ್ಯುದಾತ್ತವಾಗುತ್ತದೆ.

ಚಕರ್ಥ—ಡುಕೃಞ್ ಕರಣೇ ಲಟ್ ಮಧ್ಯಮಪುರುಷಏಕವಚನರೂಪ ಕ್ರಾದಿ. ನಿಯಮದಿಂದ ಥಲಿಗೆ ಇಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಪ್ರ ನೂ ಮಹಿತ್ವಂ ವೃಷಭಸ್ಯ ವೋಚಂ ಯಂ ಪೂರವೋ ವೃತ್ರಹಣಂ
ಸಚಂತೇ ।
ವೈಶ್ವಾನರೋ ದಸ್ಯುಮಗ್ನಿರ್ಜಘನ್ವಾಁ ಅಧೂನೋತ್ಕಾಷ್ಠಾ ಅವ ಶಂ-
ಬರಂ ಭವೇತ್ ॥ ೬ ॥

॥ ಪದಪಾಠಃ ॥

ಪ್ರ । ನು । ಮಹಿತ್ವಂ । ವೃಷಭಸ್ಯ । ವೋಚಂ । ಯಂ । ಪೂರವಃ । ವೃತ್ರಹನಂ ।
ಸಚಂತೇ ।
ವೈಶ್ವಾನರಃ । ದಸ್ಯುಂ । ಅಗ್ನಿಃ । ಜಘನ್ವಾನ್ । ಅಧೂನೋತ್ । ಕಾಷ್ಠಾಃ । ಅವ ।
ಶಂಬರಂ । ಭೇತ್ ॥ ೬ ॥

॥ ಸಾಯಣಭಾಷ್ಯಂ ॥

ಅತ್ರ ವೈಶ್ವಾನರಶಬ್ದೇನ ಮಧ್ಯಮಸ್ಥಾನಸ್ಥೋ ವೈದ್ಯುತೋಽಗ್ನಿರಭಿಧೀಯತೇ । ಪೂರವ ಇತಿ ಮನುಷ್ಯನಾಮ । ಪೂರವೋ ಮನುಷ್ಯಾ ವೃತ್ರಹಣಮಾವರಕಸ್ಯ ಮೇಘಸ್ಯ ಹಂತಾರಂ ಯಂ ವೈಶ್ವಾನರಂ



CC-0. Jangamwadi Math Collection. Digitized by eGangotri

ಸಚಂತೇ । ವರ್ಷಾರ್ಥಿನಃ ಸೇವಂತೇ । ತಸ್ಯ ವೃಷಭಸ್ಯಾಪಾಂ ವರ್ಷಿತುರ್ವೈಶ್ವಾನರಸ್ಯ ಮಹಿತ್ವಂ ಮಾಹಾತ್ಮ್ಯಂ ನು ಕ್ಷಿಪ್ರಂ ಪ್ರ ವೋಚಂ । ಪ್ರಬ್ರವೀಮಿ । ಕಿಂ ತದಿತ್ಯತ ಆಹ । ಅಯಂ ವೈಶ್ವಾನರೋಽಗ್ನಿರ್ದಸ್ಯುಂ ರಸಾನಾಂ ಕರ್ಮಣಾಂ ವೋಪಕ್ಷಯಿಕಾರಂ ರಾಕ್ಷಸಾದಿಕಂ ಜಘನ್ವಾನ್ ಹತವಾನ್ । ತಥಾ ಕಾಷ್ಠಾ ಅಪೋ ವೃಷ್ಟ್ಯುದಕಾನ್ಯಧೂನೋತ್ । ಅಧೋಮುಖಾನ್ಯಪಾತಯತ್ । ಶಂಬರಂ ತಂ ನಿರೋಧಕಾರಿಣಂ ಮೇಘಮವ ಭೇತ್ । ಅವಾಭಿನತ್ ॥ ವೋಚಂ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಲುಙ್. ಸ್ಯತಿವಕ್ತೀತ್ಯಾದಿನಾ ಚ್ಲೇರಙಾದೇಶಃ । ವಚ ಉಮಿತ್ಯುಮಾಗಮಃ । ಗುಣಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಜಘನ್ವಾನ್ । ಹಂತೇರ್ಲಿಟಃ ಕ್ವಸುಃ । ಅಭ್ಯಾಸಾಚ್ಚೇತ್ಯಭ್ಯಾಸಾದುತ್ತರಸ್ಯ ಹಕಾರಸ್ಯ ಘತ್ವಂ । ವಿಭಾಷಾ ಗಮಹನೇತಿ ವಿಕಲ್ಪನಾದಿಡಭಾವಃ । ಭೇತ್ । ಭಿದಿರ್ ವಿದಾರಣೇ । ಲಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ಹಲ್ಙ್ಯಾಬ್ಭ್ಯ ಇತಿ ತಕಾರಸ್ಯ ಲೋಪಃ। ಪೂರ್ವವದಡಭಾವಃ॥ ಅತ್ರ ನಿರುಕ್ತಂ । ಪ್ರ ಬ್ರವೀಮಿ ತನ್ಮಹಿತ್ತ್ವಂ ಮಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ ಪೂರಯಿತವ್ಯಾ ಮನುಷ್ಯಾ ವೃತ್ರಹಣಂ ಮೇಘಹನಂ ಸಚಂತೇ ಸೇವಂತೇ ವರ್ಷಕಾಮಾ ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ರಸಾ ಉಪದಾಸಯತಿ ಕರ್ಮಾಣಿ ತಮಗ್ನಿರ್ವೈಶ್ವಾನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿನಚ್ಛಂಬರಂ ಮೇಘಂ। ನಿ. ೭-೨೩ । ಇತಿ॥ ಅತ್ರೇದಂ ಚಿಂತನೀಯಂ । ಕೋಽಸೌ ವೈಶ್ವಾನರ ಇತಿ । ತತ್ರ ಕೇಚಿದಾಹುಃ । ಮಧ್ಯಮಸ್ಥಾನಸ್ಥೋ ವಾಯುರಿಂದ್ರೋ ವಾ ವೈಶ್ವಾನರಃ । ತಸ್ಯ ಹಿ ವರ್ಷಕರ್ಮಣಾ ಸಂಸ್ತವ ಉಪಪದ್ಯತೇ । ನ ತ್ವಗ್ನೇಃ ಪೃಥಿವೀಸ್ಥಾನತ್ವಾದಿತಿ । ಅನ್ಯೇ ತ್ವೇವಂ ಮನ್ಯಂತೇ । ದ್ಯುಸ್ಥಾನಃ ಸೂರ್ಯೋ ವೈಶ್ವಾನರ ಇತಿ । ಯುಕ್ತಿಂ ಚಾಹುಃ । ಪ್ರಾತಃಸವನಾದೀನಿ ತ್ರೀಣಿ ಸವನಾನಿ ಲೋಕತ್ರಯಾತ್ಮಕಾನಿ । ತತ್ರ ತೃತೀಯಸವನಂ ಪ್ರಾಪ್ತೋ ಯಜಮಾನಃ ಸ್ವರ್ಗಂ ಪ್ರಾಪ್ತ ಇತಿ ಪೃಥಿವ್ಯಾಃ ಪ್ರಚ್ಯುತೋ ಭವೇತ್ । ತತ್ಪ್ರಚ್ಯುತಿಪರಿಹಾರಾಯಾಗ್ನಿಮಾರುತೇಽಂತಿಮೇ ಶಸ್ತ್ರೇ ಹೋತಾ ಸ್ವರ್ಗಾದ್ಭೂಮಿಂ ಪ್ರತ್ಯವರೋಹತಿ । ಕಥಮಿತಿ ತದುಚ್ಯತೇ । ಇತರಶಸ್ತ್ರವತ್ । ಸ್ತೋತ್ರಿಯತೃಚೇನ ಪ್ರಾರಂಭಮಕೃತ್ವಾ ದ್ಯುಸ್ಥಾನಸಂಬಂಧಿನಾ ವೈಶ್ವಾನರೀಯೇಣ ಸೂಕ್ತೇನ ಶಸ್ತ್ರಂ ಪ್ರಾರಭತೇ । ತತೋ ಮಧ್ಯಮಸ್ಥಾನಸಂಬಂಧಿನಂ ರುದ್ರಂ ಮರುತಶ್ಚ ಪ್ರತಿ ತದ್ದೇವತ್ಯಸೂಕ್ತಪಾಠೇನಾವರೋಹತಿ । ತತ್ರ ಪೃಥಿವೀಸ್ಥಾನಮಗ್ನಿಂ ।ಯದ್ಯತ್ರ ವೈಶ್ವಾನರಃ ಸೂರ್ಯೋ ನ ಸ್ಯಾತ್ ತದಾನೀಮವರೋಹೋ ನೋಪಪದ್ಯತೇ। ತದೇತನ್ಮತದ್ವಯಮಪ್ಯನುಪಪನ್ನಂ । ಅಯಮೇವಾಗ್ನಿರ್ವೈಶ್ವಾನರಃ । ಕುತಃ । ವೈಶ್ವಾನರಶಬ್ದನಿರ್ವಚನಾನುರೋಧಾತ್ । ವಿಶ್ವೇಷಾಂ ನರಾಣಾಂ ಲೋಕಾಂತರಂ ಪ್ರತಿ ನೇತೃತಯಾ ಸಂಬಂಧೀ ವೈಶ್ವಾನರಃ । ತಥಾ ಚಾಮ್ನಾತಂ । ವೈಶ್ವಾನರ ಪುತ್ರಃ ಪಿತ್ರೇ ಲೋಕಕೃಜ್ಜಾತವೇದೋ ವಹೇಮಂ ಸುಕೃತಾಂ ಯತ್ರ ಲೋಕಾ ಇತಿ । ಯದ್ವಾ। ವಿಶ್ವೇ ಸರ್ವೇ ನರಾ ಏನಮಗ್ನಿಂ ಯಜ್ಞಾದೌ ಪ್ರಣಯಂತೀತಿ ತತ್ಸಂಬಂಧಾದ್ವೈಶ್ವಾನರಃ । ಯದ್ವಾ । ವಿಶ್ವಾನ್ ಸರ್ವಾನ್ಪ್ರಾಣಿನಃ ಪ್ರತ್ಯೃತೋ ಗಚ್ಛತ ಇತಿ ವೈಶ್ವಾನರೌ ಮಧ್ಯಮೋತ್ತಮೌ। ಋಗತಾವಿತ್ಯಸ್ಮಾತ್ಪಚಾದ್ಯಚ್ । ಲುಗಭಾವಶ್ಛಾಂದಸಃ । ತಾಭ್ಯಾಮುತ್ಪನ್ನತ್ವಾದಯಮಗ್ನಿರ್ವೈಶ್ವಾನರಃ । ವೈದ್ಯುತೋಽಗ್ನಿರ್ಹಿ ಮಧ್ಯಮಸಕಾಶಾಜ್ಜಾಯತೇ । ಅಶನಿಪತನಾನಂತರಮಯಮೇವ ಪಾರ್ಥಿವೋಽಗ್ನಿಃ ಸಂಪದ್ಯತೇ । ಆದಿತ್ಯಸಕಾಶಾದಪಿ ಘರ್ಮಕಾಲೇ ಸೂರ್ಯಕಾಂತಾದಿಮಣಿಷ್ವಗ್ನೇರುತ್ಪತ್ತಿಃ ಪ್ರಸಿದ್ಧಾ । ತಸ್ಮಾನ್ನಾಮನಿರ್ವಚನಾನುರೋಧೇನಾಯಮೇವಾಗ್ನಿರ್ವೈಶ್ವಾನರ ಇತ್ಯೇತದುಪಪನ್ನಂ । ಅಸ್ಯಾಪಿ ವರ್ಷಕರ್ಮಣಾ ಸ್ತುತಿಃ ಸಂಭವತಿ । ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ । ಆದಿತ್ಯಾಜ್ಜಾಯತೇ ವೃಷ್ಟಿರ್ವೃಷ್ಟೇರನ್ನಂ ತತಃ ಪ್ರಜಾಃ । ಮನು. ೩-೭೬ । ಇತಿ ಸ್ಮರಣಾತ್ । ಪ್ರತ್ಯವರೋಹೇಽಪಿ ನ ತರ್ಕ-



CC-0. Jangamwadi Math Collection. Digitized by eGangotri

ವ್ಯಃ । ತೃತೀಯಸವನಸ್ಯ ಭಕ್ತಿಸ್ಸ್ವರ್ಗತ್ವಾತ್ । ಏತತ್ಸರ್ವಂ ಯಾಸ್ಕೇನ ವೈಶ್ವಾನರಃ ಕಸ್ಮಾದಿತ್ಯಾದಿನಾ ಬಹುಧಾ ಪ್ರಪಂಚಿತಂ । ನಿ. ೭-೨೧ । ಅತ್ರ ಯದನುಕ್ತಂ ತತ್ಸರ್ವಂ ತತ್ರೈವಾನುಸಂಧೇಯಂ ॥

|| ಪ್ರತಿಪದಾರ್ಥ ||

ಪೂರವಃ— ಮಾನವರು । ವೃತ್ರಹಣಂ—(ಲೋಕವನ್ನೆಲ್ಲ) ಆವರಿಸಿದ ಮೇಘದ ಭೇದಕನಾದ । ಯಂ—ಯಾವ ವೈಶ್ವಾನರಾಗ್ನಿಯನ್ನು । ಸಚಂತೇ—(ಮಳೆಯನ್ನು ಅಪೇಕ್ಷಿಸಿ) ಸೇವಿಸುತ್ತಾರೋ । ವೃಷಭಸ್ಯ—ಮಳೆಯನ್ನು ಸುರಿಸುವ ಆ ಅಗ್ನಿಯ । ಮಹಿತ್ವಂ—ಮಾಹಾತ್ಮ್ಯವನ್ನು । ನು—ಜಾಗ್ರತೆಯಾಗಿಯೇ । ಪ್ರ ವೋಚಂ— ಪಠಿಸುತ್ತೇನೆ । ವೈಶ್ವಾನರಃ ಅಗ್ನಿಃ—ವೈಶ್ವಾನರರೂಪದಲ್ಲಿರುವ ಅಗ್ನಿಯು। ದಸ್ಯುಂ—ನೀರನ್ನು ಅಥವಾ ಕರ್ಮಗಳನ್ನು ಕದಿಯುವ ರಾಕ್ಷಸಾದಿಗಳನ್ನು । ಜಘನ್ವಾನ್—ಕೊಂದನು (ಹಾಗೆಯೇ) । ಕಾಷ್ಠಾಃ— ಮಳೆಯ ನೀರುಗಳನ್ನು । ಅಧೂನೋತ್—ಕೆಳಕ್ಕೆ ಬೀಳಿಸಿದನು । ಶಂಬರಂ—(ನೀರನ್ನು ತಡೆದಿರುವ) ಮೇಘವನ್ನು । ಅವ ಭೇತ್— ಸೀಳಿದನು ॥

|| ಭಾವಾರ್ಥ ||

ಲೋಕವನ್ನೆಲ್ಲ ಆವರಿಸಿದ ಮೇಘದ ಭೇದಕನಾದ ಯಾವ (ವಿದ್ಯುದ್ರೂಪದಲ್ಲಿರುವ) ವೈಶ್ವಾನರಾಗ್ನಿಯನ್ನು ಮಳೆಯನ್ನಪೇಕ್ಷಿಸಿ ಮಾನವರೆಲ್ಲ ಸೇವಿಸುತ್ತಾರೋ ಆ ಅಗ್ನಿಯು ಮಳೆಯನ್ನು ಸುರಿಸುವುದರಿಂದ ಅವನ ಮಾಹಾತ್ಮ್ಯವನ್ನು ಜಾಗ್ರತೆಯಾಗಿಯೇ ಪಠಿಸುತ್ತೇನೆ. ಆ ಅಗ್ನಿಯು ನೀರನ್ನು ಕದಿಯುವ ರಾಕ್ಷಸಾದಿಗಳನ್ನು ಕೊಂದನು. ಮತ್ತು ನೀರನ್ನು ತಡೆದಿರುವ ಮೇಘವನ್ನು ಸೀಳಿ ಮಳೆಯ ನೀರುಗಳನ್ನು ಕೆಳಕ್ಕೆ ಬೀಳಿಸಿದನು.

## English Translation.

I extol the greatness of that showerer of rain whom men celebrate as the slayer of Vritra ; Vaiswanara, Agni killed the stealer (of the waters) and sent them down (upon earth), and clove the (obstructing) cloud.

|| ವಿಶೇಷ ವಿಷಯಗಳು ||

ಪೂರವಃ—ಮನುಷ್ಯಾಃ ಪೂರುಶಬ್ದವನ್ನು ಮನುಷ್ಯವಾಚಕವನ್ನಾಗಿ ನಿರುಕ್ತದಲ್ಲಿ ಪಾಠಮಾಡಿದ್ದಾರೆ. (ನಿರು. ೩-೮) ಇಲ್ಲಿ ಮನುಷ್ಯನಾಮಾನ್ಯುತ್ತರಾಣಿ ಪಂಚವಿಂಶತಿಃ ಎಂದು ಹೇಳುತ್ತಾ ಇಪ್ಪತ್ತೈದು ಶಬ್ದಗಳನ್ನು ಮನುಷ್ಯಪರ್ಯಾಯಪದಗಳನ್ನಾಗಿ ಹೇಳಿದ್ದಾರೆ.

ವೈಶ್ವಾನರಃ—ಹಿಂದೆ ಹೇಳಿದಂತೆ ವೈಶ್ವಾನರ ಶಬ್ದಕ್ಕೆ ವಿಶ್ವೇ ಸರ್ವೇ ನರಾ ಏನಮಗ್ನಿಂ ಯಜ್ಞಾದೌ ಪ್ರಣಯಂತೀತಿ ವಿಶ್ವೇನರಾಃ ತತ್ಸಂಬಂಧಾದ್ವೈಶ್ವಾನರಃ ಎಂಬುದಾಗಿಯೂ ವಿಶ್ವೇಷಾಂ ನರಾಣಾಂ ಲೋಕಾಂತರಂ ಪ್ರತಿ ನೇತೃತಯಾ ಸಂಬಂಧೀ ವೈಶ್ವಾನರಃ ಎಂದೂ ವಿಶ್ವಾನ್ ಸರ್ವಾನ್ ಪ್ರಾಣಿನಃ



CC-0. Jangamwadi Math Collection. Digitized by eGangotri

**ಪ್ರತ್ಯೃತೋ ಗಚ್ಛತೆ ಇತಿ ವೈಶ್ವಾನರೌ, ಮಧ್ಯಮೋತ್ತಮೌ, ತಾಭ್ಯಾಮುತ್ಪನ್ನಃ ವೈಶ್ವಾನರಃ** ಎಂಬುದಾಗಿಯೂ ಮೂರು ರೀತಿಯಿಂದ ವೈಶ್ವಾನರ ಶಬ್ದವನ್ನು ನಿರ್ವಚನಮಾಡಿದ್ದಾರೆ. ಈ ಋಕ್ಕಿನಲ್ಲಿ ಮೇಘಾವರಕನಾದ ವೃತ್ರನನ್ನು ಕೊಂದವನೂ, ವೃಷ್ಟಿಪ್ರದನೂ, ರಾಕ್ಷಸನಾಶಕನೂ ಆದ ವೈಶ್ವಾನರನ ಮಹಿಮೆಯನ್ನು ವರ್ಣಿಸಿರುವ ಭಾವವು ಉಕ್ತವಾಗಿದೆ. ಇದೇ ತಾತ್ಪರ್ಯವನ್ನು ಸೂಚಿಸುವ ನಿರುಕ್ತವು ಈರೀತಿ ಇದೆ. **ಪ್ರಬ್ರವೀಮಿ ತನ್ಮಹಿತ್ವಂ ಮಹಾಭಾಗ್ಯಂ ವೃಷಭಸ್ಯ ವರ್ಷಿತುರಪಾಂ ಯಂ ಪೂರವಃ ಪೂರಯಿತವ್ಯಾ ಮನುಷ್ಯಾ ವೃತ್ರಹಣಂ ಮೇಘಹನಂ ಸಚಂತೇ ಸೇವಂತೇ ವರ್ಷಕಾಮಾ ದಸ್ಯುರ್ದಸ್ಯತೇಃ ಕ್ಷಯಾರ್ಥಾದುಪದಸ್ಯಂತ್ಯಸ್ಮಿನ್ ರಸಾ ಉಪದಾಸಯತಿ ಕರ್ಮಾಣಿ ತಮಗ್ನಿರ್ವೈಶ್ವಾನರೋ ಘ್ನನ್ನವಾಧೂನೋದಪಃ ಕಾಷ್ಠಾ ಅಭಿನಚ್ಛಂಬರಂ ಮೇಘಂ** (ನಿರು. ೭-೨೦) ಇದರ ಮೇಲೆ ಇಲ್ಲಿ ಹೇಳಲ್ಪಟ್ಟಿರುವ ವೈಶ್ವಾನರನು ಯಾರು ಎಂದು ವಿಚಾರಮಾಡಿದ್ದಾರೆ. ಆಗ ಕೆಲವರು ಮಧ್ಯಮಸ್ಥಾನದಲ್ಲಿರುವ ವಾಯುವನ್ನೋ, ಇಂದ್ರನನ್ನೋ ವೈಶ್ವಾನರನೆನ್ನಬೇಕು ಎಂದಿರುವರು. ಏಕೆಂದರೆ ಅವರಿಬ್ಬರಿಗೆ ವರ್ಷಕರ್ಮದಲ್ಲಿ ಅಧಿಕಾರವಿರುವುದು. ವೃಷ್ಟಿಪ್ರಾಪ್ತಿಯ ವಿಷಯದಲ್ಲಿ ಸಾಮಾನ್ಯವಾಗಿ ಅವರನ್ನೇ ಸ್ತುತಿಸಬೇಕು. ಅಗ್ನಿಗೆ ಪೃಥಿವಿಯನ್ನೇ ಸ್ಥಾನವನ್ನಾಗಿ ಹೇಳಿರುವುದರಿಂದ ಅದು ಸಾಧ್ಯವಿಲ್ಲ ಎಂದು ಸಮರ್ಥಿಸಿರುವರು. ಮತ್ತೆ ಕೆಲವರು ಇಲ್ಲಿ ಹೇಳಲ್ಪಟ್ಟಿರುವ ವೈಶ್ವಾನರ ಶಬ್ದವು ಸೂರ್ಯನನ್ನು ಸೂಚಿಸುವುದು ಎಂದು ಹೇಳುತ್ತಾರೆ. ಏಕೆಂದರೆ, ಪ್ರಾತಸ್ಸವನ, ಮಾಧ್ಯಂದಿನಸವನ, ಸಾಯಂಸವನಗಳನ್ನು ಕ್ರಮವಾಗಿ, ಭೂಲೋಕ, ಭುವರ್ಲೋಕ, ಸ್ವರ್ಗಲೋಕಗಳೆಂದು ನಿರೂಪಿಸಿ, ಆಯಾಸವನಗಳ ಅನುಷ್ಠಾನದಿಂದ ಆಯಾ ಲೋಕಗಳು ದೊರೆಯುವವೆಂದೂ ತೀರ್ಮಾನಿಸಿದ್ದಾರೆ. ಆಗ ಸಾಯಂಸವನಾನುಷ್ಠಾನದಿಂಡ ಸ್ವರ್ಗಪ್ರಾಪ್ತಿಯಾಗುವುದು. ಮತ್ತು ಭೂಮಿಯಿಂದ ಸಂಪೂರ್ಣವಾಗಿ ಚ್ಯುತಿಯೊದಗುವುದು. ಅಂತಹ ಪ್ರಚ್ಯುತಿಪರಿಹಾರಕ್ಕಾಗಿ ಅಗ್ನಿಮಾರುತಾತ್ಮಕವಾದ ಕೊನೆಯ ಶಸ್ತ್ರದಿಂದ ಮತ್ತೆ ಭೂಮಿಗೆ ಬರಲು ಆ ಶಸ್ತ್ರಮಂತ್ರವನ್ನು ಪಠಿಸುವರು. ಆ ಶಸ್ತ್ರಮಂತ್ರವು ವೈಶ್ವಾನರ ಸೂಕ್ತದಿಂದ ಆರಂಭವಾಗುವುದು. ಅನಂತರ ಮಧ್ಯಮಸ್ಥಾನ ಸಂಬಂಧವಾದ ರುದ್ರದೇವತೆ ಮತ್ತು ಮರುದ್ದೇವತೆಯರನ್ನು ತದ್ದೇವತಾಕವಾದ ಸೂಕ್ತಪಾಠದಿಂದ ಅವರೋಹಿಸುವರು. ಅಗ್ನಿಗೆ ಪೃಥಿವೀ ಸ್ಥಾನವಿರುವುದರಿಂದ, ಇಲ್ಲಿ ವೈಶ್ವಾನರಶಬ್ದಕ್ಕೆ ಸೂರ್ಯವಾಚಕತ್ವವಿಲ್ಲದಿದ್ದರೆ, ಪೃಥಿವಿಗೆ ಅವರೋಹಣವು ಹೇಗೆತಾನೆ ಸಂಬಂಧಿಸೀತು? ಎಂದು ಸಿದ್ಧಾಂತಮಾಡಿ ವೈಶ್ವಾನರ ಶಬ್ದಕ್ಕೆ ಸೂರ್ಯನೆಂದು ಅರ್ಥಮಾಡಿರುವರು. ಆದರೆ ಸಾಯಣಚಾರ್ಯರ ಅಭಿಪ್ರಾಯವು ಮಾತ್ರ ವೈಶ್ವಾನರ ಶಬ್ದಕ್ಕೆ ಮಧ್ಯಮಸ್ಥಾನಗತವಾದ ವಿದ್ಯುತ್ಸಂಬಂಧವಾದ ಅಗ್ನಿ ಎಂದಾಗಿದೆ.

**ಶಂಬರಂ—ತನ್ನಿರೋಧಕಾರಿಣಂ ಮೇಘಂ**—ನೀರನ್ನು ತಡೆಗಟ್ಟುವ ಮೇಘ ಎಂದರ್ಥ.

|| ವ್ಯಾಕರಣಪ್ರಕ್ರಿಯಾ ||

**ವೋಚಮ್**—ವಚ ಪರಿಭಾಷಣೇ ಧಾತು. **ಛಂದಸಿಲುಙ್‌ಲಙ್‌ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಲುಙ್. ಉತ್ತಮಪುರುಷ ಏಕವಚನದಲ್ಲಿ ಮಿಪ್ ಪ್ರತ್ಯಯ. **ತಸ್‌ಥಸ್‌ಥಮಿಪಾಂ**—ಎಂಬುದರಿಂದ ಅದಕ್ಕೆ ಅಮಾದೇಶ. **ಚ್ಲಿಲುಙಿ** ಎಂಬುದರಿಂದ ಪ್ರಾಪ್ತವಾದ ಚ್ಲಿಗೆ **ಅಸ್ಯತಿವಕ್ತಿಖ್ಯಾತಿಭ್ಯೋಙ್** (ಪಾ. ಸೂ. ೩-೧-೫೨) ಎಂಬುದರಿಂದ ಅಙಾದೇಶ. **ವಚಉಮ್** (ಪಾ. ಸೂ. ೭-೪-೨೦) ಎಂಬುದರಿಂದ ಧಾತುವಿಗೆ ಉಮಾಗಮ. **ಮಿದಚೋಂತ್ಯಾತ್ಪರಃ** ಎಂಬುದರಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ಆಗ



CC-0. Jangamwadi Math Collection. Digitized by eGangotri

ಗುಣ ಏಕಾದೇಶವಾಗಿ ಬರುತ್ತದೆ. ಬಹುಲಂ ಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ವೋಚಮ್ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಚಂತೇ— ಷಚ ಸೇಚನೇ ಸೇವನೇ ಚ ಧಾತು ಭ್ವಾದಿ. ಲಟ್ ಪ್ರಥಮಪುರುಷ ಬಹುವಚನರೂಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಶಪ್, ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಜಘನ್ವಾನ್—ಹನ ಹಿಂಸಾಗತ್ಯೋಃ ಧಾತು. ಕ್ವಸುಶ್ಚ ಎಂಬುದರಿಂದ ಲಿಟಿಗೆ ಕ್ವಸುರಾದೇಶ. ಅದನ್ನು ನಿಮಿತ್ತೀಕರಿಸಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಕುಹೋಶ್ಚುಃ ಎಂಬುದರಿಂದ ಚುತ್ವ. ಅಭಾಸಾಚ್ಚ (ಪಾ. ಸೂ. ೭-೩-೫೫) ಎಂಬಾದರಿಂದ ಅಭ್ಯಾಸದ ಪರದಲ್ಲಿರುವ ಧಾತು ಹಕಾರಕ್ಕೆ ಕುತ್ವ. ಆಂತರತಮ್ಯದಿಂದ ಘಕಾರಾದೇಶ. ವಿಭಾಷಾ ಗಮಹನ—(ಪಾ. ಸೂ. ೭-೨-೬೮) ಎಂಬುದರಿಂದ ವಿಕಲ್ಪ ಹೇಳಿರುವುದರಿಂದ ವಕಾರಕ್ಕೆ ಇಡಾಗಮ ಬರುವುದಿಲ್ಲ. ಜಘನ್ವಸ್ ಶಬ್ದವಾಗುತ್ತದೆ. ಪ್ರಥಮಾ ಸು ಪರವಾದಾಗ ಅತ್ವಸಂತಸ್ಯಚಾಧಾತೋಃ ಎಂಬುದರಿಂದ ಉಪಧಾದೀರ್ಘ. ಉಗಿತ್ತಾದುದರಿಂದ ಉಗಿದಚಾಂ—ಸೂತ್ರದಿಂದ ನುಮಾಗಮ. ಹಲ್ಙ್ಯಾಭ್ಯೋ— ಸೂತ್ರದಿಂದ ಸುಲೋಪ. ಸಂಯೋಗಾಂತಸ್ಯಲೋಪಃ ಎಂಬುದರಿಂದ ವಸುವಿನ ಸಕಾರಕ್ಕೆ ಲೋಪ. ಜಘನ್ವಾನ್+ಅಧೂನೋತ್ ಎಂದಿರುವಾಗ ದೀರ್ಘಾದಟಿ ಸಮಾನಪಾದೇ ಎಂಬುದರಿಂದ ರುತ್ವ. ಆತೋಽಟಿನಿತ್ಯಂ ಎಂಬುದರಿಂದ ಪೂರ್ವಪದ ಆಕಾರಕ್ಕೆ ಅನುನಾಸಿಕತ್ವ.

ಅಧೂನೋತ್—ಧೂಞ್ ಕಂಪನೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇತಶ್ಚ ಸೂತ್ರದಿಂದ ಇಕಾರಲೋಪ. ಸ್ವಾದಿಭ್ಯಃಶ್ನುಃ ಸೂತ್ರದಿಂದ ಶ್ನು ವಿಕರಣ. ಪ್ರತ್ಯಯನಿಮಿತ್ತವಾಗಿ ಅದಕ್ಕೆ ಗುಣ. ಅಂಗಕ್ಕೆ ಅಡಾಗಮ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

ಭೇತ್— ಭಿದಿರ್ ವಿದಾರಣೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಇಕಾರಲೋಪ. ಬಹುಲಂಛಂದಸಿ ಎಂಬುದರಿಂದ ವಿಕರಣಕ್ಕೆ (ಶ್ನಮ್) ಲುಕ್. ಪ್ರತ್ಯಯನಿಮಿತ್ತವಾಗಿ ಪುಗಂತಲಘೂಪಧಸ್ಯಚ ಎಂಬುದರಿಂದ ಧಾತುವಿನ ಉಪಧೆಗೆ ಗುಣ. ಭೇದ್+ತ್ ಎಂದಿರುವಾಗ ಹಲ್ಙ್ಯಾಭ್ಯೋ ಸೂತ್ರದಿಂದ ಪ್ರತ್ಯಯಕ್ಕೆ ಲೋಪ. ಬಹುಲಂಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ವೈಶ್ವಾನರಃ— ಇದಕ್ಕೆ ಹಿಂದೆ ಒಂದು ಪ್ರಕ್ರಿಯಾ ತೋರಿಸಿದೆ. ಅರ್ಥಸ್ವಾರಸ್ಯದಿಂದ ಇನ್ನೊಂದು ರೀತಿಯಿಂದ ನಿರ್ವಚನ ಮಾಡಬಹುದು. ವಿಶ್ವಾನ್ ಸರ್ವಾನ್ ಪ್ರಾಣಿನಃ ಪ್ರತಿ ಋತೋ ಗಚ್ಛತಃ ಇತಿ ವಿಶ್ವಾನರೌ ಮಧ್ಯಮೋತ್ತಮೌ | ಋ ಗತೌ ಧಾತು ನಂದಿಗ್ರಹಪಚಾದಿಭ್ಯಃ—ಎಂಬುದರಿಂದ ಅಚ್ ಪ್ರತ್ಯಯ. ವಿಶ್ವಾನ್ ಎಂಬಲ್ಲಿ ವೃತ್ತಿಯಲ್ಲಿ ಛಾಂದಸವಾಗಿ ಲುಕ್ ಬರುವುದಿಲ್ಲ. ಪ್ರತ್ಯಯನಿಮಿತ್ತವಾಗಿ ಧಾತುವಿಗೆ ಗುಣ. ತಾಭ್ಯಾಮುತ್ಪನ್ನತ್ವಾತ್ ಅಯಮಗ್ನಿರ್ವೈಶ್ವಾನರಃ ಅಣ್ ಪ್ರತ್ಯಯ ಮಾಡಿದಾಗ ಯಸ್ಯೇತಿಚ ಎಂಬುದರಿಂದ ಅಕಾರಕ್ಕೆ ಲೋಪ. ತದ್ಧಿತೇಷ್ವಚಾಮಾದೇಃ ಎಂಬುದರಿಂದ ಆದಿವೃದ್ಧಿ. ವೈಶ್ವಾನರ ಎಂದು ರೂಪವಾಗುತ್ತದೆ.





CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ವೈಶ್ವಾನರೋ ಮಹಿಮ್ನಾ ವಿಶ್ವಕೃಷ್ಟಿರ್ಭರದ್ವಾಜೇಷು ಯಜತೋ ವಿಭಾವಾ ।
ಶಾತವನೇಯೇ ಶತಿನೀಭಿರಗ್ನಿಃ ಪುರುಣೀಥೇ ಜರತೇ ಸೂನೃತಾವಾನ್ ॥ ೭ ॥

ಪದಪಾಠಃ

ವೈಶ್ವಾನರಃ । ಮಹಿಮ್ನಾ । ವಿಶ್ವಽಕೃಷ್ಟಿಃ । ಭರತ್ಽವಾಜೇಷು । ಯಜತಃ । ವಿಽಭಾವಾ ।
ಶಾತಽವನೇಯೇ । ಶತಿನೀಭಿಃ । ಅಗ್ನಿಃ । ಪುರುಽನೀಥೇ । ಜರತೇ । ಸೂನೃತಾಽವಾನ್ ॥ ೭ ॥

॥ ಸಾಯಣಭಾಷ್ಯ ॥

ವೈಶ್ವಾನರೋಽಗ್ನಿರ್ಮಹಿಮ್ನಾ ಮಹತ್ತ್ವೇನ ವಿಶ್ವಕೃಷ್ಟಿಃ । ಕೃಷ್ಟಿರಿತಿ ಮನುಷ್ಯನಾಮ । ವಿಶ್ವೇ ಸರ್ವೇ ಮನುಷ್ಯಾ ಯಸ್ಯ ಸ್ವಭೂತಾಃ ಸ ತಥೋಕ್ತಃ । ಭರದ್ವಾಜೇಷು ಪುಷ್ಟಿಕರಹವಿರ್ಲಕ್ಷಣಾನ್ನವತ್ಸು ಯಾಗೇಷು । ಯದ್ವಾ । ಏತತ್ಸಂಜ್ಞೇಷ್ವೃಷಿಷು ಯಜತೋ ಯಷ್ಟವ್ಯೋ ವಿಭಾವಾ ವಿಶೇಷೇಣ ಪ್ರಕಾಶಯಿತಾ ಸೂನೃತಾವಾನ್ । ಸೂನೃತಾ ಪ್ರಿಯಾ ಸತ್ಯಾ ವಾಕ್ । ತದ್ಯುಕ್ತಃ । ಏವಂಭೂತೋಽಗ್ನಿಃ ಶಾತವನೇಯೇ । ಶತಸಂಖ್ಯಾಕಾನ್ ಕ್ರತೂನ್ವನತಿ ಸಂಭಜತ ಇತಿ ಶತವನಿಃ । ತಸ್ಯ ಪುತ್ರಃ ಶಾತವನೇಯಃ । ತಸ್ಮಿನ್ ಪುರುಣೀಥೇ ಬಹೂನಾಂ ನೇತರ್ಯೇತತ್ಸಂಜ್ಞಕೇ ರಾಜನಿ ಚ ಶತಿನೀಭಿರ್ಬಹುಭಿಃ ಸ್ತುತಿಭಿರ್ಜರತೇ । ಸ್ತೂಯತೇ ॥ ಭರದ್ವಾಜೇಷು । ಭರಂತಿ ಪೋಷಯಂತಿ ಭೋಕ್ತ್ರ್ನಿತಿ ಭರಂತಃ । ತಾದೃಶಾ ವಾಜಾ ಯೇಷು । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಯಜತಃ । ಭೃಮೃದೃಶಿಯಜಿಪರ್ವಪಚ್ಯಮಿತಮಿನಮಿಹರ್ಯೇಭ್ಯೋಽತಚ್ । ಉ. ೩-೧೧೦ । ಇತಿ ಯಜತೇರತಚ್ಪ್ರತ್ಯಯಃ । ವಿಭಾವಾ । ಭಾ ದೀಪ್ತೌ । ಆತೋ ಮನಿನ್ನಿತಿ ವನಿಪ್ । ತಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ । ಶಾತವನೇಯೇ । ಇನ್ಸರ್ವಧಾತುಭ್ಯ ಇತೀನ್ಪ್ರತ್ಯಯಃ ಶತವನಿಶಬ್ದಃ । ಇತಶ್ಚಾನಿಞಃ । ಪಾ. ೪-೧-೧೨೨ । ಇತಿ ಢಕ್ । ಕಿತ ಇತ್ಯಂತೋದಾತ್ತತ್ವಂ । ಶತಿನೀಭಿಃ । ಶತಶಬ್ದಾನ್ಮತ್ವರ್ಥೀಯ ಇನಿಃ । ಋನ್ನೇಭ್ಯ ಇತಿ ಙೀಪ್ । ಪುರುಣೀಥೇ । ಪೂರ್ವಪದಾತ್ಸಂಜ್ಞಾಯಾಮಗಃ । ಪಾ. ೮-೪-೩ । ಇತಿ ಣತ್ವಂ । ಜರತೇ । ವ್ಯತ್ಯಯೇನ ಕರ್ಮಣಿ ಕರ್ತೃಪ್ರತ್ಯಯಃ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

**ವೈಶ್ವಾನರಃ**—ವೈಶ್ವಾನರರೂಪದಲ್ಲಿರುವ ಅಗ್ನಿಯು | **ಮಹಿಮ್ನಾ**—ತನ್ನ ಮಹತ್ತ್ವದಿಂದ | **ವಿಶ್ವಕೃಷ್ಟಿಃ**—ಸಕಲಮನುಷ್ಯರಲ್ಲಿಯೂ ಐಕ್ಯನಾಗಿದ್ದಾನೆ (ಮತ್ತು) | **ಭರದ್ವಾಜೇಷು**—ಪುಷ್ಟಿಕರವಾದ ಹವಿಸ್ಸಿನ ಅನ್ನವುಳ್ಳಯಾಗಗಳಲ್ಲಿ ಅಥವಾ ಭರದ್ವಾಜಋಷಿಗಳಲ್ಲಿ | **ವಿಭಾವಾ**—ಅತ್ಯಂತ ಪ್ರಕಾಶಕನಾಗಿಯೂ | **ಯಜತಃ**—ಪೂಜ್ಯನಾಗಿಯೂ | **ಸೂನೃತಾವಾನ್**—ಪ್ರಿಯವಾದ ಮತ್ತು ಸತ್ಯವಾದ ವಾಕ್ಕುಳ್ಳವನಾಗಿಯೂ ಇರುವ | **ಅಗ್ನಿಃ**—ಅಗ್ನಿಯು | **ಶಾತವನೇಯೇ**—ಶಾತವನಿಯಮಗನಲ್ಲಿಯೂ | **ಪುರುಣೀಥೇ**—ಅನೇಕರಿಗೆ ಮಾರ್ಗದರ್ಶಕನಾದ ಪುರುನೀಥನೆಂಬ ರಾಜನಲ್ಲಿಯೂ | **ಶತಿನೀಭಿಃ**—ಅನೇಕ ಸ್ತೋತ್ರಗಳಿಂದ | **ಜರತೇ**—ಸ್ತುತಿಸಲ್ಪಡುತ್ತಾನೆ ||

| ಭಾವಾರ್ಥ |

ವೈಶ್ವಾನರಾಗ್ನಿಯು ಸಕಲ ಮಾನವರಲ್ಲಿಯೂ ತನ್ನ ಮಹತ್ತ್ವದಿಂದ ಸಂಬಂಧಿಸಿ ಐಕ್ಯನಾಗಿದ್ದಾನೆ. ಪುಷ್ಟಿಕರವಾಗಿಯೂ ಹವಿಸ್ಸಿನರೂಪದಲ್ಲಿಯೂ ಇರುವ ಅನ್ನವುಳ್ಳ ಯಾಗಗಳಲ್ಲಿ ಅತ್ಯಂತ ಪ್ರಕಾಶಕನಾಗಿಯೂ, ಪೂಜ್ಯನಾಗಿಯೂ, ಪ್ರಿಯವಾದ ಮತ್ತು ಸತ್ಯವಾದ ವಾಕ್ಕುಳ್ಳವನಾಗಿಯೂ ಇರುವ ಅಗ್ನಿಯು ಶಾತವನಿಯ ಮಗನಲ್ಲಿಯೂ, ಅನೇಕರಿಗೆ ಮಾರ್ಗದರ್ಶಕನಾದ ಪುರುನೀಥನೆಂಬ ರಾಜನಲ್ಲಿಯೂ ಅನೇಕ ಸ್ತೋತ್ರಗಳಿಂದ ಸ್ತುತಿಸಲ್ಪಡುತ್ತಾನೆ.

## English Translation.

Vaiswanara by his magnitude exists in all men, and is worthy of being adored in sacrifices of nourishing foods; Agni, endowed with rays and truthful speech, is praised with many commendations, by Purunitha, and the son of Satavani.

|| ವಿಶೇಷ ವಿಷಯಗಳು ||

**ವಿಶ್ವಕೃಷ್ಟಿಃ**—ವಿಶ್ವೇ ಸರ್ವೇ ಮನುಷ್ಯಾ ಯಸ್ಯ—ಇಲ್ಲಿ ಕೃಷ್ಟಿಶಬ್ದಕ್ಕೆ ಮನುಷ್ಯ ಎಂದರ್ಥ. ನಿರುಕ್ತದಲ್ಲಿ ಕೃಷ್ಟಿ ಶಬ್ದವನ್ನು ಮನುಷ್ಯವಾಚಕವನ್ನಾಗಿ ಪಾಠಮಾಡಿದ್ದಾರೆ.

**ಭರದ್ವಾಜೇಷು**—ಪುಷ್ಟಿಯನ್ನುಂಟುಮಾಡುವ ಹವಿಸ್ಸಿನ ಲಕ್ಷಣದಿಂದ ಕೂಡಿದ ಅನ್ನವುಳ್ಳ ಯಾಗ, ಅಥವಾ ಭರದ್ವಾಜಋಷಿ ಪರಂಪರೆಯಲ್ಲಿ ಎಂದು ಎರಡು ರೀತಿಯಲ್ಲಿಯೂ ಅರ್ಥಮಾಡಿದ್ದಾರೆ. ಭರಂತಿ, ಪೋಷಯಂತಿ, ಭೋಕ್ತೄನ್ ಇತಿ ಭರಂತಃ, ತಾದೃಶಾ ವಾಜಾ ಯೇಷು ಭರದ್ವಾಜಾಃ ಎಂದು ಯಾಗವಿಷಯಕವಾದ ಅರ್ಥದಲ್ಲಿ ವ್ಯುತ್ಪತ್ತಿಯನ್ನು ಕಲ್ಪಿಸಿದ್ದಾರೆ.

**ವಿಭಾವಾ**—ಭಾ ದೀಪ್ತೌ ಎಂಬ ಧಾತುವಿನಿಂದ ನಿಷ್ಪನ್ನವಾದ ರೂಪ ಇದು. ವಿಶೇಷವಾಗಿ ಪ್ರಕಾಶಿಸುವುದು ಎಂದು ಇದರ ವಿಶೇಷಾರ್ಥ.



CC-0. Jangamwadi Math Collection. Digitized by eGangotri

ಸೂನೃತಾವಾನ್—ಸೂನೃತಾ ಪ್ರಿಯಾ ಸತ್ಯಾ ವಾಕ್ ತದ್ಯುಕ್ತಃ—ಪ್ರಿಯವಾದ ಮತ್ತು ಸತ್ಯವಾದ ಮಾತುಗಳುಳ್ಳವನು. ಅಗ್ನಿಗೆ ಇದು ವಿಶೇಷಣವಾಗಿದೆ.

ಶಾತವನೇಯೇ—ಶತಸಂಖ್ಯಾಕಾನ್ ಕ್ರತೂನ್ ವನತಿ ಸಂಭಜತೇ ಇತಿ ಶತವನಿಃ ತಸ್ಯ ಪುತ್ರಃ ಶಾತವನೇಯಃ | ನೂರು ಯಾಗಗಳನ್ನು ಮಾಡಿದ ಶತವನಿ ಮಹರ್ಷಿಯ ಪುತ್ರನು ಶಾತವನೇಯನು.

ಪುರುಣೀಥೇ—ಬಹುಜನರಿಗೆ ಮುಖಂಡನಾದವನು—ಅಥವಾ ಪುರುಣೀಥನೆಂಬ ರಾಜನು ಎಂದು ಎರಡರ್ಥವನ್ನೂ ಸೂಚಿಸಿದ್ದಾರೆ.

|| ವ್ಯಾಕರಣಪ್ರಕ್ರಿಯಾ ||

ಭರದ್ವಾಜೇಷು—ಭರಂತಿ ಪೋಷಯಂತಿ ಭೋಕ್ತ್ರ್ಯಾನ್ ಇತಿ ಭರಂತಃ. ಡುಭೃಞ್ ಭರಣೇ ಧಾತು. ಲಡರ್ಥದಲ್ಲಿ ಶತೃ ಪ್ರತ್ಯಯ. ಭರಂತಃ ವಾಜಾಃ ಯೇಷು ತೇ ಭರದ್ವಾಜಾಃ ತೇಷು. ಬಹುವ್ರೀಹಿಯಲ್ಲಿ ಬಹುವ್ರೀಹೌಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರವು (ಆದ್ಯುದಾತ್ತ) ಪ್ರಾಪ್ತವಾದರೆ ಮರುದ್ವೃಧಾದಿಯಲ್ಲಿ ಸೇರಿರುವುದರಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಯಜತಃ—ಯಜ ದೇವಪೂಜಾಸಂಗತಿಕರಣದಾನೇಷು ಧಾತು. ಇದಕ್ಕೆ ಭೃಮೃ ದೃಶಿ ಯಜಿ ಪರ್ವಿ ಪಚ್ಯ ಮಿತ ಮಿನ ಮಿಹರ್ಯೇಭ್ಯೋಽತಚ್ (ಉ. ಸೂ. ೩ ೫೯೦) ಎಂಬುದರಿಂದ ಅತಚ್ ಪ್ರತ್ಯಯ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ವಿಭಾವಾ—ಆತೋಮನಿನ್ ಕ್ವನಿಬ್ವನಿಬಶ್ಚ (ಪಾ. ಸೂ. ೩-೨-೭೪) ಎಂಬುದರಿಂದ ವನಿಪ್ ಪ್ರತ್ಯಯ. ವಿಭಾವನ್ ಶಬ್ದವಾಗುತ್ತದೆ. ಅದು ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ. ಪ್ರಥಮಾ ಸು ಪರವಾದಾಗ ಸರ್ವನಾಮಸ್ಥಾನೇಚಾಸಂಬುದ್ಧೌ ಎಂಬುದರಿಂದ ಉಪಧಾ ದೀರ್ಘ. ಹಲ್ಙ್ಯಾಭ್ಯೋ—ಸೂತ್ರದಿಂದ ಸುಲೋಪ. ನಲೋಪಃಪ್ರಾತಿ—ಸೂತ್ರದಿಂದ ನಕಾರಲೋಪ.

ಶಾತವನೇಯೇ—ಇನ್ ಸರ್ವಧಾತುಭ್ಯಃ (ಉ. ಸೂ. ೪-೫೫೭) ಎಂಬುದರಿಂದ ಇನ್ ಪ್ರತ್ಯಯ. ಶತವನಿ ಶಬ್ದವಾಗುತ್ತದೆ. ಇತಶ್ಚಾನಿಞಃ (ಪಾ. ಸೂ. ೪-೧-೧೨೨) ಎಂಬುದರಿಂದ ಇಞ್ ವ್ಯತಿರಿಕ್ತ ಇಕಾರಾಂತವಾದುದರಿಂದ ಢಕ್ ಪ್ರತ್ಯಯ. ಢಕ್ ಕಿತ್ತಾದುದರಿಂದ ಕಿತಿಚ (ಪಾ. ಸೂ. ೭-೨-೧೧೮) ಎಂಬುದರಿಂದ ಆದಿವೃದ್ಧಿ. ಆಯನೇಯೀ—ಸೂತ್ರದಿಂದ ಢಕ್ಕೆ ಏಯಾದೇಶ. ಶಾತವನೇಯ ಶಬ್ದವಾಗುತ್ತದೆ. ಕಿತಃ (ಪಾ. ಸೂ. ೬ ೧-೧೬೫) ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

ಶತಿನೀಭಿಃ—ಶತ ಶಬ್ದದ ಮೇಲೆ ಮತ್ವರ್ಥದಲ್ಲಿ (ತತ್ ಅಸ್ಯ ಅಸ್ತಿ) ಇನಿ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಅಕಾರಕ್ಕೆ ಲೋಪ. ಶತಿನ್ ಶಬ್ದವಾಗುತ್ತದೆ. ನಾಂತವಾದುದರಿಂದ ಸ್ತ್ರೀತ್ವವಿವಕ್ಷಾಮಾಡಿದಾಗ ಋನ್ನೇಭ್ಯೋಙೀಪ್ ಎಂಬುದರಿಂದ ಙೀಪ್ ಪ್ರತ್ಯಯ. ಙೀಪ್ ಪಿತ್ತಾದುದರಿಂದ ಅನುದಾತ್ತ. ಆಗ ಇನಿಪ್ರತ್ಯಯದ ಸ್ವರ ಉಳಿಯುವುದರಿಂದ ತಕಾರೋತ್ತರ ಇಕಾರವು ಉದಾತ್ತವಾಗುತ್ತದೆ. ತೃತೀಯಾ ಬಹುವಚನಾಂತರೂಪ.



CC-0. Jangamwadi Math Collection. Digitized by eGangotri

ಪುರುಣೀಥೇ—ಪುರು ಎಂಬ ಪೂರ್ವಪದದಲ್ಲಿರುವ ನಿಮಿತ್ತವನ್ನನು(ರೇಫ)ಸರಿಸಿ ಪೂರ್ವಪದಾತ್ ಸಂಜ್ಞಾಯಾಮಗಃ (ಪಾ. ಸೂ. ೮-೪-೩) ಎಂಬುದರಿಂದ ಉತ್ತರಪದದಲ್ಲಿರುವ ನಕಾರಕ್ಕೆ ಣತ್ವ.

ಜರತೇ—ಜ್ಯಾಷ್ ವಯೋಹಾನೌ ಧಾತು. ಇಲ್ಲಿ ಸ್ತುತಿಕರ್ಮದಲ್ಲಿ ಪ್ರಯುಕ್ತವಾಗಿದೆ. ವ್ಯತ್ಯಯೋ ಬಹುಲಂ ಎಂಬುದರಿಂದ ಕರ್ಮಣಿಯಲ್ಲಿ ಕರ್ತೃ ಪ್ರತ್ಯಯ. ಲಟ್ ಪ್ರಥಮಪುರುಷ ಏಕವಚನದಲ್ಲಿ ಟಿತ-ಆತ್ಮನೇಪದಾನಾಂ ಸೂತ್ರದಿಂದ ಏತ್ವ. ಕರ್ತರಿಶಪ್ ಸೂತ್ರದಿಂದ ಶಪ್ ವಿಕರಣ. ತನ್ನಿಮಿತ್ತವಾಗಿ ಧಾತು ವಿನ ಇಕಿಗೆ ಗುಣ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸೂನೃತಾವಾನ್—ಸೂನೃತಾ ಸತ್ಯಾ ವಾಕ್ ಅಸ್ಯ ಅಸ್ತಿ ಇತಿ. ತದಸ್ಯಾಸ್ತಿ—ಸೂತ್ರದಿಂದ ಮತುಪ್. ಆಕಾರದ ಪರದಲ್ಲಿ ಬಂದುದರಿಂದ ಮಾದುಪಧಾಯಾಶ್ಚ—ಸೂತ್ರದಿಂದ ಮಕಾರಕ್ಕೆ ವಕಾರಾದೇಶ. ಸು ಪರವಾದಾಗ ಅತ್ವಸಂತಸ್ಯ ಸೂತ್ರದಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ತಲೋಪವಸಿದ್ಧವಾದುದರಿಂದ ನಲೋಪ ಬರುವುದಿಲ್ಲ.

---

# ಅರವತ್ತನೆಯ ಸೂಕ್ತವು

---

॥ ಸಾಯಣಭಾಷ್ಯಂ ॥

ವಹ್ನಿಮಿತಿ ಪಂಚರ್ಚಂ ತೃತೀಯಂ ಸೂಕ್ತಂ ನೋಧಸ ಆರ್ಷಂ ತ್ರೈಷ್ಟುಭಮಾಗ್ನೇಯಂ । ವಹ್ನಿಮಿತಿ ಪಂಚರ್ಚಂ ತೃತೀಯಂ ಸೂಕ್ತಂ ನೋಧಸ ಆರ್ಷಂ ತ್ರೈಷ್ಟುಭಂ ಛಂದಸೀದಂ ಅನುಕ್ರಾಂತಂ ಚ । ವಹ್ನಿಂ ಪಂಚೇತಿ ॥ ಪ್ರಾತರನುವಾಕಸ್ಯಾಗ್ನೇಯೇ ಕ್ರತೌ ತ್ರೈಷ್ಟುಭೇ ಛಂದಸೀದಂ ಸೂಕ್ತಮಾಶ್ವಿನೇ ಶಸ್ತ್ರೇ ಚ । ತಥಾ ಚ ಸೂತ್ರಿತಂ । ವಹ್ನಿಂ ಯಶಸಮುಪ ಪ್ರ ಜಿನ್ವನ್ನಿತಿ ತ್ರೀಣಿ । ಆ. ೪-೧೩ । ಇತಿ ॥

ಅನುವಾದವು—ವಹ್ನಿಂ ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ಮೂರನೆಯ ಸೂಕ್ತವು. ಇದರಲ್ಲಿ ಐದು ಋಕ್ಕುಗಳಿರುವವು. ಈ ಸೂಕ್ತಕ್ಕೆ ನೋಧಾಃ ಎಂಬುವನು ಋಷಿಯು ಅಗ್ನಿಯು ದೇವತೆಯು. ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ ವಹ್ನಿಂ ಪಂಚೇತಿ ಎಂದು ಹೇಳಿರುವುದು. ಪ್ರಾತರನುವಾಕಮಂತ್ರಪಠನಕಾಲದಲ್ಲಿ ಆಗ್ನೇಯಕ್ರತುಸಂಬಂಧವಾದ ತ್ರಿಷ್ಟುಪ್‌ಛಂದಸ್ಸಿನ ಋಕ್ಕುಗಳಾಗಿಯೂ, ಆಶ್ವಿನಶಸ್ತ್ರ ಮಂತ್ರಗಳಾಗಿಯೂ ಈ ಸೂಕ್ತದ ವಿನಿಯೋಗವಿರುವುದೆಂದು ಆಶ್ವಲಾಯನಶ್ರೌತಸೂತ್ರದ ವಹ್ನಿಂ ಯಶಸಮುಪ ಪ್ರ ಜಿನ್ವನ್ನಿತಿ ತ್ರೀಣಿ ಎಂಬ ಸೂತ್ರದಿಂದ ನಿರ್ದೇಶಿಸಲ್ಪಟ್ಟಿರುವುದು. (ಆ. ೪-೧೩)



CC-0. Jangamwadi Math Collection. Digitized by eGangotri

## ಸೂಕ್ತ—೬೦

ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೬೦ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ— ೨೬ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ— ೫

ಋಷಿಃ—ನೋಧಾ ಗೌತಮಃ ॥

ದೇವತಾ—ಅಗ್ನಿಃ ॥

ಛಂದಃ—ತ್ರಿಷ್ಟುಪ್ ॥

॥ ಸಂಹಿತಾಪಾಠಃ ॥

ವಹ್ನಿಂ ಯಶಸಂ ವಿದಥಸ್ಯ ಕೇತುಂ ಸುಪ್ರಾವ್ಯಂ ದೂತಂ ಸದ್ಯೋಅರ್ಥಂ ।
ದ್ವಿಜನ್ಮಾನಂ ರಯಿಮಿವ ಪ್ರಶಸ್ತಂ ರಾತಿಂ ಭರದ್ಭೃಗವೇ ಮಾತರಿಶ್ವಾ ॥ ೧ ॥

॥ ಪದಪಾಠಃ ॥

ವಹ್ನಿಂ । ಯಶಸಂ । ವಿದಥಸ್ಯ । ಕೇತುಂ । ಸುಪ್ರಽಅವ್ಯಂ । ದೂತಂ । ಸದ್ಯಃಽಅರ್ಥಂ ।
ದ್ವಿಽಜನ್ಮಾನಂ । ರಯಿಂಽಇವ । ಪ್ರಽಶಸ್ತಂ । ರಾತಿಂ । ಭರತ್ । ಭೃಗವೇ । ಮಾತರಿಶ್ವಾ ॥ ೧ ॥

॥ ಸಾಯಣಭಾಷ್ಯ ॥

ವಹ್ನಿಂ ಹವಿಷಾಂ ವೋಢಾರಂ ಯಶಸಂ ಯಶಸ್ವಿನಂ ವಿದಥಸ್ಯ ಕೇತುಂ ಯಜ್ಞಸ್ಯ ಪ್ರಕಾಶಯಿತಾರಂ ಸುಪ್ರಾವ್ಯಂ ಸುಷ್ಠು ಪ್ರಕರ್ಷೇಣ ರಕ್ಷಿತಾರಂ ದೂತಂ ದೇವೈರ್ಹವಿರ್ವಹನಲಕ್ಷಣೇ ದೂತ್ಯೇ ನಿಯುಕ್ತಂ । ಸದ್ಯೋಅರ್ಥಂ । ಯದಾ ಹವೀಂಷಿ ಜುಹ್ವತಿ ಸದ್ಯಸ್ತದಾನೀಮೇವ ಹವಿರ್ಭಿಃ ಸಹ ದೇವಾನ್ಗಂತಾರಂ । ಯದ್ವಾ । ಸದ್ಯೋಽರ್ಥಮರಣಂ ಗಮನಂ ಯಸ್ಯ ತಂ । ದ್ವಿಜನ್ಮಾನಂ । ದ್ವಯೋ-



CC-0. Jangamwadi Math Collection. Digitized by eGangotri

ದ್ಯಾವಾಪೃಥಿವ್ಯೋರರಣ್ಯೋರ್ವಾ ಜಾಯಮಾನಂ ರಯಿಮಿವ ಧನಮಿವ ಪ್ರಶಸ್ತಂ ಪ್ರಖ್ಯಾತಂ | ಏವಂಭೂತಮಗ್ನಿಂ ಮಾತರಿಶ್ವಾ ವಾಯುರ್ಭೃಗವ ಏತತ್ಸಂಜ್ಞಕಾಯ ಮಹರ್ಷಯೇ ರಾತಿಂ ಭರತ್ | ಮಿತ್ರಮಹರತ್ | ಆಕರೋದಿತ್ಯರ್ಥಃ | ರಾತಿನಾ ಸಂಭಾಷ್ಯೇತ್ಯತ್ರ | ಆಪ. ಗೃ ೧೨.೧೪ | ರಾತಿರ್ಮಿತ್ರ-ಮಿತಿ ಕಪರ್ದಿನೋಕ್ತಂ | ರಾತಿಃ ಪುತ್ರ ಇತ್ಯೇಕೇ | ಏತದರ್ಥಪ್ರತಿಪಾದಕಂ ಮಂತ್ರಾಂತರಂ ಚ ಭವತಿ | ರಾತಿಂ ಭೃಗೂಣಾಮುಶಿಜಂ ಕವಿಕ್ರತುಂ | ಋಗ್ವೇ. ೩-೨-೪ | ಇತಿ || ವಹ್ನಿಂ | ವಹಿಶ್ರಿಯುಶ್ರುಗ್ಲಾ-ಹಾತ್ವರಿಭ್ಯೋ ನಿದಿತಿ ವಹತೇರ್ನಿಪ್ರತ್ಯಯಃ | ನಿತ್ವದ್ವಾನಾದಾದ್ಯುದಾತ್ತತ್ವಂ | ಯಶಸಂ | ಯಶಸ್-ಶಬ್ದಾದುತ್ತರಸ್ಯ ವಿಸೋ ಲುಕ್ | ವ್ಯತ್ಯಯೇನಾಂತೋದಾತ್ತತ್ವಂ | ಯದ್ವಾ | ಅರ್ಶಆದಿತ್ವಾದಚ್ | ಸ್ವರಃ ಪೂರ್ವವತ್ | ಸುಪ್ರಾವ್ಯಂ | ಸುಷ್ಠು ಪ್ರಕರ್ಷೇಣಾವತಿ ರಕ್ಷತೀತಿ ಸುಪ್ರಾವೀಃ | ಉಪಸರ್ಗದ್ವ-ಯೋಪಸೃಷ್ಟಾದವತೇರವಿತ್ಯಾಸ್ತೃತಂತ್ರಿಭ್ಯ ಈಃ | ಉ. ೩-೧೫೮ | ಇತೀಕಾರಪ್ರತ್ಯಯಃ | ವಾ ಛಂದಸೀ-ತ್ಯಮಿ ಪೂರ್ವ ಇತ್ಯಸ್ಯ ವಿಕಲ್ಪೇ ಸತಿ ಯಣಾದೇಶಃ | ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ | ಸದ್ಯೋಅರ್ಥಂ | ಉಷಿಕುಷಿಗಾರ್ತಿಭ್ಯಸ್ಥನ್ನಿತ್ಯರ್ತೇಃ ಕರ್ತರಿ ಥನ್‌ಪ್ರತ್ಯಯಃ | ಸದ್ಯ ಏವಾರ್ಥೋ-ಗಂತಾ ಸದ್ಯೋಅರ್ಥಃ | ಅವ್ಯಯಪೂರ್ವಪದಪ್ರಕೃತಿಸ್ವರತ್ವಂ | ಯದಿ ತ್ವವ್ಯಯೇ ಇತ್ಯುನಿಪಾತನಾ-ಮಿತಿ ವಕ್ತವ್ಯಂ | ಪಾ. ೬-೨-೨-೩ | ಇತ್ಯವ್ಯಯಗ್ರಹಣೇನ ತ್ರಿತಯಂ ಗೃಹ್ಯೇತ ತರ್ಹಿ ಬಹುವ್ರೀಹಿ-ಸ್ವರೋ ಭವಿಷ್ಯತಿ | ಮಾತರಿಶ್ವಾ | ಸರ್ವನಿರ್ಮಾಣಹೇತುತ್ವಾನ್ಮಾತಾಂತರಿಕ್ಷಂ | ಶ್ವಸಿತಿರತ್ರ ಗತಿಕರ್ಮಾ | ಮಾತರ್ಯಂತರಿಕ್ಷೇ ಶ್ವಸಿತಿ ಗಚ್ಛತೀತಿ ಮಾತರಿಶ್ವಾ | ಶ್ವನ್ನುಕ್ಷನ್ನಿತ್ಯಾದೌ ನಿಪಾತನಾದ್ರೂಪಸಿದ್ಧಿಃ | ಯದ್ವಾ | ಮಾತರ್ಯಂತರಿಕ್ಷೇ ಶ್ವಾಶ್ವಸತಿ ಗಚ್ಛತೀತಿ ಮಾತರಿಶ್ವಾ | ಆಸ ಗತಿದೀಪ್ತ್ಯಾದಾನೇಷ್ವಿತ್ಯಸ್ಮಾ-ದೌಣಾದಿಕೋ ಡ್ವನ್ಪ್ರತ್ಯಯಃ | ಏತಚ್ಚ ಯಾಸ್ಕೇನೋಕ್ತಂ || ನಿ. ೭.೨೬ ||

|| ಪ್ರತಿಪದಾರ್ಥ ||

ವಹ್ನಿಂ—ಹವಿಸ್ಸನ್ನು ವಹಿಸುವವನೂ | ಯಶಸಂ—ಪ್ರಖ್ಯಾತನಾದವನೂ! ವಿದಥಸ್ಯ—ಯಜ್ಞಕ್ಕೆ | ಕೇತುಂ—ಪ್ರಕಾಶಕನಾದವನೂ | ಸುಪ್ರಾವ್ಯಂ—ಚೆನ್ನಾಗಿ ಕಾಪಾಡುವವನೂ | ದೂತಂ (ಹವಿಸ್ಸನ್ನು ವಹಿ-ಸುವ) ದೂತನಾದವನೂ | ಸದ್ಯೋಅರ್ಥಂ—ತತ್‌ಕ್ಷಣವೇ (ದೇವತೆಗಳಿಗೆ) ಹವಿಸ್ಸನ್ನು ಒದಗಿಸುವವನೂ | ದ್ವಿಜನ್ಮಾನಂ—ದ್ಯಾವಾಪೃಥಿವಿಗಳಿಬ್ಬರಿಂದಲೂ ಅಥವಾ ಅರಣಿ ದ್ವಯದಿಂದಲೂ ಉತ್ಪನ್ನನಾದವನೂ | ರಯಿ-ಮಿವ—ಧನದಂತೆ | ಪ್ರಶಸ್ತಂ—ಅಮೌಲ್ಯವಾದವನೂ ಆದ ಅಗ್ನಿಯನ್ನು | ಮಾತರಿಶ್ವಾ—ವಾಯುವು | ಭೃಗವೇ—ಭೃಗುಋಷಿಗೆ | ರಾತಿಂ—ಸ್ನೇಹಿತನಂತೆ | ಭರತ್—ಕರೆತಂದನು (ಸ್ನೇಹಿತನನ್ನಾಗಿ ಮಾಡಿದನು) ||

|| ಭಾವಾರ್ಥ ||

ಹವಿರ್ವಾಹಕನೂ, ಪ್ರಖ್ಯಾತನೂ, ಯಜ್ಞದಪ್ರಕಾಶಕನೂ, ಒಳ್ಳೆಯರಕ್ಷಕನೂ, ದೇವತೆಗಳಿಗೆ ಒಡನೆಯೇ ಹವಿಸ್ಸನ್ನು ವಹಿಸುವ ದೂತನೂ, ದ್ಯಾವಾ ಪೃಥಿವಿಗಳಿಂದ ಅಥವಾ ಅರಣಿದ್ವಯದಿಂದ ಉತ್ಪನ್ನನಾದವನೂ, ಐಶ್ವರ್ಯದಂತೆ ಅಮೂಲ್ಯವಾದವನೂ ಆದ ಅಗ್ನಿಯನ್ನು ವಾಯುವು ಕರೆತಂದು ಭೃಗುಮಹರ್ಷಿಗೆ ಸ್ನೇಹಿತನನ್ನಾಗಿ ಮಾಡಿದನು.



CC-0. Jangamwadi Math Collection. Digitized by eGangotri

## English Translation.

Matariswan brought as a friend to Bhrigu the celebrated Vanhi, (Agni) the illuminator of sacrifices, the careful protector (of his worshippers) the swift-coursing messenger (of the gods) the offspring of two parents, highly spoken of like wealth.

॥ ವಿಶೇಷ ವಿಷಯಗಳು ॥

**ಯಶಸಂ**—ಯಶಸ್ಸುಳ್ಳವನು ಎಂಬರ್ಥಕೊಡುವ ಪ್ರತ್ಯಯವಿಲ್ಲದಿದ್ದರೂ ಇಲ್ಲಿ ಯಶಸ್ವಿನಂ ಯಶಶ್ಶಾಲಿಯು ಎಂದರ್ಥ ಹೇಳಬೇಕು.

**ಕೇತುಂ**—ಯಜ್ಞವನ್ನು ಪ್ರಕಾಶಗೊಳಿಸುವವನು ಅಗ್ನಿ. ಕೇತುಶಬ್ದಕ್ಕೆ ಧ್ವಜವೆಂಬ ಅರ್ಥವಿರುವುದರಿಂದ ಯಜ್ಞಕ್ಕೆ ಅಗ್ನಿಯು ಧ್ವಜಪ್ರಾಯನು ಎಂದರ್ಥ.

**ಸದ್ಯೋಅರ್ಥಂ**—ಸದ್ಯಃ ಅರ್ಥಂ ಅರಣಂ ಗಮನಂ ಯಸ್ಯ ತಂ ಅಥವಾ ಸದ್ಯೋ ಅರ್ಥಂ ಯದಾ ಹವೀಂಷಿ ಜುಹ್ವತಿ ಸದ್ಯಸ್ತದಾನೀಮೇವ ಹವಿರ್ಭಿಸ್ಸಹ ದೇವಾನ್ ಗಂತಾರಂ ದೇವತೆಗಳಿಗೆ ಯಜ್ಞದಲ್ಲಿ ಕೊಟ್ಟ ಹವಿಸ್ಸನ್ನು ಒಡನೆಯೇ ದೇವತೆಗಳಿಗೆ ತಲಪಿಸುವವನು ಅಥವಾ ಹವಿರ್ದ್ರವ್ಯಸಮೇತನಾಗಿ ಸದಾ ಸಂಚರಿಸುವವನು ಎಂದು ಎರಡು ರೀತಿಯಲ್ಲಿಯೂ ಅರ್ಥಮಾಡಿದ್ದಾರೆ.

**ದ್ವಿಜನ್ಮಾನಂ**—ದ್ಯಾವಾಪೃಥಿವಿಗಳಿಂದ, ಅಥವಾ ಎರಡು ಅರಣಿಗಳಿಂದ ಹುಟ್ಟಿದ ಅಗ್ನಿಯನ್ನು ಎಂದರ್ಥ.

**ಭೃಗವೇ**—ಭೃಗುವೆಂಬ ಹೆಸರಿನ ಮಹರ್ಷಿಗೆ.

**ರಾತಿಂ ಭರತ್**—ಸ್ನೇಹಿತನನ್ನಾಗಿ ಮಾಡಿದನು. ರಾತಿನಾ ಸಂಭಾಷ್ಯ (ಆಪ. ಗೃ. ೧೨ ೧೪) ಎಂಬ ಸ್ಥಳದಲ್ಲಿ ರಾತಿಶಬ್ದಕ್ಕೆ ಮಿತ್ರನೆಂಬರ್ಥವನ್ನು ಕಪರ್ದಿಮಹರ್ಷಿಗಳು ಹೇಳಿರುವರು. ಮತ್ತೆ ಕೆಲವರು ರಾತಿಶಬ್ದಕ್ಕೆ ಪುತ್ರನೆಂದು ಅರ್ಥಮಾಡಿರುವರು. ಈ ಅರ್ಥವನ್ನು ಸೂಚಿಸುವ ಮಂತ್ರವು ರಾತಿಂ ಭೃಗೂಣಾಮುಶಿಜಂ ಕವಿಕ್ರತುಂ (ಋ. ಸಂ. ೩-೨-೪) ಋಗ್ವೇದದಲ್ಲಿದೆ. ಭೃಗುವಂಶದಲ್ಲಿ ಪುತ್ರನೆನಿಸಿಕೊಂಡಿರುವವನು ಉಶಿಜನು ಎಂದು ಆ ಮಂತ್ರಭಾಗದ ಅರ್ಥ.

**ಮಾತರಿಶ್ವಾ**—ಸರ್ವನಿರ್ಮಾಣಹೇತುತ್ವಾತ್ ಮಾತಾ ಅಂತರಿಕ್ಷಂ ಶ್ವಸಿತಿರತ್ರ ಗತಿಕರ್ಮಾ—ಮಾತರಿ ಅಂತರಿಕ್ಷೇ ಶ್ವಸಿತಿ ಗಚ್ಛತೀತಿ ಮಾತರಿಶ್ವಾ. ಅಂತರಿಕ್ಷದಲ್ಲಿ ಸಂಚರಿಸುವವನು ವಾಯು ಎಂದರ್ಥ.

॥ ವ್ಯಾಕರಣಪ್ರಕ್ರಿಯಾ ॥

**ವಹ್ನಿಮ್**—ವಹ ಪ್ರಾಪಣೇ ಧಾತು. ಇದಕ್ಕೆ ವಹಿಶ್ರಿಯುಶ್ರುಗ್ಲಾಹಾತ್ವರಿಭ್ಯೋ ನಿತ್ (ಉ. ಸೂ. ೩-೪೮೯) ಎಂಬುದರಿಂದ ನಿ ಪ್ರತ್ಯಯ. ನಿತ್ವವನ್ನು ಅತಿದೇಶ ಮಾಡಿರುವುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಯಶಸಮ್** — ಯಶಃ ಅಸ್ಯ ಅಸ್ತಿ ಇತಿ ಯಶಸ್ವೀ. ಅಸ್ಮಾಯಾಮೇಧಾಸ್ರಜೋವಿನಿಃ (ಪಾ. ಸೂ. ೫-೨-೧೨೧) ಎಂಬುದರಿಂದ ಅಸಂತವಾದುದರಿಂದ ವಿನಿ ಪ್ರತ್ಯಯ. ಇಲ್ಲಿ ಛಾಂದಸವಾಗಿ ವಿನಿಗೆ



CC-0. Jangamwadi Math Collection. Digitized by eGangotri

ಲುಕ್ ಬಂದಿದೆ. ವ್ಯತ್ಯಯದಿಂದ ಅಂತೋದಾತ್ತವಾಗುತ್ತದೆ. ಅಥವಾ ಅರ್ಶ ಆದಿಗಣದಲ್ಲಿ ಸೇರಿರುವುದರಿಂದ **ಅರ್ಶ ಆದಿಭ್ಯೋऽಚ್** (ಪಾ. ಸೂ. ೫-೨-೧೨೭) ಎಂಬುದರಿಂದ ಮತ್ವರ್ಥದಲ್ಲಿ ಅಚ್ ಪ್ರತ್ಯಯ. ಆಗ **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಸುಪ್ರಾವ್ಯಮ್**—ಸುಷ್ಠು ಪ್ರಕರ್ಷೇಣ ಅವತಿ ರಕ್ಷತಿ ಇತಿ ಸುಪ್ರಾವೀಃ. ಸು ಮತ್ತು ಪ್ರ ಎಂಬ ಎರಡು ಉಪಸರ್ಗಗಳು ಉಪಪದವಾಗಿರುವಾಗ ಅವಿತೃಸ್ತೃತಂತ್ರಿಭ್ಯ ಈಃ (ಉ. ಸೂ. ೩-೪೩೮) ಎಂಬುದರಿಂದ ಈಕಾರರೂಪ ಪ್ರತ್ಯಯ. ಸುಪ್ರಾವೀ ಶಬ್ದವಾಗುತ್ತದೆ. ಇದಕ್ಕೆ ದ್ವಿತೀಯಾ ಏಕವಚನ ಅಮ್ ಪರವಾದಾಗ **ವಾ ಛಂದಸಿ** (ಪಾ. ಸೂ. ೬-೧-೧೦೬) ಎಂಬುದರಿಂದ **ಅಮಿಪೂರ್ವಃ** ಸೂತ್ರದಿಂದ ಬರುವ ಪೂರ್ವರೂಪವು ವಿಕಲ್ಪವೆಂದುದರಿಂದ ಯಣಾದೇಶ. ಉದಾತ್ತಸ್ಥಾನದಲ್ಲಿ ಯಣಾದೇಶ ಬಂದು ಅದರ ಪರದಲ್ಲಿ ವಿಭಕ್ತಿಯ ಅಮ್ ಬಂದುದರಿಂದ **ಉದಾತ್ತ ಸ್ವರಿತಯೋರ್ಯಣಃ ಸ್ವರಿತೋಽನುದಾತ್ತಸ್ಯ** (ಪಾ. ಸೂ. ೮-೨-೪) ಎಂಬುದ ರಿಂದ ವಿಭಕ್ತಿಗೆ ಸ್ವರಿತ ಸ್ವರ ಬರುತ್ತದೆ.

**ಸದ್ಯೋಽರ್ಥಮ್**—ಋ ಗತೌ ಧಾತು. ಇದಕ್ಕೆ ಕರ್ತ್ರರ್ಥದಲ್ಲಿ **ಉಷಿಕುಷಿಗಾರ್ತಿಭ್ಯಸ್ಥನ್** (ಉ. ಸೂ. ೨-೧೬೧) ಎಂಬುದರಿಂದ ಥನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಅರ್ಥಶಬ್ದವಾ ಗುತ್ತದೆ. ಸದ್ಯ ಏವ ಅರ್ಥಃ ಗಂತಾ ಸದ್ಯೋಽರ್ಥಃ (ಬೇಗನೆ ಹೊಂದುವವನು) **ತತ್ಪುರುಷೇತುಲ್ಯಾರ್ಥ** (ಪಾ. ಸೂ. ೬-೨-೨) ಎಂಬುದರಿಂದ ಅವ್ಯಯಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಯದ್ಯಪಿ ಆ ಸೂತ್ರದಲ್ಲಿ ಅವ್ಯಯ ಪದದಿಂದ **ಅವ್ಯಯೇ ನಞ್**ಕು **ನಿಪಾತಾನಾಮಿತಿವಕ್ತವ್ಯಮ್** (ಪಾ. ಸೂ. ೬-೨-೨-೩) ಎಂದು ಕೇವಲ ಮೂರನ್ನು ಮಾತ್ರ ತೆಗೆದುಕೊಳ್ಳಬೇಕು ಎಂದು ನಿಯಮ ಮಾಡಿರುತ್ತಾರೆ. ಆಗ ಸದ್ಯಃ ಎಂಬುದನ್ನು ತೆಗೆದುಕೊಳ್ಳಲಾಗುವುದಿಲ್ಲ. ಆಗ ಬಹುವ್ರೀಹಿ ಸಮಾಸಮಾಡಬೇಕು. ಸದ್ಯಃ ಅರ್ಥಃ ಯಸ್ಯ ಸಃ ಎಂದು ವಿಗ್ರಹ. **ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್** ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

**ಮಾತರಿಶ್ವಾ**—ಶ್ವಸ ಪ್ರಾಣನೇ ಧಾತು. ಅದಾದಿ. ಇಲ್ಲಿ ಗತ್ಯರ್ಥದಲ್ಲಿದೆ. ಮಾತರಿ ಅಂತರಿಕ್ಷೇ ಶ್ವಸಿತಿ ಗಚ್ಛತಿ ಇತಿ ಮಾತರಿಶ್ವಾ. **ಶ್ವನ್ನುಕ್ಷನ್** (ಉ. ಸೂ. ೧-೧೫೭) ಎಂಬುದರಿಂದ ನಿಪಾತಿತವಾದುದರಿಂದ ರೂಪಸಿದ್ಧವಾಗುತ್ತದೆ. ಅಥವಾ ಮಾತರಿ ಅಂತರಿಕ್ಷೇ ಶ್ವಸಿತಿ ಗಚ್ಛತಿ ಇತಿ ಮಾತರಿಶ್ವಾ. ಅಸ ಗತಿದೀಪ್ತ್ಯಾ- ದಾನೇಷು ಧಾತು. ಇದಕ್ಕೆ ಔಣಾದಿಕವಾದ ಡ್ವನ್ ಪ್ರತ್ಯಯ. ಡಿತ್ ಸಾಮರ್ಥ್ಯದಿಂದ ಟಿಗೆ ಲೋಪ. ಮಾತರಿಶ್ವನ್ ಶಬ್ದವಾಗುತ್ತದೆ. ಇದು ಯಾಸ್ಕರಿಂದ ಉಕ್ತವಾಗಿದೆ. (ನಿರು. ೭-೨೬)

**ಭರತ್**—ಹೃಞ್ ಹರಣೇ ಧಾತು. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಸೂತ್ರದಿಂದ ಇಕಾರ ಲೋಪ. ಶಪ್ ವಿಕರಣ. ಶಪ್ ನಿಮಿತ್ತವಾಗಿ ಧಾತುವಿಗೆ ಗುಣ. **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. **ಹೃಗ್ರಹೋರ್ಭಶ್ಛಂದಸಿ** ಎಂಬುದ ರಿಂದ ಹಕಾರಕ್ಕೆ ಭಕಾರಾದೇಶ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.







CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸ್ಯ ಶಾಸುರುಭಯಾಸಃ ಸಚಂತೇ ಹವಿಷ್ಮಂತ ಉಶಿಜೋ ಯೇ ಚ ಮರ್ತಾಃ ।
ದಿವಶ್ಚಿತ್ಪೂರ್ವೋ ನ್ಯಸಾದಿ ಹೋತಾಪೃಚ್ಛ್ಯೋ ವಿಶ್ಪತಿರ್ವಿಕ್ಷು ವೇಧಾಃ ॥

॥ ಪದಪಾಠಃ ॥

ಅಸ್ಯ । ಶಾಸುಃ । ಉಭಯಾಸಃ । ಸಚಂತೇ । ಹವಿಷ್ಮಂತಃ । ಉಶಿಜಃ । ಯೇ । ಚ । ಮರ್ತಾಃ ।
ದಿವಃ । ಚಿತ್ । ಪೂರ್ವಃ । ನಿ । ಅಸಾದಿ । ಹೋತಾ । ಆಽಪೃಚ್ಛ್ಯಃ । ವಿಶ್ಪತಿಃ । ವಿಕ್ಷು । ವೇಧಾಃ ॥ ೧ ॥

॥ ಸಾಯಣಭಾಷ್ಯಂ ॥

ಶಾಸುಃ ಶಾಸಿತುರಸ್ಯಾಗ್ನೇರುಭಯಾಸ ಉಭಯೇಽಪಿ ದೇವಾ ಮನುಷ್ಯಾಶ್ಚ । ಯದ್ವಾ । ಸ್ತುತಿಭಿಃ ಸ್ತೋತಾರೋ ಯಜ್ಞೈರ್ಯಜಮಾನಾಶ್ಚೇಮಮಗ್ನಿಂ ಶಾಸಿತಾರಂ ಸಚಂತೇ । ಸೇವಂತೇ । ಉಶಿಜಃ ಕಾಮಯಮಾನಾ ದೇವಾ ಹವಿಷ್ಮಂತೋ ಹವಿಷಾ ಯುಕ್ತಾ ಯೇ ಚ ಮರ್ತಾ ಮರಣಧರ್ಮಾಣೋ ಯಜಮಾನಾಃ । ಯದ್ವಾ । ಉಶಿಜ ಇತಿ ಮೇಧಾವಿನಾಮ । ಉಶಿಜೋ ಮೇಧಾವಿನಃ ಸ್ತೋತಾರೋ ಹವಿಷ್ಮಂತೋ ಹವಿರ್ಯುಕ್ತಾ ಮರ್ತಾ ಯಜಮಾನಾಃ । ಕಿಂಚಾಯಂ ಹೋತಾ ಹೋಮನಿಷ್ಪಾದಕೋಽಗ್ನಿರ್ದಿವಶ್ಚಿತ್ ಆದಿತ್ಯಾದಪಿ ಪೂರ್ವ ಉಷಃಸು ವರ್ತಮಾನೋ ಭೂತ್ವಾಗ್ನಿಹೋತ್ರಹೋಮಾರ್ಥಂ ವಿಕ್ಷು ಯಜಮಾನೇಷು ನ್ಯಸಾದಿ । ಅಧ್ವರ್ಯುಣಾಗ್ನ್ಯಾಯತನೇ ನ್ಯಧಾಯಿ । ಸ್ಥಾಪ್ಯತೇ । ಕೀದೃಶೋ ಹೋತಾ । ಆಪೃಚ್ಛ್ಯ ಆ ಪ್ರಷ್ಟವ್ಯಃ । ಪೂಜ್ಯ ಇತ್ಯರ್ಥಃ । ವಿಶ್ಪತಿರ್ವಿಶಾಂ ಪ್ರಜಾನಾಂ ಪಾಲಯಿತಾ ವೇಧಾಃ । ವಿಧಾತಾಭಿಮತಫಲಸ್ಯ ಕರ್ತಾ ॥ ಶಾಸುಃ ಶಾಸು ಅನುಶಿಷ್ಟೌ । ತೃನ್ತೃಚೌ ಶಂಸಿಕ್ಷದಾದಿಭ್ಯಃ ಸಂಜ್ಞಾಯಾಂ ಚಾನಿಟೌ । ಉ. ೨-೯೪ । ಇತಿ ತೃನ್ । ಇಡಾಗಮಾಭಾವಶ್ಚ । ಷಷ್ಠ್ಯೇಕವಚನೇ ತಕಾರಲೋಪಶ್ಛಾಂದಸಃ । ನಿತ್ತ್ವಾದಾದ್ಯುದಾತ್ತತ್ವಂ । ಉಶಿಜಃ । ವಶಃ ಕಿತ್ । ಉ. ೨-೭೧ । ಇತಿ ವಷ್ಟೇರಿಜಿಪ್ರತ್ಯಯಃ । ಗ್ರಹಿಜ್ಯಾದಿನಾ ಸಂಪ್ರಸಾರಣಂ । ಮರ್ತಾಃ । ಮೃಙ್ ಪ್ರಾಣತ್ಯಾಗೇ । ಅಸಿಹಸಿಮೃಗ್ರಿಣ್ವಾಮಿದಮಿಲೂಪೂಧುರ್ವಿಭ್ಯಸ್ತನ್ । ಇತ್ಯಾದಿನಾ ತನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ ।

ಅಪ್ನಚ್ಛ್ಯಃ | ಪ್ರಚ್ಛ ಜೀಪ್ಸಾಯಾಂ | ಅಜ್ಪೂರ್ವಾದಸ್ಮಾಚ್ಛಂದಸಿ ನಿಷ್ಪರ್ಕ್ಯೇತ್ಯಾದೌ | ಪಾ ೩.೧.೧೨೩ | ಕ್ಯಪ್‌ಪ್ರತ್ಯಯೋ ನಿಪಾತಿತಃ | ಗ್ರಹಿಜ್ಯಾದಿನಾ ಸಂಪ್ರಸಾರಣಂ | ಕ್ಯಪಃ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ ಶಿಷ್ಯತೇ | ವಿಶ್ಪತಿಃ | ಪತ್ಯಾವೈಶ್ವರ್ಯೆ ಇತಿ ಪೂರ್ವಪದಪ್ರಕೃತಿಸ್ವರತ್ವೇ ಪ್ರಾಪ್ತೇ ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ ||

॥ ಪ್ರತಿಪದಾರ್ಥ ॥

ಉಶಿಜಃ—(ಸಹಾಯಕ್ಕಾಗಿ) ಅಪೇಕ್ಷಿತರಾದ ದೇವತೆಗಳೂ ಅಥವಾ ಮೇಧಾವಿಗಳಾದ ಸ್ತೋತೃಗಳೂ ಮತ್ತು | ಹವಿಷ್ಮಂತಃ—ಹವಿಸ್ಸಿನಿಂದ ಕೂಡಿದ | ಯೇ ಚ ಮರ್ತಾಃ—ಮರ್ತ್ಯರಾದ ಯಜಮಾನರೂ ಆದ | ಉಭಯಾಸಃ—ಈ ಎರಡು ಗುಂಪಿನವರೂ (ದೇವತೆಗಳೂ ಮಾನವರೂ ಅಥವಾ ಸ್ತೋತೃಗಳೂ, ಯಜಮಾನರೂ ಸಹ) | ಶಾಸುಃ—(ಎಲ್ಲರಿಗೂ) ಅಧಿಪತಿಯಾದ | ಅಸ್ಯ—ಈ ಅಗ್ನಿಗೆ (ಅಗ್ನಿಯನ್ನು) | ಸಚಂತೇ—ಸೇವಿಸುತ್ತಾರೆ (ಅಲ್ಲದೇ) | ಆಪ್ಪಚ್ಛ್ಯಃ—ಪೂಜ್ಯನೂ | ವಿಶ್ಪತಿಃ—ಪ್ರಜೆಗಳ ಪಾಲಕನೂ | ವೇಧಾಃ—ಅಭಿಮತಫಲಗಳ ದಾಯಕನೂ ಮತ್ತು | ಹೋತಾ—ಹೋಮಸಂಪಾದಕನೂ ಆದ ಅಗ್ನಿಯು | ದಿವಃಶ್ಚಿತ್—ಸೂರ್ಯನ ಉದಯಕ್ಕಿಂತಲೂ | ಪೂರ್ವಃ—ಮುಂಚೆಯೇ (ಉಷಃಕಾಲದಲ್ಲಿಯೇ) | ವಿಕ್ಷು—ಯಜಮಾನರಲ್ಲಿ (ಅವರ ನಡುವೆ) | ನ್ಯಸಾದಿ—(ಅಧ್ವರ್ಯುವಿನಿಂದ ಅಗ್ನಿಗೃಹದಲ್ಲಿ) ಇಡಲ್ಪಟ್ಟಿರುತ್ತಾನೆ.

॥ ಭಾವಾರ್ಥ ॥

ಮಾನವರಿಂದ ಅಪೇಕ್ಷಿತರಾದ ದೇವತೆಗಳೂ ಮತ್ತು ಹವಿಸ್ಸನ್ನು ಹೊಂದಿದ ಮಾನವರೂ, ಈ ಎರಡು ಗುಂಪಿನವರೂ ಸಹ ಈ ಅಧಿಪತಿಯಾದ ಅಗ್ನಿಯನ್ನು ಸೇವಿಸುತ್ತಾರೆ. ಪೂಜ್ಯನೂ, ಪ್ರಜೆಗಳ ಪಾಲಕನೂ, ಅಭಿಮತಗಳಾದ ಫಲಗಳದಾಯಕನೂ ಮತ್ತು ಹೋಮಸಂಪಾದಕನೂ ಆದ ಅಗ್ನಿಯು ಸೂರ್ಯೋದಯಕ್ಕೆ ಮುಂಚೆ ಉಷಃಕಾಲದಲ್ಲಿಯೇ ಅಧ್ವರ್ಯುವಿನಿಂದ ಅಗ್ನಿ ಗೃಹದಲ್ಲಿ ವೇದಿಕೆಯ ಮೇಲೆ ಪ್ರತಿಷ್ಠಾಪಿತನಾಗಿರುತ್ತಾನೆ.

## English Translation.

Both (gods and men) are the worshippers of this ruler; those who are to be desired (gods) and the mortals bearing oblations (are also worshippers); for this adorable invoker (of the gods), the protector of people and distributer of desired-for objects, was placed by the officiating priests (upon the altar), before the Sun was in the sky.

॥ ವಿಶೇಷ ವಿಷಯಗಳು ॥

ಉಭಯಾಸಃ—ಇಲ್ಲಿ ಅಗ್ನಿಯನ್ನು ದೇವತೆಗಳೂ ಮಾನವರೂ ಸಮಕಾಲದಲ್ಲಿ ಸ್ತುತಿಸುವರು. ಅಥವಾ ಸ್ತುತಿಪಾಠಕರು ಸ್ತೋತ್ರಗಳಿಂದಲೂ, ಯಜಮಾನರು ಯಾಗಗಳಿಂದಲೂ ಅಗ್ನಿಯನ್ನು ತೃಪ್ತಿಗೊಳಿಸುವರು ಎಂದರ್ಥ.



CC-0. Jangamwadi Math Collection. Digitized by eGangotri

**ಉಶಿಜಃ**—ಸರ್ವವನ್ನೂ (ಹವಿಸ್ಸನ್ನೂ) ಅಪೇಕ್ಷಿಸುವ ದೇವತೆಗಳು ಎಂಬರ್ಥ ಮತ್ತು ಉಶಿಕ್ ಶಬ್ದಕ್ಕೆ ನಿರುಕ್ತದಲ್ಲಿ ಮೇಧಾವಿ ಎಂದರ್ಥಮಾಡಿ, ಮೇಧಾವಿಪರ್ಯಾಯಪದಗಳಲ್ಲಿ ಪಾಠಮಾಡಿರುವರು. (ನಿರು. ೩-೧೫) **ಮೇಧಾವಿ ನಾಮಾನ್ಯುತ್ತರಾಣಿ ಚತುರ್ವಿಂಶತಿಃ.** ಈ ಅರ್ಥದಿಂದ ಮೇಧಾವಿಗಳಾಗಿ ಯಜ್ಞದಲ್ಲಿ ನಾನಾರೀತಿ ಸ್ತೋತ್ರಮಾಡುವ ಮಾನವರು ಎಂದೂ ಅರ್ಥವನ್ನು ಕಲ್ಪಿಸಿದ್ದಾರೆ.

**ದಿವಕ್ಷಿತ್ ಪೂರ್ವಃ**—ಹೊಸುನಿಷ್ಪಾದಕವಾದ ಅಗ್ನಿಯನ್ನು ಸೂರ್ಯೋದಯಕಾಲಕ್ಕೆ ಮುಂಚೆಯೇ ಆಧ್ವರ್ಯು ಮೊದಲಾದ ಋತ್ವಿಜರು ಯಜ್ಞವೇದಿಕೆಯಲ್ಲಿ ಪ್ರತಿಷ್ಠಿಸುತ್ತಾರೆ ಎಂದಭಿಪ್ರಾಯವು. ಯಜಮಾನರಲ್ಲಿ ಮತ್ತು ಅಧ್ವರ್ಯುಗಳಲ್ಲಿ ಸ್ಥಿರವಾಗಿ ನಿಲ್ಲುವನು.

**ವಿಶ್ಪತಿಃ**—**ವಿಶಾಂ ಪತಿಃ**—ಪ್ರಜೆಗಳನ್ನು ಕಾಪಾಡುವವನು ಎಂದರ್ಥ.

**ವೇಧಾಃ**—ವಿಧಾತೃವಿಗೆ ಅಭಿಮತವಾದ ಫಲವನ್ನು ಕೊಡುವವನು (ಬ್ರಹ್ಮಸ್ಥಾನೀಯನು) ಎಂದರ್ಥ.

|| ವ್ಯಾಕರಣಪ್ರಕ್ರಿಯಾ ||

**ಶಾಸುಃ**—ಶಾಸು ಅನುಶಿಷ್ಟೌ ಧಾತು. ತೃನ್ ತೃಚೌ ಶಂಸಿ ಕ್ಷದಿ ಶಾಸಿಸ್ತೃದಾದಿಭ್ಯಃ ಸಂಜ್ಞಾಯಾ ಮನಿಟೌ (ಉ. ಸು. ೨-೨೫೦) ಎಂಬುದರಿಂದ ಇದಕ್ಕೆ ತೃನ್ ಪ್ರತ್ಯಯ ಇಡಾಗಮಾಭಾವವೂ ವಿಹಿತವಾಗಿದೆ. ಶಾಸ್ತೃ ಶಬ್ದವಾಗುತ್ತದೆ. ಷಷ್ಠೀಏಕವಚನ ಪರವಾದಾಗ **ಋತಉತ್** ಎಂಬುದರಿಂದ ಉತ್ವ. ಆಗ ತಕಾರ ಲೋಪವು ಛಾಂದಸವಾಗಿ ಬರುತ್ತದೆ. ತೃನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದರಿಂದ ಆದ್ಯುದಾತ್ತವಾಗುತ್ತದೆ.

**ಉಭಯಾಸಃ**—**ಉಭಯೋಽನ್ಯತ್ರ** ಎಂಬುದರಿಂದ ಜಸ್ ಪರವಾದಾಗ ಉಭಶಬ್ದಕ್ಕೆ ಅಯಚಾದೇಶ. **ಆಜ್ಜಸೇರಸುಕ್** ಸೂತ್ರದಿಂದ ಜಸಿಗೆ ಅಸುಕಾಗಮ. ಅಂತ್ಯ ಸಕಾರಕ್ಕೆ ರುತ್ವ ವಿಸರ್ಗ.

**ಉಶಿಜಃ**—ವಶ ಕಾಂತೌ ಧಾತು. ಇದಕ್ಕೆ **ವಶಃ ಕಿತ್** (ಉ. ಸೂ. ೨-೨೫) ಎಂಬುದರಿಂದ ಇಜಿ ಪ್ರತ್ಯಯ. ಇದಕ್ಕೆ ಕಿತ್ವ ಅತಿದೇಶ ಮಾಡಿರುವುದರಿಂದ **ಗ್ರಹಿಜ್ಯಾವಯಿ**—(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ (ವಕಾರಕ್ಕೆ) ಸಂಪ್ರಸಾರಣ. **ಸಂಪ್ರಸಾರಣಾಚ್ಚ** ಎಂಬುದರಿಂದ ಪೂರ್ವರೂಪ ಉಶಿಜಃ ಎಂಬುದು ಪ್ರಥಮಾ ಬಹುವಚನಾಂತರೂಪ. ಪ್ರತ್ಯಯಸ್ವರದಿಂದ ಇಕಾರ ಉದಾತ್ತವಾಗುತ್ತದೆ.

**ಮರ್ತಾಃ**—ಮೃಙ್ ಪ್ರಾಣತ್ಯಾಗೇ ಧಾತು. ಇದಕ್ಕೆ **ಅಸಿಹಸಿಮೃಗ್ರಿಣ್ವಾಮಿ**—ಎಂಬುದರಿಂದ ತನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಧಾತುವಿನ ಇಕಿಗೆ ಗುಣ ಮರ್ತ ಎಂದು ರೂಪವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಅದ್ಯುದಾತ್ತಸ್ವರ ಬರುತ್ತದೆ. ಪ್ರಥಮಾಬಹುವಚನಾಂತರೂಪ.

**ಆಪೃಚ್ಛ್ಯಃ**—ಪ್ರಚ್ಛ ಜ್ಞೀಪ್ಸಾಯಾಂ ವಾಚಿ. ಧಾತು ಆಙ್ ಉಪಸರ್ಗ ಪೂರ್ವದಲ್ಲಿರುವಾಗ **ಛಂದಸಿನಿಷ್ಟರ್ಕ್ಯ**—(ಪಾ. ಸೂ.೩-೧-೧೨೩) ಎಂಬ ಸೂತ್ರದಿಂದ ಕ್ಯಪ್ ಪ್ರತ್ಯಯಾಂತವಾಗಿ ನಿಪಾತಿತವಾಗಿದೆ. ಕಿತ್ತಾದುದರಿಂದ ಪ್ರತ್ಯಯ ನಿಮಿತ್ತವಾಗಿ **ಗ್ರಹಿಜ್ಯಾವಯಿ**—ಸೂತ್ರದಿಂದ ಧಾತುವಿನ ರೇಫಕ್ಕೆ ಸಂಪ್ರಸಾರಣ. ಕ್ಯಪ್ ಪಿತ್ತಾದುದರಿಂದ **ಅನುದಾತ್ತೌಸುಪ್ಪಿತೌ** ಎಂಬುದರಿಂದ ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

**ವಿಶ್ಪತಿಃ**—ವಿಶಾಂ ಪತಿಃ ಪಾಲಯಿತಾ ವಿಶ್ಪತಿಃ. **ಪತ್ಯಾವೈಶ್ವರ್ಯೇ** (ಪಾ. ಸೂ. ೬-೨-೧೮) ಎಂಬುದರಿಂದ ಪೂರ್ವಪದ ಪ್ರಕೃತಿಸ್ವರವು ಪ್ರಾಪ್ತವಾದರೆ ಅದನ್ನು ಬಾಧಿಸಿ **ಪರಾದಿಶ್ಛಂದಸಿಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

**ವಿಕ್ಷು**—ಸಪ್ತಮೀ ಬಹುವಚನಾಂತರೂಪ **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ತ್ವಂ ನವ್ಯಸೀ ಹೃದ ಆ ಜಾಯಮಾನಮಸ್ಮತ್ಸುಕೀರ್ತಿರ್ಮಧುಜಿಹ್ವಮಶ್ಯಾಃ ।
ಯಮೃತ್ವಿಜೋ ವೃಜನೇ ಮಾನುಷಾಸಃ ಪ್ರಯಸ್ವಂತ ಆಯವೋ ಜೀಜನಂತ ॥ ೩ ॥

॥ ಪದಪಾಠಃ ॥

ತಂ । ನವ್ಯಸೀ । ಹೃದಃ । ಆ ಜಾಯಮಾನಂ । ಅಸ್ಮತ್ । ಸುಽಕೀರ್ತಿಃ । ಮಧುಽಜಿಹ್ವಂ । ಅಶ್ಯಾಃ ।
ಯಂ । ಋತ್ವಿಜಃ । ವೃಜನೇ । ಮಾನುಷಾಸಃ । ಪ್ರಯಸ್ವಂತಃ । ಆಯವಃ । ಜೀಜನಂತ ॥ ೩ ॥

॥ ಸಾಯಣಭಾಷ್ಯಂ ॥

ನವ್ಯಸೀ ನವತರಾ ಸುಕೀರ್ತಿಃ ಸುಷ್ಠು ಕೀರ್ತಯಿತ್ರ್ಯಸ್ಮತ್ ಅಸ್ಮಾಕಂ ಸ್ತುತಿರ್ಹೃದೋ ಹೃದ್ಯವಸ್ಥಿತಾತ್ಪ್ರಾಣಾಜ್ಜಾಯಮಾನಮುತ್ಪದ್ಯಮಾನಂ । ಅಗ್ನಿರ್ಹಿ ವಾಯೋರುತ್ಪದ್ಯತೇ ವಾಯುಶ್ಚ ಪ್ರಾಣ ಏವ । ಯಃ ಪ್ರಾಣಃ ಸ ವಾಯುರಿತ್ಯಾಮ್ನಾನಾತ್ । ಮಧುಜಿಹ್ವಂ ಮಾದಯಿತೃಜ್ವಾಲಂ । ಏವಂಭೂತಂ ತಮಗ್ನಿಮಾಶ್ಯಾಃ । ಆಭಿಮುಖ್ಯೇನ ವ್ಯಾಪ್ನೋತು । ವೃಜನೇ ಸಂಗ್ರಾಮೇ ಪ್ರಾಪ್ತೇ ಸತ್ಯಾಯವೋ ಮನುಷ್ಯಾ ಯಮಗ್ನಿಂ ಜೀಜನಂತ ಯಜ್ಞಾರ್ಥಮುದಪಾದಯನ್ । ಕೀದೃಶಾ ಮನುಷ್ಯಾಃ । ಋತ್ವಿಜಃ ಋತೌ ಕಾಲೇ ಯಷ್ಟಾರೋ ಮಾನುಷಾಸೋ ಮನೋಃ ಪುತ್ರಾಃ ಪ್ರಯಸ್ವಂತೋ ಹವಿರ್ಲಕ್ಷಣಾನ್ನೋಪೇತಾಃ॥ ನವ್ಯಸೀ । ನವೀಯಸೀತ್ಯತ್ರೇಕಾರಲೋಪಶ್ಛಾಂದಸಃ । ಹೃದಃ । ಅತ್ರ ಹೃದಯಶಬ್ದೇನ ತತ್ಸ್ಥಃ ಪ್ರಾಣೋ ಲಕ್ಷ್ಯತೇ । ಪದ್ದನ್ನಿತ್ಯಾದಿನಾ ಹೃದಯಶಬ್ದಸ್ಯ ಹೃದಾದೇಶಃ । ಜಾಯಮಾನಂ । ಜನೀ ಪ್ರಾದುರ್ಭಾವೇ । ಶ್ಯನಿ ಜ್ಞಾಜನೋರ್ಜೇತಿ ಜಾದೇಶಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ । ಅಸ್ಮತ್ । ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ । ಅಶ್ಯಾಃ । ಅಶೂ ವ್ಯಾಪ್ತೌ । ಲಿಙಿ ಬಹುಲಂ ಛಂದಸೀತಿ ವಿಕರಣಸ್ಯ ಲುಕ್ । ವ್ಯತ್ಯಯೇನ ಪರಸ್ಮೈಪದಮಧ್ಯಮೌ । ಜೀಜನಂತ । ಜನೀ ಪ್ರಾದುರ್ಭಾವೇ । ಣ್ಯಂತಾಲ್ಲುಙಿ ಚ್ಲೇಶ್ಚಙಾದೇಶಃ । ದ್ವಿರ್ಭಾವಹಲಾದಿಶೇಷಃ । ಣಿಚಿ ಏವ ಸ್ವರೇ ಪ್ರಾಪ್ತೇ ಸನ್ವದ್ಭಾವೇತ್ವದೀರ್ಘಾಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಚಙಿ ಏವ ಸ್ವರೇ ಪ್ರಾಪ್ತೇ ವ್ಯತ್ಯಯೇನಾಭ್ಯಸ್ತಾದ್ಯುದಾತ್ತತ್ವಂ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ನವ್ಯಸೀ—ಅತ್ಯಂತ ನವೀನವಾದುದೂ | ಸುಕೀರ್ತಿಃ—ಚೆನ್ನಾಗಿ ಗುಣಗಾನಮಾಡತಕ್ಕುದೂ ಆದ. ಅಸ್ಮತ್—ನಮ್ಮ ಸ್ತೋತ್ರವು | ಹೃದಃ—ಹೃದಯದಲ್ಲಿನ ಪ್ರಾಣದಿಂದ | ಜಾಯಮಾನಂ—ಉತ್ಪನ್ನನಾಗುವವನೂ | ಮಧುಜಿಹ್ವಂ—ಹರ್ಷದಾಯಕವಾದ ಜ್ವಾಲೆಯುಳ್ಳವನೂ ಆದ, ಮತ್ತು | ಯಂ—ಯಾವನನ್ನು | ವೃಜನೇ—ಯುದ್ಧವು ಪ್ರಾಪ್ತವಾಗಲು | ಋತ್ವಿಜಃ—ಸಕಾಲದಲ್ಲಿ ಯಜ್ಞಮಾಡತಕ್ಕವರೂ | ಮಾನುಷಾಸಃ—ಮನುಪುತ್ರರೂ | ಪ್ರಯಸ್ವಂತಃ—ಹವಿಸ್ಸಿನರೂಪದ ಅನ್ನದಿಂದ ಕೂಡಿದವರೂ ಆದ | ಆಯವಃ—ಮನುಷ್ಯರು | ಜೀಜನಂತ—(ಯಜ್ಞಕ್ಕಾಗಿ) ಉತ್ಪನ್ನನಾಗುವಂತೆ ಮಾಡಿದರೋ ಅಂತಹ | ತಂ—ಅಗ್ನಿಯನ್ನು | ಆ ಅಶ್ಯಾಃ—ಅಭಿಮುಖವಾಗಿ ಹೋಗಿ ಸೇರಿಕೊಳ್ಳಲಿ.

|| ಭಾವಾರ್ಥ ||

ಹೃದಯದ ಪ್ರಾಣದಿಂದ ಉತ್ಪನ್ನನಾಗುವವನೂ, ಹರ್ಷದಾಯಕವಾದ ಜ್ವಾಲೆಯುಳ್ಳವನೂ ಆದ ಮತ್ತು ಯಾವನನ್ನು ಯುದ್ಧಕಾಲದಲ್ಲಿ ಯಜ್ಞಕರ್ತರೂ, ಮನುಪುತ್ರರೂ ಮತ್ತು ಹವಿಸ್ಸಿನಿಂದ ಕೂಡಿದವರೂ ಆದ ಮನುಷ್ಯರು ಯಜ್ಞಕ್ಕಾಗಿ ಉತ್ಪನ್ನನಾಗುವಂತೆ ಮಾಡುವರೋ ಅಂತಹ ಅಗ್ನಿಯನ್ನು ನಮ್ಮ ಅತ್ಯಂತ ನವೀನವಾದುದೂ ಮತ್ತು ಚೆನ್ನಾಗಿ ಗುಣಗಾನಮಾಡತಕ್ಕುದೂ ಆದ ಸ್ತೋತ್ರವು ಅಭಿಮುಖವಾಗಿ ಹೋಗಿಸೇರಿಕೊಳ್ಳಲಿ.

## English Translation.

May our newest hymn reach that Agni, who is sweet-tonged, and is to be engendered in the heart; whom the decendants of Manu, sacrificing and presenting oblations to him, beget in the time of battle.

|| ವಿಶೇಷ ವಿಷಯಗಳು ||

ಸುಕೀರ್ತಿಃ—ಸುಷ್ಠು ಕೀರ್ತಯಿತ್ರೀ — ಪ್ರಶಸ್ತವಾದ ರೀತಿಯಲ್ಲಿ ಕೀರ್ತಿಯನ್ನು ಸೂಚಿಸುವ ಸ್ತುತಿ ಎಂದರ್ಥವು.

ಹೃದಃ—ಹೃತ್ ಶಬ್ದಕ್ಕೆ ಕೇವಲ ಹೃದಯವೆಂದೇ ಅರ್ಥವಿದ್ದರೂ ಇಲ್ಲಿ ಲಕ್ಷಣಾವೃತ್ತಿಯಿಂದ ಹೃದಯಾಂತರ್ಗತವಾದ ಪ್ರಾಣ ಎಂದರ್ಥಮಾಡಿದ್ದಾರೆ. ಅಗ್ನಿಯು ಪ್ರಾಣವಾಯುವಿನಿಂದ ಹುಟ್ಟುವವನು ಎಂಬಂಶವನ್ನು ಅಗ್ನಿರ್ಹಿ ವಾಯೋರುತ್ಪದ್ಯತೇ ವಾಯುಶ್ಚ ಪ್ರಾಣ ಏವ ಯಃ ಪ್ರಾಣಸ್ಯ ವಾಯುಃ ಎಂಬ ಪ್ರಮಾಣಪುರಸ್ಸರವಾಗಿ ಸಿದ್ಧಾಂತಮಾಡಿರುವರು.

ಮಧುಜಿಹ್ವಂ—ಸರ್ವವನ್ನೂ ಆಸ್ವಾದಿಸುವ ನಾಲಿಗೆ ಅಂದರೆ ಜ್ವಾಲೆ ಎಂದರ್ಥ. ಅಂತಹ ಜ್ವಾಲೆಯುಳ್ಳವನು ಅಗ್ನಿಯು.

ಋತ್ವಿಜಃ—ಋತೌ ಕಾಲೇ ಯಷ್ಟಾರಃ—ಕಾಲಾತಿಕ್ರಮಣವಿಲ್ಲದೆ ಅಗ್ನಿಹೋತ್ರಾದಿ ಕರ್ಮಗಳನ್ನು ನಡೆಸುತ್ತಾ ಆಹುತಿಕೊಡುತ್ತಿರುವವರು ಎಂದರ್ಥ.



CC-0. Jangamwadi Math Collection. Digitized by eGangotri

**ಮಾನುಷಾಸಃ—ಮನೋಃ ಪುತ್ರಾಃ**—ಮಾನವರು ಎಂದರ್ಥ.

|| ವ್ಯಾಕರಣಪ್ರಕ್ರಿಯಾ ||

**ನವ್ಯಸೀ**—ನವಶಬ್ದ. ಇದಕ್ಕೆ ಅತಿಶಯಾರ್ಥತೋರುವಾಗ **ದ್ವಿವಚನವಿಭಜ್ಯೋಪಪದೇ**—ಸೂತ್ರದಿಂದ ಈಯಸುನ್ ಪ್ರತ್ಯಯ. ಪ್ರತ್ಯಯನಿಮಿತ್ತವಾಗಿ ಅಕಾರಲೋಪ. ಈಯಸುನ್ ಪ್ರತ್ಯಯದಲ್ಲಿ ಉಕಾರ ನಕಾರಗಳು ಇತ್ಸಂಜ್ಞೆಯನ್ನು ಹೊಂದುತ್ತವೆ. ಸ್ತ್ರೀತ್ವತೋರುವಾಗ **ಉಗಿತಶ್ಚ** (ಪಾ. ಸೂ. ೪-೧-೬) ಎಂಬುದರಿಂದ ಙೀಪ್. ಙೀಪ್ ಪಿತ್ತಾದುದರಿಂದ ಅನುದಾತ್ತ. ಈಯಸುನ್ ನಿತ್ತಾದುದರಿಂದ ಆದ್ಯುದಾತ್ತವಾಗುತ್ತದೆ. ಛಾಂದಸವಾಗಿ ಸಂಹಿತಾದಲ್ಲಿ ಈಕಾರಕ್ಕೆ ಲೋಪ ಬಂದಿದೆ.

**ಹೃದಃ**—ಹೃದಯ ಶಬ್ದ. ಇಲ್ಲಿ ಹೃದಯ ಶಬ್ದದಿಂದ ಹೃದಯದಲ್ಲಿರುವ ಪ್ರಾಣವು ಲಕ್ಷಣಾವೃತ್ತಿಯಿಂದ ಬೋಧಿತವಾಗುತ್ತದೆ. **ಪದ್ದನ್ನೋಮಾಸ್**—(ಪಾ. ಸೂ. ೬.೧-೬೩) ಎಂಬುದರಿಂದ ಪಂಚಮೀ ಏಕವಚನಪರವಾದಾಗ ಪ್ರಕೃತಿಗೆ ಹೃದಾದೇಶ. **ಊಡಿದಂಪದಾದಿ**—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ಜಾಯಮಾನಮ್**—ಜನೀ ಪ್ರಾದುರ್ಭಾವೇ ಧಾತು. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ದಿವಾದಿಭ್ಯಃಶ್ಯನ್ ಎಂಬುದರಿಂದ ಶ್ಯನ್ ವಿಕರಣ. ಇದು ಪರವಾದಾಗ **ಜ್ಞಾಜನೋರ್ಜಾ** (ಪಾ. ಸೂ. ೭-೩-೭೯) ಎಂಬುದರಿಂದ ಧಾತುವಿಗೆ ಜಾದೇಶ. **ಆನೇಮುಕ್** ಸೂತ್ರದಿಂದ ವಿಕರಣವಿಶಿಷ್ಟವಾದ ಅಂಗಕ್ಕೆ ಮುಕಾಗಮ ಕಿತ್ತಾದುದರಿಂದ ಅಂತಾವಯವವಾಗಿ ಬರುತ್ತದೆ. ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಆನ) **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುತ್ತದೆ. ಶ್ಯನ್ ನಿತ್ತಾದುದರಿಂದ **ಞ್ನಿತ್ಯಾದಿರ್ನಿತ್ಯಮ್** ಎಂಬುದು ಆದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

**ಅಸ್ಮತ್**—ಷಷ್ಠೀಬಹುವಚನ (ಆಮ್) ಪರವಾದಾಗ **ಸುಪಾಂಸುಲುಕ್**—ಸೂತ್ರದಿಂದ ಆಮಿಗೆ ಲುಕ್.

**ಅಶ್ಯಾಃ**—ಅಶೂ ವ್ಯಾಪ್ತೌ ಧಾತು. ಲಿಙ್ ಮಧ್ಯಮಪುರುಷ ಏಕವಚನದಲ್ಲಿ ಸಿಪ್. **ಇತಶ್ಚ** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಬಹುಲಂಛಂದಸಿ** ಎಂಬುದರಿಂದ ವಿಕರಣಕ್ಕೆ (ಶ್ನು) ಲುಕ್. **ಯಾಸುಟ್‌ಪರ—ವ್ಯತ್ಯಯೋಬಹುಲಂ** ಎಂಬುದರಿಂದ ಅನುದಾತ್ತೇತ್ತಾದರೂ ಆತ್ಮನೇಪದಪ್ರತ್ಯಯ ಬಂದಿದೆ. ಅತಿಙಂತದ ಸೂತ್ರದಿಂದ ಯಾಸುಟಾಗಮ. **ಲಿಙಃಸಲೋಪೋನಂತ್ಯಸ್ಯ** ಸೂತ್ರದಿಂದ ಸಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಜೀಜನಂತ**—ಜನೀ ಪ್ರಾದುರ್ಭಾವೇ ಧಾತು. ಪ್ರೇರಣಾರ್ಥ ತೋರುವುದರಿಂದ **ಹೇತುಮತಿಚ** ಸೂತ್ರದಿಂದ ಣಿಚ್. **ಸನಾದ್ಯಂತಾಧಾತವಃ** ಎಂಬುದರಿಂದ ಣಿಜಂತಕ್ಕೆ ಧಾತುಸಂಜ್ಞಾ. ಣ್ಯಂತದಮೇಲೆ ಲುಙ್. ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ **ಣಿಶ್ರಿದ್ರುಸ್ರುಭ್ಯಃ ಕರ್ತರಿಚಙ್** (ಪಾ. ಸೂ. ೩-೧-೪೮) ಎಂಬುದರಿಂದ ಚಙಾದೇಶ. **ಚಙಿ** (ಪಾ. ಸೂ. ೬-೧-೧೧) ಎಂಬುದರಿಂದ ಧಾತುವಿಗೆ ದ್ವಿತ್ವ. ಪ್ರಥಮಪುರುಷ ಬಹುವಚನದಲ್ಲಿ **ಝೋಽಂತಃ** ಎಂಬುದರಿಂದ ಅಂತಾದೇಶ. ಅಭ್ಯಾಸಕ್ಕೆ ಹಲಾದಿಶೇಷ. **ಸನ್ವಲ್ಲಘುನಿ ಚಙ್‌ಪರೇ**—(ಪಾ. ಸೂ. ೭-೪-೯೩) ಎಂಬುದರಿಂದ ಚಙಂತಕ್ಕೆ ಸನ್ವದ್ಭಾವ. ಆಗ **ಸನ್ಯತಃ** (ಪಾ. ಸೂ. ೭-೪-೭೯) ಎಂಬುದರಿಂದ ಅಭ್ಯಾಸ ಅಕಾರಕ್ಕೆ ಇತ್ವ. **ದೀರ್ಘೋಲಘೋಃ** ಎಂಬುದರಿಂದ ಅದಕ್ಕೆ ದೀರ್ಘ. **ಬಹುಲಂ ಛಂದಸ್ಯ-ಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗನು ಬರುವುದಿಲ್ಲ. ಇಲ್ಲಿ ಅದುಪದೇಶದ ಪರದಲ್ಲಿ ಲಸಾರ್ವಧಾತುಕವು (ಝು) ಬಂದುದರಿಂದ **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ಚಙ್ ಪ್ರತ್ಯಯ



CC-0. Jangamwadi Math Collection. Digitized by eGangotri

ಸ್ವರವು ಸತಿಶಿಷ್ಟವಾಗುವುದರಿಂದ ಅದು ಉಳಿಯಬೇಕಾಗುತ್ತದೆ. ಆದರೆ ವ್ಯತ್ಯಯದಿಂದ ಅಭ್ಯಸ್ತಾನಾಮಾದಿಃ (ಪಾ. ಸೂ. ೬-೧-೧೮೯) ಎಂಬುದರಿಂದ ಅಭ್ಯಸ್ತಾದ್ಯುದಾತ್ತಸ್ವರ ಬರುತ್ತದೆ.

ಸಂಹಿತಾಪಾಠಃ

ಉಶಿಕ್ಪಾವಕೋ ವಸುರ್ಮಾನುಷೇಷು ವರೇಣ್ಯೋ ಹೋತಾಧಾಯಿ ವಿಕ್ಷು ।
ದಮೂನಾ ಗೃಹಪತಿರ್ದಮ ಆँ ಅಗ್ನಿರ್ಭುವದ್ರಯಿಪತೀ ರಯೀಣಾಂ ॥೪॥

॥ ಪದಪಾಠಃ ॥

ಉಶಿಕ್ । ಪಾವಕಃ । ವಸುಃ । ಮಾನುಷೇಷು । ವರೇಣ್ಯಃ । ಹೋತಾ । ಅಧಾಯಿ । ವಿಕ್ಷು ।
ದಮೂನಾಃ । ಗೃಹಽಪತಿಃ । ದಮೇ । ಆ । ಅಗ್ನಿಃ । ಭುವತ್ । ರಯಿಽಪತಿಃ । ರಯೀಣಾಂ ॥ ೪ ॥

॥ ಸಾಯಣಭಾಷ್ಯಂ ॥

ಉಶಿಕ್ ಕಾಮಯಮಾನಃ ಪಾವಕಃ ಶೋಧಕೋ ವಸುರ್ನಿವಾಸಯಿತಾ ವರೇಣ್ಯೋ ವರಣಶೀಲಃ ಏವಂಭೂತೋ ಹೋತಾಗ್ನಿರ್ವಿಕ್ಷು ಯಜ್ಞಗೃಹಂ ಪ್ರವಿಷ್ಟೇಷು ಮಾನುಷೇಷು ಯಜಮಾನೇಷ್ವಧಾಯಿ । ಸ್ಥಾಪ್ಯತೇ । ಸ ಚಾಗ್ನಿರ್ದಮೂನಾ ರಕ್ಷಸಾಂ ದಮನಕಾರಿಣಾ ಮನಸಾ ಯುಕ್ತೋ ಗೃಹಪತಿರ್ಗೃಹಾಣಾಂ ಪಾಲಯಿತಾ ಚ ಸನ್ದಮೇ ಯಜ್ಞಗೃಹೇ ರಯಿಪತಿರ್ಧನಾಧಿಪತಿರಾ ಭುವತ್ । ಆ ಸಮಂತಾದ್ಭವತಿ । ನ ಕೇವಲಮೇಕಸ್ಯ ರಯೇರಪಿ ತು ಸರ್ವೇಷಾಮಿತ್ಯಾಹ ರಯೀಣಾಮಿತಿ । ಯದ್ವಾ । ರಯೀಣಾಂ ಮಧ್ಯ ಉತ್ಕೃಷ್ಟಂ ಯದ್ಧನಂ ತಸ್ಯ ಪತಿರಿತ್ಯರ್ಥಃ ॥ ಅಧಾಯಿ । ಛಂದಸಿ ಲುಙ್ಲಙ್ಲಿಟ ಇತಿ ವರ್ತಮಾನೇ ಕರ್ಮಣಿ ಲುಙ್ ಚ್ಲೇಶ್ಚಿಣಾದೇಶ ಆತೋ ಯುಕ್ ಚಿಣ್ಕೃತೋರಿತಿ ಯುಗಾಗಮಃ । ದಮಯತಿ ರಾಕ್ಷಸಾದಿಕಮಿತಿ ದಮೂನಾಃ । ದಮು ಉಪಶಮೇ । ದಮೇರೂನಸಿಃ । ಉ. ೪-೨೩೪ । ಇತ್ಯೌಣಾದಿಕ ಊನಸಿಪ್ರತ್ಯಯಃ । ಯಾಸ್ಕಸ್ತ್ವಾಹ । ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವಾಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್ । ನಿ. ೪-೪ । ಇತಿ । ದಮೇ ಆ ಅಗ್ನಿಃ । ಆಙೋಽನುನಾಸಿಕಶ್ಛಂದಸೀತ್ಯಾಕಾರಸ್ಯ ಸಾನುನಾಸಿಕತ್ವಂ । ಪ್ರಕೃತಿಭಾವಶ್ಚ । ಭುವತ್ । ಲೇಟ್ಯಡಾಗಮಃ । ಇತಶ್ಚ ಲೋಪ ಇತೀಕಾರಲೋಪಃ । ರಯಿಪತಿಃ । ಪರಾದಿಶ್ಛಂದಸಿ ಬಹುಲಮಿತ್ಯುತ್ತರಪದಾದ್ಯುದಾತ್ತತ್ವಂ । ರಯೀಣಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ ॥



CC-0. Jangamwadi Math Collection. Digitized by eGangotri

॥ ಪ್ರತಿಪದಾರ್ಥ ॥

**ಉಶಿಕ್**—ಪ್ರಿಯನಾದವನೂ । **ಪಾವಕಃ**—ಶುದ್ಧಿಮಾಡತಕ್ಕವನೂ । **ವಸುಃ**—ವಾಸಸ್ಥಾನವನ್ನು ಕಲ್ಪಿಸುವವನೂ । **ವರೇಣ್ಯಃ**—ಶ್ರೇಷ್ಠನೂ ಆದ । **ಹೋತಾ**—ಅಗ್ನಿಯು । **ವಿಕ್ಷು**—ಯಜ್ಞಗೃಹವನ್ನು ಪ್ರವೇಶಿಸಿದ (ಗೃಹದಲ್ಲಿರುವ) । **ಮಾನುಷೇಷು**—ಯಜಮಾನರ ನಡುವೆ । **ಅಧಾಯಿ**—(ವೇದಿಕೆಯ ಮೇಲೆ) ಸ್ಥಾಪಿತನಾಗುತ್ತಾನೆ । **ಅಗ್ನಿಃ**—ಆ ಅಗ್ನಿಯು । **ದಮೂನಾಃ**—ಶತ್ರುನಾಶಕವಾದ ಮನಸ್ಸಿನಿಂದ ಕೂಡಿಯೂ । **ಗೃಹಪತಿಃ**—ಗೃಹಪಾಲಕನಾಗಿಯೂ । **ದಮೇ**—ಯಜ್ಞಗೃಹದಲ್ಲಿ । **ರಯೀಣಾಂ**—ಐಶ್ವರ್ಯಗಳ ನಡುವೆ । **ರಯಿಪತಿಃ**—(ಉತ್ತಮವಾದ) ಧನಕ್ಕೆ ಅಧಿಪತಿಯಾಗಿಯೂ । **ಆ ಭುವತ್**—ಇರಲಿ ॥

॥ ಭಾವಾರ್ಥ ॥

ಪ್ರಿಯನೂ, ಪಾವನಕಾರಕನೂ, ವಾಸಸ್ಥಾನದಾತನೂ ಮತ್ತು ಶ್ರೇಷ್ಠನೂ ಆದ ಅಗ್ನಿಯು ಯಜ್ಞಗೃಹದಲ್ಲಿ ಯಜಮಾನರ ನಡುವೆ ವೇದಿಕೆಯಮೇಲೆ ಸ್ಥಾಪಿತನಾಗುತ್ತಾನೆ. ಆ ಅಗ್ನಿಯು ಶತ್ರುನಾಶಕವಾದ ಮನಸ್ಸಿನಿಂದ ಕೂಡಿಯೂ ಗೃಹಪಾಲಕನಾಗಿಯೂ ಯಜ್ಞಗೃಹದಲ್ಲಿರುವ ಶ್ರೇಷ್ಠವಾದ ಐಶ್ವರ್ಯಗಳ ನಡುವೆ ಉತ್ತಮವಾದ ಧನಕ್ಕೆ ಅಧಿಪತಿಯಾಗಿಯೂ ಇರಲಿ.

## English Translation.

Agni, the desirable, the purifying, the giver of dwellings, the excellent, the invoker (of the gods) has been placed (upon the altar) among men; may he be determined upon subduing (our foes) the protector of our dwellings, and the lord of treasures in the sacrificial chamber.

ವಿಶೇಷ ವಿಷಯಗಳು

**ಉಶಿಕ್**—**ಕಾಮಯಮಾನಃ**—ವಿಶೇಷವಾಗಿ ಅಪೇಕ್ಷಿಸುವವನು.

**ದಮೂನಾಃ**—**ದಮು-ಉಪಶಮೇ** । **ದಮಯತಿ ರಾಕ್ಷಸಾದಿಕಮಿತಿ ದಮೂನಾಃ** । ರಾಕ್ಷಸರನ್ನು ನಾಶಗೊಳಿಸುವ ಮನಸ್ಸಿನಿಂದ ಕೂಡಿದವನು. **ದಮೂನಾ ದಮಮಾನಾ ವಾ, ದಾನಮನಾ ವಾ, ದಾಂತಮನಾ ವಾಪಿ, ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್** (ನಿರು. ೪-೪) ಎಂಬ ನಿರುಕ್ತದ ರೀತಿಯಾಗಿ, ನಾಶಮಾಡುವ ಮನಸ್ಸಿನವ ಎಂದು ಇಲ್ಲಿ ಅರ್ಥಮಾಡಿದ್ದಾರೆ.

**ರಯಿಪತಿಃ ರಯೀಣಾಂ**—**ರಯೀಣಾಂ ಮಧ್ಯೇ ಉತ್ಕೃಷ್ಟಂ ಯದ್ಧನಂ ತಸ್ಯ ಪತಿರಿತ್ಯರ್ಥಃ** । ರಯಿಶಬ್ದಕ್ಕೆ ಇಲ್ಲಿ ಧನವೆಂದರ್ಥ. ಕೇವಲ ಧನಕ್ಕೆ ಮಾತ್ರ ಅಧಿಪತಿಯಲ್ಲ. ಅಗ್ನಿಯು ಪ್ರಪಂಚದಲ್ಲಿ ಸಮಸ್ತವಿಧವಾದ ಐಶ್ವರ್ಯಗಳಿಗೂ ಒಡೆಯನಾದವನು ಎಂಬರ್ಥವನ್ನು ಸೂಚಿಸಲು ಮೇಲೆ ಹೇಳಿದಂತೆ ಈ ಶಬ್ದಕ್ಕೆ ವ್ಯುತ್ಪತ್ತಿಯನ್ನು ಕಲ್ಪಿಸಿದ್ದಾರೆ.

**ಆ ಭುವತ್**—**ಆಸಮಂತಾತ್ ಭವತಿ**—ಸಂಪೂರ್ಣವಾದ ರೀತಿಯಲ್ಲಿ ಸಮರ್ಥನಾಗಿರುತ್ತಾನೆ.





CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

**ಅಧಾಯಿ**—ಡುಧಾಞ್ ಧಾರಣಪೋಷಣಯೋಃ ಧಾತು. ವರ್ತಮಾನಾರ್ಥದಲ್ಲಿ ಛಾಂದಸವಾಗಿ ಕರ್ಮಣಿಯಲ್ಲಿ ಲುಙ್. ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. **ಚಿಣ್‌ಭಾವಕರ್ಮಣೋಃ** ಎಂಬುದರಿಂದ ಚ್ಲಿಗೆ ಚಿಣಾದೇಶ. **ಆತೋಯುಕ್ ಚಿಣ್‌ಕೃತೋಃ** (ಪಾ. ಸೂ. ೭-೩-೩೩) ಎಂಬುದರಿಂದ ಚಿಣ್ ಪರವಾದಾಗ ಪೂರ್ವಕ್ಕೆ ಯುಕಾಗಮ. **ಚಿಣೋಲುಕ್**—ಎಂಬುದರಿಂದ ಚಿಣಿನ ಪರದಲ್ಲಿರುವ ಶಬ್ದಕ್ಕೆ ಲುಕ್. ಅಂಗಕ್ಕೆ ಅಡಾಗಮ. ಆತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ವಿಕ್ಷು**—ವಿಶ್ ಶಬ್ದದ ಸಪ್ತಮೀ ಬಹುವಚನಾಂತರೂಪ. **ಸಾವೇಕಾಚಸ್ತೃತೀಯಾದಿಃ** ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದಮೂನಾಃ**—ದಮಯಂತಿ ರಾಕ್ಷಸಾದಿಕಮಿತಿ ದಮೂನಾಃ ದಮು ಉಪಶಮೇ ಧಾತು. ಇದಕ್ಕೆ **ದಮೇರೂನಸಿಃ** (ಉ. ಸೂ. ೪-೬೭೪) ಎಂಬುದರಿಂದ ಊನಸಿ ಪ್ರತ್ಯಯ. ದಮೂನಸ್ ಶಬ್ದವಾಗುತ್ತದೆ. ಯಾಸ್ಕರು ಈ ರೀತಿಯಾಗಿ ನಿರ್ವಚನ ಮಾಡಿರುತ್ತಾರೆ. ದಮೂನಾ ದಮಮನಾ ವಾ ದಾನಮನಾ ವಾ ದಾಂತಮನಾ ವಾಪಿ ವಾ ದಮ ಇತಿ ಗೃಹನಾಮ ತನ್ಮನಾಃ ಸ್ಯಾತ್ (ನಿರು. ೪-೪) ಶಾಂತಿ ಹೊಂದುವವರು, ದಾನಮನಸ್ಸುಳ್ಳವರು. ಅಥವಾ ನಿಗ್ರಹಿಸಲ್ಪಟ್ಟ ಮನಸ್ಸುಳ್ಳವರು ಅಥವ ದಮವೆಂದರೆ ಮನೆ ಇದರಲ್ಲಾಸಕ್ತಿ ಯುಳ್ಳವರು ಎಂದರ್ಥ.

**ದಮ ಆ ಅಗ್ನಿಃ**—ಆಙೋಽನುನಾಸಿಕಶ್ಛಂದಸಿ (ಪಾ. ಸೂ. ೬-೧-೧೨೬) ಎಂಬುದರಿಂದ ಆಕಾರಕ್ಕೆ ಸಾನುನಾಸಿಕತ್ವವೂ ಪ್ರಕೃತಿಭಾವವೂ ಬರುತ್ತದೆ.

**ಭುವತ್**—ಭೂ ಸತ್ತಾಯಾಂ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚ ಲೋಪಃಪರಸ್ಮೈಪದೇಷು** ಎಂಬುದರಿಂದ ಅದರ ಇಕಾರಕ್ಕೆ ಲೋಪ. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. ಬಹುಲಂಛಂದಸಿ ಎಂಬುದರಿಂದ ಶಪಿಗೆ ಲುಕ್. ತಿಙಂತನಿಘಾತಸ್ವರ ಬರುತ್ತದೆ.

**ರಯಿಪತಿಃ**—ಷಷ್ಠೀ ತತ್ಪುರುಷ ಸಮಾಸ. **ಪರಾದಿಶ್ಛಂದಸಿಬಹುಲಂ** (ಪಾ. ಸೂ. ೬-೨-೧೯೯) ಎಂಬುದರಿಂದ ಉತ್ತರಪದ ಆದ್ಯುದಾತ್ತಸ್ವರ ಬರುತ್ತದೆ.

**ರಯೀಣಾಮ್**—ರಯಿ ಶಬ್ದಕ್ಕೆ ಷಷ್ಠೀ ಬಹುವಚನ ಪರವಾದಾಗ **ಹ್ರಸ್ವನದ್ಯಾಪೋನುಟ್** ಎಂಬುದರಿಂದ ನುಡಾಗಮ. ನಾಮಿ ಸೂತ್ರದಿಂದ ಅಜಂತಾಂಗಕ್ಕೆ ದೀರ್ಘ. **ನಾಮನ್ಯತರಸ್ಯಾಮ್** (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ತಂ ತ್ವಾ ವಯಂ ಪತಿಮಗ್ನೇ ರಯೀಣಾಂ ಪ್ರ ಶಂಸಾಮೋ ಮತಿಭಿ-
ರ್ಗೋತಮಾಸಃ
ಆಶುಂ ನ ವಾಜಂಭರಂ ಮರ್ಜಯಂತಃ ಪ್ರಾತರ್ಮಕ್ಷೂಧಿಯಾವಸುರ್ಜ-
ಗಮ್ಯಾತ್ ॥ ೫ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ತಂ । ತ್ವಾ । ವಯಂ । ಪತಿಂ । ಅಗ್ನೇ । ರಯೀಣಾಂ । ಪ್ರ । ಶಂಸಾಮಃ । ಮ-
ತಿಽಭಿಃ । ಗೋತಮಾಸಃ ।
ಆಶುಂ । ನ । ವಾಜಂಽಭರಂ । ಮರ್ಜಯಂತಃ । ಪ್ರಾತಃ । ಮಕ್ಷು । ಧಿಯಾ-
ವಸುಃ । ಜಗಮ್ಯಾತ್ ॥ ೫ ॥

॥ ಸಾಯಣಭಾಷ್ಯಂ ॥

ಗೋತಮಾಸೋ ಗೋತಮಗೋತ್ರೋತ್ಪನ್ನಾ ವಯಂ । ನೋಧಸಃ ಸ್ತೋತುರೇಕತ್ವೇಽಪ್ಯಾತ್ಮನಿ ಪೂಜಾರ್ಥಂ ಬಹುವಚನಂ । ಹೇ ಅಗ್ನೇ ರಯೀಣಾಂ ಧನಾನಾಂ ಪತಿಂ ರಕ್ಷಿತಾರಂ ತಾದೃಶಂ ತ್ವಾ ತ್ವಾಂ ಮತಿಭಿರ್ಮನನೀಯೈಃ ಸ್ತೋತ್ರೈಃ ಪ್ರಶಂಸಾಮಃ । ಪ್ರಕರ್ಷೇಣ ಸ್ತುಮಃ । ಕಿಂ ಕುರ್ವಂತಃ । ವಾಜಂ-ಭರಂ ವಾಜಸ್ಯ ಹವಿರ್ಲಕ್ಷಣಾನ್ನಸ್ಯ ಭರ್ತಾರಂ ತ್ವಾಂ ಮರ್ಜಯಂತೋ ಮಾರ್ಜಯಂತಃ । ತತ್ರ ದೃಷ್ಟಾಂತಃ । ಆಶುಂ ನ ಅಶ್ವಮಿವ । ಯಥಾಶ್ವಮಾರೋಹಂತಃ ಪುರುಷಾಸ್ತಸ್ಯ ವಹನಪ್ರದೇಶಂ ಹಸ್ತೈರ್ನಿಮೃಜಂತಿ । ತದ್ವದ್ವಯಮಪ್ಯಗ್ನೇರ್ಹವಿರ್ವಹನಪ್ರದೇಶಂ ನಿಮೃಜಂತ ಇತ್ಯರ್ಥಃ । ತಥಾ ಚಾಗ್ನಿಸಂಮಾರ್ಜನಪ್ರಕರಣೇ ವಾಜಸನೇಯಿಭಿರಾಮ್ನಾತಂ । ಅಥ ಮಧ್ಯೇ ತೂಷ್ಣೀಮೇವ ತ್ರಿಃ ಸಂಮಾರ್ಷ್ಟಿ ಯಥಾ ಯುಕ್ತ್ವಾ ಪ್ರೇಹಿ ವಹೇತಿ ವ್ರಜೇದೇವಮೇತದಗ್ನಿಂ ಯುಕ್ತ್ವೋಪಕ್ಷಿಪತಿ ಪ್ರೇಹಿ ದೇವೇಭ್ಯೋ ಹವ್ಯಂ ವಹೇತಿ । ಧಿಯಾವಸುಃ ಕರ್ಮಣಾ ಬುದ್ಧ್ಯಾ ವಾ ಪ್ರಾಪ್ತಧನಃ ಸೋಽಗ್ನಿಃ ಪ್ರಾತಃ ಶ್ವೋಭೂತಸ್ಯಾಹ್ನಃ ಪ್ರಾತಃಕಾಲೇ ಮಕ್ಷು ಶೀಘ್ರಂ ಜಗಮ್ಯಾತ್ । ಆಗಚ್ಛತು ॥ ಮತಿಭಿಃ । ಮನ ಜ್ಞಾನ ಇತ್ಯಸ್ಮಾತ್ಕರ್ಮಣಿ ಕ್ತಿನ್ । ಮಂತ್ರೇ ವೃಷೇಷೇತ್ಯಾದಿನಾ ತಸ್ಯೋದಾತ್ತತ್ವಂ । ವಾಜಂಭರಂ । ಅಗ್ನೇರೇಷಾ ವೈದಿಕೀ ಸಂಜ್ಞಾ । ಸಂಜ್ಞಾಯಾಂ ಭೃತೃವೃಜೀತಿ । ಪಾ. ೩.೨.೪೬ । ವಾಜಶಬ್ದೇ ಕರ್ಮ-ಣ್ಯುಪಪದೇ ಖಚ್ಪ್ರತ್ಯಯಃ । ಅರುರ್ದ್ವಿಷದಜಂತಸ್ಯ ಮುಮ್ । ಪಾ. ೬.೩.೬೭ । ಇತಿ ಮುಮಾಗಮಃ । ಚಿತ ಇತ್ಯಂತೋದಾತ್ತತ್ವಂ । ಮರ್ಜಯಂತಃ । ಸಂಜ್ಞಾಪೂರ್ವಕಸ್ಯ ವಿಧೇರನಿತ್ಯತ್ವಾತ್ ಮೃಜೇರ್ವೃದ್ಧಿಃ । ಪಾ. ೭-೨-೧೧೪ । ಇತಿ ವೃದ್ಧ್ಯಭಾವಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ಣಿಚ ಏವ ಸ್ವರಃ ಶಿಷ್ಯತೇ । ಜಗಮ್ಯಾತ್ । ಲಿಙಿ ಬಹುಲಂ ಛಂದಸೀತಿ ಶಪಃ ಶ್ಲುಃ ॥

॥ ಪ್ರತಿಪದಾರ್ಥ ॥

ಅಗ್ನೇ—ಎಲೈ ಅಗ್ನಿಯೇ । ಗೋತಮಾಸಃ—ಗೋತಮವಂಶೋತ್ಪನ್ನರಾದ । ವಯಂ—ನಾವು । ರಯೀಣಾಂ—ಧನಗಳಿಗೆ । ಪತಿಂ—ಪಾಲಕನಾದ । ತಂ ತ್ವಾ—ಆ ನಿನ್ನನ್ನು । ಮತಿಭಿಃ—ಗ್ರಾಹ್ಯಗಳಾದ ಸ್ತೋತ್ರಗಳಿಂದ । ಪ್ರ ಶಂಸಾಮಃ—ಸ್ತುತಿಸುವೆವು । ಆಶುಂ ನ—(ಅಶ್ವಾರೋಹಿಯು) ಕುದುರೆಯನ್ನು ಉಜ್ಜುವಂತೆ । ವಾಜಂಭರಂ—ಹವಿಸ್ಸಿನ ರೂಪದ ಅನ್ನಕ್ಕೆ ಒಡೆಯನಾದ ನಿನ್ನನ್ನು । ಮರ್ಜಯಂತಃ—ಉಜ್ಜುತ್ತ ।



CC-0. Jangamwadi Math Collection. Digitized by eGangotri

ಧಿಯಾವಸುಃ—(ಪವಿತ್ರವಾದ) ಕರ್ಮದಿಂದ ಅಥವಾ ಬುದ್ಧಿಯಿಂದ ಹೊಂದಿದ ಧನವುಳ್ಳ ಅಗ್ನಿಯು| ಪ್ರಾತಃ_ ಬೆಳಗ್ಗೆ | ಮಕ್ಷು—ಜಾಗ್ರತೆಯಾಗಿ | ಜಗಮ್ಯಾತ್—ಬರಲಿ ||

|| ಪ್ರತಿಪದಾರ್ಥ ||

ಎಲೈ ಅಗ್ನಿಯೇ, ಗೋತಮ ವಂಶೋತ್ಪನ್ನರಾದ ನಾವು ಧನಗಳ ಪಾಲಕನಾದ ನಿನ್ನನ್ನು ಗ್ರಾಹ್ಯಗಳಾದ ಸ್ತೋತ್ರಗಳಿಂದ ಅಶ್ವಾರೋಹಿಯು ಕುದುರೆಯನ್ನು ಉಜ್ಜುವಂತೆ ಹವಿಸ್ಸಿಗೆ ಒಡೆಯನಾದ ನಿನ್ನನ್ನು ಉಜ್ಜುತ್ತ ಸ್ತುತಿಸುವೆವು. ಪವಿತ್ರಕರ್ಮದಿಂದ ಸಂಪಾದಿಸಿದ ಧನವುಳ್ಳ ಅಗ್ನಿಯು ಬೆಳಗ್ಗೆ ಯಜ್ಞಭೂಮಿಗೆ ಜಾಗ್ರತೆ ಬರಲಿ.

## English Translation.

We, born of the race of Gotama, praise you, Agni. the protector of riches, with desirable hymns; rubbing you, the bearer of oblations (as a rider rubs down) a horse; may he who has acquired riches by sacred rites, come hither quickly in the morning.

|| ವಿಶೇಷ ವಿಷಯಗಳು ||

ಗೋತಮಾಸಃ—ಗೋತಮಗೋತ್ರೋತ್ಪನ್ನರಾದವರು. ಇದು ವಯಂ ಎಂಬ ಪದಕ್ಕೆ ವಿಶೇಷಣವೆನಿಸಿ ಬಹುವಚನವಾಗಿದೆ. ಪ್ರಕೃತಸಂದರ್ಭದಲ್ಲಿ ಸ್ತೋತ್ರಮಾಡುವವನು ಒಬ್ಬನೇ ಆಗಿದ್ದರೂ ಬಹುವಚನವನ್ನು ಉಪಯೋಗಿಸಿರುವುದು. ತನ್ನಲ್ಲಿ ಪೂಜಾರ್ಥವಾದ ಮರ್ಯಾದೆಯನ್ನು ಸೂಚಿಸುವುದಕ್ಕಾಗಿ.

ಮತಿಭಿಃ—ಮನನೀಯೈಃ ಸ್ತೋತ್ರೈಃ—ಜ್ಞಾನವಿಷಯಕವಾದ ಸ್ತುತಿವಚನಗಳಿಂದ. ಮನ ಜ್ಞಾನೇ ಎಂಬ ಧಾತುಜನ್ಯವಾದ ಪದ ಇದು.

ವಾಜಂಭರಂ—ವಾಜವೆಂದರೆ ಹವಿರ್ಲಕ್ಷಣದಿಂದ ಕೂಡಿದ ಅನ್ನ. (ನಿರು. ೩-೯) ಅಂತಹ ಅನ್ನಕ್ಕೆ ಅಧಿಪತಿಯಾದವನು ವಾಜಂಭರ—ಅಗ್ನಿ.

ಅತುಂ ನ—ಅಶ್ವಮಿವ—ಇಲ್ಲಿ ಅಗ್ನಿ ಸಂಮಾರ್ಜನಪ್ರಕರಣವನ್ನು ಸೂಚಿಸಲಾಗಿದೆ. ಕುದುರೆಯ ಮೇಲೆ ಕುಳಿತುಕೊಳ್ಳುವವರು ಮೊದಲು ಕುದುರೆಯ ಬೆನ್ನನ್ನು ಶುದ್ಧಿಗೊಳಿಸುವಂತೆ ಹವಿಸ್ಸನ್ನು ದೇವತೆಗಳಿಗೆ ಒಯ್ಯುವ ಅಗ್ನಿಯನ್ನು ಮೊದಲು ಮಾರ್ಜನಾದಿಗಳಿಂದ ಶುದ್ಧಿಗೊಳಿಸುವರು. ಅಗ್ನಿಸಂಮಾರ್ಜನ ಪ್ರಕರಣದಲ್ಲಿ ವಾಜಸನೇಯ ಮಂತ್ರವು ಈ ರೀತಿ ಇರುವುದು. ಅಥ ಮಧ್ಯೇ ತೂಷ್ಣೀಮೇವ ತ್ರಿಃ ಸಂಮಾರ್ಷ್ಟಿ ಯಥಾ ಯುಕ್ತ್ವಾಪ್ರೇಹಿ ವಹೇತಿ ವ್ರಜೇದೇವಮೇತದಗ್ನಿಂ ಯುಕ್ತ್ವೋಪಪ್ರೇಕ್ಷಿಪತಿ ಪ್ರೇಹಿ ದೇವೇಭ್ಯೋ ಹವ್ಯಂ ವಹ.

ಧಿಯಾವಸುಃ—ಕರ್ಮಣಾ ಬುದ್ಧ್ಯಾ ವಾ ಪ್ರಾಪ್ತಧನಃ ಸೋಽಗ್ನಿಃ | ಕರ್ಮದಿಂದಾಗಲಿ, ಬುದ್ಧಿಪೂರ್ವಕವಾಗಿಯಾಗಲಿ, ಸಮಸ್ತ ಐಶ್ವರ್ಯವನ್ನೂ ಪಡೆದಿರುವವನು ಅಗ್ನಿಯು.



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

**ಶಂಸಾಮಃ**—ಶಂಸು ಸ್ತುತೌ ಧಾತು. ಲಟ್ ಉತ್ತಮಪುರುಷ ಬಹುವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮತಿಭಿಃ**—ಮನ ಜ್ಞಾನೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಕ್ತಿನ್ ಪ್ರತ್ಯಯ. **ಅನುದಾತ್ತೋಪದೇಶ**—ಸೂತ್ರದಿಂದ ಧಾತುವಿನ ಅನುನಾಸಿಕವಾದ ನಕಾರಕ್ಕೆ ಲೋಪ. ನಿತ್ತಾದುದರಿಂದ ಆದ್ಯುದಾತ್ತಸ್ವರ ಪ್ರಾಪ್ತವಾದರೆ **ಮಂತ್ರೇವೃಷೇಷಪಚೆ**—(ಪಾ. ಸೂ. ೩-೩-೯೬) ಎಂಬುದರಿಂದ ಪ್ರತ್ಯಯಕ್ಕೆ ಉದಾತ್ತಸ್ವರ ಬರುತ್ತದೆ.

**ಗೋತಮಾಸಃ**—ಪ್ರಥಮಾ ಜಸಿಗೆ ಆಜ್ಜಸೇರಸುಕ್ ಎಂಬುದರಿಂದ ಅಸುಕಾಗಮ.

**ವಾಜಂಭರಮ್**—ಅಗ್ನಿಗೆ ಇದು ವೈದಿಕವಾದ ಸಂಜ್ಞೆ. ಡುಭೃಞ್ ಭರಣೇ ಧಾತು. ವಾಜ ಎಂಬ ಕರ್ಮವಾಚಕಪದವು ಉಪಪದವಾಗಿರುವಾಗ **ಸಂಜ್ಞಾಯಾಂ ಭೃತೃ ವೃಜಿ**—(ಪಾ. ಸೂ. ೩-೨-೪೬) ಎಂಬುದರಿಂದ ಈ ಧಾತುವಿಗೆ ಖಚ್ ಪ್ರತ್ಯಯ. ತನ್ನಿಮಿತ್ತವಾಗಿ **ಸಾರ್ವಧಾತುಕಾರ್ಧಧಾತುಕಯೋಃ** ಎಂಬುದರಿಂದ ಧಾತುವಿಗೆ ಗುಣ. **ಅರುರ್ದ್ವಿಷಜಂತಸ್ಯಮುಮ್** (ಪಾ. ಸೂ. ೬-೩-೬೭) ಎಂಬುದರಿಂದ ಖಜಂತ ಪರವಾದಾಗ ಪೂರ್ವದಲ್ಲಿರುವ ಅಜಂತವಾದ ವಾಜ ಎಂಬುದಕ್ಕೆ ಮುಮಾಗಮ. **ಮಿದಚೋಂತ್ಯಾತ್ಪರಃ** ಸೂತ್ರದಿಂದ ಅಂತ್ಯಾಚಿನ ಪರವಾಗಿ ಬರುತ್ತದೆ. ವಾಜಂಭರ ಶಬ್ದವಾಗುತ್ತದೆ. ಪ್ರತ್ಯಯ ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

**ಮರ್ಜಯಂತಃ**—ಮೃಜೂ ಶುದ್ಧೌ ಧಾತು. ಪ್ರೇರಣಾರ್ಥ ತೋರುವಾಗ **ಹೇತುಮತಿಚ** ಎಂಬುದರಿಂದ ಣಿಚ್. **ಸಂಜ್ಞಾಪೂರ್ವಕೋವಿಧಿರನಿತ್ಯಃ** ಎಂಬ ವಚನದಿಂದ ಇಲ್ಲಿ **ಮೃಜೇರ್ವೃದ್ಧಿಃ** (ಪಾ. ಸೂ. ೭-೨-೧೧೪) ಎಂಬುದರಿಂದ ಧಾತುವಿನ ಇಕಿಗೆ ವೃದ್ಧಿ ಬರುವುದಿಲ್ಲ. ಣಿಜಂತದ ಮೇಲೆ ಲಡರ್ಥದಲ್ಲಿ ಶತೃ ಪ್ರತ್ಯಯ. ಶಪ್ ವಿಕರಣ. ತನ್ನಿಮಿತ್ತವಾಗಿ ಣಿಚಿಗೆ ಗುಣ ಅಯಾದೇಶ. ಮಾರ್ಜಯತ್ ಶಬ್ದವಾಗುತ್ತದೆ. **ತಾಸ್ಯನುದಾತ್ತೇತ್**—ಸೂತ್ರದಿಂದ ಅನುದಾತ್ತ ಅದುಪದೇಶದ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಶತೃ) ಉಗಿತ್ತಾದುದರಿಂದ ವಾಗುತ್ತದೆ. ಆಗ ಣಿಚಿನ ಸ್ವರವೇ ಉಳಿಯುತ್ತದೆ. ಪ್ರಥಮಾಬಹುವಚನ ಪರವಾದಾಗ **ಉಗಿದಚಾಂ**—ಸೂತ್ರದಿಂದ ನುಮಾಗಮ. ನಕಾರಕ್ಕೆ ಅನುಸ್ವಾರಪರಸವರ್ಣ. ಜಸಿನ ಸಕಾರಕ್ಕೆ ರುತ್ವ, ವಿಸರ್ಗ.

**ಮಕ್ಷೂ**—**ಋಚಿತುನುಘ**—ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

**ಜಗಮ್ಯಾತ್**—ಗಮುಲೃ ಗತೌ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. ಇತಶ್ಚ ಸೂತ್ರದಿಂದ ಇಕಾರಲೋಪ. **ಬಹುಲಂಛಂದಸಿ** ಎಂಬುದರಿಂದ ಶಪಿಗೆ ಶ್ಲು ಆದೇಶ. **ಶ್ಲೌ** ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. **ಕುಹೋಶ್ಚುಃ** ಎಂಬುದರಿಂದ ಚುತ್ವದಿಂದ ಜಕಾರಾದೇಶ. **ಲಿಙಃ** **ಯಾಸುಟ್‌ಪರಸ್ಮೈಪದೇ**—ಸೂತ್ರದಿಂದ ಯಾಸುಟಾಗಮ. **ಸುಟ್ ತಿಥೋಃ** ಎಂಬುದರಿಂದ ಸುಡಾಗಮ.



CC-0. Jangamwadi Math Collection. Digitized by eGangotri

ಸಲೋಪೋನಂತಸ್ಯ ಎಂಬುದರಿಂದ ಎರಡು ಸಕಾರಗಳಿಗೂ ಲೋಪ. ಅತಿಙಂತದ ಪರದಲ್ಲಿರುವುದರಿಂದ ತಿಙ್ಙತಿಙಃ ಸೂತ್ರದಿಂದ ನಿಘಾತಸ್ವರ ಬರುತ್ತದೆ.

ಅರವತ್ತನೆಯ ಸೂಕ್ತವು ಸಮಾಪ್ತವು



# ಅರವತ್ತೊಂದನೆಯ ಸೂಕ್ತವು

---

|| ಸಾಯಣಭಾಷ್ಯ ||

ಅಸ್ಮಾ ಇದು ಪ್ರ ತವಸ ಇತಿ ಷೋಡಶರ್ಚಂ ಚತುರ್ಥಂ ಸೂಕ್ತಂ । ನೋಧಸ ಆರ್ಷಮೈಂದ್ರಂ ತ್ರೈಷ್ಟುಭಂ । ಅನುಕ್ರಾಂತಂ ಚ । ಅಸ್ಮಾ ಇದು ಷೋಳಶೇತಿ । ಅಸ್ಯ ಸೂಕ್ತಸ್ಯ ನೋಧಾ ದ್ರಷ್ಟೇತ್ಯೇತದ್ಬ್ರಾಹ್ಮಣೇ ಸಮಾಮ್ನಾಯತೇ । ಅಸ್ಮಾ ಇದು ಪ್ರ ತವಸೇ ತುರಾಯೇತಿ ನೋಧಾಸ್ತ ಏತೇ ಪ್ರಾತಃಸವನೇ। ಐ. ಬ್ರಾ. ೬-೧೮ । ಇತಿ ॥ ಷಳಹಸ್ತೋತ್ರಿಯಾವಾಪವತ್ಸು ಚತುರ್ವಿಂಶಮಹಾವ್ರತಾದಿಷ್ವಹಃಸು ಮಾಧ್ಯಂದಿನೇ ಸವನೇ ಬ್ರಾಹ್ಮಣಾಚ್ಛಂಸಿಶಸ್ತ್ರೇ ಬ್ರಹ್ಮಣಾ ತೇ ಬ್ರಹ್ಮಯುಜೇತ್ಯಸ್ಯಾ ಆರಂಭಣೀಯಾಯಾ ಊರ್ಧ್ವಮಹೀನಸೂಕ್ತಸಂಜ್ಞಮೇತಚ್ಛಂಸನೀಯಂ । ತಥಾ ಚ ಸೂತ್ರಿತಂ । ಅಸ್ಮಾ ಇದು ಪ್ರ ತವಸೇ ಶಾಸದ್ವಹ್ನಿರಿತೀತರಾವಹೀನಸೂಕ್ತೇ । ಆ. ೭-೪ । ಇತಿ । ಬ್ರಾಹ್ಮಣಂ ಚ ಭವತಿ । ತ ಏತೇ ಪ್ರಾತಃಸವನೇ ಷಳಹಸ್ತೋತ್ರಿಯಾಞ್ಛಸ್ತ್ವಾ ಮಾಧ್ಯಂದಿನೇಽಹೀನಸೂಕ್ತಾನಿ ಶಂಸಂತೀತಿ ॥

ಅನುವಾದವು—ಅಸ್ಮಾ ಇದು ಪ್ರ ತವಸೇ ಎಂಬ ಈ ಸೂಕ್ತವು ಹನ್ನೊಂದನೆಯ ಅನುವಾಕದಲ್ಲಿ ನಾಲ್ಕನೆಯ ಸೂಕ್ತವು. ಇದರಲ್ಲಿ ಹದಿನಾರು ಋಕ್ಕುಗಳಿರುವವು. ಈ ಸೂಕ್ತಕ್ಕೆ ನೋಧಾಃ ಎಂಬುವನು ಋಷಿಯು. ಇಂದ್ರನು ದೇವತೆಯು. ತ್ರಿಷ್ಟುಪ್‌ಛಂದಸ್ಸು. ಅನುಕ್ರಮಣಿಕೆಯಲ್ಲಿ ಅಸ್ಮಾ ಇದು ಷೋಳಶೇತಿ ಎಂದು ಹೇಳಿರುವುದು. ಈ ಸೂಕ್ತಕ್ಕೆ ನೋಧಾ ಎಂಬ ಋಷಿಯು ದ್ರಷ್ಟೃವೆಂದು ಐತರೇಯ ಬ್ರಾಹ್ಮಣದಲ್ಲಿ ಅಸ್ಮಾ ಇದು ಪ್ರ ತವಸೇ ತುರಾಯೇತಿ ನೋಧಾಸ್ತ ಏತೇ ಪ್ರಾತಃಸವನೇ । ಐ. ಬ್ರಾ. ೬-೧೮ । ಎಂದು ಉಕ್ತವಾಗಿರುವುದು. ಷಳಹಸ್ತೋತ್ರಿಯಾವಾಪನಯುಕ್ತವಾದ ಚತುರ್ವಿಂಶಮಹಾವ್ರತಾದಿ ಯಾಗಗಳಲ್ಲಿ ಮಾಧ್ಯಂದಿನಸವನಕಾಲದಲ್ಲಿ ಬ್ರಾಹ್ಮಣಾಚ್ಛಂಸಿ ಎಂಬ ಋತ್ವಿಜನು ಪಠಿಸಬೇಕಾದ ಶಸ್ತ್ರಮಂತ್ರಗಳಲ್ಲಿ ಬ್ರಹ್ಮಣಾ ತೇ ಬ್ರಹ್ಮಯುಜಾ ಎಂಬ ಋಕ್ಕಿನಿಂದ ಪ್ರಾರಂಭಿಸಿ ಊರ್ಧ್ವಮಹೀನಸೂಕ್ತವೆಂಬ ಸಂಜ್ಞೆಯುಳ್ಳ ಈ ಸೂಕ್ತವನ್ನು ಹೇಳಬೇಕೆಂದು ಆಶ್ವಲಾಯನಶ್ರೌತಸೂತ್ರದ ಅಸ್ಮಾ ಇದು ಪ್ರ ತವಸೇ ಶಾಸದ್ವಹ್ನಿರಿತೀತರಾವಹೀನಸೂಕ್ತೇ ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೭-೪) ಈ ವಿಷಯದಲ್ಲಿ ತ ಏತೇ ಪ್ರಾತಃಸವನೇಷಳಹಸ್ತೋತ್ರಿಯಾಞ್ಛಸ್ತ್ವಾ ಮಾಧ್ಯಂದಿನೇಽಹೀನಸೂಕ್ತಾನಿ ಶಂಸಂತೀತಿ ಎಂದು ಬ್ರಾಹ್ಮಣವಾಕ್ಯವಿರುವುದು.

## ಸೂಕ್ತ—೬೧

ಮಂಡಲ—೧ ॥ ಅನುವಾಕ—೧೧ ॥ ಸೂಕ್ತ—೬೧ ॥
ಅಷ್ಟಕ—೧ ॥ ಅಧ್ಯಾಯ—೪ ॥ ವರ್ಗ—೨೭, ೨೮, ೨೯ ॥

ಸೂಕ್ತದಲ್ಲಿರುವ ಋಕ್ಸಂಖ್ಯೆ—೧೬ ॥
ಋಷಿಃ—ನೋಧಾ ಗೌತಮಃ ॥
ದೇವತಾ—ಇಂದ್ರಃ ॥
ಛಂದಃ—ತ್ರಿಷ್ಟುಪ್ ॥

ಸಂಹಿತಾಪಾಠಃ

ಅಸ್ಮಾ ಇದು ಪ್ರ ತವಸೇ ತುರಾಯ ಪ್ರಯೋ ನ ಹರ್ಮಿ ಸ್ತೋಮಂ ಮಾಹಿನಾಯ ।
ಋಚೀಷಮಾಯಾಧ್ರಿಗವ ಓಹಮಿಂದ್ರಾಯ ಬ್ರಹ್ಮಾಣಿ ರಾತತಮಾ ॥ ೧ ॥

॥ ಪದಪಾಠಃ ॥

ಅಸ್ಮೈ । ಇತ್ । ಊಂ ಇತಿ । ಪ್ರ । ತವಸೇ । ತುರಾಯ । ಪ್ರಯಃ । ನ । ಹರ್ಮಿ । ಸ್ತೋಮಂ । ಮಾಹಿನಾಯ ।
ಋಚೀಷಮಾಯ । ಅಧ್ರಿಗವೇ । ಓಹಂ । ಇಂದ್ರಾಯ । ಬ್ರಹ್ಮಾಣಿ । ರಾತ-ತಮಾ ॥ ೧ ॥

॥ ಸಾಯಣಭಾಷ್ಯಂ ॥

ಇದು ಇತಿ ನಿಪಾತದ್ವಯಂ ಪಾದಪೂರಣೇ । ಅಥಾಪಿ ಪಾದಪೂರಣಾಃ ಕಮೀಮಿದ್ವಿತೀತಿ ಯಾಸ್ಕಃ । ಯದ್ವಾ । ಅವಧಾರಣಾರ್ಥಂ । ತವಸೇ ಪ್ರವೃದ್ಧಾಯ ತುರಾಯ ತ್ವರಮಾಣಾಯ । ಯದ್ವಾ । ತುರ್ವಿತ್ರೇ । ಶತ್ರೂಣಾಂ ಹಿಂಸಿತ್ರೇ । ಮಾಹಿನಾಯ ಗುಣೈರ್ಮಹತೇ ಋಚೀಷಮಾಯ ಋಚಾ


CC-0. Jangamwadi Math Collection. Digitized by eGangotri

ಸಮಾಯ । ಯಾದೃಶೀ ಸ್ತುತಿಃ ಕ್ರಿಯತೇ ತತ್ಸಮಾಯೇತ್ಯರ್ಥಃ । ಅಧ್ರಿಗವೇಽಧೃತಗಮನಾಯ । ಅಪ್ರತಿಹತಗಮನಾಯೇತ್ಯರ್ಥಃ । ತಥಾ ಚ ಯಾಸ್ಕಃ । ಅಧೃತಗಮನಕರ್ಮವನ್ನಿಂದ್ರೋಽಪ್ಯಧ್ರಿಗುರುಚ್ಯತೇ । ನಿ.೫-೧೧ । ಇತಿ । ಏವಂಭೂತಾಯಾಸ್ಮಾ ಇಂದ್ರಾಯ ಸ್ತೋಮಂ ಸ್ತೋತ್ರಂ ಪ್ರ ಹರ್ಮಿ । ಪ್ರಹರಾಮಿ । ಕರೋಮೀತ್ಯರ್ಥಃ । ತತ್ರ ದೃಷ್ಟಾಂತಃ । ಪ್ರಯೋ ನ । ಪ್ರಯ ಇತ್ಯನ್ನನಾಮ । ಯಥಾ ಬುಭುಕ್ಷಿತಾಯ ಪುರುಷಾಯ ಕಶ್ಚಿದನ್ನಂ ಪ್ರಹರತಿ । ಕೀದೃಶಂ ಸ್ತೋಮಂ । ಓಹಂ । ವಹನೀಯಂ । ಪ್ರಾಪಣೀಯಂ ವಾ । ಅತ್ಯಂತೋತ್ಕೃಷ್ಟಮಿತ್ಯರ್ಥಃ । ನ ಕೇವಲಂ ಸ್ತೋಮಂ ಕಿಂತರ್ಹಿ ಬ್ರಹ್ಮಾಣಿ ಹವಿರ್ಲಕ್ಷಣಾನ್ಯನ್ನಾನಿ । ಕೀದೃಶಾನಿ । ರಾತತಮಾ । ಪೂರ್ವೈರ್ಯಜಮಾನೈರತಿಶಯೇನ ದತ್ತಾನಿ । ಇಂದ್ರಂ ಸ್ತುತ್ಯಾ ಹವಿಷಾ ಚ ಪರಿಚರೇಮೇತಿ ಭಾವಃ ॥ ತುರಾಯ । ತುರ ತ್ವರಣೇ । ಇಗುಪಧಲಕ್ಷಣಃ ಕಃ । ಯದ್ವಾ । ತುರ್ವೀ ಹಿಂಸಾರ್ಥಃ । ತುರ್ವತೀತಿ ತುರಃ । ಪಚಾದ್ಯಚಿ ಛಾಂದಸೋ ವಲೋಪಃ । ಹರ್ಮಿ । ಹೃಞ್ ಹರಣೇ । ಬಹುಲಂ ಛಂದಸೀತಿ ಶಪೋ ಲುಕ್ । ಮಾಹಿನಾಯ । ಮಹ ಪೂಜಾಯಾಮಿತ್ಯಸ್ಮಾನ್ಮಹೇರಿನಣ್ ಚ । ಉ. ೨-೫೬ । ಇತೀನಣ್ಪ್ರತ್ಯಯಃ । ಉಪಧಾವೃದ್ಧಿಶ್ಚ । ಋಚೀಷಮಾಯ । ಋಚೀಷಮ ಋಚಾ ಸಮಃ । ನಿ. ೬-೨೩ । ಇತಿ ಯಾಸ್ಕಃ । ತೃತೀಯಾ ತತ್ಕೃತೇತಿ ಸಮಾಸಃ । ಪಾ. ೨-೧-೩೦ । ತೃತೀಯಾಪೂರ್ವಪದಪ್ರಕೃತಿಸ್ವರತ್ವಂ । ಪೃಷೋದರಾದಿತ್ವಾದೀಕಾರೋಪಜನಃ । ಸುಷಾಮಾದಿತ್ವಾತ್ ಷತ್ವಂ । ಕೇಚಿದಾಹುಃ । ಋಚ ಸ್ತುತಾವಿತ್ಯಸ್ಮಾದಿಗುಪಧಾತ್ಕಿದಿತೀಪ್ರತ್ಯಯಃ । ಕೃದಿಕಾರಾದಕ್ತಿನ ಇತಿ ಙೀಷ್ । ಋಚೀ ಸ್ತುತಿಃ । ತಯಾ ಸಮಃ । ಪೂರ್ವವತ್ ಷತ್ವಂ । ಅಸ್ಮಿನ್ಪಕ್ಷೇ ತೃತೀಯಾಪೂರ್ವಪದಪ್ರಕೃತಿಸ್ವರತ್ವೇ ಸತಿ ಙೀಷ ಉದಾತ್ತತ್ವೇನ ಭವಿತವ್ಯಂ । ತಥಾ ಚ ನ ದೃಶ್ಯತೇ । ತಸ್ಮಾತ್ಸ್ವರಶ್ಚಿಂತನೀಯಃ । ಯದ್ವಾ । ದಿವೋದಾಸಾದಿರ್ಋಷಿರ್ವ್ಯಃ । ಅಧ್ರಿಗವೇ । ಅಧೃತೋಽನ್ಯೇನಾನಿವಾರಿತೋ ಗೌರ್ಗಮನಂ ಯಸ್ಯ ಸ ತಥೋಕ್ತಃ । ಗೋಸ್ತ್ರಿಯೋರುಪಸರ್ಜನಸ್ಯ । ಪಾ. ೧-೨-೪೮ । ಇತಿ ಹ್ರಸ್ವತ್ವಂ । ಪೃಷೋದರಾದಿತ್ವಾದಧೃತಶಬ್ದಸ್ಯಾಧ್ರಿಭಾವಃ । ಓಹಂ । ವಹತೇಃ ಕರ್ಮಣಿ ಘಞ್ ಛಾಂದಸಂ ಸಂಪ್ರಸಾರಣಂ । ಯದ್ವಾ । ಊಹಿರ್ ದುಹಿರ್ ಉಹಿರ್ ಅರ್ದನ ಇತ್ಯಸ್ಮಾದೂಹತೇಃ ಪೂರ್ವವದ್ಘಞ್ । ರಾತತಮಾ । ರಾ ದಾನ ಇತ್ಯಸ್ಮಾನ್ನಿಷ್ಠಾಂತಾದಾತಿಶಾಯಿನಿಕಸ್ತಮಪ್ । ಶೇಶ್ಛಂದಸೀತಿ ಶೇರ್ಲೋಪಃ ॥

॥ ಪ್ರತಿಪದಾರ್ಥ ॥

ತವಸೇ—ಬಲಶಾಲಿಯೂ । ತುರಾಯ—ಶೀಘ್ರಗಾಮಿಯೂ ಅಥವಾ ಶತ್ರುಹಿಂಸಕನೂ । ಮಾಹಿನಾಯ—ಗುಣಗಳಿಂದ ಶ್ರೇಷ್ಠನೂ । ಋಚೀಷಮಾಯ—ಸ್ತೋತ್ರಕ್ಕೆ ಅನುರೂಪನೂ । ಅಧ್ರಿಗವೇ—ಅಪ್ರತಿಹತವಾದ ಗಮನವುಳ್ಳವನೂ ಆದ । ಅಸ್ಮೈ ಇಂದ್ರಾಯ—ಈ ಇಂದ್ರನಿಗೆ । ಓಹಂ—ಉತ್ಕೃಷ್ಟವಾದ । ಸ್ತೋಮಂ—ಸ್ತೋತ್ರವನ್ನೂ । ರಾತತಮಾ—(ಹಿಂದಿನ ಯಜಮಾನರಿಂದ) ಮತ್ತು ಪ್ರೀತಿಯಿಂದ ದತ್ತವಾದ । ಬ್ರಹ್ಮಾಣಿ—ಹವಿಸ್ಸುಗಳನ್ನೂ । ಪ್ರಯೋ ನ—(ಹಸಿದವನಿಗೆ) ಅನ್ನವನ್ನು ಕೊಡುವಂತೆ । ಪ್ರ ಹರ್ಮಿ—ಚೆನ್ನಾಗಿ ಅರ್ಪಿಸುತ್ತೇನೆ ॥

॥ ಭಾವಾರ್ಥ ॥

ಬಲಶಾಲಿಯೂ, ಶೀಘ್ರಗಾಮಿಯೂ, ಗುಣಗಳಿಂದ ಶ್ರೇಷ್ಠನೂ, ಸ್ತೋತ್ರಕ್ಕೆ ಅನುರೂಪನೂ, ಅಪ್ರತಿಹತವಾದ ಗಮನವುಳ್ಳವನೂ ಆದ ಇಂದ್ರನಿಗೆ ಉತ್ಕೃಷ್ಟವಾದ ಸ್ತೋತ್ರವನ್ನೂ ಮತ್ತು ಹಿಂದಿನ ಯಜಮಾನರಿಂದ ಪ್ರೀತಿಯಿಂದ ದತ್ತವಾದ ಹವಿಸ್ಸುಗಳನ್ನೂ ಹಸಿದವನಿಗೆ ಅನ್ನವನ್ನು ಕೊಡುವಂತೆ ಆದರದಿಂದ ಅರ್ಪಿಸುತ್ತೇನೆ.



CC-0. Jangamwadi Math Collection. Digitized by eGangotri

## English Translation.

I offer acceptable adorations and oblations, offered by the preceeding sacrificers, to that powerful, quick-coursing, mighty, praiseworthy and unobstructed Indra, as food (to a hungry man).

॥ ವಿಶೇಷ ವಿಷಯಗಳು ॥

**ಇತ್-ಉ**—ಇವು ವ್ಯಾಕರಣದಲ್ಲಿ ನಿಪಾತಗಳೆಂದು ಹೇಳಲ್ಪಟ್ಟಿವೆ. ಇವುಗಳಿಗೆ ಇಲ್ಲಿ ಅರ್ಥವಿಲ್ಲ. ಪಾದಪೂರಣಾರ್ಥವಾಗಿ ಇಡಲ್ಪಟ್ಟಿವೆ. **ಅಥಾಪಿ ಪಾದಪೂರಣಾಃ ಕಮೀಮಿದ್ವಿತಿ** ಎಂಬುದಾಗಿ ನಿರುಕ್ತಕಾರರು ವೇದದಲ್ಲಿಯೂ ಪಾದಪೂರಣಾರ್ಥಕವಾದ ಕಂ, ಈಂ, ಇತ್, ಉ ಎಂಬ ಕೆಲವು ಶಬ್ದಗಳನ್ನು ಹೇಳಿದ್ದಾರೆ.

**ತುರಾಯ**—**ತ್ವರಮಾಣಾಯ ಯದ್ವಾ ತುರ್ವಿತ್ರೇ ಶತ್ರೂಣಾಂ ಹಿಂಸಿತ್ರೇ**—ಜಾಗ್ರತೆಯಾಗಿ ಹೋಗುವವನು. ಅಥವಾ, ಶತ್ರುಗಳನ್ನು ಧ್ವಂಸಮಾಡುವವನು ಇಂತಹವನಿಗೆ ಎಂದು ಎರಡು ರೀತಿಯಲ್ಲಿಯೂ ಅರ್ಥಮಾಡಿದ್ದಾರೆ.

**ಋಚೀಷಮಾಯ**—**ಋಚಾ ಸಮಾಯ**—ಇದು ಇಂದ್ರಾಯ ಎಂಬ ಪದಕ್ಕೆ ವಿಶೇಷಣವಾಗಿದೆ. ಋಕ್ಕುಗಳಲ್ಲಿ ಇಂದ್ರನ ಸ್ತುತಿ ಯಾವರೀತಿ ಇರುವುದೋ, ಅದೇ ವಿಧವಾದ ಗುಣಗಳುಳ್ಳವನು ಎಂದರ್ಥ. **ಋಚೀಷಮ ಋಚಾಸಮಃ** (ನಿರು. ೬-೨೩).

**ಅಧ್ರಿಗವೇ**—**ಅಧೃತಗಮನಾಯ**—ತಡೆಯಿಲ್ಲದ ನಡಗೆಯುಳ್ಳವನು ಎಂದರ್ಥ. **ಅಧೃತಕರ್ಮಾಣಮಿಂದ್ರೋಪ್ಯಧ್ರಿಗುರುಚ್ಯತೇ** (ನಿರು. ೫-೧೧) ಎಂದು ನಿರುಕ್ತಕಾರರೇ ಈ ಅರ್ಥದಲ್ಲಿ ಅಧ್ರಿಗುಪದವನ್ನು ಇಂದ್ರಶಬ್ದ ಪರ್ಯಾಯವನ್ನಾಗಿ ಪಠಿಸಿದ್ದಾರೆ.

**ಪ್ರಯೋ ನ**—**ಪ್ರಯ ಇವ**—ಪ್ರಯಶ್ಶಬ್ದವು ಅನ್ನಪರ್ಯಾಯ ಪದವಾಗಿ (ನಿರು. ೩-೯) ನಿರುಕ್ತದಲ್ಲಿ ಪಠಿತವಾಗಿದೆ,

**ಓಹಂ**—ವಹ್ ಧಾತುವಿನಿಂದ ಹುಟ್ಟಿದ ಈ ಪದಕ್ಕೆ ಹೊರಲು ಯೋಗ್ಯವಾದದ್ದು. ಅಥವಾ ಒಯ್ಯಲು ಅರ್ಹವಾದದ್ದು ಎಂಬ ಎರಡರ್ಥವನ್ನೂ ಸ್ಪಷ್ಟಪಡಿಸಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ತುರಾಯ**—ತುರ ತ್ವರಣೇ ಧಾತು. **ಇಗುಪಧಜ್ಞಾಪ್ರೀಕಿರಃಕಃ** (ಪಾ. ಸೂ. ೩-೧-೧೩೫) ಎಂಬುದರಿಂದ ಇಗುಪಧವಾಗಿರುವುದರಿಂದ ಕಪ್ರತ್ಯಯ. **ಲಶಕ್ವತದ್ಧಿತೇ** ಎಂಬುದರಿಂದ ಕಕಾರ ಇತ್ತಾಗುತ್ತದೆ. ಆದುದರಿಂದ ಲಘೂಪಧಗುಣ ಬರುವುದಿಲ್ಲ. ಅಥವಾ **ತುರ್ವೀ ಹಿಂಸಾರ್ಥಃ ತುರ್ವತೀತಿ ತುರಃ. ನಂದಿಗ್ರಹಿಪಚಾದಿಭ್ಯೋ**—ಎಂಬುದರಿಂದ ಅಚ್ ಪ್ರತ್ಯಯ. ಆಗ ಛಾಂದಸವಾಗಿ ವಕಾರಲೋಪ ಬರುತ್ತದೆ. **ಚಿತಃ** ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ. **ಚತುರ್ಥೀ** ಏಕವಚನಾಂತರೂಪ.





CC-0. Jangamwadi Math Collection. Digitized by eGangotri

**ಹರ್ಮಿ**—ಹೃಞ್ ಹರಣೇ ಧಾತು. ಲಟ್ ಉತ್ತಮಪುರುಷ ಬಹುವಚನದಲ್ಲಿ ಮಿಪ್ ಪ್ರತ್ಯಯ. ಬಹುಲಂಛಂದಸಿ ಎಂಬುದರಿಂದ ಶಪಿಗೆ ಲುಕ್. ಮಿಪ್ ನಿಮಿತ್ತವಾಗಿ ಧಾತುವಿಗೆ ಗುಣ. ಹರ್ಮಿ ಎಂದು ರೂಪವಾಗುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಮಾಹಿನಾಯ**—ಮಹ ಪೂಜಾಯಾಂ ಧಾತು. ಇದಕ್ಕೆ ಮಹೇರಿನಣ್ ಚ (ಉ. ಸೂ. ೨-೨೧೪) ಎಂಬುದರಿಂದ ಇನಣ್ ಪ್ರತ್ಯಯ. ಣಿತ್ತಾದುದರಿಂದ ಅತಉಪಧಾಯಾಃ ಎಂಬುದರಿಂದ ಉಪಧಾವೃದ್ಧಿ. ಮಾಹಿನ ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಋಚೀಷಮಾಯ**—ಋಚೀಷಮ ಋಚಾಸಮಃ (ನಿರು. ೬-೨೩) ಎಂದು ಯಾಸ್ಕರು ಹೇಳಿರುತ್ತಾರೆ. (ಋಕ್ಕಿಗೆ ಸಮಾನವಾದುದು). ತೃತೀಯಾ ತತ್ಕೃತೇ—(ಪಾ. ಸೂ. ೨-೧-೩೦) ಎಂಬುದರಿಂದ ತೃತೀಯಾ ತತ್ಪುರುಷ ಸಮಾಸ. ತೃತೀಯಾಪೂರ್ವಪದ ಪ್ರಕೃತಿಸ್ವರ ಬರುತ್ತದೆ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಈಕಾರಾಗಮ ಬರುತ್ತದೆ. ಸುಷಾಮಾದಿಯಲ್ಲಿ ಸೇರಿರುವುದರಿಂದ ಸುಷಾಮಾದಿಷು ಚ (ಪಾ. ಸೂ. ೮-೩-೯೮) ಎಂಬುದರಿಂದ ಸಮದ ಸಕಾರಕ್ಕೆ ಷತ್ವ. ಚತುರ್ಥೀ ಏಕವಚನಾಂತರೂಪ. ಕೆಲವರು ಹೇಳುತ್ತಾರೆ. ಋಚ ಸ್ತುತೌ ಧಾತು. ಇದಕ್ಕೆ ಇಗುಪಧಾತ್ ಕಿತ್ (ಉ. ಸೂ. ೪-೫೫೫) ಎಂಬುದರಿಂದ ಇ ಪ್ರತ್ಯಯ. ಕಿದ್ವದ್ಭಾವವಿರುವುದರಿಂದ ಗುಣ ಬರುವುದಿಲ್ಲ. ಋಚಿ ಶಬ್ದವಾಗುತ್ತದೆ. ಇದಕ್ಕೆ ಸ್ತ್ರೀತ್ವ ವಿವಕ್ಷಾ ಮಾಡಿದಾಗ ಕೃದಿಕಾರಾದಕ್ತಿನಃ ಎಂಬುದರಿಂದ ಙೀಷ್ ಬರುತ್ತದೆ. ಋಚೀ ಸ್ತುತಿಃ ತಯಾ ಸಮಃ ಋಚೀಸಮಃ ಹಿಂದಿನಂತೆಯೇ ಷತ್ವ ಬರುತ್ತದೆ. ಈ ಪಕ್ಷದಲ್ಲಿಯೂ ತೃತೀಯಪೂರ್ವಪದ ಪ್ರಕೃತಿಸ್ವರವು ಬರಬೇಕಾದುದರಿಂದ ಙೀಷ್ ಉದಾತ್ತವಾದುದರಿಂದ ಅದರ ಸ್ವರವು ಶ್ರೂಯಮಾಣವಾಗಬೇಕಾಗುತ್ತದೆ. ಆದರೆ ಸಂಹಿತಾದಲ್ಲಿ ಹಾಗಿಲ್ಲ. ಆಗ ಸ್ವರವಿಷಯ ಚಿಂತಿಸಬೇಕಾದುದೇ. ಅಥವಾ ದಿವೋದಾಸಾದಿಗಣವು ಆಕೃತಿಗಣವೆಂದು ಅದರಲ್ಲಿ ಸೇರಿದೆಯೆಂದು ತಿಳಿಯಬೇಕು.

**ಅಧ್ರಿಗವೇ**—ಅಧೃತಃ ಅನ್ಯೇನ ಅನಿವಾರಿತೋ ಗೌರ್ಗಮನಂ ಯಸ್ಯ ಸಃ ಅಧ್ರಿಗುಃ ಗೋಸ್ತ್ರಿಯೋ-ರುಪಸರ್ಜನಸ್ಯ (ಪಾ. ಸೂ. ೧-೨-೪೮) ಎಂಬುದರಿಂದ ಸಮಾಸದಲ್ಲಿ ಗೋಶಬ್ದವು ಅಪ್ರಧಾನವಾದುದರಿಂದ ಅದಕ್ಕೆ ಹ್ರಸ್ವ. ಏಚ ಇಗ್‌ಹ್ರಸ್ವಾದೇಶೇ ಎಂದು ನಿಯಮ ಮಾಡಿರುವುದರಿಂದ ಉಕಾರ ಬರುತ್ತದೆ. ಇದು ಪೃಷೋದರಾದಿಯಲ್ಲಿ ಸೇರಿರುವುದರಿಂದ ಅಧೃತ ಶಬ್ದಕ್ಕೆ ಅಧ್ರಿಭಾವ ಬರುವುದರಿಂದ ಅಧ್ರಿಗು ಶಬ್ದವಾಗುತ್ತದೆ. ಚತುರ್ಥೀ ಏಕವಚನಾಂತರೂಪ.

**ಓಹಮ್**—ವಹ ಪ್ರಾಪಣೇ ಧಾತು. ಬಹುಲಗ್ರಹಣದಿಂದ ಕರ್ಮಣಿಯಲ್ಲಿ ಘಞ್. ಆಗ ಛಾಂದಸವಾಗಿ ಧಾತುವಿಗೆ (ವಕಾರಕ್ಕೆ) ಸಂಪ್ರಸಾರಣ. ಸಂಪ್ರಸಾರಣಾಚ್ಚ ಸೂತ್ರದಿಂದ ಪೂರ್ವರೂಪ. ಉಹ್+ಅ ಎಂದಿರುವಾಗ ಪ್ರತ್ಯಯನಿಮಿತ್ತವಾಗಿ ಲಘೂಪಧೆಗೆ ಗುಣ ಓಹಶಬ್ದವಾಗುತ್ತದೆ. ಅಥವಾ ತುಹಿರ್. ದುಹಿರ್ ಉಹಿರ್ ಅರ್ದನೇ ಧಾತು. ಇದಕ್ಕೆ ಹಿಂದಿನಂತೆ ಕರ್ಮಣಿಯಲ್ಲಿ ಘಞ್. ಆಗ ಲಘೂಪಧೆ ಗುಣದಿಂದ ಉಕ್ತರೂಪ ಸಿದ್ಧಿಯಾಗುತ್ತದೆ. ಪ್ರತ್ಯಯ ಞಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ರಾತತಮಾ**—ರಾ ದಾನೇ ಧಾತು. ಇದಕ್ಕೆ ಕ್ತ ಪ್ರತ್ಯಯ ರಾತ ಎಂದು ರೂಪವಾಗುತ್ತದೆ. ಇದಕ್ಕೆ ಅತಿಶಯಾರ್ಥ ವಿವಕ್ಷಾ ಮಾಡಿದಾಗ ತಮಪ್ ಪ್ರತ್ಯಯ. ನಪುಂಸಕದಲ್ಲಿ ಶಿ ಆದೇಶ ಬಂದಾಗ ಶೇಶ್ಛಂದಸಿ ಬಹುಲಂ ಎಂಬುದರಿಂದ ಶಿಗೆ ಲೋಪ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸ್ಮಾ ಇದು ಪ್ರಯ ಇವ ಪ್ರ ಯಂಸಿ ಭರಾಮ್ಯಾಂಗೂಷಂ ಬಾಧೇ ಸು-
ವೃಕ್ತಿ ।

ಇಂದ್ರಾಯ ಹೃದಾ ಮನಸಾ ಮನೀಷಾ ಪ್ರತ್ನಾಯ ಪತ್ಯೇ ಧಿಯೋ
ಮರ್ಜಯಂತ ॥ ೨ ॥

॥ ಪದಪಾಠಃ ॥

ಅಸ್ಮೈ । ಇತ್ । ಊಂ ಇತಿ । ಪ್ರಯಃऽಇವ । ಪ್ರ । ಯಂಸಿ । ಭರಾಮಿ । ಆಂ-
ಗೂಷಂ । ಬಾಧೇ । ಸುऽವೃಕ್ತಿ ।

ಇಂದ್ರಾಯ । ಹೃದಾ । ಮನಸಾ । ಮನೀಷಾ । ಪ್ರತ್ನಾಯ । ಪತ್ಯೇ । ಧಿಯಃ ।
ಮರ್ಜಯಂತ ॥ ೨ ॥

॥ ಸಾಯಣಭಾಷ್ಯಂ ॥

ಅಸ್ಮಾ ಇದು ಅಸ್ಮಾ ಏವೇಂದ್ರಾಯ । ಪ್ರಯ ಇತ್ಯನ್ನನಾಮ । ಪ್ರಯ ಇವಾನ್ನಮಿವ ಪ್ರ ಯಂಸಿ । ಪ್ರಯಚ್ಛಾಮಿ । ತದೇವ ಸ್ಪಷ್ಟೀಕ್ರಿಯತೇ । ಬಾಧೇ ಶತ್ರೂಣಾಂ ಬಾಧನಾಯ ಸಮರ್ಥಂ ಸುವೃಕ್ತಿ ಸುಷ್ಠ್ವಾವರ್ಜಕಮಾಂಗೂಷಂ ಸ್ತೋತ್ರರೂಪಮಾಘೋಷಂ ಭರಾಮಿ । ಸಂಪಾದಯಾಮಿ । ಅನ್ಯೇಽಪಿ ಸ್ತೋತಾರಃ ಪ್ರತ್ನಾಯ ಪುರಾಣಾಯ ಪತ್ಯೇ ಸ್ವಾಮಿನ ಇಂದ್ರಾಯ ಹೃದಾ ಹೃದಯೇನ ಮನಸಾ ತದಂತರ್ವರ್ತಿನಾಂತಃಕರಣೇನ ಮನೀಷಾ ಮನೀಷಯಾ ತಜ್ಜನ್ಯೇನ ಜ್ಞಾನೇನ ಚ ಧಿಯಃ ಸ್ತುತೀಃ ಕರ್ಮಾಣಿ ವಾ ಮರ್ಜಯಂತ । ಮಾರ್ಜಯಂತಿ । ಸಂಸ್ಕುರ್ವಂತಿ ॥ ಪ್ರ ಯಂಸಿ । ಯಮ ಉಪರಮ ಇತ್ಯಸ್ಮಾಲ್ಲಟಿ ಪುರುಷವ್ಯತ್ಯಯಃ । ಬಹುಲಂ ಛಂದಸೀತಿ ಶಪೋ ಲುಕ್ । ಆಂಗೂಷಂ । ಆಂಗೂಷಃ ಸ್ತೋಮ ಆಘೋಷಃ । ನಿ. ೫-೧೧ । ಇತಿ ಯಾಸ್ಕಃ । ಆಙ್ಪೂರ್ವಾದ್ಘುಷೇರ್ಘಞಿ ಪೃಷೋದರಾದಿತ್ವಾದ್ಘೋ ಇತ್ಯಸ್ಯ ಗೂ ಆದೇಶಃ । ಅಚಕೋ ಜಕಾರಸ್ಯ ಲೋಪಾಭಾವಶ್ಚ । ಥಾಥಾದಿನೋತ್ತರಪದಾಂತೋದಾತ್ತತ್ವಂ । ಬಾಧೇ । ಬಾಧೃ ವಿಲೋಡನ ಇತ್ಯಸ್ಮಾತ್ಕೃತ್ಯಾರ್ಥೇ ತವೈಕೇನಿತಿ ಭಾವೇ ಕೇನ್ಪ್ರತ್ಯಯಃ - ಏಜಂತತ್ವಾದವ್ಯಯತ್ವೇನ ಸುಪೋ ಲುಕ್ । ಮನೀಷಾ । ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ । ಪತ್ಯೇ । ಪತಿಃ ಸಮಾಸ ಏವ । ಪಾ. ೧-೪-೮ । ಇತಿ ಘಿಸಂಜ್ಞಾಯಾಃ ಸಮಾಸವಿಷಯತ್ವಾತ್ ಘೇರ್ಙಿತೀತಿ ಗುಣಾಭಾವೇ ಯಣಾದೇಶಃ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

ಅಸ್ಮೈ ಇದು—ಇದೇ ಇಂದ್ರನಿಗೆ । ಪ್ರಯಇವ—ಅನ್ನದಂತೆ (ಗ್ರಾಹ್ಯವಾದ ಹವಿಸ್ಸನ್ನು) । ಪ್ರಯಂಸಿ—ಅರ್ಪಿಸುತ್ತೇನೆ । ಬಾಧೇ—ಶತ್ರುವನ್ನು ಹಿಂಸಿಸುವುದರಲ್ಲಿ । ಸುವೃಕ್ತಿ—ಒಳ್ಳೆಯ ಕಾರ್ಯಕಾರಿಯಾದ । ಆಂಗೂಷಂ—ಸ್ತೋತ್ರರೂಪವಾದ ಘೋಷವನ್ನು । ಭರಾಮಿ—ಪಠಿಸುತ್ತೇನೆ (ಇತರ ಸ್ತೋತ್ರಗಳೂ ಸಹ) ಪ್ರತ್ನಾಯ—ಪುರಾತನನೂ |ಪತ್ಯೇ—ಒಡೆಯನೂ ಆದ । ಇಂದ್ರಾಯ—ಇಂದ್ರನಿಗೆ । ಹೃದಾ—ಹೃದಯದಿಂದಲೂ । ಮನಸಾ—(ತದಂತರ್ವರ್ತಿಯಾದ) ಮನಸ್ಸಿನಿಂದಲೂ । ಮನೀಷಾ—(ಅದರಿಂದ ಉತ್ಪನ್ನವಾದ) ಜ್ಞಾನದಿಂದಲೂ । ಧಿಯಃ—ಸ್ತುತಿಗಳನ್ನು ಅಥವಾ ಕರ್ಮಗಳನ್ನು । ಮರ್ಜಯಂತ—ಸಿದ್ಧಪಡಿಸುತ್ತಾರೆ ||

|| ಭಾವಾರ್ಥ ||

ಇಂದ್ರನಿಗೆ ಅನ್ನದಂತೆ ಗ್ರಾಹ್ಯವಾದ ಹವಿಸ್ಸನ್ನು ಅರ್ಪಿಸುತ್ತೇನೆ. ಶತ್ರುವನ್ನು ಹಿಂಸಿಸುವುದರಲ್ಲಿ ಕಾರ್ಯಕಾರಿಯಾದ ಸ್ತೋತ್ರರೂಪವಾದ ಘೋಷವನ್ನು ಪಠಿಸುತ್ತೇನೆ. ಇತರ ಸ್ತೋತ್ರಗಳೂ ಸಹ ಪುರಾತನನೂ ಒಡೆಯನೂ ಆದ ಇಂದ್ರನಿಗೆ ಹೃದಯದಿಂದಲೂ, ಮನಸ್ಸಿನಿಂದಲೂ ಯತ್ತು ಜ್ಞಾನದಿಂದಲೂ ಸಹ ಸ್ತುತಿಗಳನ್ನು ಅರ್ಪಿಸಿ ಪೂಜಿಸುತ್ತಾರೆ.

## English Translation.

I offer (oblations acceptable as) food (to the hungry) to that Indra; I raise (to him) exclamations that may be of efficacy in discomfiting (my enimies); others (also) adore Indra, the ancient lord, in heart, in mind, and in understanding.

॥ ವಿಶೇಷ ವಿಷಯಗಳು ॥

ಅಸ್ಮಾ ಇದು—ಅಸ್ಮೈ ಏವ—ಇಲ್ಲಿ ಇತ್, ಉ ಎಂಬ ಅವ್ಯಯಗಳು ಏವಕಾರಾರ್ಥದಲ್ಲಿ ಉಪಯೋಗಿಸಲ್ಪಟ್ಟವೆ. ಇವನಿಗೇ (ಇಂದ್ರನಿಗೇ) ಎಂಬುದೇ ಇಲ್ಲಿ ಪ್ರಕರಣಾನುಗತವಾದ ಅರ್ಥ.

ಪ್ರಯಃ—ಇದು ಅನ್ನಕ್ಕೆ ಹೆಸರು. (ನಿರು. ೩-೯). ಅನ್ನನಾಮಗಳಲ್ಲಿ ಪಠಿತವಾಗಿದೆ.

ಆಙ್ಗೂಷಂ—ಸ್ತೋತ್ರರೂಪಮಾಘೋಷಂ—ಸ್ತುತಿರೂಪವಾದ ಘೋಷಣೆ. ಆಙ್ಗೂಷಃ ಸ್ತೋಮ ಆಘೋಷಃ (ನಿರು. ೫-೧೧) ಹೀಗೆ ನಿರುಕ್ತಕಾರರು ಸ್ತುತಿಘೋಷಣಾರ್ಥದಲ್ಲಿ ಹೇಳಿರುತ್ತಾರೆ.

ಹೃದಾ—ಹೃದಯದಿಂದ ; ಇಲ್ಲಿ ಹೃದಯಶಬ್ದಕ್ಕೆ ಲಕ್ಷಣಯಾ ಹೃದಯಾಂತರ್ಗತವಾದ ಅಂತಃಕರಣವೆಂದರ್ಥ ಮಾಡಿರುವರು.

ಮರ್ಜಯಂತ—ಮಾರ್ಜಯಂತಿ ಸಂಸ್ಕುರ್ವಂತಿ ಶುದ್ಧಿರೂಪವಾದ ಸಂಸ್ಕಾರವನ್ನು ಮಾಡುತ್ತಾರೆ.



CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

ಪ್ರಯಂಸಿ—.ಯಮು ಉಪರಮೇ ಧಾತು. ಲಡುತ್ತಮಪುರುಷ ಏಕವಚನಕ್ಕೆ ಬದಲಾಗಿ ವ್ಯತ್ಯಯೋ ಬಹುಲಮ್ ಎಂಬುದರಿಂದ ಮಧ್ಯಮಪುರುಷದ ಸಿಪ್ ಪ್ರತ್ಯಯ. ಬಹುಲಂಛಂದಸಿ ಎಂಬುದರಿಂದ ಶಪ್ ವಿಕರಣಕ್ಕೆ ಲುಕ್. ನಶ್ಚಾಪದಾಂತಸ್ಯ ಝಲಿ ಎಂಬುದರಿಂದ ಮಕಾರಕ್ಕೆ ಅನುಸ್ವಾರ. ಅತಿಙಂತದ ಪರದ ಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಭರಾಮಿ—ಡುಭೃಞ್ ಭರಣೇ ಧಾತು. ಲಡುತ್ತಮಪುರುಷ ಏಕವಚನರೂಪ. ತಿಙಂತದ ಪರದಲ್ಲಿ ಬಂದುದರಿಂದ ಅತಿಙಃ ಎಂದು ಪರ್ಯುದಾಸ ಮಾಡಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು ಬಂದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ.

ಆಙ್ಗೂಷಮ್—ಆಙ್ಗೂಷಃ ಸ್ತೋಮ ಆಘೋಷಃ (ನಿರು. ೫-೧೧) ಇತಿ ಯಾಸ್ಕಃ | ಆಙ್‌ಪೂರ್ವಕ ವಾದ ಘುಷಿರ್ ವಿಶಬ್ದನೇ ಧಾತುವಿಗೆ ಘಞ್ ಪ್ರತ್ಯಯ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಘೋ ಎಂಬುದಕ್ಕೆ ಗೂ ಎಂಬ ವರ್ಣವಿಕಾರವೂ ಆಙಿನ ಙಕಾರಕ್ಕೆ ಲೋಪಾಭಾವವೂ ಬರುತ್ತದೆ. ಥಾಥಘಞ್- ಕ್ತಾಜ—(ಪಾ. ಸೂ. ೬-೨-೧೪೪) ಎಂಬುದರಿಂದ ಞಿತ್ ಸ್ವರವು ಬಾಧಿತವಾಗಿ ಉತ್ತರಪದಾಂತೋದಾತ್ತಸ್ವರ ಬರುತ್ತದೆ.

ಬಾಧೇ—ಬಾಧೃ ವಿಲೋಡನೇ ಧಾತು. ಇದಕ್ಕೆ ಕೃತ್ಯಾರ್ಥದಲ್ಲಿ ಕೃತ್ಯಾರ್ಥೇ ತವೈಕೇನ್—(ಪಾ. .ಸೂ. ೩-೪-೧೪) ಎಂಬುದರಿಂದ ಭಾವಾರ್ಥದಲ್ಲಿ ಕೇನ್ ಪ್ರತ್ಯಯ. ಏಜಂತವಾದ ಕೃದಂತವಾದುದರಿಂದ ಕೃನ್ಮೇಜಂತಃ ಎಂಬುದರಿಂದ ಅವ್ಯಯ ಸಂಜ್ಞೆಯನ್ನು ಹೊಂದುತ್ತದೆ. ಆಗ ಅವ್ಯಯಾದಾಪ್‌ಸುಪಃ ಎಂಬು ದರಿಂದ ಇದರ ಮೇಲೆ ಬಂದಿರುವ ಸುಪಿಗೆ ಲುಕ್.

ಮನೀಷಾ—ಮನೀಷಾ ಆಕಾರಾಂತವಾದ ನಿತ್ಯಸ್ತ್ರೀಲಿಂಗಶಬ್ದ. ಇದಕ್ಕೆ ತೃತೀಯಾ ಏಕವಚನ ವಿವಕ್ಷಾಮಾಡಿದಾಗ ಅದಕ್ಕೆ ಸುಪಾಂಸುಲುಕ್ ಎಂಬುದರಿಂದ ಡಾದೇಶ.

ಪತ್ಯೇ—ಪತಿ ಶಬ್ದ. ಇಕಾರಾಂತವಾದರೂ ಪತಿಃಸಮಾಸ ಏವ (ಪಾ. ಸೂ. ೧-೪-೮) ಎಂಬುದ ರಿಂದ ಸಮಾಸಮಾತ್ರದಲ್ಲಿ ಘಿಸಂಜ್ಞಾ ವಿಧಿಸಿರುವುದರಿಂದ ಕೇವಲವಾದುದಕ್ಕೆ ಬರುವುದಿಲ್ಲ. ಆದುದರಿಂದ ಚತುರ್ಥೀ ಏಕವಚನಪರವಾದಾಗ ಘೇರ್ಙಿತಿ ಎಂಬುದರಿಂದ ಗುಣ ಬರುವುದಿಲ್ಲ. ಇಕೋಯಣಚಿ ಎಂಬುದ ರಿಂದ ಯಣಾದೇಶ.

ಮರ್ಜಯಂತ—ಮೃಜೂ ಶುದ್ಧೌ ಧಾತು. ಣಿಜಂತದಮೇಲೆ ಛಾಂದಸವಾದ ಲಙ್. ಪ್ರಥಮ ಪುರುಷ ಬಹುವಚನದಲ್ಲಿ ಅಂತಾದೇಶ. ಸಂಜ್ಞಾಪೂರ್ವಕೋ ವಿಧಿರನಿತ್ಯಃ ಬಹುಲಂಛಂದಸ್ಯಮಾಙ್ಯೋ- ಗೇಽಪಿ ಎಂಬುದರಿಂದ ಆಡಾಗಮ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

———



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸ್ಮಾ ಇದು ತ್ಯಮುಪಮಂ ಸ್ವರ್ಷಾಂ ಭರಾಮ್ಯಾಂಗೂಷಮಾಸ್ಯೇನ ।
ಮಂಹಿಷ್ಠಮಚ್ಛೋಕ್ತಿಭಿರ್ಮತೀನಾಂ ಸುವೃಕ್ತಿಭಿಃ ಸೂರಿಂ ವಾವೃಧಧ್ಯೈ ॥ ೩ ॥

ಪದಪಾಠಃ

ಅಸ್ಮೈ । ಇತ್ । ಊಂ ಇತಿ । ತ್ಯಂ । ಉಪಽಮಂ । ಸ್ವಃಽಸಾಂ । ಭರಾಮಿ । ಆಂಗೂಷಂ । ಆಸ್ಯೇನ ।
ಮಂಹಿಷ್ಠಂ । ಅಚ್ಛೋಕ್ತಿಽಭಿಃ । ಮತೀನಾಂ । ಸುಽವೃಕ್ತಿಽಭಿಃ । ಸೂರಿಂ । ವವೃಧಧ್ಯೈ ॥ ೩ ॥

॥ ಸಾಯಣಭಾಷ್ಯಂ ॥

ಅಸ್ಮಾ ಇದು ಅಸ್ಮಾ ಏವೇಂದ್ರಾಯ ತ್ಯಂ ತಂ ಪ್ರಸಿದ್ಧಮುಪಮಮುಪಮಾನಹೇತುಭೂತಂ ಸ್ವರ್ಷಾಂ ಸುಷ್ಠು ಸರಣೀಯಸ್ಯ ಧನಸ್ಯ ದಾತಾರಂ ಸೂರಿಂ ವಿಪಶ್ಚಿತಮಿಂದ್ರಂ ವವೃಧಧ್ಯೈ ವರ್ಧಯಿತುಂ ಸುವೃಕ್ತಿಭಿಃ ಸುಷ್ಠ್ವಾವರ್ಜಕೈಃ । ಸಮರ್ಥೈರಿತ್ಯರ್ಥಃ । ಮತೀನಾಂ ಸ್ತುತೀನಾಂ ಸಂಬಂಧಿಭಿರಚ್ಛೋಕ್ತಿಭಿಃ ಸ್ವಚ್ಛೈರ್ವಚೋಭಿರ್ಮಂಹಿಷ್ಠಮತಿಶಯೇನ ಪ್ರವೃದ್ಧಮೇವಂಲಕ್ಷಣಮಾಂಗೂಷಮಾಘೋಷಮಾಸ್ಯೇನ ಮುಖೇನ ಭರಾಮಿ । ಕರೋಮೀತ್ಯರ್ಥಃ ॥ ಉಪಮಂ । ಉಪಮೀಯತೇಽನೇನೇತ್ಯುಪಮಃ । ಘಞರ್ಥೇ ಕವಿಧಾನಮಿತಿ ಕರಣೇ ಕಪ್ರತ್ಯಯಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ಸ್ವರ್ಷಾಂ । ಸುಪೂರ್ವಾದರ್ತೇರ್ವಿಜಂತಃ ಸ್ವರ್ಶಬ್ದಃ । ಷಣು ದಾನೇ । ಜನಸನಖನಕ್ರಮಗಮೋ ವಿಟ್ । ವಿಡ್ವನೋರನುನಾಸಿಕಸ್ಯಾದಿತ್ಯಾತ್ವಂ । ಸನೋತೇರನಃ । ಪಾ. ೮-೩-೧೦೮ । ಇತಿ ಷತ್ವಂ । ಭರಾಮಿ । ಪಾದಾದಿತ್ವಾನ್ನಿಘಾತಾಭಾವಃ । ಅಚ್ಛೋಕ್ತಿಭಿಃ । ಅಚ್ಛಾ ಉಕ್ತಯೋ ಯೇಷಾಂ । ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ । ಮತೀನಾಂ । ನಾಮನ್ಯತರಸ್ಯಾಮಿತಿ ನಾಮ ಉದಾತ್ತತ್ವಂ । ವವೃಧಧ್ಯೈ । ವೃಧು ವೃದ್ಧಾವಿತ್ಯಸ್ಮಾದಂತರ್ಭಾವಿತಣ್ಯರ್ಥಾತ್ತುಮರ್ಥೇ ಸೇಸೇನಿತಿ ಕಧ್ಯೈಪ್ರತ್ಯಯಃ । ಕಿತ್ತ್ವಾದ್ಗುಣಾಭಾವಃ । ದ್ವಿರ್ಭಾವಶ್ಛಾಂದಸಃ । ಯದ್ವಾ । ಯಙ್ಲುಗಂತಾದಸ್ಮಿನ್ಪ್ರತ್ಯಯೇ ಆಗಮಾನುಶಾಸನಸ್ಯಾನಿತ್ಯತ್ವಾದ್ರೀಗಾದ್ಯಭಾವಃ । ಅನ್ಯೇಷಾಮಪಿ ದೃಶ್ಯತ ಇತಿ ಸಾಂಹಿತಿಕಮಭ್ಯಾಸಸ್ಯ ದೀರ್ಘತ್ವಂ । ಪ್ರತ್ಯಯಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ಅಸ್ಮಾ ಇದು—ಇದೇ ಇಂದ್ರನಿಗೆ । ತ್ಯಂ—ಪ್ರಸಿದ್ಧನಾಗಿಯೂ । ಉಪಮಂ—ಮಾದರಿಯಾಗಿಯೂ । ಸ್ವರ್ಷಾಂ—ಒಳ್ಳೆಯ ಧನದಾತನಾಗಿಯೂ । ಸೂರಿಂ—ಪ್ರಾಜ್ಞನಾಗಿಯೂ ಇರುವ ಇಂದ್ರನನ್ನು । ವವೃ-



CC-0. Jangamwadi Math Collection. Digitized by eGangotri

ಥಧ್ಯೈ—ಉನ್ನತವಾಗಿ ಬೆಳೆಸುವುದಕ್ಕೋಸ್ಕರ। ಸುವೃಕ್ತಿಭಿಃ—ಸಮರ್ಥವಾಗಿ ಕಾರ್ಯಕಾರಿಗಳಾದ। ಮತೀನಾಂ—ಸ್ತೋತ್ರಗಳ । ಅಚ್ಛೋಕ್ತಿಭಿಃ—ಶುದ್ಧವಾದ ವಾಕ್ಕುಗಳಿಂದ । ಮಂಹಿಷ್ಠಂ—ಅತ್ಯಂತ ವೃದ್ಧಿಹೊಂದಿದ । ಆಂಗೂಷಂ—ಸ್ತೋತ್ರಘೋಷವನ್ನು । ಆಸ್ಯೇನ—ಮುಖದಿಂದ । ಭರಾಮಿ—ಪಠಿಸುತ್ತೇನೆ ॥

॥ ಭಾವಾರ್ಥ ॥

ಪ್ರಸಿದ್ಧನಾಗಿಯೂ, ಮಾದರಿಯಾಗಿಯೂ, ಒಳ್ಳೆಯಧನದಾತನಾಗಿಯೂ ಮತ್ತು ಪ್ರಾಜ್ಞನಾಗಿಯೂ ಇರುವ ಇಂದ್ರನ ಶ್ರೇಷ್ಠವಾದ ಗುಣಗಾನಮಾಡುವುದಕ್ಕಾಗಿ ಸಮರ್ಥವಾದವೂ, ಸ್ತೋತ್ರಗಳಿಗೆ ಸಂಬಂಧಿಸಿದವೂ ಆದ ಶುದ್ಧವಾದ ವಾಕ್ಕುಗಳಿಂದ ವೃದ್ಧಿಹೊಂದಿದ ಸ್ತೋತ್ರಘೋಷವನ್ನು ನನ್ನ ಮುಖದಿಂದ ಪಠಿಸುತ್ತೇನೆ.

## English Translation.

I offer with my mouth a loud exclamation with powerful and pure words of praise, to exalt him who is the type (of all), the giver (of good things) the great, the wise.

॥ ವಿಶೇಷ ವಿಷಯಗಳು ॥

ಸ್ವಪಸ್ಯಂ—ಸುಷ್ಠು ಅರಣೀಯಸ್ಯ ಧನಸ್ಯ ದಾತಾರಂ—ಪ್ರಕರ್ಷವಾದ ಧನಸಮುದಾಯವನ್ನು ಕೊಡುವ ಇಂದ್ರನನ್ನು.

ಮಂಹಿಷ್ಠಂ—ಅತಿಶಯವಾದ ರೀತಿಯಲ್ಲಿ ವೃದ್ಧಿಹೊಂದುವ. ಇದು ಆಂಗೂಷಂ ಎಂಬ ಪದಕ್ಕೆ ವಿಶೇಷಣ.

ಆಙ್ಗೂಷಂ—ಆಙ್ಗೂಷಃಸ್ತೋಮ ಆಘೋಷಃ (ನಿರು. ೫-೧೧) ಸ್ತುತಿವಿಷಯವಾದ ಘೋಷಣೆ.

ಉಪಮಂ—ಉಪಮೀಯತೇ ಅನೇನೇತಿ ಉಪಮಃ—ಉಪಮಾನ ಹೇತುಭೂತಂ—ಹೋಲಿಕೆಗೆ ಮೂಲಕಾರಣವಾದದ್ದು.

ಭರಾಮಿ—ಕರೋಮೀತ್ಯರ್ಥಃ—ಧರಿಸುತ್ತೇನೆ ಎಂದು ಧಾತುವಿನ ಅರ್ಥವಾಗಿದ್ದರೂ, ಇಲ್ಲಿ ಮಾಡುತ್ತೇನೆ ಎಂಬರ್ಥವನ್ನು ಹೇಳಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

ತ್ಯಮ್—ತ್ಯದ್ ಶಬ್ದ. ಅಮ್ ಪರವಾದಾಗ ತ್ಯದಾದೀನಾಮಃ ಎಂಬುದರಿಂದ ಅತ್ವ. ಅತೋಗುಣೇ ಸೂತ್ರದಿಂದ ಪರರೂಪ. ಅಮಿಪೂರ್ವಃ ಸೂತ್ರದಿಂದ ಪೂರ್ವರೂಪ.

ಉಪಮಮ್—ಉಪಮೀಯತೇಽನೇನೇತಿ ಉಪಮಃ ಮಾಙ್ ಮಾನೇ ಧಾತು. ಘಞರ್ಥೇಕ ವಿಧಾನಮ್ ಎಂಬ ವಚನದಿಂದ ಕರಣಾರ್ಥದಲ್ಲಿ ಕ ಪ್ರತ್ಯಯ. ಕಿತ್ತಾದುದರಿಂದ ಆತೋ ಲೋಪ ಇಟಿಚ (ಪಾ. ಸೂ. ೬-೪-೬೪) ಎಂಬುದರಿಂದ ಆಕಾರಲೋಪ. ಪ್ರತ್ಯಯಸ್ವರದಿಂದ ಅಂತೋದಾತ್ತ.



CC-0. Jangamwadi Math Collection. Digitized by eGangotri

ಸ್ವರ್ಷಾಮ್—ಋ ಗತೌ ಧಾತು. ಸು ಪೂರ್ವವಾಗಿರುವಾಗ ಇದಕ್ಕೆ ಅನ್ಯೇಭ್ಯೋಪಿ ದೃಶ್ಯಂತೇ ಎಂಬುದರಿಂದ ವಿಚ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಸ್ವರ್ ಶಬ್ದವಾಗುತ್ತದೆ. ಷಣು ದಾನೇ ಧಾತು. ಜನಸನಖನಕ್ರಮಗಮೋವಿಟ್ (ಪಾ. ಸೂ. ೩-೨-೬೭) ಎಂಬುದರಿಂದ ಇದಕ್ಕೆ ವಿಟ್ ಪ್ರತ್ಯಯ. ಇದು ಪರವಾದಾಗ ವಿಡ್ವನೋರನುನಾಸಿಕಸ್ಯಾತ್ (ಪಾ. ಸೂ. ೬-೪-೪೧) ಎಂಬುದರಿಂದ ಆತ್ವ. ಸನೋತೇರನಃ (ಪಾ. ಸೂ. ೮-೩-೧೦೮) ಎಂಬುದರಿಂದ ಧಾತು ಸಕಾರಕ್ಕೆ ಷತ್ವ. ಸ್ವರ್ಷಾ ಶಬ್ದವಾಗುತ್ತದೆ. ಗತಿಕಾರಕೋಪಪದಾತ್ ಕೃತ್ ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ಭರಾಮಿ—ಡುಭೃಞ್ ಭರಣೇ ಧಾತು. ಲಡುತ್ತಮಪುರುಷ ಏಕವಚನರೂಪ. ಪಾದಾದಿಯಲ್ಲಿ ಬಂದುದರಿಂದ ನಿಘಾತಸ್ವರ ಬರುವುದಿಲ್ಲ. ಅದುಪದೇಶದ ಪರದಲ್ಲಿ ಬಂದುದರಿಂದ ಲಸಾರ್ವಧಾತುಕವು ಅನುದಾತ್ತವಾಗುವುದರಿಂದ ಧಾತುಸ್ವರ ಉಳಿಯುತ್ತದೆ.

ಮಂಹಿಷ್ಠಮ್—ಮಹಿ ವೃದ್ಧೌ ಧಾತು. ಇದಕ್ಕೆ ತೃಚ್ ಪ್ರತ್ಯಯ ಬಂದಾಗ ಮಹಿತೃ ಶಬ್ದವಾಗುತ್ತದೆ. ಅತಿಶಯಾರ್ಥವಿವಕ್ಷಾ ಮಾಡಿದಾಗ ಇಷ್ಠನ್ ಪ್ರತ್ಯಯ. ತುರಿಷ್ಠೇಮೇಯಃಸು ಎಂಬುದರಿಂದ ತೃಚಿಗೆ ಲೋಪ. ಇಷ್ಠನ್ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಅಚ್ಛೋಕ್ತಿಭಿಃ—ಅಚ್ಛಾ ಉಕ್ತಯೋ ಯೇಷಾಂ. ಅಚ್ಛೋಕ್ತಯಃ | ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ. ತೃತೀಯಾ ಬಹುವಚನಾಂತರೂಪ.

ಮತೀನಾಮ್—ಮನ ಜ್ಞಾನೇ ಧಾತು. ಕ್ತಿಚ್ ಪ್ರತ್ಯಯ. ಅನುನಾಸಿಕ ಲೋಪ. ಷಷ್ಠೀ ಬಹುವಚನದಲ್ಲಿ ಆಮ್ ಪ್ರತ್ಯಯ. ಅದಕ್ಕೆ ನುಡಾಗಮ. ಪೂರ್ವದ ಅಜಂತಾಂಗಕ್ಕೆ ದೀರ್ಘ. ನಾಮನ್ಯತರಸ್ಯಾಮ್ (ಪಾ. ಸೂ. ೬-೧-೧೭೭) ಎಂಬುದರಿಂದ ನಾಮಿಗೆ ಉದಾತ್ತಸ್ವರ ಬರುತ್ತದೆ.

ವವೃಧಧ್ಯೈ—ವೃಧು ವೃದ್ಧೌ ಧಾತು. ಣಿಜರ್ಥವು (ಪ್ರೇರಣಾ) ಧಾತ್ವರ್ಥಾಂತರ್ಭೂತವಾಗಿರುವಾಗ ಇದಕ್ಕೆ ತುಮರ್ಥೇಸೇಸೇನ—(ಪಾ. ಸೂ. ೩-೪-೯) ಎಂಬುದರಿಂದ ಕಧ್ಯೈ ಪ್ರತ್ಯಯ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಪ್ರತ್ಯಯಪರವಾದಾಗ ಛಾಂದಸವಾಗಿ ಧಾತುವಿಗೆ ದ್ವಿತ್ವಾದಿಗಳು ಬರುತ್ತವೆ. ಅಥವಾ ಅತಿಶಯಾರ್ಥದಲ್ಲಿ ಯಙ್. ಯಙೋಽಚಿಚ ಎಂಬುದರಿಂದ ಅದಕ್ಕೆ ಲುಕ್. ಯಙ್‌ಲಜಂತದ ಮೇಲೆ ಹಿಂದಿನಂತೆ ಕಧ್ಯೈ ಪ್ರತ್ಯಯ. ಆಗ ಅಗಮಾನುಶಾಸನಮನಿತ್ಯಮ್ ಎಂಬ ವಚನದಿಂದ ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ ಬಂದಾಗ ರೀಗಾದಿಆಗಮ ಅಭ್ಯಾಸಕ್ಕೆ ಬರುವುದಿಲ್ಲ. ಅನ್ಯೇಷಾಮಪಿದೃಶ್ಯತೇ (ಪಾ. ಸೂ. ೬-೩-೧೩೭) ಎಂಬುದರಿಂದ ಸಂಹಿತಾದಲ್ಲಿ ಅಭ್ಯಾಸಕ್ಕೆ ದೀರ್ಘ ಬರುತ್ತದೆ. ಏಜಂತವಾದುದರಿಂದ ಕೃನ್ಮೇಜಂತಃ ಸೂತ್ರದಿಂದ ಅವ್ಯಯಸಂಜ್ಞಾನನ್ನು ಹೊಂದುತ್ತದೆ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ಧಕಾರೋತ್ತರಾಕಾರವು ಉದಾತ್ತವಾಗುತ್ತದೆ.





CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸ್ಮಾ ಇದು ಸ್ತೋಮಂ ಸಂ ಹಿನೋಮಿ ರಥಂ ನ ತಷ್ಟೇವ ತತ್ಸಿನಾಯ ।
ಗಿರಶ್ಚ ಗಿರ್ವಾಹಸೇ ಸುವೃಕ್ತೀಂದ್ರಾಯ ವಿಶ್ವಮಿನ್ವಂ ಮೇಧಿರಾಯ ॥೪॥

|| ಪದಪಾಠಃ ||

ಅಸ್ಮೈ । ಇತ್ । ಊಂ ಇತಿ । ಸ್ತೋಮಂ । ಸಂ । ಹಿನೋಮಿ । ರಥಂ । ನ ।
ತಷ್ಟಾಽಇವ । ತತ್ಽಸಿನಾಯ ।
ಗಿರಃ । ಚ । ಗಿರ್ವಾಹಸೇ । ಸುಽವೃಕ್ತಿ । ಇಂದ್ರಾಯ । ವಿಶ್ವಂಽಇನ್ವಂ । ಮೇಧಿ-
ರಾಯ ||-೪ ||

॥ ಸಾಯಣಭಾಷ್ಯಂ ॥

ಅಸ್ಮಾ ಏವೇಂದ್ರಾಯ ಸ್ತೋಮಂ ಶಸ್ತ್ರರೂಪಂ ಸ್ತೋತ್ರಂ ಸಂ ಹಿನೋಮಿ । ಪ್ರೇರಯಾಮಿ ।
ತತ್ರ ದೃಷ್ಟಾಂತಃ । ತತ್ಸಿನಾಯ। ಸಿನಮಿತ್ಯನ್ನನಾಮ । ಸಿನಮನ್ನಂ ಭವತಿ ಸಿನಾತಿ ಭೂತಾನೀತಿ ಯಾಸ್ಕಃ।
ನಿ. ೫.೫ । ತೇನ ರಥೇನ ಸಿನಮನ್ನಂ ಯಸ್ಯ ಸ ತಥೋಕ್ತಃ । ತಸ್ಮೈ ರಥಸ್ವಾಮಿನೇ ತಷ್ಟೇವ ತಷ್ಟಾ
ತಕ್ಷಕೋ ರಥನಿರ್ಮಾತಾ ರಥಂ ನ । ಯಥಾ ರಥಂ ಪ್ರೇರಯತಿ ತದ್ವತ್ । ಇವೇತ್ಯೇತತ್ಪಾದಪೂರಣಂ ।
ತಥಾ ಗಿರ್ವಾಹಸೇ ಗೀರ್ಭಿಃ ಸ್ತುತಿಭಿರುಹ್ಯಮಾನಾಯೇಂದ್ರಾಯ ಗಿರಶ್ಚ ಶಸ್ತ್ರಸಂಬಂಧಿನೀಃ ಕೇವಲಾ
ಋಚಶ್ಚ ಸುವೃಕ್ತಿ ಶೋಭನಮಾವರ್ಜನಂ ಯಥಾ ಭವತಿ ತಥಾ ಪ್ರೇರಯಾಮಿ । ತಥಾ ಮೇಧಿರಾಯ
ಮೇಧಾವಿನ ಇಂದ್ರಾಯ ವಿಶ್ವಮಿನ್ವಂ ವಿಶ್ವವ್ಯಾಪಕಂ ವಿಶ್ವೈರ್ವ್ಯಾಪ್ತಂ ಸರ್ವೋತ್ಕೃಷ್ಟಂ ಹವಿಶ್ಚ ಸಂ ಹಿ-
ನೋಮೀತ್ಯನುಷಂಗಃ ॥ ಹಿನೋಮಿ । ಹಿ ಗತೌ ವೃದ್ಧೌ ಚ । ಸ್ವಾದಿತ್ವಾತ್ ಶ್ನುಃ । ತಷ್ಟೇವ । ತಕ್ಷೂ
ತ್ವಕ್ಷೂ ತನೂಕರಣೇ । ತಾಚ್ಛೀಲಿಕಸ್ತೃನ್ । ಊದಿತ್ತ್ವಾತ್ಪಕ್ಷ ಇಡಭಾವಃ।ಸ್ಕೋಃ ಸಂಯೋಗಾದ್ಯೋರಂತೇ
ಚೇತಿ ಕಕಾರಲೋಪಃ । ನಿತ್ತ್ವಾದಾದ್ಯುದಾತ್ತತ್ವಂ । ತತ್ಸಿನಾಯ । ಶಿನಶಬ್ದಃ ಷಿಞ್ ಬಂಧನ ಇತ್ಯಸ್ಮಾ-
ದಿಣ್ಷಿಞ್ಷೀಙುಷ್ಯವಿಭ್ಯೋ ನಕ್ । ಉ. ೩-೨ । ಇತಿ ನಕ್ಪ್ರತ್ಯಯಾಂತಃ । ಬಹುವ್ರೀಹೌ ಪೂರ್ವ-
ಪದಪ್ರಕೃತಿಸ್ವರತ್ವಂ । ಗಿರ್ವಾಹಸೇ । ವಾಹಿಹಾಧಾಞ್ಭ್ಯಶ್ಛಂದಸೀತಿ ವಹತೇಃ ಕೇವಲಾದ್ವಿಹಿತೋಽಸು-
ನ್ಪ್ರತ್ಯಯೋ ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂ ಚೇತಿ ವಚನಾತ್ಕಾರಕಪೂರ್ವಸ್ಯಾಪಿ ಭವತಿ
ಪೂರ್ವಪದಪ್ರಕೃತಿಸ್ವರತ್ವಂ ಚ । ಣಿದಿತ್ಯನುವೃತ್ತೇರುಪಧಾವೃದ್ಧಿಃ । ಹಲಿ ಚೇತಿ ದೀರ್ಘಾಭಾವಶ್ಛಾಂ-
ದಸಃ ।ವಿಶ್ವಮಿನ್ವಂ । ಇವಿ ವ್ಯಾಪ್ತೌ । ವಿಶ್ವಮಿನ್ವತಿ ವ್ಯಾಪ್ನೋತೀತಿ ವಿಶ್ವಮಿನ್ವಂ । ಪಚಾದ್ಯಚ್ । ಲುಗ-
ಭಾವಶ್ಛಾಂದಸಃ । ಯದ್ವಾ । ಖಚ್ಪ್ರತ್ಯಯೋ ಬಹುಲವಚನಾದಸ್ಮಾದಪಿ ಧಾತೋರ್ದ್ರಷ್ಟವ್ಯಃ । ಮೇಧಿ-
ರಾಯ । ಮೇಧಾ ಅಸ್ಯಾಸ್ತೀತಿ ಮೇಧಿರಃ । ಮೇಧಾರಥಾಭ್ಯಾಮಿರನಿರಚೌ ವಕ್ತವ್ಯೌ । ಪಾ.
೫-೨-೧೦೯-೩ । ಇತಿ ಮತ್ವರ್ಥೀಯ ಇರನ್ । ನಿತ್ತ್ವಾದಾದ್ಯುದಾತ್ತತ್ವಂ ॥

॥ ಪ್ರತಿಪದಾರ್ಥ ॥

ತಕ್ಸಿನಾಯ—(ಸಾರಥಿಗೆ) ಅನ್ನಸಂಪಾದನೆಗಾಗಿ । ತಷ್ಟೇವ ರಥಂ ನ—ಬಡಗಿಯು ರಥವನ್ನು ನಿರ್ಮಿಸುವಂತೆ । ಗಿರ್ವಾಹಸೇ—ಸ್ತುತಿಗಳಿಂದ ವಹಿಸಲ್ಪಡುವ (ವೃದ್ಧಿಹೊಂದುವ) । ಇಂದ್ರಾಯ—ಇಂದ್ರನಿಗೋಸ್ಕರ । ಸ್ತೋಮಂ—ಶಸ್ತ್ರರೂಪವಾದ ಸ್ತೋತ್ರವನ್ನೂ । ಗಿರಶ್ಚ—(ಶಸ್ತ್ರಸಂಬಂಧಗಳಾದ ಕೇವಲ) ಋಕ್ಕುಗಳನ್ನೂ । ಸುವೃಕ್ತಿ—ಒಳ್ಳೆಯ ಕಾರ್ಯಕಾರಿಗಳಾಗುವಂತೆ । ಸಂ ಹಿನೋಮಿ—ನಿರ್ಮಿಸಿ ಅರ್ಪಿಸುತ್ತೇನೆ (ಮತ್ತು) । ಮೇಧಿರಾಯ—ಪ್ರಾಜ್ಞನಾದ ಇಂದ್ರನಿಗೆ । ವಿಶ್ವಮಿನ್ವಂ—ಸರ್ವಶ್ರೇಷ್ಠವಾದ ಹವಿಸ್ಸನ್ನು । (ಸಂ ಹಿನೋಮಿ—ನಿರ್ಮಿಸಿ ಅರ್ಪಿಸುತ್ತೇನೆ) ॥

॥ ಭಾವಾರ್ಥ ॥

ಬಡಗಿಯು ಸಾರಥಿಯ ಅನ್ನ ಸಂಪಾದನೆಗಾಗಿ ರಥವನ್ನು ನಿರ್ಮಿಸುವಂತೆ ನಾನೂ ಸಹ ಸ್ತುತಿಗಳಿಂದ ವೃದ್ಧಿಹೊಂದುವ ಇಂದ್ರನಿಗಾಗಿ ಶಸ್ತ್ರರೂಪವಾದ ಸ್ತೋತ್ರವನ್ನೂ ಮತ್ತು ತತ್ಸಂಬಂಧವಾದ ಕೇವಲ ಋಕ್ಕುಗಳನ್ನೂ ಸಹ ಸಾರ್ಥಕಗಳಾಗುವಂತೆ ನಿರ್ಮಿಸಿ ಅರ್ಪಿಸುತ್ತೇನೆ. ಮತ್ತು ಪ್ರಾಜ್ಞನಾದ ಇಂದ್ರನಿಗೆ ಸರ್ವಶ್ರೇಷ್ಠವಾದ ಹವಿಸ್ಸನ್ನೂ ಅರ್ಪಿಸುತ್ತೇನೆ.

## English Transation.

I send hymns to him (Indra) as the constructor of a car drives it to its owner, (so that he) may thence (obtain) food ; I send praises to him who is entitled to commendation ; and most excellent oblations to the wise Indra.

॥ ವಿಶೇಷವಿಷಯಗಳು ॥

ಸ್ತೋಮಂ—ಶಸ್ತ್ರರೂಪಂ ಸ್ತೋತ್ರಂ—ಯಾಗದಲ್ಲಿ ಇಂದ್ರನನ್ನು ಸ್ತುತಿಸುವ ಹಲವು ಮಂತ್ರಗಳಿಗೆ ಶಸ್ತ್ರಗಳೆಂದು ಹೆಸರು. ಇಂತಹ ಮಂತ್ರಸಮೂಹಗಳಿಗೆ ಸ್ತೋಮವೆಂದು ಹೆಸರು.

ತಕ್ಸಿನಾಯ—ತೇನ ರಥೇನ ಸಿನಮನ್ನಂ ಯಸ್ಯ ಎಂಬ ವ್ಯುತ್ಪತ್ತಿಯಂತೆ ರಥಸಹಿತವಾದ ಹವಿರ್ಲಕ್ಷಣವಿಶಿಷ್ಟವಾದ ಅನ್ನದಿಂದ ಎಂಬುದು ಇದರ ಅರ್ಥ. ಸಿನಮನ್ನಂ ಭವತಿ ಸಿನಾತಿ ಭೂತಾನಿ (ನಿರು. ೫-೫) ಎಂದು ನಿರುಕ್ತದಲ್ಲಿ ಸಿನಶಬ್ದಕ್ಕೆ ಅನ್ನ ಎಂಬರ್ಥವನ್ನು ಕಲ್ಪಿಸಿದ್ದಾರೆ.

ತಷ್ಟೇವ—ತಷ್ಟಾ ಇವ—ತಕ್ಷಕೋ ರಥನಿರ್ಮಾತಾ ರಥವನ್ನು ನಿರ್ಮಿಸುವ ತಕ್ಷಕನಂತೆ ಎಂದರ್ಥ. ಇಲ್ಲಿ ಇವ ಶಬ್ದವು ಕೇವಲ ಪಾದಪೂರಣಾರ್ಥಕ. ಏಕೆಂದರೆ ಇದೇ ಅರ್ಥಕೊಡುವ ನ ಶಬ್ದವು ರಥಶಬ್ದಾನ್ವಯದಿಂದ ಈ ಅರ್ಥವನ್ನು ಕೊಡುವುದು.

ಗಿರ್ವಾಹಸೇ—ಗೀರ್ಭಿಃ ಸ್ತುತಿಭಿಃ ಉಹ್ಯಮಾನಾಯ—ಇದು ಇಂದ್ರಾಯ ಎಂಬ ಪದಕ್ಕೆ ವಿಶೇಷಣ. ಹೋತೃವು ಮಾಡಿದ ಸ್ತುತಿ ವಚನಗಳನ್ನು ಪೂರ್ಣವಾಗಿ ಅಂಗೀಕರಿಸುವವನು ಎಂದರ್ಥ.

ಸುವೃಕ್ತಿ—ಶೋಭನಮಾವರ್ಜನಂ ಯಥಾ ಭವತಿ ತಥಾ ಪ್ರೇರಯಾಮಿ ಇಂದ್ರನಿಗೆ ಅತ್ಯಂತ ತೃಪ್ತಿಯಾಗುವಂತೆ ಸ್ತೋತ್ರಮಾಡುತ್ತೇನೆ. ಅಥವಾ ಸ್ತೋತ್ರಮಂತ್ರಗಳನ್ನು ಆರೀತಿ ಪ್ರೇರಿಸುತ್ತೇನೆ ಎಂದು ತಾತ್ಪರ್ಯಾರ್ಥ.



CC-0. Jangamwadi Math Collection. Digitized by eGangotri

ವಿಶ್ವಮಿನ್ವಂ—ವಿಶ್ವವ್ಯಾಪಕಂ ವಿಶ್ವೈರ್ವ್ಯಾಪ್ತಂ ಸರ್ವೋತ್ಕೃಷ್ಟಂ ಹವಿಶ್ಚ ತಂ ಹಿನೋಮೀತ್ಯರ್ಥಃ—ವಿಶ್ವಮಿನ್ವತಿ ವ್ಯಾಪ್ನೋತಿ ಇತಿ ವಿಶ್ವಮಿನ್ವಂ—ಇದು ಹವಿಃ ಎಂಬ ಪದಕ್ಕೆ ವಿಶೇಷಣವಾಗಿದೆ. ಈ ಹವಿಸ್ಸು, ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾದದ್ದು, ಅಥವಾ ವಿಶ್ವವನ್ನೇ ವ್ಯಾಪಿಸಿದುದು, ವಿಶ್ವಾತ್ಮಕವಾದದ್ದು ಸರ್ವೋತ್ಕೃಷ್ಟವಾದದ್ದು, ಎಂದು ಹವಿಸ್ಸಿನ ಸ್ತುತಿ ಇಲ್ಲಿದೆ.

॥ ವ್ಯಾಕರಣಪ್ರಕ್ರಿಯಾ ॥

ಹಿನೋಮಿ—ಹಿ ಗತೌ ವೃದ್ಧೌ ಚ. ಧಾತು ಸ್ವಾದಿ. ಲಡುತ್ತಮಪುರುಷದಲ್ಲಿ ಮಿಪ್ ಪ್ರತ್ಯಯ. ಸ್ವಾದಿಭ್ಯಃ ಶ್ನುಃ ಎಂಬುದರಿಂದ ಶ್ನು ವಿಕರಣ. ಸಾರ್ವಧಾತುಕಮಪಿತ್ ಎಂಬುದರಿಂದ ಇದು ಙಿದ್ವದ್ಭಾವವನ್ನು ಹೊಂದುವುದರಿಂದ ಧಾತುವಿಗೆ ಗುಣ ಬರುವುದಿಲ್ಲ. ಮಿಪ್ ನಿಮಿತ್ತವಾಗಿ ವಿಕರಣಕ್ಕೆ ಗುಣ. ತಿಙಂತ ನಿಘಾತಸ್ವರ ಬರುತ್ತದೆ.

ತಷ್ಟೇವ—ತಕ್ಷೂ ತ್ವಕ್ಷೂ ತನೂಕರಣೇ ಧಾತು. ಇದಕ್ಕೆ ತಚ್ಛೀಲಾರ್ಥದಲ್ಲಿ ತೃನ್ ಪ್ರತ್ಯಯ. ಧಾತುವು ಊದಿತ್ತಾದುದರಿಂದ ಸ್ವರತಿಸೂತಿ—(ಪಾ. ಸೂ. ೭-೨-೪೪) ಎಂಬುದರಿಂದ ಇಡ್ವಿಕಲ್ಪವಿಧಾನ ಮಾಡಿರುವುದರಿಂದ ಇಲ್ಲಿ ಇಡಾಗಮ ಬರುವುದಿಲ್ಲ. ತಕ್ಷ್+ತೃ ಎಂದಿರುವಾಗ ಝಲ್ ಪರವಾದುದರಿಂದ ಸ್ಕೋಃ ಸಂಯೋಗಾದ್ಯೋರಂತೇಚ ಎಂಬುದರಿಂದ ಸಂಯೋಗಾದಿಯಾದ ಕಕಾರಕ್ಕೆ ಲೋಪ. ಷ್ಟುನಾಷ್ಟುಃ ಎಂಬುದರಿಂದ ಪ್ರತ್ಯಯದ ತಕಾರಕ್ಕೆ ಷ್ಟುತ್ವ. ತಷ್ಟೃ ಶಬ್ದವಾಗುತ್ತದೆ. ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ ಋದುಶನಸ್ಪುರು ಸೂತ್ರದಿಂದ ಅನಙಾದೇಶ. ಅಪ್‌ತೃನ್‌ತೃಚ್—ಎಂಬುದರಿಂದ ಉಪಧಾದೀರ್ಘ ತಷ್ಟಾ ಎಂದು ರೂಪವಾಗುತ್ತದೆ.

ತತ್ಸಿನಾಯ—ಸಿನ ಶಬ್ದ. ಷಿಙ್ ಬಂಧನೇ ಧಾತು. ಇದಕ್ಕೆ ಇಣ್‌ಷಿಙ್ ಜಿ ದೀಙುಷ್ಯವಿಭ್ಯೋ ನಕ್ (ಉ. ಸೂ. ೩-೨೮೨) ಎಂಬುದರಿಂದ ನಕ್ ಪ್ರತ್ಯಯ. ಧಾತ್ವಾದಿಗೆ ಸಕಾರಾದೇಶ. ಕಿತ್ತಾದುದರಿಂದ ಧಾತುವಿಗೆ ಗುಣ ಬರುವುದಿಲ್ಲ. ತೇನ ಸಿನಂ ಯಸ್ಯ ಸಃ ತತ್ಸಿನಃ ಬಹುವ್ರೀಹೌಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ.

ಗಿರ್ವಾಹಸೇ—ವಹ ಪ್ರಾಪಣೇ ಧಾತು. ವಹಿಹಾಧಾಞ್‌ಭ್ಯಶ್ಛಂದಸಿ (ಉ. ಸೂ. ೪-೬೬೦) ಎಂಬುದರಿಂದ ಕೇವಲವಾದ ವಹ್ ಧಾತುವಿಗೆ ವಿಹಿತವಾದ ಅಸುನ್ ಪ್ರತ್ಯಯವು ಗತಿಕಾರಕಯೋರಪಿ ಪೂರ್ವಪದಪ್ರಕೃತಿಸ್ವರತ್ವಂಚ (ಉ. ಸೂ. ೪-೬೬೬) ಎಂಬ ವಚನವಿರುವುದರಿಂದ ಕಾರಕಪೂರ್ವವಾಗಿರುವಾಗಲೂ ಬರುತ್ತದೆ. ಆದರೊಡನೆ ಪೂರ್ವಪದಪ್ರಕೃತಿಸ್ವರವೂ ಬರುತ್ತದೆ. ಹಿಂದಿನ ಸೂತ್ರದಿಂದ ಣಿತ್ ಎಂದು ಅನುವೃತ್ತವಾಗಿರುವುದರಿಂದ ಅಸುನಿಗೆ ಣಿದ್ವದ್ಭಾವವಿರುವುದರಿಂದ ಧಾತುವಿನ ಉಪಧೆಗೆ ಅತಉಪಧಾಯಾಃ ಎಂಬುದರಿಂದ ವೃದ್ಧಿ ಬರುತ್ತದೆ. ಗಿರ್ವಾಹಸ್ ಶಬ್ದವಾಗುತ್ತದೆ. ಗಿರ್ ಎಂಬಲ್ಲಿ ಯದ್ಯಪಿ ಹಲ್‌ಪರವಾದುದರಿಂದ ಹಲಿಚ ಎಂಬುದರಿಂದ ದೀರ್ಘ ಬರಬೇಕಾಗುತ್ತದೆ. ಆದರೆ ಛಾಂದಸವಾಗಿ ಇಲ್ಲಿ ದೀರ್ಘ ಬರುವುದಿಲ್ಲ. ಚತುರ್ಥೀ ಏಕವಚನರೂಪ.

ವಿಶ್ವಮಿನ್ವಮ್—ಇವಿ ವ್ಯಾಪ್ತೌ ಧಾತು. ವಿಶ್ವಮಿನ್ವತಿ ವ್ಯಾಪ್ನೋತಿ ಇತಿ ವಿಶ್ವಮಿನ್ವಮ್. ಇದಿತೋನುಮ್‌ಧಾತೋಃ ಎಂಬುದರಿಂದ ಧಾತುವಿಗೆ ನುಮಾಗಮ. ಪಚಾದಿಯಲ್ಲಿ ಸೇರಿರುವುದರಿಂದ ನಂದಿಗ್ರಹಿಪಚಾದಿಭ್ಯಃ—ಎಂಬುದರಿಂದ ಕರ್ತ್ರರ್ಥದಲ್ಲಿ ಅಚ್ ಪ್ರತ್ಯಯ. ಸಮಾಸವಾದಾಗ ವಿಶ್ವಮ್ ಎಂಬಲ್ಲಿ



CC-0. Jangamwadi Math Collection. Digitized by eGangotri

ಲುಗಭಾವವು ಛಾಂದಸವಾಗಿ ಬರುತ್ತದೆ. ಅಥವಾ ಬಹುಲಗ್ರಹಣದಿಂದ ಖಚ್ ಪ್ರತ್ಯಯವು ಈ ಧಾತುವಿಗೂ ಬರುತ್ತದೆ. ಆಗ ಅರುರ್ದ್ವಿಷದಜಂತಸ್ಯ ಮುಮ್ (ಪಾ. ಸೂ. ೬-೩-೬೭) ಎಂಬುದರಿಂದ ವಿಶ್ವ ಎಂಬ ಅಜಂತಕ್ಕೆ ಮುಮಾಗಮ.

ಮೇಧಿರಾಯ—ಮೇಧಾ ಅಸ್ಯ ಅಸ್ತಿ ಇತಿ ಮೇಧಿರಃ ಮೇಧಾರಥಾಭ್ಯಾಮಿರನ್ನಿರಚೌ ವಕ್ತವ್ಯೌ (ಪಾ. ಸೂ. ೫-೨-೧೦೯-೩) ಎಂಬುದರಿಂದ ಮತ್ವರ್ಥದಲ್ಲಿ ಇರನ್ ಪ್ರತ್ಯಯ. ಯಸ್ಯೇತಿಚ ಎಂಬುದರಿಂದ ಅಕಾರಲೋಪ ಮೇಧಿರ ಶಬ್ದವಾಗುತ್ತದೆ. ಇರನ್ ನಿತ್ತಾದುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಚತುರ್ಥೀ ಏಕವಚನಾಂತರೂಪ.

॥ ಸಂಹಿತಾಪಾಠಃ ॥

ಅಸ್ಮಾ ಇದು ಸಪ್ತಿಮಿವ ಶ್ರವಸ್ಯೇಂದ್ರಾಯಾರ್ಕಂ ಜುಹ್ವಾ ಸಮಂಜೇ।
ವೀರಂ ದಾನೌಕಸಂ ವಂದಧ್ಯೈ ಪುರಾಂ ಗೂರ್ತಶ್ರವಸಂ ದರ್ಮಾಣಂ॥೫॥

॥ ಪದಪಾಠಃ ॥

ಅಸ್ಮೈ । ಇತ್ । ಊಂ ಇತಿ । ಸಪ್ತಿಂಽಇವ । ಶ್ರವಸ್ಯಾ । ಇಂದ್ರಾಯ । ಅರ್ಕಂ । ಜುಹ್ವಾ । ಸಂ । ಅಂಜೇ ।
ವೀರಂ । ದಾನಽಓಕಸಂ । ವಂದಧ್ಯೈ । ಪುರಾಂ । ಗೂರ್ತಽಶ್ರವಸಂ । ದರ್ಮಾಣಂ ॥ ೫ ॥

॥ ಸಾಯಣಭಾಷ್ಯ ॥

ಅಸ್ಮಾ ಏವೇಂದ್ರಾಯಾರ್ಕಂ ಸ್ತುತಿರೂಪಂ ಮಂತ್ರಂ ಶ್ರವಸ್ಯಾ ಶ್ರವಸ್ಯಯಾನ್ನೇಚ್ಛಯಾ। ಅನ್ನಲಾಭಾಯೇತ್ಯರ್ಥಃ। ಜುಹ್ವಾಹ್ವಾನಸಾಧನೇನ ವಾಗಿಂದ್ರಿಯೇಣ ಸಮಂಜೇ। ಸಮುಕ್ತಂ ಕರೋಮಿ। ಏಕೀಕರೋಮೀತ್ಯರ್ಥಃ। ತತ್ರ ದೃಷ್ಟಾಂತಃ। ಸಪ್ತಿಮಿವ। ಯಥಾನ್ನಲಾಭಾಯ ಗಂತುಕಾಮಃ ಪುಮಾನಶ್ವಂ ರಥೇನೈಕೀಕರೋತಿ ತದ್ವತ್। ಏಕೀಕೃತ್ಯ ಚ ವೀರಂ ಶತ್ರುಕ್ಷೇಪಣಕುಶಲಂ ದಾನೌಕಸಂ ದಾನಾನಾಮೋಕನಿಲಯಂ ಗೂರ್ತಶ್ರವಸಂ ಪ್ರಶಸ್ಯಾನ್ನಂ ಪುರಾಮಸುರಪುರಾಣಾಂ ದರ್ಮಾಣಂ ವಿದಾರಯಿತಾರಂ। ಏವಂಗುಣವಿಶಿಷ್ಟಮಿಂದ್ರಂ ವಂದಧ್ಯೈ ವಂದಿತುಂ ಸ್ತೋತುಂ ಪ್ರವೃತ್ತೋಽಸ್ಮೀತಿ ಶೇಷಃ॥ ಸಪ್ತಿಮಿವ। ಷಪ ಸಮವಾಯೇ। ಸಮವೈತಿ ರಥೇನೈಕೀಭವತೀತಿ ಸಪ್ತಿರಶ್ವಃ। ವಸಸ್ತಿಪ್। ಉ. ೪-೧೭೮। ಇತಿ ವಿಧೀಯಮಾನಸ್ತಿಪ್‌ಪ್ರತ್ಯಯೋ ಬಹುಲವಚನಾದಸ್ಮಾದಪಿ ಧಾತೋರ್ಭವತಿ। ಪ್ರತ್ಯಯಸ್ಯ ಪಿತ್ತ್ವಾದನುದಾತ್ತತ್ವೇ ಧಾತುಸ್ವರಃ। ಇವೇನ ಸಮಾಸ ಉಕ್ತಃ। ಶ್ರವಸ್ಯಾ। ಶ್ರವಸ್-



CC-0. Jangamwadi Math Collection. Digitized by eGangotri

ಶಬ್ದಾತ್ಸುಪ ಆತ್ಮನಃ ಕ್ಯಚ್ | ಕ್ಯಜಂತಾದ್ಧಾತೋರ್ಭಾವೇ ಅ ಪ್ರತ್ಯಯಾತ್ | ಪಾ. ೩-೩-೧೦೨ | ಇತ್ಯಕಾರಪ್ರತ್ಯಯಃ | ತತಷ್ಟಾಪ್ | ಸುಪಾಂ ಸುಲುಗಿತಿ ತೃತೀಯಾಯಾ ಡಾದೇಶಃ | ಉದಾತ್ತನಿವೃತ್ತಿಸ್ವರೇಣ ತಸ್ಯೋದಾತ್ತತ್ವಂ | ಅರ್ಕಂ | ಋಚ ಸ್ತುತೌ | ಋಚ್ಯತೇ ಸ್ತೂಯತೇಽನೇನೇತ್ಯರ್ಕೋ ಮಂತ್ರಃ | ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣೇತಿ ಕರಣೇ ಘಪ್ರತ್ಯಯಃ | ಚಜೋಃ ಕು ಘಿಣ್ಣ್ಯತೋರಿತಿ ಕುತ್ವಂ | ಲಘೂಪಧಗುಣಃ | ಪ್ರತ್ಯಯಸ್ವರಃ | ಜುಹ್ವಾ | ಬಹುಲಂ ಛಂದಸೀತಿ ಕೃತಸಂಪ್ರಸಾರಣಸ್ಯ ಹ್ವೇಞೋ ಹುವಃ ಶ್ಲುವಚ್ಚ | ಉ. ೨-೬೦ | ಇತಿ ಕ್ವಿಪ್ | ಧಾತೋರ್ದೀರ್ಘಶ್ಚ | ಧಾತುಸ್ವರೇಣಾಂತೋದಾತ್ತತ್ವಂ | ತೃತೀಯೈಕವಚನ ಉದಾತ್ತಸ್ವರಿತಯೋರ್ಯಣ ಇತಿ ಸ್ವರಿತತ್ವಂ | ಉದಾತ್ತಯಣೋ ಹಲ್ಪೂರ್ವಾದಿತ್ಯಸ್ಯ ವಿಭಕ್ತ್ಯುದಾತ್ತತ್ವಸ್ಯ ನೋಙ್ಧಾತ್ವೋಃ | ಪಾ. ೬-೧-೧೭೫ | ಇತಿ ಪ್ರತಿಷೇಧಃ | ಅಂಜೇ | ಅಂಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು | ವ್ಯತ್ಯಯೇನಾತ್ಮನೇಪದಂ | ವಂದಧ್ಯೈ | ವದಿ ಅಭಿವಾದನಸ್ತುತ್ಯೋಃ | ತುಮರ್ಥೇ ಸೇಸೇನಿತಿ ಕಧ್ಯೈಪ್ರತ್ಯಯಃ | ಗೂರ್ತಶ್ರವಸಂ | ಗೃ ಶಬ್ದೇ | ನಿಷ್ಠಾಯಾಂ ಶ್ರ್ಯುಕಃ ಕಿತೀತೀಟ್ಪ್ರತಿಷೇಧಃ | ಬಹುಲಂ ಛಂದಸೀತ್ಯುತ್ವಂ | ಹಲಿ ಚೇತಿ ದೀರ್ಘಃ | ನಸತ್ತನಿಷತ್ತೇತ್ಯಾದೌ | ಪಾ. ೮-೨-೬೧ | ನಿಪಾತನಾನ್ನಿಷ್ಠಾನತ್ವಾಭಾವಃ | ಗೂರ್ತಂ ಶ್ರವೋ ಯಸ್ಯ | ಬಹುವ್ರೀಹೌ ಪೂರ್ವಪದಪ್ರಕೃತಿಸ್ವರತ್ವಂ | ದರ್ಮಾಣಂ | ದೃ ವಿದಾರಣೇ | ಅನ್ಯೇಭ್ಯೋಽಪಿ ದೃಶ್ಯಂತ ಇತಿ ಮನಿನ್ | ನೇಡ್ವಶಿ ಕೃತೀತೀಟ್ಪ್ರತಿಷೇಧಃ | ವ್ಯತ್ಯಯೇನ ಪ್ರತ್ಯಯಾದ್ಯುದಾತ್ತತ್ವಂ | ಯದ್ವಾ | ಔಣಾದಿಕೋ ಮನಿಪ್ರತ್ಯಯೋ ದ್ರಷ್ಟವ್ಯಃ ||

|| ಪ್ರತಿಪದಾರ್ಥ ||

ಶ್ರವಸ್ಯಾ—ಅನ್ನಸಂಪಾದನೆಯ ಇಚ್ಛೆಯಿಂದ | ಅಸ್ಮೈ ಇದು ಇಂದ್ರಾಯ—ಈ ಇಂದ್ರನಿಗೇ (ಈ ಇಂದ್ರನನ್ನೇ ಉದ್ದೇಶಿಸಿ) | ಅರ್ಕಂ—ಸ್ತುತಿರೂಪವಾದ ಮಂತ್ರವನ್ನು | ಜುಹ್ವಾ—(ಆಹ್ವಾನಸಾಧನವಾದ ವಾಗುಕ್ತಿಯೊಡನೆ | ಸಪ್ತಿಮಿವ—(ಅನ್ನಸಂಪಾದನೆಗೆ ಹೋಗುವ ಪುರುಷನು) ಕುದುರೆಯನ್ನು (ರಥದೊಡನೆ ಸೇರಿಸುವಂತೆ | ಸಂ ಅಂಜೇ—ಒಂದಾಗಿ ಸೇರಿಸುತ್ತೇನೆ | ವೀರಂ—ಪರಾಕ್ರಮಿಯೂ | ದಾನೌಕಸಂ—ಉದಾರವಾದ ದಾನಾಶ್ರಯನೂ | ಗೂರ್ತಶ್ರವಸಂ—ಸ್ತೋತ್ರಾರ್ಹವಾದ ಅನ್ನವುಳ್ಳವನೂ | ಪುರಾಂ—(ಶತ್ರು) ಪಟ್ಟಣಗಳ | ದರ್ಮಾಣಂ—ಧ್ವಂಸಕನೂ ಆದ ಇಂದ್ರನನ್ನು | ವಂದಧ್ಯೈ—ಪೂಜಿಸುವುದಕ್ಕಾಗಿ (ಮಂತ್ರವನ್ನೂ ವಾಗುಕ್ತಿಯನ್ನೂ ಒಂದಾಗಿ ಸೇರಿಸುತ್ತೇನೆ)

|| ಭಾವಾರ್ಥ ||

ಅನ್ನ ಸಂಪಾದನೆಗೆ ಹೋಗುವ ಪುರುಷನು ಕುದುರೆಯನ್ನೂ ರಥವನ್ನೂ ಒಂದಾಗಿ ಸೇರಿಸುವಂತೆ ನಾನೂ ಸಹ ಅನ್ನೇಚ್ಛೆಯಿಂದ ಇಂದ್ರನ ಸ್ತೋತ್ರಕ್ಕಾಗಿ ಸ್ತುತಿರೂಪವಾದ ಮಂತ್ರವನ್ನು ಆಹ್ವಾನಸಾಧನವಾದ ವಾಗುಕ್ತಿಯೊಡನೆ ಒಂದಾಗಿ ಸೇರಿಸುತ್ತೇನೆ. ಪರಾಕ್ರಮಿಯೂ, ಉದಾರಾಶ್ರಯನೂ ಸ್ತೋತ್ರಾರ್ಹವಾದ ಅನ್ನವುಳ್ಳವನೂ, ಶತ್ರುಪಟ್ಟಣಗಳ ಧ್ವಂಸಕನೂ ಆದ ಇಂದ್ರನನ್ನು ಪೂಜಿಸುವುದಕ್ಕಾಗಿ ಮಂತ್ರವನ್ನೂ ವಾಗುಕ್ತಿಯನ್ನು ಒಂದಾಗಿ ಸೇರಿಸಿ ಸ್ತೋತ್ರಮಾಡುತ್ತೇನೆ.

English Translation.

For the sake of food, I combine praise with the instrument of invocation as a man harnesses a horse to a car; I begin to celebrate the heroic, munificent and food-conferring Indra, the destroyer of the cities (of the Asuras).



CC-0. Jangamwadi Math Collection. Digitized by eGangotri

|| ವಿಶೇಷ ವಿಷಯಗಳು ||

**ಅರ್ಕಃ—ಋಚ್ಯತೇ ಸ್ತೂಯತೇ ಅನೇನೇತಿ ಅರ್ಕಃ (ಮಂತ್ರಃ)** ಸ್ತುತಿರೂಪವಾದ ಮಂತ್ರ ಎಂದರ್ಥ. **ಅರ್ಕೋ ಮಂತ್ರೋ ಭವತಿ ಯದನೇನಾರ್ಚಂತಿ** | (ನಿ. ೫-೪) ಎಂದು ನಿರುಕ್ತವಚನವಿರುವುದು.

**ಶ್ರವಸ್ಯಾ—ಶ್ರವಸ್ಯಯಾ ಅನ್ನೇಚ್ಛಯಾ— ಅನ್ನಲಾಭಾಯೇತ್ಯರ್ಥಃ** ಅನ್ನಪ್ರಾಪ್ತಿಗಾಗಿ ಎಂದರ್ಥ.

**ಸಪ್ತಿಮಿವ ಷಪ ಸಮವಾಯೇ—ಸಮವೈತಿ ರಥೇನೈಕೀಭವತೀತಿ ಸಪ್ತಿರಶ್ವಃ**—ರಥದೊಡನೆ ಕೂಡುವುದು ಕುದುರೆ. ಆಹಾರಪ್ರಾಪ್ತಿಗೋಸ್ಕರ ಪ್ರಯಾಣಮಾಡುವವನು ಅಶ್ವವನ್ನು ರಥಕ್ಕೆ ಹೂಡುವಂತೆ ಇಂದ್ರನಿಂದ ಇಷ್ಟಾರ್ಥಪ್ರಾಪ್ತಿಗಾಗಿ ಇಂದ್ರನನ್ನು ಸ್ತುತಿರೂಪವಾದ ಮಂತ್ರದಿಂದ ಸ್ತುತಿಸುವೆನು ಎಂದು ದೃಷ್ಟಾಂತರೂಪವಾದ ವಿವರಣೆ.

**ದಾನೌಕಸಂ—ದಾನಾನಾಂ ಏಕನಿಲಯಂ**—ಯಜಮಾನರ ಸಮಸ್ತ ಇಷ್ಟಾರ್ಥಗಳನ್ನೂ ನೆರವೇರಿಸುವವನು.

**ಗೂರ್ತಶ್ರವಸಂ—ಗೂರ್ತಂ ಶ್ರವೋ ಯಸ್ಯ—ಗೃ-ಶಬ್ದೇ** ಎಂಬ ಧಾತುಜನ್ಯವಾದ ಗೂರ್ತ ಶಬ್ದಕ್ಕೆ ಪ್ರಶಸ್ತವೆಂದರ್ಥ. ಪ್ರಶಸ್ತವಾದ ಅನ್ನವುಳ್ಳವನು ಅಥವಾ ಹವಿರ್ದ್ರವ್ಯವುಳ್ಳವನು.

**ದರ್ಮಾಣಂ—ದೃ-ವಿದಾರಣೇ ವಿದಾರಯಿತಾರಂ**—ಶತ್ರುಗಳ ಪಟ್ಟಣಗಳನ್ನು ಧ್ವಂಸಮಾಡುವವನು ಎಂದರ್ಥ.

|| ವ್ಯಾಕರಣಪ್ರಕ್ರಿಯಾ ||

**ಸಪ್ತಿಮಿವ**—ಷಪ ಸಮವಾಯೇ ಧಾತು. ಸಮವೈತಿ ರಥೇನೈಕೀಭವತಿ ಇತಿ ಸಪ್ತಿರಶ್ವಃ. ವಸಿಸ್ತಿಪ್ (ಉ. ಸೂ. ೪-೬೯) ಎಂಬುದರಿಂದ ವಿಧಿಸಲ್ಪಡುವ ತಿಪ್ ಪ್ರತ್ಯಯವು ಬಹುಲವಚನದಿಂದ ಈ ಧಾತುವಿಗೂ ಬರುತ್ತದೆ. **ಅನುದಾತ್ತೌಸುಪ್ಪಿತೌ** ಎಂಬುದರಿಂದ ಪ್ರತ್ಯಯವು ಪಿತ್ತಾದುದರಿಂದ ಅನುದಾತ್ತವಾಗುತ್ತದೆ. ಆಗ ಧಾತುಸ್ವರ ಉಳಿಯುತ್ತದೆ. **ಇವೇನಸಮಾಸಃ ವಿಭಕ್ತ್ಯಲೋಪಶ್ಚ** ಎಂದುದರಿಂದ ಸಮಾಸವಾದಾಗ ವಿಭಕ್ತಿಗೆ ಲೋಪ ಬರುವುದಿಲ್ಲ.

**ಶ್ರವಸ್ಯಾ**—ಶ್ರು ಶ್ರವಣೇ ಧಾತು. ಇದಕ್ಕೆ ಅಸುನ್ ಪ್ರತ್ಯಯ ಶ್ರವಸ್ ಶಬ್ದವಾಗುತ್ತದೆ. ಶ್ರವಃ ಆತ್ಮನಃ ಇಚ್ಛತಿ ಎಂಬರ್ಥ ವಿವಕ್ಷಾಮಾಡಿದಾಗ **ಸುಪಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್ ಪ್ರತ್ಯಯ. ಶ್ರವಸ್ಯ ಎಂಬುದು **ಸನಾದ್ಯಂತಾಧಾತವಃ** ಸೂತ್ರದಿಂದ ಧಾತುಸಂಜ್ಞೆಯನ್ನು ಹೊಂದುತ್ತದೆ. ಕ್ಯಜಂತಧಾತುವಿನ ಮೇಲೆ ಭಾವಾರ್ಥದಲ್ಲಿ **ಅ ಪ್ರತ್ಯಯಾತ್** (ಪಾ. ಸೂ. ೩-೩-೧೦೨) ಎಂಬುದರಿಂದ ಪ್ರತ್ಯಯಾಂತವಾದುದರಿಂದ ಅಕಾರ ಪ್ರತ್ಯಯ ಬರುತ್ತದೆ. ಆಗ ಸ್ತ್ರೀತ್ವವಿವಕ್ಷಾ ಮಾಡಿದಾಗ **ಅಜಾದ್ಯತಷ್ಟಾಪ್** ಎಂಬುದರಿಂದ ಟಾಪ್ ಪ್ರತ್ಯಯ. ಶ್ರವಸ್ಯಾ ಶಬ್ದವಾಗುತ್ತದೆ. ತೃತೀಯಾಏಕವಚನಪರವಾದಾಗ **ಸುಪಾಂಸುಲುಕ್** ಎಂಬುದರಿಂದ ಅದಕ್ಕೆ ಡಾದೇಶ. **ಅನುದಾತ್ತಸ್ಯ ಯತ್ರೋದಾತ್ತಲೋಪಃ** (ಪಾ. ಸೂ. ೬-೧-೧೬೧) ಎಂಬುದರಿಂದ ಅನುದಾತ್ತಪರವಾದಾಗ ಉದಾತ್ತವು ನಿವೃತ್ತವಾದುದರಿಂದ ಅನುದಾತ್ತಕ್ಕೆ ಉದಾತ್ತಸ್ವರ ಬರುತ್ತದೆ.

**ಅರ್ಕಮ್**—ಋಚ ಸ್ತುತೌ ಧಾತು. ಋಚ್ಯತೇ ಸ್ತೂಯತೇ ಅನೇನ ಇತಿ ಅರ್ಕೋ ಮಂತ್ರಃ **ಪುಂಸಿ ಸಂಜ್ಞಾಯಾಂ ಘಃ ಪ್ರಾಯೇಣ** (ಪಾ. ಸೂ. ೩-೩-೧೧೮) ಎಂಬುದರಿಂದ ಕರಣಾರ್ಥದಲ್ಲಿ ಸಂಜ್ಞಾ



CC-0. Jangamwadi Math Collection. Digitized by eGangotri

ತೋರುವುದರಿಂದ ಘ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿನ ಉಪಧೆಗೆ ಗುಣ. ಚಜೋಃ ಕು ಘಿಣ್ಣ್ಯತೋಃ (ಪಾ. ಸೂ. ೭-೩-೫೨) ಎಂಬುದರಿಂದ ಚಕಾರಕ್ಕೆ ಕುತ್ವ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

ಜುಹ್ವಾ—ಹ್ವೇಞ್ ಸ್ಪರ್ಧಾಯಾಂ ಶಬ್ದೇ ಚ ಧಾತು. ಬಹುಲಂಛಂದಸಿ ಎಂಬುದರಿಂದ ಇದಕ್ಕೆ ಸಂಪ್ರಸಾರಣ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಸಂಪ್ರಸಾರಣಹೊಂದಿದ ಈ ಧಾತುವಿಗೆ ಹುವಃಶ್ಲುವಚ್ಚ (ಉ. ಸೂ. ೨-೨೧೮) ಎಂಬುದರಿಂದ ಕ್ವಿಪ್. ತತ್ಸಂನಿಯೋಗದಿಂದ ಧಾತುವಿಗೆ ದೀರ್ಘ. ಕ್ವಿಪಿನಲ್ಲಿ ಸರ್ವವೂ ಲೋಪವಾಗುತ್ತದೆ. ಶ್ಲುವದ್ಭಾವ ಹೇಳಿರುವುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹ್ರಸ್ವ. ಕುಹೋಶ್ಚುಃ ಎಂಬುದರಿಂದ ಚುತ್ವ. ಜುಹೂ ಶಬ್ದವಾಗುತ್ತದೆ ಧಾತುವಿನ ಅಂತೋದಾತ್ತಸ್ವರದಿಂದ ಅಂತೋದಾತ್ತವಾಗುತ್ತದೆ. ತೃತೀಯಾ ಏಕವಚನದಲ್ಲಿ ಟಾಪ್ರತ್ಯಯ ಬಂದಾಗ ಯಣಾದೇಶ. ಆಗ ಉದಾತ್ತಸ್ಥಾನದಲ್ಲಿ ಯಣ್ ಬಂದುದರಿಂದ ಉದಾತ್ತಸ್ವರಿತಯೋರ್ಯಣಃ ಸ್ವರಿತೋನುದಾತ್ತಸ್ಯ (ಪಾ. ಸೂ. ೬-೨-೪) ಎಂಬುದರಿಂದ ಪರದಲ್ಲಿರುವ ಅನುದಾತ್ತಕ್ಕೆ ಸ್ವರಿತಸ್ವರ ಬರುತ್ತದೆ. ಯದ್ಯಪಿ ಇಲ್ಲಿ ಉದಾತ್ತಯ-ಣೋ ಹಲ್‌ಪೂರ್ವಾತ್ (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರಬೇಕಾಗುತ್ತದೆ. ಆದರೆ ನೋಙ್‌ಧಾತ್ವೋಃ (ಪಾ. ಸೂ. ೬-೧-೧೭೫) ಎಂಬುದರಿಂದ ಅದಕ್ಕೆ ಪ್ರತಿಷೇಧ ಬರುತ್ತದೆ.

ಅಂಜೇ—ಅಞ್ಜೂ ವ್ಯಕ್ತಿಮ್ರಕ್ಷಣಕಾಂತಿಗತಿಷು ಧಾತು. ಇದು ಪರಸ್ಮೈಪದಿಯಾದರೂ ವ್ಯತ್ಯಯೋ-ಬಹುಲಂ ಎಂಬುದರಿಂದ ಆತ್ಮನೇಪದಪ್ರತ್ಯಯವನ್ನು ಹೊಂದುತ್ತದೆ. ಲಡುತ್ತಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವಂದಧ್ಯೈ—ವದಿ ಅಭಿವಾದನಸ್ತುತ್ಯೋಃ ಧಾತು. ತುಮುನರ್ಥತೋರುವಾಗ ತುಮರ್ಥೇ ಸೇಸೇ-ನಸೇ—(ಪಾ. ಸೂ. ೩-೪-೯) ಎಂಬುದರಿಂದ ಕಧ್ಯೈ ಪ್ರತ್ಯಯ. ಇದಿತೋನುಮ್‌ಧಾತೋಃ ಎಂಬುದರಿಂದ ಧಾತುವಿಗೆ ನುಮಾಗಮ ಏಜಂತವಾದುದರಿಂದ ಕೃನ್ಮೇಜಂತಃ ಎಂಬುದರಿಂದ ಅವ್ಯಯಸಂಜ್ಞೆಯನ್ನು ಹೊಂದುತ್ತದೆ.

ಗೂರ್ತಶ್ರವಸಮ್—ಗ್ಯಾ ಶಬ್ದೇ ಧಾತು ಇದಕ್ಕೆ ಕ್ತ ಪ್ರತ್ಯಯ ಪರವಾದಾಗ ಶ್ರ್ಯುಕಃ ಕಿತಿ (ಪಾ. ಸೂ. ೭-೨-೧೧) ಎಂಬುದರಿಂದ ಇಣ್ನಿಷೇಧ. ಬಹುಲಂ ಛಂದಸಿ ಎಂಬುದರಿಂದ ಉತ್ವ. ಉರಣ್ರಪರಃ ಎಂಬುದರಿಂದ ರಪರವಾಗಿ ಬರುತ್ತದೆ. ಹಲಿಚ ಎಂಬುದರಿಂದ ಉಪಧಾದೀರ್ಘ. ಗೂರ್ತ ಎಂದು ರೂಪವಾಗುತ್ತದೆ. ರೇಫದ ಪರದಲ್ಲಿ ನಿಷ್ಠಾತಕಾರ ಬಂದುದರಿಂದ ರದಾಭ್ಯಾಂ—ಸೂತ್ರದಿಂದ ಅದಕ್ಕೆ ನತ್ವವು ಪ್ರಾಪ್ತವಾದರೆ ನಸತ್ತನಿಷತ್ತ—(ಪಾ. ಸೂ. ೮-೨-೬೧) ಎಂಬುದರಿಂದ ನಿಪಾತಮಾಡಿರುವುದರಿಂದ ನಿಷ್ಠಾನತ್ವ ಬರುವುದಿಲ್ಲ. ಗೂರ್ತಂ ಶ್ರವೋ ಯಸ್ಯ ಸಃ ಗೂರ್ತಶ್ರವಾಃ. ಬಹುವ್ರೀಹೌ ಪ್ರಕೃತ್ಯಾಪೂರ್ವಪದಮ್ ಎಂಬುದರಿಂದ ಪೂರ್ವಪದ ಪ್ರಕೃತಿಸ್ವರ ಬರುತ್ತದೆ. ದ್ವಿತೀಯಾ ಏಕವಚನಾಂತರೂಪ.

ದರ್ಮಾಣಮ್—ದೃ ವಿದಾರಣೇ ಧಾತು. ಅನ್ಯೇಭ್ಯೋಪಿದೃಶ್ಯಂತೇ (ಪಾ. ಸೂ. ೩-೨-೭೫) ಎಂಬುದರಿಂದ ಮನಿನ್ ಪ್ರತ್ಯಯ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ನೇಡ್ವಶಿಕೃತಿ ಎಂಬುದರಿಂದ ವಶಾದಿಯಾದುದರಿಂದ ಮನಿನಿಗೆ ಇಡಾಗಮ ಬರುವುದಿಲ್ಲ. ದರ್ಮನ್ ಶಬ್ದವಾಗುತ್ತದೆ. ವ್ಯತ್ಯಯದಿಂದ ನಿತ್ತಾದರೂ ಪ್ರತ್ಯಯ ಆದ್ಯುದಾತ್ತಸ್ವರ ಬರುತ್ತದೆ. ಅಥವಾ ಈ ಧಾತುವಿಗೆ ಬಹುಲಗ್ರಹಣದಿಂದ ಔಣಾದಿಕವಾದ ಮನಿ ಪ್ರತ್ಯಯ. ಆಗ ಸ್ವರಸವಾಗಿ ಪ್ರತ್ಯಯಾದ್ಯುದಾತ್ತಸ್ವರ ಬರುತ್ತದೆ. ದ್ವಿತೀಯಾ ಏಕವಚನದಲ್ಲಿ ಸರ್ವ-ನಾಮಸ್ಥಾನೇಚಾಸಂಬುದ್ಧೌ ಎಂಬುದರಿಂದ ನಾಂತೋಪಧೆಗೆ ದೀರ್ಘ. ರೇಫನಿಮಿತ್ತವಾಗಿ ನಕಾರಕ್ಕೆ ಣತ್ವ.



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಸ್ಮಾ ಇದು ತ್ವಷ್ಟಾ ತಕ್ಷದ್ವಜ್ರಂ ಸ್ವಪಸ್ತಮಂ ಸ್ವರ್ಯಂ೧ ರಣಾಯ ।
ವೃತ್ರಸ್ಯ ಚಿದ್ವಿದದ್ಯೇನ ಮರ್ಮ ತುಜನ್ನೀಶಾನಸ್ತುಜತಾ ಕಿಯೇಧಾಃ ॥೬॥

॥ ಪದಪಾಠಃ ॥

ಅಸ್ಮೈ । ಇತ್ । ಊಂ ಇತಿ । ತ್ವಷ್ಟಾ । ತಕ್ಷತ್ । ವಜ್ರಂ । ಸ್ವಪಃऽತಮಂ ।
ಸ್ವರ್ಯಂ । ರಣಾಯ ।

ವೃತ್ರಸ್ಯ । ಚಿತ್ । ವಿದತ್ । ಯೇನ । ಮರ್ಮ । ತುಜನ್ । ಈಶಾನಃ । ತುಜತಾ ।
ಕಿಯೇಧಾಃ ॥ ೬ ॥

|| ಸಾಯಣಭಾಷ್ಯಂ ||

ತ್ವಷ್ಟಾ ವಿಶ್ವಕರ್ಮಾಸ್ಮಾ ಇದು ಅಸ್ಮಾ ಏವೇಂದ್ರಾಯ ವಜ್ರಂ ವರ್ಜಕಮಾಯುಧಂ ರಣಾಯ ಯುದ್ಧಾರ್ಥಂ ತಕ್ಷತ್ । ತೀಕ್ಷ್ಣಮಕರೋತ್ । ಕೀದೃಶಂ ವಜ್ರಂ । ಸ್ವಪಸ್ತಮಮತಿಶಯೇನ ಶೋಭನಕರ್ಮಾಣಂ ಸ್ವರ್ಯಂ ಸುಷ್ಠು ಶತ್ರುಷು ಪ್ರೇರ್ಯಂ ಯದ್ವಾ ಸ್ತುತ್ಯಂ । ತುಜನ್ ಶತ್ರೂನ್ಹಿಂಸನ್ ಈಶಾನ ಐಶ್ವರ್ಯವಾನ್ ಕಿಯೇಧಾ ಬಲವಾನ್ ಏವಂಗುಣವಿಶಿಷ್ಟ ಇಂದ್ರೋ ವೃತ್ರಸ್ಯ ಚಿತ್ ಆವರಕಸ್ಯಾಸುರಸ್ಯ ಮರ್ಮ ಮರ್ಮಸ್ಥಾನಂ ತುಜತಾ ಹಿಂಸತಾ ಯೇನ ವಜ್ರೇಣ ವಿದತ್ । ಪ್ರಾಹಾರ್ಷೀದಿತ್ಯರ್ಥಃ ॥ ಸ್ವಪಸ್ತಮಂ । ಶೋಭನಮಪಃ ಕರ್ಮ ಯಸ್ಯಾಸೌ । ಅತಿಶಯೇನ ಸ್ವಪಾಃ ಸ್ವಪಸ್ತಮಃ । ತಮಪಃ ಪಿತ್ತ್ವಾದನುದಾತ್ತತ್ವಂ । ಸೋಮನಸೀ ಅಲೋಮೋಷಸೀ ಇತ್ಯುತ್ತರಪದಾದ್ಯುದಾತ್ತತ್ವಂ । ಸ್ವರ್ಯಂ । ಸ್ವರ್ಯಂ ತತಕ್ಷ । ಋಗ್ವೇ ೧.೩೨.೨ । ಇತ್ಯತ್ರೋಕ್ತಂ । ವಿದತ್ । ವಿದ್ಲೃ ಲಾಭೇ । ಲೃದಿತ್ತ್ವಾತ್ ಚ್ಲೇರಙಾದೇಶಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ಯದ್ವೃತ್ತಯೋಗಾದನಿಘಾತಃ । ತುಜನ್ । ತುಜ ಹಿಂಸಾಯಾಂ । ಶಪಿ ಪ್ರಾಪ್ತೇ ವ್ಯತ್ಯಯೇನ ಶಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರಃ । ಈಶಾನಃ । ಈಶ ಐಶ್ವರ್ಯೇ । ಶಾನಚ್ಯದಾದಿತ್ವಾಚ್ಛಪೋ ಲುಕ್ । ಅನುದಾತ್ತೇತ್ತ್ವಾಲ್ಲಸಾರ್ವಧಾತುಕಾನುದಾತ್ತತ್ವೇ ಧಾತುಸ್ವರಃ । ತುಜತಾ । ಶತುರನುಮ ಇತಿ ವಿಭಕ್ತೇರುದಾತ್ತತ್ವಂ । ಕಿಯೇಧಾಃ । ಅತ್ರ ನಿರುಕ್ತಂ । ಕಿಯೇಧಾಃ ಕ್ರಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವೇತಿ । ನಿ. ೬.೨೦ । ಅಸ್ಯಾಯಮಭಿಪ್ರಾಯಃ । ಕಿಯತ್ ಕಿಂಪರಿಮಾಣಮಿತ್ಯಸ್ಯ ಬಲಸ್ಯ ತಾದೃಶಂ ಬಲಂ ದಧಾತಿ ಧಾರಯತೀತಿ ಕಿಯದ್ಧಾಃ । ಯಃ ಕೋಽಪ್ಯಸ್ಯ ಬಲಸ್ಯೇಯತ್ತಾಂ ನ ಜಾನಾತೀತ್ಯರ್ಥಃ । ಯದ್ವಾ । ಕ್ರಮಮಾಣಮಾಕ್ರಮಮಾಣಂ ಪರೇಷಾಂ ಬಲಂ ಧಾರಯತಿ ನಿವಾರಯತೀತಿ ಕ್ರಮಮಾಣಧಾಃ । ಉಭಯತ್ರಾಪಿ ಪೃಷೋದರಾದಿತ್ವಾತ್ಪೂರ್ವಪದಸ್ಯ ಕಿಯೇಭಾವಃ । ದಧಾತೇರ್ವಿಚ್ ॥

|| ಪ್ರತಿಪದಾರ್ಥ ||

**ತುರ್ಜ**—(ಶತ್ರು) ಹಿಂಸಕನೂ | **ಈಶಾನಃ**—ಅಧಿಪತಿಯೂ | **ಕಿಯೇಧಾಃ**—ಶಕ್ತಿವಂತನೂ ಆದ ಇಂದ್ರನು | **ವೃತ್ರಸ್ಯ ಚಿತ್**—ವೃತ್ರಾಸುರನ | **ಮರ್ಮ**—ಮರ್ಮಪ್ರದೇಶವನ್ನು | **ತುಜತಾ**—(ಶತ್ರುವನ್ನು) ಹಿಂಸಿಸತಕ್ಕ (ನಾಶಕವಾದ) | **ಯೇನ**—ಯಾವ ವಜ್ರಾಯುಧದಿಂದ | **ವಿದತ್**—ಪ್ರಹರಿಸಿದನೋ ಅದೇ ಆದ | **ಸ್ವಪಸ್ತಮಂ**—ಅತ್ಯಂತ ಶ್ರೇಷ್ಠವಾದ ಕೆಲಸವನ್ನು ಮಾಡತಕ್ಕುದೂ | **ಸ್ವರ್ಯಂ**—ಶತ್ರುವಿಗೆ ಲಕ್ಷ್ಯವಿಟ್ಟು ಹೊಡೆಯತಕ್ಕುದೂ ಅಥವಾ ಸ್ತುತ್ಯವಾದುದೂ ಆದ | **ವಜ್ರಂ**—ವಜ್ರಾಯುಧವನ್ನು | **ತ್ವಷ್ಟಾ**—ವಿಶ್ವಕರ್ಮನು | **ಅಸ್ಮಾ ಇದು**—ಈ ಇಂದ್ರನಿಗೋಸ್ಕರವೇ | **ರಣಾಯ**—ಯುದ್ಧಮಾಡುವುದಕ್ಕಾಗಿ | **ತತಕ್ಷತ್**—ಹರಿತ ಮಾಡಿದನು ||

|| ಭಾವಾರ್ಥ ||

ಅತ್ಯಂತ ಶ್ರೇಷ್ಠವಾದ ಕೆಲಸವನ್ನು ಮಾಡತಕ್ಕುದೂ ಮತ್ತು ಶತ್ರುವಿಗೆ ಲಕ್ಷವಿಟ್ಟು ಹೊಡೆಯತಕ್ಕುದೂ ಆದ ವಜ್ರಾಯುಧವನ್ನು ವಿಶ್ವಕರ್ಮನು ಇಂದ್ರನಿಗೋಸ್ಕರ ಯುದ್ಧಮಾಡುವುದಕ್ಕಾಗಿ ಹರಿತ ಮಾಡಿದನು. ಮತ್ತು ಅದೇ ವಜ್ರಾಯುಧದಿಂದ ಶತ್ರುಹಿಂಸಕನೂ, ಲೋಕಾಧಿಪತಿಯೂ ಮತ್ತು ಶಕ್ತಿವಂತನೂ ಆದ ಇಂದ್ರನು ವೃತ್ರಾಸುರನ ಮರ್ಮಸ್ಥಾನವನ್ನು ಹೊಡೆದು ಸೀಳಿದನು.

## English Translation.

For that Indra, verily Twashtri sharpened the well-acting, sure-aimed thunderbolt for the battle, with which fatal (weapon), the mighty and lordly (Indra) desirous of killing his enemies, pierced the vital parts of Vritra.

|| ವಿಶೇಷವಿಷಯಗಳು ||

**ತ್ವಷ್ಟಾ**—ತ್ವಷ್ಟೃಶಬ್ದಕ್ಕೆ ಇಲ್ಲಿ ದೇವಶಿಲ್ಪಿಯಾದ ವಿಶ್ವಕರ್ಮನೆಂದರ್ಥ.

**ಸ್ವಪಸ್ತಮಮ್**—ಅತಿಶಯೇನ ಶೋಭನಕರ್ಮಾಣಂ—ಶೋಭನಂ ಅಪಃ ಕರ್ಮ ಯಸ್ಯಾಸೌ ಅತಿಶಯೇನ ಸ್ವಪಾಃ ಸ್ವಪಸ್ತಮಃ—ಈ ರೀತಿ ಶಬ್ದವನ್ನು ವಿವರಿಸಿ, ಯಾವಾಗಲೂ ದುಷ್ಟವಧರೂಪವಾದ ಕರ್ಮಗಳನ್ನು ಮಾಡುವುದು ವಜ್ರಾಯುಧ ಎಂದರ್ಥಮಾಡಿದ್ದಾರೆ.

**ಸ್ವರ್ಯಂ**—ಸುಷ್ಠು ಶತ್ರುಷು ಪ್ರೇರ್ಯಂ ಯದ್ವಾ ಸ್ತುತ್ಯಂ—ಶತ್ರುಗಳ ವಿಷಯದಲ್ಲಿ ನಿರ್ದಾಕ್ಷಿಣ್ಯವಾಗಿ ಪ್ರೇರಿಸುವುದು ಅಥವಾ ಸ್ತುತಿಗೆ ವಿಷಯವಾದದ್ದು. ಸ್ವರ್ಯಂ ತತಕ್ಷ (ಋ. ಸಂ. ೧-೩೨-೨) ಎಂದು ಋಕ್ಸಂಹಿತೆಯಲ್ಲಿ ಇದೇ ಅರ್ಥದಲ್ಲಿ ಈ ಶಬ್ದವು ಉಪಾತ್ತವಾಗಿದೆ. (ಋ. ಸಂ. ೧-೩೨-೨)

**ಕಿಯೇಧಾಃ**—ಬಲಿಷ್ಠನು ಎಂದರ್ಥ. ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ (ನಿರು. ೬-೨೦) ಎಂದು ನಿರುಕ್ತದಲ್ಲಿ ಈ ಪದವನ್ನು ಈ ರೀತಿ ವಿವರಿಸಿರುವರು. ಕಿಯತ್ ಕಿಂಪರಿಮಾಣಮಿತ್ಯಸ್ಯ ಬಲಸ್ಯ ಶಾದೃಶಂ ಬಲಂ ದಧಾತಿ ಧಾರಯತೀತಿ ಕಿಯದ್ಧಾಃ ಯಃಕೋಽಪ್ಯಸ್ಯ ಬಲಸ್ಯೇಯತ್ತಾಂ ನ ಜಾನಾತೀತ್ಯರ್ಥಃ | ಯದ್ವಾ ಕ್ರಮಮಾಣಮಾಕ್ರಮಮಾಣಂ ಪರೇಷಾಂ ಬಲಂ ಧಾರಯತಿ ನಿವಾರಯತೀತಿ ಕ್ರಮಮಾಣಧಾಃ ಅತಿಶಯವಾದ ಬಲವನ್ನು ಧರಿಸುವುದು. ಮತ್ತು ಇದರ ಬಲವನ್ನು ಯಾರೂ ತಿಳಿಯಲಾರರು. ಅಥವಾ ಆಕ್ರಮಿಸುವ ಸ್ವಭಾವವುಳ್ಳ ಶತ್ರುಗಳ ಬಲವನ್ನು ಪೂರ್ಣವಾಗಿ ತಡೆಯುವ ಸ್ವಭಾವವುಳ್ಳದ್ದು ಎಂದರ್ಥ.





CC-0. Jangamwadi Math Collection. Digitized by eGangotri

॥ ವ್ಯಾಕರಣಪ್ರಕ್ರಿಯಾ ॥

ತಕ್ಷತ್—ತಕ್ಷ ತನೂಕರಣೇ ಧಾತು. ಲಙ್ ಪ್ರಥಮಪುರುಷ ಏಕವಚನರೂಪ. ಬಹುಲಂ ಛಂದ. ಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತ ನಿಘಾತಸ್ವರ ಬರುತ್ತದೆ.

ಸ್ವರ್ಯಮ್—ಸ್ವರ್ಯಂ ತತಕ್ಷ (ಋ. ಸಂ. ೧-೩೨-೨) ಎಂಬಲ್ಲಿ ವ್ಯಾಖ್ಯಾತವಾಗಿದೆ.

ವಿದತ್—ವಿದ್‌ಲೃ ಲಾಭೇ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಇಕಾರಲೋಪ. ಲೃದಿತ್ತಾದುದರಿಂಧ ಪುಷಾದಿದ್ಯುತಾದಿ—ಎಂಬುದರಿಂದ ಲುಙಿನಲ್ಲಿ ಪ್ರಾಪ್ತವಾದ ಚ್ಲಿಗೆ ಅಙಾದೇಶ. ಙಿತ್ತಾದುದರಿಂದ ಧಾತುವಿಗೆ ಲಘೂಪಧಗುಣ ಬರುವುದಿಲ್ಲ. ಬಹುಲಂ ಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಯದ್ಯೋಗವಿರುವುದರಿಂದ ಯದ್ವೃತ್ತಾನ್ನಿತ್ಯಮ್ ಎಂಬುದರಿಂದ ನಿಘಾತಸ್ವರ ಬರುವುದಿಲ್ಲ. ಅಙಿನ ಸ್ವರವು ಸತಿಶಿಷ್ಟವಾಗುವುದರಿಂದ ದಕಾರೋತ್ತರಾಕಾರ ಉದಾತ್ತವಾಗುತ್ತದೆ.

ಸ್ವಪಸ್ತಮಮ್—ಶೋಭನಂ ಅಪಃ ಕರ್ಮ ಯಸ್ಯ ಅಸೌ. ಸ್ವಪಾಃ ಅತಿಶಯೇನ ಸ್ವಪಾಃ ಸ್ವಪಸ್ತಮಃ. ಅತಿಶಯಾರ್ಥ ತೋರುವುದರಿಂದ ತಮಪ್ ಪ್ರತ್ಯಯ. ಪಿತ್ತಾದುದರಿಂದ ಇದು ಅನುದಾತ್ತವಾಗುತ್ತದೆ. ಸೋರ್ಮನಸೀ ಅಲೋಮೋಷಸೀ (ಪಾ. ಸೂ. ೬-೨-೧೧೭) ಎಂಬುದರಿಂದ ಉತ್ತರಪದಾದ್ಯುದಾತ್ತಸ್ವರ ಬರುತ್ತದೆ.

ತುಜನ್—ತುಜ ಹಿಂಸಾಯಾಮ್ ಧಾತು ಲಡರ್ಥದಲ್ಲಿ ಶತೃಪ್ರತ್ಯಯ. ವ್ಯತ್ಯಯೋ ಬಹುಲಂ ಎಂಬುದರಿಂದ ಶಪಿಗೆ ಶ ವಿಕರಣ ಬರುತ್ತದೆ. ತುಜತ್ ಶಬ್ದವಾಗುತ್ತದೆ. ಅದುಪದೇಶ ಪರದಲ್ಲಿರುವುದರಿಂದ ಲಸಾರ್ವಧಾತುಕವು (ಶತೃ) ತಾಸ್ಯನುದಾತ್ತೇತ್—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ವಿಕರಣಸ್ವರ ಉಳಿಯುತ್ತದೆ. ಪ್ರಥಮಾ ಸು ಪರವಾದಾಗ ಉಗಿತ್ತಾದುದರಿಂದ ನವಮಾಗಮ. ಹಲ್‌ಙ್ಯಾದಿನಾ ಸುಲೋಪ. ಸಂಯೋಗಾಂತಲೋಪದಿಂದ ತಕಾರಲೋಪ. ತುಜನ್ ಎಂದು ರೂಪವಾಗುತ್ತದೆ.

ತುಜತಾ—ಹಿಂದಿನಂತೆ ಶತೃಪ್ರತ್ಯಯ. ತೃತೀಯಾ ಏಕವಚನಾಂತರೂಪ. ಶತುರನುಮೋ ನದ್ಯಜಾದೀ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಕಿಯೇಧಾಃ—ಈ ಶಬ್ದ ವಿಷಯದಲ್ಲಿ ನಿರುಕ್ತದಲ್ಲಿ ಹೀಗೆ ಹೇಳಿದೆ. ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ (ನಿರು. ೬-೨೦) ಇತಿ. ಅದಕ್ಕೆ ತಾತ್ಪರ್ಯಾರ್ಥ. ಕಿಯದ್ಧಾ ಎಂಬ ವಿವರಣೆಯಲ್ಲಿ ಕಿಯತ್ ಕಿಂ ಪರಿಮಾಣಂ ಅಸ್ಯ ಬಲಸ್ಯ ತಾದೃಶಂ ಬಲಂ ದಧಾತಿ ಧಾರಯತಿ ಇತಿ ಕಿಯದ್ಧಾಃ. ಯಃ ಕೋಽಪಿ ಅಸ್ಯ ಬಲಸ್ಯೇಯತ್ತಾಂ ನ ಜಾನಾತೀತ್ಯರ್ಥಃ (ಇವನಲ್ಲಿರುವ ಬಲವು ಎಷ್ಟಿದೆಯೆಂದು ಯಾರಿಗೂ ತಿಳಿಯಲು ಸಾಧ್ಯವಿಲ್ಲ.) ಅಥವಾ ಕ್ರಮಮಾಣಧಾ ಎಂಬ ವಿವರಣೆಯಲ್ಲಿ ಕ್ರಮಮಾಣಮಾಕ್ರಮಮಾಣಂ ಪರೇಷಾಂ ಬಲಂ ಧಾರಯತಿ ನಿವಾರಯತಿ ಇತಿ ಕ್ರಮಮಾಣಧಾಃ (ಆಕ್ರಮಿಸುವ ಇತರರ ಬಲವನ್ನು ನಿವಾರಿಸುವವನು) ಎರಡುರೀತಿಯಾಗಿ ನಿರ್ವಚನ ಮಾಡಿದಾಗಲೂ ಪೃಷೋದರಾದಿಯಲ್ಲಿ ಸೇರಿದೆಯೆಂದು ಪೂರ್ವಪದಕ್ಕೆ ಕಿಯೇ ಎಂಬ ಆದೇಶಬರುತ್ತದೆ. ಧಾ ಧಾತುವಿಗೆ ವಿಚ್ ಬಂದಾಗ ಧಾಃ ಎಂದು ರೂಪವಾಗುತ್ತದೆ. ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸ್ಯೇದು ಮಾತುಃ ಸವನೇಷು ಸದ್ಯೋ ಮಹಃ ಪಿತುಂ ಪಪಿವಾಂಚಾ-
ರ್ವನ್ನಾ ।
ಮುಷಾಯದ್ವಿಷ್ಣುಃ ಪಚತಂ ಸಹೀಯಾನ್ವಿಧ್ಯದ್ವರಾಹಂ ತಿರೋ ಅದ್ರಿ-
ಮಸ್ತಾ ॥ ೭ ॥

॥ ಪದಪಾಠಃ ॥

ಅಸ್ಯ । ಇತ್ । ಊಂ ಇತಿ । ಮಾತುಃ । ಸವನೇಷು । ಸದ್ಯಃ । ಮಹಃ । ಪಿತುಂ ।
ಪಪಿವಾನ್ । ಚಾರು । ಅನ್ನಾ ।
ಮುಷಾಯತ್ । ವಿಷ್ಣುಃ । ಪಚತಂ । ಸಹೀಯಾನ್ । ವಿಧ್ಯತ್ । ವರಾಹಂ ।
ತಿರಃ । ಅದ್ರಿಂ । ಅಸ್ತಾ ॥ ೭ ॥

॥ಸಾಯಣಭಾಷ್ಯಂ॥

ಇದು ಇತ್ಯೇತನ್ನಿಪಾತದ್ವಯಂ ಪಾದಪೂರಣಂ । ಯದ್ವಾವಧಾರಣಾರ್ಥಂ । ಮಾತುರ್ವ್ಯಸ್ಟಿ-
ದ್ವಾರೇಣ ಸಕಲಸ್ಯ ಜಗತೋ ನಿರ್ಮಾತುರ್ಮಹೋ ಮಹತೋಽಸ್ಯ ಯಜ್ಞಸ್ಯ ಸವನೇಷ್ವವಯವಭೂ-
ತೇಷು ಪ್ರಾತಃಸವನಾದಿಷು ತ್ರಿಷು ಸವನೇಷು ಪಿತುಂ ಸೋಮಲಕ್ಷಣಮನ್ನಂ ಸದ್ಯಃ ಪಪಿವಾನ್ ।
ಯದಾಗ್ನೌ ಹೂಯತೇ ತದಾನೀಮೇವ ಪಾನಂ ಕೃತವಾನಿತ್ಯರ್ಥಃ । ತಥಾ ಚಾರ್ವನ್ನಾ ಚಾರೂಣಿ
ಶೋಭನಾನಿ ಧಾನಾಕರಂಭಾದಿಹವಿರ್ಲಕ್ಷಣಾನ್ಯನ್ನಾನಿ ಭಕ್ಷಿತವಾನಿತಿ ಶೇಷಃ । ಕಿಂಚ ವಿಷ್ಣುಃ ಸರ್ವಸ್ಯ
ಜಗತೋ ವ್ಯಾಪಕಃ ಪಚತಂ ಪರಿಪಕ್ವಮಸುರಾಣಾಂ ಧನಂ ಯದಸ್ತಿ ತನ್ಮುಷಾಯತ್ ಅಪಹರನ್
ಸಹೀಯಾನ್ ಅತಿಶಯೇನ ಶತ್ರೂಣಾಮಭಿಭವಿತಾದ್ರಿಮಸ್ತಾದ್ರೇರ್ವಜ್ರಸ್ಯ ಕ್ಷೇಪಕಃ । ಏವಂಭೂತ
ಇಂದ್ರಸ್ತಿರಃ । ಸತ ಇತಿ ಪ್ರಾಪ್ತಸ್ಯ । ನಿ. ೩-೨೦ । ಇತಿ ಯಾಸ್ಕಃ । ತಿರಃ ಪ್ರಾಪ್ತಃ ಸನ್ ವರಾಹಂ ಮೇಘಂ
ವಿಧ್ಯತ್ । ಅತಾಡಯತ್ । ಯದ್ವಾ । ವಿಷ್ಣುಃ ಸುತ್ಯಾದಿವಸಾತ್ಮಕೋ ಯಜ್ಞಃ । ಯಜ್ಞೋ ದೇವೇಭ್ಯೋ
ನಿಲಾಯ ವಿಷ್ಣುರೂಪಂ ಕೃತ್ವೇತ್ಯಾಮ್ನಾನಾತ್ । ಸ ವಿಷ್ಣುಃ ಪಚತಂ ಪರಿಪಕ್ವಮಸುರಧನಂ ಯತ್ರಸ್ಮ-
ಷಾಯತ್ । ಅಚೋರಯತ್ । ತದನಂತರಂ ದೀಕ್ಷೋಪಸದಾತ್ಮನಾಂ ದುರ್ಗರೂಪಾಣಾಂ ಸಪ್ತಾನಾ-
ಮಹ್ನಾಂ ಪರಸ್ತಾದಾಸೀತ್ ಅದ್ರಿಮಸ್ತಾ ಸಹೀಯಾನಿಂದ್ರೋ ದುರ್ಗಾಣ್ಯತೀತ್ಯ ತಿರಃ ಪ್ರಾಪ್ತಃ ಸನ್
ವರಾಹಮುತ್ಕೃಷ್ಟದಿವಸರೂಪಂ ತಂ ಯಜ್ಞಂ ವಿಧ್ಯತ್ । ತಥಾ ಚ ತೈತ್ತಿರೀಯಕಂ । ವರಾಹೋಽಯಂ



CC-0. Jangamwadi Math Collection. Digitized by eGangotri

ನಾಮುನೋಷಃ ಸಪ್ತಾನಾಂ ಗಿರೀಣಾಂ ಪರಸ್ತಾದ್ವಿತ್ತಂ ವೇದ್ಯಮಸುರಾಣಾಂ ಬಿಭರ್ತೀತಿ | ಸ ದರ್ಭಪುಂಜೀಲಮುದ್ವೃಹ್ಯ ಸಪ್ತ ಗಿರೀನ್ಭಿತ್ತ್ವಾ ತಮಹನ್ನಿತಿ ಚ | ತೈ. ಸಂ. ೬-೨-೪-೨, ೩ || ಮಹಃ | ಮಹತಃ | ಅಚ್ಛಬ್ದಲೋಪಶ್ಛಾಂದಸಃ | ಯದ್ವಾ | ಮಹ ಇತ್ಯೇತತ್ಪಿತುವಿಶೇಷಣಂ | ಮಹಃ ಪ್ರಶಸ್ತಂ ಪಿತುಮಿತ್ಯರ್ಥಃ | ಪಪಿವಾನ್ | ಪಿಬತೇರ್ಲಿಟಃ ಕ್ವಸುಃ | ವಸ್ವೇಕಾಜಾದ್ಘಸಾಮಿತೀಡಾಗಮಃ | ಆತೋ ಲೋಪ ಇಟಿ ಚೇತ್ಯಾಕಾರಲೋಪಃ | ಪ್ರತ್ಯಯಸ್ವರಃ | ಚಾರು | ಸುಪಾಂ ಸುಲುಗಿತಿ ವಿಭಕ್ತೇರ್ಲುಕ್ | ಮುಷಾಯತ್ | ಮುಷ ಸ್ತೇಯೇ | ಘಞರ್ಥೇ ಕವಿಧಾನಮಿತಿ ಭಾವೇ ಕಪ್ರತ್ಯಯಃ | ಮುಷಮಾತ್ಮನ ಇಚ್ಛತಿ. ಸುಪ ಆತ್ಮನಃ ಕ್ಯಚ್ | ನ ಛಂದಸ್ಯಪುತ್ರಸ್ಯೇತೀತ್ವವದ್ದೀರ್ಘಸ್ಯಾಪಿ ಪ್ರತಿಷೇಧೇ ವ್ಯತ್ಯಯೇನ ದೀರ್ಘಃ| ಅಸ್ಮಾತ್ಕ್ಯಜಂತಾಲ್ಲಟಃ ಶತೃ | ಆಗಮಾನುಶಾಸನಸ್ಯಾನಿತ್ಯತ್ವಾನ್ನುಮಭಾವಃ | ದ್ವಿತೀಯಪಕ್ಷೇ ತು ಕ್ಯಜಂತಾಲ್ಲಙಿ ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ | ಅತ್ರ ಸ್ತೇಯೇಚ್ಛಯಾ ತದುತ್ತರಭಾವಿನೀ ಕ್ರಿಯಾ ಲಕ್ಷ್ಯತೇ | ಪಚತಂ | ಭೃಮೃದೃಶೀತ್ಯಾದಿನಾ ಪಚತೇರತಚ್ಪ್ರತ್ಯಯಃ | ಚಿತ್ತ್ವಾದಂತೋದಾತ್ತತ್ವಂ | ವಿಧ್ಯತ್ | ವ್ಯಧ ತಾಡನೇ | ಲಙಿ ದಿವಾದಿತ್ವಾತ್ ಶ್ಯನ್ | ತಸ್ಯ ಙಿತ್ತ್ವಾದ್ಗ್ರಹಿಜ್ಯಾದಿನಾ ಸಂಪ್ರಸಾರಣಂ | ಶ್ಯನೋ ನಿತ್ತ್ವಾದಾದ್ಯುದಾತ್ತತ್ವಂ | ಪಾದಾದಿತ್ವಾನ್ನಿಘಾತಾಭಾವಃ | ವರಾಹಂ | ವರಮುದಕಮಾಹಾರೋ ಯಸ್ಯ | ಯದ್ವಾ | ವರಮಾಹರತೀತಿ ವರಾಹಾರಃ ಸನ್ ಪೃಷೋದರಾದಿತ್ವಾದ್ವರಾಹ ಇತ್ಯುಚ್ಯತೇ | ಅತ್ರ ನಿರುಕ್ತಂ | ವರಾಹೋ ಮೇಘೋ ಭವತಿ ವರಾಹಾರಃ | ವರಮಾಹಾರಮಾಹಾರ್ಷೀರಿತಿ ಚ ಬ್ರಾಹ್ಮಣಮಿತಿ | ನಿ. ೫-೪ | ಯಜ್ಞಪಕ್ಷೇ ತು ವರಂ ಚ ತದಹೋ ವರಾಹಃ | ರಾಜಾಹಃಸಖಿಭ್ಯಃ | ಪಾ. ೫-೪-೯೧ | ಇತಿ ಸಮಾಸಾಂತಷ್ಟಚ್‌ಪ್ರತ್ಯಯಃ | ಚಿತ್ತ್ವಾದಂತೋದಾತ್ತತ್ವಂ | ಆಸ್ತಾ | ಅಸು ಕ್ಷೇಪಣ ಇತ್ಯಸ್ಮಾತ್ಸಾಧುಕಾರಿಣಿ ತೃನ್ | ಪಾ ೩-೨-೧೩೫ | ಇಡಭಾವಶ್ಛಾಂದಸಃ | ನ ಲೋಕಾವ್ಯಯೇತಿ ಷಷ್ಠೀಪ್ರತಿಷೇಧಃ ||

|| ಪ್ರತಿಪದಾರ್ಥ ||

ಮಾತುಃ—(ವೃಷ್ಟಿದ್ವಾರದಿಂದ ಸಕಲ ಜಗತ್ತಿಗೂ) ನಿರ್ಮಾತೃವಾದ ಮತ್ತು | ಮಹಃ—ಮಹತ್ತಾದ | ಅಸ್ಯ—ಈ ಯಜ್ಞದ | ಸವನೇಷು—ಪ್ರಾತಃಸವನಾದಿ ಮೂರು ಸವನಕಾಲಗಳಲ್ಲೂ | ಪಿತುಂ—ಸೋಮರಸವನ್ನು | ಸದ್ಯಃ—ಒಡನೆಯೇ | ಪಪಿವಾನ್—(ಗಟಗಟನೆ) ಕುಡಿದುಬಿಟ್ಟನು (ಹಾಗೆಯೇ) | ಚಾರ್ವನ್ನಾ—ಪುಷ್ಟಿಕರವಾದ ಹವಿಸ್ಸಿನ ಅನ್ನವನ್ನೂ (ನುಂಗಿಬಿಟ್ಟನು ಮತ್ತು) | ವಿಷ್ಣುಃ—ಸರ್ವವ್ಯಾಪಕನಾದ ಇಂದ್ರನು | ಪಚತಂ—(ಅಸುರರ) ಧನವನ್ನು | ಮುಷಾಯತ್—ಅಪಹರಿಸಿದನು | ಸಹೀಯಾನ್—ಶತ್ರುಗಳನ್ನು ಮರ್ದನ ಮಾಡುವವನೂ | ಅದ್ರಿಮಸ್ತಾ—ವಜ್ರಾಯುಧವನ್ನು ಬೀಸಿ ತಿರುಗಿಸತಕ್ಕವನೂ ಆದ ಇಂದ್ರನು | ತಿರಃ—(ಶತ್ರುವಿನ ಮೇಲೆ) ಎದುರುಬಿದ್ದು | ವರಾಹಂ—ಮೇಘವನ್ನು | ವಿಧ್ಯತ್—ಸೀಳಿದನು [ಅಥವಾ | ವಿಷ್ಣುಃ—ಯಜ್ಞವು | ಪಚತಂ—(ಅಸುರರ) ಧನವನ್ನು | ಮುಷಾಯತ್—ಅಪಹರಿಸಿತು (ಅನಂತರ ದೀಕ್ಷಾಕಾಲದಲ್ಲಿ ದುರ್ಗರೂಪಗಳಾದ ಏಳು ದಿನಗಳ ಮರೆಯಲ್ಲಿ ಅವಿತುಕೊಂಡಿತು ಆಗ) | ಅದ್ರಿಮಸ್ತಾ—ವಜ್ರಾಯುಧವನ್ನು ತಿರುಗಿಸುವವನೂ | ಸಹೀಯಾನ್—ಶತ್ರುವನ್ನು ಜಯಿಸುವವನೂ ಆದ ಇಂದ್ರನು (ಆ ದುರ್ಗರೂಪಗಳಾದ ದಿನಗಳನ್ನು ಕಳೆದು) | ತಿರಃ—ಪುನಃ ಹಿಂತಿರುಗಿ | ವರಾಹಂ—ಉತ್ಕೃಷ್ಟವಾದ ದಿವಸದ ರೂಪದಲ್ಲಿರುವ ಆ ಯಜ್ಞವನ್ನು | ವಿಧ್ಯತ್—ಸಮಾಪ್ತಿಗೊಳಿಸಿದನು ||]



CC-0. Jangamwadi Math Collection. Digitized by eGangotri

|| ಭಾವಾರ್ಥ ||

ವೃಷ್ಟಿರೂಪದಿಂದ ಸಕಲ ಜಗತ್ತಿಗೂ ನಿರ್ಮಾತೃವಾದುದೂ ಮತ್ತು ಮಹತ್ತಾದುದೂ ಆದ ಯಜ್ಞದ ಮೂರು ಸವನಕಾಲಗಳಲ್ಲೂ ಇಂದ್ರನು ಸೋಮರಸವನ್ನು ಅರ್ಪಣಮಾಡಿದೊಡನೆಯೇ ಗಟಗಟನೆ ಕುಡಿದು ಬಿಟ್ಟನು. ಹಾಗೆಯೇ ಪುಷ್ಟಿಕರವಾದ ಹವಿಸ್ಸಿನ ಅನ್ನವನ್ನೂ ನುಂಗಿಬಿಟ್ಟನು. ಅಲ್ಲದೇ ಸರ್ವವ್ಯಾಪಕನೂ, ಶತ್ರುಗಳನ್ನು ಮರ್ದನಮಾಡುವವನೂ ಮತ್ತು ವಜ್ರಾಯುಧವನ್ನು ಬೀಸಿತಿರಿಗಿಸುವವನೂ ಆದ ಇಂದ್ರನು ಅಸುರರ ಧನವನ್ನು ಅಪಹರಿಸಿದನು. ಮತ್ತು ಶತ್ರುವಿನ ಮೇಲೆ ಎದುರುಬಿದ್ದು ಮೇಘವನ್ನು ಸೀಳಿದನು ||

## English Translation.

Quickly drinking the libations, and devouring the grateful viands (presented) at the three (daily) sacrifices which are dedicated to the creator (of the world), he, the pervader of the universe, stole the ripe (treasure of the Asuras); the vanguisher (of his foes), the hurler of the thunderbolt, encountering, pierced the cloud.

|| ವಿಶೇಷ ವಿಷಯಗಳು ||

ಇತ್-ಉ—ಇವೆರಡೂ ನಿಪಾತಗಳು. ಯಾವ ಅರ್ಥವೂ ಇಲ್ಲದೆ ಕೇವಲ ಪಾದಪೂರಣಾರ್ಥವಾಗಿರ ತಕ್ಕವುಗಳು. ಅಥವಾ ನಿಶ್ಚಯಾರ್ಥವನ್ನು ಸೂಚಿಸುವ ಅವ್ಯಯಗಳು ಎಂದೂ ಹೇಳಬಹುದು.

ಸವನೇಷು—ಅವಯವಭೂತಗಳಾದ ಪ್ರಾತಸ್ಸವನಾದಿ ಮೂರು ಸವನಕರ್ಮಗಳಲ್ಲಿಯೂ ಎಂದರ್ಥ.

ಸದ್ಯಃ ಪಪಿವಾನ್—ಯದಾಗ್ನೌ ಹೂಯತೇ ತದಾನೀಮೇವ ಪಾನಂ ಕೃತವಾನಿತ್ಯರ್ಥಃ— ಇಂದ್ರನು ಸೋಮಲಕ್ಷಣವಿಶಿಷ್ಟವಾದ ಅನ್ನವನ್ನು ಹೋಮಮಾಡಿದ ಕೂಡಲೇ ಪಾನಮಾಡುವನು ಎಂದರ್ಥ.

ಚಾರ್ವನ್ನಾ—ಚಾರೂಣಿ ಶೋಭನಾನಿ ಧಾನಾಕರಮ್ಭಾದಿ ಹವಿರ್ಲಕ್ಷಣಾನ್ಯನ್ನಾನಿ ಭಕ್ಷಿತವಾನ್ ಧಾನಾಕರಮ್ಬವೇ ಮೊದಲಾದ ಹವಿರ್ಲಕ್ಷಣವಿಶಿಷ್ಟವಾದ ಹವಿಸ್ಸನ್ನು ವಿಶೇಷ ಪ್ರೀತಿಯಿಂದ ಇಂದ್ರನು ಭಕ್ಷಿಸುವನು ಎಂದು ತಾತ್ಪರ್ಯ.

ಪಚತಂ—ಪರಿಪಕ್ವಭೂತವಾದ ರಾಕ್ಷಸರ ದ್ರವ್ಯ ಎಂದರ್ಥ.

ತಿರಃ ವಿಷ್ಣುಃ—ಸರ್ವವ್ಯಾಪಕನಾದ ಇಂದ್ರ. ವ್ಯಾಪ್ನೋತೀತಿ ವಿಷ್ಣುಃ ಪ್ರಾಸ್ತಸ್ಸನ್—ತಿರಃಸತ ಇತಿ ಪ್ರಾಪ್ತಸ್ಯ (ನಿರು. ೩-೧೦) ಇಲ್ಲಿ ವಿಷ್ಣು ಶಬ್ದಕ್ಕೆ ಯಜ್ಞೋದೇವೇಭ್ಯೋ ನಿಲಾಯತ ವಿಷ್ಣೂ ರೂಪಂ ಕೃತ್ವಾ (ತೈ. ಸಂ. ೬-೨-೪-೨) ಎಂಬ ತೈತ್ತಿರೀಯಸಂಹಿತೆಯ ಆಧಾರದಂತೆ ಯಜ್ಞವೆಂದು ಅರ್ಥ ಮಾಡಿದ್ದಾರೆ. ವಿಷ್ಣುರೂಪವಾದ ಯಜ್ಞವು ಪರಿಪಕ್ವವಾದ ಅಸುರಧನವನ್ನು ಅಪಹರಿಸಿತು. ಅನಂತರ ದೀಕ್ಷೋಪಸದಾತ್ಮಕವಾದ ಏಳು ದುರ್ಗಗಳಲ್ಲಿಯೂ ಏಳು ದಿನಗಳು ವಾಸಮಾಡಿತು. ಅದ್ರಿಭೇದಕವಾದ ವಜ್ರಾಯುಧದ ಸಹಾಯದಿಂದ ಇಂದ್ರನು ಸಪ್ತಪರ್ವತಗಳನ್ನೂ ದಾಟಿಹೋಗಿ ಆ ಯಜ್ಞವನ್ನೂ ಸಮಾಪ್ತಿಗೊಳಿಸಿದನು.

ವರಾಹಂ—ಉತ್ಕೃಷ್ಟದಿವಸರೂಪವಾದ ಯಜ್ಞ—ಈ ಅರ್ಥದಲ್ಲಿ ವರಂ ಚ ತತ್ ಅಹಶ್ಚ ಎಂದು ವ್ಯುತ್ಪತ್ತಿಮಾಡಿದ್ದಾರೆ. ಅಲ್ಲದೆ ವರಾಹಶಬ್ದಕ್ಕೆ ಮೇಘವೆಂದು ಅರ್ಥಮಾಡಿರುವರು. ಆ ಅರ್ಥದಲ್ಲಿ ವರಂ ಉದಕಂ ಆಹಾರೋ ಯಸ್ಯ ಯದ್ವಾ ವರಮಾಹರತೀತಿ ವರಾಹಾರಃ ಎಂದು ವಿವರಿಸಿ ಪ್ರಶಸ್ತವಾದ ನೀರು

1422

ಳ್ಳದ್ದು, ಅಥವಾ ನೀರನ್ನು ಅಪಹರಿಸತಕ್ಕುದು ಎಂದು ಹೇಳಿರುವರು. ಇದೇ ವರಾಹಶಬ್ದದ ಅರ್ಥವನ್ನು ವಿವರಿಸತಕ್ಕ **ವರಾಹೋಽಯಂ ವಾಮಮೋಷಃ ಸಪ್ತಾನಾಂ ಗಿರೀಣಾಂ ಪರಸ್ತಾದ್ವಿತ್ತಂ ವೇದ್ಯಮಸುರಾಣಾಂ ಬಿಭರ್ತಿ** ಮತ್ತು **ಸದರ್ಭಪುಂಜೀಲಮುದ್ಧೃತ್ಯ ಸಪ್ತಗಿರೀನ್ ಭಿತ್ವಾ ತಮಹನ್** (ತೈ. ಸಂ. ೬-೨-೪-೨,೩) ಎಂಬ ತೈತ್ತಿರೀಯಸಂಹಿತಾ ಮಂತ್ರವು ಮೇಲಿನ ಅರ್ಥಕ್ಕೆ ಪ್ರಮಾಣವಾಗಿರುವುದು.

|| ವ್ಯಾಕರಣಪ್ರಕ್ರಿಯಾ ||

**ಮಹಃ**—ಮಹಶ್ ಶಬ್ದ. ಷಷ್ಠೀ ಏಕವಚನದಲ್ಲಿ ಮಹತಃ ಎಂದು ರೂಪವಾಗುತ್ತದೆ. ಸಂಹಿತಾದಲ್ಲಿ ಛಾಂದಸವಾಗಿ ಅತಿಗೆ ಲೋಪ ಬರುತ್ತದೆ. ಅಥವಾ ಮಹ ಎಂಬುದು ಪಿತುವಿಗೆ ವಿಶೇಷಣ. ಮಹಃ ಪ್ರಶಸ್ತಂ ಪಿತುಂ ಎಂದರ್ಥ.

**ಪಪಿವಾನ್**—ಪಾ. ಪಾನೇ ಧಾತು. **ಕ್ವಸುಶ್ಚ** ಎಂಬುದರಿಂದ ಲಿಟಿಗೆ ಕ್ವಸು ಪ್ರತ್ಯಯ. **ವಸ್ವೇಕಾಜಾದ್ಘಸಾಮ್** (ಪಾ. ಸೂ. ೭-೨-೬೭) ಎಂದು ನಿಯಮಮಾಡಿರುವುದರಿಂದ ವಸುವಿಗೆ ಏಕಾಚಿನ ಪರದಲ್ಲಿರುವುದರಿಂದ ಇಡಾಗಮ. ಕಿತ್ತಾದುದರಿಂದ ಇದು ಪರವಾದಾಗ **ಆತೋಲೋಪ ಇಟಿಚ** (ಪಾ. ಸೂ. ೬-೪-೬೪) ಎಂಬುದರಿಂದ ಧಾತುವಿನ ಆಕಾರಕ್ಕೆ ಲೋಪ. **ದ್ವಿರ್ವಚನೇಽಚಿ** ಸೂತ್ರದಿಂದ ದ್ವಿತ್ವಮಾಡುವಾಗ ಸ್ಥಾನಿವದ್ಭಾವ. ಅಭ್ಯಾಸಕ್ಕೆ ಹ್ರಸ್ವ. ಪಪಿವಸ್ ಶಬ್ದವಾಗುತ್ತದೆ. ಪ್ರತ್ಯಯಸ್ವರದಿಂದ ವಕಾರೋತ್ತರಾಕಾರ ಉದಾತ್ತವಾಗುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯಚಾಽಧಾತೋಃ** ಎಂಬುದರಿಂದ ಉಪಧಾದೀರ್ಘ. ಉಗಿತ್ತಾದುದರಿಂದ ನುಮಾಗಮ. ಸುಲೋಪ. ಸಂಯೋಗಾಂತಲೋಪ.

**ಚಾರು**—ದ್ವಿತೀಯಾ ಬಹುವಚನಕ್ಕೆ **ಸುಪಾಂಸುಲುಕ್**—ಸೂತ್ರದಿಂದ ಲುಕ್.

**ಮುಷಾಯತ್**—ಮುಷ ಸ್ತೇಯೇ ಧಾತು. **ಘಞರ್ಥೇಕವಿಧಾನಮ್** ಎಂಬ ವಚನದಿಂದ ಕ ಪ್ರತ್ಯಯ. ಮುಷ ಶಬ್ದವಾಗುತ್ತದೆ. ಮುಷಮಾತ್ಮನಃ ಇಚ್ಛತಿ ಎಂಬ ಅರ್ಥದಲ್ಲಿ **ಸುಪಆತ್ಮನಃ ಕ್ಯಚ್** ಎಂಬುದರಿಂದ ಕ್ಯಚ್ ಪ್ರತ್ಯಯ. ಕ್ಯಚ್ ನಿಮಿತ್ತವಾಗಿ ಈತ್ವ ದೀರ್ಘಗಳು ಪ್ರಾಪ್ತವಾದರೆ **ನಛಂದಸ್ಯಪುತ್ರಸ್ಯ** (ಪಾ. ಸೂ. ೭-೪-೩೫) ಎಂಬುದರಿಂದ ನಿಷೇಧ ಬರುತ್ತದೆ. ಆದರೆ ವ್ಯತ್ಯಯದಿಂದ ದೀರ್ಘ ಮಾತ್ರ ಬರುತ್ತದೆ. **ಸನಾದ್ಯಂತಾಧಾತವಃ** ಎಂಬುದರಿಂದ ಕ್ಯಜಂತವಾದ ಮುಷಾಯ ಎಂಬುದು ಧಾತು ಸಂಜ್ಞೆಯನ್ನು ಹೊಂದುತ್ತದೆ. ಇದರ ಮೇಲೆ ಲಡರ್ಥದಲ್ಲಿ ಶತೃಪ್ರತ್ಯಯ. ಉಗಿತ್ತಾದುದರಿಂದ ನುಮ್ ಪ್ರಾಪ್ತವಾದರೆ **ಆಗಮಾನುಶಾಸನಮನಿತ್ಯಮ್** ಎಂಬ ವಚನದಿಂದ ಇಲ್ಲಿ ನುಮ್ ಬರುವುದಿಲ್ಲ. ದ್ವಿತೀಯಪಕ್ಷದಲ್ಲಿ (ಅಚೂಚುರತ್ ಎಂಬರ್ಥದಲ್ಲಿ) ಕ್ಯಜಂತದ ಮೇಲೆ ಲಙ್ ಪ್ರಥಮಪುರುಷ ಏಕವಚನದಲ್ಲಿ ಉಕ್ತರೂಪಸಿದ್ಧಿಯಾಗುತ್ತದೆ. ಆಗ **ಬಹುಲಂ ಛಂದಸ್ಯಮಾಙ್ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಇಲ್ಲಿ ಸ್ತೇಯ (ಕಳುವುದು) ಇಚ್ಛೆಯಿಂದ ಆದರಮುಂದೆ ಮಾಡುವ ಕ್ರಿಯೆಯು ಲಕ್ಷಣಾದಿಂದ ಬೋಧಿತವಾಗುತ್ತದೆ.

**ಪಚತಮ್**—ಡುಪಚಿಷ್ ಪಾಕೇ ಧಾತು. ಇದಕ್ಕೆ **ಭೃಮೃದೃಶಿ**—(ಉ. ಸೂ. ೩-೩೯೦) ಎಂಬುದರಿಂದ ಅತಚ್ ಪ್ರತ್ಯಯ ಚಿತ್ತಾದುದರಿಂದ **ಚಿತಃ** ಎಂಬುದರಿಂದ ಅಂತೋದಾತ್ತವಾಗುತ್ತದೆ. ದ್ವಿತೀಯಾ ಏಕವಚನಾಂತರೂಪ.

**ವಿಧ್ಯತ್**—ವ್ಯಧ ತಾಡನೇ ಧಾತು. ಲಙ್ ಪ್ರಥಮಪುರುಷದಲ್ಲಿ ತಿಪಿಗೆ ಇಕಾರಲೋಪ. **ದಿವಾದಿಭ್ಯಃ ಶ್ಯನ್** ಎಂಬುದರಿಂದ ಶ್ಯನ್ ವಿಕರಣ. **ಸಾರ್ವಧಾತುಕಮಪಿತ್** ಎಂಬುದರಿಂದ ಅದು ಙಿತ್ತಾಗುವುದರಿಂದ ತನ್ನಿಮಿತ್ತವಾಗಿ **ಗ್ರಹಿಜ್ಯಾವಯಿ....**(ಪಾ. ಸೂ. ೬-೧-೧೬) ಎಂಬುದರಿಂದ ಧಾತುವಿಗೆ (ಯಕಾರ



CC-0. Jangamwadi Math Collection. Digitized by eGangotri

ಸಂಪ್ರಸಾರಣ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಬಹುಲಂಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಶ್ನಸ್ ನಿತ್ತ್ವಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಪಾದಾದಿಯಲ್ಲಿರುವುದರಿಂದ ನಿಘಾತಸ್ವರ ಬರುವುದಿಲ್ಲ.

ವರಾಹಮ್—ವರಂ ಉದಕಂ ಆಹಾರೋ ಯಸ್ಯ. ಅಥವಾ ವರಂ ಆಹರತಿ ಇತಿ ವರಾಹಾರಃ. ಪೃಷೋದರಾದಿಯಲ್ಲಿ ಸೇರಿರುವುದರಿಂದ ಇಷ್ಟರೂಪಸಿದ್ಧಿಯಾಗುತ್ತದೆ. ಈ ಶಬ್ದವಿಷಯದಲ್ಲಿ ನಿರುಕ್ತದಲ್ಲಿ ಹೀಗೆ ಹೇಳಿದೆ. ವರಾಹೋ ಮೇಘೋ ಭವತಿ ವರಾಹಾರಃ | ವರಮಾಹಾರ ಮಾಹಾರ್ಷೀರಿತಿ ಚ ಬ್ರಾಹ್ಮಣಮ್ (ನಿರು. ೫-೪) ಇತಿ. ಯುಜ್ಞಪಕ್ಷದಲ್ಲಿ ವರಂ ಚ ತದಹೋ ವರಾಹಃ (ಶುಭದಿನ) ರಾಜಾಹಃ ಸಖಿಭ್ಯಃ— (ಪಾ. ಸೂ. ೫-೪-೯೧) ಎಂಬುದರಿಂದ ಸಮಾಸಾಂತ ಟಚ್ ಪ್ರತ್ಯಯ. ಚಿತ್ತ್ವಾದುದರಿಂದ ಅಂತೋದಾತ್ತವಾಗುತ್ತದೆ.

ಅಸ್ತಾ—ಅಸು ಕ್ಷೇಪಣೇ ಧಾತು. ಇದಕ್ಕೆ ಸಾಧುಕಾರಿ ಎಂಬರ್ಥ ವಿವಕ್ಷಾಮಾಡಿದಾಗ ತೃನ್ (ಪಾ. ಸೂ. ೩-೨-೧೩೫) ಎಂಬುದರಿಂದ ತೃನ್ ಪ್ರತ್ಯಯ. ಛಾಂದಸವಾಗಿ ಇಡಾಗಮ ಬರುವುದಿಲ್ಲ. ಪ್ರಥಮಾ ಸು ಪರವಾದಾಗ ಋತೋಙಿ—ಸೂತ್ರದಿಂದ ಅನಙಾದೇಶ. ಅಪ್‌ತೃನ್—ಸೂತ್ರದಿಂದ ಉಪಧಾ ದೀರ್ಘ. ಹಲ್‌ಙ್ಯಾದಿ—ಸೂತ್ರದಿಂದ ಸುಲೋಪ. ನಲೋಪಃಪ್ರಾತಿ—ಸೂತ್ರದಿಂದ ನಲೋಪ. ನಲೋಕಾವ್ಯಯ— ಎಂಬುದರಿಂದ ಷಷ್ಠೀನಿಷೇಧ ಬರುವುದರಿಂದ ಅದ್ರಿಶಬ್ದಕ್ಕೆ ದ್ವಿತೀಯಾ ಬಂದಿದೆ.

ಸಂಹಿತಾಪಾಠಃ

ಅಸ್ಮಾ ಇದು ಗ್ನಾಶ್ಚಿದ್ದೇವಪತ್ನೀರಿಂದ್ರಾಯಾರ್ಕಮಹಿಹತ್ಯ ಊವುಃ |
ಪರಿ ದ್ಯಾವಾಪೃಥಿವೀ ಜಭ್ರ ಉರ್ವೀ ನಾಸ್ಯ ತೇ ಮಹಿಮಾನಂ ಪರಿ ಷ್ಟಃ || ೮ ||

|| ಪದಪಾಠಃ ||

ಅಸ್ಮೈ | ಇತ್ | ಊಂ ಇತಿ | ಗ್ನಾಃ | ಚಿತ್ | ದೇವಽಪತ್ನೀಃ | ಇಂದ್ರಾಯ | ಅರ್ಕಂ | ಅಹಿಽಹತ್ಯೇ | ಊವುರಿತ್ಯೂವುಃ |
ಪರಿ | ದ್ಯಾವಾಪೃಥಿವೀ ಇತಿ | ಜಭ್ರೇ | ಉರ್ವೀ ಇತಿ | ನ | ಅಸ್ಯ | ತೇ ಇತಿ | ಮಹಿಮಾನಂ | ಪರಿ | ಸ್ತ ಇತಿ ಸ್ತಃ || ೮ ||



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯಂ ||

ಅಸ್ಮಾ ಏವೇಂದ್ರಾಯಾಹಿಹತ್ಯೇಽಹೇರ್ವೃತ್ರಸ್ಯ ಹನನೇ ನಿಮಿತ್ತಭೂತೇ ಸತಿ ಗ್ನಾಶ್ಚಿತ್ ಗಮನಸ್ವಭಾವಾ ಅಪಿ ಸ್ಥಿತಾ ದೇವಪತ್ನೀರ್ದೇವಾನಾಂ ಪಾಲಯಿತ್ರ್ಯೋ ಗಾಯತ್ರ್ಯಾದ್ಯಾ ದೇವತಾ ಅರ್ಕಮರ್ಚನಸಾಧನಂ ಸ್ತೋತ್ರಮೂವುಃ । ಸಮತನ್ವತ । ಚಕ್ರುರಿತ್ಯರ್ಥಃ । ಸ ಚೇಂದ್ರ ಉರ್ವೀ ವಿಸ್ತೃತೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೌ ಪರಿ ಜಭ್ರೇ । ಸ್ವತೇಜಸಾ ಪರಿಜಹಾರ । ಅತಿಚಕ್ರಾಮೇತ್ಯರ್ಥಃ ॥ ಊವುಃ । ವೇಞ್ ತಂತುಸಂತಾನೇ । ಲಿಟಿ ವೇಞೋ ವಯಿಃ । ಪಾ. ೨-೪-೪೧ । ಲಿಟಃ ಕಿತ್ತ್ವಾದ್ವಚಾದಿತ್ವೇನ ಸಂಪ್ರಸಾರಣೇ ಕ್ರಿಯಮಾಣೇ ಯಕಾರಸ್ಯ ಲಿಟಿ ವಯೋ ಯಃ । ಪಾ. ೬-೧-೩೮ । ಇತಿ ಪ್ರತಿಷೇಧಾದ್ವಕಾರಸ್ಯ ಸಂಪ್ರಸಾರಣಂ ಪರಪೂರ್ವತ್ವಂ ದ್ವಿರ್ವಚನಾದಿ । ವಶ್ಚಾಸ್ಯಾನ್ಯತರಸ್ಯಾಂ ಕಿತಿ । ಪಾ. ೬-೧-೩೯ । ಇತಿ ಯಕಾರಸ್ಯ ವಕಾರಾದೇಶಃ । ಜಭ್ರೇ । ಹೃಞ್ ಹರಣೇ । ಲಿಟಿ ಞಿತ್ತ್ವಾತ್ಕರ್ತ್ರಭಿಪ್ರಾಯ ಆತ್ಮನೇಪದಂ । ಹೃಗ್ರಹೋರ್ಭ ಇತಿ ಭತ್ವಂ । ಉರ್ವೀ । ಉರುಶಬ್ದಾದ್ವೋತೋ ಗುಣವಚನಾದಿತಿ ಙೀಷ್ । ವಾ ಛಂದಸೀತಿ ಪೂರ್ವಸವರ್ಣದೀರ್ಘತ್ವಂ ॥

|| ಪ್ರತಿಪದಾರ್ಥ ||

ಅಹಿಹತ್ಯೇ—ಶತ್ರುವಾದ ವೃತ್ರನ ನಾಶದ ಸಂದರ್ಭದಲ್ಲಿ । ಗ್ನಾಶ್ಚಿತ್—ಗಮನಸ್ವಭಾವದವರಾದರೂ (ನಿಂತವರಾಗಿ) । ದೇವಪತ್ನೀಃ—ದೇವತೆಗಳನ್ನು ಪಾಲಿಸುವ ಗಾಯತ್ರ್ಯಾದಿ ಸ್ತ್ರೀ ದೇವತೆಗಳು । ಅರ್ಕಂ—ಪೂಜಾಸಾಧನವಾದ ಸ್ತೋತ್ರವನ್ನು । ಊವುಃ—ರಚಿಸಿ (ಅರ್ಪಿಸಿ)ದರು (ಆ ಇಂದ್ರನಾದರೋ) । ಉರ್ವೀ—ವಿಸ್ತೃತಗಳಾದ । ದ್ಯಾವಾಪೃಥಿವೀ—ಪೃಥಿವ್ಯಂತರಿಕ್ಷಗಳನ್ನು । ಪರಿ ಜಭ್ರೇ—(ತನ್ನ ತೇಜಸ್ಸಿನಿಂದ) ಮೀರಿದ ವಿಸ್ತಾರವುಳ್ಳವನಾದನು (ಆದರೆ ಪೃಥಿವ್ಯಂತರಿಕ್ಷಗಳೆರಡೂ) । ಅಸ್ಯ—ಇಂದ್ರನ । ಮಹಿಮಾನಂ—ಮಹತ್ತ್ವವನ್ನು । ನ ಪರಿ ಸ್ತಃ—ಮೀರಿಸಲಾಗಲಿಲ್ಲ.

|| ಭಾವಾರ್ಥ ||

ಶತ್ರುವಾದ ವೃತ್ರನ ನಾಶದ ಸಂದರ್ಭದಲ್ಲಿ ದೇವತೆಗಳ ಪಾಲಿಕೆಯರಾದ ಗಾಯತ್ರ್ಯಾದಿ ಸ್ತ್ರೀದೇವತೆಗಳು ಗಮನಸ್ವಭಾವದವರಾದರೂ ಅಲ್ಲಿಯೇ ನಿಂತವರಾಗಿ ಇಂದ್ರನನ್ನು ಉದ್ದೇಶಿಸಿ ಪೂಜಾಸಾಧನವಾದ ಸ್ತೋತ್ರವನ್ನು ರಚಿಸಿ ಅರ್ಪಿಸಿದರು. ಆ ಇಂದ್ರನಾದರೋ, ಸ್ವಭಾವವಾಗಿಯೇ ವಿಸ್ತೃಗಳಾದ ಪೃಥಿವ್ಯಂತರಿಕ್ಷಗಳೆರಡನ್ನೂ ಮೀರಿದ ವಿಸ್ತಾರವುಳ್ಳವನಾದನು. ಆದರೆ ಆ ಪೃಥಿವ್ಯಂತರಿಕ್ಷಗಳೆರಡೂ ಸಹ ಇಂದ್ರನ ಮಹತ್ತ್ವವನ್ನು ಮೀರಿಸಲಾಗಲಿಲ್ಲ.

English Translation.

To that Indra, the women, the wives of the gods addressed their hymns, on the destruction of Ahi (Vritra); he encompasses the extensive heaven and earth; they two do not surpass his vastness.

| ವಿಶೇಷ ವಿಷಯಗಳು |

ಅಹಿಹತ್ಯೇ—ಅಹೇಃ ವೃತ್ರಸ್ಯ ಹನನೇ ನಿಮಿತ್ತಭೂತೇ ಸತಿ—ವೃತ್ರಾಸುರನ ವಧೆಯ ಕಾಲದಲ್ಲಿ ಎಂದರ್ಥ



CC-0. Jangamwadi Math Collection. Digitized by eGangotri

ಗ್ನಾಶ್ಚಿತ್—ಗಮನಸ್ವಭಾವಾ ಅಪಿ ಸ್ಥಿತಾಃ—ಸದಾ ಸಂಚರಿಸುವ ಸ್ವಭಾವವುಳ್ಳವರು. ಇದು ದೇವತೆಗಳನ್ನು ರಕ್ಷಿಸುವ ಗಾಯತ್ರಿಯೇ ಮೊದಲಾದ ದೇವತಾಸ್ತ್ರೀಯರಿಗೆ ವಿಶೇಷಣವಾಗಿದೆ.

ಅರ್ಕಂ—ಅರ್ಚನಸಾಧನವಾದ ಸ್ತೋತ್ರ, ಮಂತ್ರ

ಪರಿಜಭ್ರೇ—ಸ್ವತೇಜಸಾ ಪರಿಜಹಾರ ಅತಿಚಕ್ರಾಮೇತ್ಯರ್ಥಃ—ಮಿತಿಮೀರಿದ ತೇಜಸ್ಸಿನಿಂದ ಭೂಮಿಯನ್ನೂ, ದ್ಯಾವಾಪೃಥಿವಿಗಳನ್ನೂ ಮೀರಿಸಿದನು ಎಂದು ತಾತ್ಪರ್ಯ.

ತೇ—ಆ ದ್ಯಾವಾಪೃಥಿವಿಗಳು ಮಾತ್ರ ಇಂದ್ರನ ಮಹಿಮೆಯನ್ನು ಎಂದೂ ಮೀರಿಸಲಿಲ್ಲ.

|| ವ್ಯಾಕರಣಪ್ರಕ್ರಿಯಾ ||

ಅರ್ಕಮ್— ಇದೇ ಸೂಕ್ತದ ೫ನೇ ಮಂತ್ರದಲ್ಲಿ ವ್ಯಾಖ್ಯಾತವಾಗಿದೆ.

ಊವುಃ—ವೇಞ್ ತಂತುಸಂತಾನೇ ಧಾತು. ಲಿಟ್ ಪ್ರಥಮಪುರುಷ ಬಹುವಚನದಲ್ಲಿ ಝಿಗೆ ಪರಸ್ಮೈಪದಾನಾಂ—ಎಂಬುದರಿಂದ ಉಸಾದೇಶ. ವೇಞೋ ವಯಿಃ (ಪಾ. ಸೂ. ೨ ೪-೪೧) ಎಂಬುದರಿಂದ ಧಾತುವಿಗೆ ವಯಿ ಎಂಬ ಆದೇಶ. ಅಸಂಯೋಗಾಲ್ಲಿಟ್‌ಕಿತ್ ಎಂಬುದರಿಂದ ಪ್ರತ್ಯಯಕ್ಕೆ ಕಿತ್ವ ಅತಿದೇಶ ಮಾಡಿರುವುದರಿಂದ-ಇದು ಯಾಜಾದಿಯಲ್ಲಿ ಸೇರಿರುವುದರಿಂದ ಗ್ರಹಿಜ್ಯಾವಯಿ—ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ಇಲ್ಲಿ ಸಂಪ್ರಸಾರಣ ಹೊಂದಲು ಯೋಗ್ಯವಾದ ವರ್ಣಗಳು ಎರಡಿವೆ. ನ ಸಂಪ್ರಸಾರಣೇ ಸಂಪ್ರಸಾರಣಮ್ ಎಂಬುದರಿಂದ ನಿಷೇಧಮಾಡಿರುವುದರಿಂದ ವಕಾರಕ್ಕೆ ಸಂಪ್ರಸಾರಣ ಬರುವುದಿಲ್ಲ. ಆದರೆ ಈ ಧಾತುವಿನಲ್ಲಿ ಲಿಟಿ ವಯೋ ಯಃ (ಪಾ. ಸೂ. ೬-೧-೩೮) ಎಂಬುದರಿಂದ ಯಕಾರಕ್ಕೆ ಪ್ರತಿಷೇಧ ಮಾಡಿರುವುದರಿಂದ ವಕಾರಕ್ಕೇ ಬರುತ್ತದೆ. ಸಂಪ್ರಸಾರಣಾಚ್ಚ ಎಂಬುದರಿಂದ ಪೂರ್ವರೂಪ. ಉಯ್ ಎಂಬುದಕ್ಕೆ ಲಿಣ್ಣಿಮಿತ್ತವಾಗಿ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ವಶ್ಚಾಸ್ಯಾನ್ಯತರಸ್ಯಾಂಕಿತಿ (ಪಾ. ಸೂ. ೬-೧-೩೯) ಎಂಬುದರಿಂದ ಧಾತುವಿನ ಯಕಾರಕ್ಕೆ ವಿಕಲ್ಪವಾಗಿ ವಕಾರಾದೇಶ ಸವರ್ಣದೀರ್ಘ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

ಜಭ್ರೇ—ಹೃಞ್ ಹರಣೇ ಧಾತು. ಞಿತ್ತಾದುದರಿಂದ ಸ್ವರಿತಞಿತಃ ಕರ್ತ್ರಭಿಪ್ರಾಯೇ ಕ್ರಿಯಾಫಲೇ ಎಂಬುದರಿಂದ ಕ್ರಿಯಾಫಲವು ಕರ್ತೃಗಾಮಿಯಾಗುವಾಗ ಆತ್ಮನೇಪದಪ್ರತ್ಯಯ ಬರುತ್ತದೆ. ಲಿಟಸ್ತ-ಝಯೋರೇಶಿರೇಚ್ ಸೂತ್ರದಿಂದ ತಕ್ಕೆ ಏಶಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಉರದತ್ವ, ಹಲಾದಿಶೇಷ. ಕುಹೋಶ್ಚುಃ ಸೂತ್ರದಿಂದ ಚುತ್ವ. ಯಣಾದೇಶ. ಜಹ್ರೇ ಎಂದಿರುವಾಗ ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಹಕಾರಕ್ಕೆ ಭಕಾರಾದೇಶ ತಿಙಂತನಿಘಾತಸ್ವರ ಬರುತ್ತದೆ

ಉರ್ವೀ—ಉರು ಶಬ್ದ. ಗುಣವಾಚಕವಾದುದರಿಂದ ಸ್ತ್ರೀತ್ವವಿವಕ್ಷಾ ಮಾಡಿದಾಗ ವೋತೋಗುಣವಚನಾತ್ ಎಂಬುದರಿಂದ ಙೀಷ್ ಪ್ರತ್ಯಯ. ಯಣಾದೇಶ ಪ್ರತ್ಯಯಸ್ವರದಿಂದ ಅಂತೋದಾತ್ತ. ದ್ವಿವಚನ ಔ ಪರವಾದಾಗ ವಾ ಛಂದಸಿ ಎಂಬುದರಿಂದ ಪೂರ್ವಸವರ್ಣದೀರ್ಘ.

ಸ್ತಃ—ಅಸ ಭುವಿ ಧಾತು. ಲಟ್ ಪ್ರಥಮಪುರುಷದ್ವಿವಚನದಲ್ಲಿ ತಸ್ ಪ್ರತ್ಯಯ. ಸಾರ್ವಧಾತುಕಮಪಿತ್ ಎಂಬುದರಿಂದ ಇದು ಙಿತ್ವವನ್ನು ಹೊಂದುವುದರಿಂದ ಶ್ನಸೋರಲ್ಲೋಪಃ (ಪಾ. ಸೂ. ೬-೪-೧೧೧) ಎಂಬುದರಿಂದ ಇದು ಪರವಾದಾಗ ಧಾತುವಿನ ಅಕಾರಕ್ಕೆ ಲೋಪ. ಪ್ರತ್ಯಯಾವಯವ ಸಕಾರಕ್ಕೆ





CC-0. Jangamwadi Math Collection. Digitized by eGangotri

ರುತ್ವ ವಿಸರ್ಗ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ. ಉಪಸರ್ಗಪ್ರಾದುರ್ಭ್ಯಾಮಸ್ತಿರ್ಯಚ್ಪರಃ (ಪಾ. ಸೂ. ೮-೩-೮೭) ಎಂಬುದರಿಂದ ಪರಿ ಎಂಬ ಉಪಸರ್ಗದ ಪರದಲ್ಲಿರುವುದರಿಂದ ಸಂಹಿತಾದಲ್ಲಿ ಧಾತು ಸಕಾರಕ್ಕೆ ಷತ್ವ ಬರುತ್ತದೆ. ಆಗ ಷ್ಟುನಾಷ್ಟು ಎಂಬುದರಿಂದ ಪ್ರತ್ಯಯ ತಕಾರಕ್ಕೆ ಷ್ಟುತ್ವ.

॥ ಸಂಹಿತಾಪಾಠಃ ॥

ಅಸ್ಯೇದೇವ ಪ್ರ ರಿರಿಚೇ ಮಹಿತ್ವಂ ದಿವಸ್ಪೃಥಿವ್ಯಾಃ ಪರ್ಯಂತರಿಕ್ಷಾತ್ ।
ಸ್ವರಾಳಿಂದ್ರೋ ದಮ ಆ ವಿಶ್ವಗೂರ್ತಃ ಸ್ವರಿರಮತ್ರೋ ವವಕ್ಷೇ
ರಣಾಯ ॥ ೯ ॥

॥ ಪದಪಾಠಃ ॥

ಅಸ್ಯ । ಇತ್ । ಏವ । ಪ್ರ । ರಿರಿಚೇ । ಮಹಿಽತ್ವಂ । ದಿವಃ । ಪೃಥಿವ್ಯಾಃ । ಪರಿ ।
ಅಂತರಿಕ್ಷಾತ್ ।
ಸ್ವಽರಾಟ್ । ಇಂದ್ರಃ । ದಮೇ । ಆ । ವಿಶ್ವಽಗೂರ್ತಃ । ಸುಽಅರಿಃ । ಅಮತ್ರಃ ।
ವವಕ್ಷೇ । ರಣಾಯ ॥ ೯ ॥

॥ ಸಾಯಣಭಾಷ್ಯಂ ॥

ಅಸ್ಯೇದೇವ । ಇದಿತಿ ಪಾದಪೂರಣಃ । ಅಸ್ಯೈವೇಂದ್ರಸ್ಯ ಮಹಿತ್ವಂ ಮಾಹಾತ್ಮ್ಯಂ ಪ್ರ ರಿರಿಚೇ । ಅತಿರಿಚ್ಯತೇ । ಅಧಿಕಂ ಭವತೀತ್ಯರ್ಥಃ । ಅತ್ರೋಪಸರ್ಗೋ ಧಾತ್ವರ್ಥಸ್ಯ ನಿವೃತ್ತಿಮಾಚಷ್ಟೇ । ಯಥಾ ಪ್ರಸ್ಮರಣಂ ಪ್ರಸ್ಥಾನಮಿತಿ । ಕುತಃ ಸಕಾಶಾತ್ಪ್ರರಿರಿಚ ಇತ್ಯತ ಆಹ । ದಿವೋ ದ್ಯುಲೋಕಾತ್ ಪೃಥಿವ್ಯಾ ಭೂಲೋಕಾತ್ ಅಂತರಿಕ್ಷಾತ್ ದ್ಯಾವಾಪೃಥಿವ್ಯೋರ್ಮಧ್ಯೇ ವರ್ತಮಾನಾದಂತರಿಕ್ಷಲೋಕಾಚ್ಚ । ಪರ್ಯುಪರ್ಯರ್ಥಃ । ತ್ರೀನ್ಲೋಕಾನತೀತ್ಯೋಪರಿ ಪ್ರರಿರಿಚ ಇತ್ಯರ್ಥಃ । ದಮೇ ದಮಯಿತವ್ಯೇ ವಿಷಯೇ ಸ್ವರಾಟ್ ಸ್ವೇನೈವ ತೇಜಸಾ ರಾಜಮಾನೋ ವಿಶ್ವಗೂರ್ತೋ ವಿಶ್ವಸ್ಮಿನ್ಸರ್ವಸ್ಮಿನ್ಕಾರ್ಯ ಉದ್ಗೂರ್ಣಃ ಸಮರ್ಥಃ । ಯದ್ವಾ । ವಿಶ್ವಂ ಸರ್ವಮಾಯುಧಂ ಗೂರ್ತಮುದ್ಯತಂ ಯಸ್ಯ ಸ ತಥೋಕ್ತಃ । ಸ್ವರಿಃ । ಶೋಭನಶತ್ರುಕಃ । ಶೋಭನೇ ಶತ್ರೌ ಹಂತವ್ಯೇ ಸತಿ ಹಂತಾ ವೀರ್ಯವತ್ತಮ ಇತಿ ಗಮ್ಯತೇ । ಯಥಾಕವಾರಂ ದಿವ್ಯಂ ಶಾಸಮಿಂದ್ರಂ । ಋಗ್ವೇ. ೩-೪೭-೫ । ಇತಿ । ಅಕುತ್ಸಿತಾರಿಮಿತಿ ಹಿ ತಸ್ಯಾರ್ಥಃ । ಅಮತ್ರೋ ಯುದ್ಧಾದಿಷು ಗಮನಕುಶಲಃ । ಮಾತ್ರಯೋಯತ್ತಯಾ ರಹಿತೋ ವಾ । ಅಮತ್ರೋಽಮಾತ್ರೋ ಮಹಾನ್ಭವತ್ಯಭ್ಯಮಿತೋ ವೇತಿ ಯಾಸ್ಕಃ । ನಿ. ೬-೨೩ । ಏವಂಭೂತ ಇಂದ್ರೋ ರಣಾಯ



CC-0. Jangamwadi Math Collection. Digitized by eGangotri

ರಣಂ ಯುದ್ಧಮಾ ವವಕ್ಷೇ । ಆವಹತಿ । ಮೇಘಾನ್ಪ್ರಾಪಯತಿ । ಮೇಘೈಃ ಪರಸ್ಪರಯುದ್ಧಂ ಕಾರಯಿತ್ವಾ ವೃಷ್ಟಿಂ ಚಕಾರೇತಿ ಭಾವಃ । ಯದ್ವಾ । ಯುದ್ಧಾಯ ಸ್ವಕೀಯಾನ್ಭಟಾನ್ ಗಮಯತಿ ॥ ಅಸ್ಯ । ಊಡಿದಮಿತಿ ವಿಭಕ್ತೇರುದಾತ್ತತ್ವಂ । ರಿರಿಚೇ । ರಿಚಿರ್ ವಿರೇಚನೇ । ಛಂದಸಿ ಲುಙ್‌ಲಙ್‌ಲಿಟ ಇತಿ ವರ್ತಮಾನೇ ಕರ್ಮಣಿ ಲಿಟ್ । ಪೃಥಿವ್ಯಾಃ । ಉದಾತ್ತಯಣ ಇತಿ ವಿಭಕ್ತೇರುದಾತ್ತತ್ವಂ । ಸ್ವರಾಟ್ । ರಾಜೃ ದೀಪ್ತಾವಿತ್ಯಸ್ಮಾತ್ಸತ್ಸೂದ್ವಿಷೇತಿ ಕ್ವಿಪ್ । ವ್ರಶ್ಚಾದಿನಾ ಷತ್ವೇ ಜಶ್ತ್ವಂ । ದಮೇ । ದಮು ಉಪಶಮ ಇತ್ಯಸ್ಮಾತ್ಕರ್ಮಣಿ ಘಞಿ ನೋದಾತ್ತೋಪದೇಶಸ್ಯ ಮಾಂತಸ್ಯಾನಾಚಮೇಃ । ಪಾ. ೭-೩-೩೪ । ಇತಿ ವೃದ್ಧಿಪ್ರತಿಷೇಧಃ । ಘಞಿತೋ ಞಿತ್ಯಾದಿರ್ನಿತ್ಯಮಿತ್ಯಾದ್ಯುದಾತ್ತತ್ವಂ । ವಿಶ್ವಗೂರ್ತಃ । ಗೄ ನಿಗರಣೇ । ಅಸ್ಮಾನ್ನಿಷ್ಠಾಯಾಂ ಶ್ರ್ಯುಕಃ ಕಿತೀತೀಟ್ಪ್ರತಿಷೇಧಃ । ಬಹುಲಂ ಛಂದಸೀತ್ಯುತ್ವಂ । ಹಲಿ ಚೇತಿ ದೀರ್ಘಃ । ಯದ್ವಾ । ಗೂರಿಃ ಉದ್ಯಮೇ । ಅಸ್ಮಾನ್ನಿಷ್ಠಾ । ನಸತ್ತನಿಷತ್ತೇತ್ಯಾದೌ ನಿಪಾತನಾನ್ನಿಷ್ಠಾನತ್ವಾಭಾವಃ । ತತ್ಪುರುಷಪಕ್ಷೇ ಮರುದ್ವೃಧಾದಿತ್ವಾತ್ಪೂರ್ವಪದಾಂತೋದಾತ್ತತ್ವಂ । ಬಹುವ್ರೀಹಿಪಕ್ಷೇ ತು ಬಹುವ್ರೀಹೌ ವಿಶ್ವಂ ಸಂಜ್ಞಾಯಾಮಿತ್ಯಸಂಜ್ಞಾಯಾಮಪಿ ಪೂರ್ವಪದಾಂತೋದಾತ್ತತ್ವಂ । ಅಮತ್ರಃ । ಅಮ ಗತ್ಯಾದಿಷು । ಅಮಿನಕ್ಷಿಯಜಿಬಂಧೀತ್ಯಾದಿನೌಣಾದಿಕೋಽತ್ರನ್ಪ್ರತ್ಯಯಃ । ನಿತ್ತ್ವಾದಾದ್ಯುದಾತ್ತತ್ವಂ । ವವಕ್ಷೇ । ವಹೇರ್ಲೇಟಿ ಸಿಬ್ಬಹುಲಂ ಲೇಟೀತಿ ಸಿಪ್ । ಬಹುಲಂ ಛಂದಸೀತಿ ಶಪಃ ಶ್ಲುಃ । ಢತ್ವಷತ್ವಕತ್ವಾನಿ । ಲೋಪಸ್ತ ಆತ್ಮನೇಪದೇಷ್ವಿತಿ ತಲೋಪಃ । ರಣಾಯ । ಕ್ರಿಯಾಗ್ರಹಣಂ ಕರ್ತವ್ಯಮಿತಿ ಕರ್ಮಣಃ ಸಂಪ್ರದಾನತ್ವಾಚ್ಚತುರ್ಥೀ । ಯದ್ವಾ । ಗತ್ಯರ್ಥಕರ್ಮಣಿ । ಪಾ. ೨-೩-೧೨ । ಇತಿ ಚತುರ್ಥೀ ॥

|| ಪ್ರತಿಪದಾರ್ಥ ||

ಅಸ್ಯದೇವ—ಇದೇ ಇಂದ್ರನ । ಮಹಿತ್ವಂ—ಮಾಹಾತ್ಮ್ಯವು । ದಿವಃ—ದ್ಯುಲೋಕಕ್ಕಿಂತಲೂ । ಪೃಥಿವ್ಯಾಃ—ಭೂಲೋಕಕ್ಕಿಂತಲೂ । ಅಂತರಿಕ್ಷಾತ್—(ಈ ಎರಡು ಲೋಕಗಳ ನಡುವೆ ಇರುವ) ಅಂತರಿಕ್ಷ ಲೋಕಕ್ಕಿಂತಲೂ । ಪರಿ—ಮೇಲೆ । ಪ್ರ ರಿರಿಚೇ—ಅಧಿಕವಾಗಿ ವಿಸ್ತರಿಸಿದೆ । ದಮೇ—[ಸ್ವಗೃಹದಲ್ಲಿ] [ದಮನ ಮಾಡತಕ್ಕ ಪ್ರದೇಶದಲ್ಲಿ] ಸ್ವರಾಟ್—ತನ್ನ ಸ್ವಂತ ತೇಜಸ್ಸಿನಿಂದ ಪ್ರಕಾಶಿಸುವವನೂ । ವಿಶ್ವಗೂರ್ತಃ—ಸಕಲವಾದ ವೀರ್ಯಕೃತ್ಯಕ್ಕೂ ಸಮರ್ಥನಾದವನೂ ಅಥವಾ [ಸಕಲ ಆಯುಧವನ್ನೂ ಎತ್ತಿ ಹಿಡಿದವನೂ] । ಸ್ವರಿಃ—(ತನ್ನ ಪರಾಕ್ರಮಕ್ಕೆ ಅನುರೂಪನಾದ) ಶ್ರೇಷ್ಠನಾದ ಶತ್ರುವುಳ್ಳವನೂ । ಅಮತ್ರಃ—(ಯುದ್ಧದಲ್ಲಿ) ನಿಪುಣತೆಯಿಂದ ಸಂಚರಿಸುವವನೂ ಅಥವಾ ಆಳತೆಗೆ ಮೀರಿದವನೂ ಆದ । ಇಂದ್ರಃ—ಇಂದ್ರನು । ರಣಾಯ—ಯುದ್ಧಕ್ಕೆ । ಆ ವವಕ್ಷೇ—(ಮೇಘಗಳನ್ನು) ಒಟ್ಟಿಗೆ ಸೇರಿಸಿದನು (ಅವುಗಳ ಘರ್ಷಣದಿಂದ ಮಳೆಯನ್ನು ಸುರಿಸಿದನು) ಅಥವಾ ಯುದ್ಧಕ್ಕೆ ತನ್ನ ಭಟರನ್ನು ಕಳುಹಿಸಿದನು ॥

|| ಪ್ರತಿಪದಾರ್ಥ ||

ಇಂದ್ರನ ಮಾಹಾತ್ಮ್ಯವು ದ್ಯಾವಾಪೃಥಿವಿಗಳಿಗಿಂತಲೂ ಮತ್ತು ಅಂತರಿಕ್ಷಲೋಕಕ್ಕಿಂತಲೂ ಮೀರಿ ಅಧಿಕವಾಗಿ ವಿಸ್ತರಿಸಿದೆ. ಸ್ವಗೃಹದಲ್ಲಿ ತನ್ನ ಸ್ವಂತ ತೇಜಸ್ಸಿನಿಂದ ಪ್ರಕಾಶಿಸುವವನೂ, ಸಕಲವೀರ್ಯಕೃತ್ಯಕ್ಕೂ ಸಮರ್ಥನೂ, ತನ್ನ ಪರಾಕ್ರಮಕ್ಕೆ ಅನುರೂಪನಾದ ಶತ್ರುವುಳ್ಳವನೂ ಮತ್ತು ನಿಪುಣತೆಯಿಂದ ಯುದ್ಧಭೂಮಿಯಲ್ಲಿ ಸಂಚರಿಸುವವನೂ ಆದ ಇಂದ್ರನು ಮೇಘಗಳನ್ನು ಒಟ್ಟಿಗೆ ಯುದ್ಧಕ್ಕೆ ಸೇರಿಸಿ ಅವುಗಳ ಘರ್ಷಣದಿಂದ ಮಳೆಯನ್ನು ಸುರಿಸಿದನು.



CC-0. Jangamwadi Math Collection. Digitized by eGangotri

## English Translation

His magnitude verily exceeds that of the heaven and earth and sky; Indra, self-irradiating in his dwelling, equal to every exploit, engaged with no unworthy foe, and skilled in conflict, calls to battle.

॥ ವಿಶೇಷವಿಷಯಗಳು ॥

**ಪ್ರ ರಿರಿಚೇ—ರಿಚಿರ್-ವಿರೇಚನೇ—**ವಿರೇಚನಾರ್ಥಕವಾದ ರಿಚಿರ್ ಧಾತುವಿಗೆ ಪ್ರ ಎಂಬ ಉಪಸರ್ಗ. ಸಾಹಚರ್ಯದಿಂದ ಧಾತುವಿನ ಅರ್ಥಕ್ಕೆ ವಿರುದ್ಧವಾದ ಅರ್ಥವು ಸ್ಪಷ್ಟಪಡುವುದು. ಇದರಂತೆ ಪ್ರಸ್ಮರಣ, ಪ್ರಸ್ಥಾನ. ಈ ಪದಗಳಲ್ಲಿಯೂ ಧಾತುವಿನ ವಾಚ್ಯಾರ್ಥವು ನಿವೃತ್ತಿಹೊಂದುವುದು.

**ಪರಿ—**ಈ ಶಬ್ದಕ್ಕೆ ಉಪರಿ (ಮೇಲೆ) ಎಂದರ್ಥ.

**ವಿಶ್ವಗೂರ್ತಃ—ವಿಶ್ವಸ್ಮಿನ್ ಸರ್ವಸ್ಮಿನ್ ಕಾರ್ಯೇ ಉದ್ಗೂರ್ಣಃ ಸಮರ್ಥಃ ।** ಯದ್ವಾ. **ವಿಶ್ವಂ ಸರ್ವಮಾಯುಧಂ ಗೂರ್ತಂ ಉದ್ಯತಂ ಯಸ್ಯ ಸಃ ।** ಸರ್ವಕಾರ್ಯಸಮರ್ಥನು, ಅಥವಾ ಸರ್ವವಿಧವಾದ ಆಯುಧಗಳುಳ್ಳವನು ಎಂದು ಎರಡು ರೀತಿಯಲ್ಲಿಯೂ ಅರ್ಥಮಾಡಿದ್ದಾರೆ.

**ಸ್ವರಿಃ—ಶೋಭನಶತ್ರುಕಃ—**ವೀರರಾದ ಶತ್ರುಗಳುಳ್ಳವನು. ಶತ್ರುಗಳು ವೀರರೆಂದು ಹೇಳಲ್ಪಟ್ಟರೆ, ಅಂಥಹವರನ್ನು ಕೊಂದವನು ಅವನಿಗಿಂತ ಶೂರನೆಂದು ಖ್ಯಾತಿ ಬರುವುದು. ಆದಕ್ಕಾಗಿ ಇಂದ್ರನಿಗೆ ಇಲ್ಲಿ ಸ್ವರಿಃ ಎಂಬ ವಿಶೇಷಣವನ್ನು ಕೊಡಲಾಗಿದೆ. ಇದನ್ನೇ **ಆಕೆವಾರಿಂ ದಿವ್ಯಂ ಶಾಸಮಿಂದ್ರಂ** (ಋ. ಸಂ. ೩-೪೭-೫) ಎಂಬ ಋಙ್ಮಂತ್ರವು ವಿವರಿಸುವುದು. ಕುತ್ಸಿತನಲ್ಲದ ಶತ್ರುವುಳ್ಳವನು ಇಂದ್ರ ಎಂಬುದೇ ಅದರ ಅರ್ಥ.

**ಅಮತ್ರಃ—ಯುದ್ಧಾದಿಷು ಗಮನಕುಶಲಃ—ಮಾತ್ರಯಾ ಇಯತ್ತಯಾ ರಹಿತೋ ವಾ ।** ಯುದ್ಧವೇ ಮೊದಲಾದ ಸಕಲ ಕಾರ್ಯಗಳಲ್ಲಿಯೂ ಚಟುವಟಿಕೆಯುಳ್ಳವನು. ಶಕ್ತಿಯಲ್ಲಿ ಇಷ್ಟೇ ಎಂದು ನಿಶ್ಚಯ ಮಾಡಲಾರದವನು. **ಅಮತ್ರೋಽಮಾತ್ರೋ ಮಹಾನ್ ಭವತ್ಯಭ್ಯಮಿತೋ ವಾ** (ನಿ. ೬-೨೩) ಅತಿಶಯವಾದ ಪರಾಕ್ರಮವುಳ್ಳವನು ಎಂಬರ್ಥದಲ್ಲಿ ನಿರುಕ್ತಕಾರರು ಅಮತ್ರ ಶಬ್ದವನ್ನು ಪಾಠಮಾಡಿದ್ದಾರೆ.

॥ ವ್ಯಾಕರಣಪ್ರಕ್ರಿಯಾ ॥

**ಅಸ್ಯ—**ಇದಮ್ ಶಬ್ದ. ಷಷ್ಠೀಏಕವಚನಾಂತರೂಪ. **ಊಡಿದಂಪದಾದಿ—**(ಪಾ. ಸೂ. ೬-೧-೧೭೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ರಿರಿಚೇ—**ರಿಚಿರ್ ವಿರೇಚನೇ ಧಾತು. **ಛಂದಸಿಲುಙ್ಲಙ್ಲಿಟಃ** ಎಂಬುದರಿಂದ ವರ್ತಮಾನಾರ್ಥದಲ್ಲಿ ಕರ್ಮಣಿಯಲ್ಲಿ ಲಿಟ್. ಪ್ರಥಮಪುರುಷ ಏಕವಚನದಲ್ಲಿ ಏಶಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಪ್ರತ್ಯಯಕ್ಕೆ ಕಿದ್ವದ್ಭಾವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

**ಪೃಥಿವ್ಯಾಃ—**ಪಂಚಮೀ ಏಕವಚನದಲ್ಲಿ ಉಕ್ತರೂಪಸಿದ್ಧಿಯಾಗುತ್ತದೆ. ಇಲ್ಲಿ ಉದಾತ್ತಸ್ಥಾನದಲ್ಲಿ (ಙೀಷ್) ಯಣ್ ಬಂದುದರಿಂದ ಪೂರ್ವದಲ್ಲಿ ಹಲ್ ಇರುವುದರಿಂದ **ಉದಾತ್ತಯಣೋಹಲ್ಪೂರ್ವಾತ್** (ಪಾ. ಸೂ. ೬-೧-೧೭೪) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ಸ್ವರಾಟ್—ರಾಜೃ ದೀಪ್ತೌ ಧಾತು. ಇದಕ್ಕೆ ಸತ್ಸೂದ್ವಿಷ—(ಪಾ. ಸೂ. ೩-೨-೬೧) ಎಂಬುದರಿಂದ ಕ್ವಿಪ್. ವ್ರಶ್ಚಭ್ರಸ್ಜಮೃಜ—ಸೂತ್ರದಿಂದ ಜಕಾರಕ್ಕೆ ಷತ್ವ. ಪದಾಂತದಲ್ಲಿ ಝಲಾಂಜಶೋಂತೇ ಎಂಬುದರಿಂದ ಜಶ್ತ್ವ. ವಾವಸಾನೇ ಎಂಬುದರಿಂದ ವಿಕಲ್ಪವಾಗಿ ಚರ್ತ್ವ.

ದನೇ—ದಮು ಉಪಶಮೇ ಧಾತು. ಇದಕ್ಕೆ ಕರ್ಮಣಿಯಲ್ಲಿ ಘಞ್. ಞಿತ್ತಾದುದರಿಂದ ಇದನ್ನು ನಿಮಿತ್ತೀಕರಿಸಿ ವೃದ್ಧಿಯು ಪ್ರಾಪ್ತವಾದರೆ ನೋದಾತ್ತೋಪದೇಶಸ್ಯ ಮಾಂತಸ್ಯಾನಾಚಮೇಃ (ಪಾ. ಸೂ. ೭-೩-೩೪) ಎಂಬುದರಿಂದ ವೃದ್ಧಿಪ್ರತಿಷೇಧ ಬರುತ್ತದೆ. ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ. ಸಪ್ತಮೀ ಏಕವಚನಾಂತರೂಪ.

ವಿಶ್ವಗೂರ್ತಃ—ಗೄ ನಿಗರಣೇ ಧಾತು. ಇದಕ್ಕೆ ನಿಷ್ಠಾತಕಾರಪರವಾದಾಗ ಶ್ರ್ಯುಕಃಕಿತಿ (ಪಾ. ಸೂ. ೭-೨-೧೧) ಎಂಬುದರಿಂದ ಇಣ್ನಿಷೇಧ ಬರುತ್ತದೆ. ಬಹುಲಂ ಛಂದಸಿ ಎಂಬುದರಿಂದ ಉತ್ವ. ಉರಣ್‌ರಪರಃ ಸೂತ್ರದಿಂದ ರಪರವಾಗಿ ಬಂದಾಗ ಹಲಿಚ ಎಂಬುದರಿಂದ ರೇಫಾಂತ ಉಪಧೆಗೆ ದೀರ್ಘ. ಗೂರ್ತಃ ಎಂದು ರೂಪವಾಗುತ್ತದೆ. ಅಥವಾ ಗೂರೀ ಉದ್ಯಮನೇ ಧಾತು. ಇದಕ್ಕೆ ನಿಷ್ಠಾಕ್ತಪ್ರತ್ಯಯ. ರೇಫದ ಪರದಲ್ಲಿ ಬಂದರೂ ನಸತ್ತನಿಷತ್ತ—ಎಂಬುದರಿಂದ ನಿಪಾತನಮಾಡಿರುವುದರಿಂದ ನಿಷ್ಠಾನತ್ವ ಬರುವುದಿಲ್ಲ. ವಿಶ್ವಸ್ಮಿನ್ ಗೂರ್ತಃ ಎಂದು ತತ್ಪುರುಷಸಮಾಸ ಮಾಡಿದಾಗ ಮರುದ್ವೃಧಾದಿಪಾಠದಿಂದ ಪೂರ್ವಪದಾಂತೋದಾತ್ತಸ್ವರ ಬರುತ್ತದೆ. ವಿಶ್ವಂ ಗೂರ್ತಂ ಯಸ್ಯಸಃ ವಿಶ್ವಗೂರ್ತಃ ಎಂದು ಬಹುವ್ರೀಹಿ ಸಮಾಸಮಾಡಿದಾಗ ಬಹುವ್ರೀಹೌ ವಿಶ್ವಂ ಸಂಜ್ಞಾಯಾಂ (ಪಾ. ಸೂ. ೬-೨-೧೦೬) ಎಂಬುದರಿಂದ ಅಸಂಜ್ಞಾ ತೋರುವಾಗಲೂ ಪೂರ್ವಪದಾಂತೋದಾತ್ತಸ್ವರ ಬರುತ್ತದೆ.

ಅಮತ್ರಃ—ಅಮ ಗತ್ಯಾದಿಷು ಧಾತು. ಇದಕ್ಕೆ ಅಮಿನಕ್ಷಿಯಜಿಬಂಧಿ—(ಉ. ಸೂ. ೩-೩೦೫) ಎಂಬುದರಿಂದ ಔಣಾದಿಕವಾದ ಅತ್ರನ್ ಪ್ರತ್ಯಯ ನಿತ್ತಾದುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ವವಕ್ಷೇ—ವಹ ಪ್ರಾಪಣೇ ಧಾತು. ಲೇಟ್ ಸಿಬ್ಬಹುಲಂಲೇಟಿ (ಪಾ. ಸೂ. ೩-೧-೩೪) ಎಂಬುದರಿಂದ ಸಿಪ್. ಬಹುಲಂ ಛಂದಸಿ ಎಂಬುದರಿಂದ ಶಪಿಗೆ ಶ್ಲು ವಿಕರಣ. ಶ್ಲೌ ಎಂಬುದರಿಂದ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ಹೋಢಃ ಎಂಬುದರಿಂದ ಧಾತುಹಕಾರಕ್ಕೆ ಢತ್ವ. ಷಢೋಃಕಃಸಿ ಸೂತ್ರದಿಂದ ಅದಕ್ಕೆ ಕತ್ವ. ಕಕಾರದ ಪರದಲ್ಲಿ ಬಂದುದರಿಂದ ಸಕಾರಕ್ಕೆ ಷತ್ವ. ಲೋಪಸ್ತ ಆತ್ಮನೇಪ. ದೇಷು (ಪಾ. ಸೂ. ೭-೧-೪೫) ಎಂಬುದರಿಂದ ತಕಾರಕ್ಕೆ ಲೋಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ರಣಾಯ—ಕರ್ಮಣಾಯಮಭಿಪ್ರೈತಿ—ಸೂತ್ರದಲ್ಲಿ ಕ್ರಿಯೋಗ್ರಹಣಂ ಕರ್ತವ್ಯಮ್ ಎಂಬ ವಚನ ಮಾಡಿರುವುದರಿಂದ ಕರ್ಮಕ್ಕೆ ಇಲ್ಲಿ ಸಂಪ್ರದಾನಸಂಜ್ಞೆ ಬರುವುದರಿಂದ ಚತುರ್ಥೀವಿಭಕ್ತಿ ಬಂದಿದೆ. ಅಥವಾ ಗತ್ಯರ್ಥಕರ್ಮಣಿ—(ಪಾ. ಸೂ. ೨-೩-೨೩) ಎಂಬುದರಿಂದ ಚತುರ್ಥೀ.

———



CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಸ್ಯೇದೇವ ಶವಸಾ ಶುಷಂತಂ ವಿ ವೃಶ್ಚದ್ವಜ್ರೇಣ ವೃತ್ರಮಿಂದ್ರಃ।
ಗಾ ನ ವ್ರಾಣಾ ಅವನೀರಮುಂಚದಭಿ ಶ್ರವೋ ದಾವನೇ ಸಚೇತಾಃ॥೧೦॥

ಪದಪಾಠಃ

ಅಸ್ಯ । ಇತ್ । ಏವ । ಶವಸಾ । ಶುಷಂತಂ । ವಿ । ವೃಶ್ಚತ್ । ವಜ್ರೇಣ । ವೃತ್ರಂ
ಇಂದ್ರಃ ।
ಗಾಃ । ನ । ವ್ರಾಣಾಃ । ಅವನೀಃ । ಅಮುಂಚತ್ । ಅಭಿ । ಶ್ರವಃ । ದಾವನೇ ।
ಸಃಚೇತಾಃ ॥ ೧೦ ॥

॥ ಸಾಯಣಭಾಷ್ಯಂ ॥

ಅಸ್ಯೈವೇಂದ್ರಸ್ಯ ಶವಸಾ ಬಲೇನ ಶುಷಂತಂ ಶುಷ್ಯಂತಂ ವೃತ್ರಮಿಂದ್ರೋ ವಜ್ರೇಣ ವಿ ವೃಶ್ಚತ್ । ವ್ಯಚ್ಛಿನತ್ । ತಥಾ ಗಾ ನ ಚೋರೈರಪಹೃತಾ ಗಾವ ಇವ ವ್ರಾಣಾ ವೃತ್ರೇಣಾವೃತಾ ಅವನೀ ರಕ್ಷಣಹೇತುಭೂತಾ ಅಪೋಽಮುಂಚತ್ । ಆವರ್ಷೀತ್ । ತಥಾ ದಾವನೇ ಹವಿರ್ದಾತ್ರೇ ಯಜಮಾನಾಯ ಸಚೇತಾಸ್ತೇನ ಯಜಮಾನೇನ ಸಮಾನಚಿತ್ತಃ ಸನ್ ಶ್ರವಃ ಕರ್ಮಫಲಭೂತಮನ್ನಮಭ್ಯಾಭಿಮುಖ್ಯೇನ ದದಾತೀತಿ ಶೇಷಃ ॥ ಶುಷಂತಂ । ಶುಷ ಶೋಷಣೇ । ಶ್ಯನಿ ಪ್ರಾಪ್ತೇ ವ್ಯತ್ಯಯೇನ ಶಃ । ಅದುಪದೇಶಾಲ್ಲಸಾರ್ವಧಾತುಕಾನುದಾತ್ತತ್ವೇ ವಿಕರಣಸ್ವರ ಏವ ಶಿಷ್ಯತೇ । ವ್ರಾಣಾಃ । ವೃಞ್ ವರಣೇ । ಕರ್ಮಣಿ ಲಟಃ ಶಾನಚಿ ಬಹುಲಂ ಛಂದಸೀತಿ ಯಕೋ ಲುಕ್ । ಶಾನಚೋ ಙಿತ್ತ್ವಾದ್ಗುಣಾಭಾವೇ ಯಣಾದೇಶಃ । ಅವನೀಃ । ಅವತೇಃ ಕರಣೇಽರ್ತಿಸೃಧೃಧಮ್ಯಾತ್ಯಾದಿನಾ । ಉ. ೨-೧೦೩ । ಅನಿಪ್ರತ್ಯಯಃ । ಪ್ರತ್ಯಯಾದ್ಯುದಾತ್ತತ್ವಂ । ದಾವನೇ । ಆತೋ ಮನಿನ್ನಿತಿ ವನಿಪ್ । ಚತುರ್ಥ್ಯೇಕವಚನೇಽಲ್ಲೋಪಾಭಾವಶ್ಛಾಂದಸಃ ॥

॥ ಪ್ರತಿಪದಾರ್ಥ ॥

ಅಸ್ಯೇದೇವ—ಇದೇ ಇಂದ್ರನ । ಶವಸಾ—ಬಲದಿಂದ । ಶುಷಂತಂ—(ನೀರನ್ನು) ಇಂಗಿಸತಕ್ಕ । ವೃತ್ರಂ—ವೃತ್ರನನ್ನು । ಇಂದ್ರಃ—ಇಂದ್ರನು । ವಜ್ರೇಣ—ವಜ್ರಾಯುಧದಿಂದ । ವಿ ವೃಶ್ಚತ್—ಸೀಳಿದನು । ಗಾಃ ನ—(ಚೋರರಿಂದ ಅಪಹೃತವಾದ) ಹಸುಗಳನ್ನು ಬಿಡಿಸುವಂತೆ । ವ್ರಾಣಾಃ—(ವೃತ್ರನಿಂದ) ಮುಚ್ಚಲ್ಪಟ್ಟವೂ । ಅವನೀಃ—ರಕ್ಷಣಹೇತುವಾದವೂ ಆದ ನೀರುಗಳನ್ನು । ಅಮುಂಚತ್—ಬಿಡಿಸಿ ಸುರಿಸಿದನು । ದಾವನೇ—ಹವಿರ್ದಾತನಾದ ಯಜಮಾನನಿಗೆ । ಸಚೇತಾಃ—ಅವನ ಇಷ್ಟದೊಡನೆ ಕೂಡುವ ಒಂದೇ ಮನಸ್ಸುಳ್ಳವನಾಗಿ । ಶ್ರವಃ—(ಅವನ ಕರ್ಮಫಲವಾದ) ಅನ್ನವನ್ನು । ಅಭಿ—ಅಭಿಮುಖವಾಗಿ ಅನುಗ್ರಹಿಸುತ್ತಾನೆ ॥


CC-0. Jangamwadi Math Collection. Digitized by eGangotri

|| ಭಾವಾರ್ಥ ||

ಇಂದ್ರನು ತನ್ನ ಸ್ವಬಲದಿಂದ ನೀರನ್ನು ಇಂಗಿಸುವ ವೃತ್ರನನ್ನು ವಜ್ರಾಯುಧದಿಂದ ಸೀಳಿಹಾಕಿದನು. ಚೋರರಿಂದ ಅಪಹೃತಗಳಾದ ಗೋವುಗಳನ್ನು ಬಿಡಿಸುವಂತೆ ವೃತ್ರನಿಂದ ಆವೃತಗಳಾದ ನೀರುಗಳನ್ನು ಬಿಡಿಸಿ ಸುರಿಸಿದನು. ಮತ್ತು ಹವಿರ್ದಾತನಾದ ಯಜಮಾನನಿಗೆ ಅವನ ಇಷ್ಟವನ್ನನುಸರಿಸುವಂತೆ ಅವನೊಂದಿಗೆ ಏಕಮನಸ್ಕನಾಗಿ ಅವನ ಕರ್ಮಫಲವಾದ ಅನ್ನವನ್ನು ಅನುಗ್ರಹಿಸುತ್ತಾನೆ.

English Translation.

Indra, by his power, cut to pieces with his thunderbolt Vritra, the absorber (of moisture), and set free the waters obstructed by Vritra and capable of protecting the universe, like cows (recovered from thieves); and in accordance with the wishes of the giver of the oblation; (grants him) food.

|| ವಿಶೇಷ ವಿಷಯಗಳು ||

**ಶುಷಂತಂ—ಶುಷ್ಯಂತಂ-ಶುಷ-ಶೋಷಣೇ**—ಶೋಷಣಾರ್ಥಕವಾದ ಶುಷಧಾತುವಿನಿಂದ ಉತ್ಪನ್ನವಾದ ಈ ಶಬ್ದವು (ಉದಕವನ್ನು) ಒಣಗಿಸುವವನನ್ನು ಎಂದರ್ಥಕೊಡುವುದು. ಇದು ವೃತ್ರಂ ಎಂಬ ಪದಕ್ಕೆ ವಿಶೇಷಣ.

**ವ್ರಾಣಾಃ—ವೃತ್ರೇಣಾವೃತಾಃ**—ವೃತ್ರಾಸುರನಿಂದ ಆಕ್ರಮಿಸಲ್ಪಟ್ಟ ಮೇಘದಲ್ಲಿರುವ ನೀರುಗಳು. ವೃಜ್-ವರಣೆ ಎಂಬ ಧಾತುಜನ್ಯವಾದ ಶಬ್ದ ಇದು.

**ಸಚೇತಾಃ—ತೇನ ಯಜಮಾನೇನ ಚೇತಃ ಚಿತ್ತಂ ಯಸ್ಯ**—ಯಜಮಾನನೊಡಗೂಡಿದ ಸ್ಥಿರ ಮನಸ್ಸುಳ್ಳವನು, ಯಜಮಾನನ ಇಷ್ಟದಂತೆ ನಡೆಯುವ ಮನಸ್ಸುಳ್ಳವನು ಎಂದಭಿಪ್ರಾಯವು

**ಶ್ರವಃ—ಕರ್ಮಫಲಭೂತಂ ಅನ್ನಂ**—ಇಂದ್ರನು ಯಾಗಾದಿಕರ್ಮಗಳನ್ನು ಆಚರಿಸಿದವರಿಗೆ ಅವರವರ ಯೋಗ್ಯತಾನುಸಾರವಾದ ಆಹಾರವನ್ನು ಕೊಡುತ್ತಾನೆಂದು ಭಾವ.

|| ವ್ಯಾಕರಣಪ್ರಕ್ರಿಯಾ ||

**ಶುಷಂತಮ್**—ಶುಷ ಶೋಷಣೇ ಧಾತು. ದಿವಾದಿ. ಲಡರ್ಥದಲ್ಲಿ ಶತೃಪ್ರತ್ಯಯ. ದಿವಾದಿಭ್ಯಃ ಶ್ಯನ್ ಎಂಬುದರಿಂದ ಶ್ಯನ್ ಪ್ರಾಪ್ತವಾದರೆ ವ್ಯತ್ಯಯೋ ಬಹುಲಂ ಎಂಬುದರಿಂದ ಶ ವಿಕರಣ ಬರುತ್ತದೆ. ಶಾಸ್ಯನುದಾತ್ತೇತ್—ಸೂತ್ರದಿಂದ ಅನುದಾತ್ತವಾಗುತ್ತದೆ. ಆಗ ವಿಕರಣ ಸ್ವರ ಉಳಿಯುತ್ತದೆ. ದ್ವಿತೀಯಾ ಏಕವಚನದಲ್ಲಿ ಉಗಿತ್ತಾದುದರಿಂದ ಉಗಿದಚಾಂ—ಸೂತ್ರದಿಂದ ನುಮಾಗಮ ಬರುತ್ತದೆ. ಅದಕ್ಕೆ ಅನುಸ್ವಾರಪರಸವರ್ಣ. ಶುಷತ್ ಶಬ್ದವಾಗುತ್ತದೆ. ಅದುಪದೇಶದ ಪರದಲ್ಲಿ ಲಸಾರ್ವಧಾತುಕವು (ಶತೃ) ಬಂದುದರಿಂದ

**ವೃಶ್ಚತ್**—ಓವ್ರಶ್ಚೂ ಛೇದನೇ ಧಾತು. ಲಙ್ ಪ್ರಥಮಪುರುಷ ಏಕವಚನದ ತಿ ಪ್ರತ್ಯಯದ ಇಕಾರಕ್ಕೆ ಲೋಪ. ತುದಾದಿಭ್ಯಃ ಶಃ ಎಂಬುದರಿಂದ ಶವಿಕರಣ. ಇದಕ್ಕೆ ಸಾರ್ವಧಾತುಕಮಪಿತ್ ಎಂಬುದರಿಂದ ಙಿದ್ವದ್ಭಾವವಿರುವುದರಿಂದ ಗ್ರಹಿಜ್ಯಾವಯಿ—ಸೂತ್ರದಿಂದ ಸಂಪ್ರಸಾರಣ. ಬಹುಲಂಛಂದಸ್ಯಮಾಙ್—ಎಂಬುದರಿಂದ ಅಡಾಗಮ ಬರುವುದಿಲ್ಲ. ತಿಙಂತನಿಘಾತಸ್ಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

ವ್ರಾಣಾಃ—ವೃಞ್ ವರಣೇ ಧಾತು. ಕರ್ಮಣಿಯಲ್ಲಿ ಲಟಿಗೆ ಶಾನಚ್. ಬಹುಲಂ ಛಂದಸಿ ಎಂಬುದರಿಂದ ಸಾರ್ವಧಾತುಕನಿಬಂಧನವಾಗಿ ಬಂದಿರುವ ಯಕಿಗೆ ಲುಕ್. ಸಾರ್ವಧಾತುಕಮಪಿತ್ ಎಂಬುದರಿಂದ ಶಾನಚ್ ಙಿತ್ತಾಗುವುದರಿಂದ ತನ್ನಿಮಿತ್ತೀಕರಿಸಿ ಧಾತುವಿಗೆ ಗುಣ ಬರುವುದಿಲ್ಲ. ಇಕೋಯಣಚಿ ಸೂತ್ರದಿಂದ ಯಣಾದೇಶ. ಚಿತಃ ಎಂಬುದರಿಂದ ಅಂತೋದಾತ್ತವಾಗುತ್ತದೆ.

ಅವನೀಃ — ಅವ ರಕ್ಷಣೇ ಧಾತು. ಇದಕ್ಕೆ ಕರಣಾರ್ಥದಲ್ಲಿ ಅರ್ತಿಸೃಧೃಧಮಿ-–(ಉ. ಸೂ. ೨-೨೫೯) ಎಂಬುದರಿಂದ ಅನಿಪ್ರತ್ಯಯ. ಪ್ರತ್ಯಯದ ಆದ್ಯುದಾತ್ತಸ್ವರದಿಂದ ವಕಾರೋತ್ತರಾಕಾರವು ಉದಾತ್ತವಾಗುತ್ತದೆ. ದ್ವಿತೀಯಾ ಬಹುವಚನಾಂತರೂಪ.

ಅಮುಂಚತ್—ಮುಚ್ಲೃ ಮೋಕ್ಷಣೇ ಧಾತು. ಶೇಮುಚಾದೀನಾಮ್ ಎಂಬುದರಿಂದ ನುಮಾಗಮ ಬರುತ್ತದೆ. ಲಙ್ ಪ್ರಥಮಪುರುಷ ಏಕವಚನರೂಪ. ತಿಙಂತನಿಘಾತಸ್ವರ ಬರುತ್ತದೆ.

ದಾವನೇ—ಡುದಾಞ್ ದಾನೇ ಧಾತು. ಆತೋಮನಿನ್—ಎಂಬುದರಿಂದ ವನಿಪ್ ಪ್ರತ್ಯಯ. ದಾವನ್ ಶಬ್ದವಾಗುತ್ತದೆ. ಚತುರ್ಥೀ ಏಕವಚನದಲ್ಲಿ ಛಾಂದಸವಾಗಿ ಅಲ್ಲೋಪ ಬರುವುದಿಲ್ಲ.

॥ ಸಂಹಿತಾಪಾಠಃ ॥

ಅಸ್ಯೇದು ತ್ವೇಷಸಾ ರಂತ ಸಿಂಧವಃ ಪರಿ ಯದ್ವಜ್ರೇಣ ಸೀಮಯಚ್ಛತ್ ।
ಈಶಾನಕೃದ್ದಾಶುಷೇ ದಶಸ್ಯಂತುರ್ವೀತಯೇ ಗಾಧಂ ತುರ್ವಣಿಃ ಕಃ ॥೧೧॥

॥ ಪದಪಾಠಃ ॥

ಅಸ್ಯ । ಇತ್ । ಊಂ ಇತಿ । ತ್ವೇಷಸಾ । ರಂತ । ಸಿಂಧವಃ । ಪರಿ । ಯತ್ । ವಜ್ರೇಣ । ಸೀಂ । ಅಯಚ್ಛತ್ ।
ಈಶಾನಕೃತ್ । ದಾಶುಷೇ । ದಶಸ್ಯನ್ । ತುರ್ವೀತಯೇ । ಗಾಧಂ । ತುರ್ವಣಿಃ ಕರಿತಿ ಕಃ ॥ ೧೧ ॥

॥ ಸಾಯಣಭಾಷ್ಯ ॥

ಅಸ್ಯೈವೇಂದ್ರಸ್ಯ ತ್ವೇಷಸಾ ದೀಪ್ತೇನ ಬಲೇನ ಸಿಂಧವಃ ಸಮುದ್ರಾಃ । ಯದ್ವಾ । ಗಂಗಾದ್ಯಾಃ ಸಪ್ತ ನದ್ಯೋ ರಂತ । ಸ್ವೇ ಸ್ವೇ ಸ್ಥಾನೇ ರಮಂತೇ । ಯದ್ಯಸ್ಮಾದಯಮಿಂದ್ರೋ ವಜ್ರೇಣ ಸೀಮೇನಾನ್ಸಿಂಧೂನ್ವಜ್ರೇಣ ಪರ್ಯಯಚ್ಛತ್ । ಪರಿತೋ ನಿಯಮಿತವಾನ್ । ಅಪಿ ಚ ಈಶಾನಾಕೃತ್ ವೃತ್ರಾದಿಶತ್ರುವಧೇನಾತ್ಮಾನಮೈಶ್ವರ್ಯವಂತಂ ಕುರ್ವನ್ನಿಂದ್ರೋ ದಾಶುಷೇ ಹವಿರ್ದತ್ತವತೇ ಯಜಮಾನಾಯ ಫಲಂ



CC-0. Jangamwadi Math Collection. Digitized by eGangotri

ದಶಸ್ಯಸ್ ಪ್ರಯಚ್ಛನ್ ತುರ್ವಣಿಸ್ತೂರ್ಣಸಂಭಜನಃ । ತುರ್ವಣಿಸ್ತೂರ್ಣವನಿರಿತಿ ಯಾಸ್ಕಃ । ನಿ. ೬-೧೪ । ಯದ್ವಾ । ತುರ್ವಿತಾ ಶತ್ರೂಣಾಂ ಹಿಂಸಿತಾ । ಏವಂಭೂತ ಇಂದ್ರಸ್ತುರ್ವೀತಯೆ ಏತತ್ಸಂಜ್ಞಾಯೋದಕೇ ನಿಮಗ್ನಾಯ ಋಷಯೇ ಗಾಧಮವಸ್ಥಾನಯೋಗ್ಯಂ ಧಿಷ್ಣ್ಯಪ್ರದೇಶಂ ಕಃ । ಅಕಾರ್ಷೀತ್ ॥ ರಂತ । ರಮು ಕ್ರೀಡಾಯಾಂ । ಛಾಂದಸೇ ಲಙಿ ಬಹುವಚನೇ ಬಹುಲಂ ಛಂದಸೀತಿ ಶಪೋ ಲುಕ್ । ಧಾತೋ-ರಂತ್ಯಲೋಪಶ್ಛಾಂದಸಃ । ಅಯಚ್ಛತ್ । ಯಮು ಉಪರಮೇ । ಇಷುಗಮಿಯಮಾಂ ಛ ಇತಿ ಛತ್ವಂ । ಕಃ । ಕರೋತೇರ್ಲುಙಿ ಮಂತ್ರೇ ಘಸಹ್ವರಣಶೇತ್ಯಾದಿನಾ । ಪಾ. ೨-೪-೮೦ । ಚ್ಲೇರ್ಲುಕ್ । ಗುಣಃ । ಹಲ್ಙ್ಯಾದಿನಾ ತಲೋಪಃ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥

॥ ಪ್ರತಿಪದಾರ್ಥ ॥

ಯತ್—ಯಾವಕಾರಣದಿಂದ (ಇಂದ್ರನು) । ವಜ್ರೇಣ—ತನ್ನ ವಜ್ರಾಯುಧದಿಂದ । ಸೀಂ—ಈ ಎಲ್ಲ ನದಿಗಳನ್ನು । ಪರಿ ಅಯಚ್ಛತ್ — ಸುತ್ತಲೂ ಹರಿಯುವಂತೆ ಮಾಡಿದನೋ (ಆದ್ದರಿಂದ) । ಅಸ್ಯೇದು—ಇದೇ ಇಂದ್ರನ । ತ್ವೇಷಸಾ—ಪ್ರಕಾಶಮಾನವಾದ ಬಲದಿಂದ । ಸಿಂಧವಃ—ಸಮುದ್ರಗಳು ಅಥವಾ ಗಂಗಾದಿ ಸಪ್ತನದಿಗಳು । ರಂತ—(ತಮ್ಮ ತಮ್ಮ ಸ್ಥಾನಗಳಲ್ಲಿ) ರಮಿಸುತ್ತವೆ (ಅಲ್ಲದೆ) । ಈಶಾನಾಕೃತ್—(ವೃತ್ರಾದಿ ಶತ್ರುವಧದಿಂದ ತನ್ನ) ಪ್ರಭುತ್ವವನ್ನು ಸಾರುತ್ತಲೂ (ಇಂದ್ರನು) । ದಾಶುಷೇ—ಹವಿರ್ದಾತನಾದ ಯಜಮಾನನಿಗೆ । ದಶಸ್ಯನ್—(ಫಲವನ್ನು) ಕೊಡುತ್ತಲೂ । ತುರ್ವಣಿಃ—ಶೀಘ್ರಗಾಮಿಯಾಗಿ ಅಥವಾ ಶತ್ರುಹಿಂಸಕನಾಗಿ । ತುರ್ವೀತಯೇ—ತುರ್ವೀತಿಯೆಂಬ (ನೀರಿನಲ್ಲಿ ಮುಳುಗಿದ್ದ) ಋಷಿಗೆ । ಗಾಧಂ—ವಾಸದ ನೆಲೆಯನ್ನು । ಕಃ—ಮಾಡಿಕೊಟ್ಟನು.

॥ ಭಾವಾರ್ಥ ॥

ಇಂದ್ರನು ತನ್ನ ವಜ್ರಾಯುಧದಿಂದ ದಾರಿಯನ್ನು ಬಿಡಿಸಿ ಸಪ್ತನದಿಗಳನ್ನೂ ಸುತ್ತಲೂ ಹರಿಯುವಂತೆ ಮಾಡಿದನು. ಆದ್ದರಿಂದಲೇ ಗಂಗಾದಿ ಸಪ್ತನದಿಗಳೂ ಸಹ ಇಂದ್ರನ ಪ್ರಕಾಶಮಾನವಾನ ಬಲದ ಸಹಾಯದಿಂದಲೇ ತಮ್ಮ ತಮ್ಮ ಸ್ಥಾನಗಳಲ್ಲಿ ರಮಿಸುತ್ತವೆ. ಅಲ್ಲದೆ, ಇಂದ್ರನು ಶತ್ರುವಧದಿಂದ ತನ್ನ ಪ್ರಭುತ್ವವನ್ನು ಸಾರುತ್ತಲೂ ಹವಿರ್ದಾತನಾದ ಯಜಮಾನನಿಗೆ ಫಲವನ್ನು ಕೊಡುತ್ತಲೂ ಸಹ ತಾನೂ ಶೀಘ್ರಗಾಮಿಯಾಗಿ ತುರ್ವೀತಿಯೆಂಬ ಋಷಿಗೆ ವಾಸದ ನೆಲೆಯನ್ನು ಮಾಡಿಕೊಟ್ಟನು.

## English Translation.

Through his power the rivers sport, since he has, by his thunderbolt, determined their limits; establishing his supremacy (by killing Vritra) and granting recompense to the giver (of the oblation), he, the swift-moving, provided a resting place for Turviti.

॥ ವಿಶೇಷ ವಿಷಯಗಳು ॥

ತ್ವೇಷಸಾ— ದೀಪ್ತೇನ ಬಲೇನ—ಪ್ರಕಾಶಮಾನವಾದ ಕಾಂತಿಯಿಂದಲೂ ಮತ್ತು ಬಲದಿಂದಲೂ.

ಸಿಂಧವಃ—ಇಲ್ಲಿ ಸಿಂಧುಶಬ್ದಕ್ಕೆ ಸಮುದ್ರ ಅಥವಾ ಗಂಗೆಯೇ ಮೊದಲಾದ ಏಳು ನದಿಗಳು ಎಂದು ಅರ್ಥಮಾಡಿದ್ದಾರೆ.





CC-0. Jangamwadi Math Collection. Digitized by eGangotri

**ರಂತೇ—ರಮು-ಕ್ರೀಡಾಯಾಂ**—ತಮ್ಮ ತಮ್ಮ ಸ್ಥಾನದಲ್ಲಿದ್ದು ಪ್ರಕಾಶಿಸುತ್ತವೆ ಎಂದರ್ಥ.

**ಸೀಮ್—ವಿನಾನ್ ಸಿಂಧೂನ್**—ಈ ಶಬ್ದಕ್ಕೆ ಪರಿಗ್ರಹಾರ್ಥೀಯತ್ವವೂ, ಪದಪೂರಣಾರ್ಥವು ಅಂದರೆ ಸ್ವೀಕಾರಯೋಗ್ಯವಾದ ವಸ್ತುಸೂಚಕತ್ವವೂ, ವೇದವಾಕ್ಯದ ಪೂರಣಾರ್ಥಕತ್ವವೂ ಉಂಟು. **ಸೀಮಿತಿ ಪರಿಗ್ರಹಾರ್ಥೀಯೋ ವಾ ಪದಪೂರಣೋ ವಾ** (ನಿರು. ೧-೭) ಎಂದು ನಿರುಕ್ತದಲ್ಲಿ ಮೇಲೆಹೇಳಿದ ಅರ್ಥವನ್ನೇ ಸೀಮ್ ಎಂಬ ಶಬ್ದಕ್ಕೆ ಹೇಳಿದ್ದಾರೆ.

**ಈಶಾನಕೃತ್**—ವೃತ್ರಾಸುರನೇ ಮೊದಲಾದವರ ವಧೆಯಿಂದ ಇಂದ್ರನ ಮಹತ್ವವನ್ನು ಸೂಚಿಸುವುದು

**ತುರ್ವಣಿಃ—ತೂರ್ಣಸಂಭಜನಃ**—ಜಾಗ್ರತೆಯಾಗಿ ಶತ್ರುಗಳನ್ನು ಧ್ವಂಸಮಾಡುವವನು. **ತುರ್ವಣಿಸ್ತೂರ್ಣವನಿಃ** (ನಿ. ೬-೧೪) **ಯದ್ವಾ ತುರ್ವಿತಾ ಶತ್ರೂಣಾಂ ಹಿಂಸಿತಾ**—ಶತ್ರುಗಳನ್ನು ವಿಶೇಷವಾಗಿ ಹಿಂಸಿಸುವವನು (ಇಂದ್ರ).

**ತುರ್ವೀತಯೇ**—ತುರ್ವೀತನೆಂಬುವನು ಒಬ್ಬ ಮಹರ್ಷಿ. ಆತನು ನೀರಿನಲ್ಲಿ ಮುಳುಗಿಹೋಗುತ್ತಿದ್ದನು.

**ಗಾಧಂ—ಅವಸ್ಥಾನಯೋಗ್ಯಂ ಧಿಷ್ಣ್ಯಪ್ರದೇಶಂ**—ವಾಸಮಾಡಲು ಯೋಗ್ಯವಾದ ಗೃಹಾಂತರ್ಗತ ಪ್ರದೇಶ.

|| ವ್ಯಾಕರಣಪ್ರಕ್ರಿಯಾ ||

**ರಂತೇ**—ರಮು ಕ್ರೀಡಾಯಾಂ ಧಾತು. ವರ್ತಮಾನಾರ್ಥದಲ್ಲಿ **ಛಂದಸಿ ಲುಙ್‌ಲಙ್‌ಲಿಟಃ** ಎಂಬುದರಿಂದ ಲಙ್. ಪ್ರಥಮಪುರುಷ ಬಹುವಚನದಲ್ಲಿ **ಝೋಂತಃ** ಎಂಬುದರಿಂದ ಅಂತಾದೇಶ. **ಬಹುಲಂ ಛಂದಸಿ** ಎಂಬುದರಿಂದ ಶಬ್ವಿಕರಣಕ್ಕೆ ಲುಕ್. ಧಾತುವಿನ ಅಂತ್ಯಕ್ಕೆ ಛಾಂದಸವಾಗಿ ಲೋಪಬರುತ್ತದೆ. **ಬಹುಲಂಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

**ಅಯಚ್ಛತ್**—ಯಮ ಉಪರಮೇ ಧಾತು. ಲಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಇಷುಗಮಿಯಮಾಂಛಃ** (ಪಾ. ಸೂ. ೭-೩-೭೭) ಎಂಬುದರಿಂದ ಶಪ್ ಪರವಾದಾಗ ಛಾದೇಶ. ಲಙ್ ನಿಮಿತ್ತವಾಗಿ ಅಂಗಕ್ಕೆ ಅಡಾಗಮ. **ಯದ್ವೃತ್ತಾನ್ನಿತ್ಯಮ್** ಎಂಬುದರಿಂದ ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಅಡಾಗಮ ಉದಾತ್ತವಾದುದರಿಂದ ಆದ್ಯುದಾತ್ತವಾಗುತ್ತದೆ.

**ಈಶಾನಕೃತ್**—ಈಶಾನಂ ಕರೋತಿ ಇತಿ ಈಶಾನಕೃತ್. ಕೃಞ್ ಧಾತುವಿಗೆ ಕ್ವಿಪ್ ಪ್ರತ್ಯಯ. ಪಿತ್ತಾದುದರಿಂದ **ಹ್ರಸ್ವಸ್ಯ ಪಿತಿ ಕೃತಿತುಕ್** ಎಂಬುದರಿಂದ ತುಗಾಗಮ. **ಗತಿಕಾರಕೋಪಪದಾತ್‌ಕೃತ್** ಸೂತ್ರದಿಂದ ಕೃದುತ್ತರಪದಪ್ರಕೃತಿಸ್ವರ ಬರುತ್ತದೆ.

**ಕಃ**—ಡುಕೃಞ್ ಕರಣೇ ಧಾತು. ಲುಙ್ ಪ್ರಥಮಪುರುಷ ಏಕವಚನದಲ್ಲಿ ತಿಪ್. **ಇತಶ್ಚ** ಎಂಬುದರಿಂದ ಇಕಾರಲೋಪ. **ಚ್ಲಿಲುಙಿ** ಎಂಬುದರಿಂದ ಪ್ರಾಪ್ತವಾದ ಚ್ಲಿಗೆ **ಮಂತ್ರೇಘಸಹ್ವರಣಶ**—(ಪಾ. ಸೂ. ೨-೪-೮೦) ಎಂಬುದರಿಂದ ಲುಕ್. **ಸಾರ್ವಧಾತುಕಾರ್ಧಧಾತುಕಯೋಃ** ಸೂತ್ರದಿಂದ ತಿಪ್ ನಿಮಿತ್ತವಾಗಿ ಧಾತುವಿನ ಇಕಿಗೆ ಗುಣ. ಆಗ ಹಲಿನಪರದಲ್ಲಿ ತಿಪ್ ಅಪೃಕ್ತವಾದುದರಿಂದ **ಹಲ್‌ಙ್ಯಾಭ್ಯೋ**—ಸೂತ್ರದಿಂದ ತಿಲೋಪ. **ಬಹುಲಂಛಂದಸ್ಯಮಾಙ್‌ಯೋಗೇಽಪಿ** ಎಂಬುದರಿಂದ ಲುಙ್ ನಿಮಿತ್ತವಾಗಿ ಅಡಾಗಮ ಬರುವುದಿಲ್ಲ. ರೇಫಕ್ಕೆ ರುತ್ವ ವಿಸರ್ಗ. ಕಃ ಎಂದು ರೂಪವಾಗುತ್ತದೆ. ತಿಙಂತನಿಘಾತಸ್ವರ ಬರುತ್ತದೆ.



CC-0. Jangamwadi Math Collection. Digitized by eGangotri

॥ ಸಂಹಿತಾಪಾಠಃ ॥

ಅಸ್ಮಾ ಇದು ಪ್ರ ಭರಾ ತೂತುಜಾನೋ ವೃತ್ರಾಯ ವಜ್ರಮೀಶಾನಃ
ಕಿಯೇಧಾಃ ।
ಗೋರ್ನ ಪರ್ವ ವಿ ರದಾ ತಿರಶ್ಚೇಷ್ಯನ್ನರ್ಣಾಂಸ್ಯಪಾಂ ಚರಧ್ಯೈ ॥೧೨॥

॥ ಪದಪಾಠಃ ॥

ಅಸ್ಮೈ । ಇತ್ । ಊಂ ಇತಿ । ಪ್ರ । ಭರ । ತೂತುಜಾನಃ । ವೃತ್ರಾಯ । ವಜ್ರಂ ।
ಈಶಾನಃ । ಕಿಯೇಧಾಃ ।
ಗೋಃ । ನ । ಪರ್ವ । ವಿ । ರದ । ತಿರಶ್ಚಾ । ಇಷ್ಯನ್ । ಅರ್ಣಾಂಸಿ । ಅಪಾಂ ।
ಚರಧ್ಯೈ ॥ ೧೨ ॥

॥ ಸಾಯಣಭಾಷ್ಯ ॥

ತೂತುಜಾನ ಇತಿ ಕ್ಷಿಪ್ರನಾಮ । ತೂತುಜಾನಸ್ತ್ವರಮಾಣಃ । ಯದ್ವಾ । ಶತ್ರೂನ್ಹಿಂಸನ್ । ಈಶಾನ ಈಶ್ವರಃ ಸರ್ವೇಷಾಂ ಕಿಯೇಧಾಃ ಕಿಯತೋಽನವಧೃತಪರಿಮಾಣಸ್ಯ ಬಲಸ್ಯ ಧಾತಾ । ಯದ್ವಾ । ಕ್ರಮಮಾಣಂ ಶತ್ರುಬಲಂ ದಧಾತ್ಯವಸ್ಥಾಪಯತೀತಿ ಕಿಯೇಧಾಃ । ಹೇ ಇಂದ್ರ ಏವಂಭೂತಸ್ತ್ವಮಸ್ಮೈ ವೃತ್ರಾಯ ವಜ್ರಂ ಪ್ರ ಭರ । ಇಮಂ ವೃತ್ರಂ ವಜ್ರೇಣ ಪ್ರಹರೇತ್ಯರ್ಥಃ । ಪ್ರಹೃತ್ಯ ಚಾರ್ಣಾಂಸಿ ವೃಷ್ಟಿಜಲಾನೀಷ್ಯನ್ ತಸ್ಮಾದ್ವೃತ್ರಾದ್ಗಮಯಂಸ್ತ್ವಮಪಾಂ ಚರಧ್ಯೈ ತಾಸಾಮಪಾಂ ಚರಣಾಯ ಭೂಪ್ರದೇಶಂ ಪ್ರತಿ ಗಮನಾಯ ತಸ್ಯ ವೃತ್ರಸ್ಯ ಮೇಘರೂಪಸ್ಯ ಪರ್ವ ಪರ್ವಾಣ್ಯವಯವಸಂಧೀನ್ ತಿರಶ್ಚಾ ತಿರ್ಯಗವಸ್ಥಿತೇನ ವಜ್ರೇಣ ವಿ ರದ । ವಿಲಿಖ । ಛಿಂಧೀತ್ಯರ್ಥಃ । ತತ್ರ ದೃಷ್ಟಾಂತಃ । ಗೋರ್ನ । ಯಥಾ ಮಾಂಸಸ್ಯ ವಿಕರ್ತಾರೋ ಲೌಕಿಕಾಃ ಪುರುಷಾಃ ಪಶೋರವಯವಾನಿತಸ್ತತೋ ವಿಭಜಂತಿ ತದ್ವತ್ । ಅತ್ರ ನಿರುಕ್ತಂ । ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ಗೋರಿವ ಪರ್ವಾಣಿ ವಿರದ ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚರಣಾಯ । ನಿ. ೬-೨೦ । ಇತಿ ॥ ಭರ । ಹೃಗ್ರಹೋರ್ಭ ಇತಿ ಭತ್ವಂ । ಕಾನಚಿ ದ್ವಿರ್ಭಾವೇ ... ದ್ವ್ಯಚೋಽತಸ್ತಿಙ ಇತಿ ಸಾಂಹಿತಿಕೋ ದೀರ್ಘಃ । ತೂತುಜಾನಃ । ತುಜ ಹಿಂಸಾಯಾಂ । ಕಾನಚಿ ಛಂದಸ್ಯುಭಯಥೇತಿ ಕಾನಚಃ ಸಾರ್ವಧಾತುಕತ್ವೇ ಸತ್ಯಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ತುಜಾದೀನಾಂ ದೀರ್ಘೋಽಭ್ಯಾಸಸ್ಯೇತ್ಯಭ್ಯಾಸಸ್ಯ ದೀರ್ಘತ್ವಂ । ಕಿಯೇಧಾಃ । ತುಜತಾ ಕಿಯೇಧಾ ಇತ್ಯುಕ್ತಂ । ರದ । ರದ ವಿಲೇಖನೇ । ತಿಙ್ಙತಿಙ ಇತಿ ನಿಘಾತಃ । ತಿರಶ್ಚಾ । ತಿರೋಽಂಚತೀತಿ

ತಿರ್ಯಙ್ | ಋತ್ವಿಗಿತ್ಯಾದಿನಾ ಕ್ವಿನ್ | ಅನಿದಿತಾಮಿತಿ ನಲೋಪಃ | ತೃತೀಯೈಕವಚನೇ ಭಸಂಜ್ಞಾಯಾಮಚ ಇತ್ಯಕಾರಲೋಪಃ | ಶ್ಚುತ್ವೇನ ಸಕಾರಸ್ಯ ಶಕಾರಃ | ಉದಾತ್ತನಿವೃತ್ತಿಸ್ವರೇಣ ವಿಭಕ್ತೇರುದಾತ್ತತ್ವಂ | ಇಷ್ಯನ್ | ಇಷ ಗತಾವಿತ್ಯಸ್ಮಾದಂತರ್ಭಾವಿತಣ್ಯರ್ಥಾಚ್ಛತರಿ ದಿವಾದಿಭ್ಯಃ ಶ್ಯನ್ | ತಸ್ಯ ನಿತ್ತ್ವಾದಾದ್ಯುದಾತ್ತತ್ವಂ | ಚರಧ್ಯೈ | ತುಮರ್ಥೇ ಸೇಸೇನಿತಿ ಚರತೇರಧ್ಯೈಪ್ರತ್ಯಯಃ ||

|| ಪ್ರತಿಪದಾರ್ಥ ||

(ಹೇ ಇಂದ್ರ—ಎಲೈ ಇಂದ್ರನೇ) | ತೂತುಜಾನಃ—ಶೀಘ್ರಗಮನವುಳ್ಳವನೂ ಅಥವಾ ಶತ್ರುಹಿಂಸಕನೂ | ಈಶಾನಃ—ಸರ್ವರಿಗೂ ಪ್ರಭುವಾದವನೂ | ಕಿಯೇಧಾಃ—ಅತ್ಯಂತ ಬಲಶಾಲಿಯಾದವನೂ ಅಥವಾ ಶತ್ರುಬಲವನ್ನು ಕಮ್ಮಿ ಮಾಡುವವನೂ ಆದ ನೀನು | ಅಸ್ಮೈ ಇದು ವೃತ್ರಾಯ—ಈ ವೃತ್ರಾಸುರನ ಮೇಲೆಯೇ | ವಜ್ರಂ—ವಜ್ರಾಯುಧವನ್ನು | ಪ್ರ ಭರ—ಪ್ರಯೋಗಿಸಿ ಪ್ರಹರಿಸು | ಅರ್ಣಾಂಸಿ—ವೃಷ್ಟ್ಯುದಕಗಳನ್ನು (ಮಳೆಯ ನೀರನ್ನು) | ಇಷ್ಯನ್—ವೃತ್ರಾಸುರ ಅಥವಾ ಮೇಘದಿಂದ ಹೊರಡಿಸುವ ನೀನು | ಅಪಾಂ—ಉದಕಗಳ | ಚರಧ್ಯೈ—ಸಂಚಾರಕ್ಕಾಗಿ (ಹರಿಯುವುದಕ್ಕಾಗಿ) | ಗೋಃ ಪರ್ವ ನ—(ಮೇಘರೂಪದಿಂದಿರುವ ಆ ವೃತ್ರಾಸುರನ ಅವಯವಗಳನ್ನು ಕಟುಕರು ಗೋವಿನ ಶರೀರದ ಮಾಂಸಖಂಡಗಳನ್ನು ಕತ್ತರಿಸುವಂತೆ | ತಿರಶ್ಚಾ—ಹರಿತವಾದ ನಿನ್ನ ವಜ್ರಾಯುಧದಿಂದ | ವಿ ರದ—ಕತ್ತರಿಸು ||

|| ಭಾವಾರ್ಥ ||

ಎಲೈ ಇಂದ್ರನೇ, ಶೀಘ್ರಗಾಮಿಯೂ ಅಥವಾ ಶತ್ರುಹಿಂಸಕನೂ, ಎಲ್ಲರಿಗೂ ಪ್ರಭುವಾದವನೂ, ಅತ್ಯಂತ ಬಲಶಾಲಿಯೂ ಆದ ನೀನು ಈ ವೃತ್ರಾಸುರನ ಮೇಲೆ ನಿನ್ನ ವಜ್ರಾಯುಧವನ್ನು ಪ್ರಯೋಗಿಸಿ ಮೇಘರೂಪದಿಂದಿರುವ ಅವನನ್ನು ಪ್ರಹರಿಸಿ ಮೇಘದಿಂದ ಉದಕವು ಮಳೆಯರೂಪದಿಂದ ಬೀಳುವಂತೆ ಮಾಡು. ಈರೀತಿ ಮೇಘದಿಂದ ನೀರು ಬೀಳುವುದಕ್ಕಾಗಿ ಕಟುಕರು ಗೋವಿನ ಮೃತಶರೀರವನ್ನು ತುಂಡುತುಂಡಾಗಿ ಕತ್ತರಿಸುವಂತೆ ಮೇಘರೂಪದಿಂರುವ ವೃತ್ರಾಸುರನ ಶರೀರವನ್ನು ನಿನ್ನ ಹರಿತವಾದ ವಜ್ರಾಯುಧದಿಂದ ಕತ್ತರಿಸು.

## English Translation.

Indra, quick-moving and strength-endowed lord of all, hirl your thunderbolt at this Vritra and cut off his joints as (butchers cut up) a cow, that the rains may issue from him, and the waters flow (over the earth).

|| ವಿಶೇಷ ವಿಷಯಗಳು ||

ತೂತುಜಾನಃ—ಇದು ಕ್ಷಿಪ್ರ (ಜಾಗ್ರತೆ) ಎಂಬರ್ಥವನ್ನು ಕೊಡುವ ಪದ. ನಿರುಕ್ತ (೩-೯) ದಲ್ಲಿ ಕ್ಷಿಪ್ರವಾಚಕವಾಗಿರುವ ಇಪ್ಪತ್ತಾರು ಪದಗಳನ್ನು ನು, ಮುಂಕ್ಷು, ದ್ರುವತ್ ಎಂಬುದಾಗಿ ಏಕತ್ರ ಪಾಠಮಾಡಿದ್ದಾರೆ. ಇಲ್ಲಿ ಈ ಪದಕ್ಕೆ ತ್ವರೆಗೊಳಿಸುವವನು ಅಥವಾ ಶತ್ರುಗಳನ್ನು ಹಿಂಸಿಸುವವನು ಎಂದು ಎರಡು ರೀತಿಯಿಂದಲೂ ಅರ್ಥಮಾಡಿದ್ದಾರೆ.

ಕಿಯೇಧಾಃ—ಕಿಯತೋ, ಅನವಧೃತಪರಿಮಾಣಸ್ಯ ಬಲಸ್ಯ ಧಾತಾ | ಯದ್ವಾ ಕ್ರಮಮಾಣಂ ಶತ್ರುಬಲಂ ದಧಾತ್ಯವಸ್ಥಾಪಯತೀತಿ ಕಿಯೇಧಾಃ | ಅನಿರ್ದಿಷ್ಟವಾದ ಬಲವನ್ನು ಸೃಷ್ಟಿಮಾಡುವವನು, ಅಥವಾ



CC-0. Jangamwadi Math Collection. Digitized by eGangotri

ಶಾನಾಗಿಯೇ ಆಕ್ರಮಿಸಿ ಬರುವ ಶತ್ರುಬಲವನ್ನು ಎದುರಿಸಿ ಹಿಮ್ಮೆಟ್ಟಿಸುವವನು ಇಂದ್ರ. ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ಗೋರಿವ ಪರ್ವಾಣಿ ವಿರದ ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚರಣಾಯ (ನಿರು. ೬-೩೦) ಎಂಬ ನಿರುಕ್ತವಚನದಲ್ಲಿ ಆಕ್ರಮಣಕಾರರನ್ನು ಎದುರಿಸುವವನು ಎಂಬರ್ಥದಲ್ಲಿ ಕಿಯದ್ಧಾ ಎಂಬ ಪದವು ಪಠಿತವಾಗಿದೆ.

ತಸ್ಮಾತ್ ಅಪಾಂ ಚರಧ್ಯೈ—ಆ ವೃತ್ರಾಸುರನಿಂದ ಭೂಮಿಗೆ ಜಲರಾಶಿಯು ಹರಿಯುವಂತೆ ಮಾಡು. ವೃತ್ರನು ಮೇಘರೂಪದಿಂದಿದ್ದು ಭೂಮಿಗೆ ವೃಷ್ಟಿಯನ್ನೇ ತಡೆದು ನಿಲ್ಲಿಸಿದಾಗ ಇಂದ್ರನು ಅವನ ಮೇಲೆ ವಜ್ರಾಯುಧವನ್ನು ಪ್ರಯೋಗಿಸಿ ಭೂಮಿಗೆ ಜಲವೃಷ್ಟಿಯನ್ನು ಸುರಿಸಿದನು ಎಂಬ ಕಥಾನುವಾದವು ಇಲ್ಲಿ ಸ್ಮರಣೆಗೆ ಬರುವುದು.

ತಿರಶ್ಚಾ—ತಿರ್ಯಗವಸ್ಥಿತೇನ ವಜ್ರೇಣ—ತಿರೋಂಚತೀತಿ.

ತಿರ್ಯಙ್—ಅಡ್ಡಲಾಗಿ ಪ್ರವೇಶಿಸುವ, ಸದಾ ಅಡ್ಡವಾಗಿರುವಂತೆ ಕಾಣುವ ಎಂದರ್ಥ.

ಗೌರ್ನ—ಹಸುವಿನಂತೆ—ಇದು ದೃಷ್ಟಾಂತರೂಪವಾದ ಅರ್ಥವನ್ನು ಕೊಡುವುದು. ಮಾಂಸವನ್ನು ಶೇಖರಿಸುವ ಕಟುಕರು ಮೊದಲು ಪ್ರಾಣಿಯ ದೇಹವನ್ನು ತುಂಡುತುಂಡಾಗಿ ಕತ್ತರಿಸಿಟ್ಟುಕೊಳ್ಳುವಂತೆ, ಮೇಘರೂಪದಿಂದಿರುವ ವೃತ್ರಾಸುರನನ್ನು ಚೂರುಚೂರಾಗಿ ಕತ್ತರಿಸು ಎಂದು ತಾತ್ಪರ್ಯಾರ್ಥ. ಇದೇ ಅರ್ಥವನ್ನೇ ಅಸ್ಮೈ ಪ್ರಹರ ತೂರ್ಣಂ ತ್ವರಮಾಣೋ ವೃತ್ರಾಯ ವಜ್ರಮೀಶಾನಃ ಕಿಯೇಧಾಃ ಕಿಯದ್ಧಾ ಇತಿ ವಾ ಕ್ರಮಮಾಣಧಾ ಇತಿ ವಾ ಗೋರಿವ ಪರ್ವಾಣಿ ವಿರದ ಮೇಘಸ್ಯೇಷ್ಯನ್ನರ್ಣಾಂಸ್ಯಪಾಂ ಚಾರಣಾಯ (ನಿರು. ೬-೧೦) ಎಂಬುದಾಗಿ ನಿರುಕ್ತವು ತಿಳಿಸುವುದು.

## ॥ ವ್ಯಾಕರಣಪ್ರಕ್ರಿಯಾ ॥

ಭರ—ಹೃಞ್ ಹರಣೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಸಿಪಿಗೆ ಹಿ ಆದೇಶ. ಶಪ್ ವಿಕರಣ. ತನ್ನಿಮಿತ್ತವಾಗಿ ಧಾತುವಿಗೆ ಗುಣ. ಉರಣ್ರಪರಃ ಎಂಬುದರಿಂದ ರಪರವಾಗಿ ಬರುತ್ತದೆ. ಅಕಾರದ ಪರದಲ್ಲಿರುವುದರಿಂದ ಅತೋಹೇಃ ಎಂಬುದರಿಂದ ಹಿಗೆ ಲುಕ್. ಹೃಗ್ರಹೋರ್ಭಶ್ಛಂದಸಿ ಎಂಬುದರಿಂದ ಧಾತುವಿನ ಹಕಾರಕ್ಕೆ ಭಕಾರಾದೇಶ. ದ್ವ್ಯಚೋಽತಸ್ತಿಙಃ (ಪಾ. ಸೂ. ೬-೭-೧೩೫) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ತೂತುಜಾನಃ—ತುಜ ಹಿಂಸಾಯಾಂ ಧಾತು. ಇದಕ್ಕೆ ಲಿಟನಲ್ಲಿ ಕಾನಚ್. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ತುಜಾದೀನಾಂ ದೀರ್ಘೋಽಭ್ಯಾಸಸ್ಯ (ಪಾ. ಸೂ. ೬-೧-೭) ಎಂಬುದರಿಂದ ಅಭ್ಯಾಸಕ್ಕೆ ದೀರ್ಘ. ಛಂದಸ್ಯುಭಯಥಾ ಎಂಬುದರಿಂದ ಕಾನಚಿಗೆ ಸಾರ್ವಧಾತುಕಸಂಜ್ಞೆಯೂ ಇರುವುದರಿಂದ ಅಭ್ಯಸ್ತಾನಾಮಾದಿಃ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಕಿಯೇಧಾಃ—ತುಜತಾ ಕಿಯೇಧಾಃ (ಋ. ಸಂ ೧-೬೧-೬) ಎಂಬಲ್ಲಿ ವ್ಯಾಖ್ಯಾತವಾಗಿದೆ.

ರದ—ರದ ವಿಲೇಖನೇ ಧಾತು. ಲೋಟ್ ಮಧ್ಯಮಪುರುಷ ಏಕವಚನದಲ್ಲಿ ಅತೋಹೇಃ ಎಂಬುದರಿಂದ ಹಿಗೆ ಲುಕ್. ತಿಙ್ಙತಿಙಃ ಎಂಬುದರಿಂದ ನಿಘಾತಸ್ವರ ಬರುತ್ತದೆ.

ತಿರಶ್ಚಾ—ತಿರೋಽಞ್ಚತಿ ಇತಿ ತಿರ್ಯಙ್. ಋತ್ವಿಕ್‌ದಧೃಕ್ ಎಂಬುದರಿಂದ ಸುಬಂತ ಉಪಪದವಾದಾಗ ಅಂಚು ಧಾತುವಿಗೆ ಕ್ವಿನ್. ಕಿತ್ತಾದುದರಿಂದ ಅನಿದಿತಾಂಹಲ—ಎಂಬುದರಿಂದ ಧಾತುವಿನ ಉಪಧಾನ



CC-0. Jangamwadi Math Collection. Digitized by eGangotri

ಕಾರಕ್ಕೆ ಲೋಪ. ತೃತೀಯಾ ಏಕವಚನ ಪರವಾದಾಗ ಭಸಂಜ್ಞಾ ಇರುವುದರಿಂದ ಅಚಃ ಎಂಬುದರಿಂದ ಲುಪ್ತನಕಾರವುಳ್ಳ ಅಂಚುಧಾತುವಿನ ಅಕಾರಕ್ಕೆ ಲೋಪ. ಆಗ ಸಕಾರಕ್ಕೆ ಚಕಾರಯೋಗ ಬಂದುದರಿಂದ ಶ್ಚುತ್ವದಿಂದ ಸಕಾರಕ್ಕೆ ಶಕಾರಾದೇಶ. ತಿರಶ್ಚಾ ಎಂದು ರೂಪವಾಗುತ್ತದೆ. ಇಲ್ಲಿ ಅನುದಾತ್ತ ವಿಭಕ್ತಿನಿಮಿತ್ತ ವಾಗಿ ಉದಾತ್ತವಾದ ಧಾತುವಿನ ಅಕಾರಕ್ಕೆ ಲೋಪಬಂದುದರಿಂದ ಅನುದಾತ್ತಸ್ಯಚ—(ಪಾ. ಸೂ. ೬-೧-೧೬೧) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಇಷ್ಯನ್—ಇಷ ಗತೌ ಧಾತು. ಪ್ರೇರಣಾ ತೋರುವುದರಿಂದ ಅಂತರ್ಭಾವಿತಣ್ಯರ್ಥಕವಾದ ಧಾತು. ಇದಕ್ಕೆ ಲಡರ್ಥದಲ್ಲಿ ಶತೃಪ್ರತ್ಯಯ. ದಿವಾದಿಭ್ಯಃ ಶ್ಯನ್ ಎಂಬುದರಿಂದ ಶ್ಯನ್ ವಿಕರಣ. ಅಪಿತ್ತಾದುದರಿಂದ ಙಿದ್ವದ್ಭಾವವನ್ನು ಹೊಂದುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಇಷ್ಯತ್ ಶಬ್ದವಾಗುತ್ತದೆ. ನಿತ್ ಪ್ರತ್ಯಯಾಂತವಾದುದರಿಂದ ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತವಾಗುತ್ತದೆ. ಪ್ರಥಮಾ ಸು ಪರವಾದಾಗ ನುಮಾಗಮ. ಹಲ್ಙ್ಯಾಭ್ಯೋ—ಸೂತ್ರದಿಂದ ಸುಲೋಪ. ಸಂಯೋಗಾಂತಲೋಪದಿಂದ ತಲೋಪ.

ಚರಧ್ಯೈ—ಚರ ಗತಿಭಕ್ಷಣಯೋಃ ಧಾತು. ತುಮರ್ಥೇ ಸೇಸೇನಸೇ—(ಪಾ. ಸೂ. ೩-೪-೯) ಎಂಬುದರಿಂದ ತುಮುನರ್ಥದಲ್ಲಿ ಅಧ್ಯೈ ಪ್ರತ್ಯಯ. ಏಜಂತವಾದುದರಿಂದ ಕೃನ್ಮೇಜಂತಃ ಎಂಬುದರಿಂದ ಅವ್ಯಯ ಸಂಜ್ಞೆಯನ್ನು ಹೊಂದುತ್ತದೆ.

ಅಪಾಮ್—ಊಡಿದಂಪದಾದಿ—ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

॥ ಸಂಹಿತಾಪಾಠಃ ॥

ಅಸ್ಯೇದು ಪ್ರ ಬ್ರೂಹಿ ಪೂರ್ವ್ಯಾಣಿ ತುರಸ್ಯ ಕರ್ಮಾಣಿ ನವ್ಯ ಉಕ್ಥೈಃ ।
ಯುಧೇ ಯದಿಷ್ಣಾನ ಆಯುಧಾನ್ಯೃಘಾಯಮಾಣೋ ನಿರಿಣಾತಿ ಶ-
ತ್ರೂನ್ ॥ ೧೩ ॥

॥ ಪದಪಾಠಃ ॥

ಅಸ್ಯ । ಇತ್ । ಊಂ ಇತಿ । ಪ್ರ । ಬ್ರೂಹಿ । ಪೂರ್ವ್ಯಾಣಿ । ತುರಸ್ಯ । ಕರ್ಮಾಣಿ ।
ನವ್ಯಃ । ಉಕ್ಥೈಃ ।
ಯುಧೇ । ಯತ್ । ಇಷ್ಣಾನಃ । ಆಯುಧಾನಿ । ಋಘಾಯಮಾಣಃ । ನಿಃರಿಣಾತಿ ।
ಶತ್ರೂನ್ ॥ ೧೩ ॥



CC-0. Jangamwadi Math Collection. Digitized by eGangotri

॥ ಸಾಯಣಭಾಷ್ಯಂ ॥

ಉಕ್ಥೈಃ ಶಸ್ತ್ರೈರ್ನವ್ಯೈಃ ಸ್ತುತ್ಯೈಃ ಯ ಇಂದ್ರ ಅಸ್ಯೇದು ಅಸ್ಯೈವ ತುರಸ್ಯ ಯುದ್ಧಾರ್ಥಂ ತ್ವರಮಾಣಸ್ಯೇಂದ್ರಸ್ಯ ಪೂರ್ವ್ಯಾಣಿ ಪುರಾಣಾನಿ ಕರ್ಮಾಣ್ಯೇತತ್ಕೃತಾನಿ ಬಲಕರ್ಮಾಣಿ ಹೇ ಸ್ತೋತಃ ಪ್ರ ಬ್ರೂಹಿ । ಪ್ರಶಂಸ । ಯದ್ಯದಾ ಯುಧೇ ಯೋಧನಾಯಾಯುಧಾನಿ ವಜ್ರಾದೀನೀಷ್ಣಾನ ಅಭೀಕ್ಷ್ಣೇನ ಪ್ರೇರಯನ್ ಶತ್ರೂನ್ಸೃಘಾಯಮಾಣೋ ಹಿಂಸಂಶ್ಚೇಂದ್ರೋ ನಿರಿಣಾತಿ ಅಭಿಮುಖಂ ಗಚ್ಛತಿ । ತದಾನೀಂ ಪ್ರ ಬೂಹೀತಿ ಪೂರ್ವೇಣ ಸಂಬಂಧಃ । ಪೂರ್ವ್ಯಮಿತಿ ಪುರಾಣನಾಮ । ಪೂರ್ವ್ಯಮಹ್ನಾಯೇತಿ ಪುರಾಣನಾಮಸು ಪಾಠಾತ್ ॥ ತುರಸ್ಯ । ತುರ ತ್ವರಣೇ । ಇಗುಪಧಲಕ್ಷಣಃ ಕಃ । ನವ್ಯಃ । ಣು ಸ್ತುತೌ । ಅಚೋ ಯದಿತಿ ಯತ್ । ಗುಣಃ । ಧಾತೋಸ್ತನ್ನಿಮಿತ್ತಸ್ಯೈವೇತ್ಯವಾದೇಶಃ । ಇಷ್ಣಾನಃ । ಆಭೀಕ್ಷ್ಣ್ಯೇ । ಕ್ರ್ಯಾದಿಕಃ । ವ್ಯತ್ಯಯೇನಾತ್ಮನೇಪದಂ । ಶಾನಚಶ್ಚಿತ್ತ್ವಾದಂತೋದಾತ್ತತ್ವಂ । ಋಘಾಯಮಾಣಃ । ನಹಿ ತ್ವಾ ರೋದಸೀ ಉಭೇ ಋಘಾಯಮಾಣಂ । ಋಗ್ವೇ. ೧-೧೦-೮ । ಇತ್ಯತ್ರ ವ್ಯುತ್ಪಾದಿತಂ । ನಿರಿಣಾತಿ । ರೀ ಗತಿರೇಷಣಯೋಃ । ಕ್ರ್ಯಾದಿಭ್ಯಃ ಶ್ನಾ । ಪ್ವಾದೀನಾಂ ಹ್ರಸ್ವ ಇತಿ ಹ್ರಸ್ವತ್ವಂ । ತಿಪಃ ಪಿತ್ತ್ವಾದನುದಾತ್ತತ್ವೇ ವಿಕರಣಸ್ವರಃ ಶಿಷ್ಯತೇ । ತಿಙಿ ಚೋದಾತ್ತವತೀತಿ ಗತೇರ್ನಿಘಾತಃ । ಯದ್ವೃತ್ತಯೋಗಾತ್ತಿಙ್ಙತಿಙ ಇತಿ ನಿಘಾತಾಭಾವಃ ॥

॥ ಭಾವಾರ್ಥ ॥

(ಎಲೈ ಸ್ತೋತೃವೇ ) । ಯತ್—ಯಾವಾಗ । ಯುಧೇ—ಯುದ್ಧದಲ್ಲಿ । ಆಯುಧಾನಿ—ವಜ್ರಾದ್ಯಾಯುಧಗಳನ್ನು । ಇಷ್ಣಾನಃ—ಸುತ್ತಲೂ ಪ್ರಯೋಗಿಸುತ್ತ । ಶತ್ರೂನ್—ಶತ್ರುಗಳನ್ನು । ಋಘಾಯಮಾಣಃ—ಹಿಂಸಿಸಿ ನಾಶಪಡಿಸುತ್ತ । ನಿರಿಣಾತಿ—(ಅವರ) ಮೇಲೆ ಬೀಳುತ್ತಾನೋ (ಆಗ) । ಉಕ್ಥೈಃ—ಶಸ್ತ್ರರೂಪವಾದ ಮಂತ್ರಗಳಿಂದ । ನವ್ಯಃ—ಸ್ತುತ್ಯನಾದ ಯಾವ ಇಂದ್ರನುಂಟೋ । ಅಸ್ಯೇದು ತುರಸ್ಯ—(ಯುದ್ಧಕ್ಕಾಗಿ) ತ್ವರೆಮಾಡುವ ಅದೇ ಇಂದ್ರನ । ಪೂರ್ವ್ಯಾಣಿ—ಹಿಂದಿನ । ಕರ್ಮಾಣಿ— ಸಾಹಸಕೃತ್ಯಗಳನ್ನು । ಪ್ರ ಬ್ರೂಹಿ—ಚೆನ್ನಾಗಿ ಪ್ರಶಂಸಿಸು ॥

॥ ಭಾವಾರ್ಥ ॥

ಎಲೈ ಸ್ತೋತೃವೇ, ಯುದ್ಧದಲ್ಲಿ ವಜ್ರಾದ್ಯಾಯುಧಗಳನ್ನು ಸುತ್ತಲೂ ಪ್ರಯೋಗಿಸುತ್ತಲೂ, ಶತ್ರುಗಳನ್ನು ಹಿಂಸಿಸಿ ನಾಶಪಡಿಸುತ್ತಲೂ ಅವರ ಮೇಲೆ ಬಿದ್ದಾಗ, ಶಸ್ತ್ರರೂಪವಾದ ಮಂತ್ರಗಳಿಂದ ಸ್ತುತ್ಯನಾದವನೂ ಮತ್ತು ಯುದ್ಧಕ್ಕೆ ತ್ವರೆಮಾಡುವವನೂ ಆದ ಆ ಇಂದ್ರನ ಹಿಂದಿನ ವೀರ್ಯಕೃತ್ಯಗಳನ್ನು ಚೆನ್ನಾಗಿ ಪ್ರಶಂಸಿಸು.

## English Translation.

Describe, with new hymns, the former exploits of that quick-moving Indra, when holding his weapons in battle, he encounters and destroys his enemies.

॥ ವಿಶೇಷ ವಿಷಯಗಳು ॥

ನವ್ಯಃ—ಸ್ತುತ್ಯನಾದವನು.

ಅಸ್ಯೇದು—ಅಸ್ಯ+ಇತ್+ಉ—ಇಲ್ಲಿರುವ ಇತ್ ಮತ್ತು ಉಕಾರವು ಏವ (ಅದೇನೇ) ಎಂಬರ್ಥವನ್ನು ಕೊಡುವುವು.



CC-0. Jangamwadi Math Collection. Digitized by eGangotri

ತುರಸ್ಯ—ಯುದ್ಧಕ್ಕಾಗಿ ತ್ವರೆ ಮಾಡುವ ಇಂದ್ರನು.

ಪೂರ್ವ್ಯಾಣಿ—ಪುರಾಣಾನಿ—ಹಿಂದಿನದಾದ—ಪೂರ್ವ್ಯಂ ಅಹ್ನಾಯ ( ನಿ. ೩-೭ ) ಎಂಬುದಾಗಿ ನಿರುಕ್ತಕಾರರು ಈ ಪದವನ್ನು ಪುರಾಣ (ಹಳೆಯದು) ವಾಚಕಪದಗಳ ಮಧ್ಯದಲ್ಲಿ ಪಾಠಮಾಡಿದ್ದಾರೆ.

ಋಘಾಯಮಾಣಃ—ಶತ್ರುಗಳನ್ನು ಹಿಂಸಿಸುವವನು(ಇಂದ್ರ)ನಹಿ ತ್ವಾ ರೋದಸೀ ಉಭೇ ಋಘಾಯಮಾಣಂ (ಋ. ಸಂ. ೧-೧೦.೮) ಈ ಮಂತ್ರದಲ್ಲಿ ಈ ಪದದ ಅರ್ಥವು ವಿಶೇಷವಾಗಿ ವಿವರಿಸಲ್ಪಟ್ಟಿರುವುದು.

॥ ವ್ಯಾಕರಣಪ್ರಕ್ರಿಯಾ ॥

ಬ್ರೂಹಿ—ಬ್ರೂಞ್ ವ್ಯಕ್ತಾಯಾಂ ವಾಚಿ ಧಾತು. ಲೋಣ್ಮಧ್ಯಮಪುರುಷ ಏಕವಚನರೂಪ. ಹಿಗೆ ಅಪಿತ್ವವನ್ನು ಹೇಳಿರುವುದರಿಂದ ಗುಣ ಬರುವುದಿಲ್ಲ. ತಿಙಂತನಿಘಾತಸ್ವರ ಬರುತ್ತದೆ.

ತುರಸ್ಯ—ತುರ ತ್ವರಣೇ ಧಾತು. ಇದಕ್ಕೆ ಇಗುಪಧಜ್ಞಾಪ್ರೀಕಿರಃಕಃ (ಪಾ. ಸೂ. ೩-೧-೧೩೫) ಎಂಬುದರಿಂದ ಕ ಪ್ರತ್ಯಯ. ಕಿತ್ತಾದುದರಿಂದ ಲಘೂಪಧಗುಣ ಬರುವುದಿಲ್ಲ. ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ. ಷಷ್ಠೀಏಕವಚನರೂಪ.

ನವ್ಯಃ—ಣು ಸ್ತುತೌ ಧಾತು. ಅಜಂತವಾದುದರಿಂದ ಅಚೋಯತ್ ಎಂಬುದರಿಂದ ಯತ್ ಪ್ರತ್ಯಯ. ಸಾರ್ವಧಾತುಕಾರ್ಧಧಾತುಕಯೋಃ ಎಂಬುದರಿಂದ ಧಾತುವಿಗೆ ಗುಣ. ಯತ್ ಪ್ರತ್ಯಯ ನಿಮಿತ್ತವಾಗಿಯೇ ಧಾತುವಿಗೆ ಓತ್ವ ಬಂದುದರಿಂದ ಧಾತೋಸ್ತನ್ನಿಮಿತ್ತಸ್ಯೈವ ಎಂಬುದರಿಂದ ಅದಕ್ಕೆ ಅವಾದೇಶ ಬರುತ್ತದೆ. ಯತೋಽನಾವಃ ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

ಯುಧೇ—ಯುಧ ಸಂಪ್ರಹಾರೇ ಧಾತು. ಕ್ವಿಪ್ ಪ್ರತ್ಯಯ. ಚತುರ್ಥೀ ಏಕವಚನಾಂತರೂಪ. ಸಾವೇಕಾಚಸ್ತೃತೀಯಾದಿಃ ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

ಇಷ್ಣಾನಃ—ಇಷ ಆಭೀಕ್ಷ್ಣ್ಯೇ ಧಾತು. ಕ್ರ್ಯಾದಿ. ವ್ಯತ್ಯಯೋಬಹುಲಂ ಎಂಬುದರಿಂದ ಆತ್ಮನೇಪದಿಯಾಗುತ್ತದೆ. ಲಡರ್ಥದಲ್ಲಿ ಶಾನಚ್ ಪ್ರತ್ಯಯ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾ ವಿಕರಣ. ಸಾರ್ವಧಾತುಕಮಪಿತ್ ಎಂಬುದರಿಂದ ಇದಕ್ಕೆ ಙಿದ್ವದ್ಭಾವವಿರುವುದರಿಂದ ಧಾತುವಿನ ಲಘೂಪಧೆಗೆ ಗುಣ ಬರುವುದಿಲ್ಲ. ಷಕಾರಯೋಗವಿರುವುದರಿಂದ ನಕಾರಕ್ಕೆ ಣತ್ವ. ಪ್ರತ್ಯಯ ಚಿತ್ತಾದುದರಿಂದ ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಋಘಾಯಮಾಣಃ—ನಹಿ ತ್ವಾ ರೋದಸೀ ಉಭೇ ಋಘಾಯಮಾಣಮ್ (ಋ. ಸಂ. ೧-೧೦-೮) ಎಂಬಲ್ಲಿ ಈ ಶಬ್ದವು ವ್ಯಾಖ್ಯಾತವಾಗಿದೆ.

ನಿರಿಣಾತಿ—ರೀ ಗತಿರೇಷಣಯೋಃ ಧಾತು. ಕ್ರ್ಯಾದಿ. ಲಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. ಕ್ರ್ಯಾದಿಭ್ಯಃ ಶ್ನಾ ಎಂಬುದರಿಂದ ಶ್ನಾ ವಿಕರಣ. ಪ್ವಾದೀನಾಂ ಹ್ರಸ್ವಃ (ಪಾ. ಸೂ. ೭-೩-೮೦) ಎಂಬುದರಿಂದ ಹ್ರಸ್ವ. ರೇಫನಿಮಿತ್ತವಾಗಿ ಅಟ್‌ಕುಪ್ವಾಙ್—ಸೂತ್ರದಿಂದ ವಿಕರಣ ನಕಾರಕ್ಕೆ ಣತ್ವ. ತಿಪ್ ಪಿತ್ತಾದುದರಿಂದ ಅನುದಾತ್ತವಾಗುವುದರಿಂದ ವಿಕರಣಸ್ವರ ಉಳಿಯುತ್ತದೆ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ. ಉದಾತ್ತವುಳ್ಳ ತಿಙಂತವು ಪರವಾದುದರಿಂದ ತಿಙಿಚೋದಾತ್ತವತಿ (ಪಾ. ಸೂ. ೮-೧-೭೧) ಎಂಬುದರಿಂದ ಗತಿಗೆ (ನಿ) ನಿಘಾತಸ್ವರ ಬರುತ್ತದೆ.





CC-0. Jangamwadi Math Collection. Digitized by eGangotri

ಸಂಹಿತಾಪಾಠಃ

ಅಸ್ಯೇದು ಭಿಯಾ ಗಿರಯಶ್ಚ ದೃಳ್ಹಾ ದ್ಯಾವಾ ಚ ಭೂಮಾ ಜನುಷಸ್ತು-
ಜೇತೇ ।
ಉಪೋ ವೇನಸ್ಯ ಜೋಗುವಾನ ಓಣಿಂ ಸದ್ಯೋ ಭುವದ್ವೀರ್ಯಾಯ
ನೋಧಾಃ ॥ ೧೪ ॥

॥ ಪದಪಾಠಃ ॥

ಅಸ್ಯ । ಇತ್ । ಊಂ ಇತಿ । ಭಿಯಾ । ಗಿರಯಃ । ಚ । ದೃಳ್ಹಾಃ । ದ್ಯಾವಾ । ಚ
ಭೂಮ । ಜನುಷಃ । ತುಜೇತೇ ಇತಿ ।
ಉಪೋ ಇತಿ । ವೇನಸ್ಯ । ಜೋಗುವಾನಃ । ಓಣಿಂ । ಸದ್ಯಃ । ಭುವತ್ । ವೀ-
ರ್ಯಾಯ । ನೋಧಾಃ ॥ ೧೪ ॥

॥ ಸಾಯಣಭಾಷ್ಯಂ ॥

ಅಸ್ಯೈವೇಂದ್ರಸ್ಯ ಭಿಯಾ ಪಕ್ಷಚ್ಛೇದಭಯೇನ ಗಿರಯಃ ಪರ್ವತಾ ಅಪಿ ದೃಳ್ಹಾಃ । ನಿಶ್ಚಲಾಃ ಸ್ವಸ್ವದೇಶೇಽವತಿಷ್ಠಂತೇ । ಜನುಷಃ ಪ್ರಾದುರ್ಭೂತಾದಸ್ಮಾದೇವೇಂದ್ರಾದ್ಭೀತ್ಯಾ ದ್ಯಾವಾ ಭೂಮಾ ಚ ದ್ಯಾವಾಪೃಥಿವ್ಯಾವಪಿ ತುಜೇತೇ । ತುಜಿರ್ಹಿಂಸಾರ್ಥೋಽಪ್ಯತ್ರ ಕಂಪನೇ ದ್ರಷ್ಟವ್ಯಃ । ಕಂಪೇತೇ ಇತ್ಯರ್ಥಃ । ಕಿಂಚ ವೇನಸ್ಯ ಕಾಂತಸ್ಯಾಸ್ಯೇಂದ್ರಸ್ಯೌಣಿಂ ದುಃಖಸ್ಯಾಪನಾಯಕಂ ರಕ್ಷಣಮುಪೋ ಜೋಗುವಾನೋಽನೇಕೈಃ ಸೂಕ್ತೈಃ ಪುನಃ ಪುನರುಪಶಬ್ದಯನ್ । ಉಪಶ್ಲೋಕಯನ್ನಿತ್ಯರ್ಥಃ । ಏವಂಭೂತೋ ನೋಧಾ ಋಷಿಃ ಸದ್ಯಸ್ತದಾನೀಮೇವ ವೀರ್ಯಾಯ ಭುವತ್ । ವೀರ್ಯವಾನಭವತ್ ॥ ದ್ಯಾವಾ ಚ ಭೂಮಾ । ದ್ಯಾವಾ ಭೂಮೇತ್ಯನಿಯೋರ್ಮಧ್ಯೇ ಚಶಬ್ದಸ್ಯ ಪಾಠಶ್ಛಾಂದಸಃ । ದಿವೋ ದ್ಯಾವೇತಿ ದಿವ್‌ಶಬ್ದಸ್ಯ ದ್ಯಾವಾದೇಶಃ । ದೇವತಾದ್ವಂದ್ವೇ ಚೇತ್ಯುಭಯಪದಪ್ರಕೃತಿಸ್ವರತ್ವಂ । ಪದದ್ವಯಪ್ರಸಿದ್ಧಿರಪಿ ಸಾಂಪ್ರದಾಯಿಕೀ । ಸುಪಾಂ ಸುಲುಗಿತಿ ವಿಭಕ್ತೇರ್ಡಾದೇಶಃ । ಜನುಷಃ । ಜನೀ ಪ್ರಾದುರ್ಭಾವೇ । ಜನೇರುಸಿಃ । ಉ. ೨.೧೧೬ । ಇತ್ಯೌಣಾದಿಕ ಉಸಿಪ್ರತ್ಯಯಃ । ಜೋಗುವಾನಃ । ಗುಙ್ ಅವ್ಯಕ್ತೇ ಶಬ್ದೇ । ಅಸ್ಮಾದ್ಯಙ್‌ಲುಗಂತಾದ್ವ್ಯತ್ಯಯೇನ ಶಾನಚ್ । ಅದಾದಿವಚ್ಚೇತಿ ವಚನಾಚ್ಛಪೋ ಲುಕ್ । ಉವಙಾದೇಶಃ । ಅಭ್ಯಸ್ತಾನಾಮಾದಿರಿತ್ಯಾದ್ಯುದಾತ್ತತ್ವಂ । ಓಣಿಂ । ಓಣೃ ಅಪನಯನೇ । ಅಸ್ಮಾದೌಣಾದಿಕ ಇಪ್ರತ್ಯಯಃ । ಭುವತ್ । ಭವತೇರ್ಲೇಟ್ಯಡಾಗಮಃ । ಬಹುಲಂ ಛಂದಸೀತಿ ಶಪೋ ಲುಕ್ । ಭೂಸುವೋಸ್ತಿಙೀತಿ ಗುಣಪ್ರತಿಷೇಧಃ । ನೋಧಾಃ । ನೋಧಾ ಋಷಿರ್ಭವತಿ ನವನಂ ದಧಾತೀತಿ ಯಾಸ್ಕಃ । ನಿ. ೪.೧೬ । ತಸ್ಮಾದ್ಧಾಞ ಔಣಾದಿಕೋಽಸುನ್ ನವಶಬ್ದಸ್ಯ ನೋಭಾವಶ್ಚ ॥



CC-0. Jangamwadi Math Collection. Digitized by eGangotri

|| ಪ್ರತಿಪದಾರ್ಥ ||

**ಅಸ್ಯೇದು**—ಇದೇ ಇಂದ್ರನ | **ಭಿಯಾ**—(ರೆಕ್ಕೆಗಳನ್ನು ಕತ್ತರಿಸುವ) ಭಯದಿಂದ | **ಗಿರಯಶ್ಚ**—ಪರ್ವತಗಳೂ ಕೂಡ | **ದೃಳ್ಹಾಃ**—ಚಲನವಿಲ್ಲದೇ ಸ್ಥಿರವಾಗಿ ನಿಂತಿವೆ | **ಜನುಷಃ**—ಆವಿರ್ಭವಿಸಿದ ಈ ಇಂದ್ರನ (ಭಯದಿಂದಲೇ) | **ದ್ಯಾವಾ ಭೂಮಾ ಚ**—ದ್ಯಾವಾಪೃಥಿವಿಗಳೆರಡೂ | **ತುಜೇತೇ**—ಕಂಪಿಸುತ್ತವೆ (ಮತ್ತು) | **ವೇನಸ್ಯ**—ಪ್ರಿಯನಾದ ಇಂದ್ರನ | **ಓಣಿಂ**—ದುಃಖವನ್ನು ನಿವಾರಣೆಮಾಡುವ ರಕ್ಷಣೆಯನ್ನು | **ಉಪೋ ಜೋಗುವಾನಃ**—(ಸೂಕ್ತಗಳಿಂದ) ಪದೇಪದೇ ಸ್ತುತಿಸುತ್ತ | **ನೋಧಾಃ**—ನೋಧಸ್ಸೆಂಬ ಋಷಿಯು | **ಸದ್ಯಃ**—ಒಡನೆಯೇ |**ವೀರ್ಯಾಯ ಭುವತ್**—ವೀರ್ಯವಂತನಾದನು ||

|| ಭಾವಾರ್ಥ ||

ಇಂದ್ರನ ಭಯದಿಂದ ಪರ್ವತಗಳೂ ಚಲನವಿಲ್ಲದೇ ಸ್ಥಿರವಾಗಿ ನಿಂತಿವೆ. ಅವನ ಭಯದಿಂದಲೇ ದ್ಯಾವಾಪೃಥಿವಿಗಳೆರಡೂ ಕಂಪಿಸುತ್ತವೆ. ಪ್ರಿಯನಾದ ಇಂದ್ರನ ದುಃಖನಿವಾರಕವಾದ ರಕ್ಷಣೆಯನ್ನು ಶ್ರೇಷ್ಠವಾದ ಸೂಕ್ತಗಳಿಂದ ಪದೇಪದೇಪಠಿಸುತ್ತ ನೋಧಸ್ಸೆಂಬ ಋಷಿಯು ಒಡನೆಯೇ ಅತ್ಯಂತ ವೀರ್ಯವಂತನಾದನು.

## English Translation.

Though fear of him, the mountains remain still ; and through fear of his appearance, heaven and earth tremble ; praising repeatedly with hymns the preserving power of that beloved Indra, Nodhas speedily acquired vigour.

|| ವಿಶೇಷ ವಿಷಯಗಳು ||

**ಜನುಷಃ**—ಜನೀ ಪ್ರಾದುರ್ಭಾವೇ—ಪ್ರಾದುರ್ಭೂತನಾಗುವ ಇಂದ್ರನ ದೆಸೆಯಿಂದ.

**ತುಜೇತೇ**—ತುಜ್ ಧಾತುವಿಗೆ ಹಿಂಸಾರ್ಥಕತ್ವವಿದ್ದರೂ ಇಲ್ಲಿ ಕಂಪನ ಎಂಬರ್ಥವನ್ನು ಹೇಳಬೇಕು. ದ್ಯಾವಾಪೃಥಿವಿಗಳು ಇಂದ್ರನ ದೆಸೆಯಿಂದ ನಡುಗುತ್ತವೆ ಎಂದರ್ಥ.

**ವೇನಸ್ಯ**—ಕಾಂತಸ್ಯಾಸ್ಯ—ಮನೋಹರನಾದ (ಇಂದ್ರನ).

**ಜೋಗುವಾನಃ**—ಗುಜ್ ಅವ್ಯಕ್ತೇ ಶಬ್ದೇ—ಪದೇಪದೇ ಸ್ಫುಟವಲ್ಲದ ಧ್ವನಿಮಾಡುವವನು.

**ನೋಧಾಃ**—ಈ ಪದಕ್ಕೆ ಋಷಿ ಎಂದರ್ಥ. ಉಪೋ ಅದರ್ಶಿ ಶುಂಧ್ಯುವೋ ನವಕ್ಷೋ ನೋಧಾ ಇವಾವಿರಕೃತಪ್ರಿಯಾಣಿ (ಋ. ಸಂ. ೧-೧೨೪-೪) ಇಲ್ಲಿಯೂ ನೋಧಶ್ಶಬ್ಧಕ್ಕೆ ಋಷಿ ಎಂದರ್ಥಮಾಡಿದ್ದಾರೆ. ನೋಧಾ ಇವಾವಿರಕೃತಪ್ರಿಯಾಣಿ, ನೋಧಾ ಋಷಿರ್ಭವತಿ ನವನಂ ದಧಾತಿ ಇತ್ಯಾದಿ ನಿರುಕ್ತವ್ಯಾಖ್ಯಾನವೂ ಇದಕ್ಕೆ ಋಷಿ ಎಂಬರ್ಥವನ್ನೇ ವಿವರಿಸಿದೆ.

|| ವ್ಯಾಕರಣಪ್ರಕ್ರಿಯಾ ||

**ಭಿಯಾ**—ತೃತೀಯಾ ಏಕವಚನಾಂತರೂಪ. **ಸಾವೇಕಾಚಸ್ತೃತೀಯಾದಿ** (ಪಾ. ಸೂ. ೬-೧-೧೬೮) ಎಂಬುದರಿಂದ ವಿಭಕ್ತಿಗೆ ಉದಾತ್ತಸ್ವರ ಬರುತ್ತದೆ.

**ದ್ಯಾವಾ ಚ ಭೂಮಾ**—ದ್ಯಾವಾಭೂಮೀ ಶಬ್ದ. ದ್ಯಾವಾ ಭೂಮಾ ಎಂಬೆರಡು ಶಬ್ದಗಳ ಮಧ್ಯದಲ್ಲಿ ಛಾಂದಸವಾಗಿ ಚಕಾರ ಪಾಠಮಾಡಿದೆ. **ದಿವೋದ್ಯಾವಾ** (ಪಾ. ಸೂ. ೬-೩-೨೯) ಎಂಬುದರಿಂದ ದಿವ್ ಶಬ್ದಕ್ಕೆ



CC-0. Jangamwadi Math Collection. Digitized by eGangotri

ದ್ವ್ಯಾವಾದೇಶ. **ಸುಪಾಂ ಸುಲುಕ್** ಸೂತ್ರದಿಂದ ದ್ವಿವಚನಕ್ಕೆ ಡಾದೇಶ. ಡಿತ್ತಾದುದರಿಂದ ಟಿಲೋಪ. ದೇವತಾದ್ವಂದ್ವೇಚ (ಪಾ. ಸೂ. ೬-೨-೧೪೧) ಎಂಬುದರಿಂದ ಉಭಯಪದಪ್ರಕೃತಿಸ್ವರ ಬರುತ್ತದೆ. ಈ ಎರಡು ಪದಸಿದ್ಧಿಯೂ ಸಾಂಪ್ರದಾಯಿಕವಾಗಿದೆ.

**ಜನುಷಃ**— ಜನೀ ಪ್ರಾದುರ್ಭಾವೇ ಧಾತು. **ಜನೇರುಸಿ** (ಉ. ಸೂ. ೨-೨೭೨) ಎಂಬುದರಿಂದ ಇದಕ್ಕೆ ಔಣಾದಿಕವಾದ ಉಸಿ ಪ್ರತ್ಯಯ. ಜನುಸ್ ಶಬ್ದವಾಗುತ್ತದೆ. ಪಂಚಮೀ ಏಕವಚನಾಂತರೂಪ. ಪ್ರತ್ಯಯಸ್ವರದಿಂದ ಉಕಾರ ಉದಾತ್ತವಾಗುತ್ತದೆ.

**ಜೋಗುವಾನಃ**— ಗುಜ್ ಅವ್ಯಕ್ತೇ ಶಬ್ದೇ ಧಾತು. ಇದಕ್ಕೆ ಅತಿಶಯಾರ್ಥದಲ್ಲಿ ಯಙ್. ಅದಕ್ಕೆ **ಯಙೋಽಚಿಚ** ಎಂಬುದರಿಂದ ಲುಕ್. ಇದು ಪರಸ್ಮೈಪದಿಯಾದರೂ **ವ್ಯತ್ಯಯೋಬಹುಲಂ** ಎಂಬುದರಿಂದ ಶಾನಚ್ ಪ್ರತ್ಯಯ. **ಚರ್ಕರೀತಂಚ** ಎಂದು ಯಙ್‌ಲುಗಂತವನ್ನು ಅದಾದಿಯಲ್ಲಿ ಪಾಠಮಾಡಿರುವುದರಿಂದ **ಅದಿಪ್ರಭೃತಿಭ್ಯಃ ಶಪಃ** ಎಂಬುದರಿಂದ ಪ್ರಾಪ್ತವಾದ ಶಪಿಗೆ ಲುಕ್. ಯಙ್ ನಿಮಿತ್ತವಾಗಿ ಧಾತುವಿಗೆ ದ್ವಿತ್ವ. **ಗುಣೋಯಙ್‌ಲುಕೋಃ** (ಪಾ. ಸೂ. ೭-೪-೮೨) ಎಂಬುದರಿಂದ ಅಭ್ಯಾಸಕ್ಕೆ ಗುಣ. ಜೋಗು+ಆನ ಎಂದಿರುವಾಗ **ಅಚಿಶ್ನುಧಾತುಭ್ರುವಾಂ** ಸೂತ್ರದಿಂದ ಉವಙಾದೇಶ. **ಅಭ್ಯಸ್ತಾನಾಮಾದಿಃ** (ಪಾ.ಸೂ. ೬-೧-೧೮೯) ಎಂಬುದರಿಂದ ಆದ್ಯುದಾತ್ತಸ್ವರ ಬರುತ್ತದೆ.

**ಓಣಿಮ್**— ಓಣೃ ಅಪನಯನೇ ಧಾತು. ಇದಕ್ಕೆ ಔಣಾದಿಕವಾದ ಇ ಪ್ರತ್ಯಯ. ಪ್ರತ್ಯಯ ಸ್ವರದಿಂದ ಅಂತೋದಾತ್ತ.

**ಭುವತ್**— ಭೂ ಸತ್ತಾಯಾಂ ಧಾತು. ಲೇಟ್ ಪ್ರಥಮಪುರುಷ ಏಕವಚನದಲ್ಲಿ ತಿಪ್ ಪ್ರತ್ಯಯ. **ಇತಶ್ಚಲೋಪಃಪರಸ್ಮೈಪದೇಷು** ಎಂಬುದರಿಂದ ಇಕಾರ ಲೋಪ. **ಲೇಟೋಽಡಾಟೌ** ಎಂಬುದರಿಂದ ಅಡಾಗಮ. **ಬಹುಲಂಛಂದಸಿ** ಎಂಬುದರಿಂದ ಶಪಿಗೆ ಲುಕ್. **ಭೂಸುವೋಸ್ತಿಙಿ** (ಪಾ. ಸೂ. ೭-೩-೮೮) ಎಂಬುದರಿಂದ ಧಾತುವಿನ ಇಕಿಗೆ ಗುಣಬರುವುದಿಲ್ಲ. ಉವಙಾದೇಶ. **ತಿಙ್ಙತಿಙಃ** ಎಂಬುದರಿಂದ ನಿಘಾತಸ್ವರ ಬರುತ್ತದೆ.

**ನೋಧಾಃ**— ನೋಧಾ ಋಷಿರ್ಭವತಿ ನವನಂ ದಧಾತಿ. (ನಿರು. ೪-೧೬) ಇತಿ ಯಾಸ್ಕಃ (ನೋಧಾ ಎಂಬುದು ಋಷಿಯ ಹೆಸರು) ಡುಧಾಞ್ ಧಾರಣಪೋಷಣಯೋಃ ಧಾತು. ಇದಕ್ಕೆ ಸರ್ವಧಾತುನಿಬಂಧನವಾಗಿ ಬರುವ ಅಸುನ್ ಪ್ರತ್ಯಯ. ನವನಂ ದಧಾತಿ ಎಂದು ನಿರ್ವಚನ ಮಾಡಿರುವುದರಿಂದ ನವಶಬ್ದಕ್ಕೆ ನೋಭಾವ ಬರುತ್ತದೆ. ನೋಧಸ್ ಶಬ್ದವಾಗುತ್ತದೆ. **ಗತಿಕಾರಕೋಪಪದಾತ್‌ಕೃತ್** ಎಂಬುದರಿಂದ ಕೃದುತ್ತರಪದ ಪ್ರಕೃತಿಸ್ವರ ಬರುತ್ತದೆ. ಪ್ರಥಮಾ ಸು ಪರವಾದಾಗ **ಅತ್ವಸಂತಸ್ಯ ಚಾಧಾತೋಃ** ಎಂಬುದರಿಂದ ಅಸಂತೋಪಧೆಗೆ ದೀರ್ಘ. **ಹಲ್‌ಙ್ಯಾಭ್ಯೋ**— ಸೂತ್ರದಿಂದ ಸುಲೋಪ. ಸಕಾರಕ್ಕೆ ರುತ್ವ ವಿಸರ್ಗ.

॥ ಸಂಹಿತಾಪಾಠಃ ॥

ಅಸ್ಮಾ ಇದು ತ್ಯದನು ದಾಯ್ಯೇಷಾಮೇಕೋ ಯದ್ವವ್ನೇ ಭೂರೇರೀಶಾನಃ ।
ಪ್ರೈತಶಂ ಸೂರ್ಯೇ ಪಸ್ಪೃಧಾನಂ ಸೌವಶ್ವ್ಯೇ ಸುಷ್ವಿಮಾವದಿಂದ್ರಃ ॥ ೧೫ ॥



CC-0. Jangamwadi Math Collection. Digitized by eGangotri

॥ ಪದಪಾಠಃ ॥

ಅಸ್ಮೈ । ಇತ್ । ಊಂ ಇತಿ । ತ್ಯತ್ । ಅನು । ದಾಯಿ । ಏಷಾಂ । ಏಕಃ ।
ಯತ್ । ವವ್ನೇ । ಭೂರೇಃ । ಈಶಾನಃ ।

ಪ್ರ । ಏತಶಂ । ಸೂರ್ಯೇ । ಪಸ್ಪೃಧಾನಂ । ಸೌವಶ್ವ್ಯೇ । ಸುಷ್ವಿಂ । ಆವತ್ ।
ಇಂದ್ರಃ ॥ ೧೫ ॥

॥ ಸಾಯಣಭಾಷ್ಯಂ ॥

ಏಕ ಏಕ ಏವ ಶತ್ರೂಞ್ಜೇತುಂ ಸಮರ್ಥೋ ಭೂರೇರ್ಬಹುವಿಧಸ್ಯ ಧನಸ್ಯೇಶಾನಃ ಸ್ವಾಮೀ ಯತ್ಸ್ತೋತ್ರಂ ವವ್ನೇ ಯಯಾಚೇ ಏಷಾಂ ಸ್ತೋತೄಣಾಂ ಸಂಬಂಧಿ । ಯದ್ವಾ । ವಿಭಕ್ತಿವ್ಯತ್ಯಯಃ । ಏಭ್ಯಸ್ತ್ಯತ್ ತತ್ಪ್ರಸಿದ್ಧಂ ಸ್ತೋತ್ರಮಸ್ಮಾ ಇಂದ್ರಾಯಾನು ದಾಯಿ । ಅದಾಯೀತ್ಯರ್ಥಃ । ಉತ್ತರಾರ್ಧಸ್ಯೇಯಮಾಖ್ಯಾಯಿಕಾ । ಸ್ವಶ್ವೋ ನಾಮ ಕಶ್ಚಿದ್ರಾಜಾ । ಸ ಚ ಪುತ್ರಕಾಮಃ ಸೂರ್ಯಮುಪಾಸಾಂ ಚಕ್ರೇ । ತಸ್ಯ ಚ ಸೂರ್ಯ ಏವ ಪುತ್ರೋ ಬಭೂವ । ತೇನ ಸಹೈತಶನಾಮ್ನೋ ಮಹರ್ಷೇರ್ಯುದ್ಧಂ ಜಾತಮಿತಿ ತದೇತದಿಹೋಚ್ಯತೇ ॥ ಅಯಮಿಂದ್ರಃ ಸೌವಶ್ವ್ಯೇ ಸ್ವಶ್ವಪುತ್ರೇ ಸೂರ್ಯೇ ಪಸ್ಪೃಧಾನಂ ಸ್ಪರ್ಧಮಾನಂ ಸುಷ್ವಿಂ ಸೋಮಾನಾಮಭಿಷೋತಾರಮೇತಶಮೇತತ್ಸಂಜ್ಞಕಮೃಷಿಂ ಪ್ರಾವತ್ । ಪ್ರಾರಕ್ಷತ್ ॥ ದಾಯಿ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ । ವವ್ನೇ । ವನು ಯಾಚನೇ । ಲಿಟಿ ವ್ಯತ್ಯಯೇನೋಪಧಾಲೋಪಃ । ಪಸ್ಪೃಧಾನಂ । ಸ್ಪರ್ಧ ಸಂಘರ್ಷೇ । ಅಸ್ಮಾಲ್ಲಿಟಃ ಕಾನಚ್ । ದ್ವಿರ್ವಚನೇ ಶರ್ಪೂರ್ವಾಃ ಖಯ ಇತಿ ಪಕಾರಃ ಶಿಷ್ಯತೇ । ಧಾತ್ವಕಾರಸ್ಯ ಲೋಪೋ ರೇಫಸ್ಯ ಸಂಪ್ರಸಾರಣಂ ಚ ಪೃಷೋದರಾದಿತ್ವಾತ್ । ಚಿತ್ತ್ವಾದಂತೋದಾತ್ತತ್ವಂ । ಸೌವಶ್ವ್ಯೇ । ಸ್ವಶ್ವ ಇತಿ ಜನಪದಶಬ್ದಃ ಕ್ಷತ್ರಿಯೇ ಸಂಜ್ಞಾತ್ವೇನ ವರ್ತತೇ । ವಾ ನಾಮಧೇಯಸ್ಯ ವೃದ್ಧಸಂಜ್ಞಾ ವಕ್ತವ್ಯಾ । ಪಾ. ೧-೧-೭೩-೫ । ಇತಿ ವೃದ್ಧಸಂಜ್ಞಾಯಾಂ ವೃದ್ಧೇತ್ಕೋಸಲಾಜಾದಾಞ್ಞ್ಯಙ್ । ಪಾ. ೪-೧-೧೭೧ । ಇತ್ಯಪತ್ಯಾರ್ಥೇ ಞ್ಯಙ್ಪ್ರತ್ಯಯಃ । ನ ಯ್ವಾಭ್ಯಾಂ ಪದಾಂತಾಭ್ಯಾಂ । ಪಾ ೭-೩-೩ । ಇತಿ ವೃದ್ಧೇಃ ಪ್ರತಿಷೇಧ ಐಜಾಗಮಶ್ಚ । ಞಿತ್ತ್ವಾದಾದ್ಯುದಾತ್ತತ್ವಂ । ಸುಷ್ವಿಂ । ಷುಞ್ ಅಭಿಷವೇ । ಉತ್ಸರ್ಗಶ್ಛಂದಸಿ । ಪಾ. ೩-೨-೧೭೧-೨ । ಇತ್ಯಸ್ಮಾತ್ಕಿನ್ಪ್ರತ್ಯಯಃ । ಲಿಡ್ವದ್ಭಾವಾತ್ ದ್ವಿರ್ಭಾವಃ । ಯಣಾದೇಶಃ । ಉವಙಾದೇಶಾಭಾವಶ್ಛಾಂದಸಃ ॥

॥ ಪ್ರತಿಪದಾರ್ಥ ॥

ಏಕಃ—(ಶತ್ರುಗಳನ್ನು ಜಯಿಸುವುದರಲ್ಲಿ) ಏಕಮಾತ್ರನೂ । ಭೂರೇಃ—ನಾನಾವಿಧವಾದ ಧನಕ್ಕೆ । ಈಶಾನಃ—ಸ್ವಾಮಿಯೂ ಆದ ಇಂದ್ರನು । ಯತ್—ಯಾವ ಸ್ತೋತ್ರವನ್ನು (ಸ್ತೋತೃಗಳಿಂದ) । ವವ್ನೇ—ಅಪೇಕ್ಷಿಸಿದನೋ । ಏಷಾಂ—ಆ ಸ್ತೋತೃಗಳ ಅಥವಾ ಅವರಿಂದ । ತ್ಯತ್—ಪ್ರಸಿದ್ಧವಾದ ಆ ಸ್ತೋತ್ರವು । ಅಸ್ಮೈ ಇದು—ಆ ಇಂದ್ರನಿಗೇ । ಅನು ದಾಯಿ—ಅರ್ಪಿಸಲ್ಪಟ್ಟಿದೆ । ಇಂದ್ರಃ—ಇಂದ್ರನು । ಸೌವಶ್ವ್ಯೇ—ಸ್ವಶ್ವಪುತ್ರನಾದ । ಸೂರ್ಯೇ—ಸೂರ್ಯನೊಡನೆ । ಪಸ್ಪೃಧಾನಂ—ಹೆಣಗಾಡುತ್ತಿದ್ದ । ಏತಶಂ—ಏತಶನೆಂಬ ಋಷಿಯನ್ನು । ಪ್ರ ಅವತ್—ಚೆನ್ನಾಗಿ ಕಾಪಾಡಿದನು ॥



CC-0. Jangamwadi Math Collection. Digitized by eGangotri

॥ ಭಾವಾರ್ಥ ॥

ಶತ್ರುಗಳನ್ನು ಜಯಿಸುವುದರಲ್ಲಿ ಏಕಮಾತ್ರನೂ, ನಾನಾ ವಿಧವಾದ ಧನಕ್ಕೆ ಸ್ವಾಮಿಯೂ ಆದ ಇಂದ್ರನು ಸ್ತೋತೃಗಳಿಂದ ಯಾವ ಸ್ತೋತ್ರವನ್ನು ಅಪೇಕ್ಷಿಸಿದನೋ ಪ್ರಸಿದ್ಧವಾದ ಆ ಸ್ತೋತ್ರವು ಅವರಿಂದ ಅರ್ಪಿತವಾಗಿದೆ. ಸ್ವಶ್ವಪುತ್ರನಾದ ಸೂರ್ಯನೊಡನೆ ಹೆಣಗಾಡುತ್ತಿದ್ದ ಏತಶನೆಂಬ ಋಷಿಯನ್ನು ಇಂದ್ರನು ಚೆನ್ನಾಗಿ ಕಾಪಾಡಿದನು.

## English Translation.

He alone (is capable of subduing his enemies) and is the powerful lord of manifold riches; give unto him the hymns which he has desired for. Indra defended the pious sacrificer Etasa, when fighting Surya, the son of Swaswa.

ವಿಶೇಷ ವಿಷಯಗಳು

ಏಕಃ—ಇಲ್ಲಿ ಏಕಶಬ್ದವು ಅಸಹಾಯವಾಚಿ. ಇಂದ್ರನು ಯಾರ ಸಹಾಯವೂ ಇಲ್ಲದೆ ಒಬ್ಬನೇ ಶತ್ರುಗಳನ್ನು ಗೆಲ್ಲಲು ಸಮರ್ಥನೆಂದರ್ಥ.

ವಿಷಾಂ—ಈ ಸ್ತೋತ್ರಗಳ ಎಂದರ್ಥವಾಗುವುದಾದರೂ ಇಲ್ಲಿ ವಿಭಕ್ತಿ ವ್ಯತ್ಯಾಸದಿಂದ ತೃತೀಯಾ ವಿಭಕ್ತ್ಯರ್ಥವನ್ನು ಹೇಳಿ, ಈ ಸ್ತೋತ್ರಗಳಿಂದ ಎಂದರ್ಥಮಾಡಿದ್ದಾರೆ.

ಸೌವಶ್ವ್ಯೇ—ಸ್ವಶ್ವನೆಂಬ ರಾಜನ ಮಗನಲ್ಲಿ ಎಂದರ್ಥ. ಹಿಂದೆ ಸ್ವಶ್ವನೆಂಬ ರಾಜನು ಪುತ್ರಾಭಿಲಾಷೆಯಿಂದ ಸೂರ್ಯನನ್ನು ಕುರಿತು ತಪಸ್ಸುಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಸೂರ್ಯನೇ ಆ ರಾಜನ ಮಗನಾಗಿ ಹುಟ್ಟಿದನು. ಅವನಿಗೂ ಏತಶನೆಂಬ ಮಹರ್ಷಿಗೂ ಘೋರವಾದ ಯುದ್ಧವಾಯಿತು.

ಸುಷ್ವಿಂ—ಷುಞ್-ಅಭಿಷವೇ—ಸೋಮರಸವನ್ನು ಅಭಿಷೇಚಿಸುವವನು (ಅರ್ಪಿಸುವವನು) ಮೇಲೆ ಹೇಳಿದ ಏತಶನೆಂಬ ಮಹರ್ಷಿಯು ಸೋಮಯಾಗದಿಂದ ಇಂದ್ರನನ್ನು ತೃಪ್ತಿಪಡಿಸಿದನು. ಇಂದ್ರನು ಅವನ ತಪಸ್ಸಿಗೆ ಮೆಚ್ಚಿ ಅವನನ್ನು ಸೂರ್ಯನಿಂದ ರಕ್ಷಣೆಮಾಡಿದನು.

॥ ವ್ಯಾಕರಣಪ್ರಕ್ರಿಯಾ ॥

ದಾಯಿ—ಡುದಾಞ್ ದಾನೇ ಧಾತು. ಕರ್ಮಣಿ ಲುಙ್ ಪ್ರಥಮಪುರುಷ ಏಕವಚನದಲ್ಲಿ ತ ಪ್ರತ್ಯಯ. ಚ್ಲಿಗೆ ಚಿಣ್‌ಭಾವಕರ್ಮಣೋಃ ಎಂಬುದರಿಂದ ಚಿಣಾದೇಶ. ಚಿಣೋಲುಕ್ (ಪಾ. ಸೂ. ೬-೪-೧೦೪) ಎಂಬುದರಿಂದ ಚಿಣಿನ ಪರದಲ್ಲಿರುವ ತ ಶಬ್ದಕ್ಕೆ ಲುಕ್. ಆತೋಯುಕ್ ಚಿಣ್‌ಕೃತೋಃ (ಪಾ. ಸೂ. ೭-೩-೩೩) ಎಂಬುದರಿಂದ ಆಕಾರಕ್ಕೆ ಯುಕಾಗಮ. ಬಹುಲಂಛಂದಸ್ಯಮಾಙ್‌ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವವ್ನೇ—ವನು ಯಾಚನೇ ಧಾತು. ಲಿಟ್ ಪ್ರಥಮಪುರುಷ ಏಕವಚನದಲ್ಲಿ ಏಶಾದೇಶ. ಧಾತುವಿಗೆ ದ್ವಿತ್ವ. ಅಭ್ಯಾಸಕ್ಕೆ ಹಲಾದಿಶೇಷ. ವ್ಯತ್ಯಯದಿಂದ ನಿಮಿತ್ತವಿಲ್ಲದಿದ್ದರೂ ಉಪಧಾಲೋಪ. ಯದ್ಯೋಗವಿರುವುದರಿಂದ ನಿಘಾತಸ್ವರ ಬರುವುದಿಲ್ಲ ಪ್ರತ್ಯಯಸ್ವರದಿಂದ ಅಂತೋದಾತ್ತವಾಗುತ್ತದೆ.

ಪಸ್ಪೃಧಾನಮ್—ಸ್ಪರ್ಧ ಸಂಘರ್ಷೇ ಧಾತು. ಇದಕ್ಕೆ ಲಿಟ್ ಸ್ಥಾನದಲ್ಲಿ ಕಾನಚ್. ತನ್ನಿಮಿತ್ತವಾಗಿ ಧಾತುವಿಗೆ ದ್ವಿತ್ವ. ಆಗ ಅಭ್ಯಾಸದಲ್ಲಿ ಶರ್ಪೂರ್ವಾಃಖಯಃ (ಪಾ. ಸೂ. ೭-೪-೬೧) ಎಂಬುದರಿಂದ



CC-0. Jangamwadi Math Collection. Digitized by eGangotri

ಪಕಾರವು ಉಳಿಯುತ್ತದೆ. ಇದು ಪೃಷೋದರಾದಿಯಲ್ಲಿ ಸೇರಿರುವುದರಿಂದ ಧಾತ್ವಕಾರಕ್ಕೆ ಲೋಪವೂ ರೇಫಕ್ಕೆ ಸಂಪ್ರಸಾರಣವೂ ಪೃಷೋದರಾದೀನಿ ಯಥೋಪದಿಷ್ಟಮ್ ಎಂಬುದರಿಂದ ಸಿದ್ಧವಾಗುತ್ತವೆ. ಚಿತಃ ಎಂಬುದರಿಂದ ಅಂತೋದಾತ್ತಸ್ವರ ಬರುತ್ತದೆ.

ಸೌವಶ್ವ್ಯೇ—ಸ್ವಶ್ವಃ ಎಂಬುದು ಒಂದು ದೇಶದ ಹೆಸರು. ಇದು ಕ್ಷತ್ರಿಯಸಂಜ್ಞಾವಾಚಕವಾಗಿಯೂ ಇದೆ. ಆದುದರಿಂದ ನಾನಾಮಧೇಯಸ್ಯ ವೃದ್ಧಸಂಜ್ಞಾ ವಕ್ತವ್ಯಾ (ಪಾ. ಸೂ. ೧-೧-೭೩-೫) ಎಂಬುದರಿಂದ ಇದಕ್ಕೆ ವೃದ್ಧಸಂಜ್ಞೆ ಬರುತ್ತದೆ. ಆಗ ವೃದ್ಧೇತ್‌ಕೋಸಲಾಜಾದಾಞ್ಯಙ್ (ಪಾ. ಸೂ. ೪-೧-೧೭೧) ಎಂಬುದರಿಂದ ಸ್ವಶ್ವಸ್ಯ ಅಪತ್ಯಂ ಎಂಬರ್ಥದಲ್ಲಿ ಞ್ಯಙ್ ಪ್ರತ್ಯಯ. ಆದಿವೃದ್ಧಿ ಪ್ರಾಪ್ತವಾದರೆ ನ ಯ್ವಾಭ್ಯಾಂ ಪೂರ್ವೌತುತಾಭ್ಯಾಮೈಚ್ (ಪಾ. ಸೂ. ೭-೩-೩) ಎಂಬುದರಿಂದ ವೃದ್ಧಿಗೆ ಪ್ರತಿಷೇಧ. ವಕಾರದ ಪೂರ್ವಕ್ಕೆ ಐಚಾಗಮ. ಸೌವಶ್ವ್ಯ ಶಬ್ದವಾಗುತ್ತದೆ. ಞ್ನಿತ್ಯಾದಿರ್ನಿತ್ಯಮ್ ಎಂಬುದರಿಂದ ಆದ್ಯುದಾತ್ತವಾಗುತ್ತದೆ.

ಸುಷ್ವಿಮ್—ಷುಞ್ ಅಭಿಷವೇ ಧಾತು. ಉತ್ಸರ್ಗಶ್ಛಂದಸಿ (ಪಾ. ಸೂ. ೩-೨-೧೭೧-೨) ಎಂಬುದರಿಂದ ಇದಕ್ಕೆ ಕಿನ್ ಪ್ರತ್ಯಯ. ಇದಕ್ಕೆ ಲಿಡ್ವದ್ಭಾವವನ್ನು ಅತಿದೇಶಮಾಡಿರುವುದರಿಂದ ಧಾತುವಿಗೆ ದ್ವಿತ್ವ. ಕಿತ್ತಾದುದರಿಂದ ಗುಣ ಬರುವುದಿಲ್ಲ. ಸುಸು+ಇ ಎಂದಿರುವಾಗ ಛಾಂದಸವಾಗಿ ಉವಙಾದೇಶ ಬರುವುದಿಲ್ಲ ಯಣಾದೇಶ. ಸುಷ್ವಿ ಎಂದು ರೂಪವಾಗುತ್ತದೆ.

ಆವತ್—ಅವ ರಕ್ಷಣೇ ಧಾತು ಲಙ್ ಪ್ರಥಮಪುರುಷ ಏಕವಚನರೂಪ. ಅತಿಙಂತದ ಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ಸಂಹಿತಾಪಾಠಃ

ಏವಾ ತೇ ಹಾರಿಯೋಜನಾ ಸುವೃಕ್ತೀಂದ್ರ ಬ್ರಹ್ಮಾಣಿ ಗೋತಮಾಸೋ ಅಕ್ರನ್ ।
ಐಷು ವಿಶ್ವಪೇಶಸಂ ಧಿಯಂ ಧಾಃ ಪ್ರಾತರ್ಮಕ್ಷೂ ಧಿಯಾವಸುರ್ಜಗಮ್ಯಾತ್ ॥ ೧೬ ॥

ಪದಪಾಠಃ

ಏವ । ತೇ । ಹಾರಿಯೋಜನ । ಸುಽವೃಕ್ತಿ । ಇಂದ್ರ । ಬ್ರಹ್ಮಾಣಿ । ಗೋತಮಾಸಃ । ಅಕ್ರನ್ ।
ಆ । ಏಷು । ವಿಶ್ವಽಪೇಶಸಂ । ಧಿಯಂ । ಧಾಃ । ಪ್ರಾತಃ । ಮಕ್ಷು । ಧಿಯಾಽವಸುಃ । ಜಗಮ್ಯಾತ್ ॥ ೧೬ ॥



CC-0. Jangamwadi Math Collection. Digitized by eGangotri

|| ಸಾಯಣಭಾಷ್ಯ ||

ಹರ್ಯೋಃರಶ್ವಯೋರ್ಯೋಜನಂ ಯಸ್ಮಿನ್ರಥೇ ಸ ತಥೋಕ್ತಃ । ತಸ್ಯ ಸ್ವಾಮಿತ್ವೇನ ಸಂಬಂಧೀ ಹಾರಿಯೋಜನಃ । ಹೇ ಹಾರಿಯೋಜನೇಂದ್ರ ಗೋತಮಾಸೋ ಗೋತಮಗೋತ್ರೋತ್ಪನ್ನಾ ಋಷಯಃ ಸುವೃಕ್ತಿ ಸುಷ್ಠ್ವಾವರ್ಜಕಾನ್ಯಭಿಮುಖೀಕರಣಕುಶಲಾನಿ ಬ್ರಹ್ಮಾಣಿ ಸ್ತುತಿರೂಪಾಣಿ ಮಂತ್ರಜಾತಾನಿ ತೇ ತವೈವಾಕ್ರನ್ । ಅಕೃಷತ । ಏಷು ಸ್ತೋತ್ರೇಷು ವಿಶ್ವಪೇಶಸಂ ಬಹುವಿಧರೂಪಯುಕ್ತಂ ಧಿಯಂ ಧಾಃ । ಧಿಯಾ ಲಭ್ಯತ್ವಾದ್ಧೀರ್ಧನಮುಚ್ಯತೇ । ಯದ್ವಾ । ಧೀಶಬ್ದಃ ಕರ್ಮವಚನಃ । ಪಶ್ವಾದಿಬಹುವಿಧರೂಪಂ ಧನಮಗ್ನಿಷ್ಟೋಮಾದಿಕಂ ಬಹುವಿಧರೂಪಂ ಕರ್ಮ ವಾ ಧಾಃ । ಧೇಹಿ। ಸ್ಥಾಪಯ । ಪ್ರಾತರಿದಾನೀಮಿವ ಪರೇದ್ಯುರಪಿ ಪ್ರಾತಃಕಾಲೇ ಧಿಯಾವಸುರ್ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನ ಇಂದ್ರೋ ಮಕ್ಷು ಶೀಘ್ರಂ ಜಗಮ್ಯಾತ್ । ಅಸ್ಮದ್ರಕ್ಷಣಾರ್ಥಮಾಗಚ್ಛತು ॥ ಏವ । ನಿಪಾತಸ್ಯ ಚೇತಿ ಸಂಹಿತಾಯಾಂ ದೀರ್ಘಃ । ಸುವೃಕ್ತಿ । ಸುಪಾಂ ಸುಲುಗಿತಿ ಶಸೋ ಲುಕ್ । ಅಕ್ರನ್ । ಕರೋತೇರ್ಲುಙಿ ಮಂತ್ರೇ ಘಸಹ್ವರೇತ್ಯಾ-ದಿನಾ ಚ್ಲೇರ್ಲುಕ್ । ಅಂತಾದೇಶಃ । ತಸ್ಯ ಙಿತ್ತ್ವಾದ್ಗುಣಾಭಾವೇ ಯಣಾದೇಶಃ । ಇತಶ್ಚೇತೀಕಾರ-ಲೋಪೇ ಸಂಯೋಗಾಂತಲೋಪೇ ಚಾಡಾಗಮಃ । ಧಾಃ । ಛಂದಸಿ ಲುಙ್ಲಙ್ಲಿಟ ಇತಿ ಲೋಡರ್ಥೇ ಲುಙಿ ಗಾತಿಸ್ಥೇತಿ ಸಿಚೋ ಲುಕ್ । ಬಹುಲಂ ಛಂದಸ್ಯಮಾಙ್ಯೋಗೇಽಪೀತ್ಯಡಭಾವಃ ॥

|| ಪ್ರತಿಪದಾರ್ಥ ||

ಹಾರಿಯೋಜನ—(ರಥಕ್ಕೆ) ಕುದುರೆಗಳನ್ನು ಸೇರಿಸತಕ್ಕ । ಇಂದ್ರ—ಎಲೈ ಇಂದ್ರನೇ । ಗೋತ-ಮಾಸಃ—ಗೋತಮ ವಂಶೋತ್ಪನ್ನರಾದ ಋಷಿಗಳು । ಸುವೃಕ್ತಿ—ಒಳ್ಳೆಯ ಕಾರ್ಯಕಾರಿಯಾದ । ಬ್ರಹ್ಮಾಣಿ—ಸ್ತುತಿರೂಪಗಳಾದ ಮಂತ್ರಗಳನ್ನು । ತೇ ಏವ—ನಿನಗಾಗಿಯೇ । ಅಕ್ರನ್—ಸೃಷ್ಟಿಸಿದ್ದಾರೆ । ಏಷು—ಈ ಸ್ತೋತ್ರಗಳಲ್ಲಿ । ವಿಶ್ವಪೇಶಸಂ—ನಾನಾ ವಿಧವುಳ್ಳ । ಧಿಯಂ—ಪಶ್ವಾದಿ ಧನವನ್ನು ಅಥವಾ ಅಗ್ನಿಷ್ಟೋಮಾದಿ ಕರ್ಮವನ್ನು। ಆಧಾಃ—ಅನುಗ್ರಹಿಸಿ ಸ್ಥಾಪಿಸು । ಪ್ರಾತಃ—(ಈಗಿನಂತೆ) ಮುಂದಿನ ಪ್ರಾತಃಕಾಲದಲ್ಲಿಯೂ ಸಹ । ಧಿಯಾವಸುಃ—ಬುದ್ಧಿಯಿಂದ ಅಥವಾ ಕರ್ಮದಿಂದ (ಧನವನ್ನು ಗಳಿಸಿದ) ಇಂದ್ರನು । ಮಕ್ಷು—ಜಾಗ್ರತೆಯಾಗಿ ಜಗಮ್ಯಾತ್—(ನಮ್ಮ ರಕ್ಷಣೆಗಾಗಿ) ಬರಲಿ ॥

|| ಭಾವಾರ್ಥ ||

ಕುದುರೆಗಳನ್ನು ಯೋಜಿಸಿ ರಥವನ್ನು ಸಿದ್ಧಪಡಿಸುವ ಎಲೈ ಇಂದ್ರನೇ, ಗೋತಮವಂಶೋತ್ಪನ್ನರಾದ ಋಷಿಗಳು ಒಳ್ಳೆಯ ಕಾರ್ಯಕಾರಿಯಾದ ಸ್ತುತಿರೂಪಗಳಾದ ಮಂತ್ರಗಳನ್ನು ನಿನಗಾಗಿಯೇ ರಚಿಸಿದ್ದಾರೆ. ಈ ಋಷಿಗಳಿಗೆ ಪಶ್ವಾದಿ ನಾನಾ ವಿಧವಾದ ಧನಗಳನ್ನು ಅನುಗ್ರಹಿಸು. ಈಗಿನಂತೆ ಮುಂದಿನ ಪ್ರಾತಃಕಾಲದಲ್ಲೂ ಸಹ ತನ್ನ ಪವಿತ್ರವಾದ ಕರ್ಮಗಳಿಂದ ಧನವನ್ನುಗಳಿಸಿದ ಇಂದ್ರನು ನಮ್ಮ ರಕ್ಷಣೆಗಾಗಿ ಜಾಗ್ರತೆಯಾಗಿ ಇಲ್ಲಿಗೆ ಬರಲಿ.

## English Translation.

O Indra, harnesser of horses, the descendants of Gotama, have offered to you well-worded hymns to secure your presence ; confer upon them manifold riches ; may he (Indra) who has acquired wealth by pious deeds, come here in quickly the morning.



CC-0. Jangamwadi Math Collection. Digitized by eGangotri

॥ ವಿಶೇಷ ವಿಷಯಗಳು ॥

ಹಾರಿಯೋಜನ—ಹರ್ಯೋಃ ಅಶ್ವಯೋಃ ಯೋಜನಂ ಯಸ್ಮಿನ್ ಸಃ—ಹರಿಯೋಜನಃ—ತಸ್ಯ ಸಂಬಂಧೀ (ಸ್ವಾಮೀ) ಹಾರಿಯೋಜನಃ—ಅಶ್ವಸಹಿತವಾದ ರಥವುಳ್ಳವರು. ಅಥವಾ ಅಶ್ವರಥದಲ್ಲಿ ಸ್ವಾಮಿಯಾಗಿ ಕುಳಿತಿರುವವನು.

ಗೋತಮಾಸಃ—ಗೋತಮ ವಂಶೋತ್ಪನ್ನರಾದ ಋಷಿಗಳು.

ಸುವೃಕ್ತಿ—ಸುಷ್ಠು ಆವರ್ಜಕಾನ್ಯಭಿಮುಖೀಕರಣಕುಶಲಾನಿ—ಪ್ರಶಸ್ತವಾದ ರೀತಿಯಲ್ಲಿ ದೇವತೆಗಳನ್ನು ಅಭಿಮುಖಗೊಳಿಸುವ ಸಾಮರ್ಥ್ಯವುಳ್ಳವುಗಳು. ಇದು ಮಂತ್ರಗಳಿಗೆ ವಿಶೇಷಣ.

ಬ್ರಹ್ಮಾಣಿ—ಸ್ತುತಿರೂಪಗಳಾದ ಮಂತ್ರಸಮೂಹಗಳು.

ವಿಶ್ವಪೇಶಸಂ—ಬಹುವಿಧರೂಪೈರ್ಯುಕ್ತಂ—ನಾನಾ ವಿಧಗಳಾದ ರೂಪಗಳಿಂದ ಕೂಡಿದುದು. ಇದು ಧಿಯಂ ಪದಕ್ಕೆ ವಿಶೇಷಣವಾಗಿದೆ.

ಧಿಯಂ ಧಾಃ—ಧನವನ್ನು ಕೊಡು. ಧಿಯಾ ಲಭ್ಯತ್ವಾತ್ ಧೀಃ ಧನಮುಚ್ಯತೇ. ಯದ್ವಾ ಧೀಶಬ್ದಃ ಕರ್ಮವಚನಃ ಪಶ್ವಾದಿ ಬಹುವಿಧರೂಪಂ ಧನಂ ಅಗ್ನಿಷ್ಟೋಮಾದಿಕಂ ಬಹುವಿಧರೂಪಂ ಕರ್ಮವಾ ಎಂದು ವ್ಯಾಖ್ಯಾನಮಾಡಿ. ಧಿಯಂ ಶಬ್ದಕ್ಕೆ, ಬುದ್ಧಿಲಭ್ಯವಾದ ವಸ್ತು (ದ್ರವ್ಯ) ಅಥವಾ ಕರ್ಮವಾಚಕವಾದ ಧೀಶಬ್ದದಿಂದ ಬಹುವಿಧರೂಪವಾದ ಅಗ್ನಿಷ್ಟೋಮಾದಿ ಕರ್ಮಗಳು ಎಂದು ಎರಡು ರೀತಿಯ ಅರ್ಥವನ್ನು ವಿವರಿಸಿರುವರು.

ಧಿಯಾವಸುಃ—ಬುದ್ಧ್ಯಾ ಕರ್ಮಣಾ ವಾ ಪ್ರಾಪ್ತಧನ ಇಂದ್ರಃ—ಬುದ್ಧಿಪೂರ್ವಕವಾಗಿ ಅಥವಾ ಕರ್ಮಫಲದಿಂದ ಸಂಪೂರ್ಣವಾದ ಐಶ್ವರ್ಯವನ್ನು ಪಡೆದವನು.

ಮಕ್ಷು ಜಗಮ್ಯಾತ್—ಶೀಘ್ರಂ ಅಸ್ಮದ್ರಕ್ಷಣಾರ್ಥಮಾಗಚ್ಛೇತು—ಜಾಗ್ರತೆಯಾಗಿ ನಮ್ಮನ್ನು ರಕ್ಷಿಸಲು ಬರಲಿ.

॥ ವ್ಯಾಕರಣಪ್ರಕ್ರಿಯಾ ॥

ಏವ—ನಿಪಾತಸ್ಯ ಚ—(ಪಾ. ಸೂ. ೬-೩-೧೩೬) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

ಹಾರಿಯೋಜನ—ಆಮಂತ್ರಿತಸ್ಯ ಚ—(ಪಾ. ಸೂ. ೮-೧-೧೯) ಎಂಬುದರಿಂದ ಆಮಂತ್ರಿತನಿಘಾತಸ್ವರ ಬರುತ್ತದೆ.

ಸುವೃಕ್ತಿ—ನಪುಂಸಕದಲ್ಲಿ ಶಸಿಗೆ ಸುಪಾಂ ಸುಲುಕ್ ಎಂಬುದರಿಂದ ಲುಕ್.

ಗೋತಮಾಸಃ—ಪ್ರಥಮಾ ಜಸ್ ಪರವಾದಾಗ ಆಜ್ಜಸೇರಸುಕ್ (ಪಾ. ಸೂ. ೭-೧-೫೦) ಎಂಬುದರಿಂದ ಜಸಿಗೆ ಅಸುಕಾಗಮ.

ಅಕ್ರನ್—ಡುಕೃಞ್ ಕರಣೇ ಧಾತು. ಲುಙ್ ಪ್ರಥಮಪುರುಷ ಬಹುವಚನದಲ್ಲಿ ಝೋಂತಃ ಎಂಬುದರಿಂದ ಅಂತಾದೇಶ. ಇತಶ್ಚ ಸೂತ್ರದಿಂದ ಇಕಾರಲೋಪ. ಚ್ಲಿ ಲುಙಿ ಸೂತ್ರದಿಂದ ಪ್ರಾಪ್ತವಾದ ಚ್ಲಿಗೆ ಮಂತ್ರೇ ಘಸಹ್ವರ—(ಪಾ. ಸೂ. ೨-೪-೮೦) ಎಂಬುದರಿಂದ ಲುಕ್. ಸಾರ್ವಧಾತುಕಮಪಿತ್ ಎಂಬುದರಿಂದ ಪ್ರತ್ಯಯಕ್ಕೆ ಙಿದ್ವದ್ಭಾವವಿರುವುದರಿಂದ ಧಾತುವಿನ ಇಕಿಗೆ ತನ್ನಿಮಿತ್ತವಾಗಿ ಗುಣಬರುವುದಿಲ್ಲ. ಇಕೋಯಣಚಿ ಎಂಬುದರಿಂದ ಯಣಾದೇಶ. ಸಂಯೋಗಾಂತಸ್ಯಲೋಪಃ ಎಂಬುದರಿಂದ ಪ್ರತ್ಯಯಾಂತ ತಕಾರಕ್ಕೆ



CC-0. Jangamwadi Math Collection. Digitized by eGangotri

ಲೋಪ. ಲುಙ್ ನಿಮಿತ್ತವಾಗಿ ಅಂಗಕ್ಕೆ ಅಡಾಗಮ. ಅತಿಙಂತದಪರದಲ್ಲಿರುವುದರಿಂದ ನಿಘಾತಸ್ವರ ಬರುತ್ತದೆ.

ವಿಶ್ವಪೇಶಸಮ್—ವಿಶ್ವಾನಿ ಪೇಶಾಂಸಿ ಯಸ್ಯ ಸಃ ವಿಶ್ವಪೇಶಾಃ ಬಹುವ್ರೀಹೌ ಪ್ರಕೃತ್ಯಾ ಪೂರ್ವಪದಮ್ ಎಂಬುದರಿಂದ ಪೂರ್ವಪದಪ್ರಕೃತಿಸ್ವರ ಬರುತ್ತದೆ.

ಧಾಃ—ಡುಧಾಞ್ ಧಾರಣಪೋಷಣಯೋಃ ಧಾತು. ಛಂದಸಿ ಲುಙ್ಲಙ್ಲಿಟಃ ಎಂಬುದರಿಂದ ಲೋಡರ್ಥದಲ್ಲಿ ಲುಙ್. ಮಧ್ಯಮಪುರುಷ ಏಕವಚನದಲ್ಲಿ ಸಿಪ್ ಪ್ರತ್ಯಯ. ಇತಶ್ಚ ಎಂಬುದರಿಂದ ಅದರ ಇಕಾರಕ್ಕೆ ಲೋಪ. ಚ್ಲೇಃಸಿಚ್ ಎಂಬುದರಿಂದ ಪ್ರಾಪ್ತವಾದ ಚ್ಲಿಗೆ ಸಿಚಾದೇಶ. ಗಾತಿಸ್ಥಾಘುಪಾ—(ಪಾ.ಸೂ. ೨.೪.೭೭) ಎಂಬುದರಿಂದ ಇದಕ್ಕೆ ಘು ಸಂಜ್ಞೆ ಇರುವುದರಿಂದ ಇದಕ್ಕೆ ಬಂದ ಸಿಚಿಗೆ ಲುಕ್. ಬಹುಲಂ ಛಂದಸ್ಯಮಾಙ್ಯೋಗೇಽಪಿ ಎಂಬುದರಿಂದ ಅಡಾಗಮ ಬರುವುದಿಲ್ಲ. ಅತಿಙಂತದ ಪರದಲ್ಲಿರುವುದರಿಂದ ನಿಘಾತ ಸ್ವರ ಬರುತ್ತದೆ.

ಮಕ್ಷೂ—ಋಚಿತುನುಘ—(ಪಾ.ಸೂ. ೬-೩-೧೩೩) ಎಂಬುದರಿಂದ ಸಂಹಿತಾದಲ್ಲಿ ದೀರ್ಘ ಬರುತ್ತದೆ.

### ಅರವತ್ತೊಂದನೆಯ ಸೂಕ್ತವು ಸಮಾಪ್ತವು

ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।
ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥

ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕಶ್ರೀವೀರಬುಕ್ಕಭೂಪಾಲ-
ಸಮ್ರಾಜ್ಯಧುರಂಧರೇಣ ಸಾಯಣಾಚಾರ್ಯೇಣ ವಿರಚಿತೇ ಮಾಧವೀಯೇ
ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ
ಚತುರ್ಥೋಽಧ್ಯಾಯಃ ಸಮಾಪ್ತಃ ॥

॥ ಓಂ ತತ್ಸತ್ ॥

ಇಲ್ಲಿಗೆ ಶ್ರೀ ಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ ನಾಲ್ಕನೆಯ ಅಧ್ಯಾಯವು ಸಮಾಪ್ತಮಾದುದು

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥







CC-0. Jangamwadi Math Collection. Digitized by eGangotri

# ಪರಿಶಿಷ್ಟ.

**ಸೂಚನೆ :—**[ಋಗ್ವೇದದಲ್ಲಿ ಕಂಡುಬರುವ ನಾನಾ ದೇವತೆಗಳ ವಿಷಯದಲ್ಲಿ ಪಾಶ್ಚಾತ್ಯವಿದ್ವಾಂಸರು ನಡೆಸಿರುವ ಪರಿಶೋಧನೆಗಳ ಸಾರಾಂಶವನ್ನೂ, ಅಲ್ಲಲ್ಲಿ ಆವಶ್ಯಕವೆಂದು ಕಂಡುಬಂದ ಸ್ಥಳಗಳಲ್ಲಿ ನಮ್ಮ ಸಂಶೋಧನೆಯ ಕೆಲವು ಭಾಗಗಳನ್ನೂ ಸೇರಿಸಿ ಈ ಭಾಗವನ್ನು ಬರೆದಿರುತ್ತೇವೆ. ವೇದವನ್ನು ವಿಮರ್ಶಕದೃಷ್ಟಿಯಿಂದ ಅಭ್ಯಾಸ ಮಾಡುವವರಿಗೂ ವೇದ ವಿಷಯದಲ್ಲಿ ಆಸಕ್ತರಾದ ಇತರರಿಗೂ ಈ ಭಾಗವು ವಿಶೇಷಪ್ರಯೋಜನಕಾರಿಯೆಂದು ಹೇಳಬೇಕಾದ ಅವಶ್ಯಕತೆ ಇಲ್ಲ. ವಾಕ್ಯದ ಕೊನೆಯಲ್ಲಿ ಕೊಟ್ಟಿರುವ ಸಂಖ್ಯೆಗಳು ಕ್ರಮವಾಗಿ ಮಂಡಲ, ಸೂಕ್ತ, ಋಕ್ಕುಗಳನ್ನು ಸೂಚಿಸುವವು.]

## ॥ ಸ್ವರ್ಗಸ್ಥಾನದ ದೇವತೆಗಳು ॥

### ದ್ಯೌಃ

ದ್ಯೌ :—ನಮಗೆ ಕಣ್ಣಿಗೆ ಕಾಣಿಸುತ್ತಿರುವ ಆಕಾಶದ ಹೆಸರಿದು. ಈ ಅರ್ಥದಲ್ಲಿಯೇ ಹೆಚ್ಚಾಗಿ ಪ್ರಯೋಗವಿರುವುದು. ಐನೂರಕ್ಕಿಂತ ಹೆಚ್ಚುಸಲ ಆಕಾಶ ಎಂಬರ್ಥದಲ್ಲಿ ಇರುತ್ತದೆ. ಹಗಲು ಎಂತಲೂ ಐವತ್ತು ಸಲ ಉಪಯೋಗಿಸಿದೆ. ಆಕಾಶದ ದೇವತೆಯೆಂದು ವ್ಯಕ್ತಿತ್ವಾರೋಪಣೆ ಮಾಡಿದಾಗ, ಅದು ಸಾಧಾರಣವಾಗಿ ಪೃಥಿವಿಯೊಡನೆ ಸೇರಿ ' ದ್ಯಾವಾಪೃಥಿವೀ ' ಎಂದು ದ್ವಿವಚನಾಂತವಾಗಿಯೇ ಕಂಡುಬರುತ್ತದೆ. ಮತ್ತು ಅವರಿಬ್ಬರೂ' ಜಗತ್ತಿಗೆ ಮಾತಾಪಿತೃಗಳೆಂದು ಭಾವಿಸಲ್ಪಟ್ಟಿದಾರೆ. ಆಕಾಶದ ದೇವತೆಯನ್ನು ಹೊಗಳುವ ಸೂಕ್ತ ಒಂದಾದರೂ ಇಲ್ಲ. ಒಂದು ವೇಳೆ ಪ್ರತ್ಯೇಕ ಪ್ರಯೋಗವಿದ್ದರೂ, ಅಲ್ಲಿ ಪಿತೃತ್ವವೊಂದೇ ಅಭಿಪ್ರೇತವಾದ ಅಂಶ. ಷಷ್ಠೀವಿಭಕ್ತಿಯಲ್ಲಿಯೇ ಹೆಚ್ಚಾಗಿ, ಅಂದರೆ ೫೦ ಕಡೆ ಇದೆ. ಈ ಷಷ್ಠೀವಿಭಕ್ತಿರೂಪವಿದ್ದೆಡೆಯಲ್ಲೆಲ್ಲಾ, ಯಾವುದಾದರೊಂದು ದೇವತೆ ಇವನ ಮಗ ಅಥವಾ ಮಗಳು ಎಂದಿರುವುದು. ಮುಕ್ಕಾಲುಪಾಲು ಉಷೋದೇವತೆಯೇ ಇವನ ಮಗಳು; ಅಶ್ವಿನಿಗಳು ಇವನ ಸಂತಾನ; ಅಗ್ನಿ ಇವನ ಮಗ ಅಥವಾ ಶಿಶು; ಪರ್ಜನ್ಯ, ಸೂರ್ಯ, ಆದಿತ್ಯರು, ಮರುತ್ತಗಳು, ಮತ್ತು ಅಂಗಿರಸರು ಇವನ ಪುತ್ರರು. ಪ್ರಥಮಾವಿಭಕ್ತಿಯಲ್ಲಿ ಬರುವ ಮೂವತ್ತು ಸ್ಥಳಗಳಲ್ಲಿ, ಒಂಟಿಯಾಗಿ ಪ್ರಯೋಗ ಎಂಟೇಸಲ; ಉಳಿದ ಸ್ಥಳಗಳಲ್ಲಿ ಪೃಥಿವೀ ಅಥವಾ ಇತರ ದೇವತಾಸಹಚರಿತವಾಗಿ. ಮೂರು ಸಲತಂದೆ (೧-೯೦-೭ ; ೧-೧೬೪-೩೩ ; ೪-೧-೧೦) ; ಒಂದು ಸಲ ಇಂದ್ರನ ತಂದೆ (೪-೭೨-೩) ; ಒಂದು ಸಲ ಹೆಚ್ಚಾದ ರೇತಸ್ಸುಳ್ಳವನು. ಮತ್ತು ಅಗ್ನಿ ಜನಕ (೪-೧೭-೪) ; ವೃಷಭ (೫-೩೬-೫), ಕೆಳಮುಖವಾಗಿ ಗುಟುರು ಹಾಕುವ ಕೆಂಪು ಗೂಳಿ (೫-೫೮-೬), ಮತ್ತು ವೃತ್ರವಧೆಯನ್ನು ಅನುಮೋದಿಸಿದವನು (೬-೭೨-೩) ಎಂಬುದಾಗಿ ಮೂರು ಕಡೆ. ಚತುರ್ಥೀ ವಿಭಕ್ತಿಯಲ್ಲಿ ಎಂಟು ಸಲ ಇದೆ; ಆದರಲ್ಲಿಯೂ ಮೂರೇ ಸಲ ಪ್ರತ್ಯೇಕವಾಗಿ. ಪ್ರಖ್ಯಾತನಾದ ತಂದೆ (೧-೭೧-೫) ಶ್ರೇಷ್ಠನಾದವನು (೧-೫೪-೩) ಮತ್ತು ಉನ್ನತವಾದ ಮನೆ (೫-೪೭-೭) ಎಂತಲೂ ಇದೆ. ದ್ವಿತೀಯೆಯಲ್ಲಿರುವ ನಾಲ್ಕು ಸ್ಥಳಗಳಲ್ಲಿ ಎರಡೇ ಸಲ ಬೇರೆಯಾಗಿರುವುದು. ಒಂದು ಸಲ ಯಾವ ವಿಶೇಷಣಗಳಲ್ಲದೆಯೂ (೧-೧೭೪-೩) ಒಂದು ಸಲ ಅಗ್ನಿಯು ಅವನನ್ನು ಮನುಷ್ಯನಿಗೋಸ್ಕರ ಗರ್ಜಿಸುವಂತೆ ಮಾಡಿದನೆಂದೂ ೧-೩೧-೪) ಹೇಳಿದೆ.

ಈ ರೀತಿ, ದ್ಯೌಃ ಎಂಬುದು ದೇವತೆಗಳ ತಂದೆಯೆಂಬರ್ಥದಲ್ಲಿಯೇ ವಿಶೇಷವಾಗಿ ಉಪಯೋಗಿಸಲ್ಪಟ್ಟಿದೆ. ೧೫-೧೬ ಸಲಮಾತ್ರ ಅವನ ಪಿತೃತ್ವವು ಸ್ವತಂತ್ರವಾಗಿಯಾಗಲೀ, ಪೃಥಿವೀಜೊತೆಯಲ್ಲಿಯಾಗಲೀ ಸ್ಪಷ್ಟವಾಗಿ ಉಕ್ತವಾಗಿಲ್ಲ. ಈ ದೇವತೆಯ ಮುಖ್ಯಲಕ್ಷಣವೇ ಪಿತೃತ್ವ. ಬಹಳ ಕಡಿಮೆ ವಾಕ್ಯಗಳಲ್ಲಿ ಅವನು ಒಂದು ವೃಷಭಕ್ಕೆ ಹೋಲಿಸಲ್ಪಟ್ಟಿದ್ದಾನೆ. ಇಲ್ಲಿ ಭೂಮಿಯನ್ನು ಹದಮಾಡುವ, ಗುಟುರು ಹಾಕುವ ಪ್ರಾಣಿ. ಮತ್ತೊಂದು ಕಡೆ (೧೦-೬೮-೧೧) ಮುತ್ತುಗಳಿಂದ ಅಲಂಕೃತವಾದ ಕಪ್ಪುಕುದುರೆ. ಇದು ನಕ್ಷತ್ರರಂಜಿತವಾದ ಆಕಾಶವಿರಬೇಕು. ದ್ಯುದೇವತೆಯ ಹಸ್ತದಲ್ಲಿ (ಬಾಣ) ಅಶನಿಯಿದೆ ಎಂಬಲ್ಲಿ ಮನುಷ್ಯತ್ವಾರೋಪಣೆ ಇರುವಂತೆ



CC-0. Jangamwadi Math Collection. Digitized by eGangotri

ತೋರುತ್ತದೆ. ಮೋಡಗಳ ನಡುವೆ ನಗುತ್ತಾನೆ (೨-೪-೬) ಇದೂ ಕೂಡ ವಿದ್ಯುದ್ರಂಜಿತ ಆಕಾಶವೇ. ಇಂತಹ ಮಂತ್ರಗಳು ಎಲ್ಲೋ ಅಲ್ಲೊಂದು ಇಲ್ಲೊಂದು ಇವೆ. ಇವು ಹೊರತು ದ್ಯುದೇವತೆಯಲ್ಲಿ ಪಶು ಅಥವಾ ಮನುಷ್ಯನೆಂಬ ಆರೋಪ ಇಲ್ಲವೇ ಇಲ್ಲವೆನ್ನಬಹುದು. ಪಿತೃ (ತಂದೆ) ಎಂಬುದೇ ಮುಖ್ಯ ಅಭಿಪ್ರಾಯ. ಪೃಥಿವಿಯೇ ತಾಯಿ. ದ್ವಿವಚನಾಂತ ಪ್ರಯೋಗವೇ ಜಾಸ್ತಿ. ಪೃಥಿವೀಸಹಿತ ದ್ಯುದೇವತೆಗೆ ಇರುವಷ್ಟು ಪ್ರಾಶಸ್ತ್ಯ ಒಂಟಿಯಾದ ದ್ಯುದೇವತೆಗೆ ಇಲ್ಲ. ದ್ಯಾವಾಪೃಥಿವೀದೇವತಾಕವಾದ ಆರು ಸೂಕ್ತಗಳಿವೆ. ಇತರ ದೊಡ್ಡ ದೊಡ್ಡ ದೇವತೆಗಳಂತೆ ಇವನೂ ಒಬ್ಬ ಅಸುರ (೧-೧೩೨-೧ ; ೧-೧೩೧-೧ ; ೮-೨೦-೧೭) ; ಒಂದು ಕಡೆ ದ್ಯೌಃಪಿತಃ, ಪೃಥಿವೀಮಾತಃ ಎಂಬುದಾಗಿ ಸಂಬೋಧನೆಯೂ (೬-೫೧-೫) ಇದೆ. ಇಪ್ಪತ್ತು ಸ್ಥಳಗಳಲ್ಲಿ ಈ ಪದವು ಸ್ತ್ರೀಲಿಂಗವಾಗಿಯೂ ಪ್ರಯುಕ್ತವಾಗಿದೆ. ಪ್ರಪಂಚಕ್ಕೇ ಪಿತೃವೆಂದೂ, ಎಲ್ಲಾ ವಸ್ತುಗಳನ್ನೂ ಅಡಗಿಸಿಕೊಂಡಿರುವನೆಂದೂ ಹೇಳಿದರೆ ಅಪಾರ್ಥಕಲ್ಪಿಸಿದಂತೆ ಆಗುತ್ತದೆ. ಮತ್ತು ಇವನಿಗಿಂತ ದೊಡ್ಡದೇವತೆಯೇ ಇಲ್ಲ ಎಂತಲೂ ಹೇಳಲಾಗುವುದಿಲ್ಲ. ಆದರೆ ಇದೇ ಋಗ್ವೇದದಲ್ಲಿ ಬೇರೆ ದೇವತೆಗಳಿಗೆ ದ್ಯುದೇವತೆಗಿಂತ ಉತ್ತಮಸ್ಥಾನವಿದೆ.

ಈ ಪದವು ದಿವ್ (ಹೊಳೆಯುವುದು) ಎಂಬ ಧಾತುವಿನಿಂದ ನಿಷ್ಪನ್ನವಾದುದು. ದೇವ ಎಂಬುದರಂತೆ ಹೊಳೆಯುವ, ಶುಭ್ರವಾದ ವಸ್ತು ಎಂದರ್ಥವಾಗುತ್ತದೆ.

## ವರುಣ.

ಅತಿಶ್ರೇಷ್ಠನಾದ ದೇವತೆ, ಇಂದ್ರನಿಗೆ ಸಮಾನನು. ವರುಣ ದೇವತಾಕವಾದ ಮಂತ್ರಗಳ ಸಂಖ್ಯೆ ಬಹಳ ಕಡಿಮೆ. ಆತನನ್ನು ಮಾತ್ರ ಸ್ತುತಿಸುವ ಸೂಕ್ತಗಳು ಹನ್ನೆರಡು. ಮಂತ್ರಸಂಖ್ಯಾದೃಷ್ಟಿಯಿಂದ ನೋಡುವುದಾದರೆ ಅವನು ಮೂರನೆಯ ದರ್ಜೆಯ ದೇವತೆಯಾಗುವನು ; ಅಥವಾ ಈತನ ಜೊತೆ ದೇವತೆಯಾದ ಮಿತ್ರ ಮತ್ತು ಈತನನ್ನು ಒಟ್ಟಾಗಿ ಸ್ತುತಿಸುವ ಇಪ್ಪತ್ತುನಾಲ್ಕು ಸೂಕ್ತಗಳನ್ನು ತೆಗೆದುಕೊಂಡರೂ, ತಾರತಮ್ಯದ ಪಟ್ಟಿಯಲ್ಲಿ ಐದನೆಯ ಸ್ಥಾನ ಬರುತ್ತದೆ. ಅಶ್ವಿನೀದೇವತೆಗಳಿಗಿಂತಲೂ ಬಹಳಮಟ್ಟಿಗೆ ಕೆಳಗೂ, ಮರುತ್ತಗಳಿಗೆ ಸಮವೂ ಆದ ಸ್ಥಾನವಿದೆ. ವರುಣದೇವತಾಕವಾದ ಮಂತ್ರಗಳ ಸಂಖ್ಯೆ ವರುಣನ ನಿಜವಾದ ಸ್ಥಾನವನ್ನಾಗಲೀ ಆತನ ಶ್ರೈಷ್ಠ್ಯವನ್ನಾಗಲೀ ವ್ಯಕ್ತಪಡಿಸುವುದಿಲ್ಲ.

ವರುಣನಿಗೆ ಮಾನುಷ ದೇಹ, ಮಾನುಷ ವ್ಯಾಪಾರಗಳುಂಟು. ಆದರೆ ಭೌತಿಕ ಶರೀರ ಮತ್ತು ವ್ಯಾಪಾರಗಳಿಗಿಂತ ಹೆಚ್ಚಾಗಿ ಆತನ ನೈತಿಕ ವ್ಯಾಪಾರಗಳ ಕಡೆಗೇ ಗಮನವಿದ್ದಂತೆ ತೋರುತ್ತದೆ. ಅವನ ದೇಹ ಮತ್ತು ಸಲಕರಣೆಗಳ ವಿವರಣೆ ಬಹಳ ಕಡಿಮೆ ; ಆತನ ಕಾರ್ಯಗಳ ವಿವರಣೆಯೇ ಹೆಚ್ಚು. ಅವನಿಗೆ ಮುಖ, ಕಣ್ಣು, ತೋಳುಗಳು ಕೈಗಳು ಮತ್ತು ಪಾದಗಳಿವೆ. ಅವನು ಕೈಗಳನ್ನಾಡಿಸುತ್ತಾನೆ ; ರಥನಡೆಯಿಸುತ್ತಾನೆ ; ಕುಳಿತುಕೊಳ್ಳುತ್ತಾನೆ ; ತಿನ್ನುತ್ತಾನೆ ಮತ್ತು ಪಾನಮಾಡುತ್ತಾನೆ. ವರುಣನ ಮುಖ (ಅನೀಕಂ) ವನ್ನು ಅಗ್ನಿಯ ಮುಖವೆಂದೇ ಭಾವಿಸಿದೆ (೭-೮೮-೨ ; ಮತ್ತು ೭-೮೭-೬ ನ್ನು ಹೋಲಿಸಿ) ಮಿತ್ರ ವರುಣರಿಗೆ ಸೂರ್ಯನೇ ನೇತ್ರ (೧-೧೧೫-೧ ; ೬-೫೧-೧ ; ೭-೬೧-೧ ; ೭-೬೩-೧ ; ೧೦-೩೭-೧) ಸೂರ್ಯನು ಇವರಿಗೆ ನೇತ್ರಪ್ರಾಯನೆಂಬ ವಿಷಯವು ಮಿತ್ರಾವರುಣದೇವತಾಕವಾದ ಸೂಕ್ತಗಳ ಮೊದಲನೆಯ ಮಂತ್ರದಲ್ಲಿಯೇ ಇರುವುದರಿಂದ, ಮಿತ್ರಾವರುಣರ ಪ್ರಸ್ತಾಪ ಬಂದಾಗಲೆಲ್ಲಾ, ಮೊದಲು ಗೋಚರವಾಗುವುದೇ ಈ ಅಂಶವೆಂದು ತೋರುತ್ತದೆ. ಸೂರ್ಯದೇವತಾಕವಾದ ಸೂಕ್ತವೊಂದರಲ್ಲಿ (೧-೫೦-೬) ವರುಣನು ತನ್ನ ನೇತ್ರದಿಂದ ಮಾನವರನ್ನು ವೀಕ್ಷಿಸುತ್ತಾನೆ ಎನ್ನುವಾಗ, ಆ ನೇತ್ರವು ಸೂರ್ಯನೇ ಇರಬೇಕು. ಅರ್ಯಮ, ಮಿತ್ರ ಮತ್ತು ವರುಣರು ಸೂರ್ಯನೇತ್ರರು (೭-೬೬-೧೦). ಈ ವಿಶೇಷಣವು ಎಲ್ಲಾ ದೇವತೆಗಳಿಗೂ ಉಪಯೋಗಿಸಿದೆ. ವರುಣನು ದೂರ



CC-0. Jangamwadi Math Collection. Digitized by eGangotri

ದೃಷ್ಟಿಯುಳ್ಳವನು (೧-೨೫-೫ ರಿಂದ ೧೬ ; ೮-೯೦-೨) ಮತ್ತು ಸಹಸ್ರಾಕ್ಷನು (೭-೩೪-೧೦) ಮಿತ್ರ ಮತ್ತು ವರುಣರು ತಮ್ಮ ತೋಳುಗಳನ್ನು ವಿಸ್ತರಿಸಿ (೫-೬೪-೨ ; ೭-೬೨-೫) ಸೂರ್ಯನ ಕಿರಣಗಳನ್ನೇ ತೋಳುಗಳನ್ನಾಗಿ ಮಾಡಿಕೊಂಡು ರಥವನ್ನು ಓಡಿಸುತ್ತಾರೆ. ಸವಿತೃ ಮತ್ತು ತ್ವಷ್ಟೃಗಳಂತೆ ಅವರೂ ಸುಂದರವಾದ ಹಸ್ತಗಳುಳ್ಳವರು (ಸುಪಾಣೀ). ಮಿತ್ರಾ ವರುಣರು ತಮ್ಮ ಪಾದಗಳಿಂದ ಶೀಘ್ರವಾಗಿ ಹೋಗುತ್ತಾರೆ (೫-೬೪-೭) ಮತ್ತು ವರುಣನು ದುಷ್ಕೃತ್ಯಗಳನ್ನು ಹೊಳೆಯುವ ಪಾದಗಳಿಂದ ತುಳಿಯುತ್ತಾನೆ (೮-೪೧-೮). ಅವನು ಯಾಗಶಾಲೆಯಲ್ಲಿ ಹರಡಿರುವ ದರ್ಭೆಗಳ ಮೇಲೆ ಕುಳಿತು (೧-೨೬-೪ ; ೫-೭೨-೨). ಮಿತ್ರನೊಡನೆ, ಇತರ ದೇವತೆಗಳಂತೆ ಸೋಮಪಾನ ಮಾಡುತ್ತಾನೆ (೪-೪೧-೩ ಮುಂತಾದುವು). ವರುಣನು ಸುವರ್ಣಮಯವಾದ ಮೇಲುಹೊದಿಕೆ ಅಥವಾ ನಿಲುವಂಗಿಯನ್ನೂ (ದ್ರಾಪಿ). ಮತ್ತು ಹೊಳೆಯುವ ಉಡುಪನ್ನೂ ಧರಿಸುತ್ತಾನೆ (೧-೨೫-೧೩). ತುಪ್ಪದಿಂದ ಮಾಡಿದ, ಹೊಳೆಯುವ ಉಡುಪುಳ್ಳವನೆಂದೂ ಕೆಲವು ಕಡೆ (೫-೬೨-೪ ; ೭-೬೪-೧) ಇರುವುದು, ಯಜ್ಞದಲ್ಲಿ ಮಾಡುವ ಆಜ್ಯ ಹೋಮಕ್ಕೇ ಅನ್ವಯಿಸಬೇಕು. ಅವರಿಬ್ಬರೂ ಹಾಕಿಕೊಂಡಿರುವ 'ಥಳಥಳಿಸುವ ಬಟ್ಟೆಗಳೂ' ಇದೇ ಅರ್ಥದಲ್ಲಿರಬೇಕು (೧-೧೫೨-೧) ಶತಪಥ ಬ್ರಾಹ್ಮಣದಲ್ಲೊಂದು ಸ್ಥಳದಲ್ಲಿ ಮಾತ್ರ (೧೩-೩-೬-೫) ವರುಣನನ್ನು ಸುಂದರನೂ, ಬೋಳಾಗಿರುವ ತಲೆಯುಳ್ಳವನೂ, ಹಳದಿಯ ಕಣ್ಣುಳ್ಳವನೂ ಆದ ಮುದುಕನೆಂದು ಚಿತ್ರಿಸಿದೆ. ಆತನ ಸಲಕರಣೆಗಳಲ್ಲಿ ಬಹಳ ಮುಖ್ಯವಾದುದು ಅವನ ರಥ. ಅದು ಸೂರ್ಯನಂತೆ ಕಾಂತಿಯುಕ್ತವಾದುದು (೧-೧೨೨-೧೫), ಆಸನ ಮತ್ತು ಚಾಟಿಗಳುಳ್ಳದ್ದು (೫-೬೨-೭) ಮತ್ತು ದೃಢವಾಗಿ ಹೂಡಿರುವ ಕುದುರೆಗಳು ಅದನ್ನು ಎಳೆಯುತ್ತವೆ. (೫-೬೨-೪). ಮಿತ್ರ ಮತ್ತು ವರುಣರು ಆಕಾಶದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ರಥಾರೋಹಣ ಮಾಡುತ್ತಾರೆ (೫-೬೩-೧). ಆ ರಥವನ್ನು ಭೂಮಿಯಮೇಲೆ ನೋಡಬೇಕೆಂಬ ಹಂಬಲ, ಕವಿಗೆ (೫-೬೭-೨) ಇರುವುದು.

ಮಿತ್ರ ಮತ್ತು ವರುಣರ ವಾಸಗೃಹವು ಸುವರ್ಣಮಯವಾದುದು. ಮತ್ತು ಮೇಲು ಲೋಕದಲ್ಲಿದೆ (೫-೬೭-೨ ; ೧-೧೩೬-೨) ಮತ್ತು ವರುಣನು ತನ್ನ ಪ್ರಾಸಾದದಲ್ಲಿ ಕುಳಿತು, ಪ್ರಪಂಚದಲ್ಲಿ ನಡೆಯುವದನ್ನೆಲ್ಲಾ ನೋಡುತ್ತಾನೆ (೧-೨೫-೧೦ ಮತ್ತು ೧೧) ವರುಣನ ಮತ್ತು ಮಿತ್ರನ ಆಸನವು (ಸದಸ್) ದೊಡ್ಡದು, ಬಹಳ ಎತ್ತರವಾದುದು, ಸಹಸ್ರ ಸ್ತಂಭಗಳನ್ನಾಶ್ರಯಿಸಿ, ದೃಢವಾಗಿದೆ. (೫-೬೮-೫ ; ೨-೪೧-೫) ಮತ್ತು ಅವರ ಮನೆಗೆ ಸಹಸ್ರದ್ವಾರಗಳಿವೆ (೭-೮೮-೫) ಸರ್ವದರ್ಶಿಯಾದ ಸೂರ್ಯನು ತನ್ನ ವಾಸಸ್ಥಾನದಿಂದ ಹೊರಟು, ಮಿತ್ರ ಮತ್ತು ವರುಣರ ಮನೆಗೆ, ಮನುಷ್ಯರ ಕೆಲಸಗಳನ್ನು ತಿಳಿಸಲು, ಹೋಗುತ್ತಾನೆ (೭-೬೦-೧ ಮತ್ತು ೩); ಮತ್ತು ಅವರ ಪ್ರಿಯವಾದ ಮನೆಯನ್ನು ಪ್ರವೇಶಿಸುತ್ತಾನೆ (೧-೧೫೨-೪). ಅತ್ಯುನ್ನತವಾದ ಸ್ವರ್ಗಲೋಕದಲ್ಲೇ, ಪಿತೃಗಳು ವರುಣನನ್ನು ಸಂದರ್ಶಿಸುವುದು (೧೦-೧೪-೮). ಶತಪಥಬ್ರಾಹ್ಮಣದಲ್ಲಿ, ವರುಣನು ಜಗತ್ತಿಗೇ ಒಡೆಯ, ಆಕಾಶದ ಮಧ್ಯದಲ್ಲಿ ಕುಳಿತಿದ್ದಾನೆ, ಮತ್ತು ಅಲ್ಲಿಂದ ತನ್ನ ಸುತ್ತಲೂ ಇರುವ ಶಿಕ್ಷೆ ವಿಧಿಸುವ ಪ್ರದೇಶಗಳನ್ನು ಪರಿಶೀಲಿಸುತ್ತಾನೆ ಎಂಬ ವಿವರಣೆ ಇದೆ (೧೧-೬-೧).

ಕೆಲವು ಸ್ಥಳಗಳಲ್ಲಿ ವರುಣನಿಗೆ ಗೂಢಚಾರರಿದಾರೆಂದು ಹೇಳಿದೆ. ಅವರು ಅವನ ಸುತ್ತಲೂ ಕುಳಿತಿದ್ದಾರೆ (೧-೨೪-೧೩). ಅವರು ಸ್ವರ್ಗ ಮತ್ತು ಭೂಲೋಕಗಳೆರಡನ್ನೂ ನೋಡುತ್ತಾರೆ; ಯಾಗಗಳ ವಿಚಾರವನ್ನು ಚೆನ್ನಾಗಿ ತಿಳಿದ ಇವರು ಸ್ತುತಿಪ್ರೇರಕರಾಗುತ್ತಾರೆ; (೭-೮೭-೩). ಮಿತ್ರ ಮತ್ತು ವರುಣರ ಗೂಢಚಾರರು ಪ್ರತ್ಯೇಕವಾಗಿ ಮನೆಗಳನ್ನು ಪ್ರವೇಶಿಸುತ್ತಾರೆ (೭-೬೧-೩), ಮೋಸಹೋಗುವುದಿಲ್ಲ, ಬುದ್ಧಿವಂತರು (೬-೬೭-೫) ಅಥರ್ವವೇದದಲ್ಲಿ (ಅ. ವೇ. [illegible]), ವರುಣನ ಚಾರರು ಸ್ವರ್ಗದಿಂದಿಳಿದು ಬಂದು, ಪ್ರಪಂಚವನ್ನೆಲ್ಲಾ



CC-0. Jangamwadi Math Collection. Digitized by eGangotri

ಸುತ್ತಿ, ಸಾವಿರಾರು ಕಣ್ಣುಗಳಿಂದ ನೋಡುತ್ತಾರೆ ಎಂದಿದೆ. ಇಲ್ಲಿ ಚಾರರೆಂದರೆ ನಕ್ಷತ್ರಗಳೇ ಇರಬೇಕು. ಆದರೆ ಋಗ್ವೇದದಲ್ಲಿ ನಕ್ಷತ್ರಗಳು ವರುಣಾದಿ ದೇವತೆಗಳ ಚಾರರಾಗಿ ಅವರಿಗೆ ಪ್ರಪಂಚದ ವಿದ್ಯಮಾನಗಳನ್ನು ತಿಳಿಸುತ್ತಾರೆ ಎಂಬುದಕ್ಕೆ ಆಧಾರವಿಲ್ಲ. ಪ್ರಾಯಶಃ ಲೌಕಿಕ ರಾಜರುಗಳಂತೆ, ಇವರಿಗೂ ಚಾರರುಂಟೆಂದು ವರ್ಣನೆಯಿರಬಹುದು. ಅಥವಾ, ಚಾರರು ಮಿತ್ರಾವರಣರಿಗೆ ಮಾತ್ರವಲ್ಲ; ಅಗ್ನಿ (೪-೪-೩) ಸೋಮ (೯-೭೩-೪ ಮತ್ತು ೭) ಇಂದ್ರನೊಡನೆ ಯುದ್ಧಮಾಡಿದ ರಾಕ್ಷಸರು (೧-೩೩-೮) ಮತ್ತು ಇತರ ದೇವತೆಗಳು, ಇವರಿಗೆಲ್ಲಾ (೧೦-೧೦-೮)ಚಾರರಿದ್ದಾರೆ. ಆದಿತ್ಯರು ಗೂಢಚಾರರಂತೆ, ಎತ್ತರವಾದ ಪ್ರದೇಶದಿಂದ ನೋಡುತ್ತಾರೆ (೮-೪೭-೧೧) ಎಂದಿದೆ. ವರುಣನ, 'ಬಂಗಾರದ ರೆಕ್ಕೆಗಳುಳ್ಳ ದೂತನು' (೧೦-೧೨೩-೬) ಸೂರ್ಯನೇ ಇರಬೇಕು.

ವರುಣನು ಒಂಟಿಯಾಗಿ ಅಥವಾ ಮಿತ್ರಸಹಿತನಾಗಿ, ಯಮ ಮತ್ತು ಇತರ ದೇವತೆಗಳಂತೆ ಅನೇಕ ಕಡೆ ರಾಜನೆಂದು ಕರೆಯಲ್ಪಟ್ಟಿದಾನೆ. (೧-೨೪-೭, ೮ ಇತ್ಯಾದಿ). ಅವನು, ದೇವತೆಗಳು ಮತ್ತು ಮನುಷ್ಯರು ಎಲ್ಲರಿಗೂ ರಾಜನು (೧೦-೧೩೨-೪; ೨-೨೭-೧೦); ಇಡೀ ಜಗತ್ತಿಗೂ (೫-೮೫-೩) ಮತ್ತು ಸಕಲ ಚರಾಚರ ವಸ್ತುಗಳಿಗೂ (೭-೮೭-೬) ರಾಜನು. ಸಾಮಾನ್ಯವಾಗಿ ಇಂದ್ರನು ಮಾತ್ರ ಸ್ವಾವಲಂಬಿಯೊದ ರಾಜನೆಂಬ ವರ್ಣನೆ ಇದೆ. ಆದರೆ ವರುಣನೂ ಸ್ವಾವಲಂಬಿಯು (೨-೨೮-೧). ರಾಜನೆನ್ನುವುದಕ್ಕಿಂತ ಹೆಚ್ಚು ಸಂದರ್ಭಗಳಲ್ಲಿ, ವರುಣ ಅಥವಾ ಮಿತ್ರಾವರುಣರು ಸಂರಾಟ್ ಎಂದು ಕರೆಯಲ್ಪಟ್ಟಿದಾರೆ. ಈ ವಿಶೇಷಣವು ಅಗ್ನಿಗೂ ಕಂಡು ಬರುತ್ತದೆ. ಆದರೆ ಹೆಚ್ಚಾಗಿ ಇದು ಇಂದ್ರನಿಗೇ ಸಲ್ಲತಕ್ಕದ್ದು. ಇಂದ್ರನ ಎರಡರಷ್ಟು ಸಲ, ವರುಣ ಅಥವಾ ಮಿತ್ರಾ ವರುಣರಿಗೆ ಸಂರಾಟ್ ಎಂಬ ಪ್ರಯೋಗವಿದೆ. ಇಂದ್ರ ದೇವತಾಕವಾದ ಪ್ರತಿ ಎಂಟು ಹತ್ತು ಸೂಕ್ತಗಳಿಗೆ, ವರುಣ ದೇವತಾಕವಾದ ಸೂಕ್ತವಿರುವುದು ಒಂದೇ ಎಂದಮೇಲೆ, ಈ ವಿಶೇಷಣವು ವರುಣನಿಗೇ ಸಲ್ಲತಕ್ಕದ್ದೆಂದು ಹೇಳಬಹುದು.

'ಕ್ಷತ್ರ' ನೆಂಬ ವಿಶೇಷಣವು ಸಾಧಾರಣವಾಗಿ ಮಿತ್ರನಿಂದೊಡಗೂಡಿಯೂ, ಎರಡುಸಲ ಆರ್ಯಮನ ಜೊತೆಯಲ್ಲಿಯೂ, ವರುಣನಿಗೇ ಅನ್ವಯಿಸುತ್ತದೆ. ಇದಲ್ಲದೆ, ಅಗ್ನಿ ಬೃಹಸ್ಪತಿ ಮತ್ತು ಅಶ್ವನೀದೇವತೆಗಳಿಗೆ, ಒಂದೊಂದು ಸಲ ಮಾತ್ರ ಉಪಯೋಗಿಸಿರುವುದು ಕಂಡು ಬರುತ್ತದೆ. ಇದೇರೀತಿ, (ಕ್ಷತ್ರಿಯ) 'ಆಳುವವನು' ಎಂಬುದು ಬರುವ ಐದು ಸಂದರ್ಭಗಳಲ್ಲಿ, ನಾಲ್ಕುಸಲ ವರುಣ ಅಥವಾ ಆದಿತ್ಯರಿಗೂ, ಒಂದೇ ಒಂದು ಸಲ ಇತರ ದೇವತೆಗಳಿಗೂ ಹೇಳಿದೆ. 'ಅಸುರ' ಎಂಬುದು, ವರುಣ ಅಥವಾ ಮಿತ್ರಾ ವರುಣರಿಗೇ ಇಂದ್ರ ಅಥವಾ ಅಗ್ನಿಗಿಂತ ಹೆಚ್ಚುಸಲ, ಉಪಯೋಗಿಸಿರುವುದು. ವರುಣದೇವತಾಕ ಸೂಕ್ತಗಳ ಅಲ್ಪಸಂಖ್ಯೆಯನ್ನು ಗಣನೆಗೆ ತಂದುಕೊಂಡರೆ, ಅಸುರನೆಂಬ ವಿಶೇಷಣವೂ ವರುಣನಿಗೇ ಹೆಚ್ಚಾಗಿ ಅನ್ವಯಿಸುವುದೆನ್ನಬೇಕು. ಇವರನ್ನು ದೇವತೆಗಳಲ್ಲಿ ರಹಸ್ಯ ಪ್ರಕೃತಿಯುವರು, ಪೂಜ್ಯರು (ಅಸುರಾಃ ಆರ್ಯಾಃ) ಎಂದು ಕರೆದಿದೆ (೭-೬೫-೨).

ಮಿತ್ರ ಮತ್ತು ವರುಣರ ದೈವಿಕಶಕ್ತಿಯನ್ನು 'ಮಾಯಾ' ಎಂಬ ಪದದಿಂದ ವರ್ಣಿಸಿದೆ ಈ ದೇವತೆಗಳಿಗೆ ಅನ್ವಯಿಸಿದರೆ ಒಳ್ಳೆಯದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ, ರಾಕ್ಷಸರಿಗೆ ಅನ್ವಯಿಸುವ ಸಂದರ್ಭದಲ್ಲಿ ಅದೇ ಪದಕ್ಕೆ ಕೆಟ್ಟದ್ದನ್ನು ಮಾಡಲು ಅವರಿಗಿರುವ ಗೂಢವಾದ ಶಕ್ತಿ ಎಂತಲೂ ಅರ್ಥ. ಒಳ್ಳೆಯ ಅರ್ಥದಲ್ಲಿ ಮಿತ್ರಾ ವರುಣರಿಗೆ ಈ ಪದವು ಸಲ್ಲುತ್ತದೆ. ಕೆಟ್ಟ ಅರ್ಥದಲ್ಲಿ ರಾಕ್ಷಸರಿಗೆ ಅನ್ವಯಿಸುತ್ತದೆ. ಇದೇರೀತಿ 'ಅಸುರ' ಎಂಬ ಪದವೂ 'ಸಾಮಾನ್ಯರಿಗೆ ತಿಳಿಯಲಸಾಧ್ಯನು' ಎಂಬರ್ಥದಲ್ಲಿ ಶ್ರೇಷ್ಠರಾದ ದೇವತೆಗಳಿಗೂ, 'ಸುರರಲ್ಲದವರು' ಎಂಬರ್ಥದಲ್ಲಿ ರಾಕ್ಷಸರಿಗೂ ಹೊಂದುತ್ತದೆ. ತನ್ನಲ್ಲಿ ನಿಗೂಢ



CC-0. Jangamwadi Math Collection. Digitized by eGangotri

ವಾದ ಈ ಮಾಯಾಶಕ್ತಿಯಿಂದ ವರುಣನು ವಾಯುಮಂಡಲದಲ್ಲಿ ನಿಂತು, ಅಳತೆ ಕಡ್ಡಿಯಿಂದ ಅಳೆಯುವಂತೆ, ಸೂರ್ಯನಿಂದ ಭೂಮಿಯನ್ನು ಅಳೆಯುತ್ತಾನೆ. (೫-೮೫-೫); ಮಿತ್ರ ಮತ್ತು ವರುಣರು ಉಷಸ್ಸನ್ನು ಕಳುಹಿಸುತ್ತಾರೆ (೩-೬೧-೭); ಸೂರ್ಯನು ಅಂತರಿಕ್ಷವನ್ನು ದಾಟುವಂತೆ ಮಾಡಿ, ಅವನನ್ನು ಮಳೆ ಮೋಡಗಳಿಂದ ಮುಸುಕಾಗುವಂತೆ ಮಾಡುತ್ತಾರೆ, ಆಗ ಮಧುಮಿಶ್ರಿತವಾದ (ಸಿಹಿಯಾದ) ಹನಿಗಳು ಉದುರುತ್ತವೆ. (೫-೬೩-೪); ಆಕಾಶವು ಮಳೆಗರೆಯುವಂತೆ ಮಾಡುತ್ತಾರೆ; ಮತ್ತು ಅಸುರನ (ದ್ಯುದೇವತೆ ಅಥವಾ ಪರ್ಜನ್ಯನ) ಅಡಗಿದ ಬಲದಿಂದ ಈ ಮೇಲೆ ಹೇಳಿದ ಕಾರ್ಯಗಳೆಲ್ಲವೂ ನಡೆಯುವಂತೆ ಮಾಡುತ್ತಾರೆ. ಆದ್ದರಿಂದ ಈ 'ಮಾಯೀ' ಎಂಬ ಪದವು ದೇವತೆಗಳಲ್ಲಿ ಮುಖ್ಯವಾಗಿ ವರುಣನಿಗೇ ಹೇಳಿದೆ. (೬-೪೮-೧೪ ; ೭-೨೮-೪ ; ೧೦-೯೯-೧೦ ; ೧೦-೧೪೭-೫)

ಇಂದ್ರನ ಸಂಬಂಧವಾದ ಕಥೆಗಳು ಅನೇಕ ಇವೆ. ಆದರೆ ವರುಣನ ವಿಷಯದಲ್ಲಿ ಇದಕ್ಕೆ ತೀರಾ ವಿರುದ್ಧವಾಗಿದೆ. ಒಂದಾದರೂ ಕಥೆಗಳಿಲ್ಲ. ಭೌತಿಕ ಮತ್ತು ನೈತಿಕ ವಿಧಿಗಳ ನಿಯಾಮಕನೆಂದು ಬಹಳವಾಗಿ ಹೊಗಳಿದೆ. ಪ್ರಕೃತಿ ನಿಯಮಗಳನ್ನು ವಿಧಿಸುವವನು ವರುಣನು. ಅವನೇ ಭೂಮಿ ಮತ್ತು ಸ್ವರ್ಗಗಳನ್ನು ಸ್ಥಾಪಿಸಿದನು. ಮತ್ತು ಎಲ್ಲಾ ಲೋಕಗಳಲ್ಲಿಯೂ ವಾಸಿಸುತ್ತಾನೆ (೮-೪೨-೧) ಮೂರು ಊರ್ಧ್ವಲೋಕಗಳು ಮತ್ತು ಮೂರು ಭೂಲೋಕಗಳು ಅವನಲ್ಲಿವೆ (೭-೮೭-೫) ವರುಣ ಮತ್ತು ಮಿತ್ರರು ಪ್ರಪಂಚವೆಲ್ಲವನ್ನೂ ಆಳುತ್ತಾರೆ (೫-೬೩-೭) ಅಥವಾ ಎರಡು ಲೋಕಗಳನ್ನು ಸುತ್ತುವರೆಯುತ್ತಾರೆ (೭-೬೧-೪). ಅವರೇ ಸಮಸ್ತ ಜಗತ್ತಿಗೂ ರಕ್ಷಕರು (೨-೨೭-೪ ಇತ್ಯಾದಿ) ವರುಣನ ಅಪ್ಪಣೆಯಿಂದಲೇ ಸ್ವರ್ಗ ಮತ್ತು ಭೂಮಿಗಳನ್ನು ಬೇರೆ ಬೇರೆ ಇಟ್ಟಿರುವುದು. (೬-೭೦-೧ ; ೭-೮೬-೧ ; ೮-೪೧-೧೦) ಮಿತ್ರನ ಸಹಾಯದಿಂದ, ವರುಣನು ಸ್ವರ್ಗ ಭೂಮಿಗಳಿಗೆ (೫-೬೨-೩) ಅಥವಾ ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ಆಧಾರಭೂತನಾಗಿದ್ದಾನೆ. (೫-೬೯-೧ ಮತ್ತು ೪) ಆಕಾಶದಲ್ಲಿ ಬಂಗಾರದ ಚೆಂಡು (ಸೂರ್ಯನು) ಪ್ರಕಾಶಿಸುವಂತೆ ಮಾಡಿದ್ದಾನೆ (೭-೮೭-೫). ಅವನು ಉದಕದಲ್ಲಿ ಅಗ್ನಿಯನ್ನೂ, ಆಕಾಶದಲ್ಲಿ ಸೂರ್ಯನನ್ನೂ, ಕಲ್ಲಿನಮೇಲೆ ಸೋಮವನ್ನೂ-ಇಟ್ಟಿದ್ದಾನೆ (೫-೮೫-೨). ಸೂರ್ಯನಿಗೋಸ್ಕರ ಅಗಲವಾದ ದಾರಿಯನ್ನು ಮಾಡಿದ್ದಾನೆ. (೧-೨೪-೮ ; ೭-೮೭-೧) ವರುಣ, ಮಿತ್ರ ಮತ್ತು ಅರ್ಯಮರು ಸೂರ್ಯನಿಗೋಸ್ಕರ ದಾರಿಯನ್ನು ಬಿಡಿಸುತ್ತಾರೆ(೭-೬೦-೪). ಸೂರ್ಯನ ಅಶ್ವಗಳು ಓಡುವ ಸ್ಥಳಗಳಲ್ಲೆಲ್ಲಾ, ಮಿತ್ರ ಮತ್ತು ವರುಣರ ಅಧಿಕಾರವು ಸ್ಥಾಪಿತವಾಗುತ್ತದೆ(೫-೬೨-೧). ಆಕಾಶದಲ್ಲಿ ಶಬ್ದಮಾಡುತ್ತಾ ಬೀಸುವ ಗಾಳಿಯೇ ವರುಣನ ಉಸಿರು (೭-೮೭-೨).

ವರುಣನ ಅಪ್ಪಣೆಗಳಿಂದಲೇ (ವ್ರತಾನಿ), ಚಂದ್ರನು ರಾತ್ರಿಯವೇಳೆ ಪ್ರಕಾಶಿಸುತ್ತಾನೆ ಮತ್ತು ಅಂತ
ರಿಕ್ಷದಲ್ಲಿ ಬಹಳ ಮೇಲೆ ಇರುವ ನಕ್ಷತ್ರಗಳು ರಾತ್ರಿ ಕಾಲದಲ್ಲಿ ಮಾತ್ರ ಕಾಣಿಸಿಕೊಂಡು, ಹಗಲು ಮರೆಯಾಗುತ್ತವೆ.
(೧-೨೪-೧೦). ವರುಣನು ರಾತ್ರಿಗಳನ್ನು ಆಲಂಗಿಸಿಕೊಳ್ಳುತ್ತಾನೆ (ಪರಿಷಸ್ವಜೇ) ; ತನ್ನ ಗೂಢವಾದ ಶಕ್ತಿ
ಯಿಂದಲೇ, ಪ್ರಾತಃಕಾಲ ಅಥವಾ ಹಗಲು (ಉಸ್ರಾಃ) ಆಗುವಂತೆ ಮಾಡುತ್ತಾನೆ (೮-೪೧-೩) ಇದರಿಂದ
ವರುಣನಿಗೂ ರಾತ್ರಿಗೂ ಇರುವ ಸಂಬಂಧವು, ಅವನಿಗೂ ಹಗಲಿಗೂ ಇರುವುದಕ್ಕಿಂತ ಹೆಚ್ಚು ಸಮೀಪ
ವಾದುದೆಂದು ಸೂಚಿತವಾಗುವುದಿಲ್ಲ. ನಿಜವಾಗಿ ನೋಡಿದರೆ ವರುಣನ ಜೊತೆಯಲ್ಲಿ ಯಾವಾಗಲೂ ಇರುವವನು
ಸೂರ್ಯನೇ ಹೊರತು, ರಾತ್ರಿ ಅಥವಾ ಚಂದ್ರರಲ್ಲ. ಒಟ್ಟಿನಲ್ಲಿ ವರುಣನೇ ಹಗಲಿನ ಬೆಳಕಿಗೂ ಮತ್ತು ರಾತ್ರಿಯ
ಬೆಳಕಿಗೂ ನಿಯಾಮಕನು. ಆದರೆ ಸೂರ್ಯನು (ಮಿತ್ರನು) ಹಗಲಿನ ಬೆಳಕಿಗೆ ಮಾತ್ರ ನಿಯಾಮಕನು.

ಬ್ರಾಹ್ಮಣಗಳಲ್ಲಿ, ವರುಣನಿಗೂ ರಾತ್ರಿಗೂ ಅಥವಾ ರಾತ್ರಿಯ ಕಾಲದ ಆಕಾಶಕ್ಕೂ ವಿಶೇಷ ಸಂಬಂಧ
ಹೇಳಿದೆ. ಮಿತ್ರನು ಹಗಲನ್ನೂ, ವರುಣನು ರಾತ್ರಿಯನ್ನೂ ಸೃಜಿಸಿದನು (ತೈ. ಸಂ. ೬-೪-೮-೩); ಹಗಲು



CC-0. Jangamwadi Math Collection. Digitized by eGangotri

ಮಿತ್ರನಿಗೂ, ರಾತ್ರಿ ವರುಣನಿಗೂ ಸೇರಿದುದು (ತೈ. ಸಂ.೨-೧-೭-೪) ಶತಪಥಬ್ರಾಹ್ಮಣದಲ್ಲಿ ಭೂಲೋಕವು ಮಿತ್ರನೆಂದೂ, ಸ್ವರ್ಗಲೋಕವು ವರುಣನೆಂದೂ ಸ್ಪಷ್ಟವಾಗಿ ಹೇಳಿದೆ.

ಒಂದೊಂದು ಸ್ಥಳದಲ್ಲಿ ವರುಣನು ಋತುಗಳನ್ನು ವಿಭಜಿಸಿದನೆಂದು ಹೇಳಿದೆ. ಅವನಿಗೆ ಹನ್ನೆರಡು ತಿಂಗಳುಗಳೂ ತಿಳಿದಿವೆ (೧-೨೫-೮); ಮಿತ್ರ ವರುಣ ಮತ್ತು ಅರ್ಯಮರು ಶರತ್ಕಾಲ, ತಿಂಗಳು, ಹಗಲು ಮತ್ತು ರಾತ್ರಿಗಳನ್ನು ವಿಂಗಡಿಸಿದರು (೭-೬೬-೧೧).

ಉದಕವನ್ನು ಕ್ರಮಪಡಿಸುವವನೂ ಅವನೇ ಎಂದು ಅನೇಕ ಕಡೆ ಹೇಳಿದೆ. ನದಿಗಳು ಹರಿಯುವಂತೆ ಮಾಡಿದವನೂ ಅವನೇ ; ಅವನ ಅಪ್ಪಣೆಮೇರೆಯೇ ಅವುಗಳು ಸತತವಾಗಿ ಪ್ರವಹಿಸುತ್ತವೆ (೨-೨೮-೪). ನದಿಗಳು ವೇಗವಾಗಿ ಸಮುದ್ರದೊಳಕ್ಕೆ ನೀರುತಂದು ಸುರಿಯುತ್ತಿದ್ದರೂ, ಅದನ್ನು ತುಂಬದಿರುವುದು ಅವನ ಹುದುಗಿದ ಶಕ್ತಿಯಿಂದಲೇ (೫-೮೫-೬). ವರುಣ ಮತ್ತು ಮಿತ್ರರು ನದಿಗಳ ಒಡೆಯರು (೭-೬೪-೨). ವರುಣನು ಸಾಗರಗಳಿಗೆ ಒಡೆಯನೆಂಬುದು ಸಿದ್ಧವಾದ ಅಂಶವಾದರೂ, ಋಗ್ವೇದದಲ್ಲಿ ಬರುವುದು ಬಹಳ ಅಪರೂಪ. ಪ್ರಾಯಶಃ, ಇದು ಬಹಳ ಅಮುಖ್ಯವೆಂಬುದೇ ಇದಕ್ಕೆ ಕಾರಣವಿರಬಹುದು. ಸಮುದ್ರದ ನೀರಿನಲ್ಲಿ ಸೇರಿಹೋಗುವ ವರುಣನನ್ನು ಅಂತರಿಕ್ಷದಲ್ಲಿರುವ ಮರುತ್ತಗಳು, ಭೂಮಿಯಲ್ಲಿರುವ ಅಗ್ನಿ ಮತ್ತು ವಾತಾವರಣದಲ್ಲಿರುವ ವಾಯು ಇವರಿಗೆ ಹೋಲಿಸಿದೆ (೧.೧೬೧-೧೪). ಏಳು ನದಿಗಳು, ಭೋರ್ಗರೆಯುತ್ತಿರುವ ಆಳವಾದ ಕಮರಿಯಂತಿರುವ, ವರುಣನ ಬಾಯೊಳಗೆ ಧುಮುಕುತ್ತವೆ (೮-೫೮-೧೨). ಎಂಬುದು ಸಾಗರಕ್ಕೇ ಅನ್ವಯಿಸಿರಬೇಕು. ವರುಣನು ಆಕಾಶದಂತೆ (ದ್ಯೌಃ) ಸಮುದ್ರದೊಳಕ್ಕೆ ಇಳಿಯುತ್ತಾನೆ (೭-೮೭-೬). ಸಾಧಾರಣವಾಗಿ, ವರುಣನಿಗೆ ಸಂಬಂಧ ಇರುವುದೆಲ್ಲಾ ವಾಯುಮಂಡಲದಲ್ಲಿ ಇರುವ ನೀರಿನೊಡನೆಯೇ. ಮರೆಮಾಡಿಕೊಂಡಿರುವ ಸಾಗರದಂತೆ, ವರುಣನು ಆಕಾಶಕ್ಕೆ ಏರುತ್ತಾನೆ (೮-೪೧-೮). ಮನುಷ್ಯರ ಸತ್ಯಾಸತ್ಯಗಳನ್ನು ನೋಡುತ್ತಾ, ಸಿಹಿಯಾಗಿ ತಿಳಿಯಾಗಿ ಹನಿಹನಿಯಾಗಿ ಕೆಳಕ್ಕೆ ಬೀಳುವ ನೀರಿನ ಮಧ್ಯದಲ್ಲಿ, ವರುಣನು ಸಂಚರಿಸುತ್ತಾನೆ (೭-೪೯-೩). ವರುಣನು ನೀರಿನ ಬಟ್ಟೆಯನ್ನೇ ಧರಿಸುತ್ತಾನೆ (೯-೯೦-೨; ೮-೬೯-೧೧ ಮತ್ತು ೧೨ಕ್ಕೆ ಹೋಲಿಸಿ) ವೃಷ್ಟಿಗಾಗಿ ಪ್ರಾರ್ಥಿಸಲ್ಪಡುವ ದೇವತೆಗಳಲ್ಲಿ ವರುಣ ಮತ್ತು ಮಿತ್ರರೇ ಪ್ರಮುಖರು. ಪರ್ವತಗಳೆಲ್ಲಾ ಮೋಡಗಳಿಂದ ಆವೃತವಾಗಿರುವಾಗ, ಬುಡಮೇಲಾದ (ಮೋಡದಿಂದ) ಬಾನೆಯಿಂದ, ಸ್ವರ್ಗ, ಭೂಮಿ ಮತ್ತು ಆಕಾಶಗಳಿಗೆ ನೀರ್ಗರೆದು, ಭೂಮಿಯನ್ನೆಲ್ಲಾ ತೇವವಾಗಿ ಮಾಡುವವನು ವರುಣನು, (೫-೮೫-೩ ಮತ್ತು ೪). ಮಿತ್ರ ಮತ್ತು ವರುಣರ ಹತ್ತಿರ, ಕ್ಷೀರಪ್ರದವಾದ ಗೋವುಗಳು ಮತ್ತು ಜೇನುತುಪ್ಪದ ನದಿಗಳು ಇವೆ (೫-೬೯-೨). ಮಳೆಯಿಂದ ಯುಕ್ತವಾದ ಆಕಾಶ ಮತ್ತು ಪ್ರವಹಿಸುತ್ತಿರುವ ನದಿಗಳೂ ಇವೆ (೫-೬೮-೫) ಹುಲ್ಲುಗಾವಲುಗಳನ್ನು ಘೃತದಿಂದ (ಮಳೆಯಿಂದ)ಲೂ ಮತ್ತು ಇತರ ಪ್ರದೇಶಗಳನ್ನು ಮಧುವಿನಿಂದಲೂ ನೆನೆಯಿಸುತ್ತಾರೆ (೩-೬೨-೧೬). ಅವರು ಆಕಾಶದಿಂದ ಮಳೆ ಮತ್ತು ದಣಿವಾರಿಸುವ ಪದಾರ್ಥಗಳನ್ನು ಕಳುಹಿಸುತ್ತಾರೆ (೭-೬೪-೨). ಸ್ವರ್ಗೀಯೋದಕದ ಮಳೆಯು ಅವರಿಂದಲೇ ಬರುತ್ತದೆ (೮-೨೫-೬). ಒಂದು ಇಡೀ ಸೂಕ್ತವೇ ಅವರ ಮಳೆಗರೆಯುವ ಶಕ್ತಿಯನ್ನು ಸ್ತುತಿಸುತ್ತದೆ (೫-೬೩) ಅಂತರಿಕ್ಷದ ಮತ್ತು ಸ್ವರ್ಗದ ದೇವತೆಗಳ ಪಟ್ಟಿಗಳೆರಡರಲ್ಲಿಯೂ ವರುಣನ ಹೆಸರು ಬಂದಿರುವುದಕ್ಕೆ, ಅವನಿಗೆ ನೀರು ಮತ್ತು ಮಳೆಯೊಡನಿರುವ ನಿಕಟಸಂಬಂಧವೇ ಕಾರಣವಿರಬೇಕು. ಬ್ರಾಹ್ಮಣಗಳಲ್ಲಿ, ಮಿತ್ರಾವರುಣರೂ ಮಳೆಯ ದೇವತೆಗಳು. ಅಥರ್ವವೇದದಲ್ಲಿ ವರುಣನಿಗೆ ಸಂರಾಜತ್ವ ಹೇಳಿಲ್ಲ; ಆದರೆ, ನೀರಿನಮೇಲಿರುವ ಅಧಿಕಾರಮಾತ್ರ ಹಾಗೆಯೇ ಉಳಿದಿದೆ. ಸೋಮನಿಗೆ ಪರ್ವತದೊಡನೆ ಬಾಂಧವ್ಯವಿರುವಂತೆ ವರುಣನಿಗೆ ನೀರಿನ ಬಾಂಧವ್ಯ (ಅ. ವೇ. ೪-೧೫-೧೨). ಅವನ ಬಂಗಾರದ ಮನೆಯು ನೀರಿನಲ್ಲಿದೆ (ಅ. ವೇ.



CC-0. Jangamwadi Math Collection. Digitized by eGangotri

೭.೮೩-೧). ಅವನು ನೀರಿಗೆಲ್ಲಾ ಒಡೆಯನು; ಅವನು ಮತ್ತು ಮಿತ್ರರು ಮಳೆಯ ಒಡೆಯರು (ಅ. ವೇ. ೫-೨೪-೪ ಮತ್ತು ೫). ಯಜುರ್ವೇದದಲ್ಲಿ ಅವನು ಮಳೆಯ ಶಿಶುವೆಂದೂ, ತಾಯಿಯಂತಿರುವ ನೀರಿನಲ್ಲಿ ಮನೆ ಮಾಡಿಕೊಂಡಿರುವನೆಂದೂ (ವಾ. ಸಂ. ೧೦-೭) ಹೇಳಿದೆ. ನೀರುಗಳು ವರುಣನ ಪತ್ನಿಯರು (ತೈ. ಸಂ. ೫-೫-೪-೧) ಮಿತ್ರ ಮತ್ತು ವರುಣರು ನೀರಿಗೆ ನಾಯಕರು (ತೈ. ಸಂ. ೬-೪-೩-೨).

ವರುಣನ ಶಾಸನಗಳು ಚೆನ್ನಾಗಿ ಸ್ಥಾಪಿತವಾಗಿವೆಯೆಂದು ಪದೇಪದೇ ಹೇಳಲ್ಪಟ್ಟಿದೆ. ಈ ಕಾರಣದಿಂದಲೇ ಅವನಿಗೆ ಧೃತವ್ರತ ಎಂದು ಹೆಸರು. ಮಿತ್ರಾವರುಣರಿಗಿಬ್ಬರಿಗೂ ಈ ವಿಶೇಷಣವು ಸಂದಿದೆ. ದೇವತೆಗಳೇ ವರುಣನ (೮-೪೧-೭), ಅಥವಾ ವರುಣ ಮಿತ್ರ ಮತ್ತು ಅರ್ಯಮರ ಅಪ್ಪಣೆಗಳನ್ನು ಪಾಲಿಸುತ್ತಾರೆ; ಸನಾದಿದೇವತೆಗಳೂ ಕೂಡ ಅವರ ಧೃತವ್ರತಗಳನ್ನು ಮೀರಲಾರರು (೫-೬೯-೪; ೫-೬೩-೭ನ್ನು ಹೋಲಿಸಿ) ಮಿತ್ರವರುಣರು ನಿಯಮ (ಋತ) ಮತ್ತು ಬೆಳಕಿಗೆ ನಿಯಾಮಕರು. ಈ ಶಾಸನಗಳ ಬಲದಿಂದಲೇ ಅವರು ನಿಯಮಗಳಿಗೆ ಬೆಂಬಲಕೊಡಲು ಸಾಧ್ಯವಾಗಿದೆ (೧-೨೩-೫). ಈ ಗುಣವು ವಿಶೇಷವಾಗಿ ಇವರಿಬ್ಬರಲ್ಲಿ ಒಂದೊಂದು ವೇಳೆ ಆದಿತ್ಯರಲ್ಲಿ ಅಥವಾ ಇತರ ಸಾಧಾರಣದೇವತೆಗಳಲ್ಲಿ ಕಂಡುಬರುತ್ತದೆ. ಅವರು (ಋತ) ಸತ್ಯ ಮತ್ತು ನ್ಯಾಯವನ್ನು ಅಭಿವೃದ್ಧಿಗೊಳಿಸುವವರು (೧-೨-೮). ವರುಣ ಅಥವಾ ಆದಿತ್ಯರು ನಿಯಮಗಳ ರಕ್ಷಕರು (ಋತಸ್ಯಗೋಪಾಃ) ಎಂದು ಕರೆಯಲ್ಪಟ್ಟಿದಾರೆ. ಅಗ್ನಿ, ಸೋಮರಿಗೂ ಇದು ಅನ್ವಯಿಸಿದೆ. ಋತಾವನ್ (ನಿಯಮಗಳನ್ನು ಪಾಲಿಸುವವನು ಎಂಬ ವಿಶೇಷಣವು ಸಾಧಾರಣವಾಗಿ ಅಗ್ನಿಯ ವಿಷಯದಲ್ಲಿ ಪ್ರಯೋಗಿಸಿದೆ. ಮಿತ್ರಾವರುಣರಿಗೂ ಅನೇಕ ವೇಳೆ ಇದು ಪ್ರಯೋಗಿಸಿರುವುದು ಕಂಡುಬರುತ್ತದೆ.

ವರುಣನ ಶಕ್ತಿಯು ಅಗಾಧವಾದುದು; ಹಾರುವ ಪಕ್ಷಿಗಳಾಗಲೀ, ಹರಿಯುವ ನದಿಗಳಾಗಲೀ ಅವನ ರಾಜ್ಯದ ಗಡಿ ಮೇರೆಯನ್ನು ಸೇರಲಾರವು; ಅವನ ಶಕ್ತಿಯನ್ನು ಮೀರಲಾರವು; ಅವನ ಕೋಪವನ್ನು ತಡೆಯಲಾರವು (೧-೨೪-೬). ಮಿತ್ರವರುಣರ ಸೀಮೆಯನ್ನು ಆಕಾಶ ಮತ್ತು ನದಿಗಳೂ ಕೂಡ ತಲುಪಿಲ್ಲ. (೧-೧೫೧-೯). ಸಮಸ್ತವೂ ವರುಣನಲ್ಲಿಯೇ ಅಡಗಿವೆ; ಎಲ್ಲಾ ಪ್ರಾಣಿಗಳ ವಸತಿಗಳೂ ಅವನಲ್ಲಿಯೇ ಇವೆ (೮-೪೧ ಮತ್ತು ೭) ಮೂರು ಸ್ವರ್ಗಲೋಕಗಳೂ ಮತ್ತು ಮೂರು ಭೂಲೋಕಗಳೂ ಅವನಲ್ಲಿಯೇ ನಿಹಿತವಾಗಿವೆ (೭-೮೭-೫). ವರುಣನು ಸರ್ವಜ್ಞನು. ಆಕಾಶದಲ್ಲಿ ಪಕ್ಷಿಗಳ ಹಾರಾಟ, ಸಮುದ್ರದಲ್ಲಿ ನಾವೆಗಳ ಸಂಚಾರ ದೂರಗಾಮಿಯಾದ ವಾಯುವಿನಗತಿ, ಇವೆಲ್ಲವೂ ಅವನಿಗೆ ತಿಳಿದಿದೆ; ಹಿಂದೆ ಕಳೆದುಹೋದ ಅಥವಾ ಮುಂದೆ ಬರುವ ಎಲ್ಲ ಪದಾರ್ಥಗಳನ್ನೂ ಅವನು ನೋಡುತ್ತಾನೆ (೧-೨೫-೭,೯,೧೧) ಮನುಷ್ಯರ ಸತ್ಯಾಸತ್ಯಗಳ ಸಾಕ್ಷಿಯಾಗಿದಾನೆ (೭-೪೯-೩) ಅವನಿಲ್ಲದೆ ಪ್ರಾಣಿಗಳು ಕಣ್ಣುರೆಪ್ಪೆ ಕೂಡ ಮಿಟುಕಿಸಲಾರವು (೨-೨೮-೬) ಮನುಷ್ಯನ ನಿಮೇಷಗಳ ಸಂಖ್ಯೆಯು ಅವನಿಗೆ ಗೊತ್ತು; ಪ್ರತಿಯೊಬ್ಬ ಮನುಷ್ಯನು ಮಾಡುವ ಕಾರ್ಯಗಳು, ಯೋಚನೆಗಳು, ಉಪಾಯಗಳು, ಎಲ್ಲವೂ ವರುಣನಿಗೆ ತಿಳಿಯುತ್ತದೆ (ಅ. ವೇ. ೪-೧೬-೨ ಮತ್ತು ೫). ಸ್ವರ್ಗ ಮತ್ತು ಭೂಲೋಕಗಳಲ್ಲಿ ಮತ್ತು ಅವುಗಳಿಂದಾಚೆ ಇರುವುದೆಲ್ಲವನ್ನೂ ಅವನು ಗ್ರಹಿಸಬಲ್ಲನು; ಆಕಾಶದಾಚೆ ಎಷ್ಟೇ ದೂರ ಓಡಿಹೋದರೂ, ಯಾರೂ ವರುಣನ ದೃಷ್ಟಿಪಥವನ್ನು ಬಿಟ್ಟುಹೋಗಲಾಗುವುದಿಲ್ಲ (ಅ. ವೇ. ೪-೧೬-೪ ಮತ್ತು ೫). ಈ ಸರ್ವಜ್ಞತ್ವವು ವರುಣನ ವೈಯಕ್ತಿಕ ಗುಣವೆಂಬುವುದಕ್ಕೆ ಈ ವಿಷಯದಲ್ಲಿ ಅಗ್ನಿಯನ್ನು ಇವನಿಗೆ ಹೋಲಿಸಿರುವುದೇ ಆಧಾರ.

ನೀತಿನಿಯಾಮಕನಾಗಿ, ವರುಣನು ಇತರ ಎಲ್ಲಾ ದೇವತೆಗಳಿಗಿಂತ ಬಹಳ ಉತ್ತಮ ದರ್ಜೆಯಲ್ಲಿದ್ದಾನೆ. ಪಾಪವೆಂದರೆ ಅವನಿಗೆ ಬಹಳ ಕೋಪಬರುತ್ತದೆ; ಅವನ ನಿಯಮಗಳನ್ನುಲ್ಲಂಘಿಸಿದರೂ ಕೋಪ.





CC-0. Jangamwadi Math Collection. Digitized by eGangotri

ಇವೆರಡಕ್ಕೂ ಅವನು ಬಹಳ ಕ್ರೂರ ಶಿಕ್ಷೆಯನ್ನು ವಿಧಿಸುತ್ತಾನೆ (೭-೮೬-೩ ಮತ್ತು ೪) ಪಾಪಿಗಳನ್ನು ಬಂಧಿಸುವ ಪಾಶವು ಅನೇಕ ಕಡೆ ಉಕ್ತವಾಗಿದೆ (೧-೨೪-೧೫; ೧-೨೫-೧೧; ೬-೭೪-೪; ೧೦-೮೫-೨೪) ಏಳು ಅಥವಾ ಮೂರು ಪದರವಾಗಿ ಹಾಕಲ್ಪಟ್ಟು, ಆ ಪಾಶವು ಅನೃತವಾದಿಯನ್ನು ಬಂಧಿಸುತ್ತದೆ; ಸತ್ಯವಾದಿಯನ್ನು ಬಿಟ್ಟು ಬಿಡುತ್ತದೆ (ಅ. ವೇ. ೪-೧೬-೬) ಅನೇಕ ಶೃಂಖಲೆಗಳನ್ನಿಟ್ಟುಕೊಂಡು, ಮಿತ್ರ ಮತ್ತು ವರುಣರು ಅನೃತನಿರೋಧಕರಾಗಿದಾರೆ (೭-೬೫-೩) ಇಂದ್ರಸಹಚರಿತನಾದ ವರುಣನು ಹಗ್ಗವಲ್ಲದ ಬಂಧನಗಳಿಂದ ಕಟ್ಟುತ್ತಾನೆ (೭-೮೪-೨) ಎಂದು ಒಂದು ಸ್ಥಳದಲ್ಲಿ ಹೇಳಿದೆ. ಇಡೀ ವೇದದಲ್ಲಿ ಒಂದೇ ಒಂದು ಕಡೆ, ಈ 'ಪಾಶ' ವೆಂಬ ಪದ ಅಗ್ನಿದೇವತಾಕ ಮಂತ್ರದಲ್ಲಿ ಬಂದಿದೆ; ಅದೂ ಅವನ ಭಕ್ತರನ್ನು ಬಂಧಿಸಿರುವ ಪಾಶವನ್ನು ಬಿಡಿಸು ಎಂದು ಪ್ರಾರ್ಥಿಸುವ ಸಂದರ್ಭದಲ್ಲಿ. ಆದ್ದರಿಂದ ಈ ಪಾಶಬಂಧನ ಮತ್ತು ಮೋಚನ ಕಾರ್ಯಗಳು ವರುಣನವೇ. ಕೆಲವರು ಈ ಪಾಶ ಮತ್ತು ಅದರಿಂದ ಬಂಧನವೆಂಬುದು ನೀರನ್ನು ಅಡ್ಡಗಟ್ಟುವುದಕ್ಕೆ ಸಂಬಂಧಿಸಿದುದೆಂತಲೂ, ಮತ್ತೆ ಕೆಲವರು ರಾತ್ರಿ ಸಂಬಂಧವಾದ ಬಂಧನಗಳೆಂದೂ ಅಭಿಪ್ರಾಯಪಡುತ್ತಾರೆ. ಆದರೆ, ನೈತಿಕವಾಗಿ ಪತಿತರನ್ನು ಬಂಧಿಸುವ ಕಟ್ಟುಗಳು ಎಂದು ವ್ಯಂಗ್ಯವಾಗಿ ಹೇಳಿದೆಯೆನ್ನಬಹುದು. ಮಿತ್ರನಿಂದ ಕೂಡಿದ ವರುಣನು ಅನೃತವನ್ನು ಓಡಿಸುವವನು, ದ್ವೇಷಿಸುವವನು ಮತ್ತು ಶಿಕ್ಷಿಸುವವನು (೧-೧೫೨-೧; ೭-೬೦-೫; ೭-೬೬-೧೩). ಅವರು ತಮ್ಮ ಪೂಜೆಯ ವಿಷಯದಲ್ಲಿ ತಾತ್ಸಾರದಿಂದಿರುವವರನ್ನು ಶಿಕ್ಷಿಸುತ್ತಾರೆ (೧-೧೨೨-೯). ಆದರೆ ವರುಣನು ಪಶ್ಚಾತ್ತಾಪಪಡುವವರನ್ನು ಮನ್ನಿಸುತ್ತಾನೆ; ಹಗ್ಗದಂತೆ ಬಿಚ್ಚುತ್ತಾನೆ. ಮತ್ತು ಪಾಪ ಪರಿಹಾರ ಮಾಡುತ್ತಾನೆ (೨-೨೮-೫; ೫-೮೫-೭ ಮತ್ತು ೮) ಸ್ವತಃ ಮಾಡಿದ ಪಾಪದಿಂದ ಮಾತ್ರವಲ್ಲ, ಅವನ ಪೂರ್ವಿಕರು ಮಾಡಿದ ಪಾಪದಿಂದಲೂ, ಮನುಷ್ಯನನ್ನು ಬಿಡುಗಡೆ ಮಾಡುತ್ತಾನೆ (೭-೮೬-೫). ತನ್ನಿಂದ ವಿಧಿಸಲ್ಪಟ್ಟ ನಿಯಮಗಳನ್ನೇ ಪ್ರತಿನಿತ್ಯವೂ ಉಲ್ಲಂಘಿಸಿ, ಅನಂತರ ಪಶ್ಚಾತ್ತಾಪಪಡುವವರನ್ನೂ ಉಳಿಸಿಕೊಡುತ್ತಾನೆ (೧-೨೫-೧); ಮತ್ತು ತನ್ನ ಆಜ್ಞೆಗಳನ್ನು ವಿಸ್ಮೃತಿಯಿಂದ ಉಲ್ಲಂಘಿಸಿದವರಲ್ಲಿ ಕನಿಕರ ತೋರಿಸುತ್ತಾನೆ (೭-೮೯-೫). ಪ್ರಾಪಂಚಿಕ ಪದಾರ್ಥಗಳಿಗಾಗಿ ಪ್ರಾರ್ಥನೆಯಿಲ್ಲದ ಇತರ ದೇವತಾಕವಾದ ಸ್ತುತಿಯೇ ಇಲ್ಲವೆನ್ನಬಹುದು; ಅದೇರೀತಿ ಅಪರಾಧಕ್ಷಮಾಪ್ರಾರ್ಥನೆಯಿಲ್ಲದ ವರುಣದೇವತಾಕವಾದ ಮಂತ್ರವೇ ಇಲ್ಲ.

ವರುಣನಲ್ಲಿ ನೂರುಗಟ್ಟಲೆ, ಸಾವಿರಗಟ್ಟಲೆ ಔಷಧಿಗಳು ಇವೆ; ಅವನು ಮೃತ್ಯುವನ್ನು ದೂರಮಾಡುತ್ತಾನೆ ಮತ್ತು ಪಾಪವನ್ನೂ ಪರಿಹಾರಮಾಡುತ್ತಾನೆ (೧-೨೪-೯). ಅವನು ಪ್ರಾಣಾಪಹಾರ ಮಾಡಬಲ್ಲನು; ಜೀವದಾನವನ್ನೂ ಮಾಡಬಲ್ಲನು (೧-೨೪-೧೧; ೧-೨೫-೧೨; ೭-೮೮-೪; ೭-೮೯-೧). ನಿತ್ಯತ್ವವನ್ನು ರಕ್ಷಣೆ ಮಾಡುವುದರಲ್ಲಿ ಬಹಳ ಕುಶಲನು (೮-೪೨-೨). ಯೋಗ್ಯರಾದವರು ಆನಂದವಾಗಿ ರಾಜ್ಯವಾಳುತ್ತಿರುವ ಇಬ್ಬರು ರಾಜರನ್ನು—ವರುಣ ಮತ್ತು ಯಮರನ್ನು—ಆಮುಷ್ಮಿಕಲೋಕದಲ್ಲಿ ನೋಡಬಯಸುತ್ತಾರೆ (೧೦-೧೪-೭).

ಅವನ ಸ್ವರ್ಗಲೋಕದ ವಾಸಗೃಹದಲ್ಲಿ ಅವನೊಡನೆ, ಅವನ ಆರಾಧಕರು ವ್ಯವಹರಿಸುತ್ತಾರೆ. ಮಾನಸಿಕ ಚಕ್ಷುಸ್ಸಿನಿಂದ ಅವನನ್ನು ನೋಡುತ್ತಾರೆ (೫-೨೫-೧೮; ೭-೮೮-೨). ಅಂತಹವರೊಡನೆ ವರುಣನು ಸರಿಸಮಾನರಂತೆ ವರ್ತಿಸುತ್ತಾನೆ (೭-೮೮-೪-೬)

ವರುಣನ ನಿಜವಾದ ಸ್ಥಾನವೇನು, ಅವನ ಸ್ವಭಾವವೇನು ಎಂಬುದನ್ನು ತಿಳಿಯೋಣ. ಈವರೆಗೆ ತಿಳಿದಿರುವುದರಿಂದ ಇಷ್ಟು ನಿಶ್ಚಿತವಾಗುತ್ತದೆ. ವರುಣನೂ ಮಿತ್ರನೂ ಸೂರ್ಯನಿಗೆ ಸಂಬಂಧಿಸಿದವರು. ವರುಣನು ಮಿತ್ರನಿಗಿಂತ ಹೆಚ್ಚಾಗಿ ಸಂಬಂಧಪಡೆದಿದಾನೆ. ವರುಣನಿಗೆ ಹೋಲಿಸಿದರೆ, ಮಿತ್ರನಿಗೆ ವ್ಯಕ್ತಿತ್ವವೇ ಇಲ್ಲದಂತಾಗುವುದು. ಮಿತ್ರನು ಸೌರವ್ಯೂಹಕ್ಕೆ ಸೇರಿದ ದೇವತಾಗ್ರಹ. ವರುಣನು ಪ್ರಕೃತಿಯ ಬೇರೆ ಒಂದಂಶ



CC-0. Jangamwadi Math Collection. Digitized by eGangotri

ವನ್ನು ಪ್ರತಿಬಿಂಬಿಸಬೇಕು. ವರುಣ ಪದಕ್ಕೆ ಮೂಲಭೂತವಾದ ವೃ ಧಾತುವಿಗೆ ಆವರಿಸು ಎಂದರ್ಥ ಅದರಿಂದ ವರುಣ ಎಂದರೆ ಆವರಿಸುವವನು ಅಥವಾ ಆವರಿಸುವುದು ಎಂದರ್ಥವಾಗುತ್ತದೆ. ಆದ್ದರಿಂದ ವರುಣ ಎಂಬುದರಿಂದ ಪರಿದೃಶ್ಯಮಾನವಾದ ಆಕಾಶದ ಗುಮ್ಮಟವನ್ನು ತೆಗೆದುಕೊಳ್ಳಬಹುದು. ವರುಣ ಪದದಿಂದ ಈ ವಸ್ತುವನ್ನು ತೆಗೆದುಕೊಂಡರೆ ವರುಣನಿಂದ ಕೃತವಾದ ಕಾರ್ಯಗಳೆಲ್ಲಕ್ಕೂ ಅವಕಾಶವಿರುತ್ತದೆ. ಸೂರ್ಯನಿಗಿಂತ ಬಹಳ ವಿಸ್ತಾರವಾದ ದೊಡ್ಡ ಪದಾರ್ಥ. ಸೂರ್ಯನಿಗೂ ವರುಣನಿಗೂ ನಿಕಟ ಬಾಂಧವ್ಯವಿದೆ; ಆಕಾಶವಿಲ್ಲದೇ ಸೂರ್ಯಮಂಡಲವನ್ನು ಚಿಂತಿಸುವ ಹಾಗೆಯೇ ಇಲ್ಲ; ಸೂರ್ಯನು ವರುಣನ ಕಣ್ಣು; ಈ ಕಣ್ಣು (ಸೂರ್ಯನು) ಪ್ರಪಂಚದಲ್ಲಿ ನಡೆಯುವುದೆಲ್ಲವನ್ನೂ ವರುಣನಿಗೆ ತಿಳಿಸುತ್ತದೆ; ವರುಣನು ದೂರದೃಷ್ಟಿಯುಳ್ಳವನು; ಹಗಲು ಮತ್ತು ರಾತ್ರಿ ವೇಳೆಗಳೆರಡರಲ್ಲಿಯೂ ಪ್ರಪಂಚವು ವರುಣನ ಲಕ್ಷ್ಯದಲ್ಲಿರುತ್ತದೆ; ಇತ್ಯಾದಿಗಳೆಲ್ಲವೂ ಹೊಂದುತ್ತವೆ. ಅಲ್ಲದೆ. ಇನ್ನ್ಯಾವನಾದರೂ, ಆಕಾಶದಷ್ಟು ಸುಲಭವಾಗಿ ಸಂರಾಜತ್ವವನ್ನು ಪಡೆಯಲು ಸಾಧ್ಯವಿಲ್ಲ; ಏಕೆಂದರೆ, ಸೂರ್ಯನೇ ಮೊದಲಾದ ತೇಜೋರಾಶಿಗಳಿಗೆಲ್ಲ ಆಶ್ರಯವಾಗಿ ಭೂಮಿಗೆ ಬಹಳ ದೂರದಲ್ಲಿ, ಮೇಲುಗಡೆ ಇರುವ ಆಕಾಶವು, ಅಹರ್ನಿಶಿಯೂ ಚರಾಚರ ವಸ್ತುಗಳನ್ನು ಲಕ್ಷದಲ್ಲಿಟ್ಟುಕೊಂಡು, ಅನುಲಂಘನೀಯವಾದ ಶಾಸನಕರ್ತೃವಾದ ದೇವತೆ ಎಂದು ಊಹಿಸುವುದು ಕಷ್ಟವಾಗಲಾರದು.

## ಮಿತ್ರ.

ಮಿತ್ರ ಮತ್ತು ವರುಣರ ಸಾಹಚರ್ಯವು ಬಹಳ ಹೆಚ್ಚಾಗಿರುವುದರಿಂದ ಮಿತ್ರನೊಬ್ಬನೇ ದೇವತೆಯಾಗಿ ಉಳ್ಳ ಸೂಕ್ತ ಒಂದೇ ಒಂದು ಋಗ್ವೇದದಲ್ಲಿ (೩-೫೯) ಇದೆ. ಅಲ್ಲಿಯೂ ಆ ದೇವತೆಯ ಸ್ತುತಿಭಾಗವು ಬಹಳ ಅಸ್ಪಷ್ಟ; ಆದರೆ ಮೊದಲ ಒಂದು ಮಂತ್ರದಲ್ಲಿ ಮಾತ್ರ ಮಿತ್ರನ ವೈಶಿಷ್ಟ್ಯವೊಂದು ಉಕ್ತವಾಗಿದೆ. ಶಬ್ದಮಾಡುತ್ತಾ (ಬ್ರುವಾಣಃ), ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸಿ (ಯಾತಯತಿ), ಉಳತ್ತಿರುವವನ್ನು ಅನಿಮಿಷನಾಗಿ ನೋಡುತ್ತಾನೆ. ಈ ಅನಿಮಿಷಾ ಎಂಬುದು ಮಿತ್ರಾವರುಣರಿಬ್ಬರಿಗೂ (೭-೬೦-೬) ಹೇಳಿದೆ.

ಮತ್ತೊಂದೆಡೆಯಲ್ಲಿಯೂ ಇದೇ ಪದಗಳು (ಶಬ್ದಮಾಡುತ್ತಾ ಮನುಷ್ಯರನ್ನು ಒಟ್ಟಾಗಿ ಸೇರಿಸುತ್ತಾನೆ) ಮಿತ್ರನಿಗೆ ಹೇಳಲ್ಪಟ್ಟಿವೆ (೭-೩೬-೨) ಅಲ್ಲೇ ವರುಣನನ್ನು ಮಹಾಬಲಿಷ್ಠನೂ, ನಿರವದ್ಯನೂ ಆದ ಮಾರ್ಗದರ್ಶಕನೆಂದು ಕರೆದಿದೆ. ಮತ್ತೊಂದೆಡೆಯಲ್ಲಿ (೫-೮೨-೯) ಸೂರ್ಯದೇವತೆಯಾದ ಸವಿತೃವು ಎಲ್ಲಾ ಪ್ರಾಣಿಗಳೂ ತನ್ನ ಮಾತನ್ನು ಕೇಳುವಂತೆ ಮಾಡುತ್ತಾನೆ. ಮತ್ತು ಅವರನ್ನು ಒತ್ತಾಯಪಡಿಸುತ್ತಾನೆ ಎಂದಿರುವುದನ್ನು ನೋಡಿದರೆ, ಮಿತ್ರನು ಸೂರ್ಯದೇವತೆಗಳ ಗುಂಪಿಗೇ ಸೇರಿದವನೆಂದು ಊಹಿಸಬಹುದು. ಮಿತ್ರದೇವತಾಕವಾದ ಸೂಕ್ತದ ಐದನೆಯ ಮಂತ್ರದಲ್ಲಿ ಮನುಷ್ಯರನ್ನೆಲ್ಲಾ ಒಟ್ಟಾಗಿ ಸೇರಿಸುವ ಮಹನೀಯನಾದ ಆದಿತ್ಯನೆಂದು ಮಿತ್ರನನ್ನು ಕರೆದಿದೆ. ಈ (ಯಾತಯಜ್ಜನ) ಮನುಷ್ಯರನ್ನು ಒಟ್ಟಾಗಿ ಕಲೆ ಹಾಕುವುದು ಎಂಬುದು ಋಗ್ವೇದದಲ್ಲಿ ಇನ್ನು ಮೂರೇ ಸ್ಥಳಗಳಲ್ಲಿದೆ. (೫-೭೨-೨) ರಲ್ಲಿ ಅದು ಮಿತ್ರಾವರುಣರಿಗೂ, (೧-೧೩೬-೩) ರಲ್ಲಿ ಮಿತ್ರ, ವರುಣ, ಅರ್ಯಮರಿಗೂ ಮೂರನೆಯದಾದ (೮-೯೧-೧೨) ರಲ್ಲಿ ಅಗ್ನಿಗೂ ಹೇಳಿದೆ. ಕಡೆಯದರಲ್ಲಿ ಅಗ್ನಿಯನ್ನು ಮಿತ್ರನಂತೆ ಮನುಷ್ಯರನ್ನು ಒಟ್ಟಾಗಿ ಸೇರಿಸುವವನು ಎಂಬುದಾಗಿ ಮಿತ್ರನಿಗೆ ಹೋಲಿಸಿದೆ. ಆದ್ದರಿಂದ ಈ ವಿಶೇಷಣವು ಮಿತ್ರನಿಗೇ ಸಲ್ಲತಕ್ಕುದು. ಆದೇ ಸೂಕ್ತದ ಪ್ರಕಾರ ಮಿತ್ರನು ಸ್ವರ್ಗ ಮತ್ತು ಭೂಮಿಗಳಿಗೆ ಆಧಾರನಾಗಿದಾನೆ; ಮನುಷ್ಯರ ಐದು ಪಂಗಡಗಳು ಅವನಿಗೆ ವಿಧೇಯರಾಗಿದಾರೆ; ಇತರ ದೇವತೆಗಳಿಗೆಲ್ಲಾ ಜೀವನಾಧಾರನಾಗಿದಾನೆ. ಒಂದು ಕಡೆ ಅವರಿಂದ ವಿಹಿತವಾದ ವಿಧಿಗಳ ದೃಷ್ಟಿಯಿಂದ ಸವಿತೃ ಮತ್ತು ಮಿತ್ರರು ಒಂದೇ (೫-೮೧-೪) ಎಂದೂ ಮತ್ತೊಂದು ಕಡೆ (ವಾ. ೪.೩) ಮಿತ್ರನ ನಿಯಮಗಳನ್ನನುಸರಿಸಿಯೇ



CC-0. Jangamwadi Math Collection. Digitized by eGangotri

ವಿಷ್ಣುವು ಮೂರು ಹೆಜ್ಜೆಗಳನ್ನು ಇಟ್ಟನೆಂದೂ ಇದೆ. ಇವೆರಡರಿಂದ ಮಿತ್ರನು ಸೂರ್ಯಪಥವನ್ನು ಸರಿಪಡಿಸು ತ್ತಾನೆ ಎಂದು ಹೇಳಬಹುದು. ಉಷಃಕಾಲಕ್ಕೆ ಮುಂಚೆ ಸ್ಥಾಪಿತನಾದ ಅಗ್ನಿಯು ಮಿತ್ರನನ್ನು ತಾನೇ, ತನ ಗೋಸ್ಕರ, ಉತ್ಪತ್ತಿ ಮಾಡುತ್ತಾನೆ (೧೦-೮-೪); ದೀಪ್ತನಾದ ಅಗ್ನಿಯೇ ಮಿತ್ರನು (೩-೫-೪); ಅಗ್ನಿಯು ಜನಿ ತನಾದಾಗ ವರುಣನು; ದೀಪ್ತನಾದಾಗ ಮಿತ್ರನು (೫-೩-೧). ಸೂರ್ಯೋದಯದ ಮಿತ್ರನಿಗೂ ಸಾಯಂಕಾಲದ ವರುಣನಿಗೂ ವ್ಯತ್ಯಾಸವಿದೆ (ಅ. ವೇ. ೧೩-೩-೧೭); ರಾತ್ರಿಯಲ್ಲಿ ವರುಣನಿಂದ ಆಚ್ಛಾದಿತವಾದುದನ್ನು ಅನಾ ವರಣ ಮಾಡಬೇಕೆಂದು ಮಿತ್ರನು ಪ್ರಾರ್ಥಿತನಾಗಿದಾನೆ (ಅ. ವೇ. ೯-೩-೧೮). ಬ್ರಾಹ್ಮಣಗಳಲ್ಲಿ ವರುಣನನ್ನು ರಾತ್ರಿಯ ದೇವತೆಯೆಂದೂ, ಮಿತ್ರನನ್ನು ಹಗಲಿನ ದೇವತೆಯೆಂದೂ ಹೇಳಿರುವುದನ್ನು ಈ ವಾಕ್ಯಗಳು ಸಮರ್ಥಿ ಸುತ್ತವೆ. ಇದೇ ಅಭಿಪ್ರಾಯವು ಯಾಗಗಳ ವಿವರಣೆಯಲ್ಲಿಯೂ ವ್ಯಕ್ತವಾಗಿದೆ. ಅಲ್ಲಿ ಮಿತ್ರನಿಗೆ ಶ್ವೇತ ವರ್ಣದ ಪಶುವನ್ನೂ, ವರುಣನಿಗೆ ಕೃಷ್ಣವರ್ಣದ ಪಶುವನ್ನೂ ಬಲಿಕೊಡಬೇಕೆಂದು ವಿಧಿಸಿದೆ (ತೈ. ಸಂ. ೨-೧-೭-೪; ೨-೧-೯-೧ ಮೈ. ಸಂ. ೨-೫-೭) ಆದುದರಿಂದ ಮಿತ್ರನು ಸೂರ್ಯದೇವತೆಯೆಂದೇ ಹೇಳಬಹುದು.

ಈ ಪದದ ನಿಷ್ಪತ್ತಿಯೂ ಸ್ಪಷ್ಟವಾಗಿಲ್ಲ. ಈ ಪದವನ್ನು ಸ್ನೇಹಿತ ಎಂಬರ್ಥದಲ್ಲಿ ಅನೇಕ ಸ್ಥಳಗಳಲ್ಲಿ ಪ್ರಯೋಗಿಸಿದೆ. ಪ್ರಾಯಶಃ ಸೂರ್ಯದೇವತೆಯು ಮನುಷ್ಯರಿಗೆ ನಾನಾ ವಿಧದಲ್ಲಿ ಉಪಕಾರಿ ಎಂಬಂಶವು ಈ ಮಿತ್ರನಿಂದ ಅಭಿವ್ಯಕ್ತವಾಗಿದೆ.

### ಸೂರ್ಯ.

ಋಗ್ವೇದದಲ್ಲಿ ಹತ್ತು ಸೂಕ್ತಗಳು ಸೂರ್ಯನನ್ನು ಸ್ತುತಿಸುತ್ತವೆ. ಎಷ್ಟುಸಲ ಈಪದ ಪ್ರಯೋಗವಿದೆ ಯೆಂಬುದನ್ನೂ, ದೇವತೆಯನ್ನು ಸೂಚಿಸುತ್ತದೆಯೋ, ಅಥವಾ ಸೂರ್ಯಬಿಂಬವನ್ನು ಸೂಚಿಸುತ್ತದೆಯೋ ಎಂಬು ದನ್ನೂ ನಿರ್ಧರವಾಗಿ ಹೇಳಲಾಗುವುದಿಲ್ಲ. ಸೂರ್ಯನಷ್ಟು ಇಂದ್ರಿಯ ಗೋಚರವಾದ ದೇವತೆ ಯಾವುದೂ ಇಲ್ಲ. ಆಕಾಶದಲ್ಲಿರುವ ಸೂರ್ಯನ ಬೆಳಕೇ ಅಗ್ನಿಯಮುಖ (೧೦-೭-೩). ಸೂರ್ಯನ ನೇತ್ರವು ಅನೇಕ ಕಡೆ ಉಕ್ತವಾ ಗಿದೆ (೫-೪೦-೮ ಇತ್ಯಾದಿ), ಆದರೆ ಅವನೇ, ಮಿತ್ರ ಮತ್ತು ವರುಣರ (೭-೬೬-೧೦) ಮತ್ತು ಅಗ್ನಿಯ ಕಣ್ಣೆಂದೂ ಕರೆಯಲ್ಪಟ್ಟಿದ್ದಾನೆ (೧-೧೧೫-೧); ಒಂದು ಸಲ. ಉಷೋದೇವತೆಯು ದೇವತೆಗಳಿಗೆಲ್ಲಾ ಕಣ್ಣನ್ನು ತರುತ್ತದೆ (೭-೭೭-೩) ಸೂರ್ಯನಿಗೂ ನೇತ್ರೇಂದಿಯಕ್ಕೂ ನಿಕಟ ಬಾಂಧವ್ಯವಿದೆ. ಮೃತನಾದ ಮನುಷ್ಯನ ನೇತ್ರೇಂದ್ರಿಯವು ಸೂರ್ಯನನ್ನು ಸೇರುತ್ತದೆ ಎಂದು ಹೇಳಿದೆ (೧೦-೧೬-೩; ೧೦-೯೦-೩ ಮತ್ತು ೧೦-೧೫೮-೩,೪ ಗಳನ್ನು ಹೋಲಿಸಿ.) ಸೂರ್ಯನು ನೇತ್ರೇಂದ್ರಿಯಗಳಿಗೆಲ್ಲಾ ಒಡೆಯ (ಅ. ವೇ. ೫-೨೪-೯); ಪ್ರಾಣಿಗಳೆಲ್ಲರಿಗೂ ಕಣ್ಣಾಗಿ ಆಕಾಶ, ಭೂಮಿ, ನೀರು, ಇವುಗಳೆಗೆಲ್ಲಾ ಆಚೆ. ನೋಡುತ್ತಾನೆ (ಅ. ವೇ. ೧೩-೧೪-೫). ಅವನು ದೂರದರ್ಶಿ (೭-೩೫-೮; ೧೦-೩೭-೧); ಸರ್ವದರ್ಶಿ (೧-೫೦-೨); ಎಲ್ಲ ಪ್ರಪಂಚದ ಗೂಢಚಾರಿ (೪.೧೩-೩); ಜಂಗಮ ಪ್ರಪಂಚವನ್ನೂ, ಮಾನವರು ಮಾಡುವ ಒಳ್ಳೆಯ ಮತ್ತು ಕೆಟ್ಟ ಕೆಲಸಗಳನ್ನೂ ನೋಡುತ್ತಾನೆ (೧-೫೦-೭; ೬-೫೧-೨; ೭-೬೦-೨; ೭-೬೧-೧; ೭-೬೩-೧,೪). ಸೂರ್ಯನಿಂದ ಎಚ್ಚರಿಸಲ್ಪಟ್ಟು, ಮನುಷ್ಯರು ತಮ್ಮ ಕೆಲಸಕಾರ್ಯಗಳನ್ನು ಮಾಡುತ್ತಾರೆ (೭-೬೩-೪). ಎಲ್ಲಾ ಮನುಷ್ಯರಿಗೂ ಸೇರಿದವನು ಅವರನ್ನು ಎಚ್ಚ ರಿಸುತ್ತಾ ಉದಯಿಸುತ್ತಾನೆ (೭-೬೩-೨,೩) ಚರಾಚರ ವಸ್ತುಗಳಿಗೆಲ್ಲಾ ಅವನೇ ಆತ್ಮ, ಅವನೇ ರಕ್ಷಕ (೧-೧೧೫-೧; ೭-೬೦-೨) ಅವನ ರಥಕ್ಕೆ, ಒಂದೇ ಕುದುರೆ (೭-೬೩-೨), ಅಥವಾ ಅಸಂಖ್ಯಾತ ಅಶ್ವಗಳು (೧-೧೧೫-೩; ೧೦-೩೭-೩; ೧೦-೪೯-೭), ಅಥವಾ ಹೆಣ್ಣು ಕುದುರೆಗಳು (೫-೨೯-೫), ಅಥವಾ ಏಳು ಕುದುರೆ ಗಳು (೫-೪೫-೯), ಅಥವಾ ಏಳು ಹೆಣ್ಣು ಕುದುರೆಗಳು (ಹರಿತಃ ಎಂಬವು) (೧-೫೦-೮ ಮತ್ತು ೯; ೭-೬೦-೩), ಅಥವಾ ಏಳು ಶೀಘ್ರಗಾಮಿಗಳಾದ ಹೆಣ್ಣುಕುದುರೆಗಳು (೪-೧೩-೩).



CC-0. Jangamwadi Math Collection. Digitized by eGangotri

ವರುಣನು ಸೂರ್ಯನಿಗೋಸ್ಕರ ಅವನ ಪಥವನ್ನು ಸಿದ್ಧಪಡಿಸುತ್ತಾನೆ (೧-೨೪-೮ ; ೭-೮೭-೧), ಅಥವಾ ಮಿತ್ರ, ವರುಣ ಮತ್ತು ಅರ್ಯಮರೆಂಬ ಆದಿತ್ಯರು ಸಿದ್ಧಪಡಿಸುತ್ತಾರೆ (೭-೬೦-೪). ಪೂಷಣನು ಅವನ ದೂತನು (೬-೫೮-೩). ಉಷಃಕಾಲ ಅಥವಾ ಉಷಃಕಾಲಗಳು ಸೂರ್ಯ, ಅಗ್ನಿ ಮತ್ತು ಯಾಗಗಳನ್ನು ಅನಾವರಣ ಮಾಡುತ್ತಾರೆ ಅಥವಾ ಉತ್ಪತ್ತಿ ಮಾಡುತ್ತಾರೆ ಅಥವಾ (೭-೮೦-೨ ; ೭-೭೮-೩). ಉಷೋದೇವಿಯ ಮಡಿಲಿನಿಂದ ಪ್ರಕಾಶಿಸುತ್ತಾ, ಹೊರಹೊರಡುತ್ತಾನೆ (೭-೬೩-೩). ಬೇರೆ ಒಂದು ದೃಷ್ಟಿಯಿಂದ ಉಷೋದೇವಿಯು ಸೂರ್ಯನ ಪತ್ನಿ (೭-೭೫-೫).

ಸೂರ್ಯನಿಗೆ ಅವನ ತಾಯಿಯ ಕಡೆಯಿಂದ (೧-೫೦-೧೩ ; ೧-೧೯೧-೯ ; ೮-೯೦-೧೧) ಆದಿತ್ಯ (ಅದಿತಿಯ ಮಗ) ಅಥವಾ ಆದಿತೇಯ (೧೦-೮೮-೧೧) ಎಂದು ಹೆಸರು. ಆದರೆ ಇವನೂ ಆದಿತ್ಯರೂ ಭಿನ್ನರು (೮-೩೫-೧೩,೧೫). ದ್ಯುದೇವತೆಯು ಅವನ ಜನಕನು (೧೦-೩೭-೧). ಅವನು ದೇವತೆಗಳಿಂದ ಜನಿಸಿದವನು. ಸಾಗರದಲ್ಲಿ ಅಡಗಿದ್ದ ಅವನನ್ನು ದೇವತೆಗಳು ಮೇಲಕ್ಕೆ ಎತ್ತಿದರು (೧೦-೭೨-೭). ಅಗ್ನಿಯ ರೂಪಾಂತರವಾಗಿ ದೇವತೆಗಳು ಅವನನ್ನು ಆಕಾಶದಲ್ಲಿ ಇಟ್ಟರು (೧೦-೮೮-೧೧). ಇವನು ವಿರಾಡ್ರೂಪದ ಪುರುಷನ ನೇತ್ರದಿಂದ ಉದ್ಭವಿಸಿದನೆಂದು (೧೦-೯೦-೩) ಒಂದು ಮತ. ದಿವಾಕರನು (ಸೂರ್ಯನು) ವೃತ್ರನಿಂದ ಉದ್ಭವಿಸಿದನು (ಅ.ವೇ. ೪-೧೦-೫).

ನಾನಾ ದೇವತೆಗಳು ಪ್ರತ್ಯೇಕ ಪ್ರತ್ಯೇಕವಾಗಿ ಸೂರ್ಯನ ಉತ್ಪತ್ತಿಗೆ ಕಾರಣರೆಂದು ಹೇಳಿದೆ. ಇಂದ್ರನು ಅವನನ್ನು ಜನಿಸುವಂತೆ ಮಾಡಿ (೨-೧೨-೭), ಆಕಾಶಕ್ಕೆ ಏರಿಸಿ, ಅಲ್ಲಿ ಪ್ರಕಾಶಿಸುವಂತೆ ಮಾಡಿದನು (೩-೪೪-೨; ೮-೭೮-೭). ಇಂದ್ರ-ವಿಷ್ಣುವು ಅವನ ಜನಕರು (೮-೯೯-೪). ಬೆಳಕಿನಿಂದೊಡಗೂಡಿದ ಸೂರ್ಯನನ್ನು ಇಂದ್ರ-ಸೋಮರು ಬೆಳಿಸಿದರು (೬-೭೨-೨) ; ಮಿತ್ರಾವರುಣರು ಅವನನ್ನು ಆಕಾಶದಲ್ಲಿ ಸ್ಥಾಪಿಸಿದರು (೪-೧೩-೨; ೫-೬೩-೪ ಮತ್ತು ೭). ಇಂದ್ರ ವರುಣರು ಅವನನ್ನು ಆಕಾಶಕ್ಕೆ ಏರಿಸಿದರು (೭-೮೨-೩). ಸೂರ್ಯನಲ್ಲಿ ಬೆಳಕು ಸೋಮನಿಂದ ನಿಹಿತವಾಯಿತು (೬-೪೪-೨೩ ; ೯-೯೭-೪೧) ; ಸೋಮನಿಂದಲೇ ಸೂರ್ಯನು ಜನಿಸಿದನು (೯-೯೬-೫ ; ೯-೧೧೦-೫) ; ಸೋಮದೇವತೆಯೇ ಸೂರ್ಯನು ಪ್ರಕಾಶಿಸುವಂತೆ ಮಾಡಿದನು (೯-೬೩-೭) ಅಥವಾ ಆಕಾಶದಲ್ಲಿ ಮೇಲೆ ಇರುವಂತೆ ಮಾಡಿದನು (೯-೧೦೭-೭). ಸೂರ್ಯನ ಕಾಂತಿಯನ್ನು ಬಹಳ ಮೇಲೆ ಸ್ಥಾಪಿಸಿದ್ದು (೧೦-೩-೨) ಮತ್ತು ಆಕಾಶಕ್ಕೆ ಏರುವಂತೆ ಮಾಡಿದುದೂ (೧೦-೧೫೬-೪) ಅಗ್ನಿಯೇ. ಸೃಷ್ಟಿಕರ್ತೃವಾದ ಧಾತೃವೇ ಸೂರ್ಯಚಂದ್ರರಿಬ್ಬರನ್ನೂ ರೂಪುಗೊಳಿಸಿದುದು (೧೦-೧೯೦-೩). ಅಂಗಿರಸರ ಯಾಗ ಕರ್ಮಗಳಿಂದ ಸೂರ್ಯನು ಆಕಾಶವನ್ನು ಏರಲು ಸಾಧ್ಯವಾಯಿತು (೧೦-೬೨-೩). ಸೂರ್ಯನ ಜನ್ಮಸಂಬಂಧವಾದ ಈ ವಾಕ್ಯಗಳಲ್ಲೆಲ್ಲಾ, ಕಾಂತಿಯುಕ್ತವಾದ ಸೂರ್ಯಮಂಡಲವೇ ಸೂಚಿತವಾದಂತಿದೆ.

ಅನೇಕ ವಾಕ್ಯಗಳಲ್ಲಿ ಸೂರ್ಯನು ಅಂತರಾಳದಲ್ಲಿ ಹಾರಾಡುತ್ತಿರುವ ಪಕ್ಷಿಯೆಂದು ಭಾವಿಸಲ್ಪಟ್ಟಿದಾನೆ. ಅವನು ಒಂದು ಪಕ್ಷಿ (೧೦-೧೭೭-೧ ಮತ್ತು ೨), ಪುಷ್ಟವಾದ ಒಂದು ಪಕ್ಷಿ (೫-೪೭-೩) ; ಸೂರ್ಯನು ಹಾರುತ್ತಾನೆ (೧-೧೯೧-೯) ; ಹಾರುತ್ತಿರುವ ಗಿಡುಗನಿಗೆ ಹೋಲಿಸಿದೆ (೭-೬೩-೫) ; ಗಿಡುಗನೆಂದೇ ಕರೆದಿದೆ (೫-೪೫-೯). ಒಂದು ಕಡೆ ಅವನನ್ನು ವೃಷಭ ಮತ್ತು ಪಕ್ಷಿ ಎಂತಲೂ (೫-೪೭-೩) ಇನ್ನೊಂದು ಕಡೆ ಬಣ್ಣಬಣ್ಣದ ಚುಕ್ಕೆಗಳುಳ್ಳ ವೃಷಭ (೧೦-೧೮೯-೧ ; ೫-೪೭-೩ನ್ನು ಹೋಲಿಸಿ) ಎಂತಲೂ, ಪಕ್ಷಿ ಎಂತಲೂ, ಕರೆಯಲ್ಪಟ್ಟಿದಾನೆ. ಉಷೋದೇವಿಯಿಂದ ಆನೀತವಾದ, ಶ್ವೇತವರ್ಣದ ಮತ್ತು ಉಜ್ವಲವಾದ ಅಶ್ವವೆಂದೊಂದು ಕಡೆ (೭-೭೭-೩); ಸೂರ್ಯನ ಸಪ್ತಾಶ್ವಗಳು ಅವನ ರಶ್ಮಿಗಳು (೮-೬೧-೧೬), ಏಕೆಂದರೆ ಈ ರಶ್ಮಿಗಳು ಅವನನ್ನು ಒಯ್ಯುತ್ತ (ವಹಂತಿ) ತರುತ್ತವೆ. ಅವನ ಏಳು ಹೆಣ್ಣು ಕುದುರೆಗಳು ಅವನ ರಥದ ಪುತ್ರಿಯರು (೧-೫೦-೯).



CC-0. Jangamwadi Math Collection. Digitized by eGangotri

ಒಂದೊಂದು ಸಲ ಸೂರ್ಯನು ಜಡಪದಾರ್ಥವೆಂದೂ ಪರಿಗಣಿತನಾಗಿದಾನೆ. ಅವನು ಆಕಾಶದಲ್ಲಿರುವ ಒಂದು ರತ್ನ (೭-೬೩-೪ ; ೬-೫೧-೧ನ್ನು ಹೋಲಿಸಿ) ; ಆಕಾಶ ಮಧ್ಯದಲ್ಲಿ ಕೆತ್ತಿರುವ ನಾನಾ ವರ್ಣದ ಶಿಲೆ (೫-೪೭-೩ ; ಶತ. ಬ್ರಾ. ೬-೧-೨-೩ನ್ನು ಹೋಲಿಸಿ) ಅವನು ಒಂದು ಹೊಳೆಯುತ್ತಿರುವ ಆಯುಧ ; ಅದನ್ನು ಮಿತ್ರಾವರುಣರು ಮಳೆ ಮೋಡಗಳಿಂದ ಮರೆ ಮಾಡುತ್ತಾರೆ (೫-೬೩-೪). ಅವನು ಮಿತ್ರಾವರುಣರ ಪವಿ ಎಂಬ ಆಯುಧ (೫-೬೨-೨), ಅಥವಾ ಅವರಿಬ್ಬರಿಂದ ಆಕಾಶದಲ್ಲಿ ನಿಹಿತವಾದ, ಉಜ್ವಲವಾದ ರಥ (೫-೬೩-೭) ಸೂರ್ಯನೇ ಒಂದು ಚಕ್ರ (೧-೧೭೫-೫ ; ೪-೩೦-೪). ಸೂರ್ಯನ ಚಕ್ರವು ಅನೇಕ ಕಡೆ (೪-೨೮-೨ ; ೫-೨೯-೧೦) ಉಕ್ತವಾಗಿದೆ.

ಸೂರ್ಯನು ಪ್ರಕಾಶಿಸುವುದು ಪ್ರಪಂಚಕ್ಕೋಸ್ಕರ (೭-೬೩-೧) ; ಮನುಷ್ಯರು ಮತ್ತು ದೇವತೆಗಳಿಗೋಸ್ಕರ (೧-೫೦-೫) ತನ್ನ ಕಾಂತಿಯಿಂದ ಕತ್ತಲನ್ನು ಓಡಿಸುತ್ತಾನೆ (೧೦-೩೭-೪) ಚರ್ಮದಂತೆ ತಮಸ್ಸನ್ನು ಸುರುಳಿಸುತ್ತಿ ಬಿಡುತ್ತಾನೆ (೭-೬೩-೧). ಚರ್ಮವೊಂದನ್ನು ಎಸೆಯುವಂತೆ, ಅವನ ಕಾಂತಿಯು ತಮಸ್ಸನ್ನು ನೀರಿನೊಳಕ್ಕೆ ಎಸೆಯುತ್ತದೆ. (೪-೧೩-೪) ಅಂಧಕಾರಕ್ಕೆ ಸಂಬಂಧಿಸಿದ ವ್ಯಕ್ತಿಗಳನ್ನೂ, ಮಾಟಗಾತಿಯರನ್ನೂ ಜಯಿಸುತ್ತಾನೆ (೧-೧೯೧-೮ ಮತ್ತು ೯ ; ೭-೧೦೪-೨೪ನ್ನು ಹೋಲಿಸಿ). ಸೂರ್ಯನ ಪ್ರಚಂಡವಾದ ತಾಪದ ವಿಷಯವಾದ ಉಕ್ತಿಗಳು ಎರಡು ಮೂರು ಮಾತ್ರ (೭-೩೪-೧೯ ; ೯-೧೦೭-೨೦). ಋಗ್ವೇದದಲ್ಲಿ ಸೂರ್ಯನು ಕ್ರೂರ ದೇವತೆಯಲ್ಲ, ಸೂರ್ಯನ ಈ ಅಂಶವು ಅಥರ್ವ ವೇದ ಮತ್ತು ಬ್ರಾಹ್ಮಣಗಳಲ್ಲಿ ಸ್ಪಷ್ಟವಾಗುತ್ತದೆ.

ಸೂರ್ಯನು ದಿನಮಾನವನ್ನು ಗೊತ್ತುಮಾಡುತ್ತಾನೆ (೧-೫೦-೭) ಮತ್ತು ಜೀವದ ಅವಧಿಯನ್ನು ಹೆಚ್ಚಿಸುತ್ತಾನೆ (೮-೪೮-೭) ರೋಗರುಜಿನಗಳನ್ನೂ, ಕೆಟ್ಟ ಕನಸುಗಳನ್ನೂ ನಿವಾರಿಸುತ್ತಾನೆ. (೧೦-೩೭-೪). ಸೂರ್ಯೋದಯ ದರ್ಶನವೇ ಜೀವನದ ಗುರಿ (೪-೨೫-೪ ; ೬-೫೨-೫). ಎಲ್ಲಾ ಪ್ರಾಣಿಗಳೂ ಸೂರ್ಯನನ್ನಾಶ್ರಯಿಸಿವೆ (೧-೧೬೪-೧೪). ಮತ್ತು ಆಕಾಶವೂ ಅವನನ್ನೇ ಆಶ್ರಯಿಸಿದೆ (೧೦-೮೫-೧). ಅವನಿಗೆ ಸರ್ವಕರ್ತನೆಂದೂ (ವಿಶ್ವಕರ್ಮ) ಹೆಸರು (೧೦-೧೭೦-೪). ಅವನ ಮಹತ್ವದಿಂದ, ಅವನು ದೇವತೆಗಳ ಪುರೋಹಿತನಾಗಿದಾನೆ (೮-೯೦-೧೨). ಉದಯಕಾಲದಲ್ಲಿ, ಮಿತ್ರಾವರುಣರು ಮತ್ತಿತರ ದೇವತೆಗಳಿಗೆ, ತಾವು ಪಾಪರಹಿತರೆಂದು ಹೇಳಬೇಕೆಂದು, ಮನುಷ್ಯರು ಸೂರ್ಯನನ್ನು ಪ್ರಾರ್ಥಿಸುತ್ತಾರೆ (೭-೬೦-೧ ; ೭-೬೨-೨). ಉದಿಸಿದ ಮೇಲೆ ವೃತ್ರನನ್ನು ವಧಿಸುವ ಇಂದ್ರನ ಹತ್ತಿರ ಹೋಗುತ್ತಾನೆ ಮತ್ತು ಇಂದ್ರನೊಡನೆ ಸ್ತುತಿಸಲ್ಪಟ್ಟಾಗ ಸೂರ್ಯನೇ ವೃತ್ರನನ್ನು ಕೊಲ್ಲುತ್ತಾನೆ ಎಂದೂ ಉಕ್ತವಾಗಿದೆ (೮-೮೨-೧, ೨ ಮತ್ತು ೪).

ಸೂರ್ಯ ಸಂಬಂಧವಾದ ಇತಿಹಾಸವು ಒಂದೇ. ಇಂದ್ರನು ಅವನನ್ನು ಪರಾಜಯಗೊಳಿಸಿ (೧೦-೪೩-೫). ಅವನ ರಥಚಕ್ರವನ್ನು ಕದ್ದನು (೧-೧೭೫-೪ ; ೪-೩೦-೪). ಪ್ರಾಯಶಃ ಇದು, ಚಂಡಮಾರುತದಿಂದಾಗುವ ಸೂರ್ಯಮಂಡಲದ ತಿರೋಧಾನಕ್ಕೆ ಅನ್ವಯಿಸಬಹುದು.

## ಸವಿತೃ

ಹನ್ನೊಂದು ಸಂಪೂರ್ಣ ಸೂಕ್ತಗಳೂ, ಮತ್ತೆ ಕೆಲವು ಸೂಕ್ತಗಳ ಭಾಗಗಳೂ ಸವಿತೃವನ್ನು ಸ್ತುತಿಸುತ್ತವೆ ; ಸುಮಾರು ೧೭೦ ಸಲ ಅವನ ಹೆಸರು ಬಂದಿದೆ. ಹನ್ನೊಂದರಲ್ಲಿ ಮೂರು ಸೂಕ್ತಗಳು ಮಾತ್ರ ಒಂದು ಮತ್ತು ಹತ್ತನೆಯ ಮಂಡಲಗಳಲ್ಲಿಯೂ, ಉಳಿದವು ಬಾಕಿ ಮಂಡಲಗಳಲ್ಲಿಯೂ ಇವೆ. ಸವಿತೃವು ಬಹುಮಟ್ಟಿಗೆ ಸುವರ್ಣಮಯನಾದ ದೇವತೆ ; ಅವನಿಗೆ ಸೇರಿದವರೂ, ಅವನ ಸಲಕರಣೆಗಳೂ ಸುವರ್ಣಮಯರೆಂದೇ ವರ್ಣಿತರಾಗಿದ್ದಾರೆ. ಅವನ ಕಣ್ಣು ಬಂಗಾರದ್ದು (೧-೩೫-೮) ; ಕೈಗಳು ಬಂಗಾರದವು (೧-೩೫-೯ ಮತ್ತು ೧೦) ;



CC-0. Jangamwadi Math Collection. Digitized by eGangotri

ಬಂಗಾರದ ನಾಲಿಗೆ (೬-೭೧.೩) ಯುಳ್ಳವನು. ಈ ತರಹ ವರ್ಣನೆ ಸವಿತೃವಿನ ವೈಶಿಷ್ಟ್ಯ. ಅವನ ಕೈಗಳು ಬಂಗಾರದವು (೬.೭೧-೧ ಮತ್ತು ೫ ; ೭-೪೫.೨) ಅಗಲವಾದವು (೨-೩೮-೨); ಅಥವಾ ಸುಂದರವಾದವು (೩-೩೩-೬) ಅವನದು ಸವಿನುಡಿ (೬-೭೧-೪) ಸುಂದರವಾದ ನಾಲಿಗೆ (೩-೫೪-೧೧); ಮತ್ತು ಒಂದೇ ಒಂದುಕಡೆ ಕಬ್ಬಿಣದ ದವಡೆಗಳುಳ್ಳವನೆಂದಿದೆ (೬-೭೧-೪). ಅವನ ಕೇಶವು ಹಳದಿಯ ಬಣ್ಣ (೧೦-೧೩೯-೧) ; ಅಗ್ನಿ ಮತ್ತು ಇಂದ್ರರ ಕೇಶವೂ ಇದೇ ವರ್ಣದ್ದು. ಕಪಿಲ ವರ್ಣದ ಉಡುಪು (೪-೫೩-೨). ಸ್ವರ್ಣ ದಂಡಯುಕ್ತವಾದ ಸ್ವರ್ಣರಥ (೧-೩೫-೨ ಮತ್ತು ೫). ಈ ರಥವು, ಅವನಂತೆಯೇ (೫-೮೧-೨) ಅನೇಕ ಆಕಾರವುಳ್ಳದ್ದು (೧-೩೫,೩). ಅವನ ರಥಕ್ಕೆ ಎರಡು ತೇಜೋವಿಶಿಷ್ಟವಾದ ಅಶ್ವಗಳಿವೆ. ಅಥವಾ ಎರಡು ಅಥವಾ ಹೆಚ್ಚು ಸಂಖ್ಯೆಯ ಮಾಸಲುಬಣ್ಣದ ಬಿಳಿಯ ಗೊರಸಿನ ಕುದುರೆಗಳು ರಥವನ್ನು ಎಳೆಯುತ್ತವೆ (೧-೩೫-೨ ಮತ್ತು ೫ ; ೭-೪೫-೧).

ಅಪಾರವಾದ ತೇಜಸ್ಸು ಸವಿತೃವಿನದು. ಅವನದು ಅಮಿತವಾದ ಸುವರ್ಣಕಾಂತಿ; ಇದು ಇತರ ದೇವತೆಗಳಿಗೆ ಸಲ್ಲುವುದು ಅಪರೂಪ (೩-೩೮-೮ ; ೭-೩೮-೧). ಅವನು ಈ ಕಾಂತಿಯನ್ನು ಹೊರಕ್ಕೆ ಚಾಚುತ್ತಾನೆ ಅಥವಾ ಚೆಲ್ಲುತ್ತಾನೆ. ಇದರಿಂದ ವಾಯು ಮಂಡಲ, ಸ್ವರ್ಗ ಮತ್ತು ಭೂಮಿ, ಪ್ರಪಂಚ, ಭೂವಿವರಗಳು ಮತ್ತು ಆಕಾಶ, ಎಲ್ಲವೂ ಪ್ರಕಾಶವಾಗುತ್ತವೆ (೧-೩೫-೭ ಮತ್ತು ೮ ; ೪-೧೪-೨ ; ೪-೫೩-೪ ; ೫-೮೧-೨) ದಿಗಂತದ ವರೆಗೂ ವ್ಯಾಪಿಸುವ ತನ್ನ ಬಲವಾದ ಬಂಗಾರದ ತೋಳುಗಳನ್ನು ಎತ್ತಿ, ಎಲ್ಲಾ ಪ್ರಾಣಿಗಳನ್ನೂ ಎಚ್ಚರಿಸುತ್ತಾನೆ ಮತ್ತು ಆಶೀರ್ವದಿಸುತ್ತಾನೆ (೨-೩೮-೨ ; ೪-೫೩-೩ ಮತ್ತು ೪ ; ೬-೭೧-೧ ಮತ್ತು ೫ ; ೭-೪೫-೨). ಸವಿತೃವು ತೋಳುಗಳನ್ನೆತ್ತುವಂತೆ ಇತರ ದೇವತೆಗಳು ಎಂದು ಹೋಲಿಸುವುದರಿಂದ, ಇದೂ ಒಂದು ಅವನ ವೈಯಕ್ತಿಕ ಗುಣವೆನ್ನಬಹುದು. ಅಗ್ನಿಯು ಸವಿತೃವಿನಂತೆ ಬಾಹುಗಳನ್ನು ಎತ್ತುತ್ತಾನೆ (೧-೯೫-೭) ; ಸವಿತೃವು ತನ್ನ ತೋಳನ್ನು ಚಾಚುವಂತೆ, ಉಷಸ್ಸು ಬೆಳಕನ್ನು ಚಾಚುತ್ತಾಳೆ (೭-೭೯-೨). ಇದರಂತ, ಸ್ತುತಿ ವಾಕ್ಯಗಳನ್ನು ಗಟ್ಟಿಯಾಗಿ ಉಚ್ಚರಿಸಬೇಕೆಂದು ಬೃಹಸ್ಪತಿಯೂ ಪ್ರಾರ್ಥಿತನಾಗಿದಾನೆ (೧-೧೯೦-೩)- ಅಧೋಮುಖವೂ ಮತ್ತು ಊರ್ಧ್ವಮುಖವೂ ಆದ ಪಥದಲ್ಲಿ, ಸವಿತೃವು, ತನ್ನ ಬಂಗಾರದ ರಥದಲ್ಲಿ ಕುಳಿತು, ಎಲ್ಲಾ ಪ್ರಾಣಿಗಳನ್ನೂ ಅವಲೋಕಿಸುತ್ತಾ, ಹೋಗುತ್ತಾನೆ (೧-೩೫-೨ ಮತ್ತು ೩). ಉಷಃಕಾಲಕ್ಕೆ ಮುಂಚೆ, ಅವನು ಅಶ್ವನೀದೇವತೆಗಳ ರಥವನ್ನು ಹೊರಡಿಸುತ್ತಾನೆ (೧-೩೪-೧೦). ಉಷೋದೇವಿಯ ಮಾರ್ಗವನ್ನನುಸರಿಸಿ, ತಾನೂ ಪ್ರಕಾಶಿಸುತ್ತಾನೆ. (೫-೮೧-೨). ಭೂಮಿಯ ಪ್ರದೇಶಗಳನ್ನು ಅಳೆದಿದಾನೆ; ಸ್ವರ್ಗಲೋಕದ ಮೂರು ಪ್ರದೇಶಗಳಿಗೆ ಹೋಗುತ್ತಾನೆ ; ಸೂರ್ಯನ ರಶ್ಮಿಗಳೊಡನೆ ಸೇರಿಹೋಗುತ್ತಾನೆ. (೫-೮೧-೩ ಮತ್ತು ೪) ಋಗ್ವೇದದಲ್ಲಿ 'ಸೂರ್ಯರಶ್ಮಿ' ಎಂಬ ಪದವು ಬರುವುದು ಒಂದೇಸಲ. ಅದು ಸವಿತೃವಿಗೆ ಸೇರಿದೆ. ಸೂರ್ಯರಶ್ಮಿಗಳಿಂದ ಪ್ರಕಾಶಿಸುತ್ತಾ, ಹರಿದ್ರಕೇಶನಾದ ಸವಿತೃವು ಪೂರ್ವದಿಕ್ಕಿನಿಂದ ತನ್ನ ಕಾಂತಿಯನ್ನು ಸತತವೂ ಬೀರುತ್ತಿರುತ್ತಾನೆ (೧೦-೧೩೯-೧). ಅವನು ವಾಯುಮಂಡಲವನ್ನೂ ಮೂರು ಆಕಾಶಗಳನ್ನೂ ಊರ್ಧ್ವ ಲೋಕದ ಮೂರು ಬೆಳಗುತ್ತಿರುವ ಪ್ರದೇಶಗಳನ್ನೂ, ಮೂರು ಸಲ ಸುತ್ತಿ . ಬರುತ್ತಾನೆ (೪-೫೩-೫). ಆಕಾಶದಲ್ಲಿರುವ ಅವನು ಅನುಸರಿಸುವ ಪುರಾತನ ಮಾರ್ಗಗಳು ಶುದ್ಧವಾಗಿವೆ. ಮತ್ತು ನಡೆಯಲು ಅನುಕೂಲ ವಾಗಿವೆ. ಇಲ್ಲೀ, ಅವನ ಆರಾಧಕರು ಅವನನ್ನೂ "ರಕ್ಷಿಸು" ಎಂದು ಅರಸುತ್ತಾರೆ (೧-೩೫-೧೧). 'ಮೃತನ ಜೀವವನ್ನು ಸಜ್ಜೀವಗಳಿರುವ ಸ್ಥಳಕ್ಕೆ ಸೇರಿಸು' ಎಂದು ಅವನನ್ನು ಪ್ರಾರ್ಥಿಸುತ್ತಾರೆ (೧೦-೧೭,೪). ದೇವತೆಗಳಿಗೆ ಅಮರತ್ವವನ್ನೂ, ಮನುಷ್ಯರಿಗೆ ದೀರ್ಘಾಯುಸ್ಸನ್ನೂ ಕೊಡುವವನು ಅವನೇ (೪-೫೪ ೨). ತಮ್ಮ ಕರ್ಮಗಳ ಸಾಮರ್ಥ್ಯದಿಂದ ತನ್ನ ಮನೆಗೆ ಬಂದ ಋಭುಗಳಿಗೆ ಅಮರತ್ವವನ್ನು ದಯಪಾಲಿಸಿದವನೂ ಅವನೇ- (೧-೧೧೦-೨ ಮತ್ತು ೩). ಸೂರ್ಯನನ್ನು ಪ್ರಾರ್ಥಿಸುವಂತೆ ಸವಿತೃವನ್ನೂ, ದುಸ್ವಪ್ನಪರಿಹಾರಕ್ಕಾಗಿಯೂ (೫-೮೨-೪)



CC-0. Jangamwadi Math Collection. Digitized by eGangotri

ಮತ್ತು ಪಾಶವಿಮೋಚನೆಗಾಗಿಯೂ(೪-೫೪-೩)ಪ್ರಾರ್ಥಿಸುತ್ತಾರೆ. ಅವನು ದುರ್ದೇವತೆಗಳನ್ನೂ, ಮಾಟಗಾರರನ್ನೂ ಓಡಿಸುತ್ತಾನೆ (೧-೩೫-೧೦; ೭-೩೮-೭).

ಇತರ ಕೆಲವು ದೇವತೆಗಳಂತೆ ಇವನೂ ಅಸುರನು (೪-೫೩-೧). ಅವನು ಅನುಸರಿಸುವುದು ಗೊತ್ತಾದ ಕೆಲವು ನಿಯಮಗಳನ್ನು (೪-೫೩-೪; ೧೦,೩೪-೮; ೧೦-೧೪೯-೩). ನೀರು ಮತ್ತು ಗಾಳಿಗಳು ಅವನ ನಿಯಮ ಗಳಿಗೆ ಒಳಪಟ್ಟಿವೆ (೨-೩೮-೨). ನೀರುಗಳಿಗೆ ಅವನೇ ದಾರಿ ತೋರಿಸುವವನು; ಅವನಿಂದ ತಳ್ಳಲ್ಪಟ್ಟು, ಅವು ವಿಸ್ತಾರವಾಗಿ ಪ್ರವಹಿಸುತ್ತವೆ (೩-೩೩-೬ ನಿರುಕ್ತ ೨-೨೬ ನ್ನು ಹೋಲಿಸಿ). ಇತರ ದೇವತೆಗಳು ಇವನ ಮೇಲ್ಪಂಕ್ತಿಯನ್ನನುಸರಿಸುತ್ತಾರೆ (೫-೮೧-೩). ಅವನ ಮನೋ ನಿರ್ಧಾರವನ್ನೂ ಮತ್ತು ಅವನ ಸ್ವಾತಂತ್ರ್ಯ ವನ್ನೂ ಯಾರೂ ಪ್ರತಿಭಟಿಸಲಾರರು; ಇಂದ್ರ, ವರುಣ, ಮಿತ್ರ, ಅರ್ಯಮ, ರುದ್ರ ಮೊದಲಾದವರೂ ಪ್ರತಿಭಟಿಸ ಲಾರರು (೨.೩೮-೭ ಮತ್ತು ೯; ೫-೫೩-೨). ವಸುಗಳು, ಅದಿತಿ, ವರುಣ, ಮಿತ್ರ ಮತ್ತು ಆರ್ಯಮರು ಅವನ ಕೀರ್ತಿಯನ್ನು ಪ್ರಶಂಸಿಸುತ್ತಾರೆ (೭-೩೮-೩ ಮತ್ತು ೪). ಪೂಷಣ ಮತ್ತು ಸೂರ್ಯರಂತೆ, ಸವಿತೃವು ಚರಾಚರ ವಸ್ತುಗಳಿಗೆ ಒಡೆಯನು (೪-೫೩-೬). ಸರ್ವರಿಂದ ಅಪೇಕ್ಷಣೀಯವಾದ ವಸ್ತುಗಳೆಲ್ಲವೂ ಅವನ ಅಧೀನ; ಅವನೇ ಸ್ವರ್ಗ, ಭೂಮಿ ಮತ್ತು ಆಕಾಶಗಳಿಂದ ಶುಭಪ್ರದನಾಗುತ್ತಾನೆ (೧-೨೪-೩; ೨-೩೮-೧೧) ಎರಡುಸಲ, ಅಗ್ನಿ ಯಂತೆ (ಗೃಹ್ಯ). ಮನೆಗೆ ಸೇರಿದವನು (ದಮೂನಃ) ಎಂತಲೂ (೧-೧೨೩-೩; ೬-೭೧-೪) ಕರೆಯಲ್ಪಟ್ಟಿ ದ್ದಾನೆ. ಇತರ ದೇವತೆಗಳಂತೆ, ಇವನೂ ಆಕಾಶಕ್ಕೆ ಆಧಾರಭೂತನು (೪-೫೩-೨; ೧೦-೧೪೯-೪). ಪ್ರಪಂಚ ಕ್ಕೆಲ್ಲಾ ಆಧಾರನು (೪-೫೪-೪). ಭೂಮಿಯನ್ನು ಕಟ್ಟುಗಳಿಂದ ಬಂಧಿಸಿ, ಸ್ಥಿರವಾಗಿ ಇಟ್ಟದಾನೆ ಮತ್ತು ಆಕಾಶ ವನ್ನು ತೊಲೆ ತೇರುಗಳಿಲ್ಲದ ಅಂತರಾಳದಲ್ಲಿ ನಿಲ್ಲಿಸಿದಾನೆ (೧೦-೧೪೯-೧).

ಅಗ್ನಿಗೆ ಮಾತ್ರ ಸಲ್ಲುವ (ಅಪಾಂನಪಾತ್) "ನೀರಿನಿಂದಜನ್ಯವಾದುದು" ಎಂಬ ವಿಶೇಷಣವು ಒಂದು ಸಲವಾದರೂ ಸವಿತೃಗೆ ಹೇಳಲ್ಪಟ್ಟಿದೆ (೧-೨೨-೬; ೧೦-೧೪೯-೨). ರಲ್ಲಿಯೂ ಸವಿತೃವಿಗೆ ಹೇಳಿರುವಂತೆ ಕಾಣುತ್ತದೆ. ಯಾಸ್ಕರು (ನಿರುಕ್ತ ೧೦-೩೨) ರಲ್ಲಿ, ಈ ಮೇಲೆ ಹೇಳಿದ (೧೦-೧೪೯-೨) ನೆಯ ಮಂತ್ರದ ಮೇಲೆ ಟಿಪ್ಪಣಿ ಬರೆಯುತ್ತಾ, ಮಳೆಗೆ ಕಾರಣನಾದುದರಿಂದ ಸವಿತೃವು ಮಧ್ಯ ಪ್ರದೇಶ ದೇವತೆ ಮತ್ತು ಆಕಾಶದಲ್ಲಿರುವ ಸೂರ್ಯನಿಗೂ (ಆದಿತ್ಯ) ಸವಿತೃ ಎಂಬಭಿಧಾನವಿರುವುದರಿಂದಲೂ, ಸವಿತೃವು ಈ ಮಧ್ಯ ಲೋಕದ ದೇವತೆಯೇ ಇರಬೇಕು ಎಂದು ಹೇಳಿದಾರೆ. ವೃಷ್ಟಿಕಾರಕನಾದುದರಿಂದಲೂ ವಾಯುಮಂಡಲದಲ್ಲಿಯೋ ಮಧ್ಯಲೋಕದಲ್ಲಿಯೋ (೧-೩೫-೧೧) ಸವಿತೃವಿನ ಪಥವಿರುವುದರಿಂದಲೂ, ನೈಘಂಟುಕ ಕಾಂಡದಲ್ಲಿ ಈ ದೇವತೆಯ ಹೆಸರು ಸ್ವರ್ಗ ಮತ್ತು ಮಧ್ಯ ಲೋಕಗಳ ದೇವತೆಗಳ ಪಟ್ಟಿಯಲ್ಲಿದೆ. ಒಂದು ಸಲ ಸವಿತೃವನ್ನು ಪ್ರಜಾಪತಿಯೆಂತಲೂ (೪-೫೩-೨) ಕರೆದಿದೆ. ಶತಪಥಬ್ರಾಹ್ಮಣದಲ್ಲಿ ಸವಿತೃ ಮತ್ತು ಪ್ರಜಾಪತಿ ಎರಡೂ ಒಂದೇ ದೇವತೆಯೆಂಬ ಅಭಿ ಪ್ರಾಯ ವ್ಯಕ್ತಪಡುತ್ತದೆ (ಶ. ಬ್ರಾ. ೧೨-೩-೫-೧). ತೈತ್ತಿರೀಯ ಬ್ರಾಹ್ಮಣದಲ್ಲಿ (೧-೬-೪-೧) ಪ್ರಜಾಪತಿಯೇ ಸವಿತೃವಾಗಿ ಪ್ರಾಣಿಗಳನ್ನು ಸೃಜಿಸಿದನೆಂದು ಹೇಳಿದೆ. ಜೀವದಾನಮಾಡುವ ಶಕ್ತಿಗೆ ಅವನೊಬ್ಬನೇ ಅಧೀಶ್ವ ರನು; ತನ್ನ ಚಲನೆಗಳಿಂದ (ಯಾಮಭಿಃ) ಪೂಷಣನಾಗುತ್ತಾನೆ. (೫-೮೨-೫). ಪೂಷಣನು ಜೀವದಾಯಕ ಶಕ್ತಿಯುಕ್ತನಾಗಿ, ಪೋಷಕನಂತೆ, ಸರ್ವ ಪ್ರಾಣಿಗಳನ್ನೂ ಅವಲೋಕಿಸುತ್ತಾ ಸಂಚರಿಸುತ್ತಾನೆ (೧೦-೧೩೯,೧). ಎರಡು ಮಂತ್ರಗಳಲ್ಲಿ (೩-೬೨-೯ ಮತ್ತು ೧೦) ಸವಿತೃ ಮತ್ತು ಪೂಷಣಂಗೆ ಸಂಬಂಧವಿದೆಯೆಂದು ಹೇಳಿದೆ. ಮೊದಲನೆಯದರಲ್ಲಿ ಸರ್ವ ಪ್ರಾಣಿಗಳನ್ನೂ ನೋಡುವ ಪೂಷಣನ ಕೃಪೆಯನ್ನು ಬೇಡಿದೆ; ಎರಡನೆಯದರಲ್ಲಿ ಸವಿತೃವಿನ ಓಜಸ್ಸನ್ನೂ, ಮಹಿಮೆಯನ್ನೂ ತಿಳಿಯಲಪೇಕ್ಷಿಸುವವರ, ಆರಾಧಿಸುವವರ ಮನೋವ್ಯಾಪಾರಗಳೆಲ್ಲವೂ ತನ್ನುಖವಾಗುವಂತೆ ಪ್ರೇರಿಸಬೇಕೆಂದು ಪ್ರಾರ್ಥಿಸಿದೆ. ಈ ಎರಡನೆಯದೇ ಪ್ರಸಿದ್ಧರಾದ ಸಾವಿತ್ರೀ ಅಥವಾ



CC-0. Jangamwadi Math Collection. Digitized by eGangotri

ಗಾಯತ್ರೀ. ವೇದಾಭ್ಯಾಸದ ಮೊದಲಲ್ಲಿ ಅದನ್ನು ಉಚ್ಚರಿಸುವ ಪದ್ಧತಿ ಬಂದಿದೆ. ಸವಿತೃವು ವಿಧಿನಿಯಾಮಕ
ನಾದುದರಿಂದ ಮಿತ್ರನೆನಿಸಿಕೊಳ್ಳುತ್ತಾನೆ (೫-೮೧-೪). ಸವಿತೃವು ಕೆಲವು ಸಲ 'ಭಗ' ನೆನ್ನಿಸಿಕೊಳ್ಳುತ್ತಾನೆ.
(೫-೮೨-೧ ಮತ್ತು ೨ ; ೭-೩೮-೧ ಮತ್ತು ೬). ಅಥವಾ ಇದೂ ಒಂದು ಅವನಿಗನ್ವಯಿಸುವ ವಿಶೇಷಣವಿರಬಹುದು.
'ಭಗ' ಎಂಬ ಪದವು (ಮನುಷ್ಯರಿಗೆ ಶುಭ ಫಲಗಳನ್ನು ಕೊಡುವ ದೇವತೆ) ಅನೇಕವೇಳೆ ಸವಿತೃವಿಗೆ ಸೇರಿ
ಸಲ್ಪಟ್ಟು 'ಸವಿತಾಭಗಃ' ಅಥವಾ 'ಭಗಃಸವಿತಾ' ಎಂದು ಪ್ರಯೋಗಿಸಲ್ಪಟ್ಟಿದೆ. ಇತರ ಸ್ಥಳಗಳಲ್ಲಿ, ಸವಿತೃ
ವಿಗೂ ಮಿತ್ರ ಪೂಷಣ ಮತ್ತು ಭಗರಿಗೂ ಭೇದ ಹೇಳಿದೆ. ಅನೇಕ ವಾಕ್ಯಗಳಲ್ಲಿ ಒಂದೇ ದೇವತೆಗೆ ಸವಿತೃ
ಮತ್ತು ಸೂರ್ಯ ಎಂಬ ಎರಡು ಪದಗಳು ಉಪಯೋಗಿಸಲ್ಪಟ್ಟಿವೆ. ಸವಿತೃವು ತನ್ನ ತೇಜಸ್ಸನ್ನು ಮೇಲಕ್ಕೆ
ಎತ್ತಿಹಿಡಿದು, ಪ್ರಪಂಚಕ್ಕೆಲ್ಲಾ ಬೆಳಕನ್ನು ಉಂಟುಮಾಡುತ್ತಾನೆ ; ಹೆಚ್ಚಾಗಿ ಪ್ರಕಾಶಸುತ್ತಾ ಸೂರ್ಯನು ಸ್ವರ್ಗ,
ಭೂಮಿ ಮತ್ತು ಆಕಾಶಗಳನ್ನು ತನ್ನ ಕಿರಣಗಳಿಂದ ತುಂಬುತ್ತಾನೆ (೪-೧೪-೨). ಸೂರ್ಯನಿಗೆ ೭-೬೩-೧,೨ ಮತ್ತು ೪
ನೆಯ ಋಕ್ಕುಗಳಲ್ಲಿ ಸವಿತೃವಿಗೆ ಸಲ್ಲುವ 'ಪ್ರಸವಿತೃ' ಎಂಬ ವಿಶೇಷಣವು ಉಪಯೋಗಿಸಲ್ಪಟ್ಟಿದೆ. ಅದೇ
ಸೂಕ್ತದ ಮೂರನೆಯ ಮಂತ್ರದಲ್ಲಿ ಸವಿತೃವೇ ಸೂರ್ಯನೆಂದು ಹೇಳಿರುವಂತಿದೆ. ಮತ್ತೆ ಕೆಲವು ಕಡೆಯೂ
(೧೦-೧೫೮-೧ರಿಂದ ೪; ೧-೩೫-೧ ರಿಂದ೧೧ ; ೧-೧೨೪-೧) ಇವರಿಬ್ಬರನ್ನೂ ಪ್ರತ್ಯೇಕಿಸುವುದೇ ದುಸ್ತರ. ಸವಿತೃವು
ಸ್ವರ್ಗ ಮತ್ತು ಭೂಮಿಗಳ ಮಧ್ಯೆ ಚಲಿಸುತ್ತಾನೆ ; ರೋಗವನ್ನು ಪರಿಹರಿಸುತ್ತಾನೆ ; ಸೂರ್ಯನನ್ನು ಹೊರಡಿಸು
ತ್ತಾನೆ ; (೧-೩೫-೯) ಈ ವಾಕ್ಯದಲ್ಲಿ ಸೂರ್ಯ ಸವಿತೃಗಳಿಗೆ ಭೇದವು ಸ್ಪಷ್ಟವಾಗಿ ಉಕ್ತವಾಗಿದೆ. ಸವಿತೃವು ಸೂರ್ಯ
ನಿಗೆ ಮನುಷ್ಯರು ಪಾಪರಹಿತರೆಂದು ಹೇಳುತ್ತಾನೆ (೧-೧೨೩-೩). ಸೂರ್ಯನ ರಶ್ಮಿಗಳೊಡನೆ ಬೆರೆಯುತ್ತಾನೆ
(೫-೮೧-೪) ಅಥವಾ ಸೂರ್ಯರಶ್ಮಿಗಳ ಜೊತೆಯಲ್ಲಿ ಪ್ರಕಾಶಿಸುತ್ತಾನೆ (೧೦-೧೩೯-೧ ; ೧೦-೧೮೧-೩ ನ್ನು
ಹೋಲಿಸಿ ; ೧-೧೫೭-೧ ; ೭-೩೫-೮ ಮತ್ತು ೧೦). ಸೂರ್ಯೋದಯಕಾಲದಲ್ಲಿ, ಆರಾಧಕನನ್ನು ಪುನರುಜ್ಜೀವನ
ಗೊಳಿಸುವಂತೆ, ಮಿತ್ರ, ಆರ್ಯಮ, ಭಗ, ಇವರುಗಳಿಂದ ಯುಕ್ತನಾದ ಸವಿತೃವು ಪ್ರಾರ್ಥಿತನಾಗಿರುತ್ತಾನೆ
(೭-೬೬-೪).

ಯಾಸ್ಕರ ಮತದಲ್ಲಿ ಸವಿತೃವು ಕತ್ತಲು ಪರಿಹರಿಸಲ್ಪಟ್ಟ ಮೇಲೆ ಕಾಣಿಸಿಕೊಳ್ಳುತ್ತಾನೆ (ನಿ. ೧೨-೧೨).
ಸಾಯಣರು (೫-೮೧-೪) ಉದಯಾತ್ಪೂರ್ವದಲ್ಲಿ ಸೂರ್ಯನಿಗೆ ಸವಿತೃವೆಂತಲೂ, ಉದಯಕಾಲದಿಂದ ಅಸ್ತಮಯ
ಕಾಲದವರೆಗೂ ಸೂರ್ಯನೆಂತಲೂ, ಹೆಸರೆಂದು ಅಭಿಪ್ರಾಯಪಟ್ಟಿದಾರೆ. ಆದರೆ ಸವಿತೃವು ಪ್ರಾಣಿಗಳನ್ನು ನಿದ್ರೆ
ಹೋಗುವಂತೆ ಮಾಡುತ್ತಾನೆ (೪-೫೩-೬ ; ೭-೪೫-೧) ಎಂದಿರುವುದರಿಂದ, ಸವಿತೃವಿಗೆ ಸಾಯಂಕಾಲ ಮತ್ತು
ಪ್ರಾತಃಕಾಲಗಳೆರಡರೊಡನೆಯೂ ಸಂಬಂಧವಿರಬೇಕು. ಒಂದು ಸೂಕ್ತದಲ್ಲಿ (೨-೩೮) ಅಸ್ತಮಿಸುತ್ತಿರುವ ಸೂರ್ಯ
ನೆಂದು ಹೊಗಳಲ್ಪಟ್ಟಿದಾನೆ ; ಅಲ್ಲದೆ, ಸವಿತೃವಿನ ಪರವಾದ ಸೂಕ್ತಗಳೆಲ್ಲವೂ, ಸಾಯಂಕಾಲ ಕರ್ಮಗಳ
ಅಥವಾ ಪ್ರಾತಃಕಾಲದ ಹವನಗಳಲ್ಲಿ ಉಪಯೋಗಿಸಬೇಕೆಂಬ ನಿಯಮವಿರುವಂತೆ ತೋರುತ್ತದೆ. ಅವನೇ
ದ್ವಿಪಾದ ಮತ್ತು ಚತುಷ್ಪಾದ ಜಂತುಗಳೆಲ್ಲವನ್ನೂ ವಿಶ್ರಮಿಸಿಕೊಳ್ಳುವಂತೆ ಮಾಡಿ ಅನಂತರ ಎಚ್ಚರಗೊಳಿಸು
ತ್ತಾನೆ (೬-೭೧.೨ ; ೪-೫೩-೩ ಮತ್ತು ೭-೪೫-೧ ನ್ನು ಹೋಲಿಸಿ). ತನ್ನ ಕುದುರೆಗಳನ್ನು ಬಿಚ್ಚುತ್ತಾನೆ ;
ಸಂಚರಿಸುತ್ತಿರುವವನ್ನು ವಿಶ್ರಮಿಸಿಕೊಳ್ಳುವಂತೆ ಮಾಡುತ್ತಾನೆ ; ಅವನ ಅಪ್ಪಣೆಯಾಯಿತೆಂದರೆ ರಾತ್ರಿಯಾಗು
ತ್ತದೆ ; ನೆಯ್ಗೆಯವನು ತನ್ನ ಬಟ್ಟೆಯನ್ನು ಮಡಿಚುತ್ತಾನೆ ಮತ್ತು ಕೆಲಸಗಾರನು ತನ್ನ ಅರ್ಧ ಮುಗಿದಿರುವ ಕೆಲಸ
ವನ್ನು ಅಷ್ಟಕ್ಕೇ ನಿಲ್ಲಿಸುತ್ತಾನೆ (೨-೩೮-೩ ಮತ್ತು ೪). ಪೂರ್ವದಿಕ್ಕಿನಲ್ಲಿ ಅಗ್ನಿಯೂ, ದಕ್ಷಿಣದಲ್ಲಿ ಸೋಮನೂ
ಇದಾರೆಂದು ಹೇಳುವಂತೆ, ಪಶ್ಚಿಮದಲ್ಲಿ ಸವಿತೃವು ಇದಾನೆಂದು ಹೇಳುವುದು ವಾಡಿಕೆಯಾಗಿದೆ (ಶ. ಬ್ರಾ.
೩-೨-೩-೧೮).





CC-0. Jangamwadi Math Collection. Digitized by eGangotri

ಈ ಸವಿತೃ ಪದವು 'ಸೂ' ಧಾತುವಿನಿಂದ ಸಾಧಿತವಾದುದು. ಸವಿತೃ ದೇವತೆಯನ್ನು ಸ್ತುತಿಸುವಾಗ ಮಾತ್ರ ಈ ಧಾತು ನಾನಾ ರೂಪಗಳಲ್ಲಿ ಉಪಯೋಗಿಸಲ್ಪಟ್ಟಿದೆ. ಇದೇ ಅರ್ಥ ಬರಬೇಕಾದ ಸಂದರ್ಭಗಳಲ್ಲಿಯೂ ಕೂಡ, ಇತರ ದೇವತಾಕ ಮಂತ್ರಗಳಲ್ಲಿ ಬೇರೆ ಧಾತುಗಳು ಉಪಯೋಗಿಸಿರುವುದು ಕಂಡುಬರುತ್ತದೆ. ಪ್ರೋತ್ಸಾಹ, ಜಾಗೃತಿಗೊಳಿಸುವುದು, ಪುನರುಜ್ಜೀವನಗೊಳಿಸುವುದು, ಈ ಅರ್ಥಗಳೇ ಈ ಧಾತುವಿಗೆ ವಿಶೇಷವಾಗಿ ಅಭಿಪ್ರೇತವಾಗಿವೆ. ಸವಿತೃವು ಚಲಿಸುವ ಪ್ರತಿ ವಸ್ತುವನ್ನೂ ಕಾರ್ಯತತ್ಪರವನ್ನಾಗಿ (ಪ್ರಾಸಾವೀತ್) ಮಾಡಿದಾನೆ (೧-೧೫೭-೧); (ಪ್ರಸವಸ್ಯ) ಚೇತನಕೊಡುವುದಕ್ಕೆ ನೀನೇ ಸಮರ್ಥನು (೫-೮೧-೫); ಸವಿತೃವು ನಿನಗೆ ಅಮರತ್ವವನ್ನು (ಆಸುವತ್) ಅನುಗ್ರಹಿಸಿದನು (೧-೧೧೦-೩); ಸವಿತೃವು ನಮ್ಮನ್ನು ಜಾಗೃತಿಗೊಳಿಸಲು (ಸವಾಯ) ಸನ್ನದ್ಧನಾಗಿದಾನೆ (೨-೩೮-೧); ಆಕಾಶದಿಂದ ದಿನಕ್ಕೆ ಮೂರುಸಲ ಇಷ್ಟವಾದ ವಸ್ತುಗಳನ್ನು (ಸೋಸವೀತಿ) ಕಳುಹಿಸುತ್ತಾನೆ (೩-೫೬-೬); ಎಲೈ ಸವಿತೃವೇ, ನೀನು ನಮ್ಮನ್ನು ಪಾಪರಹಿತರನ್ನಾಗಿ ಮಾಡು (ಸುವತಾತ್. ೪-೫೪-೩); ಸವಿತೃವಿನ ಬಲದಿಂದ (ಸವೇ), ಅದಿತಿಯ ವಿಷಯದಲ್ಲಿ ಪಾಪರಹಿತರಾದ ನಮಗೆ, ಸಕಲ ವರಗಳೂ ಲಬ್ಧವಾಗಲಿ (೫-೮೨-೬); ದುಸ್ವಪ್ನಗಳನ್ನು ದೂರಮಾಡು (ಪರಾಸುವ), ಆಪತ್ತುಗಳನ್ನು ನಿವಾರಿಸು, ಒಳ್ಳೆಯದನ್ನು (ಆಸುವ) ಅನುಗ್ರಹಿಸು (೫-೮೨-೪ ಮತ್ತು ೫); ಸವಿತೃವು ರೋಗ (ಅಪಸಾವಿಶತ್) ನಿವಾರಣೆ ಮಾಡಲಿ (೧೦-೧೦೦-೮); ಐಶ್ವರ್ಯವನ್ನನುಗ್ರಹಿಸೆಂದು ಇದೇ ಧಾತುವಿನಿಂದಲೇ ಸವಿತೃವನ್ನು ಅನೇಕ ಕಡೆ ಪ್ರಾರ್ಥಿಸಿದೆ (೨-೫೬-೬; ಇತ್ಯಾದಿ). ಈ ರೀತಿ ಈ ಧಾತುವು ಸಂಪೂರ್ಣವಾಗಿ ಸವಿತೃವಿಗೇ ಮೀಸಲಾಗಿದೆಯೆಂದು ಹೇಳಬಹುದು. ಆದರೆ ಎರಡು ಮೂರು ಸಲ ಸೂರ್ಯನಿಗೂ ಉಪಯೋಗಿಸಿದೆ (೭-೬೩-೨ ಮತ್ತು ೪; ೧೦-೩೭-೪). ಉಷಸ್ಸಿನೊಡನೆ ೭-೭೭-೧ ರಲ್ಲಿಯೂ, ವರುಣನಿಗೆ ೨-೨೮-೯ ರಲ್ಲಿಯೂ, ಆದಿತ್ಯರಿಗೆ ೮-೧೮-೧ ರಲ್ಲಿಯೂ ಮತ್ತು ಮಿತ್ರ, ಅರ್ಯಮ ಮತ್ತು ಸವಿತೃಗಳಿಗೆ ಒಟ್ಟಾಗಿ ೭-೬೬-೪ ರಲ್ಲಿಯೂ ಉಪಯೋಗಿಸಿದೆ. ಸವಿತೃವಿಗೇ ಈ ಧಾತು ಇಷ್ಟುಬಾರಿ ಉಪಯೋಗಿಸಿರುವುದರಿಂದ, ಯಾಸ್ಕರು ಸವಿತೃವನ್ನು (ಸರ್ವಸ್ಯ ಪ್ರಸವಿತಾ, ನಿ. ೧೦-೩೧) 'ಎಲ್ಲವನ್ನೂ ಉಜ್ಜೀವನಗೊಳಿಸುವವನು' ಎಂದಿದಾರೆ.

ಸವಿತೃ ಎಂಬ ಪದವು ಬರುವ ಸಂದರ್ಭಗಳಲ್ಲಿ ಸುಮಾರು ಅರ್ಧಕ್ಕಿಂತ ಹೆಚ್ಚು ಕಡೆ 'ದೇವ' ಎಂಬ ಪದದಿಂದ ಕೂಡಿಯೇ ಇದೆ. ಈ ಸ್ಥಳಗಳಲ್ಲೆಲ್ಲಾ 'ದೇವ' ಪದಕ್ಕೆ ವಿಶೇಷಾರ್ಥವೇನೂ ಇಲ್ಲದೆ, ಸಾಧಾರಣವಾಗಿ ದೇವತೆ ಎಂಬರ್ಥವೇ ತೋರುತ್ತದೆ. ಅದು ಹೇಗಾದರೂ ಇರಲಿ, ಎರಡು ವಾಕ್ಯಗಳಲ್ಲಂತೂ, ತ್ವಷ್ಟೃವಿಗೆ ವಿಶೇಷಣ ಪದವಾಗಿದೆ (ದೇವಃ ತ್ವಷ್ಟಾ ಸವಿತಾ ವಿಶ್ವರೂಪಃ ೩-೫೫-೧೯; ೧೦-೧೦-೫); ಇಲ್ಲಿ ಈ ಪದಗಳನ್ನು ಹೀಗೆ ಜೋಡಿಸಿರುವುದನ್ನು ನೋಡಿದರೆ, ಸವಿತೃ ಮತ್ತು ತ್ವಷ್ಟೃಗಳು ಒಂದೇ ಎಂದಭಿಪ್ರಾಯವಾಗುತ್ತದೆ.

ಪ್ರಪಂಚದಲ್ಲಿ ಚೇತನವನ್ನುಂಟುಮಾಡುವ ಮತ್ತು ಚಲನ ಶಕ್ತಿಯನ್ನು ಕೊಡುವ, ಸೂರ್ಯನ ಒಂದು ಶಕ್ತಿಗೆ ಈ ಸವಿತೃ ಎಂಬ ಹೆಸರಿರಬಹುದು. ಆದರೆ ಸೂರ್ಯನಿಗೆ (ನಮಗೆ ಕಾಣುವ ಸೂರ್ಯಮಂಡಲಕ್ಕೆ) ಹೋಲಿಸಿದರೆ, ಸವಿತೃವು ಬಾಹ್ಯೇಂದ್ರಿಯಗೋಚರನಾದ ದೇವತೆಯಲ್ಲವೆನ್ನಬಹುದು. ಸೂರ್ಯನು ಈ ಸ್ಥೂಲವಾದ ಆಕಾಶದಲ್ಲಿ ಪರಿದೃಶ್ಯಮಾನವಾದ, ತೇಜಃಪುಂಜವಾದ ಮಂಡಲವೆಂತಲೂ, ಸವಿತೃವು ಮೂರ್ತಿಮತ್ತಾದ, ಆ ಸೂರ್ಯನ ದೈವೀಶಕ್ತಿಯೆಂತಲೂ ಋಗ್ವೇದದಿಂದ ತಿಳಿದುಬರುತ್ತದೆ.

ಕೆಲವರ ಪ್ರಕಾರ, ಚೇತನಗೊಳಿಸುವ ಶಕ್ತಿಯೇ ಸವಿತೃವು, ಸೂರ್ಯ ಮತ್ತು ಅವನ ಕ್ಲೃಪ್ತವಾದ ಸಂಚಾರ ಇತ್ಯಾದಿಗಳೆಲ್ಲ ಅಪ್ರಧಾನವಾದ ಅಂಶಗಳು.



CC-0. Jangamwadi Math Collection. Digitized by eGangotri

# ಪೂಷಣ

ಈ ಹೆಸರು ಋಗ್ವೇದದಲ್ಲಿ ಸುಮಾರು ನೂರಇಪ್ಪತ್ತು ಸ್ಥಳಗಳಲ್ಲಿ ಇದೆ. ಎಂಟು ಸೂಕ್ತಗಳು. ಅವುಗ
ಳಲ್ಲಿ ಐದು ಆರನೆಯ ಮಂಡಲದಲ್ಲಿಯೂ, ಎರಡು ಮೊದಲನೆಯದರಲ್ಲಿಯೂ, ಮತ್ತೊಂದು ಹತ್ತನೆಯದ
ರಲ್ಲಿಯೂ, ಪೂಷಣನನ್ನು ಪ್ರಶಂಸಿಸುತ್ತವೆ. ಒಂದು ಸೂಕ್ತದಲ್ಲಿ ಇಂದ್ರನೊಡನೆಯೂ (೬-೫೭), ಮತ್ತೊಂದ
ರಲ್ಲಿ ಸೋಮನೊಡನೆಯೂ (೨-೪೦) ಸ್ತುತನಾಗಿದಾನೆ. ಅಂಕಿ ಅಂಶಗಳನ್ನು ತೆಗೆದುಕೊಂಡರೆ, ವಿಷ್ಣು
ವಿಗಿಂತಲೂ ಹೆಚ್ಚು ಮಂತ್ರಗಳು ಇವನ ಪರವಾಗಿವೆ. ಬ್ರಾಹ್ಮಣಾದಿಗಳಲ್ಲಿ ಈ ಹೆಸರು ಬರುಬರುತ್ತಾ ಕಡಿಮೆ
ಯಾಗುತ್ತಾ ಬರುತ್ತದೆ. ನಿರ್ಧರವಾದ ವ್ಯಕ್ತಿತ್ವವಿಲ್ಲ ಮತ್ತು ಶರೀರಧಾರಣಾದಿ ಮಾನವ ವ್ಯಾಪಾರಗಳು
ಕಡಿಮೆ. ದುಷ್ಟರನ್ನು ತುಳಿ ಎಂದು ಪ್ರಾರ್ಥಿಸುವಾಗ ಅವನ ಪಾದದ ಉಕ್ತಿಯಿದೆ. ಅಲ್ಲೇ ಅವನ ಬಲ
ಗೈಯೂ ಹೇಳಿದೆ (೬-೫೪-೧೦). ರುದ್ರನಂತೆ ಅವನಿಗೂ ಜಟೆಯಿದೆ (೬-೫೫-೨) ಮತ್ತು ಗಡ್ಡವಿದೆ (೧೦-೨೬-೭)
ಅವನು ಒಂದು ಬಂಗಾರದ ಭರ್ಜಿಯನ್ನು (೧-೪೨-೬) ಉಪಯೋಗಿಸುತ್ತಾನೆ. ಒಂದು ಡಬ್ಬಳ (೬-೫೩-೫,೬
ಮತ್ತು ೮) ಅಥವಾ ಅಂಕುಶವನ್ನು (೬-೫೩-೯ ; ೬-೫೮-೭) ಧರಿಸಿದಾನೆ. ಚಕ್ರ, ಚಕ್ರದನೇಮಿ, ಅಥವಾ ಆಸನ
(೬-೫೪-೩) ಇವೆಲ್ಲವೂ ಉಕ್ತವಾಗಿವೆ ಮತ್ತು ಅವನು ಅತ್ಯುತ್ತಮ ರಥಿಕನೆಂದೂ ಹೇಳಿದೆ (೬-೫೬-೨ ಮತ್ತು ೩)
ಅವನ ರಥವನ್ನು ಎಳೆಯುವುವು ಟಗರುಗಳು (ಅಜಾಶ್ವ, ೧-೩೮-೪ ; ೬-೫೫-೩ ಮತ್ತು ೪). ಗಂಜಿಯೇ ಅವನ
ಆಹಾರ (೬-೫೬-೧ ; ೩-೫೨-೭ನ್ನು ಹೋಲಿಸಿ). ಇದೇ ಕಾರಣದಿಂದಲೇ ಅವನಿಗೆ ಹಲ್ಲಿಲ್ಲವೆಂದು ಹೇಳಿರ
ಬಹುದು (ಶ. ಬ್ರಾ. ೧-೭-೪-೭).

ಪೂಷಣನು ಎಲ್ಲಾ ಪ್ರಾಣಿಗಳನ್ನೂ ಸ್ಪಷ್ಟವಾಗಿ ಏಕ ಕಾಲದಲ್ಲಿ ನೋಡುತ್ತಾನೆ (೩-೬೨-೯) ಈ
ಪದಗಳೇ ಅಗ್ನಿಗೂ ಹೇಳಲ್ಪಟ್ಟಿವೆ (೧೦-೧೮೭-೪) ಸೂರ್ಯನಂತೆ ಇವನೂ ಚಲಿಸುವ ಮತ್ತು ಚಲಿಸದಿರುವ ವಸ್ತು
ಗಳೆಲ್ಲಕ್ಕೂ ಒಡೆಯನು (೧-೧೧೫-೧ ; ೭-೬೦-೨). ಇವನು ತಾಯಿಯನ್ನು ಒಲಿಸಿಕೊಳ್ಳಲು ಪ್ರಯತ್ನಿಸುತ್ತಾನೆ
(೬-೫೫-೫) ಅಥವಾ ಸೋದರಿಯನ್ನು ಪ್ರೀತಿಸುತ್ತಾನೆ (೬-೫೫-೪ ಮತ್ತು ೫). ಸೂರ್ಯನಿಗೂ (೧-೧೧೫-೨)
ಮತ್ತು ಅಗ್ನಿಗೂ (೧೦-೩-೩) ಈ ಪದಗಳೇ ಉಪಯೋಗಿಸಲ್ಪಟ್ಟಿವೆ. ದೇವತೆಗಳು ಇವನಿಗೆ ಸೂರ್ಯ ಪುತ್ರಿ
ಯಾದ ಸೂರ್ಯೆಯನ್ನು ವಿವಾಹ ಮಾಡಿದರು (೬-೫೮-೪) ವಿವಾಹಸೂಕ್ತದಲ್ಲಿ (೧೦-೮೫) ವಧುವಿನ ಕೈಹಿಡಿದು
ಕೊಂಡು, ಕರೆದುಕೊಂಡುಹೋಗಿ, ಸಂಸಾರಸಂಬಂಧವಾದ ವರದಾನ ಮಾಡುವಂತೆ ಪ್ರಾರ್ಥಿಸುವುದು; ಸೂರ್ಯಾ
ಪತಿಯಾದ ಪೂಷಣನನ್ನೇ. ಮತ್ತೊಂದು ಕಡೆ (೯-೬೭-೧೦), ಅವನನ್ನು ಪೂಜೆಮಾಡುವವರಿಗೆ, ಅವರ ಪಾಲಿನ
ಕನ್ಯೆಯರನ್ನು ಕೊಡುವಂತೆ ಪ್ರಾರ್ಥಿತನಾಗಿದಾನೆ. ಪ್ರೇಮದಿಂದ ಕ್ಲಿನ್ನನಾದ ಇವನು ಆಕಾಶದಲ್ಲಿ ಓಡಾಡುವ
ತನ್ನ ನಾವೆಗಳಲ್ಲಿ, ಸೂರ್ಯೆಯ ದೂತನಾಗಿ ಸಂಚರಿಸುತ್ತಾನೆ (೬-೫೮-೩). ಹಾಗೆಯೇ, ಪ್ರಪಂಚವನ್ನು ವೀಕ್ಷಿಸುತ್ತಾ,
ಮುಂದು ಮುಂದಕ್ಕೆ ಹೋಗುತ್ತಾನೆ (೨-೪೦-೫ ; ೬-೫೮-೨) ; ಮತ್ತು ಆಕಾಶದಲ್ಲಿ ತನ್ನ ಮನೆಯನ್ನು ರಚಿಸಿ
ಕೊಳ್ಳುತ್ತಾನೆ (೨-೪೦-೪). ಸವಿತೃವಿನ ಪ್ರೇರಣೆಯ ಮೇರೆ ನಡೆಯುವ ಇವನೂ ಒಬ್ಬ ರಕ್ಷಕ ; ಇವನಿಗೆ
ಎಲ್ಲಾ ಪ್ರಾಣಿಗಳೂ ಪರಿಚಿತರು. ಮತ್ತು ಎಲ್ಲಾ ಪ್ರಾಣಿಗಳನ್ನೂ ಅವಲೋಕಿಸುತ್ತಾನೆ. ಉತ್ತಮ ರಥಿಕ
ನಾದ ಪೂಷಣನು ಸೂರ್ಯನ ಬಂಗಾರದ ರಥ ಚಕ್ರವನ್ನು ಅಧೋಮುಖವಾಗಿ ಓಡಿಸಿದನೆಂದು (೬-೫೬-೩) ಇದೆ.
ಆದರೆ ಸಂದರ್ಭ ಸ್ವಲ್ಪ ಅಸ್ಪಷ್ಟವಾಗಿದೆ (ನಿ. ೨-೬ನ್ನು ಹೋಲಿಸಿ). ಇವನೊಬ್ಬನಿಗೇ ಸಲ್ಲುವ ವಿಶೇಷಣ
(ಆಘೃಣಿ) ' ಮಿಣಗುವ ' ಎಂಬುದು. ಸವಿತೃವಿಗೇ ಸೇರಿದ್ದೆಂದು ಹೇಳಬಹುದಾದ (ಅಗೋಹ್ಯ) ' ಅಡಗಿಸಲ
ಸಾಧ್ಯ ' ಎಂಬುದು, ಇವನ ಪರವಾಗಿಯೂ ಒಂದು ಕಡೆ ಉಪಯೋಗಿಸಿದೆ.


CC-0. Jangamwadi Math Collection. Digitized by eGangotri

ಪೂಷಣನು ಜನಿಸಿದ್ದು ದಾರಿಗಳಲ್ಲೆಲ್ಲಾ ಅತ್ಯಂತ ದೂರವಾದ ದಾರಿಯಲ್ಲಿ; ದೂರವಾದ ಸ್ವರ್ಗದ ಮತ್ತು ಭೂಮಿಯ ದಾರಿಯಲ್ಲಿ; ತನಗೆ ಪ್ರಿಯವಾದ ಅವೆರಡು ಲೋಕಗಳನ್ನು ತಿಳಿದವನಾಗಿ, ಅಲ್ಲಿಗೆ ಹೋಗಿ, ಹಿಂತಿರುಗುತ್ತಾನೆ (೬-೧೭-೬) ಅಗ್ನಿ ಮತ್ತು ಸವಿತೃಗಳು ಮೃತರ ಜೀವಗಳನ್ನು ಸಜ್ಜೀವರು ದೇವತೆಗಳೊಡನೆ ಇರುವ ಪ್ರದೇಶಕ್ಕೆ ಒಯ್ಯುವಂತೆ, ಪೂಷಣನೂ ತನ್ನ ಆರಾಧಕರಲ್ಲಿ ಮೃತರನ್ನು ಬಹಳ ದೂರದ ದಾರಿಯಲ್ಲಿ ಸುರಕ್ಷಿತವಾಗಿ ಕರೆದುಕೊಂಡು ಹೋಗಿ, ಸಜ್ಜೀವರು ಇರುವ ಸ್ಥಳದಲ್ಲಿ ಬಿಡುತ್ತಾನೆ (೧೦-೧೭-೩ ರಿಂದ ೫). ಪೂಷಣನು ಸನ್ಮಾರ್ಗಗಾಮಿಗಳ ಲೋಕಕ್ಕೆ, ರಮ್ಯವಾದ ದೇವತೆಗಳ ಲೋಕಕ್ಕೆ ಒಯ್ಯುತ್ತಾನೆ (ಅ. ವೇ. ೧೬-೯-೨ ; ೧೮-೨-೫೩). ಪೂಷಣನ ಟಗರು ಯಜ್ಞಾಶ್ವವನ್ನು ನಡೆಯಿಸಿಕೊಂಡು ಹೋಗುತ್ತದೆ (೧-೧೬೨-೨ ಮತ್ತು ೩). ಅವನ ರಥಕ್ಕೆ ಅಸ್ಖಲಿತಪದವಾದ ಟಗರುಗಳಿವೆ ಎಂಬುದರಿಂದಲೇ ಅವನಿಗೆ ಈ ಕಷ್ಟವಾದ ದಾರಿಗಳ ಪರಿಚಯವು ಇರಬಹುದು.

ದಾರಿಗಳ ಪರಿಚಯವಿರುವುದರಿಂದಲೇ, ಅವನನ್ನು ವೀಥಿಗಳ ರಕ್ಷಕನೆನ್ನುವುದು. ಒದಗಬಹುದಾದ ತೊಂದರೆಗಳನ್ನೂ, ತೋಳಗಳನ್ನೂ, ದರೋಡೆಕೋರರನ್ನೂ ರಸ್ತೆಗಳಿಂದ ಆಚೆಹಾಕು ಎಂದು ಅವನನ್ನು ಬೇಡಿಕೊಳ್ಳುತ್ತಾರೆ (೧-೪೨-೧ ರಿಂದ ೩). ಇದೇ ಸಂದರ್ಭದಲ್ಲೇ, ಅವನಿಗೆ (ವಿಮುಚೋನಪಾತ್) ‘ ವಿಮೋಚನೆಯ ಪುತ್ರ ಎಂದಿರುವುದು. ಇನ್ನೊಂದು ಕಡೆಯೂ (೬-೫೫-೧) ಇದೇ ವಿಶೇಷಣವಿದೆ (೬-೫೫-೧) ಮತ್ತು ಎರಡು ಸಲ (ವಿಮೋಚನ) ಬಿಡುಗಡೆ ಮಾಡಿಸುವವನು (೮-೪-೧೫ ಮತ್ತು ೧೬) ಎಂದು ಹೇಳಿದೆ. ‘ ವಿಮೋಚನಪಾತ್ ಆದುದರಿಂದಲೇ ಪಾಪದಿಂದ ವಿಮುಕ್ತರನ್ನಾಗಿ ಮಾಡು (ಅ. ವೇ. ೬-೧೧೨-೩) ಎಂದು ಪ್ರಾರ್ಥನೆ. ಶತ್ರುಗಳನ್ನು ಚದರಿಸು, ನಮ್ಮ ದಾರಿಯು ಇಷ್ಟವಾದ ವಸ್ತುಗಳೆಡೆಗೆ ನಮ್ಮನ್ನು ಒಯ್ಯಲಿ (೬-೫೩-೪); ಶತ್ರುಗಳನ್ನು ತೊಡೆದುಹಾಕು, ರಸ್ತೆಯನ್ನು ಚೆನ್ನಾಗಿರುವಂತೆ ಮಾಡು ಮತ್ತು ರಸ್ತೆಯು ಒಳ್ಳೆಯ ಮೇವಿರುವ ಸ್ಥಳವನ್ನು ಸೇರಲಿ (೧-೪೨-೭ ಮತ್ತು ೮) ದಾರಿಯಲ್ಲಿ ಬರಬಹುದಾದ ತೊಂದರೆಯನ್ನು ಪರಿಹರಿಸಿ (೬-೫೪-೯). ದಾರಿಯನ್ನು ಶುಭಪ್ರದವನ್ನಾಗಿ ಮಾಡಲಿ (೧೦-೫೯-೭). ಎಲ್ಲಾ ದಾರಿಗೂ ಅವನೇ ರಕ್ಷಕ (೬-೪೯-೮). ಅವನೇ ಒಡೆಯ (೬-೫೩-೧). ರಸ್ತೆಯಲ್ಲಿ ಅವನು ದಾರಿ ತೋರಿಸುವನು (ಪ್ರಪಥ್ಯ. ವಾ. ಸಂ. ೨೨-೨೦) ಆದ್ದರಿಂದಲೇ ಪ್ರಯಾಣೋನ್ಮುಖನಾದ ಪ್ರತಿಯೊಬ್ಬನೂ ರಸ್ತೆಗಳ ಶಿಲ್ಪಿಯಾದ ಪೂಷಣನಿಗೆ ೬-೫೩ ನೆಯ ಸೂಕ್ತವನ್ನುಚ್ಚರಿಸುತ್ತಾ ಪೂಜೆ ಸಲ್ಲಿಸಬೇಕು ಮತ್ತು ದಾರಿ ತಪ್ಪಿದವರೆಲ್ಲಾ ಪೂಷಣನನ್ನೇ ಮರೆಹೋಗಬೇಕು (ಆ. ಗೃ ಸೂ. ೩-೬-೮ ಮತ್ತು ೯; ಸಾಂ. ಶ್ರೌ. ಸೂ. ೩.೪-೯) ಎಂದು ಹೇಳಿರುವುದು. ಅದೂ ಅಲ್ಲದೇ, ಪ್ರಾತಃಕಾಲದ ಮತ್ತು ಸಾಯಂಕಾಲದ ಸವನ ಕಾಲಗಳಲ್ಲಿ. ಎಲ್ಲಾ ದೇವತೆಗಳಿಗೂ ಹವಿರಾದಿಗಳು ಅರ್ಪಿತವಾದಾಗ, ಪೂಷಣನು ಮನೆಯ ಹೊಸ್ತಿಲಿನಲ್ಲಿ ನಿಂತು ತನ್ನ ಭಾಗವನ್ನು ಸ್ವೀಕರಿಸುತ್ತಾನೆ (ಸಾಂ. ಗೃ. ಸೂ. ೨-೧೪-೯).

ಎಲ್ಲಾ ಮಾರ್ಗಗಳೂ ತಿಳಿದಿರುವುದರಿಂದ, ಅವನು ನಿಗೂಢವಾದ ಪದಾರ್ಥಗಳನ್ನು ಬಯಲಿಗೆ ತರಬಹುದು ಮತ್ತು ಕಂಡುಹಿಡಿಯುವುದನ್ನು ಸುಲಭಮಾಡಬಹುದು (೬-೪೮-೧೫). ತಪ್ಪಿಸಿಕೊಂಡ ಪ್ರಾಣಿಯನ್ನು ಹುಡುಕುವಂತೆ ಹುಡುಕಬೇಕೆಂದು ಪ್ರಾರ್ಥಿತನಾದ ಪೂಷಣನು, ನಷ್ಟನೂ, ನಿಗೂಢನೂ ಆಗಿದ್ದ ರಾಜನನ್ನು ಕಂಡುಹಿಡಿದನೆಂದಿದೆ (೧-೨೩-೧೪ ಮತ್ತು ೧೫; ತೈ. ಸಂ. ೩-೩-೯-೧ನ್ನು ಹೋಲಿಸಿ) ಆದುದರಿಂದಲೇ, ಏನು ಕಳೆದು ಹೋದರೂ, ಪೂಷಣನಿಗೆ ಪೂಜೆ ಸಲ್ಲಿಸಬೇಕು (ಆ. ಗೃ.ಸೂ. ೩-೭-೯). ಅದೇ ರೀತಿ, ದನಕರುಗಳನ್ನು ಹಿಂಬಾಲಿಸಿ, ಅವುಗಳನ್ನು ರಕ್ಷಿಸುವುದೂ ಪೂಷಣನ ವಿಶೇಷ ಲಕ್ಷಣ (೬-೫೪-೫, ೬ ಮತ್ತು ೧೦; ೬-೫೮-೨; ೧೦-೨೬-೩ ನ್ನು ಹೋಲಿಸಿ). ಹಳ್ಳದಲ್ಲಿ ಬಿದ್ದು ಗಾಯಗೊಳ್ಳದಂತೆ ಕಾಪಾಡಿ, ಅಪಾಯವಾಗದಂತೆ, ಮನೆಗೆ



CC-0. Jangamwadi Math Collection. Digitized by eGangotri

ವಾಪಸು ಅಟ್ಟಿಕೊಂಡು ಬರುತ್ತಾನೆ; ತಪ್ಪಿಸಿಕೊಂಡಿರುವವುಗಳನ್ನೂ ಪುನಃ ತರುತ್ತಾನೆ (೬-೫೪-೭ ಮತ್ತು ೧೦). ಅವನ ಅಂಕುಶವು ದನಕರುಗಳನ್ನು ನೇರವಾಗಿ ಅಟ್ಟುತ್ತದೆ (೬-೫೩-೯-). ನೇರವಾಗಿ ಅಟ್ಟುತ್ತಾನೆ ಎನ್ನುವುದರಿಂದಲೇ ಇರಬೇಕು, ಅವನು ನೇಗಿಲಿನ ಸಾಲುಗಳನ್ನು ಸರಿಪಡಿಸುತ್ತಾನೆ ಎಂಬ ಅಭಿಪ್ರಾಯ ಬಂದಿರುವುದು (೪-೫೭-೭). ಅವನು ಅಶ್ವಗಳನ್ನೂ ರಕ್ಷಿಸುತ್ತಾನೆ (೬-೫೪-೫) ಮತ್ತು ಕುರಿಗಳ ತುಪ್ಪಟವನ್ನು ನಯಮಾಡುತ್ತಾನೆ ಮತ್ತು ಸರಿಪಡಿಸುತ್ತಾನೆ (೧೦-೨೬-೬). ಆದುದರಿಂದಲೇ, ಪ್ರಾಣಿಗಳು ಪೂಷಣನ ದೃಷ್ಟಿಯಲ್ಲಿ ಪವಿತ್ರವಾದುವು (೧-೫-೧ ಮತ್ತು ೨) ಮತ್ತು ಅವನು ದನಕರುಗಳನ್ನು ಸೃಜಿಸುವವನು (ವೈ. ಸಂ. ೪-೩-೭ ; ತೈ. ಬ್ರಾ. ೧-೭-೨-೪). ದನಕರುಗಳು ಮೇಯುವುದಕ್ಕೆ ಹೋಗಿ ತಪ್ಪಿಸಿಕೊಂಡಾಗ ಉಪಯೋಗಿಸಬೇಕಾದ ಪೂಷಣನ ಸ್ತುತಿವಾಕ್ಯಗಳನ್ನು ಸೂತ್ರಗಳು ತಿಳಿಸುತ್ತವೆ. (ಸಾಂ. ಗೃ. ಸೂ. ೩-೯).

ಇತರ ತೇವತೆಗಳಿಗೆ ಸಮಾನವಾದ ಅನೇಕ ಲಕ್ಷಣಗಳು ಪೂಷಣನಿಗಿವೆ. ಅವನಿಗೂ 'ಅಸುರ' ಎಂಬಭಿಧಾನವುಂಟು (೫-೫೧-೧೧) ; ಅವನು ಬಲಿಷ್ಠ (೫-೪೩-೯) ; ಸತ್ವಪೂರ್ಣ (೮-೪-೧೫) ; ಬಹಳ ಸುಟಿಯಾಗಿ ಧಾನೆ (೬-೫೪-೮) ; ಶಕ್ತ (೧-೧೩೮,೧) ; ಅಪ್ರತಿಹತ (೬-೪೮-೧೫) ಮನುಷ್ಯರನ್ನು ಮೀರಿಸಿದಾನೆ ಮತ್ತು ಕೀರ್ತಿಯಲ್ಲಿ ಇತರ ದೇವತೆಗಳಿಗೆ ಸಮಾನನು (೬-೪೮-೧೯). ವೀರರ ಅಧಿನಾಯಕ (೧-೧೦೬-೪) ; ಅಜೇಯನಾದ ರಕ್ಷಕ (೧-೮೯-೫) ಮತ್ತು ಯುದ್ಧಗಳಲ್ಲಿ ಸಹಾಯ ಮಾಡುತ್ತಾನೆ(೬-೪೮-೧೯). ಅವನು ಪ್ರಪಂಚವನ್ನೇ ರಕ್ಷಿಸುತ್ತಾನೆ (೧೦-೧೭-೩ ; ೨-೪೦-೧ ನ್ನು ಹೋಲಿಸಿ). ಅವನು ಒಬ್ಬ ಋಷಿ ; ಪುರೋಹಿತನಿಗೆ ರಕ್ಷಕನಾದ ಸ್ನೇಹಿತ ; ದೀನರೆಲ್ಲರಿಗೂ ಎಂದಿಗೂ ಕೈಬಿಡದ ಮಿತ್ರ (೧೦-೨೬-೫ ಮತ್ತು ೮). ಅವನು ಜ್ಞಾನಿ (೧-೪೨-೫) ಮತ್ತು ಉದಾರಿ (೨-೩೧-೪). ಅವನ ಔದಾರ್ಯವು ಅನೇಕ ವೇಳೆ ಉಕ್ತವಾಗಿದೆ. ಅವನಲ್ಲಿ ಎಲ್ಲಾ ವಿಧವಾದ ಐಶ್ವರ್ಯವೂ ಇದೆ (೧-೮೯-೬) ; ಅಪರಿಮಿತವಾದ ಐಶ್ವರ್ಯವಿದೆ (೮-೪-೧೫) ; ಐಶ್ವರ್ಯಾಭಿವೃದ್ಧಿಯನ್ನುಂಟುಮಾಡುತ್ತಾನೆ. (೧-೮೯-೫) ; ಉಪಕಾರಿ (೧-೧೩೮-೨) ; ಔದಾರ್ಯಯುಕ್ತ (೬-೫೮-೪ ; ೮-೪-೧೮) ; ಎಲ್ಲಾ ವಿಧವಾದ ಶುಭಗಳನ್ನು ಅನುಗ್ರಹಿಸುತ್ತಾನೆ (೧-೪೨-೬). ಐಶ್ವರ್ಯಕ್ಕೆ ಅವನು ದೃಢಸ್ನೇಹಿತ ಮತ್ತು ಪುಷ್ಟಿಯನ್ನು ಹೆಚ್ಚಿಸುವವನು (೧೦-೨೬-೭ ಮತ್ತು ೮). (ದಸ್ರಾ) ಐಶ್ವರ್ಯಕರ್ತೃವೆಂಬುದು ಸಾಧಾರಣವಾಗಿ ಅಶ್ವಿನೀದೇವತೆಗಳಿಗೆ ಸೇರಿದುದು. ಆದರೂ ಕೆಲವು ಕಡೆ ಪೂಷಣನಿಗೂ ಉಕ್ತವಾಗಿದೆ (೧-೪೨-೫ ; ೬-೫೬-೪) ಅದೇರೀತಿ (ದಸ್ಮ) ಆಶ್ಚರ್ಯಕರ ಎಂಬುದೂ (೧-೪೨-೧೦ ; ೧-೧೩೮-೪) ಮತ್ತು ಅಗ್ನಿ ಇಂದ್ರರಿಗೆ ಮಾತ್ರ ಅನ್ವಯಿಸುವ (ದಸ್ಮವರ್ಚಃ) ಆಶ್ಚರ್ಯಕರವಾದ ಕಾಂತಿವಿಶಿಷ್ಟ ಎಂಬುದೂ (೬-೫೮-೪) ಹೇಳಲ್ಪಟ್ಟಿವೆ. ಅಗ್ನಿಗೆ ಮಾತ್ರ ಅನ್ವಯಿಸುವ (ನರಾಶಂಸ) ಮನುಷ್ಯರಿಂದ ಸ್ತುತ್ಯ ಎಂಬುದೂ ಎರಡುಸಲ ಪೂಷಣನಿಗೆ ಸಂದಿದೆ (೧-೧೦೬-೪ ; ೧೦-೬೪-೩) ಒಂದು ಕಡೆ ಸರ್ವವ್ಯಾಪ್ತ (೨-೪೦-೬), ಭಕ್ತ್ಯುದ್ರೇಕಕಾರಕ (೯-೮೮-೩); ಭಕ್ತಿಯನ್ನು ತ್ವರೆಗೊಳಿಸುವಂತೆ ಪ್ರಾರ್ಥನೆ ಇದೆ. (೨-೪೦-೬) ; ಅವನ ಅಂಕುಶವು ಸ್ತುತಿಯನ್ನು ಪ್ರೇರಿಸುತ್ತದೆ (೬-೫೩-೮).

ಇವನಿಗೆ ಮಾತ್ರ ಉಪಯೋಗಿಸಿರುವ ವಿಶೇಷಣಗಳಿವು : 'ಆಘೃಣೀ', 'ಅಜಾಶ್ವ' 'ವಿಮೋಚನ' 'ವಿಮುಚೋನಪಾತ್', ಮತ್ತು ಒಂದೊಂದು ಸಲ 'ಪುಷ್ಟಿಂಭರ' (ಅಭಿವೃದ್ಧಿಕಾರಕ) ಮತ್ತು 'ಅನಷ್ಟಪಶು' (ದನಕರುಗಳನ್ನು ಕಳೆದುಕೊಳ್ಳದವನು), 'ಅನಷ್ಟವೇದಃ' (ಪದಾರ್ಥಗಳನ್ನು ಕಳೆಯದವನು) ಮತ್ತು 'ಕರಂಭಾದ' (ಗಂಜಿಯನ್ನು ತಿನ್ನುವವನು). ಈ ಕಡೆಯದು ಪೂಷಣನ ವಿಷಯದಲ್ಲಿ ಜುಗುಪ್ಸೆಗೆ ಕಾರಣವಾಗಿರಬಹುದು (೬-೫೬-೧; ೧-೧೩೮-೪ ಇವುಗಳನ್ನು ಹೋಲಿಸಿ). ಸೋಮವು ಇಂದ್ರನ ಆಹಾರವಾಗಿರುವಂತೆ, ಕರಂಭವು ಪೂಷಣನ ಆಹಾರ ; ಆದರೆ ಇಂದ್ರನು ಕರಂಭದಲ್ಲಿ ಒಂದು ಭಾಗ ಸ್ವೀಕರಿಸುತ್ತಾನೆ (೩-೫೨-೭). ಕರಂಭ (ಗಂಜಿಯೊಡನೆ ಮಿಶ್ರಿತವಾದ) ಎಂಬ ಪದ ಬರುವ ಎರಡೇ ಸ್ಥಳಗಳಲ್ಲಿಯೂ, ಅದು ಇಂದ್ರನ ಆಹಾರಕ್ಕೆ ಅನ್ನ



CC-0. Jangamwadi Math Collection. Digitized by eGangotri

ಯಿಸುತ್ತದೆ (೩-೫೨-೧ ; ೮-೮೦-೨). ‘ ಪಶುಪಾ ’ (ಪಶುಗಳನ್ನು ಪಾಲಿಸುವವನು) ಎಂದು ಸ್ಪಷ್ಟವಾಗಿ ಹೇಳಿರುವುದು ಪೂಷಣನಿಗೊಬ್ಬನಿಗೆ ಮಾತ್ರವೇ.

ಪೂಷಣನನ್ನು ದ್ವಿವಚನಾಂತವಾಗಿ ಉಪಯೋಗಿಸಿರುವುದು, ಸೋಮ (೨-೪೦) ಮತ್ತು ಇಂದ್ರ (೬-೫೭) ಇಬ್ಬರೊಡನೆ. ಇಂದ್ರನ ಸೋದರನೆಂದು ಒಂದು ಸಲ (೬-೫೫-೫) ಕರೆದಿದೆ. ಇವರಿಬ್ಬರನ್ನು ಬಿಟ್ಟರೆ, ಭಗನ ಜೊತೆಯಲ್ಲಿಯೇ ಹೆಚ್ಚಾಗಿ ಸಂಬೋಧಿಸಿರುವುದು (೧-೯೦-೪ ; ೪-೩೦-೨೪ ; ೫-೪೧-೪ ; ೫-೪೬-೨ ; ೧೦-೧೨೫-೨ ; ಶ. ಬ್ರಾ. ೧೧-೪-೩-೩ ; ಕಾ. ಶ್ರೌ. ಸೂ. ೫-೧೩-೧ ಗಳನ್ನು ಹೋಲಿಸಿ). ಮತ್ತು ವಿಷ್ಣುವಿನ ಜೊತೆಯಲ್ಲಿ (೧-೯೦-೫ ; ೫-೪೬-೩ ; ೬-೨೧-೯ ; ೭-೪೪-೧ ; ೧೦-೬೬-೫) ಈ ಎಲ್ಲಾ ಮಂತ್ರಗಳಲ್ಲಿಯೂ ಪೂಷಣನು ಮತ್ತು ಬೇರೆ ದೇವತೆಯೂ ಸರಿಸಮಾನರಾಗಿ ಹೇಳಲ್ಪಟ್ಟಿದಾರೆ. ಇತರ ದೇವತೆಗಳೊಡನೆಯೂ ಅಲ್ಲೊಂದು ಇಲ್ಲೊಂದು ಪ್ರಯೋಗವಿದೆ.

ಇದುವರೆಗೆ ಉದಹರಿಸಿರುವ ವಾಕ್ಯಗಳಿಂದ ಪೂಷಣನು ಪ್ರಕೃತಿಯ ಒಂದಂಶವೆಂದು ವ್ಯಕ್ತಪಡುವುದಿಲ್ಲ. ಆದರೆ ಅನೇಕ ವಾಕ್ಯಗಳು ಅವನು ಸೂರ್ಯನಿಗೆ ಸಂಬಂಧವುಳ್ಳವನೆಂದು ತೋರಿಸುತ್ತವೆ. ಯಾಸ್ಕರೂ (ನಿ. ೭-೯) ಇವನನ್ನು ಎಲ್ಲಾ ವಸ್ತುಗಳನ್ನೂ ರಕ್ಷಿಸುವ ಆದಿತ್ಯನೆಂದು ಹೇಳಿದಾರೆ. ಇವನ ಮುಖ್ಯವಾದ ಕಾರ್ಯಗಳೆಂದರೆ—ಮಾರ್ಗಗಳನ್ನು ಸರಿಪಡಿಸುವುದು, ಮತ್ತು ಮೃತರನ್ನು ಸತ್ಪುರುಷರಿರುವೆಡೆ ಸೇರಿಸುವುದು, ಮೊದಲನೆಯ ಗುಣದಿಂದ, ಮಾರ್ಗದರ್ಶಕ ಮತ್ತು ಪಶುಗಳ ರಕ್ಷಕನಾಗಿದಾನೆ ಎಂದರೆ ಜನರ ಸ್ಥಿತಿಗತಿಗಳನ್ನು ಉತ್ತಮಗೊಳಿಸುವವನು ಎನ್ನಬಹುದು.

ಪೂಷಣ ಎಂಬ ಈ ಪದವು ಪುಷ್ (ಪುಷ್ಟಿಯನ್ನುಂಟುಮಾಡು) ಎಂಬ ಧಾತುವಿನಿಂದ ಆಗಿದೆ. ಈ ಗುಣವು ಅವನ ಈ ವಿಶೇಷಣಗಳಿಂದ (ವಿಶ್ವವೇದಾಃ, ಅನಷ್ಟವೇದಾಃ, ಪುರೂವಸು, ಪುಷ್ಟಿಂಭರ) ಮತ್ತು ಐಶ್ವರ್ಯಕ್ಕಾಗಿ ಪ್ರಾರ್ಥನೆಗಳಿಂದಲೂ (೬-೪೮-೧೫ ; ಇತ್ಯಾದಿ) ಸ್ಪಷ್ಟವಾಗಿದೆ. ಅವನು ಅಪಾರ ಸಂಪತ್ತಿಗೂ, ಐಶ್ವರ್ಯ ಪ್ರವಾಹಕ್ಕೂ, ರಾಶಿಗೂ ಒಡೆಯ (೬-೫೫-೨-ಮತ್ತು ೩). ಆದರೆ ಪೂಷಣನಿಂದ ಲಬ್ಧವಾದ ಐಶ್ವರ್ಯವು ಇಂದ್ರ, ಪರ್ಜನ್ಯ, ಮರುದಾದಿಗಳಿಂದ ಲಬ್ಧವಾದ ಸಂಪತ್ತಿನಂತೆ ವೃಷ್ಟಿಸಂಬಂಧವಾದುದಲ್ಲ, ತೇಜಸ್ಸಿಗೆ [ಬೆಳಕಿಗೆ] ಸಂಬಂಧಿಸಿದುದು. ಇಹಲೋಕದಲ್ಲಿ ಮನುಷ್ಯರಿಗೆ, ದನಕರುಗಳಿಗೆ, ಅನನ್ಯ ನಿರ್ಭಯವಾದ ಆಶ್ರಯ; ಪರಲೋಕದಲ್ಲಿ ಆನಂದಕರವಾದ ಪ್ರದೇಶಗಳಿಗೆ ದಾರಿ ತೋರಿಸುವುದು. ಇವುಗಳಿಂದ ಜನರ ಸ್ಥಿತಿಯು ಉತ್ತಮಗೊಳ್ಳುತ್ತದೆ. ಜನರು ಸುಖಿಗಳಾಗುತ್ತಾರೆ. ಎಂದರೆ, ಪೂಷಣನು ಪ್ರಜೆಗಳಿಗೆ ಉಪಕಾರಕವಾದ ಸೂರ್ಯನ ಅಂಶವೆನ್ನಬಹುದು.

## ವಿಷ್ಣು

ಬ್ರಾಹ್ಮಣಾದಿಗಳಲ್ಲಿ ಅತಿಮುಖ್ಯ ದೇವತೆಯಾದರೂ, ಋಗ್ವೇದದಲ್ಲಿ ವಿಷ್ಣುವಿಗೆ ಅಷ್ಟು ಪ್ರಾಮುಖ್ಯತೆಯಿಲ್ಲ. ಸಂಖ್ಯೆ ತೋರಿಸುವುದಕ್ಕಿಂತ, ಅವನ ಪ್ರಭಾವವು ಬಹಳ ಹೆಚ್ಚಾಗಿದೆ. ಐದು ಸೂಕ್ತಗಳು ಮತ್ತು ಒಂದು ಸೂಕ್ತದ ಕೆಲವು ಭಾಗ ಮಾತ್ರ ವಿಷ್ಣುದೇವತಾಕ. ನೂರಕಿಂತ ಹೆಚ್ಚು ಸಲ ಅವನ ಹೆಸರು ಬಂದಿಲ್ಲ. ಇವುಗಳನ್ನು ಮಾತ್ರ ತೆಗೆದುಕೊಂಡರೆ ಅವನು ನಾಲ್ಕನೆಯ ದರ್ಜೆಯದೇವತೆ. ಅವನ ಶರೀರದ ವಿಷಯದಲ್ಲಿಯೂ ಹೆಚ್ಚು ವಿವರಗಳೇನೂ ಇಲ್ಲ. ಅವನ ಹೆಜ್ಜೆಗಳು ಅನೇಕ ಸಲ ವರ್ಣಿತವಾಗಿವೆ, ಅಗಾಧ ಶರೀರವುಳ್ಳ ಯುವಕ (೧-೧೫೫-೬). ಅವನ ವಿಷಯದಲ್ಲಿ ಬಹು ಮುಖ್ಯವಾದ ಅಂಶವೇನೆಂದರೆ ಅವನು ಇಡುವ ಮೂರು ಹೆಜ್ಜೆಗಳು (ವಿಕ್ರಮ); ಸುಮಾರು ಹನ್ನೆರಡು ಸಲ ಉಕ್ತವಾಗಿದೆ. ಅವನ ವಿಶೇಷಣಗಳು ‘ ಉರುಗಾಯ ’ ಮತ್ತು



CC-0. Jangamwadi Math Collection. Digitized by eGangotri

'ಉರುಕ್ರಮ' ಎಂಬಿವೂ ಕೂಡ ಅದೇ ಅಂಶವನ್ನೇ ಹೇಳುತ್ತವೆ. ಮೂರು ಹೆಜ್ಜೆಗಳಿಂದ ಭೂಭಾಗವನ್ನೆಲ್ಲಾ ಆವರಿಸಿದಾನೆ. ಅದರಲ್ಲಿ ಎರಡು ಹೆಜ್ಜೆಗಳು ಕಾಣುತ್ತವೆ, ಮೂರನೆಯದು ಪಕ್ಷಿಗಳಿಗೂ ಮರ್ತ್ಯರಿಗೂ ಅಗೋಚರ (೧-೧೫೫-೫, ೭-೯೯-೨). ವಿಷ್ಣುವಿನ ಅತ್ಯಂತ ಎತ್ತರವಾದ ಸ್ಥಾನವು ಅಗ್ನಿಯ ಸ್ಥಾನವೇ. ಏಕೆಂದರೆ, ವಿಷ್ಣುವು ಅತ್ಯುನ್ನತವಾದ, ಅಗ್ನಿಯ ಮೂರನೆಯ ಸ್ಥಾನವನ್ನು ರಕ್ಷಿಸುತ್ತಾನೆ (೧೦-೧-೩) ಮತ್ತು ಅಗ್ನಿಯು ವಿಷ್ಣುವಿನ ಆ ಉನ್ನತಸ್ಥಾನದಿಂದ ಗೋವುಗಳನ್ನು ರಕ್ಷಿಸುತ್ತಾನೆ (೫-೩-೩). ಜ್ಞಾನಿಗಳು ವಿಷ್ಣುವಿನ ಮೂರನೆಯ ಹೆಜ್ಜೆಯನ್ನು ಆಕಾಶದಲ್ಲಿ ನೆಟ್ಟ ಕಣ್ಣಿನಿಂದ ನೋಡುತ್ತಾರೆ (೧-೨೨-೨೦) ಯೋಗ್ಯರು ಆನಂದ ಮಗ್ನರಾಗುವುದು, ಮಧುವಿನ ಬಾವಿಯಿರುವುದು (೧-೧೫೪-೫) ಮತ್ತು ದೇವತೆಗಳು ಸಂತೋಷಪಡುವುದೂ (೮-೨೯-೭) ಅವನ ಪ್ರಿಯವಾದ ಆ ಗೃಹದಲ್ಲಿ. ಆ ಎತ್ತರದಲ್ಲಿರುವ ಹೆಜ್ಜೆಯು ಕೆಳಮುಖನಾಗಿ ಚೆನ್ನಾಗಿ ಪ್ರಕಾಶಿಸುತ್ತದೆ. ಅದೇ ಇಂದ್ರ ಮತ್ತು ವಿಷ್ಣುಗಳ ವಾಸಸ್ಥಾನ. ಅಲ್ಲಿ ಅನೇಕ ಕೊಂಬುಗಳುಳ್ಳ ಮತ್ತು ವೇಗವಾಗಿ ಚಲಿಸುವ ಗೋವುಗಳು ಇವೆ. ಅವುಗಳನ್ನು ಪಡೆಯಬೇಕೆಂದು ಸ್ತುತಿಸುವವನ ಹಂಬಲ (೧-೧೫೪-೬). ಈ ಮೂರು ಹೆಜ್ಜೆಗಳಲ್ಲೇ ಎಲ್ಲಾ ಪ್ರಾಣಿಗಳೂ ವಾಸಿಸುತ್ತವೆ (೧-೧೫೪-೨), ಅವು ಮಧುವಿನಿಂದ ತುಂಬಿವೆ (೧-೧೫೪-೪) ವಿಷ್ಣುವು ತನಗೆ ಪ್ರಿಯವಾದ ವಾಸಸ್ಥಳವನ್ನು ರಕ್ಷಿಸುತ್ತಾನೆ (೩-೫೫-೧೦, ೧-೧೫೪-೫). ಅವನು ಈ ಲೋಕದಿಂದ ಬಹಳ ದೂರದಲ್ಲಿ ವಾಸಿಸುತ್ತಾನೆ (೭-೧೦೦-೫). ಅವನಿಗೆ ಮೂರು ವಾಸಸ್ಥಳಗಳಿವೆ (ತ್ರಿಷಧಸ್ಥ ೧-೧೫೬-೫). ಈ ವಿಶೇಷಣವು ಅಗ್ನಿಗೇ ಸಾಮಾನ್ಯವಾಗಿ ಸಂದಿರುವುದು. ಇಲ್ಲಿ ಮಾತ್ರ ವಿಷ್ಣುವಿಗೆ ಉಪಯೋಗಿಸಿದೆ.

ವಿಷ್ಣುವಿನ ಈ ಮೂರು ಪಾದಗಳು ಸೂರ್ಯಪಥವೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಯಾಸ್ಕರ
ಪೂರ್ವೀಕನಾದ (ನಿ. ೧೨-೧೯) ಔರ್ಣವಾಭನೂ, ಬಹುಜನ ಐರೋಪ್ಯ ವಿದ್ವಾಂಸರುಗಳೂ ಈ ಮೂರು ಹೆಜ್ಜೆ
ಗಳು, ಸೂರ್ಯನು ಉದಯಿಸುವುದು, ನೆತ್ತಿಯ ಮೇಲಿರುವುದು ಮತ್ತು ಅಸ್ತಮಿಸುವುದನ್ನು ಸೂಚಿಸುತ್ತವೆ ಎಂದು
ಅಭಿಪ್ರಾಯ ಪಡುತ್ತಾರೆ. ಯಜುರಾದಿ ಮೂರು ವೇದಗಳು, ಬ್ರಾಹ್ಮಣಗಳು, ಯಾಸ್ಕರ ಮತ್ತೊಬ್ಬ ಪೂರ್ವೀಕ
ನಾದ ಶಾಕಪೂಣಿ, ಮತ್ತೆ ಕೆಲವು ಐರೋಪ್ಯ ವಿದ್ವಾಂಸರುಗಳು, ಇವರ ಪ್ರಕಾರ ಮೂರು ಹೆಜ್ಜೆಗಳೂ,
ಪ್ರಪಂಚದ ಮೂರು ವಿಭಾಗಗಳಲ್ಲಿ ಸೂರ್ಯನ ಸಂಚಾರವನ್ನು ಸೂಚಿಸುತ್ತವೆ.
ಪ್ರಪಂಚದ ಮೂರು ವಿಭಾಗಗಳಲ್ಲಿ ಸೂರ್ಯನ ಸಂಚಾರವನ್ನು ಸೂಚಿಸುತ್ತವೆ. ಉರುಗಾಯ, ಉರುಕ್ರಮ ಮತ್ತು ವಿಕ್ರಮ (ಧಾತುಗಳು)

ಚಲನೆಯು ವಿಷ್ಣುವಿನ ವೈಶಿಷ್ಟ್ಯ. ಉರುಗಾಯ, ಉರುಕ್ರಮ ಮತ್ತು ವಿಕ್ರಮ (ಧಾತುಗಳು) ... ಉಪಯೋಗಿಸಲ್ಪಟ್ಟಿದೆ. ಅವನು ಆಕಾಶ ಮಧ್ಯದಲ್ಲಿ
ಅವನಿಗೇ ಅನ್ವಯಿಸುತ್ತವೆ. ಸೂರ್ಯನಿಗೂ ಈ ಧಾತು ಉಪಯೋಗಿಸಲ್ಪಟ್ಟಿದೆ. ... ಹೆಜ್ಜೆಗಳನ್ನಿಟ್ಟುಕೊಂಡು ಹೋದನು (೫-೪೭-೩)
ಇರುವ ನಾನಾ ವರ್ಣದ ಒಂದು ಶಿಲೆ ಮತ್ತು ದೊಡ್ಡ ಹೆಜ್ಜೆಗಳನ್ನಿಟ್ಟುಕೊಂಡು ಹೋದನು ... (ಏವಯಾ, ಏವಯಾವನ್). ವಿಷ್ಣುವಿನ
ಎಂದಿದೆ. ವಿಷ್ಣುವು ವೇಗವುಳ್ಳವನು (ಏಷ) ಅಥವಾ ಶೀಘ್ರಗಾಮಿ (ಏವಯಾ, ಏವಯಾವನ್). ... ಮೂರು ಹೆಜ್ಜೆಗಳನ್ನಿಡುವುದೂ ಕೆಲವು ನಿಯಮಗಳ
ಶೀಘ್ರ ಮತ್ತು ದೂರ ಗತಿಗಳಲ್ಲಿ ಒಂದು ವ್ಯವಸ್ಥೆಯಿದೆ. ಮೂರು ಹೆಜ್ಜೆಗಳನ್ನಿಡುವುದೂ ... ದೇವತೆಗಳಂತೆ (ಅಗ್ನಿ, ಸೋಮ, ಸೂರ್ಯ
ನ್ನನುಸರಿಸಿ (೧-೨೨-೧೮) ನಿಯತವಾಗಿ ಆವರ್ತಿಸುವ ಇತರ ದೇವತೆಗಳಂತೆ ... ನಿಯಮಗಳ ವಿಧಾಯಕನು, ಮತ್ತು
ಮತ್ತು ಉಷಸ್ಸು,) ವಿಷ್ಣುವು ನಿಯಮಗಳಲ್ಲಿಯೇ ಸದಾ ಇರತಕ್ಕವನು, ... ಹೌದು (೧-೧೫೬-೨ ರಿಂದ ೪). ಸವಿತೃವಿ
(ಅಗ್ನಿ, ಸೂರ್ಯ, ಉಷಸ್ಸುಗಳಂತೆ) ಪುರಾತನನೂ ಹೌದು, ಆಧುನಿಕನೂ ಹೌದು ... (೧-೧೫೪-೧; ೬-೪೯-೧೩)
ನಂತೆ (೫-೮೧-೩), ವಿಷ್ಣುವೂ ಭೂಭಾಗಗಳ ಪರಿಮಿತಿಯನ್ನು ಗೊತ್ತುಮಾಡಿದಾನೆ ... ತನ್ನ ನಾಲ್ಕು ನಾಮ (ಋತು)
ಒಂದು ಕಡೆ (೧-೧೫೫-೬; ೧-೧೬೪-೪೮ನ್ನು ಹೋಲಿಸಿ) ವಿಷ್ಣುವು, ಚಕ್ರದಂತೆ, ... ದಿನಗಳುಳ್ಳ ವರ್ಷವಲ್ಲದೇ ಬೇರೆ
ಗಳುಳ್ಳ ೯೦ ಅಶ್ವ (ದಿನ)ಗಳನ್ನು ಚಲಿಸುವಂತೆ ಮಾಡಿದನು. ಇದು ೩೬೦ ... (ಅ. ವೇ. ೫-೨೬-೭) ಇದೆ.
ಇರಲಾರದು ಯಾಗಕ್ಕೆ ಬೇಕಾದ ಶಾಖವನ್ನು ಅನುಗ್ರಹಿಸು ಎಂಬ ಪ್ರಾರ್ಥನೆ ... ಗರಗರನೆ ತಿರುಗುವ ಚಕ್ರವು
ವಿಷ್ಣುವಿನ ತಲೆ ಭಿನ್ನವಾದರೆ ಅದೇ ಸೂರ್ಯನಾಗುತ್ತದೆ ಎಂದು ಬ್ರಾಹ್ಮಣಗಳಲ್ಲಿದೆ.


CC-0. Jangamwadi Math Collection. Digitized by eGangotri

ಅವನ ಆಯುಧಗಳಲ್ಲಿ ಒಂದು, ಪಕ್ಷಿರಾಜನಾದ ಗರುಡನೇ ಅವನ ವಾಹನ. ಈ ವಾಹನವು ಅಗ್ನಿಯಂತೆ ಉಜ್ವಲಕಾಂತಿ ವಿಶಿಷ್ಟವಾದುದು. ಅದಕ್ಕೆ ಗರುತ್ಮಾನ್, ಸುಪರ್ಣ ಇತ್ಯಾದಿ ನಾಮಗಳಿವೆ. ಈ ನಾಮಗಳು ಸೂರ್ಯನ ಪಕ್ಷಿಗೆ ಹೇಳಿದೆ. ಕೌಸ್ತುಭವೆಂಬ ಮಣಿಯೊಂದು ಅವನ ಎದೆಯ ಮೇಲೆ ರಾಜಿಸುತ್ತದೆ. ಇದನ್ನು ಸೂರ್ಯನೆಂದು ಹೇಳುವುದು ಒಂದು ಮತ. ಪ್ರಕೃತಿಯ ಯಾವುದೊಂದು ಅಂಶವನ್ನೂ ವಿಷ್ಣುವು ಸ್ಪಷ್ಟವಾಗಿ ಹೋಲುವುದಿಲ್ಲ. ಆದರೆ, ವಿಷ್ಣುವು ವೇಗವಾಗಿ ಚಲಿಸುವ ಜ್ಯೋತಿ. ಇದು ದೂರದೂರವಾಗಿ ಹೆಜ್ಜೆಗಳನ್ನಿಟ್ಟುಕೊಂಡು, ಪ್ರಪಂಚವನ್ನು ಸುತ್ತುತ್ತದೆ ಎಂದು ಹೇಳಬಹುದು. ಇದು ಸೂರ್ಯನ ಒಂದು ಅಂಶವೂ ಹೌದು. ವಿಶ್ ಧಾತುವೂ ಇದೇ ಅರ್ಥವನ್ನೇ ಕೊಡುತ್ತದೆ. ಈ ಅರ್ಥದಲ್ಲಿ ವಿಷ್ಣುವನ್ನು ಸೂರ್ಯನೆಂದೇ ಹೇಳಬೇಕು. ಆದರೆ ಕೆಲವರು ಈ ಅಭಿಪ್ರಾಯವನ್ನು ಒಪ್ಪುವುದಿಲ್ಲ. ಅವರುಗಳು ವಿಷ್ಣುವು ಬೇರೆ ದೇವತೆಯೆಂದೇ ವಾದಿಸುತ್ತಾರೆ.

ವಿಷ್ಣುವಿನ ಮೂರನೆಯ ಮತ್ತು ಮೇಲಕ್ಕೆ ಎತ್ತಲ್ಪಟ್ಟ ಪಾದವೇ ಅವನ ಧಾಮವು. ಸೂರ್ಯನ ಅತ್ಯುಚ್ಛ್ರಾಯಸ್ಥಿತಿಯ ಪ್ರದೇಶವನ್ನು ಯಾಸ್ಕರು ವಿಷ್ಣುಪದ ಎಂದಿರುವುದು ಇದೇ ಅರ್ಥದಲ್ಲಿಯೇ ಇರಬೇಕು, ಮತ್ತು ಈ ಅಭಿಪ್ರಾಯದಲ್ಲೇ (ಗಿರಿಕ್ಷಿತ್) ಪರ್ವತದಲ್ಲಿ ವಾಸಿಸುವನು. [ಗಿರಿಷ್ಠಾಃ] ಪರ್ವತದಲ್ಲಿರುವವನು ಎಂದು ವಿಷ್ಣುವಿಗೆ ಹೇಳಿರಬೇಕು [೧-೧೫೪-೨ ಮತ್ತು ೩], ೧೫೫ನೆಯ ಸೂಕ್ತದಲ್ಲಿ [೧-೧೫೫.೧] ವಿಷ್ಣು ಮತ್ತು ಇಂದ್ರರಿಗೆ, ಒಟ್ಟಾಗಿ "ಮೋಸಕ್ಕೊಳಗಾಗದ ಇಬ್ಬರು, ಪರ್ವತದ ಶಿಖರದ ಮೇಲೆ [ಸಾನುನಿ] ನಿಂತಿದ್ದಾರೆ" ಎಂದು ಹೇಳಿದೆ. ಪರ್ವತಾಕಾರವಾದ ಮೋಡಗಳ ಮೇಲೆ ನಿಂತು ಭೂಮಿಯನ್ನು ನೋಡುವ ಸೂರ್ಯನಿಗೆ, ಹಿಂದಿನ ವಾಕ್ಯ ಅನ್ವಯಿಸುತ್ತದೆ [೫-೮೭-೪ನ್ನು ಹೋಲಿಸಿ]. ಇಂತಹ ಉಕ್ತಿಗಳಿಂದಲೇ ವಿಷ್ಣುವಿಗೆ ಪರ್ವತಗಳಿಗೊಡೆಯ ಎಂದು ಹೆಸರು ಬಂದಿರುವುದು [ತೈ. ಸಂ. ೩-೪-೫-೧].

ವಿಷ್ಣುವು ಈ ರೀತಿ ಹೆಜ್ಜೆಗಳನ್ನಿಡಲು ಕಾರಣವೇನೆಂಬುದು ಅಪ್ರಧಾನವಾದ ವಿಷಯ. ದುಃಖಮಗ್ನನಾದ ಮನುಷ್ಯನಿಗೋಸ್ಕರ ವಿಷ್ಣುವು ಭೂಭಾಗಗಳನ್ನು ಮೂರು ಸಲ ಹಾದುಹೋದುದು [೬-೪೯-೧೩]; ಮನುಷ್ಯನು ಮನೆಕಟ್ಟಿಕೊಳ್ಳಲು ಕೊಡುವುದಕ್ಕೋಸ್ಕರಲೇ, ಅವನು ಹೆಜ್ಜೆ ಹಾಕಿದುದು [೭-೧೦೦-೪] ; ಇಂದ್ರನೊಡನೆ ಅವನು ದೂರದೂರವಾಗಿ ಹೆಜ್ಜೆಗಳನ್ನಿಟ್ಟು ನಾವು ಜೀವಿಸುವುದಕ್ಕೋಸ್ಕರ ಪ್ರಪಂಚವನ್ನು ವಿಸ್ತರಿಸಿದನು [೬-೬೯-೫,೬]. ಈ ಸಂಬಂಧವಾಗಿ ಮುಂದೆ ಪುರಾಣಾದಿಗಳಲ್ಲಿ, ವಾಮನಾವತಾರ ಕಥಾದಿಗಳು ಹೊರಟಿರುತ್ತವೆ. ಈ ಕಥೆಗೆ ಆಧಾರವಾಗಿ ಬ್ರಾಹ್ಮಣಗಳಲ್ಲಿ [ಶ. ಬ್ರಾ. ೧-೨-೫-೫, ತೈ. ಸಂ. ೨-೧-೩-೧, ತೈ. ಬ್ರಾ. ೧-೬-೧-೫), ಅಸುರರಿಂದ ಆವೃತವಾದ ಭೂಮಿಯನ್ನು ದೇವತೆಗಳಿಗೆ ಪುನಃ ಕೊಡಿಸುವುದಕ್ಕೋಸ್ಕರ ವಿಷ್ಣುವು ವಾಮನನಾದನು ಎಂದಿದೆ.

ವಿಷ್ಣುವಿನ ಅಪ್ರಧಾನವಾದ ಲಕ್ಷಣಗಳಲ್ಲಿ ಬಹಳ ಮುಖ್ಯವಾದುದೆಂದರೆ ಅವನಿಗೆ ಇಂದ್ರನಲ್ಲಿರುವ ಸ್ನೇಹ, ವೃತ್ರನ ಜೊತೆಯಲ್ಲಿ ಯುದ್ಧಮಾಡುವಾಗ ವಿಷ್ಣುವು ಇಂದ್ರನಿಗೆ ಬೆಂಬಲ. ಇಂದ್ರವಿಷ್ಣುಗಳಿಬ್ಬರನ್ನೂ ಸ್ತುತಿಸುವ ಸೂಕ್ತವೊಂದಿದೆ [೬-೬೯] ಮತ್ತು ಇವರಿಬ್ಬರ ಹೆಸರು ಒಟ್ಟಾಗಿ ಬಹಳ ಸಲ ಬರುತ್ತದೆ. ಅಲ್ಲದೇ, ವಿಷ್ಣುದೇವತಾಕವಾದ ಸೂಕ್ತಗಳಲ್ಲಿಯೂ ಸ್ಪಷ್ಟವಾಗಿಯಾಗಲೀ [೭-೯೯-೫ ಮತ್ತು ೬; ೧-೧೫೫-೨] ಅಸ್ಪಷ್ಟವಾಗಿಯಾಗಲೀ [೭-೯೯-೪; ೧-೧೫೪-೬ ೧-೧೫೫-೧] ಸೂಚಿತವಾಗಿರುವ ದೇವತೆಯೆಂದರೆ ಇಂದ್ರನೊಬ್ಬನೇ. ಇಂದ್ರನ ಓಜಸ್ಸಿನಿಂದ ವಿಷ್ಣುವು ಮೂರು ಹೆಜ್ಜೆಗಳನ್ನಿಟ್ಟನು [೮-೧೨-೨೭]. ವೃತ್ರನನ್ನು ವಧಿಸುವ ಸಂದರ್ಭದಲ್ಲಿ ಇಂದ್ರನು "ಮಿತ್ರನಾದ ವಿಷ್ಣುವೇ, ವಿಸ್ತಾರವಾಗಿ ಹೆಜ್ಜೆಹಾಕುತ್ತಾ ಹೊರಡು" [೪-೧೮-೧೧] ಎನ್ನುತ್ತಾನೆ.



CC-0. Jangamwadi Math Collection. Digitized by eGangotri

ವಿಷ್ಣುವನ್ನು ಜೊತೆಯಲ್ಲಿಟ್ಟುಕೊಂಡು ಇಂದ್ರನು ವೃತ್ರನನ್ನು ವಧಿಸಿದನು (೬-೨೦-೨) ಇಂದ್ರ ಮತ್ತು ವಿಷ್ಣುಗಳ ದಾಸನನ್ನು ಜಯಿಸಿದರು ; ಶಂಬರನ ೯೯ ಕೋಟೆಗಳನ್ನು ನಾಶಮಾಡಿದರು (೭-೯೯-೪ ಮತ್ತು ೫). ವಿಷ್ಣುವು ಇಂದ್ರನ ಆಪ್ತ ಮಿತ್ರ (೧-೨೨-೧೯). ತನ್ನ ಸ್ನೇಹಿತನೊಡಗೂಡಿ, ವಿಷ್ಣುವು ಕೊಟ್ಟಿಗೆಯ ಬಾಗಿಲನ್ನು ತೆಗೆಯುತ್ತಾನೆ (೧-೧೫೬-೪). ವೃತ್ರನ ಮೇಲೆ ಇಂದ್ರನು ವಜ್ರವನ್ನು ಪ್ರಯೋಗಿಸಿದಾಗ ವಿಷ್ಣುವು ಅವನ ಹಿಂದೆಯೇ ಇರುತ್ತಾನೆ (ಶ. ಬ್ರಾ. ೫-೫-೫-೧). ಅನೇಕ ಮಂತ್ರಗಳಲ್ಲಿ, ಇಂದ್ರನೊಡನೆ ವಿಷ್ಣುವನ್ನು (೪-೨-೪ ; ೪-೫೫-೪ ; ೮-೧೦-೨ ; ೧೦-೬೬-೪) ಆಹ್ವಾನಿಸಿದೆ. ಇಂದ್ರಾವಿಷ್ಣೂ ಎಂದು ದ್ವಿವಚನಾಂತ ಪ್ರಯೋಗವಿರುವಾಗ, ವಿಷ್ಣುವಿಗೂ ಇಂದ್ರನ ಕೆಲವು ಗುಣಗಳು ಇರುವುದು ಕಂಡುಬರುತ್ತವೆ ; ಸೋಮಪಾನ ಮಾಡುವ ಶಕ್ತಿ (೬-೬೯) ಮತ್ತು ಇಂದ್ರನ ಜಯಗಳೇ (೭-೯೦-೪ರಿಂದ ೬) ಅವು. ಅದೇ ರೀತಿ ಇಂದ್ರನೂ ವಿಷ್ಣುವಿನ ದೊಡ್ಡ ಹೆಜ್ಜೆಯಿಡುವ ಶಕ್ತಿಯಲ್ಲಿ ಭಾಗಿಯಾಗುತ್ತಾನೆ (೬-೬೯-೫ ; ೭-೯೯-೬) ಇಬ್ಬರಿಗೂ ಒಟ್ಟಾಗಿ, ವಿಸ್ತಾರವಾದ ವಾಯುಮಂಡಲ ಸೃಷ್ಟಿ ಮತ್ತು ಪ್ರದೇಶಗಳನ್ನು ವಿಸ್ತರಿಸುವ ಕಾರ್ಯ (೬-೬೯-೫), ಮತ್ತು ಸೂರ್ಯ, ಉಷಸ್ಸು ಮತ್ತು ಅಗ್ನಿಗಳ ಜನನ ಕಾರ್ಯ (೭-೯೯-೪) ಇವುಗಳು ಲಕ್ಷಣಗಳೆಂದು ಹೇಳಿವೆ. ಈ ಸ್ನೇಹಕ್ಕೋಸ್ಕರಲೇ, ಇಂದ್ರನು ವಿಷ್ಣುವಿನೊಡನೆ ಸೋಮಪಾನ ಮಾಡಿ (೮-೩-೮ ; ೮-೧೨-೧೬), ಅದರಿಂದ ಅವನ ಶಕ್ತಿಯನ್ನು ಹೆಚ್ಚಿಸುತ್ತಾನೆ (೮-೩-೮ ; ೧೦-೧೧೩-೨). ವಿಷ್ಣುವಿನಿಂದ ಸುತವಾದ ಸೋಮವನ್ನು ಇಂದ್ರನು ಮೂರು ಬಟ್ಟಲುಗಳಲ್ಲಿ ಪಾನ ಮಾಡಿದನು (೨-೨೨-೧) ; ಇದು, ಮಧುಪೂರಿತವಾದ ವಿಷ್ಣುವಿನ ಮೂರು ಹೆಜ್ಜೆಗಳನ್ನು ಜ್ಞಾಪಕಕ್ಕೆ ತರುತ್ತದೆ (೧-೧೫೪-೪). ವಿಷ್ಣುವು ಇಂದ್ರನಿಗೋಸ್ಕರ ೧೦೦ ಎಮ್ಮೆಗಳನ್ನು ಪಾಕಮಾಡುತ್ತಾನೆ (೬-೧೭-೧೧) ಅಥವಾ ೧೦೦ ಎಮ್ಮೆ ಮತ್ತು ಹಾಲಿನಿಂದಾದ ಪಾನೀಯವನ್ನು ಪಾಕಮಾಡುತ್ತಾನೆ (೮-೬೬-೧೦). ಮಿತ್ರ, ವರುಣ, ಮತ್ತು ಮರುತ್ತುಗಳಿಂದ ಕೂಡಿ ವಿಷ್ಣುವು ಇಂದ್ರನನ್ನು ಸ್ತುತಿಸುತ್ತಾನೆ (೮-೧೫-೯).

ವೃತ್ರ ಯುದ್ಧದಲ್ಲಿ ಸತತವಾಗಿ ಇಂದ್ರನ ಜೊತೆಯಲ್ಲಿದ್ದ ಮರುತ್ತಗಳೂ ವಿಷ್ಣುವಿನ ಸಹಚಾರಿಗಳಾಗಿದಾರೆ. ವಿಷ್ಣುವು ಮದಕರವಾದ ಸೋಮವನ್ನು ಅಪೇಕ್ಷಿಸಿದಾಗ ಮರುತ್ತುಗಳು ತಮ್ಮ ವೇದಿಕೆಯ ಮೇಲೆ ಪಕ್ಷಿಗಳಂತೆ ಕುಳಿತರು (೧-೮೫-೭). ಕ್ಷಿಪ್ರಗತಿಯ ವಿಷ್ಣುವಿನ ಉದ್ದೇಶವಾಗಿ ಹೋಮಮಾಡುವಾಗ, ಮರುತ್ತುಗಳು ಆಹೂತರಾಗುತ್ತಾರೆ (೨-೩೪-೧೧). ವೇಗಗಾಮಿಯಾದ ವಿಷ್ಣುವಿನ ಔದಾರ್ಯದ ಫಲವೇ ಈ ಮರುತ್ತುಗಳು (೮-೨೦-೩). ಪೂಷಣ ಮತ್ತು ವಿಷ್ಣುವು ಇಂದ್ರನಿಗಾಗಿ ೧೦೦ ಎಮ್ಮೆಗಳನ್ನು ಪಾಕಮಾಡುತ್ತಿದ್ದಾಗ, ಮರುತ್ತುಗಳು ಇಂದ್ರನಿಗೆ ಬೆಂಬಲರಾಗಿದ್ದರು (೬-೧೭-೧೧). ಮರುತ್ತುಗಳ ಮನೋಭಿಪ್ರಾಯವನ್ನೇ ವರುಣ ಮತ್ತು ಅಶ್ವಿನೀದೇವತೆಗಳು ಅನುಸರಿಸುತ್ತಾರೆ ; ಇಂತಹ ಮರುತ್ತುಗಳಿಂದ ಸಹಚರಿತನಾಗಿಯೇ ವಿಷ್ಣುವು ವಿಧಿಗಳನ್ನು ವಿಧಿಸುವುದು (೧-೧೫೬-೪). ಒಂದು ಇಡೀ ಸೂಕ್ತದಲ್ಲಿ (೫-೮೭) ವಿಷ್ಣು ಮತ್ತು ಮರುತ್ತುಗಳು ಒಟ್ಟಾಗಿಯೇ ಇದ್ದಾರೆ. ತಾನು ಹೊರಟಾಗ ಮರುತ್ತುಗಳನ್ನೂ ಕರೆದುಕೊಂಡು ವೇಗವಾಗಿ ಹೋಗುತ್ತಾನೆ (೫-೮೭-೪ ಮತ್ತು ೫).

ಇವುಗಳಲ್ಲದೆ, ಅಲ್ಲಲ್ಲೇ ವಿಷ್ಣುವು ನಾನಾಗುಣ ಮತ್ತು ರೂಪವಿಶಿಷ್ಟನಾಗಿ ಉಕ್ತನಾಗಿದಾನೆ. " ಯುದ್ಧಕಾಲದಲ್ಲಿ ಬೇರೆರೂಪಧಾರಿಯಾದರೂ, ನಮಗೆ ಈ ರೂಪವು ಮರೆಯದಂತಿರಲಿ " (೭-೧೦೦-೬). ಅವನು ಗರ್ಭರಕ್ಷಕ (೭-೩೬-೯) ; ಗರ್ಭಧಾರಣೆಗೆ ಸಹಾಯಕನಾಗೆಂದು ಕೆಲವು ದೇವತೆಗಳೊಡನೆ ವಿಷ್ಣುವು ಪ್ರಾರ್ಥಿತನಾಗಿದಾನೆ (೧೦-೧೮೪-೧). ೧೦-೧೮೪-೧೭ನೇ ಮಂತ್ರವಾದ ಮೇಲೆ ಬರುವ ಖಿಲದಲ್ಲಿ, ಗರ್ಭಕೋಶದಲ್ಲಿ ಸ್ಫುರದ್ರೂಪಿಯಾದ ಪುಂಶಿಶುವನ್ನು ಇಡು ಅಥವಾ ವಿಷ್ಣುವಿನ ಅತ್ಯಂತ ಸುಂದರರೂಪದಂತೆ ರೂಪವುಳ್ಳ ಪುಂಶಿಶುವನ್ನು ಇಡು ಎಂದು ಪ್ರಾರ್ಥಿಸಲ್ಪಟ್ಟಿದಾನೆ.





CC-0. Jangamwadi Math Collection. Digitized by eGangotri

ವಿಷ್ಣುವಿನ ಇತರ ಗುಣಗಳು ಸಾಧಾರಣವಾದುವು; ಇತರ ದೇವತೆಗಳಲ್ಲಿ ಕಂಡುಬರುವಂತಹವು. ಅವನು ಉದಾರಿ ಮತ್ತು ತೊಂದರೆ ಮಾಡುವವನಲ್ಲ (೮-೨೫-೧೨) ಉಪಕಾರಿ (೧-೧೫೬-೫); ಧಾರಾಳಿ (೭-೪೦-೫); ರಕ್ಷಕ (೩-೫೫-೧೦); ಅವನನ್ನು ವಂಚಿಸಲು ಸಾಧ್ಯವಿಲ್ಲ. (೧-೨೨-೧೮); ನಿರುಪದ್ರವನೂ, ಉದಾರಿಯೂ ಆದ ವಿಮೋಚಕನು (೧-೧೫೫-೪). ಅವನೇ ತ್ರಿಲೋಕಗಳ, ಎಲ್ಲಾ ಪ್ರಾಣಿಗಳ ಸ್ಥಿತಿಗೆ ಕಾರಣನು (೧-೧೫೪-೪). ಅವನು ಭೂಮಿಯನ್ನು ಸುತ್ತಲೂ ಗೂಟಗಳಿಗೆ ಕಟ್ಟಿಹಾಕಿದಾನೆ (೭-೯೯-೩). ಅವನು ವಿಧಿಗಳನ್ನು ವಿಧಿಸುವವನು (೧-೧೫೬-೪).

ಬ್ರಾಹ್ಮಣಗಳಲ್ಲಿ, ವಿಷ್ಣುವು, ಸ್ವರ್ಗ, ಆಕಾಶ ಮತ್ತು ಭೂಮಿಗಳಲ್ಲಿ ಮೂರು ಹೆಜ್ಜೆಗಳನ್ನಿಟ್ಟನೆಂದಿದೆ (ಶ. ಬ್ರಾ. ೧-೯-೩-೯; ತೈ. ಬ್ರಾ. ೩-೧-೨-೭). ಈ ಮೂರು ಹೆಜ್ಜೆಗಳನ್ನು ಯಾಗ ಕರ್ತೃವು ಯಾಗದಲ್ಲಿ ಅನುಕರಿಸುತ್ತಾನೆ (ಶ. ಬ್ರಾ. ೧-೯-೩ ೧೦ ಮತ್ತು ೧೫).

ವಿಷ್ಣುವಿಗೆ ಸಂಬಂಧಿಸಿದ ಎರಡು ಕಥೆಗಳಿಗೆ ಋಗ್ವೇದದಲ್ಲಿ ಆಧಾರವಿದೆ. ಇಂದ್ರನ ಪಕ್ಷವನ್ನು ವಹಿಸಿ, ರಾಕ್ಷಸನಾಶ ಮಾಡಿದಾನೆ. ಬ್ರಾಹ್ಮಣಗಳಲ್ಲಿ ದೇವತೆಗಳು ಮತ್ತು ಅಸುರರು ನಿತ್ಯ ವೈರಿಗಳು; ಪದೇ ಪದೇ ಯುದ್ಧಮಾಡುತ್ತಾರೆ. ದೇವತೆಗಳೇ ಸದಾ ಜಯಶೀಲರಲ್ಲ; ಅನೇಕ ವೇಳೆ ಸಂಪೂರ್ಣ ಪರಾಜಯ ಹೊಂದುತ್ತಾರೆ. ಆದ್ದರಿಂದ ದೇವತೆಗಳು ಜಯಪಡೆಯಲು ಉಪಾಯ ಮಾಡಬೇಕಾಗುತ್ತದೆ (ಐ. ಬ್ರಾ. ೬-೧೫)ರಲ್ಲಿ, ಇಂದ್ರ ಮತ್ತು ವಿಷ್ಣುಗಳು ಅಸುರರೊಡನೆ ಯುದ್ಧಮಾಡಿ, ಒಂದು ಒಪ್ಪಂದಕ್ಕೆ ಬರುತ್ತಾರೆ; ವಿಷ್ಣುವು ಮೂರು ಹೆಜ್ಜೆಯಲ್ಲಿ ಆವರಿಸುವಷ್ಟು ಭೂಮಿಯನ್ನು ಆ ಇಬ್ಬರು ದೇವತೆಗಳು (ಇಂದ್ರ ಮತ್ತು ವಿಷ್ಣು) ತೆಗೆದುಕೊಳ್ಳತಕ್ಕದೆಂದು. ಅದರಂತೆ ವಿಷ್ಣುವು ಪ್ರಪಂಚ, ವೇದಗಳು, ವಾಕ್ಕು ಎಲ್ಲವನ್ನೂ ಮೂರು ಹೆಜ್ಜೆಗಳಲ್ಲಿ ಮುಗಿಸಿದನು (ಶ. ಬ್ರಾ. ೧-೨-೫)ರಲ್ಲಿ ಹೀಗೆ ಹೇಳಿದೆ.—ಅಸುರರು ದೇವತೆಗಳನ್ನು ಸೋಲಿಸಿ, ಭೂಮಿಯನ್ನು ಹಂಚಿಕೊಳ್ಳಲು ಪ್ರಾರಂಭಿಸಿದರು; ಆಗ ದೇವತೆಗಳು ವಿಷ್ಣುವನ್ನು ಮುಂದೆಮಾಡಿಕೊಂಡು ಬಂದು ತಮಗೊಂದು ಭಾಗವನ್ನು ಕೇಳಿದರು. ವಾಮನರೂಪಿಯಾದ ವಿಷ್ಣುವು ಆವರಿಸಿಕೊಳ್ಳುವಷ್ಟು ಜಾಗವನ್ನು ಕೊಡಲು ಅಸುರರು ಒಪ್ಪಿದರು. ಆಗ ದೇವತೆಗಳು ಯಾಗಮಾಡಿ, ವಿಷ್ಣುವಿನ ಮೂಲಕ ಭೂಮಿಯೆಲ್ಲವನ್ನೂ ಪಡೆದರು. ಇಲ್ಲಿ ಮೂರು ಹೆಜ್ಜೆ ಎಂದು ಇಲ್ಲ. ಬೇರೆ ಸ್ಥಳದಲ್ಲಿ ಇದೆ. (ಶ. ಬ್ರಾ. ೧-೯-೩-೯) ಮೂರು ಲೋಕಗಳನ್ನೂ ಹಾಯ್ದು, ವಿಷ್ಣುವು ದೇವತೆಗಳಿಗೆ ಸರ್ವತ್ರವ್ಯಾಪ್ತಿಯನ್ನು ಸಂಪಾದಿಸಿಕೊಟ್ಟನು. ವಿಷ್ಣುವು ವಾಮನನಾಗಿ, ಮೂರು ಲೋಕವನ್ನು ಗೆದ್ದನು (ತೈ. ಸಂ. ೨-೧-೩-೧). ವಾಮನರೂಪವನ್ನು ತಾಳಿದುದು ದೈತ್ಯರ ಅಪನಂಬಿಕೆಯನ್ನು ಹೋಗಲಾಡಿಸಲು. ಇದೇ ಮುಂದೆ ಪುರಾಣಗಳಲ್ಲಿ ವಿಷ್ಣುವಿನ ವಾಮನಾವತಾರ ಕಥೆಗೆ ಆಧಾರವಾಗಿದೆ.

ಎರಡನೆಯ ಕಥೆಗೆ ಆಧಾರ ಋಗ್ವೇದದ ಎರಡು ಮಂತ್ರಗಳು (೧-೬೧-೭; ೮-೬೬-೧೦). ವಿಷ್ಣುವು ಸೋಮಪಾನಮಾಡಿ, ಇಂದ್ರನಿಂದ ಪ್ರೇರಿತನಾಗಿ ವೃತ್ರ ವರಾಹನಿಗೆ ಸೇರಿದ ನೂರು ಎಮ್ಮೆಗಳನ್ನೂ ಕ್ಷೀರ ಪಾತ್ರೆಯೊಂದನ್ನೂ ಎತ್ತಿಕೊಂಡು ಹೋದನು; ಆಗ ಇಂದ್ರನು ಪರ್ವತಾಕಾರವಾದ ಮೋಡಗಳ ಮೂಲಕ ಬಾಣವನ್ನು ಹೊಡೆದು, ಆ ವರಾಹವನ್ನು ಕೊಂದನು. ಇದು ತೈತ್ತಿರೀಯ ಸಂಹಿತೆಯಲ್ಲಿ ಹೀಗೆ ರೂಪುಗೊಂಡಿದೆ. (೬-೨) ಅಸುರರ ಐಶ್ವರ್ಯವನ್ನು ದೋಚಿಕೊಂಡು ಹೋಗಿ, ಒಂದು ವರಾಹವು ಸಪ್ತಪರ್ವತಗಳ ಆಚೆ ಆ ಐಶ್ವರ್ಯವನ್ನು ಇಟ್ಟಿತು; ಆಗ ಇಂದ್ರನು ದರ್ಭೆಯೊಂದನ್ನು ತೆಗೆದುಕೊಂಡು, ಅದರಿಂದ, ಏಳು ಪರ್ವತಗಳನ್ನು ಭೇದಿಸಿ, ವರಾಹವನ್ನು ಕೊಂದನು; ವಿಷ್ಣುವು (ಯಜ್ಞವು) ಅದನ್ನು ದೇವತೆಗಳಿಗೆ ಬಲಿಯಾಗಿ ಎತ್ತಿಕೊಂಡು ಹೋದನು; ಮತ್ತು ದೇವತೆಗಳಿಗೆ ರಾಕ್ಷಸರ ಐಶ್ವರ್ಯವು ಸಿಕ್ಕಿತು. ಇದೇ ಕಥೆಯು ಸ್ವಲ್ಪ ಬದಲಾವಣೆಗಳೊಡನೆ ಚರಕ ಬ್ರಾಹ್ಮಣದಲ್ಲಿ ಉಕ್ತವಾಗಿದೆಯೆಂದು ಸಾಯಣರಿಂದ ೮-೬೬-೧೦ನೆಯ ಮಂತ್ರದ ವ್ಯಾಖ್ಯಾನದಲ್ಲಿ



CC-0. Jangamwadi Math Collection. Digitized by eGangotri

ಉಕ್ತವಾಗಿದೆ. ಶತಪಥ ಬ್ರಾಹ್ಮಣದಲ್ಲಿ (೧೪-೧-೩-೧೧) ನೀರಿನಲ್ಲಿ ಮುಳುಗಿದ್ದ ಭೂಮಿಯನ್ನು ವರಾಹವು ಮೇಲಕ್ಕೆತ್ತಿತು ಎಂದೂ, ತೈತ್ತಿರೀಯ ಸಂಹಿತೆಯಲ್ಲಿ (೭-೧-೫-೧), ಪ್ರಳಯ ಜಲಧಿಯಿಂದ ಭೂಮಿಯನ್ನು ಉದ್ಧರಿಸಿದ ವರಾಹವು ಪ್ರಜಾಪತಿಯ ಒಂದು ರೂಪವೆಂದೂ ಹೇಳಿದೆ. ಮುಂದೆ ಪುರಾಣಗಳಲ್ಲಿ ಈ ವರಾಹವು ವಿಷ್ಣುವಿನ ಒಂದು ಅವತಾರವೆಂದು ಪ್ರಸಿದ್ಧವಾಗಿದೆ.

ಮನುವನ್ನು ಪ್ರವಾಹದಿಂದ ಬಿಡುಗಡೆ ಮಾಡಿದ (ಶ. ಬ್ರಾ. ೧-೮-೧-೧) ಮತ್ಸ್ಯವು ಮುಂದೆ ವಿಷ್ಣುವಿನ ಅವತಾರವೆಂದು ಪರಿಗಣಿತವಾಗಿದೆ. ಅದೇ ರೀತಿ, ಸೃಜಿಸಬೇಕೆಂಬ ಅಪೇಕ್ಷೆಯಿಂದ, ಪ್ರಜಾಪತಿಯು (ಶ. ಬ್ರಾ. ೭-೫-೧-೫ ; ತೈ. ಆ. ೧-೨೩-೩) ಪ್ರಳಯೋದಕದಲ್ಲಿ ಕೂರ್ಮರೂಪಿಯಾಗಿ ಸಂಚರಿಸುತ್ತಾನೆ; ಮುಂದೆ ಇದೂ ಒಂದು ವಿಷ್ಣುವಿನ ಅವತಾರವೆಂದು ಪ್ರಥಿತವಾಗುತ್ತದೆ.

ವಿಷ್ಣುವೇ ಮೊದಲು ಯಾಗದ ವಿಷಯವನ್ನು ತಿಳಿದು, ಬಹಳ ಪ್ರಾಮುಖ್ಯತೆಗೆ ಬರುತ್ತಾನೆ; ಬಿಲ್ಲು ಹತೋಟಿ ತಪ್ಪಿ ವಿಷ್ಣುವಿನ (ಯಾಗದ) ತಲೆ ಕತ್ತರಿಸಿ ಹೋಗಿ, ಅದೇ ಸೂರ್ಯ (ಆದಿತ್ಯ)ನಾಯಿತು (ಶ. ಬ್ರಾ. ೧೪-೧-೧). ಆಮೇಲೆ (ತೈ ಆ. ೫-೧-೧ ರಿಂದ ೭) ಅಶ್ವಿನೀದೇವತೆಗಳು ಯಾಗದ ಶಿರೋಭಾಗವನ್ನು ಮುಂಚಿನ ಸ್ಥಾನದಲ್ಲಿಟ್ಟರು ; ಅದು ಸಂಪೂರ್ಣವಾಗುತ್ತಲು, ದೇವತೆಗಳು ಸ್ವರ್ಗಲೋಕವನ್ನು ಜಯಿಸಿದರು ಎಂಬುದೊಂದು ಕಥೆ.

ವಿಷ್ಣುವು ದೇವತೆಗಳಲ್ಲೆಲ್ಲಾ ದೊಡ್ಡವನು; ಅಗ್ನಿಯು ಚಿಕ್ಕವನು; ಇತರ ದೇವತೆಗಳೆಲ್ಲಾ ಇವರ ಮಧ್ಯೆ ಇದ್ದಾರೆ (ಐ. ಬ್ರಾ. ೧-೧). ವಿಷ್ಣುವು ದೇವತೆಗಳ ಬಾಗಿಲು ಕಾಯುವವನು (ಐ. ಬ್ರಾ. ೧-೩೦) ಎಂದೂ ಇದೆ; ಈ ಸಂದರ್ಭದಲ್ಲಿ ತನ್ನ ಸ್ನೇಹಿತನೊಡಗೂಡಿ, ಗೋಶಾಲೆಗಳ ಬಾಗಿಲು, ವಿಷ್ಣುವಿನಿಂದ ತೆರೆಯಲ್ಪಟ್ಟಿತು ಎಂದು ಹೇಳುವ ೧-೧೫೬-೪ನೆಯ ಮಂತ್ರವು ಉದ್ಧೃತವಾಗಿದೆ.

## ವಿವಸ್ವಾನ್

ಆದರೆ ಸುಮಾರು ಮೂವತ್ತು ಸಲ ಆ ಹೆಸರು
ವಿವಸ್ವತನನ್ನು ಹೊಗಳುವ ಪ್ರತ್ಯೇಕಸೂಕ್ತವಿಲ್ಲ; ಮತ್ತು ಯಮನ ತಂದೆ (೧೦-೧೪-೫ ; ೧೦-೧೭-೧).
ಬರುತ್ತದೆ. ಅವನು ಅಶ್ವಿನೀದೇವತೆಗಳ ತಂದೆ (೧೦-೧೭-೨) ಈ ಮನುವಿಗೇ ವಿವಸ್ವಾನ್ (ವಾಲ. ೪-೧) ಎಂಬ
ಮನುಷ್ಯರಿಗೆ ಮೂಲಪುರುಷನಾದ ಮನುವಿನ ತಂದೆ. ವೈವಸ್ವತ ಎಂಬ ಅಭಿಧಾನವಿದೆ. ಮನು
ಹೆಸರಿದೆ. ಅಥರ್ವವೇದ, ಶತಪಥ ಬ್ರಾಹ್ಮಣಗಳಲ್ಲಿ ಮನುವಿಗೆ ಶ. ಬ್ರಾ. ೩-೧-೩-೪). ಒಂದೊಂದು ಸಲ
ಷ್ಯರೂ ವಿವಸ್ವಾನ್ ಆದಿತ್ಯನ ಸಂತಾನ (ತೈ. ಸಂ. ೬-೫-೬-೨ ; ತ್ವಷ್ಟೃವಿನ ಪುತ್ರಿ ಸರಣ್ಯುವು ವಿವ
ದೇವತೆಗಳೂ ವಿವಸ್ವತನಿಂದ (ಜನಿಮಾ) ಜನಿಸಿದರೆಂದಿದೆ (೧೦-೬೩-೧).
ಸ್ವತನ ಪತ್ನಿ (೧೦-೧೭-೧ ಮತ್ತು ೨). ಕಾಣಿಸಿಕೊಂಡನು (೧-೩೧-೩). ಒಂದೇ
ವಿವಸ್ವತ ಮತ್ತು ಮಾತರಿಶ್ವರಿಗೇ ಅಗ್ನಿಯು ಮೊದಲು ಇತರ ಸ್ಥಳಗಳಲ್ಲೆಲ್ಲಾ ಅಗ್ನಿಯೇ ಇವನ ದೂತನು
ಒಂದು ಕಡೆ ಮಾತರಿಶ್ವನು ವಿವಸ್ವತನ ದೂತನು (೬-೮.೪); ಋಷಿಯಾಗಲು ಅಗ್ನಿಯು ಅವನ
(೧-೫೮-೧ ; ೪.೭-೪ ; ೮-೩೯.೩ ; ೧೦-೨೧-೫) ಎಂದಿದೆ. ವಿವಸ್ವತನು ದೇವತೆಗಳು (೧೦-೧೨-೭) ಮತ್ತು
ಮಾತಾಪಿತೃ (ಅರಣಿ)ಗಳಿಂದ ಮಥಿತನಾದನು (೫-೧೧-೩).
ವಿವಸ್ವತನ ಆಸನ ಅಥವಾ ಸ್ಥಾನವು ಐದು ಕಡೆ ಉಕ್ತವಾಗಿದೆ. ಅಲ್ಲಿಯೇ ಗಾಯಕರು ಇಂದ್ರನ ಮಾಹಾ
ಇಂದ್ರನು (೩-೫೧-೩) ಆ ಸ್ಥಾನದಲ್ಲಿ ಆನಂದವನ್ನು ಪಡೆಯುತ್ತಾರೆ; ಅಥವಾ ಉದಕದ ಮಾಹಾತ್ಮ್ಯವನ್ನು ಗಾನ
ತ್ಮ್ಯವನ್ನು ಗಾನಮಾಡುತ್ತಾರೆ (೧-೫೩-೧ ; ೩-೩೪-೭); ನಿಹಿತವಾಯಿತು ಎಂದು (೧-೧೩೯-೧)
ಮಾಡುತ್ತಾರೆ (೧೦-೭೫-೧). ವಿವಸ್ವತನಲ್ಲಿ ಒಂದು ಸೂಕ್ತವು
ಹೇಳುವುದೂ ಈ ಅಭಿಪ್ರಾಯದಿಂದಲೇ ಇರಬೇಕು.



CC-0. Jangamwadi Math Collection. Digitized by eGangotri

ಇಂದ್ರನಿಗೂ ವಿವಸ್ವತನಿಗೂ ಅನೇಕ ಮಂತ್ರಗಳಲ್ಲಿ ಸಂಬಂಧವು ಉಕ್ತವಾಗಿದೆ. ವಿವಸ್ವತನ ಸ್ತುತಿಯಿಂದ ಇಂದ್ರನಿಗೆ ಸಂತೋಷ (೮-೬-೩೯) ತನ್ನ ನಿಧಿಯನ್ನು ವಿವಸ್ವತನ ಹತ್ತಿರ ಇಟ್ಟನು (೨-೧೩-೬). ವಿವಸ್ವತನ ಬೆರಳುಗಳಿಂದ ಇಂದ್ರನು ಪಾತ್ರೆಯನ್ನು ಆಕಾಶದಿಂದ ಬಗ್ಗಿಸುತ್ತಾನೆ (೮-೬೧-೮ ; ೫-೫೩-೬ನ್ನು ಹೋಲಿಸಿ). ವಿವಸ್ವತನಿಗೂ ಇಂದ್ರನಿಗೂ ಇಷ್ಟು ಸಾಮೀಪ್ಯವಿರುವುದರಿಂದ, ಸೋಮವು ಅಲ್ಲಿರಲೇಬೇಕು. ಒಂಬತ್ತನೆಯ ಮಂಡಲದಲ್ಲಿ ಸೋಮನಿಗೂ ವಿವಸ್ವತನಿಗೂ ಸಮೀಪಸಂಬಂಧಕಲ್ಪಿತವಾಗಿದೆ. ಸೋಮವು ವಿವಸ್ವತನೊಡನೆ ವಾಸಿಸುತ್ತದೆ (೯-೨೬-೪) ಮತ್ತು ವಿವಸ್ವತನ ಪುತ್ರಿಯರಿಂದ (ಬೆರಳುಗಳಿಂದ) ಸೋಮವು ಶುದ್ಧಿಪಡಿಸಲ್ಪಡುತ್ತದೆ (೯-೧೪-೫). ವಿವಸ್ವತನ ಪ್ರಾರ್ಥನೆಯ ಮೇಲೆ ನಸುಗೆಂಪಾದ ಸೋಮವು ಪ್ರವಹಿಸುತ್ತದ್ದೆ ಏಳು ಜನ ಸೋದರಿಯರು (ಉದಕ) ಜ್ಞಾನಿಯಾದ ಸೋಮನು ವಿವಸ್ವತನ ಮಾರ್ಗವನ್ನನುಸರಿಸುವಂತೆ ಮಾಡುತ್ತಾರೆ (೯-೬೬-೮ ; ೯-೯೯-೨). ವಿವಸ್ವತನ ಅನುಗ್ರಹವನ್ನು ಪಡೆದು, ಸೋಮಧಾರೆಗಳು ಜರಡಿಯಿಂದ ಬೀಳುತ್ತದೆ ಮತ್ತು ಉಷೋದೇವಿಯನ್ನು ಅನುಗ್ರಹಿಸುತ್ತವೆ (೯-೧೦-೫).

ವಿವಸ್ವತನೊಡನೆ ವಾಸಿಸುವ ಅಶ್ವಿನೀದೇವತೆಗಳೂ ಹವನಕ್ಕೆ ಆಹ್ವಾನಿತರಾಗಿದಾರೆ (೧-೪೬-೧೩). ಅಶ್ವಿನೀದೇವತೆಗಳ ರಥವನ್ನು ಹೂಡುವಾಗ ಆಕಾಶದ ಪುತ್ರಿಯು (ಉಷಸ್ಸು) ಮತ್ತು ವಿವಸ್ವತನ ಎರಡು ದಿನಗಳು (ಪ್ರಾಯಶಃ ಹಗಲು, ರಾತ್ರಿ) ಜನಿಸುತ್ತವೆ (೧೦-೩೯-೧೨ ; ಶ. ಬ್ರಾ- ೧೦-೫-೨-೪ನ್ನು ಹೋಲಿಸಿ).

ವರುಣ ಮತ್ತು ಇತರ ದೇವತೆಗಳೊಡನೆ ವಿವಸ್ವತನೂ ಪೂಜಿಸಲ್ಪಡುತ್ತಾನೆ (೧೦-೬೫-೬). ವಿವಸ್ವತನಲ್ಲಿ ಒಂದು ದುಷ್ಟಗುಣವಿದೆ; ಆದಿತ್ಯನನ್ನು ಪೂಜಿಸುವವರು, ವಿವಸ್ವತನ ತೀಕ್ಷ್ಣವಾದ ಬಾಣವು ವಾರ್ಧಕ್ಯಕ್ಕಿಂತ ಮುಂಚೆ ವಧಿಸದಿರಲೆಂದು ಪ್ರಾರ್ಥಿಸುತ್ತಾರೆ (೮-೫೬-೨೦ ; ಅ. ವೇ. ೧೯-೯-೭ನ್ನು ಹೋಲಿಸಿ). ಇದಕ್ಕೆ ವಿರುದ್ಧವಾಗಿ ವಿವಸ್ವತನು ಯಮನಿಂದ ರಕ್ಷಿಸುತ್ತಾನೆಂದು ಅ. ವೇ. ೧೮-೩-೬ ರಲ್ಲಿ ಹೇಳಿದೆ.

ವಿವಸ್ವತ್ ಎಂದರೆ ಹೊಳೆಯುವ ಎಂತಲೂ ಅರ್ಥ. ಈ ಅರ್ಥದಲ್ಲಿ ಕೆಲವು ಕಡೆ ಅಗ್ನಿ ಮತ್ತು ಉಷಸ್ಸುಗಳೊಡನೆ ಪ್ರಯೋಗವಿದೆ. ಅಗ್ನಿಯು ಮನುಷ್ಯರ ಮಕ್ಕಳನ್ನೂ, ಅಮಿತ ತೇಜಸ್ಸಿನಿಂದ ಆಕಾಶ ಮತ್ತು ಉದಕಗಳನ್ನೂ ಸೃಜಿಸಿದನು (೧-೯೬-೨). ಅಗ್ನಿಯು ಜ್ಞಾನಿ, ಪಾಪರಹಿತನು, ತೇಜಸ್ವಿಯಾದ ಋಷಿ ಮತ್ತು ಉಷಃಕಾಲದ ಆರಂಭದಲ್ಲಿ ಪ್ರಕಾಶಿಸುತ್ತಾನೆ (೭-೯-೩). ಕಾಂತಿಯುಕ್ತವಾದ ಉಷಸ್ಸನ್ನು ಅನುಗ್ರಹಿಸೆಂದು ಅಗ್ನಿಯನ್ನು ಬೇಡುತ್ತಾರೆ (೧-೪೪-೧) ಮತ್ತು ಮನುಷ್ಯರು, ಪ್ರಕಾಶಯುಕ್ತಳಾದ ಉಷೋದೇವಿಯ ಬೆಳಗುವ ಮುಖವನ್ನು ನೋಡಲು ಕಾತುರರಾಗಿದ್ದಾರೆ (೩-೩೦-೧೩). 'ವಿವಾಸ್' (ಚೆನ್ನಾಗಿ ಬೆಳಗು) ಎಂಬ ಧಾತುವಿನಿಂದ ವಿವಸ್ವಾನ್ ಮತ್ತು ಉಷಃ ಎಂಬ ಪದಗಳು ಉತ್ಪನ್ನವಾಗಿವೆ. ಈ ಪದಗಳ ನಿಷ್ಪತ್ತಿಯು ಶತಪಥಬ್ರಾಹ್ಮಣದಲ್ಲಿ ಸ್ಪಷ್ಟವಾಗಿದೆ; ಆದಿತ್ಯವಿವಸ್ವತನು ರಾತ್ರಿ ಮತ್ತು ಹಗಲುಗಳನ್ನು ಬೆಳಗುತ್ತಾನೆ (ಶ. ಬ್ರಾ. ೧೦-೫-೨-೪)

ಯಜುರ್ವೇದದಲ್ಲಿ (ವಾ. ಸಂ. ೮-೫ ; ಮೈ. ಸಂ. ೧-೬-೧೨) ಮತ್ತು ಬ್ರಾಹ್ಮಣಗಳಲ್ಲಿ ವಿವಸ್ವತನಿಗೇ ಆದಿತ್ಯನೆಂದು ಹೆಸರು. ಈಚಿನ ಗ್ರಂಥಗಳಲ್ಲಿ ಸೂರ್ಯನಿಗೆ ಅದೂ ಒಂದು ನಾಮಧೇಯ.

ವಿವಸ್ವತನು ಪುರಾಣಕಥಾನಾಯಕನಾಗಿ ಅಷ್ಟು ಪ್ರಸಿದ್ಧಿಯಿಲ್ಲ. ಪದದ ನಿಷ್ಪತ್ತಿ, ಅಗ್ನಿ, ಸೋಮ, ಅಶ್ವಿನಿಗಳಿರುವ ಸಂಬಂಧ, ಯಜ್ಞಶಾಲೆಯೇ ಅವನ ಸ್ಥಾನವಾಗಿರುವುದು, ಇವುಗಳನ್ನು ಪರ್ಯಾಲೋಚಿಸಿದರೆ, ವಿವಸ್ವತನು ಉದಿಸುತ್ತಿರುವ ಸೂರ್ಯನೆನ್ನಬಹುದು. ಅನೇಕ ವಿದ್ವಾಂಸರು ವಿವಸ್ವತನು ಸೂರ್ಯನೆಂದೇ ಅಭಿಪ್ರಾಯ ಪಡುತ್ತಾರೆ. ಕೆಲವರು ಆಕಾಶಾಭಿಮಾನಿದೇವತೆಯೆನ್ನುತ್ತಾರೆ. ಅಗ್ನಿಯೇ ವಿವಸ್ವತನೆಂದು ಒಬ್ಬರ ಮತ.



CC-0. Jangamwadi Math Collection. Digitized by eGangotri

(Bergaigne) ಮತ್ತು ಮತ್ತೊಬ್ಬರು (Oldenberg) ವಿವಸ್ವತನು ಬೆಳಕಿನ ಅಭಿಮಾನಿದೇವತೆಯೆನ್ನುವುದಕ್ಕೆ ಆಧಾರಗಳು ಸಾಲದೆಂದೂ, ಅವನನ್ನು ಮೊಟ್ಟಮೊದಲು ಯಜ್ಞಮಾಡಿದವನು, ಮನುಷ್ಯರಿಗೆ ಮೂಲಪುರುಷನು ಎಂದೂ ವಾದಿಸುತ್ತಾರೆ.

## ಆದಿತ್ಯರು

ಇದು ಒಂದು ದೇವಗಣ. ಈ ಗಣವನ್ನು ಆರು ಸೂಕ್ತಗಳೂ, ಮತ್ತೆರಡು ಸೂಕ್ತಭಾಗಗಳೂ ಹೊಗಳುತ್ತವೆ. ಈ ಗಣದಲ್ಲಿ ಎಷ್ಟು ದೇವತೆಗಳು ಸೇರಿವೆ, ಅವರ ಹೆಸರುಗಳೇನು ಎಂಬುದು ನಿರ್ಧರವಾಗಿ ಹೇಳಲಾಗುವುದಿಲ್ಲ. ಆರಕ್ಕಿಂತ ಹೆಚ್ಚಾಗಿ ಎಲ್ಲೂ ಎಣಿಸಿಲ್ಲ; ಅದೂ ಒಂದೇ ಒಂದು ಕಡೆ ಇದೆ; ಮಿತ್ರ, ಅರ್ಯಮ, ಭಗ, ವರುಣ, ದಕ್ಷ, ಅಂಶ (೨-೨೭-೧) ಈ ಆರು; ಕಡೇ ಮಂಡಲಗಳಲ್ಲಿ ದೇವತೆಗಳ ಸಂಖ್ಯೆ ಏಳೆಂದೂ (೯-೧೧೪-೩), ಒಂದು ಸಲ ಎಂಟೆಂದೂ (೧೦-೭೨-೮), ಮತ್ತು ಅದಿತಿಯು ಮೊದಲು ಏಳು ಜನರನ್ನು ದೇವತೆಗಳಿಗೆ ಒಪ್ಪಿಸಿ, ಎಂಟನೆಯ ಮಾರ್ತಾಂಡನನ್ನು ಅನಂತರ ತಂದಳೆಂದೂ ಇದೆ. ಈ ಎರಡು ಮಂತ್ರಗಳಲ್ಲಿಯೂ ಆದಿತ್ಯರೆಂದು ಹೇಳಿಯೇ ಇಲ್ಲ. ಅದಿತಿಗೆ ಎಂಟು ಮಕ್ಕಳು (ಅ. ವೇ. ೮-೯-೨೧); ಅವರು, ಮಿತ್ರ, ಅರ್ಯಮ, ವರುಣ, ಅಂಶ, ಭಗ, ಧಾತೃ, ಇಂದ್ರ ಮತ್ತು ವಿವಸ್ವತ (ತೈ. ಬ್ರಾ. ೧-೧-೯-೧); ಇದರಲ್ಲಿ ಮೊದಲ ಐದು ಹೆಸರುಗಳು ಋಗ್ವೇದದಲ್ಲಿದೆ (೨-೨೭-೧). ಮಾರ್ತಾಂಡನನ್ನು ಸೇರಿಸಿಕೊಂಡು, ಆದಿತ್ಯರು ಎಂಟು ಜನರಾದರು (ತೈ. ಬ್ರಾ.) ಮತ್ತೆರಡು ಸಂದರ್ಭಗಳಲ್ಲಿ (ಶ. ಬ್ರಾ. ೬-೧-೨-೮; ೧೧-೬-೩-೮) ಆದಿತ್ಯರು ತಿಂಗಳಿಗೊಬ್ಬರಂತೆ ಹನ್ನೆರಡು ಜನರೆಂದು ಹೇಳಿದೆ. ಪುರಾಣಗಳಲ್ಲಿ ಆದಿತ್ಯರು ತಿಂಗಳೊಬ್ಬರಂತೆ ಹನ್ನೆರಡು ಜನರು, ಅವರಲ್ಲಿ ವಿಷ್ಣುವೂ ಒಬ್ಬನು ಮತ್ತು ಅವನೇ ಅವರಲ್ಲೆಲ್ಲಾ ಶ್ರೇಷ್ಠನು. ಋಗ್ವೇದದ ಆರು ಜನದ ಜೊತೆಗೆ (೨-೨೭-೧) ಸೂರ್ಯನೂ ಆದಿತ್ಯನೆಂದು ಗಣಿತನಾಗಿದಾನೆ. ಪುರಾಣಗಳಲ್ಲಿ ಸೂರ್ಯನಿಗೆ ಆದಿತ್ಯನೆಂಬುದು ಸಾಧಾರಣವಾಗಿದೆ. ಅಗ್ನಿಯೇ ಎಂದು ಪರಿಗಣಿತನಾದ ಸೂರ್ಯನು ಆದಿತ್ಯನೆಂಬ ಹೆಸರಿನಿಂದ ಆಕಾಶದಲ್ಲಿ ದೇವತೆಗಳಿಂದ ಸ್ಥಾಪಿತನಾದನು (೧೦-೮೮-೧೧). ಒಂದು ಕಡೆ, ನಾಲ್ಕು ಜನ (ಭಗ, ವರುಣ, ಮಿತ್ರ ಮತ್ತು ಅರ್ಯಮ) ಆದಿತ್ಯರೊಡನೆ, ಸವಿತೃ ಸೇರಿಸಲ್ಪಟ್ಟಿದಾನೆ (೮-೧೮-೩). ಋಗ್ವೇದದಲ್ಲಿ ಆದಿತ್ಯರು ಏಳೇ ಆಗಿದ್ದಾರೆ. ಸೂರ್ಯನೇ ಏಳನೆಯವನು, ಅದಿತಿಯು ಒಂದು ಸಲ ಎಸೆದು ಪುನಃ (೧೦-೭೨-೮ ಮತ್ತು ೯) ತಂದ ಮಾರ್ತಾಂಡನೇ (ಅಸ್ತಮಾನ ಸೂರ್ಯ) ಎಂಟನೆಯವನಿರಬೇಕು. ಸೂರ್ಯನು ಅದಿತಿಯ ಮಗ (ಅ. ವೇ. ೧೩-೨-೯ ಮತ್ತು ೩೭), ಸೂರ್ಯಚಂದ್ರರು ಆದಿತ್ಯರು (೮-೨-೧೫), ಮತ್ತು ವಿಷ್ಣುವೂ, ಮಿತ್ರ ವರುಣ, ವಿಷ್ಣು ಭಗ, ಅಂಶ ಮತ್ತು ವಿವಸ್ವತ, ಇವರಲ್ಲಿ ಒಬ್ಬ (೧೧-೬-೨) ಆದಿತ್ಯನು. ಒಂದೇ ಒಂದು ಸ್ಥಳದಲ್ಲಿ (೯-೧-೪), ಆದಿತ್ಯರ ತಾಯಿ ಅದಿತಿಯಲ್ಲ; ವಸುಗಳ ಮಗಳು ಸ್ವರ್ಣವರ್ಣದ ಮಧುಕಶಾ ಎಂಬುವಳು ಎಂದಿದೆ.

ಆದಿತ್ಯರಲ್ಲಿ ಶ್ರೇಷ್ಠನಾದ ವರುಣನೊಡನೆ ಇಂದ್ರನೂ ಒಂದು ಸಲ ಆದಿತ್ಯನೆಂದು ಎಣಿಸಲ್ಪಟ್ಟಿದಾನೆ (೭-೮೫-೪, ಮತ್ತು ವಾಲ. ೪-೭ರಲ್ಲಿ ಇಂದ್ರನು ನಾಲ್ಕನೆಯ ಆದಿತ್ಯನು. ಮೈ. ಸಂ. ೨-೧-೧೨ ರಲ್ಲಿ ಇಂದ್ರನು ಅದಿತಿಯ ಪುತ್ರರಲ್ಲಿ ಒಬ್ಬನು, ಆದರೆ ಶ. ಬ್ರಾ. ೧೧-೬-೩-೫ರಲ್ಲಿ ಅವನು ಹನ್ನೆರಡು ಆದಿತ್ಯರಿಗಿಂತ ಭಿನ್ನನೆಂದಿದೆ. ಒಂದೇ ದೇವತೆ ಆದಿತ್ಯನೆಂದು ಹೇಳಿದಾಗಲೆಲ್ಲಾ, ವರುಣನೇ ಆದಿತ್ಯ; ಆದರೆ ಮಿತ್ರದೇವತಾಕ ಸೂಕ್ತದಲ್ಲಿ (೩-೫೯) ಮಿತ್ರದೇವತೆಯು ಆದಿತ್ಯ ಮತ್ತು ಸೂರ್ಯನೆಂದು ಕರೆಯಲ್ಪಟ್ಟಿದಾನೆ. ಇಬ್ಬರು ಮಾತ್ರ ಹೇಳಲ್ಪಟ್ಟಾಗ ಮಿತ್ರ ಮತ್ತು ವರುಣರು ಆದಿತ್ಯರು; ಒಂದು ಸಲ ಮಾತ್ರ ಇಂದ್ರವರುಣರು ಆದಿತ್ಯರು. ಮೂರು ಜನ ಆದರೆ, ವರುಣ, ಮಿತ್ರ, ಅರ್ಯಮರು ಆದಿತ್ಯರು. ಐದು ಜನ ಆದರೆ (ಒಂದೇ ಸಲ ಹೇಳಿರುವುದು). ಹಿಂದಿನ ಮೂವರ ಜೊತೆಗೆ ಸವಿತೃ ಮತ್ತು ಭಗರು ಸೇರುತ್ತಾರೆ. ದಕ್ಷನೆಂಬುದು, ಹಿಂದೆ ಹೇಳಿದ



CC-0. Jangamwadi Math Collection. Digitized by eGangotri

ಆರು ಹೆಸರುಗಳ ಜೊತೆಯಲ್ಲಿ ಮಾತ್ರ ಬರುತ್ತದೆ. ಆದಿತ್ಯಗಣವನ್ನು ಅನೇಕಸಲ ಸ್ತುತಿಸಿದೆ: ಪ್ರತಿಸಲವೂ ಗಣದ ಜೊತೆಗೆ ಮಿತ್ರ ಮತ್ತು ವರುಣರ ಹೆಸರು ಉಕ್ತವಾಗಿದೆ. ಇವರಿಬ್ಬರ ಹೆಸರು ವಸುಗಳು, ರುದ್ರರು, ಮರುತ್ತುಗಳು, ಅಂಗಿರಸರು, ಋಭುಗಳು, ವಿಶ್ವೇದೇವತೆಗಳ ಜೊತೆಯಲ್ಲಿಯೂ ಬರುತ್ತದೆ. ಆದಿತ್ಯರೆಂದು ಸೂರ್ಯಗಣಕ್ಕೆ ಮಾತ್ರವಲ್ಲ. ಸಾಮಾನ್ಯ ದೇವತೆಗಳಿಗೂ ಪ್ರಯೋಗಿಸಿರುವಂತೆ ತೋರುತ್ತದೆ. ಅವರ ಸ್ವಭಾವವು ಇತರ ದೇವತೆಗಳ ಸ್ವಭಾವಕ್ಕಿಂತ ಬೇರೆಯಾಗಿಲ್ಲ ಸಾಮಾನ್ಯವಾಗಿ ಸ್ವರ್ಗೀಯ ತೇಜಸ್ಸಿನ ದೇವತೆಗಳೆನ್ನ ಬಹುದು. ಮಿತ್ರ ಮತ್ತು ವರುಣರಂತೆ ವೈಶಿಷ್ಟ್ಯವೇನೂ ಕಂಡುಬರುವುದಿಲ್ಲ. ಅಥವಾ, ಸೂರ್ಯ, ಚಂದ್ರ, ನಕ್ಷತ್ರಗಳು, ಉಷಸ್ಸಿನಂತೆ ಬೆಳಕಿನ ಯಾವುದಾದರೊಂದು ನಿರ್ದಿಷ್ಟಕಾರ್ಯವನ್ನೂ ಆಚರಿಸುವುದಿಲ್ಲ.

ಆದಿತ್ಯರ ಪರವಾದ ಸೂಕ್ತಗಳಲ್ಲಿ ಸಾಧಾರಣವಾಗಿ, (೨-೨೭)ರಲ್ಲಿ ವಿಶೇಷವಾಗಿ, ಆದಿತ್ಯರೆಂದರೆ, ಮಿತ್ರ, ವರುಣ ಮತ್ತು ಅರ್ಯಮರೇ ಉದ್ದಿಷ್ಟರು. ಅತಿ ದೂರದಲ್ಲಿರುವುದೂ ಅವರಿಗೆ ಸಮೀಪ; ಚರಾಚರ ವಸ್ತುಗಳೆಲ್ಲವನ್ನೂ ಅವರು, ಪ್ರಪಂಚವನ್ನು ದೇವತೆಗಳು ರಕ್ಷಿಸುವಂತೆ, ರಕ್ಷಿಸುತ್ತಾರೆ (೨-೨೭-೩ ಮತ್ತು ೪). ಮನುಷ್ಯರ ಮನಸ್ಸಿನಲ್ಲಿರುವ ಒಳ್ಳೆಯದು ಕೆಟ್ಟದ್ದನ್ನು ನೋಡಬಲ್ಲರು ಮತ್ತು ಪ್ರಾಮಾಣಿಕ ಮತ್ತು ಅಪ್ರಾಮಾಣಿಕರ ಭೇದವನ್ನು ತಿಳಿಯಬಲ್ಲರು (೨-೨೭-೩ ; ೮-೧೮-೧೫). ಅವರಿಗೆ ಸುಳ್ಳೆಂದರೆ ದ್ವೇಷ ಮತ್ತು ಪಾಪಕ್ಕೆ ಶಿಕ್ಷೆ ವಿಧಿಸುತ್ತಾರೆ (೨.೨೭-೪ ; ೭-೫೨-೨ ; ೭-೬೦-೫ ; ೭-೬೬-೧೩). ಪಾಪವನ್ನು ಕ್ಷಮಿಸಬೇಕೆಂದೂ (೨-೨೭-೪ ; ೭-೫೯-೫), ಅದರ ದುಷ್ಪರಿಣಾಮವನ್ನು ತಪ್ಪಿಸಬೇಕೆಂದೂ ಅಥವಾ ಅದನ್ನು ತ್ರಿತ ಆಪ್ತ್ಯನಿಗೆ ವರ್ಗಾಯಿಸಬೇಕೆಂದೂ (೫-೫೨-೨ ; ೮-೪೭-೮) ಪ್ರಾರ್ಥಿತರಾಗಿದ್ದಾರೆ. ಅವರು ಶತ್ರುಗಳನ್ನು ಸಂಕೋಲೆಗಳಿಂದ ಬಂಧಿಸುತ್ತಾರೆ (೨-೨೭-೧೬) ಆದರೆ, ಪಕ್ಷಿಗಳು ತಮ್ಮ ರೆಕ್ಕೆಗಳ ಮರೆಯಲ್ಲಿ ಮರಿಗಳನ್ನು ಕಾಪಾಡುವಂತೆ, ತಮ್ಮನ್ನು ಪೂಜಿಸುವವರನ್ನು ರಕ್ಷಿಸುತ್ತಾರೆ (೮-೪೭-೨). ಕವಚಗಳಂತೆ ಸೇವಕರನ್ನು ಒಂದು ಬಾಣವೂ ತಾಕದಂತೆ, ರಕ್ಷಿಸುತ್ತಾರೆ (೮-೪೭-೭ ಮತ್ತು ೮). ರೋಗ ಮತ್ತು ದುಃಖಗಳನ್ನು ನಿವಾರಿಸುತ್ತಾರೆ (೮-೧೮-೧೦) ಮತ್ತು ಬೆಳಕು, ದೀರ್ಘಾಯಸ್ಸು, ಸಂತಾನ, ಸನ್ಮಾರ್ಗಪ್ರವರ್ತನ ಮುಂತಾದ ಸತ್ಫಲಗಳನ್ನು ಅನುಗ್ರಹಿಸುತ್ತಾರೆ (೨-೨೭ ; ೮-೧೮-೨೨ ; ೮-೫೬-೧೫ ಮತ್ತು ೨೦).

ಅವರಿಗೆ ಉಪಯೋಗಿಸಿರುವ ವಿಶೇಷಣಗಳು ಇವು : ಶುಚಿ, ಹಿರಣ್ಯವರ್ಣ, ಅನೇಕ ಕಣ್ಣುಗಳುಳ್ಳ (ಭೂರ್ಯಕ್ಷ), ಕಣ್ಣುಮಿಟುಕಿಸದೇ ಇರುವ (ಅನಿಮಿಷ), ನಿದ್ರೆಯಿಲ್ಲದಿರುವ (ಅಸ್ವಪ್ನಜ). ದೂರದರ್ಶಿ ದೀರ್ಘಾಧಿ ಇತ್ಯಾದಿ. ಅವರು ರಾಜರು, ಮಹಾಬಲಾಢ್ಯರು, ಬಹುದೊಡ್ಡವರು, ಗಂಭೀರರು, ಅನುಲ್ಲಂಘನೀಯರು, ನಿಯತವ್ರತರು, ನಿರ್ದೋಷರು, ಪಾಪರಹಿತರು, ಶುದ್ಧರು ಮತ್ತು ಪವಿತ್ರರು.

ಆದಿತ್ಯರು ಎಂಬ ಹೆಸರು ತಾಯಿಯ ಹೆಸರಿನಿಂದ ನಿಷ್ಪನ್ನವಾದುದು. ಆದಿತ್ಯಶಬ್ದದ ಮೂರು ನಿಷ್ಪತ್ತಿಗಳಲ್ಲಿ ಇದೂ ಒಂದು (ನಿ. ೨-೧೩ ತೈ. ಆ. ೧-೧೪-೧ನ್ನು ಹೋಲಿಸಿ).

ಆದಿತ್ಯರಲ್ಲಿ ದೊಡ್ಡದೇವತೆಗಳು ಪ್ರತ್ಯೇಕವಾಗಿ ವಿವರಿಸಲ್ಪಟ್ಟಿದ್ದಾರೆ. ವೈಯಕ್ತಿಕ ವೈಶಿಷ್ಟ್ಯಗಳೇನೂ ಇಲ್ಲದ ಇತರ ದೇವತೆಗಳ ವಿಷಯ ಸ್ವಲ್ಪ ತಿಳಿದುಕೊಳ್ಳೋಣ.

ಅರ್ಯಮಾ :— ಋಗ್ವೇದದಲ್ಲಿ ನೂರು ಕಡೆ ಬಂದಿದ್ದರೂ, ಸಂಪೂರ್ಣವಾಗಿ ವ್ಯಕ್ತಿತ್ವವಿಲ್ಲದಿರುವುದರಿಂದ, ನಿಘಂಟುವಿನ ದೇವತೆಗಳ ಪಟ್ಟಿಯಲ್ಲಿ ಹೆಸರು ಬಿಟ್ಟುಹೋಗಿದೆ. ಎರಡು ಮಂತ್ರಗಳಲ್ಲಿ ಹೊರತಾಗಿ, ಬಾಕಿ ಕಡೆಗಳಲ್ಲೆಲ್ಲಾ, ಬೇರೆ ದೇವತೆಗಳ ಜೊತೆಯಲ್ಲಿಯೇ ಪ್ರಸ್ತಾಪ; ಅದೂ ಹೆಚ್ಚಾಗಿ ಮಿತ್ರ ಮತ್ತು ವರುಣರ ಜೊತೆಯಲ್ಲಿಯೇ ; ಹತ್ತು ಹನ್ನೆರಡು ವಾಕ್ಯಗಳಲ್ಲಿ ಈ ಪದವು ' ಜೊತೆಗಾರ ' ' ಕಾಸ್ತಾರ ' ಎಂಬ ರೂಢಾರ್ಥ



CC-0. Jangamwadi Math Collection. Digitized by eGangotri

ಗಳಲ್ಲಿ ಪ್ರಯೋಗಿಸಿದೆ. ಒಂದೊಂದು ಸಲ ಈ ಅರ್ಥವು ಆ ದೇವತೆಗೂ ಅನ್ವಯಿಸಬಹುದು. ಅಗ್ನಿಯನ್ನು ದ್ದೇಶಿಸಿ " ಕನ್ಯೆಯರನ್ನು ಒಲಿಸಿಕೊಳ್ಳುವಾಗ ನೀನೇ ಅರ್ಯಮ " (೫-೩-೨) ಎಂದಿದೆ. ಆರ್ಯಮ್ಯ (ಅರ್ಯಮ ಸಂಬಂಧವಾದುದು) ಎಂಬುದು ಮಿತ್ರ್ಯ (ಸ್ನೇಹಿತನಿಗೆ ಸಂಬಂಧಿಸಿದುದು) ಎಂಬರ್ಥದಲ್ಲಿ (೫-೮೫-೭) ಪ್ರಯುಕ್ತ ವಾಗಿದೆ. ಮಿತ್ರನೆಂಬ ಆದಿತ್ಯ (ಸ್ನೇಹಿತ), ಅರ್ಯಮ, ಈ ಎರಡು ಕಲ್ಪನೆಗಳಿಗೆ ವ್ಯತ್ಯಾಸವೇ ಕಾಣುವುದಿಲ್ಲ.

ಭಗ :— ಒಂದು ಸೂಕ್ತ (೭-೪೧) ಈ ದೇವತೆಯ ಪರವಾಗಿರುವುದು ; ಇತರ ದೇವತೆಗಳೂ ಅದರಲ್ಲಿ ಸ್ತುತರಾಗಿದಾರೆ. ಈ ಹೆಸರು ಸುಮಾರು ೬೦ ಬಾರಿ ಬಂದಿದೆ. ಈ ಪದಕ್ಕೆ ' ದಾತೃ, ಹಂಚಿಕೊಡುವವನು ' ಎಂದರ್ಥವಾಗುತ್ತದೆ ; ಇಪ್ಪತ್ತು ಸಲ ಈ ಅರ್ಥದಲ್ಲಿ, ಸಾಧಾರಣವಾಗಿ ಸವಿತೃವಿಗೆ ವಿಶೇಷಣವಾಗಿ ಉಪಯೋ ಗಿಸಿದೆ. ಸೂಕ್ತಗಳಲ್ಲಿ ಸಂಪತ್ತನ್ನು ಹಂಚುವವನು ಎಂದೇ ಕಲ್ಪನೆ ; ಇಂದ್ರ ಮತ್ತು ಅಗ್ನಿಗಳ ಔದಾರ್ಯ ವನ್ನು ಶ್ಲಾಘಿಸುವಾಗ, ಭಗನಿಗೇ ಹೋಲಿಸುವುದು. ಔದಾರ್ಯ, ಸಂಪತ್ತು, ಭಾಗ್ಯ ಎಂಬರ್ಥಗಳಲ್ಲಿ ಸುಮಾರು ೨೦ ಕಡೆ ಪ್ರಯೋಗ ಮತ್ತು ಈ ಶ್ಲೇಷವನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿರುವಂತೆಯೂ ಕಾಣುತ್ತದೆ. (೭-೪೧-೨)ರಲ್ಲಿ, ಭಗನಿಗೆ ಹಂಚುವವನು ಎಂದು ಹೆಸರಿಟ್ಟು, ಮನುಷ್ಯರು ತಾವೂ ಇದರಲ್ಲಿ ಭಾಗವಹಿಸುವಂತಾಗ ಲೆಂದು ಅಪೇಕ್ಷಿಸುತ್ತಾರೆ ಎಂದಿದೆ. ಇನ್ನೊಂದೆಡೆ (೫-೪೬-೬), ಅವನು ಹಂಚಿಕೊಡುವವನು ; ಭಕ್ತರಿಗೆ ಅಪಾರ ಸಂಪತ್ತುಕೊಡುವವನಾಗಲೆಂದು (ಭಗವಾನ್) ಪ್ರಾರ್ಥನೆ.

ಉಷೋದೇವಿಯು ಭಗನ ಸೋದರಿ (೧-೧೨೩-೫). ಭಗನ ಕಣ್ಣು ರಶ್ಮಿಗಳಿಂದ ಅಲಂಕೃತವಾಗಿದೆ (೩-೫೪-೧೪). ಯಾಸ್ಕರು (ನಿರು. ೧೨-೧೩)ರಲ್ಲಿ ಭಗನು ಬೆಳಗಿನವೇಳೆಗೆ ಒಡೆಯನೆಂದು ಹೇಳಿದಾರೆ. ಭಗನು ಉದಾರವಾಗಿ ದಾನಮಾಡುವವನು ಎಂದಿಷ್ಟೇ ಹೇಳಬೇಕು ; ಅಥವಾ ಬಹಳ ಸ್ಪಷ್ಟವಾಗಿ ಹೇಳುವುದೆಂದರೆ, ಅಪಾರ ಸಂಪತ್ತುಳ್ಳ ದೇವತೆಯೆನ್ನಬಹುದು.

ಅಂಶ :— ಹನ್ನೆರಡಕ್ಕಿಂತಲೂ ಕಡಿಮೆಸಲ ಬಂದಿದೆ. ಭಗ ಎಂಬುವುದಕ್ಕೇ ಅಂಶ ಎಂಬುವುದು ಮತ್ತೊಂದು ಹೆಸರು. ಭಾಗ ಅಥವಾ ಭಾಗಗಳನ್ನು ಹಂಚುವವನು ಎಂದು ಅರ್ಥ. ಮೂರೇ ಸಲ ದೇವತೆಯ ಹೆಸರಾಗಿರುವುದು ; ಈ ಮೂರರಲ್ಲಿಯೂ ಒಂದು ಸಲಮಾತ್ರ ಆ ದೇವತೆಯ ಹೆಸರಲ್ಲದೆ, ಬೇರೆ ವಿಷಯ ತಿಳಿಸಿರು ವುದು. ಇಲ್ಲಿ, ಅಗ್ನಿಯೇ ಅಂಶನೆಂದೂ, ಉತ್ಸವದಲ್ಲಿ ಉದಾರಿಯಾದ ದೇವತೆಯೆಂದೂ (೨-೧-೪) ವರ್ಣನೆಯಿದೆ.

ದಕ್ಷ :— ದೇವತೆಯ ಹೆಸರಾಗಿ ಸುಮಾರು ಆರುಸಲ ಸಿಗುತ್ತದೆ. ಈ ಪದವು ಹೆಚ್ಚಾಗಿ ಅಗ್ನಿ ಮತ್ತು ಸೋಮರಿಗೆ (೩-೧೪-೭ ; ೯-೬೧-೧೮ ; ಇತ್ಯಾದಿ) " ಚುರುಕು, ಬಲಾಢ್ಯ ಚತುರ, ಬುದ್ಧಿವಂತ " ಇತ್ಯಾದಿ ಅರ್ಥಗಳಲ್ಲಿ ವಿಶೇಷಣವಾಗಿ ಪ್ರಯೋಗಿಸಿದೆ. ವ್ಯಕ್ತಿತ್ವಾರೋಪಣೆಯಿರುವೆಡೆಯಲ್ಲೆಲ್ಲಾ, ಚತುರ ಅಥವಾ ಕುಶಲನಾದ ದೇವತೆಯೆಂದಭಿಪ್ರಾಯ. ದಕ್ಷ ಎಂಬ ಪದವು ಆರು ಜನ ಆದಿತ್ಯರ ಹೆಸರು ಬರುವ (೨-೨೭-೧) ನೆಯ ಮಂತ್ರದಲ್ಲಿ ಹೊರತು, ಒಂದು ಮತ್ತು ಹತ್ತನೆಯ ಮಂಡಲಗಳಲ್ಲಿಯೇ ಬರುವುದು. (೧-೮೯-೩)ರಲ್ಲಿ ಇತರ ಆದಿತ್ಯರೊಡನೆಯೂ, (೧೦-೬೪-೫)ರಲ್ಲಿ, ಮಿತ್ರ, ವರುಣ, ಅರ್ಯಮರೊಡನೆಯೂ ನಿರ್ದೇಶಿಸಿದೆ. ಈ ಎರ ಡನೆಯ ಸಂದರ್ಭದಲ್ಲಿ ಅದಿತಿಯು ಅವನ ಜನಿತ್ರಿಯೆಂದೂ ಇದೆ. ಸೃಷ್ಟಿ ವಿಷಯವಾದ ಸೂಕ್ತವೊಂದರಲ್ಲಿ (೧೦-೭೨-೪ ಮತ್ತು ೫). ದಕ್ಷನು ಅದಿತಿಯಿಂದ ಉತ್ಪನ್ನನಾದನೆಂದೂ ಹೇಳಿ, ಅಲ್ಲೇ ಮುಂದಿನ ಮಂತ್ರಗಳಲ್ಲಿ, ಅದಿತಿಯು ಅವನಿಂದ ಜನಿಸಿದಳೆಂದೂ, ಅವನ ಮಗಳೆಂದೂ, ಅನಂತರ ದೇವತೆಗಳು ಜನಿಸಿದರೆಂದು ಹೇಳಿದೆ. ದಕ್ಷನ ಜನ್ಮ ಸ್ಥಾನವಾದ ಅದಿತಿಯ ಗರ್ಭದಲ್ಲಿ ಸೃಷ್ಟ ಮತ್ತು ಅಸೃಷ್ಟ ಪದಾರ್ಥಗಳೆಲ್ಲವೂ ಇದ್ದವು (೧೦-೫-೭). ಈ ಕಡೆಯು



CC-0. Jangamwadi Math Collection. Digitized by eGangotri

ಎರಡು ವಾಕ್ಯಗಳಿಂದ ದಕ್ಷ ಅದಿತಿಯರು ಜಗನ್ಮಾತಾಪಿತೃಗಳೆಂದು ತಿಳಿದುಬರುತ್ತದೆ. ಮಕ್ಕಳು ತಂದೆ ತಾಯಿಯರ ಉತ್ಪತ್ತಿಗೆ ಕಾರಣರಾದರೆಂಬ ವಿರೋಧಾಭಾಸವು ಋಗ್ವೇದದಲ್ಲಿ ಹೊಸದಲ್ಲ. ಆದಿತ್ಯರಿಗೆ 'ದಕ್ಷಪಿತರಃ' ಎಂದರೆ ದಕ್ಷನೇ (ಕೌಶಲ್ಯವೇ) ಪಿತೃವಾಗಿ ಉಳ್ಳವರು (೬-೫೦-೨) ಎಂದು ಹೆಸರು. ಮಿತ್ರಾವರುಣರಿಗೂ ಇದೇ ಹೆಸರಿವೆ (೭-೬೬-೨; ದಕ್ಷಪಿತರಾ) ಮತ್ತು ಅವರು 'ಸುದಕ್ಷ'ರೂ ಹೌದು. ಇನ್ನೊಂದು ಕಡೆ (೮-೨೫-೫) ಇದೇ ಅಭಿಪ್ರಾಯ ಇನ್ನೂ ಸ್ಪಷ್ಟವಾಗಿದೆ (ಸೂನೂ ದಕ್ಷಸ್ಯ). ಈ ಸಂದರ್ಭಗಳಲ್ಲಿ 'ದಕ್ಷ' ಎಂಬ ಪದವು ಯಾವ ವ್ಯಕ್ತಿಗೂ ಅನ್ವಯಿಸುವುದಿಲ್ಲ. ಸಾಧಾರಣ ಯಾಗಕರ್ತೃಗಳಿಗೂ 'ದಕ್ಷಪಿತರಃ' ಎಂದು ಹೆಸರಿರುವುದು ಈ ಅಭಿಪ್ರಾಯವನ್ನು ಪುಷ್ಟೀಕರಿಸುತ್ತದೆ. ಇಂತಹ ಪದವಿನ್ಯಾಸಗಳೇ ದಕ್ಷನಿಗೆ ವ್ಯಕ್ತಿತ್ವಾರೋಪಣೆ, ಅವನಿಗೆ ಅದಿತಿಯೊಡನೆ ಸಂಬಂಧ ಇತ್ಯಾದಿಗಳಿಗೆ ಅವಕಾಶವಿತ್ತಂತೆ ಇದೆ. ತೈತ್ತಿರೀಯ ಸಂಹಿತೆಯಲ್ಲಿ ಸಾಮಾನ್ಯವಾಗಿ ದೇವತೆಗಳಿಗೆಲ್ಲಾ ದಕ್ಷಪಿತರಃ ಎಂಬ ಸಂಜ್ಞೆ ಇದೆ. ದಕ್ಷ ಮತ್ತು ಸೃಷ್ಟಿಕರ್ತೃ ಪ್ರಜಾಪತಿ ಎಂಬಿಬ್ಬರೂ ಒಬ್ಬನೇ ದೇವತೆ (ಶ. ಬ್ರಾ. ೨-೪-೪-೨).

## ಉಷಾಃ

ಉಷೋದೇವತೆಯನ್ನು ಹೊಗಳುವ ಸೂಕ್ತಗಳು ಇಪ್ಪತ್ತು ಇವೆ ಮತ್ತು 'ಉಷಸ್' ಎಂಬ ಪದವು ೩೦೦ ಕ್ಕಿಂತ ಹೆಚ್ಚುಸಲ ಬರುತ್ತದೆ. ಉಷಸ್ ಎಂಬ ಪದವು ದೇವತೆ ಮತ್ತು ಉಷಃಕಾಲಗಳೆರಡನ್ನೂ ಸೂಚಿಸುತ್ತದೆ ಮತ್ತು ದೇವತೆಯ ವಿಷಯ ಚರ್ಚಿಸುವಾಗಲೂ, ಅರುಣೋದಯವು ಹಿನ್ನೆಲೆಯಲ್ಲಿ ಇದ್ದೇ ಇರುತ್ತದೆ. ಉಷೋದೇವಿಯಷ್ಟು ಮನೋಹರರೂಪ ವೇದದ ಯಾವ ದೇವತೆಗೂ ಇಲ್ಲ. ಮತಸಂಬಂಧವಾದ ಪದ್ಯಕಾವ್ಯಗಳಲ್ಲಿ ಇಷ್ಟು ರಮ್ಯವಾದ ವರ್ಣನೆ ಬೇರೆ ಎಲ್ಲಿಯೂ ಇಲ್ಲ. ಯಾಗ ಅಥವಾ ತತ್ಸಂಬಂಧವಾದ ವಿವರಣೆಗಳು ಆಕೆಯ ರೂಪಾತಿಶಯವನ್ನು ಹಾಳುಮಾಡಿಲ್ಲ. ನರ್ತಕಿಯಂತೆ ಅಂದವಾದ ಉಡುಪನ್ನು ಧರಿಸಿ, ಆಕೆಯು ತನ್ನ ವಕ್ಷಸ್ಸನ್ನು ಪ್ರದರ್ಶಿಸುತ್ತಾಳೆ (೧-೯೨-೪; ೬-೬೪-೨ನ್ನು ಹೋಲಿಸಿ). ತಾಯಿಯಿಂದ ಅಲಂಕೃತಳಾದ ಕನ್ಯೆಯಂತೆ ತನ್ನ ರೂಪವನ್ನು ತೋರಿಸುತ್ತಾಳೆ (೧-೧೨೩-೧೧). ತೇಜಸ್ಸಿನಿಂದ ಯುಕ್ತಳಾಗಿ, ಪೂರ್ವದಿಕ್ಕಿನಲ್ಲಿ ಕಾಣಿಸಿಕೊಂಡು, ತನ್ನ ಸೊಬಗನ್ನು ತೋರ್ಪಡಿಸುತ್ತಾಳೆ (೧-೧೨೪--೩ ಮತ್ತು ೪). ಅತುಲವಾದ ಸೌಂದರ್ಯದಿಂದ ಬೆಳಗುತ್ತಾ, ಚಿಕ್ಕವರು, ದೊಡ್ಡವರೆನ್ನದೆ ಎಲ್ಲರಿಗೂ ಬೆಳಕನ್ನು ಬೀರುತ್ತಾಳೆ (೧-೧೨೪-೬). ಸ್ನಾನ ಮುಗಿಸಿಕೊಂಡು ಶುದ್ಧವಾಗಿ ಬರುವಂತೆ ಉದಿಸಿ ಬಂದು ಆಕೆಯು, ಕತ್ತಲನ್ನು ಓಡಿಸಿ, ಬೆಳಕನ್ನು ಹರಡುತ್ತಾಳೆ (೫-೮೦-೫ ಮತ್ತು ೬). ಪುರಾತನಳಾದರೂ, ಪುನಃ ಪುನಃ ಜನಿಸುವುದರಿಂದ, ಅವಳು ತರುಣಿ; ಒಂದೇ ಸಮನಾಗಿ ಪ್ರಕಾಶಿಸುತ್ತಾ ಅವಳು ಮರ್ತ್ಯರ ಆಯುಸ್ಸನ್ನು ಕ್ಷೀಣಮಾಡುತ್ತಾಳೆ (೧-೯೨-೧೦). ಪೂರ್ವದಲ್ಲಿ ಪ್ರಕಾಶಿಸುತ್ತಿದ್ದಂತೆ ಆಕೆಯು ಈಗಲೂ, ಮುಂದೆಯೂ ಪ್ರಕಾಶಿಸುತ್ತಾಳೆ; ಅವಳು ಅಮರಳು, ವೃದ್ಧಳಾಗುವುದೇ ಇಲ್ಲ (೧-೧೧೩-೧೩ ಮತ್ತು ೧೫). ಆ ತರುಣಿಯು ಪುನಃ ಬಂದು, ಪ್ರಪಂಚದಲ್ಲಿ ಎಲ್ಲರಿಗೂ ಮುಂಚೆ ಎಚ್ಚರವಾಗುತ್ತಾಳೆ (೧-೧೨೩-೨). ಕಳೆದುಹೋದ ಉಷಸ್ಸುಗಳಿಗೆ ಕಡೆಯವಳಾಗಿಯೂ, ಮುಂದೆ ಬರುವವುಗಳಿಗೆ ಮೊದಲನೆಯವಳಾಗಿಯೂ, ಮರ್ತ್ಯರ ಆಯುಸ್ಸನ್ನು ಯಾವಾಗಲೂ ಕಡಿಮೆ ಮಾಡುತ್ತಾ, ಪ್ರಕಾಶಿಸುತ್ತಾಳೆ (೧-೧೨೪-೨). ಯಾವಾಗಲೂ ಹೊಸಬಳಾಗಿ, ಚಕ್ರದಂತೆ ತಿರುಗುತ್ತಿರುತ್ತಾಳೆ (೩-೬೧-೩). ಪಾದಚಾರಿಗಳಾದ ಪ್ರಾಣಿಗಳನ್ನು ಎಚ್ಚರಿಸುತ್ತಾಳೆ ಮತ್ತು ಪಕ್ಷಿಗಳನ್ನು ಹಾರುವಂತೆ ಮಾಡುತ್ತಾಳೆ; ಪ್ರತಿಯೊಬ್ಬರಿಗೂ ಅವಳೇ ಉಸಿರು ಅವಳೇ ಪ್ರಾಣ (೧-೪೮-೫ ಮತ್ತು ೧೦; ೧-೪೯-೩). ಪ್ರತಿಯೊಂದು ಪ್ರಾಣಿಯನ್ನೂ ಸಂಚರಿಸುವುದಕ್ಕೋಸ್ಕರ, ಏಳಿಸುತ್ತಾಳೆ (೧-೯೨-೯; ೭-೭೭-೧). ಉಷಸ್ಸುಗಳು ದ್ವಿಪಾದ ಮತ್ತು ಚತುಷ್ಪಾದ ಜಂತುಗಳನ್ನು



CC-0. Jangamwadi Math Collection. Digitized by eGangotri

ನಿದ್ರೆಯಿಂದೆಬ್ಬಿಸಿ, ಕಾರ್ಯೋನ್ಮುಖರನ್ನಾಗಿ ಮಾಡುತ್ತವೆ (೪-೫೧-೫). ಅರುಣೋದಯವಾದರೆ, ಪಕ್ಷಿಗಳು ಗೂಡಿನಿಂದ ಹಾರುತ್ತವೆ; ಮನುಷ್ಯರು ಆಹಾರಾನ್ವೇಷಿಗಳಾಗುತ್ತಾರೆ (೧-೧೨೪-೧೨). ಐದು ಪಂಗಡದವರನ್ನೂ ಎಬ್ಬಿಸಿ, ಮನುಷ್ಯರು ಅನುಸರಿಸಬೇಕಾದ ಮಾರ್ಗಗಳನ್ನು ತೋರಿಸುತ್ತಾಳೆ. (೭-೭೯-೧) ಎಲ್ಲಾ ಪ್ರಾಣಿಗಳನ್ನೂ ವ್ಯಕ್ತಗೊಳಿಸುತ್ತಾಳೆ. ಅವರಿಗೆಲ್ಲಾ ಹೊಸ ಚೇತನವನ್ನು ಕೊಡುತ್ತಾಳೆ (೭-೮೦-೧ ಮತ್ತು ೨). ದುಸ್ಸ್ವಪ್ನಗಳನ್ನು ತ್ರಿತ ಆಪ್ತ್ಯನ ಹತ್ತಿರಕ್ಕೆ ಓಡಿಸುತ್ತಾಳೆ (೮-೪೭-೧೪ ಮತ್ತು ೧೬) ರಾತ್ರಿಯ ಕರಿಯ ಮುಸಕನ್ನು ತೆಗೆಯುತ್ತಾಳೆ (೧-೧೧೩-೧೪). ಕತ್ತಲನ್ನು ಪರಿಹರಿಸುತ್ತಾಳೆ (೬-೬೪-೩; ೬-೬೫-೨) ದುರ್ದೇವತೆಗಳನ್ನು ಮತ್ತು ಅಸಿಷ್ಟವಾದ ಕತ್ತಲನ್ನು ನಿವಾರಿಸುತ್ತಾಳೆ (೭-೭೫-೧). ತಮಸ್ಸಿನಿಂದ ನಿಗೂಢವಾದ ನಿಧಿಗಳನ್ನು ಹೊರಗೆಡಹಿ, ಅದನ್ನು ಧಾರಾಳವಾಗಿ ಹಂಚುತ್ತಾಳೆ (೧-೧೨೩-೪ ಮತ್ತು ೬). ಅವಳು ಉದಿಸಿದಾಗ, ದಿಗಂತಗಳನ್ನು ಪ್ರಕಾಶಪಡಿಸುತ್ತಾಳೆ (೧-೯೨-೧೧). ಸ್ವರ್ಗದ (ಆಕಾಶದ) ಬಾಗಿಲುಗಳನ್ನು ತೆರೆಯುತ್ತಾಳೆ (೧-೪೮-೧೫; ೧-೧೧೩-೪). ಗೋವುಗಳು ಗೋಶಾಲೆಯ ಬಾಗಿಲನ್ನು ತೆಗೆದುಕೊಳ್ಳುವಂತೆ, ಉಷೋದೇವಿಯು ತಾನು ಬಂದೊಡನೆಯೇ, ಕತ್ತಲಿನ ಬಾಗಿಲನ್ನು ತೆಗೆಯುತ್ತಾಳೆ (೧-೯೨.೪). ಗೋವುಗಳ ಹಿಂಡುಗಳಂತೆ ಆಕೆಯ. ಕಿರಣಗಳು ಕಾಣಿಸುತ್ತವೆ (೪-೫೨-೨ರಿಂದ೪). ದನಗಳನ್ನು ಚದುರಿಸುತ್ತಾ ಇರುವಂತೆ ಅವಳು ಬಹಳದೂರ ಕಾಣಿಸುತ್ತಾಳೆ (೧-೯೨-೧೨). ರಕ್ತವರ್ಣದ ಕಿರಣಗಳು ಹೊರಡುತ್ತವೆ; ಕಪಿಲಗೋವುಗಳು ತಾವೇ ಕೆಲಸಕ್ಕೆ ತೊಡಗುತ್ತವೆ; ಕೆಂಬಣ್ಣದ ಉಷಸ್ಸುಗಳು ಮೊದಲಿನಂತೆ, ತಮ್ಮ ಬೆಳಕಿನ ಜಾಲವನ್ನು ಬೀಸುತ್ತವೆ (೧-೯೨-೨). ಆದುದರಿಂದ ಉಷೋದೇವಿಗೆ ದನಕರುಗಳ ಮಾತೆ ಎಂದು ಹೆಸರು ಬಂದಿದೆ (೪-೫೨-೨ ಮತ್ತು ೩; ೭-೭೭-೨).

ದೇವತೆಗಳ ಮತ್ತು ಪ್ರಕೃತಿಯ ವ್ಯವಸ್ಥೆಯನ್ನು ಮೀರದೆ, ಉಷಸ್ಸು ದಿನದಿನವೂ ಗೊತ್ತಾದ ಸ್ಥಳದಲ್ಲಿಯೇ ಕಾಣಿಸಿಕೊಳ್ಳುತ್ತಾಳೆ (೧-೯೨-೧೨; ೧-೧೨೩-೯; ೧-೧೨೪-೨; ೭-೭೬-೫); ವ್ಯವಸ್ಥಿತವಾದ ಮಾರ್ಗದಲ್ಲಿಯೇ ಆಕೆಯು ಸಂಚರಿಸುತ್ತಾಳೆ; ತಾನು ಅನುಸರಿಸಬೇಕಾದ ಮಾರ್ಗವು ತಿಳಿದಿರುವುದರಿಂದ, ಎಂದೂ ದಾರಿತಪ್ಪುವುದಿಲ್ಲ (೫-೮೦-೪). ಯಾಗ ಕರ್ತೃಗಳನ್ನೆಲ್ಲಾ ನಿದ್ದೆಯಿಂದ ಎಬ್ಬಿಸಿ, ಹೋಮಾಗ್ನಿಯನ್ನು ಹೊತ್ತಿಸುವಂತೆ ಮಾಡುತ್ತಾಳೆ; ಈರೀತಿ ದೇವತೆಗಳಿಗೆಲ್ಲಾ ಉಪಕಾರಮಾಡುತ್ತಾಳೆ (೧-೧೧೩-೯). ಶ್ರದ್ಧಾವಂತನೂ, ಉದಾರಿಯೂ ಆದ ಆರಾಧಕನನ್ನು ಮಾತ್ರವೇ ಎಚ್ಚರಗೊಳಿಸುವಂತೆಯೂ, ಅಶ್ರದ್ಧಾಳುವೂ, ದೀನನೂ ಆದವನನ್ನು ಹಾಗೆಯೇ ಬಿಡುವಂತೆಯೂ ಪ್ರಾರ್ಥಿತಳಾಗಿದಾಳೆ (೧-೧೨೪-೧೦; ೪-೫೧-೩) ಒಂದೊಂದು ಸಲ, ಉಷಸ್ಸು ಪೂಜೆ ಮಾಡುವವರನ್ನು ಎಚ್ಚರಗೊಳಿಸುವುದು ಬಿಟ್ಟು, ಅವರು ಆಕೆಯನ್ನು ಜಾಗೃತಿಗೊಳಿಸುತ್ತಾರೆ ಎಂದಿದೆ (೪-೫೨-೪; ಇತ್ಯಾದಿ) ಮತ್ತು ಈ ಕೆಲಸವನ್ನು ಮೊದಲು ಮಾಡಿದವರು ನಾವೇ ಎಂದು ವಸಿಷ್ಠರು ವಾದಿಸುತ್ತಾರೆ (೭-೮೦-೧). ಒಂದು ಕಡೆ, ಶತ್ರು ಅಥವಾ ಕಳ್ಳತನ ಮಾಡಿದವಳು ಎಂದೂ, ಸೂರ್ಯನು ಸುಡದಿರಬೇಕಾದರೆ, ತ್ವರೆ ಮಾಡಬೇಕು ಎಂದೂ (೫-೭೯-೯) ಅವಳಿಗೆ ಎಚ್ಚರಕೊಟ್ಟಿದೆ. ಸೋಮಪಾನಕ್ಕಾಗಿ ದೇವತೆಗಳನ್ನು ಕರೆತರಬೇಕೆಂದು (೧-೪೫-೧೨) ಪ್ರಾರ್ಥಿಸಲ್ಪಟ್ಟಿದಾಳೆ. ಅದರಿಂದಲೇ ಇರಬಹುದು ದೇವತೆಗಳೆಲ್ಲರೂ ಉಷಸ್ಸಿನೊಡನೆ ಏಳುತ್ತಾರೆ ಎಂದು ಹೇಳಿರುವುದು (೧-೧೪-೯ ಇತ್ಯಾದಿ).

ಉಷೋದೇವಿಯು ಹೊಳೆಯುವ ರಥದಲ್ಲಿ ಸಂಚರಿಸುತ್ತಾಳೆ (೭-೭೮-೧); ರಥವು ಥಳಥಳಿಸುತ್ತಿದೆ (೧-೪೯-೨); ಎಲ್ಲರಿಗೂ, ಎಲ್ಲ ವಸ್ತು (೧-೨೩.೭); ಶುಭ್ರವಾಗಿದೆ (೩-೬೧-೨); ಚೆನ್ನಾಗಿ ಅಲಂಕೃತವಾಗಿದೆ (೧-೪೮-೧೦ ಇತ್ಯಾದಿ); ಮತ್ತು ಸ್ವತಂತ್ರಗಳಿಗೂ ಅಲಂಕಾರಪ್ರಾಯವಾಗಿದೆ (೬-೬೫-೬); ಸುದೃಢವಾಗಿದೆ

ವಾಗಿ ಹೂಡಿಕೊಳ್ಳುತ್ತದೆ (೭-೭೮-೪). ಆಕೆಯು ನೂರು ರಥಗಳ ಮೇಲೆ ಬರುತ್ತಾಳೆ (೧-೪೮-೭). ರಥಕ್ಕೆ ಕೆಂಬಣ್ಣದ (೭-೭೫-೬), ಸುಲಭವಾಗಿ ನಡೆಸಬಹುದಾದ (೩-೬೧-೨), ತಪ್ಪದೇ ಹೂಡಲ್ಪಡುವ (೪-೫೧-೫) ಕುದುರೆಗಳನ್ನು ಕಟ್ಟಿದೆ. ಕುದುರೆಗಳಿಂದ ಯುಕ್ತಳಾಗಿ ದೇದೀಪ್ಯಮಾನಳಾಗಿದಾಳೆ (೫-೭೯-೧, ೧೦). ಕೆಂಪು ಗೋವುಗಳಿಂದಲೂ ಅವಳ ರಥವು ಎಳೆಯಲ್ಪಡುತ್ತದೆ (೧-೯೨-೨; ೧-೧೨೪-೧೧; ೫-೮೦-೩). ಅಶ್ವಗಳು ಮತ್ತು ಗೋವುಗಳೆಂದರೆ, ಪ್ರಾತಃಕಾಲದ ಕಿರಣಗಳಿರಬೇಕು; ಆದರೆ ಗೋಶಬ್ದಕ್ಕೆ ಸಾಧಾರಣವಾಗಿ ಮೇಘವೆಂದರ್ಥ. ಒಂದು ದಿನದಲ್ಲಿ, ಉಷೋದೇವಿಯು ಮೂವತ್ತು ಯೋಜನ ದೂರ ಹೋಗುತ್ತಾಳೆ (೧-೧೨೩-೮).

ಸೂರ್ಯನಿಗೂ ಉಷಸ್ಸಿಗೂ ನಿಕಟಬಾಂದವ್ಯವಿರುವುದು ಸ್ವಾಭಾವಿಕವೇ. ಸೂರ್ಯನ ಸಂಚಾರಕ್ಕಾಗಿ ಮಾರ್ಗವನ್ನು ತೆರೆದಿದಾಳೆ (೧-೧೧೩-೧೬). ದೇವತೆಗಳ ಕಣ್ಣನ್ನು (ಸೂರ್ಯನನ್ನು) ತರುತ್ತಾಳೆ ಮತ್ತು ಉತ್ತಮವಾದ ಬಿಳಿಯ ಕುದುರೆಗೆ ದಾರಿ ತೋರುತ್ತಾಳೆ (೭-೭೭-೩). ಸೂರ್ಯನ (೧-೧೧೩-೯) ತನ್ನ ಪ್ರಿಯನ ತೇಜಸ್ಸಿನಿಂದ (೧-೯೨-೧೧) ಬೆಳಗುತ್ತಾಳೆ. ಸವಿತೃವು ಉಷಸ್ಸಿನ ಮಾರ್ಗದಲ್ಲಿಯೇ ಪ್ರಕಾಶಿಸುತ್ತಾನೆ (೫-೮೧-೨). ಸೂರ್ಯನು ಉಷೋದೇವಿಯನ್ನು, ಯುವಕನು ಯುವತಿಯನ್ನು ಹಿಂಬಾಲಿಸುವಂತೆ, ಹಿಂಬಾಲಿಸುತ್ತಾನೆ (೧-೧೧೫-೨). ಅವಳನ್ನಪೇಕ್ಷಿಸುವ ದೇವತೆಯನ್ನು ಅವಳು ಸಂಧಿಸುತ್ತಾಳೆ (೧-೧೨೩-೧೦). ಅವಳು ಸೂರ್ಯನ ಪತ್ನಿ (೭-೭೫-೫); ಉಷೋದೇವಿಯರು ಸೂರ್ಯನ ಪತ್ನಿಯರು (೪-೫-೧೩). ಆಕಾಶದಲ್ಲಿ ಅವನಿಂದ ಅನುಸೃತಳಾದ ಆಕೆಯು ಆತನ ಪತ್ನಿ ಅಥವಾ ಪ್ರಿಯೆಯೆಂದು ಭಾವನೆ. ಕಾಲದೃಷ್ಟಿಯಿಂದ ಸೂರ್ಯನಿಗಿಂತ ಮುಂಚೆ ಬರುವ ಅವಳು ಅವನ ತಾಯಿಯೆಂದೂ ಒಂದೊಂದು ವೇಳೆ ಗಣನೆಯಿದೆ. ಅವಳು ಸೂರ್ಯ, ಯಜ್ಞ ಮತ್ತು ಅಗ್ನಿಗಳನ್ನು ಉತ್ಪತ್ತಿಮಾಡಿದಳು (೭-೭೮-೩). ಅವಳು ಹುಟ್ಟಿರುವುದೇ ಸವಿತೃವಿನ ಜನನಕ್ಕಾಗಿ ಮತ್ತು ತೇಜಃಪುಂಜವಾದ ಶಿಶುವಿನೊಡನೆ ಬಂದು ಸೇರುತ್ತಾಳೆ (೧-೧೧೩-೧ ಮತ್ತು ೨). (ಅದಿತ್ಯನಾದ) ಭಗನ ಸೋದರಿ ಆಕೆ (೧-೧೨೩-೫) ಮತ್ತು ವರುಣನ ಬಂಧು (೧-೧೨೩-೫). ಅವಳು ರಾತ್ರಿಯ ಸೋದರಿ ೧-೧೯೩-೨ ಮತ್ತು ೩; ೧೦-೧೨೭-೩) ಅಥವಾ ಆಕೆಯು ಅಕ್ಕ (೧-೧೨೪-೮); ಮತ್ತು ರಾತ್ರಿ ಉಷಸ್ಸುಗಳ ಹೆಸರುಗಳು 'ನಕ್ತೋಷಾಸಾ', ಉಷಾಸಾನಕ್ತಾ' ಎಂದು ದ್ವಿವಚನಾಂತವಾಗಿ ಪ್ರಯೋಗಿಸಲ್ಪಟ್ಟಿವೆ. ಉಷಸ್ಸು ಆಕಾಶದಲ್ಲಿ ಜನಿಸುತ್ತದೆ (೭-೭೫-೧); ಆದುದರಿಂದಲೇ ಆಕೆಯು ಯಾವಾಗಲೂ ಆಕಾಶದ ಮಗಳು (೧-೩೦-೨೨ ಇತ್ಯಾದಿ) ಎಂದೂ, ಒಂದೇ ಒಂದುಸಲ ಆಕಾಶದ ಪ್ರಿಯೆ ಎಂದೂ (೧ ೪೬-೧) ಕರೆಯಲ್ಪಟ್ಟಿದಾಳೆ.

ಉಷಃಕಾಲದಲ್ಲೇ ಉದ್ದೀಪ್ತವಾಗುವ ಹೋಮಾಗ್ನಿಗೂ ಉಷಸ್ಸಿಗೂ ಸಂಬಂಧವಿದ್ದೇ ಇದೆ. ಇಂತಹ ಸಂದರ್ಭಗಳಲ್ಲಿ ಸಾಧಾರಣವಾಗಿ ಸೂರ್ಯನೂ ಸೂಚಿತನಾಗುತ್ತಾನೆ. ಅಗ್ನಿಯನ್ನು ಹೊತ್ತಿಸುವ ವೇಳೆಗೇ ಸೂರ್ಯನೂ ಕಾಣಿಸುತ್ತಾನೆ (೧-೧೨೪-೧ ಮತ್ತು ೧೧; ಇತ್ಯಾದಿ). ಅಗ್ನಿಯು ಉಷಃಕಾಲಕ್ಕೆ ಪೂರ್ವದಲ್ಲಿ ಅಥವಾ ಉಷಸ್ಸಿನೊಡನೆ ಕಾಣಿಸಿಕೊಳ್ಳುತ್ತಾನೆ. ಉಷೋದೇವಿಯು ಅಗ್ನಿಯನ್ನು ಹೊತ್ತಿಸುವಂತೆ ಮಾಡುತ್ತಾಳೆ (೧ ೧೧೩-೯). ಆದ್ದರಿಂದ, ಒಂದೊಂದು ವೇಳೆ, ಸೂರ್ಯನಂತೆ, ಅಗ್ನಿಯೂ ಆಕೆಯ ಪ್ರಿಯನು (೧-೬೯-೧; ೭-೧೦-೧; ೧೦-೩-೩ನ್ನು ಹೋಲಿಸಿ). ಅಗ್ನಿಯು ಹೊಳೆಯುತ್ತಿರುವ ಉಷಸ್ಸನ್ನು ಎದುರ್ಗೊಳ್ಳಲು ಹೋಗಿ ಅವಳಿಂದ ಉತ್ತಮವಾದ ಸಂಪದಾದಿಗಳನ್ನು ಅಪೇಕ್ಷಿಸುತ್ತಾನೆ (೩-೬೧-೬). ಪ್ರಾತಃಕಾಲದ ದೇವತೆಗಳಾದ, ಅಶ್ವಿನಿಗಳೊಡನೆಯೂ ಆಕೆಗೆ ಬಾಂಧವ್ಯವಿದೆ (೧-೪೪-೨ ಇತ್ಯಾದಿ). ಅವರು ಅವಳ ಜೊತೆಯಲ್ಲಿ ಬರುತ್ತಾರೆ (೧-೧೮೩-೨) ಮತ್ತು ಅವಳು ಅವರ ಸ್ನೇಹಿತಳು (೪-೫೨-೨ ಮತ್ತು ೩). ಅವರನ್ನೆಚ್ಚರಗೊಳಿಸೆಂದು ಅವಳು ಪ್ರಾರ್ಥಿತಳಾಗಿದಾಳೆ (೮-೯-೧೭), ಮತ್ತು ಅವಳ ಸ್ತುತಿಯು ಅವರನ್ನು ಎಬ್ಬಿಸಿದೆ



CC-0. Jangamwadi Math Collection. Digitized by eGangotri

(೩-೫೮-೧). ಅಶ್ವಿನೀದೇವತೆಗಳ ರಥವು ಸಿದ್ಧವಾದರೆ, ಉಷೋದೇವಿಯೂ ಜನಿಸುತ್ತಾಳೆ (೧೦-೩೯-೧೨). ಒಂದು ಸಲ ಇಂದ್ರನೊಡನೆಯೂ ಉಷಸ್ಸು ಸಂಬಂಧ ಹೊಂದಿದ್ದಾಳೆ ಎಂದು ಇದೆ. ಚಂದ್ರನು ಹೊಸ ಹೊಸದಾಗಿ ಹುಟ್ಟುವುದರಿಂದ, ಹಗಲು ಬರುವುದನ್ನು ಸೂಚಿಸುತ್ತಾ, ಉಷಃಕಾಲಕ್ಕೆ ಮುಂಚೆ, ಪ್ರಕಾಶಿಸುತ್ತಾನೆ (೧೦-೮೫-೧೦).

ಅನೇಕ ದೇವತೆಗಳು ಉಷಸ್ಸಿಗೆ ಕಾರಣರು ಅಥವಾ ಉಷಸ್ಸನ್ನು ಕಂಡುಹಿಡಿದರು. ಬೆಳಕನ್ನು ಜಯಿಸಿರುವವನೆಂದು ಪ್ರಖ್ಯಾತಿಪಡೆದಿರುವ ಇಂದ್ರನು ಉಷಸ್ಸನ್ನು ಉತ್ಪತ್ತಿಮಾಡಿದನು ಅಥವಾ ಉಷಸ್ಸಿಗೆ ಬೆಳಕು ಕೊಟ್ಟನು (೨-೧೨-೭ ಇತ್ಯಾದಿ). ಕೆಲವು ಸಲ ಅವನು ಅವಳಿಗೆ ದ್ವೇಷಿಯಾಗಿದಾನೆ; ಅವನು ಅವಳ ರಥವನ್ನು ಚೂರು ಚೂರು ಮಾಡಿದನು. ಜನಿಸಿದಾಗಲೇ, ಉಷಸ್ಸುಗಳು ಸೋಮನಿಂದ ಕಾಂತಿಯುಕ್ತವಾಗಿ ಮಾಡಲ್ಪಟ್ಟವು (೬-೩೯-೩). ಅಗ್ನಿಯಂತೆ (೭-೬-೫), ಸೋಮನೂ ಉಷಸ್ಸುಗಳನ್ನು ಉತ್ತಮನಾದವನ ಪತ್ನಿಯರನ್ನಾಗಿ ಮಾಡಿದನು (೬-೪೪-೨೩). ಕತ್ತಲನ್ನು ಬೆಳಕಿನಿಂದ ಹೋಗಲಾಡಿಸುತ್ತ, ಬೃಹಸ್ಪತಿಯು ಉಷಸ್ಸು, ಆಕಾಶ ಮತ್ತು ಅಗ್ನಿಗಳನ್ನು ಕಂಡುಹಿಡಿದನು (೧೦-೬೮-೯). ದೇವತೆಗಳ ಸಹವಾಸಿಗಳಾದ ಪಿತೃಗಳು, ತಮ್ಮ ಸ್ತುತಿಗಳಿಂದ, ಗೂಢವಾದ ಬೆಳಕನ್ನು ಕಂಡು, ಅದರಿಂದ ಉಷಸ್ಸನ್ನು ಉತ್ಪತ್ತಿಮಾಡಿದರು (೭-೭೬-೪).

ಪೂಜೆ ಮಾಡುವವನಿಗೆ ಸಂತಾನ ಮತ್ತು ಸಂಪತ್ತುಗಳನ್ನು ಅನುಗ್ರಹಿಸಿ, ದೀರ್ಘಾಯುಸ್ಸನ್ನು ಕೊಟ್ಟು ರಕ್ಷಿಸಬೇಕೆಂದು ಅನೇಕ ಸಲ ಉಷಸ್ಸನ್ನು ಬೇಡಿದಾರೆ (೧-೩೦-೨೨; ೧-೪೮-೧; ಇತ್ಯಾದಿ). ಸ್ತುತಿಸುವವನಿಗೆ ಉಪಕಾರ ಮಾಡಿದವರಿಗೆಲ್ಲಾ ಕೀರ್ತಿಯನ್ನು ದೊರಕಿಸಬೇಕೆಂದೂ ಪ್ರಾರ್ಥನೆಯಿದೆ (೫-೭೯-೬; ೧-೪೮-೪ನ್ನು ಹೋಲಿಸಿ). ಅವಳ ಭಕ್ತರೆಲ್ಲರೂ ಅವಳಿಂದ ಐಶ್ವರ್ಯವನ್ನು ಅಪೇಕ್ಷಿಸುತ್ತಾರೆ ಮತ್ತು ತಾವು ಅವಳಿಗೆ ಮಕ್ಕಳಂತಿರಬೇಕೆಂದೂ ಅವರ ಇಚ್ಛೆ (೭-೮೧-೪). ಮೃತನ ಆತ್ಮವು ಸೂರ್ಯ ಮತ್ತು ಉಷೋದೇವಿಯರ ಸಮೀಪಕ್ಕೆ ಹೋಗುತ್ತದೆ (೧೦-೫೮-೮) ಮತ್ತು ಪಿತೃಗಳು ಕೆಂಬಣ್ಣದ ವಸ್ತುಗಳ ಮಡಲಲ್ಲಿ ಕುಳಿತಿದಾರೆ ಎನ್ನುವಾಗ, ಕೆಂಬಣ್ಣದ ವಸ್ತುಗಳು ಉಷಸ್ಸೇ ಇರಬೇಕು.

ನಿರುಕ್ತದಲ್ಲಿ (೧-೮)ರುವ ಹದಿನೆಂಟಲ್ಲದೇ, ಉಷಸ್ಸಿಗೆ ಇನ್ನೂ ಅನೇಕ ವಿಶೇಷಣಗಳಿವೆ. ದೇದೀಪ್ಯಮಾನಳು; ಹೊಳೆಯುತ್ತಿದಾಳೆ: ಶುಭ್ರಳು. ಅವಳದು ಬಿಳಿಯಬಣ್ಣ, ರಕ್ತವರ್ಣ, ಸುವರ್ಣ, ಉದಾರಳು, ನಿಯಮಜಾತಳು, ಇಂದ್ರನಂತಿರುವವಳು, ದೇವತಾಸ್ವರೂಪಳು, ಅಮರಳು. ಔದಾರ್ಯವು ಅವಳಿಗೆ ಸಹಜವಾದ ಗುಣ (ಮಫೋನಿ).

## ಅಶ್ವಿನೀದೇವತೆಗಳು

ಇಂದ್ರ, ಅಗ್ನಿ, ಸೋಮ, ಇವರನ್ನು ಬಿಟ್ಟರೆ, ಅಶ್ವಿನಿಗಳೆಂಬ ಯಮಳದೇವತೆಗಳೇ ಮುಖ್ಯರು. ಐವತ್ತಕ್ಕಿಂತ ಹೆಚ್ಚು ಸೂಕ್ತಗಳಲ್ಲಿಯೂ ಮತ್ತೆ ಕೆಲವು ಸೂಕ್ತಭಾಗಗಳಲ್ಲಿಯೂ ಸ್ತುತಿಸಲ್ಪಟ್ಟದಾರೆ. ನಾಲ್ಕು ನೂರಕ್ಕಿಂತ ಹೆಚ್ಚು ಸಲ ಅಶ್ವಿನಿಗಳ ಹೆಸರು ಬರುತ್ತದೆ. ಅವರೂ (ತೇಜಸ್ಸು) ಬೆಳಕಿನ ದೇವತೆಗಳೆಂದು ನಿಶ್ಚಿತರಾದರೂ, ಅವರು ಅವಳಿದೇವತೆಗಳು, ಪ್ರಪಂಚ ಅದರ ಯಾವ ಅಂಶವನ್ನು ಅವರು ಪ್ರತಿಬಿಂಬಿಸುತ್ತಾರೆ ಎಂದು ಹೇಳವುದು ಕಷ್ಟ. ಇಡೀ ಒಂದು ಸೂಕ್ತದಲ್ಲಿ, ಅವರನ್ನು ಪ್ರಪಂಚದಲ್ಲಿರುವ ನಾನಾ ಯಮಳ ಅಥವಾ ಜೋಡಿ ಪದಾರ್ಥಗಳಿಗೆ (ಕಣ್ಣುಗಳು, ಕೈಗಳು, ಕಾಲುಗಳು, ರೆಕ್ಕೆಗಳು (೩-೩೯-೩; ೧೦-೧೭-೨) ಮತ್ತು ಪ್ರತ್ಯೇಕಿಸಲಾಗದವರು.



CC-0. Jangamwadi Math Collection. Digitized by eGangotri

ಪಕ್ಷಿಗಳ ಅಥವಾ ಪ್ರಾಣಿಗಳ ಜೋಡಿಗಳು, ಇತ್ಯಾದಿ) ಹೋಲಿಸಿದೆ (೫-೭೮-೧ ರಿಂದ ೩ ; ೮-೩೫-೭ ರಿಂದ ೯ ; ೧೦-೧೦೬-೨ ರಿಂದ ೧೦). ಆದರೆ ಕೆಲವು ವಾಕ್ಯಗಳು ಪ್ರಾಯಶಃ ಅವರು ಮೊದಲು ಪ್ರತ್ಯೇಕವಾಗಿದ್ದರೆನ್ನುವುದನ್ನೂ ಸೂಚಿಸುವಂತೆ ತೋರುತ್ತವೆ. ಅವರು ಬೇರೆ ಬೇರೆಯಾಗಿ ಜನಿಸಿದರು (ನಾನಾ ; ೫-೭೩-೪) ; ಅಲ್ಲಿ ಇಲ್ಲಿ ಹುಟ್ಟಿದರು (ಇಹೇಹ) ; ಒಬ್ಬನು ಜಯಶೀಲನಾದ ರಾಜಕುಮಾರನು ; ಮತ್ತೊಬ್ಬನು ಆಕಾಶದ ಮಗನು (೧-೧೮೧-೪). ಯಾಸ್ಕರೂ ಕೂಡ ಒಬ್ಬನು ರಾತ್ರಿಯ ಮಗನೆಂದೂ, ಮತ್ತೊಬ್ಬನು ಉಷಃಕಾಲದ ಮಗನೆಂದೂ ಹೇಳುವ ಒಂದು ವಾಕ್ಯವನ್ನು ಉಲ್ಲೇಖಿಸಿದಾರೆ (ನಿರು. ೧೨-೨). ಋಗ್ವೇದದಲ್ಲಿಯೇ ಒಂದು ಕಡೆ (೪-೩-೬) 'ಆವಾಂಸುವನಾಸತ್ಯ' ಎಂದು ಒಬ್ಬನನ್ನೇ ಹೇಳಿದೆ. ಈ ಪದವು (ನಾಸತ್ಯ) ಸಾಮಾನ್ಯವಾಗಿ ಇಬ್ಬರಿಗೂ ಅನ್ವಯಿಸುವುದು.

ಅಶ್ವಿನೀದೇವತೆಗಳು ಎಳೆಯ ವಯಸ್ಸಿನವರು (೭-೬೭-೧೦). ಅವರು ದೇವತೆಗಳಲ್ಲೆಲ್ಲಾ ಕಿರಿಯವರು (ತೈ. ಸಂ. ೭-೨-೭-೨). ಅವರು ಪುರಾತನರೂ ಹೌದು (೭-೬೨-೫). ಶುಭ್ರರು (೭-೬೮-೧) ; ಕಾಂತಿಗೆ ಒಡೆಯರು (೮-೨೨-೧೪ ; ೧೦-೯೩-೬) ; ಸುವರ್ಣದಂತೆ ಹೊಳೆಯುವವರು (೮-೮-೨) ; ಮತ್ತು ಜೇನುತುಪ್ಪದ ಬಣ್ಣವುಳ್ಳವರು (೮-೨೬-೬). ಅವರಿಗೆ ನಾನಾ ರೂಪಗಳು (೧-೧೧೭-೯). ಅವರು ಸ್ಫುರದ್ರೂಪಿಗಳು (೬-೬೨-೫ ; ೬-೬೩-೧) ; ಕಮಲ ಪುಷ್ಪದ ಹಾರಗಳನ್ನು ಧರಿಸುತ್ತಾರೆ (೧೦-೧೮೪-೨ ; ಅ. ವೇ. ೩-೨೨-೪ ; ಶ. ಬ್ರಾ. ೪-೧೫-೧೬). ಅವರು ಚುರುಕಾಗಿದಾರೆ (೬-೬೩-೫), ಮನಸ್ಸಿನಂತೆ (೮-೨೨-೧೬) ಅಥವಾ ಹದ್ದಿನಂತೆ (೫-೭೮-೪) ವೇಗಶಾಲಿಗಳು. ಬಹಳ ಬಲಿಷ್ಠರು (೧೦-೨೪-೪), ಬಹಳ ದೃಢಾಂಗರು (೬-೬೨-೫), ಮತ್ತು ಅನೇಕ ಸಲ 'ರಕ್ತ'ರು (ರೌದ್ರಾವೇಶವುಳ್ಳವರು) ಎಂದು ಹೇಳಲ್ಪಟ್ಟಿದಾರೆ (೫-೭೫-೩ ಇತ್ಯಾದಿ). ಅವರು ಒಳ್ಳೆಯ ಜ್ಞಾನಿಗಳು (೮-೮-೨) ಮತ್ತು ಮಾಯಾಶಕ್ತಿಯುಳ್ಳವರು (೬-೬೩-೫ ; ೧೦-೯೩-೭). ಪದೇ ಪದೇ ಉಪಯೋಗಿಸಲ್ಪಡುವ ಮತ್ತು ಅವರದೇ ಆದ ವಿಶೇಷಣಗಳೆಂದರೆ (ದಸ್ರಾ) ಆಶ್ಚರ್ಯಕರರಾದ ಮತ್ತು (ನಾಸತ್ಯಾ) 'ಅಸತ್ಯವಂತರಲ್ಲ' ಎಂಬವು. ಈ ಎರಡನೆಯದಕ್ಕೆ 'ರಕ್ಷಕರು' ಮೊದಲಾದ ಅರ್ಥಗಳೂ ಸೂಚಿಸಲ್ಪಟ್ಟಿವೆ. ಈ ಎರಡು ವಿಶೇಷಣಪದಗಳೇ ಅವರ ನಾಮಧೇಯಗಳಾಗಿ ಪರಿಣತವಾಗಿವೆ. (ರುದ್ರವರ್ತನೀ) 'ರಕ್ತವರ್ಣದ ದಾರಿಯುಳ್ಳವರು' ಮತ್ತು (ಹಿರಣ್ಯವರ್ತನೀ) ಬಂಗಾರದ ದಾರಿಯುಳ್ಳವರು. ಇವೆರಡೂ ಅವರಿಗೆ ವಿಶೇಷಣಗಳು. 'ಹಿರಣ್ಯವರ್ತನೀ' ಎಂಬುದು ಎರಡುಕಡೆ ನದಿಗಳಿಗೆ ವಿಶೇಷಣವಾಗಿ ಉಪಯೋಗಿಸಲ್ಪಟ್ಟಿದೆ.

ಅಶ್ವಿನೀದೇವತೆಗಳಿಗೆ ಇತರ ದೇವತೆಗಳಿಗಿಂತ ಹೆಚ್ಚಾಗಿ ಮಧು (ಜೇನು)ವಿನ ಸಂಬಂಧವಿದೆ. ಅನೇಕ ಮಂತ್ರಗಳಲ್ಲಿ ಎರಡೂ ಒಟ್ಟಿಗೆ ಪ್ರಯುಕ್ತವಾಗಿವೆ. ಮಧುವಿನಿಂದ ತುಂಬಿದ ಒಂದು ತೊಗಲಿನ ಚೀಲ ಅವರಲ್ಲಿದೆ ; ಮಧುವನ್ನು ಸೆಳೆದುಕೊಳ್ಳುವ ದುಂಬಿಗಳು ಅದರಲ್ಲಿ ಬಹಳ ಇವೆ (೪-೪೫-೩ ಮತ್ತು ೪). ಅವರು ನೂರು ಜಾಡಿ ಮಧುವನ್ನು ಅಳೆದುಕೊಟ್ಟರು (೧-೧೧೭-೬). ಮಧುವಿನ ಚುಚ್ಚುಗೋಲು ಅವರಿಗೆ ವಿಶೇಷವಾದುದು (೧-೧೨೨-೩ ; ೧-೧೫೭-೪) ; ಇದರಿಂದ ಅವರು ಯಾಗವನ್ನು ಮತ್ತು ಯಜಮಾನನನ್ನು ಚುಮುಕಿಸುತ್ತಾರೆ. ಅವರ ರಥವು ಮಾತ್ರ ಮಧುವಿನ ಬಣ್ಣವುಳ್ಳದ್ದೆಂದು ವರ್ಣಿತ (ಮಧುವರ್ಣ) ವಾಗಿದೆ ಅಥವಾ ಮಧುವನ್ನು ವಹಿಸತಕ್ಕದ್ದೆಂದೂ (ಮಧುವಾಹನ) ಇದೆ. ಮಧುವೆಂದರೆ ಅವರಿಗೆ ಬಹಳ ಇಷ್ಟ. ಅದನ್ನು ಕುಡಿಯುವವರೂ (ಮಧುಪಾ) ಹೌದು. ಯಾವ ಋತ್ವಿಜನ ಹತ್ತಿರ ಅಶ್ವಿನಿಗಳು ಬರಬೇಕೆಂದು ಆಹ್ವಾನಿತರೋ ಆತನೂ ಮಧುಹಸ್ತನು (೧೦-೪೧-೩). ಅವರೇ ದುಂಬಿಗೆ ಮಧುವನ್ನು ದಾನಮಾಡುತ್ತಾರೆ (೧-೧೧೨-೨೧ ;



CC-0. Jangamwadi Math Collection. Digitized by eGangotri

೦-೪೦-೬ನ್ನು ಹೋಲಿಸಿ); ಅವರನ್ನು ದುಂಬಿಗಳಿಗೆ (೧೦-೧೦೬-೧೦) ಹೋಲಿಸಿದೆ. ಇತರ ದೇವತೆಗಳಂತೆ, ಇವರಿಗೂ ಸೋಮರಸವೆಂದರೆ ಪ್ರೀತಿ (೩-೫೮-೭ ಮತ್ತು ೯; ಇತ್ಯಾದಿ) ಮತ್ತು ಉಷಸ್ಸು ಮತ್ತು ಸೂರ್ಯರೊಡನೆ ಸೋಮಪಾನ ಮಾಡಬೇಕೆಂದು ಆಹ್ವಾನಿತರಾಗುತ್ತಾರೆ (೮-೩೫-೧). ಸೋಮಪಾನಾರ್ಹದೇವತೆಗಳ ಶ್ರೇಣಿಗೆ ಇವರು ಸೇರಿರಲಿಲ್ಲವೆಂದು ಕೆಲವು ವಿದ್ವಾಂಸರ ಅಭಿಪ್ರಾಯ.

ಆವರ ರಥವು ಸೂರ್ಯನಂತಿದೆ (೮-೮-೨); ಅಥವಾ ಸುವರ್ಣಮಯವಾದುದು (೪-೪೪-೪ ಮತ್ತು ೫) ಮತ್ತು ಚಕ್ರ ಅಚ್ಚು ಮೊದಲಾದ ಭಾಗಗಳೆಲ್ಲವೂ ಚಿನ್ನದಿಂದ ಮಾಡಿದುದು (೧-೧೮೦-೧ ; ೮-೫-೨೯ ; ೮-೨೨-೫). ಅದಕ್ಕೆ ಸಾವಿರ ಕಿರಣಗಳು (೧-೧೧೯-೧) ಅಥವಾ ಆಭರಣಗಳು (೮-೮-೧೧ ಮತ್ತು ೧೪). ಅದು ಒಂದು ವಿಲಕ್ಷಣವಾದ ರಥ ; ಮೂರು ವಿಧವಾದುದು ; ಮೂರು ಚಕ್ರ ; ಮೂರು ಬಂಡಿಗಳು; ಮತ್ತು ಬೇರೆ ಕೆಲವು ಭಾಗಗಳೂ ಮೂರು ಮೂರು (೧-೧೧೮-೧ ಮತ್ತು ೨; ಇತ್ಯಾದಿ). ಬಹಳ ಹಗುರವಾಗಿ ಸಂಚರಿಸುತ್ತದೆ (೮-೯-೮); ಮನಸ್ಸಿಗಿಂತಲೂ (೧-೧೧೭-೨ ಇತ್ಯಾದಿ) ಅಥವಾ ನಿಮೇಷಕ್ಕಿಂತಲೂ (೮-೬೨-೨) ಹೆಚ್ಚು ಚುರುಕು. ಅದು ಋಭುಗಳಿಂದ ರಚಿತವಾಯಿತು (೧೦-೩೯-೧೨). ಮೂರು ಚಕ್ರದ ರಥವೆಂದರೆ ಆವರೊಬ್ಬರದೇ. ಸೂರ್ಯೆಯ ವಿವಾಹಕ್ಕೆ ಹೋದಾಗ, ರಥದ ಒಂದು ಚಕ್ರವು ಹಾಳಾಗಿಹೋಯಿತಂತೆ (೧೦-೮೫-೧೫;)

ಅವರ ಹೆಸರೇನೋ ಅಶ್ವವುಳ್ಳವರು ಎಂದು ಅರ್ಥಕೊಡುತ್ತದೆ, ಆದರೆ ಅವರು ಅಶ್ವಾರೋಹಿಗಳಾದುದರಿಂದ ಆ ಹೆಸರು ಅವರಿಗೆ ಬಂದಿದೆ ಎಂದು ಎಲ್ಲೂ ಇಲ್ಲ. ಅವರ ರಥವನ್ನು ಎಳೆಯುವವು ಅಶ್ವಗಳು (೧-೧೧೭-೨; ಇತ್ಯಾದಿ); ಇನ್ನೂ ಹೆಚ್ಚಾಗಿ ಪಕ್ಷಿಗಳು (೬-೬೩-೬ ; ಇತ್ಯಾದಿ) ಅಥವಾ ಪತತ್ರಿ(೧೦-೧೪೩-೫) ; ಹಂಸಗಳು (೪-೪೫-೪) ; ಗರುಡಪಕ್ಷಿಗಳು (೧-೧೧೮-೪) ಪಕ್ಷಿರೂಪಾಶ್ವಗಳು (೬-೬೩-೭); ಶ್ಯೇನರೂಪವಾದ ಅಶ್ವಗಳೇ (೮-೫-೭) ರಥವಾಹಕಗಳು. ಒಂದೊಂದು ಸಲ, ಒಂದು ಎಮ್ಮೆ, ಎಮ್ಮೆಗಳು (೫-೭೩-೭ ; ೧-೧೮೪-೩ ; ಇತ್ಯಾದಿ) ; ಒಂದು ಕತ್ತೆ (೧-೩೪-೯ ; ೧-೧೧೬-೨ ; ೮-೭೪-೭) ಅದನ್ನು ಎಳೆಯಿತೆಂದೂ ಹೇಳಿದೆ. ಸೂರ್ಯೆ ಇವರ ವಿವಾಹಕಾಲದಲ್ಲಿ, ಅಶ್ವಿನಿಗಳು ಸ್ಪರ್ಧೆಯಲ್ಲಿ ತಮ್ಮ ರಾಸಭ ರಥದಿಂದಲೇ ಗೆದ್ದರೆಂದಿದೆ (ಐ. ಬ್ರಾ. ೪-೭-೯ ; ಋ. ವೇ. ೧-೧೧೬-೭ ಮತ್ತು ಆದರಮೇಲೆ ಸಾಯಣ ವ್ಯಾಖ್ಯಾನ.) ಅವರ ರಥವು ದಿಗಂತವನ್ನು ಮುಟ್ಟುತ್ತದೆ (೧-೧೮೦-೧೦) ಐದು ದೇಶಗಳವರೆಗೂ ಹಬ್ಬಿದೆ (೭-೬೩-೨ ಮತ್ತು ೩). ಅದು ಆಕಾಶದ ಸುತ್ತಲೂ ತಿರುಗುತ್ತದೆ. ಭೂಮ್ಯಾಕಾಶಗಳನ್ನು ಒಂದು ದಿನ ಸೂರ್ಯನ [೧-೧೧೫-೩] ಮತ್ತು ಉಷಾದೇವಿಯ [೪-೫೧-೫] ರಥಗಳಂತೆ, ಬಹಳ ದೂರದಲ್ಲಿ ಅವನನ್ನು ಸುತ್ತುತ್ತದೆ [೧-೧೧೨-೧೩]. 'ಪರಿಜ್ಮಾ' [ಗುಂಡಗೆ ತಿರುಗುವವನು] ಎಂಬ ವಿಶೇಷಣ ಇವರಿಗೆ ಬಹಳ ಕಡೆ ಪ್ರಯುಕ್ತವಾಗಿದೆ. ವಾತ, ಅಗ್ನಿ, ಸೂರ್ಯರಿಗೂ ಇದು ಪ್ರಯೋಗಿಸಿದೆ. ಸೂರ್ಯನಿಗೆ ಬಹಳ ದೂರದಲ್ಲಿ ಹಾಯುತ್ತದೆ [೩-೫೮-೮].

ಅವರ ವಾಸಸ್ಥಾನವು ನಿರ್ದಿಷ್ಟವಾಗಿಲ್ಲ ನಾನಾವಿಧವಾಗಿ ಹೇಳಲ್ಪಟ್ಟಿದೆ. ಅವರು ಬಹಳ ದೂರದಿಂದ [೮-೫-೩೦], ಸ್ವರ್ಗದಿಂದ [೮-೮-೭], ಸ್ವರ್ಗ ಮತ್ತು ಭೂಮಿಯಿಂದ [೧-೪೪-೫], ಸ್ವರ್ಗ ಮತ್ತು ವಾಯುಮಂಡಲದಿಂದ [೮-೮-೪ ; ೮-೯-೨], ವಾಯುಮಂಡಲದಿಂದ [೮-೮-೩], ಭೂಮಿ, ಸ್ವರ್ಗ ಮತ್ತು ಆಕಾಶದಿಂದ [೮-೧೦-೧], ಮತ್ತು ವಾಯುಮಂಡಲದಿಂದ, ದೂರದಿಂದ, ಹತ್ತಿರದಿಂದ [೫-೭೩-೧] ಬಂದಿದ್ದಾರೆ. ಅವರು ಆಕಾಶದ ಸಮುದ್ರದಲ್ಲಿ [೮-೨೬-೧೭], ಸ್ವರ್ಗದ ಪ್ರವಾಹಗಳಲ್ಲಿ, ತರುಗಳಲ್ಲಿ, ಮನೆಗಳಲ್ಲಿ, ಪರ್ವತಶಿಖರದ ಮೇಲೆ ವಾಸಿಸುತ್ತಾರೆ [೭-೭೦-೩]. ಅವರು ಹಿಂದೆ, ಮುಂದೆ, ಕೆಳಗೆ, ಮೇಲೆ, ಎಲ್ಲಾ ಕಡೆಗಳಿಂದ ಬರುತ್ತಾರೆ [೭-೭೨-೫]. ಯಾವುದೂ ನಿರ್ಧಾರವಾಗಿ ತಿಳಿಯದೇ ಆವರ ವಾಸಸ್ಥಳವು ಯಾವುದೆಂದು ಪ್ರಶ್ನಿಸಲ್ಪಟ್ಟಿದೆ

[೫-೭೪-೨ ಮತ್ತು ೩ ; ೭-೬೩-೧ ; ೮-೬೨-೪]. ದಿನಕ್ಕೆ ಮೂರು ಸಲ ಆಹೂತರಾಗುವುದರಿಂದಲೋ ಏನೋ, ಅವರಿಗೆ ಮೂರು ಸ್ಥಳಗಳಿವೆಯೆಂದು [೮-೮-೨೩] ಹೇಳಿದೆ.

ಇನ್ನೂ ಕತ್ತಲಿರುವಾಗಲೇ, ಅರುಣೋದಯದವೇಳೆಗೇ, ಸಾಧಾರಣವಾಗಿ ಅವರು ಯಾಗಶಾಲೆಗೆ ಬರುವುದು (೧೦-೬೧-೪); ಅವರು ಭೂಮಿಗೆ ಬಂದು ತಮ್ಮ ಆರಾಧಕರಿಂದ ಹವಿರಾದಿಗಳನ್ನು ಸ್ವೀಕರಿಸಲು, ರಥಕ್ಕೆ ಕುದುರೆಗಳನ್ನು ಹೂಡುತ್ತಾರೆ (೧-೨೨-೧ ; ಇತ್ಯಾದಿ). ಉಷಸ್ಸು ಅವರನ್ನು ನಿದ್ರೆಯಿಂದ ಎಬ್ಬಿಸುತ್ತಾಳೆ (೮-೯-೧೭). ತಮ್ಮ ರಥದಲ್ಲಿ ಕುಳಿತು ಉಷಸ್ಸನ್ನೇ ಹಿಂಬಾಲಿಸುತ್ತಾರೆ (೮-೫-೨). ಅವರು ರಥವನ್ನು ಹೂಡುವ ಹೊತ್ತಿಗೆ ಉಷಸ್ಸು ಉದಿಸುತ್ತಾಳೆ (೧೦-೩೯-೧೨). ಅವರಿಬ್ಬರ (ಅಶ್ವಿನಿಗಳು ಮತ್ತು ಉಷಸ್ಸು) ಕಾಲವು ಪ್ರಾಯಶಃ ಅರುಣೋದಯ ಮತ್ತು ಸೂರ್ಯೋದಯಗಳ ಮಧ್ಯಕಾಲವು. ಆದರೆ ಸವಿತೃವು ಅವರ ರಥವನ್ನು ಅರುಣೋದಯಕ್ಕೂ ಮುಂಚೆ ಚಲಿಸುವಂತೆ ಮಾಡುತ್ತಾನೆ (೧-೩೪-೧೦) ಎಂದು ಒಂದು ಸ್ಥಳದಲ್ಲಿ ಇದೆ. ಎಲ್ಲೋ ಒಂದೊಂದು ಸ್ಥಳದಲ್ಲಿ, ಅಶ್ವಿನಿಗಳ ಆಗಮನ, ಯಜ್ಞಾಗ್ನಿಜ್ವಲನ, ಅರುಣೋದಯ ಮತ್ತು ಸೂರ್ಯೋದಯ ಇವೆಲ್ಲವೂ ಏಕಕಾಲದಲ್ಲಿ ನಡೆಯುತ್ತವೆ (೧-೧೫೭-೧ ; ೭-೭೨-೪) ಎಂತಲೂ ಹೇಳಿದೆ. ಅವರನ್ನು ಯಾಗ ಶಾಲೆಗೆ ಬನ್ನಿ ಎಂದು ಪ್ರಾರ್ಥಿಸುವುದು ಅವರಿಗೆ ಸಹಜವಾದ ಉಷಃಕಾಲದಲ್ಲಿ ಮಾತ್ರವಲ್ಲ, ಸಾಯಂಕಾಲ (೮-೨೨-೧೪), ಬೆಳಗ್ಗೆ, ಮಧ್ಯಾಹ್ನ ಮತ್ತು ಸೂರ್ಯಾಸ್ತಮಾನಕಾಲಗಳಲ್ಲಿಯೂ (೫-೭೬-೩) ಬರಬೇಕೆಂದು ಪ್ರಾರ್ಥನೆ ಮಾಡಿದಾರೆ. ಪ್ರಾತರಾದಿ ಮೂರು ಸವನಗಳಲ್ಲಿಯೂ ಅಶ್ವಿನಿಗಳು ಇರಬೇಕೆಂಬುದೇ, ಒಂದು ಇಡೀ ಸೂಕ್ತದಲ್ಲಿ ಮೂರು ಮೂರು ಎಂದು ಉಪಯೋಗಿಸಿ ಅವರನ್ನು ಸ್ತುತಿಸಿರುವುದಕ್ಕೆ ಆಧಾರವಾಗಿರುವಂತೆ ಕಾಣುತ್ತದೆ (೧-೩೪). ಪ್ರಾತಃಕಾಲದ ದೇವತೆಗಳಾಗಿ, ಅವರು ಕತ್ತಲನ್ನು ಹೋಗಲಾಡಿಸುತ್ತಾರೆ (೩-೩೯-೩) ಮತ್ತು ಕೆಲವು ಸಲ ಪಿಶಾಚಾದಿಗಳನ್ನು ಓಡಿಸುವುದೂ ಉಂಟು (೭-೭೩-೪ ; ೮-೩೫-೧೬). ಅಶ್ವನೀದೇವತೆಗಳು ಉಷಾದೇವಿ ಮತ್ತು ಅಗ್ನಿಯರು ಉಷಃಕಾಲದ ದೇವತೆಗಳು (ಐ. ಬ್ರಾ. ೨-೧೫); ವೈದಿಕ ಯಜ್ಞಗಳಲ್ಲಿ ಪ್ರಾತಃ ಕಾಲಕ್ಕೆ ಸಂಬಂಧಿಸಿದ ದೇವತೆಗಳು. ಅಶ್ವಿನಿಗಳು ಶ್ವೇತರಕ್ತವರ್ಣದವರು (ಶ. ಬ್ರಾ. ೫-೫-೪-೧); ಆದುದರಿಂದ ಅವರಿಗೆ ಅಂತಹದೇ ಒಂದು ಆಡನ್ನು ಬಲಿಯಾಗಿ ಕೊಡಬೇಕು.

ಅವರಿಬ್ಬರೂ ಆಕಾಶದ ಪುತ್ರರು (೧-೧೮೨-೧ ; ೧-೧೮೪-೧ ; ೧೦-೬೧-೪) ; ಇಬ್ಬರಲ್ಲಿ ಒಬ್ಬನು, ಒಂದು ಸಲಮಾತ್ರ ಆಕಾಶದ ಮಗನೆಂದು (೧-೧೮೪-೪) ಹೇಳಿದೆ. ಒಂದುಕಡೆ ಮಾತ್ರ ಸಾಗರವು ಅವರಿಗೆ ತಾಯಿ (ಸಿಂಧುಮಾತರಾ ೧-೪೬-೨). ಒಂದು ಮಂತ್ರದಲ್ಲಿ (೧೦-೧೭-೨) ಅಶ್ವಿನಿಗಳು ವಿಶ್ವವತ ಮತ್ತು ತ್ವಷ್ಟೃಪುತ್ರಿ, ಸರಣ್ಯು, ಇವರಿಬ್ಬರ ಅವಳ ಮಕ್ಕಳು ; ಉದಿಸುವ ಸೂರ್ಯ ಮತ್ತು ಉಷಃಕಾಲಗಳೇ ಕ್ರಮವಾಗಿ ವಿಶ್ವವತ ಮತ್ತು ಸರಣ್ಯುಗಳು ಇರಬೇಕು. ಪೂಷಣನು ಅಶ್ವಿನಿಗಳನ್ನು ತನ್ನ ಜನಕರೆಂದು ವಾದಿಸುತ್ತಾನೆ (೧೦-೮೫-೧೪). ಅವರ ಸೋದರಿ (೧-೧೮೦-೨) ಎಂಬುದು ಉಷೋದೇವಿಗೇ ಪ್ರಾಯಶಃ ಅನ್ವಯಿಸುತ್ತದೆ. ಬೆಳಗಿನ ಪುರುಷ ದೇವತೆಗಳಾದ ಇವರು ಅನೇಕ ಸಲ 'ಸೂರ್ಯಾ' ಅಥವಾ ಸೂರ್ಯಪುತ್ರಿಯೊಡನೆ ಸಂಬಂಧಿಸಲ್ಪಟ್ಟಿದಾರೆ. ಸೂರ್ಯೆಯೇ ಅವರನ್ನು ವರಿಸಿದಳು (೭-೬೯-೪) ; ಅವರಿಬ್ಬರು ಅವಳ ಪತಿಯರು (೪-೪೩-೬ ; ೧-೧೧೯-೫ನ್ನು ಹೋಲಿಸಿ). ಸೂರ್ಯೆ (೫-೭೩-೫) ಅಥವಾ ಕನ್ಯೆಯು (೮-೮-೧೦) ಅವರ ರಥವನ್ನು ಏರಿದಳು. ಸೂರ್ಯನ ಪುತ್ರಿಯು ಅವರ ರಥವನ್ನು ಏರುತ್ತಾಳೆ (೧-೩೪-೫ ; ೧-೧೧೬-೧೭ ; ೧-೧೧೮-೫ ; ೬-೬೩-೫) ಅಥವಾ ಅದನ್ನು ಆರಿಸಿಕೊಂಡಳು (೧-೧೧೭-೧೩ ; ೪-೪೩-೨). ಸೂರ್ಯೆಯನ್ನು ತಮ್ಮವಳೆಂದು ಭಾವಿಸುತ್ತಾರೆ (೭-೬೮-೩) ಮತ್ತು ಅವಳು ರಥದಲ್ಲಿ ಅವರ ಜೊತೆಯಲ್ಲಿ ಹೋಗುತ್ತಾಳೆ ಎಂಬುದು ಒಂದು ವೈಶಿಷ್ಟ್ಯ (೮-೨೯-೮).



CC-0. Jangamwadi Math Collection. Digitized by eGangotri

(೫-೪೬-೮)ರಲ್ಲಿ ಇತರ ದೇವತಾಸ್ತ್ರೀಯರೊಡನೆ ಹೇಳಿರುವ 'ಅಶ್ವಿನೀ' ಎಂಬದೇವತೆ ಅವಳೇ ಇರಬೇಕು. ಸವಿತೃವು ಸೂರ್ಯೆಯನ್ನು ಪತಿಗೆ ದಾನಮಾಡಿದಾಗ, ಸೋಮದೇವತೆಯು ಅವಳನ್ನು ಮೋಹಿಸದವನೆಂದೂ, ಅಶ್ವಿನೀದೇವತೆಗಳು ವರ ಎಂದೂ (೧೦-೮೫-೯) ಹೇಳಿದೆ. ಬೇರೊಂದು ಕಡೆ (೬-೫೮-೪) ದೇವತೆಗಳು ಸೂರ್ಯೆಗೆ ಪೂಷಣನನ್ನು ಕೊಟ್ಟರೆಂದು ಉಕ್ತವಾಗಿದೆ. ಈ ಸೂರ್ಯೆಗೆ ಸಂಬಂಧಿಸಿರುವುದರಿಂದಲೇ, ವಧುವನ್ನು ರಥದ ಮೇಲೆ ಮನೆಗೆ ಕರೆದುಕೊಂಡುಹೋಗಿ ಎಂದು ಬೇಡಿರುವುದು (೧೦-೧೮೫-೨). ವಧುವನ್ನು ಪುತ್ರವತಿಯಾಗುವಂತೆ ಅನುಗ್ರಹಿಸಬೇಕೆಂದು, ಇತರ ದೇವತೆಗಳೊಡನೆ ಇವರನ್ನೂ ಪ್ರಾರ್ಥಿಸಿದೆ. ನಪುಂಸಕನ ಪತ್ನಿಗೆ ಶಿಶುವನ್ನೂ ದಯಪಾಲಿಸುತ್ತಾರೆ ಮತ್ತು ಬಂಜೆ ಹಸುವು ಹಾಲುಕೊಡುವಂತೆ ಮಾಡುತ್ತಾರೆ (೧-೧೧೭-೩). ವೃದ್ಧಳಾಗಿದ್ದ ಕನ್ಯೆಗೆ ಪತಿಯನ್ನೂ ತಮ್ಮ ಪ್ರೀತಿಪಾತ್ರನೊಬ್ಬನಿಗೆ ಪತ್ನಿಯನ್ನೂ ಅನುಗ್ರಹಿಸಿದರು (೧-೧೧೬-೧). ಅವರು ಪ್ರಣಯಿಗಳನ್ನು ಒಂದುಗೂಡಿಸುತ್ತಾರೆ (ಅ ವೇ. ೨-೩೦-೨ ; ಇತ್ಯಾದಿ).

ಆರ್ತರಿಗೆ ಸಹಾಯ ಮಾಡುವುದರಲ್ಲಿ ಅಗ್ರಗಣ್ಯರು. ದುಃಖದಿಂದ ಬಿಡುಗಡೆ ಮಾಡುವುದರಲ್ಲಿಯೂ, ಸಹಾಯ ನೀಡುವುದರಲ್ಲಿಯೂ, ಇವರಷ್ಟು ಚುರುಕಾದವರು ಯಾರೂ ಇಲ್ಲ. (೧-೧೧೨-೨; ೧-೧೧೮-೩) ಇಂತಹ ಕಾರ್ಯಗಳಿಗಾಗಿ ಅವರು ಸದಾ ಸ್ತುತರು. ವಿಶೇಷವಾಗಿ, ಸಮುದ್ರದಲ್ಲಿ ನಾವೆಯಿಂದ ರಕ್ಷಿಸುತ್ತಾರೆ. ಸಮುದ್ರದಿಂದ ಅಥವಾ ಸ್ವರ್ಗದಿಂದ ನಿಧಿಯನ್ನು ತರುವಂತೆ ಪ್ರಾರ್ಥಿಸಲ್ಪಡುತ್ತಾರೆ (೧-೪೭-೬) ಮತ್ತು ಅವರ ರಥವು ಸಾಗರದ ಕಡೆಯಿಂದ ಸಮೀಪಿಸುತ್ತದೆ (೪-೪೩-೫); ಇಲ್ಲಿ ಸಾಗರವೆಂಬುದು ಆಕಾಶವಿರಬೇಕು. ಇವರು ಆರ್ತರಿಗೆ ಮಾಡುವ ಸಹಾಯವು ಶಾಂತರೀತಿಯದು, ಇಂದ್ರಾದಿಗಳಂತೆ ಯುದ್ಧ ಶತ್ರುಗಳಿಂದ ರಕ್ಷಣೆಯಲ್ಲ; (ಆದರೆ ಒಂದು ಸಲ ಇವರೂ ಇಂದ್ರನ ಜೊತೆಯಲ್ಲಿ ಶತ್ರುಗಳೊಡನೆ ಹೋರಾಡಿದರೆಂದೂ, ಒಂದುಕಡೆ, ವೃತ್ರನನ್ನು ಕೊಂದವರೆಂದೂ ಹೇಳಿದೆ). ಆದ್ದರಿಂದ ಅವರು ವಿಶೇಷವಾಗಿ ದೇವವೈದ್ಯರು (೮-೧೮-೮; ಇತ್ಯಾದಿ) ತಮ್ಮ ಔಷಧಿಗಳಿಂದ ರೋಗಗಳನ್ನು ಗುಣಪಡಿಸುತ್ತಾರೆ (೮-೨೨-೧೦; ಇತ್ಯಾದಿ); ಕಣ್ಣು ಕಾಣಿಸುವಂತೆ ಮಾಡುತ್ತಾರೆ (೧-೧೧೬-೧೬); ಕುರುಡರು, ಖಾಯಿಲೆಯುವರು ಮತ್ತು ಊನವಾದ ಅಂಗಗಳುಳ್ಳವರು ಇವರುಗಳನ್ನೆಲ್ಲಾ ಸರಿಪಡಿಸುತ್ತಾರೆ (೧೦-೩೯-೩). ದೇವತೆಗಳ ವೈದ್ಯರು, ಅಮರತ್ವ ರಕ್ಷಕರು. ಪೂಜೆ ಮಾಡುವವನ ಮರಣವನ್ನು ದೂರಮಾಡುತ್ತಾರೆ (ಅ. ವೇ. ೭-೫೩-೧; ತೈ. ಬ್ರಾ. ೩-೭-೨-೧೧). ಸಹಾಯಕರು, ವೈದ್ಯರು, ಆಶ್ಚರ್ಯಕರವಾದ ಕಾರ್ಯಗಳನ್ನು ಮಾಡುವವರು ಈ ಗುಣಗಳಲ್ಲದೇ, ಅವರ ಔದಾರ್ಯವೂ ಪ್ರಶಂಸಿತವಾಗಿದೆ. ತಮ್ಮ ಆರಾಧಕನಿಗೆ ವಯಸ್ಸಾದಾಗಲೂ ನೇತ್ರಪಾಟವವನ್ನೂ ಅನುಗ್ರಹಿಸಿ, ಐಶ್ವರ್ಯ, ಸಂತಾನ ಮುಂತಾದವುಗಳನ್ನು ಕೊಡುತ್ತಾರೆ (೧-೧೧೬-೨೫; ೮-೮-೧೩ ಇತ್ಯಾದಿ).

ಅವರು ಕಷ್ಟದಲ್ಲಿ ನೆರವಾಗುತ್ತಾರೆ ಎಂಬುದಕ್ಕೆ ಅನೇಕ ಆಖ್ಯಾಯಿಕೆಗಳಿವೆ. ವೃದ್ಧನಾಗಿ, ಪತ್ನೀಪುತ್ರಾದಿಗಳಿಂದ ಪರಿತ್ಯಕ್ತನಾಗಿದ್ದ ಚ್ಯವನನನ್ನು ಅವನ ಶಿಥಿಲದೇಹದಿಂದ ಬಿಡುಗಡೆ ಮಾಡಿದರು; ದೀರ್ಘಾಯುಸ್ಸನ್ನು ಕೊಟ್ಟು, ಪುನಃ ಯುವಕನನ್ನಾಗಿ ಮಾಡಿ, ಅವನ ಪತ್ನಿಯು ಅವನನ್ನು ಅಪೇಕ್ಷಿಸುವಂತೆ ಮಾಡಿದರು; ಮತ್ತು ಇತರ ಕನ್ಯೆಯರು ಅವನನ್ನು ವರಿಸುವಂತೆ ಅನುಗ್ರಹಿಸಿದರು (೧-೧೧೬-೧೦; ಇತ್ಯಾದಿ) ಚ್ಯವನನಿಗೆ ಯೌವನದಾನದ ಕಥೆ ವಿಶದವಾಗಿ (ಶ. ಬ್ರಾ. ೪-೧-೫)ಹೇಳಿದೆ. ಅವರು ಕಲಿ ಎಂಬ ವೃದ್ಧನೊಬ್ಬನಿಗೆ ಯೌವನವನ್ನು ಪುನಃ ದೊರಕಿಸಿಕೊಟ್ಟು (೧೦-೩೯-೮), ಲಗ್ನಮಾಡಿಕೊಂಡಾಗ ಅವನ ಸ್ನೇಹಿತರೂ ಆಗಿದ್ದರು (೧-೧೧೨-೧೫). ಅವರು ವಿಮದನ ಪತ್ನಿಯರಾದ ಯುವತಿಯರಿಗೋಸ್ಕರ ರಥವೊಂದನ್ನು (೧-೧೧೭-೧೯), ಅಥವಾ ಅವನಿಗೆ ಒಬ್ಬ ಪತ್ನಿಯನ್ನು (೧-೧೧೬-೧) ಅನುಗ್ರಹಿಸಿದರು. ಅವಳು ಪುರುಮಿತ್ರನ ಪತ್ನಿಯಾಗಿ



CC-0. Jangamwadi Math Collection. Digitized by eGangotri

ದ್ದಳೆಂದು ತೋರುತ್ತದೆ (೧-೧೧೭-೨೦ ; ೧೦-೩೯-೭) ಮತ್ತು ಅವಳ ಹೆಸರು ಕಮದ್ಯು (೧೦-೬೫-೧೨). ಕೃಷ್ಣನ ಪುತ್ರನಾದ, ತಮ್ಮ ಆರಾಧಕ ವಿಶ್ವಕನಿಗೆ, ನಷ್ಟನಾಗಿದ್ದ ವಿಷ್ಣಾಪುವು ಕಾಣಿಸುವಂತೆ ಮಾಡಿದರು (೧-೧೧೬-೨೩ ; ೧-೧೧೭-೭ ; ೧೦-೬೫-೧೨). ಆದರೆ ಪದೇ ಪದೇ ಹೇಳಲ್ಪಡುವುದು ಭುಜ್ಯುವನ್ನು ರಕ್ಷಿಸಿದ ಕಥೆ. ಭುಜ್ಯುವು ತುಗ್ರಎಂಬುವನ ಪುತ್ರನು. ಇವನು ಸಮುದ್ರದಲ್ಲಿ ಮುಳುಗಿಹೋಗುತ್ತಿರುವಾಗ ಅಶ್ವಿನಿಗಳಮರೆಹೊಕ್ಕನು. ಆಳವೇ ತಿಳಿಯದ ಸಾಗರದಲ್ಲಿ ನೂರು ಹುಟ್ಟುಗಳಿಂದ ಕೂಡಿದ ನೌಕೆಯಲ್ಲಿ ಅವನನ್ನು ಕೂಡಿಸಿಕೊಂಡು ಅಶ್ವಿನಿಗಳು ಮನೆಗೆ ಕರೆದುಕೊಂಡು ಹೋದರು. ಆಕಾಶದಲ್ಲಿ ಹಾರುವಂತೆ ತೋರುತ್ತಿದ್ದ, ಒಡಕುಗಳಿಲ್ಲದ ಹಡಗಿನಲ್ಲಿ, ನಾಲ್ಕು ಹಡಗುಗಳಲ್ಲಿ, ರೆಕ್ಕೆಗಳುಳ್ಳ ದೋಣಿಯಲ್ಲಿ ನೂರು ಪಾದಗಳು ಮತ್ತು ಆರು ಕುದುರೆಗಳುಳ್ಳ ಮೂರು ಹಾರುವ ರಥಗಳಲ್ಲಿ, ತಮ್ಮ ವೇಗಶಾಲಿಗಳಾದ, ಹಾರಿಕೊಂಡು ಹೋಗುವ ಅಶ್ವಗಳ ಸಹಾಯದಿಂದ, ಅಥವಾ ಮನೋವೇಗವುಳ್ಳ ತಮ್ಮ ರಥದಲ್ಲಿ, ಭುಜ್ಯುವನ್ನು ಕುಳ್ಳಿರಿಸಿಕೊಂಡು ಮನೆಗೆ ಸೇರಿಸಿದರು. ಅಲೆಗಳ ಮಧ್ಯದಲ್ಲಿ ಭುಜ್ಯುವು ಒಂದು ಮರದ ತುಂಡನ್ನು ಹಿಡಿದುಕೊಂಡು ತೇಲಾಡುತ್ತಿದ್ದನು. ಇರಿಯಲ್ಪಟ್ಟು, ಕೈಕಾಲು ಕಟ್ಟಿಹಾಕಿ, ದ್ವೇಷಿಗಳಿಂದ ಬಚ್ಚಿಡಲ್ಪಟ್ಟು, ಹತ್ತು ರಾತ್ರಿ ಮತ್ತು ಒಂಭತ್ತು ಹಗಲು ನೀರಿನಲ್ಲಿ ಬಿದ್ದಿದ್ದು, ಮೃತನಂತೆ ಪರಿಗಣಿತನಾಗಿದ್ದ ರೇಭನನ್ನು, ಸೌಟಿನಿಂದ ಸೋಮರಸವನ್ನು ಪಾತ್ರೆಯಿಂದ ಮೇಲೆ ಎತ್ತುವಂತೆ, ಅಶ್ವಿನಿಗಳು ಎತ್ತಿ, ಜೀವದಾನ ಮಾಡಿದರು. ವಂದನನನ್ನು ಅಪಾಯದಿಂದ ಪಾರುಮಾಡಿ, ಅವನನ್ನು ಬೆಳಕಿಗೆ ತಂದರು (೧-೧೧೨-೫ ; ೧-೧೧೬-೧೧ ; ೧-೧೧೭-೫ ; ೧-೧೧೮-೬) ; ಹಳ್ಳವೊಂದರಲ್ಲಿ ಮುಚ್ಚಿಡಲ್ಪಟ್ಟು ಸತ್ತಂತೆ ಬಿದ್ದಿದ್ದವನನ್ನು ಮೇಲಕ್ಕೆ ಎತ್ತಿದರು (೧೦-೩೯-೮) ; ಅಥವಾ ಕುಗ್ಗಿಹೋಗಿದ್ದವನನ್ನು ಪುನರುಜ್ಜೀವನಗೊಳಿಸಿದರು (೧-೧೧೯-೬ ಮತ್ತು ೭). ರಾಕ್ಷಸನೊಬ್ಬನ ಮಾಯೆಯಿಂದ ಚಿತೆಯಲ್ಲಿ ಎಸೆಯಲ್ಪಟ್ಟಿದ್ದ ಅತ್ರಿ ಎಂಬ ಋಷಿಯನ್ನೂ ಅವನ ಜೊತೆಗಾರರನ್ನೂ ರಕ್ಷಿಸಿದರು. ತಂಪಾದ ಮತ್ತು ಚೇತನಗೊಳಿಸುವ ಪಾನೀಯವನ್ನು ಕೊಟ್ಟು, ಉರಿಯಿಂದ ತಪ್ಪಿಸಿ, ಕೊನೆಗೆ ತಾರುಣ್ಯ ಬಲಾದಿಗಳನ್ನನುಗ್ರಹಿಸಿದರು. ಅವನನ್ನು ಕತ್ತಲಿನಿಂದ ಪಾರುಗಾಣಿಸಿದರು ಎಂತಲೂ ಇದೆ. ಅತ್ರಿಯನ್ನು ಬೆಂಕಿಯ ಕಾವಿನಿಂದ, ಅಗ್ನಿಯು ತಪ್ಪಿಸಿದನು (೧೦-೩೦-೩) ಎನ್ನುವಾಗ, ಪ್ರಾಯಶಃ, ಅದು ಅಶ್ವಿನಿಗಳ ಮಧ್ಯಸ್ಥಿಕೆಯಿಂದಲೇ ನಡೆದಿರಬೇಕು. ಅವರ ಸಹಾಯವನ್ನು ಬೇಡಿದ ವರ್ತಿಕಾ ಪಕ್ಷಿಯನ್ನು ತೋಳದಿಂದ ರಕ್ಷಿಸಿದರೆಂದೂ ಹೇಳಿದೆ.

ಋಜ್ರಾಶ್ವನು ಒಂದುನೂರ ಒಂದು ಕುರಿಗಳನ್ನು ಕೊಂದು ಒಂದು ಹೆಣ್ಣು ತೋಳಕ್ಕೆ ಆಹಾರವಾಗಿ ಕೊಟ್ಟನು. ಅವನ ತಂದೆಯು ಕುಪಿತನಾಗಿ, ಅವನನ್ನು ಅಂಧನನ್ನಾಗಿ ಮಾಡಿದನು. ಆಗ ಆ ತೋಳವು ಅಶ್ವಿನಿಗಳನ್ನು ಸ್ತುತಿಸಿತು ಅವರು ತುಷ್ಟರಾಗಿ, ಋಜ್ರಾಶ್ವನಿಗೆ ಕಣ್ಣನ್ನು ಕೊಟ್ಟನು (೧-೧೧೬-೧೬; ೧-೧೧೭-೧೭ಮತ್ತು೧೮). ಪರಾವೃಜನ ಕುರುಡುತನವನ್ನೂ, ಕುಂಟುತನವನ್ನೂ ಹೋಗಲಾಡಿಸಿದರು (೧-೧೧೨-೮) ಯುದ್ಧದಲ್ಲಿ ವಿಶ್ಪಲೆಯ ಕಾಲು ಕತ್ತರಿಸಲ್ಪಟ್ಟಿತು. ಅಶ್ವಿನಿಗಳು ಅವಳಿಗೆ ಒಂದು ಕಬ್ಬಿಣದ ಕಾಲನ್ನು ಕೊಟ್ಟರು. ವಿವಾಹವಿಲ್ಲದೇ ತಂದೆಯ ಮನೆಯಿಲ್ಲೇ ವೃದ್ಧಳಾಗುತ್ತಿದ್ದ ಘೋಷಾ ಎಂಬುವಳಿಗೆ ಪತಿಯನ್ನು ಅನುಗ್ರಹಿಸಿ, ಅವಳಿಗೆ ನೆರವಾದರು (೧-೧೧೭-೭; ೧೦-೩೯-೩ ಮತ್ತು ೬ ; ೧೦-೪೦-೫). ನಪುಂಸಕನೊಬ್ಬನ ಪತ್ನಿಗೆ ಹಿರಣ್ಯಹಸ್ತನೆಂಬ ಪುತ್ರನನ್ನನುಗ್ರಹಿಸಿದರು (೧-೧೧೬-೧೩, ೧-೧೧೭-೨೪; ೬-೬೨-೭, ೧೦-೩೯-೭), ಅವನಿಗೆ ಶ್ಯಾವನೆಂದೂ ಹೆಸರಿದೆ (೧೦-೬೫-೧೨). ಶಯು ಎಂಬುವನ ಗೋವು ಕರು ಹಾಕುತ್ತಿರಲಿಲ್ಲ. ಅಂತಹ ಗೋವು ಹಾಲುಕೊಡುವಂತೆ ಅಶ್ವನೀ ದೇವತೆಗಳು ಮಾಡಿದರು (೧-೧೧೬-೨೨ ; ಇತ್ಯಾದಿ). ಪೇದುವಿಗೆ ವೇಗಶಾಲಿಯಾದ, ಬಲಿಷ್ಠವಾದ, ಬಿಳಿಯ, ಅಸದೃಶವಾದ, ರಾಕ್ಷಸನಾಶಕವಾದ ಮತ್ತು ಇಂದ್ರ ಪ್ರೇರಿತವಾದ ಅಶ್ವವನ್ನನುಗ್ರಹಿಸಿದರು ; ಅದರಿಂದ



CC-0. Jangamwadi Math Collection. Digitized by eGangotri

ಅವನು ಅಪಾರವಾದ ಲಾಭವನ್ನು ಗಳಿಸಿದನು (೧-೧೧೬-೬ ; ಇತ್ಯಾದಿ). ಪಜ್ರ ಎಂಬುದರ ವಂಶೀಯನಾದ ಕಕ್ಷೀವತನಿಗೆ ಯಥೇಚ್ಛವಾಗಿ ವರಗಳನ್ನು ಕೊಟ್ಟು, ನೂರಾರು ಜಾಡಿ ಸುರಾ ಅಥವಾ ಮಧುವನ್ನು ಜರಡಿಯಿಂದ ಸುರಿಯುವಂತೆ, ಅಶ್ವದ ಗೊರಸಿನಿಂದ ಸುರಿಸಿದರು (೧-೧೧೬-೭ ; ೧-೧೧೭-೬). ಮೇಲೆ ಹೇಳಿದವರುಗಳಲ್ಲದೆ. ಇನ್ನೂ ಅನೇಕರು ಅಶ್ವಿನಿಗಳಿಂದ ಉಪಕೃತರೆಂದು ಹೇಳಿದೆ (೧-೧೧೨ ಮತ್ತು ೧೧೬-೧೧೯ ಸೂಕ್ತಗಳು). ಅಸಾಧಾರಣವಾದ ರೀತಿಯಲ್ಲಿ ರಕ್ಷಿಸಲ್ಪಟ್ಟವರು ಅಥವಾ ಗುಣಪಡಿಸಲ್ಪಟ್ಟವರು ಅನೇಕರು ಇರಬಹುದು. ಅಶ್ವಿನೀದೇವತೆಗಳು ದೇವವೈದ್ಯರಾದುದರಿಂದ, ಇವರೆಲ್ಲರೂ ಅವರಿಂದಲೇ ಈ ಸಹಾಯಗಳನ್ನು ಪಡೆದರೆಂದು ಹೇಳಿರಬಹುದು. ಕೆಲವು ಆಧುನಿಕ ವಿದ್ವಾಂಸರು ಹೇಳುವಂತೆ, ಸೂರ್ಯನ ಸಂಬಂಧವಾದ ನಾನಾಕಾರ್ಯಗಳಿಗೆ ಒಬ್ಬ ದೇವತೆಯ ಕಾರ್ಯಗಳೆಂದು ಒಂದು ರೂಪ ಕೊಟ್ಟಿರುವರೇ ಹೊರತು ನಿಜವಾಗಿ ದೇವತಾ ಕಾರ್ಯಗಳೆಲ್ಲವೆನ್ನುವುದೂ ಸರಿಯೆಂದು ತೋರುವುದಿಲ್ಲ.

ಅಶ್ವಿನಿಗಳಿಂದ ಪ್ರಕೃತಿಯ ಯಾವ ಅಂಶ ಪ್ರತಿಬಿಂಬಿಸಲ್ಪಟ್ಟಿದೆ ಎನ್ನುವುದೇ ಅನಿಶ್ಚಿತವಾದ ವಿಷಯ. ಬೆಳಕಿಗೆ ಸಂಬಂಧಪಟ್ಟ ಅಗ್ನಿ, ಉಷಸ್ಸು, ಸೂರ್ಯ ಮೊದಲಾದವರಂತೆ ಸ್ಪಷ್ಟವಾದ ಮತ್ತು ನಿರ್ದಿಷ್ಟವಾದ ಕಾರ್ಯಗಳಾವುವೂ ಇವರಿಗೆ ಹೇಳಿಲ್ಲ. ಯಾಸ್ಕರಂತಹವರಿಗೂ, ಅಶ್ವಿನಿಗಳ ಸ್ವಭಾವ ಸಂದಿಗ್ಧವೇ. ಅವರೂ ಕೂಡ- (ನಿರು- ೧೨-೧). ಕೆಲವರು ಅಶ್ವಿನಿಗಳನ್ನು ಸ್ವರ್ಗ ಮತ್ತು ಭೂಮಿಗಳೆಂದೂ (ಶ. ಬ್ರಾ. ದಲ್ಲಿಯೂ ೪-೧-೫-೧೬ ಇದೇ ಅಭಿಪ್ರಾಯವಿದೆ), ಕೆಲವರು ಹಗಲು ರಾತ್ರಿಗಳೆಂದೂ, ಕೆಲವರು ಸೂರ್ಯ ಚಂದ್ರರೆಂದೂ, ಮತ್ತೆ ಕೆಲವರು ಪವಿತ್ರ ಕಾರ್ಯಗಳನ್ನು ಮಾಡುವ ಇಬ್ಬರು ರಾಜರೆಂದೂ ಹೇಳುತ್ತಾರೆಂದು ನಾನಾ ಅಭಿಪ್ರಾಯಗಳನ್ನು ಮಾತ್ರ ಹೇಳಿ, ತಮ್ಮ ಸ್ವಂತ ಅಭಿಪ್ರಾಯವನ್ನೇ ಕೊಟ್ಟಿಲ್ಲ ಆಧುನಿಕ ವಿದ್ವಾಂಸರು ಒಬ್ಬೊಬ್ಬರು ಒಂದೊಂದು ಅಭಿಪ್ರಾಯವನ್ನು ಎತ್ತಿ ಹಿಡಿದಿದಾರೆ. ಕೆಲವರು ಅಶ್ವಿನೀದೇವತೆಗಳು ಶುಕ್ರ ನಕ್ಷತ್ರಕ್ಕೆ (ಪ್ರಾತಃಕಾಲದ ನಕ್ಷತ್ರ) ಸರಿಹೋಗುತ್ತದೆ ಎಂದು ಹೇಳುತ್ತಾರೆ. ಅದು ಕಾಣಿಸುವಕಾಲ, ಪ್ರಕಾಶ, ಆಕಾಶದ ಸುತ್ತಲೂ ತಿರುಗುವುದು, ಈ ಎಲ್ಲ ವಿಧದಲ್ಲಿಯೂ ಅಶ್ವಿನಿಗಳಿಗೂ ಶುಕ್ರ (Morning Star) ನಕ್ಷತ್ರಕ್ಕೂ ಸರಿಹೋಗುತ್ತದೆ. ಆದರೆ, ಯಮಳರೆಂಬುದು ಮಾತ್ರ ಸರಿ ಬರುವುದಿಲ್ಲ.

ಪ್ರಾತಃಕಾಲದ ನಕ್ಷತ್ರವೂ (ಶುಕ್ರ), ಸಾಯಂಕಾಲದ ನಕ್ಷತ್ರವೂ (ಬುಧ ಅಥವಾ ಗುರು) ಜೋಡಿಯಾಗಬಹುದು; ಆದರೆ ಅವೆರಡೂ ಶಾಶ್ವತವಾಗಿ ಬೇರೆಬೇರೆಯಾಗಿರುವುವು. ಅಶ್ವಿನಿಗಳಾದರೋ ಜೊತೆಯಾಗಿಯೇ ಇರುವವರು. ಆದರೆ, ಋಗ್ವೇದದಲ್ಲಿ, ಅವರಿಬ್ಬರೂ (ಅಶ್ವಿನೀದೇವತೆಗಳು) ಬೇರೆ ಬೇರೆಯಾಗಿದ್ದಾರೆಂಬುದೂ ಬಂದಿದೆ. ವೈದಿಕ ಕರ್ಮಗಳಿಗೆ ಪ್ರಾತಃಕಾಲದಷ್ಟು ಪ್ರಶಸ್ತ ಸಾಯಂಕಾಲವಲ್ಲ (೫-೭೭-೨) ವಾದರೂ, ಅಶ್ವಿನಿಗಳು ಎರಡು ವೇಳೆಗಳಲ್ಲಿ ಕರೆಯಲ್ಪಟ್ಟಿದಾರೆ (೮-೨೨-೧೪ ; ೧೦-೩೯-೧ ; ೧೦-೪೦-೪). ಇವರಿಬ್ಬರು ಸಂಧ್ಯಾಕಾಲ ಮತ್ತು ಶುಕ್ರನೆಂಬ ಮತವು ಬಹಳ ಮಟ್ಟಿಗೆ ಸರಿಯೆಂದು ತೋರುತ್ತದೆ. ಏಕೆಂದರೆ, ಇತರ ಎಲ್ಲಾ ಅಂಶಗಳಲ್ಲಿಯೂ ಅಶ್ವಿನಿಗಳ ಲಕ್ಷಣಸರಿಬೀಳುವುದರಜೊತೆಗೆ, ಅವರು ಅವಳಿ ದೇವತೆಗಳು ಎಂಬುದೂ ಸರಿಹೋಗುತ್ತದೆ.

## ಅಂತರಿಕ್ಷದ ದೇವತೆಗಳು

### ಇಂದ್ರಃ

ಅತಿ ಮುಖ್ಯನಾದ ದೇವತೆ. ೨೫೦ ಸೂಕ್ತಗಳು ಮತ್ತು ಕೆಲವು ಸೂಕ್ತಭಾಗಗಳು ಅವನನ್ನು ಸ್ತುತಿಸುತ್ತವೆ. ಇಂದ್ರನು ಇತರ ಕೆಲವು ದೇವತೆಗಳೊಡನೆಯೂ ಸ್ತುತನಾಗಿದಾನೆ. ಇವೆಲ್ಲವನ್ನೂ ಸೇರಿಸಿದರೆ, ಸುಮಾರು ೩೦೦ ಸೂಕ್ತಗಳೇ ಅವನ ಪರವಾಗಿರುವುವು; ಅಂದರೆ, ಸುಮಾರು ಋಗ್ವೇದದ ಕಾಲು ಭಾಗವೇ ಆದಂತಾಯಿತು. ಪ್ರಕೃತಿಯ ಯಾವುದೊಂದಂಶವನ್ನೂ ಪ್ರತಿಬಿಂಬಿಸುತ್ತಾನೆ ಎಂದು ಖಚಿತವಾಗಿ

ಹೇಳಲಾಗುವುದಿಲ್ಲ. ಈ ಕಾರಣದಿಂದ ಇಂದ್ರನು ಮನುಷ್ಯ ಲಕ್ಷಣಗಳನ್ನೇ ಹೆಚ್ಚಾಗಿ ತೋರ್ಪಡಿಸುತ್ತಾನೆ ಮತ್ತು ಐತಿಹಾಸಿಕ ವರ್ಣನೆಗಳು ಬಹಳವಾಗಿ ಅವನನ್ನು ಆವರಿಸಿವೆ. ಮುಖ್ಯವಾಗಿ ಅವನು ವಿದ್ಯುದ್ದೇವತೆ. ತಮಸ್ಸಿನ ಅಥವಾ ಅನಾವೃಷ್ಟಿಯ ದುರ್ದೇವತೆಗಳನ್ನು ಅಥವಾ ರಾಕ್ಷಸರನ್ನು ಜಯಿಸಿ, ನೀರನ್ನೂ ಅಥವಾ ಬೆಳಕನ್ನು ಗಳಿಸುವುದೇ ಆತನ ಮುಖ್ಯಕಾರ್ಯ.

ಮಧ್ಯಲೋಕದ ದೇವತೆಗಳಲ್ಲಿ ಅತಿ ಮುಖ್ಯ. ವಾಯುಮಂಡಲವನ್ನು ವ್ಯಾಪಿಸಿದ್ದಾನೆ (೧-೫೧-೨). ನಿರುಕ್ತದಲ್ಲಿ, ವಾಯುಮಂಡಲ ದೇವತೆಗಳ ಪಟ್ಟಿಯಲ್ಲಿ ಪ್ರತ್ಯೇಕವಾಗಿ ಉಕ್ತವಾಗಿದೆ (ನಿರು. ೫-೪) ಮತ್ತು ಅಗ್ನಿ, ಇಂದ್ರ (ವಾಯು) ಸೂರ್ಯರೆಂಬ ದೇವತಾತ್ರಯದಲ್ಲಿ ಇವನೇ ವಾಯುವಿನ ಪ್ರತಿನಿಧಿಯು.

ಇಂದ್ರನ ದೇಹದ ನಾನಾ ಭಾಗಗಳು ವೇದದಲ್ಲಿ ಉಕ್ತವಾಗಿವೆ. ಅವನಿಗೊಂದುದೇಹ, ತಲೆ, ತೋಳುಗಳು, ಕೈಗಳು ಇವೆ (೨-೧೬-೨ ; ೮-೮೫-೩). ಅವನ ಸೋಮಪಾನದ ವಿಷಯ ಬಂದಾಗಲೆಲ್ಲಾ ಅವನ ಉದರವು ಹೇಳಲ್ಪಟ್ಟಿದೆ (೨-೧೬-೨ ಇತ್ಯಾದಿ). ಸೋಮದಿಂದ ತುಂಬಿರುವಾಗ ಅವನ ಉದರವು ಸರೋವರಕ್ಕೆ ಹೋಲಿಸಲ್ಪಟ್ಟಿದೆ (೩-೩೬-೮). ಅವನ ತುಟಿಗಳು, ಸುಂದರವಾದ ತುಟಿಗಳೆಂದು ವರ್ಣಿತವಾಗಿವೆ. ಸೋಮಪಾನ ಮಾಡಿದ ಮೇಲೆ ತನ್ನ ದವಡೆಗಳನ್ನು ಆಡಿಸುತ್ತಾನೆ (೮-೬೫-೧೦). ಅವನಿಗೆ ಬಹಳ ಸಂತೋಷವಾದಾಗ ಅಥವಾ ಅವನು ಚಲಿಸುವಾಗ, ಅವನ ದಾಡಿಯು ಜೋರಾಗಿ ಆಡುತ್ತದೆ (೨-೧೧-೧೭ ; ೧೦-೨೩-೧). ಅವನ ಕೇಶವು (೧೦-೯೬.೫ ಮತ್ತು ೮) ಮತ್ತು ದಾಡಿಯು ಕಂದುಬಣ್ಣ. ಅವನ ರೂಪವೇ ಕಂದುಬಣ್ಣ (೧೦-೯೬). ಕೆಲವು ಸಲ ಸುವರ್ಣ ವರ್ಣವೆಂದೂ (೧-೭-೨ ; ೮-೫೫-೩) ಇದೆ. ಈ ಸುವರ್ಣವರ್ಣ ಸವಿತೃವಿನ ವಿಶೇಷಲಕ್ಷಣ. ಇಂದ್ರನು ಸವಿತೃವಿನಂತೆ ಸುವರ್ಣಬಾಹು (೭-೩೪-೪); ಅವನಹಾಗೇ ಕಬ್ಬಿಣದಂತೆ ಗಟ್ಟಿಯಾದ ಬಾಹುಗಳು (೧-೫೬-೩ ; ೧೦-೯೬-೪ ಮತ್ತು ೮). ವಿಶೇಷವಾಗಿ ವಜ್ರವನ್ನು ಪ್ರಯೋಗಿಸುತ್ತಿರುವ ಅವನ ಬಾಹುಗಳು ಮೇಲೆ ಮೇಲೆ ಪ್ರಸ್ತಾಪಿಸಲ್ಪಟ್ಟಿವೆ. ಅವು ಬಹಳ ಉದ್ದ, ದೂರ ಚಾಚಲ್ಪಟ್ಟಿವೆ. ದೊಡ್ಡವು (೬-೧೯-೩ ; ೮-೩೨-೧೦ ; ೮-೭೦-೧) ಬಲವಾಗಿವೆ ಮತ್ತು ಒಳ್ಳೆಯ ಆಕಾರವುಳ್ಳವು (ಸಾ. ವೇ. ೨-೧೨೧೯). ಇಂದ್ರನು ಬಹಳ ಸುಂದರವಾದ ಸೂರ್ಯನಂತೆ ಕೆಂಪುಛಾಯೆಯುಳ್ಳ ಮತ್ತು ಶುಭ್ರವಾದ ರೂಪಗಳನ್ನು ಸ್ವೀಕರಿಸುತ್ತಾನೆ (೧೦-೧೧೨-೩); ತನ್ನ ಇಚ್ಛೆಬಂದಂತೆ ನಾನಾ ರೂಪಧಾರಿಯಾಗುತ್ತಾನೆ (೩-೪೮-೪ ; ೩-೫೩-೮ ; ೬-೪೭-೧೮).

ವಜ್ರಾಯುಧವು ಇಂದ್ರನಿಗೆ ಮಾತ್ರ ಸಂಹೋಗುವ ಆಯುಧ. ಸಿಡಿಲಿಗೆ ಇತಿಹಾಸದಲ್ಲಿ ಈ ಹೆಸರು ಬಂದಿದೆ. ಸಾಧಾರಣವಾಗಿ ತ್ವಷ್ಟೃವೇ ಇದಕ್ಕೆ ರೂಪಗೊಟ್ಟವನು (೧-೩೨-೨ ಇತ್ಯಾದಿ); ಆದರೆ ಕಾವ್ಯ ಉಶನಾ ಎಂಬುವನು ಅದನ್ನು ಮಾಡಿ, ಇಂದ್ರನಿಗೆ ಕೊಟ್ಟನು ಎಂತಲೂ ಇದೆ (೧-೧೨೧-೧೨ ; ೫-೩೪-೨). ಇಂದ್ರನಿಗೆ ವಜ್ರಾಯುಧವನ್ನು ಒದಗಿಸಿದವರು ದೇವತೆಗಳು (ಐ. ಬ್ರಾ. ೪-೧). ಸಮುದ್ರದಲ್ಲಿ ನೀರಿನಿಂದಾವೃತವಾಗಿ ವಜ್ರಾಯುಧವು ಬಿದ್ದಿದೆ (೮-೮೯-೯). ಸೂರ್ಯನ ಕೆಳಗಡೆ ಅದರ ಸ್ಥಾನ (೧೦-೨೭-೨೧). ಸಾಧಾರಣವಾಗಿ ಕಬ್ಬಿಣದಿಂದ ಮಾಡಿದ್ದು ಅಥವಾ ಲೋಹಗಳಿಂದ (೧-೫೨-೮) ಎಂದು ಹೇಳಿದೆ. ಒಂದೊಂದು ಸಲ ಬಂಗಾರದ ಬಣ್ಣವುಳ್ಳದ್ದು (೧-೫೭-೨ ಇತ್ಯಾದಿ) ; ಕಂದುಬಣ್ಣದ್ದು (೩-೪೪-೪ ; ೧೦-೯೬-೩) ; ಅಥವಾ ಶುದ್ಧ ಶ್ವೇತ ವರ್ಣದ್ದು (೩-೪೪-೫). ಅದಕ್ಕೆ ನಾಲ್ಕು ಮೂಲೆಗಳು (೪-೨೨-೨), ನೂರು ಮೂಲೆಗಳು (೪-೧೭-೧೦), ನೂರು ಕೀಲುಗಳು (೮-೬-೬; ಇತ್ಯಾದಿ). ಮತ್ತು ಸಾವಿರ ಮೊನೆಗಳು (೧೦-೮೦-೧೨ ; ಇತ್ಯಾದಿ). ಅದು ಹರಿತವಾಗಿದೆ (೭-೧೮-೧೮ ; ಇತ್ಯಾದಿ) ಇಂದ್ರನು ಅದನ್ನು ಚಾಕುವಿನಂತೆ ಅಥವಾ ಎತ್ತು ತನ್ನ ಕೊಂಬುಗಳನ್ನು ಉಜ್ಜುವಂತೆ ಉಜ್ಜುತ್ತಾನೆ (೧-೧೩೦-೪; ೧-೫೫-೧). ಅದಕ್ಕೆ ಕಲ್ಲು ಅಥವಾ ಪರ್ವತ ಎಂತಲೂ ಹೆಸರಿದೆ (೭-೧೦೪-೧೯)



CC-0. Jangamwadi Math Collection. Digitized by eGangotri

ಇಂದ್ರನ ಕೈಯಲ್ಲಿರುವ ವಜ್ರವನ್ನು ಆಕಾಶದಲ್ಲಿರುವ ಸೂರ್ಯನಿಗೆ ಹೋಲಿಸಿದೆ (೮-೫೯-೨). ವಜ್ರ ಎಂಬ ಶಬ್ದದಿಂದ ನಿಷ್ಪನ್ನವಾದ, ಅಥವಾ ಅದರೊಡನೆ ಸಮಾಸವಾಗಿರುವ ಪದಗಳು ಸಾಧಾರಣವಾಗಿ ಇಂದ್ರನಿಗೇ ಉಪಯೋಗಿಸಲ್ಪಟ್ಟಿವೆ. ವಜ್ರಭೃತ್, ವಜ್ರಿವತ್, ವಜ್ರದಕ್ಷಿಣ ಇವುಗಳು ಅವನಿಗೆ ಸಂದಿವೆ; ಆದರೆ ವಜ್ರಬಾಹು, ವಜ್ರ-ಹಸ್ತ, ವಜ್ರೀ, ಇವುಗಳು ರುದ್ರ, ಮರುತ್ತುಗಳು ಮತ್ತು ಮನ್ಯು ಇವರುಗಳಿಗೂ ಒಂದೊಂದು ಸಲ ಪ್ರಯುಕ್ತವಾಗಿವೆ.

ಇಂದ್ರನು ಚಿನ್ನದ ರಥದಲ್ಲಿ ಕುಳಿತು ಬರುತ್ತಾನೆ (೬.೨೯-೨; ಇತ್ಯಾದಿ) ಮತ್ತು ಅದು ಮನಸ್ಸಿಗಿಂತಲೂ ವೇಗವುಳ್ಳದ್ದು (೧೦-೧೧೨-೨). ಅದಕ್ಕೆ ಕಂದುಬಣ್ಣದ ಎರಡು ಕುದುರೆಗಳು ಕಟ್ಟಿವೆ. ' ಹರೀ ' ಎಂತಲೇ ಅವುಗಳಿಗೆ ಹೆಸರು. ಕೆಲವು ಮಂತ್ರಗಳಲ್ಲಿ ಕುದುರೆಗಳ ಸಂಖ್ಯೆ ಎರಡಕ್ಕಿಂತ ಹೆಚ್ಚು, ನೂರು, ಸಾವಿರ ಅಥವಾ ಸಾವಿರದನೂರರವರೆಗೂ ಹೇಳಿದೆ (೨-೧೮-೪ ರಿಂದ ೭; ೪-೪೬-೩; ೬-೪೭-೧೮; ೮-೧-೯ ಮತ್ತು ೨೪). ಈ ಕುದುರೆಗಳಿಗೆ ಸೂರ್ಯನೇ ಕಣ್ಣು (೧-೧೬-೧ ಮತ್ತು ೨). ಅವು ಘೂಂಕರಿಸುತ್ತವೆ ಮತ್ತು ಕೆನೆಯುತ್ತವೆ (೧-೩೦-೧೬). ಅವಕ್ಕೆ ಹಾರಾಡುತ್ತಿರುವ ಕೇಸರವಿದೆ (೧-೧೦-೩; ಇತ್ಯಾದಿ), ಅಥವಾ ಬಂಗಾರದ ಬಣ್ಣದ ಕೂದಲು (೮-೩೨-೨೯; ೮-೮೨-೨೪). ಅವುಗಳ ಕೂದಲು ನವಿಲಿನ ಪುಕ್ಕಗಳಂತೆ ಇದೆ (೩-೪೫-೧; ೮-೧-೨೫). ಅವು ಸೇರಬೇಕಾದ ಸ್ಥಳವು ಎಷ್ಟೇ ದೂರವಿದ್ದರೂ ಬಹಳ ಶೀಘ್ರವಾಗಿ ಹೋಗಿ ಸೇರುತ್ತವೆ. ಹದ್ದು ರೆಕ್ಕೆಗಳ ಸಹಾಯದಿಂದ ಹಾರಿಹೋಗುವಂತೆ, ಇಂದ್ರನು ಈ ಅಶ್ವಗಳ ಸಹಾಯದಿಂದ ಸಂಚರಿಸುತ್ತಾನೆ (೨-೧೭-೩; ೮-೩೪-೯). ಸ್ತುತಿಗಳೇ ಅಶ್ವಗಳನ್ನು ರಥಕ್ಕೆ ಹೂಡುತ್ತವೆ (೨-೧೮-೩; ಇತ್ಯಾದಿ) ಅಂದರೆ, ಸ್ತುತಿಗಳು ಇಂದ್ರನನ್ನು ಯಾಗಶಾಲೆಗೆ ಕರೆತರುತ್ತವೆ. ಇಂದ್ರನನ್ನು ಸೂರ್ಯಾಶ್ವಗಳು (೧೦-೪೯-೭) ಅಥವಾ ವಾಯುವಿನ ಅಶ್ವಗಳು (೧೦-೨೨-೪ ರಿಂದ -೬) ಒಯ್ಯುತ್ತವೆ ಎಂದು ಕೆಲವು ಕಡೆ ಇದೆ. ಇಂದ್ರನು ವಾಯುವಿನ ಸಾರಥಿ (೪-೪೬-
೨; ೪-೪೮-೨) ಅಥವಾ ಸಹರಥಿಕ (೭-೯೧-೬). ಋಭುಗಳು ಇಂದ್ರನ ರಥ ಮತ್ತು ಕುದುರೆಗಳನ್ನು ರಚಿಸಿದರು ಇಂದ್ರನು ಚಿನ್ನದ ಚಾಟಿಯನ್ನು ಉಪಯೋಗಿಸುತ್ತಾನೆ (೮-೩೩-೧೧).
(೧-೧೧೧-೧; ೫-೩೧-೪).

ದೇವತೆಗಳಿಗೆಲ್ಲಾ ಸೋಮಪಾನವು ಬಹಳ ಇಷ್ಟ (೮-೨-೧೮; ೮-೫೮-೧೧); ಆದರೆ ಇಂದ್ರನಿಗೆ ಎಲ್ಲರಿಗಿಂತ ಹೆಚ್ಚಾಗಿ ಇಷ್ಟ (೧-೧೦೪-೯ ಇತ್ಯಾದಿ). ಪಾನಮಾಡುವುದಕ್ಕೋಸ್ಕರ ಅದನ್ನು ಅವನು ಕದ್ದನು (೩-೪೮-೪; ೮-೪-೪). ದೇವಮಾನವರಲ್ಲಿ ಅವನೊಬ್ಬನೇ ಸೋಮಪಾನ ಮಾಡುವವನು (೮-೨-೪); ಅವನ ಜೊತೆಗಾರನಾದ ವಾಯುವು ಅವನಿಗೆ ಸ್ವಲ್ಪಮಟ್ಟಿಗೆ ಸಮಾನನು. ಸೋಮರಸವು ಇಂದ್ರನಿಗೆ ಪುಷ್ಟಿಕರ (೮-೪-೧೨). ಸೋಮಪಾ, ಸೋಮಪಾವನ್ ಇತ್ಯಾದಿ ವಿಶೇಷಣಗಳು ಅವನಿಗೆ ಮಾತ್ರ ತಕ್ಕವು. ಅಗ್ನಿ, ಬೃಹಸ್ಪತಿ ಮತ್ತು ವಾಯುಗಳಿಗೆ ಇಂದ್ರನ ಜೊತೆಯಲ್ಲಿರುವಾಗಲೂ, ವಾಯುವಿಗೊಬ್ಬನಿಗೆ ಮಾತ್ರ ಒಂದೇ ಒಂದು ಸಲ ಪ್ರತ್ಯೇಕವಾಗಿಯೂ ಉಪಯೋಗಿಸಲ್ಪಟ್ಟಿದೆ.

ಭೂಮ್ಯಾಕಾಶಗಳಿಗೆ ಆಧಾರನಾಗುವುದು ಅಥವಾ ಭೂಮಿಯನ್ನು ಹರಡುವುದು ಮೊದಲಾದ ವಿಶ್ವದ ಕಾರ್ಯಗಳನ್ನು ಮಾಡಲು, ಸೋಮವು ಸಹಾಯಕವಾಗುವುದಂತೆ (೨-೧೫-೨). ವಿಶೇಷವಾಗಿ, ಅವನ ರಾಕ್ಷಸ ಮತ್ತು ವೃತ್ರವಧಾದಿ ಯುದ್ಧಕಾರ್ಯಗಳನ್ನು ಮಾಡಲು ಸಹಾಯಕ (೨.೧೫-೧; ೨-೧೯-೨; ೬-೪೭-೧-ಮತ್ತು-೨) ಅಥವಾ ಶತ್ರುಜಯರೂಪ ಕಾರ್ಯಕ್ಕೆ ನೆರವು (೬-೨೭; ೭-೨೨-೨; ೮-೮೧-೬). ಅವನ ತಾಯಿಯೇ ಅವನಿಗೆ ಅದನ್ನು ಕುಡಿಯಲು ಕೊಟ್ಟಳು ಅಥವಾ, ಅವನು ಜನಿಸಿದ ದಿನವೇ ಸೋಮಪಾನಮಾಡಿದನೆಂದಮೇಲೆ ಅದು ಅವನಿಗೆ ಎಷ್ಟು ಅವಶ್ಯಕವೆಂಬುದನ್ನು ಊಹಿಸಬಹುದು (೩-೪೮-೨ಮತ್ತು ೩; ೩-೩೨-೯ಮತ್ತು೧೦; ೬-೪೦-೨;



CC-0. Jangamwadi Math Collection. Digitized by eGangotri

೭-೯೮-೩) ವೃತ್ರವಧೆಗೆ ಸಿದ್ಧನಾಗುವಾಗ ಮೂರು ಸರೋವರದಷ್ಟು ಸೋಮಪಾನ ಮಾಡಿದನು (೫-೨೯-೭); ಮೂವತ್ತು ಸರೋವರಗಳಷ್ಟು ಪಾನೀಯವನ್ನು ಒಂದೇ ಗುಟುಕಿಗೆ ಪಾನಮಾಡಿದನು (೮-೬೬-೪) ಸೋಮ ಪಾನ ಮಾಡಿದ ಮೇಲೆ ಆಗುವ ಅನುಭವಗಳನ್ನು ಇಂದ್ರನು ಒಂದು ಇಡೀ ಸೂಕ್ತ (೧೦-೧೧೯)ದಲ್ಲಿ ವರ್ಣಿಸು ತ್ತಾನೆ. ಅತಿಯಾಗಿ ಮಾದಕ ಪದಾರ್ಥಗಳನ್ನು ಪಾನಮಾಡಿದರೆ ಮನುಷ್ಯರಿಗೆ ರೋಗ ಬರುವಂತೆ, ಇಂದ್ರನಿಗೆ ಅತಿಯಾದ ಸೋಮಪಾನದಿಂದಾದ ಜಾಡ್ಯವನ್ನು ಸೌತ್ರಾಮಣಿ ಯಾಗದಿಂದ ದೇವತೆಗಳು ಗುಣಪಡಿಸಬೇಕಾ ಯಿತು. ಮಧುಮಿಶ್ರಿತವಾದ ಕ್ಷೀರವೂ ಅವನ ಪಾನೀಯ (೮-೪-೮)

ಎತ್ತುಗಳ ಮಾಂಸವನ್ನೂ ತಿನ್ನುತ್ತಾನೆ (೧೦-೨೮-೩). ಒಂದು (೧೦-೨೭-೨), ಇಪ್ಪತ್ತು (೧೦-೮೬-೧೪), ನೂರು (೬-೧೭-೧೧ ; ೮-೬೬-೧೦), ಅಥವಾ ಮುನ್ನೂರು (೫-೨೯-೭) ಎಮ್ಮೆಗಳ ಅಗ್ನಿಯಿಂದ ಸುಡಲ್ಪಟ್ಟ ಮಾಂಸವನ್ನು ಭಕ್ಷಿಸುತ್ತಾನೆ. ಯಾಗದಲ್ಲಿ ಹೋಮ ಮಾಡಲ್ಪಟ್ಟ ರೊಟ್ಟಿಯನ್ನು (೩-೫೨-೭ ಮತ್ತು ೮), ಧಾನ್ಯವನ್ನು (೩-೩೫-೩ : ೩-೪೩-೪ ; ೧-೧೬-೨) ಸ್ವೀಕರಿಸುತ್ತಾನೆ. ಈ ಧಾನ್ಯವನ್ನು ಅವನ ಅಶ್ವಗಳೂ ತಿನ್ನುತ್ತವೆ (೩-೩೫-೭ ; ೩-೫೨-೭).

ಅನೇಕ ಬಾರಿ ಇಂದ್ರನು ಜನ್ಮತಾಳಿದನೆಂದು ಹೇಳಿದೆ. ಎರಡು ಸೂಕ್ತಗಳು (೩-೪೮ ; ೪-೧೮) ಅವನ ಜನನದ ವಿಷಯವನ್ನು ಪ್ರಸ್ತಾಪಿಸಿವೆ. ಪ್ರಕೃತಿವಿರುದ್ಧವಾಗಿ, ತನ್ನ ತಾಯಿಯ ಪಾರ್ಶ್ವದಿಂದ, ಜನಿಸ ಬೇಕೆಂದು ಇಚ್ಛಿಸಿದನಂತೆ (೪-೧೮-೧ ಮತ್ತು ೨). ಪ್ರಾಯಶಃ ಮೇಘಪಾರ್ಶ್ವದಿಂದ ಸಿಡಿಲು ಹೊರಡುತ್ತದೆ ಎಂಬುವುದರಿಂದ ಈ ವಿಷಯ ಪ್ರಸಕ್ತವಾಗಿರಬೇಕು ಜನಿಸಿ, ಆಕಾಶವನ್ನು ಬೆಳಗುತ್ತಾನೆ (೩ ೪೪-೪) ಹುಟ್ಟಿದ ಕ್ಷಣವೇ, ಸೂರ್ಯನ ಚಕ್ರವನ್ನು ಚಲಿಸುವಂತೆ ಮಾಡಿದನು (೧-೧೩೦-೯). ಅವನು ಹುಟ್ಟಿದ ಕೂಡಲೇ ಯೋಧನಾದನು (೩-೫೧-೮ ; ೫.೩೦-೫ ; ೮-೪೫-೪; ೮-೬೬-೧ ; ೧೦-೧೧೩-೪) ಮತ್ತು ಜನ್ಮಾರಭ್ಯ ಅಪ್ರತಿಹತನು (೧-೧೦೨-೮; ೧೦-೧೩೩-೨). ಅವನು ಹುಟ್ಟಿದ ಕೂಡಲೇ, ಅವನ ಭಯಕ್ಕೆ, ಅಚಲವಾದ ಪರ್ವತ ಗಳು, ಸ್ವರ್ಗ, ಮತ್ತು ಭೂಮಿಗಳು ಕಂಪಿಸಿದವು (೧-೬೧-೧೪). ಜನನ ಕಾಲದಲ್ಲಿ ಅವನ ಕೋಪದ ಭಯ ದಿಂದ ಸ್ವರ್ಗ ಮತ್ತು ಭೂಮಿಗಳು ನಡುಗಿದವು (೪-೧೭-೨) ಮತ್ತು ದೇವತೆಗಳೆಲ್ಲಾ ಅವನಿಗೆ ಹೆದರಿಕೊಂಡರು (೫-೩೦-೫). ಅವನ ತಾಯಿಯ ಹೆಸರು ಬಹಳ ಸಲ ಬಂದಿದೆ (೩-೪೮-೨ ಮತ್ತು ೩ ; ಇತ್ಯಾದಿ). ಒಂದು ಸಲ (೪-೧೮-೧೦) ಅವಳು ಗೋವು, ಅವನು ಅದರ ಕರು ; ಗೋವಿನಿಂದ ಜನಿಸಿದ (ಗಾಷ್ಟೇಯ) ವೃಷಭನೆಂ ದೊಂದು ಕಡೆ (೧೦-೧೧೧-೨) ಒಂದು ಕಡೆ ನಿಷ್ಟಿಗ್ರಿಯ ಮಗ (೧೦-೧೦೧-೧೨). ನಿಷ್ಟಿಗ್ರಿಯು ಅದಿತಿಯೆಂದು ಸಾಯಣರ ಮತ. ಇಂದ್ರ (ಮತ್ತು ಅಗ್ನಿಯ)ನ ತಾಯಿ 'ಏಕಾಷ್ಟಕಾ' ಎಂಬ ಪ್ರಜಾಪತಿಯ ಪುತ್ರಿ (ಅ. ವೇ. ೩-೧೦-೧೨ ಮತ್ತು ೧೩). ಅಗ್ನಿಗೆ ದ್ಯಾವಾಪೃಥಿವಿಗಳು (೬-೫೯-೨) ಜನಕ ಜನನಿಯರು; ಇಂದ್ರನಿಗೂ ಅವರೇ. (೪-೧೭-೪)ನೆಯ ಮಂತ್ರದಲ್ಲೂ, ಒಂದು ವ್ಯಾಖ್ಯಾನದ ಪ್ರಕಾರ, ಆಕಾಶವೇ ಇಂದ್ರನ ಜನಕ. (೧೦-೧೨೦-೧ ; ೬-೩೦-೫ ; ೮-೩೬-೪ ; ೧೦-೫೪-೩ ; ೧೦-೧೩೮-೬ ; ೧-೧೬೪-೧೧) ಇವುಗಳಲ್ಲೂ ಇದೇ ಅಭಿಪ್ರಾಯ ಬರುತ್ತದೆ. ವಜ್ರವನ್ನು ಮಾಡಿಕೊಟ್ಟ ತ್ವಷ್ಟೃವೇ ಅವನ ತಂದೆಯೆಂದೂ (೨-೧೭-೬) ಇದೆ. ಇಂದ್ರನು, ತಂದೆಯ ಮನೆಯಲ್ಲಿ, ತಾಯಿಯು ಕೊಟ್ಟ ಸೋಮವನ್ನು ಪಾನಮಾಡಿದನು (೩-೪೮-೨) ಇಂದ್ರನು ತ್ವಷ್ಟೃವಿನ ಮನೆಯಲ್ಲಿ ಸೋಮಪಾನ ಮಾಡಿದನು (೪-೧೮-೩). ಜನಿಸಿದ ಕೂಡಲೇ ತ್ವಷ್ಟೃವನ್ನು ಸೋಲಿಸಿ, ಸೋಮವನ್ನು ಕದ್ದು, ಬಟ್ಟಲುಗಳಲ್ಲಿ ಕುಡಿದನು (೩-೪೮-೪). ಇಂದ್ರನು, ತಂದೆಯನ್ನು ಕಾಲಹಿಡಿದೆತ್ತಿ ನೆಲಕ್ಕೆ ಬಡಿದನು. ಅದೇ ಪದ್ಯದಲ್ಲಿ, ತಾಯಿಯನ್ನು ವಿಧವೆಯಾಗಿ ಮಾಡಿದವರು ಯಾರೆಂದು ಪ್ರಶ್ನೆಯೂ ಇದೆ (೪-೧೮-೧೨). ಈ ವಾಕ್ಯಗಳಿಂದ, ಸೋಮವನ್ನು ಪಡೆಯುವುದಕ್ಕೋಸ್ಕರ, ಇಂದ್ರನು ವಧಿಸಿದ ಅವನ



CC-0. Jangamwadi Math Collection. Digitized by eGangotri

ಶಂಡೆ ತ್ವಷ್ಟೃವೆಂದು ತಿಳಿದುಬರುತ್ತದೆ (೧-೮೦-೧೪) ದೇವತೆಗಳೆಲ್ಲರೂ ಅವನ ಮೇಲೆ ಯುದ್ಧಮಾಡಿದರೆಂಬುದು, (೪-೩೦-೩) ಸೋಮವನ್ನು ಬಲಾತ್ಕಾರವಾಗಿ ಪಡೆಯುವ ಈ ಸಂದರ್ಭದಲ್ಲೇ ಇರಬೇಕು.

ಇಂದ್ರನ ಜನ್ಮದ ವಿಷಯದಲ್ಲಿ ಕೆಲವು ಬೇರೆಬೇರೆ ಹೇಳಿಕೆಗಳಿವೆ. ದೇವತೆಗಳು ದುಷ್ಟರನ್ನು ನಾಶ ಮಾಡುವವನೆಂದು ಉತ್ಪತ್ತಿಮಾಡಿದರು (೩-೪೯-೧); ಆದರೆ ಇಲ್ಲಿ 'ಜನ್' ಧಾತುವು 'ನೇಮಿಸು' ಎನ್ನುವ ಅರ್ಥದಲ್ಲಿ ಉಪಯೋಗಿಸಿರುವಂತೆ ತೋರುತ್ತದೆ (೨-೧೩-೫ ; ೩-೫೧-೮ಗಳನ್ನು ಹೋಲಿಸಿ). ಸೋಮವು ಇಂದ್ರ ಮತ್ತು ಕೆಲವು ದೇವತೆಗಳನ್ನು ಸೃಜಿಸಿತು (೯-೯೬-೫). ಪುರುಷಸೂಕ್ತದಲ್ಲಿ, ಇಂದ್ರಾಗ್ನಿಗಳು ವಿರಾಟ್ಪುರುಷನ ಬಾಯಿಯಿಂದ ಜನಿಸಿದರೆಂದು ಇದೆ (೧೦-೯೦-೧೩) ಇಂದ್ರ, ಅಗ್ನಿ, ಸೋಮ, ಪರಮೇಷ್ಠಿಗಳು ಪ್ರಜಾಪತಿಯಿಂದ ಸೃಜಿತರೆಂದು ಹೇಳಿದೆ (ಶ. ಬ್ರಾ. ೧೧-೧-೬-೧೪). ಪ್ರಜಾಪತಿಯು ಎಲ್ಲ ದೇವತೆಗಳಿಗಿಂತ ಕಡೆಯಲ್ಲಿ ಇಂದ್ರನನ್ನು ಸೃಜಿಸಿದನು. (ತೈ. ಬ್ರಾ. ೨-೨-೧೦-೧)

ಅಗ್ನಿಯು ಇಂದ್ರನ ಅವಳಿಸೋದರನು (೬-೫೯-೨) ಮತ್ತು ಪೂಷಣನೂ ಅವನ ಸೋದರನು. ಇಂದ್ರನ ಭ್ರಾತೃವಿನ ಪುತ್ರರೆಂದು ಒಂದು ಕಡೆ (೧೦-೫೫-೧) ಇದೆ; ಆದರೆ ಅವರು ಯಾರೆಂಬುದು ಸ್ಪಷ್ಟವಾಗಿಲ್ಲ

ಇಂದ್ರನ ಹೆಂಡತಿಯ ಹೆಸರು ಅನೇಕ ಸಲ ಬಂದಿದೆ (೧-೮೨-೫, ೬ ; ೩-೫೩-೪, ೬ ; ೧೦-೮೬-೯, ೧೦) ಅವಳಿಗೆ ಇಂದ್ರಾಣಿಯೆಂದು ಹೆಸರು (೧೦-೮೬-೧೧, ೧೨); ಇನ್ನೂ ಕೆಲವು ಮಂತ್ರಗಳಲ್ಲಿ ಇತರ ದೇವತಾ ಸ್ತ್ರೀಯರ ಜೊತೆಯಲ್ಲಿಯೂ ಈ ಹೆಸರು ಬಂದಿದೆ. (೧-೨೨-೧೨ ; ೨-೩೨-೮ ; ೫-೪೬-೮) ಇಂದ್ರಾಣಿಯು ಇಂದ್ರನ ಪತ್ನಿ (ಶ. ಬ್ರಾ. ೧೪-೨-೧-೮) ಪ್ರಭಾ ಮತ್ತು ಸೇನೆಯರು ಅವನ ಪತ್ನಿಯರು. (ಐ. ಬ್ರಾ. ೩-೨೨-೭) ಇವೆರಡೂ ಇಂದ್ರಾಣಿಯ ಹೆಸರುಗಳು. ( ತೈ. ಬ್ರಾ. ೨-೪-೨-೭,೮ ; ಮೈ. ಸಂ. ೩-೮-೪ ; ೪-೧೨-೧) ಶಚಿ ಎಂಬುದೇ ಅವಳ ಸರಿಯಾದ ನಾಮಧೇಯ (ವಾ. ಸಂ. ೨-೫೨) ಒಬ್ಬ ಅಸುರಸ್ತ್ರೀಯು ಇಂದ್ರನನ್ನು ದೇವತೆಗಳ ಮಧ್ಯದಿಂದ ಕೆಳಕ್ಕೆ ಎಳೆದಳು (ಅ. ವೇ. ೭-೩೮-೨) ವಿಲಿಷ್ಟೆಂಗಾ ಎಂಬ ಒಬ್ಬ ದಾನವಸ್ತ್ರೀಯನ್ನು ಮೋಹಿಸಿ ಇಂದ್ರನು ಹೆಂಗಸರ ಗುಂಪಿನಲ್ಲಿ ಹೆಂಗಸಿನಂತೆಯೂ, ಗಂಡಸರ ಮಧ್ಯದಲ್ಲಿ ಗಂಡಸಿನಂತೆಯೂ, ಕಾಣಿಸಿಕೊಳ್ಳುತ್ತಾ ಅಸುರಲೋಕದಲ್ಲಿ ವಾಸಿಸಿದನು. (ಕಾಠಕ)

ಇಂದ್ರನು ಅನೇಕ ದೇವತೆಗಳೊಡನೆ ಕಲೆಯುವುದು ಕಂಡು ಬರುತ್ತದೆ. ಅವನಿಗೆ ಬಹಳ ಮುಖ್ಯ ಸ್ನೇಹಿತರು, ಮಿತ್ರರು ಮತ್ತು ಮರುದ್ದೇವತೆಗಳು. ಅವರು ಅವನಿಗೆ ಅನೇಕ ಯುದ್ಧಗಳಲ್ಲಿ ನೆರವಾಗಿದ್ದಾರೆ. ಮರುತ್ವಾನ್ ಎಂಬ ವಿಶೇಷಣವು. ಇತರ ದೇವತೆಗಳಿಗೆ ಅನ್ವಯಿಸಿದರೂ, ಹಾಗೆ ಕರೆಯಲ್ಪಡುವುದು ಇಂದ್ರನ ವಿಶೇಷವಾದ ಹಕ್ಕು. ಇದರಂತೆಯೇ ಮರುದ್ಗಣದಿಂದ ಅನುಸೃತ ಎನ್ನುವುದೂ ಕೂಡ. (೫-೪೨-೬ ; ೯-೬೫-೧೦). ವಿದ್ಯುತ್ತೂ ಅಗ್ನಿಯು ಒಂದುರೂಪವಾದುದರಿಂದ, ಇಂದ್ರಾಗ್ನಿಗಳ ನಿಕಟವಾದ ಸಂಬಂಧ ಸಹಜವಾದುದು. ಇಂದ್ರನು ಎರಡು ಶಿಲೆಗಳ ಮಧ್ಯೆ ಅಗ್ನಿಯನ್ನು ಉತ್ಪತ್ತಿ ಮಾಡಿದನು. (೨-೧೨-೩) ಅಥವಾ ನೀರಿನಲ್ಲಿ ಮುಚ್ಚಿಡಲ್ಪಟ್ಟಿದ್ದ ಅಗ್ನಿಯನ್ನು ಕಂಡುಹಿಡಿದನು (೧೦-೩೨-೬) ವರುಣ ಮತ್ತು ವಾಯುಗಳೊಡನೆ ತಕ್ಕಮಟ್ಟಿಗೂ, ಒಂದೊಂದು ಸಲ ಸೋಮ ಬೃಹಸ್ಪತಿ, ಪೂಷಣ. ಮತ್ತು ವಿಷ್ಣುಗಳೊಡನೆಯೂ ಸೇರಿಸಲ್ಪಟ್ಟಿದಾನೆ. ವಿಷ್ಣುವು ಇಂದ್ರನಿಗೆ ಪರಮ ಮಿತ್ರ ; ರಾಕ್ಷಸರೊಡನೆ ಯುದ್ಧಗಳಲ್ಲಿ ಇಂದ್ರನಿಗೆ ನೆರವಾಗಿದಾನೆ.

ಇಂದ್ರಾಗ್ನೀ ಎಂಬುದಾಗಿ ದ್ವಂದ್ವ ದೇವತಾರೂಪವಾಗಿ, ಅಗ್ನಿಯೊಡನೆಯೇ ಹೆಚ್ಚಾಗಿ ಪ್ರಯೋಗ.



CC-0. Jangamwadi Math Collection. Digitized by eGangotri

ಇಂದ್ರನು ಸ್ವಲ್ಪ ಹೆಚ್ಚು ಕಡಮೆ ಸ್ಪಷ್ಟವಾಗಿಯೇ, ಸೂರ್ಯನಿಗೆ ಸಮವೆಂದು, ಮೂರು ನಾಲ್ಕು ಕಡೆ ಉಕ್ತವಾಗಿದೆ. ಇಂದ್ರನು ತಾನು ಒಂದಾನೊಂದು ಕಾಲದಲ್ಲಿ ಮನು ಮತ್ತು ಸೂರ್ಯನಾಗಿದ್ದನೆಂದು ತಾನೇ ಹೇಳಿಕೊಂಡಿದಾನೆ (೪-೨೬-೧) ಸೂರ್ಯನೆಂದೇ ಸಂಬೋಧನೆಯೊಂದು ಸಲ (೧೦-೮೯-೨); ಇಂದ್ರ ಸೂರ್ಯರು ಏಕದೇವತೆಯಂತೆ ಆಹ್ವಾನಿಸಲ್ಪಟ್ಟಿದಾರೆ (೮-೮೨-೪). ಇಂದ್ರನಿಗೆ ಸವಿತೃ ಎಂದು ಪ್ರಯೋಗ ಒಂದು ಸ್ಥಳದಲ್ಲಿ (೨-೩೦-೧). ಇಂದ್ರನೇ ಸೂರ್ಯ, ವೃತ್ರನು ಚಂದ್ರ (ಶ. ಬ್ರಾ ೧-೬-೪-೧೮).

ಇಂದ್ರನು ಬೃಹದಾಕಾರನು. ಎರಡು ಅನಂತವಾದ ಲೋಕಗಳನ್ನು ಕೈಗಳಲ್ಲಿ ಹಿಡಿದುಕೊಂಡಾಗ, ಅವು ಅವನ ಮುಷ್ಟಿ ಮಾತ್ರ ಇದ್ದುವು (೩-೩೦-೫). ಆಕಾರದಲ್ಲಿ ಸ್ವರ್ಗ, ಭೂಮಿ, ಆಕಾಶಗಳನ್ನು ಮೀರುತ್ತಾನೆ (೩-೪೬-೩). ಎರಡು ಲೋಕಗಳೂ ಸೇರಿ, ಅವನ ಅರ್ಧದಷ್ಟು ಮಾತ್ರ ಆಗುತ್ತವೆ (೬-೩೦-೧ : ೧೦-೧೧೯-೭) ಭೂಮ್ಯಾಕಾಶಗಳು ಅವನ ಸೊಂಟದ ಪಟ್ಟಿಯನ್ನೂ ಸರಿತೂಗಲಾರವು (೧-೧೭೩-೬). ಭೂಮಿಯು ಈಗಿರುವುದರ ಹತ್ತರಷ್ಟಾದರೆ, ಆಗ ಅದು ಇಂದ್ರನಿಗೆ ಸಮವಾಗುತ್ತದೆ (೧-೫೨-೧೧). ಇಂದ್ರನಿಗೆ ನೂರು ಸ್ವರ್ಗಗಳೂ, ನೂರುಭೂಮಿಗಳೂ ಸೇರಿದರೆ, ಸಾವಿರ ಸೂರ್ಯರೂ, ಆಗ ಅವನಿಗೆ ಸಮನಾಗಲಾರರು (೮-೫೯-೫).

ಅವನ ಮಹತ್ವ ಮತ್ತು ಶಕ್ತಿಗಳನ್ನು ಮುಕ್ತಕಂಠದಿಂದ ಶ್ಲಾಘಿಸಿದಾರೆ. ಹಿಂದೆ ಜನಿಸಿರುವವರಲ್ಲಿ ಅವನಿಗೆ ಸಮಾನರು ಇಲ್ಲ (೪-೧೮-೪). ಸ್ವರ್ಗದಲ್ಲಿಯಾಗಲೀ, ಭೂಮಿಯಲ್ಲಾಗಲೀ, ಅವನಂತಿರುವವರೂ ಯಾರೂ ಜನಿಸಿಲ್ಲ (೭-೩೨-೨೩). ದೇವಮಾನವರಲ್ಲಿ ಅವನಿಗೆ ಸಮರೂ, ಅಥವಾ ಅಧಿಕರೂ ಇಲ್ಲ (೬-೩೦-೪) ಹಿಂದೆ ಇದ್ದವರು, ಮುಂದೆ ಬರುವವರು, ಅಥವಾ ಈಗ ಇರುವವರು ಯಾರೂ ಅವನಷ್ಟು ಸಾಹಸಿಗಳಲ್ಲ (೫-೪೨-೬) ಅವನ ಶಕ್ತಿಯ ಅಂಶವನ್ನು ದೇವತೆಗಳಾಗಲೀ ಮನುಷ್ಯರಾಗಲೀ, ಅಥವಾ ನೀರೇ ಆಗಲಿ ಕಂಡಿಲ್ಲ (೧-೧೦೦-೧೫). ದೇವತೆಗಳಲ್ಲಿ ಅವನಂತಿರುವವರು ಯಾರು ಇಲ್ಲ; ಜನ್ಮ ತಾಳಿದವರು, ಹಿಂದೆಯೋ ಆಗಲಿ ಅಥವಾ ಈಗಲೇ ಆಗಲಿ ಅವನೊಡನೆ ಸ್ಪರ್ಧಿಸಲಾರರು (೧-೧೬೫-೯). ಅವನು ದೇವತೆಗಳೆಲ್ಲರನ್ನು ಮೀರಿಸಿದಾನೆ (೩-೪೬-೩). ಬಲಶಕ್ತಿಗಳಲ್ಲಿ ದೇವತೆಗಳೆಲ್ಲರೂ ಅವನಿಗೆ ತಲೆತಗ್ಗಿಸುತ್ತಾರೆ (೮-೫೧-೭). ದೊಡ್ಡ ದೊಡ್ಡ ದೇವತೆಗಳೂ ತಮ್ಮ ಅಧಿಕಾರಗಳನ್ನು ಅವನ ಕೀರ್ತಿ ಮತ್ತು ಘನತೆಗೆ ಅಧೀನ ಮಾಡಿದರು. (೭-೨೧-೭) ಒಟ್ಟಾಗಿ ಸೇರಿದರೂ, ಅವನ ಕಾರ್ಯಗಳನ್ನು ಅವನ ಸಲಹೆಗಳನ್ನು ವಿಫಲಗೊಳಿಸಲಾರರು. (೨-೩೨-೪). ವರುಣ ಸೂರ್ಯರೂ ಅವನ ಅಪ್ಪಣೆಗೆ ಒಳಪಟ್ಟವರು (೧-೧೦೧-೩ ; ೨-೩೮-೯ ನ್ನು ಹೋಲಿಸಿ). ಮಿತ್ರ, ವರುಣ, ಅರ್ಯಮರ ಶತ್ರುಗಳನ್ನು ನಾಶಮಾಡುವಂತೆ ಇಂದ್ರನಿಗೆ ಪ್ರಾರ್ಥನೆ (೧೦-೮೯-೮ ಮತ್ತು ೯) ಮತ್ತು ಯುದ್ಧಮಾಡಿ. ದೇವತೆಗಳಿಗೆ ಸಾಕಾಗುವಷ್ಟು ಸ್ಥಳ ಸಂಪಾದನೆ ಮಾಡಿದನೆಂದು (೭-೯೮-೩) ಇದೆ. ಇಂದ್ರನೇ ಪ್ರಪಂಚಕ್ಕೆಲ್ಲಾ ಒಡೆಯ (೩-೪೬-೨) ಚಲಿಸುವ ಮತ್ತು ಉಸಿರಾಡುವ ಸಮಸ್ತಕ್ಕೂ ಒಡೆಯ (೧-೧೦೧-೫). ಚಲಿಸುವ ವಸ್ತುಗಳಿಗೆ ಮತ್ತು ಮನುಷ್ಯರಿಗೆ ರಾಜನು (೫-೩೦-೫) ; ಚಲಿಸುವ ಮತ್ತು ನೋಡುವವುಗಳಿಗೆಲ್ಲಾ ಅವನೇ ಕಣ್ಣು (೧೦-೧೦೨-೧೨). ಮಾನವ ಮತ್ತು ದೇವಜಾತಿಗಳಿಗೆ ಅವನೇ ನಾಯಕ. ಅನೇಕ ಸಲ ಅವನಿಗೆ ಸಂರಾಟ್ (೪-೧೯-೨ ; ಇತ್ಯಾದಿ) ಎಂತಲೂ, ಇನ್ನೂ ಹೆಚ್ಚು ಸಲ ಸ್ವಾವಲಂಬಿಯಾದವನು ಮತ್ತು ಸರ್ವತಂತ್ರ ಸ್ವತಂತ್ರ (೩-೪೬-೧ ; ಇತ್ಯಾದಿ) ಪುರಾತನ ಋಷಿಯಾದ ಅವನೊಬ್ಬನೇ ತನ್ನ ಸಾಮರ್ಥ್ಯದಿಂದ ಪ್ರಪಂಚವನ್ನೆಲ್ಲಾ ಆಳುತ್ತಾನೆ (೮-೬೪-೧) ಅವನು ಕೆಲವು ಸಲ ಅಸುರನೆಂದೂ ವಾಚ್ಯನಾಗಿದಾನೆ (೧-೧೭೪-೧ ; ೮-೭೯-೬). ಸಾಮರ್ಥ್ಯದ್ಯೋತಕವಾದ ಕೆಲವು ವಿಲಕ್ಷಣವಾದ ವಿಶೇಷಣಗಳಿವೆ. 'ಶಕ್ರ' ಎಂಬುದು ಅವನಿಗೆ ೪೦ ಸಲವೂ, ಇತರರಿಗೆ ೫ ಸಲವೂ ಪ್ರಯೋಗಿಸಲ್ಪಟ್ಟಿದೆ; 'ಶಚೀವತ್' ಎಂಬುದು ೧೫ ಸಲ ಇಂದ್ರನನ್ನೂ, ಎರಡೇಸಲ ಇತರರನ್ನೂ, 'ಶಚೀಪತಿ' ಎಂದೂ ಹತ್ತು ಸಲ ಇಂದ್ರನನ್ನೂ, ಒಂದೇ ಒಂದು ಸಲ ಅಶ್ವಿನಿಗಳನ್ನೂ ವರ್ಣಿಸಿದೆ.



CC-0. Jangamwadi Math Collection. Digitized by eGangotri

‘ಶಚೀಪತೇ ಶಚೀನಾಂ’ ಎಂದೊಂದು (೧೦-೨೪-೨) ಕಡೆ ಇಂದ್ರನಿಗೆ ವಿಶೇಷಣ. ಪುರಾಣಾದಿಗಳಲ್ಲಿ ಇದೇ ವಿಶೇಷಣವು ‘ಶಚೀದೇವಿಯ ಪತಿ’ ಎಂಬರ್ಥದಲ್ಲಿ ರೂಢಿಗೆ ಬಂದಿದೆ. ಶತಕ್ರತು (ನೂರು ಶಕ್ತಿಯುಳ್ಳವನು) ಎಂಬುದು ೬೦ ಕಡೆ ಪ್ರಯೋಗಿಸಿರುವುದರಲ್ಲಿ ಎರಡೇ ಸಲ ಇತರ ದೇವತೆಗಳಿಗೆ ಅನ್ವಯಿಸಿದೆ. ಇದರಂತೆ ‘ಸತ್ಪತಿ’ (ಸಮರ್ಥನಾದ) ಎಂಬುದೂ ಸಾಧಾರಣವಾಗಿ ಇಂದ್ರನಿಗೆ ವಿಶೇಷಣ. ಇನ್ನೂ ಅನೇಕ ಪದಗಳು ಅವನ ಶಕ್ತಿ ಸಾಮರ್ಥ್ಯಗಳನ್ನು ವ್ಯಕ್ತಗೊಳಿಸುತ್ತವೆ. ಅವನು ಬಲಿಷ್ಠ (ತವಿಷ), ಚುರುಕು (ನೃತು), ಜಯಶಾಲಿ (ತುರ), ಶೂರ (ಶೂರ), ಅಪಾರಶಕ್ತಿಯುಳ್ಳವನು (೧-೧೧೪-೪ ; ೧-೧೦೨-೬), ಅಪ್ರತಿಹತ ಸಾಮರ್ಥ್ಯವುಳ್ಳವನು. (೧-೮೪-೨). ಆನೆಯಂತೆ ಶಕ್ತಿಯೇ ಕವಚವಾಗಿ ಉಳ್ಳವನು ಮತ್ತು ಸಿಂಹದಂತೆ ಧೈರ್ಯವಾಗಿ ಆಯುಧಗಳನ್ನು ಪ್ರಯೋಗಿಸುತ್ತಾನೆ. (೪-೧೬-೧೪). ಯುವಕನೂ ಹೌದು (೧-೧೧-೪ ; ಇತ್ಯಾದಿ) ; ಮುಪ್ಪೇ ಇಲ್ಲ (ಅಜರ) ; ಮತ್ತು ಪುರಾತನನು (ಪೂರ್ವ).

ಇನ್ನು ಅವನ ಸಂಬಂಧವಾದ ಇತಿಹಾಸವನ್ನು ಪರಿಶೀಲಿಸಿಸೋಣ. ಸೋಮಪಾನದಿಂದ ಮತ್ತನಾಗಿ, ಮರುದ್ಗಣಸಹಿತನಾಗಿ, ಅನಾವೃಷ್ಟಿಗೆ ಕಾರಣನಾದ, ವೃತ್ರ ಅಹಿ ಇತ್ಯಾದಿ ನಾಮಗಳುಳ್ಳ ರಾಕ್ಷಸನೊಡನೆ ಯುದ್ಧಕ್ಕೆ ಸನ್ನದ್ಧನಾಗುತ್ತಾನೆ. ತನ್ನ ವಜ್ರದಿಂದ ವೃತ್ರನನ್ನು ಹೊಡೆದಾಗ, ಸ್ವರ್ಗ ಮತ್ತು ಭೂಮಿಗಳು ನಡುಗುತ್ತವೆ (೧-೮೦-೧೧; ೨-೧೧-೯ ಮತ್ತು ೧೦; ೬-೧೭-೯) ವಜ್ರವನ್ನು ಮಾಡಿದ ತ್ವಷ್ಟೃವೂ, ಇಂದ್ರನ ಕೋಪವನ್ನು ಕಂಡು ಕಂಪಿಸುತ್ತಾನೆ (೧೦-೮೦-೧೪). ಇಂದ್ರನು ವಜ್ರಾಯುಧದಿಂದ ವೃತ್ರನನ್ನು ಪುಡಿಪುಡಿ ಮಾಡುತ್ತಾನೆ (೧-೩೨-೫; ೧-೬೧-೧೦; ೧೦-೮೯-೭). ವೃತ್ರನನ್ನು ವಜ್ರದಿಂದ ಬೆನ್ನಿನ ಮೇಲೆ ಹೊಡೆಯುತ್ತಾನೆ (೧-೩೨-೭; ೧-೮೦-೫), ತನ್ನ ಮೊನಚಾದ ಆಯುಧದಿಂದ ಮುಖಕ್ಕೆ ಹೊಡೆಯುತ್ತಾನೆ (೧-೫೨-೧೫). ಅಪಾಯ ಸ್ಥಳಗಳನ್ನು ಕಂಡು ಹಿಡಿಯುತ್ತಾನೆ (೩-೩೨-೪; ೫-೩೨-೫). ನೀರನ್ನು ಸುತ್ತುವರೆದಿದ್ದಾ ವೃತ್ರನನ್ನು (೬-೨೦-೨ ಇತ್ಯಾದಿ) ಅಥವಾ ನೀರನ್ನು ಸುತ್ತಿಕೊಂಡು ಬಿದ್ದಿದ್ದ ಸರ್ಪವನ್ನು (೪-೧೯-೨) ಹೊಡೆದನು, ನೀರಿನ ಮೇಲೆ ಮಲಗಿದ್ದ ಸರ್ಪವನ್ನು ಸೋಲಿಸಿದನು (೫-೩೦-೬) ನೀರಿನಲ್ಲಿ ಬಚ್ಚಿಟ್ಟುಕೊಂಡು, ನೀರು ಆಕಾಶಗಳನ್ನು ಅಡ್ಡಿ ಮಾಡುತ್ತಿದ್ದ ಸರ್ಪವನ್ನು ವಧಿಸಿ (೨-೧೧-೫), ನೀರನ್ನು ಆವರಿಸಿಕೊಂಡಿದ್ದ ವೃತ್ರನನ್ನು, ಗಿಡವನ್ನು ಛೇದಿಸುವಂತೆ ಛೇದಿಸಿದನು (೨-೧೪-೨). ಈ ಸಂದರ್ಭದಲ್ಲಿ, ಇತರ ಯಾವ ದೇವತೆಗೂ ಸಲ್ಲದ ‘ಅಪ್ಸುಜಿತ್’ ಎಂಬ ವಿಶೇಷಣವಿದೆ. ಇಂದ್ರನು ವೃತ್ರನನ್ನು ಕೊಂದನು, ಕೊಲ್ಲುತ್ತಾನೆ, ವೃತ್ರನನ್ನು ವಧಿಸು ಇತ್ಯಾದಿ ಸ್ತುತಿಯಿದೆ. ಇವುಗಳನ್ನೆಲ್ಲಾ ತೆಗೆದುಕೊಂಡರೆ, ಇದು ಸತತವಾಗಿ ನಡೆಯುತ್ತಿರುವ ಘಟನೆ ಎಂಬುದು ಸ್ಪಷ್ಟವಾಗುತ್ತದೆ. ವೃತ್ರವಧೆಮಾಡಿ, ಇಂದ್ರನು ಅನೇಕ ಉಷಃ ಕಾಲಗಳಲ್ಲಿ ಮತ್ತು ಶರದೃತುಗಳಲ್ಲಿ, ನೀರನ್ನು ಬಿಡುಗಡೆ ಮಾಡಿದಾನೆ (೪-೧೯-೮), ಅಥವಾ ಮುಂದೆ ಹಾಗೆ ಮಾಡಬೇಕೆಂದು ಪ್ರಾರ್ಥಿತನಾಗಿದಾನೆ (೮-೭೮-೪). ಪರ್ವತಗಳನ್ನು ಸೀಳಿ, ನೀರು ಹರಿಯುವಂತೆ ಅಥವಾ ಗೋವುಗಳು ಹೊರಡುವಂತೆ ಮಾಡುತ್ತಾನೆ (೧-೫೭-೬; ೧೦-೮೯-೭), ವಜ್ರದ ಶಬ್ದಮಾತ್ರದಿಂದಲೇ ಈ ಕಾರ್ಯವಾಗುತ್ತದೆ (೬-೨೭-೪). ಪರ್ವತಗಳನ್ನು ಛೇದಿಸಿದಾಗ, ಪ್ರವಾಹಗಳು ವೇಗವಾಗಿ ಹೊರಟವು, ರಾಕ್ಷಸನು ಹತನಾದನು, ಹುದುಗಿಟ್ಟ ಜಲವೆಲ್ಲವೂ ಹೊರಡುವಂತಾಯಿತು (೫-೩೨-೧ ಮತ್ತು ೨). ರಾಕ್ಷಸನನ್ನು ಕೊಂದು, ಪರ್ವತವನ್ನು ಚೂರು ಚೂರು ಮಾಡಿ, ಬಾವಿಯನ್ನು ಒಡೆದು, ಹುದುಗಿಟ್ಟಿದ್ದ ನೀರನ್ನು ಬಿಡುಗಡೆ ಮಾಡಿದನು (೧-೫೭-೬; ೫-೩೩-೧). ಪರ್ವತಗಳ ಕೆಚ್ಚಲಿನಂತೆ ಇದ್ದ, ಕಟ್ಟಿಹಾಕಿರುವ ಗೋವುಗಳಂತಿದ್ದ ಪ್ರವಾಹಗಳನ್ನು ಮೋಚನ ಮಾಡಿಸುತ್ತಾನೆ (೧-೬೧-೧೦) ಅಥವಾ ಅವು ಅರಚುತ್ತಿರುವ ದನಗಳಂತೆ, ಸಾಗರಕ್ಕೆ ಪ್ರವಹಿಸುತ್ತವೆ (೧-೩೨-೨). ಅವನು ಗೋವುಗಳನ್ನೂ ಸೋಮವನ್ನೂ ಪಡೆದು, ಏಳು ನದಿಗಳು ಹರಿಯುವಂತೆ ಮಾಡಿದನು (೧-೩೨-೧೨; ೨-೧೨-೧೨). ಬಂಧಿತವಾಗಿದ್ದ ನೀರನ್ನು (೧-೫೭-೬; ೧-೧೦೩-೨) ಸರ್ಪದಿಂದ ಹಿಡಿದುಹಾಕಲ್ಪಟ್ಟಿದ್ದ ನೀರನ್ನೂ (೨-೧೧-೨) ವಿಮೋಚನ ಮಾಡಿದನು, ಪ್ರವಾಹಗಳಿಗಾಗಿ ವಜ್ರಾಯುಧದಿಂದ ನಾಲೆಗಳನ್ನು ತೋಡಿದನು (೨-೧೫-೩), ನೀರಿನ ಪ್ರವಾಹವು ಸಮುದ್ರಕ್ಕೆ ಪ್ರವಹಿಸುವಂತೆ ಮಾಡಿದನು (೨-೧೯-೩), ವೃತ್ರನು ಅಡ್ಡಗಟ್ಟಿದ್ದ ನೀರನ್ನು ಹರಿಯುವಂತೆ ಮಾಡಿದನು (೩-೨೬-೬; ೪-೧೭-೧). ವೃತ್ರನನ್ನು ಕೊಂದು, ಅವನು ಮುಚ್ಚಿದ್ದ ನೀರಿನ ಬಾಗಿಲನ್ನು ತೆರೆದನು



CC-0. Jangamwadi Math Collection. Digitized by eGangotri

೧-೩೨-೧೧). ಅವನ ಆಯುಧಗಳು ೯೦ ನದಿಗಳಲ್ಲಿ ಚೆದುರಿಹೋಗಿದೆ (೧-೮೦-೮). ವೃತ್ರವಧೆ ಮತ್ತು ನೀರನ್ನು ಬಿಡುಗಡೆ ಮಾಡುವ ಕಥೆ ಪದೇ ಪದೇ ಬರುತ್ತದೆ. ಒಂದು ಸೂಕ್ತ ಪೂರ್ತಿಯಾಗಿ (೧-೮೦) ಇದನ್ನು ನಾನಾ ಬಗೆಯಾಗಿ ವರ್ಣಿಸಿದೆ. ವೃತ್ರನೊಡನೆ ಯುದ್ಧವನ್ನು ಒಂದು (೧-೩೨) ಸೂಕ್ತ ವರ್ಣಿಸುತ್ತದೆ. ಈ ವರ್ಣನೆಗಳಿರುವ ಕಷೆಯೆಲ್ಲಾ ವಜ್ರ, ಪರ್ವತ, ಪ್ರವಾಹ ಎಂಬ ಪದಗಳೇ ಹೊರತು, ಸ್ವಾಭಾವಿಕವಾದ ಸಿಡಿಲು, ಗುಡುಗು, ಮೇಘ ಮತ್ತು ಮಳೆ ಎಂಬ ಪದಗಳನ್ನು ಉಪಯೋಗಿಸಿಯೇ ಇಲ್ಲವೆನ್ನಬಹುದು (೧-೫೨-೫, ೬ ಮತ್ತು ೧೪ ಇತ್ಯಾದಿ). ಇಲ್ಲಿ ಅಭಿಪ್ರೇತವಾದ ಪ್ರವಾಹಗಳು ಭೂಮಿಯ ನದಿಗಳೇ ಆಗಿದ್ದರೂ, ವೇದದಲ್ಲಿ ವಾಯುಮಂಡಲ ಮತ್ತು ಆಕಾಶಗಳ ನೀರೂ ಉಕ್ತವಾಗಿದೆ (೧-೧೦-೮; ೨-೨೦-೮; ೨-೨೨-೪). ಇಂದ್ರನಿಂದ ವಿಮೋಚಿತವಾದ ಗೋವುಗಳು ಎಂದರೆ ನೀರೇ ಇರಬೇಕು, ಅನೇಕ ಕಡೆ ನೀರು ಗೋವುಗಳಿಗೆ ಹೋಲಿಸಲ್ಪಟ್ಟಿದೆ. ಸರ್ಪವನ್ನು ಕೊಂದು, ಇಂದ್ರನು ಮನುಷ್ಯನಿಗಾಗಿ ಗೋವುಗಳನ್ನು ಕಂಡುಹಿಡಿದನು (೫ ೨೯-೩; ೧-೫೨-೮ನ್ನು ಹೋಲಿಸಿ). ಇಂದ್ರನು ಅಂಧಕಾರದಿಂದ ಬೆಳಕನ್ನೂ ಮತ್ತು ಗೋವುಗಳನ್ನು, ತನ್ನ ವಜ್ರಾಯುಧದ ಸಹಾಯದಿಂದ, ಹೊರತೆಗೆದನು (೧-೩೩-೧೦) ಎಂದಿರುವಾಗ ಗೋ ಎಂದರೆ ನೀರೆಂದೂ. ಸಾಧಾರಣವಾಗಿ ಬೆಳಕನ್ನು (ಗೋ) ಸಂಪಾದಿಸಿದನು ಎಂದಿರುವಾಗ ಗೋವುಗಳನ್ನೂ (ಹಸುಗಳನ್ನೂ) ಎಂದೂ ತಿಳಿದುಕೊಳ್ಳಬಹುದು. ಬೆಳಿಗ್ಗೆ ಮೊದಮೊದಲು ಕಾಣುವ ಕೆಂಪು ಕಿರಣಗಳು ಗೋಶಾಲೆಯಿಂದ ಹೊರಬೀಳುತ್ತಿರುವ ಗೋವುಗಳಿಗೆ ಹೋಲಿಸಲ್ಪಟ್ಟಿವೆ. ಮೇಘಗಳು ಸ್ಪಷ್ಟವಾಗಿ ಕಂಡುಬರದಿದ್ದರೂ, ಕೆಚ್ಚಲು, ಬುಗ್ಗೆ, ಬಾನೆ, ಮಡಕೆ ಇತ್ಯಾದಿ ಪದಗಳಿಗೆ ಮೇಘವೆಂದೇ ಅರ್ಥವಿರಬೇಕು, ಅಲ್ಲದೆ, ಇಂದ್ರನು ಜನಿಸಿದಾಗ (೮-೫೯-೪) ಗೋವುಗಳು ಗರ್ಜಿಸಿದವು ಎಂಬಲ್ಲಿ ಗೋವುಗಳು ಎಂದರೆ ಮೇಘಗಳೇ ಇರಬೇಕು.

ಆದರೆ ಇಂದ್ರನ ಸಂಬಂಧವಾದ ಕಥೆಗಳಲ್ಲೆಲ್ಲಾ, ಪರ್ವತ, ಗಿರಿ ಎಂತಲೇ ಅವುಗಳಿಗೆ ಹೆಸರು. ರಾಕ್ಷಸರು ವಾಸಮಾಡುವ ಪರ್ವತಗಳೇ ಅವು (೧-೩೨-೨; ೧-೩೨-೧; ೨-೧೨-೧೧); ಅವುಗಳಿಂದಲೇ ರಾಕ್ಷಸರನ್ನು ಕೆಳಕ್ಕುರುಳಿಸುತ್ತಾನೆ (೧-೧೩೧-೭: ೪ ೩೦-೧೪; ೯-೨೬-೫). ಚೆನ್ನಾಗಿ ಗುರಿಕಟ್ಟಿ, ಇಂದ್ರನು ಬಾಣವನ್ನು ಈ ಪರ್ವತಗಳಿಂದಲೇ ಹೊಡೆಯುತ್ತಾನೆ (೮-೬೬-೬). ಹಸುಗಳನ್ನು ಬಿಡುಗಡೆ ಮಾಡಲು, ಈ ಪರ್ವತಗಳನ್ನು ದೊಡ್ಡದಾಗಿ ಸೀಳಿದನು (೮-೪೫-೩೦). ಅಥವಾ, ಮೇಘವೇ ಹಸುಗಳನ್ನು ಆವರಿಸಿಕೊಂಡಿರುವ ಪರ್ವತ; ಇಂದ್ರನು ಅದನ್ನು ಅದರ ಜಾಗದಿಂದ ಕದಲಿಸುತ್ತಾನೆ (೬-೧೭-೫). ಬಂಡೆಗಳನ್ನು ಸಡಿಲಿಸಿ, ಹಸುಗಳು ಸುಲಭವಾಗಿ ದೊರಕುವಂತೆ ಮಾಡಿದನು (೧೦-೧೧೨-೮) ಕಲ್ಲಿನಲ್ಲಿ ಭದ್ರವಾಗಿ ಇಡಲ್ಪಟ್ಟಿದ್ದ ಹಸುಗಳನ್ನು ವಿಮೋಚನ ಮಾಡಿದನು (೬-೪೩-೩; ೫-೩೦-೪ನ್ನು ಹೋಲಿಸಿ). ಪರ್ವತದಂತಿರುವ ಮೇಘಗಳು ಸ್ಥಾಯಿಯಾದ ಬಿಳಿಯ ಮೋಡಗಳು, ಗೋವುಗಳು, ಮಳೆತರುವ ಚಲಿಸುತ್ತಾ, ಗುಡುಗುತ್ತಾ ಇರುವ ಮಳೆಯ ಮೋಡಗಳೂ ಇರಬಹುದು

ಮೋಡಗಳು ಒಂದೊಂದು ಸಲ ಅಂತರಿಕ್ಷವಾಸಿಗಳಾದ ರಾಕ್ಷಸರ ಕೋಟೆಗಗೂ ಆಗುತ್ತವೆ. ಅಂತಹ ಕೋಟೆಗಳು, ತೊಂಬತ್ತು, ತೊಂಬತ್ತೊಂಬತ್ತು ಅಥವಾ ನೂರು (೨-೧೪-೬; ೨-೧೯-೬; ೮-೧೭-೧೪; ೮-೮೭-೬). ಇವು ಚಲಿಸುತ್ತವೆ (೮-೧-೨೮); ಶರತ್ಕಾಲದಲ್ಲಿ ಕಾಣಿಸುತ್ತವೆ (೧-೧೩೦-೭; ೧-೧೩೧-೪; ೧-೧೭೪-೨; ೬-೨೦-೧೦); ಲೋಹದಿಂದ ಮಾಡಿದವು (೨-೨೦-೮); ಅಥವಾ ಕಲ್ಲಿನಿಂದ ಮಾಡಿದವು (೪-೩೦-೨೦). ಇಂದ್ರನು ಅವುಗಳನ್ನು ಪುಡಿಪುಡಿ ಮಾಡುತ್ತಾನೆ (೧-೫೧-೫, ಇತ್ಯಾದಿ), ಆದುದರಿಂದ ಅವನಿಗೆ ಪೂರ್ಭಿದ್ ಎಂದು ಹೆಸರು. ಒಂದು ಋಕ್ಕಿನಲ್ಲಿ ಕೋಟೆಗಳನ್ನು ಒಡೆಯುವವನು ಮತ್ತು ನೀರನ್ನು ಪ್ರೀತಿಸುವವನು (೧೦-೧೧೧-೧೦) ಎಂದಿದೆ. ಮತ್ತೊಂದರಲ್ಲಿ, ಈ ಇತಿಹಾಸದ ನಾನಾ ಅಂಶಗಳು ಚಿತ್ರಿತವಾಗಿವೆ. ಅವನು ವೃತ್ರನನ್ನು ಕೊಂದನು, ಕೋಟೆಗಳನ್ನು ಒಡೆದನು, ನದಿಗಳಿಗಾಗಿ ನಾಲೆಗಳನ್ನು ಮಾಡಿದನು ಪರ್ವತವನ್ನು ಭೇಧಿಸಿ, ಗೋವುಗಳನ್ನು ಸ್ನೇಹಿತರಿಗೆ ಕೊಟ್ಟನು (೧೦-೮೯-೭)..

ಈ ವೃತ್ರವಧೆಯ ಕಥೆಯು ಎಷ್ಟು ಮುಖ್ಯವೆಂಬುದು, ಇಂದ್ರನಿಗೆ ರೂಢಿಯಾಗಿರುವ 'ವೃತ್ರಹಾ' ಎಂಬ ಹೆಸರಿನಿಂದಲೇ ತಿಳಿಯುತ್ತದೆ. ಈ ಹೆಸರು ೭೦ ಸಲ ಉಪಯೋಗಿಸಲ್ಪಟ್ಟಿದೆ. ಅಗ್ನಿಯು ಇಂದ್ರನ ಜೋಡಿಯಾಗಿರುವುದರಿಂದ, ಅವನಿಗೂ ಈ ಹೆಸರು ಉಪಯೋಗಿಸಿದೆ. ಸೋಮನಿಗೂ ಒಂದೊಂದು ಸಲ ಉಪಯೋಗಿಸಿದ್ದರೂ,



CC-0. Jangamwadi Math Collection. Digitized by eGangotri

ಅದು ಅಷ್ಟು ಮುಖ್ಯವಲ್ಲವೆಂಬುದು ಸ್ಪಷ್ಟವಾಗಿದೆ. ಇಂದ್ರನು ವೃತ್ರನನ್ನು ತನ್ನ ಸ್ವಂತ ಸಾಮರ್ಥ್ಯದಿಂದ ವಧಿಸಿದ
ನೆಂದು ಸ್ಪಷ್ಟವಾಗಿ ಹೇಳಿದೆ (೧-೧೬೫-೮, ೭-೨೧-೬, ೧೦-೧೩೮-೬), ಆದರೂ ಇತರ ದೇವತೆಗಳು ಇಂದ್ರನಿಗೆ
ಈ ಕಾರ್ಯದಲ್ಲಿ ಸಹಾಯಕರು ದೇವತೆಗಳು ಇಂದ್ರನನ್ನು ಯುದ್ಧಕ್ಕೋಸ್ಕರ (೧-೫೫-೩, ೬-೧೭-೮)
ಅಥವಾ ವೃತ್ರವಧೆಗೋಸ್ಕರ (೮-೧೨-೨೨) ರಥದಲ್ಲಿ ಕೂಡಿಸಿದರು. ವೃತ್ರನೊಡನೆ ಯುದ್ಧಕ್ಕಾಗಿ, ದೇವತೆಗಳು
ಅವನ ವೀರ್ಯವನ್ನು ಹೆಚ್ಚುಮಾಡಿದರು (೧೦-೧೧೩-೮), ಅಥವಾ ಅವನಿಗೆ ಶಕ್ತಿಸಾಮರ್ಥ್ಯಗಳನ್ನು ಕೂಡಿಸಿ
ಕೊಟ್ಟರು (೧೦-೮೦-೧೫, ೬-೨೦-೨. ೧೦-೪೮-೩, ೧೦-೧೨೦-೩), ಅಥವಾ ವಜ್ರಾಯುಧವನ್ನು ಅವನ ಕೈಯಲ್ಲಿ
ಟ್ಟರು (೨-೨೦-೮). ಬಹಳ ಹೆಚ್ಚಾಗಿ ಮರುದ್ದೇವತೆಗಳೇ ಅವನನ್ನು ಪ್ರೇರಿಸುವವರು ಮತ್ತು ಅವನಿಗೆ ಬೆಂಬಲ
ವಾಗಿರುವವರು (೩-೩೨-೪. ೧೦-೭೩-೧ ಮತ್ತು ೨, ಇತ್ಯಾದಿ). ಇತರ ದೇವತೆಗಳೆಲ್ಲಾ ವೃತ್ರನಿಗೆ ಹೆದರಿ ಓಡಿ
ಹೋದಾಗಲೂ (೮-೮೫-೭. ೪-೧೮-೧೧ನ್ನು ಹೋಲಿಸಿ, ಐ. ಬ್ರಾ. ೩-೨೦), ಮರುತ್ತುಗಳು ಇಂದ್ರನಿಗೆ ನೆರವಾಗಿ
ದ್ದರು. ಆದರೆ, ಮರುತ್ತಗಳೇ ಅವನನ್ನು ಒಂದು ಸಲ ಪರಿತ್ಯಜಿಸಿದರೆಂದು (೮-೭-೩೧) ಇದೆ. ವೃತ್ರನೊಡನೆ
ಕಾದಾಡುವಾಗ, ಅವನಿಗೆ, ಅಗ್ನಿ, ಸೋಮ, ವಿಷ್ಣುಗಳೂ ಸಹಾಯಕರಾಗಿದ್ದರು. ಋತ್ವಿಜರೂ ಈ
ಯುದ್ಧದಲ್ಲಿ ಅವನಿಗೆ ನೆರವಾಗಿದ್ದಾರೆ (೫-೩೦-೮, ೮-೫೧-೧೧, ೧೦-೪೪-೯). ಪೂಜೆ ಮಾಡುವವನು (ಸ್ತೋತೃವು)
ವಜ್ರಾಯುಧವನ್ನು ಅವನ ಕೈಯಲ್ಲಿಟ್ಟನು (೧-೬೩-೨) ಮತ್ತು ಯಜ್ಞವು ರಾಕ್ಷಸ ವಧೆಯಲ್ಲಿ ವಜ್ರಾಯುಧಕ್ಕೆ
ಸಹಾಯಕವಾಯಿತು (೩-೩೨-೧೨). ಸೂಕ್ತಗಳು, ಸ್ತುತಿಗಳು, ಪೂಜೆ ಮತ್ತು ಸೋಮ, ಇವುಗಳೆಲ್ಲವೂ ಇಂದ್ರನ
ಸಾಮರ್ಥ್ಯವನ್ನು ಹೆಚ್ಚಿಸುತ್ತವೆ.

ವೃತ್ರನೊಡನೆ ಅಲ್ಲದೆ, ಇಂದ್ರನು ಸಣ್ಣ ಸಣ್ಣ ರಾಕ್ಷಸರೊಡನೆಯೂ ಯುದ್ಧಮಾಡಿದಾನೆ. ಉರಣ
(೨-೧೪-೪)ನಿಗೆ ೯೯ ಕೈತೋಳುಗಳಿವೆ, ವಿಶ್ವರೂಪನಿಗೆ ಮೂರು ತಲೆ ಮತ್ತು ಆರು ಕಣ್ಣುಗಳು (೧೦-೯೯-೬)
ಅವರುಗಳನ್ನು ವಜ್ರಾಯುಧದಿಂದಲೇ ವಧಿಸುವುದಿಲ್ಲ ಅರ್ಬುದ ಎಂಬೊಬ್ಬನನ್ನು ಕಾಲಿನಿಂದ ಒದ್ದು ಅಥವಾ
ಮಂಜುಗೆಡ್ಡೆಯಿಂದ ಇರಿದು ಸಾಯಿಸುತ್ತಾನೆ (೧-೫೧-೬, ೮-೩೨-೨೬). ಸಾಮಾನ್ಯರಾದ ರಾಕ್ಷಸರನ್ನು ನಾಶ
ಮಾಡುತ್ತಾನೆ. ರಾಕ್ಷಸನನ್ನು ರಥಚಕ್ರದಿಂದ ಒರಸಿಬಿಡುತ್ತಾನೆ (೮-೮೫-೯), ಶುಷ್ಕವನವನ್ನು ಅಗ್ನಿಯು ದಹಿಸು
ವಂತೆ, ರಾಕ್ಷಸರನ್ನು ವಜ್ರದಿಂದ ನಿರ್ಮೂಲ ಮಾಡಿದನು (೬-೧೮-೧೦) ಮತ್ತು ದುರ್ದೇವತೆಗಳನ್ನು ಸೋಲಿಸು
ತ್ತಾನೆ (೪-೨೩-೭, ೮-೨೬-೨).

ಜಲವಿಮೋಚನದ ಜೊತೆಗೆ, ಬೆಳಕು, ಸೂರ್ಯ, ಮತ್ತು ಉಷಸ್ಸುಗಳ ಲಾಭವೂ ಸೇರಿದೆ. ಇಂದ್ರನು
ಸ್ವರ್ಗೀಯ ತೇಜಸ್ಸನ್ನೂ ಮತ್ತು ಉದಕವನ್ನೂ ಗಳಿಸಿದನು (೩-೩೪-೮). ವೃತ್ರನನ್ನು ಕೊಂದು, ತೇಜಸ್ಸನ್ನು
ಸಂಪಾದಿಸು ಎಂದು ಇಂದ್ರನನ್ನು ಪ್ರಾರ್ಥಿಸಿದಾರೆ (೮-೭೮-೪). ಇಂದ್ರನು ವೃತ್ರನನ್ನು ಲೋಹದಿಂದ ಮಾಡಿದ
ತನ್ನ ವಜ್ರದಿಂದ ಕೊಂದು, ಮನುಷ್ಯರ ಉಪಯೋಗಕ್ಕೋಸ್ಕರ ನೀರನ್ನು ಒದಗಿಸಿದಾಗ, ಆಕಾಶದಲ್ಲಿ ಎಲ್ಲರಿಗೂ
ಕಾಣಿಸುವಂತೆ ಸೂರ್ಯನನ್ನು ಸ್ಥಾಪಿಸಿದನು (೧-೫೧-೪, ೧-೫೨-೮). ವೃತ್ರಸಂಹಾರಿಯಾದ ಇಂದ್ರನು ಸಮುದ್ರದ
ಕಡೆ ನೀರು ಹರಿಯುವಂತೆ ಮಾಡಿದನು, ಸೂರ್ಯನನ್ನು ಉತ್ಪತ್ತಿಮಾಡಿದನು ಮತ್ತು ಗೋವುಗಳನ್ನು ಕಂಡುಹಿಡಿದನು
(೨-೧೯-೩). ರಾಕ್ಷಸರ ವಧವಾದ ಮೇಲೆ ಅವನು ಸೂರ್ಯನನ್ನು ಮತ್ತು ನೀರನ್ನು ಗಳಿಸಿದನು (೩-೩೪-೮ ಮತ್ತು
೯). ಇಂದ್ರನು, ರಾಕ್ಷಸನಾಯಕನನ್ನು ವಧಿಸಿ, ನೀರನ್ನು ಬಿಡುಗಡೆ ಮಾಡಿದಾಗ, ಸೂರ್ಯ, ಆಕಾಶ ಮತ್ತು ಉಷ
ಸ್ಸುಗಳು ಜನಿಸುವಂತೆ ಮಾಡಿದನು (೧-೩೨-೪, ೬-೩೦-೫) ರಾಕ್ಷಸನನ್ನು ಇಂದ್ರನು ಗಾಳಿಯಲ್ಲಿ ತೂರಿಕೊಂಡು
ಹೋಗುವಂತೆ ಮಾಡಿದ ಮೇಲೆ, ಸೂರ್ಯನು ಪ್ರಕಾಶಿಸಿದನು (೮-೩-೨೦). ಈ ಇಂದ್ರ ರಾಕ್ಷಸರ ಘರ್ಷಣೆಯ ಫಲ
ಸೂರ್ಯನೇ ಆದರೂ, ಒಂದೊಂದು ಸಲ ಅದು (ಸೂರ್ಯಬಿಂಬವು) ಇಂದ್ರನ ಆಯುಧವೂ ಆಗಿದೆ. ಸೂರ್ಯ ಕಿರಣಗ
ಳಿಂದ, ಇಂದ್ರನು ರಾಕ್ಷಸರನ್ನು ಸುಡುತ್ತಾನೆ (೮-೧೨-೯) ವೃತ್ರವಧೆಗೆ ಸಂಬಂಧಿಸಿದಂತೆಯೇ ಇಂದ್ರನು ಕತ್ತಲಲ್ಲಿ
(೧-೧೦೮-೮, ೪-೧೬-೪) ಬೆಳಕನ್ನು ಕಂಡುಹಿಡಿದನೆಂದು (೩-೩೪-೪, ೮-೧೫-೫, ೧೦-೪೩-೪) ಇದೆ. ಇಂದ್ರನೇ
ಸೂರ್ಯನ ಉತ್ಪತ್ತಿಗೆ ಕಾರಣ (೩-೪೯-೪) ಸೂರ್ಯನನ್ನು, ಜಾಜ್ವಲ್ಯಮಾನವಾದ ತೇಜಸ್ಸನ್ನು ಆಕಾಶದಲ್ಲಿ ಇಟ್ಟನು
ಮತ್ತು ಆಕಾಶವನ್ನು ಏರುವಂತೆ (೧-೭-೩)
(೮-೧೨-೩೦). ಸೂರ್ಯನು ಪ್ರಕಾಶಿಸುವಂತೆ (೮-೩-೬, ೮-೮೭-೨)


CC-0. Jangamwadi Math Collection. Digitized by eGangotri

ಮಾಡಿದನು. ಅವನೇ ಸೂರ್ಯನನ್ನು ಸಂಪಾದಿಸಿದನು (೧-೧೦೦-೬ ಮತ್ತು ೧೮, ೩-೩೪-೯), ಅಥವಾ ಅವನಿದ್ದ ಕತ್ತಲಿನಲ್ಲಿ ಕಂಡುಹಿಡಿದನು (೩-೩೯-೫) ಮತ್ತು ಅವನಿಗಾಗಿ ದಾರಿಯನ್ನು ಮಾಡಿದನು (೧೦-೧೧೧-೩).

ಸೂರ್ಯ ಮತ್ತು ಉಷಸ್ಸುಗಳನ್ನು ಇಂದ್ರನು ಉತ್ಪತ್ತಿ ಮಾಡುತ್ತಾನೆ (೨-೧೨-೭ ; ೨-೨೧-೪ ; ೩-೩೧-೧೫ ; ೩-೩೨-೮ ; ೩-೪೯-೪). ಅವನೇ ಉಷಸ್ಸುಗಳು ಮತ್ತು ಸೂರ್ಯನು ಪ್ರಕಾಶಿಸುವಂತೆ ಮಾಡಿದನು (೩-೪೪-೨). ಸೂರ್ಯ ಮತ್ತು ಉಷಸ್ಸುಗಳಿಂದ ಕತ್ತಲನ್ನು ಪರಿಹರಿಸಿದ್ದಾನೆ (೧-೬೨-೫). ಸೂರ್ಯನೊಡನೆ ಉಷಸ್ಸನ್ನು ಕದಿಯುತ್ತಾನೆ (೨-೨೦-೫). ಸೂರ್ಯ ಮತ್ತು ಉಷಸ್ಸುಗಳೊಡನೆ (೧-೬೨-೫ ; ೨-೧೨-೭ ; ೬-೧೭-೫) ಅಥವಾ ಸೂರ್ಯನೊಬ್ಬನೊಡನೆ ಮಾತ್ರ (೧-೭-೩ : ೨-೧೯-೩- ; ೩-೩೪-೯ ; ೬-೧೭-೩ ; ೬-೩೨-೨ ; ೧೦-೧೩೮-೨). ಉಕ್ತವಾಗಿರುವ ಮತ್ತು ಇಂದ್ರನಿಂದ ಲಬ್ಧವಾದ, ದತ್ತವಾದ ಅಥವಾ ಜಿತವಾದ ಗೋವುಗಳು ಎಂದರೆ ನೀರಾಗಲೀ ಮೋಘಗಳಾಗಲೀ ಇರಲಾರದು ; ಬೆಳಗಿನ ಕಿರಣಗಳೇ ಇರಬೇಕು. ನಸುಗೆಂಪಾದ ಮತ್ತು ಜಲಮಯವಾದ (೯-೧೦೮-೬) ಗೋವುಗಳೆಂದರೆ ಮೋಘಗಳೆಂದು ತಿಳಿದು ಕೊಳ್ಳಬೇಕು. ಮುಂದಿನ ವಾಕ್ಯಗಳಲ್ಲಿ ಬೆಳಗಿನ ಕಿರಣಗಳು ಅಥವಾ ಮೋಘಗಳೆಂದು ತಿಳಿಯಬೇಕು. ಗೋವುಗಳೊಡೆಯನಾದ ಇಂದ್ರನನ್ನು ಕಂಡೊಡನೆಯೇ ಉಷಸ್ಸು ಅವನನ್ನು ಎದುರ್ಗೊಳ್ಳಲು ಮುಂದೆ ಹೋದಳು (೩-೩೧-೪). ವೃತ್ರನನ್ನು ಪರಾಭವಗೊಳಿಸಿ, ರಾತ್ರಿಯ ಗೋವುಗಳನ್ನು ಕಾಣಿಸುವಂತೆ ಮಾಡಿದನು (೩–೩೪-೩). ಉಷಸ್ಸಿನ ವಿಷಯದಲ್ಲಿಯೂ ಗೋವುಗಳ ಲಾಭವನ್ನು ಸೂಚಿಸುವಂತೆ ಹೇಳಿದೆ. ಗೋಶಾಲೆಯನ್ನು ಗೋವುಗಳಂತೆ, ಉಷಸ್ಸು ಕತ್ತಲಿನ ಬಾಗಿಲನ್ನು ತೆರೆದಳು (೧-೯೨-೪) ಗಟ್ಟಿಯಾದ ಬಂಡೆಯ ಬಾಗಿಲನ್ನು ಉಷೋದೇವಿಯು ತೆರೆಯುತ್ತಾಳೆ (೭-೭೯-೪). ಹಸುಗಳು ಉಷಸ್ಸಿಗಭಿಮುಖವಾಗಿ ಅರಚುತ್ತವೆ (೭–೭೫-೭). ಉನ್ನತ ಪ್ರದೇಶಗಳಲ್ಲಿದ್ದ ಉಷಾದೇವಿಯ ಗೋಶಾಲೆಗಳ ಬಾಗಿಲುಗಳನ್ನು ಅಂಗಿರಸರು ಒಡೆದು ತೆಗೆಯುತ್ತಾರೆ (೬-೬೫-೫). ನೀರಿನ ವಿಷಯ ಪ್ರಸ್ತಾಪಿಸಿರುವ ಮಂತ್ರಗಳಲ್ಲಿಯೇ ಸೂರ್ಯನ ಜೊತೆಯಲ್ಲಿ ಉಷಸ್ಸೂ ಪ್ರಸ್ತಾಪಿತವಾಗಿದೆ (೧-೩೨-೧, ೨ ಮತ್ತು ೪ ; ೬–೩೦-೫ ; ೧೦-೧೩೮–೧ ಮತ್ತು ೨). ಹೀಗೆ ಬಿರುಗಾಳಿಯ ಸಂಬಂಧವಾದ ಕತ್ತಲೆಯಿಂದ ಸೂರ್ಯನ ವಿಮೋಚನೆ ಮತ್ತು ರಾತ್ರಿಯ ಕತ್ತಲಿನಿಂದ ಅವನ ಬಿಡುಗಡೆ ಇವುಗಳ ವಿಷಯದಲ್ಲಿ ಸ್ವಲ್ಪ ತೊಡಕು ಇದ್ದಂತೆ ತೋರುತ್ತದೆ. ಎರಡನೆಯ ಗುಣ ಇಂದ್ರನಲ್ಲಿ ಇಲ್ಲದಿದ್ದರೂ, ಮೊದಲನೆಯದನ್ನೇ ಸ್ವಲ್ಪ (ವಿಸ್ತರಿಸಿ) ಮುಂದುವರಿಸಿ, ರಾತ್ರಿಯ ಕತ್ತಲಿನಿಂದಲೂ ಬಿಡುಗಡೆ ಮಾಡಿದನೆಂದು ಹೇಳಿದೆ.

ಮಳೆ ಗುಡುಗುಗಳ ವಿಷಯದಲ್ಲಿ ಇಂದ್ರನ ಪಾತ್ರವು ಇನ್ನೂ ಸ್ಪಷ್ಟವಾಗಿ ಕೆಲವು ಕಡೆ ಹೇಳಿದೆ. ಇಂದ್ರನು ಆಕಾಶದಲ್ಲಿ ಉಂಟಾಗುವ ಸಿಡಿಲುಗಳಿಗೆ ಕಾರಣನು (೨-೧೩-೭) ಮತ್ತು ನೀರು ಅಧೋಮುಖವಾಗಿ ಸುರಿಯುವಂತೆ ಮಾಡುವವನೂ ಅವನೇ (೨-೧೭-೫).

ವೃತ್ರನೊಡನೆ ಯುದ್ಧ, ಸೂರ್ಯ ಮತ್ತು ಗೋವುಗಳ ಲಾಭ ಇವುಗಳೊಡನೆ ಸೋಮವೂ ಸಂಬಂಧಿಸಿದೆ. ಇಂದ್ರನು ರಾಕ್ಷಸನನ್ನು, ವಾಯು, ಅಗ್ನಿ ಮತ್ತು ಸೂರ್ಯರ ಸಮೀಪದಿಂದ ಓಡಿಸಿದಾಗ, ಸೋಮವು ಅಭಿವ್ಯಕ್ತವಾಯಿತು (೮ ೩-೨೦). ರಾಕ್ಷಸನನ್ನು ಸೋಲಿಸಿದ ಮೇಲೆ, ಸೋಮರಸವನ್ನೇ ಪಾನೀಯವಾಗಿ ಆರಿಸಿಕೊಂಡನು (೩–೩೬-೮) ರಾಕ್ಷಸರನ್ನು ಸೋಲಿಸಿದ ಮೇಲೆ, ಸೋಮವು ಅವನ ಸ್ವಂತ ವಸ್ತುವಾಯಿತು (೭–೯೮-೫), ಅವನು ಸೋಮವನಕ್ಕೇ ರಾಜನಾದನು (೬-೨೦-೩). ಶಿಲೆಗಳಿಂದ ಸುತವಾದ ಸೋಮರಸವನ್ನು ಇಂದ್ರನು ಪ್ರಪಂಚದಲ್ಲಿ ಪ್ರಸಿದ್ಧಿಪಡಿಸಿದನು ಮತ್ತು ಗೋವುಗಳನ್ನು ಹೊರಗಟ್ಟಿದನು (೩-೪೪-೫). ಗೋವುಗಳ ಜೊತೆಯಲ್ಲಿಯೇ ಸೋಮರಸವನ್ನೂ ಗಳಿಸಿದನು (೧-೩೨-೧೨). ನಿಗೂಢವಾಗಿದ್ದ ಅಮೃತವನ್ನು ಅವನು ಸ್ವರ್ಗದಲ್ಲಿ ಕಂಡನು (೬-೪೪-೨೩). ಕಪಿಲಗೋವಿನಲ್ಲಿ ಶೇಖರಿಸಿದ್ದ ಮಧುವನ್ನು ಕಂಡನು (೩-೩೯-೬). ಸಾಧಾರಣ ಗೋವುಗಳಲ್ಲಿ ಉತ್ತಮವಾದ ಪುಷ್ಟಿಕರವಾದ ಕ್ಷೀರವಿದೆ, ಆದರೆ, ಕಪಿಲಗೋವಿನಲ್ಲಿ ಮಾಧುರ್ಯವೆಲ್ಲ ಅಡಕವಾಗಿದೆ, ಸಂತೋಷಾನುಭವಕ್ಕಾಗಿ ಇಂದ್ರನೇ ಇದನ್ನು ಅಲ್ಲಿ ಇಡಿಸಿದುದು (೩-೩೦-೧೪). ಕಪ್ಪು ಅಥವಾ



CC-0. Jangamwadi Math Collection. Digitized by eGangotri

ಕೆಂಪು (೧-೬೨-೯) (ಮತ್ತು ತಾನು ಬಾಗಿಲು ತೆಗೆದು ಹೊರಕ್ಕೆ ಬಿಡುವ) (೬-೧೭-೬) ಹಸುಗಳಲ್ಲಿ ಪಕ್ವವಾದ (ಉತ್ಕೃಷ್ಟವಾದ) ಕ್ಷೀರವನ್ನು ಉಂಟುಮಾಡುತ್ತಾನೆ (೮-೩೨-೨೫). ಈ ಸಂದರ್ಭಗಳೆಲ್ಲಾ ಸಾಧಾರಣವಾಗಿ ಇಂದ್ರನಿಗೂ ಮಳೆ ನೋಡಗಳಿಗೂ ಇರುವ ಸಂಬಂಧ ದ್ಯೋತಕಗಳು.

ಇಂದ್ರನು ಕಂಪಿಸುತ್ತಿದ್ದ ಪರ್ವತಗಳು ಮತ್ತು ಮೈದಾನ ಪ್ರದೇಶಗಳನ್ನು ಸ್ತಿಮಿತಕ್ಕೆ ತಂದನು ೨-೧೨-೨, ೧೦-೪೪-೮). ತಮ್ಮ ಇಚ್ಛೆ ಬಂದಲ್ಲಿ ಹಾರಿಕುಳಿತು, ಭೂಮಿಯ ಸ್ಥಿರತೆಯನ್ನು ಕೆಡಿಸುತ್ತಿದ್ದ ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದನೆಂದು ಇದೆ. ಈ ರೆಕ್ಕೆಗಳೇ ಮುಂದೆ ಗುಡುಗುವ ಮೇಘಗಳಾದುವು (ಮೈ. ಸಂ. ೧-೧೦-೧೩). ಈ ಇತಿಹಾಸಕ್ಕೆ ಆಧಾರ (೫-೫೪-೫)ನೆಯ ಋಕ್ಕಿನಲ್ಲಿರುವಂತಿದೆ. ಇಂದ್ರನೇ ಅಂತರಿಕ್ಷದಲ್ಲಿ ಬೆಳಗುತ್ತಿರುವ ಪ್ರದೇಶಗಳನ್ನು ಸ್ಥಾಪಿಸಿದ್ದು (೮-೧೪-೯). ಅವನೇ ಭೂಮಿ ಮತ್ತು ಆಕಾಶಗಳಿಗೆ ಆಧಾರ ಭೂತನು (೨-೧೭-೫ ಇತ್ಯಾದಿ). ರಥದ ಅಚ್ಚು ಗಾಲಿಗಳೆರಡನ್ನು ಪ್ರತ್ಯೇಕಿಸಿರುವಂತೆ, ಭೂಮ್ಯಾಕಾಶಗಳನ್ನು ಪ್ರತ್ಯೇಕಿಸಿರುವವನೂ ಅವನೇ (೧೦ ೮೯-೪). ದ್ಯಾವಾಪೃಥಿವಿಗಳನ್ನು ಚರ್ಮವನ್ನು (೮-೬-೫) ಹರಡುವಂತೆ ಹರಡುವವನೂ ಅವನೇ (೮-೩-೬). ಅವನೇ ಭೂಮ್ಯಾಕಾಶಗಳನ್ನು ಉತ್ಪತ್ತಿಮಾಡಿದವನು (೮-೩೬-೪, ೬-೪೭-೪ನ್ನು ಹೋಲಿಸಿ). ಅವನ ಗುಪ್ತನಾಮದಿಂದ, ಈಗ ಇರುವುದು ಮತ್ತು ಮುಂದೆ ಬರುವುದು ಎಲ್ಲ ವನ್ನೂ ಸೃಜಿಸಿದನು (೧೦-೫೫-೨) ಮತ್ತು ಅಸತ್ತಾದುದನ್ನು ಒಂದು ಕ್ಷಣದಲ್ಲಿ ಸತ್ಪದಾರ್ಥವನ್ನಾಗಿಯೂ ಮಾಡಿದನು (೬-೨೪-೫). ಭೂಮ್ಯಾಕಾಶಗಳು ಪ್ರತ್ಯೇಕವಾಗಿ ಇರುವುದು ಮತ್ತು ಅವುಗಳನ್ನು ಬೀಳದಂತೆ ಹಿಡಿದಿರುವುದು ಇವೆರಡೂ, ಈ ಎರಡು ಪ್ರದೇಶಗಳನ್ನು ಒಟ್ಟಾಗಿ ಹಿಡಿದಿದ್ದ (೮-೬-೧೭) ರಾಕ್ಷಸನೊಬ್ಬನನ್ನು ಇಂದ್ರನು ಜಯಿಸಿದುದರ ಪರಿಣಾಮ (೫-೨೯-೪). ವೃತ್ರವಧೆಗಾಗಿ ಇಂದ್ರನು ಜನಿಸಿದಾಗ, ಭೂಮಿಯನ್ನು ವಿಸ್ತರಿಸಿ, ಆಕಾಶವನ್ನು ಸ್ಥಿರಪಡಿಸಿದನು (೮-೭೮-೫). ರಾಕ್ಷಸ ಸಂಹಾರಿಯಾದ ಇಂದ್ರನು ನದಿಗಳಿಗೆ ದಾರಿ ಯನ್ನು ಮಾಡಿ, ಭೂಮಿಯು ಸ್ವರ್ಗಕ್ಕೆ ಕಾಣಿಸುವಂತೆ ಮಾಡಿದನು (೨-೧೩-೫). ಗುಪ್ತವಾಗಿದ್ದ ಭೂಮ್ಯಾ ಕಾಶಗಳನ್ನು ಕಂಡುಹಿಡಿದನು (೮-೮೫-೧೬), ಅಥವಾ ಬೆಳಕು ಮತ್ತು ನೀರುಗಳ ಜೊತೆಯಲ್ಲಿ ಅವೆರಡನ್ನೂ ಗಳಿಸಿದನು (೩-೩೪-೮). ಕತ್ತಲಿನಲ್ಲಿ ಒಂದರೊಡನೊಂದು ಸೇರಿದಂತೆ ಕಾಣುತ್ತಿದ್ದ ಆಕಾಶ ಮತ್ತು ಭೂಮಿ ಗಳು ಬೆಳಕು ಬಂದಮೇಲೆ ಪ್ರತ್ಯೇಕವಾಗಿ ಕಾಣುತ್ತವೆ ಎಂಬುದು, ಮೇಲೆ ಹೇಳಿದ ಅಭಿಪ್ರಾಯಗಳಿಗೆ ಎಡೆಕೊಟ್ಟಿರಬಹುದು,

ವಜ್ರಧಾರಿಯಾಗಿ, ವಾಯುಮಂಡಲದ ರಾಕ್ಷಸರನ್ನು ಯುದ್ಧದಲ್ಲಿ ನಾಶಗೊಳಿಸುವ ಇಂದ್ರನನ್ನು ಯೋಧರು ಸತತವಾಗಿ ಸ್ತುತಿಸುತ್ತಾರೆ (೪-೨೪-೩ ಇತ್ಯಾದಿ). ಯುದ್ಧದ ದೇವತೆಯೆಂದು ಇತರ ದೇವತೆಗಳಿ ಗಿಂತ ಹೆಚ್ಚಾಗಿ ಇವನನ್ನೇ, ಭೂದೈತ್ಯಸಂಹಾರದಲ್ಲಿ ಸಹಾಯಕನಾಗುವಂತೆ ಆರ್ಯರು ಪ್ರಾರ್ಥಿಸುವುದು. ಆರ್ಯರ ವರ್ಣವನ್ನು ರಕ್ಷಿಸಿ, ದಸ್ಯುಗಳನ್ನು ಅವರ ಅಧೀನಮಾಡುತ್ತಾನೆ (೩-೩೪-೯, ೧-೧೩೦-೮). ಕಪ್ಪುಬಣ್ಣದವ ರಾದ ೫೦,೦೦೦ ದಸ್ಯುಗಳನ್ನು ನಾಶಮಾಡಿ, ಅವರ ಗೋಪುರಗಳನ್ನೆಲ್ಲಾ ಕೆಡವಿದನು (೪-೧೬-೧೩). ದಸ್ಯುಗ ಳನ್ನು ಆರ್ಯರ ಅಧೀನಮಾಡಿ (೬-೧೮-೩) ಆರ್ಯರಿಗೆ ಭೂಮಿಯನ್ನು ಕೊಟ್ಟನು (೪-೨೬-೨). ಏಳು ನದಿಗಳ ಪ್ರದೇಶದಲ್ಲಿ ದಸ್ಯುಗಳ ಆಯುಧಗಳು ಆರ್ಯರ ಮೇಲೆ ಬೀಳದಂತೆ ಅವುಗಳನ್ನು ಬೇರೆಕಡೆ ತಿರುಗಿಸುತ್ತಾನೆ (೮-೨೪-೨೭). ಅಶ್ವಿನಿಗಳು (೧-೧೧೭-೨೧), ಅಗ್ನಿ (೮-೯೨-೧), ಅಥವಾ ಇತರ ದೇವತೆಗಳು (೬-೨೧-೧೧), ಒಂದೊಂದು ವೇಳೆ ಮಾತ್ರ ಆರ್ಯರ ರಕ್ಷಕರು.

ಇಂದ್ರನೊಬ್ಬನೇ ಸಹಾನುಭೂತಿಯುಳ್ಳ ಸಹಾಯಕನು (೧-೮೪-೧೯ ; ೮-೫೫-೧೩, ೮-೬೯-೧); ತನ್ನ ಆರಾಧಕರನ್ನು ಬಿಡಿಸುವವನು ಮತ್ತು ಅವರ ಪರವಾಗಿ ವಾದಿಸುವವನು (೮-೮೫-೨೦); ಆರಾಧಕರಿಗೆ ಶಕ್ತಿ


CC-0. Jangamwadi Math Collection. Digitized by eGangotri

ದಾಯಕನೂ (೭-೩೧-೫) ಮತ್ತು ದುರ್ಗವೂ (೮-೬೯-೭) ಅವನೇ. ಅವನ ಮಿತ್ರರನ್ನು ಕೊಲ್ಲುವವರೂ, ಪರಾಜಯಗೊಳಿಸುವವರೂ ಇಲ್ಲ (೧೦-೧೫೨-೧). ಇಂದ್ರನನ್ನು ಪೂಜಿಸುವವರಿಗೆ, ಅವನು ಮಿತ್ರನು ? ಒಂದೊಂದು ವೇಳೆ ಭ್ರಾತೃವು (೩-೫೩-೫) ತಂದೆ [೪-೧೭-೧೭, ೧೦-೪೮-೧) ಅಥವಾ ತಾಯಿ ಮತ್ತು ತಂದೆ ಎರಡೂ ಅವನೇ (೮-೮೭-೧೧). ಪಿತೃಗಳಿಗೆ ಮಿತ್ರನು (೬-೨೧-೮, ೭-೩೩-೪ನ್ನು ಹೋಲಿಸಿ) ಮತ್ತು ಕುಶಿಕ ಗೋತ್ರದವಂಗೆ ಪರಮಮಿತ್ರನು, ಆದರಿಂದಲೇ ಅವನಿಗೆ ಕೌಶಿಕ (೧-೧೦-೧೧) ಎಂಬ ಹೆಸರು ಬಂದಿರಬೇಕು. ಹೋಮದ್ರವ್ಯಗಳನ್ನು ಅರ್ಪಿಸದವನ ಸ್ನೇಹ ಅವನಿಗೆ ಬೇಕಿಲ್ಲ (೧೦-೪೨-೪). ಆದರೆ ಯೋಗ್ಯನಾದವನಿಗೆ ದ್ರವ್ಯಾದಿಗಳನ್ನನು ಗ್ರಹಿಸುತ್ತಾನೆ (೨-೧೯-೪, ೨-೨೨-೩, ೭-೨೭-೩). ಇತರ ಆರಾಧಕರ ಕಡೆ ಗಮನ ಹೋಗದೇ ಇರಲಿ ಎಂದು ಪ್ರಾರ್ಥನೆ (೨-೧೮-೩, ಇತ್ಯಾದಿ). ಎಲ್ಲಾ ಮನುಷ್ಯರೂ ಅವನಿಂದ ಉಪಕೃತರು (೮-೫೪-೭) ಅವನ ಎರಡ ಹಸ್ತಗಳೂ ಧನಾದಿಗಳಿಂದ ತುಂಬಿವೆ (೭-೩೭-೩). ಅವನು ಐಶ್ವರ್ಯದಿಂದ ತುಂಬಿದ ಒಂದು ಕೋಶಾಗಾರ (೧೦-೪೨-೨). ಕೊಕ್ಕೆಯನ್ನು ಹಿಡಿದು, ಗಿಡದಿಂದ ಮನುಷ್ಯನು ಹಣ್ಣುಗಳನ್ನು ಉದುರಿಸುವಂತೆ, ಇಂದ್ರನು ತನ್ನ ಪೂಜಕರ ಮೇಲೆ, ಧನವನ್ನು ವರ್ಷಿಸಬಲ್ಲನು (೩-೪೫-೪). ರೋಷಾವಿಷ್ಟವಾದ ಗೂಳಿಯನ್ನು ತಡೆಗಟ್ಟುವುದು ಸುಲಭವಾಗಿರಬಹುದು, ಆದರೆ ದಾನಮಾಡಬೇಕೆಂದು ಇಚ್ಛೆಮಾಡಿದ ಮೇಲೆ ಅವನನ್ನು ತಡೆಯುವುದು ಅಸಾಧ್ಯ (೮-೭೦-೩). ಅವನು ಐಶ್ವರ್ಯಕ್ಕೆ ಸಾಗರವಿದ್ದಂತೆ (೧-೫೧-೧); ನದಿಗಳೆಲ್ಲಾ ಸಾಗರದ ಕಡೆಗೇ ಹರಿಯುವಂತೆ, ಐಶ್ವರ್ಯವೆಲ್ಲವೂ ಅವನನ್ನೇ ಸೇರುತ್ತವೆ (೬-೧೯-೫) ಇಂದ್ರನಿಂದ ಲಭ್ಯವಾದ ನಾನಾವಿಧವಾದ ಸಂಪತ್ತನ್ನು ವರ್ಣಿಸುವುದೇ ಒಂದು ಸೂಕ್ತವಿದೆ (೧೦-೪೭) ಇತರ ದೇವತೆಗಳಂತೆ, ಇಂದ್ರನಿಂದಲೂ ಗೋವುಗಳು ಮತ್ತು ಅಶ್ವಗಳು ಪ್ರಾರ್ಥಿತವಾಗಿವೆ (೧-೧೬-೯ ; ೧-೧೦೧-೪ ಇತ್ಯಾದಿ). "ಗೋಪತಿ" ಎಂದರೆ ವಿಶೇಷವಾಗಿ ಇಂದ್ರನೇ. ಅವನು ಮಾಡುವ ಯುದ್ಧಗಳಿಗೆಲ್ಲಾ, ಸಾಧಾರಣವಾಗಿ "ಗವಿಷ್ಟಿ" (ಗೋವುಗಳಿಗಾಗಿ ಅಪೇಕ್ಷೆ ೮-೨೪-೫, ಇತ್ಯಾದಿ) ಎಂದು ಹೆಸರು. ಅವನಿಂದ ದತ್ತವಾದವುಗಳೆಲ್ಲವೂ ಅವನ ಜಯದ ಫಲ (೪-೧೭-೧೦ ಮತ್ತು ೧೧ ಇತ್ಯಾದಿ). ಇಂದ್ರನು ಪತ್ನೀಪುತ್ರಾದಿ ದಾತೃವು (೪-೧೭-೧೬, ೧-೫೩-೫) ಔದಾರ್ಯ ಅವನದೊಂದು ವಿಶೇಷಗುಣ. ಇದರಿಂದಲೇ ಅವನಿಗೆ "ಮಘವರ್", 'ವಸುಪತಿ' ಇತ್ಯಾದಿ ವಿಶೇಷಣಗಳು.

ಇಂದ್ರನ ಸಂಬಂಧವಾದ ಕಥೆಗಳಲ್ಲಿ ವೃತ್ರವಧೆಯೇ ಮುಖ್ಯವಾದುದಾದರೂ, ಅನೇಕ ಶೌರ್ಯ ಕಾರ್ಯಗಳನ್ನು ಮಾಡಿದನೆಂದು ಪ್ರಸಿದ್ಧಿಬಂದಿದೆ. ಕೆಲವು ವಾಕ್ಯಗಳಲ್ಲಿ ಉಷೋದೇವಿಯೊಡನೆ ಘರ್ಷಣೆಯಾಯಿತೆಂದು ಇದೆ. ಇಂದ್ರನು ಉಷೋದೇವಿಯ ಬಂಡಿಯನ್ನು ಹಾಳುಮಾಡಿದನು (೧೦-೭೩-೬). ಅವಳ ಬಂಡಿಯನ್ನು ವಜ್ರಾಯುಧದಿಂದ ಚೂರು ಚೂರು ಮಾಡಿ, ತನ್ನ ವೇಗಶಾಲಿಗಳಾದ ಅಶ್ವಗಳಿಂದ ಅವಳ ನಿದಾನವಾದ ಕುದುರೆಗಳನ್ನು ನಾಶಪಡಿಸಿದನು (೨-೧೫-೬). ಇಂದ್ರನ ವಜ್ರಕ್ಕೆ ಹೆದರಿ, ಉಷೋದೇವಿಯು ತನ್ನ ರಥದ ಬಂಡಿಯನ್ನು ಪರಿತ್ಯಾಗಮಾಡಿದಳು (೧೦-೧೩೮-೫). ಒಳಗೇ ಸಂಚುನಡಸುವ, ದುರ್ದೇವತೆಯಾದ ಉಷಸ್ಸನ್ನು ಹೊಡೆದು, ನಾಶಮಾಡಿ, ಇಂದ್ರನು ಒಂದು ಮಹತ್ಕಾರ್ಯಸಾಧನೆ ಮಾಡಿದನು ; ಅವಳ ಚೂರ್ಣವಾದ ರಥವು ವಿಪಾಶೀನದಿಯಲ್ಲಿ ಬಿದ್ದಿತ್ತು, ಮತ್ತು ಅವಳು ಗಾಬರಿಯಾಗಿ ಓಡಿಹೋದಳು (೪-೩೦-೮ರಿಂದ೧೧). ಬಿರುಗಾಳಿಯಿಂದ ಉಷಸ್ಸಿನ ತಿರೋಧಾನವೇ ಈ ಕಥೆಗೆ ಆಧಾರವಾಗಿದೆ. ಮತ್ತೆ ಕೆಲವರು ತನ್ನ ನಿಯತ ಕಾಲಕ್ಕಿಂತ ಹೆಚ್ಚು ಹೊತ್ತು ಇದ್ದ ಉಷಸ್ಸನ್ನು ಅತಿಕ್ರಮಿಸಿ, ಸೂರ್ಯನು ಉದಯಿಸುವಂತೆ ಮಾಡಿದುದೇ ಇದಕ್ಕೆ ಆಧಾರವೆಂತಲೂ ಅಭಿಪ್ರಾಯಪಡುತ್ತಾರೆ.

ಸ್ವಲ್ಪ ಅಸ್ಪಷ್ಟವಾದ ಕಥೆಯೊಂದಿದೆ. ಏತಸಾ ಎಂಬ ಅಶ್ವಕ್ಕೂ, ಸೂರ್ಯನ 'ಹರಿತ'ಗಳೆಂಬ ಅಶ್ವಗಳಿಗೂ ಪಂದ್ಯನಡೆದು, ಸೂರ್ಯನೇ ಮುಂದೆ ಇರುತ್ತಾನೆ. ಇಂದ್ರನು ಸೂರ್ಯನನ್ನು ಅಡ್ಡಿಪಡಿಸುತ್ತಾನೆ. ಈ

ಸಮಯದಲ್ಲಿ ಸೂರ್ಯನ ರಥದ ಒಂದು ಚಕ್ರವು ಕಳೆದುಹೋಗುತ್ತದೆ. ಇಂದ್ರನು ಸೂರ್ಯನ ಕುದುರೆಗಳನ್ನು ತಡೆದನು (೧೦-೯೨-೮) ಎಂಬುದು ಈ ಸಂದರ್ಭದಲ್ಲಿಯೇ ಇರಬಹುದು. ಸೋಮವನ್ನು ಬಲಾತ್ಕಾರವಾಗಿ ಇದ್ರನು ಸ್ವೀಕರಿಸಿದನೆಂದೂ ಇದೆ. ಪಣಿನಾಮಕ ಅಸುರನಿಂದ ಗೃಹೀತವಾಗಿದ್ದ ಗೋವುಗಳನ್ನು ಇಂದ್ರನು ಪಡೆದನೆಂಬುದು (೧೦-೧೦೮) ಮತ್ತೊಂದು ಕಥೆ ಈ ಪಣಿಗಳು ಮಹಾಲೋಭಿಗಳು. ಯಾಗಾದಿಗಳಿಗೋಸ್ಕರ ಅಪೇಕ್ಷಿಸಿದಾಗ್ಯೂ ಕೊಡದೇ ಅವುಗಳನ್ನು ಮುಚ್ಚಿಡುತ್ತಾರೆ. ಇಂದ್ರನ ದೂತಳಾದ ಸರಮೆ ಎಂಬ ನಾಯಿಯು ಆ ಗೋವುಗಳಿರುವ ಸ್ಥಳವನ್ನು ಕಂಡುಹಿಡಿದು, ಅವುಗಳನ್ನು ಹಿಂದಕ್ಕೆ ಕೊಡಬೇಕೆಂದು ಹೇಳುತ್ತಾಳೆ. ಪಣಿಗಳು ಅವಳನ್ನು ಹಾಸ್ಯಮಾಡುತ್ತಾರೆ. ಗೋವುಗಳನ್ನು ಪಡೆಯಬೇಕೆಂಬಾಶೆಯಿಂದ, ಇಂದ್ರನು, ವಲನ ಕೋಟೆಯನ್ನು ಭೇದಿಸಿ, ಪಣಿಗಳನ್ನು ಸೋಲಿಸಿ, ಅವುಗಳನ್ನು ಬಿಡುಗಡೆ ಮಾಡಿದನೆಂದು ಇನ್ನೊಂದು ಸ್ಥಳದಲ್ಲಿದೆ (೬-೩೯-೨). ಮತ್ತೊಂದು ಸ್ಥಳದಲ್ಲಿ ವಲನು ಗೋವುಗಳನ್ನು ಹಿಡಿದಿಟ್ಟದ್ದನು; ಅವುಗಳನ್ನು ಇಂದ್ರನು ಹೊರಕ್ಕಟ್ಟಿದನು (೨-೧೨-೩, ೩-೩೦-೧೦) ಎಂದಿದೆ. ಇಲ್ಲಿ ಪಣಿಯ ಹೆಸರೇ ಇಲ್ಲ. ಅನೇಕ ವಾಕ್ಯಗಳಲ್ಲಿ, ಈ ವಲನ ಪರಾಜಯ ಮತ್ತು ಗೋವಿಮೋಚನ ಕಾರ್ಯಗಳಲ್ಲಿ ಅಂಗಿರಸರು ಇಂದ್ರನಿಗೆ ಸಹಾಯಕರಾಗಿದ್ದರೆಂದು ಇದೆ.

ದಾಸ ಅಥವಾ ದಸ್ಯುಗಳನ್ನು ಇಂದ್ರನು ಸೋಲಿಸಿದನೆಂದು ಒಂದೊಂದು ಉಕ್ತಿ ಇದೆ. ಈ ದಾಸ ಅಥವಾ ದಸ್ಯುಗಳು ಮನುಷ್ಯಜಾತಿಯವರು; ಅವರ ವರ್ಣ ಕಪ್ಪು (೧-೧೩೦-೮ ; ೨-೨೦-೭ ನ್ನು ಹೋಲಿಸಿ) ಅವರಿಗೆ ನಾಸಿಕವಿಲ್ಲ (೫-೨೯-೧೦); ದೇವರಲ್ಲಿ ಭಕ್ತಿಯಿಲ್ಲ ಮತ್ತು ಯಜ್ಞಯಾಗಾದ್ಯಾಚರಣೆಯಿಲ್ಲ. ಇವರು ಸಾಧಾರಣವಾಗಿ ಭೂಮಿಯಲ್ಲಿರುವವರೆಂದು ಹೇಳಬೇಕು; ಏಕೆಂದರೆ, ವೃತ್ರವಧಾದಿಗಳು ಮನುಷ್ಯ ಸಾಮಾನ್ಯದ ಉಪಕಾರಕ್ಕಾಗಿ ಎಂದಿರುವಾಗ ಈ ದಸ್ಯುಗಳ ಸಂಹಾರವು ಯಾವುದಾದರೂ ಒಂದು ವ್ಯಕ್ತಿಗೋಸ್ಕರ, ಇಲ್ಲವೇ ವ್ಯಕ್ತಿಯ ಸಹಾಯದಿಂದ. ಈ ರೀತಿ ಇಂದ್ರನಿಂದ ಸಹಾಯ ಪಡೆಯುವವರು ಸಾಧಾರಣವಾಗಿ ಋಷ್ಯಾದಿಗಳು ಅಲ್ಲ; ರಾಜರು ಅಥವಾ ಯೋಧರುಗಳು. ದಿವೋದಾಸ ಅತಿಥಿಗ್ವ ಎಂಬುವನು ಸುದಾಸನೆಂಬ ರಾಜನ ಮಗ; ಅವನ ಶತ್ರು, ಕುಲಿತರನ ಮಗ ಶಂಬರ. ಆದರೆ ಈ 'ದಾಸ' ಎಂಬ ಪದಕ್ಕೆ, ಇಂದ್ರನು ನೀರನ್ನು ಬಿಡುಗಡೆ ಮಾಡುವುದಕ್ಕೋಸ್ಕರ ವಧಿಸಿದ 'ಅಹಿ' (೨-೧೧-೨) ಅಥವಾ, ತ್ರಿತನೊಡನೆ ಯುದ್ಧ ವಾಡಿದ ಮೂರುತಲೆ, ಆರುಕಣ್ಣಿನ ಪಿಶಾಚಿ (೧೦-೯೯-೬), ಅಥವಾ ಇಂದ್ರನ ವಸಡುಗಳನ್ನು ಹೊಡೆದುಹಾಕಿದ ವ್ಯಂಶ (೪-೧೮-೯), ಇವರುಗಳಿಗೆ ಅನ್ವಯಿಸುವ ಸಂದರ್ಭದಲ್ಲಿ ರಾಕ್ಷಸ ಎಂತಲೇ ಅರ್ಥ. ನಮುಚಿ ಮುಂತಾದ ದಸ್ಯುಗಳೊಡನೆ ಇಂದ್ರನ ಯುದ್ಧಗಳ ವಿಷಯವು ರಾಕ್ಷಸರ ವಿಷಯವು ಪ್ರಸಕ್ತವಾದಾಗ ಚರ್ಚಿಸಲ್ಪಡುತ್ತದೆ.

ಇಂದ್ರನಿಗೆ ಸಂಬಂಧಿಸಿದಂತೆ, ಇನ್ನೂ ಅನೇಕ ಅಮುಖ್ಯವಾದ ಕಥೆಗಳಿವೆ. ಇಂದ್ರ ಮತ್ತು ಇಂದ್ರಾಣಿಯರಿಗೆ, ವೃಷಾಕಪಿಯ ವಿಷಯದಲ್ಲಿ ಆದ ಮನಸ್ತಾಪ, ವೃಷಾಕಪಿಗೆ ಆದ ಶಿಕ್ಷೆ, ಅದು ಓಡಿಹೋಗುವುದು, ಅನಂತರ ಇಂದ್ರ ವೃಷಾಕಪಿಗಳಿಗೆ ಸಂಧಿಯಾಗಿ, ವೃಷಾಕಪಿ ಹಿಂತಿರುಗುವುದು ಈ ಅಂಶಗಳುಳ್ಳದೊಂದು (೧೦-೮೬) ಕಥೆ. ಇಂದ್ರನು ತುರ್ವಸಾ ಮತ್ತು ಯದು ಎಂಬುವರನ್ನು ಸುರಕ್ಷಿತವಾಗಿ ನದಿ ದಾಟಿಸಿದುದು. (೧-೧೭೪-೯ ಇತ್ಯಾದಿ) ಇನ್ನೊಂದು ಸುದಾಸನು ಮಾಡಿದ ಅನೇಕ ಯುದ್ಧಗಳು, ಅವುಗಳಲ್ಲಿ ಅವನಿಗೆ ಇಂದ್ರನ ಸಹಾಯ, ಇದೂ ಒಂದು. ಕಡೆಯದಾಗಿ, ಅಪಾಲಾ ಎಂಬುವಳೊಬ್ಬಳು ನದಿಯ ತೀರದಲ್ಲಿ ಸೋಮಲತೆಯನ್ನು ಕಂಡು, ಅದನ್ನು ಹಲ್ಲಿನಿಂದ ಜಜ್ಜಿ, ಬಂದ ರಸವನ್ನು ಇಂದ್ರನಿಗೆ ಅರ್ಪಿಸಿ, ಅವನಿಂದ ಬೇಕಾದ ವರಗಳನ್ನು ಪಡೆದಳೆಂಬುದು ಒಂದು ಕಥೆ.


CC-0. Jangamwadi Math Collection. Digitized by eGangotri

ಒಟ್ಟಿನಲ್ಲಿ ಹೇಳುವುದಾದರೆ, ದೈಹಿಕವಾದ ಶಕ್ತ್ಯತಿಶಯ ಮತ್ತು ಭೌತಿಕ ಪ್ರಪಂಚದ ಮೇಲೆ ಅಧಿಕಾರ ಇವೆರಡೇ ಇಂದ್ರನ ಮುಖ್ಯವಾದ ಗುಣಗಳು. ಆವೇಶಪೂರಿತವಾದ ಕ್ರಿಯೆ ಅವನ ವೈಶಿಷ್ಟ್ಯ. ವರುಣನದು ಅಪ್ರವರ್ತಕವಾದ ಪ್ರಭಾವ. ವರುಣನಂತೆ ಇಂದ್ರನೂ ಸಂರಾಜನೇ. ಆದರೆ ನಿಯತವಾದ ವಿಧಿಗಳನ್ನು ಆಚರಣೆಗೆ ತರಿಸುವವನಾಗಿ ಅಲ್ಲ ಅವನ ಸಂರಾಜತ್ವ; ಅವನು ಬಹಳ ಶಕ್ತನಾದ ಯೋಧ; ಅವನಿಗೆ ಎದುರೇ ಇಲ್ಲ; ತನ್ನ ಶಕ್ತಿಯಿಂದ ಪ್ರಪಂಚವನ್ನೆಲ್ಲಾ ಜಯಿಸಬಲ್ಲ. ಅಲ್ಲದೆ ಅವನ ಔದಾರ್ಯಕ್ಕೆ ಮಿತಿಯೇ ಇಲ್ಲ ಸೋಮಪಾನದಿಂದ ತುಷ್ಟನಾಗಿ ತನ್ನನ್ನು ಪೂಜಿಸುವರಿಗೆ ಅಪಾರ ಧನವನ್ನು ಅನುಗ್ರಹಿಸುತ್ತಾನೆ. ಅವನಿಗೆ ವರುಣನಿಗಿರುವ ನೈತಿಕ ಉನ್ನತಿ ಘನತೆಗಳಿಲ್ಲ. ಒಂದೊಂದು ಕಡೆ ಅವನೂ ವರುಣನಂತೆ ನೈತಿಕ ಉನ್ನತಿಯನ್ನು ಪಡೆದಿದ್ದಾನೆಂದೂ, ನಿಯಮ ಬದ್ಧನಾಗಿದ್ದು, ಅದರಿಂದಲೇ ಸ್ವರ್ಗವನ್ನು ಪಡೆದನೆಂದೂ ಇದೆ (೧೦-೧೬೭-೧; ೧೦-೧೫೯-೪ ನ್ನು ಹೋಲಿಸಿ).

## ತ್ರಿತ ಆಪ್ತ್ಯ

ಈ ದೇವತಾಕವಾದ ಸೂಕ್ತ ಯಾವುದೂ ಇಲ್ಲ. ಆದರೆ ೩೯ ಸೂಕ್ತಗಳಲ್ಲಿ ಹಂಚಿಕೊಂಡಿರುವ ಸುಮಾರು ೪೦ ಮಂತ್ರಗಳಲ್ಲಿ ತ್ರಿತ ಆಪ್ತ್ಯ, ತ್ರಿತ ಅಥವಾ ಆಪ್ತ್ಯ ಎಂಬುದಾಗಿ ಬಂದಿದೆ. ಇವುಗಳಲ್ಲಿ ತ್ರಿತ ಆಪ್ತ್ಯ ಅಥವಾ ಆಪ್ತ್ಯ ಎಂಬುದಾಗಿ, ನಾಲ್ಕು ಸೂಕ್ತಗಳಲ್ಲಿರುವ (೧-೧೦೫; ೫-೪೧; ೮-೪೭; ೧೦-೮) ಏಳು ವಾಕ್ಯಗಳಲ್ಲಿ ಮಾತ್ರ ಇದೆ. ಉಳಿದ ಸ್ಥಳಗಳಲ್ಲೆಲ್ಲಾ ತ್ರಿತ ಎಂಬುದಾಗಿಯೇ ಪ್ರಯೋಗಿಸಿದೆ. ಹೆಚ್ಚಾಗಿ ಇಂದ್ರನ ಜೊತೆಯಲ್ಲಿಯೇ, ಏಳು ಸಲ ಅಗ್ನಿಯ ಜೊತೆಯಲ್ಲಿ ಅಥವಾ ಅಗ್ನಿ ಎಂಬರ್ಥದಲ್ಲಿಯೂ, ಅನೇಕ ಸಲ ಮರುತ್ತುಗಳೊಡನೆಯೂ ಮತ್ತು ಹತ್ತು ಸಲ ಸೋಮದೇವತೆ ಅಥವಾ ಸೋಮರಸ ಎಂಬುದಾಗಿಯೂ ಪ್ರಯೋಗಿಸಿದೆ. ಸೋಮರಸದ ಪ್ರಭಾವದಿಂದ ತ್ರಿತನೊಬ್ಬನೇ ವೃತ್ರನನ್ನು ಭೇದಿಸಿದನೆಂದು (೧-೧೮೭-೧) ಹೇಳಿದೆ.

ತ್ರಿತ ಮತ್ತು ಇಂದ್ರರಿಗೆ ಮರುತ್ತುಗಳು ವೃತ್ರಾಸುರನನ್ನು ಗೆಲ್ಲುವುದಕ್ಕೆ ಸಹಾಯ ಮಾಡಿದರು (೮-೭-೨೪). ಇಂತಹ ಕಾರ್ಯಗಳು ತ್ರಿತವೈಶಿಷ್ಟ್ಯವಿರಬೇಕು. ಇತರ ಸ್ಥಳಗಳಲ್ಲಿ ಇದನ್ನೇ ಉದಾಹರಣೆಯಾಗಿ ಉಪಯೋಗಿಸಿದೆ. ತ್ರಿತನು ವಲನ ಕೋಟೆಗಳನ್ನು ಭೇದಿಸಿದಂತೆ ಮಳೆಯನ್ನು ನಿರೋಧಿಸಿದ್ದ ವೃತ್ರನೊಡನೆ ಯುದ್ಧಮಾಡಿದಾಗ, ಇಂದ್ರನು ವೃತ್ರನನ್ನು (೧-೫೨-೪ ಮತ್ತು ೫) ಭೇದಿಸಿದನು. ಇಂದ್ರಾಗ್ನಿಗಳಿಂದ, ಸಹಾಯ ಪಡೆದ ಮನುಷ್ಯನೂ ಬಲವಾದ ದುರ್ಗಗಳನ್ನು, ತ್ರಿತನಂತೆ, ಭೇದಿಸುತ್ತಾನೆ (೫-೮೬-೧). ತ್ರಿತ ಆಪ್ತ್ಯನು ಪಿತೃದತ್ತವಾದ ಆಯುಧಸಹಿತನಾಗಿ, ಇಂದ್ರನಿಂದ ಪ್ರೇರೇಪಿಸಲ್ಪಟ್ಟು, ತ್ವಷ್ಟೃ ಪುತ್ರನಾದ ಮೂರು ತಲೆಯುಳ್ಳ ರಾಕ್ಷಸನೊಡನೆ ಹೊಡೆದಾಡಿ, ಅವನನ್ನು ವಧಿಸಿ, ಗೋವುಗಳನ್ನು ಬಿಡುಗಡೆ ಮಾಡಿದನು (೧೦-೮-೮). ಇದೇ ಕಾರ್ಯವನ್ನು ಇಂದ್ರನೂ ಮಾಡಿದಾನೆ; ತ್ವಷ್ಟೃ ಪುತ್ರನಾದ ವಿಶ್ವರೂಪನ ಮೂರುತಲೆಗಳನ್ನು ಭೇದಿಸಿ, ಗೊವುಗಳನ್ನು ಸ್ವಾಧೀನಪಡಿಸಿಕೊಳ್ಳುತ್ತಾನೆ. ಇಂದ್ರನು (ಅಥವಾ ಅಗ್ನಿಯು) ಘರ್ಜಿಸುತ್ತಿದ್ದ, ಮೂರುತಲೆ ಮತ್ತು ಆರುಕಣ್ಣಿನ ರಾಕ್ಷಸನನ್ನು ನಿಗ್ರಹಿಸಿದನು; ತ್ರಿತನು ತನ್ನ ಸಾಮರ್ಥ್ಯದಿಂದ ಕಬ್ಬಿಣದ ಅಲುಗಿನ ವಜ್ರಾಯುಧವನ್ನು ಪ್ರಯೋಗಿಸಿ ಆ ವರಾಹ (ರಾಕ್ಷಸ) ವನ್ನು ಕೊಂದನು (೧೦-೯೯-೬). ಇಬ್ಬರು ದೇವತೆಗಳೂ ಒಂದೇ ತೆರನಾದ ಸಾಹಸಕಾರ್ಯವನ್ನು ಮಾಡಿದಾರೆ. ತ್ರಿತನಿಗೋಸ್ಕರ ಇಂದ್ರನು ಸರ್ಪವ ಹಿಡಿತದಿಂದ ಗೋವುಗಳನ್ನು ಬಿಡಿಸಿದನು (೧೦-೪೮-೨). ತ್ವಷ್ಟೃಪುತ್ರನಾದ ವಿಶ್ವರೂಪನನ್ನು ಇಂದ್ರನು ತ್ರಿತನಿಗೆ ಒಪ್ಪಿಸಿದನು (೨-೧೧-೧೯) ಸೋಮವನ್ನು ಹಿಂಡುತ್ತಿರುವ ತ್ರಿತನಿಂದ ಯುಕ್ತನಾಗಿ. ಇಂದ್ರನು ಅರ್ಬುದನನ್ನು ಉರುಳಿಸಿ, ಅಂಗಿರಸರಿಂದೊಡಗೂಡಿ, ವಲನನ್ನು ಭೇದಿಸಿದನು (೨-೧೧-೨೦). ಬಿರುಗಾಳಿಯು



CC-0. Jangamwadi Math Collection. Digitized by eGangotri

ಬೀಸುತ್ತಿದ್ದು ಮಿಂಚು ಹೊಳೆಯುತ್ತಿದ್ದಾಗ ತ್ರಿತನು ಗುಡುಗುತ್ತಾನೆ ಮತ್ತು ನೀರು ಭೋರ್ಗರೆಯುತ್ತದೆ (೫-೫೪-೨). ಮರುದ್ದೇವತಾಕವಾದ (೨-೩೪) ಸೂಕ್ತದಲ್ಲಿ, ತ್ರಿತನು ಕಾಣಿಸಿದಾಗ, ಮರುತ್ತುಗಳ ಪಥವು ಪ್ರಕಾಶಿಸುತ್ತದೆ ಎಂದೂ, ಮರುತ್ತುಗಳನ್ನು ತ್ರಿತನು ತನ್ನ ರಥದಲ್ಲಿ ಕರೆದುಕೊಂಡು ಬಂದನೆಂದೂ ಇದೆ. ಅಗ್ನಿ ಸೂಕ್ತವೊಂದರಲ್ಲಿ ಗಾಳಿಗಳು ತ್ರಿತನನ್ನು ಕಂಡು ತಮಗೆ ಸಹಾಯ ಮಾಡುವಂತೆ ಅಪ್ಪಣೆ ಮಾಡಿದವೆಂದು (೧೦-೧೧೫-೪) ಇದೆ. ಕಮ್ಮಾರನು ತಿದಿಯಿಂದ ಗಾಳಿಯನ್ನು ಒತ್ತುವಂತೆ ತ್ರಿತನು ಆಕಾಶದಿಂದ ಬೀಸಿದಾಗ, ಬೆಂಕಿಯ ಜ್ವಾಲೆಗಳು ಹೊರಡುತ್ತವೆ (೫-೯-೫). ತ್ರಿತನು ಬಹಳ ಕಾತುರನಾಗಿ ಅಗ್ನಿಯನ್ನು ಹುಡುಕಿ, ಅವನನ್ನು ಗೋವಿನ ತಲೆಯಮೇಲೆ ಕಂಡನು. ಅದೇ ಅಗ್ನಿಯು ಮನೆಗಳಲ್ಲಿ ಜನಿಸಿದಾಗ, ಯುವಕನಂತೆ ತೇಜಸ್ಸಿಗೆ ನೆಲೆಯಾಗಿ, ಆ ಮನೆಗಳಲ್ಲಿ ಸ್ಥಿರವಾಗಿ ನಿಲ್ಲುತ್ತಾನೆ. ಜ್ವಾಲೆಗಳಿಂದ ಆವೃತನಾಗಿ, ತ್ರಿತನು ತನ್ನ ಸ್ಥಾನದಲ್ಲಿ ಕುಳಿತನು (೧೦-೪೬-೩ ಮತ್ತು ೬). ತ್ರಿತನ ವಾಸಸ್ಥಾನವು ಸ್ವರ್ಗವಿರಬೇಕು (೫-೯-೫). ಅವನ ವಾಸಸ್ಥಳವು ಗುಪ್ತವಾದುದು (೯- ೦೨-೨). ಅದು ಬಹಳ ದೂರದಲ್ಲಿದೆ; ಈ ಕಾರಣದಿಂದಲೇ, ದುಷ್ಕೃತ್ಯಗಳನ್ನೂ, ದುಸ್ಸ್ವಪ್ನಗಳನ್ನು ತ್ರಿತ ಆಪ್ತ್ಯನ ಹತ್ತಿರಕ್ಕೆ (ನಮ್ಮಿಂದ ಬಹಳ ದೂರ) ಹಾಕಿ ಬಿಡಬೇಕೆಂದು ಆದಿತ್ಯ ಮತ್ತು ಉಷಸ್ಸುಗಳಿಗೆ ಪ್ರಾರ್ಥನೆ (೮-೪೭-೧೩ರಿಂದ೧೭). ಅವನ ವಾಸಸ್ಥಳವು ಸೂರ್ಯನ ಸಮೀಪ ದಲ್ಲಿಯೋ ಇರಬೇಕು; ಏಕೆಂದರೆ, ತ್ರಿತನು (ಸೂರ್ಯಮಂಡಲದೊಡನೆ) ಅದರೊಡನೆ ತನಗೆ ಸಂಬಂಧವುಂಟೆಂದು ಹೇಳಿಕೊಂಡಂತಿದೆ (೧-೧೦೫-೯). ತ್ರಿತನು ಬಾವಿಯಲ್ಲಿ ಹೂಳಲ್ಪಟ್ಟಿದ್ದನೆಂದೂ, ದೇವತೆಗಳನ್ನು ಪ್ರಾರ್ಥಿಸಿದ ನೆಂದೂ, ಬೃಹಸ್ಪತಿಯು ಅದನ್ನು ಕೇಳಿ, ಅವನನ್ನು ಕಷ್ಟದಿಂದ ಪಾರುಗಾಣಿಸಿದನೆಂದೂ ಅದೇ ಸೂಕ್ತದಲ್ಲಿದೆ. ಇನ್ನೊಂದು ಸ್ಥಳದಲ್ಲಿ (೧೦-೮-೭), ಗರ್ತದಲ್ಲಿ ಬಿದ್ದಿದ್ದ ತ್ರಿತನು ತಂದೆಯನ್ನು ಧ್ಯಾನಿಸಿ, ಅವನಿಂದ ಅವನ ಆಯುಧಗಳನ್ನು ಪಡೆದು, ವಿಶ್ವರೂಪನೊಡನೆ (೧೦-೮-೮) ಯುದ್ಧಕ್ಕೆ ಹೊರಟನು. ಇಂದ್ರನು, ವಿಷ್ಣು, ತ್ರಿತ ಆಪ್ತ್ಯ ಅಥವಾ ಮರುತ್ತುಗಳು, ಇವರ ಪಾರ್ಶ್ವದಲ್ಲಿ ಕುಳಿತು, ಸೋಮಪಾನ ಮಾಡುತ್ತಾನೆ (೮-೧೨-೧೬), ತ್ರಿತನ ಪಾರ್ಶ್ವದಲ್ಲಿದ್ದು ತನ್ನ ಸ್ತುತಿಯನ್ನು ಕೇಳಿ ತುಷ್ಟನಾಗಿದಾನೆ (ವಾಲ. ೪-೧). ಸೋಮವನ್ನು ತ್ರಿತನೇ ಸಿದ್ಧಪಡಿಸುತ್ತಾನೆ (೨-೧೧-೨೦) ತ್ರಿತನೇ ಸೋಮರಸವನ್ನು ಶುದ್ಧಿಮಾಡುವುದು (೯-೩೪-೪). ತ್ರಿತನ ಕನ್ಯೆ ಯರು (ಬರಳುಗಳು) ನಸುಗೆಂಪಾದ ಸೋಮರಸದ ತೊಟ್ಟುಗಳನ್ನು, ಇಂದ್ರನ ಪಾನಕ್ಕಾಗಿ, ಕಲ್ಲಿನಿಂದ ಕೆಳಗೆ ಬೀಳುವಂತೆ (೯-೩೨-೨ ; ೯-೩೮-೨) ಪ್ರಚೋದಿಸುತ್ತಾರೆ. ತ್ರಿತನ ಎರಡು ಕಲ್ಲುಗಳ ಹತ್ತಿರ, ಗುಪ್ತವಾದ ಸ್ಥಾನ ವನ್ನು ಸೋಮವು ಆಕ್ರಮಿಸುತ್ತದೆ (೯-೧೦೨-೨); ತ್ರಿತನ ಬೆನ್ನೇಣುಗಳ ಮೇಲೆ, ಪ್ರವಾಹರೂಪವಾಗಿ ಸಂಪ ತ್ತನ್ನು ತರಬೇಕೆಂದು ಸೋಮ ಪ್ರಾರ್ಥಿತವಾಗಿದೆ (೯-೧೦೨-೩). ತ್ರಿತನ ಸಾನುಪ್ರದೇಶದಲ್ಲಿ ಸೂರ್ಯ ಮತ್ತು ಅವನ ಸಹೋದರಿಯರು ಪ್ರಕಾಶಿಸುವಂತೆ ಸೋಮವು ಮಾಡಿದೆ. (೯-೩೭-೪). ಸಮುದ್ರದಲ್ಲಿರುವ ವರುಣನಿಗೇ ತ್ರಿತನು ಉತ್ತೇಜನ ಕೊಡುತ್ತಾನೆ (೯-೯೫-೪). ಸೋಮನು ಮಧುವನ್ನು ಸುರಿಯುವಾಗ, ತ್ರಿತ ಎಂದು ಕೂಗುತ್ತಾನೆ (೯-೮೬-೨೦).

ತ್ರಿತ ದೇವತೆಯ ಸ್ವರೂಪದ ವಿಷಯವಾಗಿ ಖಚಿತವಾಗಿ ಏನು ತಿಳಿಯಲೂ ಆಧಾರಗಳು ಸರಿಯಾಗಿಲ್ಲ. ಅವನ ಹೆಸರು ಅನೇಕ (೨-೩೧-೬ ; ೫-೪೧-೪ ; ೧೦-೬೪-೩) ಪಟ್ಟಿಗಳಲ್ಲಿವೆ; ಆದರೆ, ಅವುಗಳಿಂದ ಏನೂ ಗೊತ್ತಾಗುವುದಿಲ್ಲ. ಇನ್ನೆರಡು ವಾಕ್ಯಗಳಲ್ಲಿ (೫-೪೧-೯ ಮತ್ತು ೧೦) ಅರ್ಥ ನಿರ್ಧರವಾಗಿಲ್ಲ. ವರುಣ ಸೂಕ್ತ ವೊಂದರಲ್ಲಿ, ಚಕ್ರನಾಭಿಯಂತೆ ತ್ರಿತನಲ್ಲಿ ಜ್ಞಾನವೆಲ್ಲ ಕೇಂದ್ರೀಕೃತವಾಗಿದೆ (೮-೪೧-೬) ಎಂದಿದೆ. ಬೇರೆ ಒಂದು ಸ್ಥಳದಲ್ಲಿ, ಯಮನಿಂದ ದತ್ತವಾದ ಮತ್ತು ಸೂರ್ಯನ ರೂಪಾಂತರವಾದ ಅಶ್ವವೊಂದನ್ನು ತ್ರಿತನು ರಥಕ್ಕೆ ಹೂಡಿದನೆಂತಲೂ, ಆದರ ಮುಂದಿನ ಮಂತ್ರದಲ್ಲಿ ಆ ಅಶ್ವವೇ ಒಂದು ಗುಪ್ತಕ್ರಿಯೆಯಿಂದ ಯಮ, ಸೂರ್ಯ


CC-0. Jangamwadi Math Collection. Digitized by eGangotri

ಮತ್ತು ತ್ರಿತರು ಆಗುತ್ತದೆ (೧-೧೬೩-೨ ಮತ್ತು ೩) ಎಂತಲೂ ಹೇಳಿದೆ. ಅಥರ್ವ ವೇದದಲ್ಲಿಯೂ ಐದಾರು ಸ್ಥಳಗಳಲ್ಲಿ 'ತ್ರಿತ' ಎಂಬ ಪದವು ಉಪಯೋಗಿಸಲ್ಪಟ್ಟಿದ್ದರೂ, ಅಲ್ಲಿಯೂ ಏನೂ ತಿಳಿಯಬರುವುದಿಲ್ಲ. ಎಲ್ಲ ಕಡೆಗಳಲ್ಲಿಯೂ, ತ್ರಿತನು ಬಹಳ ದೂರದಲ್ಲಿರುವ ದೇವತೆ, ಅವನಲ್ಲಿಗೆ ಪಾಪ ಅಥವಾ ದುಸ್ವಪ್ನಗಳು ಕಳುಹಿಸಲ್ಪಡುತ್ತವೆ ಎಂದಿಷ್ಟು ಮಾತ್ರ ಜ್ಞಾತವಾಗುತ್ತದೆ (೧-೧೧೩-೧ ಮತ್ತು ೩ ; ೧೯-೫೬-೪). ತೈತ್ತಿರೀಯ ಸಂಹಿತೆಯಲ್ಲಿ ಅವನು ದೀರ್ಘಾಯುಸ್ಸನ್ನು ಕೊಡತಕ್ಕವನು ಎಂದಿದೆ (ತೈ. ಸಂ. ೧-೮-೧೦-೨) ಅವನು ಅಮರತ್ವದಾಯಕವಾದ ಸೋಮವನ್ನು ಸಿದ್ಧ ಮಾಡುವವನಾದುದರಿಂದ, ಇದು ಅದರಿಂದ ಜನ್ಯವಾದ ಗುಣವಿರಬಹುದು. ಬ್ರಾಹ್ಮಣಗಳಲ್ಲಿ ತ್ರಿತನು, ಏಕತ, ದ್ವಿತ ಮತ್ತು ತ್ರಿತರೆಂಬ ಮೂರು ದೇವತೆಗಳಲ್ಲೊಬ್ಬನು; ಈ ಮೂವರೂ ಅಗ್ನಿ ಪುತ್ರರು; ತ್ರಿತನು ನೀರಿನಿಂದ ಉದ್ಭವಿಸಿದವನು (ಶತ. ಬ್ರಾ. ೧-೨ ೩-೧ ಮತ್ತು ೨) ತೈ. ಬ್ರಾ ೩-೨-೮-೧೦ ಮತ್ತು ೧೧). ಋಗ್ವೇದ ೧.೧೦೫ರ ವ್ಯಾಖ್ಯಾನದಲ್ಲಿ, ಸಾಯಣರು ಶಾಟ್ಯಾಯನಿಗಳ ಕಥೆಯೊಂದನ್ನು ಉಲ್ಲೇಖಿಸಿದಾರೆ ಇದರಲ್ಲಿ ಈ ಏಕತ, ದ್ವಿತ ಮತ್ತು ತ್ರಿತರು ಮೂವರೂ ಋಷಿಗಳು, ಅವರಲ್ಲಿ ಮೊದಲ ಇಬ್ಬರು ತ್ರಿತನನ್ನು ಬಾವಿಗೆ ಹಾಕುತ್ತಾರೆ. ಈ ಸಂದರ್ಭಗಳಲ್ಲಿ ಈ ಪದಗಳು ಸಂಖ್ಯಾವಾಚಕಗಳಿರಬೇಕು. ದ್ವಿತ ಎಂಬುದು ಋಗ್ವೇದದಲ್ಲಿ, ಒಂದು ಸಲ ತ್ರಿತದ ಜೊತೆಯಲ್ಲಿಯೂ (೮-೪೭-೧೬) ಮತ್ತೊಂದು ಸಲ ಅಗ್ನಿಸೂಕ್ತದಲ್ಲಿ ಅಗ್ನಿದ್ಯೋತಕವಾಗಿಯೂ (೫-೧೮-೨) ಬಂದಿದೆ. ನಿಘಂಟುವಿನಲ್ಲಿ ತ್ರಿತ ಎಂಬ ಹೆಸರು ಇಲ್ಲ. ಯಾಸ್ಕರು (ನಿರು. ೪-೬) ಈ ಪದಕ್ಕೆ 'ಮಹಾಜ್ಞಾನಿ' ಏಕತಾದಿಗಳಲ್ಲಿ ಒಂದು ಸಂಖ್ಯಾವಾಚಕ ಎಂದು ಅರ್ಥಮಾಡಿದಾರೆ. ಮತ್ತೊಂದು ಸ್ಥಳದಲ್ಲಿ (ನಿರು. ೯-೨೫), ಮೂರು (ಸ್ವರ್ಗ, ಭೂಮಿ ಮತ್ತು ಆಕಾಶ) ಲೋಕಗಳಲ್ಲಿರುವ ಇಂದ್ರನೆಂತಲೂ ಹೇಳಿದಾರೆ.

ಋಗ್ವೇದ ವಾಕ್ಯಗಳನ್ನು ತೆಗೆದುಕೊಂಡರೆ, ೩-೪ ಸಂದರ್ಭಗಳಲ್ಲಿ, ಇಂದ್ರ ಮತ್ತು ತ್ರಿತರು ಒಂದೇ ಕಾರ್ಯವನ್ನು-ರಾಕ್ಷಸವಧೆ-ಮಾಡಿದಾರೆ ಒಂದು ಸಲ ಇಂದ್ರನು ತ್ರಿತನಿಗೆ ಪ್ರಚೋದಕನಾಗಿದಾನೆ; ಒಂದು ಕಡೆ ತ್ರಿತನಿಂದ ಇಂದ್ರನೇ ಪ್ರೋತ್ಸಾಹಿತನಾಗಿದಾನೆ; ಎರಡು ಸಲ ಇಂದ್ರನು ತ್ರಿತನಿಗಾಗಿ ಕೆಲಸಮಾಡಿದಾನೆ. ಮರುತ್ತುಗಳೂ ತ್ರಿತನೂ ಚಂಡಮಾರುತದಲ್ಲಿ ಒಟ್ಟಿಗೆ ಸೇರಿದಾರೆ. ಅಲ್ಲದೆ, ತ್ರಿತನು ಅಗ್ನಿಯನ್ನು ಹುಡುಕುತ್ತಾನೆ. ಸ್ವರ್ಗದಲ್ಲಿ ಅಗ್ನಿಯನ್ನು ಜ್ವಲನಗೊಳಿಸುತ್ತಾನೆ. ಮನುಷ್ಯರ ಗೃಹಗಳಲ್ಲಿ ಅಗ್ನಿಯು ಬದಲು ವಾಸಿಸುತ್ತಾನೆ. ಅವನ ವಾಸಸ್ಥಳ ಬಹಳದೂರ ಮತ್ತು ಗುಪ್ತವಾಗಿದೆ- ಅಲ್ಲಿ ಸೋಮವೂ ಇದೆ. ಇಂದ್ರ ತ್ರಿತರಿಗೆ ಈ ವ್ಯತ್ಯಾಸವೂ ಇದೆ. ಇಂದ್ರನು ಸೋಮಪಾನ ಮಾತ್ರ ಮಾಡುತ್ತಾನೆ. ಆದರೆ ತ್ರಿತನು ಸೋಮವನ್ನು ತಯಾರಿಸುತ್ತಾನೆ.

ತ್ರಿತನಿಗೆ ಉಪಯೋಗಿಸಿರುವ ಆಪ್ತ್ಯ ಎಂಬ ವಿಶೇಷಣವು ಅಪ್ (ನೀರು) ಎಂಬುದರಿಂದ ನಿಷ್ಪನ್ನವಾದುದು. ಆದುದರಿಂದ 'ಅಪಾಂನಪಾತ್' ಎಂಬುದಕ್ಕೆ ಸಮವೆಂತಲೂ ಹೇಳಬಹುದು. ತ್ರಿತನಿಗೆ 'ವೈಭೂವಸ' ಎಂದು ಒಂದೇ ಸಲ ವಿಶೇಷಣವಿದೆ (೧೦-೪೬-೩). ಇದು ಸೋಮಕ್ಕೆ ಸಂಬಂಧಿಸಿರಬಹುದು.

ಮೇಲೆ ಹೇಳಿದ ಅಂಶಗಳಿಂದ ತ್ರಿತನು ವಿದ್ಯುದ್ದೇವತೆ ಅಂದರೆ, ಅಗ್ನಿಯ ಮೂರನೆಯ ಅಥವಾ ವಾಯುಮಂಡಲದ ರೂಪವೆನ್ನಬಹುದು; ಅಗ್ನಿ, ವಾಯು ಅಥವಾ ಇಂದ್ರ ಮತ್ತು ಸೂರ್ಯರೆಂಬ ದೇವತಾತ್ರಯದ ಮಧ್ಯಮದೇವತೆ. ಆದರೆ ಈ ದೇವತೆಯ ಕಾರ್ಯಗಳೆಲ್ಲವೂ ಇಂದ್ರನಿಂದಲೇ ಮಾಡಲ್ಪಟ್ಟವೆಯಾಗಿ, ಋಗ್ವೇದದಲ್ಲಿ ಇವನು ಅಪ್ರಧಾನದೇವತೆಯಾಗಿದಾನೆ. ವಿದ್ಯುದ್ರೂಪನಾಗಿ, ಸ್ವರ್ಗದಿಂದ ಸೋಮವನ್ನು ಭೂಮಿಗೆ ತಂದುದರಿಂದಲೇ ತ್ರಿತನಿಗೂ ಸೋಮಕ್ಕೂ ಸಂಬಂಧವು ಉಕ್ತವಾಗಿರಬಹುದು ಆಧಾರಗಳು ಕಡಿಮೆ ಇರುವುದ



CC-0. Jangamwadi Math Collection. Digitized by eGangotri

ರಿಂದ ಒಬ್ಬೊಬ್ಬ ಪಂಡಿತರು ಒಂದೊಂದು ರೀತಿ ಅಭಿಪ್ರಾಯಪಟ್ಟದಾರೆ. ಕೆಲವನ್ನು ಮಾತ್ರ ಹೇಳುವುದಾದರೆ, ರಾತ್ (Roth) ಎಂಬುವರು ನೀರು ಮತ್ತು ಗಾಳಿಯ ದೇವತೆಯೆಂತಲೂ, ಹಿಲ್‌ಬ್ರಾಂಡ್ (Hillebranalt) ಎಂಬುವರು ಉದ್ದೀಪ್ತವಾದ ಆಕಾಶದ ದೇವತೆಯೆಂತಲೂ, (Perry) ಎಂಬುವರು ಬಿರುಗಾಳಿಯ ದೇವತೆ ಯೆಂತಲೂ ಹೇಳುತ್ತಾರೆ. ಪಿಶ್ಚೆಲ್ (Pischel) ಎಂಬ ಮತ್ತೊಬ್ಬರು ಮೊದಲು ಸಮುದ್ರ ಮತ್ತು ನೀರಿನ ದೇವತೆ ಅನಂತರ ಮನುಷ್ಯರಲ್ಲಿ ವೈದ್ಯ, ಆಮೇಲೆ ದೇವತ್ವವನ್ನು ಪಡೆದನೆಂದು ಹೇಳಿದಾರೆ. ಹಾರ್ಡಿ (Hardy) ಎಂಬುವರು ಚಂದ್ರದೇವತೆಯೆಂದಿದ್ದಾರೆ.

## ಅಪಾಂನಪಾತ್

ಈ ದೇವತಾಕವಾದವು ಒಂದು ಸೂಕ್ತ (೨-೩೫) ಮತ್ತು ಜಲದೇವತಾಕ ಸೂಕ್ತದಲ್ಲಿ ಎರಡು ಮಂತ್ರ ಗಳು (೧೦-೩೦-೩, ೪) ಈ ದೇವತೆಯನ್ನು ಸ್ತುತಿಸುತ್ತವೆ. ಮೂವತ್ತು ಸಾರಿ ಈ ಹೆಸರು ಬಂದಿದೆ. ತೇಜಸ್ವಿ ಯಾದ ಅಪಾಂನಪಾದ್ದೇವತೆಯ (ನೀರಿನ ಮಗ) ಸುತ್ತಲೂ ನೀರು ನಿಂತಿತ್ತು. ಯುವಕನಾದ ಇವನನ್ನು ನೀರು ಸುತ್ತುತ್ತದೆ. ಶ್ರೇಷ್ಠನಾದ ಇವನಿಗೆ ಮೂವರು ದೇವತಾಸ್ತ್ರೀಯರು ಆಹಾರವನ್ನು ಕೊಡಲಿಚ್ಛಿಸುತ್ತಾರೆ; ಆದಿ ಮಾತೃಗಳ ಸ್ತನ್ಯವನ್ನು ಅವನು ಪಾನಮಾಡುತ್ತಾನೆ (೨-೩೫-೩, ೫). ವೃಷಭರೂಪನಾದ ಅವನು ಅವರಲ್ಲಿ ಗರ್ಭವನ್ನು ಸ್ಥಾಪಿಸಿದನು; ಶಿಶುರೂಪನಾದ ಅವನು ಅವರ ಸ್ತನ್ಯಪಾನಮಾಡುತ್ತಾನೆ; ಅವರು ಅವನನ್ನು ಚುಂಬಿಸುತ್ತಾರೆ. ಇವನು ನೀರಿನಲ್ಲಿಯೇ ಪ್ರವರ್ಧಮಾನನಾಗಿ ಪ್ರಕಾಶಕ್ಕೆ ಬರುತ್ತಾನೆ. ಸೌದೆ ಇತ್ಯಾದಿಗಳಿಲ್ಲದೆ ನೀರಿನಲ್ಲಿ ಪ್ರಜ್ವಲಿಸುತ್ತಾನೆ (೧೦-೩೦-೪). ಮಿಂಚನ್ನು ಉಡುಪಾಗಿ ಧರಿಸಿ, ಸ್ವಲ್ಪ ಓರೆಯಾಗಿರುವ ನೀರಿನ
ಮಸಲನ್ನು ಸೇರುತ್ತಾನೆ. ವೇಗವಾಗಿ ಪ್ರವಹಿಸುವ, ಬಂಗಾರದ ಬಣ್ಣವಾಗಿರುವ ನೀರು ಅವನನ್ನು ಹೊತ್ತು
ಕೊಂಡು ಚಕ್ರಾಕಾರವಾಗಿ ತಿರುಗುತ್ತದೆ (೧-೯೫-೪ ಮತ್ತು ೫ರಲ್ಲಿ ಅಗ್ನಿಗೆ ಹೋಲಿಸಿ). ಇವನದು ಸ್ವರ್ಣಕಾಂತಿ,
ದೇಹದ ವರ್ಣವೂ ಅದೇ, ಸ್ವರ್ಣ ಗರ್ಭದಿಂದ ಜನಿಸಿ, ಇವನು ತನ್ನನ್ನು ಪೂಜಿಸುವವನಿಗೆ ಆಹಾರವನ್ನನುಗ್ರ
ಹಿಸುತ್ತಾನೆ. ಅತ್ಯುನ್ನತ ಪ್ರದೇಶದಲ್ಲಿದ್ದು, ಕಳೆಗುಂದದೆ ಪ್ರಕಾಶಿಸುತ್ತಾನೆ. ವೇಗವಾಗಿ ಹರಿಯುವ ನೀರು
ಗಳು, ತಮ್ಮ ಪುತ್ರನಿಗೆ ( ಅಪಾಂನಪಾತ್ ) ಆಹಾರಕ್ಕಾಗಿ ಘೃತವನ್ನು ತೆಗೆದುಕೊಂಡುಬಂದು,
ಉಡುಪುಗಳನ್ನು ಧರಿಸಿ, ಸುತ್ತಲೂ ಹರಿಯುತ್ತವೆ. ಇವನ ಮುಖವು ಬಂಗಾರದ ವರ್ಣದ್ದು; ಇದನ್ನು
ಕನ್ಯೆಯರು ಬೆಳಗುವಂತೆ ಮಾಡುತ್ತಾರೆ; ಇವನಿಗೆ ತುಪ್ಪವೇ ಆಹಾರ; ಯಾರ ಗಮನಕ್ಕೂ ಬಾರದ ರೀತಿ
ಯಲ್ಲಿ ಅಭಿವೃದ್ಧಿ ಹೊಂದುತ್ತಾನೆ. ಅವನ ಮನೆಯಲ್ಲಿ ಒಳ್ಳೆಯ ಹಾಲುಕೊಡುವ ಗೋವು ಒಂದಿದೆ. ಮನೋ
ವೇಗವುಳ್ಳ ಅಶ್ವಗಳು ಇವನನ್ನು ವಹಿಸುತ್ತವೆ. ಇವನಿಗೂ ನದಿಗಳಿಗೂ ಸಂಬಂಧವಿದೆ. ಇವನೇ ಎಲ್ಲಾ
ಪ್ರಾಣಿಗಳನ್ನು ಜನಿಸುವಂತೆ ಮಾಡಿದವನು; ಆ ಪ್ರಾಣಿಗಳೆಲ್ಲವೂ ಅವನ ಅಂಶಗಳು. ಈ ದೇವತಾಕ
ವಾದ ಸೂಕ್ತದ ಕಡೆಯ ಋಕ್ಕಿನಲ್ಲಿ ಇವನೇ ಅಗ್ನಿಯೆಂದು ಹೇಳಿದೆ. ಇದೇ ರೀತಿ, ಅಗ್ನಿ ಸೂಕ್ತಗಳು ಕೆಲವದ
ರಲ್ಲಿ, ಅಗ್ನಿಯನ್ನು ಅಪಾಂನಪಾತ್ ಎಂದು ಕರೆದಿದೆ (ವಾ. ಸಂ. ೮-೨೪ನ್ನು ಹೋಲಿಸಿ). ಅಗ್ನಿಯು ನೀರಿನ
ಮಗ (೩-೯-೧). ಅಗ್ನಿಯು ಅಪಾಂನಪಾತಿನೊಡಗೂಡಿ, ವೃತ್ರನ ಮೇಲೆ ಜಯವನ್ನನುಗ್ರಹಿಸುತ್ತಾನೆ
(೬-೧೩-೩). ಅಪಾಂನಪಾದ್ದೇವತೆ ಮತ್ತೊಬ್ಬನ ದೇಹದೊಡನೆ ಸೇರಿಹೋಗುತ್ತಾನೆಯೋ (೨-೩೫-೧೩)
ಎಂಬಂತಿದೆ.

ಅಪಾಂನಪಾತನ ಹೆಸರು ಅನೇಕ ದೇವತೆಗಳ ಪಟ್ಟಿಗಳಲ್ಲಿದೆ; ಆದರೆ ವಿಶೇಷವಾಗಿ, ಅಜಏಕಪಾದ
ಅಹಿರ್ಬುಧ್ನ್ಯ (೧-೧೮೬-೫, ೨-೩೧-೬, ೭-೩೫-೧೩) ಮತ್ತು ಸವಿತೃ (೨-೩೧-೬ ;
(೨-೩೧-೬, ೭-೩೫-೧೩)





CC-0. Jangamwadi Math Collection. Digitized by eGangotri

೬-೫೦-೧೩)ಗಳೊಡನೆ ಹೇಳಿದೆ. ಸವಿತೃವೂ ಅಗ್ನಿಯ ಫಲವತ್ತಾಗಿ ಮಾಡುವ ಒಂದು ರೂಪವಿಶೇಷವಾದುದರಿಂದ, ಆ ಸವಿತೃವಿಗೂ 'ಅಪಾಂನಪಾತ್' ಎಂದು ಒಂದುಕಡೆ (೧-೨೨-೬) ಉಪಯೋಗಿಸಿದೆ. ಬಂಗಾರದ ಬಣ್ಣದವನೂ, ಮಿಂಚಿನ ಉಡುಪುಳ್ಳವನೂ, ಅತ್ಯುನ್ನತ ಪ್ರದೇಶದಲ್ಲಿ ವಾಸಿಸುವವನೂ, ಗುಪ್ತರೀತಿಯಲ್ಲಿ ಬೆಳೆಯುವವನೂ, ಹೆಚ್ಚಾಗಿ ಪ್ರಕಾಶಿಸುವವನೂ, ನೀರಿನ ಮಗನೂ, ಭೂಮಿಗೆ ಇಳಿದು ಬರುವವನೂ, ಅಗ್ನಿಗೆ ಸಮನೆಂದು ಪರಿಗಣಿತನೂ ಆದ ಅಪಾಂನಪಾದ್ದೇವತೆಯು, ಮೋಡಗಳಲ್ಲಿ ಅಡಗಿರುವ ಮಿಂಚಿನ ರೂಪನಾದ ಅಗ್ನಿಯೇ ಇರಬಹುದು. ಅಗ್ನಿಯನ್ನು ಅಪಾಂನಪಾತ್ ಎಂಬುದಾಗಿ ಕರೆಯುವುದಲ್ಲದೆ, ನೀರಿನ ಗರ್ಭ (ಅಪಾಂಗರ್ಭಃ) ವೆಂದೂ ಕರೆಯಲ್ಪಟ್ಟಿದಾನೆ (೭-೯-೩ ; ೧.೭೦-೩). ಆ ರೂಪದಲ್ಲಿಯೇ ಮನುಷ್ಯರ ಗೃಹಗಳಲ್ಲಿ ನಿಹಿತನಾಗಿದಾನೆ (೩-೫-೩); ನೀರಿನಲ್ಲಿಯೇ ಅವನ ವಾಸ (೮-೪೩-೯) ; ಸಸ್ಯಗಳ ಮತ್ತು ನೀರಿನ ಗರ್ಭರೂಪನಾದ ಅಗ್ನಿಯು ಅರಣಿಗಳಿಂದ ಜನಿತನಾಗಿದಾನೆ (೩-೧-೧೩). ಅಗ್ನಿಗೆ ಪರ್ವತಪುತ್ರ (ಅದ್ರೇಃ ಸೂನುಂ ೧೦-೨೦-೭ ೬-೪೮-೫ನ್ನು ಹೋಲಿಸಿ) ನೆಂದೂ ಸಂಜ್ಞೆಯಿದೆ. ಪರ್ವತಾಕಾರವಾದ ಮೇಘದಿಂದ ಜನಿತವಾದ ವಿದ್ಯುತ್ತೇ ಪರ್ವತ ಪುತ್ರನಿರಬೇಕು. ಸ್ವರ್ಗ ಮತ್ತು ಮರ್ತ್ಯಲೋಕರೂಪಗಳಿಗೆ, ವಿರುದ್ಧವಾಗಿ, ಅಗ್ನಿಯ ತೃತೀಯ ರೂಪವು ನೀರಿನಲ್ಲಿ, ಸಾಗರದಲ್ಲಿ, ಆಕಾಶದ ಸ್ತನದಲ್ಲಿ ಅಥವಾ ನೀರಿನ ಮಡಿಲಿನಲ್ಲಿ ಪ್ರಜ್ವಲಿತವಾಗುತ್ತದೆ (೧೦-೪೫-೧ರಿಂದ-೩) ಎಂದಿದೆ. ಸ್ವರ್ಗೀಯಾಗ್ನಿಗೆ ನೀರು ವಾಸಸ್ಥಳವೆಂಬಂಶವು ವೈದಿಕ ಇತಿಹಾಸದಲ್ಲಿ ಸುಪ್ರಸಿದ್ಧವಾಗಿದೆ.

ಈ ದೇವತೆಯು ನೀರಿನ ದೇವತೆ, ನೀರಿನಿಂದ ಹುಟ್ಟಿದ ಅಗ್ನಿ, ಚಂದ್ರ, ಸೂರ್ಯ, ವಿದ್ಯುತ್ತು, ಇವೇ ಮೊದಲಾಗಿ ನಾನಾ ರೀತಿಯ ಅಭಿಪ್ರಾಯಕ್ಕೆ ಎಡೆಕೊಟ್ಟಿದೆ.

## ಮಾತರಿಶ್ವಾ

ಈ ದೇವತೆಯೊಂದನ್ನೇ ಸ್ತುತಿಸುವ ಸೂಕ್ತವೇ ಇಲ್ಲ. ಈ ಹೆಸರು ಬರುವುದೇ ಇಪ್ಪತ್ತೇಳು ಸಲ. ಮಾತರಿಶ್ವನೂ ಅಗ್ನಿಯೂ ಒಂದೆ ಅಥವಾ ಮಾತರಿಶ್ವನು ಅಗ್ನಿಯನ್ನು ಉತ್ಪತ್ತಿಮಾಡುತ್ತಾನೆ ಎಂದು ತಿಳಿದುಬರುತ್ತದೆ. ಮಾತರಿಶ್ವಾ ಎಂದು ಅಗ್ನಿಗೇ ಹೆಸರು (೩-೫-೯ ; ೩-೨೬-೨ ; ೧-೯೬-೪). (೯-೮೮-೧೯) ರಲ್ಲಿರುವ ಸಂಬೋಧನೆಯೂ ಅಗ್ನಿಗೇ ಅನ್ವಯಿಸಬೇಕು. ಇನ್ನೊಂದು ಕಡೆ, "ಸ್ವರ್ಗೀಯ ಅಣುರೂಪದಲ್ಲಿ" 'ತನೂನಪಾತ್' ಎಂದು ಹೆಸರು ; ಜನಿಸಿದ ಮೇಲೆ 'ನರಾಶಂಸ' ನೆನ್ನಿಸಿಕೊಳ್ಳುತ್ತಾನೆ ; ಮಾತರಿಶ್ವರೂಪನಾಗಿ ಉದ್ಭವಿಸಿದಾಗ, ಅವನೇ ಶೀಘ್ರ ಗತಿಯುಳ್ಳ ವಾಯುವಾಗುತ್ತಾನೆ (೩-೨೯-೧೧). ಒಬ್ಬನನ್ನೇ ಜ್ಞಾನಿಗಳು ನಾನಾ ನಾಮಗಳಿಂದ ಕರೆಯುತ್ತಾರೆ ; ಅಗ್ನಿ, ಯಮ, ಮಾತರಿಶ್ವ ಮೊದಲಾಗಿ ಹೇಳುತ್ತಾರೆ (೧-೧೬೪-೪೬). ಅಗ್ನಿಗೆ ಸಮನೆಂದು ಅನೇಕಬಾರಿ ಹೇಳಲ್ಪಟ್ಟಿರುವ ಬೃಹಸ್ಪತಿ ಎಂಬ ನಾಮಧೇಯ ಮಾತರಿಶ್ವನಿಗೂ ಉಂಟು. "ಆ ಬೃಹಸ್ಪತಿಯೇ ಯಾಗಕಾಲದಲ್ಲಿ ಮಾತರಿಶ್ವನಾದನು" (೧-೧೯೦-೨)

ಇತರ ಕೆಲವು ಸ್ಥಳಗಳಲ್ಲಿ, ಅಗ್ನಿಯೂ ಮಾತರಿಶ್ವನೂ ಭಿನ್ನರೆಂದು ಉಕ್ತವಾಗಿದೆ. ಅವನು (ಅಗ್ನಿಯು) ಅತಿ ಎತ್ತರದಲ್ಲಿ ಸ್ವರ್ಗದಲ್ಲಿ ಜನಿಸಿ, ಮಾತರಿಶ್ವನಿಗೆ ಕಾಣಿಸಿಕೊಂಡನು (೧-೧೪೩-೨). ಅಗ್ನಿಯು ಆದಿಯಲ್ಲಿ ಮಾತರಿಶ್ವ ಮತ್ತು ವಿಶ್ವವತರಿಗೆ ಕಾಣಿಸಿದನು (೧-೩೧-೩). ತೇಜೋವಿಶಿಷ್ಟವಾದ, ಗ್ರಹಗಳಲ್ಲಿ ಅತಿ ಶ್ರೇಷ್ಠನಾದುದರಿಂದ, ಅಗ್ನಿಯು ತನ್ನ ಜ್ವಾಲೆಗಳಿಂದ ಗಗನಮಂಡಲಕ್ಕೆ ಆಧಾರಭೂತನಾಗಿದಾನೆ ; ನಿಗೂಢನಾಗಿದ್ದ ಆಹುತಿವಾಹಕನನ್ನು ಮಾತರಿಶ್ವನು ಪ್ರಜ್ವಲಿಸುವಂತೆ ಮಾಡಿದನು (೩-೫-೧೦). ಆಕಾಶದಿಂದ ಮಾತರಿಶ್ವನು ಒಬ್ಬನನ್ನು (ಅಗ್ನಿಯನ್ನು ತಂದನು ; ಗಿಡುಗವು ಇನ್ನೊಬ್ಬನನ್ನು (ಸೋಮವನ್ನು) ಪರ್ವತದಿಂದ



CC-0. Jangamwadi Math Collection. Digitized by eGangotri

ತಂದಿತು (೧-೯೩-೬). ಮಾತರಿಶ್ವನು, ಪೂಜ್ಯನಾದ ಪುರೋಹಿತನೂ, ಸ್ವರ್ಗವಾಸಿಯೂ ಆದ ಅಗ್ನಿಯನ್ನು ತಂದನು (೩-೨-೧೩). ಭೃಗುವಿನಿಂದ ಜನಿತನಾದ (ಅಗ್ನಿಯನ್ನು) ದೇವತೆಗಳು ಮನುಷ್ಯರಿಗೆ ಆದಿ ಪುರೋಹಿತನನ್ನಾಗಿ ಮಾಡಿದರು. (೧೦-೪೬-೯) ಮಾತರೀಶ್ವದೇವತೆಯು ಅವನನ್ನು (ಅಗ್ನಿಯನ್ನು) ಬಹಳ ದೂರದಿಂದ ಮನುಷ್ಯನಿಗೋಸ್ಕರ ತಂದನು (೧-೧೨೮-೨). ವಿಶ್ವವತನದೂತನಾದ ಮಾತರಿಶ್ವನು ಬಹಳ ದೂರದಿಂದ ವೈಶ್ವನರಾಗ್ನಿಯನ್ನು ತಂದನು; ಆವನನ್ನು ಬಲಿಷ್ಠರಾದವರು ನೀರಿನಲ್ಲಿ ಹಿಡಿದುಬಿಟ್ಟರು (೬-೮-೪-). ಅರಣಿಮಥನದಿಂದ ಉದ್ಭೂತನೂ ನಿಗುಢನೂ ಆಗಿದ್ದ ಅಗ್ನಿಯನ್ನು ಬಹಳ ದೂರದಿಂದ ಮಾತರಿಶ್ವನು ತಂದನು (೩-೯-೫) ನಿಗೂಢನಾಗಿದ್ದ ಅಗ್ನಿಯನ್ನು ಮಾತರಿಶ್ವನು ಮಥಿಸಿ ಉತ್ಪತ್ತಿಮಾಡಿದನು (೧-೧೪೧-೩) ಮಾತರಿಶ್ವನಿಂದ ಮಥಿಸಲ್ಪಟ್ಟು, ಅಗ್ನಿಯು ಮನುಷ್ಯರ ವಸತಿಗಳಲ್ಲಿ ಸ್ಥಾಪಿಸಲ್ಪಟ್ಟನು. (೧-೭೧-೪, ೧-೧೪೮-೧) ಇಂದ್ರನು ಸರ್ಪದ ಹಿಡಿತದಿಂದ ತ್ರಿತನಿಗಾಗಿ ಗೋವುಗಳನ್ನು ಬಿಡುಗಡೆ ಮಾಡಿ, ಗೋಶಾಲೆಗಳನ್ನು ದಧ್ಯಂಚ ಮತ್ತು ಮಾತರಿಶ್ವರಿಗೆ ಕೊಟ್ಟನು (೧೦-೪೮-೨).

ಋಗ್ವೇದವ ಕಡೆಯ ಭಾಗದ ಕೆಲವು ಸೂಕ್ತಗಳಲ್ಲಿ, ಮಾತರಿಶ್ವನ ವಿಷಯ ಪ್ರಸ್ತಾಪಿತವಾಗಿದ್ದರೂ, ಮಾತರಿಶ್ವನ ಸ್ವಭಾವ, ಗುಣ ಇತ್ಯಾದಿ ವಿಷಯದಲ್ಲಿ ಏನೂ ತಿಳಿದು ಬರುವುದಿಲ್ಲ. ಎರಡು ಸ್ಥಳಗಳಲ್ಲಿ (೯-೬೭-೩೧; ೧೦-೧೧೪-೧), ಅವನು ಸೋಮವನ್ನು ಶೋಧಿಸಿ, ಅದನ್ನು ಪಾನಮಾಡುತ್ತಿದ್ದನೆಂದು ಹೇಳಿದೆ. ಇನ್ನೊಂದು ಸ್ಥಳದಲ್ಲಿ (ವಾಲ. ೪-೨) ಪಿತೃಗಣದಲ್ಲಿ ಈ ಹೆಸರು ಬಂದಿದೆ; ಅಲ್ಲಿ ಇಂದ್ರನು ಇವನ ಪಾರ್ಶ್ವದಲ್ಲಿ ಕುಳಿತು ಸೋಮಪಾನ ಮಾಡುತ್ತಾನೆ. ಒಂದು ಸಲ ಉತ್ತಮ ಶಿಲ್ಪಿಗೆ ಹೋಲಿಸುವಂತೆ, ಇಂದ್ರನು ಇವನಿಗೆ ಹೋಲಿಸಲ್ಪಟ್ಟಿದ್ದಾನೆ (೧೦-೧೦೫-೬). ವಿವಾಹಸಂಬಂಧವಾದ ಸೂಕ್ತದಲ್ಲಿ, ಮಾತರಿಶ್ವನು ಇತರ ದೇವತೆಗಳ ಜೊತೆಯಲ್ಲಿ, ಪ್ರೇಮಿಗಳೀರ್ವರ ಹೃದಯಗಳನ್ನು ಪ್ರವೇಶಿಸಬೇಕೆಂದು ಪ್ರಾರ್ಥಿತನಾಗಿರುವಾಗಲೂ, ಈ ಕೌಶಲ್ಯವೇ ಉದಿಷ್ಟವಾಗಿರಬಹುದು. ಕಡೆಯದಾಗಿ, ಒಂದು ಕಡೆ, ಮಾತರಿಶ್ವನು ಅಪಾರನೆಂದೂ, ಅಲೆದಾಡುತ್ತಿರುವವನೆಂದೂ ಹೇಳಿದೆ (೧೦-೧೬೮-೧). ಈ ಎರಡು ಗುಣಗಳೂ, ಮಾತರಿಶ್ವನೆಂದರೆ ವಾಯುವೆಂಬ ಅಭಿಪ್ರಾಯಕ್ಕೆ ಪೋಷಕವಾಗುತ್ತವೆ.

ಹೀಗೆ ಮಾತರಿಶ್ವನೆಂದರೆ ಮೂರ್ತಿಮತ್ತಾದ ಸ್ವರ್ಗೀಯಾಗ್ನಿಯೆನ್ನಬಹುದು; ಅಲ್ಲದೆ, ಸ್ವರ್ಗದಿಂದ ಭೂಲೋಕಕ್ಕೆ ಅಗ್ನಿಯನ್ನು ತಂದವನೂ ಇವನೇ. ಮಾತರಿಶ್ವನಿಗೆ ವಿದ್ಯುತ್ತೇ ಮೂಲವೆನ್ನಬಹುದು. ಅಗ್ನಿಯೂ ಈ ಎರಡು ಲೋಕಗಳ ಮಧ್ಯೆ ದೂತನಾಗಿರುವಂತೆ, ಮಾತರಿಶ್ವನು ವಿಶ್ವವತನ ದೂತನಾಗಿ ಸ್ವರ್ಗದಿಂದ ಭೂಮಿಗೆ ಬಂದನೆನ್ನಬಹುದು. ಅಥರ್ವವೇದದಲ್ಲಿಯೂ ಮಾತರಿಶ್ವ ಎಂಬುದು ಅಗ್ನಿಯ ನಾಮಧೇಯ (ಅ. ವೇ. ೧೦-೮-೩೯ ಮತ್ತು ೪೦); ಆದರೆ ಬ್ರಾಹ್ಮಣಾದಿಗಳಲ್ಲಿ, ಮಾತರಿಶ್ವನೆಂದರೆ ವಾಯುವೇ. ಈ ಅಭಿಪ್ರಾಯಕ್ಕೆ ಆಧಾರವು ಆಗಲೇ ಉಕ್ತವಾಗಿದೆ (೩-೨೯-೧೧). ವಾಯುಮಂಡಲದಲ್ಲಿ ಬುಸುಗುಟ್ಟುವ ಸರ್ಪದಂತಿದ್ದ ಅಗ್ನಿಯು ಬೇರೊಂದು ಕಡೆ ರಭಸದಿಂದ ನುಗ್ಗುವ ಗಾಳಿಯೆಂದು ವರ್ಣಿತನಾಗಿದಾನೆ (೧-೭೯-೧).

ಮಾತರಿಶ್ವನ್ ಎಂಬ ಪದಕ್ಕೆ ತಾಯಿಯಲ್ಲಿ ಬೆಳೆಯುವವನು, ರೂಪುಗೊಂಡವನು ಎಂಬರ್ಥವಾಗಬಹುದು. ಶು ಎಂಬ ಧಾತುವಿಗೆ ಅಭಿವೃದ್ಧಿಹೊಂದು, ಗಾತ್ರದಲ್ಲಿ ಹೆಚ್ಚಾಗು ಎಂದರ್ಥ. ಇದರಿಂದಲೇ ಶಿಶು ಮುಂತಾದ ಪದಗಳು ನಿಷ್ಪನ್ನವಾಗಿವೆ. ಮಾತರಿಶ್ವನಂತೆ ಅಗ್ನಿಯೂ ತಾಯಿಯರಲ್ಲಿ ಅಭಿವೃದ್ಧಿ ಹೊಂದುತ್ತಾನೆ (೧-೧೪೧-೫). ಮಾತರಿಶ್ವನಿಗೆ ಅನ್ವಯಿಸುವಾಗ, ಅರಣಿಯ ಕೆಳಭಾಗ ಅಥವಾ ಮೇಘವು ಮಾತೃವಿರಬಹುದು. ಮಾತರಿಶ್ವನು ಅಂತರಿಕ್ಷದಿಂದ ಬರುವುದರಿಂದ ಮೇಘವು ಅವನ ಮಾತೃವು ಎಂದು ಹೇಳಬಹುದು. ಯಾಸ್ಕರ ಮತದಲ್ಲಿ ಮಾತರಿಶ್ವ ಎಂದರೆ ವಾಯುವು; 'ಮಾತರಿ' ಎಂದರೆ ಅಂತರಿಕ್ಷದಲ್ಲಿ 'ಶ್ವಸ್' ಉಸಿರಾಡುವವನು ಅಥವಾ 'ಆಶು ಅನ್' ಬೇಗಬೇಗ ಉಸಿರಾಡುವವನು ಅಂದರೆ ಗಾಳಿ ಎಂದರ್ಥ.



CC-0. Jangamwadi Math Collection. Digitized by eGangotri

## ಅಹಿರ್ಬುಧ್ನ್ಯ

ಅಹಿ ಬುಧ್ನ್ಯ ಎಂದರೆ ಸಮುದ್ರದ ಅಥವಾ ಪಾತಾಳಲೋಕದ ಸರ್ಪವೆನ್ನಬಹುದು ಈ ಹೆಸರು ವಿಶೇಷವಾಗಿ ವಿಶ್ವೇದೇವತಾಕವಾದ ಸೂಕ್ತಗಳಲ್ಲಿ ಬರುತ್ತದೆ. ಒಟ್ಟು ಋಗ್ವೇದದಲ್ಲಿ ಹನ್ನೆರಡು ಸಲ ಮಾತ್ರ ಉಪಯೋಗಿಸಿರುವುದು. ಐದು ಸಲ ಅಜ ಏಕಪಾದದ ಒಡನೆ ಮೂರು ಸಲ ಅಪಾಂನಪಾತನೊಡನೆ, ಮೂರು ಸಲ ಸಮುದ್ರದೊಡನೆ ಮತ್ತೆ ಎರಡು ಸಲ ಸವಿತೃವಿನೊಡನೆ ಹೇಳಿದೆ. ಮೂರೇ ಋಕ್ಕುಗಳಲ್ಲಿ (೫-೪೧-೧೬ ; ೭-೩೪-೧೬ ಮತ್ತು ೧೭) ಈ ಹೆಸರು ಒಂದೇ ಬಂದಿರುವುದು. ಇವನ ಜೊತೆಗೆ ಇನ್ನೊಂದು ದೇವತೆ ಹೇಳಿರುವಾಗಲೆಲ್ಲಾ, ಆ ದೇವತೆ ಸಾಧಾರಣವಾಗಿ ಅಜ ಏಕಪಾದ (೧೦-೬೪-೪) ಇಲ್ಲವೇ ಅಪಾಂ ನಪಾತ್ (೧-೧೮೬-೫) ಆಗಿರುತ್ತದೆ. ಅಜ ಏಕಪಾದ ಮತ್ತು ಅಹಿಬುಧ್ನ್ಯ ಇವೆರಡೂ ಒಂದೆಡೆಯಲ್ಲೆಲ್ಲಾ ಸಾಧಾರಣವಾಗಿ ಅಕ್ಕಪಕ್ಕದಲ್ಲಿ ಜೋಡಿಸಿದಂತಿರುತ್ತವೆ. ಆದರೆ (೧೦-೬೬-೧೧)ರಲ್ಲಿ ಮಾತ್ರ ಇದಕ್ಕೆ ಸ್ವಲ್ಪ ವಿರುದ್ಧವಾಗಿದೆ. ಈ ಹೆಸರ ಬರುವ ಪಟ್ಟಿಗಳು ಈ ರೀತಿ ಇವೆ. ಅಜ ಏಕಪಾದ, ಅಹಿಬುಧ್ನ್ಯ, ಸಾಗರ, ಅಪಾಂನಪಾತ್ ಮತ್ತು ಪೃಶ್ನಿ (೭-೩೫-೧೩) ಅಹಿಬುಧ್ನ್ಯ ಅಜಏಕಪಾದ ತ್ರಿತ, ಋಭುಕ್ಷಾ, ಸವಿತೃ, ಅಪಾಂನಪಾತ್ (೨-೩೧-೬) ; ಸಾಗರ, ಸಿಂಧು, ಆಕಾಶ, ಗಾಳಿ, ಅಜ ಏಕಪಾದ, ಭೋರ್ಗರೆಯುತ್ತಿರುವ ಪ್ರವಾಹ, ಅಹಿಬುಧ್ನ್ಯ, ಮತ್ತು ವಿಶ್ವೇದೇವತೆಗಳು (೧೦-೬೬-೧೧). ಈ ಪಟ್ಟಿಗಳನ್ನು ಪರಿಶೀಲಿಸಿದರೆ, ಅಹಿಬುಧ್ನ್ಯನೂ ಅಂತರಿಕ್ಷದ ದೇವತೆಗಳಲ್ಲಿ ಒಬ್ಬನೆಂದೇ ಹೇಳಬೇಕು. ನಿರುಕ್ತದಲ್ಲಿ (೫-೪) ಮಧ್ಯಲೋಕ ಅಥವಾ ವಾಯುಮಂಡಲದ ದೇವತೆಯೆಂದು ಪರಿಗಣಿತನಾಗಿದಾನೆ. ಈ ದೇವತೆಯೊಂದನ್ನೇ ಪ್ರತಿಪಾದಿಸುವ ಋಕ್ಕಿನಲ್ಲೇ, ಈ ದೇವತೆಯ ವಿಷಯವಾಗಿ ಖಚಿತವಾಗಿ ಏನಾದರೂ ತಿಳಿಯುವುದು. ಅಂತರಿಕ್ಷದ ಪ್ರವಾಹದ ತಳದಲ್ಲಿ ಕುಳಿತಿರುವ, ನೀರಿನಲ್ಲೇ ಜನಿಸಿದ ಸರ್ಪವನ್ನು ಗಾನದಿಂದ ಸ್ತುತಿಸುತ್ತೇನೆ (ತೃಪ್ತಿಪಡಿಸುತ್ತೇನೆ) ೭-೩೪-೧೬ ; ೧೦-೯೩-೫ನ್ನು ಹೋಲಿಸಿ) ಇದರಿಂದ ಈ ದೇವತೆಯು ಆಕಾಶದ ಜಲರಾಶಿಯಲ್ಲಿ ವಾಸಿಸುತ್ತಾನೆ ಎಂದು ಸೂಚಿತವಾಗುತ್ತದೆ. ಯಾಸ್ಕರು (ನಿರು. ೧೦-೪೪) ಬುಧ್ನ ಎಂಬ ಪದಕ್ಕೆ ಗಾಳಿ ಎಂದು ಅರ್ಥಮಾಡಿದಾರೆ. ಅದರ ಮುಂದಿನ ಋಕ್ಕಿನಲ್ಲಿ (೭-೩೪-೧೭) ಅವನನ್ನು ಪೂಜಿಸುವವರನ್ನು ಹಿಂಸಿಸಬಾರದೆಂದು ಪ್ರಾರ್ಥನೆಯಿದೆ. ಇನ್ನೊಂದು ಕಡೆಯೂ (೫-೪೧-೧೬) ಇದೇ ಪದಗಳು ಪ್ರಯುಕ್ತವಾಗಿವೆ. ಈ ವಾಕ್ಯಗಳಿಂದ, ಅವನ ಸ್ವಭಾವದಲ್ಲಿ ದೌಷ್ಟ್ಯವಡಗಿದೆಯೆಂದು ವ್ಯಕ್ತವಾಗುತ್ತದೆ. 'ಅಹಿ' ಎಂಬುದು ಸಾಧಾರಣವಾಗಿ ವೃತ್ರನಿಗೆ ಉಪಯೋಗಸಲ್ಪಟ್ಟಿದೆ. ವೃತ್ರನೂ ಇದೇ ರೀತಿ, ನೀರನ್ನು ಆವರಿಸಿಕೊಂಡಿದ್ದನು, ನೀರು ಅವನನ್ನು ಅತಿಕ್ರಮಿಸಿ ಹರಿಯಿತು ಅಥವಾ ನೀರಿನಲ್ಲಿ ಅಥವಾ ವಾಯುಮಂಡಲದ ತಳದಲ್ಲಿ ಬಿದ್ದಿದ್ದನು (೧-೫೨-೬) ಎಂದು ವರ್ಣನೆಯಿದೆ. ಅಂತರಿಕ್ಷದ ಅಗ್ನಿಗೆ ಅಹಿ ಎಂದೂ (೧-೭೯-೧). ಅವನು ಅಂತರಿಕ್ಷದತಳದಲ್ಲಿ ಜನಿತನಾದನೆಂದೂ (೪-೧೧-೧) ಹೇಳಿದೆ. ಅಹಿಬುಧ್ನ್ಯ ಮತ್ತು ಅಹಿವೃತ್ರ ಇಬ್ಬರೂ ಒಂದೇ ಆಗಿದ್ದರು ; ಅಹಿಬುಧ್ನ್ಯನೂ ದೇವತೆಯೆಂಬ ಭಾವನೆ ಬಂದು, ಅವನ ದುಷ್ಟಸ್ವಭಾವ ಸೂಕ್ಷ್ಮವಾಗಿ ಸೂಚಿತವಾಗಿದೆ. ಇತರ ವೇದಗಳಲ್ಲಿ ಅಹಿಬುಧ್ನ್ಯನಿಗೂ ಗಾರ್ಹಪತ್ಯಾಗ್ನಿಗೂ ಸಂಬಂಧವೇರ್ಪಟ್ಟಿದೆ (ವಾ. ಸಂ. ೫-೩೩ ; ಐ. ಬ್ರಾ. ೩-೩೬ ; ತೈ. ಬ್ರಾ. ೧-೧-೧೦-೩). ಪುರಾಣಾದಿಗಳಲ್ಲಿ ಅಹಿಬುಧ್ನ್ಯ ಎಂಬುದು ರುದ್ರನ ನಾಮಗಳಲ್ಲಿ ಒಂದು.

## ಅಜ ಏಕಪಾದ

ಅಹಿ ಬುಧ್ನ್ಯನಿಗೂ ಅಜಏಕಪಾದನಿಗೂ ಬಹಳ ನಿಕಟಬಾಂಧವ್ಯವಿದೆ. ಎರಡೂ ಒಟ್ಟಾಗಿ ಐದು ಸಲವೂ, ಒಂದೇ ಒಂದು ಸಲ ಅಜಏಕಪಾದ ಮಾತ್ರ (೧೦-೬೫-೧೩) ಬಂದಿದೆ. ಘರ್ಜಿಸುವ ಸಾವೀರವೀ,



CC-0. Jangamwadi Math Collection. Digitized by eGangotri

ಏಕಪಾತ್ ಅಜ, ದಿವಃಧರ್ತಾ (ಆಕಾಶವನ್ನು ಎತ್ತಿ ಹಿಡಿದಿರುವವನು), ಸಿಂಧು, ಸಮುದ್ರದ ನೀರು ; ವಿಶ್ವೇದೇವತೆಗಳು, ಸರಸ್ವತೀ (೧೦-೬೪-೧೩) ಮತ್ತು ಸಾಗರ, ಸಿಂಧು, ಅಂತರಿಕ್ಷ, ಅಜಏಕಪಾದ, ಘರ್ಜಿಸುವ ಪ್ರವಾಹ, ಅಹಿಬುಧ್ನ್ಯ, ಮತ್ತು ವಿಶ್ವದೇವತೆಗಳು (೧೦-೬೬-೧೧), ಈ ಎರಡೂ ಪಟ್ಟಿಗಳು ಹೆಚ್ಚುಕಡಿಮೆ ಒಂದೇ ವಿಧವಾಗಿದೆ. ಇವುಗಳಿಂದ, ಅಜಏಕಪಾದನೂ ವಾಯುಮಂಡಲದ ದೇವತೆಗಳಲ್ಲಿ ಒಬ್ಬನೆಂದೂ ತಿಳಿದು ಬರುತ್ತದೆ. ಆದರೆ, ನಿರುಕ್ತದಲ್ಲಿ ಸ್ವರ್ಗಲೋಕದ ದೇವತೆಯೆಂದು ಪರಿಗಣನೆಯಿದೆ. ಅಥರ್ವವೇದದಲ್ಲಿ ಅಜ ಏಕಪಾದನು ಎರಡು ಲೋಕಗಳನ್ನು ಸ್ಥಿರವಾಗಿಸಿದನು ( ಅ. ವೇ. ೧೩-೧-೬ ) ಎಂದಿದೆ. ಆಜಏಕಪಾದನು ಪೂರ್ವದಿಕ್ಕಿನಲ್ಲಿ ಉದಿಸಿದನು (ತೈ. ಬ್ರಾ. ೩-೧-೨-೮). ವ್ಯಾಖ್ಯಾನಕಾರನು ಅಜಏಕಪಾದನು ಅಗ್ನಿಯ ಒಂದು ರೂಪವೆಂದೂ, ದುರ್ಗ ಎಂಬ ವ್ಯಾಖ್ಯಾನಕಾರನು ವ್ಯಾಖ್ಯಾನದಲ್ಲಿ (೧೨-೨೯) ಇವನು ಸೂರ್ಯನೆಂದೂ ಅಭಿಪ್ರಾಯಪಟ್ಟಿದ್ದಾರೆ. ಯಾಸ್ಕರು ಸ್ವತಃ ಇದರ ವಿಷಯವಾಗಿ ಸ್ಪಷ್ಟವಾಗಿ ಏನೂ ಬರೆದಿಲ್ಲ. ಅವರ ಪ್ರಕಾರ, ಅಜ ಎಂದರೆ, ಗಮಿಸುವವನು ಮತ್ತು ಏಕಪಾದ ಅಂದರೆ ಒಂದು ಕಾಲುಳ್ಳವನು ಅಥವಾ ಒಂದೇ ಕಾಲಿನಿಂದ ರಕ್ಷಿಸುವವನು ಅಥವಾ ಪಾನಮಾಡುವವನು. ಸ್ವತಂತ್ರ ದೇವತೆಯಾಗಿ ಸ್ಥಾನಮಾನಗಳೇನೂ ಇಲ್ಲದಿದ್ದರೂ, ಇವನಿಗೂ ಮತ್ತು ಅಹಿಬುಧ್ನ್ಯನಿಗೂ ಗೃಹಯಜ್ಞಗಳಲ್ಲಿ ಆಹುತಿಯಿದೆ (ಪಾರಸ್ಕರ ೨-೧೫-೨). ಪುರಾಣಗಳಲ್ಲಿ ಅಜ ಏಕಪಾದ ಎಂಬುದು ಏಕಾದಶರುದ್ರನಾಮಗಳಲ್ಲಿ ಒಂದು.

ಆಧುನಿಕ ವಿದ್ವಾಂಸರಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿ ಅಭಿಪ್ರಾಯಪಡುತ್ತಾರೆ. ಬಿರುಗಾಳಿಯ ಒಂದು ರೂಪ, ಸೌರವ್ಯೂಹದ ದೇವತೆಗಳಲ್ಲಿ ಒಂದು. ಒಂಟಿಯಾಗಿ ಸಂಚರಿಸುವ ಈ ಅಜವು ಚಂದ್ರನು "ಏಕಪಾದವುಳ್ಳ, ಜನಿಸದೇ ಇರುವ ಇವನು" ಯಾವುದೋ ಅಜ್ಞಾತವಾದ ಲೋಕದಲ್ಲಿ ವಾಸಿಸುವ ದೇವತೆ, ಇವೇ ಮೊದಲಾದ ನಾನಾ ಅಭಿಪ್ರಾಯಗಳು ಕಂಡುಬರುತ್ತವೆ.

## ರುದ್ರ

ಋಗ್ವೇದದಲ್ಲಿ ರುದ್ರನ ಸ್ಥಾನವು ಅಷ್ಟೇನೂ ಪ್ರಾಮುಖ್ಯತೆಯದಲ್ಲ; ಮೂರು ಸೂಕ್ತಗಳು, ಒಂದು ಸೂಕ್ತಭಾಗ, ಸೋಮದೇವತೆಯೊಡನೆ ಒಂದರಲ್ಲಿ, ಇಷ್ಟೇ ಈ ದೇವತೆಯನ್ನು ಸ್ತುತಿಸುವುದು. ಈ ಹೆಸರು ಎಪ್ಪತ್ತೈದು ಸಲ ಮಾತ್ರ ಬರುತ್ತದೆ.

ಅವನ ಅಂಗಾಂಗಳ ವರ್ಣನೆ ಈ ರೀತಿ ಇದೆ. ಅವನಿಗೆ ಒಂದುಕೈ (೨-೩೩-೭ ; ಇತ್ಯಾದಿ), ಬಾಹುಗಳು (೨-೩೩-೩ ; ವಾ. ಸಂ. ೧೬-೧) ಮತ್ತು ದೃಢವಾದ ಅಂಗಗಳು (೨-೩೩-೧೧) ಇವೆ. ಅವನ ತುಟಿಗಳು ಸುಂದರವಾದವು (೨-೩೩-೫) ಮತ್ತು ಪೂಷಣನಂತೆ ಕೂದಲು ಹೆಣೆದುಕೊಂಡಿರುತ್ತಾನೆ (೧-೧೧೪-೧ ಮತ್ತು ೫). ಅವನದು ಕಂದುಬಣ್ಣ (೨-೩೩-೫ ; ಇತ್ಯಾದಿ). ಅವನ ರೂಪವು ಕಣ್ಣುಕೋರೈಸುವಷ್ಟು ಪ್ರಕಾಶವುಳ್ಳದ್ದು (೧-೧೧೪-೫), ಮತ್ತು ಅವನು ಅನೇಕರೂಪವುಳ್ಳವನು (೨-೩೩-೯). ಜ್ವಲಿಸುವ ಸೂರ್ಯನಂತೆ, ಸುವರ್ಣದಂತೆ ಪ್ರಕಾಶಿಸುತ್ತಾನೆ (೧-೪೩-೫). ಸುವರ್ಣಾಭರಣಗಳನ್ನು (೨-೩೩-೯) ಮತ್ತು ನಾನಾ ವರ್ಣದ ಹೊಳೆಯುವ ಕಂಠಹಾರವನ್ನು (೨-೩೩-೧೦) ಧರಿಸಿದಾನೆ. ರಥದ ಆಸನದಲ್ಲಿ ಕುಳಿತಿದಾನೆ (೨-೩೩-೪). ಇತರ ಸಂಹಿತೆಗಳಲ್ಲಿ, ಅದರಲ್ಲಿಯೂ ವಾಜಸನೇಯ ಸಂಹಿತೆಯಲ್ಲಿ ಇನ್ನೂ ಅನೇಕ ಲಕ್ಷಣಗಳು ಉಕ್ತವಾಗಿವೆ. ಅವನು ಸಹಸ್ರಾಕ್ಷ (ಅ. ವೇ. ೧೧-೨-೨ ಮತ್ತು ೭; ವಾ. ಸಂ. ೧೬-೭). ಅವನಿಗೆ ಹೊಟ್ಟೆ, ಬಾಯಿ, ನಾಲಗೆ ಮತ್ತು ಹಲ್ಲುಗಳು (ಅ. ವೇ. ೧೧-೨-೬) ಇವೆ. ಅವನ ಹೊಟ್ಟೆಯು ಕಪ್ಪು ಮತ್ತು ಅವನ ಬೆನ್ನು ಕೆಂಪು (ಅ. ವೇ. ೧೫-೧-೭ ಮತ್ತು ೮). ಅವನ ಕಂಠವು (ವಾ. ಸಂ. ೧೬-೭) ನೀಲಿ ಮತ್ತು ಕೇಶವೂ ನೀಲಿ

(ಅ. ವೇ. ೨-೨೭-೬). ಅವನದು ತಾಮ್ರ ವರ್ಣ, ಕೆಂಪುಬಣ್ಣ (ವಾ. ಸಂ. ೧೬-೭). ಚರ್ಮಧಾರಿ (ವಾ. ಸಂ. ೩-೬೧; ೧೬-೫೧) ಮತ್ತು ಪರ್ವತವಾಸಿ (ವಾ. ಸಂ. ೧೬-೨ರಿಂದ೪) ಅವನು.

ಆಕ್ರಮಣಸಾಧನವಾದ ಆಯುಧಗಳು ಅನೇಕ ಇವೆ. ವಜ್ರಾಯುಧವನ್ನು ಹಿಡಿದಿದಾನೆ (೨-೩೩-೩). ಅವನ ಬಾಣವು ಆಕಾಶದಿಂದ ವಿಸೃಷ್ಟವಾಗಿ ಭೂಮಿಯನ್ನು ಹಾದುಹೋಗುತ್ತದೆ (೭-೪೬-೩). ಸಾಧಾರಣವಾಗಿ ಧನುರ್ಬಾಣಗಳನ್ನು ಧರಿಸಿರುತ್ತಾನೆ (೨-೩೩-೧೦ ಮತ್ತು ೧೧; ೫-೪೨-೧೧; ೧೦-೧೨೫-೬); ಆ ಬಾಣಗಳು ಬಲಿಷ್ಠವಾದುವು ಮತ್ತು ವೇಗವುಳ್ಳವು (೭-೪೬-೧). ಅವನು ಕೃಶಾನು ಮತ್ತು ಇತರ ಧನುರ್ಧಾರಿಗಳೊಡನೆ ಸ್ತುತನಾಗಿದಾನೆ (೧೦-೬೪-೮). ಇಂದ್ರನು ಧನುರ್ಧಾರಿಯೊಡನೆ ರಥದಲ್ಲಿ ಕುಳಿತಿದಾನೆ (೬-೨೦-೯; ೨-೩೩-೧೧ನ್ನು ಹೋಲಿಸು) ಎಂಬಲ್ಲಿ, ಧನುರ್ಧಾರಿಯು ರುದ್ರನೇ ಇರಬೇಕು. ಅಥರ್ವ ವೇದದಲ್ಲಿಯೂ ಅವನಿಗೆ ಧನುರ್ಧಾರಿಯೆಂತಲೇ ಸಂಜ್ಞೆ (ಅ. ವೇ. ೧-೨೮-೧; ೬-೯೩-೧; ೧೫-೫-೧ರಿಂದ೭). ಅಥರ್ವವೇದ ಮತ್ತು ಇತರ ವೇದಭಾಗಗಳಲ್ಲಿ ಅವನ ಧನುಸ್ಸು, ಬಾಣ, ಆಯುಧ, ವಜ್ರಾಯುಧ ಅಥವಾ ಗದೆ ಇವುಗಳು ಪದೇ ಪದೇ ಪ್ರಸಕ್ತವಾಗಿವೆ (ಅ. ವೇ. ೧-೨೮-೫ ಇತ್ಯಾದಿ; ಶ. ಬ್ರಾ. ೯-೧-೧-೬).

ರುದ್ರನ ವಿಷಯದಲ್ಲಿ ಪದೇ ಪದೇ ಪ್ರಸಕ್ತವಾಗುವ ಅಂಶವೆಂದರೆ, ಅವನಿಗೂ ಮರುತ್ತಗಳಿಗೂ ಇರುವ ಸಂಬಂಧ. ರುದ್ರನು ಮರುತ್ತಗಳಿಗೆ ತಂದೆಯು (೧-೧೧೪-೬ ಮತ್ತು ೯; ೨-೩೩-೧); ಅಥವಾ ಮರುತ್ತುಗಳು ರುದ್ರನ ಪುತ್ರರೆಂದು ಹೇಳಲ್ಪಟ್ಟಿದಾರೆ. ಮತ್ತು ಅವರಿಗೆ ರುದ್ರರು ಅಥವಾ ರುದ್ರಿಯರು ಎಂದೂ ಹೆಸರು. ಪೃಶ್ನಿಯ ಹೊಳೆಯುತ್ತಿರುವ ಕೆಚ್ಚಲಿನಿಂದ ರುದ್ರನು ಮರುತ್ತುಗಳನ್ನು ಸೃಜಿಸದನು (೨-೩೪-೨). ಆದರೆ, ಇಂದ್ರ ಮತ್ತು ಮರುತ್ತುಗಳು ಯುದ್ಧಾದಿಗಳಲ್ಲಿ ಸೇರುವಂತೆ, ರುದ್ರ ಮತ್ತು ಮರುತ್ತುಗಳು ಎಲ್ಲಿಯೂ ಸೇರಿಲ್ಲ; ಏಕೆಂದರೆ, ರುದ್ರನು ರಾಕ್ಷಸರೊಡನೆ ಯುದ್ಧದಲ್ಲಿ ಯಾವಾಗಲೂ ತೊಡಗಿಲ್ಲ. ಪುರಾಣಾದಿಗಳಲ್ಲಿ ಅನೇಕ ವೇಳೆ ರುದ್ರನಿಗೆ ಪ್ರಯುಕ್ತವಾದ ತ್ರ್ಯಂಬಕನೆಂಬ ಹೆಸರು ವೇದಗಳಲ್ಲಿಯೂ ಕಂಡುಬರುತ್ತದೆ (ವಾ. ಸಂ. ೩-೫೮; ಶ. ಬ್ರಾ. ೨-೬-೨-೯); ಋಗ್ವೇದದಲ್ಲಿಯೂ ಒಂದು ಕಡೆ ಅವನಿಗೆ ಪ್ರಯೋಗಿಸಿದೆ (೭-೫೯-೧೨). ಆ ಪದಕ್ಕೆ ಮೂರು ಜನ ಜನನಿಯರನ್ನು ಹೊಂದಿರುವ (೩-೫೬-೫ನ್ನು ಹೋಲಿಸಿ) ಎಂದರ್ಥ. ಇಲ್ಲಿ ಮೂರು ಜನ ಮಾತೃಗಳೆಂಬುವುದು ಪ್ರಪಂಚದ ಮೂರು ಭಾಗಗಳು ಇರಬಹುದು. ಪುರಾಣಾದಿಗಳಲ್ಲಿ ಅಂಬಿಕಾ ಎಂಬುವಳು ರುದ್ರನ ಪತ್ನಿ. ಆದರೆ ವೇದಗಳಲ್ಲಿ ಅವಳು ಅವನ ಸೋದರಿ (ವಾ. ಸ. ೩-೫೭). ಶಿವನ ಪತ್ನಿಯ ನಾಮಗಳಾದ ಉಮಾ ಮತ್ತು ಪಾರ್ವತಿ ಎಂಬಿವುಗಳು ತೈತ್ತಿರೀಯ ಆರಣ್ಯಕ ಮತ್ತು ಕೇನೋಪನಿಷತ್ತುಗಳಲ್ಲಿ ಬರುತ್ತವೆ.

ಅಗ್ನಿಗೆ ಸಮಾನರೆಂದು ಹೇಳಿರುವ ಅನೇಕ ದೇವತೆಗಳಲ್ಲಿ ರುದ್ರನೂ ಒಬ್ಬನು (೨-೧-೬). ಇತರ ಕಢೆಗಳಲ್ಲಿಯೂ ಅವನೂ ಅಗ್ನಿಯೂ ಒಂದು (ಅ. ವೇ. ೮-೮೭-೧; ತೈ. ಸಂ. ೫-೪-೩-೧; ೫-೫-೭-೪; ಮತ್ತು ಶ. ಬ್ರಾ. ೬-೧-೩-೧೦; ೯-೧-೧-೧ನ್ನು ಹೋಲಿಸಿ). ರುದ್ರ ಎಂಬುದು ಅನೇಕವೇಳೆ ವಿಶೇಷಣವಾಗಿ ಉಪಯುಕ್ತವಾಗಿದೆ. ಅನೇಕ ಸಲ ಅಗ್ನಿಗೂ, ಅದಕ್ಕೂ ಹೆಚ್ಚಾಗಿ ಅಶ್ವಿನಿಗಳಿಗೂ ಈ ವಿಶೇಷಣ ಉಕ್ತವಾಗಿದೆ. ರುದ್ರನಿಗೆ ಶರ್ವ ಮತ್ತು ಭವ ಎಂಬ ಎರಡು ಹೊಸ ಹೆಸರುಗಳು (ವಾ. ಸಂ. ೧೬-೧೮-೨೮). ಈ ಎರಡು ನಾಮಗಳೂ ಮತ್ತು ಅವನ ನಾಶಕಾರಕವಾದ ಬಾಣಗಳೂ ಅಥರ್ವ ವೇದದಲ್ಲಿಯೂ ಹೇಳಲ್ಪಟ್ಟಿವೆ (೨-೨೭-೬; ೬-೯೩-೧; ೧೦-೧-೨೩; ೧೧-೨-೧ ಮತ್ತು ೧೨); ಆದರೆ ಇಲ್ಲಿ ಶರ್ವ, ಭವ ಮತ್ತು ರುದ್ರ ಬೇರೆ ಬೇರೆ ದೇವತೆಗಳೆಂದು ಭಾವನೆ ಇರುವಂತಿದೆ. ಶರ್ವ ಮತ್ತು ಭವರು ರುದ್ರಪುತ್ರರು ಮತ್ತು ಬೇಟೆಯಲ್ಲಿ



CC-0. Jangamwadi Math Collection. Digitized by eGangotri

ಬಹಳ ಆಸಕ್ತರು (ಸಾಂ. ಶ್ರೌ. ಸೂ. ೪.೨೦-೧). ಅಗ್ನಿ, ಅಶನಿ, ಪಶುಪತಿ, ಭವ, ಶರ್ವ, ಈಶಾನ, ಮಹಾದೇವ, ಉಗ್ರದೇವ ಮತ್ತು ಇತರರು ಒಂದೇ ದೇವತೆಯ ನಾನಾ ರೂಪಗಳು (ವಾ. ಸಂ. ೩೯-೮). ರುದ್ರ, ಶರ್ವ, ಪಶುಪತಿ, ಉಗ್ರ, ಅಶನಿ, ಭವ, ಮತ್ತು ಮಹಾನ್ ದೇವ; ಇವುಗಳು ಅಗ್ನಿಯ ಎಂಟು ರೂಪಗಳು (ಶ. ಬ್ರಾ. ೬-೧-೩-೭; ಶಾಂ. ಬ್ರಾ. ೬-೧ ಮೊದಲಾದುವನ್ನು ಹೋಲಿಸಿ); ಮತ್ತು ಶರ್ವ, ಭವ, ಪಶುಪತಿ ಮತ್ತು ರುದ್ರ, ಇವುಗಳೆಲ್ಲಾ ಅಗ್ನಿಯ ನಾಮಗಳು (ಶ. ಬ್ರಾ. ೧-೭-೩-೮). ಈ ಮೇಲಿನ ನಾಮಗಳಲ್ಲಿ ಒಂದಾದ ಅಶನಿ ಎಂಬುದು ಅಗ್ನಿಕುಮಾರ (ವಿದ್ಯುತ್)ನಿಗೆ ಹೆಸರು (೬-೧-೩-೧೦); ಆದರೆ ಮತ್ತೊಂದು ಕಡೆ (ಶಾಂ. ಬ್ರಾ.) ಅದು ಇಂದ್ರನ ನಾಮವು. ಮನೆಯಿಂದ ಓಡಿಸಲ್ಪಟ್ಟ ಗೋವುಗಳು ರುದ್ರನ ಆಘಾತಕ್ಕೆ ಒಳಪಡುವುದು ಹೆಚ್ಚು; ಅದಕ್ಕೋಸ್ಕರಲೇ ಅಂಥವುಗಳೆಲ್ಲಾ ಅವನ ರಕ್ಷಣೆಗೆ ಒಳಪಡಿಸಲ್ಪಟ್ಟವೆ. ಆದರಿಂದಲೇ ಅವನಿಗೆ ಪಶುಪತಿ ಎಂಬ ನಾಮಧೇಯ.

ರುದ್ರನು ಘೋರರೂಪಿ (೨-೩೩-೯ ಮತ್ತು ೧೧; ೧೦-೧೨೬-೫) ಮತ್ತು ಕ್ರೂರಮೃಗದಂತೆ ನಾಶಕಾರಕನು (೨-೩೩-೧೧). ಅವನು ಆಕಾಶದ, ಕೆಂಪುಛಾಯೆಯ ವರಾಹ (೧-೧೧೪-೫). ವೃಷಭ (೨-೩೩-೭, ೮ ಮತ್ತು ೧೫). ಉದಾತ್ತನು (೭-೧೦-೪); ಬಲಾಢ್ಯನು (೧-೪೩-೧; ೧-೧೧೪-೧); ಬಲಾಢ್ಯರಲ್ಲೆಲ್ಲಾ ಬಲಿಷ್ಠನು (೨-೩೩-೩); ಅಪ್ರತಿಹತನು (೭-೪೬-೧); ಪರಾಕ್ರಮದಲ್ಲಿ ಮೀರಿದವರಿಲ್ಲ (೨-೩೩-೧೦); ವೇಗಶಾಲಿಯು (೧೦-೯೨-೫); ಚುರುಕು (೧-೧೧೪-೪). ಅವನು ಪ್ರಾಯದವನು (೫-೬೦-೫) ಮತ್ತು ವೃದ್ಧನಾಗುವುದಿಲ್ಲ (೬-೪೯-೧೦). ಅವನು ಅಸುರನಾಮಧೇಯನು (೫-೪೨-೧೧) ಅಥವಾ ಸ್ವರ್ಗಲೋಕದ ಮಹಾ ಅಸುರ (೨-೧-೬). ಆತ್ಮವಿಖ್ಯಾತನು (೧-೧೨೯-೩; ೧೦-೯೨-೯); ವೀರರನ್ನು ಆಳುತ್ತಾನೆ (೧-೧೧೪-೧ ಮತ್ತು ೨; ಇತ್ಯಾದಿ) ಮತ್ತು ಈ ಪ್ರಪಂಚಕ್ಕೇ ಈಶ್ವರ (೨-೩೩-೯) ಮತ್ತು ಜನಕನು (೬-೪೯-೧೦). ಅವನು ನಿಯಮಗಳನ್ನು ವಿಧಿಸುವವನು (೬-೪೬-೧) ಮತ್ತು ತನ್ನ ವಿಧಿಗಳಿಂದ ಮತ್ತು ಜಗದಾಧಿಪತ್ಯದಿಂದ, ದೇವಮಾನವರ ಎಲ್ಲಾ ಕಾರ್ಯಗಳನ್ನೂ ಅರಿತುಕೊಳ್ಳುತ್ತಾನೆ (೭-೪೬-೨). ನದಿಗಳು ಹರಿದು, ಭೂಮಿಯೆಲ್ಲವನ್ನೂ ಆರ್ದ್ರವನ್ನಾಗಿ ಮಾಡುವುದು ಅವನ ಅಪ್ಪಣೆಯಿಂದಲೇ (೧೦-೯೨-೫). ಬುದ್ಧಿವಂತ (೧-೪೩-೧); ಜ್ಞಾನಿ (೧-೧೧೪-೪); ಮತ್ತು ಉದಾರಿ (೨-೩೩-೭; ೬-೪೯-೧೦). ಅನೇಕ ಸಲ ಅವನಿಗೆ ಮೀಢ್ವ. (ಉದಾರಿ) ಎಂಬ ಪ್ರಯೋಗವಿದೆ (೧-೧೧೪-೩) ಮತ್ತು ಇತರ ವೇದಗಳಲ್ಲಿ ರುದ್ರನಿಗೆ ಮಾತ್ರ ಈ ಪದಪ್ರಯೋಗ. ಅವನು ಸುಲಭವಾಗಿ ಸ್ತುತ್ಯನು (೨-೩೩-೬) ಮತ್ತು ಮಂಗಳಕರನು (ಶಿವ ೧೦-೯೨-೯).

ಅವನನ್ನು ಸ್ತುತಿಸುವ ಸೂಕ್ತಗಳಲ್ಲೆಲ್ಲಾ, ಕೆಡಕು ಮಾಡುವುದು ಇವನು ವಿಶೇಷವಿದ್ದಂತೆ ಕಾಣುತ್ತದೆ. ಅವನ ಬಾಣದ ಭಯ, ಅವನ ಕೋಪದ ಅನಿಷ್ಟಪರಿಣಾಮಗಳು, ಇವುಗಳೇ ಉಕ್ತವಾಗಿವೆ. ಸ್ತುತಿಸುವವರು-ಅವರ ಮಾತಾಪಿತೃಗಳು, ಮಕ್ಕಳು ಅನುಯಾಯಿಗಳು, ದನಕರುಗಳು, ಅಶ್ವಗಳು, ಇವುಗಳು ಯಾವುದನ್ನೂ ಕೋಪದಿಂದ ಕೊಲ್ಲಬಾರದು ಅಥವಾ ನೋಯಿಸಬಾರದು (೧-೧೧೪-೭ ಮತ್ತು ೮), ಆದರೆ ಅಶ್ವಗಳನ್ನು ಳಿಸಿಕೊಡಬೇಕು (೨-೩೩-೧) ಮತ್ತು ಬಾಣಗಳನ್ನು ಬೇರೆ ಕಡೆ ತಿರುಗಿಸಿ, ಇತರರನ್ನು ಅದರಿಂದ ಧ್ವಂಸಮಾಡಬೇಕು (೨-೩೩-೧೧ ಮತ್ತು ೧೪), ಕೋಪ ಬಂದಾಗ ತನ್ನ ವಜ್ರಾಯುಧವನ್ನು ವಿಮುಖವನ್ನಾಗಿ ಮಾಡಬೇಕೆಂದೂ, ತನ್ನ ಆರಾಧಕರನ್ನು ತೊಂದರೆಪಡಿಸಬಾರದೆಂದೂ ( ೬-೨೮-೭ ; ೭೪೬-೨ರಿಂದಳ ), ಅವರ ಗೋವುಗಳನ್ನು ಮತ್ತು ಮಕ್ಕಳನ್ನು ಮತ್ತು ಗೋವುಗಳು ಮತ್ತು ಮನುಷ್ಯರನ್ನು ವಧಿಸುವ ಆಯುಧವನ್ನು ತಮ್ಮಿಂದ ದೂರ ಇಡಬೇಕೆಂದೂ (೨-೩೩-೪ರಿಂದ ಮತ್ತು೧೫), ಮತ್ತು ಮನುಷ್ಯರನ್ನು (೨-೩೩-೧) ಪ್ರಾರ್ಥಿಸಿದಾರೆ. ಕೋಪತಾಪಗಳನ್ನು ಮಾಡಿಕೊಳ್ಳಬಾರದೆಂದೂ (೨-೩೩-೪ರಿಂದ ಮತ್ತು೧೫), ಮತ್ತು ಗೋವುಗಳು ಮತ್ತು ಮನುಷ್ಯರನ್ನು ಕೃಪೆಯಿಡಬೇಕೆಂದೂ ಮೊರೆಯಿಟ್ಟಿದ್ದಾರೆ (೧೦-೧೬೯-೧). 'ನಡೆಯುವ ಆಹಾರದ' ವಿಷಯದಲ್ಲಿ ಮನುಷ್ಯರನ್ನು ವಧಿಸಲು ಅಪೇಕ್ಷಿಸುತ್ತಾನೆ (ಆ.ಗೃ. ೪-೮-೩೨). ವಧಿಸುವವನೆಂಬ (ನೃಷ್ಣೇ ೪-೩-೬) ವಿಶೇಷಣವಿದೆ.



CC-0. Jangamwadi Math Collection. Digitized by eGangotri

ಅವನ ಕೋಪವು ಇತರ ವೇದಗಳಲ್ಲಿ ಇನ್ನೂ ಹೆಚ್ಚಾಗಿ ಪ್ರಾಮುಖ್ಯತೆಗೆ ಬಂದಿದೆ. ಪದೇ ಪದೇ ಈ ವಿಷಯದಲ್ಲಿ ಅವನಿಗೆ ಮೊರೆಯಿಟ್ಟಿದಾರೆ (ವಾ. ಸಂ. ೩-೬೧ ; ಇತ್ಯಾದಿ ; ಅ. ವೇ. ೧-೨೮-೫ ; ಇತ್ಯಾದಿ). ಸ್ವರ್ಗೀಯಾಗ್ನಿಯನ್ನು ತಮ್ಮ ಮೇಲೆ ಪ್ರಯೋಗಿಸಬಾರದೆಂದೂ, ಸಿಡಿಲು ಬೇರೆ ಯಾವುದಾದರೂ ಸ್ಥಳದಲ್ಲಿ ಬೀಳುವಂತೆ ಮಾಡಬೇಕೆಂದೂ ಬೇಡಿದಾರೆ (ಅ. ವೇ. ೧೧-೨-೨೬ ; ೧೦-೧-೨೩). ಜ್ವರ, ಕೆಮ್ಮು. ವಿಷ, ಇವುಗಳ ಮೂಲಕವೂ, ಇವನ, ಮನುಷ್ಯರ ಮೇಲೆ ಕೈ ಮಾಡುತ್ತಾನೆ (ಅ. ವೇ. ೧೧-೨-೨೨ ಮತ್ತು ೨೬)- ಬೇಟೆಯನ್ನು ಅಗಿಯದೇ ನುಂಗುವ ಅಗಲವಾದ ಬಾಯುಳ್ಳ ಸದಾ ಬೊಗಳುವ ನಾಯಿಗಳೂ ಅವನ ಹತ್ತಿರ ಇವೆ. (ಅ. ವೇ. ೧೦-೧-೩೦ ; ವಾ. ಸಂ. ೧೬-೨೮ನ್ನು ಹೋಲಿಸಿ) ಹೆದೆಯೇರಿಸಿದ ಅವನ ಬಿಲ್ಲು ಮತ್ತು ಬಾಣಗಳನ್ನು ಕಂಡರೆ, ತಮ್ಮನ್ನು ಎಲ್ಲಿ ನಾಶ ಮಾಡುವನೋ ಎಂದು ದೇವತೆಗಳಿಗೂ ಭಯ (ಶ. ಬ್ರಾ. ೯-೧-೧ ೧ ಮತ್ತು ೬) ಮಹಾದೇವನಾಮನಾಗಿ, ಇವನು ಗೋವುಗಳನ್ನು ವಧಿಸುತ್ತಾನೆ (ತಾಂ. ಮ. ಬ್ರಾ. ೬-೯-೭). ಸಮಸ್ತ ಭಯಂಕರ ವಸ್ತುಗಳಿಂದ ರಚಿತನಾದವನು ಇವನು (ಐ. ಬ್ರಾ. ೩-೩೩-೧). ಬ್ರಾಹ್ಮಣ ಮತ್ತು ಸೂತ್ರಗಳಲ್ಲಿ, ಇವನು ಇತರ ದೇವತೆಗಳಿಂದ ಪ್ರತ್ಯೇಕವಾಗಿರುತ್ತಾನೆಂದು ಹೇಳಿರುವುದು, ಇವನ ಈ ಭೀಕರ ಗುಣಗಳಿಂದಲೇ ಇರಬಹುದು. ದೇವತೆಗಳೆಲ್ಲಾ ಸ್ವರ್ಗವನ್ನು ಸೇರಿದಾಗ, ರುದ್ರನು ಹಿಂದುಳಿದನು (ಶ. ಬ್ರಾ. ೧-೭-೩-೧). ವೈದಿಕ ಕರ್ಮಗಳಲ್ಲಿ, ಪ್ರಾಯಶಃ ಇತರ ದೇವತೆಗಳಿಗೆ ಆಹುತಿ ಕೊಟ್ಟಮೇಲೆ, ಉಳಿದುದು ರುದ್ರನಿಗೆ ಅರ್ಪಿತವಾಗುತ್ತದೆ (ಆ. ಧ. ಸೂ. ೨-೪-೨೩). ಯಾಗಗಳಲ್ಲಿ ಪಿಶಾಚಿಗಳ ಭಾಗವೆಂದು ರಕ್ತವನ್ನು ಕೊಡುವಂತೆ (ಐ. ಬ್ರಾ. ೨-೭-೧), ಅವನ ಸೈನಿಕರು, ರೋಗ ಮತ್ತು ಮೃತ್ಯುಗಳಿಂದ ಮನುಷ್ಯರನ್ನು ಆಕ್ರಮಿಸಿ, ತಮಗೆ ಬಲಿಯಾದವರ ರಕ್ತಸಿಕ್ತವಾದ ಅವಶಿಷ್ಟವನ್ನು ಭಕ್ಷಣ ಮಾಡುತ್ತಾರೆ (ಸಾಂ. ಶ್ರೌ. ಸೂ. ೪-೧೯-೮). ಇತರ ದೇವತೆಗಳ ವಾಸಸ್ಥಳವು ಪೂರ್ವದಿಕ್ಕಿನಲ್ಲಿದೆ ಆದರೆ ರುದ್ರನು ಉತ್ತರದಿಕ್ಕಿನಲ್ಲಿ ವಾಸಿಸುತ್ತಾನೆ. ಇವನು ರೌದ್ರ ಸ್ವಭಾವದವನಾದುದರಿಂದಲೇ ಇತರ ದೇವತೆಗಳೊಡನೆ ವಿಶೇಷವಾಗಿ ಸೇರುವುದಿಲ್ಲ ಮತ್ತು ದ್ವಂದ್ವದೇವತೆಯಾಗಿ, ಸೋಮನೊಡನೆ ಒಂದೇ ಒಂದು ಸಣ್ಣ ಸೂಕ್ತದಲ್ಲಿ ಹೊರತು, ಸ್ತುತಿಯೂ ಇಲ್ಲ.

ಇವುಗಳಲ್ಲದೆ, ಪುರಾಣಾದಿಗಳಲ್ಲಿ ಚಿತ್ರಿತನಾಗಿರುವ ರುದ್ರನ ಭೀಕರವಾದ ಮತ್ತು ಒಂದೊಂದುವೇಳೆ ಅಸಹ್ಯವಾದ ಗುಣಗಳು ಕೆಲವು ವಾಜನೇಯ ಸಂಹಿತೆಯಲ್ಲಿ ಉಕ್ತವಾಗಿವೆ.

ಆದರೆ ರುದ್ರನು ಪಿಶಾಚಾದಿಗಳಂತೆ ಸಂಪೂರ್ಣವಾಗಿ ಅನಿಷ್ಟಕಾರಕನಲ್ಲ. ಇತರ ದೇವತೆಗಳಿಂದ ಆಗಬಹುದಾದ ತೊಂದರೆಯನ್ನು ಪರಿಹರಿಸಬೇಕೆಂದು ಪ್ರಾರ್ಥಿತನಾಗಿದಾನೆ (೧-೧೧೪-೪ ; ೨-೩೩-೭). ಅಪಾಯದಿಂದ ರಕ್ಷಿಸುವುದಲ್ಲದೆ (೫-೫೧-೧೩), ವರಪ್ರದಾನ ಮಾಡುತ್ತಾನೆ. (೧-೧೧೪-೧ ಮತ್ತು ೨ ; ೨-೩೩-೬) ಮತ್ತು ಮನುಷ್ಯ ಮತ್ತು ಪ್ರಾಣಿಗಳಿಗೆ ಕ್ಷೇಮವನುಂಟುಮಾಡುತ್ತಾನೆ (೧-೪೩-೬). ರೋಗಗಳನ್ನು ಗುಣಪಡಿಸುವ ಶಕ್ತಿಯು ಇವನಿಗುಂಟೆಂದು ಪದೇ ಪದೇ ಉಕ್ತವಾಗಿದೆ. ಔಷಧಗಳನ್ನು ಅನುಗ್ರಹಿಸುತ್ತಾನೆ (೨-೩೩-೧೨); ಎಲ್ಲಾ ಔಷಧಿಗಳೂ ಇವನಿಗಧೀನವಾಗಿವೆ (೫-೪೨-೧೧) ; ಮತ್ತು ಸಹಸ್ರಾರು ಔಷಧಿಗಳಿವೆ (೭-೪೬-೩). ಅವನ ಕೈಯ್ಯಲ್ಲಿ ಉತ್ತಮವಾದ ಔಷಧಗಳಿವೆ (೧-೧೧೪-೫); ಅವನ ಹಸ್ತವೇ ಗುಣಪಡಿಸುವ ಶಕ್ತಿಯುಳ್ಳದ್ದು (೨-೩೩-೭). ತನ್ನ ಚಿಕಿತ್ಸೆಯಿಂದ ವೀರರನ್ನು ಬೆಳಸುತ್ತಾನೆ; ಏಕೆಂದರೆ ಅವನು ವೈದ್ಯರಲ್ಲೆಲ್ಲಾ ಉತ್ತಮ ವೈದ್ಯನು (೨-೩೩-೪) ಮತ್ತು ಅವನು ಮದ್ದಿನ ಸಹಾಯದಿಂದ ಆರಾಧಕನು ನೂರು ವರ್ಷ ಜೀವಿಸಲು ಆಶಿಸುತ್ತಾನೆ (೨-೩೩-೨). ಪೂಜೆ ಮಾಡುವವರ ಸಂತಾನಕ್ಕೆ ಶುಭಪ್ರದನಾಗು (೭-೪೬-೨), ಮತ್ತು ಗ್ರಾಮದಲ್ಲಿರುವವರೆಲ್ಲರೂ ರೋಗರುಜಿನಗಳಿಲ್ಲದೆ, ತಿಂದುಂಡುಕೊಂಡಿರುವಂತೆ, ಪಶುಪ್ರಾಣಿಗಳಿಗೂ, ಮನುಷ್ಯರಿಗೂ ಅನುಕೂಲನಾಗಿರು (೧-೧೧೪-೧) ಎಂದು ಪ್ರಾರ್ಥನೆ. ಈ ಸಂದರ್ಭದಲ್ಲಿ ಅವನಿಗೆ ಜಲಾಷ ಮತ್ತು ಜಲಾಷಭೇಷಜ ಎಂಬ ಎರಡು ವಿಶೇಷಣಗಳಿವೆ (೧-೪೩-೪ ; ಅ. ವೇ. ೨-೨೭-೬). ಇಲ್ಲಿ ಔಷಧಿಗಳೆಂದರೆ ವೃಷ್ಟಿಜಲವಿರಬೇಕು (೫-೫೩-೧೪ನ್ನು ಹೋಲಿಸಿ (೧೦-೫೯-೯). ರುದ್ರನ ವಿದ್ಯುತ್ತೂ ಮತ್ತು ಅವನ ಚಿಕಿತ್ಸಾಶಕ್ತಿಗಳು ಒಟ್ಟಾಗಿ ಹೇಳಲ್ಪಟ್ಟಿವೆ. (೭-೪೬-೩). ವೈದ್ಯ ರುದ್ರನು ಇತರ ರುದ್ರರೊಡನೆ ಪ್ರಸನ್ನನಾಗಬೇಕೆಂದು ಪ್ರಾರ್ಥಿತನಾಗಿದಾನೆ (೭-೩೫-೬) ರುದ್ರನ ಜೊತೆಯಲ್ಲಿ ಮರುತರಿಗೂ ಚಿಕಿತ್ಸಾ ಶಕ್ತಿಗಳು ಉಕ್ತವಾಗಿವೆ (೨-೩೩-೧೩). ರುದ್ರನ ಈ ಶಕ್ತಿಯು ಇತರ ವೇದಗಳಲ್ಲಿಯೂ ಉಕ್ತವಾಗಿವೆ (ವಾ. ಸಂ. ೩-೫೯ ; ೧೬-೫-೪೯ ; ಅ. ವೇ. ೨-೨೭-೬); ಆದರೆ ಅವನ ವಿನಾಶಕಾರಕ ಶಕ್ತಿಯನ್ನು



CC-0. Jangamwadi Math Collection. Digitized by eGangotri

ಹೇಳಿರುವಷ್ಟು ಸಲ ಈ ಶಕ್ತಿಯು ಹೇಳಲ್ಪಟ್ಟಿಲ್ಲ. ರೋಗ ಪರಿಹಾರ ಅಥವಾ ನಿವಾರಣೆಗೋಸ್ಕರ ಅವನನ್ನು ದ್ದೇಶಿಸಿ ಯಾಗಗಳು ವಿಹಿತವಾಗಿವೆ (ಆ. ಗೃ. ೪-೮-೪೦ ; ಕೌ. ಸೂ. ೫೧-೭ ; ಇತ್ಯಾದಿ).

ರುದ್ರನು ಪ್ರಕೃತಿಯ ಯಾವ ಅಂಶವನ್ನು ಪ್ರತಿಬಿಂಬಿಸುತ್ತಾನೆ ಎಂಬುದು ನಿರ್ಧರವಾಗಿಲ್ಲ. ಅವನೂ ಒಬ್ಬ ಚಂಡಮಾರುತದ ದೇವತೆ. ಆದರೆ, ಇಂದ್ರನಂತೆ ಇವನ ರೋಷವು ಹಿಂಸಾಕಾರಕರ ಮಾತ್ರ, ಮೇಲಲ್ಲ ; ಎಲ್ಲರಿಗೂ ಇವನಿಂದ ತೊಂದರೆಯುಂಟು. ಆದುದರಿಂದ ಇವನು ಚಂಡಮಾರುತದ ಒಂದು ಭಾಗ. ಹಾನಿಕರವೂ ಆದ ಸಿಡಿಲು ಎನ್ನಬಹುದು. ಈ ಅಭಿಪ್ರಾಯವನ್ನೊಪ್ಪಿದರೆ, ಬಾಣಗಳು ಮಾರಕವಾದುವು. ಚಂಡ ಮಾರುತ ದೇವತೆಗಳಿಗೆ ಜನಕ ಅಥವಾ ಅವರ ಮುಖಂಡ, ಮುಂತಾದ ಅಭಿಪ್ರಾಯಗಳು ಸಾರ್ಥಕವಾಗುತ್ತವೆ. ಇವನಿಂದ ಆಗುವ ಉಪಕಾರ ಚಿಕಿತ್ಸೆ ಮೊದಲಾದುವು ಬಿರುಗಾಳಿಯಿಂದಾಗುವ ಮಳೆಯ ಸತ್ಪರಿಣಾಮಗಳು ಎನ್ನಬಹುದು. ಇವನ ಕೋಪತಾಪಗಳ ದುಷ್ಪರಿಣಾಮ ಪರಿಹಾರವಾಗಲೆಂದೇ ಇವನಿಗೆ ಕೊಟ್ಟಿರುವ 'ಶಿವ' ಎಂಬ ಸೌಮ್ಯ ನಾಮಧೇಯವು ಇವನಿಗೆ ರೂಢಿಯಾಗಿ ಬಂದಿದೆ. ಇವನಿಗೂ ಅಗ್ನಿಗೂ ಇರುವ ನಿಕಟಬಾಂಧವ್ಯವೂ ಇದರಿಂದ ಅರ್ಥವಾಗುತ್ತದೆ.

## ಮರುದ್ದೇವತೆಗಳು

ಬಹು ಮುಖ್ಯರಾದ ದೇವತೆಗಳು. ೩೩ ಸೂಕ್ತಗಳು ಪೂರ್ತಿಯಾಗಿ, ೭ ಇಂದ್ರನೊಡನೆ, ಮತ್ತು ಒಂದೊಂದು ಅಗ್ನಿ ಮತ್ತು ಪೂಷಣರೊಡನೆ, ಹೀಗೆ ಒಟ್ಟು ೪೨ ಸೂಕ್ತಗಳು ಇವರನ್ನು ಸ್ತುತಿಸುತ್ತವೆ. ಇವರು ಒಟ್ಟಾಗಿ ಒಂದು ಗಣ ಅಥವಾ ಶರ್ಧರು (೧-೩೭-೧; ಇತ್ಯಾದಿ) ಮತ್ತು ಬಹುವಚನದಲ್ಲಿಯೇ ಪ್ರಯೋಗ. ಅವರು ಸಂಖ್ಯೆಯಲ್ಲಿ ಅರವತ್ತರ ಮೂವತ್ತರಷ್ಟು (೮-೯೬-೮) ಅಥವಾ ಏಳರ ಮೂರರಷ್ಟು (೧-೧೩೩-೬ ; ಅ. ವೇ. ೧೩-೧-೧೩). ಅವರು ಜನನ ಹೊಂದಿದರೆಂಬುದು ಅನೇಕ ಸಾರಿ ಹೇಳಿದೆ (೫-೫೭-೫ ; ಇತ್ಯಾದಿ). ಅವರು ರುದ್ರನ ಪುತ್ರರು ; ಅವರಿಗೆ ರುದ್ರರೆಂದೇ ಹೆಸರು. (೧-೩೯-೪ ಮತ್ತು ೭ ಇತ್ಯಾದಿ); ಕೆಲವು ವೇಳೆ ರುದ್ರಿಯರೆಂದೂ (೧-೩೮-೭ ; ೨-೩೪-೧೦ ; ಇತ್ಯಾದಿ) ಹೆಸರು ; ಪೃಶ್ನಿಯ ಮಕ್ಕಳು (೨-೩೪-೨ ; ೫-೫೨-೧೬ ; ೫-೬೦-೫; ೬-೬೬-೩) ; ಪೃಶ್ನಿಮಾತರಃ (ಪೃಶ್ನಿಯು ತಾಯಿಯಾಗಿ ಉಳ್ಳವರು) ಎಂದು ಅನೇಕ ಸಲ ಕರೆದಿದೆ (೧-೨೩-೧೦ ; ಇತ್ಯಾದಿ ; ಅ. ವೇ. ೫-೨೧-೧೧). ಪೃಶ್ನಿ ಎಂಬ ಗೋವು (೫-೫೨-೧೬), ಅಥವಾ ಸಾಧಾರಣವಾಗಿ ಗೋವು (೮-೮೩-೧), ಅವರ ಜನನಿ ; ಅವರನ್ನು ಗೋಮಾತರಃ ಎಂತಲೂ ಕರೆದಿದೆ (೧-೮೫-೩ ; ೮-೨೦-೮ ನ್ನು ಹೋಲಿಸಿ), ಈ ಗೋವು ಪ್ರಾಯಶಃ ಚಂಡಮಾರುತದ ನಾನಾ ವರ್ಣಗಂಜಿತವಾದ ಮೇಘವಿರಬಹುದು. ದೊಡ್ಡದಾದ ಕೆಚ್ಚಲುಳ್ಳ ಗೋವುಗಳು ಉರಿಯುತ್ತಾ ಬರುತ್ತವೆ. (೨-೩೪-೫) ಎಂಬಲ್ಲಿ ಅವು ಬಿರುಗಾಳಿಯ ಕಾಲದಲ್ಲಿರುವ, ಮಿಂಚು, ಸಿಡಿಲುಗಳಿಂದ ಯುಕ್ತವಾದ ಮೋಡವಲ್ಲದೆ ಬೇರೆಯಿರಲಾರದು ಪೃಶ್ನಿಯಿಂದ ಜನಿಸಿದಾಗ, ಮರುತ್ತುಗಳನ್ನು ಅಗ್ನಿಗೆ ಹೋಲಿಸಿದೆ (೬-೬೬-೧ರಿಂದ೩). ಸಿಡಿಲಿನ ನಗುವಿನಿಂದ, ಮರುತ್ತಗಳು ಜನಿಸಿದರು. (೧-೨೩-೧೨; ೧-೩೮-೮ ನ್ನು ಹೋಲಿಸಿ). ಅಗ್ನಿಯು ಅವರಿಗೆ ರೂಪವನ್ನು ಕೊಟ್ಟನು ಅಥವಾ ಅವರನ್ನು ಪಡೆದನು. (೬-೩-೮ ; ೧-೭೧-೮). ವಾಯುವು ಅವರನ್ನು ಅಂತರಿಕ್ಷದ ಯೋನಿಯಲ್ಲಿ ಇಟ್ಟನು (೧-೧೩೪-೪) ಮತ್ತು ಅವರು ಆಕಾಶದ ವೀರರು (ವೀರಾಃ ೧-೬೪-೪ ; ೧-೧೨೨-೧ ; ೫-೫೪-೧೦) ಆಕಾಶದ ಮಕ್ಕಳು (೧೦-೭೭-೨) ; ಮತ್ತು ಆಕಾಶದ ಗಂಡುಗಳು (೩-೫೪-೧೩ ; ೫-೫೯-೬). ಒಂದು ಕಡೆ, ಅವರಿಗೆ ಸಮುದ್ರವು ತಾಯಿ (ಸಮುದ್ರ ಮಾತರಃ) ಎಂದು ಹೇಳಿದೆ (೧೦-೭೮-೬). ಬೇರೆ ಕೆಲವು ಸ್ಥಳಗಳಲ್ಲಿ, ಆತ್ಮಯೋನಿಗಳು (ತಮ್ಮಿಂದ ತಾವೇ ಜನಿಸಿದರು) (೧-೧೬೮-೨ ; ೫-೮೭-೨) ಎಂದಿದೆ.





CC-0. Jangamwadi Math Collection. Digitized by eGangotri

ಅವರು ಭ್ರಾತೃಗಳು; ಆದರೆ ಜ್ಯೇಷ್ಠ ಅಥವಾ ಕನಿಷ್ಠನೆಂಬ ವ್ಯತ್ಯಾಸವಿಲ್ಲ (೫-೫೯-೬ ; ೫-೬೦-೫), ಏಕೆಂದರೆ ಅವರೆಲ್ಲರೂ ಸಮಾನವಯಸ್ಕರು (೧-೧೬೫-೧). ಅವರೆಲ್ಲಾ ಒಟ್ಟಿಗೆ ಬೆಳೆದವರು (೫-೫೬-೫ ೭-೫೮-೧) ಮತ್ತು ಏಕ ಮನಸ್ಕರು (೮-೨೦-೧ ಮತ್ತು ೨೧). ಅವರಿಗೆಲ್ಲಾ ಒಂದೇ ಜನ್ಮಸ್ಥಾನ (೫-೫೩-೩) ಮತ್ತು ಒಂದೇ ವಾಸಸ್ಥಳ (೧-೧೬೫-೧ ; ೭-೫೬-೧). ಅವರು ಆಕಾಶದಲ್ಲಿ, ಭೂಮಿಯಲ್ಲಿ, ಸ್ವರ್ಗದಲ್ಲಿ ಬೆಳೆದರು (೫-೫೫-೭) ಅಥವಾ ಮೂರು ಸ್ವರ್ಗಗಳಲ್ಲಿ ಬೆಳೆದರು (೫-೬೦-೬). ಪರ್ವತವಾಸಿಗಳೆಂದೂ ಒಂದು ಕಡೆ (೮-೮೩-೧ ಮತ್ತು ೨) ಇದೆ.

ಇಂದ್ರಾಣಿಯು ಅವರಿಗೆ ಮಿತ್ರಳು. ಇಂದ್ರಾಣಿ (೧೦-೮೬-೯) ಮತ್ತು ಸರಸ್ವತಿಯರೊಡನೆ (೭-೯೬-೨) ಕಲೆಯುತ್ತಾರೆ. ಅವರು ಈ ರೀತಿ ಬಾಂಧವ್ಯವಿಟ್ಟುಕೊಂಡಿರುವುದು ರೋದಸಿ ಎಂಬ ದೇವತೆಯೊಡನೆಯೇ ಹೆಚ್ಚು; ಅವಳು ಅವರಿಗೆ ಸುಖಸಾಧನಗಳನ್ನು ಒದಗಿಸುವವಳಾಗಿ, ಅವರೊಡನೆ ಅವರ ರಥದಲ್ಲಿ ನಿಂತಿರುತ್ತಾಳೆ (೫-೫೬-೮) ಅಥವಾ ಅವರ ಪಾರ್ಶ್ವದಲ್ಲಿ ನಿಂತಿರುತ್ತಾಳೆ (೬-೬೬-೬). ಅವಳ ಹೆಸರು ಬರುವ ಐದು ಸ್ಥಳಗಳಲ್ಲಿಯೂ ಮರುತರ ಜೊತೆಯಲ್ಲಿಯೇ ಅವಳು ಇರುವುದು (೧-೧೬೭-೪ ಮತ್ತು ೫ ಗಳನ್ನು ಹೋಲಿಸು). ಆದುದರಿಂದ ಅಶ್ವಿನಿಗಳಿಗೆ ಸೂರ್ಯೆಯಂತೆ ಅವಳು ಅವರ ವಧುವೆಂದು ಪರಿಗಣಿತಳಾಗಿದಾಳೆ. ಇದರಿಂದಲೇ ಅವರಿಗೆ "ಭದ್ರಜಾನಯಃ" (ಸುಂದರಳಾದ ಭಾರ್ಯೆಯುಳ್ಳವರು) (೫-೬೧-೪) ಎಂಬ ವಿಶೇಷಣವು; ಮತ್ತು ಅವರನ್ನು ವರರಿಗೆ (೫-೬೦-೪) ಅಥವಾ ಯುವಕರಾದ ಪ್ರಣಯಿಗಳಿಗೆ ಹೋಲಿಸಿರುವುದು (೧೦-೭೮-೬).

ಮರುದ್ದೇವತೆಗಳ ತೇಜಸ್ಸು ಆಗಾಗ್ಗೆ ಪ್ರಸಕ್ತವಾಗುತ್ತದೆ. ಅವರು ಸುವರ್ಣವರ್ಣದವರು, ಸೂರ್ಯನಂತೆ ಉಜ್ಜ್ವಲವಾದ ಕಾಂತಿಯುಳ್ಳವರು, ಜ್ವಲಿಸುವ ಅಗ್ನಿಯಂತೆ ಈಷದ್ರಕ್ತವರ್ಣದವರು (೬-೬೬-೨ ; ೭-೫೯-೧೧ ; ೮-೭-೭). ಬೆಂಕಿಯ ಜ್ವಾಲೆಗಳಂತೆ ಪ್ರಕಾಶಿಸುತ್ತಾರೆ (೧೦-೭೮-೩). ಅಗ್ನಿಯ ರೂಪವುಳ್ಳವರು ಅಥವಾ ಅಗ್ನಿಯ ತೇಜಸ್ಸುಳ್ಳವರು (೧೦-೮೪-೧ ; ೩-೨೬-೫); ತೇಜಸ್ಸಿನಲ್ಲಿ ಅಗ್ನಿಗೆ ಅವರನ್ನು ಹೋಲಿಸಿದೆ (೧೧-೭೮-೨). ಅವರು ಅಗ್ನಿಯಂತೆ (೨-೩೪-೧) ಅಥವಾ ಉದ್ದೀಪ್ತನಾದ ಅಗ್ನಿಯಂತೆ (೬-೬೬-೨) ಇದಾರೆ; ಅವರಿಗೆ ಅಗ್ನಿಯೆಂದೇ ಹೆಸರು (೩-೨೬-೪). ಸರ್ಪಗಳ ಕಾಂತಿಯುಳ್ಳವರು (ಅಹಿಭಾನವಃ ೧-೧೭೨-೧). ಪರ್ವತಗಳಲ್ಲಿ ಪ್ರಕಾಶಿಸುತ್ತಾರೆ (೮-೭-೧). ಅವರು 'ಸ್ವಭಾನು' ಗಳು (ಸ್ವತಃ ಪ್ರಕಾಶರು ೧-೩೭-೨ ; ಇತ್ಯಾದಿ). ಈ ವಿಶೇಷಣವು ಬೇರೆಯಾವ ದೇವತೆಗಳಿಗೂ ಹೇಳಿಲ್ಲ. ತೇಜಸ್ವಿಗಳು, ಜಾಜ್ವಲ್ಯಮಾನರು ಎನ್ನುವುದು ಪದೇ ಪದೇ ಬರುತ್ತದೆ (೧-೧೬೫-೧೨ ; ಇತ್ಯಾದಿ).

ವಿಶೇಷವಾಗಿ ವಿದ್ಯುತ್ತಿನೊಡನೆ ಅವರಿಗೆ ಸಂಬಂಧವಿದೆ (೫-೫೪-೨, ೩ ಮತ್ತು ೧೧ ; ೧-೬೪-೫). ಮರುತರು ಘೃತವನ್ನು ಸುರಿಯುವಾಗ, ವಿದ್ಯುತ್ತುಗಳು ಭೂಮಿಯನ್ನು ನೋಡಿ, ಹಸನ್ಮುಖರಾಗುತ್ತಾರೆ (೧-೧೬೮-೮ ; ೫-೫೨-೬ ನ್ನು ಹೋಲಿಸಿ). ಮರುತರು ಮಳೆಯನ್ನು ಕರೆದಾಗ, ಕರುವನ್ನು ಹಿಂಬಾಲಿಸುತ್ತಾ ಹಸುವು ಅರಚುವಂತೆ, ಸಿಡಿಲು ಧ್ವನಿಮಾಡುತ್ತದೆ (೭-೫೬-೧೩). ವಿದ್ಯುತ್ತು ಅವರಿಗೆ ಎಷ್ಟರಮಟ್ಟಿಗೆ ಸಂಬಂಧಿಸಿದೆ ಎಂದರೆ ವಿದ್ಯುತ್ತು ಸಮಸ್ತಪದವಾಗಿ ಪ್ರಯುಕ್ತವಾಗಿರುವ ಐದು ಸ್ಥಳಗಳಲ್ಲಿ, ಒಂದು ಹೊರತಾಗಿ, ಉಳಿದುದೆಲ್ಲವೂ ಮರುತ್ ಎಂಬುದರೊಡನೆಯೇ. ಸಿಡಿಲನ್ನು ಕೈಯಲ್ಲಿಯೇ ಹಿಡಿದುಕೊಂಡಿದಾರೆ (೮-೭-೨೫ ; ೫-೫೪-೧೧); ಸಿಡಿಲೆಂದರೆ ಅವರಿಗೆ ಬಹಳ ಆನಂದ (೫-೫೪-೩). ಅವರ ಕೈಯಲ್ಲಿ ಭರ್ಜಿಗಳಿವೆ. ಇಲ್ಲಿ ಭರ್ಜಿ (ಋಷ್ಟಿ) ಎಂಬುದೂ ಸಿಡಿಲೇ ಇರಬೇಕು. ಏಕೆಂದರೆ ಅವರಿಗೆ ಋಷ್ಟಿವಿದ್ಯುತ್ (ಸಿಡಿಲನ್ನೇ ಭರ್ಜಿಯನ್ನಾಗಿ ಉಪಯೋಗಿಸುವವರು ಎಂದು ವಿಶೇಷಣವಿದೆ (೧-೧೬೮-೫ ; ೫-೫೨-೧೩). ಇನ್ನು ಸ್ವಲ್ಪ ಕಡಿಮೆ ಸ್ಥಳಗಳಲ್ಲಿ ಅವರಿಗೆ ಬಂಗಾರದಿಂದ (೮-೭-೩೨)



CC-0. Jangamwadi Math Collection. Digitized by eGangotri

ಮಾಡಿದ ಕೊಡಲಿಯೂ ಆಯುಧ (೧-೩೭-೨, ೧-೮೮-೩ ; ೫-೩೩.೪ ; ೫-೫೭-೨ ; ೮-೨೦-೪). ಒಂದೇ ಒಂದು ಸಲ ಅವರು ವಜ್ರಾಯುಧವನ್ನು ಧರಿಸಿದ್ದಾರೆಂದು ಇದೆ. ಕೆಲವು ಸ್ಥಳಗಳಲ್ಲಿ ಧನುರ್ಬಾಣಧಾರಿಗಳೆಂದೂ (೫-೫೩-೪, ೫-೫೭-೨ ; ೮-೨೦-೪ ಮತ್ತು ೧೨), ಒಂದು ಸಲ ಬಾಣವನ್ನು ಬಿಡುತ್ತಿರುವ ಬಿಲ್ಲುಗಾರರೆಂದೂ ಹೇಳಿದೆ. ಆದರೆ ಈ ಲಕ್ಷಣವು ಅವರಿಗೆ ಅಪರೂಪ. ಅವರು ಪುಷ್ಪಹಾರ ಮೊದಲಾದ ಅಲಂಕಾರಗಳಿಂದ ಅಲಂಕೃತರಾಗಿದಾರೆ (೫-೫೩-೪) ಬಂಗಾರದ ನಡುಪಟ್ಟಿಗಳನ್ನು ಹಾಕಿಕೊಂಡಿದಾರೆ (೫-೫೫-೬) ವಿವಾಹಾರ್ಥಿಯಾದ ಶ್ರೀಮಂತನಂತೆ, ತಮ್ಮ ದೇಹವನ್ನು ಸುವರ್ಣಾಭರಣಗಳಿಂದ ಅಲಂಕರಿಸಿಕೊಳ್ಳುತ್ತಾರೆ (೫-೬೦-೪). ಬಾಹುಪುರಿ ಅಥವಾ ಕಾಲಂದಿಗೆ ಅವರ ವೈಯಕ್ತಿಕ ಆಭರಣ. ಈ ಆಭರಣಗಳಿಂದ ಅಲಂಕೃತರಾದ ಅವರು ನಕ್ಷತ್ರರಂಜಿತವಾದ ಆಕಾಶದಂತೆ ಅಥವಾ ಮೋಡದಿಂದ ಬೀಳುತ್ತಿರುವ ಮಳೆಯ ಹನಿಗಳಂತೆ ಥಳಥಳಿಸುತ್ತಾರೆ. ಅವರ ಭುಜದ ಮೇಲೆ ಭಲ್ಲೆಗಳೂ, ಕಾಲಿನಲ್ಲಿ ಕಾಲಂದಿಗೆಗಳೂ, ಎದೆಯ ಮೇಲೆ ಚಿನ್ನದ ಆಭರಣಗಳೂ, ಕೈಗಳಲ್ಲಿ ಕೆಂಡ ಕಾರುತ್ತಿರುವ ಸಿಡಿಲುಗಳೂ, ತಲೆಯ ಮೇಲೆ ಸುವರ್ಣಮಯವಾದ ಶಿರಸ್ತ್ರಾಣಗಳೂ ಇವೆ (೫-೫೪-೧೧).

ಮರುದ್ದೇವತೆಗಳು ಉಪಯೋಗಿಸುವ ರಥಗಳು ಮಿಂಚಿನಿಂದ ಹೊಳೆಯುತ್ತವೆ (೧-೮೮-೧; ೩-೫೪-೧೩); ಸುವರ್ಣಮಯವಾದುವು (೫-೫೭-೧); ಚಿನ್ನದ ಚಕ್ರಗಳು ಅಥವಾ ನೇಮಿಗಳು (೧-೬೪-೧೧ ; ೧-೮೮-೫). ಅವುಗಳಲ್ಲಿ ಆಯುಧಗಳಿವೆ. (೫-೫೭-೬); ನೀರಿನ ಬಾನೆಗಳಿವೆ (೧-೮೭-೨). ರಥವನ್ನು ಎಳೆಯುವ ಕುದುರೆಗಳು ಕಂದುಬಣ್ಣ (೧-೮೮-೨ ; ೫-೫೭-೪); ಬಂಗಾರದ ಗೊರಸುಗಳು (೮-೭-೨೭) ಮತ್ತು ಮನೋವೇಗವುಳ್ಳವು (೧-೮೫-೪). ಈ ಅಶ್ವಗಳು ಚುಕ್ಕೆಗಳುಳ್ಳವು; ಪೃಷದಶ್ವರೆಂದು (ಚುಕ್ಕೆ ಚುಕ್ಕೆಯಾಗಿರುವ ಅಶ್ವಗಳುಳ್ಳವರು) ಇವರಿಗೆ ವೈಯಕ್ತಿಕವಾದ ಹೆಸರು. ಇವರ ರಥಕ್ಕೆ ಹೆಣ್ಣು ಕುದುರೆಗಳನ್ನು ಕಟ್ಟಿದ್ದಾರೆ ಎಂದೂ (೧-೩೯-೬) ಇದೆ. ಇವರು ಗಾಳಿಯನ್ನು ತಮ್ಮ ರಥಕ್ಕೆ ಅಶ್ವವಾಗಿ ಕಟ್ಟಿದರೆಂದು (೫-೫೮-೭) ಹೇಳಿದೆ.

ಮರುತರು ಆಕಾಶದಂತೆ ಬೃಹದಾಕಾರರು (೫-೫೭-೪); ಭೂವ್ಯಾಕಾಶಗಳನ್ನು ಮೀರಿದ್ದಾರೆ (೧೦-೭೭-೩) ಅವರ ಮಹತ್ವವು ಅಮಿತವಾದುದು (೫-೫೮-೨); ಅವರ ಸಾಮರ್ಥ್ಯದ ಮಿತಿಯನ್ನು ಯಾರೂ ತಿಳಿಯಲಾರರು (೧-೧೬೭-೯). ಅವರು ಯುವಕರು (೧-೬೪-೨ ; ೧-೧೬೫-೨ ; ೫-೪೨-೧೫) ಮತ್ತು ಅವರಿಗೆ ವಾರ್ಧಕ್ಯವೇ ಇಲ್ಲ (೧-೬೪-೩). ಅವರು ಅಸುರರು, ಉತ್ಸಾಹಶಾಲಿಗಳು, ಓಜಸ್ವಿಗಳು, ಕೊಳೆಯಿಲ್ಲದವರು (೧-೬೪-೨ ಮತ್ತು ೧೨) ಮತ್ತು ಧೂಳು ಇಲ್ಲದವರು (೬-೬೬-೨). ಭಯಂಕರರೂಪರು (೧-೧೯-೪); ಸಿಡುಕು ಸ್ವಭಾವದವರು (೭-೫೬-೮); ಭಯಂಕರರು (೫-೫೬-೨ ಮತ್ತು ೩, ೭-೫೮-೨) ದುಷ್ಟ ಮೃಗಗಳಂತೆ ಭೀಕರರು (೨-೩೪-೧); ಇತ್ಯಾದಿ. ಮಕ್ಕಳಂತೆ ಅಥವಾ ಕರುಗಳಂತೆ ಕ್ರೀಡಾಸಕ್ತರು (೧-೧೬೬-೨ ; ೭-೫೬-೧೬ ; ೧೦-೭೮-೬). ಕಪ್ಪಾದ ಬೆನ್ನುಭಾಗವುಳ್ಳ ಹಂಸಗಳಂತಿದಾರೆ (೭-೫೯-೭). ಅಯೋಮಯವಾದ ಕೋರೆದಾಡೆಗಳುಳ್ಳ ಕಾಡುಹಂದಿಗಳು (೧-೮೮-೫); ಸಿಂಹಗಳಂತಿದಾರೆ (೧-೬೪-೮).

ಅವರು ಗಟ್ಟಿಯಾಗಿ ಧ್ವನಿ ಮಾಡುತ್ತಾರೆ (೧-೧೬೯-೭ ; ಇತ್ಯಾದಿ). ಆ ಧ್ವನಿಯೇ ಗುಡುಗು (೧-೨೩-೧೧); ಅದು ಗಾಳಿಯು ಬೀಸುವ ಶಬ್ದವೂ ಹೌದು (೭-೫೬-೩). ಅವರು ಬಂದರೆ ಆಕಾಶವು ಭಯದಿಂದ ಅರಚುತ್ತದೆಯೋ ಎನ್ನುವಂತಿದೆ (೮-೭-೨೬). ಪರ್ವತಗಳನ್ನು ಕಂಪಿಸುವಂತೆಯೂ, ಭೂಮಿ ಅಥವಾ ಎರಡು ಲೋಕಗಳನ್ನು ನಡುಗುವಂತೆಯೂ ಮಾಡುತ್ತಾರೆ. ರಥನೇಮಿಗಳಾದ ಪರ್ವತಗಳನ್ನು ಅಥವಾ ಬಂಡೆಗಳನ್ನು ಚೂರು ಚೂರು ಮಾಡುತ್ತಾರೆ (೧-೬೪-೧೧ ; ೫-೫೨-೯). ಗಾಳಿಯಿಂದ ಸಹಿತರಾಗಿ ಬಂದಾಗಲೇ, ಅವರು ಪರ್ವತಗಳನ್ನು ಕಂಪಿಸುವಂತೆ ಮಾಡುವುದು (೮-೭-೪). ವೃಕ್ಷಗಳನ್ನು ಉರುಳಿಸಿ, ಕಾಡಾನೆಗಳಂತೆ,



CC-0. Jangamwadi Math Collection. Digitized by eGangotri

ಕಾಡುಗಳನ್ನು ಭಕ್ಷಿಸುತ್ತಾರೆ (೧-೩೯-೫, ೧-೬೪-೭). ಕಾಡುಗಳು ಅವರಿಗೆ ಹೆದರಿ ನೆಲಕ್ಕೆ ಬಗ್ಗುತ್ತವೆ (೫-೬೦-೨). ಪರ್ವತಗಳಂತೆ ಅಪ್ರತಿಹತರಾಗಿ ಸ್ವರ್ಗ ಮತ್ತು ಭೂಮಿಗಳ ಪ್ರಾಣಿಗಳನ್ನು ಕೆಳಕ್ಕೆ ಎಸೆಯುತ್ತಾರೆ (೧-೬೪-೩). ಸರ್ವ ಪ್ರಾಣಿಗಳೂ ಅವರಿಗೆ ಹೆದರುತ್ತವೆ (೧-೮೫-೮). ಬಿರುಗಾಳಿಯಂತೆ ವೇಗವಾಗಿ ಚಲಿಸುತ್ತಾರೆ (೧೦-೭೮-೩); ಧೂಳನ್ನು ಸುಳಿಯ ರೂಪದಲ್ಲಿ ಮೇಲಕ್ಕೆ ಎಬ್ಬಿಸುತ್ತಾರೆ (೧-೬೪-೧೨). ಗಾಳಿಯನ್ನು ಅಥವಾ ಗಾಳಿಯ ಶಬ್ದವನ್ನು ಉಂಟುಮಾಡುತ್ತಾರೆ (೭-೫೬-೩). ಗಾಳಿಯ ಜೊತೆಯಲ್ಲಿ ಬರುತ್ತಾರೆ (೮-೭-೩, ೪ ಮತ್ತು ೧೭); ಅದನ್ನು ತಮ್ಮ ಅಶ್ವವನ್ನಾಗಿ ಮಾಡಿಕೊಳ್ಳುತ್ತಾರೆ (೫-೫೮-೭).

ಮಳೆಗರೆಯುವುದೇ ಅವರ ಕಾರ್ಯಗಳಲ್ಲಿ ಮುಖ್ಯವಾದುದು. ಮಳೆಯು ಅವರ ಉಡುಪು (೫-೫೭-೪). ಅವರು ಸಮುದ್ರದಿಂದ ಮೇಲಕ್ಕೆ ಎದ್ದು, ಮಳೆಯನ್ನು ಸುರಿಸುತ್ತಾರೆ (೧-೩೮-೯). ಎರಡು ಪ್ರಪಂಚಗಳಲ್ಲಿಯೂ ಮಳೆ ಸುರಿಸುತ್ತಾ, ಬೀಸುತ್ತಾರೆ (೧-೬೪-೬ ; ೮.೭-೧೬). ಮಳೆಯು ಅವರನ್ನು ಅನುಸರಿಸುತ್ತದೆ (೫-೫೩-೧೦). ನೀರನ್ನು ತರುತ್ತಾರೆ ಮತ್ತು ಮಳೆಯನ್ನು ಉಂಟುಮಾಡುತ್ತಾರೆ (೫-೫೮-೩). ಮಳೆಯಿಂದ ತಮ್ಮ ಪ್ರಕಾಶವನ್ನು ಮರೆಮಾಡಿಕೊಳ್ಳುತಾರೆ (೫-೫೯-೧). ಸೂರ್ಯನ ಕಣ್ಣನ್ನು ಮಳೆಯಿಂದ ಮುಚ್ಚುತ್ತಾರೆ (೫-೫೯-೫). ಮಳೆಗರೆದಾಗ, ಮೋಡಗಳಿಂದ ಕತ್ತಲನ್ನುಂಟುಮಾಡುತ್ತಾರೆ (೧-೩೮-೯). ಗಾಳಿಯೊಡನೆ ವೇಗವಾಗಿ ಚಲಿಸುತ್ತಾ ಹಿಮವನ್ನೆರಚುತ್ತಾರೆ (೮-೭-೪). ಅಂತರಿಕ್ಷದ ಬಾನೆ (ನೋಡ ೫-೫೩-೬ ; ೫-೫೯-೮) ಮತ್ತು ಪರ್ವತ ಪ್ರವಾಹಗಳು ನೀರು ಸುರಿಯುವಂತೆ ಮಾಡುತ್ತಾರೆ (೫-೫೯-೭). ಅವರು ಧಾವಿಸುವಾಗ ನೀರು ಪ್ರವಹಿಸುತ್ತದೆ. (೫-೫೮-೬) ಅವರ ಈ ಕಾರ್ಯದಿಂದ, ಭೂಲೋಕದ ನದಿಯೊಂದಕ್ಕೆ 'ಮರುದ್ವೃಧಾ' (ಮರುತ್ತಗಳಿಂದ ಅಭಿವೃದ್ಧಿಪಡಿಸಲ್ಪಟ್ಟುದು ೧೦-೭೫-೫) ಎಂಬ ಹೆಸರು ಬಂದಿದೆ. ರುದ್ರಪುತ್ರರ ಬೆವರೇ ಮಳೆಯಾಯಿತು (೫-೫೮-೭). ಮರುತರಿಂದ ಸೃಷ್ಟವಾದ ವೃಷ್ಟಿಯು ಆಲಂಕಾರಿಕವಾಗಿ' ಕ್ಷೀರ (೧-೧೬೬-೩), ಘೃತ (೧-೮೫-೩ ; ೧೦-೭೮-೪), ಕ್ಷೀರ ಮತ್ತು ಘೃತ (೧-೬೪-೬), ಎನ್ನಿಸಿಕೊಂಡಿದೆ. ವಸಂತಕಾಲ (ಮಧು) ವನ್ನೆ ಸುರಿಸುತ್ತಾರೆ (೧-೮೫-೧೧) ಅಥವಾ ಭೂಮಿಯನ್ನು ಮಧುವಿನಿಂದ ತೋಯಿಸುತ್ತಾರೆ (೫-೫೪-೮). ಸಮುದ್ರದಿಂದ ನೀರನ್ನು ಆಕಾಶಕ್ಕೆ ಎತ್ತಿ, ಅಲ್ಲಿಂದ ಮಳೆ ರೂಪದಲ್ಲಿ ಭೂಮಿಯ ಮೇಲೆ ಸುರಿಸುತ್ತಾರೆ (ಅ. ವೇ. ೪-೨೭-೪). ಅವರು ಸುರಿಸುವ ಮಳೆಯ ಜೊತೆಯಲ್ಲಿ ಯಾವಾಗಲೂ ಮಿಂಚು, ಗುಡುಗುಗಳು ಇದ್ದೇ ಇರುತ್ತವೆ. ನೀರನ್ನು ಸುರಿಸುವ ಇಚ್ಛೆಯಿಂದ, ಮರುತ್ತಗಳು ಘರ್ಜಿಸುತ್ತಾ, ರಭಸದಿಂದ ನುಗ್ಗುತ್ತಾರೆ (೫-೫೪-೩). ತಮ್ಮ ಸಾಮರ್ಥ್ಯದಿಂದ, ಗಾಳಿ, ಮಿಂಚು, ಸಿಡಿಲುಗಳನ್ನು ಉಂಟುಮಾಡುತ್ತಾರೆ; ಕೆಚ್ಚಲಿನಿಂದ ಸ್ವರ್ಗೀಯ ವಸ್ತುಗಳನ್ನು ದೋಹನಮಾಡಿ, ಭೂಮಿಯನ್ನು ಹಾಲಿನಿಂದ ತುಂಬಿಸುತ್ತಾರೆ (೧-೬೪-೫) ಅವರಿಂದ ದುಗ್ಧವಾಗುವ ಚಿಲುಮೆಯು ಘರ್ಜಿಸುತ್ತದೆ. (೧-೬೪-೬). ಅವರಿಂದ ಉದಕವು ವೃಷ್ಟವಾದಾಗ, ಆಕಾಶವು, ಕೆಂಬಣ್ಣದ ವೃಷಭವು, ಗುಟುರುಹಾಕುತ್ತದೆ (೫-೫೮-೬). ಅಶ್ವವು ನೀರನ್ನು ಸೃಜಿಸುವಂತೆ ಮಾಡುತ್ತಾರೆ (೧-೬೪-೬). ಆಕಾಶದ ಮಳೆಯನ್ನು ಅನುಗ್ರಹಿಸಿ, ಅಶ್ವದಿಂದ ಉತ್ಪನ್ನವಾದ ಪ್ರವಾಹಗಳು ಚೆನ್ನಾಗಿ ಪ್ರವಹಿಸುವಂತೆ ಮಾಡುತ್ತಾರೆ (೫-೮೩-೬). ಅಶ್ವದೊಡನೆ ಸೇರಿ, ನೀರನ್ನುಂಟುಮಾಡುವಾಗ, ಮರುತ್ತಗಳು ಸ್ವರ್ಣವರ್ಣದವರಾಗುತ್ತಾರೆ (೨-೩೪-೧೩) ಮೇಘಗಳು ಧ್ವನಿಗೈಯುವಾಗ, ಪ್ರವಾಹಗಳು ಮರುತ್ತಗಳ ರಥನೇಮಿಗಳ ಧ್ವನಿಯನ್ನು ಪ್ರತಿಧ್ವನಿಸುತ್ತವೆ (೧-೧೬೮-೮). ಇಂದ್ರನು ಸುರಿಸುವ ನೀರಿಗೆ 'ಮರುತ್ವತೀಃ' (ಮರುತರಿಂದ ಸಹಿತವಾದುವು) ಎಂದು ಹೆಸರು (೧-೮೦-೪). ವೃಷ್ಟಿಕಾರಕರೆಂಬ ಅರ್ಥದಲ್ಲಿಯೇ, ಅವರಿಗೆ 'ಪುರುದ್ರಪ್ಸಾಃ' (೫-೫೭-೫) ಅಥವಾ 'ದ್ರಪ್ಸಿನಃ' (೧-೬೪-೨) (ಹೆಚ್ಚಾದ ಜಲಬಿಂದುಗಳುಳ್ಳವರು) ಮತ್ತು 'ಸುದಾನವಃ' (ಚೆನ್ನಾಗಿ ನೀರಿನಲ್ಲಿ ನೆನೆದಿರುವವರು) ಎಂಬ ಹೆಸರುಗಳು.



CC-0. Jangamwadi Math Collection. Digitized by eGangotri

ಅವರು ಶಾಖವನ್ನೂ ಕಡಿಮೆ ಮಾಡುತ್ತಾರೆ (೫-೫೪-೧). ಆದರೆ, ಅವರೇ ಕತ್ತಲನ್ನು ಹೋಗಲಾಡಿಸಿ (೭-೫೬-೨೦). ಬೆಳಕನ್ನುಂಟುಮಾಡಿ (೧-೮೬-೧೦). ಸೂರ್ಯನಿಗೆ ದಾರಿ ಮಾಡುತ್ತಾರೆ (೮-೭-೮). ವಾಯುವಿನ ಪರಿಮಿತಿಯನ್ನು ಗೊತ್ತುಮಾಡಿದಾರೆ (೫-೫೫-೨); ಭೂಭಾಗಗಳನ್ನು ಮತ್ತು ತೇಜೋವಿಶಿಷ್ಟವಾದ ಆಕಾಶಭಾಗಗಳನ್ನು ವಿಸ್ತರಿಸಿ, ಎರಡು ಲೋಕಗಳನ್ನು ಪ್ರತ್ಯೇಕಿಸಿದಾರೆ (೮-೮೩-೯ ಮತ್ತು ೧೧).

ಗಾಳಿಯಲ್ಲಿ ಕೇಳಿಸುವ ಧ್ವನಿಯಿಂದಲೇ ಇರಬಹುದು, ಅವರಿಗೆ ಗಾಯಕರು (೫-೫೨-೧; ೫-೬೦-೮; ೭-೩೫-೯) ಎಂದಿರುವುದು. ಅವರು ಸ್ವರ್ಗಲೋಕದ ಗಾಯಕರು (೫-೫೭-೫). ಒಂದು ಗಾನವನ್ನು ಗಾನ ಮಾಡುತ್ತಾರೆ (೧-೧೯-೪; ೧-೧೬೬-೭). ಹಾಡುತ್ತಾ, ಸೂರ್ಯನು ಪ್ರಕಾಶಿಸುವಂತೆ ಮಾಡಿದರು (೮-೨೯-೧೦); ಕೊಳಲು ಊದುತ್ತಾ ಪರ್ವತವನ್ನು ಸೀಳಿದರು (೧-೮೫-೧೦). ಇಂದ್ರನು ಸರ್ಪವನ್ನು ವಧಿಸಿದಾಗ, ಮರುತರು ಅವನಿಗಾಗಿ, ಗಾನಮಾಡಿ, ಸೋಮರಸವನ್ನು ಸಿದ್ಧಪಡಿಸಿದರು (೫-೨೯-೨; ೫-೩೦-೬). ಗಾನಮಾಡಿ, ಇಂದ್ರನಿಗೆ ಸಾಮರ್ಥ್ಯವನ್ನು ಉಂಟುಮಾಡಿದರು (೧-೮೫-೨). ಅವರ ಗಾನವೆಂದರೆ, ಮುಖ್ಯವಾಗಿ ಗಾಳಿಯಲ್ಲಿ ಕೇಳಿಬರುವಶಬ್ದ (೮-೨೨-೮ನ್ನು ಹೋಲಿಸಿ); ಆದರೂ, ಆದು ಸ್ತುತಿಯೆಂದು ಭಾವಿಸಲ್ಪಟ್ಟದೆ (೩-೧೪-೪). ಇಂದ್ರ ಸಹಿತರಾಗಿರುವಾಗ, ಅವರು ಋತ್ವಿಜರೆಂದು ಆಹೂತರಾಗುತ್ತಾರೆ (೫-೨೯-೩) ಮತ್ತು ಋತ್ವಿಜರಿಗೆ ಹೋಲಿಸಲ್ಪಟ್ಟದಾರೆ (೧೦-೭೮-೧). ಅವರೇ ಮೊದಲು ಯಾಗ ಮಾಡಿದವರು (೨-೩೬-೨); ಶಿಷ್ಟರ ಮನೆಗಳಲ್ಲಿ ಅಗ್ನಿಯನ್ನು ಶುದ್ಧಿಮಾಡಿದವರೂ ಇವರೇ; ಅಗ್ನಿಯನ್ನು ಉದ್ದೀಪ್ತಿಗೊಳಿಸಿದವರು ಭೃಗುಗಳು (೧೦-೧೨೨-೫). ಇತರ ಅನೇಕ ದೇವತೆಗಳಂತೆ, ಇವರೂ ಸೋಮಪಾನ ಮಾಡುವರೆಂದು (೨-೩೬-೨; ೮-೮೩-೯ ರಿಂದ ೧೨; ಇತ್ಯಾದಿ) ಹೇಳಲ್ಪಟ್ಟದಾರೆ.

ಗುಡುಗು ಮಳೆ ಮತ್ತು ಇವರೂ ಒಂದು ಎಂಬ ಭಾವನೆಯಿರುವುದರಿಂದ, ಸ್ವಭಾವವಾಗಿ ಇವರು ಇಂದ್ರನ ಸ್ನೇಹಿತರು; ಸಹೋದ್ಯೋಗಿಗಳಾಗಿ, ಅವನೊಡನೆ ನಿಕಟ ಬಾಂಧವ್ಯವುಳ್ಳವರಾಗಿದಾರೆ. ತಮ್ಮ ಸ್ತುತಿ, ಗಾನ ಇವುಗಳಿಂದ (೧-೧೬೫-೧೧ ಇತ್ಯಾದಿ) ಇಂದ್ರನ ಶಕ್ತಿ ಸಾಮರ್ಥ್ಯಗಳನ್ನು ಹೆಚ್ಚಿಸುತ್ತಾರೆ (೩-೩೫-೯; ೬-೧೭-೧೧). ವೃತ್ರನೊಡನೆ ಯುದ್ಧದಲ್ಲಿ, ಸಾಧಾರಣವಾಗಿ ಮರುತರೇ ಅವನಿಗೆ ಸಹಾಯಕರು (೮-೬೫-೨ ಮತ್ತು ೩; ೧೦-೧೧೩-೩). ತ್ರಿತ ಮತ್ತು ಇಂದ್ರರಿಗೆ, ಅವರು ವೃತ್ರವಧೆಯಲ್ಲಿ ಸಹಾಯ ಮಾಡುತ್ತಾರೆ (೮-೭-೨೪). ವೃತ್ರವಧಕಾರಿಯಾದ ಸೂಕ್ತವನ್ನು ಗಾನಮಾಡುವಂತೆ ಪ್ರಾರ್ಥಿತರಾಗಿದಾರೆ (೮-೭೮-೧ ರಿಂದ ೩). ಸರ್ಪ ಮತ್ತು ಶಂಬರರೊಡನೆ ಇಂದ್ರನು ಮಾಡಿದ ಯುದ್ಧಗಳಲ್ಲಿ, ಅವನಿಗೆ ಸಹಾಯ ಮಾಡಿದರು (೩-೪೭-೩ ಮತ್ತು ೪). ಮರುತ್ಸಹಿತನಾಗಿಯೇ, ಇಂದ್ರನು ಬೆಳಕು (೮-೬೫-೪) ಮತ್ತು ಗೋವುಗಳನ್ನು (೧-೬-೫) ಪಡೆದನು ಮತ್ತು ಆಕಾಶಕ್ಕೆ ಆಧಾರಭೂತನಾದನು (೭-೪೭-೫). ವಾಸ್ತವವಾಗಿ ನೋಡಿದರೆ, ಇವರ ಸಹಾಯದಿಂದಲೇ, ಇಂದ್ರನು ತನ್ನ ಎಲ್ಲಾ ಸಾಹಸಕಾರ್ಯಗಳನ್ನೂ ಮಾಡಿರುವುದು (೧-೧೦೦, ೧೧೧ ಮತ್ತು ೧೬೫ನೆಯ ಸೂಕ್ತಗಳು; ೧೦-೬೫). ಕೆಲವು ಸಂದರ್ಭಗಳಲ್ಲಿ ಮರುದ್ದೇವತೆಗಳೇ ಈ ಸಾಹಸ ಕಾರ್ಯಗಳಲ್ಲಿ, ಇಂದ್ರನಿಗಿಂತ ಹೆಚ್ಚು ಸ್ವತಂತ್ರರು. ಇಂದ್ರನಿಂದ ಸಹಿತರಾಗಿ, ಮರುತರು ವೃತ್ರನನ್ನು ಹೊಡೆಯುತ್ತಾರೆ (೧-೨೩-೯). ವೃತ್ರಾಸುರನ ಕೀಲುಗಳನ್ನು ಬೇರೆ ಬೇರೆ ಮಾಡಿದರು (೮-೭-೨೩); ಗೋವುಗಳನ್ನು ಕಂಡುಹಿಡಿದರು (೨-೩೪-೧). ಇತರ ದೇವತೆಗಳಂತೆ, ಇವರಿಗೂ ಇಂದ್ರನೇ ನಾಯಕನು (೧-೨೩-೮; ಇತ್ಯಾದಿ). ಇಂದ್ರನಿಂದ ಯುಕ್ತರು (೧೦-೧೨೮-೨). ಅವರು ಇಂದ್ರನಿಗೆ ಪುತ್ರಸದೃಶರು (೧-೧೦೦-೫); ಅವನ ಭ್ರಾತೃಗಳೆನ್ನಿಸಿಕೊಂಡಿದಾರೆ (೧-೧೭೦-೨). ಒಂದೆರಡು ಸಲ ಮಾತ್ರ ಮರುತ್ತುಗಳು ಇಂದ್ರನ ಕೈಬಿಟ್ಟುಬಿಟ್ಟರೆಂದು ಹೇಳಿದೆ. ಸರ್ಪದೊಡನೆ ಅವನೊಬ್ಬನೇ ಯುದ್ಧಮಾಡುವಂತೆ ಸನ್ನಿವೇಶವೊದಗಿಸಿ (೧-೧೬೫-೬), ಅವನನ್ನು ಒಂಟಿಯಾಗಿ ಬಿಟ್ಟುಬಿಟ್ಟರು (೮-೭-೩೧). ಒಂದೇ ಒಂದು ಋಕ್ಕಿನಲ್ಲಿ ಇಂದ್ರನಿಗೂ ಇವರಿಗೆ ದ್ವೇಷವೂ ಉಕ್ತವಾಗಿದೆ.



CC-0. Jangamwadi Math Collection. Digitized by eGangotri

ಮರುತರು “ ಎಲೈ ಇಂದ್ರನೇ, ನಮ್ಮನ್ನು ವಧಿಸಲು ಇಚ್ಛಿಸುವುದೇಕೆ? ಯುದ್ಧದಲ್ಲಿ ನಮ್ಮನ್ನು ವಧಿಸಬೇಡ ” ಎಂದು ಇಂದ್ರನಿಗೆ ಹೇಳಿದಾರೆ (೧-೧೭೦-೨ ; ೧-೧೭೧-೬ನ್ನು ಹೋಲಿಸಿ). ಬ್ರಾಹ್ಮಣವೊಂದರಲ್ಲಿಯೂ (ತೈ. ಬ್ರಾ. ೨-೭-೧೧-೧) ಇಂದ್ರ ಮರುತರಿಗೆ ಘರ್ಷಣೆಯಾಯಿತೆಂದು ಹೇಳಿದೆ.

ಇಂದ್ರ ಸಹಚರಿತರಾಗದೇ ಇರುವಾಗ, ಮರುತರಲ್ಲಿ ಹಿಂಸಾತ್ಮಕ ಗುಣಗಳು ಕಂಡುಬರುತ್ತವೆ. ಈ ವಿಷಯದಲ್ಲಿ ಅವರು ತಮ್ಮ ತಂದೆಯಾದ ರುದ್ರನ ಗುಣಗಳನ್ನು ತೋರ್ಪಡಿಸುತ್ತಾರೆ. ಅವರ ಆರಾಧಕರನ್ನು ಸಿಡಿಲು ತೊಂದರೆಪಡಿಸದಂತೆಯೂ, ಅವರ ದುರಾಗ್ರಹವು ಅವರನ್ನು ಮುಟ್ಟದಂತೆಯೂ ಮಾಡಬೇಕೆಂದು (೭-೫೬-೯) ಪ್ರಾರ್ಥಿತರಾಗಿದಾರೆ. ಅವರು ಎಸೆಯುವ ಬಾಣ ಮತ್ತು ಕಲ್ಲುಗಳನ್ನು (೧-೧೭೨-೨), ಸಿಡಿಲು (೭-೫೭-೪), ಗೋವು ಮತ್ತು ಮನುಷ್ಯರನ್ನು ವಧಿಸುವ ವಜ್ರಾಯುಧ (೭-೫೬-೧೭), ಇವುಗಳನ್ನು ತಪ್ಪಿಸಬೇಕೆಂದು ಮೊರೆ ಇಟ್ಟಿದಾರೆ. ಅವರಿಂದ ಕೆಡಕುಂಟಾಗಬಹುದು (೧-೩೯-೮) ; ಅವರು ಕುಪಿತರಾಗಬಾರದೆಂದು ಬೇಡಿಕೆ (೧-೭೧-೧ ; ೭-೫೮-೫) ; ಅವರಿಗೆ ಸರ್ಪಗಳಂತೆ ಕೋಪ ಬರುತ್ತದೆ (೧-೬೪-೮ ಮತ್ತು ೯). ರುದ್ರನಂತೆ, ಇವರಿಂದಲೂ ಸಿಂಧು, ಅಸಿಕ್ನಿ, ಸಮುದ್ರಗಳು ಮತ್ತು ಪರ್ವತಗಳಲ್ಲಿರುವ ಔಷಧಿಗಳು ಬೇಡಲ್ಪಟ್ಟವೆ (೮-೨೦-೨೫ರಿಂದ೨೬) ; ಶುದ್ಧವೂ, ಅನುಕೂಲವೂ, ಸುಖಕರವೂ ಆದ ಚಿಕಿತ್ಸಾ ವಿಧಾನಗಳು ಮರುತ್ಸಹಿತನಾದ ರುದ್ರನಲ್ಲಿವೆ (೨.೩೩-೧೩). ಅದನ್ನು ಮರುತ್ತಗಳು ಮಳೆಯರೂಪದಲ್ಲಿ ಕೊಡುತ್ತಾರೆ (೫-೫೩-೧೪) ; ಆದುದರಿಂದ ಔಷಧಿ ಎಂದರೆ ಉದಕವಿರಬೇಕು. ಅಗ್ನಿಯಂತೆ, ಇವರಿಗೂ ‘ ಪಾವಕ ’ (ಶುದ್ಧಿಮಾಡುವವರು) ಎಂದು ಹೆಸರು (೭-೫೬-೧೨ ; ಇತ್ಯಾದಿ).

ಮೇಲೆ ಹೇಳಿದ ಗುಣಗಳಿಂದ, ಮರುತ್ತುಗಳು ಚಂಡಮಾರುತದ ದೇವತೆಗಳೆಂಬುದು ಸ್ಪಷ್ಟವಾಗುತ್ತದೆ. ‘ ಮರುತ ’ ಎಂದರೆ ಗಾಳಿ ಎಂದರ್ಥ ಮಾಡುವುದು ಬಹಳಮಟ್ಟಿಗೆ ಸರಿಯಾದರೂ, ಮೇಲೆಕಂಡ ಗುಣಗಳೆಲ್ಲವೂ ಅದರಲ್ಲಿ ಒಳಪಟ್ಟಂತೆ ಆಗುವುದಿಲ್ಲ.

## ವಾಯು-ವಾತ.

ವಾಯು ಮತ್ತು ವಾತ ಎಂಬಿವೆರಡು ಪದಗಳೂ ವಾಯುದೇವತೆ ಮತ್ತು ಗಾಳಿ, ಇವೆರಡನ್ನೂ ಸೂಚಿಸುವ ಅರ್ಥದಲ್ಲಿ ಉಪಯೋಗಿಸಲ್ಪಟ್ಟವೆ. ಆದರೆ ವಾಯುವು ದೇವತೆ ; ವಾತವು ಜಡವಾದ ಗಾಳಿ. ವಾಯುದೇವತಾಕವಾಗಿ ಒಂದು ಪೂರ್ತಿ ಸೂಕ್ತವೂ, ಕೆಲವು ಸೂಕ್ತಭಾಗಗಳೂ ಮತ್ತು ಇಂದ್ರನ ಜೊತೆಯಲ್ಲಿ ಸುಮಾರು ಹನ್ನೆರಡು ಸೂಕ್ತಗಳೂ ಇವೆ. ವಾತದ ಪರವಾಗಿ ಹತ್ತನೆಯ ಮಂಡಲದ ಕಡೆಯಲ್ಲಿ ಎರಡು ಸಣ್ಣ ಸೂಕ್ತಗಳು ಮಾತ್ರ ಇವೆ. ಎರಡೂ ಒಂದೇ ಋಕ್ಕಿನಲ್ಲಿ ಬರುವುದೂ ಉಂಟು (೬-೫೦-೧೨ ; ೧೦-೯೨-೧೩). ಇವೆರಡರಲ್ಲಿ ವಾಯುವೇ ಇಂದ್ರನ ಜೊತೆಯಲ್ಲಿ ಸ್ತುತನಾಗುವುದು. ನಿರುಕ್ತದಲ್ಲಿ (ನಿರು. ೭-೫) ವಾಯು ಅಥವಾ ವಾತವು ದೇವತಾತ್ರಯಗಳಲ್ಲಿ (ಅಗ್ನಿ, ಇಂದ್ರ, ವಾಯು, ಸೂರ್ಯ ಒಂದಾಗಿ ಪರಿಗಣಿತವಾಗಿದೆ. ವಾತವು ಪರ್ಜನ್ಯನೊಡನೆ ಸಂಬಂಧಿಸಿದೆ. ಈ ಎರಡಕ್ಕೂ ಉಪಯೋಗಿಸುವ ವಿಶೇಷಣಗಳೂ ಸಾಧಾರಣವಾಗಿ ಭಿನ್ನವಾದುವು ; ವಾತನ ವಿಶೇಷಣಗಳು ವೇಗ ಮತ್ತು ರಭಸವನ್ನೇ ವಿಶೇಷವಾಗಿ ಸೂಚಿಸುತ್ತವೆ.

ವಾಯುವಿನ ಮೂಲದ ವಿಷಯವಾಗಿ ಹೆಚ್ಚು ಆಧಾರಗಳಿಲ್ಲ. ಎರಡು ಲೋಕಗಳು ಐಶ್ವರ್ಯಕ್ಕೋಸ್ಕರ ಅವನನ್ನು ಸೃಜಿಸಿದವು (೭-೯೦-೩). ಅವನ ಪತ್ನಿಯ ಹೆಸರು ಇಲ್ಲದಿದ್ದರೂ, ವಾಯುವು ತ್ವಷ್ಟವಿನ ಜಾಮಾತೃವೆಂದು ಉಕ್ತವಾಗಿದೆ (೮-೨೬-೨೧, ೨೨). ಪುರುಷಸೂಕ್ತದಲ್ಲಿ ವಾಯುವು ವಿರಾಟ್ಪುರುಷನ



CC-0. Jangamwadi Math Collection. Digitized by eGangotri

ಉಸಿರಿನಿಂದ ಉದ್ಭವಿಸಿದನೆಂದು (೧೦-೯೦-೧೩) ಹೇಳಿದೆ. ವಾಯುವಿಗೂ ಮರುತರಿಗೂ ಸಂಬಂಧವೇ ಉಕ್ತವಾಗಿಲ್ಲವೆನ್ನಬಹುದು. ಒಂದೇ ಒಂದುಕಡೆ (೧-೧೩೪-೪) ವಾಯುವು ಅಂತರಿಕ್ಷದ ಯೋನಿಯಿಂದ ಮಾರುತರನ್ನು ಉತ್ಪತ್ತಿ ಮಾಡಿದನೆಂದೂ, ಅವರು (೧-೧೪೨-೧೨) ಮತ್ತು ವಿಶ್ವೇದೇವತೆಗಳು ವಾಯುವನ್ನು ಹಿಂಬಾಲಿಸಿದರೆಂದೂ ಹೇಳಿದೆ. ಅವನ (ಗುಣಗಳೂ) ಲಕ್ಷಣಗಳೂ ಅಸ್ಪಷ್ಟವಾಗಿವೆ. ಸ್ಪರದ್ರೂಪಿ (೧-೨-೧), ಸಹಸ್ರಾಕ್ಷನಾದ ಇವನು, ಮನೋವೇಗದಿಂದ, ಇಂದ್ರಸಹಿತನಾಗಿ ಆಕಾಶವನ್ನು ಸ್ಪರ್ಶಿಸಿದನು (೧-೨೩-೨ ಮತ್ತು ೩). ವಾಯುವಿನ ರಥವು ಹೊಳೆಯುತ್ತಿದೆ; ಅದಕ್ಕೆ ಕಂದುಬಣ್ಣದ ಅಥವಾ ಕೆಂಪುಬಣ್ಣದ ಒಂದು ತಂಡ ಅಥವಾ ಒಂದು ಜೊತೆ ಅಶ್ವಗಳು. ಆ ತಂಡದಲ್ಲಿ ೯೯ (೪-೪೮-೪) ಅಥವಾ ನೂರು ಅಥವಾ ಒಂದು ಸಾವಿರ (೪-೪೬-೩) ಕುದುರೆಗಳಿವೆ; ಅವು ಅವನ ಇಚ್ಛಾಮಾತ್ರದಿಂದಲೇ ನಿಯುಕ್ತವಾಗುತ್ತವೆ. ಈ ಅರ್ಥದ ನಿಯುತ್ವತ್ ಎಂಬ ವಿಶೇಷಣವು. ಇಂದ್ರ, ಅಗ್ನಿ, ಪೂಷಣ ಅಥವಾ ಮರುತ್ತಗಳಿಗೆ ಒಂದೆರಡು ಸಲ ಹೊರತಾಗಿ, ಸಾಧಾರಣವಾಗಿ ವಾಯುವಿಗೇ ಉಪಯೋಗಿಸಿದೆ. ರಥದಲ್ಲಿ ಕುಳಿತಾಗ, ಇವನಿಗೆ ಇಂದ್ರನು ಸಹಚರನು (೪-೪೬-೨; ೪-೪೮-೨; ೭-೯೧-೫); ಬಂಗಾರದ ಆಸನವಿದೆ; ಆಕಾಶವನ್ನು ಮುಟ್ಟುತ್ತದೆ (೪-೪೬-೪). ಇತರ ದೇವತೆಗಳಂತೆ, ಇವನಿಗೂ ಸೋಮರಸವು ಪ್ರಿಯವಾದುದು; ಇವನು ತನ್ನ ಅಶ್ವಗಳು ಮತ್ತು ಇಂದ್ರನೊಡನೆ ಬಂದು, ಮೊದಲು ಸೋಮಪಾನ ಮಾಡಬೇಕೆಂದು ಆಹೂತನಾಗುತ್ತಾನೆ (೧-೧೩೫-೪); ದೇವತೆಗಳಲ್ಲೆಲ್ಲಾ ಅವನೇ ಕ್ಷಿಪ್ರಗತಿಯ ದೇವತೆ (ಶ. ಬ್ರಾ. ೧೩-೧-೨-೭; ಇತ್ಯಾದಿ). ಐತರೇಯ ಬ್ರಾಹ್ಮಣದಲ್ಲಿ (೨-೨೫) ಸೋಮರಸದ ಪ್ರಥಮ ಪಾನಕ್ಕೋಸ್ಕರ ದೇವತೆಗಳಲ್ಲಿ ಪಂದ್ಯವಾಗಿ, ವಾಯುವು ಮೊದಲನೆಯವನೂ, ಇಂದ್ರನು ಎರಡನೆಯವನೂ ಆದರು ಎಂದು ಒಂದು ಕಥೆಯಿದೆ. ಅವನು ಸೋಮರಕ್ಷಕ (೧೦-೮೫-೫); ಅವನೊಬ್ಬನಿಗೇ ಶುಚಿಪಾ (ಶುದ್ಧವಾದ (ಸೋಮ) ಪಾನಮಾಡುವವನು) ಎಂಬ ವಿಶೇಷಣವಿದೆ; ಒಂದು ಸಲ ಇಂದ್ರ ಮತ್ತು ವಾಯುಗಳಿಗೆ ಒಟ್ಟಾಗಿ ಈ ವಿಶೇಷಣವು ಉಪಯೋಗಿಸಲ್ಪಟ್ಟಿದೆ. ವಾಯುವು ಯಶಸ್ಸು, ಸಂತಾನ, ಅಶ್ವಗಳು, ಗೋವುಗಳು, ಸುವರ್ಣ ಮೊದಲಾದುವನ್ನು ಅನುಗ್ರಹಿಸುತ್ತಾನೆ (೭-೯೦-೨ ಮತ್ತು ೬). ಶತ್ರುಗಳನ್ನು ಚದುರಿಸುತ್ತಾನೆ (೪-೪೮-೨); ದುರ್ಬಲರನ್ನು ರಕ್ಷಿಸಬೇಕೆಂದು (೧-೧೩೪-೫) ಪ್ರಾರ್ಥಿತನಾಗಿದಾನೆ.

ಗಾಳಿಯ ಮತ್ತೊಂದು ಹೆಸರಾದ 'ವಾತ' ಎಂಬುದು 'ವಾ' ಧಾತುವಿನಿಂದ ನಿಷ್ಪನ್ನವಾಗಿದೆ (೧೦-೧೬೮) ಸೂಕ್ತದಲ್ಲಿ ಈರೀತಿ ವರ್ಣನೆ ಇದೆ. ಎಲ್ಲವನ್ನೂ ಪುಡಿಮಾಡುತ್ತಾ, ಜೋರಾಗಿ ಶಬ್ದಮಾಡಿಕೊಂಡು ಧೂಳೆಬ್ಬಿಸುತ್ತಾ ವಾಯುಮಂಡಲದಲ್ಲಿ ಸಂಚರಿಸುತ್ತಾನೆ; ಒಂದು ದಿನವೂ ವಿಶ್ರಾಂತನಾಗುವುದಿಲ್ಲ; ಆದಿಯಲ್ಲಿ ಜನಿಸಿದ ಇವನು ನೀರಿಗೆ ಮಿತ್ರನು; ಅವನ ಜನ್ಮಸ್ಥಾನ ತಿಳಿಯದು. ಈ ದೇವತೆಯು ಮನಬಂದ ಕಡೆ ಹೋಗುತ್ತಾನೆ; ಇವನ ಶಬ್ದ ಎಲ್ಲರಿಗೂ ಕೇಳಿಸುತ್ತದೆ; ಆದರೆ ಇವನನ್ನು ಕಂಡವರಿಲ್ಲ (೧-೧೬೪-೪೪ನ್ನು ಹೋಲಿಸಿ). ಇವನು ದೇವತೆಗಳ ಉಸಿರು (೭-೮೭-೨ನ್ನು ಹೋಲಿಸಿ; ೧೦-೯೨-೧೩); ಯಾಗಗಳಲ್ಲಿ ಇವನಿಗೋಸ್ಕರ ಹೋಮ ಮಾಡುತ್ತಾರೆ.

ರುದ್ರನಂತೆ ವಾತನೂ ಔಷಧಗಳನ್ನು ಜನಗಳಿಗೆ ಕೊಡುತ್ತಾನೆ; ಆಯುಸ್ಸನ್ನು ಹೆಚ್ಚಿಸುತ್ತಾನೆ: ಏಕೆಂದರೆ, ಇವನ ಮನೆಯಲ್ಲಿ ಅಮೃತತ್ವದ ನಿಧಿಯಿದೆ (೧೦-೧೮೬). ಚಿಕಿತ್ಸಾಶಕ್ತಿಯೆಂದರೆ, ವಾಯುವಿನ ಶುದ್ಧೀಕರಣಶಕ್ತಿಯಿರಬೇಕು. ಗಾಳಿಯ ಕೆಲಸಗಳೆಲ್ಲವೂ ಚಂಡಮಾರುತಕ್ಕೆ ಸಂಬಂಧಿಸಿದೆ (೪-೧೭-೧೨; ೫-೮೩-೪; ೧೦-೧೬೮-೧ ಮತ್ತು ೨). ಸಿಡಿಲು ಹೊಡೆಯುವುದಕ್ಕೆ ಮತ್ತು ಸೂರ್ಯೋದಯಕ್ಕೆ ಪೂರ್ವಭಾವಿಯಾಗಿ ಗಾಳಿಯು ಸಾಧಾರಣವಾಗಿ ಜೋರಾಗಿ ಬೀಸುವುದರಿಂದ, ವಾತನು ರಕ್ತವರ್ಣದ ತೇಜಸ್ಸನ್ನು ಉತ್ಪತ್ತಿಮಾಡುತ್ತಾನೆ (೧೦-೧೬೮-೧) ಮತ್ತು ಉಷಸ್ಸು ಪ್ರಕಾಶಿಸುನಂತೆ ಮಾಡುತ್ತಾನೆ (೧-೧೩೪-೩) ಎಂದು ಹೇಳಿದೆ.



CC-0. Jangamwadi Math Collection. Digitized by eGangotri

ವಾಯುವೇಗವೇ ದೇವತೆಗಳ ವೇಗ (೪-೧೭-೧೨ ; ೫-೪೧-೩ ; ೯-೯೭-೫೨) ಮತ್ತು ಕಾಲ್ಪನಿಕ ಅಶ್ವಗಳ ವೇಗ (೧-೧೬೩-೧೧ ; ೧೪-೩೮) ಇವುಗಳ ಹೋಲಿಕೆಗೆ ಆಧಾರ. ಅದರ ಶಬ್ದವೂ ಅನೇಕ ಕಡೆ ಉಕ್ತವಾಗಿದೆ (೪-೨೨-೪ ; ೮-೯೧-೩ ; ೧೦-೧೬೮-೧ ಮತ್ತು ೪).

## ಪರ್ಜನ್ಯ

ಋಗ್ವೇದದಲ್ಲಿ ಈ ದೇವತೆಯ ಸ್ಥಾನ ಬಹಳ ಅಮುಖ್ಯ. ಮೂರೇ ಸೂಕ್ತಗಳಲ್ಲಿ ಈ ದೇವತೆಯನ್ನು ಸ್ತುತಿಸಿರುವುದು ; ಈ ಹೆಸರು ಬರುವುದೇ ಮೂವತ್ತು ಸಲ. ಅಥರ್ವವೇದದಲ್ಲಿಯೂ (೪-೧೫) ಒಂದು ಸೂಕ್ತ ಪರ್ಜನ್ಯದೇವತಾಕವಾದುದು, ಆದರೆ ಆ ಸೂಕ್ತದಲ್ಲಿನ ಋಕ್ಕುಗಳು ಬಹಳಮಟ್ಟಿಗೆ ಋಗ್ವೇದದಿಂದ ಆರಿಸಿ ಕೊಂಡವು. ಈ ಮುಂದಿನ ವಾಕ್ಯಗಳಲ್ಲಿ ಸಾಧಾರಣವಾಗಿ ಪರ್ಜನ್ಯ ಎಂದರೆ, ಪರಿಚಿತವಾದ ಮೋಡ ಎಂಬುದೇ ಆಗಿದೆ. ಮಳೆ ಮೋಡಗಳು (ಪರ್ಜನ್ಯ) ಭೂಮಿಯನ್ನು ಚೇತನಗೊಳಿಸುತ್ತವೆ (೧-೧೬೪-೫೧). ಮರುತ್ತು ಗಳು ಹಗಲಿನಲ್ಲಿಯೂ, ಜಲವಾಹಕವಾದ ಮೋಡಗಳಿಂದ (ಪರ್ಜನ್ಯ) ಕತ್ತಲು ಉಂಟುಮಾಡುತ್ತಾರೆ (೧-೩೮-೯). ಅವರು ಎರಡು ಲೋಕಗಳಲ್ಲಿಯೂ ಮೋಡಗಳನ್ನು ಹರಡುತ್ತಾರೆ (೫-೫೩-೬). ಮಳೆ ಬೀಳು ವಂತೆ ಮಾಡಬೇಕೆಂದೂ, ಮಳೆ ಮೋಡವನ್ನು ಕಳುಹಿಸುವಂತೆಯೂ ಬೃಹಸ್ಪತಿಯನ್ನು ಪ್ರಾರ್ಥಿಸಿದೆ (೧೦-೯೮-೧ ಮತ್ತು ೮). ಸೋಮವು ಮಳೆ ಮೋಡದಂತೆ ಪ್ರವಹಿಸುತ್ತದೆ (೯-೨-೯) ಮತ್ತು ಸೋಮಬಿಂದು ಗಳು, ಮೋಡದಿಂದ ಮಳೆಯು ಬೀಳುವಂತೆ ಬೀಳುತ್ತವೆ (೯-೨೨-೨). ಅಥರ್ವ ವೇದದಲ್ಲಿ ಮಳೆಗರೆಯುವ 'ವಶಾ' ಎಂಬ ಗೋವನ್ನು ಸ್ತುತಿಸುವಾಗ "ಪರ್ಜನ್ಯವೇ ಎಂದು ನಿನ್ನ ಕೆಚ್ಚಲು'' ಎಂದು ಹೇಳಿದೆ (ಅ. ವೇ. ೧೦-೧೦-೭). ಆದರೆ (ವಾ. ಸಂ. ೧೨-೬)ರಲ್ಲಿ ಪರ್ಜನ್ಯ ಎಂದರೆ ಸ್ತನಯಿತ್ನು (ಶಿಡಿಲು) ಎಂತಲೂ, (ಶ.ಬ್ರಾ. ೧೪-೫-೫-೧೦)ರಲ್ಲಿ, ದ್ಯೌಃ (ವಾ. ಸಂ. ೧೨-೬) ಎಂಬರ್ಥದಲ್ಲಿಯೂ ಪ್ರಯುಕ್ತವಾಗಿದೆ. ಕೆಲವು ಸಂದರ್ಭಗಳಲ್ಲಿ ಉದ್ದಿಷ್ಟವಾದುದು ರೂಢಾರ್ಥವೇ ಅಥವಾ ದೇವತಾರ್ಥವೇ ಎಂದು ಹೇಳುವುದು ಕಷ್ಟ. ಪರ್ಜನ್ಯನಂತೆ ಅಗ್ನಿಯ ಸಾಮರ್ಥ್ಯವು ಪ್ರತಿಧ್ವನಿಯನ್ನು ಕೊಡುತ್ತದೆ (೮-೯೧-೫). ಪರ್ಜನ್ಯದಿಂದ ಎಚ್ಚರಿಸಲ್ಪಟ್ಟು ಕಪ್ಪೆಗಳು ವಟ ಗುಟ್ಟುತ್ತವೆ (೭-೧೦೩-೧). ಪರ್ಜನ್ಯ ಎಂದರೆ ದೇವತೆಯೆಂದೇ ಸ್ಪಷ್ಟವಾಗಿ ಅನೇಕ ವಾಕ್ಯಗಳಲ್ಲಿ ತೋರಿಬರು ತ್ತದೆ. ಅಂತಹ ಸಂದರ್ಭಗಳಲ್ಲಿ ಮೋಡವು, ಕೆಚ್ಚಲು, ಬಾನೆ, ನೀರಿನ ಚೀಲ ಮೊದಲಾದ ಹೆಸರಿನಿಂದ ಕರೆಯ ಲ್ಪಡುತ್ತದೆ (೫-೮೩-೮ ಮತ್ತು ೯ ; ೭-೧೦೧-೪). ಸ್ವಲ್ಪಮಟ್ಟಿಗೆ ಪರ್ಜನ್ಯ ದೇವತೆಯು ವೃಷಭ ಮೊದಲಾದ ಪ್ರಾಣಿಯೆಂದು ವರ್ಣಿತವಾಗಿದೆ. ವೇಗವಾಗಿ ಹರಿಯುವ ಹನಿಗಳಿಂದ ಕೂಡಿದ ಮತ್ತು ಗಟ್ಟಿಯಾಗಿ ಗುಟುರು ಹಾಕುವ ಗೂಳಿ (೫-೮೩-೧ ; ೫-೮೩-೭ ಮತ್ತು ೯ಗಳನ್ನು ಹೋಲಿಸು ; ಅ. ವೇ. ೪-೧೫-೧). ಬುಸುಗುಟ್ಟು ತ್ತಿರುವ ಉದಕಮಯವಾದ ವೃಷಭದಿಂದ ಬರುವ ಮತ್ತು ಭೋರ್ಗರೆಯುತ್ತಿರುವ ನೀರು ಭೂಮಿಯನ್ನು ಸಂತೋಷಪಡಿಸುತ್ತದೆ (ಅ. ವೇ. ೪-೧೫-೧). ಪರ್ಜನ್ಯನು ಒಂದೊಂದು ಸಲ ಗೊಡ್ಡು ಹಸು ; ಒಂದೊಂದು ವೇಳೆ ಹಾಲು ಕೊಡುವ ಹಸು, ಪರ್ಜನ್ಯನು ತನ್ನ ದೇಹವನ್ನು ಇಷ್ಟಬಂದಂತೆ ಉಪಯೋಗಿಸುತ್ತಾನೆ (೭-೧೦೧-೩).

ಮಳೆಗರೆಯುವುದೇ ಪರ್ಜನ್ಯನ ಮುಖ್ಯಕಾರ್ಯ. ಜಲಮಯವಾದ ರಥದಲ್ಲಿ ಓಡಾಡುತ್ತಾ (೫-೮೩-೭) ನೀರಿನ ಚೀಲವನ್ನು ಬಿಚ್ಚಿ, ಅಧೋಮುಖವಾಗಿ ಹಿಡಿಯುತ್ತಾನೆ. ರಥಿಕನು ಅಶ್ವಗಳನ್ನು ಹುರಿದುಂಬಿಸುವಂತೆ, ಪರ್ಜನ್ಯನು ವೃಷ್ಟಿದೂತರನ್ನು ಪ್ರದರ್ಶಿಸುತ್ತಾನೆ ; ಮಳೆಗರೆದಾಗ, ದೂರದಿಂದ ಸಿಂಹಗರ್ಜನೆಯಾಗುತ್ತದೆ ; ಮಳೆಯನ್ನು ಸುರಿಸುತ್ತಾ, ಗರ್ಜಿಸುವ ಪರ್ಜನ್ಯನು, ನಮ್ಮ ಸ್ವರ್ಗೀಯ ಜನಕನಂತೆ (ಅಸುರ), ಬರುತ್ತಾನೆ



CC-0. Jangamwadi Math Collection. Digitized by eGangotri

(೫-೮೩-೩ ಮತ್ತು ೬). ಮಳೆಯನ್ನು ಸುರಿಸುವಂತೆಯೂ (೭-೧೦೧-೫), ಸುರಿಸಿದ ಮೇಲೆ ನಿಲ್ಲಿಸುವಂತೆಯೂ (೫-೮೩-೧೦) ಪ್ರಾರ್ಥಿತನಾಗಿದಾನೆ. ಪರ್ಜನ್ಯ ಮತ್ತು ಮರುತ್ತಗಳು ಮಳೆ ಸುರಿಸುವುವು. ಮಿತ್ರ ಮತ್ತು ವರುಣರಿಗೆ ಅಧೀನರಾಗಿದ್ದುಕೊಂಡೇ (೫-೬೩-೩ ರಿಂದ ೬), ಅನೇಕ ಸಲ ಅವನು ಅರ್ಭಟಿಸುತ್ತಾನೆ ಎಂದು ಹೇಳಿದೆ (೫-೮೩). ಅರ್ಭಟಿಸುತ್ತಾ ಅವನು ವೃಕ್ಷಗಳು, ಪಿಶಾಚಿಗಳು, ದುಷ್ಟರು, ಎಲ್ಲರನ್ನೂ ಉರುಳಿಸುತ್ತಾನೆ. ಪ್ರಪಂಚವೇ ಅವನ ಈ ಆಯುಧಕ್ಕೆ ಹೆದರಿದೆ (೫-೮೩-೨). ಅವನು ಮತ್ತು ವಾತ, ಇಬ್ಬರು ಆ ಆಯುಧ ವನ್ನು ಪ್ರಯೋಗಿಸುವವರು (೧೦-೬೬-೧೦). ಸಿಡಿಲಿಗೂ ಇವನಿಗೂ ಸ್ವಲ್ಪ ಸಂಬಂಧವಿದೆ. ಪರ್ಜನ್ಯನು ಬೀಜ ಗಳಿಂದ ಭೂಮಿಯನ್ನು ಚೇತನಗೊಳಿಸುವಾಗ, ಗಾಳಿಬೀಸುತ್ತದೆ ಮತ್ತು ಶಿಡಿಲು ಹೊಡೆಯುತ್ತದೆ (೫-೮೩-೪). ಪರ್ಜನ್ಯನು ಸಿಡಿಲಿನಿಂದೊಡಗೂಡಿ ಸಾಗರದಲ್ಲಿ ಗರ್ಜಿಸುತ್ತಾನೆ (ಅ. ವೇ. ೧೯-೩೦-೪).

ಮಳೆಗರೆಯುವವನಾದುದರಿಂದ, ಪರ್ಜನ್ಯನು ಸಸ್ಯಗಳ ಅಭಿವೃದ್ಧಿಗೆ ಕಾರಣನು. ಭೂಮಿಯಲ್ಲಿ ಬೀಜ ವನ್ನು ಬಿತ್ತಿದಾಗ, ಗಿಡಗಳು ಏಳುತ್ತವೆ. ಎಲ್ಲಾ ತರಹ ಸಸ್ಯಗಳೂ ಅವನ ಕಾರ್ಯಕ್ಷೇತ್ರಕ್ಕೆ ಒಳಪಟ್ಟವೆ; ಪುಷ್ಟಿ ಗೋಸ್ಕರ ಅವನು ಗಿಡಗಳನ್ನು ಉತ್ಪತ್ತಿಮಾಡಿದಾನೆ (೫-೮೩-೪, ೫ ಮತ್ತು ೧೦; ೬-೫೨-೬ ನ್ನು ಹೋಲಿಸು; ಅ. ವೇ. ೪-೧೫-೨, ೩ ಮತ್ತು ೧೫; ೮-೭-೨೧). ಗಿಡಗಳನ್ನು ಹೆಚ್ಚಿಸುವವನೂ, ಫಲಿಸುವಂತೆ ಮಾಡುವವನೂ ಅವನೇ; ಆ ದೇವತೆಯಿಂದ ರಕ್ಷಿತವಾಗಿ, ಸಸ್ಯಗಳು ಒಳ್ಳೆಯ ಫಲ ಬಿಡುತ್ತವೆ (೭-೧೦೧-೧ ಮತ್ತು ೫). ಅವನ ಕಾರ್ಯದಿಂದಲೇ ಜೊಂಡು ಮತ್ತು ಹುಲ್ಲು ಬೆಳೆಯುತ್ತವೆ (೭-೧೦೨-೧; ೫-೭೫-೧೫ ನ್ನು ಹೋಲಿಸಿ; ಅ. ವೇ. ೧-೨-೧; ೧-೩-೧; ೧೯-೩೦-೫). ಪರ್ಜನ್ಯನು ಗಿಡಗಳಲ್ಲಿ ಮಾತ್ರವಲ್ಲದೆ, ಹಸುಗಳು, ಹೆಣ್ಣು ಕುದುರೆಗಳು ಮತ್ತು ಸ್ತ್ರೀಯರಲ್ಲಿಯೂ ಅಂಕುರವನ್ನು, (ಗರ್ಭಾಣುವನ್ನು) ಸ್ಥಾಪಿಸುತ್ತಾನೆ (೭-೧೦೨-೨) ಮತ್ತು ಫಲಶಕ್ತಿಗಾಗಿ ಪ್ರಾರ್ಥಿತನಾಗಿದಾನೆ (೫-೮೩-೭; ೬-೫೨-೧೬ ನ್ನು ಹೋಲಿಸಿ). ಅವನು ಎಲ್ಲವನ್ನೂ ಫಲವಂತವಾಗಿ ಮಾಡುವ ವೃಷಭ; ಪ್ರಪಂಚದಲ್ಲಿರುವ ಚರಾಚರ ವಸ್ತುಗಳೆಲ್ಲದರ ಆತ್ಮವೂ ಅವನಲ್ಲಿದೆ (೭-೧೦೧-೬; ೧-೧೧೫-೧ ನ್ನು ಹೋಲಿಸಿ). ಪ್ರಪಂಚವೆಲ್ಲವನ್ನೂ ಆಳುವ, ಸರ್ವ ಸ್ವಾತಂತ್ರ್ಯವುಳ್ಳ ರಾಜನು; ಅವನಲ್ಲಿಯೇ ಎಲ್ಲಾ ಜೀವಗಳೂ ಮೂರು ಲೋಕಗಳೂ ಸ್ಥಾಪಿತವಾಗಿವೆ. ಅವನಲ್ಲಿಯೇ ತ್ರಿವಿಧವಾದ ನೀರುಹರಿಯುತ್ತದೆ(೭-೧೦೧-೨, ೪ ಮತ್ತು ೫) ಈ ಜನನ ಶಕ್ತಿಯಿಂದಲೇ, ಅವನಿಗೆ ಜನಕನೆಂಬ ವಿಶೇಷಣವು ಅನೇಕಸಲ ಉಪಯೋಗಿಸಲ್ಪಟ್ಟಿದೆ (೭-೧೦೧-೩; ೯-೮೨-೩; ಅ. ವೇ. ೪-೧೫-೧೨; ೧೨-೧-೧೨). ಅವನು ನಮ್ಮ (ಅಸುರಃಪಿತಾ) ಸ್ವರ್ಗೀಯಜನಕನು (೫-೮೩-೬).

ಭೂಮಿಯು ಅವನ ಪತ್ನಿಯೆಂದು ಧ್ವನಿತವಾಗುತ್ತದೆ (೫-೮೩-೪; ೭-೧೦೧-೩; ೧-೧೬೦-೩ ನ್ನು ಹೋಲಿಸಿ). ಅಥರ್ವ ವೇದದಲ್ಲಿ (೧೨-೧-೧೨) ಭೂಮಿಯು ತಾಯಿಯು ಮತ್ತು ಪರ್ಜನ್ಯನು ತಂದೆಯೆಂದೂ, ಮತ್ತೊಂದು ಕಡೆ (೧೦-೧೦-೬) ಸ್ಪಷ್ಟವಾಗಿ, ವಶಾ ಎಂಬುವಳು ಅವನ ಪತ್ನಿಯೆಂದೂ ಹೇಳಿದೆ. ವೃಷಭನೆನ್ನಿಸಿ ಕೊಳ್ಳುವುದರಲ್ಲಿ ಮತ್ತು ಗುಡುಗು, ಶಿಡಿಲು ಮತ್ತು ಮಳೆಗಳಿಗೆ ಸಂಬಂಧಿಸಿರುವುದರಲ್ಲಿಯೂ, ಪರ್ಜನ್ಯನು ದ್ಯುದೇವ ತೆಗೆ ಸಮಾನನು (೧೦-೪೫-೪; ೨-೪-೬; ೨-೨೭-೧೫ ಗಳನ್ನು ಹೋಲಿಸಿ). ಒಂದು ಕಡೆ ಪರ್ಜನ್ಯನು ದ್ಯುದೇವ ತೆಯ ಮಗನು (೭-೧೦೨-೧). ಪರ್ಜನ್ಯನೇ ಒಂದು ವತ್ಸ (ಕರು) ವನ್ನು ಉತ್ಪತ್ತಿ ಮಾಡುತ್ತಾನೆ; ಇದೇ ಗಿಡಗಳ ಅಂಕುರ (೭-೧೦೧-೧; ೫-೮೩-೧ ನ್ನು ಹೋಲಿಸಿ). ಈ ಕರುವು ಸಿಡಿಲು ಅಥವಾ ಸೋಮವಿರಬಹುದು. ಒಂದು ಕಡೆ ಪರ್ಜನ್ಯನು ಸೋಮಕ್ಕೆ ತಂದೆಯೆಂದೂ (೯-೮೨-೩), ಅದು ಪರ್ಜನ್ಯನಿಂದ ಅಭಿವೃದ್ಧಿಯಾಯಿತೆಂದೂ (೯-೧೧೩-೩) ಹೇಳಿದೆ.

ಪರ್ಜನ್ಯನಿಗೆ ಇತರ ಅನೇಕ ದೇವತೆಗಳೊಡನೆ ಸಂಬಂಧವಿದೆ. ಆದರೆ ಸಂಬಂಧ ಹೆಚ್ಚಾಗಿರುವುದು ವಾತ ನೊಡನೆಯೇ. ಅಗ್ನಿಯೊಡನೆ ಒಂದುಸಲ ಹೊರತಾಗಿ, ವಾತನು ದ್ವಂದ್ವ ದೇವತೆಯಾಗಿ ಉಕ್ತನಾಗಿರುವುದು ಪರ್ಜ ನ್ಯನೊಡನೆಯೇ. ಮರುತರೂ ಪರ್ಜನ್ಯನೊಡನೆ ಸ್ತುತರಾಗಿದಾರೆ (೫-೬೩-೬; ೫-೮೩-೫); ಅವರು ಪರ್ಜನ್ಯನನ್ನು ಸ್ತುತಿಸುತ್ತಾರೆ (ಅ. ವೇ. ೪-೧೫-೪). ಎರಡು ಮಂತ್ರಗಳಲ್ಲಿ ಅಗ್ನಿಯು ಇವನೊಡನೆ ಸ್ತುತನಾಗಿದಾನೆ (೬-೫೨-೬





CC-0. Jangamwadi Math Collection. Digitized by eGangotri

ಮತ್ತು ೧೬). ವೃಷ್ಟಿಯುಕ್ತನಾದ ಪರ್ಜನ್ಯನಿಗೂ ಇಂದ್ರನಿಗೂ ಸಮಾನ ಧರ್ಮಗಳು ಅನೇಕ ಇವೆ (೮-೬-೧) ಇಬ್ಬರು ದೇವತೆಗಳಿಗೂ, ಪ್ರಕೃತಿಯ ಒಂದೇ ಅಂಶವು ಆಧಾರವಾಗಿದೆ ; ಆದರೆ ಪರ್ಜನ್ಯನ ವಿಷಯದಲ್ಲಿ ಇದು ಹೆಚ್ಚು ಸ್ಪಷ್ಟವಾಗಿದೆ.

ಈ ಪದದ ನಿಷ್ಪತ್ತಿ ಸ್ಪಷ್ಟವಾಗಿಲ್ಲ. ಋಗ್ವೇದದಲ್ಲಿ ಈ ರೂಪದಿಂದ ರೂಢಾರ್ಥವಾದ ಮೋಡವೂ, ಮೇಘಾಭಿಮಾನಿದೇವತೆಯೂ ಅಭಿಪ್ರೇತವಾಗಿವೆ. ಬ್ರಾಹ್ಮಣಗಳಲ್ಲಿಯೂ ಈ ಎರಡು ಅರ್ಥಗಳೂ ರೂಢಿಯಲ್ಲಿದ್ದಂತಿವೆ. ಮಹಾಭಾರತದಲ್ಲಿ ಇಂದ್ರ ಮತ್ತು ಪರ್ಜನ್ಯರು ಇಬ್ಬರೂ ಒಂದೇ ಎಂದೂ ಭಾವಿಸಲ್ಪಟ್ಟಿದಾರೆ.

## ಆಪಃ

ನಾಲ್ಕು ಸೂಕ್ತಗಳೂ (೭-೪೭ ಮತ್ತು ೪೯ ; ೧೦-೯ ಮತ್ತು ೩೦), ಮತ್ತೆ ಕೆಲವು ಋಕ್ಕುಗಳೂ ಉದಕವನ್ನು ಸ್ತುತಿಸುತ್ತವೆ. ಇತರ ದೇವತೆಗಳೊಡನೆ ಅಲ್ಲೊಂದು ಇಲ್ಲೊಂದು ಮಂತ್ರದಲ್ಲಿಯೂ ಅದರ ಸ್ತುತಿಯಿದೆ. ವ್ಯಕ್ತೀಕರಣವು ಬಹಳ ಆರಂಭದೆಶೆಯಲ್ಲಿದೆ; ವಾರಿಗಳು, ತಾಯಿಯರು, ಎಳೆಯ ವಯಸ್ಸಿನ ಪತ್ನಿಯರು, ಯಾಗಗಳಿಗೆ ಬಂದು ವರ ಪ್ರಸಾದವನ್ನು ಅನುಗ್ರಹಿಸುವ ಸ್ತ್ರೀದೇವತೆಗಳು ಎಂಬ ಅಭಿಪ್ರಾಯಗಳು ಕಂಡುಬರುತ್ತವೆ. ದೇವತೆಗಳ ಮಾರ್ಗವನ್ನು ಅನುಸರಿಸುವ ಸ್ತ್ರೀದೇವತೆಗಳು (೭-೪೭-೩). ವಜ್ರಾಯುಧವನ್ನು ಧರಿಸಿ, ಇಂದ್ರನು ನೀರು ಹರಿಯುವುದಕ್ಕೋಸ್ಕರ ಕಾಲುವೆಗಳನ್ನು ಮಾಡಿದನು (೭-೪೭-೪ ; ೭-೪೯-೧) ಮತ್ತು ಅವನ ಅಪ್ಪಣೆಗಳನ್ನು ಅವರು ಎಂದಿಗೂ ಮೀರುವುದಿಲ್ಲ (೭-೪೭-೩). ಸವಿತೃವಿನ ಅಪ್ಪಣೆಗೂ ನೀರು ಒಳಪಟ್ಟಿದೆ (೨-೩೮-೨). ಅವು ಸ್ವರ್ಗಲೋಕದಿಂದ ಬಂದವು ; ಕಾಲುವೆಗಳಲ್ಲಿ ಹರಿಯುತ್ತವೆ : ಸಮುದ್ರವೇ ಅವುಗಳ ಗಮ್ಯಸ್ಥಾನ (೭-೪೯-೨). ಮಿತ್ರಾವರುಣರು ಮತ್ತು ಇತರ ದೇವತೆಗಳು ಇರುವ ಸ್ಥಳದಲ್ಲಿ ವಾರಿಗಳೂ ಇವೆ ಎಂದು ಅಭಿಪ್ರಾಯವಿದೆ (೧೦-೩೦-೧). ಅವು ಸೂರ್ಯನ ಪಾರ್ಶ್ವದಲ್ಲಿವೆ ಮತ್ತು ಸೂರ್ಯನು ಅವುಗಳೊಡನೆ ಇದ್ದಾನೆ (೧-೨೩-೧೭). ಮನುಷ್ಯರ ಸತ್ಯಾಸತ್ಯತೆಗಳನ್ನು ವೀಕ್ಷಿಸುತ್ತಾ ವರುಣನು ಅವುಗಳ ಮಧ್ಯೆ ಸಂಚರಿಸುತ್ತಾನೆ (೭-೪೯-೩). ನಿಘಂಟುವಿನಲ್ಲಿ ಭೂಲೋಕದ ದೇವತೆಗಳಲ್ಲಿ ನೀರನ್ನೂ ಸೇರಿಸಿದೆ (ನಿರು ೫-೧).

ಅಗ್ನಿಯು ನೀರಿನಲ್ಲೇ ಮನೆಮಾಡಿಕೊಂಡಿದ್ದಾನೆಂದು ಅನೇಕಸಲ ಹೇಳಿದೆ. ನೀರಿನೊಳಕ್ಕೆ ಅಗ್ನಿಯ ಪ್ರವೇಶ ಮಾಡಿದನು (೭-೪೯-೪) ; ಅಗ್ನಿಯ ಒಂದು ರೂಪಕ್ಕೆ 'ಅಪಾಂನಪಾತ್' (ನೀರಿನ ಪುತ್ರ) ಎಂದು ಹೆಸರು ಮಾತೃಭೂತರಾದ ನೀರುಗಳು ಅಗ್ನಿಯನ್ನು ಉತ್ಪತ್ತಿಮಾಡುತ್ತವೆ (೧೦-೯೧-೬ ; ೧೦-೨-೭ ನ್ನು ಹೋಲಿಸಿ, ಅ. ವೇ. ೧-೩೩-೧). ಅಬ್ದೇವತೆಗಳು ಜನನಿಯರು (೧೦-೧೭-೧೦ ; ೧-೨೩-೧೬) ; ಪ್ರಪಂಚಕ್ಕೆ ಭಾರ್ಯೆಯರು ; ವಯಸ್ಸು ಮತ್ತು ಜನ್ಮಗಳಲ್ಲಿ ಸಮಾನರು (೧೦-೩೦-೧೦). ಪ್ರೀತಿಯುಕ್ತರಾದ ತಾಯಿಯರಂತೆ, ಮಂಗಳಕರವಾದ ದ್ರವ್ಯವನ್ನು ಕೊಡಬೇಕೆಂದು ಕೋರಿದೆ (೧೦-೯-೨). ಚರಾಚರ ವಸ್ತುಗಳನ್ನು ಸೃಜಿಸುವವರು ; ತಾಯ್ತನವು ಅವರಲ್ಲಿ ಬಹಳ ಹೆಚ್ಚಾಗಿ ವ್ಯಕ್ತಪಡುತ್ತದೆ (೬-೫೦-೭).

ನೀರು [ಮನುಷ್ಯರನ್ನು] ಶುದ್ಧಿಮಾಡಿ ಪೂತರನ್ನಾಗಿ ಮಾಡುತ್ತದೆ; ಆ ದೇವತೆಗಳು ಅಪವಿತ್ರತೆಯನ್ನು ಪರಿಹರಿಸುತ್ತವೆ. ಆರಾಧಕನು ಶುದ್ಧನೂ, ಪವಿತ್ರನೂ, ಆಗಿ ನೀರಿನಿಂದ ಹೊರಗೆ ಬರುತ್ತಾನೆ [೧೦-೧೭-೧೦]. ಕೆಟ್ಟ ನಡತೆ ಮತ್ತು ಹಿಂಸೆ, ದೂಷಣೆ ಮತ್ತು ಅಸತ್ಯ, ಇವುಗಳಿಗೆ ಸಂಬಂಧಿಸಿದ ಪಾಪಗಳಿಂದಲೂ ಪೂತರನ್ನಾಗಿ ಮಾಡಬೇಕೆಂದು ಪ್ರಾರ್ಥನೆಯಿದೆ [೧-೨೩-೨೨; ೧೦-೯-೮]. ಅವು ರೋಗಪರಿಹಾರಕಗಳು [೬-೫೦-೭]; ದೀರ್ಘಾಯುಸ್ಸು, ಔಷಧಿಗಳು ಮೊದಲಾದುವನ್ನು ಅನುಗ್ರಹಿಸುತ್ತವೆ. ಔಷಧಿಗಳಲ್ಲಿ ಅಮೃತತ್ವವೂ ಸೇರಿದೆ [೧೦-೯-೫ರಿಂದ೭, ೧-೨೩-೧೯ರಿಂದ೨೧]. ಮನೆಯಲ್ಲಿ ಮನುಷ್ಯನ ಆರೋಗ್ಯವನ್ನು ಕಾಪಾಡುತ್ತದೆ [ಹಿ. ಗೃ. ಸೂ. ೨-೪-೫]. ವರಗಳು, ಸಂಪತ್ತು ಇವುಗಳನ್ನೂ, ದೇಹದಾರ್ಢ್ಯ ಮತ್ತು ಅಮರತ್ವಗಳನ್ನು ಅನುಗ್ರಹಿಸುತ್ತವೆ [೧೦-೯-೫, ೧೦-೩೦-೧೨]. ಅವರ ಸಹಾಯ ಮತ್ತು ಪ್ರಶಾ



CC-0. Jangamwadi Math Collection. Digitized by eGangotri

ದವು ಪದೇ ಪದೇ ಪ್ರಾರ್ಥಿಸಲ್ಪಡುತ್ತದೆ [೭-೪೭-೪, ೭-೪೯-೧ರಿಂದ೪, ೧೦-೯ ನೇಸೂಕ್ತ ಮತ್ತು ೧೦-೩೦-೧೧], ಅಪಾಂನಪಾತನೊಡನೆ ಬರ್ಹಿಸ್ಸಿನ ಮೇಲೆ ಆಸೀನರಾಗಿ, ಸೋಮಾಹುತಿಯನ್ನು ಸ್ವೀಕರಿಸಲು ಆಹೂತರಾಗಿದಾರೆ [೧೦-೩೦-೧೪ ಮತ್ತು ೧೫].

ನೀರಿಗೆ ಮಧುವಿನ ಸಂಬಂಧವು ಉಕ್ತವಾಗಿದೆ. ಜನನಿಯರಾದ ಇವರು ತಮ್ಮ ಹಾಲಿನೊಡನೆ ಮಧುವನ್ನು ಬೆರಸುತ್ತಾರೆ [೧-೨೩-೧೬]. ನೀರಿನ ಅಲೆಗಳಲ್ಲಿ ಮಧುವು ಹೆಚ್ಚಾಗಿದೆ. ಘೃತಮಿಶ್ರಿತವಾದ ಈ ನೀರು ಇಂದ್ರನ ಪಾನೀಯವಾಗಿ, ಅವನಿಗೆ ಮದವನ್ನುಂಟುಮಾಡಿತು [೭-೪೭-೧ ಮತ್ತು ೨]. ಇಂದ್ರನಿಗೆ ಅಪಾರ ಸಾಮರ್ಥ್ಯವನ್ನು ಕೊಟ್ಟ, ಮಧುಮಿಶ್ರಿತವಾದ ನೀರನ್ನನುಗ್ರಹಿಸಬೇಕೆಂದು ಅಪಾಂನಪಾತನು ಪ್ರಾರ್ಥಿತನಾಗಿದಾನೆ [೧೦-೩೦-೪]. ಮಧುವಿನಿಂದ ಸ್ನಿಗ್ಧವಾದ ಮತ್ತು ದೇವತೆಗಳಿಗೆ ಸಂತೋಷದಾಯಕವಾದ ಅಲೆಗಳನ್ನು ಇಂದ್ರನಿಗೋಸ್ಕರ ಹೊರಡಿಸಬೇಕೆಂದು ನೀರನ್ನು ಬೇಡಿದಾರೆ. ಏಕೆಂದರೆ, ಇಂದ್ರನು ನೀರನ್ನು ಬಂಧನದಿಂದ ಬಿಡುಗಡೆ ಮಾಡಿದನು. ಅಲೆಯು ಮದವನ್ನುಂಟುಮಾಡುತ್ತದೆ. ಮತ್ತು ಅದು ಇಂದ್ರನ ಪಾನೀಯ ; ಆಕಾಶದಲ್ಲಿ ಜನಿತವಾಗುತ್ತದೆ [೧೦-೩೦-೭ರಿಂದ೯]. ಈ ಕೆಲವು ವಾಕ್ಯಗಳಲ್ಲಿ, ನೀರೇ ಸೋಮವೆಂದೂ ಅಥವಾ ಸೋಮಮಿಶ್ರಿತವೆಂದೂ ಅಭಿಪ್ರಾಯವಿದೆ. ಬೇರೆ ಸಂದರ್ಭಗಳಲ್ಲಿ, ಸೋಮರಸವನ್ನು ತಯಾರಿಸಲು ಉಪಯೋಗಿಸುವ ನೀರು ಅಭಿಪ್ರೇತವಿರಬಹುದು. ಘೃತ, ಕ್ಷೀರ, ಮಧು ಇವುಗಳಿಂದ ಯುಕ್ತರಾಗಿದ್ದಾಗ, ಋತ್ವಿಜರಿಗೆ ಅನುಕೂಲರಾಗಿ, ಇಂದ್ರನಿಗೋಸ್ಕರ ಚೆನ್ನಾಗಿ ತಯಾರಿಸಿದ ಸೋಮರಸಧಾರಿಗಳಾಗಿರುತ್ತಾರೆ [೧೦-೩೦-೧೩]. ತರುಣನು ತರುಣಿಯರನ್ನು ಕಂಡು ಆನಂದಿಸುವಂತೆ, ಸೋಮವು ನೀರಿನಲ್ಲಿ ಆನಂದಿಸುತ್ತದೆ. ಪ್ರಣಯಿಯಂತೆ ನೀರನ್ನು ಸಮೀಪಿಸುತ್ತಾನೆ. ಅವು ಯುವಕನ ಮುಂದೆ ತಲೆತಗ್ಗಿಸಿ ನಿಂತಿರುವ ಕನ್ಯೆಯರು [೧೦-೩೦-೫ರಿಂದ೬].

## ಭೂಮಿಯ ದೇವತೆಗಳು

### ನದಿಗಳು

ಸ್ವರ್ಗೀಯೋದಕದಂತೆ, ನದೀ ದೇವತೆಗಳೂ ಮುಖ್ಯಸ್ಥಾನವನ್ನೇ ಪಡೆದಿವೆ. ಒಂದು ಇಡೀ ಸೂಕ್ತವೇ [೧೦-೭೫] ಸಿಂಧು ನದಿಯನ್ನು ಸ್ತುತಿಸುತ್ತದೆ. ಅದರಲ್ಲಿ ಐದನೆಯ ಋಕ್ಕು, ಸಿಂಧುವಿನ ಉಪನದಿಗಳನ್ನು ಸ್ತುತಿಸುತ್ತದೆ. ಆರನೆಯ ಋಕ್ಕಿನಲ್ಲಿ, ಇನ್ನೂ ಅನೇಕ ನದಿಗಳು ಅದರ ಉಪನದಿಗಳೆಂದು ಉಕ್ತವಾಗಿವೆ. ಇನ್ನೊಂದು ಸೂಕ್ತದಲ್ಲಿ [೩-೩೩], ವಿಪಾಟ್ ಮತ್ತು ಶುತುದ್ರಿ ಎಂಬ ಜೋಡಿ ನದಿಗಳನ್ನು ಹೊಗಳಿದೆ.

ಇತರ ಎಲ್ಲಾ ನದಿಗಳಿಗಿಂತ ಸರಸ್ವತೀನದಿಗೇ ಹೆಚ್ಚು ಪ್ರಾಶಸ್ತ್ಯ. ದೇವತೆಯೆಂಬ ಭಾವನೆ ಈ ಸಂದರ್ಭದಲ್ಲಿ ಬಹಳ ಹೆಚ್ಚಾಗಿದ್ದರೂ, ದೇವತೆ ಮತ್ತು ನದಿಗಳಿಗಿರುವ ನಿಕಟ ಬಾಂಧವ್ಯ ಸರ್ವದಾ ನೆನಪಿನಲ್ಲಿರುತ್ತದೆ. ಈ ನದಿಗೆ ಮೂರು ಸೂಕ್ತಗಳೂ, ಅನೇಕ ಬಿಡಿ ಮಂತ್ರಗಳೂ ಮೀಸಲು. ಸರಸ್ವತೀ, ಸರಯೂ ಮತ್ತು ಸಿಂಧುಗಳು ದೊಡ್ಡ ನದಿಗಳು [೧೦-೬೪-೯], ಗಂಗಾ, ಯಮುನಾ, ಸರಸ್ವತೀ, ಶುತುದ್ರಿ, ಪರುಷ್ಣಿ, ಮತ್ತು ಇನ್ನೂ ಕೆಲವು ಪರಿಚಿತ ಮತ್ತು ಅಪರಿಚಿತವಾದವು ಒಟ್ಟು ೨೧ ನದಿಗಳು ಹೇಳಲ್ಪಟ್ಟಿವೆ [೧೦.೭೫-೫]. ಸರಸ್ವತಿಯ ದಡದಲ್ಲಿರುವ ರಾಜರು ಮತ್ತು ಜನರ ವಿಷಯ ಪ್ರಸ್ತಾಪಿತವಾಗಿದೆ [೭-೯೬-೨, ೮-೨೧-೧೮]. ಸರಸ್ವತಿಯು ಇತರ ಎಲ್ಲಾ ನದಿಗಳಿಗಿಂತ ಮಹಿಮೆಯಲ್ಲಿ ಹಿರಿಯದು ; ರಭಸತ್ತಾದ ನೀರುಳ್ಳದ್ದು ; ನದಿಗಳಲ್ಲೆಲ್ಲಾ ಇದೊಂದೇ ಪರಿಶುದ್ಧವಾದುದು. ಆಕಾಶದ ಸಾಗರದಿಂದ ಹರಿದು ಬರುತ್ತದೆ [೭-೯೫-೧ ಮತ್ತು ೨,



CC-0. Jangamwadi Math Collection. Digitized by eGangotri

೫-೪೩-೧೧ನ್ನು ಹೋಲಿಸಿ]. ಪ್ರಚಂಡವಾದ ಅಲೆಗಳಿಂದ ಪರ್ವತಶಿಖರಗಳನ್ನು ಕೊಚ್ಚಿಕೊಂಡು ಹೋಗುತ್ತದೆ. ಅದರ ಅಗಾಧವಾದ ಪ್ರವಾಹವು ಘೋರ್ಗರೆಯುತ್ತಾ, ರಭಸದಿಂದ ನುಗ್ಗುತ್ತದೆ [೬-೬೧-೨ ಮತ್ತು ೮]. ದೊಡ್ಡದರಲ್ಲಿ ಅತಿ ದೊಡ್ಡದೂ, ಚುರುಕಾಗಿರುವುದರಲ್ಲಿ ಅತಿ ಚುರುಕಾದುದೂ ಆದ ಸರಸ್ವತಿಯು ತನ್ನ ಕ್ಷೀರವನ್ನು ಉದಾರವಾಗಿ ಕೊಡಬೇಕೆಂದು ಪ್ರಾರ್ಥಿತವಾಗಿದೆ [೬-೬೧-೧೩]. ಹೊಸ ಜಾಗಗಳಿಗೆ ಸಾಗಿಸಬೇಕೆಂದು ಮೊರೆಯಿಟ್ಟದಾರೆ [೬-೬೧-೧೪]. ಆಕೆಗೆ ಏಳು ಜನ ಸೋದರಿಯರು ಮತ್ತು ಆಕೆಯು ಏಳು ವಿಧವಾಗಿದಾಳೆ [೬.೬೧-೧೦ ಮತ್ತು ೧೨]. ಅವಳು ನದೀ ಮಾತೃ ; ಏಳು ನದಿಗಳಲ್ಲಿ ಒಬ್ಬಳು [೭-೩೬-೬]. ನದಿಗಳು ಮತ್ತು ದೇವತೆಗಳಲ್ಲಿ, ಅತಿಶ್ರೇಷ್ಠಳಾದ ತಾಯಿಯು [೨-೪೧-೧೬]. ಆವಳಿಗೆ ಪಾವೀರವೀ [ಸಿಡಿಲಿನ ಮಗಳು] ಎಂದು ಹೆಸರು ಮತ್ತು ಒಬ್ಬ ವೀರನ ಪತ್ನಿ [೬-೪೯-೭]. ಭೂಭಾಗಗಳನ್ನೂ, ವಿಸ್ತಾರವಾದ ಆಕಾಶವನ್ನೂ ಮತ್ತು ಮೂರು ಗೃಹಗಳನ್ನೂ ಆಕ್ರಮಿಸುತ್ತಾಳೆ [೬-೬೧-೧೧ ಮತ್ತು ೧೨]. ಆಕಾಶದಿಂದ, ದೊಡ್ಡ ಪರ್ವತದಿಂದ ಯಾಗಶಾಲೆಗೆ ಬರಬೇಕೆಂದು ಆಹ್ವಾನವಿದೆ [೫-೪೩.೧೧] ಈ ಕಡೆಯ ಮೂರು ವಾಕ್ಯಗಳಿಂದ ಸರಸ್ವತಿಗೂ, ಪುರಾಣಾದಿಗಳಲ್ಲಿ ಗಂಗೆಗೆ ಹೇಳಿರುವಂತೆ, ಸ್ವರ್ಗಲೋಕದಲ್ಲಿ ಜನ್ಮವು ಸೂಚಿತವಾಗುತ್ತದೆ. ಒಂದು ಕಡೆ ಅವಳಿಗೆ ಅಸೂರ್ಯ (ದೇವತಾಸ್ತ್ರೀ) ಎಂಬ ಪ್ರಯೋಗವಿದೆ (೭-೯-೬-೧). ಪಿತೃದೇವತೆಗಳ ರಥದಲ್ಲಿ ಅವರ ಜೊತೆಯಲ್ಲಿಯೇ, ಆ ದೇವತೆಯು ಬಂದು, ಕುಶಾಸನದಲ್ಲಿ ಮಂಡಿಸುತ್ತಾಳೆ. (೧೦-೧೭-೮ ಮತ್ತು ೯), ಮುಂದಿನ ಎರಡು ಮಂತ್ರಗಳಲ್ಲಿಯೂ (೧೦-೧೭-೧೦ಮತ್ತು೧೧) ನದಿಯೇ ಉದ್ದಿಷ್ಟಳಾದುದರಿಂದ ಇಲ್ಲಿಯೂ ನದೀದೇವತೆಯೇ ಅಭಿಪ್ರೇತಳಾಗಿರಬೇಕು.

ಆಕೆಯು ಸ್ವತಃ ಪವಿತ್ರರನ್ನಾಗಿ ಮಾಡುತ್ತಾಳೆ. (೧-೩-೧೦) ಪ್ರವಾಹಗಳಿಂದ ಉಕ್ಕಿ ಹರಿಯುತ್ತಾ ಬಾರೆಂದು ಕರೆಯಲ್ಪಡುತ್ತಾಳೆ. (೬-೫೨-೬) ; ಆ ನೀರುಗಳು ಐಶ್ವರ್ಯ, ಸಂತಾನ, ಮತ್ತು ಅಮರತ್ವಗಳನ್ನು ಕೊಡುವುದರ ಜೊತೆಗೆ ಆಕೆಯು ವೀರ್ಯವನ್ನು ಅನುಗ್ರಹಿಸಬೇಕೆಂದು ಪ್ರಾರ್ಥಿತಳಾಗಿದಾಳೆ. (೧೦-೩೦-೧೨) ಅವಳು ವೀರ್ಯವನ್ನೂ ಸಂತಾನವನ್ನೂ ಅನುಗ್ರಹಿಸುತ್ತಾಳೆ. (೨-೪೧-೧೭) ಮತ್ತು ಸಂತಾನಪ್ರಾಪ್ತಿಗೆ ಸಹಾಯಕರಾದ ದೇವತೆಗಳೊಡನೆ ಸೇರಿಸಲ್ಪಟ್ಟದಾಳೆ. (೧೦-೧೮೪-೨) ವಧ್ರ್ಯಶ್ವನಿಗೆ ದಿವೋದಾಸನೆಂಬ ಪುತ್ರನನ್ನನುಗ್ರಹಿಸಿದಳು. (೬-೬೧-೧) ಯಾವಾಗಲೂ ವಿಫಲವಾಗದ ಅವಳ ಸ್ತನಗಳು (ಐ. ಬ್ರಾ. ೪-೧ನ್ನು ಹೋಲಿಸಿ). ಸಮಸ್ತವಿಧವಾದ ಐಶ್ವರ್ಯವನ್ನೂ ಕೊಡುತ್ತವೆ. (೧-೧೬೪-೪೯) ಐಶ್ವರ್ಯ, ಸಮೃದ್ಧಿ ಮತ್ತು ಪುಷ್ಟಿದಾಯಕಳು. (೭-೯೫-೨ ; ೮-೨೧-೧೭ ; ೯-೬೭-೩೨ ; ೧೦-೧೭-೮ ಮತ್ತು ೯) ಮತ್ತು ಅನೇಕಸಲ 'ಸುಭಗಾ' (ಸಮೃದ್ಧಳು.) ಎನ್ನಿಸಿಕೊಂಡಿದಾಳೆ. (೧-೮೯-೩ ; ೭-೯೫-೪ ಮತ್ತು ೬ ; ೮-೨೧-೧೭) ತಾಯಿ (ಅಂಬಾ) ಯಾದ ಇವಳು, ಅಪ್ರಸಿದ್ಧರಿಗೆ ಪ್ರಸಿದ್ಧಿಯನ್ನುಂಟುಮಾಡುತ್ತಾಳೆ (೨-೪೧-೧೬) ತನ್ನ ಆರಾಧಕರಲ್ಲಿ ಭಕ್ತಿ ಮೂಡುವಂತೆ ಮಾಡುತ್ತಾಳೆ. ಅದನ್ನು ಹೆಚ್ಚಿಸುತ್ತಾಳೆ. (೧.೩-೧೦ ಮತ್ತು ೧೧ ; ೨-೩-೮ ; ೬-೬೧-೪). ಸ್ತುತಿಗೆ ಸಂಬಂಧಿಸಿದ ದೇವತೆಗಳೊಡನೆ ಅವಳೂ ಆಹೂತಳಾಗಿದಾಳೆ (೨-೩೨-೧೧ ; ೧೦-೬೫-೧೩). ದೇವತೆಗಳನ್ನು ದೂಷಿಸುವವರನ್ನು ನಾಶಮಾಡುತ್ತಾಳೆ ; ಕ್ರೂರಳು ಮತ್ತು ವೃತ್ರನನ್ನು ಕೊಲ್ಲುವವಳು (೬-೬೧-೩ ಮತ್ತು ೭). ಆದರೆ ತನ್ನನ್ನು ಪೂಜಿಸುವವರನ್ನು ರಕ್ಷಿಸಿ, ಅವರ ಶತ್ರುಗಳನ್ನು ನಾಶಪಡಿಸುತ್ತಾಳೆ (೭-೯೫-೪ ಮತ್ತು ೫ ; ೨-೩೦-೮ ; ೯-೪೯-೭).

ಇತರ ಅನೇಕ ದೇವತೆಗಳ ಜೊತೆಯಲ್ಲಿ ಸರಸ್ವತಿಯು ಆಹೂತಳಾಗುತ್ತಾಳೆ. ಪೂಷಣ ಮತ್ತು ಇಂದ್ರರನ್ನು ಬಿಟ್ಟರೆ ವಿಶೇಷವಾಗಿ ಮರುದ್ದೇವತೆಗಳ ಜೊತೆಯಲ್ಲಿಯೇ ಆಕೆಯು ಸ್ತುತಳಾಗಿರುವುದು. (೩-೫೪-೧೩;



CC-0. Jangamwadi Math Collection. Digitized by eGangotri

೭-೯-೫ ; ೬-೩೯-೫ ; ೭-೪೦-೩). ಅವರಿಂದ ಅನುಸೃತಳು (೨-೩೦-೮) ಅಥವಾ ಅವರು ಇವಳ ಮಿತ್ರರು, (೭-೯೬-೨) ಅಶ್ವಿನಿಗಳೊಡನೆಯೂ ಒಂದುಕಡೆ ಸೇರಿಸಲ್ಪಟ್ಟಿದಾಳೆ. ಅಶ್ವಿನಿಗಳು ಇಂದ್ರನಿಗೆ ಸಹಾಯಮಾಡಿದಾಗ ಸರಸ್ವತಿಯು ಅವನ ದಣಿವಾರಿಸಿದ್ದಾಳೆ (೧೦-೧೩೧-೫). ದೇವತೆಗಳು ಯಾಗಮಾಡಿದಾಗ, ಅಶ್ವಿನಿಗಳು ತಮ್ಮ ವೈದ್ಯವೃತ್ತಿಯಿಂದಲೂ ಸರಸ್ವತಿಯು ತನ್ನ ವಾಕ್ಕಿನಿಂದಲೂ ಇಂದ್ರನಿಗೆ ಚೈತನ್ಯವನ್ನುಂಟುಮಾಡಿದರು. (ವಾ. ಸಂ. ೧೯-೧೨). ಸರಸ್ವತಿಯು ಅಶ್ವಿನಿಗೆ ಪತ್ನಿ (ವಾ. ಸಂ. ೧೯-೯೪) ಆಪ್ರಿಸೂಕ್ತದಲ್ಲಿ ಎಂಟು ಮತ್ತು ಒಂಭತ್ತನೆಯ ಋಕ್ಕುಗಳಲ್ಲಿ ಇಳಾ ಮತ್ತು ಭಾರತಿಗಳೊಡನೆ ಅನೇಕಸಲ ಜೊತೆಗೂಡಿಸಲ್ಪಟ್ಟಿದಾಳೆ; ಮೂರು ಜನರೂ ಸೇರಿ ದೇವತಾತ್ರಯವೆಂದು ಭಾವನೆ; ಒಂದೊಂದುವೇಳೆ ಮಹೀ ಮತ್ತು ಹೋತ್ರಾ ಇವರೊಡನೆಯೂ ಸೇರಿರುವುದುಂಟು. ಈ ಸಂಯೋಜನೆಯು ಸರಸ್ವತಿಯ ಪವಿತ್ರತೆಯನ್ನು ಸೂಚಿಸಬಹುದು. ಸರಸ್ವತಿ ಮತ್ತು ದೃಷದ್ವತಿಗಳ ತೀರದಲ್ಲಿ ಅಗ್ನಿಯು ಉದ್ದೀಪ್ತನಾದನು. (೩-೨೩-೪). ಋಷಿಗಳು ಸರಸ್ವತಿಯ ದಡದಲ್ಲಿ ಯಾಗಮಾಡಿದರು. (ಐ. ಬ್ರಾ. ೨-೧೯)

ಋಗ್ವೇದದಲ್ಲಿ ಸರಸ್ವತಿಯು ನದೀದೇವತೆಯೇ ಹೊರತು, ಬೇರೆ ಯಾವ ಗುಣವೂ ಹೇಳಲ್ಪಟ್ಟಿಲ್ಲ. ಆದರೆ ಬ್ರಾಹ್ಮಣಗಳಲ್ಲಿ ಸರಸ್ವತಿಯು ವಾಗಭಿಮಾನಿದೇವತೆ (ಶ. ಬ್ರಾ. ೩-೯-೧-೭ ; ಐ. ಬ್ರಾ. ೩-೧-೧೦) ; ಪುರಾಣಾದಿಗಳಲ್ಲಿ ಜ್ಞಾನ ಮತ್ತು ವಾಕ್ಪಟುತ್ವ ಇವುಗಳಿಗೆ ಅಭಿಮಾನದೇವತೆ ಮತ್ತು ಬ್ರಹ್ಮನ ಪತ್ನಿ.

ಸರಸ್ವತೀನದಿಯು ಯಾವುದೆಂಬುದು ಸ್ಪಷ್ಟವಾಗಿ ಹೇಳಲಾಗುವುದಿಲ್ಲ. ಕೆಲವು ಪಾಶ್ಚಾತ್ಯ ವಿದ್ವಾಂಸರು, ಸರಸ್ವತಿಯು ಒಂದು ದೊಡ್ಡ ನದಿಯಿರಬೇಕು. (ಪ್ರಾಯಶಃ ಸಿಂಧು ನದಿ) ಎಂದು ಅಭಿಪ್ರಾಯಪಡುತ್ತಾರೆ. ಮತ್ತೆ ಕೆಲವರು ಮಧ್ಯಪ್ರದೇಶದಲ್ಲಿರುವ ಸಣ್ಣ ನದಿಯೇ ಇದ್ದಿರಬೇಕು, ಈಗ ಅದು ಮರಳಿನಲ್ಲಿ ಇಂಗಿಹೋಗಿ, ಸಮುದ್ರವನ್ನು ಸೇರದಿದ್ದರೂ, ಹಿಂದೆ ದೊಡ್ಡ ನದಿಯಾಗಿದ್ದು, ಸಮುದ್ರವನ್ನು ಸೇರುತ್ತಿತ್ತು ಎಂದು ಹೇಳುತ್ತಾರೆ. ಶುತುದ್ರಿಯ ಉಪನದಿಯೇ ಸರಸ್ವತಿಯೆಂದೂ ಕೆಲವರು ಹೇಳುತ್ತಾರೆ.

ಸರಸ್ವತ್ ಎಂಬ ಒಂದೇವತೆಯೆಂದು, ಸರಸ್ವತಿಯ ಸ್ತುತಿಯಾದ ಮೇಲೆ ಒಂದು ಸೂಕ್ತದ ಎರಡನೆಯ ಮತ್ತು ಮೂರನೆಯ ಋಕ್ಕುಗಳಲ್ಲಿ ಸ್ತುತವಾಗಿದೆ; ಇಲ್ಲಿ ಭಾರ್ಯೆಯರು, ಸಂತತಿ, ರಕ್ಷಣೆ ಮತ್ತು ಸಮೃದ್ಧಿಗಳು ಪ್ರಾರ್ಥಿತವಾಗಿವೆ (೭-೯೬).

## ಪೃಥ್ವೀ

ಪೃಥ್ವಿಯು (ಭೂಮಿಯು) ಸಾಧಾರಣವಾಗಿ ದ್ಯುದೇವತೆಯೊಡನೆ ದ್ವಂದ್ವದೇವತೆಯಾಗಿಯೇ ಸ್ತುತ
ವಾಗಿರುವುದು. ಪೃಥ್ವಿಯೊಂದನ್ನೇ ಸ್ತುತಿಸುವುದು ಒಂದೇ ಒಂದು, ಮೂರು ಋಕ್ಕಿನ ಸಣ್ಣ ಸೂಕ್ತ (೫-೮೪).
ಅಥರ್ವ ವೇದದಲ್ಲಿ ಒಂದು ದೊಡ್ಡ ಸೂಕ್ತವು ಪೃಥ್ವೀ ದೇವತಾಕವಾದುದು ಇದೆ (ಅ. ವೇ. ೧೨-೧). ವ್ಯಕ್ತೀ
ಕರಣವು ಬಹಳ ಅಲ್ಪ; ದೇವತೆಯ ಲಕ್ಷಣಗಳೆಲ್ಲವೂ ಭೌತಿಕವಾದುವು. ಉನ್ನತ ಪ್ರದೇಶಗಳು ಅನೇಕ ಇವೆ.
ಪರ್ವತಗಳ ಭಾರವನ್ನು ಹೊತ್ತಿದಾಳೆ; ಕಾಡಿನಲ್ಲಿರುವ ವೃಕ್ಷಗಳಿಗೆ ಆಧಾರಭೂತಳು (ಕ್ಷಮಾ). ಭೂಮಿ
ಯನ್ನು ಫಲವತ್ತಾಗಿ ಮಾಡುತ್ತಾಳೆ; ಮಳೆಯನ್ನು ಹರಡುತ್ತಾಳೆ; ದೊಡ್ಡವಳು, ದೃಢವಾಗಿದಾಳೆ; ಮತ್ತೆ
ಪ್ರಕಾಶಯುಕ್ತಳು,

ಪೃಥ್ವೀ ಎಂದರೆ ವಿಸ್ತಾರವಾದುದು ಎಂದರ್ಥ. ಇಂದ್ರನು ಭೂಮಿಯನ್ನು ಎತ್ತಿಹಿಡಿದನು. ಮತ್ತು (ತೈ. ಸಂ. ೭-೧-೫ ; ತೈ. ಬ್ರಾ. ೧-೧-೩-೫) ಅದನ್ನು ವಿಸ್ತರಿಸಿದನು (ಪಪ್ರಥಚ್. ೨-೧೫-೨). ಇತರ ಕಡೆಗಳಲ್ಲೂ ಪೃಥ್ವೀಪದವು ಪ್ರಥ್ (ವಿಸ್ತರಿಸು) ಎಂಬ ಧಾತುವಿನಿಂದಲೇ ನಿಷ್ಪತ್ತಿ ಮಾಡಲ್ಪಟ್ಟಿದೆ.



CC-0. Jangamwadi Math Collection. Digitized by eGangotri

ಪೃಥ್ವಿಯನ್ನು ಪ್ರೇಮಸ್ವರೂಪಳಾದ ಪೃಥ್ವೀಮಾತೆಯೆಂತಲೂ, ಮೃತನಾದವನು ಆಕೆಯ ಹತ್ತಿರಕ್ಕೆ ಹೋಗುತ್ತಾನೆಂತಲೂ ಹೇಳಿದೆ (೧೦-೧೮-೧೦). ದ್ಯುದೇವತೆಯ ಜೊತೆಯಲ್ಲಿ ಹೇಳಿದಾಗಲೆಲ್ಲಾ, ಪೃಥ್ವಿಗೆ ಸಾಧಾರಣವಾಗಿ ಮಾತೆಯೆಂದು ಉಕ್ತವಾಗಿದೆ.

## ಅಗ್ನಿ

ವೇದಗಳಲ್ಲಿ ಕರ್ಮಸಂಬಂಧವಾದ ಮಂತ್ರಗಳಿಗೆಲ್ಲಾ ಮುಖ್ಯೋದ್ದೇಶವಾದ ಅಗ್ನಿಯು ದೇವತೆಯಾದುದರಿಂದ, ಅಗ್ನಿಯೇ ಭೂದೇವತೆಗಳಲ್ಲೆಲ್ಲಾ ಮುಖ್ಯನು. ವೇದಗಳ ದೇವತೆಗಳಲ್ಲಿ, ಇಂದ್ರನ ನಂತರ ಪ್ರಮುಖ ದೇವತೆಯೆಂದರೆ ಅಗ್ನಿಯೇ. ಇನ್ನೂರಕ್ಕಿಂತ ಹೆಚ್ಚು ಸೂಕ್ತಗಳೂ, ಇನ್ನೂ ಅನೇಕ ಸೂಕ್ತಭಾಗಗಳೂ ಅಗ್ನಿಯನ್ನು ಸ್ತುತಿಸುತ್ತವೆ

ಅಗ್ನಿಯೆಂಬುದು ಬೆಂಕಿಯ ಸರಿಯಾದ ಹೆಸರಾದುದರಿಂದ, ಮನುಷ್ಯತ್ವಾರೋಪವು ಬಹಳ ಪ್ರಾರಂಭದೆಸೆಯಲ್ಲಿದೆ. ಅಗ್ನಿಯ ಅಂಗಾಂಗ ವರ್ಣನೆಯೆಲ್ಲವೂ, ಹೋಮಾಗ್ನಿಯ ನಾನಾ ಅಂಶಗಳನ್ನು ಪ್ರತಿಬಿಂಬಿಸುತ್ತದೆ. ಅವನಿಗೆ ಘೃತಮಯವಾದ ಬೆನ್ನುಭಾಗವೂ (೫-೪-೩ ; ಇತ್ಯಾದಿ), ಘೃತಮಯವಾದ ಮುಖವೂ (೩-೧-೧೮ ; ಇತ್ಯಾದಿ) ಮತ್ತು ಸುಂದರವಾದ ನಾಲಿಗೆಯೂ (೧-೧೪-೭) ಇವೆ. ಅವನಿಗೆ ಘೃತವೇ ಕೇಶ (೮-೪೯-೨), ಜ್ವಾಲೆಯೇಕೇಶ (೧-೪೫-೬ ; ಇತ್ಯಾದಿ) ಅಥವಾ ಕಂದುಬಣ್ಣದ ಕೂದಲು (೩-೨-೧೩), ಮತ್ತು ಕಂದುಬಣ್ಣದ ಗಡ್ಡ (೫-೭-೭). ಅವನಿಗೆ ಚೂಪಾದ (೮-೪೯-೩ ; ಇತ್ಯಾದಿ) ಅಥವಾ ಜ್ವಲಿಸುತ್ತಿರುವ ದವಡೆ (೧-೫೮-೫ ; ಇತ್ಯಾದಿ), ಬಂಗಾರದ (೫-೨-೩) ಅಥವಾ ಥಳಥಳಿಸುವ ಹಲ್ಲುಗಳು (೫-೭-೪) ಮತ್ತು ಕಬ್ಬಿಣದ ದವಡೆ ಹಲ್ಲುಗಳು (೧೦-೮೭-೨). ಅವನಿಗೆ ಕಾಲುಗಳು ಮತ್ತು ತಲೆಯಿಲ್ಲವೆಂದು ಒಂದು ಕಡೆ (೪-೧-೧೧) ಹೇಳಿದೆ; ಆದರೆ ಇತರ ಸ್ಥಳಗಳಲ್ಲಿ ಅವನಿಗೆ ಉರಿಯುತ್ತಿರುವ ತಲೆ (೭-೩-೧) ಅಥವಾ ಮೂರು ತಲೆಗಳು ಮತ್ತು ಏಳು ಕಿರಣಗಳು (೧-೧೪೬-೧ ; ೨-೫-೩) ಎಂದು ಹೇಳಿದೆ. ಅವನು ವಿಶ್ವತೋಮುಖನು (೨-೩-೧ ; ಇತ್ಯಾದಿ). ಅವನ ನಾಲಗೆಯು ಅನೇಕ ಸ್ಥಳಗಳಲ್ಲಿ ಉಕ್ತವಾಗಿದೆ (೮-೬೧-೧೮ ; ಇತ್ಯಾದಿ) ಅವನಿಗೆ ಮೂರು (೩-೨೦-೨) ಅಥವಾ ಏಳು (ವಾ. ಸಂ. ೧೭-೭೯) ನಾಲಗೆಗಳು. ಅವನ ಅಶ್ವಗಳಿಗೂ ಏಳು ನಾಲಗೆಗಳು (೩-೬-೨) ಈ ಏಳಕ್ಕೂ ಒಂದೊಂದು ಹೆಸರಿಡಲ್ಪಟ್ಟದೆ ಘೃತವೇ ಅಗ್ನಿಯ ನೇತ್ರ (೩-೨೬-೭) ; ಅವನಿಗೆ ನಾಲ್ಕು (೧-೩೧-೧೩) ಸಾವಿರ (೧-೭೯-೧೨) ಕಣ್ಣುಗಳು ಮತ್ತು ಸಾವಿರ ಕೊಂಬುಗಳು (೬-೧-೮). ಅವನ ರಥಗಳಲ್ಲಿ ಮನುಷ್ಯರಿಗೋಸ್ಕರ ಅನೇಕ ಬಹುಮಾನಗಳು ಸದಾ ಇರುತ್ತವೆ (೧-೭೨-೧). ಅವನು ಒಬ್ಬ ಧನುರ್ಧಾರಿ (೪-೪-೧) ಅಥವಾ ಅವನನ್ನು ಧನುರ್ಧಾರಿಗೆ ಹೋಲಿಸಿದೆ (೧-೭೦-೧೧) ; ಅವನು ತನ್ನ ಜ್ವಾಲೆಯನ್ನು ಕಬ್ಬಿಣದ ಅಲುಗಿನಂತೆ ಹದ ಮಾಡುತ್ತಾನೆ (೬-೩-೫).

ಅನೇಕ ಸಲ, ಅಗ್ನಿಯನ್ನು ನಾನಾ ಪ್ರಾಣಿಗಳಿಗೆ ಹೋಲಿಸಿರುವುದು, ಪ್ರಾಯಶಃ ಅವನ ನಾನಾ ಕಾರ್ಯಗಳನ್ನು ಸೂಚಿಸುವುದಕ್ಕಾಗಿಯೇ ಹೊರತು, ಅವನ ರೂಪವನ್ನು ವರ್ಣಿಸುವುದಕ್ಕಿರಲಾರದು. ಪದೇ ಪದೇ ಅವನನ್ನು ವೃಷಭ ಎಂದು ಕರೆದಿದಾರೆ (೧-೫೮-೫ ; ಇತ್ಯಾದಿ). ಸ್ಥೂಲವಾದ ಕುತ್ತಿಗೆಯುಳ್ಳ, ಮಹಾ ಬಲಿಷ್ಠನಾಗಿರುವ ವೃಷಭ (೫-೨-೧೨). ಆದರಿಂದಲೇ, ಅವನು ಗುಟುರು ಹಾಕುತ್ತಾನೆ (೧೦-೮-೧), ಅಧಿಕವಾಗಿ ರೇತೋವಿಶಿಷ್ಟನು (೪-೫-೩) ; ಕೊಂಬುಗಳವೆ (೫-೧-೮ ; ೬-೧೬-೩೯) ; ಆ ಕೊಂಬುಗಳನ್ನು ಮಸೆಯುತ್ತಾನೆ (೮-೪೯-೧೩) ಮತ್ತು ಆಡಿಸುತ್ತಾನೆ. ಅವುಗಳಿರುವುದರಿಂದಲೇ, ಅವನನ್ನು ಹಿಡಿಯುವುದು ಕಷ್ಟವಾಗಿದೆ (೧-೧೪೦-೬) ಎಂದು ಮುಂತಾಗಿ ಹೇಳಿರುವುದು. ಜನಿಸಿದಾಗ ಕರು (ವತ್ಸ)ವಾಗಿದ್ದನೆಂದು ಅನೇಕ ಸಲ ಹೇಳ



CC-0. Jangamwadi Math Collection. Digitized by eGangotri

ಲ್ಪಟ್ಟಿದೆ. ಅನೇಕ ಸ್ಥಳಗಳಲ್ಲಿ ಅಗ್ನಿಯು ಅಶ್ವಕ್ಕೆ ಹೋಲಿಸಲ್ಪಟ್ಟಿದಾನೆ (೧-೫೮-೨; ಇತ್ಯಾದಿ) ಅಥವಾ ಅಶ್ವವೆನ್ನಿಸಿಕೊಂಡಿದಾನೆ (೧-೧೪೯-೩; ೬-೧೨-೬). ಅವನು ಅಶ್ವದಂತೆ (೨-೪-೪) ಅಡಿಸುವ ಬಾಲವು ಜ್ವಾಲೆಯಿರಬೇಕು. ಯಾಗಕರ್ತೃಗಳಿಂದ ಶುದ್ಧಿಮಾಡಲ್ಪಟ್ಟ ಅಗ್ನಿಯು ಚೆನ್ನಾಗಿ ಮಾಲೀಸು ಮಾಡಿದ ಕುದುರೆಗೆ ಹೋಲಿಸಲ್ಪಟ್ಟಿದಾನೆ (೧-೬೦-೫; ಇತ್ಯಾದಿ). ಯಾಗಮಾಡುವವರು ಅವನನ್ನು ಕುದುರೆಯಂತೆ, ನಡೆಯಿಸುತ್ತಾರೆ (೩-೨-೭), ಉದ್ರೇಕಗೊಳಿಸುತ್ತಾರೆ ಮತ್ತು ಚಲಿಸುವಂತೆ ಮಾಡುತ್ತಾರೆ (೭-೭-೧ ಇತ್ಯಾದಿ). ಅವರು ತಮ್ಮ ವಶಪಡಿಸಿಕೊಂಡು ತಮ್ಮ ಇಚ್ಛೆಬಂದಂತೆ ನಡೆಸಲು ಅಪೇಕ್ಷಿಸುವ ಕುದುರೆಯು ಅಗ್ನಿಯೇ. (೨-೫-೧; ೩-೨೭-೩). ದೇವತೆಗಳನ್ನು ತರುವ ಅಶ್ವವೆಂದು ಅವನನ್ನು ಹುರಿದುಂಬಿಸುತ್ತಾರೆ (೩-೨೭-೧೪). ಯಾಗಶಾಲೆಗಳಲ್ಲಿ ಯೂಪಗಳಿಗೆ (೨-೨-೧) ಅಥವಾ ಯಜ್ಞಾಂಗವಾದ ಕರ್ಮದಲ್ಲಿ ಯೂಪಕ್ಕೆ (೧-೧೪೩-೭) ಅಗ್ನಿಯನ್ನು ಸಂಯೋಜನೆ ಮಾಡಿದಾರೆ. ದೇವತೆಗಳಿಗೆ ಹುತವಾದುದನ್ನು ಒಯ್ಯುವುದಕ್ಕೋಸ್ಕರ ಅಗ್ನಿಯನ್ನು (ಅಶ್ವವನ್ನು) ಹೂಡುತ್ತಾರೆ (೧೦-೫೧-೭). ಕೆನೆಯುತ್ತಿರುವ ಕುದುರೆಗೆ ಹೋಲಿಸಿದೆ (೩-೨೬-೩) ಅಥವಾ ಅವನೇ ಕೆನೆಯುತ್ತಿರುವ ಕುದುರೆ (೧-೩೬-೮) ಎಂದಿದೆ ಜಯಗಳಿಸಿದ ಕುದುರೆಯಂತೆ ಇದಾನೆ (೮-೯೧-೧೨); ಅಥವಾ ಜನಗಳಿಗೆ, ಅಪಾಯದಿಂದ ತಪ್ಪಿಸಿಕೊಳ್ಳಲು ಸಹಾಯಮಾಡಿದಾನೆ (೪-೨-೮). ಇವುಗಳಲ್ಲದೇ ಅಗ್ನಿಯು ಒಂದು ಪಕ್ಷಿಯಂತಿದಾನೆ. ಅವನೇ ಆಕಾಶದ ಗಿಡುಗ (೭-೧೫-೪) ಮತ್ತು ಒಂದು ದೇವಲೋಕದ ಪಕ್ಷಿ (೧-೧೬೪-೫೨). ನೀರಿನಲ್ಲಿ ಮನೆಮಾಡಿಗೊಂಡಿರುವ ಇವನು ಹಂಸಪಕ್ಷಿಯಂತಿದಾನೆ (೧-೬೫-೯). ಗಿಡದ ಮೇಲೆ ಹಕ್ಕಿಯು ಗೂಡು ಕಟ್ಟುವಂತೆ, ಅಗ್ನಿಯೂ ಕಾಡನ್ನು ವಶಪಡಿಸಿಕೊಳ್ಳುತ್ತಾನೆ (೧-೬೬-೨; ೬-೩-೫; ೧೦-೯೧-೨). ಅವನಿಗೆ ರೆಕ್ಕೆಗಳಿವೆ (೧-೫೮-೫; ೨-೨-೪) ಮತ್ತು ಅವನ ಗಮನವು ಹಾರಿಕೆ (೬-೩-೭; ೬-೪-೬ ಇತ್ಯಾದಿ). ವೇಗವಾಗಿ ಹಾರಿ ದೇವತೆಗಳನ್ನು ಸಮೀಪಿಸುತ್ತಾನೆ (೧೦-೬-೪). ಒಂದು ಸಲ ಅವನನ್ನು ಬುಸುಗುಟ್ಟುತ್ತಿರುವ ಸರ್ಪವೆಂದೂ ವರ್ಣಿಸಿದೆ (೧-೭೯-೧).

ಪದೇಪದೇ ನಿರ್ಜೀವ ಪ್ರಾಣಿಗಳಿಗೂ ಅಗ್ನಿಯು ಹೋಲಿಸಲ್ಪಟ್ಟಿದಾನೆ. ಸೂರ್ಯನಂತೆ, ಅಗ್ನಿಯೂ ಸುವರ್ಣವನ್ನು ಹೋಲುತ್ತಾನೆ (೨-೨-೪; ೭-೩-೬). ನಾಲಗೆಯನ್ನು ಚಾಚಿದಾಗ, ಅವನು ಕೈಗೊಡಲಿಯಂತಿರುತ್ತಾನೆ (೬-೩-೪; ೧-೧೨೭-೩ ಇತ್ಯಾದಿ). ಅವನೇ ಒಂದು ರಥ (೩-೧೧-೫) ಅಥವಾ ರಥದಂತಿದಾನೆ (೧-೧೪೧-೮ ಇತ್ಯಾದಿ); ಐಶ್ವರ್ಯಾದಿಗಳನ್ನು ತರುತ್ತಾನೆ (೧-೫೮-೩; ೩-೧೫-೫) ಅಥವಾ ಯುದ್ಧದಲ್ಲಿ ಎದುರಿಸಲಸಾಧ್ಯನು (೧-೬೬-೬). ಇತರರಿಂದ ನಡೆಸಲ್ಪಡುವ, ತುಂಬಿದ ರಥದಂತೆ, ಇವನೂ ಯಾಗಶಾಲೆಗೆ ಸಾಗಿಸಲ್ಪಡುತ್ತಾನೆ (೧೦-೧೭೬-೩). ಐಶ್ವರ್ಯ (೧-೫೮-೬, ೧-೬೦-೧) ಅಥವಾ ಪಿತ್ರಾರ್ಜಿತವಾಗಿ ಬಂದ ಐಶ್ವರ್ಯಕ್ಕೆ (೧-೭೩-೧) ಉಪಮಿತನಾಗಿದಾನೆ.

ಆಹಾರ ಮತ್ತು ಕರಗಿಸಿದ ಬೆಣ್ಣೆಯೇ ಅವನ ... ವನ (೨-೭-೬) ಅಥವಾ ಘೃತವು (೭-೩-೧) ಅವನ ಪಾನೀಯ (೨-೭-೬; ೧೦-೬೯-೨) ಅವನ ಬಾಯೊಳಗೆ ಸುರಿದ ತುಪ್ಪದಿಂದ ಪುಷ್ಟಿಹೊಂದುತ್ತಾನೆ (೩-೨೧-೧, ೫-೧೧-೩, ಇತ್ಯಾದಿ) ಮತ್ತು ಎಣ್ಣೆಯನ್ನು ಸೇವಿಸುತ್ತಾನೆ (ಅ. ವೇ. ೧-೭-೨). ತನ್ನ ಹರಿತವಾದ ಹಲ್ಲುಗಳಿಂದ ಕಾಡುಗಳನ್ನು ಅಗಿದು, ತಿನ್ನುತ್ತಾನೆ ಮತ್ತು ತನ್ನ ನಾಲಗೆಯಿಂದ ಕಪ್ಪಾಗಿ ಮಾಡುತ್ತಾನೆ (೧-೧೪೩-೫; ೬-೬೦-೧೦; ೧೦-೭೯-೨). ಅವನು ಸರ್ವಭಕ್ಷಕ. (೮-೪೪-೨೬). ದಿನಕ್ಕೆ ಮೂರುಸಲ ಪುಷ್ಟಿಕರವಾದ ಆಹಾರವನ್ನು ಸೇವಿಸುತ್ತಾನೆ (೪-೧೨-೧, ೧-೧೪೦-೨; ೭-೧೧-೩ಗಳನ್ನು ಹೋಲಿಸಿ). ದೇವತೆಗಳು ಹೋಮದ್ರವ್ಯವನ್ನು ಸ್ವೀಕರಿಸಲು, ಅಗ್ನಿಯೇ ಮುಖ ಮತ್ತು ನಾಲಗೆ (೨-೧-೧೩ ಮತ್ತು ೧೪); ದೇವತೆಗಳಿಗೆ



CC-0. Jangamwadi Math Collection. Digitized by eGangotri

ಆಹಾರಕೊಡುವ ಚಮಚಗಳು ಇವನ ಜ್ವಾಲೆಗಳೇ (೧-೭೬-೫; ೧೦-೬-೪). ಆದರೆ, ವಿಶೇಷವಾಗಿ, ಹೋಮ ದ್ರವ್ಯಗಳನ್ನು ಸ್ವೀಕರಿಸಬೇಕೆಂದು ಪ್ರಾರ್ಥಿಸಿರುವುದು ಇವನನ್ನೇ (೩-೨೧-೧ರಿಂದ೪ : ೩-೨೮-೧ರಿಂದ೬) ನೆಟ್ಟಗೆ ನಿಂತಿರುವ, ಮತ್ತು ದೇವತೆಗಳಿಗಭಿಮುಖವಾದ ದೇಹವುಳ್ಳವನಾಗಿ, ಅರ್ಪಿತವಾದ ಘೃತವನ್ನು ಸ್ವೀಕರಿಸಲು ನುಗ್ಗಿಬರುತ್ತಾನೆ (೧-೧೨೭-೧). ಅಗ್ನಿಗೆ ಸಾಧಾರಣವಾಗಿ ಸೌದೆ ಅಥವಾ ಘೃತವೇ ಆಹಾರವಾದರೂ, ಒಂದೊಂದು ವೇಳೆ ಸೋಮಪಾನಕ್ಕೂ ಆಹ್ವಾನಿತನಾಗುತ್ತಾನೆ. ಅಂತಹ ಸಂದರ್ಭಗಳಲ್ಲೆಲ್ಲಾ ಇತರ ದೇವತೆಗಳೊಡನೆಯೇ ಅವನಿಗೆ ಆಹ್ವಾನ (೧-೧೪-೧೦, ೧-೧೯-೯, ೧-೨೧-೧ ಮತ್ತು ೩; ೨-೩೬-೪). ಅವನಿಗೆ ಸೋಮಗೋಪ (ಸೋಮವನ್ನು ರಕ್ಷಿಸುವವನು)ನೆಂದು ವಿಶೇಷಣವಿದೆ (೧೦-೪೫-೫ ಮತ್ತು ೧೨). ಯಾಗಕ್ಕೆ ಬರಬೇಕೆಂದೂ (೧೦-೯೮-೯), ಬಂದು ದೇವತೆಗಳೊಡನೆ ದರ್ಭಾಸನವನ್ನು ಅಲಂಕರಿಸಬೇಕೆಂದೂ (೩-೧೪-೨; ೫-೧೧-೨; ೫-೨೬-೫; ೭-೧೧-೨; ೭-೪೩-೩ನ್ನು ಹೋಲಿಸಿ) ಪ್ರಾರ್ಥಿತನಾಗಿದಾನೆ.

ಅಗ್ನಿಯ ಪ್ರಕಾಶವು ಬಹಳ ವಿಸ್ತಾರವಾಗಿ ಚರ್ಚಿಸಿರುವುದು ಸ್ವಾಭಾವಿಕವಾಗಿಯೇ ಇದೆ. ಅವನದು ಶುಭ್ರವಾದ ಕಾಂತಿ (೨-೧೦-೨ ಇತ್ಯಾದಿ); ಜಾಜ್ವಲ್ಯಮಾನವಾದ ಜ್ವಾಲೆಗಳು (೬-೧೦-೩); ಪ್ರಕಾಶಮಾನವಾದ ಜ್ವಾಲೆಗಳು (೭-೧೫-೧೦ ಇತ್ಯಾದಿ), ಸ್ಪಷ್ಟವಾದ ಉರಿ (೮-೪೩-೩೧), ಬೆಳಗುವ ಬಣ್ಣ (೧-೧೪೦-೧, ೫-೨-೩). ಅವನದು ಸುವರ್ಣವರ್ಣವಾದ ರೂಪ (೪-೩-೧, ೧೦-೨೦-೯). ಸೂರ್ಯನಂತೆ ಹೊಳೆಯುತ್ತಾನೆ (೧-೧೪೯-೩; ೭-೩-೬). ಅವನ ಪ್ರಭೆಯು ಉಷಸ್ಸಿನ, ಸೂರ್ಯನ ಅಥವಾ ಸಿಡಲಿನ ಕಿರಣಗಳಂತೆ (೧೦-೯೧-೪ ಮತ್ತು ೫). ರಾತ್ರಿಯಲ್ಲೂ ಪ್ರಕಾಶಿಸುತ್ತಾನೆ (೫-೭-೪). ಸೂರ್ಯನಂತೆ ತನ್ನ ಕಿರಣಗಳಿಂದ ಕತ್ತಲನ್ನು ಹೋಗಲಾಡಿಸುತ್ತಾನೆ (೮-೪೩-೩೨). ಅವನು ತಮೋ ನಿವಾರಣೆ ಮಾಡುವವನು ಮತ್ತು ರಾತ್ರಿಯ ಮಬ್ಬಿನಲ್ಲಿಯೂ ನೋಡಬಲ್ಲವನು (೧-೯೪-೫; ೭-೯-೨). ಉದ್ದೀಪ್ತನಾಗಿ, ಕತ್ತಲಿನ ಬಾಗಿಲನ್ನು ತೆರೆಯುತ್ತಾನೆ (೩-೫-೧). ಅಗ್ನಿಯು ಜನಿಸಿದಾಗ, ಅಂಧಕಾರವೃತವಾದ ಭೂಮಿಯೂ ಮತ್ತು ಆಕಾಶವೂ ಗೋಚರವಾಗುತ್ತವೆ. (೧೦-೮೮-೨). ಉಷಃಕಾಲದಲ್ಲಿ ಬೆಂಕಿಯನ್ನು ಹೊತ್ತಿಸುತ್ತಾರೆ; ಅಗ್ನಿಗೊಬ್ಬನಿಗೇ ಉಷರ್ಬುಧನೆಂದು ಹೆಸರು.

ಆದರೆ, ಅಗ್ನಿಯ ಸಂಚಾರಮಾರ್ಗ ಮತ್ತು ರಥನೇಮಿಗಳು, ಎಲ್ಲವೂ ಕಪ್ಪು ಬಣ್ಣ (೧-೧೪೧-೭; ೨-೪-೬ ಮತ್ತು ೭, ೬-೬-೧, ೭-೮-೨, ೮-೨೩-೧೯), ಅವನ ಕುದುರೆಗಳು ಕಪ್ಪಗಿರುವ ಜಾಡುಗಳನ್ನು ಮಾಡುತ್ತವೆ (೧-೧೪೦-೪). ಗಾಳಿಯಿಂದ ಚೇತನಗೊಳಿಸಲ್ಪಟ್ಟು, ಕಾಡುಗಳಲ್ಲಿ ರಭಸದಿಂದ ನುಗ್ಗುತ್ತಾನೆ (೧-೫೮-೪ ಮತ್ತು ೫); ಕಾಡುಗಳನ್ನು ಆಕ್ರಮಿಸಿ, ಭೂಮಿಯಕೇಶಗಳನ್ನೆಲ್ಲಾ ಛೇದಿಸುತ್ತಾನೆ (೧-೬೫-೮); ಕ್ಷುರಕನಂತೆ ಭೂಮಿಯ ಕೇಶ ಛೇದನ ಮಾಡುತ್ತಾನೆ (೧೦-೧೪೨-೪).

ಅವನ ಜ್ವಾಲೆಗಳು ಸಮುದ್ರದ ಅಲೆಗಳಂತೆ ಭೋರ್ಗರೆಯುತ್ತವೆ. (೧-೪೪-೧೨) ಅವನ ಧ್ವನಿಯು ಗಾಳಿಯ ಶಬ್ದದಂತೆ ಅಥವಾ ಆಕಾಶದ ಗುಡುಗಿನಂತೆ (೫-೨೫-೮; ೭-೩-೬) ಆಕಾಶದಂತೆ (೧೦-೪೫-೪); ಅಥವಾ ಪರ್ಜನ್ಯನಂತೆ (೮-೯೧-೫) ಅಥವಾ ಸಿಂಹದಂತೆ (೩-೨-೧೧) ಗರ್ಜಿಸುತ್ತಾ ಕಾಡಿನ ಮರಗಳನ್ನು ಆಕ್ರಮಿಸಿದಾಗ ಗೂಳಿಯಂತೆ ಆರ್ಭಟಿಸುತ್ತಾನೆ ಮತ್ತು ಹುಲ್ಲನ್ನು ನಾಶಮಾಡುವ ಅವನ ಕಿಡಿಗಳು ಹಾರುವ ಶಬ್ದಕ್ಕೆ ಹಕ್ಕಿಗಳೆಲ್ಲಾ ಬೆದರುತ್ತವೆ. (೧-೯೪-೧೦ ಮತ್ತು ೧೧) ಅಗ್ನಿಯನ್ನು ಹತೋಟಿಗೆ ತರುವುದು (೧-೧೪೩-೫). ಮರುತ್ತುಗಳನ್ನು ಅಥವಾ ದಿಕ್ಕುಪಾಲಾಗಿ ಚದುರುತ್ತಿರುವ ಸೈನ್ಯವನ್ನು ಅಥವಾ ಸಿಡಿಲನ್ನು ಹತೋಟಿಗೆ ತರುವಷ್ಟೇ ಸುಲಭ.



CC-0. Jangamwadi Math Collection. Digitized by eGangotri

ಅಗ್ನಿಯು ಊರ್ಧ್ವಮುಖನಾಗಿ ಉರಿಯುತ್ತಾನೆ (೬-೧೫-೨). ಗಾಳಿಯಿಂದ ಉದ್ರೇಕಗೊಳಿಸಲ್ಪಟ್ಟು, ಅವನ ಜ್ವಾಲೆಗಳು ಆಕಾಶದ ಕಡೆಗೆ ಚಾಚಿಕೊಳ್ಳುತ್ತವೆ (೮-೪೩-೪). ಅವನ ಹೊಗೆಯು ಅಲುಗಾಡುತ್ತದೆ ಮತ್ತು ಅವನ ಜ್ವಾಲೆಯನ್ನು ಹಿಡಿಯಲಾಗುವುದಿಲ್ಲ (೮-೨೩-೧). ಕೆಂಪಾದ ಹೊಗೆಯು ಆಕಾಶದ ಕಡೆಗೆ ಹೋಗುತ್ತದೆ. [೭-೩-೩-; ೭-೧೬-೩] ಹೊಗೆಯು ಆಕಾಶದಲ್ಲಿ ಹರಡಿಕೊಳ್ಳುತ್ತದೆ (೬-೨-೬). ಸ್ತಂಭವನ್ನು ನಿಲ್ಲಿಸುವವನಂತೆ, ಅಗ್ನಿಯು ಧೂಮದಿಂದ ಆಕಾಶವನ್ನು ಬೀಳದಂತೆನಿಲ್ಲಿಸುತ್ತಾನೆ (೪-೬-೨). ತನ್ನ ಮೇಲ್ಭಾಗದಿಂದ ಮುಗಿಲನ್ನು ಮುಟ್ಟಿ, ಸೂರ್ಯರಶ್ಮಿಗಳೊಡನೆ ಬೆರೆಯುತ್ತಾನೆ (೭-೨-೧). ತನ್ನ ನಾಲಗೆಯಿಂದ ಅಂತರಿಕ್ಷವನ್ನಾವರಿಸುತ್ತಾನೆ (೮-೬೧-೧೮). ಧೂಮಕೇತುವೆನ್ನುವುದು ಅಗ್ನಿಗೆ ಪದೇ ಪದೇ ಪ್ರಯೋಗಿಸಲ್ಪಟ್ಟದೆ.

ಅಗ್ನಿಯು ಸಿಡಿಲಿನ (೩-೧೪-೧,) ತೇಜಃಪುಂಜವಾದ (೧-೧೪೦-೧), ಶುಭ್ರವಾದ (೧-೧೪೧-೧೨), ಹೊಳೆಯುವ (೫-೧-೧೧), ಉಜ್ವಲವಾದ (೧೦-೧-೫), ಸುವರ್ಣಮಯವಾದ (೪-೧-೮) ಅಥವಾ ರಮಣೀಯವಾದ (೪-೨-೪) ರಥದಲ್ಲಿ ಸಂಚರಿಸುತ್ತಾನೆ. ಅದಕ್ಕೆ ಎರಡು ಅಥವಾ ಹೆಚ್ಚು ಕುದುರೆಗಳು. ಆ ಕುದುರೆಗಳಿಗೆ ಬೆಣ್ಣೆಯಂತೆ ಬೆನ್ನು (೧-೧೪-೬); ಅವು ಕಂದುಬಣ್ಣ (೭-೪೨-೨); ಸುಂದರ (೪-೨-೨); ಸರ್ವವಿಧವಾದ ರೂಪಗಳು (೧೦-೭೦-೨); ಚುರುಕು (೨-೪-೨); ಗಾಳಿಯಿಂದ ಓಡಿಸಲ್ಪಡುತ್ತವೆ (೧-೯೪-೧೦) ಮತ್ತು ಇಚ್ಛಾಮಂತ್ರದಿಂದಲೇ ನಿಯುಕ್ತವಾಗುತ್ತವೆ (೧-೧೪-೬). ದೇವತೆಗಳನ್ನು ಕರೆಯುವುದಕ್ಕೋಸ್ಕರ ಅಗ್ನಿಯು ಅವುಗಳನ್ನು ಹೂಡುತ್ತಾನೆ (೧-೧೪-೧೨; ೩-೬-೬; ೮-೬೪-೧). ಯಜ್ಞದ (೧೦-೯೨-೧ ಇತ್ಯಾದಿ) ಸಾರಥಿ (೧-೨೫-೩ ಇತ್ಯಾದಿ). ಅಶ್ವಗಳಿಂದ ಯುಕ್ತವಾದ ರಥದಲ್ಲಿ ದೇವತೆಗಳನ್ನು ಕರೆತರುತ್ತಾನೆ (೩-೬-೯). ಅದೇ ರಥದಲ್ಲಿ ತಾನೂ ಬರುತ್ತಾನೆ (೩-೪-೧೧; ೭-೧೧-೧) ಅಥವಾ ಅವರಿಗಿಂತ ಮುಂಚೆಯೇ ಬರುತ್ತಾನೆ (೧೦-೭೦-೨). ಯಾಗಕ್ಕೆ ವರುಣನನ್ನೂ, ಆಕಾಶದಿಂದ ಇಂದ್ರನನ್ನೂ, ವಾಯುಮಂಡಲದಿಂದ ಮರುತ್ತಗಳನ್ನೂ ಕರತರುತ್ತಾನೆ (೧೦-೭೦-೧೧).

ದ್ಯುದೇವತೆಯೇ ಅಗ್ನಿಯ ಜನಕ; ಅವನೇ ಅಗ್ನಿಯನ್ನು ಉತ್ಪತ್ತಿಮಾಡಿದವನು (೧೦-೪೫-೮). ಅಗ್ನಿಯು ಆಕಾಶದ ಶಿಶು (೪-೧೫-೬; ೬-೪೯-೨), ಆ 'ಅಸುರ'ನ ಹೊಟ್ಟೆಯಿಂದ ಜನಿಸಿದನಂತೆ (೩-೨೯-೪). ದ್ಯಾವಾಪೃಥಿವಿಗಳ ಪುತ್ರನೆಂದು ಅನೇಕ ಸಲ (೩-೨-೨; ೩.೩-೧೧; ೩-೨೫-೧; ೧೦-೧-೨; ೧೦-೨-೭; ದ್ಯಾವಾಪೃಥಿವಿಗಳ ಪುತ್ರನೆಂದು ಅನೇಕ ಸಲ (೩-೨-೨; ೩.೩-೧೧; ೩-೨೫-೧; ೧೦-೧-೨; ೧೦-೨-೭; ಮತ್ತು ಅಬ್ದೇವತೆಗಳ, ಮತ್ತು ಸ್ವರ್ಗ ಮತ್ತು ಭೂಮಿಗಳ, ಪುತ್ರನೆಂದೂ
೧೦-೧೪೦-೨) ಹೇಳಿದೆ. ತ್ವಷ್ಟೃ ಮತ್ತು ಅಬ್ದೇವತೆಗಳ, ಮತ್ತು ಸ್ವರ್ಗ ಮತ್ತು ಭೂಮಿಗಳ, ಪುತ್ರನೆಂದೂ
(೧೦-೨-೭; ೧೦-೪೬-೯) ಹೇಳಿದೆ. ತ್ವಷ್ಟೃವಿನ (೧-೯೫-೨) ಅಥವಾ ಅಬ್ದೇವತೆಯ ಮಗ (೧೦-೯೧-೬;
ಅ. ವೇ. ೧-೩೩-೧). ಉಷೋದೇವಿಯರು ಅಗ್ನಿ, ಸೂರ್ಯ ಮತ್ತು ಯಜ್ಞಗಳನ್ನು (೭-೭೮-೩), ಅಥವಾ
ಇಂದ್ರಾವಿಷ್ಣುಗಳು, ಅಗ್ನಿ ಸೂರ್ಯ ಮತ್ತು ಉಷಸ್ಸುಗಳನ್ನು [೭-೯೯-೪] ಅಥವಾಇಂದ್ರನು ಎರಡು ಶಿಲೆಗಳ
ಮಧ್ಯೆ ಅಗ್ನಿಯನ್ನು (೨-೧೨-೩), ಉತ್ಪತ್ತಿ ಮಾಡಿದರೆಂದು ಹೇಳಿದೆ. ಅಗ್ನಿಯು ಇಳೆಯ ಮಗನೆಂದೂ
(೩-೨೯-೩) ಅಥವಾ ಯಜ್ಞದ ಅಂಕುರವೆಂದೂ (೬-೪೮-೫) ಕರೆಯಲ್ಪಟ್ಟದಾನೆ. ಒಂದೊಂದು ಸಲ,
ಅಗ್ನಿಯು ದೇವತೆಗಳಿಂದ (೬-೭-೧; ೮-೯೧-೧೭), 'ಆರ್ಯ'ನಿಗೆ ಬೆಳಕಿಗೋಸ್ಕರ (೧-೫೯-೨) ಅಥವಾ
ಮನುಷ್ಯನಿಗೋಸ್ಕರ (೧೦-೪೬-೯) ಉತ್ಪತ್ತಿ ಮಾಡಲ್ಪಟ್ಟು ಮನುಷ್ಯರಲ್ಲಿ ನಿಹಿತನಾದನು (೧-೩೬-೧೦;
೨-೪-೩; ೬-೧೬-೧; ೮-೭೩-೨). ಅಗ್ನಿಯು ದೇವತೆಗಳಿಗೆ ತಂದೆಯು (೧-೬೯-೧). ಆಪಾತತಃ ಭಿನ್ನ
ವಾದ ಈ ಅಭಿಪ್ರಾಯಗಳು ದೃಷ್ಟಿಭೇದಗಳಿಂದ ಜನಿತವಾಗಿವೆಯೆಂಬದು ಸ್ಪಷ್ಟವಾದ ವಿಷಯ.

ಅಗ್ನಿ ಸಂಬಂಧವಾದ ಇತಿಹಾಸಗಳು ಅವನ ವಿಷಯವಾಗಿ ಹೆಚ್ಚಿಗೆ ಏನನ್ನೂ ತಿಳಿಸುವುದಿಲ್ಲ; ಯಜ್ಞಾಗ್ನಿಯಾಗಿ ಅವನು ಮಾಡುವ ಕಾರ್ಯವೊಂದೇ ಮುಖ್ಯವಾದುದು; ಇದಲ್ಲದಿದ್ದರೆ, ಅವನ ಜನನ, ರೂಪವಿಶೇಷಗಳು ಮತ್ತು ವಾಸಸ್ಥಳಗಳು ಇವುಗಳ ವಿಷಯವಾಗಿ ಅಲ್ಪಸ್ವಲ್ಪ ತಿಳಿದುಬರುತ್ತದೆ.





CC-0. Jangamwadi Math Collection. Digitized by eGangotri

ಅವನ ಜನನ ವಿಷಯವಾಗಿ ತಿಳಿದುಬರುವ ಭಿನ್ನಾಭಿಪ್ರಾಯಗಳು ನಿಜವಾಗಿ ಭಿನ್ನವಾದವುಗಳಲ್ಲ. ಜನ್ಮಸ್ಥಾನಗಳಿಗನುಸಾರವಾಗಿ ಬೇರೆ ಬೇರೆ ರೀತಿಯಾಗಿ ನಿರೂಪಣೆಯಿದೆ. ಅರಣಿಗಳಿಂದ ಮಥಿತನಾಗಿ ಭೂಮಿಯಲ್ಲಿ ಪ್ರತಿನಿತ್ಯವೂ ಜನಿಸುತ್ತಾನೆ (೩-೨೯-೨; ೩-೨೩-೨ ಮತ್ತು ೩; ೭-೧-೧; ೧೦-೭-೯). ಈ ಸಂದರ್ಭದಲ್ಲಿ ಅರಣಿಗಳೇ ಅವನ ಮಾತಾಪಿತೃಗಳು; ಮೇಲುಗಡೆಯ ಅರಣಿ ಪಿತೃವೆಂತಲೂ, ಕೆಳಗಡೆಯದು ಮಾತೃವೆಂತಲೂ ಗಣನೆ (೩-೨೯-೩) ಅಥವಾ, ಅವನಿಗೆ ಇಬ್ಬರು ತಾಯಿಯರು ಎಂದಿರುವುದರಿಂದ, ಅರಣಿಗಳೆರಡೂ ಅವನ ಜನನಿಯರು (೧-೩೧-೨). ಎರಡು ಕಾಷ್ಠಗಳೂ ಅವನನ್ನು 'ಅದೇ ಜನಿಸಿದ ಶಿಶುವಿನಂತೆ, ಉತ್ಪತ್ತಿಮಾಡುತ್ತಾರೆ; ಆದರೆ ಶಿಶುವನ್ನು ಹಿಡಿದುಕೊಳ್ಳುವುದು ಕಷ್ಟ (೫-೯-೩ ಮತ್ತು ೪). ಒಣಗಿದ ಕಟ್ಟಿಗೆಯಿಂದ, ದೇವತೆಯು ಜೀವಸಹಿತನಾಗಿ ಜನಿತನಾಗುತ್ತಾನೆ (೧-೬೮-೨). ಜನನವಾದ ಕೂಡಲೇ ಶಿಶುವು ಮಾತಾಪಿತೃಗಳನ್ನು ನುಂಗಿಬಿಡುತ್ತದೆ (೧೦-೭೯-೪). ಸ್ತನ್ಯಕೊಡಲಾರದ ತಾಯಿಯಿಂದ ಅಗ್ನಿಯು ಹುಟ್ಟುತ್ತಾನೆ (೧೦-೧೧೫-೧). ಈ ಅರಣಿ ಮಥನದಲ್ಲಿ ಮನುಷ್ಯರು ಉದ್ಯುಕ್ತರಾಗುವುದರಿಂದ, ಮನುಷ್ಯರು ಅಗ್ನಿಯನ್ನು ಹುಟ್ಟಿಸುತ್ತಾರೆ (೧-೬೦-೩; ೪-೧-೧; ೭-೧-೧); ಮೇಲುಗಡೆಯ ಕಾಷ್ಠವನ್ನು ಉಜ್ಜುವುದಕ್ಕೆ ಉಪಯುಕ್ತವಾಗುವ ಹತ್ತು ಬೆರಳುಗಳು ಹತ್ತು ಕನ್ಯೆಯರು (೧-೯೫-೨). ಈ ಮೇಲುಗಡೆಯ ಕಾಷ್ಠಕ್ಕೆ 'ಪ್ರಮಂಥ' ಎಂಬ ಹೆಸರಿದೆ (ಕರ್ಮಪ್ರದೀಪ ೧-೭೫).

ಅಗ್ನಿಮಥನಕ್ಕೆ ಬಹಳ ಬಲವನ್ನು ಪ್ರಯೋಗಿಸಬೇಕು. ಅದರಿಂದಲೇ ಅಗ್ನಿಗೆ 'ಸಹಸಃ ಸೂನುಃ, ಪುತ್ರಃ" (ಬಲದ ಪುತ್ರ ಎಂದು ಹೆಸರು ಬಂದಿರಬಹುದು. ಇದೇ ಅಭಿಪ್ರಾಯವೇ ಮುಂದಿನ ವಾಕ್ಯದಿಂದ ಸಮರ್ಥಿತವಾಗುತ್ತದೆ. "ಮನುಷ್ಯರಿಂದ ಬಲವಾಗಿ ಮಥನ ಮಾಡಲ್ಪಟ್ಟು, ಭೂಮಿಯ ಮೇಲೆ ಅಗ್ನಿಯು ಜನಿಸುತ್ತಾನೆ" (೬-೪೮-೫). ಅಗ್ನಿಮಥನವು ಸೂರ್ಯೋದಯಕ್ಕೆ ಮುಂಚೆ ನಡೆಯಬಾರದೆಂದು ಒಂದುಕಡೆ (ಮೈ. ಸಂ. ೧-೬-೧೦) ಹೇಳಿದೆ. ಪ್ರತಿನಿತ್ಯವೂ ಹುಟ್ಟುವುದರಿಂದ ಅಗ್ನಿಗೆ 'ಯವಿಷ್ಠ, ಯವಿಷ್ಠ್ಯ' (ಅತ್ಯಂತ ಕಿರಿಯವನು) ಎಂಬುದು ಸಾರ್ಥಕವಾಗಿದೆ. ಅವನ ಜನನಗಳು, ಪ್ರತಿಯೊಂದೂ, ಹಿಂದಿನ ಜನನಕ್ಕೆ ವಿರುದ್ಧವಾದುದು (೩-೧-೨೦). ವೃದ್ಧನಾದ ಅಗ್ನಿಯು, ಯುವಕನಾಗಿ ಪುನಃ ಜನಿಸುತ್ತಾನೆ (೨-೪-೫). ಈ ಅರ್ಥದಲ್ಲಿ, ಅವನಿಗೆ ವಯಸ್ಸಾಗುವುದೇ ಇಲ್ಲ (೧-೧೨೮-೨); ಅವನ ಹೊಸ ಪ್ರಕಾಶವು ಹಳೆಯದರಂತೆಯೇ ಇರುತ್ತದೆ (೬-೧೬-೨೧). ಇತರ ದೇವತೆಗಳಂತೆ, ಇವನೂ ಯುವಕ. ವಯಸ್ಸಾದವನೂ ಹೌದು. ಅವನೇ ಮೊದಲನೆಯ ಯಾಗಮಾಡಿದವನು (೩-೧೫-೪); ಆದುದರಿಂದ ಅವನಿಗಿಂತ ಹಿರಿಯನಾದ ಯಾಗಕರ್ತೃ ಬೇರೆ ಇಲ್ಲ (೫-೩-೫). ಮೊದಲಿನ ಉಷಸ್ಸುಗಳ ಅನಂತರ, ಅಗ್ನಿಯು ಪ್ರಕಾಶಿಸಿದನು (೧-೪೪-೧೦). ಪೂರ್ವೀಕರ ಯಾಗಗಳಲ್ಲಿ ಅಗ್ನಿಯ ಪಾತ್ರವು ಪದೇ ಪದೇ ಉಕ್ತವಾಗಿದೆ (೮-೪೩-೧೩; ಇತ್ಯಾದಿ). ಒಂದೇ ವಾಕ್ಯದಲ್ಲಿ ತೀರ ವಿರುದ್ಧವಾದ 'ಪುರಾತನ' ಮತ್ತು 'ಬಹಳ ಕಿರಿಯವನು' ಎಂಬ ಎರಡು ವಿಶೇಷಣಗಳು ಕಂಡುಬರುತ್ತವೆ (೧೦-೪-೧ ಮತ್ತು ೨).

ಸಾಧಾರಣವಾಗಿ ಅಗ್ನಿಯು ಕಾಡಿನಲ್ಲಿ ಜನಿಸಿದನೆಂದೇ ಹೇಳಿರುವುದು (೬-೩-೩; ೧೦-೭೯-೭); ವೃಕ್ಷಗಳ ಅಂಕುರವೆಂದೂ (೨-೧-೧೪; ೩-೧-೧೩) ಅಥವಾ ಗಿಡಗಳಲ್ಲಿ ಹಂಚಲ್ಪಟ್ಟಿರುವನೆಂದೂ (೧೦-೧-೨) ಹೇಳಿದೆ. ಎಲ್ಲಾ ವೃಕ್ಷಗಳನ್ನೂ ಅಗ್ನಿಯು ಪ್ರವೇಶಿಸಿರುವನು ಅಥವಾ ಅವುಗಳನ್ನು ಪಡೆಯಲು ಪ್ರಯತ್ನಿಸುವನು (೮-೪೩-೯), ವೃಕ್ಷಗಳ (೧-೭೦-೪) ಅಥವಾ ಗಿಡಮರಗಳ (೨-೧-೧) ಅಂಕುರ. ಅಗ್ನಿಯು ಮರಗಳ ಪರಸ್ಪರ ಘರ್ಷಣದಿಂದ ಜನಿಸುವುದರಿಂದ ಹೀಗೆ ಹೇಳಿರಬಹುದು.



CC-0. Jangamwadi Math Collection. Digitized by eGangotri

ಅಗ್ನಿಯು ಭೂಮಿಯಲ್ಲಿರುವನೆಂಬುದಕ್ಕೆ ಮತ್ತೊಂದು ಆಧಾರವಿದೆ. ಅಗ್ನಿಗೆ 'ಪೃಥಿವ್ಯಾ ನಾಭಿಃ' (ಭೂಮಿಯ ನಾಭಿ) ಎಂದು ಹೇಳಿದೆ. (೧-೫೯-೨) ಅಗ್ನಿಗೆ ಈ ಪದಗಳ ಪ್ರಯೋಗವಿರುವ ಕಡೆಯಲ್ಲೆಲ್ಲಾ, ಯಜ್ಞಾಗ್ನಿಗಾಗಿ ರಚಿಸುವ ವೇದಿಕೆಗೇ ನಿರ್ದೇಶವಿರಬಹುದು. ವೈದಿಕ ಕರ್ಮಗಳಲ್ಲಿ, ಉತ್ತರವೇದಿಯಲ್ಲಿರುವ ಕುಳಿಗೆ 'ನಾಭಿ' ಎಂದು ಹೆಸರು. ಇಲ್ಲೇ ಅಗ್ನಿಯನ್ನು ಸ್ಥಾಪಿಸುವುದು. ದೇವತೆಗಳೆಲ್ಲಾ ಅಗ್ನಿಯನ್ನೇ ಅಮರತ್ವಕ್ಕೆ ಕೇಂದ್ರವನ್ನಾಗಿ ಮಾಡಿದುದರಿಂದಲೂ ಈ ಹೆಸರು ಬಂದಿರಬಹುದು (೩-೧೭-೪). ಋಗ್ವೇದದಲ್ಲಿ ಎರಡೇ ಸಲ 'ವೇದಿಷದ್' (ವೇದಿಯಲ್ಲಿ ಕುಳಿತಿರುವವನು) ಎಂಬುದು ಪ್ರಯುಕ್ತವಾಗಿರುವುದು; ಎರಡು ಕಡೆಯೂ ಅಗ್ನಿಗೇ ಅದು ಉಪಯೋಗಿಸಿದೆ.

ಅಂತರಿಕ್ಷದ ನೀರಿನಲ್ಲಿ ಅಗ್ನಿಯು ಜನಿಸಿದನೆಂದು ಅನೇಕ ಸಲ ಉಕ್ತವಾಗಿದೆ. 'ಅಪಾಂನಪಾತ್' ಎಂಬುದು ಒಂದು ಪ್ರತ್ಯೇಕ ದೇವತೆಯೇ ಆಗಿಹೋಗಿದೆ. ಅಗ್ನಿಯೂ ನೀರಿನ ಗರ್ಭ (ಅಪಾಂಗರ್ಭಃ ೩-೧-೧೨ ಮತ್ತು ೧೩); ನೀರಿನಲ್ಲೇ ಉದ್ದೀಪ್ತನಾಗುತ್ತಾನೆ (೧೦-೪೫-೧; ಅ. ವೇ. ೧೩-೧-೫೦); ನೀರಿನ ಮಡಿಲಲ್ಲಿ ಬೆಳೆದ ಒಂದು ವೃಷಭ (೧೦-೮-೧); ಅವನು ಸಾಗರದಿಂದ ಆವೃತ (೮-೯೧-೫). ಧನು (ಮೇಘಗಳ ದ್ವೀಪ) ವಿನಿಂದ ಇಳಿದು ಬಂದಿದಾನೆ; (೧-೧೪೪-೫; ೧-೧೦೪-೫) ತೇಜೋಮಯವಾದ ಅಂತರಿಕ್ಷದಲ್ಲಿರುವ ಹೊಳೆಯುವ ಮಿಂಚೇ ಅವನು (೬-೬-೨). ಇಂತಹ ವಾಕ್ಯಗಳಲ್ಲಿ ಸಿಡಿಲಿನರೂಪನಾದ ಅಗ್ನಿಯೇ ಲಕ್ಷ್ಯದಲ್ಲಿರಬೇಕು. ಹತ್ತನೆಯ ಮಂಡಲದ ಕೆಲವು ಭಾಗಗಳಲ್ಲಿ, ಅಗ್ನಿಯು ನೀರು ಮತ್ತು ಗಿಡಗಳಲ್ಲಿ ಅಡಗಿಕೊಂಡಿದ್ದು, ಆಮೇಲೆ ದೇವತೆಗಳಿಗೆ ಸಿಕ್ಕಿದನೆಂಬುದೊಂದು ಕಥೆಯಿದೆ (೧೦-೫೧, ೫೨, ೫೩, ೧೨೪ನೆಯ ಸೂಕ್ತಗಳು). ಬ್ರಾಹ್ಮಣಗಳಲ್ಲಿಯೂ ಇದೇ ಅಂಶ ಪ್ರಸ್ತುತವಾಗಿದೆ. ಅಥರ್ವವೇದದಲ್ಲಿ, ನೀರಿನಲ್ಲಿರುವ ಅಗ್ನಿಗೂ, ಸಿಡಿಲಿನ ಅಗ್ನಿಗೂ, ಸ್ವರ್ಗೀಯಾಗ್ನಿಗೂ ವ್ಯತ್ಯಾಸ ಹೇಳಿದೆ (ಅ. ವೇ. ೩-೨೧-೧ ಮತ್ತು ೭; ೮-೧-೧೧). ನೀರಿನಲ್ಲಿರುವ ಅಗ್ನಿಗಳು ಭೂಮಿಯಲ್ಲಿ ನೆಲಸಿದವು (ಅ. ವೇ. ೧೨-೧-೩೭). ಅಗ್ನಿಯು ಎಲ್ಲಾ ಪ್ರವಾಹಗಳಲ್ಲಿಯೂ ಮನೆಮಾಡಿಕೊಂಡಿದಾನೆ (೮-೫೯-೮; ಆಪ. ಶ್ರೌ. ಸೂ. ೮-೨-೧ನ್ನು ಹೋಲಿಸಿ). ಕೆರೆ ಕುಂಟೆಗಳ ಸಂದರ್ಭಗಳಲ್ಲಿ ಜಲಾಂತಸ್ಥವಾದ ಅಗ್ನಿಗಳೇ ಸ್ತುತಿಸಲ್ಪಡುತ್ತವೆ. ಸೂರ್ಯನಿಗೆ ಆಕಾಶದಂತೆ, ನೀರೇ ಅಗ್ನಿಗೆ ವಾಸಸ್ಥಳವು (೫-೮೫-೨; ಅ. ವೇ. ೧೩-೧-೫೦ನ್ನು ಹೋಲಿಸಿ). ಗಿಡಮರಗಳ ಜೊತೆಯಲ್ಲಿ ನೀರೂ, ಅಗ್ನಿಯ ವಾಸಸ್ಥಳವೆಂದು ಪರಿಗಣಿತವಾಗಿದೆ (೨-೧-೧; ಇತ್ಯಾದಿ).

ಅಗ್ನಿಯು ಅಂತರಿಕ್ಷದಲ್ಲಿ ಜನಿಸಿದನೆಂದೂ ಅನೇಕ ಬಾರಿ ಹೇಳಿದೆ. ಅತ್ಯುನ್ನತವಾದ ಆಕಾಶಭಾಗದಲ್ಲಿ ಅವನು ಜನಿಸಿದನು (೧-೧೪೩-೨; ೬-೮-೨). ಅಗ್ನಿರೂಪನಾಗಿ ಅಲ್ಲಿರದಿದ್ದರೂ, ಗುಪ್ತವಾಗಿ ಅಂತರಿಕ್ಷದಲ್ಲಿದ್ದು (೧೦-೫-೭). ಬಹಳ ದೂರದ, ಆ ಪ್ರದೇಶದಿಂದ, ಮಾತರಿಶ್ವನಿಂದ ಆನೀತನಾದನು. ಇಲ್ಲಿ ಸಿಡಿಲಿನ ಅಗ್ನಿಯೇ ಇರಬೇಕು. ಸಿಡಿಲಿನ ಅಗ್ನಿಯೇ ಅಂತರಿಕ್ಷದಿಂದ ಮತ್ತು ನೀರಿನಿಂದ ಬರುವುದು (ಅ. ವೇ. ೩-೨೧-೧ ಮತ್ತು ೭; ೮-೧-೧೧); ಬ್ರಾಹ್ಮಣವೊಂದರಲ್ಲಿ (ಐ. ಬ್ರಾ. ೭-೭-೨), ಸ್ವರ್ಗ ಮತ್ತು ನೀರು (ದಿವ್ಯ, ಅಪ್ಸುಮತ್) ಎರಡರಲ್ಲಿಯೂ ಇರುವವನೆಂದು ಹೇಳಿದೆ. ವಿದ್ಯುತ್ ಎಂಬ ಪದವು ಸುಮಾರು ೩೦ ಸಲ 'ಅಗ್ನಿ'ಯ ಜೊತೆಯಲ್ಲಿ ಬರುತ್ತದೆ. ಈ ಎಲ್ಲಾ ಸಂದರ್ಭಗಳಲ್ಲೂ ಅಗ್ನಿಗೇ ಹೋಲಿಸಿದೆ, ಅಗ್ನಿಗಿಂತ ಭಿನ್ನನೆಂತಲೂ ತಿಳಿಸಿದೆ. ಇದು ದೇವತೆಗೂ ಪ್ರಕೃತಿಘಟನೆಗೂ ಇರುವ ವ್ಯತ್ಯಾಸ ಸೂಚಿಸಬಹುದು. ಅಗ್ನಿಯು ಅಂತರಿಕ್ಷದಿಂದ ಇಳಿದು ಭೂಮಿಗೆ ಬರುತ್ತಾನೆ ಎಂಬುದೂ ಸಿಡಿಲಿನಿಂದುಂಟಾಗುವ ಬೆಂಕಿಗೆ ಅನ್ವಯಿಸಬಹುದು. ಮನುಷ್ಯನು ಅಗ್ನಿಯನ್ನು ದೇವತೆಗಳ ವರಪ್ರಸಾದದಿಂದ ಪಡೆಯುತ್ತಾನೆ ಮತ್ತು ಮಾರಿಶ್ವನಿಂದ ಆನೀತವಾಗಿ ಮನುಷ್ಯನ ಹಸ್ತಗತವಾಗುತ್ತದೆ. ಮತ್ತು ಸಿಡಿಲು ಬೆಂಕಿಗಳಿಗೆ ಇರುವ ಅಭೇದವನ್ನೂ ತೋರ್ಪಡಿಸುತ್ತದೆ.



CC-0. Jangamwadi Math Collection. Digitized by eGangotri

ಅಂದಮೇಲೆ, ಅಗ್ನಿಯು ಸ್ವರ್ಗಲೋಕದವನೇ ಎಂಬುದು ಸಿದ್ಧವಾದಂತಾಯಿತು. ಇದೇ ಅರ್ಥದಲ್ಲಿಯೇ ಅಗ್ನಿಯು ಮನುಷ್ಯರ ಅತಿಥಿ ಎಂದು ಹೇಳಿರಬಹುದು.

ಇನ್ನು ಕೆಲವು ವಾಕ್ಯಗಳಲ್ಲಿ, ಅಗ್ನಿಯು ಸೂರ್ಯನಿಗೆ ಸಮವೆಂದು ಗಣನೆಯಿದೆ; ಸೂರ್ಯನು ಅಗ್ನಿಯ ಒಂದು ರೂಪವೆಂಬುದೇ ವೇದಗಳ ಅಭಿಪ್ರಾಯ. ಆಕಾಶಕ್ಕೆಲ್ಲಾ ಮುಖ್ಯನಾಗಿ, ಉಷಃಕಾಲದಲ್ಲಿ ಉದಿಸಿ, ಅಗ್ನಿಯು ಆಕಾಶದ ಬೆಳಕಾಗಿರುತ್ತಾನೆ (೩-೨-೧೪). ವಾಯುಮಂಡಲಕ್ಕೆ ಆಕಡೆ ಹುಟ್ಟಿದಾನೆ, ಸಮಸ್ತ ಪದಾರ್ಥಗಳನ್ನೂ ನೋಡುತ್ತಾನೆ (೧೦–೧೪೭_೪ ಮತ್ತು ೫). ಪ್ರಾತಃಕಾಲದಲ್ಲಿ ಉದಿಸುವ ಸೂರ್ಯನಾಗಿ ಹುಟ್ಟಿದಾನೆ (೧೦-೮೮-೬). ಅಸ್ತಮಿಸಿದಾಗ ಸೂರ್ಯನು ಅಗ್ನಿಯನ್ನು ಪ್ರವೇಶಿಸಿ, ಪುನಃ ಅವನಿಂದ ಜನಿತನಾಗುತ್ತಾನೆ (ಐ. ಬ್ರಾ. ೮-೨೮-೯ ಮತ್ತು ೧೩). ಸೂರ್ಯನ ಬೆಳಕಿನೊಡನೆ ಅಥವಾ ಕಿರಣಗಳೊಡನೆ ಅಗ್ನಿಯು ಬೆರೆಯುತ್ತಾನೆ ಎಂದು ಹೇಳಿರುವ ಸ್ಥಳಗಳಲ್ಲೆಲ್ಲಾ, ಅಗ್ನಿಸೂರ್ಯರ ಈ ಸಮಾನತೆಯೇ ಉದ್ದಿಷ್ಟವಾಗಿರಬೇಕು (೫-೩೭-೧ ; ೭-೨-೧); ಮನುಷ್ಯರು ಬೆಂಕಿಯನ್ನು ಹೊತ್ತಿಸಿದಾಗ, ದೇವತೆಗಳೂ ಅವನನ್ನು ಪ್ರಕಾಶಗೊಳಿಸುತ್ತಾರೆ (೬-೨-೩) ಅಥವಾ ಅಗ್ನಿಯು ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಾನೆ (೩-೨೭-೧೨ ; ೮-೪೪-೨೯) ಎಂದಿರುವಲ್ಲಿಯೂ ಇದೇ ಅಭಿಪ್ರಾಯವಿರಬೇಕು. ಕೆಲವು ಸಂದರ್ಭಗಳಲ್ಲಿ, ಸಿಡಿಲಿಗೆ ಅನ್ವಯಿಸುತ್ತದೆಯೋ ಅಥವಾ ಸೂರ್ಯನಿಗೆ ಅನ್ವಯಿಸುತ್ತದೆಯೋ ಹೇಳುವುದು ಕಷ್ಟ. ಅಗ್ನಿಗೆ ಸೌಮ್ಯವನ್ನು ಅಥವಾ ಅಗ್ನಿಯ ರೂಪಭೇದವೆಂದು ಹೇಳುವಷ್ಟು ಸೂರ್ಯನು ಸಾಮಾನ್ಯವಾದ ಪ್ರಕೃತಿ ಘಟನೆಯಲ್ಲ. ಸಾಧಾರಣವಾಗಿ ಸೂರ್ಯನಿಗೆ ಅಗ್ನಿಯನ್ನು ಹೋಲಿಸಿರುವುದು ಕರಿಡುಬರುತ್ತದೆ. ಸೂರ್ಯನು ಕಣ್ಣಿಗೆ ಬಿದ್ದಾಗಲೆಲ್ಲಾ, ಅಗ್ನಿಯಕಡೆ ಮನಸ್ಸು ಧಾವಿಸುತ್ತದೆ (೧-೧-೪). ಅಗ್ನಿಯ ಇತರ ರೂಪಗಳೂ ಒಂದೊಂದುಸಲ ಅಭಿಪ್ರೇತವೆಂದೂ ಕಾಣುತ್ತದೆ. ಆದ್ದರಿಂದ ಯಾವ ಸಂದರ್ಭದಲ್ಲಿ ಅಗ್ನಿಯ ಯಾವರೂಪ, ಉದ್ದಿಷ್ಟವೆಂಬುದು ನಿರ್ಧರವಾಗಿ ಹೇಳಲಾಗುವುದಿಲ್ಲ.

ಅಗ್ನಿಗೆ ನಾನಾ ವಿಧವಾದ ಜನ್ಮಗಳು ಹೇಳಿರುವುದರಿಂದ, ಅಗ್ನಿಗೆ ಮೂರು ವಿಧವಾದ ಲಕ್ಷಣಗಳು ಉಕ್ತವಾಗಿವೆ. ಅಗ್ನಿಯ ಈ ರೂಪತ್ರಯವು ಬಹಳ ಮುಖ್ಯವಾದುದು. ಅಗ್ನಿಗೆ ಮೂರು ವಿಧವಾದ ಜನ್ಮಗಳು (೧-೯೫-೩ ; ೪-೧-೭). ದೇವತೆಗಳು ಅವನನ್ನು ತ್ರಿವಿಧನನ್ನಾಗಿ ಮಾಡಿದರು. (೧೦-೮೮-೧೦). ಅವನು ಮೂರು ರೂಪವಾದ ಬೆಳಕು (೩-೨೬-೭) ; ಅವನಿಗೆ ಮೂರು ತಲೆಗಳು (೧-೧೪೬-೧), ಮೂರುನಾಲಿಗೆಗಳು, ಮೂರು ದೇಹಗಳು, ಮೂರು ಸ್ಥಾನಗಳು (೩-೨೦-೨). 'ತಿಪ್ರಧಸ್ಥ' ಎಂಬ ವಿಶೇಷಣವು ಸಾಮಾನ್ಯವಾಗಿ ಉಕ್ತವಾಗಿದೆ; ತ್ರಿಪಸ್ತ್ಯ (೮-೩೯-೮) ಎನ್ನುವುದು ಅಗ್ನಿಯೊಬ್ಬನಿಗೇ ಉಪಯೋಗಿಸಿರುವುದು. ಈ ಮೂರು ರೂಪಗಳು ಅಥವಾ ಸ್ಥಾನಗಳು ಒಂದೇ ಕ್ರಮದಲ್ಲಿ ಬರುವುದೂ ಇಲ್ಲ. ಅಗ್ನಿಯು ಮೊದಲು ಆಕಾಶದಿಂದಲೂ, ಎರಡನೆಯಸಲ (ಮನುಷ್ಯರಿಂದಲೂ) ನಮ್ಮಿಂದಲೂ, ಮೂರನೆಯ ಸಲ ನೀರಿನಲ್ಲಿಯೂ ಹುಟ್ಟಿದಾನೆ (೧೦-೪೫-೧) ಅಗ್ನಿಯ ಸ್ಥಾನಗಳೂ (ಆಕಾಶ ಭೂಮಿ ಮತ್ತು ನೀರು) ಇದೇ ಕ್ರಮ.ದಲ್ಲಿವೆ (೮-೪೪-೧೬; ೧೦-೨.೭ ;೧೦-೪೬-೯). ಆದರೆ ಒಂದು ಕಡೆ (೧-೯೫-೩) ಅವನ ಮೂರು ಸ್ಥಾನಗಳು, ಸಾಗರ, ಆಕಾಶ ಮತ್ತು ನೀರು ಎಂದಿದೆ. ಒಂದೊಂದು ಸಲ ಭೂಮಿಯ ಅಗ್ನಿಯೇ ಮೊದಲು ಬರುತ್ತಾನೆ. ಮೊದಲು ಮನೆಗಳಲ್ಲೂ, ಆಮೇಲೆ ಆಕಾಶದ ತಳದಲ್ಲೂ, ವಾಯು ಮಂಡಲದಲ್ಲೂ ಜನಿಸಿದನು (೪-೧-೧೧) ; ಅಮರರಾದ ದೇವತೆಗಳು ಅಗ್ನಿಯ ಮೂರು ಜ್ವಾಲೆಗಳನ್ನು ಸೃಜಿಸಿದರು ; ಒಂದನ್ನು ಮನುಷ್ಯನ ಉಪಯೋಗಕ್ಕೋಸ್ಕರ ಭೂಮಿಯಲ್ಲಿ ಸ್ಥಾಪಿಸಿದರು ; ಉಳಿದ ಎರಡು ಬೇರೆ ಲೋಕಕ್ಕೆ ಹೋದವು (೩-೨-೯). ಪೃಥಿವಿಯ ಅಗ್ನಿಯು ಪ್ರಾಣಿಗಳಲ್ಲಿಯೂ, ವಾಯುಮಂಡಲದ ಅಗ್ನಿಯು ನೀರಿನಲ್ಲಿಯೂ ಮತ್ತು ಸ್ವರ್ಗಲೋಕದ ಅಗ್ನಿಯೂ ಸೂರ್ಯನಲ್ಲಿಯೂ ಇವೆ (ಆಪ. ಶ್ರೌ.



CC-0. Jangamwadi Math Collection. Digitized by eGangotri

ಸೂ. ೫-೧೬-೪). ಅಪರೂಪವಾಗಿ ಪೃಥಿವೀ ಅಗ್ನಿಯು ಮೂರನೆಯದಾಗುತ್ತದೆ. ಅಗ್ನಿಯು ಮೂರು ಜನ ಸೋದರರಲ್ಲಿ ಒಬ್ಬನು; ಅವರಲ್ಲಿ ಮಧ್ಯದವನೇ ಸಿಡಿಲು, ಮೂರನೆಯವನಿಗೆ ಬೆಣ್ಣೆಯೇ ಬೆನ್ನಾಗಿದೆ (೧-೧೬೪-೧; ೧-೧೪೧-೨ನ್ನು ಹೋಲಿಸಿ). ಅಗ್ನಿಯು ಆಕಾಶದಿಂದ ಪ್ರಕಾಶಿಸುತ್ತಾನೆ; ಅಗ್ನಿಗೇ ಈ ವಾಯುಮಂಡಲವು ಸೇರಿದೆ; ಹುತವಾದ ಪದಾರ್ಥಗಳನ್ನು ದೇವತೆಗಳಿಗೆ ಒಯ್ದು ಕೊಡುವವನೂ, ಘೃತವನ್ನು ಅಪೇಕ್ಷಿಸುವವನೂ ಆದ ಅಗ್ನಿಯನ್ನು ಮನುಷ್ಯರು ಹೊತ್ತಿಸುತ್ತಾರೆ (ಅ. ವೇ. ೧೨-೧-೨೦; ೧೩-೩-೨೧; ೧೮-೪-೧೧ಗಳನ್ನು ಹೋಲಿಸಿ).

ಮೂರನೆಯ ರೂಪವೇ ಅತಿ ಶ್ರೇಷ್ಠವಾದುದೆಂದೂ ಒಂದೊಂದು ಕಡೆ ಉಕ್ತವಾಗಿದೆ (೧೦-೧-೩; ೫-೩-೩; ೧-೭೨-೨ ಮತ್ತು ೪ಗಳನ್ನು ಹೋಲಿಸಿ). ಶಾಕಪೂಣಿಯ ಪ್ರಕಾರ, (೧೦-೮೮-೧೦)ರಲ್ಲಿ ಉಕ್ತವಾಗಿರುವ ಅಗ್ನಿಯ ಮೂರು ರೂಪಗಳು ಭೂಮಿ, ಆಕಾಶ ಮತ್ತು ಸ್ವರ್ಗಗಳಲ್ಲಿ ಇವೆ ಮತ್ತು ಒಂದು ಬ್ರಾಹ್ಮಣದಲ್ಲಿರುವಂತೆ, ಸ್ವರ್ಗದಲ್ಲಿರುವ ಅಗ್ನಿಯೇ ಸೂರ್ಯನು (ನಿರು. ೭-೨೮; ನಿರು. ೧೨-೧೯ನ್ನು ಹೋಲಿಸಿ). ಅಗ್ನಿಯ ಈ ಮೂರು ವಿಭಾಗವೂ, ಸೂರ್ಯ, ವಾಯು ಮತ್ತು ಅಗ್ನಿಯೆಂಬ ದೇವತಾತ್ರಯ ವಿಭಾಗವೂ (೮-೧೮-೧೯), ಮತ್ತು ಇತರ ವೇದಗಳಲ್ಲಿ ಉಕ್ತವಾಗಿರುವ ಸೂರ್ಯ, ಇಂದ್ರ ಮತ್ತು ಅಗ್ನಿಯೆಂಬ ದೇವತಾತ್ರಯವೂ ಒಂದೇ ಇರಬೇಕು. ಅಗ್ನಿತ್ರಯದಲ್ಲಿ ಮಧ್ಯದ ಅಗ್ನಿಗೆ, ಬ್ರಾಹ್ಮಣಗಳಲ್ಲಿ ವೈದ್ಯುತಾಗ್ನಿಯೆಂದು ನಾಮಕರಣ ಮಾಡಿದಾರೆ. ಉಳಿದ ಎರಡು ದೇವತಾತ್ರಯಗಳಲ್ಲಿ, ವೈದ್ಯುತಾಗ್ನಿಗೆ ಬದಲಾಗಿ, ವಾತ ಅಥವಾ ವಾಯು ಮತ್ತು ಇಂದ್ರರು ಸೇರಿಸಲ್ಪಟ್ಟಿದಾರೆ. ಯಾಗಗಳಲ್ಲಿ ಲೌಕಿಕಾಗ್ನಿಯಲ್ಲದೇ ಮೂರು ಬೇರೆ ಅಗ್ನಿಗಳನ್ನಿಟ್ಟುಕೊಂಡೇ ಹೋಮಾದಿಗಳನ್ನು ಮಾಡುತ್ತಾರೆ. ಅಗ್ನಿತ್ರಯವೆಂಬುದು ಈ ವಿಭಜನೆಗೆ ಅನ್ವಯಿಸಬಹುದು. ದೇವತೆಗಳನ್ನು ಕರೆದುಕೊಂಡು ಬಂದು, ಮೂರು ಸ್ಥಳಗಳಲ್ಲಿ ಕುಳಿತುಕೊಳ್ಳಬೇಕೆಂದು ಅಗ್ನಿಯನ್ನು ಪ್ರಾರ್ಥಿಸುವುದು ರೂಢಿಯಾಗಿದೆ (೨-೩೬-೪; ೫-೧೧-೨; ೧೦-೧೦೫-೯ಗಳನ್ನು ಹೋಲಿಸಿ).

ಸ್ವರ್ಗ ಮತ್ತು ಮರ್ತ್ಯಲೋಕಗಳೆಂಬ ಪ್ರಪಂಚದ ವಿಭಾಗವನ್ನನುಸರಿಸಿ, ಅಗ್ನಿಗೆ ಎರಡು ಜನ್ಮಗಳೆಂದು ಹೇಳುವುದೂ ವಾಡಿಕೆಯಾಗಿದೆ. ಅವನೊಬ್ಬನಿಗೇ 'ದ್ವಿಜನ್ಮಾ' ಎಂದು ಹೆಸರಿರುವುದು (೧-೬೦-೧; ೧-೧೪೦-೨; ೧-೧೪೯-೨ ಮತ್ತು ೩). ಮೇಲಿನ (ಊರ್ಧ್ವ) ಮತ್ತು ಕೆಳಗಿನ (ಅಧಃ) ಜನ್ಮಗಳೂ (೨-೯-೩), ಉಚ್ಚನೀಚ ವಾಸಸ್ಥಳಗಳೂ (೧-೧೨೮-೩) ಉಕ್ತವಾಗಿವೆ. ಭೂಲೋಕದ ಅಗ್ನಿ ಮತ್ತು ಸ್ವರ್ಗೀಯಾಗ್ನಿಗಳೇ ಯಾವಾಗಲೂ ವಿರುದ್ಧವೆಂದು (೩-೫೪-೧; ೧೦-೪೫-೧೦) ಹೇಳುವುದು; ಆದರೆ ಒಂದೇ ಒಂದು ಸ್ಥಳದಲ್ಲಿ (೮-೪೩-೨೮). ಸ್ವರ್ಗ ಮತ್ತು ಉದಕಗಳಲ್ಲಿ ಅಗ್ನಿಯ ಜನನಗಳಿಗೆ ವ್ಯತ್ಯಾಸ ಹೇಳಿದೆ. ಅಗ್ನಿಯು ಅವನ ಅತ್ಯುನ್ನತ ವಾಸಸ್ಥಳದಿಂದ ಆಹೊತನಾಗಿ (೮-೧೧-೭), ಅಧೋಲೋಕಗಳಿಗೆ ಬರುತ್ತಾನೆ (೮-೬೪-೧೫). ಅಗ್ನಿಯು ಮಳೆಯ ಮೂಲಕ ಕೆಳಗೆ ಬಂದು, ಗಿಡಗಳನ್ನು ಸೇರುತ್ತಾನೆ; ಆ ಗಿಡಗಳಿಂದ ಪುನಃ ಉತ್ಪನ್ನನಾಗುತ್ತಾನೆ. ನೀರಿನಂತೆ, ಅಗ್ನಿಯೂ ಭೂಮಿಗೆ ಬಂದು, ಅಲ್ಲಿಂದ ಬಂದು, ವೃಕ್ಷಗಳನ್ನೇರುತ್ತಾನೆ (೧-೧೪೧-೪). ಅಗ್ನಿಯ ಈ ದ್ವೈವಿಧ್ಯವನ್ನಾಶ್ರಯಿಸಿಯೇ, ಅಗ್ನಿಯು ತನಗೇ ಪುನಃ ಮೇಲಕ್ಕೆ ಏರುತ್ತಾನೆ (೧-೧೬೪-೫೧). ಅಗ್ನಿಯ ಈ ದ್ವೈವಿಧ್ಯವನ್ನಾಶ್ರಯಿಸಿಯೇ, ಅಥವಾ ದೇವತೆಗಳೊಡನೆ ಹೋಮಮಾಡಿಕೊಳ್ಳಬೇಕು (೧೦-೭-೬), ಅಗ್ನಿಯನ್ನು ಕರತರಬೇಕು (೭-೩೯-೫), ಮೊದಲಾದ ವಾಕ್ಯಗಳು ಹೊರಟಿರಬೇಕು. ಮನುಷ್ಯರು ಯಾಗಶಾಲೆಗೆ ಇಳಿದುಬರಬೇಕು (೩-೬-೯ ಇತ್ಯಾದಿ), ಮೊದಲಾದ ವಾಕ್ಯಗಳು ಹೊರಟಿರಬೇಕು. ಮನುಷ್ಯರು ಹೊತ್ತಿಸುದುದಲ್ಲದೇ, ದೇವತೆಗಳೂ ಅಗ್ನಿಯನ್ನು ಹೊತ್ತಿಸಿದರು ಎಂಬುದೂ ಈ ಅಗ್ನಿಯೂ ದ್ವಿವಿಧನೆಂಬ ಅಭಿಪ್ರಾಯಕ್ಕೆ ಪೋಷಕವಾಗುತ್ತದೆ (೬-೨-೩). ಸ್ವರ್ಗೀಯಾಗ್ನಿಯೂ ಯಾರಿಂದಲಾದರೂ ಪ್ರಜ್ವಲಿತವಾಗಬೇಕು.



CC-0. Jangamwadi Math Collection. Digitized by eGangotri

ಮತ್ತು ದೇವತೆಗಳೂ ಮನುಷ್ಯರಂತೆ ಯಾಗಮಾಡಬೇಕು (ಐ. ಬ್ರಾ. ೨-೩೪) ಎಂಬುದರಿಂದ ಅಗ್ನಿಯು ದೇವ ಮಾನವರಿಂದ ಪ್ರತ್ಯೇಕವಾಗಿ ಉದ್ದೀಪ್ತನಾಗುತ್ತಾನೆಂದು ರೂಢಿಗೆ ಬಂದಿರಬೇಕು.

ಬೇರೆ ಒಂದು ದೃಷ್ಟಿಯಿಂದಲೂ ಅಗ್ನಿಗೆ ನಾನಾ ಜನ್ಮಗಳೆಂದು ಹೇಳಬಹುದು (೧೦-೫-೧). ಭೂಮಿಯಲ್ಲಿ ಅನೇಕ ಕುಂಡಗಳಲ್ಲಿ ಅಗ್ನಿಯು ಹೊತ್ತಿಸಲ್ಪಡುವುದರಿಂದ ಅಗ್ನಿಯ ಈ ವೈವಿಧ್ಯ ಸಾಧಿತವಾಗುತ್ತದೆ. ಪ್ರತಿ ಸಂಸಾರ, ಮನೆ ವಾಸಸ್ಥಳಗಳಲ್ಲಿಯೂ ಅಗ್ನಿಯು ಇದಾನೆ (೪-೬-೮ ; ೪-೭-೧ ಮತ್ತು ೩ ; ೫-೧-೫ ; ೫-೬-೮ ಇತ್ಯಾದಿ). ಅನೇಕ ಸ್ಥಳಗಳಲ್ಲಿ (೩-೫೪-೧೯) ಉತ್ಪನ್ನನಾಗಿ, ಅನೇಕ ದೇಹಗಳುಳ್ಳವನಾಗುತ್ತಾನೆ (೧೦-೯೮-೧೦). ಅನೇಕ ಸ್ಥಳಗಳಲ್ಲಿ ಚದುರಿಕೊಂಡಿದ್ದರೂ, ಅವನು ಒಬ್ಬನೇ (೩-೫೫-೪). ಅನೇಕ ಸ್ಥಳಗಳಲ್ಲಿ ಜ್ವಲಿತನಾದರೂ, ಅವನು ಒಬ್ಬನೇ ( ವಾಲ. ೧೦-೨). ಶಾಖೆಗಳು ವೃಕ್ಷವನ್ನು ಆಶ್ರಯಿಸುವಂತೆ, ಅನೇಕ ಅಗ್ನಿಗಳು ಅವನನ್ನಾಶ್ರಯಿಸಿಕೊಂಡಿವೆ(೮-೧೯-೩೩). ಆದುದರಿಂದ ಇತರ ಅಗ್ನಿಗಳೊಡನೆ (೭-೩-೧ ; ೬-೧೮-೯; ೮-೪೯-೧ ; ೧೦-೧೪೧-೬) ಅಥವಾ ಸಮಸ್ತ ಅಗ್ನಿಗಳೊಡನೆ ಆಹೂತನಾಗುತ್ತಾನೆ (೧-೨೬-೧೦ ; ೬-೧೨-೬).

ಅಗ್ನಿಜನನದ ವಿಷಯವಾಗಿ ಬರುವ ನಾನಾ ಕಥನಗಳನ್ನು ನೋಡಿದರೆ, ಆ ಸ್ಥಳಗಳನ್ನು ವಿಥವಿಥವಾಗಿ ವಿಂಗಡಿಸಬೇಕಾಗುತ್ತದೆ. ಅವನ ಪ್ರಕಾಶವು, ಸ್ವರ್ಗ, ಭೂಮಿ, ಅಂತರಿಕ್ಷ, ಉದಕ ಮತ್ತು ಸಸ್ಯಗಳಲ್ಲಿದೆ (೩-೨೨-೨), ಅಥವಾ ಅವನು ಆಕಾಶ, ಉದಕ, ಶಿಲೆ, ಕಾಡು ಮತ್ತು ಸಸ್ಯಗಳಲ್ಲಿ ಜನಿಸುತ್ತಾನೆ (೨-೧-೧). ಇನ್ನೂ ಉದ್ದವಾದ ಪಟ್ಟಿಗಳು ಅಲ್ಲಲ್ಲೇ ಸಿಗುತ್ತವೆ (ಅ. ವೇ. ೩-೨-೧ ; ೧೨-೧-೧೯ ; ಆಪ. ಶ್ರೌ. ಸೂ. ೫-೧೬-೪). ಅಗ್ನಿಯು ಪರ್ವತದಲ್ಲಿದಾನೆ (೧-೭೦-೪, ೬-೪೮-೫ನ್ನು ಹೋಲಿಸಿ), ಎನ್ನುವಾಗ ಮೇಘದಲ್ಲಿ ನಿಗೂಢವಾಗಿರುವ ಸಿಡಿಲೇ ಉದ್ದಿಷ್ಟವಾಗಿರಬೇಕು. ಅಗ್ನಿಯು ಶಿಲೆಯಿಂದ ಉತ್ಪನ್ನನಾದನು (೨-೧೨-೩) ಅಥವಾ ಇಂದ್ರನು ಎರಡು ಕಲ್ಲುಗಳ ಮಧ್ಯೆ ಅಗ್ನಿಯನ್ನು ಉಂಟುಮಾಡಿದನು (೨-೧೨-೩) ಎಂದು ಹೇಳಿರುವುದೂ ಈ ಉದ್ದೇಶದಿಂದಲೇ. ಅಥವಾ ಇಲ್ಲಿ ಚಕಿಮುಕಿ ಕಲ್ಲಿನಿಂದ ಅಗ್ನಿಯನ್ನುಂಟುಮಾಡಬಹುದೆಂಬುದಕ್ಕೆ ನಿರ್ದೇಶವಿರಬಹುದು. ಅಗ್ನಿಯು ಮನುಷ್ಯನಲ್ಲಿ (೧೦-೫-೧) ಅಥವಾ, ಪ್ರಾಣಿಗಳು, ಅಶ್ವಗಳು, ಪಕ್ಷಿಗಳು, ದ್ವಿಪಾದ ಮತ್ತು ಚತುಷ್ಪಾದ ಪ್ರಾಣಿಗಳಲ್ಲಿದಾನೆ (ಅ. ವೇ. ೩-೨೧-೨ ; ೧೨-೧-೧೯ ; ೧೨-೨-೩೩ ; ತೈ. ಸಂ. ೪-೬-೧-೩) ಎನ್ನುವಾಗ, ಜಾಠರಾಗ್ನಿಯೇ ಅಭಿಪ್ರೇತವಾಗಿರಬೇಕು. ಜೀವನಾಧಾರನೆನಿಸಿಕೊಂಡು, ಪ್ರಕೃತಿಯಲ್ಲಿ ಇಷ್ಟು ವ್ಯಾಪಿಸಿರುವ ಅಗ್ನಿಯನ್ನು ಚರಾಚರ ವಸ್ತುಗಳೆಲ್ಲಕ್ಕೂ ಮೂಲಾಧಾರನೆನ್ನುವುದೇನಾಶ್ಚರ್ಯ (೧-೭೦-೩, ಅ. ವೇ. ೫-೨೫-೭).

ಅಗ್ನಿಯ ಈ ತ್ರೈವಿಧ್ಯವೇ ಮೂರು ಸೋದರರೆಂಬ ಅಭಿಪ್ರಾಯಕ್ಕೆ ಅವಕಾಶಕೊಟ್ಟಿದೆ (೧-೧೬೪-೧), ಅಗ್ನಿಗೆ ಹಿರಿಯ ಸೋದರರು ಅನೇಕರು ಎಂಬುದಕ್ಕೆ ಅಪರಿಮಿತವಾದ ಹೋಮಾಗ್ನಿಗಳೇ ಆಧಾರ (೧೦-೫೧-೬). ತೈತ್ತಿರೀಯ ಸಂಹಿತೆಯಲ್ಲಿ ಇವರು ಮೂವರೆಂದು ಹೇಳಲ್ಪಟ್ಟಿದೆ (ತೈ. ಸಂ. ೨-೬-೬-೧). ದೇವತೆಗಳಿಗೆ ನಾಲ್ಕು ಜನ ಹೋತೃಗಳು ; ಅವರಲ್ಲಿ ಮೊದಲ ಮೂವರು ಮೃತರಾದರು (ಶತ. ೨೫-೭) ಎಂಬಲ್ಲಿಯೂ ಇದೇ ಅಂಶವೇ ಪುಷ್ಟೀಕೃತವಾಗುತ್ತದೆ. ಒಂದು ಕಡೆ ವರುಣನು ಅಗ್ನಿಯ ಸೋದರನೆಂದು (೪-೧-೨) ಹೇಳಿದೆ. ಬೇರೆ ಒಂದು ಕಡೆ, ಇಂದ್ರನೂ, ಅಗ್ನಿಯೂ ಯಮಳರೆಂದೂ (೬-೫೯-೨) ಉಕ್ತವಾಗಿದೆ. ಇತರ ಎಲ್ಲಾ ದೇವತೆಗಳಿಗಿಂತ ಹೆಚ್ಚಾಗಿ ಇಂದ್ರನೇ ಅಗ್ನಿಯ ಜೊತೆಯಲ್ಲಿ ಸೇರಿರುವುದು. ಎರಡು ಸಲ ಹೊರತಾಗಿ, ಅಗ್ನಿಯ ಜೊತೆಯಲ್ಲಿ ದ್ವಂದ್ವದೇವತೆಯಾಗಿರುವುದು ಇಂದ್ರನೇ (೧-೨೧-೧, ೧-೧೦೮-೧, ೭-೯೩-೬, ೮-೩೮-೪ ಮತ್ತು ೭ ರಿಂದ,



CC-0. Jangamwadi Math Collection. Digitized by eGangotri

ಇತ್ಯಾದಿ). ಇಂದ್ರಾಗ್ನಿಗಳ ನಿಕಟ ಬಾಂಧವ್ಯವೇ, ಅಗ್ನಿಯು ತನ್ನ ತಾಪದಿಂದ ಪರ್ವತವನ್ನು ಭೇದಿಸಿದನು (೮-೮೬-೧೬), ಮತ್ತು ಅಶ್ರದ್ಧಾಳುಗಳಾದ ಪಣಿಗಳನ್ನು (೭-೬-೩) ನಿರ್ವಂಶಮಾಡಿದನು ಎಂಬಿವುಗಳಿಗೆ ಆಧಾರ ವಿರಬಹುದು- ಒಂದು ಇಡೀ ಸೂಕ್ತವೇ (೧-೯೩) ಅಗ್ನಿ ಮತ್ತು ಸೋಮಗಳ ದ್ವಂದ್ವವನ್ನು ಹೊಗಳಿದೆ.

ಅಪರೂಪವಾಗಿ, ಅಗ್ನಿಯು ಇತರ ಕೆಲವು ದೇವತೆಗಳಿಗೆ, ವಿಶೇಷವಾಗಿ ಮಿತ್ರಾವರುಣರಿಗೆ ಸಮನೆಂದು ಹೇಳಿದೆ (೨-೧-೪ ; ೩-೫-೪ ; ೭-೧೨-೩). ಯಾಗಕ್ಕೆ ಬರುವಾಗ ಅಗ್ನಿಯೇ ವರುಣ (೧೦-೮-೫). ಅಗ್ನಿಯು ಜನಿಸಿದಾಗ ವರುಣನು, ಜ್ವಲಿತನಾದಾಗ ಮಿತ್ರನು ಎನಿಸಿಕೊಳ್ಳುತ್ತಾನೆ (೫-೩-೧). ಸಾಯಂಕಾಲದಲ್ಲಿ ಅಗ್ನಿಯು ವರುಣನಾಗಿ, ಪ್ರಾತಃಕಾಲದಲ್ಲಿ ಮಿತ್ರನಾಗಿ ಉದಿಸುತ್ತಾನೆ ; ಸವಿತೃವಾಗಿ ಅಂತರಿಕ್ಷದಲ್ಲಿ ಸಂಚರಿಸುತ್ತಾನೆ; ಅಂತರಿಕ್ಷದ ಮಧ್ಯದಲ್ಲಿ (ನಡುನೆತ್ತಿಯಮೇಲೆ) ಇಂದ್ರನಾಗಿ, ಎಲ್ಲವನ್ನೂ ಪ್ರಕಾಶಗೊಳಿಸುತ್ತಾನೆ (ಅ. ವೇ. (೧೩-೩-೧೩). ಒಂದುಕಡೆ (೨-೧-೩ರಿಂದ-೭), ಅಗ್ನಿಯು, ಐದು ಸ್ತ್ರೀದೇವತೆಗಳಲ್ಲದೆ, ಹನ್ನೆರಡು ಇತರ ದೇವತೆಗಳಿಗೆ ಸಮನೆಂದು ಹೇಳಿದೆ. ಅನೇಕ ದಿವ್ಯರೂಪಗಳನ್ನು ಧರಿಸಿ (೩-೩೮-೭), ನಾನಾ ನಾಮಗಳುಳ್ಳವನಾಗುತ್ತಾನೆ (೩.೨೦-೩). ದೇವತೆಗಳೆಲ್ಲರೂ ಇವನಲ್ಲಿಯೇ ಅಡಕವಾಗುತ್ತಾರೆ (೫-೩-೧); ಚಕ್ರನೇಮಿಯು ಅರೆಕಾಲುಗಳನ್ನು ಸುತ್ತುಗಟ್ಟಿರುವಂತೆ, ಅಗ್ನಿಯು ದೇವತೆಗಳನ್ನೆಲ್ಲಾ ಆವರಿಸಿಕೊಂಡಿರುತ್ತಾನೆ (೫-೧೩-೬).

ಇವುಗಳೆಲ್ಲಕ್ಕಿಂತ ಪುರಾತನವಾದ ಅಗ್ನಿಯ ಕಾರ್ಯವೆಂದರೆ, ದುಷ್ಟ ಪಿಶಾಚಿಗಳನ್ನು ಓಡಿಸುವುದು ಮತ್ತು ಮಾಟ ಮುಂತಾದುವುಗಳನ್ನು ತಿರುಗಿಸುವುದು ಅಥವಾ ಅವುಗಳನ್ನು ದಹಿಸುವುದು. ಈ ಕಾರ್ಯಗಳನ್ನು ಅಗ್ನಿಯು ಮಾಡಿರುವುದು ವೇದದಲ್ಲಿ ಕಂಡುಬರುತ್ತದೆ. ತನ್ನ ಪ್ರಕಾಶದಿಂದ ಅಗ್ನಿಯು ಪಿಶಾಚಗಳನ್ನೋಡಿಸುತ್ತಾನೆ (೩-೧೫-೧ ಇತ್ಯಾದಿ); ಅದರಿಂದ ಅವನಿಗೆ 'ರಕ್ಷೋಹಾ' ಎಂಬ ವಿಶೇಷಣವು ಉಪಯೋಗಿಸಲ್ಪಟ್ಟಿದೆ (೧೦-೮೭-೧). ಉದ್ದೀಪ್ತನಾದಾಗ, ಕಬ್ಬಿಣದ ದಂತಗಳಿಂದ ಮಾಟಮಾಡುವವರನ್ನು ಮತ್ತು ಪಿಶಾಚಿಗಳನ್ನು ಅಗಿದು ನುಂಗುತ್ತಾನೆ; ತನ್ನ ಕಾವಿನಿಂದ ಅವರನ್ನು ದಹಿಸುತ್ತಾನೆ (೧೦-೮೭-೨, ೫ ಮತ್ತು ೧೪); ಯಾಗವನ್ನು ಬಹಳ ಎಚ್ಚರಿಕೆಯಿಂದ ಕಾಪಾಡುತ್ತಾನೆ. ಮಂತ್ರವಾದಿಗಳ ವಂಶವೇ ಅವನಿಗೆ ಪರಿಚಿತವಾಗಿದೆ; ಅವರನ್ನೆಲ್ಲಾ ನಾಶಮಾಡುತ್ತಾನೆ (ಅ. ವೇ. ೧-೭-೪). ಭೂಲೋಕದ ಪಿಶಾಚಿಗಳನ್ನು ಓಡಿಸುವ ಕೆಲಸದಲ್ಲಿ ಇಂದ್ರ, ಬೃಹಸ್ಪತಿ, ಅಶ್ವಿನಿಗಳು ವಿಶೇಷವಾಗಿ ಸೋಮ, ಇವರುಗಳು ಅಗ್ನಿಗೆ ಸಹಾಯಕರಾಗಿದ್ದಾಗ್ಯೂ, ಈ ಕರ್ಮವು ಅಗ್ನಿಯದೇ ಎನ್ನಬಹುದು. ಇಂದ್ರನಿಗೆ ಮಾತ್ರ ಸಲ್ಲುವ ಅಸುರವಧಾದಿ ಕಾರ್ಯಗಳಲ್ಲಿ ಅಗ್ನಿಗೆ ಔಪಚಾರಿಕವಾಗಿ ಭಾಗವಿರುವಂತೆ, ಇಲ್ಲಿಯೂ ಇಂದ್ರಾದಿಗಳಿಗೆ ಸೂಕ್ತಗಳಲ್ಲಿ ಮತ್ತು ಕರ್ಮಭಾಗದಲ್ಲಿ, ಪಿಶಾಚಗಳನ್ನೋಡಿಸುವ ಮತ್ತು ನಾಶಮಾಡುವ ಕರ್ಮವು ಅಗ್ನಿಯದೇ ಎಂದು ಸ್ಪಷ್ಟವಾಗಿದೆ.

ಮನುಷ್ಯನ ಜೀವನದ ಮೇಲೆ ಅಗ್ನಿಯಷ್ಟು ಪ್ರಭಾವ ಬೀರಿರುವ ದೇವತೆಯೇ ಬೇರೊಂದಿಲ್ಲ. ಮನುಷ್ಯರ ವಸತಿಗಳೊಡನೆ ಅಗ್ನಿಯ ಸಂಬಂಧವು ವಿಲಕ್ಷಣವಾದುದು. ಗೃಹಪತಿ (ಮನೆಯ ಯಜಮಾನ) ಯೆಂಬ ವಿಶೇಷಣವು ಇವನಿಗೊಬ್ಬನಿಗೇ ಸಂದಿರುವುದು. ಪ್ರತಿಮನೆಯಲ್ಲಿಯೂ ಅವನು ವಾಸಿಸುತ್ತಾನೆ (೭-೧೫-೨); ಮನೆಯನ್ನು ಬಿಟ್ಟು ಹೊರಡುವುದೇ ಇಲ್ಲ (೮-೪೯-೧೯). 'ದಮೂನಃ' (ಗೃಹಕೃತ್ಯಕ್ಕೆ ಸಂಬಂಧಿಸಿದ) ಎಂಬ ವಿಶೇಷಣವು ಅಗ್ನಿಗೊಬ್ಬನಿಗೇ ಉಪಯೋಗಿಸಿರುವುದು (೧-೬೦-೪ ಇತ್ಯಾದಿ). ಯಾಗಗಳಲ್ಲಿನ ಅಗ್ನಿತ್ರಯದಲ್ಲಿ, ಆಹವನೀಯ ಮತ್ತು ದಕ್ಷಿಣಾಗ್ನಿಗಳು, ಗಾರ್ಹಪತ್ಯಾಗ್ನಿಯಿಂದಲೇ ತೆಗೆದುಕೊಳ್ಳಲ್ಪಡುತ್ತವೆ. ಅಗ್ನಿಯು ಸುತ್ತಲೂ ಒಯ್ಯಲ್ಪಡುತ್ತಾನೆ ಸ್ಥಳದಿಂದ ಸ್ಥಳಕ್ಕೆ ಯಜ್ಞಾಗ್ನಿಯ ನಯನಾನಯನಗಳುಂಟು. (೪-೧೫-೩); ಯಾಗ ಪ್ರದೇಶವನ್ನು ಹೋಮದ್ರವ್ಯಗಳ ಸುತ್ತಲೂ ಶತಪಥಹಾಕುತ್ತಾನೆ (೪-೯-೩, ೪-೧೫-೧) ;



CC-0. Jangamwadi Math Collection. Digitized by eGangotri

ಮೂರು ಸಲ ಪ್ರದಕ್ಷಿಣೆ ಹಾಕುತ್ತಾನೆ (೪-೬-೪ ಮತ್ತು ೫ ; ಮತ್ತು ೪-೧೫-೨) ; ತನ್ನ ಮಾತಾಪಿತೃಗಳಿಂದ (ಅರಣಿ) ಬಿಡುಗಡೆ ಹೊಂದಿದ ಕೂಡಲೇ, ಮೊದಲು ಪೂರ್ವಕ್ಕೂ ಅನಂತರ ಪಶ್ಚಿಮಕ್ಕೂ ಒಯ್ಯಲ್ಪಡುತ್ತಾನೆ (೧-೩೧-೪).

ಹಿಂದೆ ಹೇಳಿದ ವಿಶೇಷಣಗಳಲ್ಲದೆ, ಅಗ್ನಿಗೆ, ಮನುಷ್ಯರ ಅತಿಥಿಯೆಂದೂ, ಒಂದು ವಿಶೇಷಣವಿದೆ. ಅವನು ಪ್ರತಿಮನೆಯಲ್ಲಿಯೂ ಅತಿಥಿಯಾಗಿದಾನೆ (೧೦-೯೧-೨) ; ಅತಿಥಿಗಳಲ್ಲಿ ಮೊದಲನೆಯವನು (೫-೮-೨). ಮರಣರಹಿತರಾದವರಲ್ಲಿ (ದೇವತೆಗಳಲ್ಲಿ) ಇವನೊಬ್ಬನೇ ಮರ್ತ್ಯರ ಮಧ್ಯದಲ್ಲಿ ನೆಲಸಿರುವವನು (೮-೬೦-೧). ಮನುಷ್ಯರ ವಾಸಸ್ಥಳಗಳಲ್ಲಿ ಅವನು ಸ್ಥಾಪಿತನಾಗಿದಾನೆ ಅಥವಾ ನೆಲಸಿದಾನೆ (೩-೫-೩ ; ೪-೬-೨). ಈ ಗಾರ್ಹಪತ್ಯಾಗ್ನಿಯೇ, ಮನುಷ್ಯರು ತಮ್ಮ ತಮ್ಮ ಮನೆಗಳಲ್ಲಿ ಸ್ಥಿರವಾಗಿ ನೆಲಸುವುದಕ್ಕೆ ಸಹಾಯ ಮಾಡಿರುವುದು (೩-೧-೧೭). ಅವನು ಹೊಸಪ್ರದೇಶಗಳಲ್ಲಿ ನೆಲಸುವವರಿಗೆ ಮುಖಂಡನು (೩-೨-೫) ಮತ್ತು ರಕ್ಷಕನು (೧-೯೬-೪) ; ಈ ಸಂದರ್ಭದಲ್ಲಿ 'ವಿಶ್ಪತಿ' ಎಂಬ ಹೆಸರು ಅಗ್ನಿಗೊಬ್ಬನಿಗೇ ಹೇಳಿರುವುದು.

ಈಮೇಲೆ ಹೇಳಿದ ಪ್ರಕಾರ ಅಗ್ನಿಯು ಮನುಷ್ಯನಿಗೆ ಸ್ನೇಹಿತ (೧-೭೫-೧). ಅಥವಾ ಸಮೀಪಬಂಧು (೧-೨೬-೩ ; ಇತ್ಯಾದಿ) ಅಥವಾ ಸಂಬಂಧಿ (೭-೧೫-೧ ; ೮-೪೯-೧೦) ಎನ್ನಿಸಿಕೊಂಡಿದಾನೆ. ಅವನನ್ನು ತನ್ನ ಆರಾಧಕರಿಗೆ ತಂದೆಯೆಂದು ಅನೇಕ ಸಲವೂ (೬-೧-೫ ; ಇತ್ಯಾದಿ), ಪುತ್ರ (೨-೧-೯), ಜನನಿ (೬-೧-೫), ಸೋದರ (೮-೪೩-೧೬ ; ೧೦-೭-೩ ; ಇತ್ಯಾದಿ) ಮೊದಲಾಗಿ ಒಂದೊಂದು ಸಲವೂ ಕರೆಯಲ್ಪಟ್ಟಿದಾನೆ. ಇಷ್ಟು ಸಮೀಪ ಸಂಬಂಧ, ಅಗ್ನಿಯು ಯಾಗಸಾಧನ ಮಾತ್ರವಲ್ಲ, ನಿತ್ಯಜೀವನಕ್ಕೆ ಅತ್ಯಂತ ಅವಶ್ಯಕ ವಸ್ತುವೆಂಬುದನ್ನು ವ್ಯಕ್ತಪಡಿಸುತ್ತದೆ.

ಅಗ್ನಿಯು ಏಕಪ್ರಕಾರವಾಗಿ ಮನುಷ್ಯರ ಮನೆಗಳಲ್ಲಿ ಇರುವುದರಿಂದ, ಮನುಷ್ಯರ ಪೂರ್ವೀಕರಿಗೂ ಅಗ್ನಿಗೂ, ಇತರ ದೇವತೆಗಳಿಗಿಂತ ಹೆಚ್ಚು ಸಂಬಂಧವಿರುವುದು ಸ್ವಾಭಾವಿಕವೇ ಆಗಿದೆ (೧-೭೧-೧೦). ಪೂರ್ವೀಕರು ಅವನನ್ನೇ ಉದ್ದೀಪ್ತಗೊಳಿಸಿದರು, ಅವನನ್ನೇ ಅವರು ಸ್ತುತಿಸಿದುದು. ಭರತ (೨-೭-೧ ; ೭-೮-೪, ಇತ್ಯಾದಿ), ವಧ್ರ್ಯಶ್ವ (೧೦-೬೯-೧), ದೇವವಾತ (೩-೨೩-೩), ದಿವೋದಾಸ (೮-೯೨-೨) ಮತ್ತು ತ್ರಸದಸ್ಯು (೮-೧೯-೩೨) ಮೊದಲಾದವರ ಅಗ್ನಿಗಳು ಪ್ರಸಕ್ತವಾಗಿವೆ. ಮಂತ್ರದ್ರಷ್ಟೃಗಳಿಂದ ಋಷಿಗಳ ವಂಶದವರು ಕೆಲವರು ಅಗ್ನಿಗೆ ಸಮರೆಂದು ಉಕ್ತವಾಗಿದೆ. ಇವರಲ್ಲಿ, ವಸಿಷ್ಠಾದಿ ಕೆಲವರು ಚಾರಿತ್ರಿಕ ವ್ಯಕ್ತಿಗಳೆಂತಲೂ, ಅಂಗಿರಸರು, ಭೃಗುಗಳು ಮೊದಲಾದನರು ಕಾಲ್ಪನಿಕ ವ್ಯಕ್ತಿಗಳೆಂತಲೂ ಹೇಳಬಹುದು.

ಯಾಗಗಳಲ್ಲಿಯೂ, ಅಗ್ನಿಗೂ ಮನುಷ್ಯನ ದೈನಂದಿನ ಜೀವನಕ್ಕೂ ನಿಕಟ ಬಾಂಧವ್ಯವು ಏರ್ಪಡುತ್ತದೆ. ಅಗ್ನಿಯು ಮನುಷ್ಯನಿಂದ ಹುತವಾದುದನ್ನು ಸ್ವೀಕರಿಸುವುದು ಮಾತ್ರವಲ್ಲದೇ, ಸ್ವರ್ಗಭೂಮಿಗಳಿಗೆ ಮಧ್ಯಸ್ಥಗಾರನಾಗಿಯೂ ಕೆಲಸ ಮಾಡುತ್ತಾನೆ. ಹೋಮಮಾಡಿದ ಪದಾರ್ಥಗಳನ್ನು ದೇವತೆಗಳಿಗೆ ಸಲ್ಲಿಸುವವನೇ ಅವನು ; ಅವನಿಲ್ಲದೆ ದೇವತೆಗಳಿಗೆ ಸಂತೋಷವೇ ಉಂಟಾಗದು (೭-೧೧-೧). ಅವನು ದೇವತೆಗಳನ್ನು ಯಾಗಶಾಲೆಗೆ ಕರತರುತ್ತಾನೆ (೩-೧೪-೨) ಮತ್ತು ಹುತವಾದವುಗಳನ್ನು ತೆಗೆದುಕೊಂಡು ಹೋಗಿ ಅವರಿಗೆ ಸೇರಿಸುತ್ತಾನೆ (೭-೧೧-೫). ಹೋಮದ್ರವ್ಯವನ್ನು ಭಕ್ಷಿಸಲು (೫-೧-೧೧ ; ಇತ್ಯಾದಿ), ಅವರನ್ನು ದರ್ಭಾಸನದ ಮೇಲೆ ಕೂಡಿಸುತ್ತಾನೆ (೧-೩೧-೧೭ ; ೮-೪೪-೩). ಮಾರ್ಗಗಳನ್ನು ಚೆನ್ನಾಗಿ ತಿಳಿದಿರುವ (೬-೧೭-೩) ಅಗ್ನಿಯು, ಭೂಮಿಗೆ (೮-೭-೨) ಮತ್ತು ದೇವತೆಗಳ ಸಮೀಪಕ್ಕೆ (೧೦-೯೮-೧೧) ಹೋಗುವ ಎರಡು ದಾರಿಗಳಲ್ಲೂ



CC-0. Jangamwadi Math Collection. Digitized by eGangotri

ಹೋಗುತ್ತಾನೆ. ಆದರಿಂದಲೇ ಅವನಿಗೆ ಯಾವಾಗಲೂ ದೂತನೆಂತಲೇ ಕರೆಯುವುದು ವಾಡಿಕೆ; ಇವನಿಗೆ ಮಾರ್ಗಗಳು ಚೆನ್ನಾಗಿ ತಿಳಿದಿವೆ ಮತ್ತು ಯಾಗವನ್ನು ಸ್ಥಳಾಂತರಕ್ಕೆ ಒಯ್ಯುತ್ತಾನೆ (೧-೭೨-೭) ಅಥವಾ ಎಲ್ಲಾ ವಸತಿಗಳಿಗೂ ಭೇಟಿಕೊಡುತ್ತಾನೆ (೪-೧-೮); ಬಹಳ ವೇಗವಾಗಿ (೧೦-೬-೪) ಭೂಮ್ಯಾಕಾಶಗಳ ಮಧ್ಯೆ (೪-೭-೮ ; ೪-೮-೪ ; ೧೦-೪-೨) ಅಥವಾ ದೇವಮಾನವರೆಂಬ ಎರಡು ಜನಾಂಗಗಳ ಮಧ್ಯೆ (೪-೨-೨- ಮತ್ತು ೩) ಓಡಾಡುತ್ತಾನೆ. ದೇವತೆಗಳು (೫-೮-೬ ; ಇತ್ಯಾದಿ) ಮತ್ತು ಮನುಷ್ಯರು (೧೦-೪೬-೧೦) ಅವನನ್ನು ಹವ್ಯವಾಹ ಅಥವಾ ಹವ್ಯವಾಹನನ್ನಾಗಿ (ಹವಿಸ್ಸನ್ನು ಒಯ್ಯುವವನು) ನೇಮಿಸಿದಾರೆ. (ಈ ಹೆಸರು ಅಗ್ನಿಗೊಬ್ಬನಿಗೇ ರೂಢಿಯಾಗಿರುವುದು). ಯಾಗಕರ್ತೃವು ಉಚ್ಚರಿಸಿದ ಮಂತ್ರವನ್ನು ದೇವತೆಗಳಿಗೆ ತಿಳಿಯಪಡಿಸುವುದು (೧-೨೭-೪) ಅಥವಾ ಯಾಗಶಾಲೆಗೆ ದೇವತೆಗಳನ್ನು ಕರತರುವುದು (೪-೮-೨). ಇವೇ ಅವನ ಕೆಲಸಗಳು. ಅವನು ದೇವತೆಗಳ (೬-೧೫-೯) ಮತ್ತು ವಿವಸ್ವತನ (೧-೫೮-೧ ; ೪-೭-೪ ; ೮-೩೯-೩ ; ೧೦-೨೧-೫) ದೂತನು. ಸ್ವರ್ಗದ ಮೂಲೆ ಮೂಲೆಗಳನ್ನೂ ತಿಳಿದಿರುವವನೂ, ಯಾಗಗಳನ್ನು ನಿರ್ವಹಿಸುವವನೂ, ದೇವತೆಗಳನ್ನು ಕರತರುವವನೂ ಆದ ಅಗ್ನಿಯನ್ನು ದೇವತೆಗಳ ದೂತನೆನ್ನುವುದಕಿಂತ, ಮನುಷ್ಯರ ದೂತನೆಂದರೆ ಚೆನ್ನಾಗಿ ಒಪ್ಪುವುದು. ಬೇರೆ ಒಂದು ವೇದದಲ್ಲಿ (ತೈ. ಸಂ. ೨-೫-೮-೫ ; ೨-೫-೧೧-೮), ಅಗ್ನಿಯು ದೇವತೆಗಳ ದೂತನೆಂದೂ, ಕಾವ್ಯ ಉಶನಾಃ ಅಥವಾ ದೈವ್ಯ ಎಂಬುವನು ಅಸುರರ ದೂತನೆಂದೂ ಹೇಳಿದೆ. ಮತ್ತೊಂದು ಕಡೆ (ತೈ. ಬ್ರಾ. ೨-೪-೧-೬). ಅಗ್ನಿಯನ್ನು ದೂತನೆಂದು ವರ್ಣಿಸದೆ, ದೇವತೆಗಳ ಸಮೀಪಕ್ಕೆ ಹೋಗಲು ಅದು ಮಾರ್ಗವೆಂತಲೂ, ಆ ಮಾರ್ಗದಲ್ಲಿ ಹೋದರೆ, ಸ್ವರ್ಗದ ಅತಿಶ್ರೇಷ್ಠವಾದ ಸ್ಥಾನಗಳಿಗೆ ಹೋಗಬಹುದೆಂತಲೂ ವರ್ಣಿಸಿದೆ.

ಯಾಗಗಳಲ್ಲಿ ಕರ್ಮಗಳನ್ನು ಸಾಧಿಸುವುದರಲ್ಲಿ ಅಗ್ನಿಯು ಅತಿ ಮುಖ್ಯ ಪಾತ್ರವಹಿಸಿರುವನೆಂದು ಹೇಳಿರುವುದರಿಂದ, ಮನುಷ್ಯರಲ್ಲಿ ಪುರೋಹಿತರಿಗೆ ಕೊಟ್ಟಿರುವ ಸ್ಥಾನವೇ, ದೇವತೆಗಳಲ್ಲಿ ಅಗ್ನಿಗೆ ಕೊಡಲ್ಪಟ್ಟಿದೆ. ಇವುಗಳೆ
ಆದುದರಿಂದ, ಅವನಿಗೆ ಋತ್ವಿಕ್, ವಿಪ್ರ, ವಿಶೇಷವಾಗಿ ಪುರೋಹಿತ, ಮೊದಲಾದ ವಿಶೇಷಣಗಳಿವೆ. ಕರೆದಿದ್ದಾರೆ.
ಲ್ಲದಕ್ಕಿಂತ ಹೆಚ್ಚಾಗಿ, ಅಗ್ನಿಯನ್ನು 'ಹೋತಾ' (ಸ್ತುತಿಸುವವನು, ಮುಖ್ಯ ಪುರೋಹಿತ) ಎಂದು ನಿಯಮಿತನಾದ
ಅಗ್ನಿಯು ಮನುಷ್ಯರಿಂದ (೮-೪೯-೧ ; ೧೦-೭-೫) ಮತ್ತು ದೇವತೆಗಳಿಂದ (೬-೧೬-೧) ಹೋತೃವು. ಅವನು ಹೋತೃಗಳಲ್ಲೆಲ್ಲಾ ಅತ್ಯಂತ ಪ್ರೀತಿಪಾತ್ರನು ಮತ್ತು ಅತಿ ಶ್ರೇಷ್ಠನು (೧೦-೨-೧ ; ೧೦-೯೧-೮). ಅವನಿಗೆ ಅಧ್ವರ್ಯುವೆಂತಲೂ (೩-೫-೪). ಬೃಹಸ್ಪತಿ, ಸೋಮ ಮತ್ತು ಇಂದ್ರರಂತೆ, ಬ್ರಹ್ಮ
ಎಂತಲೂ (೪-೯-೪) ಹೆಸರಿದೆ. ಒಂದು ವಿಧದಲ್ಲಿ ಮೇಲೆಹೇಳಿದ ಋತ್ವಿಜರ (ಹೋತೃ, ಅಧ್ವರ್ಯು, ಬ್ರಹ್ಮ) ಮತ್ತು ಇತರರ ಕರ್ಮಗಳನ್ನೆಲ್ಲವನ್ನೂ ಅವನೊಬ್ಬನೇ ಮಾಡುತ್ತಾನೆ ಎಂದು ಹೇಳಬಹುದು (೧-೯೪-೬ ; ೨-೧-೨ ; ಇತ್ಯಾದಿ). ದೇವತೆಗಳನ್ನು ಪೂಜಿಸಬೇಕು ಅಥವಾ ಗೌರವಿಸಬೇಕೆಂದು ಅಗ್ನಿಯು ಸರ್ವದಾ ಪ್ರಾರ್ಥಿತನಾಗುತ್ತಾನೆ (೩-೨೫-೧ ; ೭-೧೧-೩ ; ಇತ್ಯಾದಿ) ಮತ್ತು ಇದಕ್ಕೆ ಪ್ರತಿಯಾಗಿ, ಅಗ್ನಿಯನ್ನು ದಿನಕ್ಕೆ ಮೂರು ಬಾರಿ ಪೂಜಿಸಬೇಕೆಂದು ದೇವತೆಗಳನ್ನೂ ಪ್ರಾರ್ಥಿಸಿದೆ (೩-೪-೨). ಯಾಗ ಅಥವಾ ಕರ್ಮವನ್ನು ಸಾಧಿಸುವವನು ಅಗ್ನಿಯು (೩-೩-೩ ; ೩-೨೭-೨); ತನ್ನ ವಿಶೇಷ ಶಕ್ತಿಯಿಂದ ಅದನ್ನು ಸಾಂಗವಾಗಿ ಪೂರಯಿಸುತ್ತಾನೆ (೧೦-೧೫-೧೨); ತನ್ನಿಂದ ರಕ್ಷಿತವಾದ ಹೋಮಗಳನ್ನು ಸುವಾಸನೆಯುಳ್ಳದ್ದಾಗಿ ಮಾಡುತ್ತಾನೆ (೩-೨೭-೭); ಹವಿಸ್ಸನ್ನು ದೇವತೆಗಳಿಗೆ ಸೇರಿಸುತ್ತಾನೆ (೧-೧-೪). ಅವನು ಯಜ್ಞಕ್ಕೆ ತಂದೆಯು (೩-೩-೪), ರಾಜನು (೪-೩-೧), ಒಡೆಯನು (೧೦-೬-೩), ಮೇಲ್ವಿಚಾರಣೆ ನಡೆಸುವವನು (೮-೪೩-೨೪) ಮತ್ತು ಧ್ವಜಪ್ರಾಯನು (೩-೩-೩ ; ೩-೧೦-೪ ; ೬-೨-೩ ; ೧೦-೧-೫). ಒಂದು ಸೂಕ್ತದಲ್ಲಿ (೧೦-೫೧). ಅಗ್ನಿಗೆ ತನ್ನ ಕೆಲಸವು





CC-0. Jangamwadi Math Collection. Digitized by eGangotri

ಬೇಜಾರಾಗಿ' ಯಾಗ ಕರ್ಮಗಳನ್ನು ನಿರ್ವಹಿಸದೇ ಬಿಟ್ಟುಬಿಟ್ಟನೆಂದೂ, ದೇವತೆಗಳಿಂದ ಬರಬೇಕಾದ ಪಾರಿತೋಷಿಕವು ಬಂದಮೇಲೆ ಮನುಷ್ಯರಿಗೆ, ಮುಖ್ಯಪುರೋಹಿತನಾಗಿ ಕೆಲಸಮಾಡಲು ಒಪ್ಪಿಕೊಂಡನೆಂದೂ, ಇದೆ. ಅಗ್ನಿಯ ಪಾತ್ರದಲ್ಲಿ ಬಹಳ ಪ್ರಧಾನವಾಗಿ ಕಂಡುಬರುವುದೆಂದರೆ ಅವನ ಪುರೋಹಿತತನ. ಇಂದ್ರನು ಮುಖ್ಯಯೋಧನಾಗಿರುವಂತೆ, ಅಗ್ನಿಯು ಮುಖ್ಯಪುರೋಹಿತ. ಅಗ್ನಿಯ ಈ ರೂಪವು ಇತ್ತೀಚಿನದು ಎಂದು ಹೇಳಬಹುದು. ಹವ್ಯವಾಹಕನ ಕೆಲಸವೇ ಅಗ್ನಿಯ ಮುಖ್ಯ ಕೆಲಸ. ಮುಂದೆ ಬ್ರಾಹ್ಮಣಗಳಲ್ಲಿ, ಹವ್ಯವಾಹಕನಾದ ಅಗ್ನಿಗೂ, ಕ್ರವ್ಯಾದನಾದ (ಮೃತರ ದೇಹಗಳನ್ನು ದಹಿಸುವ) ಅಗ್ನಿಗೂ ಭೇದವು ಉಕ್ತವಾಗಿದೆ. ವಾಜಸನೇಯಿಸಂಹಿತೆಯಲ್ಲಿ (ವಾ. ಸಂ. ೧-೧೭; ೧೮-೫೧ನ್ನು ಹೋಲಿಸಿ), ಹವ್ಯವಾಹನ (ಹೋಮಗಳನ್ನು ದೇವತೆಗಳಿಗೆ ಒಯ್ದುಕೊಡುವವನು), ಕವ್ಯವಾಹನ (ಔರ್ಧ್ವದೈಹಿಕ ಕರ್ಮಗಳಲ್ಲಿ ದತ್ತವಾದುದನ್ನು ಪಿತೃಗಳಿಗೆ ಸೇರಿಸುವವನು) ಮತ್ತು ಸಹರಕ್ಷಾಃ (ಪಿಶಾಚ, ರಾಕ್ಷಸಾದಿಗಳೊಡನೆ ಸೇರಿದವನು) ಎಂದು ಅಗ್ನಿಯ ಮೂರು ರೂಪಗಳು ಉಕ್ತವಾಗಿವೆ.

ಅಗ್ನಿಯು ಋಷಿ ಮತ್ತು ಪುರೋಹಿತ (೯-೬೬-೨೦) ; ಶ್ರೇಷ್ಠನಾದ ಋಷಿಯಾದುದರಿಂದ, ಅವನು ಉದ್ದೀಪಿತನಾಗುತ್ತಾನೆ (೩-೨೧-೩) ; ಅತ್ಯಂತ ದಯಾಳುವಾದ ಋಷಿ (೬-೧೪-೨) ; ಅಂಗಿರಸನೆಂಬ ಮೊದಲನೆಯ ಋಷಿಯೇ ಅವನು (೧-೩೧-೧). ಜ್ಞಾನಿಗಳಲ್ಲಿ ಅವನು ದಿವ್ಯಜ್ಞಾನಿಯು (ಅಸುರ ೩-೩-೪) ಯಾಗಗಳು ಅವನಿಗೆ ಸ್ಪಷ್ಟವಾಗಿ ತಿಳಿದಿವೆ (೧೦-೧೧೦-೧೧) ಮತ್ತು ಎಲ್ಲಾ ಕರ್ಮಗಳನ್ನೂ ತಿಳಿದಿದಾನೆ (೧೦-೧೨೨-೨) ಯಾಗಸಂಬಂಧವಾದ ದೈವಿಕ ನಿಯಮಗಳನ್ನರಿಯದೆ, ಮನುಷ್ಯರು ಮಾಡುವ ತಪ್ಪುಗಳನ್ನು, ಕಾಲಜ್ಞನಾದ ಅಗ್ನಿಯು ಸರಿಪಡಿಸುತ್ತಾನೆ (೧೦-೨-೪ ಮತ್ತು ೫). ಸ್ವರ್ಗದ ಗುಪ್ತಸ್ಥಾನಗಳೆಲ್ಲವೂ ಅವನಿಗೆ ಜ್ಞಾತವಾಗಿವೆ (೪-೮-೨ ಮತ್ತು ೪). ತನ್ನ ಸ್ವಂತ ಬುದ್ಧಿಯಿಂದ (೧೦-೯೧-೩) ಎಲ್ಲವನ್ನೂ ತಿಳಿಯುತ್ತಾನೆ (೧೦-೧೧-೧). ಇವನು ಸರ್ವವನ್ನೂ ತಿಳಿದಿದಾನೆ (೩-೧-೧೭ ; ೧೦-೨೧-೫) ; ಚಕ್ರದ ಅರೆಗಳನ್ನು ನೇಮಿಯು ಆವರಿಸಿರುವಂತೆ, ಸರ್ವವನ್ನೂ ಆವರಿಸಿಕೊಂಡಿದಾನೆ (೨-೫-೩) ; ಈ ಸರ್ವಜ್ಞತ್ವವು ಜನ್ಮಸಿದ್ಧವಾದುದು (೧-೯೬-೧). ಸರ್ವವನ್ನೂ ತಿಳಿದವನು (ವಿಶ್ವವಿತ್) ; ವಿಶ್ವವೇದಾಃ, ಕವಿ, ಕವಿಕ್ರತು ಮೊದಲಾದ ಸರ್ವಜ್ಞತ್ವಸೂಚಕ ಪದಗಳು ಅವನಿಗೇ ವಿಶೇಷವಾಗಿ ಅನ್ವಯಿಸುತ್ತವೆ. ಜಾತವೇದಾಃ ಎಂಬುದಕ್ಕೆ ಸರ್ವಕಾಲೀರನ್ನೂ ತಿಳಿದವನು ಎಂದು ೬-೧೫-೧೩ನಲ್ಲಿ ಅರ್ಥಮಾಡಿದೆ. ಇದು ಸುಮಾರು ೧೨೦ ಸಲ ಋಗ್ವೇದದಲ್ಲಿ ಅಗ್ನಿಯೊಬ್ಬನಿಗೇ ಪ್ರಯೋಗಿಸಲ್ಪಟ್ಟಿದೆ. ಅವನು ದೈವನಿಯಮಗಳನ್ನು ಮತ್ತು ಎಲ್ಲಾ ತಲೆಮಾರಿಯವರನ್ನೂ ಬಲ್ಲನು (೧-೭೦-೧ ಮತ್ತು ೩). ಎಲ್ಲಾ ಪ್ರಾಣಿಗಳೂ ಅವನಿಗೆ ಪರಿಚಿತರು ಮತ್ತು ಎಲ್ಲರನ್ನೂ ನೋಡಬಲ್ಲನು (೩-೫೫-೧೦ ; ೧೦-೧೮೭-೪); ತನಗೆ ಉದ್ದಿಷ್ಟವಾದ ಸ್ತುತಿಗಳೆಲ್ಲವನ್ನೂ ಕೇಳುತ್ತಾನೆ (೮-೪೩-೨೩). ಅಗ್ನಿಯು ಜ್ಞಾನಜನಕನೂ ಹೌದು (೮-೯೧-೮). ಜ್ಞಾನ ಮತ್ತು ಸ್ತುತಿಗಳು ಅವನಿಂದಲೇ ಉತ್ಪನ್ನವಾಗುತ್ತವೆ (೪-೧೧-೩). ಅವನು ಸ್ಫೂರ್ತಿದಾಯಕನು (೧೦-೪೬-೫) ; ಉತ್ತಮ ವಾಕ್ಸರಣಿಯನ್ನು ಕಂಡುಹಿಡಿದವನು (೨-೯-೪) ; ಸ್ತೋತ್ರಗಳನ್ನು ಮೊದಲು ಕಂಡುಹಿಡಿದವನು-(೬-೧-೧). ಅವನು ಸ್ವತಃ ವಾಗ್ಮಿ (೬-೪-೪) ಮತ್ತು ಗಾಯಕ.

ಅಗ್ನಿಯು ತನ್ನ ಆರಾಧಕರಿಗೆ ಮಹದುಪಕಾರಿ. ಅವರನ್ನು ನೂರು ಕಬ್ಬಿಣದ ಗೋಡೆಗಳಿಂದ ರಕ್ಷಿಸುತ್ತಾನೆ (೭-೩-೭ ; ೭-೧೬-೧೦ : ೬-೪೮-೮ ; ೧-೧೮೯-೨ಗಳನ್ನು ಹೋಲಿಸಿ). ಅಪಾಯಗಳಿಂದ ರಕ್ಷಿಸುತ್ತಾನೆ ಅಥವಾ, ಸಮುದ್ರವನ್ನು ನಾವೆಯಿಂದ ದಾಟಿಸುವಂತೆ ಅಪಾಯುಗಳಿಂದ ಪಾರುಗಾಣಿಸುತ್ತಾನೆ (೩-೨೦-೪; ೫-೪-೯ ; ೭-೧೨-೨). ತನ್ನನ್ನು ಅತಿಥಿಯಂತೆ ಪೂಜಿಸುವವರಿಗೆ ಸ್ನೇಹಿತನು (೪-೪-೧೦) ಮತ್ತು ಆಂಥವ



CC-0. Jangamwadi Math Collection. Digitized by eGangotri

ರನ್ನು ಕಷ್ಟಗಳಿಂದ ಬಿಡುಗಡೆ ಮಾಡುತ್ತಾನೆ (೮-೪೯-೫). ತನಗಾಗಿ ಕಷ್ಟಪಟ್ಟು ಸೌದೆ ತರುವವನನ್ನು ರಕ್ಷಿಸುತ್ತಾನೆ (೪-೨-೬). ತನಗೆ ಆಹಾರವನ್ನು ಕೊಟ್ಟು, ಹೋಮಾದಿಗಳಿಂದ ಪೋಷಿಸುವವನನ್ನು ಸಾವಿರ ಕಣ್ಣುಗಳಿಂದ ನೋಡಿಕೊಳ್ಳುತ್ತಾನೆ (೧೦-೭೯-೫). ತನ್ನ ಆರಾಧಕರ ಶತ್ರುಗಳನ್ನು, ಒಣಗಿದ ಪೊದೆಗಳಂತೆ, ಭಸ್ಮ ಮಾಡಿಬಿಡುತ್ತಾನೆ (೪-೪-೪) ; ಸಿಡಿಲು ವೃಕ್ಷಗಳನ್ನು ಬೀಳಿಸುವಂತೆ ದ್ವೇಷಿಗಳನ್ನು ಕೆಡವುತ್ತಾನೆ (೬-೮-೫ ; ಅ. ವೇ. ೩-೨-೧ ; ಇತ್ಯಾದಿಗಳನ್ನು ಹೋಲಿಸಿ). ಆದರಿಂದಲೇ, ಯುದ್ಧದಲ್ಲಿ ಸಹಾಯಕ್ಕಾಗಿ ಪ್ರಾರ್ಥಿತನಾಗಿ (೮-೪೩-೨೧), ಸೈನ್ಯದ ಮುಂಭಾಗದಲ್ಲಿ ನಾಯಕನಾಗಿ ಹೋಗುತ್ತಾನೆ (೮-೭೩-೮). ಯುದ್ಧದಲ್ಲಿ ಅಗ್ನಿಯಿಂದ ರಕ್ಷಿತನೂ ಪ್ರೋತ್ಸಾಹಿತನೂ ಆದವನು ಯಥೇಷ್ಟವಾಗಿ ಆಹಾರವನ್ನು ಸಂಪಾದಿಸುತ್ತಾನೆ ಮತ್ತು ಅಪ್ರತಿಹತನಾಗಿರುತ್ತಾನೆ (೧-೨೭-೭). ವೃಕ್ಷದಿಂದ ಶಾಖೆಗಳು ಹೊರಡುವಂತೆ, ಎಲ್ಲಾ ವರಪ್ರಸಾದಗಳೂ ಅವನಿಂದಲೇ ಹೊರಡುತ್ತವೆ (೬-೧೩-೧). ಅಪಾರ ಸಂಪತ್ತಿಗೆ ಒಡೆಯನಾದ ಅಗ್ನಿಯು ಐಶ್ವರ್ಯದಾಯಕನಾಗುತ್ತಾನೆ (೧-೧-೩ ; ೧-೩೧-೧೦ ; ೧-೩೬-೪). ಎಲ್ಲಾ ನಿಧಿಗಳೂ ಅವನಲ್ಲಿಯೇ ಸಂಗತವಾಗಿವೆ. (೧೦-೬-೬) ಮತ್ತು ನಿಧಿಯ ದ್ವಾರವನ್ನು ತೆರೆಯುತ್ತಾನೆ (೧-೬೮-೧೦). ಸ್ವರ್ಗ ಮತ್ತು ಭೂಮಿಗಳಲ್ಲಿರುವ (೪-೫-೧೧) ಅಥವಾ ಸ್ವರ್ಗ, ಭೂಮಿ ಮತ್ತು ಸಾಗರಗಳಲ್ಲಿರುವ (೭-೬-೭; ೧೦-೯೧-೩) ಸಂಪತ್ತುಗಳಿಗೆಲ್ಲಾ ಅವನೇ ಒಡೆಯ. ಆಕಾಶದಿಂದ ಮಳೆಯನ್ನು ಕರೆಯುತ್ತಾನೆ (೨-೬-೫) ಮತ್ತು ಅವನು ಮರುಭೂಮಿಯಲ್ಲಿ ಒಂದು ನೀರಿನ ತೊಟ್ಟಿಯಂತಿದಾನೆ (೧೦-೪-೧). ಆದುದರಿಂದಲೇ, ಅಗ್ನಿಯು, ಆಹಾರ, ಸಂಪತ್ತು, ಮತ್ತು ದಾರಿದ್ರ್ಯ, ಸಂತಾನಾಭಾವ, ಶತ್ರುಗಳು, ಪಿಶಾಚಿಗಳು ಮೊದಲಾದುವುಗಳಿಂದ ಬಿಡುಗಡೆ ಇವುಗಳಿಗೋಸ್ಕರ ಪ್ರಾರ್ಥಿತನಾಗಿದಾನೆ. ಇಂದ್ರನಿಂದ ಪ್ರಾಪ್ಯವಾದವುಗಳೆಲ್ಲಾ ಯುದ್ಧ ಮತ್ತು ಯುದ್ಧರಂಗಕ್ಕೆ ಸಂಬಂಧಿಸಿದುವು. ಆದರೆ ಅಗ್ನಿಯಿಂದ ಪ್ರಾಪ್ಯವಾದುವು ಸಂಸಾರ ಸಂಬಂಧವಾದವುಗಳೇ ಹೆಚ್ಚು. ಅಜ್ಞಾನದಿಂದ ಆಚರಿಸಲ್ಪಟ್ಟ ತಪ್ಪುಗಳನ್ನು ಕ್ಷಮಿಸುತ್ತಾನೆ (೪-೧೨-೪ ; ೭-೯೩-೭) ; ವರುಣನ ಕ್ರೋಧದಿಂದ ತೊಂದರೆಯಾಗದಂತೆ ನೋಡಿಕೊಳ್ಳುತ್ತಾನೆ (೪-೧-೪). ಪುತ್ರನಿಗೆ ಪ್ರಸನ್ನನಾಗಿ, ಅವನ ತಂದೆತಾಯಿಗಳು ಮಾಡಿದ ತಪ್ಪನ್ನೂ ಕ್ಷಮಿಸುತ್ತಾನೆ (ಅ. ವೇ. ೫-೩೦-೪ ; ತೈ. ಬ್ರಾ. ೩-೭-೧೨-೩ ಮತ್ತು ೪).

ಅಗ್ನಿಯು ಅಸುರನು, ಸಾಮ್ರಾಟನು, ಇಂದ್ರನಷ್ಟು ಬಲಿಷ್ಠನು (೭-೬-೧). ಮಹದಾಕಾಶಕಿಂತಲೂ ಅವನ ಮಹತ್ತ್ವ ಹೆಚ್ಚಿನದು (೧-೫೯-೫). ತಾನು ಜನಿಸಿದಾಗ ಆವರಿಸಿಕೊಂಡ ಎಲ್ಲಾ ಲೋಕಗಳಿಗಿಂತಲೂ (೩-೩-೧೦) ಅಥವಾ ಭೂಮ್ಯಾಕಾಶಗಳಿಗಿಂತಲೂ (೩-೬-೨ ; ೧೦-೮೮-೧೪), ಅಗ್ನಿಯು ದೊಡ್ಡವನು. ಇತರ ಎಲ್ಲಾ ದೇವತೆಗಳಿಗಿಂತಲೂ ಉತ್ತಮನು (೧-೬೮-೨). ಕತ್ತಲಿನಲ್ಲಿ ಅಡಗಿದ್ದಾಗ, ಎಲ್ಲಾ ದೇವತೆಗಳೂ ಹೆದರಿ, ಅವನಿಗೆ ಗೌರವ ಸಲ್ಲಿಸುತ್ತಾರೆ (೬-೯-೭). ವರುಣ, ಮಿತ್ರ ಮರುತ್ತುಗಳು ಮತ್ತು ಇತರ ಎಲ್ಲಾ ದೇವತೆಗಳೂ ಅವನನ್ನು ಸ್ತುತಿಸಿ, ಪೂಜಿಸುತ್ತಾರೆ (೩-೯-೮ ; ೩-೧೪-೪ ; ೧೦-೭೯-೯). ಅಗ್ನಿಯು ಪುರಾತನವಾದ ಮಹತ್ಕಾರ್ಯಗಳನ್ನು ಸಾಧಿಸಿದನು (೭-೬-೨). ಅವನ ಪರಾಕ್ರಮ ಕಾರ್ಯಗಳನ್ನು ಕೇಳಿ, ಮನುಷ್ಯರು ನಡುಗುತ್ತಾರೆ. ಯುದ್ಧದಲ್ಲಿ, ಅವನು ದೇವತೆಗಳಿಗೆ ಸ್ಥಳವನ್ನು ಕಲ್ಪಿಸಿಕೊಟ್ಟು (೧-೫೯-೫). ಅವರಿಗೆ ಶಾಪವಿಮೋಚನೆ ಮಾಡಿದನು (೭-೧೩-೨). ಸಹಸ್ರಾರು ಜನರನ್ನು ಜಯಿಸಿದಾನೆ. ಮನೆಯಿಂದ ದಸ್ಯುವನ್ನು ಓಡಿಸಿ, ಆರ್ಯನಿಗೆ ಬೆಳಕನ್ನು ದೊರಕಿಸಿದನು (೭-೫-೬). ಆರ್ಯರನ್ನು ಪ್ರೋತ್ಸಾಹಗೊಳಿಸಿ (೮-೯೨-೧), ದುರಾಚಾರಿಗಳಾದ ಪಣಿಗಳನ್ನು ನಾಶಮಾಡಿದನು (೭-೬-೩). ಇಂದ್ರನಿಗೇ ಮುಖ್ಯವಾಗಿ ಸಲ್ಲಬೇಕಾದ 'ವೃತ್ರಹಾ' (ವೃತ್ರನನ್ನು ವಧಿಸಿದವನು) ಎಂಬುದು ಅನೇಕ ಸಲವೂ, 'ಪುರಂದರ' (ಶತ್ರುಪುರಗಳನ್ನು ಭೇದಿಸುವವನು, ನಾಶಮಾಡುವವನು) ಎಂಬುದು ೨-೩ ಸಲವೂ, ಅಗ್ನಿಗೆ ಪ್ರಯುಕ್ತವಾಗಿವೆ. ಅಗ್ನಿಯ ವಿದ್ಯುದ್ರೂಪಕ್ಕೆ ಇಂತಹ



CC-0. Jangamwadi Math Collection. Digitized by eGangotri

ಪರಾಕ್ರಮದ ಕಾರ್ಯಗಳು ತಕ್ಕುವಾದರೂ, ಈ ಗುಣಗಳು ಇಂದ್ರನಿಂದ ಲಬ್ಧವಾದುವೆಂದು ಹೇಳುವುದು ಸಾಧುವಾಗಿದೆ.

ಅಗ್ನಿಯು ಭೂಮ್ಯಾಕಾಶಗಳ ಪುತ್ರನೆಂಬುದು ಪ್ರಸಿದ್ಧವಾಗಿದ್ದರೂ, ಅವನು ಅವೆರಡನ್ನೂ ಸೃಜಿಸಿದನೆಂದೂ (೧-೯೬-೪; ೭-೫-೭ನ್ನು ಹೋಲಿಸಿ) ಹೇಳಿದೆ. ನಾಶರಹಿತವಾದ ಅವನ ನಿಯಮಗಳು (೨-೮-೩) ಭೂಮ್ಯಾಕಾಶಗಳೆರಡರಿಂದಲೂ ಅನುಸರಿಸಲ್ಪಡುತ್ತವೆ (೭-೫-೪). ಅವನು ಅವೆರಡು ಲೋಕಗಳನ್ನೂ ವಿಸ್ತರಿಸಿದನು (೩-೬-೫; ೭-೫-೪) ಅಥವಾ ಅವೆರಡನ್ನೂ ತೊಗಲಿನಂತೆ ಹರಡಿದನು (೬-೮-೩). ತನ್ನ ಜ್ವಾಲೆ ಅಥವಾ ಧೂಮದಿಂದ ಆಕಾಶವನ್ನು ನಿಲ್ಲಿಸಿದನು (೩-೫-೧೦; ೪-೬-೨). ಆ ಎರಡು ಲೋಕಗಳನ್ನೂ ಪ್ರತ್ಯೇಕಿಸಿ ಇಟ್ಟನು (೬-೮-೩). ಸತ್ಯಾರ್ಥವಾದ ಮಂತ್ರಗಳಿಂದ ಭೂಮ್ಯಾಕಾಶಗಳನ್ನು ನಿಲ್ಲಿಸಿದನು (೧-೬೭-೩). ಪ್ರಪಂಚದ ಮುಂಭಾಗದಲ್ಲಿ ಇರುತ್ತಾನೆ ಅಥವಾ ರಾತ್ರಿಯ ಹೊತ್ತು ಭೂಮಿಗೆಲ್ಲಾ ಯಜಮಾನನಾಗಿರುತ್ತಾನೆ (೧೦-೮೮-೫, ಮತ್ತು ೬), ಅವನು ಆಕಾಶಕ್ಕೆ ಯಜಮಾನ ಮತ್ತು ಶಿಖರಪ್ರಾಯನೂ ಹೌದು (೧-೫೯-೨, ೬-೭-೧, ೮-೪೪-೧೬). ವಾಯುವಿನಿಂದ ಪರಿಮಿತಿಯನ್ನು ಗೊತ್ತುಮಾಡಿ, ತನ್ನ ಮಹತ್ತ್ವದಿಂದ ಆಕಾಶದ ಗುಮ್ಮಟವನ್ನು ಮುಟ್ಟಿದನು (೬-೮-೨). ಅಂತರಿಕ್ಷ ಮತ್ತು ತೇಜೋವಿಶಿಷ್ಟವಾದ ಸ್ವರ್ಗಲೋಕದ ಪ್ರದೇಶಗಳ ಅಳತೆಯನ್ನು ಗೊತ್ತುಮಾಡಿದನು (೬-೭-೭). ಸೂರ್ಯನು ಆಕಾಶವನ್ನು ಏರುವಂತೆ ಮಾಡಿದವನು ಅಗ್ನಿ (೧೦-೧೫೬-೪). ಭೂಮಿಯಲ್ಲಿ ಅಗ್ನಿಯನ್ನು ಹೊತ್ತಿಸುವುದಕ್ಕೂ, ಸೂರ್ಯೋದಯಕ್ಕೂ ವಿಲಕ್ಷಣ ಸಂಬಂಧವಿದೆಯೆಂಬುದು ಸ್ಪಷ್ಟವಾಗುತ್ತದೆ. ನಾವು ಇಲ್ಲಿ ನಿನ್ನನ್ನು (ಅಗ್ನಿಯನ್ನು) ಜ್ವಲನಗೊಳಿಸುತ್ತೇವೆ (೫-೬-೪), ಅಂತರಿಕ್ಷದಲ್ಲಿ ನಿನ್ನ ಆಶ್ಚರ್ಯಕರವಾದ ರೂಪವಿಶೇಷವು ಮೂಡಲಿ. ಬ್ರಾಹ್ಮಣದಲ್ಲಿ ಈ ಅಭಿಪ್ರಾಯವು ಇನ್ನೂ ಸ್ಪಷ್ಟವಾಗಿದೆ. ಸೂರ್ಯೋದಯಕ್ಕೆ ಮುಂಚೆ ಅಗ್ನಿಯಲ್ಲಿ ಹೋಮಮಾಡಿ, ಮನುಷ್ಯನು ಸೂರ್ಯನು ಉದಿಸುವಂತೆ ಮಾಡುತ್ತಾನೆ, ಇಲ್ಲದಿದ್ದರೆ, ಸೂರ್ಯನು ಉದಿಸುವುದೇ ಇಲ್ಲ (ಶ. ಬ್ರಾ. ೨-೩-೧-೫, ತೈ. ಸಂ. ೪-೭-೧೩-೩). ಸಾಧಾರಣವಾಗಿ, ಸೂರ್ಯೋದಯ ಮತ್ತು ಅಗ್ನಿಜ್ವಲನಗಳೆರಡೂ ಏಕಕಾಲದಲ್ಲಿ ಆಗುತ್ತವೆ ಎಂದು ಹೇಳಿದೆ. ಅಗ್ನಿಯು ಜನಿಸಿದಾಗ, ಸೂರ್ಯನು ಕಾಣಿಸಿಕೊಂಡನು (೪-೩-೧೧). ಅಗ್ನಿಯೇ ಆಕಾಶವನ್ನು ನಕ್ಷತ್ರರಂಜಿತವನ್ನಾಗಿ ಮಾಡಿದನು (೧-೬೮-೫). ಹಾರುವ, ನಡೆಯುವ, ನಿಂತಿರುವ ಅಥವಾ ಚಲಿಸುವ ವಸ್ತುಗಳೆಲ್ಲವನ್ನೂ ಅವನೇ ಸೃಜಿಸಿದನು (೧೦-೮೮-೪). ಈ ಪ್ರಾಣಿಗಳಲ್ಲಿ (೩-೨-೧೦), ಸತ್ಯಗಳಲ್ಲಿ ಮತ್ತು ಸಮಸ್ತ ಪ್ರಾಣಿಗಳಲ್ಲಿ, ಇವನಿಂದ ಗರ್ಭಾಣುವು ಸ್ಥಾಪಿತವಾಯಿತು ಮತ್ತು ಇವನಿಂದಲೇ ಭೂಮಿ ಮತ್ತು ಸ್ತ್ರೀಯರು ಫಲವತಿಯರಾದುದು (೧೦-೧೮೩-೩). ಅಗ್ನಿಯೇ ಮೊದಲು ಮನುಷ್ಯರನ್ನು ಸೃಜಿಸಿದನು (೧-೯೬-೨); ಭೂಮಿ, ಆಕಾಶ, ಉದಕ ಮೊದಲಾದವುಗಳು ಅವನಿಂದ ಸೃಷ್ಟವಾದುವೆಂದು ಹೇಳುವಾಗ ಪ್ರಾಸಂಗಿಕವಾಗಿ ಈ ಅಭಿಪ್ರಾಯವೂ ಬಂದಿರಬೇಕೇ ಹೊರತು, ಅವನೇ ಮನುಷ್ಯನನ್ನು ಸೃಜಿಸಿದನೆಂದು ಹೇಳಲಾಗುವುದಿಲ್ಲ. ಕಡೆಯದಾಗಿ, ಅಗ್ನಿಯು ಅಮೃತತತ್ತ್ವಕ್ಕೆ ಒಡೆಯ (೭-೪-೬) ಮತ್ತು ರಕ್ಷಕ (೭-೭-೪) ಮತ್ತು ಮರ್ತ್ಯರಿಗೆ ಅದನ್ನು ಅನುಗ್ರಹಿಸುತ್ತಾನೆ (೧-೩೧-೭).

'ಅಪಾಂನಪಾತ್' ಮುಂತಾದ ಸ್ವರ್ಗೀಯಾಗ್ನಿಯ ಕೆಲವು ಹೆಸರುಗಳು ಪ್ರತ್ಯೇಕವಾದ ದೇವತೆಗಳೆಂದು ಗಣಿತವಾಗಿವೆ. ಮತ್ತು ಕೆಲವು ಅಸಂಪೂರ್ಣವಾದ ವ್ಯಕ್ತಿತ್ವವನ್ನು ಪಡೆದಿವೆ. ವೈಶ್ವಾನರ ಎಂಬುದು ಸುಮಾರು ೬೦ ಸಲ (ಐದು ಬಿಡಿ ಋಕ್ಕುಗಳು ಮತ್ತು ಹದಿನಾಲ್ಕು ಸೂಕ್ತಗಳಲ್ಲಿ) ಬರುತ್ತದೆ. ಎಲ್ಲ ಸಂದರ್ಭಗಳಲ್ಲೂ, ಅನುಕ್ರಮಣಿಯ ಪ್ರಕಾರ, ವೈಶ್ವಾನರಾಗ್ನಿಯೇ ದೇವತೆ. ವೈಶ್ವಾನರ ಎಂಬುದು ಒಂಟಿಯಾಗಿ



CC-0. Jangamwadi Math Collection. Digitized by eGangotri

ಎಲ್ಲಿಯೂ ಬಂದಿಲ್ಲ. ವೈಶ್ವಾನರ ಎಂದರೆ, ಎಲ್ಲಾ ಮನುಷ್ಯರಿಗೂ ಸಂಬಂಧಿಸಿದುದು ಎಂದರ್ಥ. ಅಂದರೆ ಈ ಪದದಿಂದ ಅಗ್ನಿಯ ಎಲ್ಲಾ ರೂಪಗಳು ಅಭಿಪ್ರೇತವಾಗಬಹುದು. ವೈಶ್ವಾನರಾಗ್ನಿದೇವತಾಕವಾದ ಮಂತ್ರಗಳಲ್ಲಿ, ಸ್ವರ್ಗೀಯಾಗ್ನಿಯು ಭೂಮಿಗೆ ಇಳಿದು ಬಂದ ಕಥೆಯಿದೆ (೩-೨-೪ ; ೬-೮-೪); ವೈಶ್ವಾನರಾಗ್ನಿಗೇ ಮಾತರಿಶ್ವಾ ಎಂಬ ಪ್ರಯೋಗವೂ ಇದೆ (೩-೨೬-೨). ನಿರುಕ್ತದಲ್ಲಿ (೫-೧) ವೈಶ್ವಾನರ ಎಂಬುದು ಅಗ್ನಿನಾಮಗಳಲ್ಲಿ ಒಂದು. ನಿರುಕ್ತದಲ್ಲಿ ಯಾಸ್ಕರು (ನಿರು. ೭-೨೩) ಇದರ ಮೇಲೆ ವ್ಯಾಖ್ಯಾನದಲ್ಲಿ, ಪುರಾತನ ಯಾಜ್ಞಿಕರು, ವೈಶ್ವಾನರಾಗ್ನಿ ಎಂದರೆ ಸೂರ್ಯನೆಂದೂ, ಶಾಕಪೂಣಿಯು, ಈಗ ರೂಢಿಯಲ್ಲಿರುವ ಅಗ್ನಿಯೆಂದೂ, ಭಾವಿಸುತ್ತಿದ್ದರೆಂದು ಬರೆದಿದಾರೆ. ಈಗ ಬಳಕೆಯಲ್ಲಿರುವ ಅಗ್ನಿಗೇ ವೈಶ್ವಾನರಾಗ್ನಿಯೆಂದು ಹೆಸರು. ಇವನೇ ಸ್ತುತಿಹೋಮಾದಿಗಳಿಗೆ ಉದ್ದಿಷ್ಟನು, ಒಂದೊಂದು ಸಲ ಮಾತ್ರ, ಅಂತರಿಕ್ಷ ಮತ್ತು ಸ್ವರ್ಗಲೋಕದ ಅಗ್ನಿಗಳಿಗೆ ಈ ಹೆಸರು ಉಪಯೋಗಿಸಿದೆ, ಎಂದು ಯಾಸ್ಕರು ತನ್ನ ಸ್ವಂತ ಅಭಿಪ್ರಾಯವನ್ನು (ನಿರು.೭-೩೧-) ತಿಳಿಸಿದಾರೆ. ಆದರೆ. ಶ್ರೌತಕರ್ಮ ಸಂಬಂಧವಾದ ಗ್ರಂಥಗಳಲ್ಲಿ ವೈಶ್ವಾನರನು ಅಗ್ನಿಯ ಒಂದು ವಿಶೇಷ ರೂಪವೆಂದೇ ಗಣನೆ (ಆ. ಶ್ರೌ. ಸೂ. ೧-೩-೨೩ ; ಕಾ. ಶ್ರೌ. ಸೂ. ೨೩-೩-೧ ; ಪಂ. ಬ್ರಾ. ೨೧-೧೦-೧೧ ; ಶ. ಬ್ರಾ. ೧-೫-೧-೧೬).

ತನೂನಪಾತ್ ಎಂಬ ಅಗ್ನಿಯ ಹೆಸರು ಋಗ್ವೇದದಲ್ಲಿ ಆಪ್ರೀ ಸೂಕ್ತಗಳಲ್ಲಿ ಎಂಟು ಸಲ ಪ್ರಯೋಗಿಸಿದೆ. ಈ ಎಂಟರಲ್ಲಿ, ಎರಡು ಸಲ (೩-೨೯-೧೧ ; ೧೦-೯೨-೨) ಹೊರತಾಗಿ, ಉಳಿದವುಗಳೆಲ್ಲಾ ಆಪ್ರೀ ಸೂಕ್ತಗಳ ಎರಡನೆಯ ಋಕ್ಕಿನಲ್ಲೇ ಬರುತ್ತದೆ. ನಿರುಕ್ತದಲ್ಲಿ ಇದೂ ಅಗ್ನಿಯ ಒಂದು ಸ್ವತಂತ್ರನಾಮವು (೫-೨). ಯಾಸ್ಕರು ಈ ಪದಕ್ಕೆ (ನಿರು. ೮-೫). ತನಗೆ ಪುತ್ರನಾಗಿ ಜನಿಸಿದವನು ಅಂದರೆ ಕಾಡು ಮತ್ತು ಮೋಡಗಳಲ್ಲಿ ತಾನಾಗಿಯೇ ವ್ಯಕ್ತನಾದವನು ಎಂದು ವಿವರಣೆ ಕೊಟ್ಟದಾರೆ. ತನೂನಪಾತನಿಗೆ 'ಅಸುರಃ ಗರ್ಭಃ' (೩-೨೯-೧೧) ದೇವಲೋಕದ ದೇವತೆಗಳಿಗೆ ಸಂಬಂಧಿಸಿದ, ದಿವ್ಯವಾದ ಗರ್ಭ) ಎಂದು ಹೇಳಿದೆ. ಇದು ಮಾತರಿಶ್ವ ಮತ್ತು ನರಾಶಂಸರಿಗೆ ಎಲ್ಲಿಯೂ ಹೇಳಿಲ್ಲ. ಉಷೋದೇವಿಯು ಪುರೋಹಿತನಾದ ತನೂನಪಾತನನ್ನು ಚುಂಬಿಸುತ್ತಾಳೆ [೧೦-೯೨-೨ ; ೫-೫೮-೬ ನ್ನು ಹೋಲಿಸಿ). ತನೂನಪಾತನನ್ನು 'ಸುಜಿಹ್ವ' (ಶುಭವಾದ, ಸುಂದರವಾದ ನಾಲಿಗೆಯುಳ್ಳವನೇ) ಎಂದು ಸಂಬೋಧಿಸಿದೆ (೧೦-೧೧೦-೨). ದೇವತೆಗಳಿಗೆ ಯಾಗವನ್ನು ತಲುಪಿಸು ಎಂದು ಪ್ರಾರ್ಥಿತನಾಗಿದಾನೆ [೧-೧೩-೨ ; ೧೦-೧೧೦-೨]. ಅಪರಿಮಿತವಾದ ಘೃತ ಮತ್ತು ಮಧುಯುಕ್ತವಾದ ಹೋಮವನ್ನು ಹಂಚುತ್ತಾನೆ (೧-೧೪೨-೨ ; ೧-೧೮೮-೨ ನ್ನು ಹೋಲಿಸಿ). ದೇವತೆಗಳು ಅವನಿಗೆ ಪ್ರತಿದಿನ ಮೂರು ಸಲವೂ, ವರುಣ, ಮಿತ್ರ ಮತ್ತು ಅಗ್ನಿಗಳಿಗೆ ಒಂದು ಸಲವೂ ಗೌರವವನ್ನು ಸಲ್ಲಿಸುತ್ತಾರೆ (೩-೪-೨).

ತನೂನಪಾತ್ ಎಂಬುವುದಕ್ಕಿಂತಲೂ ಹೆಚ್ಚಾಗಿ ಉಪಯೋಗಿಸಿರುವ ಪದವು 'ನರಾಶಂಸ' ಎನ್ನುವುದು. ನಿರುಕ್ತದ ಪ್ರಕಾರ, (೫-೩) ಇದೂ ಒಂದು ಸ್ವತಂತ್ರ ನಾಮ. ಆದರೆ, ಇದು ಅಗ್ನಿಗೆ ಮಾತ್ರ ಉಕ್ತವಾಗಿಲ್ಲ ; ಪೂಷಣನಿಗೆ ಎರಡುಕಡೆ ಪ್ರಯೋಗಿಸಿದೆ [ ೧-೧೦೬-೪ ; ೧೦-೬೪-೩ ] ಈ ಪದವು ಆಪ್ರೀ ಸೂಕ್ತಗಳ ಮೂರನೆಯ ಋಕ್ಕಿನಲ್ಲಿಯೂ, 'ಆಪ್ರಿ' ಎನ್ನುವ ಸೂಕ್ತಗಳ ಎರಡನೆಯ ಋಕ್ಕಿನಲ್ಲಿಯೂ ಬರುತ್ತದೆ. ನರಾಶಂಸನಿಗೆ ನಾಲ್ಕು ಅಂಗಗಳು [ಚತುರಂಗಃ, ೧೦-೯೨-೧೧] ಮತ್ತು ಇವನಿಗೆ ಸ್ವರ್ಗಲೋಕದ ಪತ್ನಿಯಿದ್ದಾಳೆ [ಗ್ನಾಸ್ಪತಿಃ, ೨-೩೮-೧೦]. ಕೈ ಮತ್ತು ನಾಲಿಗೆಗಳ ಮೇಲೆ ಮಧುಯುಕ್ತನಾಗಿ ಯಾಗಮಾಡುತ್ತಾನೆ [೧-೧೪೨-೩]. ಮೂರು ದಿನಕ್ಕೆ ಮೂರು ಸಲ ಯಾಗದಲ್ಲಿ ಮಧುಸೇಚನ ಮಾಡುತ್ತಾನೆ [೧-೧೩-೩ ; ೫-೫-೨]. ದೇವತೆಗಳಿಗೆ ಮುಖಂಡನಾಗಿ ಸ್ವರ್ಗಲೋಕಗಳಿಗೂ, ದೇವತೆಗಳಿಗೂ ತೈಲಸೇಚನ ಮಾಡುತ್ತಾನೆ. [೨-೩-೨]. ಆರಾಧಕರು ಅವನ ಯಾಗವನ್ನು ಸುಖಪ್ರದವನ್ನಾಗಿ ಮಾಡುತ್ತಾನೆ [೧೦-೭೦-೨]. ನರಾಶಂಸನಿಗೂ ದೈವ್ಯನಿಗೂ ಮತ್ತು ಬಂದು, ಅವರಿಗೆ ಯಾಗವನ್ನು ಸುಖಪ್ರದವನ್ನಾಗಿ ಮಾಡುತ್ತಾನೆ [೭-೨-೨]. ನರಾಶಂಸನಿಗೂ ದೈವ್ಯನಿಗೂ ಮತ್ತು ಗಳ ಮೂಲಕ, ದೇವತೆಗಳ ಮಹತ್ವವನ್ನು ಸ್ತುತಿಸುತ್ತಾರೆ [೭-೨-೨].



CC-0. Jangamwadi Math Collection. Digitized by eGangotri

ಸೋಮದೇವತೆಯು ಮಧ್ಯಸ್ಥಿಕೆ ಮಾಡುತ್ತಾನೆ [೯-೮೬-೪೨] ; ಅಂದರೆ ಸ್ವರ್ಗ ಮತ್ತು ಅಗ್ನಿಗಳ ಮಧ್ಯೆ ಇರಬಹುದು. ಅಗ್ನಿಯು ಜನಿಸಿದಾಗ, ಅವನಿಗೆ ನರಾಶಂಸನೆಂದು ಹೆಸರು [೩-೨೯-೧೧] ಬೃಹಸ್ಪತಿದೇವತಾಕವಾದ ಸೂಕ್ತದ [೧೦-೧೮೨-೨] ಒಂದು ಮಂತ್ರದಲ್ಲಿ ನರಾಶಂಸನಿಂದ ರಕ್ಷಣೆಯು ಪ್ರಾರ್ಥಿತವಾಗಿದೆ; ಮತ್ತೊಂದರಲ್ಲಿ ಅವನೇ ದೇವಲೋಕದ ಯಾಗಕರ್ತೃವೆಂದು ಉಕ್ತವಾಗಿದೆ [೧-೧೮-೯-] ಈ ಎರಡರಲ್ಲಿ ಅವನೇ ಬೃಹಸ್ಪತಿಯೆಂದು ಗಣನೆಯಿದ್ದಂತೆ ಕಾಣುತ್ತದೆ. ನರಾಶಂಸ ಪದವು, ನರ ಮತ್ತು ಶಂಸ ಪದಗಳಿಂದ ಆಗಿರುವ ಸಮಸ್ತ ಪದ ನರಾಂ ಶಂಸಃ' ಮತ್ತು[೨-೩೬-೪ ; ೧-೧೪೧-೧೧] 'ದೇವಾನಾಂ ಶಂಸಂ' ಎಂದು ಪ್ರಯೋಗಿಸಿರುವುದರಿಂದ, ಈ ಪದಕ್ಕೆ ಮನುಷ್ಯರಿಂದ ಸ್ತುತ್ಯನು ಎಂದರ್ಥವಾಗಬಹುದು.

## ಬೃಹಸ್ಪತಿ

ಈ ದೇವತೆಯು ತಕ್ಕಮಟ್ಟಿಗೆ ಪ್ರಾಮುಖ್ಯಸ್ಥಾನವನ್ನೇ ಪಡೆದಿದಾನೆ. ಹನ್ನೊಂದು ಸೂಕ್ತಗಳು ಈ ದೇವತೆಯನ್ನು ಹೊಗಳುತ್ತವೆ. ಇಂದ್ರನ ಜೊತೆಯಲ್ಲಿ ದ್ವಂದ್ವದೇವತೆಯಾಗಿ ಎರಡು ಸೂಕ್ತಗಳಲ್ಲಿ [೪-೪೯ ; ೭-೯೭] ಸ್ತುತನಾಗಿದಾನೆ. ಬೃಹಸ್ಪತಿ ಎಂಬ ಪದವು ಸುಮಾರು ೧೨೦ ಸಲವೂ, ಇದಲ್ಲದೆ, ಬ್ರಹ್ಮಣಸ್ಪತಿ ಎಂಬುದಾಗಿ ೫೦ ಸಲವೂ ಬರುತ್ತದೆ. ಬೃಹಸ್ಪತಿ ಮತ್ತು ಬ್ರಹ್ಮಣಸ್ಪತಿಗಳು ಒಂದೇ ಮಂತ್ರದಲ್ಲಿ ಪರಸ್ಪರ ವಿನಿಮಯವಾಗಿವೆ [೨-೨೩]. ಅವನ ಅಂಗಾಂಗ ವರ್ಣನೆ ಬಹಳ ಕಡಿಮೆ. ಅವನಿಗೆ ಏಳು ಮುಖಗಳು ಮತ್ತು ಏಳು ಕಿರಣಗಳು [೪-೫೦-೪], ಸುಂದರ ಜಿಹ್ವೆ [೧-೧೯೦-೧ ; ೪-೫೦-೧] ; ಮೊನಚಾದ ಶೃಂಗಗಳು (೧೦.೧೫೫-೨]. ನೀಲವಾದ ಬೆನ್ನು [೫-೪೩.೧೨], ಮತ್ತು ನೂರು ರೆಕ್ಕೆಗಳು [೭-೯೭-೭]. ಅವನು ಸುವರ್ಣವರ್ಣ ಮತ್ತು ಕೆಂಪು ಛಾಯೆಯವನು. [೫-೪೩-೧೨] ತೇಜಸ್ವಿ [೩.೬೨-೬ , ೭-೯೭-೭), ಶುದ್ಧನು [೭-೯೭-೭] ಮತ್ತು ಸ್ಪಷ್ಟ ಧ್ವನಿಯುಳ್ಳವನು [೭-೯೭-೫]. ಅವನಲ್ಲಿ ಒಂದು ಧನುಸ್ಸು ಇದೆ; ಅದಕ್ಕೆ ಋತವೇ [ಯಾಗ, ಸತ್ಯ] ಹುರಿ (ಜ್ಯಾ) ಮತ್ತು ಸಾಧುತ್ವ (ಒಳ್ಳೆಯದು) ಬಾಣ [೨-೨೪-೮ ; ಅ. ವೇ, ೫-೧೮-೮, ೯ಗಳ್ನು ಹೋಲಿಸಿ]. ಅವನು ಚಿನ್ನದ ಕೈ ಸುತ್ತಿಗೆಯನ್ನೂ (೭-೯೭-೭), ತ್ವಷ್ಟೃವಿನಿಂದ [೧೦.೫೩-೯] ಹರಿತ ಮಾಡಲ್ಪಡುವ ಒಂದು ಕಬ್ಬಿಣದ ಕೊಡಲಿಯನ್ನು ಉಪಯೋಗಿಸುತ್ತಾನೆ. ಯಾಗವೆಂಬ ರಥದಲ್ಲಿ ಸಂಚರಿಸುತ್ತಾನೆ [೧೦-೧೦೩-೪]; ಇದು ಪಿಶಾಚಿಗಳನ್ನು ವಧಿಸುತ್ತದೆ; ಗೋಶಾಲೆಗಳ ದ್ವಾರಗಳನ್ನು ಭೇಧಿಸಿ ತೆಗೆಯುತ್ತದೆ ; ಮತ್ತು ಬೆಳಕನ್ನು ಸಂಪಾದಿಸಿ ಕೊಡುತ್ತದೆ [೨-೨೩-೩]. ಅವನ ರಥವು ಕೆಂಪು ಛಾಯೆಯ ಕುದುರೆಗಳಿಂದ ಎಳೆಯಲ್ಪಡುತ್ತದೆ.

ಸ್ವರ್ಗದ ಅತ್ಯುನ್ನತ ಪ್ರದೇಶದಲ್ಲಿ, ತೇಜೋರಾಶಿಯಿಂದ ಬೃಹಸ್ಪತಿಯು ಜನಿಸಿ, ಗರ್ಜಿಸುತ್ತಾ ಕತ್ತಲನ್ನು ಹೋಗಲಾಡಿಸಿದನು [೪-೫೦-೪ ; ೧೦-೬೮-೧೨ ನ್ನು ಹೋಲಿಸಿ), ಅವನು ಎರಡು ಲೋಕಗಳ ಸಂತಾನ [೭-೯೭-೮]: ಆದರೆ ಅವನನ್ನು ತ್ವಷ್ಟೃವು ಉತ್ಪತ್ತಿ ಮಾಡಿದನೆಂದೂ (೨-೨೩-೧೭] ಹೇಳಿದೆ. ಅವನಿಗೆ ದೇವತೆಗಳ ಜನಕನೆಂದೂ [೨-೨೬-೩] ಹೇಳಿದೆ; ಕಮ್ಮಾರನ ಸುತ್ತಿಗೆಯ ಏಟಿನಿಂದ ಚೂರುಗಳು ಹಾರುವಂತೆ, ದೇವತೆಗಳು ಇವನಿಂದ ಉತ್ಪನ್ನರಾದರು [೧೦-೭೨-೮].

ಅಗ್ನಿಗೆ ವಿಶೇಷವಾಗಿ ಪ್ರಯೋಗಿಸುವ ಪುರೋಹಿತ ಶಬ್ದವು ಇವನಿಗೂ ಪ್ರಯುಕ್ತವಾಗಿದೆ (೨-೨೪-೯ ; ವಾ. ಸಂ. ೨೦-೧೧ ; ತೈ. ಸಂ. ೬-೪-೧೦ ; ಐ. ಬ್ರಾ. ೮-೨೭-೪). ಪುರಾತನ ಋಷಿಗಳು ಅವನನ್ನು ತಮ್ಮ ನಾಯಕನನ್ನಾಗಿ ಆರಿಸಿಕೊಂಡರು [೪-೫೦-೧] ಅವನು ಸೋಮನ ಪುರೋಹಿತನು [ಶ. ಬ್ರಾ. ೪-೧-೨-೪]. ಅವನು 'ಬ್ರಹ್ಮ' ನೂ ಹೌದು [೨-೧-೩ ; ೪-೫೦-೮ ; ೧೦-೧೪೧-೩]. ಇತರ ವೇದಗಳಲ್ಲಿ, ಅವನು ದೇವತೆ



CC-0. Jangamwadi Math Collection. Digitized by eGangotri

ಗಳ ಯಾಗಗಳಲ್ಲಿ ‘ಬ್ರಹ್ಮ’ ನಾಗಿ ಕೆಲಸ ಮಾಡಿದ್ದನೆಂದು ಹೇಳಿದೆ. ಅವನೇ ದೇವತೆಗಳು ಉಪಯೋಗಿಸುವ ‘ಬ್ರಹ್ಮ’ (ಎಂದರೆ ಸ್ತೋತ್ರ ತೈ. ಸಂ. ೨-೨-೯-೧ ; ಇತ್ಯಾದಿ) ಬೃಹಸ್ಪತಿಯು ಭಕ್ತಿ ಪ್ರಚೋದಕ ಮತ್ತು ಅವನಿಲ್ಲದೇ ಯಾಗವು ಜಯಪ್ರದವಾಗಿ ಕೊನೆಗಾಣುವುದಿಲ್ಲ (೧-೧೮-೭). ಮಾರ್ಗಕರ್ತನಾಗಿ, ದೇವತೆಗಳ ಸಮಾರಂಭಕ್ಕೆ ಸುಲಭವಾಗಿ ಲಭಿಸುವಂತೆ ಮಾಡುತ್ತಾನೆ [೨-೨೩-೬ ಮತ್ತು ೭]. ಅವನ ಮೂಲಕ, ದೇವತೆಗಳು ತಮ್ಮ ಹೋಮಭಾಗವನ್ನು ಪಡೆದರು [೨-೨೩-೧]. ಈ ಹೋಮಗಳಿಂದ, ಅವನು ದೇವತೆಗಳನ್ನು ಎಚ್ಚರಗೊಳಿಸುತ್ತಾನೆ [ಅ. ವೆ. ೧೯-೬೩-೧]. ಇಂದ್ರ, ವರುಣ, ಮಿತ್ರ, ಅರ್ಯಮ ಮತ್ತು ಇತರ ದೇವತೆಗಳಿಗೆ ಸಂತೋಷವುಂಟುಮಾಡುವ ಸೂಕ್ತವನ್ನು ತಾನೇ ಉಚ್ಚರಿಸುತ್ತಾನೆ (೧-೪೦-೫). ಗೀತಗಳನ್ನು ಗಾನಮಾಡುತ್ತಾನೆ (೧೦-೩೬-೫). ಅವನ ಗಾನವು ಸ್ವರ್ಗವನ್ನು ಮುಟ್ಟುತ್ತದೆ (೧-೧೯೦-೪) ಮತ್ತು ಛಂದಸ್ಸು ಅವನಿಗೇ ಸೇರಿದುದು (ಮೈ. ಸಂ. ೧-೯-೨). ಅವನು ಗಾಯಕರೊಡನೆ ಬೆರೆಯುವುದುಂಟು (೭-೧೦-೪ ; ೧೦-೧೪-೩). ಹಂಸಗಳಂತೆ ಧ್ವನಿಮಾಡುವ ತನ್ನ ಸ್ನೇಹಿತರೊಡಗೂಡಿ (ಇಲ್ಲಿ ಹಂಸಗಳು ಹಿಂದಿನ—೧೦-೬೭-೨— ಋಕ್ಕಿನಲ್ಲಿ ಪ್ರಸಕ್ತರಾಗಿರುವ ಅಂಗಿರಸರು ಇರಬಹುದು), ಹಾಡುತ್ತಾನೆ (೧೦-೬೭-೩). ಅವನ ಜೊತೆಯಲ್ಲಿ ಗಾಯಕರ ಗುಂಪೇ ಒಂದಿದೆ (೪-೫೦-೫). ಇದರಿಂದಲೇ, ಇವನಿಗೆ ‘ಗಣಪತಿ’ ಎಂಬ ಹೆಸರು ಬಂದಿರಬಹುದು (೨-೨೩-೧). ಈ ಹೆಸರು ಇಂದ್ರನಿಗೂ ಒಂದು ಕಡೆ (೧೦-೧೧೨-೯) ಪ್ರಯೋಗಿಸಿದೆ.

ಬ್ರಹ್ಮಣಸ್ಪತಿ ಎಂಬ ಪದದಿಂದ ವ್ಯಕ್ತವಾಗುವಂತೆ, ಅವನು ಸ್ತೋತ್ರಗಳಿಗೆ ಒಡೆಯ. ಸ್ತುತಿವಾಕ್ಯಗಳಿಗೆ ರಾಜನೆಂದೂ, ಋಷಿಗಳಲ್ಲೆಲ್ಲಾ ಅತಿ ಶ್ರೇಷ್ಠನಾದ ಋಷಿಯೆಂದೂ (೨-೨೩-೧) ಹೊಗಳಲ್ಪಟ್ಟಿದಾನೆ. ಋತ (ಯಾಗದ ಅಂಗಗಳು) ದ ರಥವನ್ನೇರಿ, ಸ್ತುತ್ಯಾದಿ ದ್ವೇಷಿಗಳನ್ನೂ, ದೇವತೆಗಳ ಶತ್ರುಗಳನ್ನೂ ಜಯಿಸುತ್ತಾನೆ (೨-೨೩-೩ ಮತ್ತು ೮) ಅವನಿಂದಲೇ ಎಲ್ಲಾ ಸ್ತುತಿವಾಕ್ಯಗಳೂ ಹೊರಡುತ್ತವೆ (೧-೧೯೦-೨). ಅವನು ಸ್ವತಃ ಪ್ರಾರ್ಥನಾ ವಾಕ್ಯಗಳನ್ನುಚ್ಚರಿಸುತ್ತಾನೆ (೧-೪೦-೫); ಮತ್ತು ಅವುಗಳನ್ನು ಮನುಷ್ಯಪುರೋಹಿತನಿಗೆ ತಿಳಿಯಪಡಿಸುತ್ತಾನೆ (೧೦-೯೮-೭) ಹೀಗೆಯೇ, ಮುಂದೆ, ಇವನಿಗೇ ‘ವಾಚಸ್ಪತಿ’ (ಭಾಷೆಗೆ ಯಜಮಾನ) ಎಂಬ ಹೆಸರು ಬಂದಿರುವುದು (ಮೈ. ಸಂ. ೨-೬-೬ ; ಶ. ಬ್ರಾ. ೧೪-೪-೧-೨೩ ನ್ನು ಹೋಲಿಸಿ). ವೇದಗಳಿಂದೀಚಿನ ಪುರಾಣಾದಿಗಳಲ್ಲಿ ಬೃಹಸ್ಪತಿಗೆ, ವಾಚಸ್ಪತಿಯೆನ್ನುವುದು ರೂಢಿಗೆ ಬಂದಿದೆ.

ಅಗ್ನಿಗೂ ಬೃಹಸ್ಪತಿಗೂ ಸಾಮ್ಯವನ್ನು ಹೇಳುವಂತೆ ತೋರುವ ವಾಕ್ಯಗಳು ಅನೇಕ ಇವೆ. ಸ್ತುತಿವಾಕ್ಯಗಳಿಗೆ ಒಡೆಯನೂ, ಮಿತ್ರನಂತೆ ಸ್ಫುರದ್ರೂಪಿಯೂ ಆದ ಅಗ್ನಿಯು ಪ್ರಾರ್ಥಿಸಲ್ಪಟ್ಟಿದಾನೆ (೧-೩೮-೧೩). ಬೇರೆ ಒಂದು ವಾಕ್ಯದಲ್ಲಿ, ಅಗ್ನಿಯು ಬೃಹಸ್ಪತಿ ಮತ್ತು ಕೆಲವು ಇತರ ದೇವತೆಗಳಿಗೆ ಸಮನೆಂದು ಹೇಳಿದ್ದರೂ, ಅಗ್ನಿ ಮತ್ತು ಬೃಹಸ್ಪತಿಗಳೆರಡೇ ವಿಶೇಷವಾಗಿ ಸಂಬೋಧನೆಯಲ್ಲಿರುವುದರಿಂದ ಅಗ್ನಿಸಾಮ್ಯವೇ ಉದ್ದಿಷ್ಟವಾಗಿರುವಂತೆ ತೋರುವುದು. ಒಂದು ಮಂತ್ರದಲ್ಲಿ (೩-೨೬-೨), ಮಾತರಿಶ್ವಾ ಮತ್ತು ಬೃಹಸ್ಪತಿಗಳೆರಡೂ ಅಗ್ನಿಯ ನಾಮಗಳು ; ಇನ್ನೊಂದರಲ್ಲಿ (೧-೧೯೦-೨). ಮಾತರಿಶ್ವಾ ಎಂಬುದು ಬೃಹಸ್ಪತಿಯ ಹೆಸರು. ಪ್ರತಿ ಮನೆಯಲ್ಲಿಯೂ ನೆಲಸಿ, ಚೆನ್ನಾಗಿ ಪ್ರಕಾಶಿಸುವವನೂ, ಮಾಸಲು ಕೆಂಪುಬಣ್ಣದವನೂ ಆದ ಬೃಹಸ್ಪತಿಯೂ (೫-೪೩-೧೨) ಅಗ್ನಿಯೇ ಇರಬೇಕು. ಮತ್ತೆ ಎರಡು ವಾಕ್ಯಗಳಲ್ಲಿ ಬೃಹಸ್ಪತಿ ಮತ್ತು ನರಾಶಂಸಗಳು ಒಬ್ಬನನ್ನೇ ಹೇಳುವಂತೆ ತೋರುತ್ತವೆ (೧-೧೮-೯ ; ೧೦-೧೮೨-೨). ಅಗ್ನಿಯಂತೆ ಬೃಹಸ್ಪತಿಯೂ, ಬಲದ ಪುತ್ರ (೧-೪೦-೨), ಅಂಗಿರಸನು, ಪಿಶಾಚಾದಿಗಳನ್ನು ದಹಿಸುವವನು (೨-೧೩-೪) ಅಥವಾ ವಧಿಸುವವನು (೧೦-೧೦೩-೪) ಇತ್ಯಾದಿ ಲಕ್ಷಣ ವಿಶಿಷ್ಟನು. ಬೃಹಸ್ಪತಿಯೂ ಸ್ವರ್ಗಕ್ಕೆ, ಮೇಲುಲೋಕದ ಗೃಹಗಳಿಗೆ ಹತ್ತಿಕೊಂಡು ಹೋಗುತ್ತಾನೆ (೧೦-೬೭-೧೦).



CC-0. Jangamwadi Math Collection. Digitized by eGangotri

ಅಗ್ನಿಯಂತೆ ಇವನಿಗೂ ಮೂರು ವಾಸಸ್ಥಳಗಳು (೪-೫೦-೧), ಮನೆಗಳಲ್ಲಿ ಪ್ರೀತಿಪಾತ್ರವಾದ ವಸ್ತು (೭-೯೭-೫), ಮತ್ತು ಸದಸಸ್ಪತಿ (೧-೧೮-೬). ಅಗ್ನಿಗೂ ಒಂದು ಕಡೆ 'ಬ್ರಹ್ಮಣಃ ಕವೀ' ಎಂದು ಪ್ರಯೋಗಿಸಿದೆ; 'ಬ್ರಹ್ಮ' (ಸ್ತುತಿ) ಗಳಿಂದ ಸ್ವರ್ಗ ಮತ್ತು ಭೂಮಿಗಳನ್ನು ಸುಲಭ ಪ್ರಾಪ್ಯಗಳನ್ನಾಗಿ ಮಾಡಬೇಕೆಂದು ಪ್ರಾರ್ಥಿತನಾಗಿದ್ದಾನೆ (೨-೨-೭). ಆದರೆ ಬೃಹಸ್ಪತಿಯ ಹೆಸರು ಅಗ್ನಿ ಮೊದಲಾದ ದೇವತೆಗಳ ಪಟ್ಟಿಗಳಲ್ಲಿ (೩-೨೦-೫ ; ಇತ್ಯಾದಿ) ಪ್ರತ್ಯೇಕವಾಗಿ ಉಕ್ತವಾಗಿರುವುದರಿಂದ, ಅಗ್ನಿ ಬೃಹಸ್ಪತಿಗಳು ಭಿನ್ನರೆಂದು ಹೇಳುವುದು ಸಾಧುವಾಗಿದೆ (೨-೨೫-೩ ; ೭-೧೦-೪ ; ೧೦-೬೮-೯).

ಇಂದ್ರನಿಂದ ಗೋವಿಮೋಚನೆಯ ಇತಿಹಾಸದಲ್ಲಿ, ಅಗ್ನಿಯಂತೆ ಬೃಹಸ್ಪತಿಗೂ ಒಂದು ಮುಖ್ಯ ಪಾತ್ರವಿದೆ. ಪರ್ವತವು ಬೃಹಸ್ಪತಿಯ ರಭಸಕ್ಕೆ ತಲೆಬಾಗಿ, ಗೋಶಾಲೆಗಳನ್ನು ತೆರೆಯಲು ಅವನಿಗೆ ಅವಕಾಶ ಕೊಟ್ಟಿತು; ಇಂದ್ರಸಹಚರಿತನಾಗಿ, ಬೃಹಸ್ಪತಿಯು, ಅಂಧಕಾರಾವೃತವಾಗಿದ್ದ ಉದಕವನ್ನು ಪುನಃ ಪ್ರವಹಿಸುವಂತೆ ಮಾಡಿದನು. (೨-೨೩-೧೮ ; ೧-೫೬-೫ ; ೧-೮೯-೯ ಇವುಗಳನ್ನು ಹೋಲಿಸಿ). ಗಾಯಕನಾದ (ಅಂಗಿರಸ) ಆತಿಥೇಯನೊಡಗೂಡಿ, ಗರ್ಜಿಸುತ್ತಾ, ವಲನನ್ನು ಭೇದಿಸಿದನು; ಗಟ್ಟಿಯಾಗಿ ಕೂಗುತ್ತಾ, ಅರಚಿಕೊಳ್ಳುತ್ತಿದ್ದ ಗೋವುಗಳನ್ನು ಹೊರಕ್ಕೆ ಅಟ್ಟಿದನು (೪-೫೦-೫). ಅವನು ನಿಧಿಗಳನ್ನೂ, ದೊಡ್ಡ ದೊಡ್ಡ ಗೋಶಾಲೆಗಳನ್ನೂ ಸಂಪಾದಿಸಿದನು; ನೀರು ಮತ್ತು ಬೆಳಕುಗಳಪೇಕ್ಷೆಯಿಂದ, ಅಪ್ರತಿಹತನಾದ ಬೃಹಸ್ಪತಿಯು ಜ್ವಾಲೆಗಳಿಂದ ಶತ್ರುಗಳನ್ನು ಧ್ವಂಸಮಾಡುತ್ತಾನೆ (೬-೭೩-೩). ದೃಢವಾಗಿದ್ದುದು ಅವನಿಂದ ಸಡಿಲಸಲ್ಪಟ್ಟಿತು; ಬಲಿಷ್ಠವಾಗಿದ್ದುದು ಅವನಿಂದ ಪರಾಭೂತವಾಯಿತು; ಗೋವುಗಳನ್ನು ಹೊರಕ್ಕೆ ಅಟ್ಟಿದನು; ವಲನನ್ನು ಮಂತ್ರದಿಂದ ಭೇದಿಸಿದನು; ಅಂಧಕಾರವನ್ನು ಆವೃತವನ್ನಾಗಿ ಮಾಡಿ, ಆಕಾಶವು ಕಣ್ಣಿಗೆ ಕಾಣಿಸುವಂತೆ ಮಾಡಿದನು; ಮಧುಭರಿತವಾದ ಕೂಪದ ಶಿಲಾದ್ವಾರವನ್ನು, ಬೃಹಸ್ಪತಿಯು ತನ್ನ ಸಾಮರ್ಥ್ಯದಿಂದ ಒಡೆದನು, ದೇವತೆಗಳು ಆ ಮಧುವನ್ನು ಪಾನಮಾಡಿ, ಯಥೇಚ್ಛವಾಗಿ ಮಳೆಗರೆದರು (೨-೨೪-೩ ಮತ್ತು ೪). ಬೃಹಸ್ಪತಿಯು ಬೆಂಕಿಕಾರುತ್ತಿರುವ ಕಿರಣಗಳಿಂದ ವಲನ ದುರ್ಗಾದಿಗಳನ್ನು ಭೇದಿಸಿದಾಗ ಗೋನಿಧಿಗಳು (ಗೋವೃಂದಗಳು) ಗೋಚರವಾದುವು; ಮೊಟ್ಟೆಗಳನ್ನು ಒಡೆಯುವಂತೆ, ಗೋವುಗಳನ್ನು ಹೊರಕ್ಕೆ ಅಟ್ಟಿದನು; ಶಿಲೆಯಿಂದ ಆವೃತವಾದ ಮಧುವನ್ನು ಕಂಡು, (ವಲನನ್ನು) ತನ್ನ ಸಿಂಹನಾದದಿಂದಲೇ ಸೀಳಿ, ಅದನ್ನು ಹೊರಕ್ಕೆ ಬರಮಾಡಿದನು; ವಲನ ಮಜ್ಜೆಯನ್ನು ಹೊರಹೊಮ್ಮಿಸಿದನು (೧೦-೬೮-೪ರಿಂದ೯). ಗೋವುಗಳನ್ನು ಹೊರಕ್ಕೆ ಹೊರಡಿಸಿ, ಅವುಗಳನ್ನು ಸ್ವರ್ಗದಲ್ಲಿ ಹಂಚಿದನು (೨-೨೪-೧೪). ಬೃಹಸ್ಪತಿಯು ಹಸುಗಳನ್ನು ಬಂಡೆಗಳಿಂದ ಹೊರಕ್ಕೆ ತಂದನು; ವಲನ ಗೋವುಗಳನ್ನು ಹಿಡಿದು, ತನ್ನ ವಶಪಡಿಸಿಕೊಂಡನು (೧೦-೬೮೫). ವಲನನ್ನು ಅವನು ಜಯಿಸಿದುದು ಅವನ ವೈಶಿಷ್ಟ್ಯ. ಅದು ನಾಣ್ನುಡಿಯಾಗಿದೆ (ಅ. ವೇ. ೯-೩-೨). ಮೇಘಗಳಲ್ಲಿಯೇ ಇರುವನಾದುದರಿಂದ, ಗೋವುಗಳನ್ನು ಅಬ್ಬರಿಸುತ್ತಾನೆ (೧೦-೬೮-೧೨ ; ೧೦-೬೭-೩ ನ್ನು ಹೋಲಿಸಿ) ಇಲ್ಲಿ ಗೋವುಗಳೆಂದರೆ, ಸ್ಪಷ್ಟವಾಗಿ ಹೇಳಿರುವಂತೆ, ನೀರಿರಬಹುದು (೨-೨೩-೧೮ ; ೬-೭೩-೩) ಅಥವಾ ಉಷಸ್ಸಿನ ಕಿರಣಗಳಿರಬಹುದು (೧೦-೬೭-೫ ; ೧೦-೬೮-೯ ಗಳನ್ನು ಹೋಲಿಸಿ).

ಗೋವಿಮೋಚನೆ ಮಾಡುವಾಗ ಕತ್ತಲಿನಲ್ಲಿ ಅಡಗಿರುವ ಬೆಳಕನ್ನು ಪಡೆಯಲು ಪ್ರಯತ್ನಿಸಿ, ಅದನ್ನು ಸಂಪಾದಿಸುತ್ತಾನೆ; ಅವನು ಉಷಸ್ಸು, ಬೆಳಕು ಮತ್ತು ಅಗ್ನಿಗಳನ್ನು ಸಂಪಾದಿಸಿ ಕತ್ತಲನ್ನು ಹೋಗಲಾಡಿಸಿದನು (೧೦-೬೮-೪ ಮತ್ತು ೯). ದುರ್ಗವನ್ನು ಭೇದಿಸುವಾಗ, ಸೂರ್ಯ, ಉಷಸ್ಸು ಮತ್ತು ಗೋವುಗಳು ಲಭಿಸಿದವು (೧೦-೬೭-೫). ಕತ್ತಲನ್ನು ಮರೆ ಮಾಡಿ ಅಥವಾ ಹೋಗಲಾಡಿಸಿ, ಬೆಳಕನ್ನು ಹೊರಗೆಡಹಿದನು (೨-೨೪-೩ ;



CC-0. Jangamwadi Math Collection. Digitized by eGangotri

೪_೫೪–೪). ಈ ರೀತಿ, ಬೃಹಸ್ಪತಿಯಲ್ಲಿ ಯೋಧರ ಲಕ್ಷಣಗಳು ಕಂಡುಬರುತ್ತವೆ. ನಿಧಿಗಳಿಂದ ಯುಕ್ತವಾಗಿದ್ದ ಪರ್ವತವನ್ನು ಭೇದಿಸಿ, ಒಳಹೊಕ್ಕು, ಶಂಬರನ ದುರ್ಗಗಳನ್ನು ಭೇದಿಸಿದನು (೨-೨೪-೨). ಆದಿಯಲ್ಲಿ ಜನಿಸಿದ ಋಷಿಯಾದ, ಬೃಹಸ್ಪತಿ ಅಂಗಿರಸನು ಶಿಲೆಗಳನ್ನು ಚೂರುಮಾಡುತ್ತಾನೆ. ಎರಡೂ ಲೋಕಗಳ ಕಡೆ ಗೂಳಿಯಂತೆ ಗುಟುರು ಹಾಕುತ್ತಾನೆ; ವೃತ್ರನನ್ನು ವಧಿಸುತ್ತಾನೆ; ದುರ್ಗಗಳನ್ನು ಭೇದಿಸುತ್ತಾನೆ; ಮತ್ತು ಶತ್ರುಗಳನ್ನು ಜಯಿಸುತ್ತಾನೆ (೬–೭೩-೧ ಮತ್ತು ೨). ಶತ್ರುಗಳನ್ನು ಓಡಿಸಿ, ಜಯಗಳಿಸುತ್ತಾನೆ ( ೧೦-೧೦೩–೪ ). ಯುದ್ಧವು ಸಣ್ಣದಾಗಲೀ, ದೊಡ್ಡದಾಗಲೀ, ಬೃಹಸ್ಪತಿಯನ್ನು ಯಾರೂ ಗೆಲ್ಲಲಾರರು (೧-೪೦-೮). ಯುದ್ಧದಲ್ಲಿ ಶತ್ರುವನ್ನು ನಿರ್ಮೂಲಮಾಡುತ್ತಾನೆ (೨-೨೩–೧೧). ಯುದ್ಧಸಮಯಗಳಲ್ಲಿ ಇವನನ್ನೇ ಪ್ರಾರ್ಥಿಸಬೇಕು (೨-೨೩-೧೩) ಮತ್ತು ಅಂಥಾ ಸಂದರ್ಭಗಳಲ್ಲಿ ಬಹಳ ಅನುಕೂಲ ಹೆಚ್ಚಾಗಿ ಸ್ತುತನಾದ ಪುರೋಹಿತ (೨-೨೪-೯).

ಇಂದ್ರನ ಸ್ನೇಹಿತ ಮತ್ತು ಜೊತೆಗಾರನಾದುದರಿಂದ (೨-೨೩-೧೮ ; ೨-೨೪-೨ ; ೮-೮೫-೧೫) ಪದೇ ಪದೇ, ಆ ದೇವತೆಯೊಡನೆ ಹೊಗಳಲ್ಪಟ್ಟಿದಾನೆ (೪-೫೦-೧೦ ಮತ್ತು ೧೧ ಇತ್ಯಾದಿ). ಇಂದ್ರನೊಡನೆ ಅವನೂ ಸೋಮಪಾನ ಮಾಡುತ್ತಾನೆ (೪-೪೯–೩ ; ೪-೫೦–೧೦ ;) ಮತ್ತು ಅವನಂತೆಯೇ ಉದಾರಿ (ಮಘವನ್ ೨-೨೪-೧೨). ಇಂದ್ರನೊಬ್ಬನೊಡನೆಯೇ, ಬೃಹಸ್ಪತಿಯು ದ್ವಂದ್ವ ದೇವತೆಯಾಗಿರುವುದು (೨-೨೪-೧೨ ; ೪_೪೯–೧ರಿಂದ ೬). ಆದರಿಂದಲೇ, ಅವನಿಗೆ ' ವಜ್ರೀ ' ಎಂಬ ಹೆಸರು (೧-೪೦-೮) ಮತ್ತು ಅಸುರಘಾತಕವಾದ ವಜ್ರಾಯುಧವನ್ನು ಪ್ರಯೋಗಿಸುತ್ತಾನೆ (ಅ. ವೇ. ೧೧-೧೦-೧೩) ಎಂದಿರುವುದು. ಒಂದು ಸಲ (೧–೪೦-೧), ಇಂದ್ರ, ಮತ್ತು ಮರುತ್ತುಗಳೊಡನೆ ಸ್ತುತನಾಗಿದಾನೆ ಮತ್ತು ಮರುತ್ತಗಳಲ್ಲಿ ಮಿತ್ರ, ವರುಣ, ಪೂಷಣರು ಯಾರೊಡನೆಯಾದರೂ ಬರಬೇಕೆಂದು ಆಹೂತನಾಗಿದಾನೆ (೧೦-೯೮-೧). ಕೂಪದಲ್ಲಿ ಹೂಳಲ್ಪಟ್ಟಿದ್ದ ತ್ರಿತನ ಪ್ರಾರ್ಥನೆಯನ್ನು ಕೇಳಿ ಅವನನ್ನು ಬಿಡುಗಡೆ ಮಾಡಿದನು (೧-೧೦೫–೧೭).

ಸ್ತೋತ್ರವನ್ನು ಬ್ರಹಸ್ಪತಿಯು ಪ್ರೀತಿಸುತ್ತಾನೆ (೨-೨೫-೧) ಆದರೆ ಸ್ತುತಿದ್ವೇಷಿಯನ್ನು ಶಿಕ್ಷಿಸುತ್ತಾನೆ (೧–೨೩–೪). ಧರ್ಮಿಷ್ಠನನ್ನು ಎಲ್ಲಾ ವಿಪತ್ತುಗಳಿಂದಲೂ ಪಾರುಮಾಡಿ, ಸಂಪದಾದಿಗಳನ್ನು ಅನುಗ್ರಹಿಸುತ್ತಾನೆ (೧-೧೮-೩ ; ೨-೨೩–೪ ರಿಂದ ೧೦). ಅಪೇಕ್ಷಣೀಯವಾದ ಸಮಸ್ತ ವಸ್ತುಗಳಿಂದ ವಿಶಿಷ್ಟನಾದ ಬೃಹಸ್ಪತಿಯು (೭-೧೦–೪ ; ೭-೯೭-೪), ಶ್ರೀಮಂತನೂ, ಸಮೃದ್ಧಿದಾಯಕನೂ ಆಗಿದಾನೆ (೧-೧೮-೨). ರೋಗಪರಿಹಾರಕ ಮತ್ತು ಆಯುರ್ದಾತೃ (೧-೧೮-೨). ಇಷ್ಟು ದಯಾಶಾಲಿಯಾದ ಇವನು ಪಿತೃವೆಂದು ಸಂಬೋಧಿತನಾಗುತ್ತಾನೆ (೪-೫೦-೬ ; ೬-೭೩-೧).

ಅವನು ದೇವತ್ವವಿಶಿಷ್ಟನು (ಅಸುರ್ಯ ೨-೨೩-೨), ಎಲ್ಲಾ ದೇವತೆಗಳಿಗೂ ಸ್ವಕೀಯನು (೩-೬೨-೪ ; ೪-೫೦-೬), ಮತ್ತು ದೇವತೆಗಳಲ್ಲೆಲ್ಲಾ, ಹೆಚ್ಚು ದೇವತ್ವವುಳ್ಳವನು (೨_೨೪–೩). ದೇವತೆಯ ರೂಪದಿಂದ, ಎಲ್ಲಾ ದೇವತೆಗಳನ್ನೂ, ಎಲ್ಲಾ ಪದಾರ್ಥಗಳನ್ನೂ ತನ್ನಲ್ಲಿ ಸೇರಿಸಿಕೊಳ್ಳುತ್ತಾನೆ (೨_೨೪–೧೧ ; ೮-೬೧-೧೮ನ್ನು ಹೋಲಿಸಿ). ಭೂಮಿಯ ಎರಡು ಕೊನೆಗಳನ್ನೂ ಸಮರ್ಥನಾದ ಇವನು ದೂರವಾಗಿ ಇಟ್ಟಿರುತ್ತಾನೆ. [೪–೫೦–೧] ಸೂರ್ಯಚಂದ್ರರು ಒಬ್ಬರಾದಮೇಲೊಬ್ಬರು ಉದಯಿಸುವುದು ಅವನ ಅನನುಕರಣೀಯವಾದ ಕೃತ್ಯವೇ [ ೧೦-೬೮-೧೦ ]. ಸಸ್ಯಗಳ ಬೆಳವಣಿಗೆಯನ್ನು ಉಂಟುಮಾಡುತ್ತಾನೆ [ ೧೦-೯೭-೧೫ ಮತ್ತು ೧೯ ]: ಬೃಹಸ್ಪತಿಗೂ ಕೆಲವು ನಕ್ಷತ್ರಗಳಿಗೂ ಸಂಬಂಧವು ಉಕ್ತವಾಗಿದೆ. ಪುಷ್ಯನಕ್ಷತ್ರದ ದೇವತೆ ಬೃಹಸ್ಪತಿ [ತೈ. ಸಂ. ೪-೪-೧೦–೧] ; ಪುರಾಣಾದಿಗಳಲ್ಲಿ ಬೃಹಸ್ಪತಿ ಅಥವಾ ಗುರುಗ್ರಹವೆಂದು ವಾಚ್ಯನಾಗುತ್ತಾನೆ.



CC-0. Jangamwadi Math Collection. Digitized by eGangotri

ಮೇಲೆ ಹೇಳಿರುವ ಅಂಶಗಳಿಂದ, ಬೃಹಸ್ಪತಿಯು ಅಗ್ನಿಯ ಒಂದು ರೂಪವಿಶೇಷವೆಂದು ಹೇಳಬಹುದು; ಭಕ್ತಿ, ಅಥವಾ ಶ್ರದ್ಧೆಯ ಅಧಿದೇವತೆ; ಬೃಸ್ಪತಿಯೆಂಬ ಈ ಹೆಸರು ವಿಶಾಂಪತಿ, ಗೃಹಪತಿ, ಸದಸಸ್ಪತಿ, ಇವುಗಳಂತೆ ಅಗ್ನಿಗೆ ವಿಶೇಷಣವಾಗಿ ಉಳಿಯದೇ, ಸ್ವತಂತ್ರ ದೇವತೆಯೆಂದು ಪರಿಗಣಿತವಾಗಿದೆ. ಆದರೆ ಆಧುನಿಕ ವಿದ್ವಾಂಸರು, ಅಗ್ನಿಯರೂಪವಿಶೇಷ, ಶ್ರದ್ಧೆ, ಇಂದ್ರನ ರೂಪಾಂತರ, ಚಂದ್ರ, ಇತ್ಯಾದಿಯಾಗಿ ನಾನಾ ವಿಧವಾಗಿ ಅಭಿಪ್ರಾಯಪಟ್ಟಿದಾರೆ.

## ಸೋಮ

ಸೋಮಯಾಗಗಳು ಋಗ್ವೇದದ ಕರ್ಮಗಳಲ್ಲಿ ಬಹು ಮುಖ್ಯವಾದುದರಿಂದ, ಸೋಮದೇವತೆಯೂ ಪ್ರಧಾನ ದೇವತೆಗಳಲ್ಲಿ ಒಂದಾಗಿರುವುದು ಸ್ವಾಭಾವಿಕವಾದುದೇ. ಒಂಭತ್ತನೆಯ ಮಂಡಲದಲ್ಲಿರುವ ೧೧೪ ಸೂಕ್ತಗಳೂ, ಬೇರೆ ೬ ಸೂಕ್ತಗಳೂ ಸೇರಿ ಒಟ್ಟು ೧೨೦ ಸೂಕ್ತಗಳು ಸೋಮದೇವತೆಯನ್ನು ಹೊಗಳುತ್ತವೆ. ೪-೫ ಸೂಕ್ತಭಾಗಗಳೂ ಮತ್ತು ಇಂದ್ರ, ಅಗ್ನಿ, ಪೂಷಣ, ಅಥವಾ ರುದ್ರರ ಜೊತೆಯಲ್ಲಿ ೫-೬ ಸೂಕ್ತಗಳೂ ಸೋಮದೇವತೆಯನ್ನು ಸ್ತುತಿಸುತ್ತವೆ. ಸೋಮ ಎಂಬ ಹೆಸರು ಒಂಟಿಯಾಗಿ ಅಥವಾ ಸಮಸ್ತಪದವಾಗಿ, ಸುಮಾರು ೧೨೦ ಸಲ ಬರುತ್ತದೆ. ಸಂಖ್ಯಾದೃಷ್ಟಿಯಿಂದ, ಸೋಮದೇವತೆಯು ಮೂರನೆಯದು. ಮನುಷ್ಯತ್ವಾರೋಪಣೆಯು ಬಹಳ ಮಿತವಾಗಿದೆ. ಸೋಮಲತೆ ಮತ್ತು ಅದರ ರಸಗಳು ಪದೇ ಪದೇ ಉಕ್ತವಾಗಿರುವುದರಿಂದ, ಸಂಪೂರ್ಣವಾಗಿ ಅವುಗಳನ್ನು ಮರೆಯುವುದು ಅಸಾಧ್ಯ. ಆದರಿಂದಲೇ ಆ ದೇವತೆಯ ರೂಪ, ಅಂಗಾಂಗಳು ಅಥವಾ ಚಲನವಲನಾದಿಗಳ ಪ್ರಸಕ್ತಿಯೂ ಅಪರೂಪ. ಪರಾಕ್ರಮಕಾರ್ಯಗಳೇನಾದರೂ ಉಕ್ತವಾಗಿದ್ದರೂ, ಇತರ ದೇವತೆಗಳಿಗೆ ಸಮಾನವಾಗಿದ್ದು, ನಿರ್ವರ್ಣ ಅಥವಾ ಅಪ್ರಧಾನವಾಗಿವೆ. ಇತರ ದೇವತೆಗಳಂತೆ, ಇಂದು ಅಥವಾ ಸೋಮ ಎಂಬ ಹೆಸರಿನಿಂದ, ಯಾಗಕ್ಕೆ ಬಂದು, ದರ್ಭಾಸನದಲ್ಲಿ ಮಂಡಿಸಿ, ಹೋಮ ದ್ರವ್ಯಗಳನ್ನು ಸ್ವೀಕರಿಸಬೇಕೆಂದು, ಇವನಿಗೂ ಆಹ್ವಾನವಿದೆ. ಒಂಬತ್ತನೆಯ ಮಂಡಲ ಪೂರ್ತಿ, ಸೋಮರಸದ ವಿಷಯವೇ ಪ್ರಸ್ತುತವಾಗಿರುವುದು; ಶಿಲೆಗಳಿಂದ ರಸವನ್ನು ಹಿಂಡುವುದು, ಊರ್ಣಮಯವಾದ ಜರಡಿಯ ಮೂಲಕ ಮರದ ಪಾತ್ರೆಗಳಿಗೆ ಶೋಧಿಸುವುದು, ದೇವತೆಗಳಿಗೆ ಪಾನೀಯವಾಗಿ ಅಗ್ನಿಯ ಮೂಲಕ ಅರ್ಪಿಸುವುದು (೧-೯೪-೧೪; ೫-೫-೧; ೮-೪೩-೧೧ ಇತ್ಯಾದಿ), ಅಥವಾ ಋತ್ವಿಜರು ಪಾನಮಾಡುವುದು, ಇತ್ಯಾದಿ ವಿಷಯಗಳೇ ಉಕ್ತವಾಗಿವೆ.

ಈ ಲತೆ, ಆದರಿಂದ ತೆಗೆದ ರಸ, ಇವುಗಳಿಗೆ ಸಂಬಂಧಿಸಿದ ಇತಿಹಾಸವನ್ನು ಅರ್ಥಮಾಡಿಕೊಳ್ಳುವುದಕ್ಕೆ ಮೊದಲು, ಅದರ ವಿಷಯವಾಗಿ ಏನೇನು ಹೇಳಿದೆ ಎಂಬುದನ್ನು ತಿಳಿಯಬೇಕು. ರಸವನ್ನು ತೆಗೆಯಲು ಉಪಯೋಗಿಸುವ ಲತೆಯ ಭಾಗಕ್ಕೆ 'ಅಂಶು' (೯-೬೭-೨೮) ಎಂದು ಹೆಸರು. ಹಸುಗಳು ಕೆಚ್ಚಲಿನಿಂದ ಹಾಲನ್ನು ಕೊಡುವಂತೆ, ಈಚಿಗುರು ಹಾಲನ್ನು (ರಸವನ್ನು) ಕೊಡುತ್ತದೆ (೮-೯-೧೯). 'ಅಂಧಃ' ಎಂದರೆ ಸೋಮಲತೆಯು (೮-೩೨-೨೮; ೧೦-೯೪-೮ ಇತ್ಯಾದಿ) ಸ್ವರ್ಗದಿಂದ ಬಂದಿತು (೯-೬೧-೧೦); ಗಿಡುಗವು (ಶ್ಯೇನ) ಅದನ್ನು ತಂದಿತು (೫-೪೫-೯, ೯-೬೮-೬; ೧೦-೧೪೪-೫). 'ಅಂಧಃ' ಎಂಬ ಪದವು ರಸಕ್ಕೂ ಉಪಯೋಗಿಸಲ್ಪಟ್ಟಿದೆ. 'ಇಂದು'ವು ದೇವತೆಯನ್ನು ಸೂಚಿಸುತ್ತದೆ (೯-೫೧-೩; ೧೦-೧೧೫-೩). ರಸಕ್ಕೆ ಸೋಮ ಎಂತಲೂ ಹೇಳುವುದುಂಟು; ಆದರೆ ಸಾಧಾರಣವಾಗಿ 'ರಸ' ಎಂಬ ಪದವೇ ಪ್ರಯುಕ್ತವಾಗುತ್ತದೆ. ಒಂದು ಸೂಕ್ತದಲ್ಲಿ (೧-೧೮೭) ಮಾತ್ರ ರಸವೆಂಬರ್ಥದಲ್ಲಿ 'ಪಿತು' (ಪಾನೀಯ) ಎಂಬುದೂ, ಅನೇಕ ಕಡೆ 'ಮದ' (ಮದವನ್ನುಂಟುಮಾಡುವುದು) ಎಂಬುದೂ, ಒಂದೊಂದು ಸಲ, 'ಅನ್ನ' ಎಂಬುದೂ ಪ್ರಯುಕ್ತವಾಗಿವೆ

(೭–೯೮-೨ ; ೮-೪-೧೨ ; ಶ. ಬ್ರಾ. ೧-೬-೪ ಮತ್ತು ೫). ಅಶ್ವಿನೀ ದೇವತೆಗಳಿಗೆ ಸಂಬಂಧಿಸಿದಂತೆ ಉಪಯೋಗಿಸಿದಾಗ ಮಧು ಶಬ್ದಕ್ಕೆ ಜೇನುತುಪ್ಪ ಅಥವಾ ಮಾದಕದ್ರವ್ಯ ಎಂದಾಗುತ್ತದೆ. ಸಾಧಾರಣವಾದ ಸಿಹಿಯಾದ ಪಾನೀಯ ಎಂಬರ್ಥದಲ್ಲಿ, ಹಾಲು ತುಪ್ಪ ಮತ್ತು ವಿಶೇಷವಾಗಿ ಸೋಮರಸಗಳಿಗೆ ಉಪಯೋಗಿಸಲ್ಪಟ್ಟಿದೆ (೪-೨೭–೫ ; ೮-೬೯-೬). ಇತಿಹಾಸದಲ್ಲಿ, ಮಧುವೆಂದರೆ ಅಮೃತ ಅಥವಾ ಸೋಮವೆಂದಾಗುತ್ತದೆ. ಅದರಂತೆಯೇ ಸೋಮರಸವು ಉದ್ದಿಷ್ಟವಾದಾಗ ಅಮೃತಪದವು ಉಪಯೋಗಿಸಲ್ಪಟ್ಟಿದೆ (೫-೨-೩ ; ೬-೩೭-೩ ಇತ್ಯಾದಿ ; ವಾ, ಸಂ. ೬-೩೪ ; ಶ್ರ. ಬ್ರಾ. ೯-೫–೧-೮). ರಾಜನಾದ ಸೋಮನು ಅಭಿಷುತನಾದರೆ ಅಮೃತವಾಗುತ್ತಾನೆ (ವಾ. ಸಂ. ೧೯-೭೨). ಸೋಮ್ಯಂ ಮಧು (ಸೋಮಸಂಬಂಧವಾದ ಮಾದಕ ದ್ರವ್ಯ) ಎಂಬುದೊಂದು ಪ್ರಯೋಗ (೪-೨೬-೫ ; ೬-೨೦-೩). ಆಲಂಕಾರಿಕವಾಗಿ, ಸೋಮವು ಪೀಯೂಷ (೩-೪೮-೨ ಇತ್ಯಾದಿ) ಕ್ಷೀರ (೯-೧೦೭-೧೨), ಚಿಗುರಿನ ಅಲೆ (೯-೯೬-೮) ಅಥವಾ ಜೇನುತುಪ್ಪದ ಸಾರ (೫–೪೩-೪) ಮುಂತಾಗಿ ಕರೆಯಲ್ಪಟ್ಟಿದೆ. ಆಲಂಕಾರಿಕ ನಾಮಗಳಲ್ಲಿ ಬಹಳ ಹೆಚ್ಚಾಗಿ ಉಪಯೋಗಿಸಿರುವುದು ಇಂದು (ಹೊಳೆಯುತ್ತಿರುವ ಬಿಂದು, ಹನಿ) ಎಂಬ ಪದ. ಅದಕ್ಕಿಂತ ಕಡಿಮೆ ಸಂದರ್ಭಗಳಲ್ಲಿ ಹನಿಯೆಂದರ್ಥಕೊಡುವ 'ದ್ರಪ್ಸ' ಎಂಬ ಪದವೂ ಉಪಯೋಗಿಸಲ್ಪಟ್ಟಿದೆ.

ರಸವನ್ನು ತೆಗೆಯುವುದಕ್ಕೆ, 'ಸು' (ಹಿಂಡು) ಧಾತುವೂ (೯-೬೨-೪ ; ಇತ್ಯಾದಿ), 'ದುಹ್' (ಹಾಲು ಕರೆಯುವುದು) ಧಾತುವೂ (೩-೩೬-೬ ಮತ್ತು ೭ ಇತ್ಯಾದಿ) ಉಪಯೋಗಿಸಲ್ಪಡುತ್ತವೆ. ರಸವು ಮದವನ್ನುಂಟುಮಾಡುತ್ತದೆ (೧-೧೨೫-೩ ; ೬-೧೭-೧೧ ಮತ್ತು ೨೦) ಮತ್ತು ಮಧುಮಿಶ್ರಿತವಾಗಿದೆ (೯-೯೭-೧೪). ಮಧು ಪದಕ್ಕೆ ಸಿಹಿಯಾದ ಎಂದರ್ಥವಾದರೂ, ಸೋಮಕ್ಕೆ ಅನ್ವಯಿಸುವಾಗ ಮಧುಮಿಶ್ರಿತ (ಜೇನುತುಪ್ಪ ಬೆರೆತಿರುವುದು) ಎಂತಲೇ ಅರ್ಥಮಾಡಿಕೊಳ್ಳಬೇಕು. ಕೆಲವು ಸಂದರ್ಭಗಳಲ್ಲಿ ಈ ಮಿಶ್ರಣವು ಸ್ಪಷ್ಟವಾಗಿ ಉಕ್ತವಾಗಿದೆ (೯-೧೭-೮ ; ೯-೮೬-೪೮ ; ೯-೯೭-೧೧ ; ೯-೧೧೯-೨೦). ಗಾಣದಿಂದ ಹರಿದು ಬರುವ ಸೋಮರಸವು ಜಲಪ್ರವಾಹದ ಅಲೆಗೆ ಹೋಲಿಸಲ್ಪಟ್ಟಿದೆ (೯-೮೦-೫); ಅಥವಾ ಪ್ರತ್ಯಕ್ಷವಾಗಿ ಅಲೆ (೯–೬೪-೧೧ ಇತ್ಯಾದಿ), ಅಥವಾ ಜೇನುತುಪ್ಪದ ಅಲೆ (೩–೪೭-೧) ಮೊದಲಾದ ಹೆಸರುಗಳಿಂದ ವಾಚ್ಯವಾಗಿದೆ. ಮರದ ಪಾತ್ರೆಯಲ್ಲಿ
ಶೇಖರಿಸಿರುವ ಸೋಮಕ್ಕೆ ಅರ್ಣವ (೧೦-೧೧೫-೩) ಸಮುದ್ರ (೫-೪೭-೩ ; ೯-೬೪-೮ ಇತ್ಯಾದಿ)ಮೊದಲಾದ
ಹೆಸರು. ಸ್ವರ್ಗೀಯ ಸೋಮವನ್ನು ಉತ್ಸ (ಬಾವಿ)ವೆಂದು ಕರೆದಿದೆ; ಇದು ಗೋವುಗಳಿರುವ ಅತ್ಯುನ್ನತ ಪ್ರದೇಶ
ದಲ್ಲಿದೆ (೫-೪೫-೮) ; ಗೋವುಗಳಲ್ಲಿ ನಿಹಿತವಾಗಿದೆ ಮತ್ತು ಹತ್ತು ಲಗಾಮು (ಬೆರಳು)ಗಳಿಂದ ನಡೆಸಲ್ಪಡುತ್ತದೆ
(೬-೪೪-೨೪) ; ಈ ಸೋಮವು ವಿಷ್ಣುವಿನ ಮೇಲಕ್ಕೆ ಎತ್ತಲ್ಪಟ್ಟ ಮೂರನೆಯ ಹೆಜ್ಜೆಯಲ್ಲಿದೆ (೧-೧೫೪-೫).

ಲತೆ ಮತ್ತು ರಸಗಳ ವರ್ಣವು ಬಭ್ರು (ಕಂದು) ಅಥವಾ ಅರುಣ ಅಥವಾ ಹೆಚ್ಚುಸಲ ಹರಿ (ಮಾಸಲು
ಹಳದಿ) ಎಂದು ಹೇಳಿದೆ. ಸೋಮವು ನಸುಗೆಂಪಾದ ಗಿಡದ ಶಾಖೆ (೧೦–೯೪-೩); ಕೆಂಪು ಛಾಯೆಯ ರಸ
ವನ್ನು ಕೊಡುವ ಚಿಗುರು (೭–೯೮-೧); ಕಪಿಲವರ್ಣದ ಚಿಗುರು ಜರಡಿಯೊಳಕ್ಕೆ ಹಿಂಡಲ್ಪಡುತ್ತದೆ (೯-೯೨-೧).
ಸೋಮ ಅಥವಾ ಅದಕ್ಕೆ ಬದಲಾಗಿ ಉಪಯೋಗಿಸುವ ಪದಾರ್ಥದ ಬಣ್ಣವು ಕಪಿಲವರ್ಣವಿರಬೇಕೆಂದು
ನಿಯಮವು (ಶ. ಬ್ರಾ. ೪-೫-೧೦-೧); ಸೋಮವನ್ನು ಕೊಳ್ಳಲು ಕೊಡುವ ಗೋವೂ ಕಪಿಲವರ್ಣದ್ದಾಗಿರಬೇಕು
(ತೈ. ಸಂ. ೬-೧-೬-೭ ; ಶ. ಬ್ರಾ. ೩-೩–೧-೧೪).

ಸೋಮರಸವು ಕೈಗಳಿಂದ ಶುದ್ಧಿಮಾಡಲ್ಪಡುತ್ತದೆ (೯-೮೬-೩೪); ಹತ್ತು ಬೆರಳುಗಳಿಂದ (೯-೮-೪ ;
೯–೧೫-೮ ಇತ್ಯಾದಿ), ಅಥವಾ, ವ್ಯಂಗ್ಯವಾಗಿ, ಹತ್ತು ಜನ, ಸೋದರಿಯರಾದ ಕನ್ಯೆಯರಿಂದ (೯-೧–೭ ;



CC-0. Jangamwadi Math Collection. Digitized by eGangotri

೯-೬-೫) ಅಥವಾ ವಿವಸ್ವತನ ಪುತ್ರಿಯರಿಂದ (೯-೧೪-೫) ಸುತವಾಗುತ್ತದೆ. ಇಂದ್ರನಿಗೆ ಪಾನೀಯವಾಗಲೆಂದು, ತ್ರಿತನ ಕನ್ಯೆಯರು, ಕೆಂಪುಛಾಯೆಯ ರಸವನ್ನು ಕಲ್ಲುಗಳ ಮೂಲಕ ಹೊರಕ್ಕೆ ಬರುವಂತೆ ಮಾಡುತ್ತಾರೆ (೯-೩೨-೨ ; ೯-೩೮-೨), ಸೋಮರಸವು ಸೂರ್ಯಪುತ್ರಿಯಿಂದ ಆನೀತವಾಯಿತು ಅಥವಾ ಶುದ್ಧಿಪಡಿಸಲ್ಪಟ್ಟಿತು (೯-೧-೬ ; ೯-೭೨-೩ ; ೯-೧೧೩-೩). ಒಂದೊಂದು ಸಲ ಮಂತ್ರದಿಂದಲೂ ಶುದ್ಧೀಕರಿಸಲ್ಪಡುತ್ತದೆ (೯-೯೬-೧೩ ; ೯-೧೧೩-೫). ಸೋಮಾಭಿಷವ ಮಾಡುವ ಋತ್ವಿಜರು ಅಧ್ವರ್ಯುಗಳು (೮-೪-೧೧).

ಚಿಗುರು ಕಲ್ಲಿನಿಂದ ಅರೆಯಲ್ಪಡುತ್ತದೆ (೯-೬೭-೧೯) ಅಥವಾ ಶಿಲೆಗಳಿಂದ ಕುಟ್ಟಲ್ಪಡುತ್ತದೆ (೯-೧೦೭-೧೦); ಗಿಡವನ್ನು ಕುಟ್ಟಿ ಸೋಮರಸವನ್ನು ಉತ್ಪತ್ತಿ ಮಾಡುತ್ತಾರೆ (೧೦-೮೫-೩). ಕಲ್ಲುಗಳು ಅದರ ತೊಗಟೆಯನ್ನು ತೆಗೆದುಹಾಕುತ್ತವೆ (ತೈ. ಬ್ರಾ. ೩-೭-೧೩-೧). ಆ ಶಿಲೆಗಳು ಒಂದು ಚರ್ಮದ ಮೇಲೆ ನಿಹಿತವಾಗಿವೆ; ಗೋವಿನ ಚರ್ಮದ ಮೇಲೆ ಸೋಮಲತೆಯನ್ನು ಹಿಂಡುತ್ತಾರೆ (೯-೭೯-೪). ಸೋಮವು ವೇದಿಯ ಮೇಲೆ ಇಡಲ್ಪಡುತ್ತದೆ (೫-೩೧-೧೨). ಈಗ ವೇದಿಯ ಮೇಲೆ ಇಡುವುದಿಲ್ಲ. ಕೈಗಳಿಂದ ಹಿಡಿದು ಕೊಳ್ಳಲ್ಪಡುತ್ತದೆ (೭-೨೨-೧ ; ೯-೭೯-೪, ಅ. ವೇ. ೧೧-೧-೧೦). ಎರಡು ಬಾಹುಗಳು ಮತ್ತು ಹತ್ತು ಬೆರಳು ಗಳು ಕಲ್ಲನ್ನು ತಳ್ಳುತ್ತವೆ (೫-೪೩-೪). ಆದರಿಂದಲೇ, ಕಲ್ಲುಗಳು ಹತ್ತು ಲಗಾಮುಗಳಿಂದ ನಡೆಸಲ್ಪಡುತ್ತವೆ ಎಂದು ಹೇಳಿರುವುದು (೧೦-೯೪-೮). 'ಯುಕ್ತಾಃ' (ಹೂಡಲ್ಪಡುತ್ತವೆ) ಎಂದು ಹೇಳಿರುವುದರಿಂದ ಬೆರಳು ಗಳು ಕುದುರೆಗಳಿಗೆ ಹೋಲಿಸಲ್ಪಡುತ್ತವೆ (೧೦-೯೪-೬). ಉಪಯೋಗಿಸುವ ಶಿಲೆಗಳಿಗೆ ಅದ್ರಿ ಅಥವಾ ಗ್ರಾವಾ ಎಂಬ ಪದಗಳೇ ಪ್ರಯೋಗಿಸಲ್ಪಟ್ಟಿರುವುದು. ಸಾಧಾರಣವಾಗಿ ಬಹುವಚನ ಅಥವಾ ಏಕವಚನದಲ್ಲಿ ಈ ಪದ ಗಳ ಪ್ರಯೋಗ. ಈ ಕಲ್ಲುಗಳಿಗೆ ಅಶ್ನ (೮-೨-೨), ಭರಿತ್ರ (೩-೩೬-೭), ಪರ್ವತ (೩-೩೫-೮), ಮತ್ತು ಪರ್ವತಾ ಅದ್ರಯಃ (೧೦-೯೪-೧) ಎಂದೂ ಪ್ರಯೋಗವಿದೆ. ಶಿಲೆಗಳಿಂದ ಸೋಮವನ್ನು ಕುಟ್ಟುವುದೇ ಪ್ರಾಯಕ ವಾಗಿ ರೂಢಿಯಲ್ಲಿದ್ದಂತೆ ತೋರುತ್ತದೆ. ಆದರೆ ಕೆಲಪಕ್ತಿನಲ್ಲಿ ಕುಟ್ಟಣೆಯಿಂದ (ಉಲೂಖಲ) ಕುಟ್ಟುವುದೂ ಸಮ್ಮತವೇ (೧-೨೮-೧ರಿಂದ೪).

ಹಿಂಡಲ್ಪಟ್ಟು, ರಸವು ಹನಿಹನಿಯಾಗಿ ಕುರಿಯ ತುಪ್ಪಟದಿಂದ ಮಾಡಿದ ಜರಡಿಯ ಮೇಲೆ ಸುರಿಯ ಲ್ಪಟ್ಟು, ಆದರಿಂದ ಶೋಧಿಸಲ್ಪಡುತ್ತದೆ (೯-೬೩-೧೦ ; ಇತ್ಯಾದಿ ; ೯-೭೯-೯). ಇಲ್ಲಿ ಕಶ್ಮಲಗಳೆಲ್ಲಾ ದೂರ ವಾಗಿ, ಶುದ್ಧವಾದ ಸೋಮರಸವು ದೇವತೆಗಳ ಆಸ್ವಾದನೆಗಾಗಿ ಉಪಯೋಗಿಸಲ್ಪಡುತ್ತದೆ (೯-೭೮-೧), ಈ ಜರ ಡಿಗೆ ನಾನಾ ಹೆಸರುಗಳು; ತ್ವಕ್, ರೋಮ, ವಾರ (ತುಪ್ಪಟ), ಪವಿತ್ರ (ಜರಡಿ), ಸಾನು ಇತ್ಯಾದಿ. ಈ ಪದ ಗಳೆಲ್ಲಕ್ಕೂ ಸಾಧಾರಣವಾಗಿ ಅವಿ (ಕುರಿ) ಎಂಬ ವಿಶೇಷಣವಿರುತ್ತದೆ ಅಥವಾ ಅವಿ ಎಂಬುದೇ ಈ ಜರಡಿಯನ್ನು ಸೂಚಿಸುವುದೂ ಉಂಟು. ಇದರ ಮೂಲಕ ಹಾದುಹೋದ ಸೋಮಕ್ಕೆ ಪವಮಾನ ಅಥವಾ ಪುನಾನ ಎಂದು ಹೇಳಿದೆ (ಪೂ ಶುದ್ಧಿಹೊಂದು ಎಂಬ ಧಾತುವಿನಿಂದ ನಿಷ್ಪನ್ನವಾದುದು). ಮೃಜ್-ಶುದ್ಧಿಮಾಡು ಎಂಬುದು, ಜರಡಿ ಯಿಂದ ಶೋಧಿಸುವುದಕ್ಕೆ ಮಾತ್ರವಲ್ಲದೇ, ಸೋಮರಸಕ್ಕೆ ಹಾಲು, ನೀರುಗಳ ಮಿಶ್ರಣಕ್ಕೂ ಅನ್ವಯಿಸುತ್ತದೆ (೯-೮೬-೧೧ ; ೯-೯೧-೨). (ಮಿಶ್ರಿತವಲ್ಲದ) ಶುದ್ಧವಾದ ಸೋಮಕ್ಕೆ ಶುದ್ಧ, ಶುಕ್ರ, ಶುಚಿ ಮೊದಲಾದ ಹೆಸರು (೮-೨-೧೦ ; ೯-೩೩-೨ ; ೧-೫-೫ ; ೧-೩೦-೨). ಈ ಶುದ್ಧ ಸೋಮವು ವಾಯು ಮತ್ತು ಇಂದ್ರರಿಗೆ ಮಾತ್ರ ಅರ್ಪಿತವಾಗುತ್ತದೆ ; ಶುಚಿಪಾ (ಶುದ್ಧ ಸೋಮರಸವನ್ನು ಪಾನಮಾಡುವವನು) ಎಂಬುದು ವಾಯುವಿನ ವಿಶೇಷ ಲಕ್ಷಣ. ಸೋಮ ಯಾಗಗಳಲ್ಲಿ, ಗ್ರಹಗಳನ್ನು (ದೇವತಾದ್ವಂದ್ವಗಳಿಗೆ ಅರ್ಪಿತವಾಗುವ ಸೋಮ) ಅರ್ಪಿಸು ವಾಗ, ಶುದ್ಧ ಸೋಮವು ಇಂದ್ರ ವಾಯುಗಳಿಗೂ, ಕ್ಷೀರಮಿಶ್ರಿತವಾದುದು ಮಿತ್ರಾವರುಣರಿಗೂ, ಮಧು ಮಿಶ್ರಿತ ವಾದುದು ಅಶ್ವಿನಿಗಳಿಗೂ ಉಪಯೋಗಿಸಲ್ಪಡುತ್ತದೆ.



CC-0. Jangamwadi Math Collection. Digitized by eGangotri

ಜರಡಿಯಿಂದ ಬಂದ ಮೇಲೆ, ಸೋಮವು, ಕಲಶಗಳು ಅಥವಾ ದ್ರೋಣ (ಮರದಪಾತ್ರೆ) ಗಳೊಳಕ್ಕೆ ಪ್ರವಹಿಸುತ್ತದೆ (೯-೬೦-೩ ; ಇತ್ಯಾದಿ). ಕಾಡುಗಳಿಗೆ ಎಮ್ಮೆಗಳು ನುಗ್ಗುವಂತೆ, ಸೋಮವು ದ್ರೋಣಗಳ ಕಡೆ ನುಗ್ಗುತ್ತದೆ (೯-೩೩-೧ ; ೯-೯೨-೬). ಈ ದೇವತೆಯು ಮರದ ಪಾತ್ರೆಗಳಲ್ಲಿ ನೆಲೆಸುವುದಕ್ಕೋಸ್ಕರ, ಪಕ್ಷಿಯಂತೆ ಹಾರಿಹೋಗುತ್ತಾನೆ (೯-೩-೧) ; ಪಕ್ಷಿಯು ಗಿಡದ ಮೇಲೆ ಕುಳಿತಿರುವಂತೆ, ಮಾಸಲುಗೆಂಪು ಬಣ್ಣದ ದ್ರವವು ಬೋಗುಣಿಗಳಲ್ಲಿ ನಿಲ್ಲುತ್ತದೆ (೯-೭೨-೫). ಬಾನೆಯಲ್ಲಿ ಸೋಮವು ನೀರಿನೊಡನೆ ಮಿಶ್ರಿತವಾಗುತ್ತದೆ. ಅಲೆಯೊಡನೆ ಸೇರಿ, ಕಾಂಡವು ಭೋರ್ಗರೆಯುತ್ತದೆ (೯-೭೪-೫). ಗೂಳಿಯು ದನದ ಮಂದೆಯ ಮೇಲೆ ನುಗ್ಗುವಂತೆ, ಇಂದುವು (ಸೋಮವು) ದ್ರೋಣ ಪಾತ್ರೆಯ ಕಡೆ, ಜೋರಾಗಿ ಶಬ್ದಮಾಡುತ್ತಾ, ನುಗ್ಗುತ್ತದೆ; ಗಾನಮಾಡುತ್ತಾ, ಋತ್ವಿಜರು ನೀರು ಬೆರೆಸಿದಾಗ, ಸೋಮವು ದ್ರೋಣಪಾತ್ರೆಯ ಸುತ್ತಲೂ ವೇಗವಾಗಿ ಚಲಿಸುತ್ತದೆ (೯-೭೬-೫ ; ೯-೧೦೭-೨೬). ವಿಪ್ರರು ನೀರಿನೊಳಕ್ಕೆ ತಮ್ಮ ಕೈಗಳಿಂದ, ಹಾಲು ಕರೆದಂತೆ ಸೋಮರಸವನ್ನು ಕರೆಯುತ್ತಾರೆ (೯-೭೯-೪). ಉಣ್ಣೆಯ ಮೇಲೆ ಹಾದು ಬಂದು, ದ್ರೋಣಪಾತ್ರೆಯಲ್ಲಿ ಆಡುತ್ತಿರುವ ಅವನು (ಸೋಮವು) ಹತ್ತು ಜನ ಕನ್ಯೆಯರಿಂದ ಶುದ್ಧಿಮಾಡಲ್ಪಡುತ್ತಾನೆ. (೯-೬-೫). ಇನ್ನೂ ಅನೇಕ ವಾಕ್ಯಗಳು ಈ ಸೋಮ ಮತ್ತು ಉದಕಗಳ ಮಿಶ್ರಣದ ವಿಷಯವನ್ನು ಪ್ರಸ್ತಾಪಿಸುತ್ತವೆ (೯-೩೦-೫ ; ೯-೫೩-೪ ; ೯-೮೬-೮ ಮತ್ತು ೨೫). ಸೋಮ ಬಿಂದುಗಳು ಪ್ರವಾಹಗಳಿಗೆ ಹೊಳಪನ್ನು ಕೊಡುತ್ತವೆ (೯-೭೬-೧). ಶುದ್ಧಿಮಾಡುವುದಕ್ಕೆ (ಉದಕಮಿಶ್ರಣ) ಮೃಜ್ ಧಾತುವಲ್ಲದೆ, 'ಆ ಧಾವ್' ಧಾತುವೂ ಉಪಯೋಗಿಸಲ್ಪಡುತ್ತದೆ (೮-೧-೧೭), ಸೋಮವನ್ನು ತಯಾರಿಸುವಾಗ, ಮೊದಲು 'ಸವನ,' ಅನಂತರ 'ಉದಕಮಿಶ್ರಣ' ಬರುತ್ತದೆ (೭-೩೨-೬ ; ೮-೧-೧೭ ; ೮-೩೧-೫ ; ಅ. ವೇ. ೬-೨-೧) ; ಸೋಮ ಯಾಗಗಳಲ್ಲಿ, ಮೊದಲು ಸವನವೂ, ಅನಂತರ ಆಧಾವನ (ತೊಳೆಯುವುದು) ಕ್ರಮವಾಗಿ ಬರುತ್ತವೆ. ಅಗಲವಾದ ಪಾತ್ರೆಗಳಲ್ಲಿ (ಬೋಗುಣಿ), ಮಾಧುರ್ಯವನ್ನುಂಟುಮಾಡುವ (೮-೨-೩), ಕ್ಷೀರವು ಸೋಮರಸಕ್ಕೆ ಬೆರೆಸಲ್ಪಡುತ್ತದೆ (೯-೮-೬ ; ಇತ್ಯಾದಿ). ನೀರು ಹಾಲು ಎರಡೂ ಮಿಶ್ರಿತವಾಗುತ್ತವೆಯೆಂದು ಅನೇಕ ವಾಕ್ಯಗಳಲ್ಲಿ ಹೇಳಿದೆ. ಸೋಮ ದೇವತೆಯು ನೀರಿನ ಉಡುಪುಗಳನ್ನು ಧರಿಸುತ್ತಾನೆ. ಗೋವುಗಳನ್ನು (ಹಾಲು) ಧರಿಸಲಪೇಕ್ಷಿಸಿದಾಗ, ಜಲಪ್ರವಾಹಗಳು ಅವನ ಕಡೆ ಹರಿಯುತ್ತವೆ (೯-೨-೩, ೪). ಜನರು ಕಲ್ಲುಗಳಿಂದ ಸೋಮಲತೆಯನ್ನು ಕುಟ್ಟಿ, ರಸವನ್ನು ನೀರಿನಲ್ಲಿ ತೊಳೆದು, ಗೋರೂಪ ವಸ್ತ್ರಗಳಿಂದ ಅಲಂಕರಿಸಿ, ಅವನನ್ನು ಸೋಮಲತೆಗಳಿಂದ ಹೊರಕ್ಕೆ ತೆಗೆಯುತ್ತಾರೆ (೮-೧-೧೭ ; ೨-೩೬-೧ ; ೬-೪೦-೨ ; ೯-೮೬-೨೪, ೨೫ ; ೯-೯೬-೧೯ ಗಳನ್ನು ಹೋಲಿಸಿ).

ಸೋಮರಸವು ಮೂರು ವಿಧವಾಗಿ ಮಿಶ್ರಿತವಾಗುತ್ತದೆ (ತ್ರ್ಯಾಶಿರಃ ೫-೨೭-೫), ಕ್ಷೀರಮಿಶ್ರಿತ (ಗವಾಶಿರ), ದಧಿಮಿಶ್ರಿತ (ದಧ್ಯಾಶಿರ) ಮತ್ತು ಯವ ಮಿಶ್ರಿತ (ಯವಾಶಿರ). ಈ ಮಿಶ್ರಣಕ್ಕೆ ವಸ್ತ್ರಧಾರಣವೆಂದು (ವಸ್ತ್ರ, ವಾಸಃ, ಅತ್ಕ) ಹೇಳಿದೆ ; 'ನಿರ್ಣಿಕ್' (ಹೊಳೆಯುವ ಉಡುಪು ೯-೧೪-೫) ಎಂದು ಹೇಳುವುದೂ ಉಂಟು. ಈ ಪದವು ಜರಡಿಗೂ ಪ್ರಯೋಗಿಸಿದೆ (೯-೭೦-೭) ಇದರಿಂದಲೇ ಸೋಮನನ್ನು ಸೌಂದರ್ಯಯುಕ್ತವಾದುದು (೯-೩೪-೪ ; ಇತ್ಯಾದಿ) ಮತ್ತು ಯಥೇಚ್ಛವಾಗಿ ಒಡವೆಗಳಿಂದ ಅಲಂಕೃತವಾದುದು (೯-೮೧-೨) ಎಂದು ವರ್ಣಿಸಿರುವುದು. ಅಪರೂಪವಾಗಿ ಘೃತ (೯-೮೨-೨) ಅಥವಾ ಉದಕ ಮಿಶ್ರಣವೂ ಉಕ್ತವಾಗಿದೆ ; ಆದರೆ ಇವುಗಳಿಗೆ ಆಶಿರ ಪದವನ್ನು ಉಪಯೋಗಿಸಿಲ್ಲ.

ಯಾಗಗಳಲ್ಲಿ ಆಪ್ಯಾಯನ (ಅರ್ಧ ಹಿಂಡಲ್ಪಟ್ಟ ಸೋಮಲತೆಗಳನ್ನು ಪುನಃ ನೀರಿನಲ್ಲಿ ನೆನೆಯಿಸುವುದು) ವೆನ್ನುವುದೊಂದು ಕರ್ಮ (ವೈ. ಸಂ. ೪-೫-೫). ಋಗ್ವೇದದಲ್ಲಿ ಈ ಧಾತುವು (ಆಪ್ಯಾ) ಸೋಮಕ್ಕೆ


CC-0. Jangamwadi Math Collection. Digitized by eGangotri

ಸಂಬಂಧಿಸಿದಂತೆ ಪ್ರಯೋಗಿಸಲ್ಪಟ್ಟಿದೆ. ಆದರೆ ಇಲ್ಲಿ ಸೋಮನು ಚಂದ್ರನಿಗೆ ಸಮಾನನು ಎಂದು ಸೂಚಿಸುವುದಕ್ಕಾಗಿ ಆ ಧಾತು ಉಪಯೋಗಿಸಿರುವುದು. ಒಂದು ಸ್ಥಳದಲ್ಲಿ (೯-೩೧-೪) ಮಾತ್ರ ಈ ಯಜ್ಞಾಂಗ ಕರ್ಮವನ್ನು ಸೂಚಿಸಬಹುದು. ಸೋಮರಸವು, ನದಿ ಅಥವಾ ಸಮುದ್ರದಂತೆ ಉಬ್ಬುತ್ತದೆ (೯-೬೪-೮, ೯-೧೦೭-೧೨).

ಸೋಮವು ದಿನಕ್ಕೆ ಮೂರುಸಲ ಹಿಂಡಲ್ಪಡುತ್ತದೆ. ಋಭು ದೇವತೆಗಳು ಸಾಯಂಸವನಕ್ಕೂ (೪-೩೩-೧೧ ; ಇತ್ಯಾದಿ), ಇಂದ್ರನು ಒಬ್ಬನೇ [೪-೩೬-೭] ಮಧ್ಯಾಹ್ನ ಸವನಕ್ಕೂ [೩-೩೨-೧ ಮತ್ತು ೨ ; ೮-೩೭-೧], ಮತ್ತು ಇಂದ್ರನು ಪ್ರಥಮ ಪಾನಮಾಡಲು ಪ್ರಾತಃಸವನಕ್ಕೂ ಆಹೂತರಾಗುತ್ತಾರೆ [೧೦-೧೧೨-೧].

ಸೋಮರಸದ ಅಥವಾ ದೇವತೆಯ ಸ್ಥಾನ [ಸಧಸ್ಥ] ವು ಪದೇ ಪದೇ ಪ್ರಸಕ್ತವಾಗುತ್ತದೆ; ಒಂದು ಸಲ ಅವನಿಗೆ ಮೂರು ಸ್ಥಾನಗಳು ಉಕ್ತವಾಗಿವೆ. ಶುದ್ಧವಾದ ಮೇಲೆ, ಈ ಮೂರು ಸ್ಥಾನಗಳನ್ನು ಅಲಂಕರಿಸುತ್ತದೆ [೯-೧೦೩-೨]. ತ್ರಿಷಧಸ್ಥ ಎಂಬ ವಿಶೇಷಣವು ಸೋಮಕ್ಕೆ ಹೇಳಿದೆ [೮-೮೩-೫]. ಈ ಮೂರು ಸ್ಥಾನಗಳೆಂದರೆ, ಶುದ್ಧವಾದ ಸೋಮವನ್ನು ಹಾಕುವ ಮೂರು ದ್ರೋಣಗಳಿರಬಹುದು [ತೈ. ಸಂ. ೩-೨-೧-೨ ; ಕಾ. ಶ್ರೌ. ಸೂ. ೯-೫-೧೭ ; ೯-೭-೪ ; ಋ. ವೇ. ೮-೨-೮ನ್ನು ಹೋಲಿಸಿ]. ಇಂದ್ರನು ಮೂರು ಸರೋವರಗಳಿಂದ ಪಾನಮಾಡುತ್ತಾನೆ (೫-೨೯-೭ ಮತ್ತು ೮ ; ೬-೧೭-೧೧ ; ೮-೭-೧೦). 'ತ್ರಿಪೃಷ್ಠ' ಎನ್ನುವ ವಿಶೇಷಣವು ಸೋಮದೇವತೆಗೆ ವಿಲಕ್ಷಣವಾದುದು. ರಸಕ್ಕೆ ಇದು ಒಂದುಸಲವಾದರೂ ಉಪಯೋಗಿಸಲ್ಪಟ್ಟಿದೆ (೭-೩೭-೧). 'ಘೃತಪೃಷ್ಠ' ಎಂದು ಅಗ್ನಿಗೆ ಹೇಳಿದಾಗ, ಆಜ್ಯ ಹೋಮವೆಂದು ಅರ್ಥಮಾಡಿಕೊಳ್ಳುವಂತೆ, ಇಲ್ಲಿಯೂ, ಮೂರು ವಿಧವಾದ ಮಿಶ್ರಣವೆಂದು ತಿಳಿದುಕೊಳ್ಳಬೇಕು.

ಸೋಮರಸಕ್ಕೆ ನೀರು ಬೆರೆಯಿಸುತ್ತಾರೆ ಎಂಬುದು ವಿಧ ವಿಧವಾಗಿ ವರ್ಣಿತವಾಗಿದೆ. ನದಿಗಳು ಸೋಮವನ್ನುದ್ದೇಶಿಸಿ ಹರಿದು ಬರುತ್ತವೆ (೯-೩೧-೩). ವಾರಿಗಳು ಅವನ ನಿಯಮಗಳನ್ನೇ ಪಾಲಿಸುತ್ತವೆ (೯-೮೨-೫). ಸೋಮವು ಪ್ರವಾಹಗಳ ಮುಂದುಗಡೆ ಹರಿಯುತ್ತದೆ (೯-೮೬-೧೨); ನದಿಗಳಿಗೆಲ್ಲಾ ಯಜಮಾನ ಮತ್ತೂ ರಾಜ (೯-೧೫-೫ ; ೯-೮೬-೩೩ ; ೯-೮೯-೨), ಅನೇಕ ಪತ್ನಿಯರಿಗೆ ಯಜಮಾನ (೯-೮೬-೩೨) ಮತ್ತು ಸಮುದ್ರರಾಜ, ದೇವತೆ (೯-೧೦೭-೧೬). ನೀರುಗಳು ಅವನ ಭಗಿನಿಯರು (೯-೮೨-೩). ನೀರುಗಳಿಗೆ ನಾಯಕನಾದುದರಿಂದ, ಮಳೆಗೂ ಅವನೇ ಒಡೆಯ (೯-೭೪-೩). ನೀರನ್ನು ಉತ್ಪತ್ತಿ ಮಾಡುತ್ತಾನೆ ಮತ್ತು ಭೂವ್ಯಾಕಾಶಗಳು ಮಳೆಗರೆಯುವಂತೆ ಮಾಡುತ್ತಾನೆ (೯-೯೬-೩). ಆಕಾಶದಿಂದ ಮಳೆ ಪ್ರವಾಹವನ್ನು ಹೊರಡಿಸುತ್ತಾನೆ (೯-೮-೮ ; ೯-೪೯-೧ ; ೯-೯೭-೧೭; ೯-೧೦೮-೯ ಮತ್ತು ೧೦). ಒಂದೊಂದು ಸಲ ಸೋಮ ಬಿಂದುಗಳೇ ಮಳೆ ಹನಿಗಳು ಎಂದು ಕರೆಯಲ್ಪಡುತ್ತವೆ (೯-೪೧-೩ ; ೯-೮೯-೧ ; ೯-೧೦೬-೯). ಮಳೆ ಮೋಡದಂತೆ, ಮಧುಮಿಶ್ರಿತವಾದ ಸೋಮವು ಚಲಿಸುತ್ತದೆ (೯-೨-೯). ಅದೇರೀತಿ, ಪವಮಾನ ಬಿಂದುಗಳೂ (ಸೋಮಬಿಂದುಗಳು), ಸ್ವರ್ಗದಿಂದ, ಆಕಾಶದಿಂದ, ಭೂಭಾಗಗಳ ಮೇಲೆ ಬೀಳುತ್ತವೆ (೯-೬೩-೨೭). ಸುತವಾದ ಸೋಮವು, ಇನ್ನೂ ಅನೇಕ ವಾಕ್ಯಗಳಲ್ಲಿ ಮಳೆನೀರಿಗೆ ಹೋಲಿಸಲ್ಪಟ್ಟಿದೆ (೮-೭-೧೦ ; ೯-೭೪೪ ; ೧೦-೩೦-೪ ನ್ನು ಹೋಲಿಸಿ).

ಇಂದ್ರನ ಪಾನೀಯವಾದ ಮಾದಕದ್ರವ್ಯವನ್ನು ಚಲಿಸುವಂತೆ ಮಾಡಬೇಕೆಂದು ನೀರನ್ನು ಪ್ರಾರ್ಥಿಸಿದಾರೆ (೧೦-೩೦-೯). ಸೋಮವು ನೀರಿನಲ್ಲೇ ಅಭಿವೃದ್ಧಿಯಾಗುವ ಬಿಂದು (೯-೮೫-೧೦ ; ೯-೮೯-೨). ಅದರಿಂದಲೇ, ಅವನು ನೀರಿನ ಅಂಕುರ (೯-೯೭-೪೧ ; ಶ. ಬ್ರಾ. ೪-೪-೫-೨೧) ಅಥವಾ ಶಿಶು; ಹೊಸದಾಗಿ ಜನಿಸಿದ ಶಿಶುವಾದ ನೀರಿನಲ್ಲಿರುವ ಗಂಧರ್ವ (ಅಪಾಂ ಗಂಧರ್ವಃ) ನನ್ನು ಏಳು ಜನ ಸಹೋದರಿಯರು, ಅವನ



CC-0. Jangamwadi Math Collection. Digitized by eGangotri

ಜನನಿಯರಂತೆ, ಸುತ್ತುಗಟ್ಟಿಕೊಂಡಿದಾರೆ (೯-೮೬-೩೬ ; ೧೦-೧೩-೫ ನ್ನು ಹೋಲಿಸಿ); ಅಥವಾ ನೀರುಗಳೇ ಅವನ ತಾಯಿಯರು (೯-೬೧-೪). ನೀರು ಅಥವಾ ಗೋವುಗಳ ಮಧ್ಯದಲ್ಲಿರುವ ತರುಣನೆಂದು ಸೋಮವನ್ನು ವರ್ಣಿಸಿದೆ (೫-೪೫-೯ ; ೯-೯-೫).

ದ್ರೋಣಪಾತ್ರೆಗಳಲ್ಲಿ ಶುದ್ಧಿಮಾಡುತ್ತಿರುವಾಗ ಅಥವಾ ಕಲಶಗಳಿಗೆ ಪ್ರವಹಿಸುವಾಗ ಉಂಟಾಗುವ ಶಬ್ದವು ಮಳೆಯ ಶಬ್ದವನ್ನು ಹೋಲುತ್ತದೆ (೯-೪೧-೩). ಈ ಸಂದರ್ಭದಲ್ಲಿ ಅತಿಶಯೋಕ್ತಿಗಳೇ ಹೆಚ್ಚು. ಜರಡಿಯಿಂದ ಸೋಮ ಬಿಂದುಗಳು ಉಕ್ಕಿ ಹರಿಯುವಾಗ ಆಗುವ ಶಬ್ದವು ಯೋಧರು ಯುದ್ಧಮಾಡುವ ಶಬ್ದದಂತೆ ಇರುತ್ತದೆ (೯-೬೯-೨). ಈ ಶಬ್ದವನ್ನು ಸೂಚಿಸಲು, ಗರ್ಜಿಸು, ಅರಚು ಎಂಬರ್ಥಕೊಡುವ 'ಕ್ರಂದ್' 'ನದ್,' 'ಮಾ,' 'ರು,' 'ವಾಶ್' ಮೊದಲಾದ ಧಾತುಗಳು ಉಪಯೋಗಿಸಲ್ಪಟ್ಟಿವೆ. (೯-೯೧-೩ ; ೯-೯೫-೪ ಇತ್ಯಾದಿ). ಸ್ತನ್ (ಗುಡುಗು) ಧಾತುವೂ ಪ್ರಯೋಗಿಸಲ್ಪಟ್ಟಿದೆ (೯-೮೬-೯). ವಿಪ್ರರು ಘರ್ಜಿಸುತ್ತಿರುವ ಸೋಮಲತೆಗಳಿಂದ ರಸವನ್ನು ತೆಗೆಯುತ್ತಾರೆ (೯-೭೨-೬). ಸೋಮವನ್ನು ಶೋಧಿಸುವ ಸಂದರ್ಭದಲ್ಲಿ ಸಿಡಿಲೂ ಪ್ರಸಕ್ತವಾಗಿದೆ (೯-೪೧-೩ ; ೯-೮೦-೧ ; ೯-೮೪-೩ ; ೯-೮೭-೮). ಸ್ವರ್ಗೀಯ ಸೋಮರಸವನ್ನು ಶುದ್ಧಿಮಾಡುವ ಸಂದರ್ಭದಲ್ಲಿ ಈ ರೀತಿ ನಡೆದಿರಬಹುದು ಅಥವಾ ಮಳೆಗಾಳಿಗಳಿಗೆ ಸಂಬಂಧಿಸಿದ ವಾಕ್ಯಗಳಿರಬಹುದು.

ಸೋಮವು ಗರ್ಜಿಸುತ್ತದೆ ಎಂದು ಹೇಳುವಾಗ, ಸಾಧಾರಣವಾಗಿ ವೃಷಭಕ್ಕೆ ಹೋಲಿಕೆ, ಅಥವಾ ವೃಷಭವೆಂದೇ ಪ್ರಯೋಗವು ಇದೆ. ಗೂಳಿಯಂತೆ, ಕಾಡಿನಲ್ಲಿ ಅವನು ಗುಟುರು ಹಾಕುತ್ತಾನೆ (೯-೭-೩); ಕಂದುಬಣ್ಣದ ವೃಷಭವು ಗುಟುರು ಹಾಕುತ್ತದೆ ಮತ್ತು ಸೂರ್ಯನ ಜೊತೆಯಲ್ಲಿ (೯-೨-೬) ಪ್ರಕಾಶಿಸುತ್ತದೆ. ಸೋಮಕ್ಕೆ ಮಿಶ್ರಮಾಡುವ ನೀರು ಅಥವಾ ಹಾಲುನೀರುಗಳಿಗೆ ಗೋ ಎಂದು ಹೇಳಿರುವುದರಿಂದ, ಸೋಮ ಮತ್ತು ವಾರಿಗಳಿಗೆ, ವೃಷಭ ಗೋವುಗಳಿಗಿರುವ ಸಂಬಂಧವೇ ಉಕ್ತವಾಗುತ್ತದೆ. ಗೋವುಗಳ ಮಧ್ಯದಲ್ಲಿ ವೃಷಭದಂತೆ ಇದಾನೆ (೯-೧೭-೬ ; ೯-೬೯-೪ ; ೯-೯೬-೭) ಅಥವಾ ಗೋವುಗಳಿಗೆಲ್ಲಾ ಒಡೆಯ (೯-೭೨-೪). ವೃಷಭವು ಗೋವುಗಳನ್ನುದ್ದೇಶಿಸಿ, ಗುಟುರು ಗೋವುಗಳ ಮಧ್ಯೆ ಸಂಚರಿಸುವ ವೃಷಭದಂತೆ (೯-೭೧-೯) ಅಥವಾ ಹಾಕುವಂತೆ ಗುಟುರು ಹಾಕುತ್ತಾನೆ (೯-೭೧-೭) ಮತ್ತು ಗೋವುಗಳೂ ಇವನನ್ನುದ್ದೇಶಿಸಿ ಅರಚುತ್ತವೆ (೯-೮೦-೨ ; ಇತ್ಯಾದಿ). ಅವನು ಭೂಮ್ಯಾಕಾಶಗಳ ಮತ್ತು ನದಿಗಳ ವೃಷಭ (೬-೪೪-೨೧). ಸೋಮದ ರಭಸವು ಅನೇಕ ಸಲ ಮಹಿಷಕ್ಕೆ ಹೋಲಿಸಿ ಹೇಳಲ್ಪಟ್ಟಿದೆ. ಸೋಮನನ್ನು 'ಪಶು' ವೆಂದೇ ಕರೆದಿದೆ (೯-೮೬-೪೩). ಗೋ (ವಾರಿ) ವುಗಳ ಮಧ್ಯೆ ವೃಷಭನಂತಿರುವುದರಿಂದ, ಸೋಮವು ನೀರನ್ನು (ಗೋವನ್ನು) ಫಲವತ್ತಾಗಿ ಮಾಡುತ್ತದೆ (೧೦-೩೬-೮ ; ೯-೧೯-೫ ನ್ನು ಹೋಲಿಸಿ), ಅವನು ವೀರ್ಯಾಧಾನ ಮಾಡುವವನೂ (ರೇತೋಧಾ) ಹೌದು ; ಈ ವಿಶೇಷಣವು ಯಜುರ್ವೇದದಲ್ಲಿ ಹೆಚ್ಚಾಗಿ ಚಂದ್ರನಿಗೆ ಹೇಳಲ್ಪಟ್ಟಿದೆ (ವ್ಯ. ಸಂ. ೧-೬-೯). ಆದುದರಿಂದಲೇ ಫಲವತ್ತ್ವವನ್ನು ಅನುಗ್ರಹಿಸುವವನು (೯-೬೦-೪ ; ೯-೭೪-೫). ಸೋಮವನ್ನು ಪದೇ ಪದೇ ವೃಷಭನೆಂದು ಕರೆದಿರುವುದರಿಂದ (ಉಕ್ಷಾ, ವೃಷಾ, ವೃಷಭ), ಅವನ ಕೊಂಬುಗಳು ಚೂಪಾಗಿವೆಯೆಂದು (ತಿಗ್ಮಶೃಂಗ) ವರ್ಣನೆ. ಈ ಪದವು ಋಗ್ವೇದದಲ್ಲಿ ಆರು ಕಡೆ ಬಂದಿದೆ. ಅದರಲ್ಲಿ ಐದುಸಲ ವೃಷಭ ಎಂದರ್ಥಕೊಡುವ ಪದ ಸಹಚರಿತವಾಗಿಯೇ ಪ್ರಯೋಗವಿದೆ. ಇಂದ್ರನ ಪಾನೀಯವಾದ 'ಮಾಥ' ವು ಮೊನಚಾದ ಶೃಂಗಗಳುಳ್ಳ ವೃಷಭದಂತಿದೆ (೧೦-೮೬-೧೫). ಸೋಮದೇವತೆಯೂ ಅಗ್ನಿಯಂತೆ, ಶೃಂಗಗಳನ್ನು ಮಸೆಯುತ್ತಾನೆ (೯-೧೫-೪ ; ೯-೭೦-೭).

ಸೋಮವು ಚುರುಕಾದುದು. ಸೋಮರಸವು ಹರಿಯುವ ವೇಗವನ್ನು ಬಹಳ ಸಲ ಕುದುರೆಯ ವೇಗಕ್ಕೆ ಹೋಲಿಸಿದೆ. ಹತ್ತು ಜನ ಕನ್ಯೆಯರು (ಬೆರಳುಗಳು) ಸೋಮನನ್ನು ಉತ್ತಮಾಶ್ವದಂತೆ, ತೊಳೆಯು



CC-0. Jangamwadi Math Collection. Digitized by eGangotri

ತ್ತಾರೆ (೯-೬-೫). ಇಂದ್ರನಿಗೆ ಮದವನ್ನುಂಟುಮಾಡುವ ಸೋಮರಸದ ಬಿಂದುವೂ ಒಂದು ಕಪಿಲವರ್ಣದ ಅಶ್ವ (೯-೬೩-೧೭). ದ್ರೋಣಪಾತ್ರೆಗಳಿಗೆ ಹರಿಯುತ್ತಿರುವ ಸೋಮರಸವನ್ನು ಹೀರುತ್ತಿರುವ ಪಕ್ಷಿಗೆ ಹೋಲಿಸಿದೆ (೯-೭೨-೫ ; ಇತ್ಯಾದಿ).

ರಸವು ಹರಿದ್ರವರ್ಣವಾಗಿರುವುದರಿಂದ ಸೋಮದ ಭೌತಿಕ ಗುಣಗಳಲ್ಲಿ ವಿಶೇಷವಾಗಿ ಚರ್ಚಿಸಿರುವುದು ಅದರ ಕಾಂತಿಯನ್ನು ಅವನ ಕಿರಣಗಳು ಪ್ರಸಕ್ತವಾಗುತ್ತವೆ. ಮತ್ತು ಸೂರ್ಯನಿಗೆ ಅವನನ್ನು ಮೇಲಿಂದ ಮೇಲೆ ಹೋಲಿಸುತ್ತಾರೆ. ಸೂರ್ಯನಂತೆ ಅಥವಾ ಸೂರ್ಯನೊಡನೆ ಪ್ರಕಾಶಿಸುತ್ತಾನೆ ಮತ್ತು ಸೂರ್ಯಕಿರಣಗಳಿಂದ ಆವೃತನಾಗುತ್ತಾನೆ. (೯-೭೬-೪ ; ೯-೮೬-೩೨ ; ೯-೭೧-೯ ನ್ನು ಹೋಲಿಸಿ) ಸೂರ್ಯನ ರಥವನ್ನೇರಿ ಸೂರ್ಯನಂತೆ ಸಮಸ್ತ ಪ್ರಾಣಿಗಳಿಗೂ ಮೇಲೆ ನಿಂತಿರುತ್ತಾನೆ. ಸೂರ್ಯನಂತೆಯೇ ಭೂವ್ಯಾಕಾಶಗಳನ್ನು ಕಿರಣಗಳಿಂದ ಆವರಿಸುತ್ತಾನೆ (೯-೪೧-೫). ತೇಜಸ್ವಿಯಾದ ಪುತ್ರನಾಗಿ ಜನಿಸಿ, ಮಾತಾಪಿತೃಗಳನ್ನೂ ಕಾಂತಿಯುತರನ್ನಾಗಿ ಮಾಡಿದನು (೯-೯-೩). ಸೂರ್ಯಪುತ್ರಿಯು ಅವನನ್ನು ಶುದ್ಧೀಕರಿಸುತ್ತಾಳೆ (೯-೧-೬). ಈ ಮೇಲೆ ಉಕ್ತವಾದ ಕಾರಣಗಳಿಂದ, ಇವನು ಕತ್ತಲೊಡನೆ ಹೋರಾಡುತ್ತಾನೆ (೯-೯-೭). ಬೆಳಕಿನಿಂದ ಅದನ್ನು ನಿವಾರಿಸುತ್ತಾನೆ (೯-೮೬-೨೨) ಅಥವಾ ಕತ್ತಲನ್ನು ಹೋಗಲಾಡಿಸಿ ಉತ್ತಮವಾದ ಬೆಳಕನ್ನು ಕೊಡುತ್ತಾನೆ (೯-೬೬-೨೪ ; ೯-೧೦೦-೮ ; ೯-೧೦೮-೧೨ ಇತ್ಯಾದಿ) ಎಂಬುದಾಗಿ ಹೇಳಿರುವುದು.

ಸಾಧಾರಣವಾದ ಆಹಾರ ಅಥವಾ ಪಾನೀಯಗಳಲ್ಲಿ ಇರದೇ ಇರುವ, ಅನಿರ್ವಾಚ್ಯವಾದ ಒಂದು ಶಕ್ತಿ ಸೋಮರಸಕ್ಕೆ ಇದೆ. ಈ ಶಕ್ತಿಯಿಂದ ಮನುಷ್ಯರನ್ನು ಅಥವಾ ಅದನ್ನು ಪಾನ ಮಾಡಿದವರು ಯಾರೇ ಆಗಲಿ, ಅವರನ್ನು ಚೇತನಗೊಳಿಸಿ, ಮನುಷ್ಯರಿಗೆ ಸಾಧ್ಯವಲ್ಲದ ಕಾರ್ಯಗಳನ್ನೂ ಸಾಧಿಸುವಂತೆ ಮಾಡುತ್ತದೆ. ಆದುದರಿಂದಲೇ, ಇದು ದಿವ್ಯವಾದ ಪಾನೀಯ, ಅಮೃತಕ್ಕೆ ಸಮಾನವಾದುದು ಅಥವಾ ಅದೇ ಅಮೃತ ಎಂಬ ಭಾವನೆಗೆ ಅವಕಾಶವಾಗಿದೆ. ಇದನ್ನು ಪಾನಮಾಡಿದರೆ ಅಮರರಾಗುತ್ತಾರೆ ಎಂದು ಹೇಳಿದರೂ ಅತಿಶಯೋಕ್ತಿಯಾಗಲಾರದು. ದೇವತೆಗಳಿಗೆ ಪ್ರಿಯವಾದ (೯-೮೫-೨) ಮತ್ತು ಅಮರತ್ವಸಾಧಕವಾದ ಮದ್ಯ (೧-೮೪-೪) ; ಮನುಷ್ಯರಿಂದ ಸುತವಾಗಿ, ಕ್ಷೀರಮಿಶ್ರಿತವಾದ, ಈ ರಸವನ್ನು ದೇವತೆಗಳೆಲ್ಲರೂ ಪಾನಮಾಡುತ್ತಾರೆ (೯-೧೦೯-೧೫) ; ಇದರಿಂದ ಅವರಿಗೆ ಶೀಘ್ರವಾಗಿ ಉಲ್ಲಾಸವುಂಟಾಗುತ್ತದೆ (೮-೨-೧೮) ಮತ್ತು ಪಾನಮಾಡಿ ಹೃಷ್ಟರಾಗುತ್ತಾರೆ (೮-೫೮-೧೧). ಸೋಮವು ನಿತ್ಯವಾದುದು (೧-೪೩-೯ ; ೮-೮೮-೧೨ ; ೯-೩-೧ ಇತ್ಯಾದಿ). ದೇವತೆಗಳು ಅಮರತ್ವ ಪ್ರಾಪ್ತಿಗಾಗಿ ಅದನ್ನು ಪಾನಮಾಡಿದರು (೯-೧೦೬-೮). ಅವನು (ಸೋಮದೇವತೆಯು) ದೇವತೆಗಳಿಗೆ (೧-೯೧-೬ ; ೯-೧೦೮-೩) ಮತ್ತು ಮನುಷ್ಯರಿಗೆ ಅಮರತ್ವವನ್ನು ಅನುಗ್ರಹಿಸುತ್ತಾನೆ (೧-೯೧-೧ ; ೮-೪೮-೩.) ಶಾಶ್ವತವಾದ ತೇಜಸ್ಸು ಮತ್ತು ಯಶಸ್ಸುಗಳಿಗೆ ಸ್ಥಾನವೂ, ನಿತ್ಯವೂ, ಅವಿನಾಶಿಯೂ, ವೈವಸ್ವತನ ವಾಸಸ್ಥಳವೂ ಆದ ಲೋಕದಲ್ಲಿ, ತನ್ನ ಆರಾಧಕನನ್ನು ಅಮರನನ್ನಾಗಿ ಮಾಡಿ, ಇರಿಸುತ್ತಾನೆ (೯-೧೧೩-೭ ಮತ್ತು ೮).

ಆದುದರಿಂದ, ಸ್ವಾಭಾವಿಕವಾಗಿ, ಸೋಮನಿಗೆ ವೈದ್ಯಶಕ್ತಿಯೂ ಇರಬೇಕು. ರೋಗಿಗೆ ಸೋಮರಸವು ಔಷಧರೂಪವಾದುದು (೮-೬೧-೧೭). ಆದರಿಂದಲೇ ಸೋಮದೇವತೆಯು ಏನು ಕಾಯಿಲೆಯಿದ್ದರೂ ಅದನ್ನು ಗುಣಪಡಿಸುತ್ತಾನೆ; ಅಂಧರಿಗೆ ಕಣ್ಣನ್ನೂ, ಹೆಳವರಿಗೆ ಕಾಲನ್ನೂ ಕೊಡುತ್ತಾನೆ (೮-೬೮-೨; ೧೦-೨೫-೧೧). ಅವನು ಮನುಷ್ಯರ ದೇಹಗಳ ರಕ್ಷಕನು ; ಅವರ ಅಂಗಾಂಗಗಳೆಲ್ಲವನ್ನೂ ವ್ಯಾಪಿಸಿಕೊಂಡಿರುತ್ತಾನೆ (೮-೪೮-೯) ; ಇಹಲೋಕದಲ್ಲಿ ದೀರ್ಘಾಯುಸ್ಸನ್ನು ಅನುಗ್ರಹಿಸುತ್ತಾನೆ (೧-೯೧-೬ ; ೮-೪೮-೪ ಮತ್ತು ೭ ; ೯-೪-೬ ; ೯-೯೧-೬). ಸೋಮಪಾನ ಮಾಡಿದರೆ, ಹೃದ್ಗತವಾದ ಪಾಪವೂ ಪರಿಹೃತವಾಗುತ್ತದೆ. ಅಸತ್ಯವು ನಾಶವಾಗಿ, ಸತ್ಯವು ಪ್ರವೃದ್ಧವಾಗುತ್ತದೆ.



CC-0. Jangamwadi Math Collection. Digitized by eGangotri

ಸೋಮರಸವು ದೇಹದೊಳಕ್ಕೆ ಪ್ರವೇಶಿಸಿ, ದೋಣಿಯನ್ನು ಅಂಬಿಗನು (೯-೯೫-೨) ಮುಂದೆ ಹೊರಡಿ
ಸುವಂತೆ, ಉಚ್ಚಾರಣ ಶಕ್ತಿಯನ್ನು ಅಭಿವೃದ್ಧಿಪಡಿಸುತ್ತದೆ (೬-೪೭-೩ ; ೯-೮೪-೪ ; ೯-೯೫-೫ ; ೯-೯೭-೩೨).
ಇದೇ ಕಾರಣದಿಂದ; ಸೋಮನಿಗೆ ವಾಚಸ್ಪತಿ (೯-೨೬-೪ ; ೯-೧೦೧-೫) ಅಥವಾ ವಾಕ್ಕಿನ ನಾಯಕ (ವಾಚೋ
ಅಗ್ರಿಯ ಅಥವಾ ಅಗ್ರೇ, (೯-೭-೩ ; ೯-೬೨-೨೫ ಮತ್ತು ೨೬, ೯-೮೬-೧೨, ೯-೧೦೬-೧೮). ಸ್ವರ್ಗದಿಂದಲೂ
ಅವನು ಕೂಗುತ್ತಾನೆ (೯-೬೮-೮) ಎಂದು ಹೇಳಿದೆ. ಬ್ರಾಹ್ಮಣಗಳಲ್ಲಿ, ದೇವತೆಗಳು ಸೋಮದ ಬೆಲೆಯಾಗಿ
ವಾಕ್ಕನ್ನೇ ಕೊಟ್ಟರೆಂದು ಹೇಳಿದೆ. ಸೋಮವು ಪ್ರಬಲವಾದ ಭಾವನೆಗಳನ್ನೂ ಉದ್ರೇಕಗೊಳಿಸುತ್ತದೆ
(೬-೪೭-೩). ಆರಾಧಕರು ಈರೀತಿ ಘೋಷಿಸುತ್ತಾರೆ. ನಾವು ಸೋಮಪಾನ ಮಾಡಿದೇವೆ; ಅಮರರಾಗಿ
ದ್ದೇವೆ; ಬೆಳಕಿನ ಭಾಗಕ್ಕೆ ಬಂದಿದೇವೆ (ಜ್ಞಾನಿಗಳಾಗಿದೇವೆ); ದೇವತೆಗಳನ್ನು ತಿಳಿದುಕೊಂಡಿದೇವೆ
(೮-೪೮-೩). ಸೋಮವು ಭಾವನೆಗಳಿಗೆ ಒಡೆಯ, ಮತ್ತು ಪ್ರಾರ್ಥನಾ ವಾಕ್ಯಗಳ ತಂದೆ, ನಾಯಕ ಅಥವಾ
ಜನಕನೆಂದು ಉಕ್ತವಾಗಿದೆ. ಅವನು ಕವಿಗಳಿಗೆ ನಾಯಕನು; ವಿಪ್ರರಲ್ಲಿ ಋಷಿಯು (ವಿಪ್ರಾಣಾಂ ಋಷಿಃ,
೯-೯೬-೬). ಋಷಿಗಳ ಮನಸ್ಸಿನಂತೆ ಮನಸ್ಸು; ಋಷಿಗಳನ್ನೇ ಉತ್ಪತ್ತಿ ಮಾಡುವವನು (೯-೯೬-೧೮) ಮತ್ತು
ಪ್ರಾರ್ಥನಾ ಮಂತ್ರಗಳ ರಕ್ಷಕನು (೬-೫೨-೩). ಯಜ್ಞದ ಆತ್ಮವೇ ಅವನು (೯-೨-೧೦ ; ೯-೬-೮), ದೇವತೆ
ಗಳಿಗೆ 'ಬ್ರಹ್ಮ' ಎಂಬ ಋತ್ವಿಜನು (೯-೯೬-೬) ಮತ್ತು ಅವರವರ ಭಾಗಗಳನ್ನು ಅವರವರಿಗೆ ಹಂಚುತ್ತಾನೆ
(೧೦-೮೫-೧೯). ಹೀಗೆ ಅವನ ಜ್ಞಾನವು ಪ್ರಸಕ್ತವಾಗುತ್ತದೆ. ಅವನೊಬ್ಬ ಜ್ಞಾನಿಯಾದ ಋಷಿ (೮-೬೮-೧).
ದೇವತೆಗಳ ವಂಶಾವಳಿಯಲ್ಲವೂ ಅವನಿಗೆ ತಿಳಿದಿದೆ (೯-೮೧-೨ ; ೯-೯೫-೨ ; ೯-೯೭-೭ ; ೯-೧೦೮-೩). ಮನುಷ್ಯ
ರನ್ನು ವೀಕ್ಷಿಸುವ, ವಿವೇಕಿಯಾದ ಅಲಿ (೯-೭೮-೨). ಸೋಮದೇವತೆಯು ಪ್ರಾಣಿಗಳನ್ನೆಲ್ಲಾ ಸೂಕ್ಷ್ಮವಾಗಿ
ಅವಲೋಕಿಸುತ್ತಾನೆ (೯-೭೧-೯). ಆದುದರಿಂದ, ಅವನಿಗೆ ಅನೇಕ ನೇತ್ರಗಳು (೯-೨೬-೫) ಮತ್ತು ಸಹಸ್ರ
ನೇತ್ರಗಳು (೯-೬೦-೧).

ಸೋಮವು (ದೇವತೆಯು) ಪಿತೃಗಳನ್ನು ಕಾರ್ಯೋನ್ಮುಖರನ್ನಾಗಿ ಮಾಡಿತು (೯-೯೬-೧೧); ಅವನ
ಮೂಲಕವೇ, ಅವರು ತೇಜಸ್ಸು ಮತ್ತು ಗೋವುಗಳನ್ನು ಸಂಪಾದಿಸಿದರು (೯-೯೭-೩೯). ಸೋಮನಿಗೆ ಪಿತೃಗ
ಳೊಡನೆ ಬಾಂಧವ್ಯವಿದೆ (೮-೪೮-೩) ಅಥವಾ ಅವರಿಂದ ಯುಕ್ತನಾಗಿರುತ್ತಾನೆ (ಅ. ವೇ. ೧೮-೪-೧೨ ; ಶ. ಬ್ರಾ.
೨-೬-೧-೪ ಇತ್ಯಾದಿ). ಪಿತೃದೇವತೆಗಳಿಗೆ ಸೋಮಪ್ರಿಯರು (ಸೋಮ್ಯ ೧೦-೧೪-೬ ; ಅ. ವೇ. ೨-೧೨-೫)
ಎಂದು ಹೆಸರು.

ಸೋಮರಸದಿಂದ ಮನುಷ್ಯನಿಗೆ ಉತ್ಸಾಹವು ಹೆಚ್ಚುತ್ತದೆ. ಆದರೆ ಸೋಮರಸವು ಮುಖ್ಯವಾಗಿ
ದೇವತೆಗಳಿಗೆ ಅರ್ಪಿತವಾಗುತ್ತದೆ. ಆದುದರಿಂದ ಸೋಮಜನ್ಯವಾದ ಸಂತೋಷ, ಉತ್ಸಾಹಗಳು ದೇವತೆಗಳಿಗೆ
ಉಂಟಾಗುತ್ತವೆ. ಸೋಮಜನ್ಯವಾದ ಮದದ ಪರಿಣಾಮವು ಹೆಚ್ಚಾಗಿ ಇಂದ್ರನ ಮೇಲೆಯೇ ಆಗಿದೆ. ವಾಯು
ಮಂಡಲದಲ್ಲಿರುವ ವಿರುದ್ಧ ಶಕ್ತಿಗಳನ್ನು ಅಡಗಿಸುವುದಕ್ಕೆ ಇಂದ್ರನಿಗೆ ಸಹಕಾರಿಯಾಗುತ್ತದೆ. ವೃತ್ರನೊಡನೆ
ಯುದ್ಧಮಾಡಲು ಬೇಕಾದ ವಿಶೇಷ ಶಕ್ತಿಯು, ಸಾಮರ್ಥ್ಯವು ಸೋಮರಸದಿಂದ ಬಂದಿತೆಂದು ಅನೇಕ ಸಲ
ಉಕ್ತವಾಗಿದೆ (೮-೮೧-೧೭ ಇತ್ಯಾದಿ). ಸೋಮರಸದಿಂದುಂಟಾದ ಮದದಲ್ಲಿ, ಇಂದ್ರನು ಎಲ್ಲಾ ಶತ್ರುಗಳನ್ನೂ
ಸೋಲಿಸುತ್ತಾನೆ (೯-೧-೧೦) ಮತ್ತು ಸೋಮಪಾನ ಮಾಡಿದ ಇಂದ್ರನನ್ನು ಸಂಗ್ರಾಮದಲ್ಲಿ ಯಾರೂ ಎದುರಿಸು
ಲಾರರು (೬-೪೭-೧). ಸೋಮವೇ ಇಂದ್ರನ ಆತ್ಮ (೯-೮೫-೩); ಶುಭಕಾರಕನಾದ ಮಿತ್ರ (೧೦-೨೫-೯);
ಇಂದ್ರನ ಪರಾಕ್ರಮವನ್ನು ಅಭಿವೃದ್ಧಿಪಡಿಸುತ್ತಾನೆ (೯-೭೬-೨); ಮತ್ತು ವೃತ್ರವಧೆಯಲ್ಲಿ ಸಹಾಯ ಮಾಡು





CC-0. Jangamwadi Math Collection. Digitized by eGangotri

ತ್ತಾನೆ (೯-೬೧-೨೨). ಸೋಮಸಹಚರಿತನಾಗಿ, ಇಂದ್ರನು ಮನುಷ್ಯರಿಗೋಸ್ಕರ ನೀರು ಹರಿಯುವಂತೆ ಮಾಡಿದನು ಮತ್ತು ಸರ್ಪವನ್ನು ವಧಿಸಿದನು (೪-೨೮-೧). ಇದರಿಂದ ಒಂದೊಂದು ಸಲ ಸೋಮವೇ ಇಂದ್ರನ ವಜ್ರಾಯುಧವೆಂದೂ ಹೇಳಲ್ಪಡುತ್ತದೆ (೯-೭೨-೭ ; ೯-೭೭-೧ ; ೯-೧೧೧-೩). ಇಂದ್ರ ಸಂಬಂಧಿಯಾದ, ಈ ಸೋಮರಸವು ಸಹಸ್ರಜಯಪ್ರಾಪಕವಾದ ವಜ್ರಾಯುಧವಾಗುತ್ತದೆ (೯-೪೭-೩). ನೂರಾರು ದುರ್ಗಗಳನ್ನು ನಾಶಮಾಡಬಲ್ಲ ಮದ್ಯವು ಸೋಮರಸ (೯-೪೮-೨) ಮತ್ತು ವೃತ್ರವಧಕಾರಿಯೂ, ಮದಕಾರಿಯೂ ಆದ ಲತೆ (೬-೧೭-೧೧). ಈ ರೀತಿಯಲ್ಲಿ ಸೋಮದೇವತೆಯೇ ಇಂದ್ರನಂತೆ, ವೃತ್ರವಧೆಯನ್ನು ಮಾಡುವವನು ಮತ್ತು ದುರ್ಗಗಳನ್ನು ಭೇದಿಸುವವನು (೯-೮೮-೪) ಎನ್ನಿಸಿಕೊಳ್ಳುತ್ತಾನೆ. ಇಂದ್ರನ ವೈಯಕ್ತಿಕ ವಿಶೇಷಣವಾದ 'ವೃತ್ರಹಾ' ಎಂಬುದು ಸೋಮನಿಗೆ ಐದಾರು ಸಲ ಪ್ರಯೋಗಿಸಲ್ಪಟ್ಟಿದೆ.

ಇಂದ್ರನಿಂದ ಪಾನಮಾಡಲ್ಪಟ್ಟಾಗ, ಸೋಮರಸವು ಸೂರ್ಯನ ಉದಯಕ್ಕೆ ಕಾರಣವಾಯಿತು (೯-೮೬-೨೨). ಈ ಕಾರ್ಯವು ಸೋಮರಸಕ್ಕೆ ಸ್ವತಂತ್ರವಾಗಿಯೇ ಉಕ್ತವಾಗಿದೆ. ಸೂರ್ಯನು (೯-೨೮-೫, ೯-೩೭-೪) ಮತ್ತು ಆಕಾಶದಲ್ಲಿರುವ ಇತರ ತೇಜೋರಾಶಿಗಳು (೯-೮೫-೯) ಪ್ರಕಾಶಿಸುವಂತೆ ಸೋಮದೇವತೆಯು ಮಾಡಿದನು ಮತ್ತು ನೀರಿನಲ್ಲಿ ಸೂರ್ಯನನ್ನು ಉತ್ಪತ್ತಿಮಾಡಿದನು (೯-೪೨-೧). ಸೂರ್ಯೋದಯಕ್ಕೆ ಕಾರಣನು, ಪ್ರಬೋಧಕನು; ಸೂರ್ಯನನ್ನು ಪಡೆದು ಪ್ರಪಂಚಕ್ಕೆ ಕೊಟ್ಟನು; ಮತ್ತು ಉಷಸ್ಸುಗಳು ಉದಿಸುವಂತೆ ಮಾಡಿದನು. ತನ್ನ ಆರಾಧಕರೂ ಸೂರ್ಯೋದಯ ಕಾಲದಲ್ಲಿ ಭಾಗವಹಿಸುವಂತೆ ಮಾಡುತ್ತಾನೆ (೯-೪-೫) ಮತ್ತು ಅವರಿಗೋಸ್ಕರ ಬೆಳಕನ್ನು ಒದಗಿಸುತ್ತಾನೆ (೯-೩೫-೧). ಬೆಳಕನ್ನು ಕಂಡುಹಿಡಿದನು (೯-೫೯-೪) ಮತ್ತು ಬೆಳಕು ಮತ್ತು ಆಕಾಶಗಳನ್ನು ಸಂಪಾದಿಸುತ್ತಾನೆ (೯-೩-೨). ಘೃತವು ಅಮೃತತ್ವಕ್ಕೆ ಕೇಂದ್ರವಾಗಿದೆ ಮತ್ತು ಪ್ರಪಂಚವೆಲ್ಲಾ ಅದರ ಮೇಲೆಯೇ ನಿಂತಿದೆ ಎಂದು ಹೇಳಿದೆ (೪-೫೮-೧ ಮತ್ತು ೧೧). ಅದರಂತೆಯೇ ಸೋಮರಸ ಅಥವಾ ದೇವತೆಗೂ ಸಮಸ್ತ ಪ್ರಪಂಚದ ಆಧಿಪತ್ಯವು ಉಕ್ತವಾಗಿದೆ. (೯-೮೬-೨೮, ೨೯); ಅವನು ದಿಕ್ಕುಗಳಿಗೆಲ್ಲಾ ಅಧಿಪತಿ (೯-೧೧೩-೨); ಎರಡು ಪ್ರಪಂಚಗಳ ಸೃಷ್ಟಿಕಾರ್ಯವನ್ನು ಮಾಡುತ್ತಾನೆ (೯-೯೦-೧); ಭೂಮ್ಯಾಕಾಶಗಳ ಸೃಷ್ಟಿ ಮತ್ತು ಸ್ಥಿತಿ, ಆಕಾಶಕ್ಕೆ ಆಧಾರನಾಗಿರುವುದು ಮತ್ತು ಸೂರ್ಯನಲ್ಲಿ ತೇಜಸ್ಸನ್ನು ಸ್ಥಾಪಿಸುವುದು, ಈ ಕಾರ್ಯಗಳನ್ನು ಮಾಡುತ್ತಾನೆ (೬-೪೪-೨೩ ಮತ್ತು ೨೪; ೬-೪೭-೩ ಮತ್ತು ೪).

ವೃತ್ರಾಸುರನೊಡನೆ ಯುದ್ಧಮಾಡುವಾಗ, ಇಂದ್ರನಿಗೆ ಸಹಕಾರಿಯಾಗಿದ್ದ ಸೋಮನಿಗೆ ಸ್ವತಃ ಯೋಧನೆಂಬ ಪ್ರತೀತಿ ಬಂದಿದೆ. ಅವನು ಜಯಶಾಲಿ, ಅಜೇಯ ಮತ್ತು ಯುದ್ಧಕ್ಕೋಸ್ಕರವೇ ಜನಿಸಿರುವವನು (೧-೯೧-೨೧). ಶೂರರಲ್ಲಿ ಶೂರನೂ, ಭಯಂಕರರಲ್ಲಿ ಅತಿಭಯಂಕರನೂ, ಆದ ಸೋಮನು ಸದಾ ಜಯಶಾಲಿಯು (೯-೬೬-೧೬ ಮತ್ತು ೧೭). ತನ್ನ ಆರಾಧಕರಿಗೋಸ್ಕರ, ಇವನು, ಗೋವುಗಳು, ರಥಗಳು, ಅಶ್ವಗಳು, ಸುವರ್ಣ, ಸ್ವರ್ಗ, ನೀರು ಮತ್ತು ಇತರ ಸಾವಿರಾರು ವರಗಳನ್ನು (೯-೭೮-೪), ಏಕೆ, ಸಮಸ್ತ ವಸ್ತುಗಳನ್ನೂ ಯುದ್ಧದಲ್ಲಿ ಸಂಪಾದಿಸುತ್ತಾನೆ (೮-೬೮-೧). ಶೌರ್ಯಾದಿ ಪ್ರಶಂಸೆಯಿಲ್ಲದೇ, ಸರ್ವದಾ ಗವಾದಿ ಪದಾರ್ಥಗಳ ಮತ್ತು ಸ್ವರ್ಗದ ದಾತೃವೆಂದೂ (೯-೪೫-೩; ೯-೫೯-೪ ; ೯-೫೨-೧ ; ಇತ್ಯಾದಿ) ಉಕ್ತನಾಗಿದಾನೆ. ಅವನೇ ದೇವತೆಗಳ ನಿಧಿ (೯-೪೮-೩) ಅಥವಾ ಐಶ್ವರ್ಯ (ಶ. ಬ್ರಾ. ೧-೬-೪.೫). ಸೋಮದೇವತೆಯು ಶತ್ರುಗಳಿಂದ ರಕ್ಷಿಸಲೂ ಬಲ್ಲನು (೧೦-೨೫-೭). ಪಿಶಾಚಗಳನ್ನು ಓಡಿಸಬಲ್ಲನು (೯-೫೯-೫) ಮತ್ತು ಇತರ ಕೆಲವು ದೇವತೆಗಳಂತೆ, ಆದರೆ ಅವರಿಗಿಂತ ಹೆಚ್ಚುಸಲ 'ರಕ್ಷೋಹಾ' ಎನ್ನಿಸಿಕೊಂಡಿದಾನೆ. ದುಷ್ಟವಧೆ ಮಾಡುವ



CC-0. Jangamwadi Math Collection. Digitized by eGangotri

ವನು ಇವನೊಬ್ಬನೇ (೯-೨೮-೬, ಇತ್ಯಾದಿ). ಸೋಮಪಾನ ಮಾಡಿದ ಬ್ರಾಹ್ಮಣರು ಕಣ್ಣಿನಿಂದಲೇ ವಧ ಮಾಡಲಲ್ಲರು (ಮೈ. ಸಂ. ೪-೮-೨).

ಯೋಧನಾದುದರಿಂದ, ಈತನಿಗೂ ಆಯುಧಗಳಿವೆ (೯; ೯೬-೧೬). ಶೂರನಂತೆ ಹರಿತವಾದ (೯-೬೧-೩೦; ೯-೯೦-೩). ಆ ಆಯುಧಗಳನ್ನು ತನ್ನ ಹಸ್ತಗಳಲ್ಲಿ ಬಲವಾಗಿ ಹಿಡಿದುಕೊಳ್ಳುತ್ತಾನೆ (೯-೭೬-೨). ವೈರಸ್ವಭಾವದವನಾದ ತನ್ನ ತಂದೆಯಿಂದ ಆಯುಧಗಳನ್ನು ಕಸಿದುಕೊಂಡನೆಂದು (೬-೪೪.೨೨) ಹೇಳಿದೆ. ಸಹಸ್ರ ಅಲುಗುಗಳುಳ್ಳ ಬಾಣವನ್ನು ಉಪಯೋಗಿಸುತ್ತಾನೆ (೯-೮೩-೫, ೯-೮೬.೪೦) ಅವನ ಬಿಲ್ಲು ಬಹಳ ವೇಗಶಾಲಿಯಾದುದು (೯-೯೦-೩).

ಸೋಮದೇವತೆ ಮತ್ತು ಇಂದ್ರರು ಒಂದೇ ರಥದಲ್ಲಿ ಸಂಚರಿಸುತ್ತಾರೆ (೯-೮೭-೯-೯;೯೬-೨; ೯-೧೦೩-೫). ರಥದಲ್ಲಿ ಯುದ್ಧಮಾಡುವ ಇಂದ್ರನಿಗೆ ಸೋಮನು ಸಾರಥಿಯು (ಅ. ವೇ. ೮-೮-೨೩). ದಿವ್ಯ ವಾದ (೯-೧೧೧-೩) ಒಂದು ರಥದಲ್ಲಿ ಸಂಚರಿಸುತ್ತಾನೆ (೯-೩-೫). ಬೆಳಕು (೯-೮೬-೪೫) ಅಥವಾ ಜರಡಿಯು ಅವನ ರಥ (೯-೮೩-೫). ರಥಿಕರಲ್ಲಿ ಅತ್ಯುತ್ತಮನು (೯-೬೬-೨೬). ಒಳ್ಳೆಯ ರೆಕ್ಕೆಗಳುಳ್ಳ ಹೆಣ್ಣುಕುದುರೆ ಗಳು (೯-೮೬-೩೭) ಅಥವಾ, ವಾಯುವಿನಂತೆ, ಕುದುರೆಗಳ ತಂಡವೇ (೯-೮೮-೩) ಇದೆ.

ಇಂದ್ರನ ಸಹಚಾರಿಗಳಾದ ಮರುತ್ತಗಳೊಡನೆ ಒಂದೊಂದು ಸಲ ಸಹವಾಸವುಂಟು. ಅವರು ಆಕಾ ಶದ ವೃಷಭವನ್ನು ಸೋಮವನ್ನು ದೋಹನಮಾಡುತ್ತಾರೆ (೯-೧೦೮-೧೧, ೯-೫೪-೧ನ್ನು ಹೋಲಿಸಿ) ಮತ್ತು ಶಿಶುವು ಜನಿಸಿದ ಕೂಡಲೇ, ಅದನ್ನು ಅಲಂಕರಿಸುತ್ತಾರೆ (೯-೯೬-೧೭). ಇಂದ್ರನಂತೆ, ಇವನನ್ನೂ ಮರುತ್ತು ಗಳು (೬-೪೭-೫) ಅಥವಾ ಮರುದ್ಗಣವು (೯-೬೬-೨೬) ಸೋಮನನ್ನು ಪರಿಚರಿಸುತ್ತದೆ. ಆ ಗಾಳಿಗಳೂ ಕೂಡ ಸೋಮನಿಗೆ ಆನಂದದಾಯಕಗಳು (೯-೩೧-೩) ಮತ್ತು ವಾಯುವು ಸೋಮರಕ್ಷಕ (೧೦-೮೫-೫). ಅಗ್ನಿ, ಪೂಷಣ ಮತ್ತು ರುದ್ರರೊಡನೆ, ದ್ವಂದ್ವದೇವತೆಯಾಗಿ ಪರಿಗಣಿತನಾಗಿದಾನೆ (೨-೪೦, ೬-೭೪, ಇತ್ಯಾದಿ). ಕೆಲವು ವೇಳೆ ವರುಣನಿಗೂ ಸೋಮನಿಗೂ ಸಮಾನತ್ವವು ಉಕ್ತವಾಗಿದೆ. ಇದು ಹೇಗೆ ಎಂಬುದು ಅತೀಂದ್ರಿ ಯವಾದ ವಿಷಯ (೯-೭೭-೫, ೯-೯೫-೪, ಮತ್ತು ೯-೭೩-೩ ಮತ್ತು ೯, ೮-೪೧-೮ಗಳನ್ನು ಹೋಲಿಸಿ).

ಸೋಮಲತೆಯನ್ನು ಮೌಜವತ (ಮೂಜವತ್ ಎಂಬ ಪರ್ವತದಲ್ಲಿ ಬೆಳೆದುದು) ಎಂದು ವರ್ಣಿಸಿದೆ (೧೦-೩೪-೧). ಇದೇ ರೀತಿ, ಅನೇಕಸಲ ಗಿರಿಷ್ಠ (ಪರ್ವತದಲ್ಲಿರುವುದು) ಅಥವಾ ಪರ್ವತವೃಧ್ (ಪರ್ವತ ದಲ್ಲಿ ಬೆಳೆಯುವುದು) (೯-೪೬-೧) ಎಂಬುದಾಗಿ ಸೋಮಲತೆಯನ್ನು ವರ್ಣಿಸಿದೆ. ಸೋಮವನ್ನು ಬೆನ್ನಿನ ಮೇಲೆ ಇಟ್ಟುಕೊಂಡಿವೆ ಎಂದು ಪರ್ವತಗಳಿಗೂ ಹೇಳುವುದುಂಟು (ಅ. ವೇ. ೩-೨೧-೧೦). ಸೋಮರಸವನ್ನು ತೆಗೆಯಲು ಉಪಯೋಗಿಸುವ ಕಲ್ಲುಗಳಿಂದ (ಅದ್ರಯಃ ೯-೫೨-೨). ಈ ರೀತಿ ವರ್ಣನೆ ಇರಬಹುದು. ಈ ಎಲ್ಲ ಸಂದರ್ಭಗಳಲ್ಲೂ, ಭೂಲೋಕದ ಪರ್ವತಗಳೇ ಅಭಿಪ್ರೇತವಾಗಿರಬಹುದು (೯-೮೨-೩ನ್ನು ಹೋಲಿಸಿ). ಆಕಾಶಗುಮ್ಮಟದಲ್ಲಿ ಸವಿನುಡಿಯಾಡುವ ಸ್ನೇಹಿತರು ಪರ್ವತದ ಮೇಲೆ ವಾಸಿಸುವ ವೃಷಭವನ್ನು ದೋಹನ ಮಾಡಿದರು (೯-೮೫-೧೦, ೯-೯೫-೪ನ್ನು ಹೋಲಿಸಿ). ವರುಣನು, ವಾರಿಗಳಲ್ಲಿ ಅಗ್ನಿಯನ್ನೂ, ಆಕಾಶ ದಲ್ಲಿ ಸೂರ್ಯನನ್ನೂ, ಶಿಲೆಯಲ್ಲಿ ಸೋಮವನ್ನೂ ಇಟ್ಟನು (೫-೮೫-೨) ಅಥವಾ ಆಕಾಶದಿಂದ ಒಬ್ಬನನ್ನು (ಅಗ್ನಿಯನ್ನು) ಮಾತರಿಶ್ವನು ತಂದನು ಮತ್ತು ಮತ್ತೊಬ್ಬನನ್ನೂ (ಸೋಮವನ್ನು) ಶಿಲೆಯಿಂದ ಶ್ಯೇನವು ಎತ್ತಿ ಕೊಂಡುಹೋಯಿತು (೧-೯೩-೬). ಈ ಸಂದರ್ಭಗಳಲ್ಲೂ ಭೂಲೋಕದ ಪರ್ವತಗಳೇ ಉದ್ದಿಷ್ಟವಾಗಿರಬೇಕು.



CC-0. Jangamwadi Math Collection. Digitized by eGangotri

ಆದರೆ, ಪರ್ವತ, ಶಿಲೆ, ಇವುಗಳೆಲ್ಲಾ ಇತಿಹಾಸಗಳಲ್ಲಿ ಮೇಘಗಳೆಂಬ ಅಭಿಪ್ರಾಯಕೊಡುವುದರಿಂದ ಸ್ವಲ್ಪ ಸಂಶಯಕ್ಕವಕಾಶವಿದೆ.

ಸೋಮಲತೆಯು ಪ್ರಾರ್ಥಿಸಸ್ಯವಾದರೂ, ಅದು ದಿವ್ಯವೂ ಹೌದು (೧೦-೧೧೬-೩), ವಾಸ್ತವವಾಗಿ, ಅದರ ಮೂಲ ಮತ್ತು ಅಧಿಷ್ಠಾನವು ಸ್ವರ್ಗಲೋಕವು ಎಂದೇ ಭಾವನೆ. ಆ ಗಿಡವು ಮೇಲು ಲೋಕದಲ್ಲಿ ಹುಟ್ಟಿ, ಅಲ್ಲಿಂದ ಭೂಮಿಗೆ ಬಂದಿತು (೯-೬೧-೧೦). ಅದರ ಮದಕಾರಿಯಾದ ರಸವು ಸ್ವರ್ಗಲೋಕದ ಶಿಶುವು (೯-೩೮-೫). ಸೂರ್ಯನಿಂದ ಜನಿಸಿದುದು ಎಂದು ಒಂದು ವಾಕ್ಯದಲ್ಲೂ (೯-೯೩-೧), ಆ ದೊಡ್ಡ ಪಕ್ಷಿಗೆ ಪರ್ಜನ್ಯನು ಜನಕನೆಂದು ಇನ್ನೊಂದು ವಾಕ್ಯದಲ್ಲಿಯೂ (೯-೮೨-೩, ೯-೧೧೩-೩ನ್ನು ಹೋಲಿಸಿ) ಹೇಳಿದೆ. ಅಥರ್ವವೇದದಲ್ಲಿ, ಅಮೃತಕ್ಕೆ ಮೂಲವು ಪರ್ಜನ್ಯನಿಂದ ಉಪ್ತವಾದ ಬೀಜವೆಂದು (ಅ. ವೇ. ೮-೭-೨೧) ಉಕ್ತವಾಗಿದೆ, ಅನೇಕ ಕಡೆ, ಸೋಮರಸಕ್ಕೆ,ಶಿಶು (೯-೯೬-೧೭) ಅಥವಾ ಯುವಕ ಎಂದು ಕರೆದಿರುವುದು, ಅದೂ ಅಗ್ನಿಯಂತೆ ಪುನಃ ಪುನಃ ತಯಾರಿಸಲ್ಪಡುವುದರಿಂದ ಇರಬೇಕು. ಸೋಮರಸವು ಸ್ವರ್ಗಲೋಕದ ಪೀಯೂಷ (ಕ್ಷೀರ, ೯-೫೧-೨, ಇತ್ಯಾದಿ) ಮತ್ತು ಸ್ವರ್ಗಲೋಕದಲ್ಲಿ ಶುದ್ಧಿಮಾಡಲ್ಪಡುತ್ತದೆ (೯-೮೩-೨, ೯-೮೬-೨೨, ಇತ್ಯಾದಿ). ಪ್ರಿಯವಾದ ಸ್ವರ್ಗದ ಪ್ರದೇಶಗಳಿಗೆ, ತನ್ನ ಪ್ರವಾಹಗಳ ಮೂಲಕ ಹರಿದುಹೋಗುತ್ತಾನೆ (೯-೩-೭) ಸ್ವರ್ಗದಲ್ಲಿ ನೆಲೆಸುತ್ತಾನೆ (೯-೮೫-೯), ಸ್ವರ್ಗದಲ್ಲಿದಾನೆ (ಶ. ಬ್ರಾ. ೩-೪-೩-೧೩) ಅಥವಾ ಸ್ವರ್ಗದ ಅಧಿಪತಿ (೯-೮೬-೧೧ ಮತ್ತು ೧೩). ಸ್ವರ್ಗಲೋಕದ ಪಕ್ಷಿಯಂತೆ, ಭೂಮಿಯನ್ನು ವೀಕ್ಷಿಸುತ್ತಾನೆ ಮತ್ತು ಎಲ್ಲಾ ಪ್ರಣಿಗಳನ್ನೂ ಅವಲೋಕಿಸುತ್ತಾನೆ (೯-೭೧-೯). ಸೂರ್ಯನಂತೆ ಎಲ್ಲಾ ಲೋಕಗಳಿಗೂ ಮೇಲುಗಡೆ ಇದಾನೆ (೯-೫೪-೩). ಶುದ್ಧವಾದ ಸೋಮಬಿಂದುಗಳು ಸ್ವರ್ಗದಿಂದ, ಆಕಾಶದಿಂದ, ಭೂಮಿಯ ಮೇಲೆ ಬೀಳುತ್ತವೆ (೯-೬೩-೨೭), ಅವನು ಅಂತರಿಕ್ಷ ಸಂಚಾರಿ (೪-೪೮-೪; ೪-೧೦೮-೭). ಕ್ಷೀರದಿಂದ ಆವೃತನಾದ ಅವನನ್ನು ಬೆರಳುಗಳು ಉಜ್ಜುತ್ತವೆ (೯-೮೬-೨೭). ಅತ್ಯುನ್ನತವಾದ ಆಕಾಶದಲ್ಲಿ (೩-೩೨-೧೦, ೪-೨೬-೬, ೯-೮೬-೧೫) ಅಥವಾ ಮೂರನೆಯ ಸ್ವರ್ಗದಲ್ಲಿ (ತೈ. ಸಂ. ೩-೫-೭-೧, ಇತ್ಯಾದಿ) ಅವನ ವಾಸ. ಇಲ್ಲೆಲ್ಲಾ, ವ್ಯೋಮ, ದ್ಯೌಃ ಮೊದಲಾದ ಪದಗಳೆಲ್ಲಾ ಜರಡಿಯ ಪರ್ಯಾಯ ಶಬ್ದಗಳೆಂದೇ ತೋರುತ್ತದೆ. ಸ್ವರ್ಗದ ನಾಭಿಯಲ್ಲಿ, ಊರ್ಣಾಮಯವಾದ ಜರಡಿಯಲ್ಲಿ ಸೋಮವಿದೆ (೯-೧೨-೪), ಸೂರ್ಯನೊಡನೆ ಆಕಾಶದಲ್ಲಿ, ಜರಡಿಯ ಮೇಲೆ ಧಾವಿಸುತ್ತದೆ (೯-೨೭-೫) ಕೆಲವು ಸ್ಥಳಗಳಲ್ಲಿ (೯-೩೭-೩, ೯-೮೫-೯, ೯-೮೬-೮ನ್ನು ಹೋಲಿಸಿ) ಜರಡಿಯೇ ಅಭಿಪ್ರೇತವೆಂದು ಸ್ಪಷ್ಟವಾಗಿದೆ. ಇವುಗಳೆಲ್ಲವೂ ಭೂಮಿಯಲ್ಲಿರುವ ಸೋಮಕ್ಕೇ ಅನ್ವಯಿಸಬೇಕು. ಸ್ವರ್ಗೀಯ ಸೋಮ ಅಥವಾ ಅಮೃತಕ್ಕೆ ಸ್ವರ್ಗವೇ ಆವಾಸಸ್ಥಾನವೆಂಬುದು ಸಿದ್ಧವಾದ ಅಂಶವಾಗಿದೆ.

ಸೋಮರಸವು ಸ್ವರ್ಗದಿಂದ ಆನೀತವಾಗಿದೆ (೯-೬೩-೨೭, ೯-೬೬-೩೦). ಸೋಮ ಮತ್ತು ಶ್ಯೇನದ ಇತಿಹಾಸವೇ ಈ ಅಭಿಪ್ರಾಯಕ್ಕೆ ಆಧಾರ. ಸೋಮವು ಶ್ಯೇನನಿಂದ ತರಲ್ಪಟ್ಟಿತು (೧೦-೮೦-೨). ಉನ್ನತವಾದ ಸ್ವರ್ಗಲೋಕದಿಂದ ಆ ಪಕ್ಷಿಯು ಸೋಮವನ್ನು ತಂದಿತು (೪-೨೬-೬). ಪಕ್ಷಿಯು ಸೋಮ ಅಥವಾ ಮಧುವನ್ನು ಇಂದ್ರನಿಗೆ ತಂದುಕೊಟ್ಟಿತು (೩-೪೩-೭, ೪-೧೮-೧೩). ಶೀಘ್ರಗಾಮಿಯಾದ ಗಿಡುಗವು ಸೋಮಲತೆಯ ಹತ್ತಿರಕ್ಕೂ ಹಾರಿಹೋಯಿತು (೫-೪೫-೯), ಆ ಗಿಡದ ಸಿಹಿಯಾದ ಕಾಂಡದ ಭಾಗವನ್ನು ಇಂದ್ರನಿಗೋಸ್ಕರ ಕಿತ್ತುತಂದಿತು (೪-೨೦-೬). ತನ್ನ ಕಾಲಿನಲ್ಲಿ ಹಿಡಿದುಕೊಂಡು, ಆಕಾಶದ ಮೂಲಕ, ಇಂದ್ರನಿಗೋಸ್ಕರ ತಂದಿತು (೮-೭೧-೯). ಮನೋವೇಗದಿಂದ ಹಾರುತ್ತಾ, ಪಕ್ಷಿಯು ಕಬ್ಬಿಣದ ದುರ್ಗವನ್ನು ಭೇದಿಸಿ (೪-೨೭-೧ನ್ನು ಹೋಲಿಸಿ), ವಜ್ರಾಯುಧಧಾರಿಗೋಸ್ಕರ, ಸ್ವರ್ಗಕ್ಕೆ ಹೋಗಿ, ಸೋಮರಸವನ್ನು ತಂದಿ



CC-0. Jangamwadi Math Collection. Digitized by eGangotri

(೮-೮೯-೮). ಬಹಳ ದೂರದಿಂದ ಸ್ವರ್ಗದಿಂದ, ಗಿಡವನ್ನೇ ಹೊತ್ತು ತಂದಿತು (೯-೬೮-೬, ೯-೭೭-೨, ೯-೮೬-೨೪, ೧೦-೧೧-೪, ೧೦-೯೯-೮, ೧೦-೧೪೪-೪). ಈ ಕಥೆಯು ೪-೨೬ ಮತ್ತು ೪-೨೭ನೆಯ ಸೂಕ್ತಗಳಲ್ಲಿ ವಿವರವಾಗಿದೆ. ಬ್ರಾಹ್ಮಣಗಳಲ್ಲಿ, ಅಗ್ನಿಯ ಒಂದು ವಿಶೇಷರೂಪವಾದ 'ಗಾಯತ್ರಿ'ಯು ಸೋಮವನ್ನು ಎತ್ತಿಕೊಂಡು ಹೋಗುತ್ತದೆ ಎಂದು ಹೇಳಿದೆ. ಇಂದ್ರ ಮತ್ತು ಶ್ಯೇನರು ಭಿನ್ನರು; ಶ್ಯೇನವೇ ಯಾವಾಗಲೂ ಸೋಮವನ್ನು ಇಂದ್ರನಿಗೆ ತಂದುಕೊಡುತ್ತದೆ. ಈ ಇತಿಹಾಸಕ್ಕೆ ಸಂಬಂಧಪಡದ ಮಂತ್ರವೊಂದರಲ್ಲಿ ಇಂದ್ರನನ್ನೇ ಶ್ಯೇನವೆಂದು (೧೦-೯೯-೮) ಕರೆದಿದೆ. ದ್ಯುಲೋಕದ ಶ್ಯೇನನೆಂದು ಒಂದು ಕಡೆ ಅಗ್ನಿಗೆ (೭-೧೫-೪), ಎರಡು ಸಲ ಮರುತರಿಗೆ ಹೇಳಿದೆ. ವೈದ್ಯುತಾಗ್ನಿಗೇ ಶ್ಯೇನನೆಂಬುದು ವಿಶೇಷವಾಗಿ ಉಕ್ತವಾಗಿರುವುದು (ತೈ. ಬ್ರಾ. ೩-೧೦-೫-೧, ೧೨-೧-೨ನ್ನು ಹೋಲಿಸಿ) ಮತ್ತು ಅಗ್ನಿಯನ್ನು ಪಕ್ಷಿಯೆಂದು ಅನೇಕ ಸಲ ಕರೆದಿದೆ. ಸಿಡಿಲು ಬಡಿಯುವುದನ್ನೆ ಈ ರೀತಿ ವರ್ಣಿಸಿದಾರೆಂದು ಕೆಲವರ ಮತ, ಅಯೋಮಯವಾದ ದುರ್ಗವೇ ಮೇಘ; ಇದರಿಂದ ಹೊರಡುವ ಸಿಡಿಲೇ ಶ್ಯೇನದಿಂದ ಸೋಮಾಪಹರಣ, ಜಲವರ್ಷಣವೇ ಸೋಮಬಿಂದುಗಳ ವರ್ಷಣ, ಇತ್ಯಾದಿ. ಇದಕ್ಕೆ ಆಧಾರವಾಗಿ ಕೆಲವು ವಾಕ್ಯಗಳೂ ಉದಹರಿಸಲ್ಪಟ್ಟಿವೆ. ಸೋಮ ಮತ್ತು ಅಗ್ನಿಗಳೆರಡೂ ಭೂಮಿಗೆ ಇಳಿದು ಬಂದಿರುವುದು ಪ್ರಸಕ್ತವಾಗಿದೆ (೧-೯೩-೬). ಸೋಮವನ್ನು ಎತ್ತಿಕೊಂಡು ಹೋಗುತ್ತಿದ್ದ ಶ್ಯೇನವನ್ನು ಬಾಣದಿಂದ ಹೊಡೆದು, ಒಂದು ಗರಿಯನ್ನು ಕೃಶಾನು ಎಂಬ ಧನುರ್ಧಾರಿಯು ಬೀಳಿಸಿದನೆಂಬುದೂ ಕವಿಯ ವರ್ಣನಾವೈಖರಿಗೆ ಸೇರಿದ್ದೆನ್ನಬಹುದು. ಇದು ಬ್ರಾಹ್ಮಣಗಳಲ್ಲಿ ಇನ್ನೂ ವಿಸ್ತಾರವಾಗಿದೆ. ಗರಿ ಅಥವಾ ಉಗುರೇ ಭೂಮಿಗೆ ಬಿದ್ದು ಪರ್ಣ ಅಥವಾ ಶಲ್ಯಕವೃಕ್ಷವಾಯಿತು. ಈ ವೃಕ್ಷಕ್ಕೆ ಬಹಳ ಪೂಜ್ಯವಾದ ಸ್ಥಾನವಿದೆ.

ಅತಿ ಮುಖ್ಯವಾದ ಲತೆಯಾದುದರಿಂದ, ಸೋಮಲತೆಯನ್ನು ಸಸ್ಯಗಳಿಗೆಲ್ಲಾ ಅಧಿಪತಿಯೆಂತಲೂ) (೯-೧೧೪-೨), ರಾಜನೆಂತಲೂ (೯-೯೭-೧೮ ಮತ್ತು ೧೯). ವನಸ್ಪತಿ (೧-೯೧-೬ ; ೯-೧೨-೭) ಮತ್ತು ಸಸ್ಯಗಳಿಗೆಲ್ಲಾ ಮೂಲಭೂತವಾದುದು (೧-೯೧-೨೨) ಎಂದು ಹೇಳಿದೆ. ಬ್ರಾಹ್ಮಣಗಳಲ್ಲಿ ವೃಕ್ಷಗಳಿಗೆಲ್ಲಾ, ಸೌಮ್ಯ (ಸೋಮಬಂಧವುಳ್ಳವು, ಶ. ಬ್ರಾ. ೧೨-೧-೧-೨) ಎಂದು ಹೆಸರಿದೆ. ಅಲ್ಲದೆ, ಇತರ ಪ್ರಮುಖ ದೇವತೆಗಳಂತೆ, ಸೋಮನಿಗೂ ರಾಜನೆಂಬ ಹೆಸರಿದೆ. ನದಿಗಳಿಗೆ (೯-೮೯-೨) ಇಡೀ ಪ್ರಪಂಚಕ್ಕೆ (೯-೯೭-೫೮) ರಾಜನು. ದೇವಮಾನವರಿಗೆ (೯-೯೭-೨೪), ದೇವತೆಗಳಿಗೆ ರಾಜ ಅಥವಾ ತಂದೆ (೯-೮೬-೧೦ ; ೯-೮೭-೨ ; ೯-೧೦೯-೪); ದೇವತೆಯೆಂಬು ಬ್ರಾಹ್ಮಣರಿಗೆ (ವಾ. ಸಂ. ೯-೪೦ ; ತೈ. ಸಂ. ೧-೮-೧೦ ; ಮೈ. ಸಂ. ೨-೬-೯) ರಾಜನು. ದೇವತೆಗಳಿಗೋಸ್ಕರ ಸುತ (ಹಿಂಡಲ್ಪಡುವ ದೇನೋ ಅನೇಕಸಲ ಹೇಳಲ್ಪಟ್ಟಿದೆ; ಒಂದು ಕಡೆ ಮಾತ್ರ ಅವನು ದೇವತೆಗಳಿಗೋಸ್ಕರ ಸುತ (ಹಿಂಡಲ್ಪಡುವ ನಾಗುವ ದೇವತೆ (೯-೩-೬ ಮತ್ತು ೭) ಎಂದು ಉಕ್ತವಾಗಿದೆ.

ಈಚಿನ ಸಾಹಿತ್ಯದಲ್ಲಿ 'ಸೋಮ' ಎಂಬುದು ಚಂದ್ರನ ಹೆಸರು. ದೇವತೆಗಳು ಇವನನ್ನು ಪಾನಮಾಡುದುದರಿಂದ, ಅವನು ಕ್ಷಯಿಸಿಹೋದಾಗ, ಸೂರ್ಯನು ಅವನನ್ನು ಪೂರ್ಣಮಾಡುತ್ತಾನೆ. ಛಾಂದೋಗ್ಯೋಪನಿಷತ್ತಿನಲ್ಲಿ (೫-೧೦-೧), ಚಂದ್ರನೇ ಸೋಮನೆಂದೂ, ಅವನು ದೇವತೆಗಳ ಆಹಾರವೆಂದೂ, ಅವರು ಅವನನ್ನು ಪಾನಮಾಡಿಬಿಡುವರೆಂದೂ ಇದೆ. ಬ್ರಾಹ್ಮಣಗಳಲ್ಲಿಯೇ ಚಂದ್ರ ಸೋಮರ ಐಕ್ಯವು ಸಾಧಾರಣವಾದ ವಿಷಯವಾಗಿದೆ. ಐತರೇಯ ಬ್ರಾಹ್ಮಣದಲ್ಲಿ (೭-೧೧) ಚಂದ್ರನು ದೇವತೆಗಳ ಸೋಮವೆಂದು ಉಕ್ತವಾಗಿದೆ; ರಾಜನಾದ ಸೋಮನು ದೇವತೆಗಳ ಆಹಾರ ಮತ್ತು ಅವನೇ ಚಂದ್ರ (ಶ. ಬ್ರಾ. ೧-೬-೪-೫); ಯಾಗೋಪಯುಕ್ತವಾದ ಆ ಗಿಡ ಅಥವಾ ಅದರ ರಸವು ಚಂದ್ರ ದೇವತೆಯನ್ನು ಸೂಚಿಸುತ್ತದೆ (ಕೌ. ಬ್ರಾ. ೭-೧೦ ; ೪-೪), ಪಿತೃಗಳು ಮತ್ತು ದೇವತೆಗಳು ಅಮೃತಸ್ವರೂಪಿಯಾದ ಅವನನ್ನು ಭಕ್ಷಿಸುವುದರಿಂದ ಚಂದ್ರನು



CC-0. Jangamwadi Math Collection. Digitized by eGangotri

ದಿನೇ ದಿನೇ ಕ್ಷಯಿಸಿಹೋಗುತ್ತಾನೆ ಎಂಬುದೇ ಬ್ರಾಹ್ಮಣಗಳ ಅಭಿಪ್ರಾಯ. ಯಜುರ್ವೇದದಲ್ಲಿ, ಚಂದ್ರನಿಗೆ ಪ್ರಜಾಪತಿಯ ಪುತ್ರಿಯರು ಪತ್ನಿಯರೆಂದೂ, ಅವರೇ ನಕ್ಷತ್ರಪುಂಜವೆಂದೂ ಉಕ್ತವಾಗಿದೆ. ಅಥರ್ವ ವೇದದಲ್ಲಿ (ಅ. ವೇ. ೭-೮೧-೩ ಮತ್ತು ೪ ; ೧೧-೬-೭ ಇತ್ಯಾದಿ) ಸಾಧಾರಣವಾಗಿ ಸೋಮ ಎಂದಿರುವೆಡೆಯಲ್ಲೆಲ್ಲಾ ಚಂದ್ರನೆಂದೇ ಅಭಿಪ್ರಾಯ. ಚಂದ್ರ ಸೋಮರ ಐಕ್ಯವನ್ನು ಹೇಳುವ ವಾಕ್ಯಗಳಲ್ಲಿ ಸೋಮ ಮತ್ತು ಸೂರ್ಯೆಯರ ವಿವಾಹವನ್ನು ವರ್ಣಿಸುವ ೧೦-೮೫ ನೇ ಸೂಕ್ತವೇ ಮುಖ್ಯವಾದುದು. ಇಲ್ಲಿ ಸೋಮವು ನಕ್ಷತ್ರಗಳ ಅಂಕದಲ್ಲಿದೆ, ಋತ್ವಿಜರಿಗೆ ಪರಿಚಿತವಾದ ಸೋಮವನ್ನು ಯಾರೂ ಭುಜಿಸುವುದಿಲ್ಲ ಮತ್ತು ಈ ಸೋಮಕ್ಕೂ, ಅವರು ಅಭಿಷವ ಮಾಡಬೇಕಾದುದಕ್ಕೂ ಭೇಧವಿದೆ ಎಂದು ಹೇಳಿದೆ. ಇವರ ಗುಟ್ಟು ಬ್ರಾಹ್ಮಣರಿಗೆ ಮಾತ್ರ ತಿಳಿದಿದೆ. ಸೋಮವು ಸ್ವರ್ಗೀಯ, ಕಾಂತಿಯುಕ್ತ, ತಮೋನಿವಾರಕ ಇತ್ಯಾದಿಯಾಗಿ ವರ್ಣನೆಗಳು ಇದ್ದೇ ಇವೆ; ಅಲ್ಲದೆ ಅದಕ್ಕೆ 'ಇಂದು' ಎಂದು ಹೆಸರು (೬-೪೪-೨೧). ಪಾತ್ರೆಗಳಲ್ಲಿರುವ ಸೋಮವನ್ನು ನೀರಿನಲ್ಲಿ ಪ್ರತಿಬಿಂಬಿತವಾದ ಚಂದ್ರನಿಗೆ ಹೋಲಿಸಿದೆ (೮-೭೧-೮ ; ೧-೧೦೫-೧ ನ್ನು ಹೋಲಿಸಿ). ದ್ರಪ್ಸ (ಹನಿ, ಬಿಂದು) ಎಂದು ವರ್ಣಿತವಾಗಿ, ಸಮುದ್ರಕ್ಕೆ ಹೋಗುವ (೧೦-೧೨೩-೮) ಸೋಮವೂ ಚಂದ್ರನೇ ಇರಬೇಕು.

ಕೆಲವರ ಅಭಿಪ್ರಾಯದಲ್ಲಿ ಸೋಮವೆಂದರೆ ಚಂದ್ರನೇ ಹೊರತು ಬೇರೆ ದೇವತೆಯೇ ಅಲ್ಲ. ಒಂಭತ್ತನೆಯ ಮಂಡಲವೆಲ್ಲ ಈ ಚಂದ್ರನನ್ನೇ ಸ್ತುತಿಸುತ್ತವೆ. ಋಗ್ವೇದದಲ್ಲಿ ಈ ಪದವು ಎಲ್ಲಿ ಬಂದರೂ ಸೋಮಲತೆ ಅಥವಾ ಚಂದ್ರ ಇವೆರಡನ್ನೇ ಸೂಚಿಸುವುದು. ಆ ಲತೆಯಿಂದ ಬರುವ ರಸವೇ ಅಮೃತವೆಂತಲೂ, ಆ ಅಮೃತಕ್ಕೆ ಚಂದ್ರನು ಆಶ್ರಯನೆಂತಲೂ ಸೂರ್ಯನಿಗಿಂತಲೂ, ಚಂದ್ರನೇ ಮುಖ್ಯದೇವತೆ, ಮತ್ತು ಇವನನಂತರ ಇಂದ್ರನು ಎಂತಲೂ ವಾದಿಸುತ್ತಾರೆ.

ಮತ್ತೆ ಕೆಲವರು ಈ ಮೇಲಿನ ಅಭಿಪ್ರಾಯಕ್ಕೆ ಋಗ್ವೇದದಲ್ಲಿ ಆಧಾರ ಸಾಲದು ಅಥವಾ ಇಲ್ಲವೆಂತಲೇ ಹೇಳುತ್ತಾರೆ. ಈಚಿನ ಗ್ರಂಥಗಳಲ್ಲಿ ಚಂದ್ರಸೋಮರ ಐಕ್ಯಕ್ಕೆ ಪುಷ್ಟಿಯು ಎಷ್ಟೇ ದೊರೆತರೂ ಋಗ್ವೇದದಲ್ಲಿ ಸೋಮದೇವತಾಕವಾದ ನೂರಾರು ವಾಕ್ಯಗಳಲ್ಲಿ ಅಪರೂಪವಾಗಿ ಒಂದೊಂದು ಕಡೆ ಇದು ಸೂಚಿತವಾದರೂ ಸ್ಪಷ್ಟವಾಗಿ ಎಲ್ಲಿಯೂ ಹೇಳಿಲ್ಲ. ಅದೂ ಅಲ್ಲದೆ ವ್ಯಾಖ್ಯಾನಕಾರರು ಯಾರೂ ಈ ಅಂಶಕ್ಕೆ ವೇದದಲ್ಲಿ ಆಧಾರವಿದೆಯೆಂದು ಹೇಳಿಲ್ಲ.

## ಭಾವನಾರೂಪ ದೇವತೆಗಳು.

ಅಮೂರ್ತಗಳೂ, ಮನೋಮಾತ್ರಗ್ರಾಹ್ಯಗಳೂ ಆದ ಭಾವನೆಗಳೂ ದೇವತೆಗಳೆಂಬ ವ್ಯವಹಾರವಿದೆ. ಇವುಗಳಲ್ಲಿ ಮುಖ್ಯವಾಗಿ ಎರಡುವಿಧ. ಇಚ್ಛಾದ್ವೇಷಾದಿ ಮನೋವ್ಯಾಪಾರಗಳನ್ನು ನಿರ್ದೇಶಿಸುವ ನಾಮಗಳು ಒಂದು ವಿಧ. ನಾನಾಕ್ರಿಯೆಗಳನ್ನೂ ನಿರ್ದೇಶಿಸುವ ನಾಮಗಳು ಮತ್ತೊಂದು ವಿಧ. ಮೊದಲನೆಯ ಜಾತಿಯವು ಅಪರೂಪ. ಎರಡನೆಯದೇ ಬಹುಸಂಖ್ಯೆಯಲ್ಲಿ ಕಂಡು ಬರುವುದು. ಇಂತಹ ಗುಣ ಅಥವಾ ಕ್ರಿಯಾವಾಚಕಗಳು ಬರುಬರುತ್ತಾ ತದ್ವಿಶಿಷ್ಟವಸ್ತುಗಳಿಂದ ಬೇರೆಯಾಗಿ ಸ್ವತಂತ್ರಸ್ಥಾನವನ್ನು ಪಡೆದುವು.

### 1. ಕಾರ್ಯಭಾರೀ ದೇವತೆಗಳು.

ಈ ದೇವತೆಗಳನ್ನು ಸೂಚಿಸುವ ಪದಗಳೆಲ್ಲಾ ಸಾಧಾರಣವಾಗಿ ಆಯಾ ಕ್ರಿಯಾಸೂಚಕವಾದ ಧಾತುಗಳಿಗೆ 'ತೃ' ಪ್ರತ್ಯಯವನ್ನು ಹಚ್ಚಿ ನಿಷ್ಪತ್ತಿ ಮಾಡಲ್ಪಟ್ಟಿವೆ, ಸವಿತೃ, ಧಾತೃ, ವಿಧಾತೃ ಮೊದಲಾದುವು. ಸವಿತೃವು ಅತಿ ಮುಖ್ಯ ದೇವತೆ. ಹಿಂದೆಯೇ ಪ್ರತ್ಯೇಕ ದೇವತೆಯಾಗಿ ಚರ್ಚಿಸಲ್ಪಟ್ಟಿದೆ. ಇತರ ದೇವತೆಗಳು ಅಪರೂಪವಾಗಿ ಪ್ರಸಕ್ತವಾಗುತ್ತವೆ.



CC-0. Jangamwadi Math Collection. Digitized by eGangotri

ಧಾತೃ—ಈ ಪದವು ಸಾಧಾರಣವಾಗಿ ಋತ್ವಿಜರಿಗೆ, ಯಜ್ಞಸ್ಥಾಪನೆ ಮಾಡುವವರು ಎನ್ನುವ ಅರ್ಥದಲ್ಲಿ ವಿಶೇಷಣವಾಗಿಯೇ ಉಪಯೋಗಿಸಿದೆ. ಸುಮಾರು ಹನ್ನೆರಡುಸಲ ಮಾತ್ರ ದೇವತೆಯ ಹೆಸರಾಗಿ ಪ್ರಯೋಗಿಸಲ್ಪಟ್ಟಿದೆ. ಒಂದು ಸಲ (೭-೭೫-೩) ಹೊರತಾಗಿ, ಉಳಿದುವೆಲ್ಲವೂ ಹತ್ತನೆಯ ಮಂಡಲದಲ್ಲಿಯೇ ಇದೆ. ಇವುಗಳಲ್ಲಿ, ಒಂದು ಸಲ (೧೦-೧೬೭-೩) ಇಂದ್ರನಿಗೂ, ಮತ್ತೊಂದು ಸಲ (೧೦-೮೨-೨) ವಿಶ್ವಕರ್ಮನಿಗೂ ಹೆಸರಾಗಿ ಉಪಯೋಗಿಸಿದೆ. ನಾನಾ ದೇವತೆಗಳಿಗೆ ಪ್ರಾಪಂಚಿಕ ಕರ್ಮಗಳನ್ನು ಹಂಚಿಕೊಡುವ ಕ್ರಿಯೆಯೇ, ಬರುಬರುತ್ತಾ ಬೇರೆ ದೇವತೆಯಾಗಿ ಕಲ್ಪಿತವಾಗಿದೆ. ಅಂತೆಯೇ, ಧಾತೃವು ಸೂರ್ಯ, ಚಂದ್ರ, ಸ್ವರ್ಗ, ಭೂಮಿ ಮತ್ತು ಆಕಾಶಗಳನ್ನು (೧೦-೧೯೦-೩) ಸೃಜಿಸಿದನು. ಅವನೇ ಪ್ರಪಂಚಕ್ಕೆಲ್ಲಾ ಅಧಿಪತಿ (೧೦–೧೨೮-೭). ಸೂರ್ಯ ಸೂಕ್ತವೊಂದರಲ್ಲಿ (೧೦-೧೫೮-೩) ಧಾತೃವು ಸ್ಪಷ್ಟವಾದ ದೃಷ್ಟಿಯನ್ನನುಗ್ರಹಿಸಬೇಕೆಂದು ಪ್ರಾರ್ಥಿತನಾಗಿದಾನೆ. ವಿಷ್ಣು, ತ್ವಷ್ಟೃ, ಪ್ರಜಾಪತಿ ಇವರುಗಳ ಜೊತೆಯಲ್ಲಿ ಸಂತಾನಕ್ಕಾಗಿಯೂ (೧೦-೧೮೪-೧) ಮತ್ತು ಸ್ವತಂತ್ರವಾಗಿ ದೀರ್ಘಾಯುಷ್ಯಿಗಾಗಿಯೂ ಪ್ರಾರ್ಥನೆಯಿದೆ (೧೦-೧೮ ೫). ಪ್ರತಿಫಲಾದ್ಯಪೇಕ್ಷೆಯಿಲ್ಲದೇ, ವಿಷ್ಣು ಸವಿತೃಗಳೊಡನೆಯೂ (೧೦-೧೮೧-೧ರಿಂದ೩) ಅಥವಾ ಮಾತರಿಶ್ವ ಮತ್ತು ದೇಷ್ಟ್ರಿಗಳೊಡನೆಯೂ (೧೦-೮೫-೪೭) ಸ್ತುತನಾಗಿದಾನೆ. ನಿರುಕ್ತದಲ್ಲಿ (೫-೫). ಧಾತೃವು ಮಧ್ಯಲೋಕದ ದೇವತೆಗಳ ಪಟ್ಟಿಯಲ್ಲಿ ಸೇರಿಸಲ್ಪಟ್ಟಿದಾನೆ ಮತ್ತು ಧಾತೃವೆಂದರೆ, ಸರ್ವನಿಯಾಮಕನೆಂದರ್ಥವೂ ಉಕ್ತವಾಗಿದೆ. ಪುರಾಣಾದಿಗಳಲ್ಲಿ ಧಾತೃವು ಪ್ರಪಂಚದ ಸೃಷ್ಟಿ ಸ್ಥಿತಿಗಳಿಗೆ ಕಾರಣನು ಮತ್ತು ಧಾತೃ, ಪ್ರಜಾಪತಿ, ಬ್ರಹ್ಮ ಎಲ್ಲರೂ ಒಂದೇ.

ವಿಧಾತೃ—ನಿರ್ವಹಿಸುವವನು ಎಂಬರ್ಥ ಕೊಡುವ ಈ ಪದವು ಇಂದ್ರ (೧೦-೧೬೭-೩) ಮತ್ತು ವಿಶ್ವಕರ್ಮ [೧೦-೮೨-೨] ಇವರುಗಳಿಗೆ ವಿಶೇಷಣವಾಗಿ ಎರಡು ಸಂದರ್ಭಗಳಲ್ಲಿ ಉಪಯೋಗಿಸಿರುವುದು ಕಂಡುಬರುತ್ತದೆ; ಆದರೆ ಮತ್ತೆರಡು ಸಂದರ್ಭಗಳಲ್ಲಿ ಸ್ವತಂತ್ರ ದೇವತೆಯಾಗಿ, ಇತರ ಕೆಲವು ದೇವತೆಗಳೊಡನೆ ಬಂದಿದೆ [೬-೫೦-೧೨ ; ೯-೮೧-೫].

ಧರ್ತಾ—'ಆಶ್ರಯವಾಗಿರುವುದು, ಆಸರೆ' ಈ ಅರ್ಥದ ಈ ಪದವು ಪ್ರಾಯಶಃ ಇಂದ್ರಾದಿಗಳಿಗೆ ವಿಶೇಷಣವಾಗಿಯೇ ಪ್ರಯೋಗ. ಒಂದೇ ಒಂದು ಸಲ [೭-೩೫-೩], ಧಾತೃ ಮೊದಲಾದುವುಗಳೊಡನೆ ಸ್ವತಂತ್ರ ದೇವತೆ ಎಂದು ಪರಿಗಣಿತವಾಗಿದೆ.

ತ್ರಾತಾ—ಇದೂ ಧಾತೃವಿನಂತೆ, ಅಗ್ನಿ ಆದಿತ್ಯರು, ಅಥವಾ ಇಂದ್ರರಿಗೆ, 'ರಕ್ಷಕ' ಎಂಬರ್ಥದಲ್ಲಿ, ವಿಶೇಷಣವಾಗಿಯೂ, ಸ್ವತಂತ್ರವಾಗಿ ಇತರ ದೇವತೆಗಳೊಡನೆ ಐದು ಸಂದರ್ಭಗಳಲ್ಲಿ 'ರಕ್ಷಣಾ ದೇವತೆ' ಎಂಬುದಾಗಿಯೂ [೧-೧೦೬-೭ ; ೪-೫೫-೫ ಮತ್ತು ೭ ; ೮-೧೮-೨೦ ; ೧೦-೧೨೮-೭], ಉಪಯೋಗಿಸಿದೆ. ಸವಿತೃ ಅಥವಾ ಭಗ ದೇವತೆಗಳೇ ಈ ಹೆಸರಿನಿಂದ ಉದ್ದಿಷ್ಟರೆಂದು ಕೆಲವರ ಮತ.

ದೇವ ನೇತೃ ಎಂಬ ದೇವತೆಯೊಂದು ಎರಡು ಮೂರು ಸಲ ಒಂದು ಸೂಕ್ತದ ಜೀವನದಲ್ಲಿ ಶ್ರೇಯಸ್ಸಿಗೆ ಮಾರ್ಗದರ್ಶಕವೆಂದು ಸ್ತುತವಾಗಿದೆ (೫.೫೦).

ತ್ವಷ್ಟೃ:—ಈ ಜಾತಿಯ ದೇವತೆಗಳಲ್ಲಿ ಸವಿತೃವನ್ನು ಬಿಟ್ಟರೆ, ತ್ವಷ್ಟೃವಿನ ಹೆಸರೇ ಅಲ್ಲಲ್ಲಿ ಕಂಡು ಬರುವುದು. ಸುಮಾರು ೬೦ ಸಲ ಈ ಹೆಸರು ಬರುತ್ತದೆ. ಎರಡನೆಯದರಿಂದ ಏಳು ಮಂಡಲಗಳಲ್ಲಿಯೇ ಹೆಚ್ಚಾಗಿ ಈ ಪದಪ್ರಯೋಗ. ಆದರೆ ಈ ದೇವತಾಕವಾದ ಸೂಕ್ತವೊಂದಾದರೂ ಇಲ್ಲ.



CC-0. Jangamwadi Math Collection. Digitized by eGangotri

ತ್ವಷ್ಟೃವಿನ ದೇಹಾದಿವರ್ಣನೆ ಬಹಳ ಕಡಿಮೆ. ಅವನ ಬಾಹು ಅಥವಾ ಹಸ್ತವೊಂದು ಮಾತ್ರ ಪದೇ ಪದೇ ಪ್ರಸಕ್ತವಾಗುತ್ತದೆ. ಕಬ್ಬಿಣದ ಕೊಡಲಿಯನ್ನು ಆಯುಧವಾಗಿ ಧರಿಸುವುದು ಅವನದೊಂದು ವಿಶೇಷ ಲಕ್ಷಣ (೮-೨೯-೩). ರಥಕ್ಕೆ ಎರಡು ಕುದುರೆಗಳನ್ನು ಹೂಡುತ್ತಾನೆ ಮತ್ತು ಥಳಥಳಿಸುತ್ತಿದಾನೆ (೬-೪೭-೧೯). ತ್ವಷ್ಟೃವಿಗೆ ಸುಂದರವಾದ ಬಾಹುಗಳು (ಸುಗಭಸ್ತಿಃ ೬-೪೯-೯) ಅಥವಾ ಸುಂದರವಾದ ಹಸ್ತಗಳು (ಸುಪಾಣೀಃ ೬-೪೯-೯). ಈ ಎರಡನೆಯದು ಸವಿತೃ ಮತ್ತು ತ್ವಷ್ಟೃ ಇವರಿಬ್ಬರಿಗೇ ವಿಶೇಷವಾಗಿ ಪ್ರಯೋಗ.

ಬಹಳ ಕುಶಲನಾದ ಕೆಲಸಗಾರ (೧-೮೫-೯ ; ೩-೫೪-೧೨). ತನ್ನ ದಕ್ಷತೆಯನ್ನು ವ್ಯಕ್ತಪಡಿಸುವ ನಾನಾ ಪದಾರ್ಥಗಳನ್ನು ಮಾಡಿದಾನೆ. ವಾಸ್ತವವಾಗಿ, ಅವನಷ್ಟು ದಕ್ಷರಾದ ಕೆಲಸಗಾರರೇ ಇಲ್ಲ. ಬಹಳ ಬುದ್ಧಿವಂತಿಕೆಯಿಂದ ವಿಧವಿಧವಾದ ಯಂತ್ರಗಳನ್ನು ತಯಾರಿಸಿದಾನೆ (೧೦-೫೩-೯). ಇಂದ್ರನ ವಜ್ರಾಯುಧಕ್ಕೆ ರೂಪುಗೊಟ್ಟವನು ತ್ವಷ್ಟೃವೆಂದು ಬಹಳ ಕಡೆ ಹೇಳಿದೆ (೫-೩೧-೪ ; ಇತ್ಯಾದಿ). ಬ್ರಹ್ಮಣಸ್ಪತಿಯು ಕಬ್ಬಿಣದ ಕೊಡಲಿಯನ್ನು ಹರಿತಮಾಡುತ್ತಾನೆ (೧೦-೫೩-೯). ದೇವತೆಗಳ (೧-೧೬೧-೫ ; ೩-೩೫-೫) ಅಥವಾ 'ಅಸುರ'ನ (೧-೧೧೦-೩) ಆಹಾರವು ತುಂಬಿದ್ದ ಒಂದು ಹೊಸಬಟ್ಟಲನ್ನು (೧-೨೦-೬) ತಯಾರಿಸಿದನು. ಅಥರ್ವವೇದದಲ್ಲಿ (ಅ. ವೇ. ೯-೪-೩ ಮತ್ತು ೬). ಐಶ್ವರ್ಯದಿಂದ ತುಂಬಿದ ಪಾತ್ರೆಯೊಂದನ್ನೂ, ಸೋಮರಸದ ಬಟ್ಟಲೊಂದನ್ನೂ ಹಿಡಿದುಕೊಂಡಿರುವ ವೃದ್ಧನೆಂದು ವರ್ಣಿಸಿದೆ. ವೇಗಶಾಲಿಯಾದ ಅಶ್ವವು ಅವನಿಂದ ಸೃಷ್ಟವಾಯಿತು (ವಾ. ಸಂ. ೨೯-೯) ಮತ್ತು ಅಶ್ವಗಳಿಗೆ ವೇಗವನ್ನು ಅನುಗ್ರಹಿಸುವವನೂ ಅವನೇ (ಅ. ವೇ. ೬-೯೨-೧).

ಎಲ್ಲಾ ವಸ್ತುಗಳಿಗೂ ಆಕಾರವನ್ನು ಕೊಟ್ಟವನೇ ತ್ವಷ್ಟೃವು (೧೦-೧೧೦-೯). ಗರ್ಭಕೋಶದಲ್ಲಿ ಗರ್ಭವನ್ನು ಬೆಳೆಸುವವನೂ, ಮನುಷ್ಯ ಮತ್ತು ಪ್ರಾಣಿವರ್ಗಕ್ಕೆಲ್ಲಾ ಆಕಾರವನ್ನು ಕೊಡುವವನೂ ಅವನೇ (೧-೧೮೮-೯ ; ೮-೯೧-೮ ; ೧೦-೧೮೪-೧). ಇತರ ವೇದಗಳಲ್ಲಿಯೂ ಇದೇ ಅಭಿಪ್ರಾಯ ಬರುವ ವಾಕ್ಯಗಳಿವೆ (ಅ. ವೇ. ೨-೨೬-೧ ; ಇತ್ಯಾದಿ). ಎಲ್ಲಾ ಸಂದರ್ಭಗಳಲ್ಲಿಯೂ ಈ ಗುಣವು ಅವನಿಗೇ ವಿಶೇಷವಾಗಿ ಉಕ್ತವಾಗಿದೆ (ಶ. ಬ್ರಾ. ೧೧-೪-೩); ತೈ. ಬ್ರಾ. ೧-೪-೭-೧). ಋಗ್ವೇದದಲ್ಲಿ, ಇತರ ಎಲ್ಲಾ ದೇವತೆಗಳಿಗಿಂತ ಹೆಚ್ಚು ಸಲ ಇವನಿಗೇ ವಿಶ್ವರೂಪ (ಸರ್ವ ವಿಧವಾದ ರೂಪಗಳುಳ್ಳವನು) ಎಂಬ ಹೆಸರು ಸಂದಿದೆ. ಪ್ರಾಣಿವರ್ಗಕ್ಕೆಲ್ಲಾ ರೂಪವನ್ನು ಕೊಡುವವನಾದುದರಿಂದ, ವಂಶಾಭಿವೃದ್ಧಿ ಮೊದಲಾದ ಕಾರ್ಯಗಳಿಗೆಲ್ಲಾ ಇವನೇ ನಿಯಾಮಕನೆಂದು (೩-೪-೯ ಇತ್ಯಾದಿ) ಹೇಳಿದೆ. ಗರ್ಭದೆಸೆಯಿಂದಲೂ ಪತಿಪತ್ನಿಯರನ್ನು ಗೊತ್ತುಮಾಡುವವನು ಇವನೇ (೧೦-೧೦-೫ ; ಅ. ವೇ. ೬-೭೮-೩). ಅನೇಕ ವಿಧ ಜೀವಂಗೆ ಇವನು ಸೃಷ್ಟಿ ಮತ್ತು ಬೆಳೆವಣಿಗೆಗಳಿಗೆ ಕಾರಣನು (೩-೫೫-೧೯). ಮೃಗಗಳೆಲ್ಲವೂ ತ್ವಷ್ಟೃವಿಗೇ ಸೇರಿವೆ (ಶ. ಬ್ರಾ. ೩-೭-೩-೧೧ ; (ಶ. ಬ್ರಾ ೩-೮-೩-೧೧). ಪ್ರಪಂಚವೆಲ್ಲವೂ ಅವನಿಂದಲೇ ಸೃಷ್ಟವಾದುದರಿಂದ ಅವನು ಜಗಜ್ಜನಕನು (ವಾ. ಸಂ. ೨೯-೯).

ಇವನ ಮಗಳೂ, ವಿವಸ್ವತನ ಪತ್ನಿಯೂ ಆದ ಶರಣ್ಯುವು. ಆದಿ ಸೃಷ್ಟಿಯ ಯಮಳರಾದ ಯಮ ಮತ್ತು ಯಮಿಯರಿಗೆ ತಾಯಿಯು ; ಆದುದರಿಂದ ಇವನೂ ಮನುಷ್ಯವರ್ಗಕ್ಕೇ ಮೂಲಪುರುಷನೆನ್ನಬಹುದು (೧೦-೧೭-೧ ಮತ್ತು ೨; ೫-೪೨-೧೩ನ್ನು ಹೋಲಿಸಿ). ಒಂದು ಸಲ ವಾಯುವು ಇವನ ಅಳಿಯನೆಂದು (೮-೨೬-೨೧) ಹೇಳಿದೆ. ತ್ವಷ್ಟೃವಿನಿಂದ ಬೃಹಸ್ಪತಿಯು ಜನಿಸಿದನು (೨-೨೩-೧೭). ಹತ್ತು ಬೆರಳುಗಳಿಂದ (ಅರಣಿಯಲ್ಲಿ



CC-0. Jangamwadi Math Collection. Digitized by eGangotri

ಜನಿತನಾದ ಅಗ್ನಿಯೂ ತ್ವಷ್ಟೃವಿನಿಂದ ಹುಟ್ಟಿದವನು (೧–೯೫–೨); ಭೂಮಿ, ಆಕಾಶ, ನೀರು, ಭೃಗುಗಳು ಮತ್ತು ಅಗ್ನಿ ಇವರುಗಳನ್ನು ತ್ವಷ್ಟೃವು ಉತ್ಪತ್ತಿಮಾಡಿದನು (೧೦-೨-೭; ೧೦-೪೬-೯). ಇಂದ್ರನೂ ತ್ವಷ್ಟೃ ಪುತ್ರನೆಂದು ಊಹಿಸಬೇಕಾಗುತ್ತದೆ (೩-೪೮-೨; ೪-೧೮-೩; ೪-೧೮-೧೨). ತ್ವಷ್ಟೃವು ಸೋಮರಸದ ರಕ್ಷಕ ನೆಂಬುದು ಸಿದ್ಧವಾದ ವಿಷಯ (೧-೧೧೭-೨೨). ಅವನ ಮನೆಯಲ್ಲಿಯೇ ಇಂದ್ರನು ಸೋಮರಸವನ್ನು ಕದ್ದು ಪಾನಮಾಡುವುದು ಮತ್ತು ಅದನ್ನು ಪಡೆಯುವುದಕ್ಕೋಸ್ಕರ, ತಂದೆಯನ್ನು ಕೊಲ್ಲುವುದು. ಈ ವಿಶ್ವರೂಪ ನಾದ ತ್ವಷ್ಟೃವಿಗೆ ವಿಶ್ವರೂಪನೆಂಬೊಬ್ಬ ಮಗನಿದ್ದಾನೆ; ಇವನ ಅಧೀನದಲ್ಲಿಯೇ ಗೋವುಗಳಿದ್ದುದು. ಸೋಮ ರಸವನ್ನು ಪಡೆಯಲು ತ್ವಷ್ಟೃವಿನೊಡನೆ ಜಗಳವಾಡಿದಂತೆ, ಗೋವುಗಳನ್ನು ಪಡೆಯಲು, ಅವನ ಮಗ ವಿಶ್ವ ರೂಪನೊಡನೆ ಇಂದ್ರನು ಯುದ್ಧಮಾಡುತ್ತಾನೆ. ಇಂದ್ರನ ಕೋಪಕ್ಕೆ, ತ್ವಷ್ಟೃವೂ ಹೆದರಿದಾನೆ (೧-೮೦-೧೪). ಇಂದ್ರನು ಸಾಧಿಸಿದ ಕಾರ್ಯಗಳನ್ನು ತ್ವಷ್ಟೃವೂ (೧೦–೪೯-೧೦) ಮಾಡಲಿಲ್ಲವಾದುದರಿಂದ, ಅವನು ಇಂದ್ರನಿ ಗಿಂತಲೂ ಕಡಿಮೆಯೆಂದೇ ಭಾವನೆ. ಪುತ್ರನನ್ನು ಕೊಂದವನೆಂದು, ತಾನು ಆಚರಿಸಿದ ಸೋಮಯಾಗದಲ್ಲಿ ಇಂದ್ರನು ಭಾಗ ವಹಿಸಲು ತ್ವಷ್ಟೃವು ಅವಕಾಶಕೊಡಲಿಲ್ಲ; ಆಗ ಇಂದ್ರನು ಬಲಾತ್ಕಾರವಾಗಿ ಸೋಮರಸವನ್ನು ಪಾನಮಾಡಿದನು (ತೈ. ಸಂ. ೨-೪-೧೨-೧) ಎಂದು ಹೇಳಿದೆ. ಇತರ ಬ್ರಾಹ್ಮಣಗಳಲ್ಲಿಯೂ ಇದೇ ರೀತಿಯ ಕಥೆ ಉಕ್ತವಾಗಿದೆ (ಶ. ಬ್ರಾ. ೧-೬-೩-೬; ಇತ್ಯಾದಿ).

ಗರ್ಭಾಶಯದಲ್ಲಿ, ಗರ್ಭೋತ್ಪತ್ತಿ ಕಾರ್ಯಗಳಲ್ಲಿ ತ್ವಷ್ಟೃವಿಗೆ, ಒಂದು ಮುಖ್ಯಪಾತ್ರವಿರುವುದರಿಂದ, ಅವನಿಗೂ ಸ್ವರ್ಗಲೋಕದ ಸ್ತ್ರೀಯರಿಗೂ (ಗ್ನಾಃ, ಜನಯಃ) ಮೈತ್ರಿಯಿದೆ; ಅವರೇ ಅವನ ಅನುಚಾರಿಣಿ ಯರು (೧-೨೨-೯; ಇತ್ಯಾದಿ). ಪೂಷಣ, ಸವಿತಾ, ಧಾತಾ, ಪ್ರಜಾಪತಿ ಮೊದಲಾದ ದೇವತೆಗಳೊಡನೆಯೇ ಅವನು ವಿಶೇಷವಾಗಿ ಸೇರಿರುವುದು. ಎರಡು ಸಂದರ್ಭಗಳಲ್ಲಿ 'ಸವಿತಾ' ಎನ್ನುವುದು ಅವನಿಗೆ ವಿಶೇಷಣ (೩–೫೫-೧೯; ೧೦–೧೦-೫). ಈ ಎರಡೂ ಸಂದರ್ಭಗಳಲ್ಲಿ, ಅವನ ಸೃಷ್ಟಿಕರ್ತೃತ್ವವು ಪ್ರಸಕ್ತವಾಗಿದೆ. ಕೌಶೀತಕೀ ಸೂತ್ರದಲ್ಲಿ, ತ್ವಷ್ಟೃ, ಸವಿತೃ ಮತ್ತು ಪ್ರಜಾಪತಿಗಳೂ ಒಂದೇ ದೇವತೆಯ ಹೆಸರುಗಳೆಂದೂ, ಮಾರ್ಕಂಡೇಯ ಪುರಾಣದಲ್ಲಿ, ತ್ವಷ್ಟಾ, ವಿಶ್ವಕರ್ಮಾ ಮತ್ತು ಪ್ರಜಾಪತಿಗಳು ಒಂದೇ ಎಂದೂ ಹೇಳಿದೆ. ಪುರಾಣಾದಿಗಳಲ್ಲಿ ತ್ವಷ್ಟಾ ಎಂಬುದು ದ್ವಾದಶಾದಿತ್ಯರಲ್ಲಿ ಒಬ್ಬನೆಂದು ಗಣನೆಯಿದೆ.

ಇವುಗಳಿಂದ ಯಾವುದೊಂದು ನಿರ್ದಿಷ್ಟವಾದ
ಅವನಿಗೆ, ಇನ್ನೂ ಕೆಲವು ಲಕ್ಷಣಗಳು ಉಕ್ತವಾಗಿವೆ. ಅಥವಾ ಮೊದಲು ಜನಿಸಿದವನು
ಗುಣವೂ ವ್ಯಕ್ತವಾಗುವುದಿಲ್ಲ. ಅವನೇ ಮೊದಲನೆಯವನು (೧-೧೩-೧೦) ಅಂಗಿರಸರ ಜೊತೆಗಾರನಾದುದರಿಂದ, ದೇವತೆಗಳ
(ಅಗ್ರಜ) ಮತ್ತು ಮುಂದೆ ಹೋಗುವವನು (೯-೫-೯). ಭೂಮ್ಯಾಕಾಶಗಳ ನಡುವೆ ಇರುವ (ಮೈ. ಸಂ.
ಲೋಕವೆಲ್ಲಾ ಅವನಿಗೆ ಪರಿಚಿತವಾಗಿವೆ (೧೦-೭೦-೯); ವರಗಳನ್ನನುಗ್ರಹಿಸುತ್ತಾನೆ ಮತ್ತು ಶ್ರೇಷ್ಠ
೪-೧೪-೯) ದೇವತೆಗಳ ವಾಸಸ್ಥಾನಕ್ಕೆ ಹೋಗುತ್ತಾನೆ (೨-೧-೯). ಆರಾಧಕರ ಸ್ತುತಿಗಳಿಂದ ತೃಪ್ತನಾಗಿ, ಅವರಿಗೆ
ವಾದ ಐಶ್ವರ್ಯವುಳ್ಳವನು (೧೦-೭೦-೯; ೧೦-೯೨-೧೧). ಅವನಿಂದ ದೀರ್ಘಾಯುಸ್ಸು ಲಭ್ಯವಾ
ಸಂಪದಾದಿಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥನೆ (೭-೩೪-೨೧).
ಗಿದೆ (೧೦–೧೮-೬; ಅ. ವೇ. ೬-೭೮-೩).

ಈ ಧಾತುವೂ 'ತಕ್ಷ್' ಎಂಬ ಧಾತುವೂ ಏಕಾ
ತ್ವಕ್ಷ್ ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಈ ಧಾತು ಉಪಯೋಗಿಸಲ್ಪ
ರ್ಥಕವಿರಬೇಕು. ಇಂದ್ರನ ವಜ್ರಾಯುಧವನ್ನು ತಯಾರಿಸಿದನು ಎನ್ನುವಾಗ
ಟ್ಟಿದೆ. ಇದರಿಂದ 'ತ್ವಷ್ಟಾ' ಎಂಬುದಕ್ಕೂ ನಿರ್ಮಾಪಕ ಎಂದರ್ಥ.





CC-0. Jangamwadi Math Collection. Digitized by eGangotri

ವೈದಿಕ ದೇವತೆಗಳಲ್ಲಿ ಅತ್ಯಂತ ಅಪ್ರಸಿದ್ಧನಾದ ದೇವತೆ. ಇವನ ಮೂಲವೇನು, ಸ್ವಭಾವವೇನು ಮುಂತಾದುವು ದುರ್ಜ್ಞೇಯವಾದ ವಿಷಯ. ಒಬ್ಬೊಬ್ಬ ಪಂಡಿತರು ಒಂದೊಂದು ವಿಧವಾದ ಅಭಿಪ್ರಾಯ ಕೊಟ್ಟಿದಾರೆ. ಸೂರ್ಯ, ಸಂವತ್ಸರಾಭಿಮಾನಿದೇವತೆ, ಚಂದ್ರ, ಇತ್ಯಾದಿ ನಾನಾ ಊಹೆಗಳಿಗೆ ಅವಕಾಶಕೊಟ್ಟಿದೆ.

## ವಿಶ್ವಕರ್ಮಾ-ಪ್ರಜಾಪತಿ.

ಮತ್ತು ಕೆಲವು ಭಾವನಾರೂಪದೇವತೆಗಳು ಅಂದರೆ ಪ್ರಯೋಜಕಕೆಗಳಿಗೆ ದೇವತೆಗಳೆಂಬ ವ್ಯವಹಾರವು ಕಂಡು ಬರುತ್ತದೆ. ಈ ಕ್ರಿಯೆಗಳೆಲ್ಲ. ಸರ್ವೋತ್ತಮನಾದ ಒಬ್ಬ ದೇವನಿಗೆ ಸೇರಿವೆ. ವಿಶ್ವಕರ್ಮಾ ಎಂಬುದು ಇಂತಹ ನಾಮಗಳಲ್ಲಿ ಒಂದು. ಹತ್ತನೆಯ ಮಂಡಲ ಒಂದರಲ್ಲಿ ಮಾತ್ರ, ಕೇವಲ ಐದುಸಲ ಈ ಹೆಸರು ಬಂದಿದೆ. ಈ ದೇವತೆಯನ್ನು ಸ್ತುತಿಸುವ ಎರಡು ಸೂಕ್ತಗಳು (೧೦-೮೧; ೧೦-೮೨) ಇವೆ. ಇದೇ ವಿಶ್ವಕರ್ಮಾ ಎಂಬುದು ಒಂದುಸಲ ಇಂದ್ರನಿಗೆ (೮-೮೭-೨) ವಿಶೇಷಣವಾಗಿಯೂ ಒಂದು ಸಲ (೧೦-೧೭೦-೪) ಸಮಸ್ತವನ್ನೂ ಸೃಜಿಸುವ ಸೂರ್ಯನಿಗೆ ವಿಶೇಷಣವಾಗಿಯೇ ಪ್ರಯೋಗಿಸಿದೆ. ಇತರ ವೇದಗಳಲ್ಲಿ ವಿಶೇಷಣವಾಗಿ ಪ್ರಯೋಗವು ಸಾಮಾನ್ಯವಾಗಿದೆ. ಪ್ರಜಾಪತಿಗೂ ವಿಶೇಷಣವಾಗಿದೆ (ವಾ. ಸಂ. ೧೨-೬೧) ಋಗ್ವೇದದ ಎರಡು ಸೂಕ್ತಗಳಲ್ಲಿ ವಿಶ್ವಕರ್ಮನು ಈ ರೀತಿ ವರ್ಣಿತನಾಗಿದಾನೆ. ಅವನು ಸರ್ವದರ್ಶಿ; ಅವನಿಗೆ ಎಲ್ಲಾ ಪಾರ್ಶ್ವಗಳಲ್ಲೂ ಕಣ್ಣುಗಳು, ಒಂದುಮುಖ, ಬಾಹುಗಳು, ಪಾದಗಳು ಇವೆ. ಈ ವರ್ಣನೆಯುಂತೆ, ವಿಶ್ವಕರ್ಮನು, ಚತುರ್ಮುಖನೂ, ಚತುರ್ಬಾಹುವೂ ಆದ ಬ್ರಹ್ಮನನ್ನು ಹೋಲುತ್ತಾನೆ. ಅವನಿಗೆ ರೆಕ್ಕೆಗಳೂ ಇವೆ. ಆತನು ಒಬ್ಬ ಋಷಿ, ಪುರೋಹಿತ ಮತ್ತು ಜನಕ ಅವನು ವಾಚಸ್ಪತಿ; ಮನೋವೇಗವುಳ್ಳವನು; ಉಪಕಾರಿ; ಸಮಸ್ತ ವಿಧವಾದ ಅಭಿವೃದ್ಧಿಗೂ ಮೂಲಭೂತನು. ಅವನಿಗೆ ಎಲ್ಲಾ ಪ್ರದೇಶಗಳೂ, ಎಲಾ ಪ್ರಾಣಿಗಳೂ ಪರಿಚಿತವಾಗಿವೆ; ಅವನೇ ದೇವತೆಗಳಿಗೆಲ್ಲಾ ಅವುಗಳ ಹೆಸರನ್ನು ತಿಳಿಸುವವನು. ಜ್ಞಾನಿ ಮತ್ತು ಸಮರ್ಥ; ಅತಿಮಾನುಷ ವ್ಯಕ್ತಿಗಳಲ್ಲಿ ಪರಮೋತ್ತಮನು. ಸಮಸ್ತಕ್ಕೂ ಅಧಾರಭೂತನು ಮತ್ತು ನಿಯಾಮಕನು; ಅವನೇ ಭೂಮಿಯನ್ನು ಸೃಜಿಸಿ, ಆಕಾಶವನ್ನು ಪ್ರಕಾಶಕ್ಕೆ ತಂದವನು. ಪ್ರಾಯಶಃ, ಈ ಪದವು ಮೊದಲು ಮುಖ್ಯವಾಗಿ ಸೂರ್ಯನ ವಿಶೇಷಣವಾಗಿ ಪ್ರಯೋಗಿಸಲ್ಪಡುತ್ತಿದ್ದು, ಮುಂದೆ ಬೇರೆ ಒಂದು ದೇವತೆಯೆಂದು ಪರಿಗಣಿತವಾಗಿರಬಹುದು ಶಿಲ್ಪಕಲೆಯೇ ಈ ದೇವತೆಯ ವೈಶಿಷ್ಟ್ಯ. ಬ್ರಾಹ್ಮಣಗಳಲ್ಲಿ ವಿಶ್ವಕರ್ಮಾ ಮತ್ತು ಪ್ರಜಾಪತಿಗಳು ಒಂದೇ ಎಂದು ಸ್ಪಷ್ಟವಾಗಿ ಹೇಳಿದೆ (ಶ. ಬ್ರಾ. ೮-೨-೧-೧೦; ೮-೨-೩-೧೩; ಐ. ಬ್ರಾ. ೪-೨೨ನ್ನು ಹೋಲಿಸಿ). ಪುರಾಣಾದಿಗಳಲ್ಲಿ ವಿಶ್ವಕರ್ಮನು ದೇವತೆಗಳ ಬಡಗಿ.

ಪ್ರಜಾಪತಿಃ—ಸವಿತೃವು ಆಕಾಶಕ್ಕೆ ಆಧಾರಭೂತನು ಮತ್ತು ಪ್ರಪಂಚಕ್ಕೆ ಪ್ರಜಾಪತಿಯು ಆಧಾರಭೂತನು [೪-೫೩-೨) ಎಂದು ಒಂದು ಕಡೆಯೂ, ತ್ವಷ್ಟೃ ಮತ್ತು ಇಂದ್ರರಿಗೆ ಸೋಮದೇವತೆಯನ್ನು ಹೋಲಿಸುವ ಸಂದರ್ಭವೊಂದರಲ್ಲಿ ಸೋಮದೇವತೆಗೆ ವಿಶೇಷಣವಾಗಿಯೂ ಈ ಪದವು ಪ್ರಯುಕ್ತವಾಗಿದೆ. ಪ್ರತ್ಯೇಕವಾಗಿ ಒಂದು ದೇವತೆಯ ನಾಮವಾಗಿ ಬಂದಿರುವುದು ನಾಲ್ಕೇ ಸಲ, ಅದೂ ಹತ್ತನೆಯ ಮಂಡಲದಲ್ಲಿಯೇ. ಪ್ರಜಾಪತಿಯು ನಮಗೆ ಪ್ರಜೆ (ಸಂತಾನ) ಯನ್ನು ಅನುಗ್ರಹಿಸಲಿ (೧೦-೮೫-೪೩), ವಿಷ್ಣು, ತ್ವಷ್ಟೃ ಮತ್ತು ಧಾತೃ ಇವರುಗಳಿಂದ ಸಹಿತನಾಗಿ ಸಂತಾನವನ್ನನುಗ್ರಹಿಸಲಿ (೧೦-೧೮೪-೧) ಮತ್ತು ಗೋಧನವನ್ನು ಅಭಿವೃದ್ಧಿಪಡಿಸಲಿ (೧೦-೧೬೯-೪) ಎಂದು ಮುಂತಾಗಿ ಪ್ರಾರ್ಥಿತನಾಗಿದಾನೆ. ಸಂತತಿ ಮತ್ತು ಪ್ರಾಣಿಗಳ ರಕ್ಷಕನೆಂದು ಅಥರ್ವವೇದದಲ್ಲಿಯೂ ಉಕ್ತವಾಗಿದೆ. ಈ ದೇವತಾದ್ಯೋತಕವಾಗಿರುವ ಒಂದೇ ಸೂಕ್ತದಲ್ಲಿ (೧೦-೧೨೧) ದೇವತೆಯ ಹೆಸರು ಬರುವುದು ಕಡೆಯ ಋಕ್ಕಿನಲ್ಲಿ ಮಾತ್ರ ಈ ಸೂಕ್ತದಲ್ಲಿ ಅವನೇ ದ್ಯಾವಾಭೂಮಿಗಳನ್ನು, ಉದಕವನ್ನೂ, ಸಮಸ್ತ ಪ್ರಾಣಿಗಳನ್ನೂ ಸೃಜಿಸಿದವನು, ಸತ್ತಾದ (ಈಗ ಇರುವ) ಸಮಸ್ತಕ್ಕೂ ಒಬ್ಬನೇ ಯಜಮಾನ (ಪತಿ)



CC-0. Jangamwadi Math Collection. Digitized by eGangotri

ನಾಗಿ ಜನಿಸಿರುವವನು, ಉಸಿರಾಡುವ ಮತ್ತು ಚಲಿಸುವ ಸಮಸ್ತಕ್ಕೂ ರಾಜನು, ದೇವತೆಗಳಿಗೆಲ್ಲಾ ಅಧಿದೇವನು ಇವನ ಅಪ್ಪಣೆಗಳನ್ನುಸಮಸ್ತಪ್ರಾಣಿಗಳೂ ಮತ್ತು ದೇವತೆಗಳೂ ಪಾಲಿಸುತ್ತಾರೆ. ಅವನೇ ಭೂಮ್ಯಾಕಾಶಗಳನ್ನು ಸ್ಥಾಪಿಸಿದವನು. ಅಂತರಿಕ್ಷದಲ್ಲಿ ಸಂಚರಿಸಬಲ್ಲವನು ಮತ್ತು ತನ್ನ ಬಾಹುಗಳಿಂದ ಇಡೀ ಪ್ರಪಂಚವನ್ನು ಮತ್ತು ಸಮಸ್ತ ಪ್ರಾಣಿಗಳನ್ನು ಆಲಂಗಿಸಿಕೊಳ್ಳುತ್ತಾನೆ. ಇದೇ ಮೊದಲಾಗಿ ವರ್ಣಿಸಿದೆ. ಇಲ್ಲಿ ಪ್ರಜಾಪತಿಯೆಂದರೆ ಪರಮಾತ್ಮನೇ ಇರಬೇಕು. ಋಗ್ವೇದದಲ್ಲಿ ಪರಮಾತ್ಮನೆಂಬರ್ಥದಲ್ಲಿ ಒಂದೇ ಒಂದು ಸಲ ಪ್ರಯೋಗಿಸಿದ್ದರೂ, ಅಥರ್ವವೇದ ಮತ್ತು ವಾಜಸನೇಯಿ ಸಂಹಿತೆಗಳಲ್ಲಿ ಸಾಧಾರಣವಾಗಿ ಮತ್ತು ಬ್ರಾಹ್ಮಣಗಳಲ್ಲಿ ನಿಯತವಾಗಿ, ಪ್ರಜಾಪತಿಯೆಂದರೆ ಪುರುಷೋತ್ತಮನೇ ಅಭಿಪ್ರೇತನು. ದೇವತೆಗಳಿಗೆಲ್ಲಾ ಜನಕನು (ಶ. ಬ್ರಾ. ೧೧-೧-೬-೧೪; ತೈ. ಬ್ರಾ. ೮-೧-೩-೪ ; ಇತ್ಯಾದಿ) ; ಆದಿಯಲ್ಲಿ ಒಬ್ಬನೇ ಇದ್ದನು (ಶ್ರ. ಬ್ರಾ. ೨-೨-೪-೧). ಅವನು ರಾಕ್ಷಸರನ್ನೂ ಸೃಜಿಸಿದನು (ತೈ. ಬ್ರಾ. ೨-೨-೨-೩). ಮೊದಲು ಯಜ್ಞಮಾಡಿದವನೂ ಅವನೇ (ಶ. ಬ್ರಾ. ೨-೪-೪-೧; ೬-೨-೩-೧). ಸೂತ್ರಗಳಲ್ಲಿ ಬ್ರಹ್ಮನಿಗೆ ಪ್ರಜಾಪತಿಯೆಂದು ವ್ಯವಹಾರ (ಆ. ಗೃ. ಸೂ. ೩-೪; ಇತ್ಯಾದಿ). ಈ ಪುರುಷೋತ್ತಮ ಅಥವಾ ಪರಮಾತ್ಮನ ಬದಲಾಗಿ, ಉಪನಿಷತ್ತುಗಳಲ್ಲಿ 'ಬ್ರಹ್ಮ' ಎಂಬುದು ರೂಢವಾಗಿದೆ.

ಮೈತ್ರಾಯಣೀ ಸಂಹಿತೆಯಲ್ಲಿ (ಮೈ. ಸಂ. ೪-೨-೧೨) ಒಂದು ಕಥೆಯಿದೆ. ಪ್ರಜಾಪತಿಯು ತನ್ನ ದುಹಿತೃವಾದ ಉಷೋದೇವಿಯಲ್ಲಿ ಅನುರಕ್ತನಾದನು, ಆಕೆಯು ಜಿಂಕೆಯ ರೂಪವನ್ನು ತಾಳಿದಳು; ಅವನೂ ಅದೇ ರೂಪವನ್ನು ತಾಳಿದನು. ಇದನ್ನು ನೋಡಿ ರುದ್ರನಿಗೆ ಕೋಪಬಂದು, ಬಾಣಬಿಡಲು ಉದ್ಯುಕ್ತನಾದನು, ಆಗ ಪ್ರಜಾಪತಿಯು ನಿನ್ನನ್ನು ಕಾಡು ಮೃಗಗಳಿಗೆಲ್ಲಾ ಅಧಿಪತಿಯಾಗಿ ಮಾಡುತ್ತೇನೆ, ಬಾಣ ಬಿಡಬೇಡ ಎಂದು ರುದ್ರನಿಗೆ ಹೇಳಿದನೆಂದು ಇದೆ (೧೦-೬೧-೭ನ್ನು ಹೋಲಿಸಿ). ಈ ಕಥೆಯು ಅನೇಕ ಸಲ ಬ್ರಾಹ್ಮಣಗಳಲ್ಲಿ ಪ್ರಸಕ್ತವಾಗಿದೆ (ಐ. ಬ್ರಾ. ೩-೩೩; ಶ. ಬ್ರಾ. ೧-೭-೪-೧; ಪಂ. ಬ್ರಾ. ೮-೨-೧೦). ತಂದೆಯು (ಪ್ರಾಯಶಃ ದ್ಯುದೇವತೆ) ತನ್ನ ಮಗಳಲ್ಲಿ (ಪ್ರಾಯಶಃ ಭೂಮಿ) ಆಗಮ್ಯಗಮನ ಮಾಡಿದನೆಂಬ ಪ್ರಸಕ್ತಿಯಿರುವ ನಾಲ್ಕು ಋಕ್ಕುಗಳು (೧-೭೧-೫; ೧೦-೬೧-೫, ೬, ೭) ಈ ಕಥೆಗೆ ಆಧಾರವಾಗಿರುವಂತೆ ಕಾಣುತ್ತದೆ.

೧೦-೧೨೧ನೆಯ ಸೂಕ್ತದ ಮೊದಲು ಒಂಭತ್ತು ಮಂತ್ರಗಳ ಪಲ್ಲವಿಯಲ್ಲಿಯೂ ಕಸ್ಮೈ (ಯಾರಿಗೆ) ಅಂದರೆ ಸರ್ವೋತ್ತಮನಾದ ದೇವತೆಯು ಯಾರೆಂಬುದು ಗೊತ್ತಿಲ್ಲವೆಂದೇ ಹೇಳಿದೆ. ಹತ್ತನೆಯ ಮಂತ್ರದಲ್ಲಿ ಪ್ರಜಾಪತಿಯೇ ಸರ್ವವ್ಯಾಪಕನೆಂದು ಉತ್ತರವಿದೆ. ಇದರ ಆಧಾರದ ಮೇಲೆಯೋ, ಮುಂದೆ 'ಕ' ಎಂಬ ಪದಕ್ಕೆ ಪ್ರಜಾಪತಿಯೆಂದರ್ಥವು ವ್ಯವಹಾರರೂಢಿಗೆ ಬಂದಿದೆ (ಐ. ಬ್ರಾ. ೩-೨೨-೭). ಅಷ್ಟೇ ಅಲ್ಲ, ಅದೇ ಆ ದೇವತೆಯ ಹೆಸರು (ಮೈ. ಸಂ. ೩-೧೨-೫). ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೧-೭-೬-೬) ಕಃ ಮತ್ತು ಪ್ರಜಾಪತಿಗಳು ಒಂದೇ ಎಂದು ಸ್ಪಷ್ಟವಾಗಿ ಹೇಳಿದೆ.

೧೦-೧೨೧ನೆಯ ಸೂಕ್ತದ ಮೊದಲನೆಯ ಮಂತ್ರದಲ್ಲಿ, ಪ್ರಜಾಪತಿಗೆ ಹಿರಣ್ಯಗರ್ಭ ಎಂದು ಪ್ರಯೋಗಿಸಿದೆ. ಋಗ್ವೇದದಲ್ಲಿ 'ಹಿರಣ್ಯಗರ್ಭ' ಎಂಬ ಪದದ ಪ್ರಯೋಗವು ಒಂದೇ ಸಲ. ಆದರೆ ಅಥರ್ವವೇದ ಮತ್ತು ಬ್ರಾಹ್ಮಣಗಳಲ್ಲಿ ಇದು ಸಾಧಾರಣ. ಅಥರ್ವವೇದದ (ಅ. ವೇ. ೪-೨-೮) ಒಂದು ಮಂತ್ರದಲ್ಲಿ, ಉದಕವು ಒಂದು ಗರ್ಭಾಣುವನ್ನು ಸೃಜಿಸಿತೆಂದೂ, ಜನಿಸುವಾಗ ಈ ಗರ್ಭಾಣುವು ಹಿರಣ್ಯವೃತವಾಗಿದ್ದಿತೆಂತಲೂ ಇದೆ. ತೈತ್ತಿರೀಯಸಂಹಿತೆಯಲ್ಲಿ ಇದೂ ಒಂದು ಪ್ರಜಾಪತಿಯ ನಾಮಧೇಯ (ತೈ. ಸಂ. ೫-೫-೧-೨). ವೇದಗಳಿಗಿಂತ ಈಚಿನ ಸಾಹಿತ್ಯದಲ್ಲಿ ಹಿರಣ್ಯಗರ್ಭ ಎಂಬುದು ಸೃಷ್ಟಿಕರ್ತೃವಾದ ಬ್ರಹ್ಮನ ನಾಮಗಳಲ್ಲಿ ಒಂದು.



CC-0. Jangamwadi Math Collection. Digitized by eGangotri

## ಮನ್ಯು, ಶ್ರದ್ಧಾ ಮೊದಲಾದುವು.

ಇನ್ನೂ ಅನೇಕ ಭಾವವಾಚಕಗಳು ದೇವತಾತ್ವೇನ ಪರಿಗಣಿತವಾಗಿವೆ. ಮನ್ಯು (ಕೋಪ) ವೂ ದೇವತೆಯೆಂದು ಭಾವಿತವಾಗಿದೆ. ಇದನ್ನು ಹೊಗಳುವ ಸೂಕ್ತಗಳು ಎರಡು (೧೦-೮೩ಮತ್ತು-೮೪). ಅವನ (ಮನ್ಯು ದೇವತೆ) ಶಕ್ತಿಯು ಅಪ್ರತಿಹತವಾದುದು ಮತ್ತು ಸ್ವಸಾಮರ್ಥ್ಯದಿಂದಲೇ ಇರಬಲ್ಲುದು. ಅಗ್ನಿಯಂತೆ ಜ್ವಲಿಸುತ್ತಾನೆ. ಇಂದ್ರ, ವರುಣ ಮತ್ತು ಜಾತವೇದಸರೆನ್ನಿಸಿಕೊಳ್ಳುವ ದೇವತೆಯೇ ಅವನು. ವೃತ್ರವಧೆ ಮಾಡುತ್ತಾನೆ; ಮರುತರಿಂದ ಅನುಸೃತನು; ಇಂದ್ರನಂತೆ ಜಯವನ್ನು, ಸಂಪತ್ತನ್ನು ಅನುಗ್ರಹಿಸಬಲ್ಲನು. 'ತಪಸ್ಸಿ' ನಿಂದ ಯುಕ್ತನಾಗಿ, ಆರಾಧಕರನ್ನು ರಕ್ಷಿಸಿ, ದ್ವೇಷಿಗಳನ್ನು ವಧಿಸುತ್ತಾನೆ.

ಒಂದೇ ಒಂದು ಸಣ್ಣ ಸೂಕ್ತವು 'ಶ್ರದ್ಧೆ' (ನಂಬಿಕೆ) ಯನ್ನು ಸ್ತುತಿಸುತ್ತದೆ. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಆಕೆ ಸ್ತುತಳಾಗುತ್ತಾಳೆ. ಶ್ರದ್ಧೆಯ ಮೂಲಕವೇ, ಅಗ್ನ್ಯುದ್ದೀಪನ ಮತ್ತು ಆಜ್ಯಹೋಮಗಳು ನಡೆಯುವುದು. ಶ್ರದ್ಧೆಯಿಂದಲೇ ಐಶ್ವರ್ಯ ಲಾಭವಾಗುವುದು. ಬ್ರಾಹ್ಮಣಗಳಲ್ಲಿ, ಶ್ರದ್ಧೆಯು ಸೂರ್ಯನ (ಶ್ರ. ಬ್ರಾ. ೧೨-೭-೩-೧೧) ಅಥವಾ ಪ್ರಜಾಪತಿಯ (ತೈ. ಬ್ರಾ. ೨.೩-೧೦-೧) ಪುತ್ರಿ. ಪುರಾಣೇತಿಹಾಸಗಳಲ್ಲಿ ಆವಳ ಸಂಬಂಧಿಗಳು ಇನ್ನೂ ಅನೇಕರು ಉಕ್ತರಾಗಿದಾರೆ.

ಅನುಮತಿ (ದೇವತೆಗಳ ಅನುಗ್ರಹ)ಯೆಂಬದೂ ದೇವತೆಯಾಗಿ ಎರಡು ಸಲ ಉಕ್ತವಾಗಿದೆ. ಅನುಕೂಲಳಾಗಿರಬೇಕೆಂದೂ, ಆರಾಧಕರು ಸೂರ್ಯನನ್ನು ನೋಡಲು ಅವಕಾಶ ಕಲ್ಪಿಸಬೇಕೆಂದೂ (೧೦-೫೯-೬) ಪ್ರಾರ್ಥಿತಳಾಗಿದಾಳೆ; ಆಕೆಯ ರಕ್ಷಣಾಕಾರ್ಯವೂ ಪ್ರಸಕ್ತವಾಗಿದೆ (೧೦-೧೬೭-೩). ಅಥರ್ವವೇದ ಮತ್ತು ವಾಜಸನೇಯಿ ಸಂಹಿತೆಗಳಲ್ಲಿ ಆಕೆಯು ಪ್ರೇಮದ ಅಧಿದೇವತೆಯಾಗಿ, ಸಂತಾನಾಭಿವೃದ್ಧಿಕಾರ್ಯಕ್ಕೆ ಪ್ರೇರಕಳಾಗುತ್ತಾಳೆ. ಮುಂದೆ ಕರ್ಮಗಳಲ್ಲಿ ಆಕೆಗೂ ಚಂದ್ರನಿಗೂ ಸಂಬಂಧ ಕಲ್ಪಿತವಾಗಿದೆ; ಪೂರ್ಣಮಿಯ ಹಿಂದಿನ ದಿನಕ್ಕೆ ಅಭಿಮಾನದೇವತೆಯೆಂದು ಭಾವನೆ. ಅರಮತಿ (ಭಕ್ತಿ ಅಥವಾ ಧರ್ಮ) ಎಂಬುದೂ ಒಂದು ದೇವತೆಯೆಂದು ಅಪರೂಪವಾಗಿ ಹೇಳಿದೆ. ಸೂನೃತಾ (ಔದಾರ್ಯ) ಎಂಬುದೂ ಒಂದು ದೇವತೆ. ಎರಡು ಮೂರು ಕಡೆ ಪ್ರಯೋಗವಿದೆ (೧-೪೦-೩ ; ೧೦-೧೪೧-೨). 'ಅನುನೀತಿ'ಯನ್ನು (೧೦-೫೯-೫, ೬) ದೀರ್ಘಾಯುಸ್ಸು ಮತ್ತು ಬಲ, ಪುಷ್ಟಿಗಳಿಗಾಗಿ ಪ್ರಾರ್ಥಿಸಿದಾರೆ. ನಿರ್ಋತಿ (ರೋಗ, ಕ್ಷೀಣತೆ)ಯೂ, ಸುಮಾರು ಹನ್ನೆರಡು ಸಲ ಮೃತ್ಯುವಿಗೆ ಅಭಿಮಾನಿದೇವತೆಯಾಗಿ ಪ್ರಸಕ್ತವಾಗಿದೆ.

ಇತರ ಕೆಲವು ಭಾವವಾಚಕಗಳು ಯಜುರಾದಿ ವೇದಗಳಲ್ಲಿ ದೇವತೆಗಳೆಂದು ಉಕ್ತವಾಗಿವೆ. ಕಾಮವು ಅಥರ್ವವೇದದಲ್ಲಿ ದೇವತ್ವವನ್ನು ಪಡೆದಿದೆ (ಅ. ವೇ. ೯-೨ ; ೧೯-೫೨). ಇಲ್ಲಿ ಕಾಮನು ಈಚಿನ ಸಾಹಿತ್ಯದಲ್ಲಿರುವಂತೆ, ಅನುರಾಗ ಅಥವಾ ಪ್ರಣಯಕ್ಕೆ ಮಾತ್ರ ದೇವತೆಯಲ್ಲ. ಅವನಿಂದ ಎಲ್ಲಾ ಇಷ್ಟಾರ್ಥವನ್ನೂ ಪಡೆಯಬಹುದು. ಹೃದಯಗಳನ್ನು ಭೇದಿಸುವ ಅವನ ಬಾಣಗಳ ಪ್ರಸ್ತಾಪವಿದೆ (ಅ. ವೇ. ೩-೨೫-೧). ಜನ್ಮ ತಾಳಿದವರಲ್ಲಿ ಅವನೇ ಮೊದಲನೆಯವನು (ಅ. ವೇ. ೯-೨-೧೯). ಋಗ್ವೇದದಲ್ಲಿ (೧೦-೧೨೯-೪), ಮನಸ್ಸಿನ ಪ್ರಥಮ ಅಂಕುರವೇ ಕಾಮ(ಆಸೆ)ವೆಂಬ ವಾಕ್ಯದ ಆಧಾರದ ಮೇಲೆಯೇ ಇವೆಲ್ಲವೂ ಹೊರಟಿರಬಹುದು. ಕಾಲವೂ ಒಂದು ವಿಶ್ವಶಕ್ತಿಯೆಂಬ ಅಭಿಪ್ರಾಯದಲ್ಲಿ ವ್ಯಕ್ತಿತ್ವಾರೋಪಣೆಗೆ ಒಳಗಾಗಿದೆ(ಅ.ವೇ. ೧೯-೫೩, ೫೪). ಪ್ರಜಾಪತಿಯಿಂದ ಸೃಷ್ಟವಾದ ಪ್ರಪಂಚವನ್ನು ಎತ್ತಿ ಹಿಡಿಯುವ ಶಕ್ತಿಯೊಂದು ಬೇಕೆಂಬುದರಿಂದಲೇ, ಸ್ಕಂಭ ಎಂಬ ದೇವತೆಯೊಂದು ಕಲ್ಪಿತವಾದಂತಿದೆ (ಅ. ವೇ. ೧೦-೮-೨). ಪ್ರಾಣವೂ (ಉಸಿರು) ಪ್ರಜಾಪತಿಯ ಒಂದು



CC-0. Jangamwadi Math Collection. Digitized by eGangotri

ನಾಮ (ಅ ವೇ. ೧೧-೪-೧೨ ; ಇತ್ಯಾದಿ). ಅಥರ್ವ ವೇದದಲ್ಲಿ ಇಂತಹ ದೇವತೆಗಳು ಇನ್ನೂ ಅನೇಕ ಸಿಗುತ್ತವೆ. 'ಶ್ರೀ' ಎಂಬುದು ಸೌಂದರ್ಯ ಅಥವಾ ಐಶ್ವರ್ಯದ ಅಧಿದೇವತೆಯಾಗಿ ಪ್ರಸಕ್ತವಾಗಿರುವುದು ಮೊದಲು ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೧೧-೪-೩-೧).

## ಅದಿತಿ

ಈ ಸ್ತ್ರೀದೇವತೆಯನ್ನು ಸ್ತುತಿಸುವ ಪೂರ್ತ ಸೂಕ್ತವಾವುದೂ ಇಲ್ಲ. ಆದರೆ ಅನೇಕ ಕಡೆ, ಸುಮಾರು ಎಂಬತ್ತು ಸಲ ಪ್ರಾಸಂಗಿಕವಾಗಿ ಸ್ತುತಳಾಗಿದಾಳೆ. ಒಂಟಿಯಾಗಿ ಸ್ತುತಳಾಗಿರುವುದು ಬಹಳ ಅಪರೂಪ (೮-೧೮-೧೪). ಸಾಧಾರಣವಾಗಿ ಅವಳ ಪುತ್ರರಾದ ಆದಿತ್ಯರೊಡನೆಯೇ ಆಕೆಯನ್ನು ಸ್ತುತಿಸುವುದು.

ಆಕೆಯ ದೇಹವರ್ಣನೆ ಸ್ಪಷ್ಟವಾಗಿಲ್ಲ. ಪ್ರಾಯಶಃ ದೇವಿಯೆಂದೇ ಸಂಬೋಧನೆ; ಅನರ್ವಾ (ಅಖಂಡವಾಗಿರುವವಳು, ಕುಂದಿಲ್ಲದವಳು) ಎಂದೂ ಅಲ್ಲಲ್ಲಿ ಹೇಳಿದೆ (೨-೪೦-೬; ೭-೪೦-೪). ಹೆಚ್ಚಾಗಿ ವಿಸ್ತೃತಳಾಗಿದಾಳೆ (೫-೪೬-೬). ಅಗಾಧಳು, ದೊಡ್ಡ ದೊಡ್ಡ ಗೋಶಾಲೆಗಳಿಗೆ (ಉರುವ್ರಜ) ಒಡೆಯಳು (೮-೬೭-೧೨). ಆಕೆಯು ಶುಭ್ರಳು ಮತ್ತು ಕಾಂತಿಯುಕ್ತಳು, ಪ್ರಾಣಿಗಳಿಗೆ ಆಧಾರಭೂತಳು (೧-೧೩೬-೩; ಸಾಧಾರಣವಾಗಿ ಮಿತ್ರಾವರುಣರಿಗೆ ಮಾತ್ರ ಅನ್ವಯಿಸುತ್ತದೆ.) ಎಲ್ಲಾ ಮನುಷ್ಯರಿಗೂ ಸೇರಿದವಳು (೭-೧೦-೪, ಭೂಮ್ಯಾಕಾಶಗಳಿಗೂ ಉಕ್ತವಾಗಿದೆ). ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಆಹೂತಳಾಗುತ್ತಾಳೆ (೫-೬೯-೩).

ಅದಿತಿಯು ಮಿತ್ರ ಮತ್ತು ವರುಣರ (೮-೨೫-೩; ೧೦-೩೬-೩; ೧೦-೧೩೨-೬) ಮತ್ತು ಅರ್ಯಮನ (೮-೪೭-೯) ಮಾತೆ. ಆದುದರಿಂದಲೇ ಅವಳನ್ನು ರಾಜರುಗಳ (೨-೨೭-೭), ಶ್ರೇಷ್ಠರಾದ ಪುತ್ರರ (೩-೪-೧೧), ಬಲಾಢ್ಯರಾದ ಪುತ್ರರ (೮-೫೬-೧೧), ಶೂರರಾದ ಪುತ್ರರ (ಅ. ವೇ. ೩-೮-೩; ೧೧-೧-೧೧) ಅಥವಾ ಎಂಟು ಜನ ಮಕ್ಕಳ (೧೦-೭೨-೮; ಅ. ವೇ. ೮-೯-೨೧) ಜನನಿಯೆಂದು ಕರೆದಿರುವುದು. ಒಂದು ಕಡೆ, ಆಕೆಯು ರುದ್ರರ ತಾಯಿ, ವಸುಗಳ ದುಹಿತೃ ಮತ್ತು ಆದಿತ್ಯರ ಭಗಿನಿ (೮-೯೦-೧೫) ಎಂದು ಹೇಳಿದೆ. ಅಥರ್ವವೇದದಲ್ಲಿ (ಅ. ವೇ. ೬-೪-೧), ಆಕೆಯ ಸೋದರರು ಮತ್ತು ಮಕ್ಕಳು ಎಲ್ಲರೂ ಪ್ರಸಕ್ತರಾಗಿದಾರೆ. ಮತ್ತೊಂದು ಕಡೆ (ಅ. ವೇ. ೭-೬-೨, ವಾ. ಸಂ. ೨೧-೫), ಭರ್ತೃರ ಮಾತೆ, ಋತದ ಪ್ರಿಯೆ, ಸಮರ್ಥಳು, ನಾಶರಹಿತಳು, ಅತ್ಯಂತ ವಿಸ್ತೃತಳು, ರಕ್ಷಕಳು ಮತ್ತು ಕುಶಲಳಾದ ನೇತ್ರಿ ಎಂದು ಆಕೆಯನ್ನು ಸ್ತುತಿಸಿದೆ. ಇಂತಹ ವಾಕ್ಯಗಳೂ ಮತ್ತು ಅವಳ ಪುತ್ರರಾದ ಆದಿತ್ಯರೊಡನೆಯೇ ಆಕೆಯಸ್ತುತಿ, ಇವುಗಳೂ, ತಾಯ್ತನವು ಆಕೆಯ ವಿಶೇಷ ಲಕ್ಷಣವೆಂದು ಸೂಚಿಸುತ್ತದೆ. ಪಸ್ತ್ಯಾ (ಗೃಹಿಣಿ) ಎಂಬುದೂ ಆಕೆಯ ಒಂದು ವಿಶೇಷಣ (೪-೫೫-೩; ೮-೨೭-೫). ಇದೂ ಆಕೆಯ ತಾಯ್ತನವನ್ನೇ ಸೂಚಿಸಬಹುದು. ಇತಿಹಾಸ ಮತ್ತು ಪುರಾಣಗಳಲ್ಲಿ ಅದಿತಿಯು ದಕ್ಷ ಎಂಬುವನ ಪುತ್ರಿ, ಸಾಧಾರಣವಾಗಿ ಎಲ್ಲಾ ದೇವತೆಗಳಿಗೂ ಜನನಿ, ಮುಖ್ಯವಾಗಿ ವಿವಸ್ವತ, ಸೂರ್ಯ ಮತ್ತು ವಾಮನರೂಪೀವಿಷ್ಣು ಇವರುಗಳ ತಾಯಿ. ವಿಷ್ಣುವಿನ ಪತ್ನಿಯೆಂದು ವಾಜಸನೇಯಿ ಸಂಹಿತೆಯಲ್ಲಿ (ವಾ. ಸಂ. ೨೯-೬೦; ತೈ. ಸಂ. ೭-೫-೧೪) ಹೇಳಿದೆ.

ಕಷ್ಟದಿಂದ (ಅಂಹಸಃ) ಪಾರುಮಾಡುವವಳೆಂದೂ ಮತ್ತು ಕ್ಷೇಮ ಮತ್ತು ಸುರಕ್ಷಿತೆಗಳನ್ನು ಅನುಗ್ರಹಿಸುವವಳೆಂದೂ ಅನೇಕ ಕಡೆ (೧೦-೧೦೦; ೧-೯೪-೧೫) ಹೇಳಿದೆ; ಆದರೆ ಹೆಚ್ಚು ಸಲ, ಪಾಪದಿಂದ ಬಿಡುಗಡೆ ಮಾಡಬೇಕೆಂದು ಆಕೆಯನ್ನು ಪ್ರಾರ್ಥಿಸಿದೆ. ಅದಿತಿಯ ವಿಷಯದಲ್ಲಿ ತಪ್ಪು ಮಾಡದಂತೆ, ಕಾಪಾಡ



CC-0. Jangamwadi Math Collection. Digitized by eGangotri

ಬೇಕೆಂದು’ ವರುಣ (೧-೨೪-೧೫), ಅಗ್ನಿ (೪-೧೨-೪) ಮತ್ತು ಸವಿತೃ (೫-೮೨-೬)ಗಳು ಪ್ರಾರ್ಥಿತರಾಗಿದಾರೆ. ಪಾಪಗಳನ್ನು ಕ್ಷಮಿಸಬೇಕೆಂದು ಅದಿತಿ, ಮಿತ್ರ ಮತ್ತು ವರುಣರನ್ನೂ (೨-೨೭-೧೪), ಪಾಪದ ಬಂಧನಗಳನ್ನು ಬಿಡಿಸಬೇಕೆಂದು ಅದಿತಿ ಮತ್ತು ಅರ್ಯಮರನ್ನೂ (೮-೯೩-೭) ಬೇಡುತ್ತಾರೆ. ಆರಾಧಕರು ತಮ್ಮನ್ನು ಪಾಪರಹಿತರನ್ನಾಗಿ ಮಾಡೆಂದು ಅದಿತಿಯನ್ನು ಅಂಗಲಾಚಿ ಬೇಡುತ್ತಾರೆ (೧-೧೬೨-೨೨); ಆಕೆಯ ನಿಯಮಗಳನ್ನು ಅನುಸರಿಸುವವರಾಗಿ, ವರುಣನ ವಿಷಯದಲ್ಲಿ ತಪ್ಪುಗಳನ್ನು ಮಾಡದೇ ಇರುವಂತೆ ಅನುಗ್ರಹಿಸಬೇಕೆಂದೂ (೮-೮೭-೭) ಮತ್ತು ಪಾಪಿಷ್ಠರನ್ನು ದೂರೀಕರಿಸಬೇಕೆಂದೂ ಪ್ರಾರ್ಥನೆ (೧೦-೮೭-೧೮). ಅಗ್ನಿ (೩-೫೪-೧೦), ಸವಿತೃ (೪-೫೪-೩), ಸೂರ್ಯ, ಉಷಸ್ಸು, ಭೂಮಿ, ಆಕಾಶ (೧೦-೩೫-೨, ೩)ಗಳು ತಪ್ಪುಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿತರಾದರೂ, ಪಾಪವಿಮೋಚನಾ ಕಾರ್ಯವು ಅದಿತಿ ಮತ್ತು ಅವಳ ಮಗ ವರುಣರಿಗೇ ಸೇರಿದುದು ; ವರುಣನ ಪಾಶವು ಪ್ರಸಿದ್ಧವಾದುದು ; ಪ್ರೀತನಾದ ವರುಣನು ಪಾಶವನ್ನು ಹಗ್ಗದಂತೆ ಬಿಚ್ಚಿ, ತೆಗೆದುಹಾಕುತ್ತಾನೆ (೫-೨-೭).

‘ಅದಿತಿ’ ಪದದ ನಿಷ್ಪತ್ತಿಯೂ ಇದೇ ಅರ್ಥವನ್ನೇ ಪೋಷಿಸಬಹುದು. ದಾ ಎಂಬ ಧಾತುವಿಗೆ ಬಂಧಿಸು, ಕಟ್ಟಿಹಾಕು ಎಂದರ್ಥ. ಅದರಿಂದ ನಿಷ್ಪನ್ನವಾದ ‘ದಿತಿ’ಗೆ ಬಂಧನ ಎಂದಾಗುತ್ತದೆ. ಅದುದರಿಂದ ಅದಿತಿ ಎಂದರೆ ಬಿಡಿಸುವುದು, ಬಂಧನರಾಹಿತ್ಯ ಎಂದಾಗುವುದು. ಇದೇ ಅರ್ಥದಲ್ಲೇ, ಶುನಃಶೇಪನು ಯೂಪಕ್ಕೆ ನಿದಿತ (ಕಟ್ಟಲ್ಪಟ್ಟ)ನಾದನು ಎಂದು ಹೇಳಿದೆ (೫-೨-೭). ಬದ್ಧನಾಗಿರುವ ಸ್ತೇನನನ್ನು ಬಿಡಿಸುವಂತೆ, ಆರಾಧಕರನ್ನು ವಿಮೋಚನ ಮಾಡಬೇಕೆಂದು ಅದಿತಿಯನ್ನು ಪ್ರಾರ್ಥಿಸುವುದು ಸ್ವಾಭಾವಿಕವೇ ಆಗಿದೆ (೮-೬೭-೧೪). ಸ್ವಾತಂತ್ರ್ಯ ಎಂಬ ಅರ್ಥದಲ್ಲಿಯೂ ಅಲ್ಲಲ್ಲಿ ಪ್ರಯೋಗಿಸಿದೆ. ನನ್ನ ತಂದೆತಾಯಿಗಳನ್ನು ನೋಡಲು ಬೇಕಾದಾಗ ಅದಿತಿ (ಸ್ವಾತಂತ್ರ್ಯ)ಯನ್ನು ನಮಗೆ ಕೊಡುವವರಾರು ಎಂದು ಒಂದು ಕಡೆ ಇದೆ (೧-೨೪-೧). ಹೋಮವನ್ನು ಪಾಪರಹಿತವನ್ನಾಗಿಯೂ (ಅನಾಗಸ್ತ್ವೇ), ಸ್ವಾತಂತ್ರ್ಯಯುಕ್ತವನ್ನಾಗಿಯೂ (ಅದಿತ್ವೇ) ಮಾಡಬೇಕೆಂದು ಆದಿತ್ಯರು ಪ್ರಾರ್ಥಿತರಾಗಿದಾರೆ (೭-೫೧-೧). ಭೂವ್ಯಾಕಾಶಗಳಿಂದ ದೃಢವೂ, ಅಪಾರವೂ ಆದ ಅದಿತಿಯನ್ನು ಅಪೇಕ್ಷಿಸುವಾಗಲೂ, ಅದಿತಿಯೆಂದರೆ ಇದೇ ಅರ್ಥವಿರಬೇಕು (೧-೧೮೫-೩). ಅಪಾರ ಎಂಬರ್ಥದ ವಿಶೇಷಣವಾಗಿಯೂ ಅದಿತಿ ಶಬ್ದವು ಅನೇಕ ಸಲ ಪ್ರಯೋಗಿಸಲ್ಪಟ್ಟಿದೆ. ಈ ಅರ್ಥದಲ್ಲಿ ದ್ಯುದೇವತೆಗೆ ವಿಶೇಷಣವಾಗಿ ಎರಡು ಸಲವೂ (೫-೫೯-೮ ; ೧೦-೬೩-೩) ಅಗ್ನಿಗೆ ವಿಶೇಷಣವಾಗಿ ಅನೇಕ ಸಲವೂ (೧-೯೪-೧೫ ; ೪-೧-೨೦ ; ೭-೯-೩ ; ೮-೧೯-೧೪) ಉಪಯೋಗಿಸಿದೆ.

ಈ ಹೆಸರು ಈರೀತಿಯಲ್ಲಿ ನಿರ್ದಿಷ್ಟವಾದ ಯಾವುದೊಂದು ಅರ್ಥವನ್ನೂ ಕೊಡದೇ ಇರುವುದರಿಂದ, ನಾನಾ ಊಹೆಗಳಿಗೆ ಎಡೆಕೊಟ್ಟಿದೆ. ದೇವತಾ ವಂಶಾವಳಿ ಮತ್ತು ವಿಶ್ವಸೃಷ್ಟಿಗಳು ಪ್ರಸಕ್ತವಾದಾಗ ಅದಿತಿಯು ನಾನಾ ದೇವತೆಗಳಿಗೆ ಹೆಸರಾಗಿದೆ. ದೇವತೆಗಳು ಅದಿತಿ, ನೀರು ಮತ್ತು ಭೂಮಿ (೧೦-೬೩-೨)ಗಳಿಂದ ಜನಿಸಿದರು. ಅನಂತವಾದ ಆಕಾಶವು (ದ್ಯೌರದಿತಿಃ) ಆ ದೇವತೆಗಳಿಗೆಲ್ಲಾ ಪೀಯೂಷವನ್ನು ಒದಗಿಸಿತು (೧೦-೬೩-೩). ಬೇರೆಕಡೆ (೧-೭೨-೯ ; ಅ. ವೇ. ೧೩-೧-೩೮), ಅದಿತಿಯೂ ಭೂಮಿಯೂ ಒಂದೇ ಎಂದು ಹೇಳಿದೆ; ಇವೆರಡರ ಐಕ್ಯವು ತೈತ್ತಿರೀಯ ಸಂಹಿತೆ ಮತ್ತು ಶತಪಥಬ್ರಾಹ್ಮಣಗಳಲ್ಲಿ ವಿಶೇಷವಾಗಿ ಉಕ್ತವಾಗಿದೆ. ನಿರುಕ್ತದಲ್ಲಿ, ಅದಿತಿಯು ಭೂಮಿಯನ್ನೂ ಮತ್ತು ಅದಿತಿ ಶಬ್ದವು ದ್ವಿವಚನದಲ್ಲಿ ದ್ಯಾವಾಭೂಮಿಗಳನ್ನೂ ಸೂಚಿಸುತ್ತದೆ ಎಂದು ಹೇಳಿದೆ. ಆದರೆ ಋಗ್ವೇದದಲ್ಲಿ ಇವು ಬೇರೆ ಬೇರೆ ಎಂದು ಭಾವನೆ; ಒಂದೇ ಮಂತ್ರದಲ್ಲಿ ಭ್ಯೂವ್ಯಾಕಾಶಗಳು ಮತ್ತು ಅದಿತಿಯೂ (೧೦-೬೩-೧೦, ಇತ್ಯಾದಿ) ಉಕ್ತರಾಗಿದಾರೆ. ಮತ್ತೊಂದು ಕಡೆ, ಅದಿತಿಯೆಂದರೆ ಪ್ರಕೃತಿ ಎಂದಾಗುತ್ತದೆ (೧-೮೯-೧೦)- ಅದಿತಿಯು ಆಕಾಶ, ವಾಯು, ತಾಯಿ ತಂದೆ,



CC-0. Jangamwadi Math Collection. Digitized by eGangotri

ಮತ್ತು ಮಗ; ಅದಿತಿಯೇ ಎಲ್ಲಾ ದೇವತೆಗಳು ಮತ್ತು ಐದು ಪಂಗಡಗಳು; ಜನಿಸಿರುವುದೆಲ್ಲಾ ಅಥವಾ ಮುಂದೆ ಜನಿಸುವುದೆಲ್ಲಾ ಅದಿತಿಯೇ (ಕಠೋಪನಿಷತ್ತು ೪-೭).

ಋಗ್ವೇದದ ಇತಿಹಾಸಗಳಲ್ಲಿ ಹೇಳಿರುವಂತೆ ಅದಿತಿಯು ದಕ್ಷನಾಮಕನಾದ ಆದಿತ್ಯನ ತಾಯಿಯು. (೨-೨೭-೧) ಆದರೆ, ವಿಶ್ವಸೃಷ್ಟಿಯನ್ನು ಪ್ರಸ್ತಾಪಿಸಿರುವ ಸೂಕ್ತವೊಂದರಲ್ಲಿ (೧೦-೭೨-೪, ೫) ಅದಿತಿಯು ದಕ್ಷನ ತಾಯಿಯು ಹೌದು. ಮತ್ತು ಮಗಳೂ ಹೌದು ; ಈ ರೀತಿಯ ಸಂಬಂಧವು ಋಗ್ವೇದದಲ್ಲಿ ಹೊಸದಲ್ಲ (೧೦-೯೦-೫ ನ್ನು ಹೋಲಿಸಿ). ಮತ್ತೆ ಎರಡು ಸ್ಥಳಗಳಲ್ಲಿ (೧೦-೫-೭ ; ೧೦-೬೪-೫) ಈ ದಕ್ಷ ಮತ್ತು ಅದಿತಿಯರ ಪರಸ್ಪರ ಸಂಬಂಧವು ತೀರ ವಿಲಕ್ಷಣವಾಗಿದೆ; ಅದಿತಿಯನ್ನು ದಕ್ಷನ ತಾಯಿಯೆಂದು ಹೇಳುವುದೇ ಸಾಧ್ಯವಾಗಿ ಕಂಡು ಬರುವುದಿಲ್ಲ; ಆಕೆಯು ಅವನಿಗೆ ಅಧೀನಳಾಗಿರುವಂತೆ ತೋರುತ್ತದೆ. ಕೆಲವು ಪ್ರಮುಖ ದೇವತೆಗಳಿಗೆ ತಾಯಿಯಾದರೂ, ಕೇವಲ ಸಾಧಾರಣವಾದ ಪಾತ್ರ ಆಕೆಯದು. ತನ್ನ ಪುತ್ರರು ವರುಣ, ಮಿತ್ರ ಮತ್ತು ವರುಣರ ಜೊತೆಯಲ್ಲಿದ್ದುಕೊಂಡು ಸವಿತೃವನ್ನು ಸ್ತುತಿಸುತ್ತಾಳೆ (೭-೩೧-೫) ಮತ್ತು ಇಂದ್ರನಿಗೋಸ್ಕರ ಒಂದು ಸ್ತುತಿಯನ್ನು ರಚಿಸಿದಳೆಂದು (೮-೧೨-೧೪ ; ೫-೩೧-೫ ನ್ನು ಹೋಲಿಸಿ) ಇದೆ.

ತೇಜೋವಿಶಿಷ್ಟರಾದ ಆದಿತ್ಯರ ತಾಯಿಯಾದುದರಿಂದ ತೇಜಸ್ಸಿನ ಸಂಬಂಧವೂ ಸ್ವಲ್ಪ ಇದೆ. ಬೆಳಕನ್ನು ಕೊಡೆಂದು (೪-೨೫-೩ ; ೧೦-೩೬- ೩ನ್ನು ಹೋಲಿಸಿ) ಪ್ರಾರ್ಥಿತಳಾಗಿದಾಳೆ; ನಾಶರಹಿತವಾದ ಅವಳ ಪ್ರಕಾಶವು ಹೊಗಳಲ್ಪಟ್ಟಿದೆ- (೭-೮೨-೧೦) ಮತ್ತು ಉಷಸ್ಸು ಆಕೆಯ ಮುಖವೆಂದು (೧-೧೧೩-೧೯) ಹೇಳಿದೆ. ಅಪರೂಪವಾಗಿ ಇತರ ದೇವತೆಗಳಂತೆ ಸಾಧಾರಣವಾದ ಬೇಡಿಕೆಗಳೂ ಈಕೆಯನ್ನು ಉದ್ದೇಶಿಸಿ ಹೇಳಲ್ಪಡುತ್ತದೆ ಆರಾಧಕರು ಅವರ ಸಂತತಿ ಮತ್ತು ಗೋವು ಇವುಗಳನ್ನು ರಕ್ಷಿಸಬೇಕು ಅಥವಾ ಆಶೀರ್ವದಿಸಬೇಕೆಂಬ ಪ್ರಾರ್ಥನೆ (೮-೧೮-೬, ೭; ೧-೪೩-೨) ಇದೆ. ಐಶ್ವರ್ಯವೂ ಅವಳಿಂದ (೭-೪೦-೨) ಪ್ರಾಪ್ಯವಾದುದು; ಶುದ್ಧವೂ- ಅಖಂಡವೂ, ದಿವ್ಯವೂ, ಅವಿನಾಶಿಯೂ ಆದ ಆಕೆಯ ಅನುಗ್ರಹವನ್ನು ಬೇಡಿದೆ. (೧-೧೮೫-೩) ಮತ್ತು ಮರುತರ ಅನುಗ್ರಹವನ್ನು ಅದಿತಿಯ ಉಪಕಾರಕೃತಿಗಳಿಗೆ ಹೋಲಿಸಿದೆ. (೧-೧೬೬-೧೨)

ಋಗ್ವೇದದ ಕೆಲವು ವಾಕ್ಯಗಳಲ್ಲಿ (೧-೧೫೩-೩; ೮-೯೦-೧೫; ೧೦-೧೧-೧; ಇತ್ಯಾದಿ) ಮತ್ತು ಇತರ ವೇದಗಳಲ್ಲಿ (ವಾ. ಸಂ. ೧೩-೪೩ರಿಂದ೪೯) ಅದಿತಿಯನ್ನು ಗೋವೆಂದು ವ್ಯವಹರಿಸಿದೆ ಮತ್ತು ಯಜ್ಞಗಳಲ್ಲಿಯೂ, ಗೋವು ಒಂದಕ್ಕೆ ಅದಿತಿಯೆಂದು ಹೆಸರು. ಭೂಮಿಯ ಸೋಮರಸವನ್ನು ಆದಿತಿಯ ಸ್ತನ್ಯಕ್ಕೆ ಹೋಲಿಸಿದೆ. (೯-೯೬-೧೫) ದ್ರೋಣಪಾತ್ರೆಗೆ ಪ್ರವಹಿಸುತ್ತಿರುವ ಸೋಮಕ್ಕೆ ವಶಳಾಗುವ ಆದಿತಿಪುತ್ರಿಯೆಂಬಲ್ಲಿಯೂ ಕ್ಷೀರವೇ ಅಭಿಪ್ರೇತವಾಗಿರಬೇಕು. (೯-೬೯-೩) ಋತ್ವಿಜರು ತಮ್ಮ ಹತ್ತು ಬೆರಳುಗಳಿಂದ ಆದಿತಿಯ ಅಂಕದಲ್ಲಿರುವ ಸೋಮವನ್ನು ಶುದ್ಧಿಮಾಡುತ್ತಾರೆ (೯-೨೬-೧ ; ೯-೭೧-೫) ಎನ್ನುವ ಸಂದರ್ಭದಲ್ಲಿಯೂ ಇದೇ ಅಭಿಪ್ರಾಯವಿರಬೇಕು.

ಮೇಲೆ ಉದಹರಿಸಿರುವ ವಾಕ್ಯಗಳಿಂದ ಆದಿತಿಯ ಎರಡು ಗುಣಗಳು ಎದ್ದು ಕಾಣುತ್ತವೆ. ಮೊದಲನೆಯದು ತಾಯ್ತನ. ಆಕೆಯ ಹೆಸರಿನಿಂದ ನಿಷ್ಪನ್ನವಾದ ಆದಿತ್ಯ, ಆದಿತೇಯ ಮೊದಲಾದ ಹೆಸರುಗಳುಳ್ಳ ದೇವತೆಗಳಿಗೆ ಆಕೆಯು ತಾಯಿ. ಎರಡನೆಯದು–ಆ ಪದದ ಮೂಲಧಾತುವಿನಿಂದ ಸೂಚಿತವಾಗುವುದೂ ಆದೇ ಕಾಯ ಕ್ಲೇಶ ಮತ್ತು ನೈತಿಕ ಪತನಗಳಿಂದ ಉದ್ಧರಿಸುವ ಶಕ್ತಿ. ಮಿತಿಯೇ ಇಲ್ಲದ ಸಮೃದ್ಧಿಸೂಚಕವಾಗಿ ಆಕೆಯನ್ನು ಗೋವು ಅಥವಾ ಭೂಮಿ, ಸ್ವರ್ಗ ಅಥವಾ ಪ್ರಪಂಚವೆಂದು ಊಹಿಸಬಹುದು. ಇದರಿಂದ ಆಕೆಯು ಆದಿತ್ಯರ



CC-0. Jangamwadi Math Collection. Digitized by eGangotri

ತಾಯಿಯೆಂಬುದನ್ನು ಸಮರ್ಥಿಸುವುದು ಅಸಾಧ್ಯವಾಗುತ್ತದೆ. 'ದ್ಯೌರದಿತಿಃ' ಅನಂತವಾದ ಆಕಾಶರೂಪಳಾದ ಜನನಿಯು ದೇವತೆಗಳಿಗೆ ಕ್ಷೀರವನ್ನು ಒದಗಿಸುತ್ತಾಳೆ (೧೦-೬೩-೩) ಎಂಬುದರಿಂದ ಅದಿತಿಯು ಆದಿತ್ಯರೇ ಮೊದಲಾದವರಿಗೆ ತಾಯಿಯೆಂಬ ಭಾವನೆ ಬಂದಿದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಈ ಅಭಿಪ್ರಾಯವನ್ನು ತೆಗೆದುಕೊಂಡರೆ ಆಕೆಯ ಬಂಧವಿಮೋಚನಶಕ್ತಿಯು ತೃಪ್ತಿಕರವಾಗಿ ಸಾಧಿತವಾಗುವುದಿಲ್ಲ. ಬೇರೊಂದು ವಿಧವಾಗಿ ವಿವರಿಸಬಹುದು. ಆದಿತ್ಯರಿಗೆ ಅನೇಕಸಲ ಉಪಯೋಗಿಸಿರುವ ಅದಿತೇಃ ಪುತ್ರಾಃ ಎಂಬುದಕ್ಕೆ ಸ್ವಾತಂತ್ರ್ಯದ ಮಕ್ಕಳು ಎಂದರ್ಥವಾಗಬಹುದು. ಶವಸಃ ಸೂನುಂ ಸಹಸಃ ಪುತ್ರಾಃ ಎಂಬ ಪ್ರಯೋಗಗಳು ಇದನ್ನು ಸಮರ್ಥಿಸುತ್ತವೆ. ಶವಸಃ ಸೂನುಂ ಎಂಬುದರಿಂದ ಇಂದ್ರನ ತಾಯಿಯ ಹೆಸರು ಶವಸೀ ಎಂದೂ, ಶಚೀಪತಿ ಎಂಬುದರಿಂದ ಶಚೀ ಎಂಬುವಳು ಇಂದ್ರನ ಪತ್ನಿಯೆಂದೂ ರೂಢಿಗೆ ಬಂದಿರುವಂತೆ, ಅದಿತೇಃ ಪುತ್ರಾಃ ಎಂಬುದರಿಂದ ಅದಿತಿಯೂ ಒಬ್ಬ ದೇವತೆ ಎಂಬ ಭಾವನೆ ಬಂದಿರಬೇಕು. ಅದಿತಿ ಪದದ ಸ್ವಾತಂತ್ರ್ಯ ಎಂಬ ಅರ್ಥದಿಂದ ಈ ದೇವತೆ 'ಅದಿತಿ'ಗೆ ಬಂಧನರಹಿತಳು. ಬಂಧನರಾಹಿತ್ಯಕ್ಕೆ ಕಾರಣಳು ಎಂಬ ಗುಣವು ಬಂದೇ ಬರುತ್ತದೆ. ಆದಿತ್ಯ ಮೊದಲಾದವರ ಸಂಪರ್ಕದಿಂದ ತೇಜಸ್ಸು ಮೊದಲಾದವುಗಳು ಆರೋಪಿತವಾಗುತ್ತವೆ. ಮುಖ್ಯ ದೇವತೆಗಳು ಕೆಲವರಿಗೆ ಅಥವಾ ದೇವತಾಸಾಮಾನ್ಯಕ್ಕೆ ತಾಯಿಯಾದುದರಿಂದ ಆಕೆಯನ್ನು ಭೂಮಿ, ಆಕಾಶ ಅಥವಾ ಪ್ರಪಂಚ ಅಥವಾ ದ್ಯುದೇವತೆಯೊಡನೆ ಸೇರಿ ಜಗಜ್ಜನನಿ ಮೊದಲಾದ ವರ್ಣನೆಗಳು ಸಹಜವಾಗಿಯೇ ಇವೆ.

ನಿರುಕ್ತದಲ್ಲಿ ಅದಿತಿ ಎಂಬುದು ಪೃಥ್ವೀ, ವಾಕ್, ಗೋ, ದ್ವಿವಚನಾಂತವಾಗಿ (ಅದಿತೀ) ದ್ಯಾವಾಪೃಥಿವಿಗಳು ಇವುಗಳಿಗೆ ಸಮವೆಂದೂ ಹೇಳಿದೆ. ಯಾಸ್ಕರು ಅದಿತಿಯನ್ನು ದೇವತೆಗಳ ಜನನಿಯೆಂದು ವರ್ಣಿಸಿ, ಆಕೆಯನ್ನು ವಾಯುಮಂಡಲದಲ್ಲಿಯೂ, ಆದಿತ್ಯರನ್ನು ಸ್ವರ್ಗಲೋಕದಲ್ಲಿಯೂ ವರುಣನನ್ನು ಎರಡುಕಡೆಯೂ ಇರತಕ್ಕವರೆಂದು ಹೇಳಿದಾರೆ.

## ದಿತಿ

ಈ 'ದಿತಿ' ಎಂಬ ಪದವು ಋಗ್ವೇದದಲ್ಲಿ ಮೂರೇ ಸಲ ಬಂದಿರುವುದು. ಅದರಲ್ಲಿಯೂ ಎರಡುಸಲ ಅದಿತಿಯ ಜೊತೆಯಲ್ಲಿ ಬಂದಿದೆ. ಮಿತ್ರ ಮತ್ತು ವರುಣರು ತಮ್ಮ ರಥದಲ್ಲಿ ಕುಳಿತು ಅದಿತಿ ಮತ್ತು ದಿತಿಯರನ್ನು ನೋಡುತ್ತಾರೆ (೫-೬೨-೮) ಇಲ್ಲಿ ಸಾಯಣಾಚಾರ್ಯರು ಅದಿತಿಶಬ್ದಕ್ಕೆ ಅಖಂಡವಾದ ಪೃಥ್ವೀ ಎಂತಲೂ, ದಿತಿಶಬ್ದಕ್ಕೆ ಭೂಮಿಯ ಮೇಲಿರುವ ಭಿನ್ನ ಭಿನ್ನರಾದ ಪ್ರಾಣಿವರ್ಗವೆಂತಲೂ ಅರ್ಥಮಾಡಿದಾರೆ. ರಾತ್ (Roth) ಎಂಬ ಆಧುನಿಕ ವಿದ್ವಾಂಸರು ಈ ಪದಗಳಿಗೆ ನಿತ್ಯ ಮತ್ತು ಅನಿತ್ಯ ಅಥವಾ ಶಾಶ್ವತ ಮತ್ತು ನಶ್ವರ ಪದಾರ್ಥಗಳೆಂದು ಅರ್ಥಮಾಡಿದಾರೆ. ಎರಡನೆಯ ವಾಕ್ಯದಲ್ಲಿ (೪-೨-೧೧) ದಿತಿಯು ಅನುಗ್ರಹವೂ ಅದಿತಿಯು ರಕ್ಷಣೆಯೂ ಅಗ್ನಿಯಿಂದ ಪ್ರಾರ್ಥಿತವಾಗಿವೆ. ಸಾಯಣರ ಪ್ರಕಾರ ಇಲ್ಲಿ ದಿತಿಯೆಂದರೆ ಉದಾರಿಯಾದ ದಾನಿ ಎಂತಲೂ ಅದಿತಿ ಎಂದರೆ ಕೃಪಣನಾದ ದಾನಿಯೆಂತಲೂ ಅರ್ಥ. ರಾತ್ (Roth) ಎಂಬುವರು ಸಿರಿತನ ಮತ್ತು ಬಡತನಗಳೆಂದು ಅಭಿಪ್ರಾಯಪಡುತ್ತಾರೆ. ಬರ್ಗೈನ್ (Bergaigne) ಎಂಬುವರ ಮತದಲ್ಲಿ ಅದಿತಿ ಮತ್ತು ದಿತಿ, ಎಂಬ ಸ್ತ್ರೀ ದೇವತೆಗಳೇ ಅಭಿಪ್ರೇತರು. ಆದರೆ ಇಲ್ಲಿ ಆ ರೀತಿ ಇರಲಾರದು. ದಾ (ಕೊಡು) ಎಂಬರ್ಥದ ಧಾತುವಿನಿಂದ ನಿಷ್ಪನ್ನವಾಗಿ ಇವುಗಳು ಕೊಡುವ ಮತ್ತು ಕೊಡದೇ ಇರುವ ಎಂಬ ಅರ್ಥಗಳನ್ನೇ ಕೊಡುತ್ತವೆ ಎಂದು ಹೇಳುವುದೇ ಸೂಕ್ತವಾಗಿ ಕಾಣುತ್ತದೆ. ಈ ಅರ್ಥವು ಸಂದರ್ಭ ಮತ್ತು ಪದಗಳ ಪ್ರಯೋಗಿಸಿರುವ ಕ್ರಮ ಇವೆರಡು ದೃಷ್ಟಿಯಿಂದಲೂ ಸಮಂಜಸವಾಗಿರುವಂತೆ ತೋರುತ್ತದೆ. ಮೂರನೆಯ ವಾಕ್ಯದಲ್ಲಿ (೭-೧೫-೧೨) ದಿತಿ ಪದ


CC-0. Jangamwadi Math Collection. Digitized by eGangotri

ವೊಂದೇ, ಅಗ್ನಿ, ಸವಿತೃ ಮತ್ತು ಭಗ ಇವರುಗಳೊಡನೆ, ಅಪೇಕ್ಷಣೀಯವಾದ ವಸ್ತುಗಳನ್ನು ಕೊಡುವವಳು ಎಂಬ ಅಭಿಪ್ರಾಯದಲ್ಲಿ ಪ್ರಯೋಗಿಸಲ್ಪಟ್ಟಿದೆ. ಇತರ ಸಂಹಿತೆಗಳಲ್ಲೂ 'ದಿತಿ' ಯು 'ಅದಿತಿ' ಯೊಡನೆ ಪ್ರಯುಕ್ತವಾಗಿದೆ (ವಾ. ಸಂ. ೧೮-೩೩; ಅ. ವೇ. ೧೫-೧೮-೪; ೧೬-೬-೭). ಅಥರ್ವವೇದದಲ್ಲಿ ಆಕೆಯ ಪುತ್ರರೂ ಪ್ರಸಕ್ತರಾಗುತ್ತಾರೆ (ಅ. ವೇ. ೭-೭-೧); ಅವರೇ ದೈತ್ಯರು. ಮುಂದೆ ಇವರು ದೇವತೆಗಳ ಶತ್ರುಗಳಾಗಿ ಪರಿಣತರಾಗುತ್ತಾರೆ. ಅಸುರ (ರಾಕ್ಷಸ) ಎಂಬುದರಿಂದ ಸುರ (ದೇವತೆ) ಎಂಬುದು ಪ್ರಯೋಗದಲ್ಲಿ ಬಂದಿರುವಂತೆ, ಅದಿತಿಗೆ ವಿರುದ್ಧವಾಗಿ ದಿತಿ ದೇವತೆಯೆಂದು ಕಲ್ಪಿತವಾಗಿದೆಯೇ ಹೊರತು, ದಿತಿ ಎಂಬ ದೇವತೆ ಪ್ರತ್ಯೇಕವಾಗಿ ಇದ್ದಂತೆ ಕಾಣುವುದಿಲ್ಲ.

## ಸ್ತ್ರೀ ದೇವತೆಗಳು

ವೈದಿಕ ಮತ ಮತ್ತು ಕರ್ಮಗಳಲ್ಲಿ ಸ್ತ್ರೀ ದೇವತೆಗಳ ಸ್ಥಾನವು ಬಹಳ ಅಪ್ರಧಾನವಾದುದು: ಪ್ರಪಂಚದ ಆಡಳಿತದಲ್ಲಿ ಅವರ ಕೈವಾಡವೇ ಇಲ್ಲವೆನ್ನಬಹುದು. ಸ್ತ್ರೀ ದೇವತೆಗಳಲ್ಲಿ ಬಹಳ ಮುಖ್ಯಳಾದವಳು ಉಷಾದೇವಿ. ಋಕ್ಸಂಖ್ಯೆಯನ್ನು ತೆಗೆದುಕೊಂಡರೆ, ಆಕೆ ಮೂರನೆಯ ದರ್ಜೆಯ ದೇವತೆ. ಆದರೆ ಪುರುಷ ದೇವತೆಗಳಿಗಿರುವಂತೆ, ಉಷೋದೇವಿಗೆ ಸೋಮ ಭಾಗವಿಲ್ಲ. ಉಷೋದೇವಿಯನಂತರ ಮುಖ್ಯ ಸ್ತ್ರೀ ದೇವತೆಯೆಂದರೆ ಸರಸ್ವತಿ; ಆದರೆ ಆಕೆಯನ್ನು ಕಡೇ ದರ್ಜೆಯ ದೇವತೆಯೆಂದು ಎಣಿಸುತ್ತಾರೆ. ಮತ್ತೆ ಕೆಲವರು ಒಂದೊಂದು ಸೂಕ್ತದಲ್ಲಿ ಸ್ತುತರಾಗಿದಾರೆ. ಪೃಥ್ವಿಯನ್ನು ದ್ಯುದೇವತೆಯಿಂದ ಪ್ರತ್ಯೇಕಿಸಲು ಸಾಧ್ಯವೇ ಇಲ್ಲವೆನ್ನಬಹುದು; ಆಕೆಯನ್ನು ಸ್ತುತಿಸುವ ಸೂಕ್ತದಲ್ಲಿ ಮೂರೇ ಮಂತ್ರಗಳಿವೆ. ರಾತ್ರಿ ದೇವತೆಯೂ ಒಂದು ಸೂಕ್ತದಲ್ಲಿ ಹೊಗಳಲ್ಪಟ್ಟಿದಾಳೆ (೧೦-೧೨೭). ಆವಳ ಸೋದರಿಯಾದ ಉಷೋದೇವಿಯಂತೆ, ಅವಳೂ ಆಕಾಶ (ದ್ಯೌಃ) ದ ಮಗಳು. ರಾತ್ರಿಯೆಂದರೆ ಕಪ್ಪಾದದ್ದಲ್ಲ; ನಕ್ಷತ್ರರಂಜಿತವೂ, ಪ್ರಕಾಶಯುಕ್ತವೂ ಆದ ರಾತ್ರಿಯೆಂತಲೇ ಅಭಿಪ್ರಾಯ. ತನ್ನ ಅನೇಕ ನೇತ್ರಗಳಿಂದ ನಾನಾರೂಪಳಾಗಿ ಪ್ರಕಾಶಿಸುತ್ತಾಳೆ. ಎಲ್ಲಾ ವಿಧವಾದ ಜ್ಯೋತಿಗಳಿಂದ ಅಲಂಕೃತಳಾಗಿ, ತನ್ನ ಬೆಳಕಿನಿಂದ ಕತ್ತಲನ್ನೋಡಿಸುತ್ತಾ, ಪರ್ವತ, ಕಣಿವೆಗಳೆಲ್ಲವನ್ನೂ ಆವರಿಸುತ್ತಾಳೆ. ಆಕೆಯು ಸಮೀಪಿಸುತ್ತಲು, ಮನುಷ್ಯರೆಲ್ಲರೂ, ಪಕ್ಷಿಗಳು ಗೂಡುಗಳನ್ನು ಸೇರುವಂತೆ, ಮನೆಗಳಿಗೆ ಹಿಂದಿರುಗುತ್ತಾರೆ. ರಾತ್ರಿಯ ಕಾಲದಲ್ಲಿ, ಕಳ್ಳರು, ತೋಳಗಳು ಮೊದಲಾದುವುಗಳನ್ನು ಓಡಿಸಿ ಮನುಷ್ಯರನ್ನು ಸುರಕ್ಷಿತವಾದ ಸ್ಥಳಕ್ಕೆ ಸೇರಿಸಬೇಕೆಂದು ಪ್ರಾರ್ಥಿತಳಾಗಿದಾಳೆ. ಉಷೋದೇವಿಯೊಡನೆ ದ್ವಂದ್ವದೇವತೆಯಾಗಿ ಅನೇಕ
ವಾದ ಸ್ಥಳಕ್ಕೆ ಸೇರಿಸಬೇಕೆಂದು ಪ್ರಾರ್ಥಿತಳಾಗಿದಾಳೆ. ಉಷೋದೇವಿಯೊಡನೆ ದ್ವಂದ್ವದೇವತೆಯಾಗಿ ಅನೇಕ ಸಲ ಸ್ತುತಳಾಗಿದಾಳೆ. ಉಷಸ್ಸಿಗೆ ಪ್ರತಿಯೊಂದು ರಾತ್ರಿಗೂ ದೇವತಾತ್ವ ಆರೋಪಿತವಾಗಬಹುದು.

ಭಾಷೆಯನ್ನು ವ್ಯಕ್ತಿಯೆಂದು ಭಾವಿಸಿ, ವಾಕ್ ಎಂಬುದಾಗಿ ಒಂದು ಸೂಕ್ತವು (೧೦-೧೨೫) ಆಕೆಯನ್ನು ಸ್ತುತಿಸಿದೆ. ಈ ಸೂಕ್ತದಲ್ಲಿ ದೇವತೆಯು ತನ್ನನ್ನು ತಾನೇ ವರ್ಣಿಸಿಕೊಳ್ಳುತ್ತಾಳೆ. ಆಕೆಯು ಎಲಾ ದೇವತೆಗಳನ್ನೂ ಅನುಸರಿಸುತ್ತಾಳೆ ಮತ್ತು ಮಿತ್ರ-ವರುಣ, ಇಂದ್ರ ಅಗ್ನಿ ಮತ್ತು ಅಶ್ವಿನಿಗಳಿಗೆ ಬೆಂಬಲಳಾಗಿದಾಳೆ. ಶ್ರದ್ಧೆಯಿಲ್ಲದವನಕಡೆ ರುದ್ರನ ಧನುಸ್ಸನ್ನು ತಿರುಗಿಸುತ್ತಾಳೆ. ನೀರಿನಲ್ಲಿ, ಸಮುದ್ರದಲ್ಲಿ ಆಕೆಯಸ್ಥಾನ, ಎಲ್ಲಾ ಜೀವರನ್ನು ಆವರಿಸುತ್ತಾಳೆ. ಮತ್ತೊಂದು ಕಡೆ (೮-೧೦೦-೧೦, ೧೧). ದೇವತೆಗಳ ರಾಣಿ ಮತ್ತು ದೇವಿ (ದೇವೀಂವಾಚಂ) ಎಂದೂ ಹೇಳಿದೆ. ನಿರುಕ್ತದಲ್ಲಿ (ನಿ. ೫-೫), ವಾಕ್ಕು, ಅಂತರಿಕ್ಷ ದೇವತೆಗಳಲ್ಲಿ ಒಂದು ಗುಡುಗು. ಅಥವಾ ನಿರುಕ್ತ ವ್ಯಾಖ್ಯಾನಕಾರರು ಹೇಳುವಂತೆ ಮಾಧ್ಯಮಿಕ ವಾಕ್ (ಮಧ್ಯಲೋಕದ ಶಬ್ದಃ ನಿ. ೧೧-೨೭) ಎಂಬುದೇ ವ್ಯಕ್ತೀಕರಣಕ್ಕೆ ಪ್ರಾರಂಭದೆಶೆಯಿರಬಹುದು. ವಾಕ್ಕಿಗೆ ಸಂಬಂಧಿಸಿದಂತೆ ಒಂದು ಕಥೆಯೂ ಬ್ರಾಹ್ಮಣಗಳಲ್ಲಿ ಉಕ್ತವಾಗಿದೆ. ಗಂಧರ್ವರುಗಳ ಸಮೀಪದಿಂದ ಸೋಮರಸವನ್ನು ತರುವಾಗ, ವಾಕ್ಕನ್ನು ಒಬ್ಬ





CC-0. Jangamwadi Math Collection. Digitized by eGangotri

ಸ್ತ್ರೀಯಾಗಿ ಪರಿವರ್ತಿಸಿ, ಸೋಮರಸಕ್ಕೆ ಬೆಲೆಯಾಗಿ ಕೊಟ್ಟರಂತೆ (ಐ. ಬ್ರಾ. ೧-೨೭). ಋಗ್ವೇದದಲ್ಲಿ ಸುಮಾರು ಒಂಬತ್ತು ಸಲ ಬರುವ ಪುರಂಧಿಯು ಸಮೃದ್ಧಿಯ ಅಭಿಮಾನಿದೇವತೆ. ಸಾಧಾರಣವಾಗಿ ಭಗನ ಜೊತೆಯಲ್ಲೇ ಪ್ರಯೋಗ; ಎರಡು ಮೂರುಸಲ ಮಾತ್ರ ಪೂಷಣ ಮತ್ತು ಸವಿತೃಗಳೊಡನೆಯೂ, ಒಂದುಸಲ ವಿಷ್ಣು ಮತ್ತು ಅಗ್ನಿಗಳೊಡನೆಯೂ ಪ್ರಯೋಗಿಸಿದೆ. ಇದೇ ಸಮೃದ್ಧಿದ್ಯೋತಕಳಾದ ಮತ್ತೊಬ್ಬ ದೇವತೆ ಧಿಷಣಾ ಎಂಬುವಳು ಸುಮಾರು ಹನ್ನೆರಡುಸಲ ಕಂಡುಬರುತ್ತಾಳೆ. ಇಳಾ ಎಂಬುದು ಮತ್ತೊಂದು. ಹನ್ನೆರಡಕ್ಕೂ ಕಡಿಮೆ ಸಲ ಬಂದಿದೆ. ಹಾಲು ಬೆಣ್ಣೆಗಳ ಹೋಮವೇ, ಗೋಸಮೃದ್ಧ್ಯಭಿಮಾನಿ ದೇವತೆಯಾಗಿ ಪರಿಣತವಾಗಿದೆ. ಬ್ರಾಹ್ಮಣಗಳಲ್ಲಿ. ಇಡಾ ಎಂಬುದು ಗೋವಿಗೆ ಹೆಸರಲ್ಲದಿದ್ದರೂ, ಗೋವುಗೂಳಡನೆ ಪದೇ ಪದೇ ಉಪಯೋಗಿಸಲ್ಪಡುತ್ತದೆ. ನಿರುಕ್ತದಲ್ಲಿ ಇಡಾ, ಇಳಾ ಎಂಬುದು ಗೋವಿನ ನಾಮಗಳಲ್ಲಿ ಒಂದು (ನಿ. ೨-೧೧). ಹೋಮದ ಸ್ವರೂಪದಿಂದಲೇ ಇರಬೇಕು, ಇಳೆಯನ್ನು ಘೃತಹಸ್ತಾ (೭-೧೬-೮) ಮತ್ತು ಘೃತಪದೀ (೧೦-೭೦-೮) ಎಂದು ವರ್ಣಿಸಿರುವುದು. ಈ ಇಳೆಯು ದೇವತಾರೂಪದಿಂದ, ಸಾಧಾರಣವಾಗಿ ಆಪ್ರೀ ಸೂಕ್ತಗಳಲ್ಲಿಯೇ ಬರಬಹುದು ; ಅಲ್ಲಿಯೂ ಸರಸ್ವತೀ ಮತ್ತು ಮಹೀ ಅಥವಾ ಭಾರತೀ ಇವರುಗಳೊಡನೆ, ಒಂದು ಗುಂಪಾಗಿಯೇ (ದೇವತಾತ್ರಯ) ಪ್ರಯೋಗ. ' ಇಳಾಯಾಃ ಪದೇ' ಎಂಬಲ್ಲಿ ಅಭಿಪ್ರೇತವಾದುದು ಸಾಧಾರಣವಾದ ಅರ್ಥವೇ ಅಥವಾ ದೇವತೆಯೇ ಎಂಬುದು ಸಂದಿಗ್ಧ ವಿಷಯ. ಒಂದು ಸಲ ಅಗ್ನಿಯನ್ನು ಇಳೆಯ ಪುತ್ರನೆಂದು (೩-೨೯-೯, ೧೦) ಕರೆದಿದೆ. ಪುರೂರವನೂ ಆಕೆಯ ಮಗ (೧೦-೯೫-೧೮). ಒಂದು ಸಲ ಆಕೆಯನ್ನು ಹಿಂಡಿನ (ಯೂಥಸ್ಯ ಮಾತಾ) ತಾಯಿಯೆಂದೂ ಊರ್ವಶಿಯೊಡನೆ ಸಂಬಂಧವುಳ್ಳವಳೆಂದೂ (೫-೪೧-೧೯) ಹೇಳಿದೆ. ಪ್ರಾತಸ್ಸವನದ ವಿಷಯವನ್ನು ಪ್ರಸ್ತಾಪಿಸುವಾಗ, ದಧಿಕ್ರಾವ ಮತ್ತು ಅಶ್ವಿನಿಗಳ ಜೊತೆಯಲ್ಲಿ ಆಕೆ ಉಕ್ತಳಾಗಿದಾಳೆ (೭-೪೪-೨). ಶತಪಥ ಬ್ರಾಹ್ಮಣದಲ್ಲಿ, ಆಕೆಯನ್ನು ಮನುವಿನ (೧-೮-೧-೮ ; ೧೧-೫-೩-೫) ಮತ್ತು ಮಿತ್ರಾವರುಣರ (೧-೮-೧-೨೭ ; ೧೪-೯-೪-೨೭ ; ಆ. ಶ್ರೌ. ಸೂ. ೧-೭-೭) ಪುತ್ರಿಯೆಂದು ಕರೆದಿದೆ.

ಬೃಹದ್ದಿವಾ ಎಂಬ ದೇವತೆಯ ಹೆಸರು ವಿಶ್ವೇದೇವತೆಗಳ ಸೂಕ್ತಗಳಲ್ಲಿ ನಾಲ್ಕು ಸಲ ಬಂದಿದೆ. ಇವಳನ್ನು ಮಾತಾ ಎಂದು ಒಂದು ಕಡೆ (೧೦-೬೪-೧೦) ಕರೆದಿದೆ. ಇಳೆಯ ಜೊತೆಯಲ್ಲಿ ಎರಡು ಸಲವೂ (೨-೩೧-೪ ; ೫-೪೧-೧೯), ಸರಸ್ವತಿ ಮತ್ತು ರಾಕಾ ಇವರುಗಳೊಡನೆ ಒಂದು ಸಲವೂ (೫-೪೨-೧೨) ಪ್ರಸಕ್ತವಾಗಿದೆ. ರಾಕಾ (ಕೊಡು ಎಂಬರ್ಥಕೊಡುವ ' ರಾ ' ಧಾತುವಿನಿಂದ ನಿಷ್ಪನ್ನವಾದುದು ಇರಬಹುದು) ಎಂಬ ಸಂಪದ್ಯುಕ್ತಳೂ, ಸಮೃದ್ಧಳೂ ಆದ ದೇವತೆಯು ಇತರ ದೇವತೆಗಳೊಡನೆ ಎರಡು ಸ್ಥಳಗಳಲ್ಲಿ (೨-೩೨-೭ ; ೫-೪೨-೧೨) ಸ್ತುತಳಾಗಿದಾಳೆ. ಸಿನೀವಾಲೀ ಎಂಬ ಹೆಸರು ಎರಡು ಸೂಕ್ತಗಳಲ್ಲಿ ಪ್ರಸಕ್ತವಾಗಿದೆ (೨-೩೨ ; ೧೦-೧೮೪). ಅವಳು ದೇವತೆಗಳ ಸೋದರಿ ; ಸುಂದರವಾದ ಬಾಹುಗಳು ಮತ್ತು ಬೆರಳುಗಳುಳ್ಳವಳು ; ಸಮೃದ್ಧಳು ; ಸಂಸಾರಕ್ಕೆ ಯಜಮಾನಿ ; ಸಂತತಿಪ್ರದಾನ ಮಾಡೆಂದು ಪ್ರಾರ್ಥಿತಳಾಗಿದಾಳೆ. ಸರಸ್ವತಿ, ರಾಕಾ ಮತ್ತು ಗುಂಗೂ, ಇವರುಗಳೊಡನೆ ಸ್ತುತಳಾಗಿದಾಳೆ (ಗುಂಗೂ ಎಂಬುದು ಇದೊಂದೇ ಕಡೆ ಪ್ರಯೋಗಿಸಿರುವುದು). ಅಥರ್ವವೇದದಲ್ಲಿ (ಅ. ವೇ. ೮-೪೬-೩), ಸಿನೀವಾಲಿಯು ವಿಷ್ಣುವಿನ ಪತ್ನಿ. ಇತರ ವೇದ ಮತ್ತು ಬ್ರಾಹ್ಮಣಗಳಲ್ಲಿ, ಕುಹೂ ಎಂಬ ಅಮಾವಾಸ್ಯೆಯ ಅಭಿಮಾನಿದೇವತೆಯು ಉಕ್ತಳಾಗಿದಾಳೆ. ಇತರ ವೇದಗಳಲ್ಲಿ ರಾಕಾ ಎಂಬುವಳು ಹುಣ್ಣಿಮೆಯ ದಿನದ ಅಧಿದೇವತೆಯೆಂದೂ, ಸಿನೀವಾಲಿಯು ಅಮಾವಾಸ್ಯೆಯ ಹಿಂದಿನ ದಿನದ ಅಭಿಮಾನಿದೇವತೆಯೆಂದೂ ಭಾವನೆ ಇದೆ. ಋಗ್ವೇದದಲ್ಲಿ ಇದಕ್ಕೆ ಆಧಾರವಿಲ್ಲ.

ಪ್ರಸಂಗ ಬಿದ್ದಾಗ ಹಿಂದೆಯೇ ಇತರ ಕೆಲವು ಸ್ತ್ರೀದೇವತೆಗಳ ಪ್ರಸ್ತಾಪ ಮಾಡಿದೆ. ಮರುತ್ತುಗಳ ತಾಯಿಯಾದ ಪೃಶ್ನಿಯು (೧-೨೩-೧೦). ವಿವಿಧವರ್ಣದ ಮಳೆಮೋಡವಿರಬೇಕು. ಈ ಪದವು ಚುಕ್ಕೆಚುಕ್ಕೆ



CC-0. Jangamwadi Math Collection. Digitized by eGangotri

ಯಾಗಿರುವ ಎಂಬರ್ಥಕೊಡುವ ವಿಶೇಷಣವಾಗಿ, ಏಕವಚನದಲ್ಲಿ ವೃಷಭ ಮತ್ತು ಹಸುಗಳೆರಡಕ್ಕೂ, ಬಹುವಚನದಲ್ಲಿ, ಇಂದ್ರನಿಗೋಸ್ಕರ ಸೋಮರಸವನ್ನು ದೋಹನಮಾಡುವ ಹಸುಗಳಿಗೂ ವಿಶೇಷಣವಾಗಿ ಉಪಯೋಗಿಸಿದೆ (೧-೮೪-೧೦, ೧೧ ; ೮-೬-೧೯ ; ೮-೭-೧೦ ; ೮-೫೮-೩). ಹೀಗೆ ಪೃಶ್ನಿ ಎಂದರೆ ಬಣ್ಣಬಣ್ಣದ ಹಸು, ಮೇಘ ಎಂದರ್ಥವಾಗಿದೆ. ವಿವಸ್ವತನ ಪತ್ನಿಯೂ, ತ್ವಷ್ಟೃಪುತ್ರಿಯೂ ಆದ ಸರಣ್ಯುವೂ ಒಂದು ಸಲ (೧೧-೧೭-೨) ಉಕ್ತಳಾಗಿದಾಳೆ. ಈ ಸರಣ್ಯುವು ಸೂರ್ಯೆ ಅಥವಾ ಉಷಸ್ಸು ಇರಬಹುದು. ಈ ಪದಕ್ಕೆ ಚುರುಕಾಗಿರುವ ಅಥವಾ ವೇಗವಾಗಿರುವ ಎಂತಲೂ ಅರ್ಥ. ಈ ಅರ್ಥದಲ್ಲಿ ನಾಲ್ಕು ಸಲ ಉಪಯೋಗಿಸಿರುವುದು ಕಂಡು ಬರುತ್ತದೆ. ಸರಣ (ವೇಗಃ 'ಸೃ' ಓಡು ಧಾತುವಿನಿಂದ ನಿಷ್ಪನ್ನವಾದುದು) ಎಂಬುದಕ್ಕೆ 'ಯು' ಪ್ರತ್ಯಯ ಸೇರಿಸಿ ಸಾಧಿಸಿರುವ ಪದವೇ ಇದಿರಬೇಕು.

ಈ ಸ್ತ್ರೀದೇವತೆಗಳು ದೊಡ್ಡದೊಡ್ಡ ದೇವತೆಗಳ ಪತ್ನಿಯರಾಗಿದ್ದರೂ ಅಷ್ಟು ಪ್ರಮುಖಪಾತ್ರವನ್ನೇನೂ ವಹಿಸಿಲ್ಲ. ಇಂದ್ರಾದಿ ದೇವತೆಗಳಿಗೆ ಪತ್ನಿಯರಿದ್ದೇ ಇರಬೇಕು. ಆದುದರಿಂದ ಇವರ ಹೆಸರುಗಳು ಪ್ರಸಕ್ತವಾಗಿವೆ. ಅವರ ಹೆಸರು ಹೊರತಾಗಿ ಮತ್ತೇನೂ ಹೇಳಿಲ್ಲ. ಆ ಹೆಸರುಗಳೂ ಸಾಧಾರಣವಾಗಿ ಹೊಸದಲ್ಲ. ಇಂದ್ರಾದಿ ಪದಗಳಿಗೇ ಆನೀ ಎಂಬ ಪ್ರತ್ಯಯವನ್ನು ಸೇರಿಸಿ ಇಂದ್ರಾಣೀ, ವರುಣಾನೀ, ಅಗ್ನಾಯೀ ಮೊದಲಾದ ಪದಗಳು ಉಪಯೋಗಿಸಲ್ಪಟ್ಟಿವೆ. ರುದ್ರಾಣೀ ಎಂಬುದು ಸೂತ್ರಗಳಲ್ಲಿ ಮಾತ್ರ ಕಂಡುಬರುತ್ತದೆ. ಆದರೆ ರುದ್ರಾಣಿಯಷ್ಟು ಇಂದ್ರಾಣೀ ಮೊದಲಾದವರು ಶ್ರೌತಕರ್ಮಗಳಲ್ಲಿ ಮುಖ್ಯರಲ್ಲ. ಅಶ್ವಿನಿಗಳ ಪತ್ನಿಯು ಅಶ್ವಿನೀ. ಋಗ್ವೇದದಲ್ಲಿ ಅಪರೂಪವಾಗಿ ಪ್ರಯೋಗಿಸಲ್ಪಡುವ (ದೇವನಾಂ ಪತ್ನೀಃ) ದೇವತೆಗಳ ಪತ್ನಿಯರಿಗೆ ಬ್ರಾಹ್ಮಣಾದಿಗಳಲ್ಲಿ ಪ್ರತ್ಯೇಕ ಸ್ಥಾನವಿದೆ (ಶ. ಬ್ರಾ. ೧-೯-೨-೧೧).

## ದೇವತಾ ದ್ವಂದ್ವಗಳು.

ವೈದಿಕ ಇತಿಹಾಸದ ವೈಲಕ್ಷಣ್ಯವೆಂದರೆ ಅನೇಕ ದೇವತೆಗಳನ್ನು ಎರಡೆರಡಾಗಿ ಜೋಡಿಸಿ ಸ್ತುತಿಸುವುದು. ಈ ದ್ವಂದ್ವಗಳಲ್ಲಿ ಎರಡು ಪದಗಳಿಗೂ ವಿಭಕ್ತಿ ಪ್ರತ್ಯಯ ಮತ್ತು ಸ್ವರಗಳುಂಟು. ಸುಮಾರು ಹನ್ನೆರಡು ದೇವತೆಗಳು ಈರೀತಿ ದ್ವಂದ್ವ ದೇವತೆಗಳಾಗಿ ಸುಮಾರು ಅರವತ್ತು ಸೂಕ್ತಗಳಲ್ಲಿ ಸ್ತುತರಾಗಿದಾರೆ. ಇದರಲ್ಲಿ ಹೆಚ್ಚಾಗಿ ಇಂದ್ರನೇ ಇತರ ದೇವತೆಗಳೊಡನೆ ಸಂಯೋಜಿತನಾಗಿರುವುದು. ಏಳು ದ್ವಂದ್ವ ಅಥವಾ ಇನ್ನೂ ಹೆಚ್ಚು ದ್ವಂದ್ವಗಳಲ್ಲಿ ಇಂದ್ರನೇ ಕಾಣಿಸಿಕೊಳ್ಳುತ್ತಾನೆ. ಆದರೆ, ಹೆಚ್ಚು ಸೂಕ್ತಗಳಲ್ಲಿ ಇಪ್ಪತ್ತುಮೂರು ಸೂಕ್ತಗಳು ಮತ್ತು ಕೆಲವು ಸೂಕ್ತಭಾಗಗಳು. ಪ್ರತಿಪಾದಿತವಾಗಿರುವುದು ಮಿತ್ರಾವರುಣರ ದ್ವಂದ್ವ. ಹನ್ನೊಂದು ಇಂದ್ರಾಗ್ನಿಗಳಿಗೂ, ಒಂಬತ್ತು ಇಂದ್ರಾವರುಣರಿಗೂ, ಏಳು ಇಂದ್ರ ವಾಯುಗಳಿಗೂ, ಆರು ದ್ಯಾವಾಪೃಥಿವಿಗಳಿಗೂ, ಇಂದ್ರಾ ಸೋಮ ಮತ್ತು ಇಂದ್ರಾ ಬೃಹಸ್ಪತಿಗಳಿಗೆ ಎರಡೆರಡೂ, ಇಂದ್ರಾವಿಷ್ಣು, ಇಂದ್ರಾಪೂಷಣ, ಸೋಮಾಪೂಷಣ, ಸೋಮಾರುದ್ರ ಮತ್ತು ಅಗ್ನೀಸೋಮರಿಗೆ ಒಂದೊಂದೂ, ಸೂಕ್ತಗಳಿವೆ. ಮೇಲೆ ಹೇಳಿದ ದೇವತೆಗಳ ಜೊತೆಗೆ ಅವರಲ್ಲದೆ ಬೇರೆ ಎಂಟು ಒಂಬತ್ತು ದೇವತೆಗಳಿಂದ ಯುಕ್ತವಾದ ಮತ್ತೆ ಕೆಲವು ಯುಗ್ಮಗಳು ಬಿಡೀ ಮಂತ್ರಗಳಲ್ಲಿ ಸ್ತುತಿಸಲ್ಪಡುತ್ತವೆ. ಇಂದ್ರಾನಾಸತ್ಯಾ, ಇಂದ್ರಾಪರ್ವತಾ, ಇಂದ್ರಾಮರುತಃ ಅಗ್ನೀಪರ್ಜನ್ಯಾ, ಪರ್ಜನ್ಯಾವಾತಾ (ಒಂದು ಸಲ ವಾತಾಪರ್ಜನ್ಯಾ), ಉಷಾಸಾನಕ್ತಾ, ನಕ್ತೋಷಾಸಾ, ಸೂರ್ಯಾಮಾಸಾ ಮತ್ತು ಸೂರ್ಯಚಂದ್ರಮಸಾ ಇತ್ಯಾದಿ.

ದ್ಯಾವಾಪೃಥಿವಿಗಳಿಂದಲೇ, ವೇದಗಳಲ್ಲಿ ಕಂಡುಬರುವ ಈ ಅಚ್ಚುಮೆಚ್ಚಿನ ಪದಗಳ ಜೋಡನೆ ಪ್ರಾರಂಭವಾಗಿರಬೇಕು. ಪ್ರಕೃತಿಯಲ್ಲಿ ದ್ಯಾವಾಪೃಥಿವಿಗಳಷ್ಟು ದೃಢವಾಗಿ ಸಂಬಂಧಹೊಂದಿರುವ ವಸ್ತುಗಳು



CC-0. Jangamwadi Math Collection. Digitized by eGangotri

ಬೇರೆ ಇಲ್ಲ. ಇದ್ರು ಕ್ರಮೇಣ ಅವೆರಡೂ ದಂಪತಿಗಳೆಂಬ ಭಾವನೆಗೆ ಅವಕಾಶಕೊಟ್ಟಿತು. ಋಗ್ವೇದದಲ್ಲಿ ದ್ಯಾವಾಪೃಥಿವೀದ್ಯೋತಕವಾದ ಆರು ಸೂಕ್ತಗಳಲ್ಲಿ ಒಂದಾದರೂ ದ್ಯುದೇವತೆಯನ್ನು ಸ್ತುತಿಸುವುದಿಲ್ಲ. ಮೂರು ಋಕ್ಕಿನ ಒಂದು ಸಣ್ಣ ಸೂಕ್ತವು ಮಾತ್ರ ಪೃಥಿವಿಯನ್ನು ಸ್ತುತಿಸುತ್ತದೆ. ಅದರಲ್ಲಿಯೂ ದ್ಯುದೇವತೆಗೆ ನಿರ್ದೇಶವಿದ್ದೇ ಇದೆ (೫-೮೪-೩). ಈ ದೇವತೆಗಳ ಹೆಸರು ಪ್ರತ್ಯೇಕವಾಗಿ ಬರುವುದಕ್ಕಿಂತ ಹೆಚ್ಚುಸಲ ಅವುಗಳ ಜೋಡಿಯು ಬರುತ್ತದೆ. ದ್ಯಾವಾಕ್ಷಾಮಾ, ದ್ಯಾವಾಭೂಮೀ ಎಂಬ ಅಪರೂಪ ಪ್ರಯೋಗಗಳನ್ನೂ ಸೇರಿಸಿಕೊಂಡರೆ, ಸುಮಾರು ನೂರು ಪ್ರಯೋಗವಿದೆ. ಇಷ್ಟುಸಲ ಮತ್ಯಾವ ಜೋಡಿಯೂ ಉಕ್ತವಾಗಿಲ್ಲ. ಆಕಾಶ ಮತ್ತು ಭೂಮಿಗಳಿಗೆ ರೋದಸೀ ಎಂತಲೂ ಹೆಸರು (ಸಹೋದರಿಯರೆಂದು ಹೇಳಿದೆ ೧-೧೮೫-೫). ಇದು ಸುಮಾರು ನೂರ ಸಲ ಬರುತ್ತದೆ. ಭೂಮ್ಯಾಕಾಶಗಳು ಪಿತೃಗಳು; ಅವುಗಳಿಗೆ ಪಿತರಾ, ಮಾತರಾ, ಜನಿತ್ರೀ ಮೊದಲಾದ ವಿಶೇಷಣಗಳು ಇವೆ; ಪ್ರತ್ಯೇಕವಾಗಿ ತಂದೆ ಮತ್ತು ತಾಯಿ ಎಂದೂ ಸಂಬೋಧನೆಯುಂಟು (೧-೧೫೯-೧, ೩ ; ೧-೧೬೦-೨). ಅವರು ಜಗತ್ತಿಗೆ ಮೂಲಪುರುಷರು (೭-೫೩-೨ ; ೧೦-೬೫-೮). ಐತರೇಯ ಬ್ರಾಹ್ಮಣದಲ್ಲಿ ಅವರಿಬ್ಬರ ವಿವಾಹವು ಪ್ರಸಕ್ತವಾಗಿದೆ (ಐ. ಬ್ರಾ. ೪-೨೭-೫, ೬). ಅವರು ಎಲ್ಲಾ ಪ್ರಾಣಿಗಳನ್ನೂ ಸೃಜಿಸಿದಾರೆ; ಅವರೇ ಅವುಗಳ ಸ್ಥಿತಿಗೆ ಕಾರಣರು (೧-೧೫೯-೨ ; ೧-೧೬೦-೨ ; ೧-೧೮೫-೧). ಅವರು ಸ್ವತಃ ಪಾದರಹಿತರಾದರೂ, ಅನೇಕ ಪ್ರಜೆಗಳನ್ನು ಕಾಲಿನ ಮೇಲೆ ನಿಲ್ಲಿಸುತ್ತಾರೆ (೧-೧೮೫-೨). ಅವರು ದೇವತೆಗಳಿಗೂ ಮಾತಾಪಿತೃಗಳು; ಅವರಿಗೆ ಮಾತ್ರ ದೇವಪುತ್ರೇ (ದೇವತೆಗಳನ್ನು ಮಕ್ಕಳಾಗಿ ಪಡೆದಿರುವವರು) ಎಂದು ಹೆಸರು. ವಿಶೇಷವಾಗಿ, ಅವರು ಬೃಹಸ್ಪತಿಗೆ ತಂದೆತಾಯಿಗಳು (೭-೯೭-೮) ; ಮತ್ತು ಜಲಗಳು ತ್ವಷ್ಟೃ, ಇವರುಗಳಿಂದ ಯುಕ್ತರಾಗಿ ಅಗ್ನಿಯನ್ನು ಉತ್ಪತ್ತಿಮಾಡಿದರು (೧೦ ೨-೭). ಅವರೇ ಬೇರೆ ಕೆಲವು ದೇವತೆಗಳಿಂದ ಸೃಷ್ಟರಾದರು ಎಂತಲೂ ಹೇಳಿದೆ. ಭೂಮ್ಯಾಕಾಶಗಳನ್ನು ಸೃಷ್ಟಿಮಾಡಿದವನು ಅತ್ಯಂತ ಕುಶಲನಾದ ಕೆಲಸಗಾರನಿರಬೇಕು (೧-೧೬೦-೪ ; ೪-೫೬-೩). ಇಂದ್ರನು ಅವರನ್ನು ಸೃಜಿಸಿದನು ಅಥವಾ ರೂಪುಗೊಳಿಸಿದನು (೬-೩೦-೫ ; ೮-೩೬-೪ ; ೧೦-೨೯-೬ ; ೧೦-೫೪-೩). ವಿಶ್ವಕರ್ಮನು ಅವರನ್ನು ರಚಿಸಿದನು (೧೦-೮೧-೨; ಅ. ವೇ. ೧೨-೧-೬೦ನ್ನು ಹೋಲಿಸಿ). ಅವರು ತ್ವಷ್ಟೃವಿನಿಂದ ದೇಹವನ್ನು ಪಡೆದರು (೧೦-೧೧೦-೯). ಅವರು ಕ್ರಮವಾಗಿ ವಿರಾಟ್ಪುರುಷನ ತಲೆ ಮತ್ತು ಪಾದಗಳಿಂದ ಜನಿಸಿದರು (೧೦-೯೦-೧೪). ಅವರಿಬ್ಬರು ಹೇಗೆ ಉತ್ಪನ್ನರಾದರು? ಅವರಿಬ್ಬರಲ್ಲಿ ಮೊದಲು ಯಾರು ಹುಟ್ಟಿದರು? ಎಂದು ಒಂದು ಕಡೆ ಇದೆ (೧-೧೮೫-೧). ದ್ಯಾವಾಪೃಥಿವಿಗಳ ವಿಶೇಷಣಗಳಲ್ಲಿ ಅನೇಕ ಅವರ ಭೌತಿಕ ಲಕ್ಷಣಗಳಿಂದ ಬಂದವು. ಒಬ್ಬನು ದೊಡ್ಡವೃಷಭ, ಮತ್ತೊಬ್ಬಳು ನಾನಾ ವರ್ಣದ ಹಸು (೧-೧೬೦-೩). ಇಬ್ಬರೂ ಭೂರಿರೇತಸ್ಕರು (೧-೧೫೯-೨; ೬-೭೦-೧, ೨). ಇಬ್ಬರೂ ಹಾಲು, ತುಪ್ಪ, ಜೇನುತುಪ್ಪ ಇವುಗಳನ್ನು ಹೇರಳವಾಗಿ ದೋಹನ ಮಾಡುತ್ತಾರೆ ೬-೭೦-೧ರಿಂದ ೫) ಮತ್ತು ಅಮೃತವನ್ನು ಉತ್ಪತ್ತಿಮಾಡುತ್ತಾರೆ (೧-೧೫೯-೨ ; ೧-೧೮೫-೬). ಅವರು ಮುದುಕರಾಗುವುದೇ ಇಲ್ಲ (೬-೭೦-೧). ಅವರು ಮಹನೀಯರು (೧-೧೫೯-೧) ಮತ್ತು ವಿಸ್ತಾರವಾಗಿರುವವರು (೧-೧೬೦-೨). ಅಗಲವಾದ ಮತ್ತು ದೊಡ್ಡ ವಾಸ್ಥಳಗಳು (೧-೧೮೫-೬). ಮನೋಹರವಾದ ಮುಖವುಳ್ಳವರು, ವಿಸ್ತೃತರು, ನಾನಾ ರೂಪಿಗಳು (೧-೧೮೫-೬, ೭). ಒಂದೊಂದು ಸಲ ನೈತಿಕಗುಣಗಳೂ ಉಕ್ತವಾಗುತ್ತವೆ. ಜ್ಞಾನಿಗಳು, ಧರ್ಮವನ್ನು ಪ್ರೋತ್ಸಾಹಿಸುತ್ತಾರೆ (೧-೧೫೯-೧). ತಂದೆ ತಾಯಿಗಳಾದ ಇವರು ಜೀವಿಗಳನ್ನು ರಕ್ಷಿಸುತ್ತಾರೆ (೧-೧೬೦-೨) ಮತ್ತು ಅವರಿಗೆ ಅವಮಾನ ಮತ್ತು ದೌರ್ಭಾಗ್ಯಗಳು ಆಗದಂತೆ ನೋಡಿಕೊಳ್ಳುತ್ತಾರೆ (೧-೧೮೫-೧೦). ಆಹಾರ ಮತ್ತು ಐಶ್ವರ್ಯಗಳನ್ನು (೬-೭೦-೬ ; ೧-೧೫೯-೫) ಅಥವಾ ಯಶಸ್ಸು ಮತ್ತು ಅಧಿಕಾರಗಳನ್ನು (೧-೧೬೦-೫) ಅನುಗ್ರಹಿಸುತ್ತಾರೆ. ಯಾಗದಲ್ಲಿ ನಾಯಕರು; ಯಜ್ಞ



CC-0. Jangamwadi Math Collection. Digitized by eGangotri

ಕುಂಡದ ಸುತ್ತಲೂ ಕುಳಿತಿರುತ್ತಾರೆ (೪-೫೬-೨, ೭) ; ಸ್ವರ್ಗದ ಇತರ ಪ್ರಜೆಗಳೊಡನೆ ಯಾಗಕ್ಕೆ ಬರುತ್ತಾರೆ (೭-೫೩-೨) ಅಥವಾ ದೇವತೆಗಳಿಗೆ ಯಾಗ ಭಾಗಗಳನ್ನು ತೆಗೆದುಕೊಂಡು ಹೋಗಿ ಸೇರಿಸುತ್ತಾರೆ (೨-೪೧-೨೦). ಆದರೆ ಯಾಗಗಳಲ್ಲಿ ಇತರ ದೇವತೆಗಳಷ್ಟು ಮುಖ್ಯಸ್ಥಾನವಿಲ್ಲ. ಈ ಇಬ್ಬರು ದೇವತೆಗಳಿಗೂ ಸಮಾನ ಸ್ಥಾನ ಮಾನಗಳು. ಬೇರೆ ದೇವತಾಯುಗ್ಮಗಳಲ್ಲಿ, ಒಂದು ದೇವತೆಗೇ ಹೆಚ್ಚು ಪ್ರಾಮುಖ್ಯತೆ. ಆ ದೇವತೆಯ ಅನೇಕ ಗುಣಗಳೇ ಇನ್ನೊಂದು ದೇವತೆಯಲ್ಲಿಯೂ ಕಂಡುಬರುತ್ತವೆ. ಉದಾಹರಣೆಗಾಗಿ, ಇಂದ್ರ-ಅಗ್ನಿಗಳಿಬ್ಬರೂ ವಜ್ರಾಯುಧಧಾರಿಗಳು ಮತ್ತು ವೃತ್ರನನ್ನು ಕೊಂದವರು. ಅಪರೂಪವಾಗಿ, ಅಮುಖ್ಯದೇವತೆಯ ಗುಣವು ಮುಖ್ಯದೇವತೆಗೂ ಉಕ್ತವಾಗುತ್ತದೆ. ಇಂದ್ರಾ ವಿಷ್ಣುಗಳಿಬ್ಬರೂ ದೂರದೂರ ಹೆಜ್ಜೆಗಳನ್ನಿಟ್ಟರು (೬-೬೯-೫). ಈ ರೀತಿ ಪದೇಪದೇ ಹೇಳುವುದರಿಂದ, ದೇವತೆಯಲ್ಲಿ ಸ್ವಾಭಾವಿಕವಾಗಿ ಕಂಡು ಬರದೇ ಇದ್ದ ಗುಣವೂ ಆ ದೇವತೆಗೆ ವಾಚ್ಯವಾಗುತ್ತದೆ. ಹೀಗೆಯೇ, ಅಗ್ನಿಯು ವೃತ್ರನನ್ನು ಕೊಂದನೆಂದು ಹೇಳಿರುವುದು. ಕೆಲವು ವಾಕ್ಯಗಳಲ್ಲಿ ಅವರವರ ಗುಣಗಳು ಪ್ರತ್ಯೇಕವಾಗಿಯೂ ಹೇಳಲ್ಪಡುತ್ತವೆ.

ದ್ಯಾವಾಪೃಥಿವಿಗಳನ್ನು ಬಿಟ್ಟರೆ, ಮುಖ್ಯವಾದ ದೇವತಾದ್ವಂದ್ವವೆಂದರೆ- ಮಿತ್ರಾವರುಣರು. ಅವರಿಬ್ಬರಿಗೂ ಪ್ರತ್ಯೇಕವಾಗಿ ಉಕ್ತವಾಗಿರುವ ಸೂಕ್ತಸಂಖ್ಯೆಗಿಂತ, ಈ ಜೋಡಿಯನ್ನು ಹೊಗಳುವ ಸೂಕ್ತ ಸಂಖ್ಯೆಯೇ ಹೆಚ್ಚು. ಮಿತ್ರನ ವೈಯಕ್ತಿಕ ಗುಣಗಳು ಬಹಳ ಕಡಿಮೆ ಅಥವಾ ಇಲ್ಲವೇ ಇಲ್ಲವೆನ್ನಬಹುದು. ಆದುದರಿಂದ, ವರುಣನ ವಿಶೇಷ ಲಕ್ಷಣಗಳೆಲ್ಲ, ಮಿತ್ರಾವರುಣಯುಗ್ಮಕ್ಕೆ ಹೇಳಿದೆ. ವರುಣದೇವತೆಯ ವಿಷಯವನ್ನು ವಿಸ್ತಾರವಾಗಿ ಪ್ರಸ್ತಾಪಿಸಿದ ಮೇಲೆ ಈ ಜೋಡಿಯ ವಿಷಯವನ್ನು ಹೇಳುವುದೇ ಅನವಶ್ಯಕ. ಅವರಿಬ್ಬರೂ ಯುವಕರು(೩-೫೪-೧೦ ;೭-೬೨-೫). ಇತರ ಅನೇಕ ದೇವತೆಗಳಂತೆ, ಇವರೂ ಹೊಳೆಯುತ್ತಿರುತ್ತಾರೆ, (ಚಂದ್ರಾ), ಶುಚಿಯಾಗಿರುತ್ತಾರೆ (ಶುಚೀ), ಸೂರ್ಯನಂತೆ ಇರುತ್ತಾರೆ. ಮಾಸಲು ಕೆಂಪುವರ್ಣದವರು ಮತ್ತು ಘೋರರು. ಈ ಜೋಡಿಯಲ್ಲಿ ಯಾವಾಗಲೂ ಮೊದಲನೆಯ ಪದವು ಮಿತ್ರನೇ ಆಗಿರುವುದನ್ನು ನೋಡಿದರೆ, ಮಿತ್ರನೇ ಮುಖ್ಯದೇವತೆಯಾಗಿದ್ದು, ಕಾರಣಾಂತರದಿಂದ ಈಗ ಅಮುಖ್ಯದೇವತೆಯಾಗಿರಬಹುದು. ಅಥವಾ ಕಡಿಮೆ ಅಕ್ಷರವಿರುವ ಪದವನ್ನು ಸಮಸ್ತಪದದ ಆದಿಯಲ್ಲಿ ಹಾಕುವುದು ರೂಢಿಯಲ್ಲಿದ್ದಿರಬಹುದು.

ಇಂದ್ರಾವರುಣರು ಜಗನ್ನಾಯಕರು (೧-೧೭-೧); ನೀರು ಹರಿಯುವುದಕ್ಕೋಸ್ಕರ ಕಾಲುವೆಗಳನ್ನು ತೋಡಿದರು ಮತ್ತು ಅಂತರಿಕ್ಷದಲ್ಲಿ ಸೂರ್ಯನು ಚಲಿಸುವಂತೆ ಮಾಡಿದರು (೭-೮೨-೩). ವೃತ್ರಾಸುರನನ್ನು ನಿರ್ನಾಮ ಮಾಡಿದವರು ಅವರು(೬-೬೮-೨); ಯುದ್ಧದಲ್ಲಿ ಸಹಾಯ ಮಾಡುತ್ತಾರೆ (೪-೪೧-೧೧); ಮತ್ತು ಜಯವನ್ನು ಅನುಗ್ರಹಿಸುತ್ತಾರೆ (೧-೧೭-೭). ದುಷ್ಟರಮೇಲೆ ತಮ್ಮ ಪ್ರಚಂಡವಾದ ವಜ್ರಾಯುಧವನ್ನು ಪ್ರಯೋಗಿಸುತ್ತಾರೆ (೪-೪೧-೪). ರಕ್ಷಣೆ, ಅಭಿವೃದ್ಧಿ (೧-೧೭-೭, ೮), ಕೀರ್ತಿ, ಐಶ್ವರ್ಯ, ಅಸಂಖ್ಯಾತವಾದ ಅಶ್ವಗಳು (೪-೪೧-೨, ೧೦ ; ೬-೬೮-೮), ಇವುಗಳನ್ನು ದಯಪಾಲಿಸುತ್ತಾರೆ. ಸುತವಾದ ಸೋಮವನ್ನು ಪಾನಮಾಡುತ್ತಾರೆ; ಅವರ ರಥವು ಯಾಗಕ್ಕೆ ಬರುತ್ತದೆ; ಕುಶಾಸನದಲ್ಲಿ ಕುಳಿತು, ಸೋಮಪಾನಮಾಡಿ ತೃಪ್ತರಾಗಬೇಕೆಂದು ಪ್ರಾರ್ಥಿಸಿದೆ (೬-೬೮-೧೦, ೧೧). ಇನ್ನು ಕೆಲವು ವಾಕ್ಯಗಳಲ್ಲಿ, ಇಬ್ಬರ ವೈಯಕ್ತಿಕ ಲಕ್ಷಣಗಳನ್ನೂ ಪ್ರತ್ಯೇಕವಾಗಿ ಹೇಳುತ್ತಾರೆ. ಆರಾಧಕರ ಮೇಲೆ ಕೋಪಮಾಡಬಾರದೆಂದು ವರುಣನನ್ನೂ, ತಮಗೆ ವಿಸ್ತಾರವಾದ ಪ್ರದೇಶವನ್ನು ದೊರಕಿಸಬೇಕೆಂದು ಇಂದ್ರನನ್ನೂ ಪ್ರಾರ್ಥಿಸುತ್ತಾರೆ (೭-೮೪-೨). ಇಂದ್ರನು ಯುದ್ಧಪ್ರಿಯನಾದ ದೇವತೆ, ವೃತ್ರಾಸುರನನ್ನು ವಧಿಸುತ್ತಾನೆ, ಆದರೆ ಇದಕ್ಕೆ ವಿರುದ್ಧವಾಗಿ, ವರುಣನು ಮನುಷ್ಯರಿಗೆ ಜ್ಞಾನ ಮತ್ತು ಶಾಂತಿಪ್ರದನಾಗಿದಾನೆ (೬-೬೮-೩ ;೭-೮೨-೫, ೬ ; ೭-೮೫-೩). ಇಂದ್ರ ಮತ್ತು ಅಗ್ನಿಗಳ ಸಂಬಂಧವು ಬಹಳ ಗಾಢವಾ



CC-0. Jangamwadi Math Collection. Digitized by eGangotri

ಪುದು; ಇಂದ್ರಾಗ್ನಿಗಳ ದ್ವಂದ್ವವನ್ನು ಸ್ತುತಿಸುವಷ್ಟು ಸೂಕ್ತಗಳು, ಇಂದ್ರ ಮತ್ತು ಇನ್ಯಾವ ದೇವತೆಯ ಜೋಡಿಯನ್ನೂ ಸ್ತುತಿಸುವುದಿಲ್ಲ. ಅದೂ ಅಲ್ಲದೆ ಅಗ್ನಿಯು ಇಂದ್ರನ ಜೊತೆಯಲ್ಲಿ ಬಿಟ್ಟರೆ, ಬೇರೆ ದೇವತೆಗಳೊಡನೆ ದ್ವಂದ್ವವಾಗಿ ಪರಿಗಣಿತನಾಗಿರುವದೇ ಅಪರೂಪ; ಅಗ್ನೀಸೋಮರನ್ನು ಒಂದು ಸೂಕ್ತ ಮತ್ತು ಎರಡು ಮಂತ್ರಗಳಲ್ಲಿಯೂ, ಅಗ್ನೀಪರ್ಜನ್ಯರನ್ನು ಒಂದು ಮಂತ್ರದಲ್ಲಿಯೂ ಸ್ತುತಿಸಿದೆ. ಸೋಮಪಾನ ಮಾಡುವವರಿಗೆಲ್ಲಾ ಇಂದ್ರ-ಅಗ್ನಿಗಳೇ ಅಗ್ರಗಣ್ಯರು (೧-೨೧-೧); ಸೋಮಪಾನ ಮಾಡುವುದಕ್ಕಾಗಿ, ತಮ್ಮ ರಥದಲ್ಲಿ ಬರುತ್ತಾರೆ (೧-೧೦೮-೧). ಇಬ್ಬರೂ ಒಟ್ಟಿಗೆ ಬಂದು ಪಾನಮಾಡಬೇಕು (೭-೯೩-೬ ; ೮-೩೮-೪, ೭,೮,೯); ಕುಶಾಸನದಲ್ಲಿ ಸುಖಾಸೀನರಾಗಿ, ಸುತವಾದ ಸೋಮವನ್ನು ಯಥೇಚ್ಛವಾಗಿ ಪಾನಮಾಡಿ, ಮತ್ತರಾಗಬೇಕೆಂದು (೧-೧೦೯-೫) ಆಹ್ವಾನ. ಅವರಿಬ್ಬರೂ ಮಿಲಿತರಾಗಿಯೇ ವೃತ್ರವಧ ಮಾಡುತ್ತಾರೆ ಎಂದು ಹೇಳಿದೆ. ಅವರು ವಜ್ರಾಯುಧಧಾರಿಗಳು (೬-೫೯-೩ ; ಇತ್ಯಾಧಿ,) ಅವರ ಸಿಡಿಲು ಬಹಳ ತೀಕ್ಷ್ಣವಾದುದು (೫ ೮೬-೩). ಅವರು ಒಟ್ಟಾಗಿ ಸೇರಿ ತೊಂಬತ್ತೊಂಬತ್ತು ಕೋಟೆಗಳನ್ನುರುಳಿಸಿದರು (೩-೧೨-೬) ಮತ್ತು ಯುದ್ಧದಲ್ಲಿ ಅವರನ್ನು ಎದುರಿಸಲ್ಾಗುವುದಿಲ್ಲ (೫-೮೬-೨). ನಿರುದ್ಧವಾಗಿದ್ದ ನದಿಗಳನ್ನು ಬಿಡುಗಡೆ ಮಾಡಿದರು (೮-೪೮-೩) ಮತ್ತು ಜೊತೆಯಾಗಿಯೇ ಇನ್ನೂ ಅನೇಕ ಪರಾಕ್ರಮ ಕಾರ್ಯಗಳನ್ನು ಮಾಡಿದಾರೆ (೧-೧೦೮-೫). ಅವರು ಉದಾರಿಗಳು (೫-೮೬-೩). ಈ ಮೇಲೆ ಹೇಳಿರುವವುಗಳೆಲ್ಲವೂ ಇಂದ್ರನ ವೈಶಿಷ್ಟ್ಯಗಳು ಇಂದ್ರ ಅಗ್ನಿಗಳು ಯಾಗದ ಇಬ್ಬರು ಋತ್ವಿಜರೆನ್ನಿಸಿಕೊಳ್ಳುತ್ತಾರೆ (೮-೩೮-೧) ಮತ್ತು ಜ್ಞಾನಿಗಳು (೮-೪೦-೩). ಅವರೇ ಮನೆಯ ಯಜಮಾನರು ಮತ್ತು ಪಿಶಾಚಗಳನ್ನು ಓಡಿಸುತ್ತಾರೆ (೧-೨೧-೫). ಈ ಗುಣಗಳು ಅಗ್ನಿಗೆ ಸಲ್ಲುತ್ತವೆ ಎನ್ನುವುದೇ ಸೂಕ್ತವಾಗಿದೆ. ಅವರಿಬ್ಬರು ಒಬ್ಬತಂದೆಯ ಮಕ್ಕಳು ಮತ್ತು ಯಮಳರು (೬-೫೯-೨). ಈ ಸಮೀಪ ಬಾಂಧವ್ಯದಿಂದಲೇ ಇರಬೇಕು, ಅವರನ್ನು ಒಂದು ಸಲ ಅಶ್ವಿನಿಗಳು ಎಂದು ಕರೆದಿರುವುದು (೧-೧೦೯-೪). ಅವರು ಆಹಾರ, ಐಶ್ವರ್ಯ, ಬಲ, ಗೋವುಗಳು ಮತ್ತು ಎಲ್ಲವನ್ನೂ ಅನುಗ್ರಹಿಸುತ್ತಾರೆ (೪-೬೦-೧೩, ೧೪), ಭೂವ್ಯಾಕಾಶಗಳು, ನದಿಗಳು, ಮತ್ತು ಪರ್ವತಗಳು, ಎಲ್ಲಕ್ಕಿಂತಲೂ ಮಿಗಿಲಾದವರು (೧-೧೦೯-೬). ಇವರಿಬ್ಬರಿಗೂ ಇರುವ ಒಂದು ವ್ಯತ್ಯಾಸ, ವನ್ನು ಒಂದುಕಡೆ ಹೇಳಿದೆ; ಆದರೆ ಅಲ್ಲಿ ದ್ವಂದ್ವದೇವತೆಯನ್ನು ಉದ್ದೇಶಿಸಿ ಹೇಳಿಲ್ಲ. ಇಂದ್ರನು ದಸ್ಯುಗಳನ್ನು ಕೊಂದರೆ, ಅಗ್ನಿಯು ಅವರನ್ನು ಸುಡುತ್ತಾನೆ (೬-೨೮-೪). ಇಂದ್ರ ಬೃಹಸ್ಪತಿಗಳನ್ನು ಹೊಗಳಿರುವುದು ಎರಡೇ ಸೂಕ್ತಗಳಲ್ಲಿ (೪-೪೯ ; ೭-೯೭); ಅಲ್ಲಿ, ಮುಖ್ಯವಾಗಿ ಸೋಮಪಾನಕ್ಕೆ ಆಹ್ವಾನವೂ, ಅಶ್ವಾದಿಯುಕ್ತವಾದ ಸಂಪದನುಗ್ರಹ ಮತ್ತು ಭಕ್ತಿಯ ಅಭಿವೃದ್ಧಿಯೂ ಪ್ರಸಕ್ತವಾಗಿವೆ. ಇಂದ್ರ ವಾಯುಗಳ ವಿಷಯದಲ್ಲಿ, ಸೋಮಪಾನಕ್ಕಾಗಿ ಸತತವಾದ ಆಹ್ವಾನ ಹೊರತು, ಬೇರೆ ಏನೂ ಹೇಳಿಲ್ಲ (೧-೨೩-೧, ೨ ; ಇತ್ಯಾದಿ) ತಮ್ಮ ಅಶ್ವಗಳೊಡನೆ (೪-೪೭-೨, ೩, ೪) ಅಥವಾ ಸುವರ್ಣಾಸನವುಳ್ಳ ರಥದಲ್ಲಿ (೪-೪೬-೪) ಬಂದು, ಯಾಗಶಾಲೆಯಲ್ಲಿರುವ ಕುಶಾಸನದ ಮೇಲೆ ಮಂಡಿಸುತ್ತಾರೆ (೭-೯೧-೪). ಅವರು ಸಹಸ್ರಾಕ್ಷರು ಮತ್ತು ಬುದ್ಧಿಗೆ (೧-೨೩-೩) ಮತ್ತು ಬಲಕ್ಕೆ (೪-೪೭-೩) ಅಧಿಪತಿಗಳು. ಯುದ್ಧದಲ್ಲಿ ಸಹಾಯ ಮಾಡುತ್ತಾರೆ (೭-೯೨-೪) ಮತ್ತು ಗೋ, ಅಶ್ವ, ಹಿರಣ್ಯರೂಪವಾದ ಸಂಪತ್ತನ್ನು ಕೊಡುತ್ತಾರೆ (೭-೯೦-೬). ಇಂದ್ರ-ಸೋಮರು ಇಂದ್ರನ ವಿಶೇಷ ಲಕ್ಷಣಗಳಿಂದ ಸಾಹಸಕಾರ್ಯಗಳನ್ನು ಮಾಡುತತ್ತರೆ ಅಥವಾ ಇಂದ್ರನಿಂದ ಕೃತವಾದ ವಿಶ್ವಸೃಷ್ಟಿ ಸಂಬಂಧವಾದ ಕಾರ್ಯಗಳನ್ನು ಮಾಡುತ್ತಾರೆ. ಮನುಷ್ಯನ ಉಪಯೋಗಕ್ಕೋಸ್ಕರ ನೀರು ಹರಿಯುವಂತೆ ಮಾಡಿದರು; ಏಳು ನದಿಗಳನ್ನು ವಿಮೋಚನ ಮಾಡಿದರು; ಸರ್ಪವನ್ನು ವಧಿಸಿದರು; ಮತ್ತು ಸೂರ್ಯನ ರಥಚಕ್ರವನ್ನು ಕೆಳಕ್ಕಿಳಿಸಿದರು (೪-೨೮-೧, ೨ ; ೬-೭೨-೩). ಅವರು ಮಾಡಿದ ಮಹದುಪಕಾರವೆಂದರೆ, ಶತ್ರುಗಳನ್ನು ನಾಶಮಾಡಿ, ಬಂಡೆಗಳಲ್ಲಿ ಹುದುಗಿಟ್ಟ ಪದಾರ್ಥಗಳನ್ನು ಹೊರಗೆಡಹಿದುದು (೮-೨೮-೪, ೫). ಸೂರ್ಯ ಮತ್ತು ಬೆಳಕುಗಳನ್ನು ಕಂಡುಹಿಡಿ



CC-0. Jangamwadi Math Collection. Digitized by eGangotri

ದುದು. ತಮಸ್ಸನ್ನು ಪರಿಹರಿಸಿದುದು, ಸೂರ್ಯನು ಪ್ರಕಾಶಿಸುವಂತೆ ಮಾಡಿದುದು, ಆಕಾಶವನ್ನು ಬೀಳದಂತೆ ನಿಲ್ಲಿಸಿದುದು ಮತ್ತು ಭೂಮಿಯನ್ನು ಹರಡಿದುದು, ಇವೇ ಅವರು ಸೃಷ್ಟಿಯ ಆದಿಯಲ್ಲಿ ಸಾಧಿಸಿದ ಮಹತ್ಕಾರ್ಯಗಳು (೬–೭೨–೧,೨). ಗೋವುಗಳಲ್ಲಿ ಪಕ್ವವಾದ ಕ್ಷೀರವನ್ನುಂಟುಮಾಡಿದವರೂ ಅವರೇ (೬–೭೨-೪) ಮನುಷ್ಯರಿಗೆ ಜಯಸಾಧಕವಾದ ಶಕ್ತಿಸಾಮರ್ಥ್ಯಗಳನ್ನು ಅನುಗ್ರಹಿಸುತ್ತಾರೆ (೬-೭೨-೫). ಇಂದ್ರ– ವಿಷ್ಣುಗಳು ಸೋಮರಸಕ್ಕೆ ಆಶ್ರಯಸ್ಥಾನೀಯರು; ಮದಪತೀ (ಸೋಮರಸದಿಂದಾಗುವ ಮದಕ್ಕೆ ಒಡೆಯರು) ಎಂದೇ ಅವರಿಗೆ ಹೆಸರು; ಅವರನ್ನು ಅಶ್ವಗಳ ಸಹಿತರಾಗಿ ಬಂದು ಸೋಮಪಾನಮಾಡಿ, ತಮ್ಮ ಹೊಟ್ಟೆಗಳನ್ನು ತುಂಬಿಸಿಕೊಳ್ಳಬೇಕೆಂದು ಆಹ್ವಾನವಿತ್ತಿದಾರೆ. ಸೋಮಪಾನಮಾಡಿ ಮತ್ತರಾಗಿ, ಸಂಚಾರ ಹೊರಟು, ವಾಯುಮಂಡಲವನ್ನು ವಿಸ್ತರಿಸಿ, ಜನಗಳು ವಾಸಮಾಡುವುದಕ್ಕೋಸ್ಕರ, ಭೂ ಪ್ರದೇಶಗಳನ್ನು ವಿಸ್ತಾರ ಪಡಿಸಿದರು. ಸರ್ವದಾ ಜಯಶಾಲಿಗಳಾದ ಇವರಿಬ್ಬರು ಐಶ್ವರ್ಯವನ್ನನುಗ್ರಹಿಸುತ್ತಾರೆ ಮತ್ತು ಕಷ್ಟಗಳಿಂದ ಪಾರುಮಾಡುತ್ತಾರೆ. ಎಲ್ಲಾ ಸ್ತುತಿ ವಾಕ್ಯಗಳಿಗೂ ಮೂಲಭೂತರು; ಆರಾಧಕರ ಸ್ತೋತ್ರಗಳನ್ನು ಲಾಲಿಸಬೇಕೆಂದು ಪ್ರಾರ್ಥಿತರಾಗಿದಾರೆ (೬-೬೯). ಇಂದ್ರ–ಪೂಷಣರು ಒಂದು ಸಣ್ಣ ಸೂಕ್ತದಲ್ಲಿ ಮಾತ್ರ ಸ್ತುತರಾಗಿದಾರೆ(೬–೫೭), ಮತ್ತು ಈ ಇಂದ್ರಾ-ಪೂಷಣ ಎಂಬ ದ್ವಂದ್ವವು ಎರಡೇ ಸಲ ಬಂದಿರುವದು. ಇಂದ್ರನು ನೀರನ್ನು ಹರಿಯುವಂತೆ ಮಾಡಿದಾಗ ಪೂಷಣನು ಅವನ ಜೊತೆಗಾರ. ಪೂಷಣನಿಂದ ಸಹಚರಿತನಾಗಿ, ಇಂದ್ರನು ವೃತ್ರಾಸುರನನ್ನು ವಧಿಸುತ್ತಾನೆ (೬-೫೭-೨). ಅವರಲ್ಲಿ ಒಬ್ಬನು ಸೋಮಪಾನ ಮಾಡುತ್ತಾನೆ, ಅಶ್ವಗಳು ಅವನ ರಥವನ್ನು ಎಳೆಯುತ್ತವೆ ಮತ್ತು ಅವನು ವೃತ್ರಾಸುರನನ್ನು ವಧಿಸುತ್ತಾನೆ; ಮತ್ತೊಬ್ಬನ ರಥಕ್ಕೆ ಮೇಕೆಗಳು ವಾಹಕಗಳು ಮತ್ತು ಅವನು ಪಾನಮಾಡುವುದು ಗಂಜಿಯನ್ನು. ಇಂದ್ರಾ-ಪೂಷಣರ ನಿವಾಸವು ಒಂದು ಕಡೆ (೧-೧೬೨-೨) ಪ್ರಸ್ತಾಪಿಸಲ್ಪಟ್ಟಿದೆ; ಇಲ್ಲಿಗೆ ಒಂದು ಮೇಕೆಯು ಯಜ್ಞಾಶ್ವವನ್ನು ಕರೆದುಕೊಂಡು ಹೋಗುತ್ತದೆ; ಇವರಿಬ್ಬರಿಂದಲೂ ಕ್ಷೇಮ, ಐಶ್ವರ್ಯಾದಿಗಳು ಅಪೇಕ್ಷಿಸಲ್ಪಟ್ಟಿವೆ.

ಸೋಮ-ಪೂಷಣರು (೨-೪೦) ಕತ್ತಲನ್ನು ಓಡಿಸುತ್ತಾರೆ ಮತ್ತು ಏಳು ಚಕ್ರದ ಮತ್ತು ಐದು ಲಗಾಮಿನ ರಥವನ್ನು ವೇಗವಾಗಿ ಓಡಿಸಿ, ಅದರಿಂದ ಆಕಾಶದ ಪರಿಮಿತಿಯನ್ನು ನಿರ್ಧರಿಸಬೇಕೆಂದು ಪ್ರಾರ್ಥಿತರಾಗಿದಾರೆ. ಇವರೇ ಐಶ್ವರ್ಯ ಮತ್ತು ಭೂಮ್ಯಾಕಾಶಗಳನ್ನು ಸೃಷ್ಟಿಮಾಡಿದವರು ಮತ್ತು ಜಗತ್ಪಾಲಕರು (೧೦-೧೭-೩ನ್ನು ಹೋಲಿಸಿ); ಇವರನ್ನು ದೇವತೆಗಳು ನಿತ್ಯತ್ವ ಅಥವಾ ಅಮೃತತ್ವಕ್ಕೆ ಸ್ಥಾನೀಯರನ್ನಾಗಿ ಮಾಡಿದರು. ಇವರಿಗೋಸ್ಕರ ಗೋವುಗಳಲ್ಲಿ ಉತ್ತಮವಾದ ಕ್ಷೀರವನ್ನು ಉಂಟುಮಾಡಬೇಕೆಂದು ಇಂದ್ರನು ಪ್ರಾರ್ಥಿತನಾಗಿದಾನೆ. ಇಬ್ಬರೂ ಒಟ್ಟಾಗಿಯೇ ಇದ್ದು, ಶತ್ರುಗಳ ಮೇಲೆ ಜಯವನ್ನೂ, ಅಪಾರವಾದ ಸಂಪತ್ತು ಮತ್ತು ಆಹಾರಗಳನ್ನೂ ಅನುಗ್ರಹಿಸುತ್ತಾರೆ. ಅವರಿಬ್ಬರಿಗೂ ವ್ಯತ್ಯಾಸವೂ ಇದೆ. ಒಬ್ಬನು ಅಂತರಿಕ್ಷದಲ್ಲಿ ಬಹಳ ಎತ್ತರವಾದ ಪ್ರದೇಶದಲ್ಲಿ ವಾಸಮಾಡಿದರೆ, ಮತ್ತೊಬ್ಬನು ಭೂಮಿ ಅಥವಾ ವಾಯುಮಂಡಲದಲ್ಲಿ ವಾಸಿಸುತ್ತಾನೆ. ಒಬ್ಬನು ಎಲ್ಲಾ ಪ್ರಾಣಿಗಳನ್ನೂ ಸೃಜಿಸಿದನು; ಮತ್ತೊಬ್ಬನು ಎಲ್ಲಾ ಪ್ರಾಣಿಗಳನ್ನೂ ವೀಕ್ಷಿಸುತ್ತಾ, ಸಂಚರಿಸುತ್ತಾನೆ. ಸೋಮ-ರುದ್ರರು (೬-೭೪) ನೆಯ ಸೂಕ್ತದಲ್ಲಿ ಸ್ತುತರಾಗಿದಾರೆ. ಮನೆಯಲ್ಲಿರುವ ರೋಗರುಜಿನಗಳನ್ನು ದೂರ ಓಡಿಸಬೇಕು. ಆರಾಧಕರ ದೇಹಗಳಲ್ಲಿ ಸಮಸ್ತ ಔಷಧಿಗಳೂ ಸರ್ವದಾ ಇರಬೇಕು, ಪಾಪರಹಿತರಾಗಿರಬೇಕು, ಮತ್ತು ವರುಣಪಾಶದಿಂದ ವಿಮೋಚಿತರಾಗಿರಬೇಕು, ಈ ರೀತಿ ಮಾಡಬೇಕೆಂದು ಸೋಮರುದ್ರರು ಪ್ರಾರ್ಥಿತರಾಗುತ್ತಾರೆ. ತೀಕ್ಷ್ಣವಾದ ಆಯುಧಧಾರಿಗಳಾದ ಇವರು ದಯಾಶಾಲಿಗಳಾಗಿರಬೇಕೆಂದೂ ಬೇಡಿದೆ. ನಿರುದ್ಧವಾಗಿದ್ದ ಪ್ರವಾಹಗಳನ್ನು ಬಿಡುಗಡೆ ಮಾಡಿದವರು, ಬೆಳಕನ್ನು ಸಂಪಾದಿಸಿದವರು ಮತ್ತು ಆಕಾಶದಲ್ಲಿ ತೇಜೋರಾಶಿಗಳನ್ನು ಇರಿಸಿದವರೆಂದು ಅಗ್ನಿ-ಸೋಮರು ಹೊಗಳಲ್ಪಟ್ಟಿದಾರೆ. ಆದರೆ ಇವರಿಬ್ಬರ



CC-0. Jangamwadi Math Collection. Digitized by eGangotri

ಮೂಲಸ್ಥಾನದ ವಿಷಯದಲ್ಲಿ ವ್ಯತ್ಯಾಸವಿದೆ. ಒಬ್ಬನನ್ನು ಸ್ವರ್ಗದಿಂದ ತಂದಿತೆಂದೂ ಹೇಳಿದೆ (೧-೯೩). ಅವರಿಬ್ಬರೂ ಮಿಲಿತರಾಗಿಯೇ ಸಹಾಯಮಾಡಬೇಕೆಂದೂ ಮತ್ತು ಗೋವುಗಳು, ಅಶ್ವಗಳು, ಸಂತತಿ, ಆರೋಗ್ಯ, ಸೌಖ್ಯ ನುತ್ತು ಐಶ್ವರ್ಯಗಳನ್ನು ಅನುಗ್ರಹಿಸಬೇಕೆಂದೂ ಕೋರಿಕೆ (೧೦-೧೯-೧ ; ೧೦-೬೬-೭). ಈ ದ್ವಂದ್ವವು ಅಥರ್ವವೇದದಲ್ಲಿ ಅನೇಕಬಾರಿ ಬಂದಿದೆ. ಮೈತ್ರಾಯಣೀ ಸಂಹಿತೆಯಲ್ಲಿ (ಮೈ. ಸಂ.೩-೭-೧), ಇವರಿಬ್ಬರನ್ನೂ ಎರಡುನೇತ್ರಗಳೆಂದಿದಾರೆ. ಶತಪಥಬ್ರಾಹ್ಮಣದಲ್ಲಿ (ಶ. ಬಾ. ೧೧-೧-೬-೧೯), ಇವರಿಬ್ಬರೂ ಸೋದರರು ; ಸೂರ್ಯನು ಅಗ್ನಿಗೆ ಸೇರಿದವನು ಮತ್ತು ಚಂದ್ರನು ಸೋಮನಿಗೆ ಸೇರಿದವನು (ಶ. ಬ್ರಾ. ೧-೬-೩-೨೪), ಯಾಗಗಳಲ್ಲಿ ಅಗ್ನಿ ಸೋಮರಿಗೆ ಸೋಮಭಾಗವೇ ಇಲ್ಲ; ಅವರಿಗೆ ಪುರೋಡಾಶ ಮತ್ತು ಪಶುಗಳನ್ನುಮಾತ್ರ ಅರ್ಪಿಸುತ್ತಾರೆ. ಅಗ್ನೀಸೋಮದ್ವಂದ್ವವು ಯಾಗಗಳಲ್ಲಿ ಪದೇ ಪದೇ ಬರುತ್ತಲೇ ಇರುತ್ತದೆ. ಆದರೆ ವೇದದಲ್ಲಿ ಅವರನ್ನು ಸ್ತುತಿಸುವುದು ಒಂದೇಸೂಕ್ತ (೧-೯೩). ಅದನ್ನು ಬಿಟ್ಟರೆ, ಎರಡೇ ಸಲ, ಆ ಜೋಡಿಯ ಹೆಸರು ಇಡೀ ಋಗ್ವೇದದಲ್ಲಿ ಬಂದಿರುವುದು. ಇಷ್ಟು ಮುಖ್ಯವಾದ ದೇವತಾದ್ವಂದಕ್ಕೆ ಇಷ್ಟು ಅಮುಖ್ಯಸ್ಥಾನವಿರುವುದು ಆಶ್ಚರ್ಯ.

ಇನ್ನು ಕೆಲವು ದೇವತಾದ್ವಂದ್ವಗಳು ಅಲ್ಲೊಂದು ಇಲ್ಲೊಂದು ಮಂತ್ರದಲ್ಲಿ ಸ್ತುತವಾಗಿವೆ. ಅಗ್ನಿ-ಪರ್ಜನ್ಯರು (೬-೫೨-೧೬) ಒಂದು ಮಂತ್ರದಲ್ಲಿ ಹೊಗಳಲ್ಪಟ್ಟಿದಾರೆ. ಆಹಾರ ಮತ್ತು ಸಂತಾನಗಳು ಇಬ್ಬರಿಂದಲೂ ಅಪೇಕ್ಷಿತವಾಗಿವೆ; ಆದರೆ, ಒಬ್ಬನು ಹೋಮವನ್ನೂ (ಇಳಾಂ) ಮತ್ತೊಬ್ಬನು ಗರ್ಭಾಣುವನ್ನೂ (ಗರ್ಭಂ) ಉತ್ಪತ್ತಿಮಾಡಿದರೆಂದು ಹೇಳಿದೆ. ಪರ್ಜನ್ಯ-ವಾತರದು ನಾಲ್ಕು ಮಂತ್ರಗಳಿವೆ. ಭೂಮಿಯಲ್ಲಿರುವ ವೃಷಭರೂಪರಾದ ಇವರು (೬-೪೯-೬) ಆವಿಯನ್ನು ಹೊರಡಿಸುವಂತೆ ಮಾಡಬೇಕೆಂದು ಪ್ರಾರ್ಥಿತರಾಗಿದಾರೆ. - ಇಂದ್ರಾ-ವಾಯು ಮತ್ತು ಇತರ ದೇವತೆಗಳೊಡನೆ, ಇವರನ್ನೂ ಆವಿಯಿಂದ ಕೂಡಿದ ಗೂಳಿಗಳೆಂದು ಕರೆದಿದಾರೆ (೧೦-೬೫-೯). ಈದೇ ರೀತಿಯ ಇನ್ನೊಂದು ದೇವತೆಗಳ ಪಟ್ಟಿಯಲ್ಲಿ, ಇವರು ಅಮಿತವಾದ ಆಹಾರವನ್ನು ಅನುಗ್ರಹಿಸುತ್ತಾರೆ (೬-೫೦-೧೨). ಒಂದು ಕಡೆ (೧೦-೬೬-೧೦ ; ನಿರು. ೭-೧೦ ನ್ನೂ ಹೋಲಿಸಿ), ಗರ್ಜಿಸುವ ಮಹಿಷ (ಪ್ರಾಯಶಃ ದ್ಯುದೇವತೆ) ಕ್ಕೆ ಸಂಬಂಧಿಸಿದವರೆಂದೂ ಹೇಳಿದೆ. ಉಷಸ್ಸು ಮತ್ತು ರಾತ್ರಿಗಳು ಅನೇಕಸಾರಿ ಸ್ತೋತ್ರಮಾಡಲ್ಪಟ್ಟಿದಾರೆ. ವಿಶ್ವೇದೇವತಾಕವಾದ ಸೂಕ್ತಗಳಲ್ಲಿ, ಉಷಸಾ-ನಕ್ತಾ ದೇವತೆಗಳು ಪ್ರತ್ಯೇಕವಾಗಿ ಉಕ್ತರಾಗಿದಾರೆ. ಅವರು ಧನಾಢ್ಯರಾದ ಸ್ತ್ರೀದೇವತೆಗಳು (೨-೩೧-೫ ; ೧೦-೭೧-೬) ; ದೇವಲೋಕದ ಕನ್ಯೆಯರು (೭-೨-೬ ; ೧೦-೧೧೦-೬) ; ಮತ್ತು ಆಕಾಶದ ಪುತ್ರಿಯರು (೫-೪೧-೭ ; ೧೦-೭೦-೬). ಅವರು ಇಬ್ಬರು ಪತ್ನಿಯರಂತಿದಾರೆ (೧-೧೨೨-೨) ಮತ್ತು ಯಥೇಚ್ಛವಾದಷ್ಟು ಕ್ಷೀರವಿದೆ (೨-೩-೬) ತಮ್ಮ ವರ್ಣವನ್ನು ಬದಲಾಯಿಸಿಕೊಳ್ಳುತ್ತಾ ಅವರಿಬ್ಬರೂ ಒಂದೇ ಮಗುವಿಗೆ ಸ್ತನ್ಯವನ್ನು ಕೊಟ್ಟು ಬೆಳೆಸುತ್ತಾರೆ. ಆ ಮಗುವು ಭೂವ್ಯಾಕಾಶಗಳ ಮಧ್ಯೆ ಪ್ರಕಾಶಿಸುತ್ತದೆ. (೧-೯೬-೫) ಅವರಿಬ್ಬರೂ ಸೋದರಿಯರು. ಮನಸ್ಸು ಒಂದೇ ಆದರೂ ಬಣ್ಣ ಮಾತ್ರ ಬೇರೆ ಬೇರೆ. ಇಬ್ಬರ ಸಂಚಾರಮಾರ್ಗವೂ ಒಂದೇ ಮತ್ತು ಅದಕ್ಕೆ ಕೊನೆಯೇ ಇಲ್ಲ. ದೇವತೆಗಳಿಂದ ಉಪದಿಷ್ಟರಾಗಿ ಒಬ್ಬರಾದಮೇಲೊಬ್ಬರು ಚಲಿಸುತ್ತಾರೆ; ಎದುರು ತಾಗುವುದಿಲ್ಲ. ಮತ್ತು ನಿಶ್ಚಲರಾಗಿಯೂ ಇರುವುದಿಲ್ಲ. (೧-೧೧೩-೩) ಅವರಿಬ್ಬರೂ ಋತ (ಸತ್ಯ, ನಿಯಮ, ಯಜ್ಞ) ದ ತಾಯಿಯರು. (೧-೧೪೨-೭ ; ಯಜ್ಞಾಂಗವಾದ ಪ್ರತಿಯೊಂದು ಕರ್ಮವನ್ನೂ ತಮ್ಮ ಕಿರಣಗಳಿಂದ ಬೆಳಗುವಂತೆ ಮಾಡುತ್ತಾರೆ. (೫-೪೧-೭) ಮತ್ತು ಯಜ್ಞಕರ್ಮಗಳನ್ನೂ ಸಾಂಗವಾಗಿ ನೆರವೇರಿಸುತ್ತಾರೆ. (೨-೩-೬) ಉದಾರಿಗಳು, ಮಹಿಳೆಯರು ಮತ್ತು ಕುಶಾಸನದ ಮೇಲೆ ಕುಳಿತಿರುತ್ತಾರೆ (೭-೨-೬) ಮಾಹಾತ್ಮ್ಯೋಪೇತರು ಮತ್ತು ಚೆನ್ನಾಗಿ



CC-0. Jangamwadi Math Collection. Digitized by eGangotri

ಅಲಂಕೃತರು (೧೦-೩೬-೧ ; ೧೦-೧೧೦-೬ ; ೧-೧೩-೭ ; ೧-೧೪೨-೭). ಒಬ್ಬರಾದನಂತರ ಒಬ್ಬರು ಪ್ರಕಾಶಿ ಸುತ್ತಾ, ಎಲ್ಲಾ ಪ್ರಾಣಿಗಳನ್ನು ಜಾಗೃತರನ್ನಾಗಿ ಮಾಡುತ್ತಾರೆ (೨-೩೧-೫). ಸೂರ್ಯ ಮತ್ತು ಚಂದ್ರರು, ಸೂರ್ಯಮಾಸಾ ಎಂಬುದಾಗಿ ಐದು ಸಲವೂ, ಸೂರ್ಯಾಚಂದ್ರಮಾಸಾ ಎಂಬುದಾಗಿ ಮೂರು ಸಲವೂ ಹೇಳಲ್ಪಟ್ಟಿದಾರೆ. ಅನೇಕ ಸಂದರ್ಭಗಳಲ್ಲಿ, ನಮಗೆ ಕಾಣಿಸುವ ತೇಜಃಪುಂಜವಾದ ಮಂಡಲಗಳೇ ಅಭಿಪ್ರೇತವೆಂದು ಕಾಣುತ್ತದೆ. ನಮಗೆ ಕಾಣಿಸುವುದಕ್ಕೋಸ್ಕರ, ಅವು ಒಂದಾದ ಮೇಲೊಂದು ಚಲಿಸುತ್ತವೆ (೧-೧೦೨-೨). ಸೂರ್ಯಚಂದ್ರರು ಒಬ್ಬರಾದ ಮೇಲೊಬ್ಬರು ಚಲಿಸುವುದು ಬೃಹಸ್ಪತಿಯ ಆಜ್ಞಾನುಸಾರವಾಗಿ (೧೦-೬೮-೧೦). ಸೃಷ್ಟಿಕರ್ತನು ಸೂರ್ಯಚಂದ್ರರ ಆಕೃತಿಗಳನ್ನು ರಚಿಸಿದನು (೧೦-೧೯೦-೩). ಸೂರ್ಯಚಂದ್ರರಂತೆ ನಾವು ನಮ್ಮ ಕ್ಲಪ್ತ ಮಾರ್ಗಗಳಲ್ಲಿ ಸಂಚರಿಸೋಣ ಎಂದು ಒಂದು ಕಡೆ ಇದೆ (೫-೫೧-೧೫). ಇತರ ದೇವತೆಗಳ ಜೊತೆಯಲ್ಲಿ ಹೊಗಳಲ್ಪಟ್ಟಾಗ, ಅವರು ದೇವತೆಗಳೆಂಬ ಭಾವನೆ ಇದ್ದಂತೆ ಇದೆ (೧೦-೬೪-೩; ೧೦-೯೨-೧೨; ೧೦-೯೩-೫). ಕೆಲವು ವಾಕ್ಯಗಳಲ್ಲಿ ಸೂರ್ಯಚಂದ್ರಯುಗ್ಮದ ಹೆಸರು ಸ್ಪಷ್ಟವಾಗಿಲ್ಲದಿದ್ದರೂ, ಅವರಿಬ್ಬರನ್ನು ಉದ್ದೇಶಿಸಿಯೇ ಹೇಳಿರುವಂತೆ ತೋರುತ್ತದೆ. ಆ ಇಬ್ಬರೂ, ಮಕ್ಕಳಂತೆ, ಯಾಗದ ಸುತ್ತಲೂ ತಿರುಗುತ್ತಾರೆ; ಒಬ್ಬನು ಎಲ್ಲಾ ಪ್ರಾಣಿಗಳನ್ನೂ ನೋಡುತ್ತಾನೆ; ಇನ್ನೊಬ್ಬನು ಋತುಗಳನ್ನು ನಿಯಮ ಮಾಡುತ್ತಾ ಪುನಃ ಜನಿಸುತ್ತಾನೆ (೧೦-೮೫-೧೮). ವರುಣನ ಎರಡು ಕಾಂತಿಯುಕ್ತವಾದ ಕಣ್ಣುಗಳು (೮-೪೧-೯), ಮತ್ತು ಅಸುರರಿಂದ ರಚಿತವಾದ ಆಕಾಶದ ಎರಡು ಕಣ್ಣುಗಳು (೧-೭೨-೧೦) ಈ ಎರಡು ಸಂದರ್ಭಗಳಲ್ಲಿಯೂ ಸೂರ್ಯಚಂದ್ರರೇ ಅಭಿಪ್ರೇತರಿರಬೇಕು.

## ದೇವತಾಗಣಗಳು.

ಯಾವುದಾದರೂ ಒಂದು ಪ್ರಮುಖದೇವತೆಗೆ ಸಂಬಂಧಪಟ್ಟಿರುವ ಕೆಲವು ದೇವತಾಗಣಗಳು ರೂಢಿಯಲ್ಲಿವೆ. ಇವುಗಳಲ್ಲಿ ಮುಖ್ಯವಾದುದು ಮರುದ್ಗಣ. ಈ ಗಣದಲ್ಲಿ ಇರುವ ದೇವತೆಗಳ ಸಂಖ್ಯೆ, ಋಗ್ವೇದದಲ್ಲಿರುವಂತೆ, ಇಪ್ಪತ್ತೊಂದರಿಂದ ಒಂದುನೂರ ಎಂಬತ್ತರವರೆಗೂ ಇದೆ (೮-೮೫-೮ ; ೧-೧೩೩-೬) ಮತ್ತು ಹಿಂದೆಯೇ ಹೇಳಿರುವಂತೆ, ಸರ್ವದಾ, ಇಂದ್ರನಿಗೆ ಅವನ ಸಾಹಸಕರ್ಮಗಳಲ್ಲಿ ಸಹಾಯಕರಾಗಿರುತ್ತಾರೆ. ಇದೇ ಗಣಕ್ಕೆ ಒಂದೊಂದು ಸಲ, ಅವರ ತಂದೆಯಾದ ರುದ್ರನ ಹೆಸರಿನ ಮೇಲೆ ರುದ್ರರೆಂದು ಹೇಳುವುದೂ ಉಂಟು (೭-೧೦-೪ ; ೭-೩೫-೬). ಬ್ರಾಹ್ಮಣಗಳಲ್ಲಿ ರುದ್ರರು ಎಂಬುವರು ಬೇರೆ ಒಂದು ಗಣ. ಈ ಗಣದಲ್ಲಿ ಹನ್ನೊಂದು ಐ. ಬ್ರಾ. ಮತ್ತು ಶ. ಬ್ರಾ.) ಅಥವಾ ಮೂವತ್ತುಮೂರು (ತೈ. ಸಂ. ೧-೪-೧೧-೧) ದೇವತೆಗಳಿದಾರೆ. ಆದಿತ್ಯರು ಇದಕ್ಕಿಂತ ಚಿಕ್ಕ ಗಣ. ಇದರಲ್ಲಿಏಳು ಅಥವಾ ಎಂಟು ಜನ (೯-೧೧೪-೩; ೧೦-೭೨-೮) ; ಆದರೆ ಬ್ರಾಹ್ಮಣಗಳಲ್ಲಿ ಇದೇ ಗಣದಲ್ಲಿರುವ ದೇವತಾಸಂಖ್ಯೆ ಹನ್ನೆರಡು. ಋಗ್ವೇದದಲ್ಲಿ ಯಾವಾಗಲೂ ತಾಯಿಯಾದ ಅದಿತಿ (೭-೧೦-೪) ಅಥವಾ ಅವರ ಮುಖಂಡನಾದ ವರುಣನ (೭-೩೫-೬) ಜೊತೆಯಲ್ಲಿಯೇ ಇರುತ್ತಾರೆ. ಮರುದ್ಗಣಕ್ಕಿಂತಲೂ, ಈ ಆದಿತ್ಯರ ಗಣವು ಹೆಚ್ಚು ಸ್ಪಷ್ಟವಾಗಿದೆ. ಆದಿತ್ಯಗಣದಲ್ಲಿ ಪ್ರತಿಯೊಂದು ದೇವತೆಗೂ ಒಂದೊಂದು ಪ್ರತ್ಯೇಕವಾದ ನಾಮವಿದೆ. ಋಗ್ವೇದದಲ್ಲಿ ಅನೇಕ ಸಲ ಪ್ರಸಕ್ತವಾಗುವ ಮತ್ತೊಂದು ವಸುಗಳೆಂಬ ಗುಂಪಿದೆ. ಮರುತ್ ಮತ್ತು ಆದಿತ್ಯಗಣಗಳಿಗಿಂತ, ಈಗಣವು ಅಸ್ಪಷ್ಟ. ಒಂದು ವಾಕ್ಯದಲ್ಲಿ, ಅದಿತಿ ಅಥವಾ ವರುಣನೊಡನೆ ಆದಿತ್ಯರೂ, ರುದ್ರನೊಡನೆ ರುದ್ರರೂ ಸ್ತುತರಾಗುವಂತೆ, ಇಂದ್ರನೊಡನೆ ವಸುಗಳೂ ಸ್ತುತರಾಗಿದಾರೆ (೭-೧೦-೪ ; ೭-೩೫-೬). ಆದರೆ ಇತರ ವೇದಗಳು ಮತ್ತು ಬ್ರಾಹ್ಮಣಗಳಲ್ಲಿ, ಇದರಿಂದ ವಸುಗಳಿಗೆ ಇಂದ್ರನು ಮುಖಂಡನೆನ್ನಬಹುದು.





CC-0. Jangamwadi Math Collection. Digitized by eGangotri

ಅಗ್ನಿಯೇ ವಸುಗಣದ ಮುಖಂಡನು. ಐತರೇಯ ಮತ್ತು ಶತಪಥ ಬ್ರಾಹ್ಮಣಗಳಲ್ಲಿ, ಇವರ ಸಂಖ್ಯೆ ಎಂಟು ; ಆದರೆ ತೈತ್ತಿರೀಯ ಸಂಹಿತೆಯಲ್ಲಿ (ತೈ.ಸಂ. ೫-೫-೨-೫), ಅವರು ೩೩೩ ಜನ. ಆದಿತ್ಯ, ರುದ್ರ ಮತ್ತು ವಸುಗಣಗಳು ಮೂರೂ, ಒಟ್ಟಾಗಿ ಕೆಲವು ಕಡೆ ಸ್ತುತವಾಗಿವೆ (೨-೩೧-೧ ; ೧೦-೬೬-೧೨; ೭-೧೦-೪ ಮತ್ತು ೭-೩೫-೬ ಗಳನ್ನು ಹೋಲಿಸಿ). ಈ ಮೂರು ಗಣಗಳಿಗೂ ಬ್ರಾಹ್ಮಣಗಳಲ್ಲಿ ಈರೀತಿ ವ್ಯತ್ಯಾಸವನ್ನು ಕಲ್ಪಿಸಿದಾರೆ. ಪೃಥ್ವಿಯಲ್ಲಿ ವಸುಗಳೂ, ವಾಯುವಿನಲ್ಲಿ ರುದ್ರರೂ, ಸ್ವರ್ಗದಲ್ಲಿ ಆದಿತ್ಯರೂ ಇದಾರೆ (ಶ. ಬ್ರಾ. ೧-೩-೪-೧೨ ; ೪-೩-೫-೧). ಛಾಂದೋಗ್ಯೋಪನಿಷತ್ತಿನಲ್ಲಿ (೩-೬ರಿಂದ ೧೦) ಐದು ಗಣಗಳು ಹೇಳಲ್ಪಟ್ಟಿವೆ. ವಸುಗಳು ಅಗ್ನಿಯೊಡನೆಯೂ, ರುದ್ರರು ಇಂದ್ರನೊಡನೆಯೂ, ಆದಿತ್ಯರು ವರುಣನೊಡನೆಯೂ, ಮರುತರು ಸೋಮನೊಡನೆಯೂ ಮತ್ತು ಸಾಧ್ಯರು ಬ್ರಹ್ಮನೊಡನೆಯೂ ಸೇರಿಸಲ್ಪಟ್ಟಿದಾರೆ (೧೦-೯-೭, ೧೬ನ್ನು ಹೋಲಿಸಿ). ಸ್ವಲ್ಪ ಹೆಚ್ಚು ಕಡಿಮೆ ದೇವತೆಗಳೆಂದೇ ಪರಿಗಣಿತರಾದ ಅಂಗಿರಸರೆಂಬುವರ ಗುಂಪೊಂದು, ಬೃಹಸ್ಪತಿಗೆ ಸಂಬಂಧಿಸಿದೆ. ಸಾಧಾರಣವಾಗಿ ಸರ್ವದಾ ಇಂದ್ರನೊಡನೆ ಸೇರಿರುವ ಮೂರು ಜನಗಳುಳ್ಳ ಋಭುಗಳ ಗುಂಪೊಂದಿದೆ. ಕಡೆಯದಾಗಿ ವಿಶ್ವೇದೇವಾಃ (ಎಲ್ಲಾ ದೇವತೆಗಳು) ಎಂಬುದೊಂದು ಗಣ. ಇದು ಯಾಗದಲ್ಲಿ ಬಹಳ ಮುಖ್ಯಸ್ಥಾನ ಪಡೆದಿದೆ. ಐವತ್ತು ಸೂಕ್ತಗಳು ಇವರ ಸ್ತುತಿಗೆ ಮೀಸಲಾಗಿವೆ. ಪ್ರಾಯಶಃ, ಎಲ್ಲಾ ದೇವತೆಗಳೂ ಉದ್ದಿಷ್ಟರಾದಾಗ, ಯಾರೊಬ್ಬರೂ ಬಿಟ್ಟುಹೋಗಬಾರದೆಂಬ ಉದ್ದೇಶದಿಂದ ಈ ಗಣವನ್ನು ಏರ್ಪಡಿಸಿಕೊಂಡಿರಬಹುದು. ಆದರೆ ಒಂದೊಂದು ವೇಳೆ, ವಸುಗಳು ಮತ್ತು ಆದಿತ್ಯರು ಮೊದಲಾದವರೊಡನೆ ಸ್ತುತಿಸಲ್ಪಟ್ಟಾಗ, ವಿಶ್ವೇದೇವತೆಗಳು ಎಂದರೆ ಸಮಸ್ತದೇವತೆಗಳೂ ಉದ್ದಿಷ್ಟರಲ್ಲವೆಂದೂ ತೋರುತ್ತದೆ.

## ಅಧಮದೇವತೆಗಳು—ಋಭುಗಳು.

ಋಗ್ವೇದದಲ್ಲಿ, ಪ್ರಸಕ್ತರಾಗಿರುವ ಉತ್ತಮದೇವತೆಗಳಲ್ಲದೆ, ಸ್ವಾಭಾವಿಕವಾದ ಮತ್ತು ಸಂಪೂರ್ಣವಾದ ದೇವತ್ವವನ್ನು ಹೊಂದದೇ ಇರುವ ಕೆಲವು ಕಾಲ್ಪನಿಕ ವ್ಯಕ್ತಿಗಳಿವೆ. ಇವರಲ್ಲಿ ಬಹಳ ಮುಖ್ಯರಾದವರು ಋಭುಗಳು. ಇವರನ್ನು ಹೊಗಳುವ ಸೂಕ್ತಗಳು ಹನ್ನೊಂದಿವೆ ಮತ್ತು ಅವರ ಹೆಸರು ನೂರಕ್ಕಿಂತಲೂ ಹೆಚ್ಚು ಸಲ ಬರುತ್ತದೆ. ಅವರದು ಒಂದು ದೇವತಾತ್ರಯ (ಮೂರು ದೇವತೆಗಳ ಗುಂಪು). ಅವರ ಪ್ರತ್ಯೇಕವಾದ ನಾಮಗಳು ಋಭು ಅಥವಾ ಒಂದೊಂದು ಸಲ ಋಭುಕ್ಷಾ (ಋಭುಗಳ ಯಜಮಾನ), ವಾಜ ಮತ್ತು ವಿಭ್ವಾ. ಅನೇಕ ಸಲ, ಈ ಮೂರು ಹೆಸರುಗಳೂ ಒಟ್ಟಾಗಿ ಹೇಳಲ್ಪಡುತ್ತವೆ; ಒಂದೊಂದು ಸಲ ಋಭು ಮಾತ್ರ ಹೇಳಲ್ಪಡುತ್ತದೆ ಅಥವಾ ಬಹುವಚನದಲ್ಲಿ ಋಭವಃ ಎಂತಲೂ ಹೇಳುವುದುಂಟು. ಮೂವರ ಹೆಸರುಗಳಲ್ಲಿ ಯಾವುದೊಂದರ ಬಹುವಚನ ಪ್ರಯೋಗವಿದ್ದರೂ, ದೇವತಾತ್ರಯವೆಂತಲೇ ಭಾವನೆ. ಒಂದೊಂದು ಸಲ ಮೂರು ಪದಗಳ ಬಹುವಚನರೂಪಗಳೂ (೪-೩೬-೩ ; ೮-೪೮-೧) ಅಥವಾ ಎರಡು ಪದಗಳ ಬಹುವಚನರೂಪಗಳೂ ಅನಾವಶ್ಯಕವಾಗಿ, ಪ್ರಯೋಗಿಸುವುದುಂಟು. ಒಂದು ಕಡೆ (೪-೩೬-೬), ವಾಜೋ ವಿಭ್ವಾ ಋಭವಃ ಎಂಬ ಪ್ರಯೋಗವಿದೆ. ಕೆಲವು ಕಡೆ, ಈ ಪದಗಳಿಂದ ವಿಶ್ವೇದೇವತೆಗಳನ್ನು ಕರೆದಿರುವಂತೆ ಕಾಣುತ್ತದೆ; (ವಿಶ್ವೇ) ಎಲ್ಲಾ ಋಭುಗಳು (೭-೫೧-೩)' ಋಭುಗಳಿಂದ ಯುಕ್ತನಾದ ಋಭು, ಮತ್ತು ವಿಭುಗಳಿಂದ ಯುಕ್ತನಾದ ವಿಭ್ವಾ (೭-೪೮-೨), ಇವರುಗಳು ಆಹೂತರಾಗಿದಾರೆ. ಋಭುಗಳಲ್ಲಿ ಜ್ಯೇಷ್ಠ, ಕನಿಷ್ಠ ಮತ್ತು ಮಧ್ಯವಯಸ್ಕನೆಂದು ವಯೋನುಗುಣವಾಗಿಯೂ ಅವರವರ ಭಿನ್ನತೆಯನ್ನು ವ್ಯಕ್ತಪಡಿಸಿದಾರೆ (೪-೩೩-೫).

ಸುಧನ್ವಾನ್ ಎಂದರೆ 'ಒಳ್ಳೆಯ ಧನುರ್ಧಾರಿ' ಇವನ ಪುತ್ರರು ಸೌಧನ್ವನರೆಂದು ಋಭುಗಳಿಗೆ ಹನ್ನೆರಡು ಕಡೆಹೇಳಿದೆ. ಮೂವರಿಗೂ ಒಟ್ಟಾಗಿ ಇಂದ್ರನ ಪುತ್ರನೆಂದೂ (೪-೩೭-೪) ಹೇಳಿದೆ. ಅದೇ ಮಂತ್ರದಲ್ಲಿ ಅವರನು



CC-0. Jangamwadi Math Collection. Digitized by eGangotri

ಸಾಮರ್ಥ್ಯದ ಮಕ್ಕಳು (ಶವಸೋ ನಪಾತಃ) ಎಂತಲೂ ಕರೆದಿದೆ. ಈ ವಿಶೇಷಣವು, ಮಿತ್ರಾವರುಣರಿಗೆ ಒಂದು ಸಲ ಹೊರತಾಗಿ, ಉಳಿದ ಕಡೆಗಳಲ್ಲೆಲ್ಲಾ (ಐದು ಸಲ) ಇವರಿಗೇ ಸಂದಿದೆ. ೩-೬೦-೩ರಲ್ಲಿ ಅವರು ಮನುವಿನ ಮಕ್ಕಳು ಎಂದು ಹೇಳಿದೆ. ಅವರ ಪಿತೃಗಳೂ ಅನೇಕ ಕಡೆ ಹೇಳಲ್ಪಟ್ಟಿದಾರೆ. ಒಂದು ಸೂಕ್ತದಲ್ಲಿ ಅಗ್ನಿಯನ್ನು ಅವರ ಸೋದರನೆಂದು ಕರೆದಿದಾರೆ (೧-೧೬೧-೧, ೩).

ಯಾಗಶಾಲೆಗೆ ಬಂದು (೪-೩೪-೪ ; ೪-೩೬-೨ ; ೭-೪೮-೧) ಸೋಮರಸವನ್ನು ಪಾನಮಾಡಬೇಕೆಂದು (೪-೩೪-೧, ೩ ; ೪-೩೭-೧) ಅವರನ್ನು ಮೇಲೆ ಮೇಲೆ ಕರೆದಿದಾರೆ. ಅವರ ವಾಸಸ್ಥಳವು ಮೇಲುಲೋಕವಾದುದರಿಂದ, ಅವರನ್ನು ಸೋಮರಸವಿರುವ ಈ ಕೆಳಗಿನ ಲೋಕಕ್ಕೆ ಬರಬೇಕೆಂದು (೪-೩೭-೩) ಆಹ್ವಾನವೀಯುತ್ತಾರೆ. ಈ ಸಂದರ್ಭದಲ್ಲಿ, ಅವರು ಸಾಧಾರಣವಾಗಿ ಇಂದ್ರನ ಜೊತೆಯಲ್ಲಿರುತ್ತಾರೆ (೩-೬೦-೪ರಿಂದ ೬ ; ೪-೩೩-೩ ; ೪-೩೪-೬ ; ೪-೩೫-೭) ; ಕೆಲವು ಸಲ ಮರುತರೊಡನೆ (೧-೨೦-೫ ; ೧-೧೧೧-೪ ; ೪-೩೪-೧೧), ಒಂದು ಸಲ, ಆದಿತ್ಯರು, ಸವಿತೃ, ಪರ್ವತಗಳು ಮತ್ತು ನದಿಗಳೊಡನೆ (೪-೩೪-೮). ಇತರ ವಿಷಯಗಳಲ್ಲಿಯೂ, ಇವರಿಗೂ ಇಂದ್ರನಿಗೂ ಬಹಳ ಸಮೀಪಬಾಂಧವ್ಯ. ಅವರು ಇಂದ್ರನಂತಿದಾರೆ (೪-೩೭-೫) ಮತ್ತು ಋಭುವು ಒಬ್ಬ ಹೊಸ ಇಂದ್ರನಂತಿದಾನೆ (೧-೧೧೦-೭). ಇಂದ್ರನಿಂದ ಯುಕ್ತರಾಗಿ, ಅವರು ಶತ್ರುಜಯಕಾರ್ಯದಲ್ಲಿ ಮನುಷ್ಯರಿಗೆ ಸಹಾಯಕರಾಗುತ್ತಾರೆ (೪-೩೭-೬) ಮತ್ತು ಶತ್ರುಗಳನ್ನು ಜಯಿಸುವುದಕ್ಕೆ ಸಹಾಯ ಮಾಡಬೇಕೆಂದು ಇಂದ್ರನೊಡನೆ ಪ್ರಾರ್ಥಿತರಾಗಿದಾರೆ (೭-೪೮-೩). ಇಂದ್ರನ ಅಶ್ವಗಳ ಆಕೃತಿಯನ್ನು ಮೊದಲು ರಚಿಸಿದವರು ಋಭುಗಳು ; ಇವರ ಈ ಕಲಾಕೌಶಲ್ಯದಿಂದಲೇ ಇವರು ಇಂದ್ರನ ಸ್ನೇಹವನ್ನು ಗಳಿಸಿದುದು (೩-೬೦-೩, ೪-೩೫-೭, ೯). ಅವರನ್ನು ಸ್ತುತಿಸುವ ಸೂಕ್ತಗಳಲ್ಲಿ, ಇಂದ್ರನಲ್ಲದೆ ಬೇರೆ ಯಾವ ದೇವತೆಯೊಡನೆಯೂ ಅವರು ಸ್ತುತರಾಗಿಯೇ ಇಲ್ಲ, ಒಂದೇ ಒಂದು ಮಂತ್ರದಲ್ಲಿ ಮಾತ್ರ (೪-೩೪-೮) ಇಂದ್ರನ ಹೆಸರು ಹೇಳಿಲ್ಲ. ಇಂದ್ರನಿಗೂ ಇವರಿಗೂ ಇರುವ ಸಂಬಂಧವು ಎಷ್ಟು ನಿಕಟವಾದುದು ಎಂದರೆ, ಋಭುಗಳ ಮುಖಂಡನೆಂದರ್ಥಕೊಡುವ ‘ಋಭುಕ್ಷ್ಣಾ’ ಎಂಬ ಪದವು ಇಂದ್ರನಿಗೂ ಉಪಯೋಗಿಸಲ್ಪಡುತ್ತದೆ. ಅದರಂತೆ, ಮರುತರಿಗೂ ೨-೩ ಸಲ ಈ ಪದವು ಪ್ರಯೋಗಿಸಲ್ಪಟ್ಟಿದೆ. ವಿಶ್ವೇದೇವತಾಕವಾದ ಸೂಕ್ತಗಳಲ್ಲಿ, ಇತರ ಕೆಲವು ದೇವತೆಗಳೊಡನೆಯೂ, (ಮುಖ್ಯವಾಗಿ ತ್ವಷ್ಟೃವಿನೊಡನೆ) ಇವರು ಸೇರಿಸಲ್ಪಟ್ಟಿದಾರೆ.

ಋಭುಗಳ ದೇಹ ಅಥವಾ ಆಯುಧಾದಿಸಾಮಗ್ರಿಗಳ ವರ್ಣನೆ ಬಹಳ ಕಡಿಮೆ. ಅವರು ರೂಪದಲ್ಲಿ ಸೂರ್ಯನಂತಿದಾರೆ (೧-೧೧೦-೪). ಅಶ್ವಗಳಿಂದ ಎಳೆಯಲ್ಪಡುವ (೭-೪೮-೧) ರಥವೊಂದಿದೆ (೧-೧೬೧-೭). ಅವರ ರಥವು ಹೊಳೆಯುತ್ತಿದೆ ಮತ್ತು ಅಶ್ವಗಳು ಪುಷ್ಟವಾಗಿವೆ, ಲೋಹದ ಶಿರಸ್ತ್ರಾಣಗಳನ್ನೂ, ರಮಣೀಯವಾದ ಕಂಠಹಾರಗಳನ್ನೂ ಧರಿಸುತ್ತಾರೆ (೪-೩೭-೪). ಋಭುವೂ ಒಬ್ಬ ಅಶ್ವಗಳುಳ್ಳವನು (ಅಶ್ವಿನ್ ೪-೩೭-೫). ಋಭುಗಳದು ವಿಲಕ್ಷಣವಾದ ಚತುರತೆ ಮತ್ತು ಕೈಚಳಕ (೪-೩೩-೧, ೮, ಇತ್ಯಾದಿ), ಅವರ ಕುಶಲ ಕೆಲಸಗಳನ್ನು ಅನುಕರಿಸುವುದು ಅಸಾಧ್ಯ (೩-೬೦-೪). ಅವರು ತಮ್ಮ ಕೌಶಲ್ಯದಿಂದಲೇ ದೇವತ್ವವನ್ನು ಪಡೆದರೆಂದು ಬಾರಿಬಾರಿಗೂ ಹೇಳಿದೆ. ಅವರ ಆಶ್ಚರ್ಯಕರವಾದ ಕೃತಿಗಳಿಂದ ದೇವತ್ವವನ್ನು ಪಡೆದರು (೩-೬೦-೧). ತಮ್ಮ ಕುಶಲಕರ್ಮಗಳಿಂದ, ಅವರು ದೇವತ್ವವನ್ನೂ ಅಮರತ್ವವನ್ನೂ ಪಡೆದು, ಗಿಡುಗಗಳಂತೆ ಸ್ವರ್ಗದಲ್ಲಿಳಿದರು (೪-೩೫-೮). ಅವರು ವಾಯುಮಂಡಲದ ಮನುಷ್ಯರು, ಸ್ವಶಕ್ತಿಯಿಂದಲೇ ಸ್ವರ್ಗವನ್ನು ಏರಿದರು (೧-೧೧೦-೬). ಅವರು ತಮ್ಮ ಬುದ್ಧಿವಂತಿಕೆಯ ಕೆಲಸಗಳಿಂದ, ಅಮರತ್ವದ ಮಾರ್ಗವಾಗಿ, ದೇವತೆಗಳನ್ನು ಸೇರಿದರು (೪-೩೫-೩), ದೇವತೆಗಳಂತೆ ಅಮರರಾಗಿ, ಅವರ ಸ್ನೇಹವನ್ನೂ ಸಂಪಾದಿಸಿದರು (೪-೩೩-೩, ೪,



CC-0. Jangamwadi Math Collection. Digitized by eGangotri

೪-೩೫-೩, ೪-೩೬-೪). ಅವರು ಮೊದಲು ಮರ್ತ್ಯರು, ಮನುವಿನ ಮಕ್ಕಳಾಗಿದ್ದು, ಅನಂತರ ದೇವತ್ವವನ್ನು ಕಷ್ಟಪಟ್ಟು ಗಳಿಸಿದರು (೩-೬೦-೩; ೧-೧೧೦-೪). ಐತರೇಯ ಬ್ರಾಹ್ಮಣದಲ್ಲಿ (ಐ. ಬ್ರಾ. ೩-೩೦-೨), ಮನುಷ್ಯರಾಗಿದ್ದ ಋಭುಗಳು, ತಮ್ಮ ತಪೋಮಹಿಮೆಯಿಂದ, ದೇವತೆಗಳಂತೆ ಸೋಮಪಾನಾರ್ಹತೆಯನ್ನು ಸಂಪಾದಿಸಿದರೆಂದಿದೆ. ಇವರ ಕೆಲಸದಿಂದ ದೇವತೆಗಳಿಗೆ ಬಹಳ ಸಂತೋಷವಾಯಿತು, ಆದರಿಂದಲೇ ವಾಜನು ದೇವತೆಗಳಿಗೂ, ಋಭುಕ್ಷನು ಇಂದ್ರನಿಗೂ, ವಿಭ್ವನು ವರುಣನಿಗೂ ಶಿಲ್ಪಿಗಳಾದರು (೪-೩೩-೯). ಅವರು ದೇವತೆಗಳನ್ನು ಸಮೀಪಿಸಿ, ತಮ್ಮ ಚತುರತೆಯನ್ನು ತೋರಿಸಿ, ತನ್ಮೂಲಕ ಯಾಗವನ್ನು ಅಥವಾ ಯಾಗ ಭಾಗವನ್ನು ಸಂಪಾದಿಸಿದರು (೧-೨೦-೧, ೮; ೧-೧೬೧-೬, ೭). ಆದುದರಿಂದಲೇ ಮೂರನೆಯ ಅಥವಾ ಸಾಯಂಕಾಲದ ಸವನವು ಅವರಿಗೆ ಸೇರಿದುದು. ಅವರು ಅದನ್ನು ತಮ್ಮ ಕುಶಲ ಕೆಲಸದಿಂದ ಪಡೆದರು (೧-೧೬೧-೮, ೪-೩೩-೧೧, ೪-೩೪-೪, ೪-೩೫-೯). ಆದುದರಿಂದ, ಅವರು ಒಂದೊಂದು ಸಲ ಸ್ಪಷ್ಟವಾಗಿ ದೇವತೆಗಳೆಂದೇ ಆಹೂತರಾಗುತ್ತಾರೆ (೪-೩೬-೫, ೪-೩೭-೧)

ದೊಡ್ಡ ದೊಡ್ಡ ದೇವತೆಗಳನ್ನು ಪ್ರಾರ್ಥಿಸುವಂತೆ, ಇವರನ್ನೂ, ಸಮೃದ್ಧಿ ಮತ್ತು ಐಶ್ವರ್ಯವನ್ನೂ (೪-೩೩-೮, ೪-೩೭-೫), ಗೋವುಗಳು, ಅಶ್ವಗಳು ಮತ್ತು ಶೂರರಾದ ಪುತ್ರರು, ಇವುಗಳನ್ನೂ (೪-೩೪-೧೦) ಮತ್ತು ಶಕ್ತಿ, ಪುಷ್ಟಿ, ಸಂತತಿ ಮತ್ತು ಚತುರತೆಗಳನ್ನೂ (೧-೧೧೧-೨) ಅನುಗ್ರಹಿಸಬೇಕೆಂದು ಪ್ರಾರ್ಥಿಸಿದೆ. ಸೋಮರಸವನ್ನು ಹಿಂಡುವವನಿಗೆ, ಋಭುಗಳು ಸಂಪತ್ತನ್ನು ದಯಪಾಲಿಸುತ್ತಾರೆ (೧-೨೦-೭, ೪-೩೫-೬). ಅವರ ಸಹಾಯ ಪಡೆದವನು ಯುದ್ಧದಲ್ಲಿ ಅಜೇಯನಾಗುತ್ತಾನೆ (೪-೩೬-೬) ಮತ್ತು ಯುದ್ಧದಲ್ಲಿ ಸಹಾಯ ಮಾಡಿ, ಲಾಭವನ್ನು ಗಳಿಸಿಕೊಡಬೇಕೆಂದು ಋಭು ಮತ್ತು ವಾಜರನ್ನು ಬೇಡಿದಾರೆ (೧-೧೧೧-೫).

ಇವರು ಮಾಡಿದ ಕುಶಲ ಕರ್ಮಗಳನ್ನು ವರ್ಣಿಸುವಾಗಲೂ ಸಾಧಾರಣವಾಗಿ, ತ್ವಷ್ಟೃವಿಗೆ ಉಪಯೋಗಿಸಿರುವ 'ತಕ್ಷ್' ಧಾತುವೇ ಉಪಯೋಗಿಸಲ್ಪಡುತ್ತದೆ. ಇವರು ಸಾಧಿಸಿರುವುದು ಐದು ಮಹಾ ಕಾರ್ಯಗಳನ್ನು. ಸಾಧಾರಣವಾಗಿ ಋಭುಗಳನ್ನು ಸ್ತುತಿಸುವ ಪ್ರತಿಯೊಂದು ಸೂಕ್ತದಲ್ಲಿಯೂ ಈ ಕಾರ್ಯಗಳಿಗೆ ನಿರ್ದೇಶವಿದ್ದೇ ಇರುತ್ತದೆ. ಅವರು ಅಶ್ವಗಳಿಲ್ಲದ, ಲಗಾಮಿಲ್ಲದ, ಮೂರು ಚಕ್ರದ ಮತ್ತು ಅಂತರಾಳದಲ್ಲಿ ಸಂಚರಿಸಬಲ್ಲ (೪-೩೬-೧) ರಥವೊಂದನ್ನು ರಚಿಸಿದರು (೧-೧೧೧-೧; ೧-೧೬೧-೩; ೪-೩೩-೮; ೪-೩೬-೨). ಚಕ್ರಾಕಾರವಾಗಿ ತಿರುಗುವ ರಥವನ್ನು, ಅಶ್ವಿನೀದೇವತೆಗಳಿಗೋಸ್ಕರ ಋಭುಗಳು ರಚಿಸಿದರು (೧-೨೦-೩; ೧-೧೬೧-೬; ೧೦-೩೯-೧೨). ೪-೩೪-೯ನೆಯ ಮಂತ್ರದಲ್ಲಿ, ಅವರ ಒಂದೊಂದು ಕಾರ್ಯವೂ ಒಂದೊಂದು ಪದದಿಂದ ಉಕ್ತವಾಗಿದೆ. ಇಲ್ಲಿ ಅವರು ಅಶ್ವಿನೀದೇವತೆಗಳನ್ನು ನಿರ್ಮಿಸಿದರು ಎಂದಿದೆ. ಇದೂ ಕೂಡ ಆ ದೇವತೆಗಳ ರಥ ನಿರ್ಮಾಣಕ್ಕೇ ಅನ್ವಯಿಸಬಹುದು.

ಇಂದ್ರನಿಗೋಸ್ಕರ, ಅವರು ಎರಡು ಕಪಿಲವರ್ಣದ ಅಶ್ವ (ಹರೀ)ಗಳನ್ನು ಸೃಜಿಸಿದರು; ಈ ಅಶ್ವಗಳು ಅವನನ್ನು ಗಾಳಿಯಲ್ಲಿ ತೇಲಿಸಿಕೊಂಡು ಹೋಗುತ್ತವೆ (೪-೩೩-೧೦; ಇತ್ಯಾದಿ). ಅಶ್ವವನ್ನು ನಿರ್ಮಿಸಬೇಕೆಂದು ಇಚ್ಛಿಪಟ್ಟರು ಅಥವಾ ಒಂದಾದ ಮೇಲೊಂದು ಎರಡು ಅಶ್ವಗಳನ್ನು ಸೃಜಿಸಿದರು ಎಂದಿರುವಾಗಲೂ, ಅವರ ಈ ಮೇಲೆ ಹೇಳಿದ ಕಾರ್ಯವೇ ಅಭಿಪ್ರೇತವಾಗಿರಬೇಕು (೧-೧೬೧-೩, ೭).

ಅಮೃತವನ್ನು ಕೊಡುವ (೧-೨೦-೩) ಮತ್ತು ಉತ್ತೇಜಕವೂ, ವಿಶ್ವರೂಪಿಯೂ (೪-೩೩-೮) ಆದ ಗೋವು ಒಂದು ಅವರಿಂದ ರಚಿತವಾಯಿತು (೧-೧೬೧-೩; ೪-೩೪-೯). ಋಭುಗಳು ಈ ಗೋವನ್ನು ಚರ್ಮದಿಂದ ಮಾಡಿದರು (೧-೧೧೦-೮) ಅಥವಾ ಚರ್ಮದಿಂದ ಹೊರತೆಗೆದರು (೧-೧೬೧-೭; ಇತ್ಯಾದಿ). ಅವರೇ



CC-0. Jangamwadi Math Collection. Digitized by eGangotri

ಅದನ್ನು ಕಾಪಾಡಿದರು ಮತ್ತು ಅದರ ಮಾಂಸವನ್ನು ಬೆಳೆಸಿದರು (೪-೩೩-೪). ಇಂದ್ರನು ಋಭುಗಳಿಂದ ಸೃಷ್ಟವಾದ ಕಪಿಲವರ್ಣದ ಎರಡು ಅಶ್ವಗಳನ್ನು ರಥಕ್ಕೆ ಹೂಡಿದನು ; ಅಶ್ವಿನಿಗಳು ರಥವನ್ನು ಕಟ್ಟಿದರು ಮತ್ತು ಬೃಹಸ್ಪತಿಯು ವಿಶ್ವರೂಪೀ ಗೋವನ್ನು ಹೊರಡಿಸಿದನು (೧-೧೬೧-೬). ಈ ವಾಕ್ಯದಿಂದ, ಬೃಹಸ್ಪತಿಗಾಗಿ ಆ ಗೋವನ್ನು ಋಭುಗಳು ರಚಿಸಿದರೆಂದು ಹೇಳಬಹುದು. ಇನ್ನೊಂದು ಸಾಧಾರಣವಾದ ಕಾರ್ಯವೂ ಹೇಳಲ್ಪಟ್ಟಿದೆ ; ಪ್ರಾಯಶಃ ಈ ಹಿಂದಿನ ಗೋಸೃಷ್ಟಿಗೇ ಸಂಬಂಧಿಸಿದುದೆಂದು ಹೇಳಬಹುದು ; ಅದೇನೆಂದರೆ, ಅಗಲಿದ್ದ ಒಂದು ಆಕಳು ಮತ್ತು ಅದರ ಕರುವನ್ನು ಪುನಃ ಒಂದುಗೂಡಿಸಿದರು (೧.೧೧೦-೮ ; ೧-೧೧೧-೧).

ಬಹಳ ಶಿಥಿಲರೂ, ಹುಳುಹಿಡಿದ ಕಂಭಗಳಂತೆ ಇದ್ದ (೧-೧೧೦-೮ ; ೪-೩೩-೨, ೩) ತಮ್ಮ ತಂದೆ ತಾಯಿಗಳನ್ನು ಪುನರುಜ್ಜೀವನಗೊಳಿಸಿದರು (೧-೨೦-೪ ; ೧-೧೧೧-೧ ; ೪-೩೫-೫). ಮುದುಕರಾಗಿದ್ದ ಇಬ್ಬರನ್ನು (ತಂದೆ-ತಾಯಿ) ಪುನಃ ಯುವಕರನ್ನಾಗಿ ಮಾಡಿದರು (೧-೧೬೧-೩, ೭). ೪-೩೪-೯ರಲ್ಲಿ, ಅವರು ಸಾಧಿಸಿದ ಕಾರ್ಯಗಳನ್ನು ಸಂಕ್ಷೇಪವಾಗಿ ಹೇಳುವಾಗ, ಅವರು ತಮ್ಮ ಮಾತಾಪಿತೃಗಳಿಗೆ ಆಕೃತಿಯನ್ನು ಕೊಟ್ಟರು ಎಂದಿದೆ. ಅಲ್ಲಿಯೂ ಇದೇ ಪುನರುಜ್ಜೀವನವೇ ಅಭಿಪ್ರಾಯವಾಗಿರಬೇಕು. ವೃದ್ಧರಾದ ಮಾತಾಪಿತೃಗಳಿಗೆ ತಾರುಣ್ಯವನ್ನು ಕೊಟ್ಟು ಅವರು ಪುನಃ ಓಡಾಡುವಂತೆ ಮಾಡಿದುದು, ದೇವತೆಗಳೆಲ್ಲರಿಂದಲೂ ಸ್ತುತ್ಯವಾಗಿದೆ (೪-೩೬-೩). ಅದೇ ಸೂಕ್ತದ (೪-೩೬) ಮೊದಲನೆಯ ಮಂತ್ರದಲ್ಲಿ, ದ್ಯಾವಾಪೃಥಿವಿಗಳನ್ನು ಅಭಿವೃದ್ಧವಾಗುವಂತೆ ಮಾಡಿದುದು (ಪ್ರಾಯಶಃ ಮಾತಾಪಿತೃಗಳ ಪುನರುಜ್ಜೀವನಕಾರ್ಯ) ಅವರಿಗೆ ದೈವೀಶಕ್ತಿಯಿದೆಯೆಂಬುದನ್ನು ಘೋಷಿಸುತ್ತದೆ ಎಂದು ಹೇಳಿದೆ.

ಇವರ ಚತುರತೆಯೇ ವಿಶೇಷವಾಗಿ ಪ್ರಶಸ್ಯವಾಗಿರುವುದು ಮತ್ತು ಅದೇ ಅವರ ಶ್ರೇಷ್ಠವಾದ ಗುಣ. ಈ ಅಂಶದಲ್ಲಿಯೇ, ಅವರು ತ್ವಷ್ಟ್ರುವಿನಿಂದ ರಚಿತವಾದ ಒಂದು ವಿಲಕ್ಷಣವಾದ ಬಟ್ಟಲನ್ನು, ಈ ಋಭುಗಳು ನಾಲ್ಕು ಸಮಾನವಾದ ಬಟ್ಟಲುಗಳಾಗಿ ಮಾಡಿದಾರೆ (೧-೨೦-೬ ; ೧-೧೧೦-೩ ; ೪-೩೫-೨, ೩ ; ೪-೩೬-೪). ಈ ಬಟ್ಟಲು ದೇವತೆಗಳು (೧-೧೬೧-೫ ; ೪-೩೫-೫) ಅಥವಾ 'ಅಸುರ'ನು (೧-೧೧೦-೩) ಪಾನ ಮಾಡುವ ಸಾಧನ. ದೇವತೆಗಳೇ ಅಗ್ನಿಯ ಮೂಲಕ ಋಭುಗಳಿಗೆ ಸುರದಿಂದ ಮಾಡಿದ ಈ ಒಂದು ಬಟ್ಟಲನ್ನು ನಾಲ್ಕಾಗಿ ಮಾಡಿದರೆ, ನಿಮಗೂ ದೇವತೆಗಳಂತೆ ಪೂಜೆಗೆ ಅರ್ಹತೆಯನ್ನು ಅನುಗ್ರಹಿಸುತ್ತೇವೆ ಎಂದು ಹೇಳಿಕಳುಹಿಸಿದರು (೧-೧೬೧-೧, ೨). ತ್ವಷ್ಟ್ರು ಒಂದು ಬಟ್ಟಲನ್ನು ಎರಡು, ಮೂರು ಅಥವಾ ನಾಲ್ಕಾಗಿ ಮಾಡುವ ಋಭುಗಳ ಈ ಪ್ರಯತ್ನವನ್ನು ಪ್ರಶಂಸಿಸಿ, ನಾಲ್ಕು ಬಟ್ಟಲುಗಳು ರಚಿತವಾದಮೇಲೆ, ಅವುಗಳನ್ನು ಒಪ್ಪಿದನು (೪-೩೩-೫,೬). ಬೇರೆ ಒಂದುವಾಕ್ಯದಲ್ಲಿ ಇದಕ್ಕೆ ವಿರುದ್ಧವಾಗಿದೆ (೧-೧೬೧-೪,೫). ಈ ನಾಲ್ಕುಬಟ್ಟಲುಗಳನ್ನು ನೋಡಿದ ಕೂಡಲೇ, ಋಭುವು ಹೆಂಗಸರ ಗುಂಪಿನಲ್ಲಿ ಅಡಗಿಕೊಂಡು, ತಾನುಮಾಡಿದ ದೇವತೆಗಳು ಪಾನಮಾಡುವ ಬಟ್ಟಲನ್ನು ಅಪವಿತ್ರಮಾಡಿದ ಋಭುಗಳನ್ನು ವಧಿಸಲು ಇಚ್ಛಿಸಿದನು : ಆದರೆ ಅದರ ಹಿಂದಿನ ಮಂತ್ರದಲ್ಲಿಯೇ ಅದನ್ನು ಅಪವಿತ್ರ ಮಾಡುವ ಇಚ್ಛೆ ತಮಗಿಲ್ಲವೆಂಬುದನ್ನು ಋಭುಗಳು ಹೇಳಿದಾರೆ. ದೇವತೆಗಳಲ್ಲಿ ಯಶಸ್ಸನ್ನು ಸಂಪಾದಿಸಬೇಕೆಂದು, ಋಭುಗಳು, ಜಮೀನನ್ನು ಅಳೆಯುವಂತೆ ಆ ಅಗಲವಾದ ಬಟ್ಟಲನ್ನು ಅಳೆದರು ಎಂದು (೧-೧೧೦-೧) ವರ್ಣನೆಯಿದೆ. ಇದನ್ನೇ ಸ್ವಲ್ಪ ಅಸ್ಪಷ್ಟವಾಗಿ, ಬಟ್ಟಲುಗಳನ್ನು ರಚಿಸಿದರು ಅಥವಾ ಬಟ್ಟಲುಗಳಿಗೆ ಆಕಾರವನ್ನು ಕೊಟ್ಟರು (೧-೧೬೧-೯ ; ೩-೬೦-೨ ;೪-೩೫-೫ ನ್ನು ಹೋಲಿಸಿ) ಎಂದು ಹೇಳಿದೆ.

ಪ್ರಾರ್ಥನಾ ವಾಕ್ಯಗಳನ್ನು (೧೦-೮೦-೭ ), ಯಾಗವನ್ನು (೩-೫೪-೧೨) ರೂಢಿಗೆ ತಂದರು. ಮತ್ತು ಎರಡು ಲೋಕಗಳನ್ನು ರಚಿಸಿದರು (೪-೩೪-೯) ಅಥವಾ ಆಕಾಶಕ್ಕೆ ಆಧಾರರಾಗಿದಾರೆ (೧೦-೬೬-೧೦) ಎನ್ನುವಾಗಲೂ ಅವರ ಕೌಶಲ್ಯವೇ ವ್ಯಕ್ತವಾಗುತ್ತದೆ.



CC-0. Jangamwadi Math Collection. Digitized by eGangotri

ಮತ್ತೊಂದು ಕಥೆಯು ಅವರಿಗೂ ಸವಿತೃವಿಗೂ ಸಂಬಂಧವನ್ನು ಕಲ್ಪಿಸುತ್ತದೆ. ಅವರು ಗಾಳಿಯಿಂದ ತೂರಲ್ಪಟ್ಟು, ವೇಗವಾಗಿ ಆಕಾಶದ ಸುತ್ತಲೂ ಸಂಚರಿಸಿದರು (೪-೩೩-೧ ;೧-೧೬೧-೧೨ನ್ನು ಹೋಲಿಸಿ). ಬಹಳ ಸುತ್ತಿದ ಮೇಲೆ, ಅಗೋಹ್ಯ ವೆಂಬ ಸವಿತೃವಿನ ಗೃಹಕ್ಕೆ ಆಗಮಿಸಿದರು. ಆಗ ಸವಿತೃವು ಅವರಿಗೆ ಅಮರತ್ವವನ್ನು ಅನುಗ್ರಹಿಸಿದನು. (೧-೧೧೦-೨,೩). ಅನಂತರ, ಅವನ ಆಥಿತ್ಯವನ್ನು ಸ್ವೀಕರಿಸಿ, ಸಂತುಷ್ಟರಾಗಿ, ಅಲ್ಲೇ ಹನ್ನೆರಡು ದಿನಗಳು ನಿದ್ರಾಮಗ್ನರಾದರು. ; ಆಗ ಉತ್ತಮ ಕ್ಷೇತ್ರಗಳನ್ನುಂಟುಮಾಡಿ, ಅಲ್ಲಿಗೆ ನೀರು ಹರಿಯುವಂತೆ ಮಾಡಿದರು ; ಬಂಜರು ಭೂಮಿಯಲ್ಲಿ ಸಸ್ಯಗಳು ಬೆಳೆದವು ಮತ್ತು ತಗ್ಗು ಪ್ರದೇಶಗಳನ್ನೆಲ್ಲಾ ನೀರು ಆವರಿಸಿತು (೪-೩೩-೭). ನಿದ್ರಿಸುತ್ತಿರುವಾಗಲೇ ತಮ್ಮ ಸಾಮರ್ಥ್ಯದಿಂದ, ಉನ್ನತಪ್ರದೇಶಗಳಲ್ಲೆಲ್ಲಾ ಹುಲ್ಲು ಬೆಳೆಯುವಂತೆಯೂ, ಆಳವಾದ ಸ್ಥಳಗಳಲ್ಲಿ ನೀರು ನಿಲ್ಲುವಂತೆಯೂ ಮಾಡಿದರು. (೧-೧೬೧-೧೧). ನಿದ್ರೆಮಾಡಿ ಎದ್ದು ತಮ್ಮನ್ನು, ಎಚ್ಚರಗೊಳಿಸಿದವರಾರೆಂದು ಅಗೋಹ್ಯ (ಸವಿತೃ) ನನ್ನು ಪ್ರಶ್ನಿಸಿದರು ; ಒಂದು ವರ್ಷವಾದ ಮೇಲೆ ಸುತ್ತಲೂ ನೋಡಿದರು. (೧-೧೬೧-೧೩)

ಋಭು ಎಂಬ ಪದವು ಪ್ರಾಯಶಃ ರಭ್ (ಹಿಡಿದಿಕೋ) ಧಾತುವಿನಿಂದ ನಿಷ್ಪನ್ನವಾಗಿದೆ. (೨-೩-೮ನ್ನು ಹೋಲಿಸಿ) ; ಆದುದರಿಂದಲೇ ಆ ಪದಕ್ಕೆ 'ಸಮಯಕ್ಕೆ ಒದಗುವ' 'ಕೈಚಳಕವುಳ್ಳ' ಎಂದು ಅರ್ಥವಾಗಿದೆ. ಈ ಋಭುಪದವು ಇದೇ ಅರ್ಥದಲ್ಲಿ ವಿಶೇಷಣವಾಗಿ ಇಂದ್ರ, ಅಗ್ನಿ, ಮತ್ತು ಆದಿತ್ಯರುಗಳಿಗೆ ಅನೇಕ ಸಲ ಉಪಯೋಗಿಸಲ್ಪಟ್ಟಿದೆ. ವಾಜ ಎಂಬ ಪದಕ್ಕೆ ಸಮರ್ಥ ಎಂತಲೂ ವಿಭ್ವಾ ಎಂಬುದಕ್ಕೆ ಪ್ರಸಿದ್ಧನಾದ ಎಂತಲೂ ಅರ್ಥವಾಗುತ್ತದೆ. ಆದುದರಿಂದ ಋಭು ಮೊದಲಾದ ಪದಗಳು, ಅವರುಗಳ ಕೌಶಲ್ಯವನ್ನೂ ಸೂಚಿಸುವ ಅನ್ವರ್ಥನಾಮಗಳಾಗಿವೆ.

ಇವರು ಮೊದಲು ದೇವತೆಗಳಾಗಿರಲಿಲ್ಲವೆಂಬುದು ಸ್ಪಷ್ಟವಾದ ವಿಷಯ. ಆದರೆ ದೇವತೆಗಳಾಗುವ ಮುಂಚೆ ಅವರ ಸ್ವಭಾವವೇನು ಎಂಬುದು ಸ್ಪಷ್ಟವಾಗಿಲ್ಲ. ಸೌಧನ್ವನರು ಎಂದು ಹೇಳಿದಾಗಲೂ ಅವರು ಯಾರೆಂಬುದು ಗೊತ್ತಾಗುವುದಿಲ್ಲ. ಸುಧನ್ವಾನ್ ಎಂಬುದು ರುದ್ರ ಮತ್ತು ಪುರುತರಿಗೆ ಅನ್ವಯಿಸುವಂತೆ ಎರಡೇ ಸಲ ಋಗ್ವೇದದಲ್ಲಿ ಪ್ರಯೋಗಿಸಲ್ಪಟ್ಟಿರುವುದು. ಅನೇಕ ಕಡೆ ಹೇಳಿರುವಂತೆ, ದ್ಯಾವಾಭೂಮಿಗಳು ಅವರ ಮಾತಾಪಿತೃಗಳಿರಬಹುದು. ಮರೆಮಾಡಲಸಾಧ್ಯವಾದ ಸವಿತೃವಿನ ಮನೆಯಲ್ಲಿದ್ದುದರಿಂದ ಅವರಿಗೆ ಭೂಮಿಯನ್ನು ಫಲವತ್ತಾಗಿ ಮಾಡುವ ಶಕ್ತಿಯಿದೆಯೆಂದು ಹೇಳಿರಬಹುದು. ಅನೇಕ ವಿದ್ವಾಂಸರು, ಈ ಮೂವರೂ ಮೂರು ಋತುಗಳ ಅಭಿಮಾನಿಗಳೆಂದೂ, ಅವರು ಹನ್ನೆರಡು ದಿನಗಳು ನಿದ್ರಿಸಿದರೆಂಬುದು ಮಕರಸಂಕ್ರಾಂತಿ ಕಾಲದಲ್ಲಿ ಋತುಗಳು ಹನ್ನೆರಡು ದಿವಸ ಚಲಿಸದೇ ಇರುವುದಕ್ಕೆ ಅನ್ವಯಿಸುತ್ತದೆಯೆಂತಲೂ, ಬಟ್ಟಲೆಂಬುದು ಚಂದ್ರನೆಂತಲೂ, ಅದುನಾಲ್ಕು ಆಯಿತೆಂಬುದು ಚಂದ್ರನ ನಾಲ್ಕು ರೂಪಗಳೆಂತಲೂ ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ ಇವರು ಭೂಮಿ ಅಥವಾ ವಾಯುಮಂಡಲದಲ್ಲಿರುವ ಅಪ್ರಾಕೃತವ್ಯಕ್ತಿಗಳೆಂದೂ, ಅವರ ಕೌಶಲ್ಯವು ಅವರ ವಿಷಯವಾಗಿ ಅನೇಕ ಸಾಹಸಕರ್ಮಗಳ ಕಥೆಗಳು ಹೊರಡುವಂತೆ ಮಾಡಿತೆಂದೂ ಹೇಳಬಹುದು- ಆದರೆ ಋಗ್ವೇದವೊಂದನ್ನೇ ಆಧಾರವಾಗಿಟ್ಟುಕೊಳ್ಳುವುದಾದರೆ ಯಾವ ನಿಶ್ಚಿತಅಭಿಪ್ರಾಯಕ್ಕೂ ಅವಕಾಶವಿಲ್ಲ.

## ಅಪ್ಸರ ಸ್ತ್ರೀಯರು

ಅಪ್ಸರೆಯರ ವಿಷಯವಾಗಿ ಋಗ್ವೇದದಲ್ಲಿ ಹೆಚ್ಚು ಆಧಾರಗಳೇನೂ ಸಿಗುವುದಿಲ್ಲ. ಈ ಹೆಸರು ಕೇವಲ ಐದೇಸಲ ಬರುತ್ತದೆ. ಇವರಿಗೆ ಪ್ರಕೃತಿಯ ಯಾವ ಅಂಶದ ಆಧಾರವೂ ಇಲ್ಲ. ಆಕಾಶದ ಅತ್ಯುನ್ನತ ಪ್ರದೇಶದಲ್ಲಿ, ಅಪ್ಸರೆಯು ತನ್ನ ಪ್ರಿಯನ ಮೇಲೆ (ಹಿಂದಿನ ಮಂತ್ರದಲ್ಲಿ ಉಕ್ತನಾಗಿರುವ ಗಂಧರ್ವ) ಮಂದ



CC-0. Jangamwadi Math Collection. Digitized by eGangotri

ಹಾಸವನ್ನು ಬೀರುತ್ತಾಳೆ (೧೦-೧೨೩-೫). ಈ ಅಪ್ಸರೆಯಿಂದಲೇ ವಸಿಷ್ಠನು ಜನಿಸಿದನು (೭-೩೩-೧೨); ಅಪ್ಸರ ಸ್ತ್ರೀಯರ ಸಮೀಪದಲ್ಲಿ ವಸಿಷ್ಠರು ಕುಳಿತುಕೊಳ್ಳುತ್ತಾರೆ (೭-೩೩-೯). ಸಮುದ್ರದ ಅಪ್ಸರೆಯರ ಸೋಮರಸದ ಕಡೆಗೆ ಪ್ರವಹಿಸುತ್ತಾರೆ (೯-೭೮-೩). ಇಲ್ಲಿ ಸೋಮರಸಕ್ಕೆ ಬೆರಸುವ ನೀರಿಗೆ ಅಪ್ಸರೆಯರೆಂದು ಹೇಳಿರಬೇಕು. ಉದ್ದವಾದ ಕೂದಲುಗಳುಳ್ಳ ವಿದ್ವಾಂಸನು ಅಪ್ಸರಸ್ತ್ರೀಯರ ಮತ್ತು ಗಂಧರ್ವರ ಮಾರ್ಗದಲ್ಲಿ ಸಂಚರಿಸಬಲ್ಲನು (೧೦-೧೩೬-೬). ನೀರಿನಲ್ಲಿರುವ ಗಂಧರ್ವನ ಪತ್ನಿಯಾದ ಜಲದೇವತೆಯೂ (ಅಪ್ಯಾ ಯೋಷಾ) ಅಪ್ಸರೆಯೇ ಇರಬೇಕು (೧೦-೧೦-೪).

ಈ ಅಪ್ಸರೆಯರ ವಿಷಯವು ಇನ್ನೂ ಹೆಚ್ಚು ವಿಶದವಾಗಿ ಅಥರ್ವವೇದದಲ್ಲಿ ತಿಳಿದುಬರುತ್ತದೆ. ಅವರ ವಾಸಸ್ಥಳವು ನೀರಿನಲ್ಲಿದೆ; ಒಂದು ಕ್ಷಣದಲ್ಲಿ ಮೇಲೆ ಬಂದು, ಪುನಃ ಹೊರಟುಹೋಗುತ್ತಾರೆ (ಅ. ವೇ. ೨-೨-೩); ಮನುಷ್ಯರ ಸುತ್ತಮುತ್ತಲ ಪ್ರದೇಶದಿಂದ ನದಿಗೆ ಅಥವಾ ಜಲಾಶಯದ ತೀರಕ್ಕೆ ಹೊರಟುಹೋಗಿರೆಂದು ಅವರು ಪ್ರಾರ್ಥಿತರಾಗಿದಾರೆ (ಅ. ವೇ. ೪-೩೭-೩). ವಿಶ್ವಾವಸು ಎಂಬ ಗಂಧರ್ವನ ಸಹಚಾರಿಣಿಯರಾದ ಸ್ತ್ರೀದೇವತೆಗಳಿಗೂ, ಮೇಘ, ವಿದ್ಯುತ್ತು ಮತ್ತು ನಕ್ಷತ್ರಗಳಿಗೂ ಸಂಬಂಧವಿದೆಯೆಂದು (ಅ.ವೇ. ೨-೨-೪) ವರ್ಣಿಸಿದೆ. ಅಪ್ಸರೆಯರು ಗಂಧರ್ವರ ಪತ್ನಿಯರೆಂದು ಸ್ಪಷ್ಟವಾಗಿಯೇ ಹೇಳಿದೆ (ಅ. ವೇ. ೨-೨-೫); ಈ ಗಂಧರ್ವಾಪ್ಸರೆಯರ ಸಂಬಂಧವು ಇತರ ಸಂಹಿತೆಗಳಲ್ಲಿ ಸೂತ್ರಪ್ರಾಯವಾಗಿದೆ (ವಾ. ಸಂ. ೩೦-೮ ; ಅ. ವೇ. ೮-೯-೯ ; ಇತ್ಯಾದಿ). ಶತಪಥಬ್ರಾಹ್ಮಣದಲ್ಲಿ (ಶ. ಬ್ರಾ. ೧೧-೫-೧-೪), ಅಪ್ಸರೆಯರು, ಒಂದು ಜಾತಿಯ ನೀರಿನಲ್ಲಿರುವ ಪಕ್ಷಿಯ ರೂಪವನ್ನು ತಾಳಿದರೆಂದು ಹೇಳಿದೆ (ಆತಯಃ ೯-೫-೯ನ್ನು ಹೋಲಿಸಿ). ಪುರಾಣಾದಿಗಳಲ್ಲಿ, ಅಪ್ಸರಸ್ತ್ರೀಯರು ನದಿಗಳ ಮತ್ತು ಸರೋವರಗಳ ಸಮೀಪಕ್ಕೆ ಪದೇಪದೇ ಬರುತ್ತಿರುತ್ತಾರೆ. ಅದರಲ್ಲಿಯೂ ಗಂಗಾನದಿಗೆ ಬರುವುದು ಬಹಳ ಸಾಧಾರಣವಾತು, ಮತ್ತು ವರುಣನ ಅರಮನೆಯಲ್ಲಿ ಇರುತ್ತಾರೆ ಎಂದು ಹೇಳಿದೆ. ಈ ಪದದ ಶಬ್ದರಚನೆಯ ಪ್ರಕಾರವಾಗಿಯೂ, ಇದಕ್ಕೆ ನೀರಿನಲ್ಲಿ ಸಂಚರಿಸುವವರು ಎಂದೇ ಅರ್ಥವಾಗುತ್ತದೆ.

ಮೇಲೆ ಹೇಳಿರುವ ಅಂಶಗಳಿಂದ, ಅಪ್ಸರೆಯರು ಗಂಧರ್ವಸಹಚಾರಿಣಿಯರು, ದೇವಲೋಕದಲ್ಲಿರುವ ಜಲದೇವತೆಗಳು ಎಂದು ಸ್ಪಷ್ಟವಾಗುತ್ತದೆ. ಆದರೆ, ಇತರ ವೇದಗಳಲ್ಲಿ, ಭೂಲೋಕವು, ಅದರಲ್ಲಿಯೂ ವೃಕ್ಷಗಳು ಅವರ ಕ್ರೀಡಾಕ್ಷೇತ್ರಗಳಾಗುತ್ತವೆ. ಅವರು ನ್ಯಗ್ರೋಧ ಮತ್ತು ಅಶ್ವತ್ಥ ವೃಕ್ಷಗಳಲ್ಲಿ ವಾಸಿಸುತ್ತಾರೆ ಮತ್ತು ಅವರ ವೀಣೆ ಮತ್ತು ತಾಳದ ಶಬ್ದವು ಆ ವೃಕ್ಷಗಳಿಂದ ಕೇಳಿಬರುತ್ತದೆ (ಅ. ವೇ. ೪-೩೭-೪-). ಬೇರೆ ಸ್ಥಳಗಳಲ್ಲಿ (ತೈ. ಸಂ. ೩-೪-೮-೪), ನ್ಯಗ್ರೋಧ- ಅಶ್ವತ್ಥ, ಉದುಂಬರ, ಪ್ಲಕ್ಷ ಮೊದಲಾದ ವೃಕ್ಷಗಳು ಗಂಧರ್ವ ಮತ್ತು ಅಪ್ಸರೆಯರ ವಾಸಸ್ಥಳಗಳು. ಆ ವೃಕ್ಷಗಳಲ್ಲಿ ವಾಸಿಸುವ ಗಂಧರ್ವಾಪ್ಸರೆಯರು ಅವುಗಳನ್ನು ಹಾದು ಹೋಗುವ ಮದುವೆ ಮೆರವಣಿಗೆಗಳಿಗೆ ಅನುಕೂಲರಾಗಿರಬೇಕೆಂದು ಪ್ರಾರ್ಥಿಸಿದೆ (ಅ. ವೇ. ೧೪-೨-೯). ಶತಪಥ ಬ್ರಾಹ್ಮಣದಲ್ಲಿ (ಶ. ಬ್ರಾ. ೧-೧-೬-೧), ಅಪ್ಸರೆಯರು ನೃತ್ಯ ಗೀತ ವಾದ್ಯಗಳಲ್ಲಿ ಮಗ್ನರಾಗಿರುತ್ತಾರೆ ಎಂದು ಹೇಳಿದೆ. ಈ ಎರಡು ಗುಂಪಿನವರು ವಾಸ್ತವವಾದ ಮತ್ತು ಐತಿಹಾಸಿಕ ಪರ್ವತಗಳಲ್ಲಿ ವಾಸಿಸುತ್ತಾರೆ ಎಂದು ಪುರಾಣಾದಿಗಳಲ್ಲಿ ಉಕ್ತವಾಗಿದೆ. ಅಥರ್ವವೇದದ ಪ್ರಕಾರ, ಅಪ್ಸರೆಯರಿಗೆ ಪಗಡೆಯಾಟದಲ್ಲಿ ಅಭಿರುಚಿ ಹೆಚ್ಚು ಮತ್ತು ಆಡುವವರಿಗೆ ಒಳ್ಳೆಯ ಅದೃಷ್ಟವನ್ನುಂಟುಮಾಡುತ್ತಾರೆ (ಅ. ವೇ. ೨-೨-೫ ; ಇತ್ಯಾದಿ). ಆದರೆ ಅವರಿಂದ ತೊಂದರೆಯೂ ಉಂಟು. ಬುದ್ಧಿವೈಕಲ್ಯವನ್ನುಂಟುಮಾಡುತ್ತಾರೆ ಎಂಬ ಹೆದರಿಕೆಯಿದೆ. ಇದನ್ನು ಪರಿಹರಿಸಿಕೊಳ್ಳಲು, ಮಂತ್ರ ವಿದ್ಯೆಯನ್ನು ಉಪಯೋಗಿಸುವುದುಂಟು (ಅ. ವೇ. ೨-೩-೫- ; ಇತ್ಯಾದಿ)



CC-0. Jangamwadi Math Collection. Digitized by eGangotri

ಅಪೂರ್ವ ಸುಂದರಿಯರಾದ (ಶ. ಬ್ರಾ. ೧೩-೪-೩-೭, ೮ ಗಳನ್ನು ಹೋಲಿಸಿ). ಅಪ್ಸರಸ್ತ್ರೀಯರ ಪ್ರೇಮವು ಗಂಧರ್ವರಿಗೇ ಮೀಸಲಾಗಿಲ್ಲ; ಆಗಾಗ ಮನುಷ್ಯರಿಗೂ ಅದರಿಂದ ಸುಖವುಂಟು (೧೦-೯೫-೯ ನ್ನು ಹೋಲಿಸಿ) ಇಂತಹ ಮನುಷ್ಯಮತ್ತು ಒಬ್ಬ ಅಪ್ಸರಸ್ತ್ರೀಯ ಪ್ರೇಮದ ಕಥೆಯು ವೇದದಲ್ಲಿ ಉಕ್ತವಾಗಿದೆ. ಇತರ ಕೆಲವು ಅಪ್ಸರಸ್ತ್ರೀಯರ ಹೆಸರು ಮಾತ್ರ ಹೇಳಿದೆ. ಅಥರ್ವವೇದದಲ್ಲಿ, ಉಗ್ರಜಿತ್, ಉಗ್ರಂಪಶ್ಯಾ, ಮತ್ತು ರಾಷ್ಟ್ರಭೃತ್ (ಅ. ವೇ. ೧೬-೧೧೮-೧, ೨) ಎಂಬ ಮೂವರನ್ನೂ ವಾಜಸನೇಯಿ ಸಂಹಿತೆಯಲ್ಲಿ (ವಾ. ಸಂ. ೧೫-೧೫ ರಿಂದ ೧೯), ಊರ್ವಶೀ ಮೇನಕೆ ಮೊದಲಾದವರನ್ನು ಹೇಳಿದೆ. ಶತಪಥಬ್ರಾಹ್ಮಣದಲ್ಲಿ ಶಕುಂತಲೆ (ಶ. ಬ್ರಾ. ೧೩.೫-೪-೧೩) ಮತ್ತು ಊರ್ವಶಿ (ಶ. ಬ್ರಾ. ೧೧-೫-೧-೧) ಯರನ್ನು ಸ್ಪಷ್ಟವಾಗಿ ನಿರ್ದೇಶ ಮಾಡಿದೆ.

ಋಗ್ವೇದದಲ್ಲಿ ಪ್ರಸ್ತಾಪವಿರುವುದು ಊರ್ವಶಿಯೊಬ್ಬಳದೇ. ವಸಿಷ್ಠನು ಊರ್ವಶಿಯಿಂದ ಜನಿಸಿದನು ಎಂದು ಒಂದು ಮಂತ್ರದಲ್ಲಿಯೂ, ಅದರ ಮುಂದಿನ ಮಂತ್ರದಲ್ಲಿ ಅಪ್ಸರೆಯಿಂದ ಜನಿಸಿದನೆಂದೂ ಇದೆ. ಇದರಿಂದ ಊರ್ವಶಿಯೇ ಆ ಅಪ್ಸರೆಯೆಂದೂ ಊಹಿಸಬೇಕು (೭-೩೩-೧೧, ೧೨). ಒಂದು ಕಡೆ (೫-೪೧-೧೯), ನದಿಗಳ ಜೊತೆಯಲ್ಲಿ ಊರ್ವಶಿಯೂ ಸ್ತುತಳಾಗಿದಾಳೆ. ಇವೆರಡು ಸ್ಥಳಗಳನ್ನು ಬಿಟ್ಟರೆ ಹತ್ತನೆಯ ಮಂಡಲದಲ್ಲಿ ಒಂದು ಸೂಕ್ತದಲ್ಲಿ ಮಾತ್ರ ಈ ಹೆಸರು ಬರುತ್ತದೆ. ಇಲ್ಲಿ ಅವಳಿಗೂ ಇಳೆಯ ಮಗನಾದ ಪುರೂರವನಿಗೂ ನಡೆಯುವ ಸಂಭಾಷಣೆಯು ಇದೆ. (೧೦-೯೫-೧೦, ೧೭). ಅಲ್ಲಿ ಅವಳು ಜಲರೂಪಿಣಿ, ವಾಯುಮಂಡಲವನ್ನೆಲ್ಲಾ ಆವರಿಸಿರುತ್ತಾಳೆ ಮತ್ತು ಗಗನ ಸಂಚಾರಿ (ಈ ಕಡೆಯ ವಿಷಯವು ಗಂಧರ್ವನಿಗೂ ೧೦-೧೨೩-೫ ರಲ್ಲಿ ಅನ್ವಯಿಸಿದೆ). ಅವಳು ಮನುಷ್ಯರ ಮಧ್ಯದಲ್ಲಿ ನಾಲ್ಕು ವರ್ಷಗಳಿದ್ದು (೧೦-೯೫-೧೬), ಅನಂತರ ಹಿಂತಿರುಗಬೇಕೆಂದು ಉಕ್ತಳಾಗಿದಾಳೆ. ಆದರೆ ಈ ಪ್ರಾರ್ಥನೆ ನಿರಾಕೃತವಾಗುತ್ತದೆ. ಆದರೆ ಅವನ ಮಕ್ಕಳು ದೇವತೆಗಳಿಗೆ ಹವಿರಾದಿಗಳನ್ನು ಅರ್ಪಿಸಿದರೆ ಅವನು ಸ್ವರ್ಗದಲ್ಲಿ ಸುಖಿಯಾಗಿರಬಹುದೆಂದು ಪುರೂರವನಿಗೆ ಆಶ್ವಾಸನವಿತ್ತಿದೆ. (೧೦-೯೫-೧೮). ಶತಪಥ ಬ್ರಾಹ್ಮಣದಲ್ಲಿ (ಶ. ಬ್ರಾ. ೧೧-೫-೧). ಋಗ್ವೇದದ ಈ ಸೂಕ್ತದ ಕೆಲವು ಮಂತ್ರಗಳನ್ನು ತೆಗೆದುಕೊಂಡು, ಅಖಂಡವಾದ ಒಂದು ಕಥೆಯೇ ರಚಿಸಲ್ಪಟ್ಟಿದೆ. ಅಲ್ಲಿ ಕಥೆಯು ಈ ರೀತಿ ಇದೆ. ಇಳೆಯ ಮಗನಾದ ಪುರೂರವನನ್ನು ಊರ್ವಶಿಯು ತಾನೇ ಒಂದು ಷರತ್ತಿನಮೇಲೆ ವರಿಸುತ್ತಾಳೆ; ಅವನು ನಗ್ನನಾಗಿ ಆಕೆಗೆ ಕಾಣಿಸಿಕೊಳ್ಳಬಾರದೆಂಬುದೇ ಆ ಷರತ್ತು. ರಾತ್ರಿ ಮಲಗಿರುವಾಗ, ಗಂಧರ್ವರು ಒಂದು ಅಪೂರ್ವವಾದ ಶಬ್ದವನ್ನುಂಟುಮಾಡುತ್ತಾರೆ. ಮಲಗಿದ್ದ ಪುರೂರವನು ನಗ್ನನಾಗಿಯೇ ಹಾಸಿಗೆಯಿಂದ ಏಳುತ್ತಾನೆ. ಅದೇ ಸಮಯದಲ್ಲಿ ಮಿಂಚುತ್ತದೆ. ಆ ಮಿಂಚಿನ ಬೆಳಕಿನಲ್ಲಿ ಊರ್ವಶಿಯು ಅವನನ್ನು ನೋಡಿ, ತನ್ನ ಷರತ್ತಿನಂತೆ ಕಣ್ಮರೆಯಾಗುತ್ತಾಳೆ. ಪುರೂರವನು ಅವಳನ್ನು ಹುಡುಕುತ್ತಾ ಅಲೆಯುತ್ತಿರುತ್ತಾನೆ. ಕಡೆಗೆ ಕಮಲ ಸರೋವರವೊಂದರಲ್ಲಿ, ಇತರ ಅಪ್ಸರೆಯರೊಂದಿಗೆ ಪಕ್ಷಿರೂಪದಲ್ಲಿ ವಿಹರಿಸುತ್ತಿದ್ದ ಊರ್ವಶಿಯನ್ನು ಕಾಣುತ್ತಾನೆ. ಊರ್ವಶಿಯೇ ಅವನಿಗೆ ನಿಜರೂಪದಿಂದ ಕಾಣಿಸಿಕೊಳ್ಳುತ್ತಾಳೆ. ಪುರೂರವನು ಬಹಳ ಕೇಳಿಕೊಂಡಮೇಲೆ, ಒಂದು ವರ್ಷದನಂತರ ಒಂದು ರಾತ್ರಿ ಮಾತ್ರ ಅವನೊಡನೆ ಇರುವುದಾಗಿ ವಚನವೀಯುತ್ತಾಳೆ. ಗೊತ್ತಾದ ಕಾಲಕ್ಕೆ ಪುರೂರವನು ಆ ಸ್ಥಳಕ್ಕೆ ಬರುತ್ತಾನೆ. ಮೂರನೆಯ ದಿನ ಗಂಧರ್ವರು, ಒಂದು ವಿಲಕ್ಷಣವಾಗಿ ಅಗ್ನಿಸಮಿದ್ಧೀಪನ ಮಾಡುವುದರಿಂದ, ಅವನನ್ನು ತಮ್ಮಲ್ಲಿ ಒಬ್ಬನಾಗುವಂತೆ ಅನುಗ್ರಹಿಸುತ್ತಾರೆ. ಈ ೧೦-೯೫ ನೆಯ ಸೂಕ್ತದಲ್ಲಿ ಬಿಟ್ಟರೆ, ಇನ್ನೊಂದು ಸ್ಥಳದಲ್ಲಿ ಈ ಪುರೂರುವ ಎಂಬ ಶಬ್ದವು ಬರುವುದು. ಸನ್ಮಾರ್ಗಗಾಮಿಯಾದ ಪುರೂರವನಿಗೋಸ್ಕರ, ಅಗ್ನಿಯು ಗಗನದಲ್ಲಿ ಗುಡುಗನ್ನುಂಟುಮಾಡುತ್ತಾನೆ (೧-೩೧-೪). ಈ ಸಂದರ್ಭದಲ್ಲಿ ಪುರೂರವ ಎಂಬುದು ವಿಶೇಷಣವಾಗಿರಬಹುದು. ಕೆಲವು ವಿದ್ವಾಂಸರು ಪುರೂರವ ಮತ್ತು ಊರ್ವಶಿಯರನ್ನು ಸೂರ್ಯ ಮತ್ತು ಉಷಸ್ಸುಗಳೆಂದು ಭಾವಿಸುತ್ತಾರೆ.



CC-0. Jangamwadi Math Collection. Digitized by eGangotri

# ಗಂಧರ್ವರು.

ಹಿಂದೆಯೇ ಹೇಳಿರುವಂತೆ, ಅಪ್ಸರೆಯರಿಗೆ ಸಂಬಂಧಿಸಿದಂತೆ ಗಂಧರ್ವ ಅಥವಾ ಗಂಧರ್ವರೆಂಬ ಒಬ್ಬ
ಪುರುಷ ಅಥವಾ ಒಂದು ಪುರುಷಜಾತಿಯಿದೆ. ಋಗ್ವೇದದಲ್ಲಿ ಪ್ರಸಕ್ತವಾಗುವ ಇಪ್ಪತ್ತುಸ್ಥಳಗಳಲ್ಲಿ, ಮೂರೇಸಲ
ಅದು ಬಹುವಚನದಲ್ಲಿರುವುದು. ಅಥರ್ವವೇದದಲ್ಲಿರುವ ಮೂವತ್ತೆರಡರಲ್ಲಿ, ಅರ್ಧದಷ್ಟು ಬಹುವಚನದಲ್ಲಿದೆ.
ಇದನ್ನು ನೋಡಿದರೆ, ಮೊದಲು ಒಬ್ಬನೇ ಇದ್ದು, ಬರುಬರುತ್ತಾ, ಸಂಖ್ಯೆ ಹೆಚ್ಚುತ್ತಾ ಬಂದಿರುವಂತೆ ತೋರು
ತ್ತದೆ. ಇತರ ವೇದಗಳಲ್ಲಿ, ದೇವತೆಗಳು, ಪಿತೃಗಳು, ಅಸುರರು, ಇವರಂತೆ, ಗಂಧರ್ವರೂ ಒಂದುಗಣ
(ಅ. ವೇ. ೧೧-೫-೨; ತೈ. ಸಂ. ೭-೮೨೫-೨). ಯಜುರ್ವೇದದಲ್ಲಿ ಅವರ ಸಂಖ್ಯೆ ೨೭ ಇದ್ದದ್ದು, ಅಥರ್ವ
ವೇದದಲ್ಲಿ ಸುಮಾರು ೬೩೩೩ (ಅ. ವೇ, ೧೧-೫-೨) ಆಗಿದೆ. ಮೊದಲಿನಿಂದ ಇವರ ಲಕ್ಷಣ ಮತ್ತು ಸ್ವಭಾವ
ಗಳೇನು ಎಂಬುದನ್ನು ನಿರ್ಧರಿಸಲು, ಋಗ್ವೇದದಲ್ಲಿ ಆಧಾರವೇನೂ ಸಿಗುವುದಿಲ್ಲ. ಈ ಸಂದರ್ಭದಲ್ಲಿ, ಯಾವ
ಯಾವ ಮಂಡಲಗಳಲ್ಲಿ ಈ ಪದಪ್ರಯೋಗಗಳು ಕಂಡುಬರುತ್ತವೆ ಎಂಬುದೂ ಮುಖ್ಯವಾದ ಸಂಗತಿಯೇ.
ಎರಡರಿಂದ ಏಳು ಮಂಡಲಗಳಲ್ಲಿ ಪೂರ್ತಿ ಒಂದೇ ಸಲವೂ, ಎಂಟನೆಯದರಲ್ಲಿ ಇಂದ್ರನಿಗೆ ವಿರುದ್ಧರೆಂದು ಎರಡು
ಸಲವೂ ಬಂದಿದೆ. ಅಥವಾ ಈ ಪದವನ್ನು ವಿಶೇಷಣವೆಂದೇ ಭಾವಿಸಬಹುದೆಂದು ತೋರುತ್ತದೆ. ಒಂದೊಂದು
ಸಲ ವಿಶ್ವಾವಸು ಎಂಬ ಪದದ ಜೊತೆಯಲ್ಲಿ ಪ್ರಯೋಗಿಸಿದೆ (೯-೮೬-೩೬ ; ೧೦-೧೩೯-೪,೫ ; ಅ. ವೇ. ೨-೨-
೪ ; ವಾ. ಸಂ. ೨-೩). ಒಂದು ಸಂದರ್ಭದಲ್ಲಿ ಗಂಧರ್ವನನ್ನು ಸೂಚಿಸುವುದಕ್ಕೆ ವಿಶ್ವಾವಸು ಎಂದೂ ಪ್ರಯೋಗ
ವಿದೆ (೧೦-೮೫-೨೧,೨೨ ; ೧೦-೮೫-೪೦, ೪೧ ಗಳನ್ನು ಹೋಲಿಸಿ). ಇತರ ಸಂಹಿತಗಳು, ಬ್ರಾಹ್ಮಣಗಳು ಮತ್ತು
ಪುರಾಣಾದಿಗಳಲ್ಲಿ, ವಿಶ್ವಾವಸು ಎಂಬುದು ಒಬ್ಬ ಗಂಧರ್ವನ ಹೆಸರು.

ಋಗ್ವೇದದ ಪ್ರಕಾರ ಗಂಧರ್ವನು ವಾಯುಮಂಡಲ ಅಥವಾ ಆಕಾಶದ ಅತ್ಯಂತ ಎತ್ತರವಾದ ಪ್ರದೇಶ
ದಲ್ಲಿ ವಾಸಿಸುವವನು. ಅವನು ಆಕಾಶವನ್ನು ಅಳೆಯುವವನು (೧೦-೧೩೯-೫) ಅಗಾಧವಾದ ವಾಯುಮಂಡಲ
ಪ್ರದೇಶಗಳಲ್ಲಿ ಇರುತ್ತಾನೆ (೮-೬೬-೫) ದೇವತಾ ಸ್ವಭಾವವುಳ್ಳವನು, ಅಂತರಿಕ್ಷದಲ್ಲಿ ನೇರವಾಗಿ ನಿಂತಿರುತ್ತಾನೆ
(೧೦-೧೨೩-೭). ಇವನ ಮೇಲೆಯೇ ಅಪ್ಸರೆಯು ಮಂದಹಾಸವನ್ನು ಬೀರುವುದು (೧೦-೧೨೩-೫). ಸ್ವರ್ಗದಲ್ಲಿದೆ
ಅವನ ವಾಸಸ್ಥಳ ( ಅ. ವೇ. ೨-೨-೧, ೨ ). ಮತ್ತು ಪುಣ್ಯವಂತರು ಗಂಧರ್ವರೊಡನೆ ವಾಸಿಸುತ್ತಾರೆ.
( ಅ. ವೇ. ೪-೩೪-೩ ) ಕೆಲವು ವಾಕ್ಯಗಳಲ್ಲಿ, ಗಂಧರ್ವರಿಗೆ ಯಾವುದಾದರೊಂದು ವಿಧವಾದಸ್ವರ್ಗೀಯ
ಬೆಳಕಿನೊಡನೆ ಸಂಬಂಧವಿದೆಯೆಂದು ಹೇಳಿದೆ. ವರುಣನ ದೂತನಾದ, ಸುವರ್ಣಮಯವಾದ ಪಕ್ಷ
ಗಳುಳ್ಳ ಸೂರ್ಯನೊಡನೆಯೂ(೧೦-೧೨೩-೬), ಸೂರ್ಯಪಕ್ಷಿಯೊಡನೆಯೂ (೧೦-೧೭೭-೨), ಸೂರ್ಯಾಶ್ವದೊಡನೆಯೂ
(೧-೧೬೩-೨), ಮತ್ತು ಸೂರ್ಯನಂತಿರುವ ಸೋಮದೊಡನೆಯೂ (೯-೮೫-೧೨) ಸೇರಿಸಲ್ಪಟ್ಟಿದಾನೆ. ಇದೂ ಅಲ್ಲದೆ
ಚಂದ್ರ ಪಥದಲ್ಲಿರುವ ಇಪ್ಪತ್ತೇಳು ನಕ್ಷತ್ರಗಳು (ವಾ. ಸಂ. ೯-೭) ವಿಶೇಷವಾಗಿ ರೋಹಿಣೀ ನಕ್ಷತ್ರ (ಅ. ವೇ.
೧೩-೧-೨೩) ಇವುಗಳೊಡನೆ ಸಂಬಂಧ ಕಲ್ಪಿತವಾಗಿದೆ. ವಾಜಸನೇಯಿ ಸಂಹಿತೆಯಲ್ಲಿ (ವಾ. ಸಂ. ೧೮-೩೮,)
ಅಗ್ನಿ, ಸೂರ್ಯ, ಚಂದ್ರ, ವಾಯುಗಳೊಡನೆ ಗಂಧರ್ವನೂ ದೇವತೆಯೆಂದು ಪರಿಗಣಿತನಾಗಿದಾನೆ. ಪುರಾಣಗಳಲ್ಲಿ
ಗಂಧರ್ವನಗರ (ಪುರ) ಎಂಬುದು ಮರೀಚಿಕೆಯ ಒಂದು ಹೆಸರು.

ಗಂಧರ್ವನ ಹೆಸರು ವಿಶೇಷವಾಗಿ ಒಂಬತ್ತನೆಯ ಮಂಡಲದಲ್ಲಿ ಸೋಮನೊಡನೆ ಹೇಳಲ್ಪಟ್ಟಿದೆ.
ಸೋಮದ ಸ್ಥಳವನ್ನು ಮತ್ತು ದೇವತೆಗಳ ವಂಶವನ್ನು ರಕ್ಷಿಸುತ್ತಾನೆ (೯-೮೩-೪ ; ೧-೨೨-೧೪ನ್ನು ಹೋಲಿಸಿ).
ಸೋಮರಸದ ಅವಸ್ಥಾವಿಶೇಷಗಳನ್ನೆಲ್ಲಾ ವೀಕ್ಷಿಸುತ್ತಾ ಗಗನಮಂಡಲದಲ್ಲಿ ನಿಂತಿರುತ್ತಾನೆ (೯-೮೫-೧೨).
ಪರ್ಜನ್ಯ ಮತ್ತು ಸೂರ್ಯ ಪುತ್ರಿಯೊಡನೆ, ಗಂಧರ್ವರು ಸೋಮರಸವನ್ನು ಅಭಿವೃದ್ಧಿಪಡಿಸುತ್ತಾರೆ (೯-೧೧೩-೩).
ಗಂಧರ್ವನ ಬಾಯಿಂದಲೇ, ದೇವತೆಗಳು ಸೋಮಪಾನ ಮಾಡುತ್ತಾರೆ (ಅ. ವೇ. ೭-೭೩-೩). ದೇವತೆಗಳಿಗೂ

ಸ್ಕರ ಗಂಧರ್ವರು ಸೋಮರಸವನ್ನು ಕಾಪಾಡುತ್ತಿದ್ದರೆಂದೂ, ಅಪಹೃತವಾಗಲು ಅವಕಾಶಕೊಟ್ಟರೆಂದೂ, ಅದಕ್ಕೆ ಶಿಕ್ಷೆಯಾಗಿ ಗಂಧರ್ವರಿಗೆ ಸೋಮಪಾನ ನಿಷಿದ್ಧವಾಯಿತೆಂದೂ (ಮೈ. ಸಂ. ೩-೮-೧೦) ಹೇಳಿದೆ. ಈ ಸೋಮ ರಸದ ಸಂಬಂಧದಿಂದಲೇ ಗಂಧರ್ವರಿಗೆ ಸಸ್ಯಗಳ ಪರಿಚಯವಿದೆಯೆಂದು ಹೇಳಿರುವುದು (ಅ. ವೇ. ೪-೪-೧). ಸೋಮರಕ್ಷಣೆಯಲ್ಲಿ ಬದ್ಧಾದರನಾದ ಗಂಧರ್ವನೇ ಇಂದ್ರನ ಅಪ್ರೀತಿಯನ್ನು ಗಳಿಸಿ, ವಾಯುಮಂಡಲದಲ್ಲಿ ಅವ ನಿಂದ ಇರಿಯಲ್ಪಡುವುದು (೮-೬೬-೫). ಮತ್ತು ಇದೇ ಕಾರಣದಿಂದಲೇ, ಸ್ತೋತ್ರಗಳು, ಇವನನ್ನು ಸೋಲಿ ಸೆಂದು ಇಂದ್ರನನ್ನು ಸ್ತುತಿಸುವುದು (೮-೧-೧೧). ಬೇರೆ ಒಂದು ಸ್ಥಳದಲ್ಲಿ (ತೈ. ಸಂ. ೧-೨-೯-೧), ವಿಶ್ವಾವಸು ಗಂಧರ್ವನಿಂದ ತಪ್ಪಿಸಿಕೊಳ್ಳಲು, ಶ್ಯೇನರೂಪದಿಂದ ಬರಬೇಕೆಂದು ಸೋಮಕ್ಕೆ ಸೂಚಿಸಿರುವುದೂ ಕಂಡುಬರು ತ್ತದೆ. ಸೋಮರಸವು ಗಂಧರ್ವರ ಮಧ್ಯದಲ್ಲಿ ಇತ್ತು ಅಥವಾ ವಿಶ್ವಾವಸು ಗಂಧರ್ವನಿಂದ ಅಪಹೃತವಾಗಿತ್ತು ; ಸ್ತ್ರೀಲಂಪಟರಾದ ಗಂಧರ್ವರಿಗೆ, ವಾಗ್ದೇವತೆಯನ್ನು ಬೆಲೆಯಾಗಿ ಕೊಟ್ಟು, ಗಂಧರ್ವರಿಂದ ಸೋಮವನ್ನು ಪಡೆದ ರೆಂದು ಇದೆ (ಐ. ಬ್ರಾ. ೧-೨೭ ; ತೈ. ಸಂ. ೬-೧-೬-೫ ; ಮೈ. ಸಂ. ೩-೭-೩) ಸೋಮವನ್ನು ಎತ್ತಿಕೊಂಡು ಹೋಗುತ್ತಿರುವ ಶ್ಯೇನದ ಮೇಲೆ ಬಾಣಬಿಡುವ ಕೃಶಾನುವೂ ಒಬ್ಬ ಗಂಧರ್ವನೇ ಇರಬೇಕು. ತೈತ್ತಿರೀಯ ಅರಣ್ಯಕ (ತೈ. ಆ. ೧-೯-೩) ದಲ್ಲಿ ಕೃಶಾನುವೂ ಗಂಧರ್ವನೆಂದೇ ಸ್ಪಷ್ಟವಾಗಿ ಹೇಳಿದೆ.

ಗಂಧರ್ವರಿಗೂ ನೀರಿಗೂ ಸಂಪರ್ಕವಿದೆ. ನೀರಿನಲ್ಲಿರುವ ಗಂಧರ್ವ ಮತ್ತು ಜಲರೂಪಳಾದ ಅಪ್ಸರೆ ಯರು, ಯಮ ಮತ್ತು ಯಮಿಗಳಿಗೆ ಜನಕರೆಂದು (೧೦-೧೦-೪-) ಹೇಳಿದೆ. ನೀರಿನಲ್ಲಿ ಸುರಿದಿರುವ ಸೋಮ ರಸಕ್ಕೆ ನೀರಿನ ಗಂಧರ್ವನೆಂದು (೯-೮೬-೩೬) ಕರೆದಿದೆ. ಅಪ್ಸರೆಯರೊಡನೆ ಸಂಯೋಜಿತರಾಗಿರುವ ಗಂಧರ್ವರೊ ನೀರಿನಲ್ಲಿ ವಾಸಿಸುತ್ತಾರೆ (ಅ. ವೇ. ೨-೨-೩ ; ೪-೩೭-೧೨).

ಗಂಧರ್ವ ಮತ್ತು ಅಪ್ಸರೆಯರ ಸಂಯೋಗವು ವಿವಾಹಸೂಚಕವಾಗಿದೆ. ಆದುದರಿಂದ ಗಂಧರ್ವರಿಗೂ ವಿವಾಹ ಸಮಾರಂಭಕ್ಕೂ ಸಂಬಂಧ ಕಲ್ಪಿತವಾಗಿದೆ. ಅವಿವಾಹಿತಳಾದ ಕನ್ಯೆಯು ಗಂಧರ್ವ, ಸೋಮ ಮತ್ತು ಅಗ್ನಿ ಇವರಿಗೆ ಸೇರಿದವಳು (೧೦-೮೫-೪೦,೪೧). ವಿವಾಹದ ಮೊದಲದಿನಗಳಲ್ಲಿ, ವಿಶ್ವಾವಸುವು ವರನಿಗೆ ಪ್ರತಿ ಸ್ಪರ್ಧಿ (೧೦-೮೫-೨೨). ಗಂಧರ್ವರಿಗೆ ಸ್ತ್ರೀಯರ ವಿಷಯದಲ್ಲಿರವ ಪ್ರೇಮವು ಇತರ ವೇದಗಳಲ್ಲಿ ಪ್ರಸಿದ್ಧವಾಗಿದೆ (ಮೈ. ಸಂ. ೩-೭-೩) ಗಂಧರ್ವರು ಮತ್ತು ಅಪ್ಸರೆಯರು ಫಲಶಕ್ತಿಗೆ ಅಭಿಮಾನಿ ದೇವತೆಗಳು ಮತ್ತು ಸಂತತಿ ಯನ್ನಪೇಕ್ಷಿಸುವವರು ಅವರನ್ನು ಸ್ತುತಿಸುತ್ತಾರೆ (ಪಂ. ಬ್ರಾ. ೧೯-೩-೨).

ಗಂಧರ್ವರು ದೇವಗಾಯಕರೆಂದು ಪುರಾಣಾದಿಗಳಲ್ಲಿ ಪ್ರಸಿದ್ಧಿ ಬಂದಿರುವುದಕ್ಕೆ ಋಗ್ವೇದದಲ್ಲಿ ಎಲ್ಲಿಯೂ ಆಧಾರವಿಲ್ಲ (೧೦-೧೭೭-೨ : ೧೦-೧೧-೨ ಗಳನ್ನು ಹೋಲಿಸಿ).

ಅವರ ದೇಹಾದಿಗಳ ವಿಷಯವಾಗಿ ಒಂದೆರಡು ಕಡೆ ಮಾತ್ರ ನಿರ್ದೇಶವಿದೆ. ಅವರಿಗೆ ಗಾಳಿಯೇ ಕೇಶ (೩-೩೮-೬) ಮತ್ತು ಅವರಲ್ಲಿ ಹೊಳೆಯುತ್ತಿರುವ ಆಯುಧಗಳಿವೆ (೧೦-೧೨೩-೭). ಈ ವಿಷಯದಲ್ಲಿ ಅಥರ್ವ ವೇದವು ಹೆಚ್ಚು ಸ್ಪಷ್ಟವಾಗಿದೆ (ಅ. ವೇ. ೪- ೩-೭ ; ೮-೬-೧ ಗಳು ವಿಶೇಷವಾಗಿ). ಇಲ್ಲಿ, ಅವರು ಲೋಮಶ ರೆಂದೂ, ಅರ್ಧ ಪ್ರಾಣಿಗಳಂತಿರುವ ದೇಹವುಳ್ಳವರೆಂದೂ, ಮನುಷ್ಯರಿಗೆ ಅನೇಕ ವಿಧದಲ್ಲಿ ವಿಪತ್ಕಾರಕರೆಂದೂ ಹೇಳಿದೆ. ಮತ್ತೆ ಕೆಲವು ಕಡೆ ಅವರು ಸುಂದರರೆಂದೂ ಇದೆ (ಶ. ಬ್ರಾ. ೧೩-೪-೩-೭,೮). ಋಗ್ವೇದದಲ್ಲಿ, ಗಂಧರ್ವರು ಸುವಾಸನೆಯುಳ್ಳ ಉಡುಪುಗಳನ್ನು ಧರಿಸುತ್ತಾರೆ (೧೦-೧೨೩-೭) ಎಂದೂ, ಅಥರ್ವವೇದದಲ್ಲಿ, ಭೂಮಿಯಿಂದ ಸುಗಂಧವು ಗಂಧರ್ವರನ್ನು ಸೇರುತ್ತದೆಂದೂ (ಅ. ವೇ. ೧೨-೧-೨೩) ಹೇಳಿದೆ.

ಇದರಿಂದ ಗಂಧರ್ವ ಎಂಬ ಪದವು ಗಂಧ ಎಂಬುದರಿಂದ ಆಗಿದೆ ಎಂದು ಹೇಳಬಹುದು. ಇದೇ ಸರಿಯಾದ ನಿಷ್ಪತ್ತಿಯಾದರೂ, ಗಂಧರ್ವನ ಸ್ವಭಾವ ಅಥವಾ ಲಕ್ಷಣವೇನೂ ತಿಳಿದಂತಾಗುವುದಿಲ್ಲ. ಮೇಲೆ ಕಂಡುಬರುವ ವಿವರಣೆಗಳಿಂದ, ಗಂಧರ್ವನೂ ಒಬ್ಬ ತೇಜಸ್ವಿಯಾದ ದಿವ್ಯಪುರುಷ. ತನ್ನ ಜೊತೆಗಾತಿ ಅಪ್ಸರೆ



CC-0. Jangamwadi Math Collection. Digitized by eGangotri

ಯೊಡನೆ ನೀರಿನಲ್ಲಿ ವಾಸಮಾಡುವವನು ಎಂದಿಷ್ಟು ಮಾತ್ರ ನಿರ್ದರವಾಗಿ ಹೇಳಬಹುದು. ನಾನಾ ವಿದ್ವಾಂಸರು, ವಾಯುವಿನಲ್ಲಿ ಸೇರಿಕೊಂಡಿರುವ ಅಮೂರ್ತ ವ್ಯಕ್ತಿಗಳೆಂದೂ, ಕಾಮನಬಿಲ್ಲು, ಚಂದ್ರ, ಸೋಮ ಉದಿತನಾಗುತ್ತಿರುವ ಸೂರ್ಯ ಅಥವಾ ಮೇಘಾಭಿಮಾನಿದೇವತೆ ಇತ್ಯಾದಿ ನಾನಾ ಅಭಿಪ್ರಾಯಗಳನ್ನೂ ವ್ಯಕ್ತಪಡಿಸಿದಾರೆ.

## ರಕ್ಷಕದೇವತೆಗಳು.

ವಾಸ್ತೋಷ್ಪತಿಯೆಂಬ ಹೆಸರು ಏಳು ಸಲ ಋಗ್ವೇದದಲ್ಲಿ ಬಂದಿದೆ. ಮೂರು ಋಕ್ಕಿನ ಒಂದು ಸೂಕ್ತದಲ್ಲಿ (೭-೫೪) ಈ ದೇವತೆ ಸ್ತುತವಾಗಿದೆ. ಇಲ್ಲಿ ಅನುಕೂಲವಾದ ಗೃಹಪ್ರವೇಶ, ರೋಗಪರಿಹಾರ, ಮನುಷ್ಯ ಮತ್ತು ಪ್ರಾಣಿಗಳಿಗೆ ಶುಭಾಶೀರ್ವಾದ, ಗೋವುಗಳು, ಅಶ್ವಗಳು ಮೊದಲಾದವುಗಳ ಸಮೃದ್ಧಿ ಮತ್ತು ಸತತವಾದ ರಕ್ಷಣೆ, ಇವುಗಳು ಪ್ರಾರ್ಥಿತವಾಗಿವೆ. ಅದರ ಮುಂದಿನ ಸೂಕ್ತದಲ್ಲಿ (೭-೫೫-೧), ವಾಸ್ತೋಷ್ಪತಿಯು ರೋಗಪರಿಹಾರಕನೆಂದೂ, ವಿಶ್ವರೂಪನೆಂದೂ ವರ್ಣಿಸಿದೆ. ಒಂದು ಸಲ (೭-೫೪-೨). ವಾಸ್ತೋಷ್ಪತಿಗೆ ಇಂದುವೆಂಬ ಹೆಸರು ಉಪಯೋಗಿಸಲ್ಪಟ್ಟಿದೆ. ವಿಶ್ವೇದೇವತೆಗಳ ಸೂಕ್ತವೊಂದರಲ್ಲಿ, ತ್ವಷ್ಟೃವಿನ ಜೊತೆಯಲ್ಲಿ, ಅಥವಾ ದೇವತೆಗಳ ಬಡಗಿಯಾದ ತ್ವಷ್ಟೃವೂ ಇವನೂ ಒಂದೇ ಎಂಬಂತೆ, ಸ್ತುತಿಸಿದೆ. ೮-೧೭-೧೪ರಲ್ಲಿ, ವಾಸ್ತೋಷ್ಪತಿಯು ದೃಢವಾಗಿರುವ ಸ್ತಂಭನೆಂತಲೂ, ಇಂದ್ರನೇ ಎಂತಲೂ ಹೇಳಿದೆ. ಹತ್ತನೆಯ ಮಂಡಲದಲ್ಲಿ ನಿಯಮಪಾಲಕನೆಂದೂ, ಬ್ರಹ್ಮ ಮತ್ತು ದೇವತೆಗಳು ಇವನನ್ನು ರೂಪುಗೊಳಿಸಿದರೆಂತಲೂ (೧೦-೬೧-೭) ಇದೆ. ಮೇಲೆ ಹೇಳಿದಂತೆ, ವಾಸ್ತೋಷ್ಪತಿಯನ್ನು ಅನೇಕ ದೇವತೆಗಳಿಗೆ ಸಮನೆಂದು ಅಲ್ಲಲ್ಲೇ ಹೇಳಿದ್ದರೂ, ಅಗ್ನಿಗೆ ಗೃಹಪತಿ ಎಂದು ಹೇಳುವಂತೆ ಯಾವುದಾದರೊಂದು ದೇವತೆಗೆ ಈ ಹೆಸರೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಗೃಹ್ಯಸೂತ್ರಗಳಲ್ಲಿ (ಆ. ಗೃ. ಸೂ. ೨-೬-೬ ; ಸಾಂ. ಗೃ. ಸೂ. ೩-೪ ; ಪಾ. ಗೃ. ಸೂ. ೩-೪-೭), ನೂತನ ಗೃಹಪ್ರವೇಶಕಾಲದಲ್ಲಿ ವಾಸ್ತೋಷ್ಪತಿಯನ್ನು ತೃಪ್ತಿಪಡಿಸಬೇಕೆಂದು ವಿಧಿಸಿದೆ. ಸೂತ್ರಗಳಲ್ಲಿರುವ ಈ ವಿಧಿ ಮತ್ತು ಆ ದೇವತಾಕವಾದ ಸೂಕ್ತದಲ್ಲಿರುವ ವಿಷಯಗಳನ್ನು ಪರಿಶೀಲಿಸಿದರೆ, ಈ ದೇವತೆಯು ಗೃಹಾಭಿಮಾನಿ ಅಥವಾ ರಕ್ಷಕದೇವತೆ ಮಾತ್ರ ಆಗಿದ್ದನೆಂದು ಹೇಳಬಹುದು. ವೃಕ್ಷ ಅಥವಾ ಪರ್ವತಾಭಿಮಾನಿ ದೇವತೆಗಳಂತೆ, ಈ ದೇವತೆಯೂ ಒಬ್ಬನಿರಬಹುದು.

‘ ಕ್ಷೇತ್ರಸ್ಯಪತಿ ’ ಎಂಬ ದೇವತೆಯೂ ವಾಸ್ತೋಷ್ಪತಿಯ ಜಾತಿಗೆ ಸೇರಿದುದು ಈ ದೇವತೆ ಭೂರಕ್ಷಕ. ೪-೫೭ನೆಯ ಸೂಕ್ತದ ಮೊದಲನೆಯ ಮೂರು ಮಂತ್ರಗಳಲ್ಲಿ ಈತನಿಂದ, ಗೋವುಗಳು, ಅಶ್ವಗಳು, ಮತ್ತು ಭೂಮ್ಯಾಕಾಶಗಳು, ವೃಕ್ಷಗಳು, ನೀರು ಇವುಗಳಲ್ಲಿ ಮಾಧುರ್ಯ ಮೊದಲಾದವುಗಳು ಅಪೇಕ್ಷಿತವಾಗಿವೆ. ವಿಶ್ವೇದೇವತಾಕವಾದ ಸೂಕ್ತವೊಂದರಲ್ಲಿ (೭-೩೫-೧೦); ಸವಿತೃ, ಉಷೋದೇವಿಯರು, ಪರ್ಜನ್ಯ, ಇವರೊಡನೆ ಈತನೂ ಸಮೃದ್ಧಿದಾಯಕನಾಗಬೇಕೆಂದು ಪ್ರಾರ್ಥಿತನಾಗಿದಾನೆ. ೧೦-೬೬-೧೩ರಲ್ಲಿ ಆರಾಧಕರು ಈತನನ್ನು ತಮ್ಮ ನೆರೆಯಲ್ಲಿರಬೇಕೆಂದು ಆಶಿಸಿದಾರೆ. ಭೂಮಿಯನ್ನು ಉಳುವುದಕ್ಕೆ ಪ್ರಾರಂಭಿಸುವಾಗ ಈ ದೇವತೆಯನ್ನು ಪೂಜಿಸಬೇಕು ಅಥವಾ ದೇವತೆಯನ್ನುದ್ದೇಶಿಸಿ ಹೋಮಮಾಡಬೇಕೆಂದು ಹೇಳಿದೆ (ಆ. ಗೃ. ಸೂ. ೨-೧೦-೪ ; ಶಾಂ. ಗೃ. ಸೂ. ೪-೧೩-೫). ವ್ಯವಸಾಯ ಸಂಬಂಧವಾದ ದೇವತೆಗಳನ್ನು ಸ್ತುತಿಸುವ ಸೂಕ್ತವೊಂದರಲ್ಲಿ (೪-೫೭-೬). ಸೀತಾ (ನೇಗಿಲುಗೆರೆ) ಎಂಬ ದೇವತೆಯಿಂದ ಉತ್ತಮವಾದ ಬೆಳೆಯು ಪ್ರಾರ್ಥಿತವಾಗಿದೆ. ಪಾರಸ್ಕರ ಗೃಹ್ಯಸೂತ್ರದಲ್ಲಿ (ಪಾ. ಗೃ. ಸೂ. ೨-೧೭-೯). ಇದೇ ಸೀತೆಯು ಇಂದ್ರನ ಪತ್ನಿಯೆಂದು ಮತ್ತು ಅವಳಿಗೆ ತಂದೆಯ ಹೆಸರಿನ ಆಧಾರದ ಮೇಲೆ ಸಾವಿತ್ರಿ ಎಂದು ಹೆಸರೆಂದು (ತೈ. ಬಾ. ೨-೩-೧೦-೧) ಹೇಳಿದೆ. ಇದೇ ಪಾರಸ್ಕರ ಗೃಹ್ಯಸೂತ್ರದಲ್ಲಿ ಉರ್ವರಾ (ವ್ಯವಸಾಯಕ್ಕೆ ಅನುಕೂಲವಾಗಿರುವ ಜಮೀನು) ಎಂಬೊಂದು ದೇವತೆ ಉಕ್ತವಾಗಿದೆ.



CC-0. Jangamwadi Math Collection. Digitized by eGangotri

## (ಕಾಲ್ಪನಿಕ.)

### ಐತಿಹಾಸಿಕ ಋತ್ವಿಜರು ಮತ್ತು ದೇವಾಂಶಪುರುಷರು.

**ಮನು :—** ಮನು ಅಥವಾ ಮನುಗಳು ಎಂಬುದಾಗಿ ಮನುಷ್ಯಸಾಮಾನ್ಯರು ಉದ್ದಿಷ್ಟರಾದಾಗಲೂ ಪ್ರಯೋಗವಿರುವುದರಿಂದ, ಯಾವಾಗ ಮನುಷ್ಯರು ಉದ್ದಿಷ್ಟರು ಅಥವಾ ಯಾವಾಗ ಮನು ಎಂಬುವನು ಎಂದು ತಿಳಿಯುವುದು ಕಷ್ಟಸಾಧ್ಯ. ಎರಡನೆಯ ಅರ್ಥದಲ್ಲಿ, ಮನು ಎಂಬುದಾಗಿ ಏಕವಚನದಲ್ಲಿ ಸುಮಾರು ೨೦ ಸಲವೂ, ಬಹುವಚನದಲ್ಲಿಯೂ ಸುಮಾರು ಅಷ್ಟೇ ಸಲವೂ ಪ್ರಯೋಗವಿದೆ. ಮನುವನ್ನು ಐದು ಸಲ ತಂದೆ ಎಂತಲೂ, ಅವುಗಳಲ್ಲಿ ಎರಡು ಕಡೆ, ಇನ್ನೂ ಸ್ಪಷ್ಟವಾಗಿ ನಮ್ಮ ತಂದೆ ಎಂತಲೂ, ಅವುಗಳಲ್ಲಿ ಎರಡು ಕಡೆ, ಇನ್ನೂ ಸ್ಪಷ್ಟವಾಗಿ ನಮ್ಮ ತಂದೆ (೨-೩೩-೧೩ ; ಇತ್ಯಾದಿ) ಎಂತಲೂ ಕರೆದಿದೆ. ಯಾಗ ಕರ್ತೃಗಳಿಗೆ ಮನುವಿನ ಪ್ರಜೆಗಳೆಂದು (ವಿಶಃ ೪-೩೭-೧ ; ಇತ್ಯಾದಿ) ಹೆಸರು ; ಮನುವಿನ ಸಂತತಿಯಲ್ಲಿ ಅಗ್ನಿಯು ವಾಸಿಸುತ್ತಾನೆ (೧-೬೮-೪). ಯಾಗಗಳನ್ನು ಆರಂಭಿಸಿದವನೇ ಮನುವು. ಅಗ್ನಿಯನ್ನು ಉದ್ದೀಪನಗೊಳಿಸಿ, ಸಪ್ತರ್ಷಿಸಹಿತನಾಗಿ ದೇವತೆಗಳಿಗೆ ಮೊದಲನೆಯ ಆಹುತಿಯನ್ನು ಕೊಟ್ಟನು (೧೦-೬೩-೭). ಮನುವಿನಿಂದ ಆಚರಿತವಾದ ಯಾಗವನ್ನೇ ಈಗ ಎಲ್ಲರೂ ಆಚರಿಸುತ್ತಿರುವುದು. ಮನುಗಳು ದೇವತೆಗಳನ್ನುದ್ದೇಶಿಸಿ ಮಾಡಿದ ಯಾಗಕ್ಕೇ ಈಗಿನ ಯಾಗವನ್ನು ಹೋಲಿಸಿರುವುದು (೧-೭೬-೫). ಮನುಷ್ವತ್ ( ಮನುವಿನಂತೆ ) ಎನ್ನುವ ಕ್ರಿಯಾವಿಶೇಷಣದಿಂದ, ಪದೇ ಪದೇ ಯಾಗಕರ್ಮಗಳು ಹೋಲಿಸಲ್ಪಡುತ್ತವೆ. ಮನುಗಳಂತೆ, ಆರಾಧಕರು ಅಗ್ನಿಯಿಂದ ಯಾಗವನ್ನು ಪೂರ್ತಿಗೊಳಿಸುತ್ತಾರೆ (೧-೪೪-೧೧). ಮನುಗಳಂತೆ, ಅಗ್ನಿಯನ್ನು ಹೊತ್ತಿಸುತ್ತಾರೆ (೫-೨೧-೧ ಇತ್ಯಾದಿ). ಮನುವಿನಿಂದ ಉದ್ದೀಪಿತನಾದ ಅಗ್ನಿಯನ್ನು, ಮನುವಿನಂತೆಯೇ ಸ್ತುತಿಸುತ್ತಾರೆ (೭-೨-೩). ಮನುಗಳಂತೆ, ಸೋಮರಸವನ್ನು ಅರ್ಪಿಸುತ್ತಾರೆ (೪-೩೭-೩). ಹಿಂದೆ ಮನುವಿಗೋಸ್ಕರ ಪ್ರವಹಿಸಿದಂತೆ, ಈಗ ತಮಗೋಸ್ಕರ ಪ್ರವಹಿಸಬೇಕೆಂದು ಸೋಮವನ್ನು ಪ್ರಾರ್ಥಿಸಿದಾರೆ (೯-೯೬-೧೨). ಎಲ್ಲಾ ಪ್ರಜೆಗಳಿಗೆ ಬೆಳಕಾಗಿರಲೆಂದು, ಅಗ್ನಿಯನ್ನು ಮನುವು ಸ್ಥಾಪಿಸಿದನು (೧-೩೬-೧೯). ಪುರಾತನ ಯಾಗಕರ್ತೃಗಳಾದ ಅಂಗಿರಸರು ಮತ್ತು ಯಯಾತಿಗಳೊಡನೆ (೧-೩೧-೧೭), ಭೃಗು ಮತ್ತು ಅಂಗಿರಸರೊಡನೆ (೮-೪೩-೧೩) ಅಥರ್ವ ಮತ್ತು ದಧ್ಯಂಚರೊಡನೆ (೧-೮೦-೧೬) ಮತ್ತು ದಧ್ಯಂಚ, ಅಂಗಿರಸರು, ಅತ್ರಿ ಮತ್ತು ಕಣ್ವರೊಡನೆ (೧-೧೩೯-೧) ಮನುವೂ, ಸೇರಿಸಲ್ಪಟ್ಟಿದಾನೆ. ದೇವತೆಗಳು (೧-೩೬-೧೦). ಮತರಿಶ್ವಾ (೧-೧೨೮-೨) ಮಾತರಿಶ್ವಾ ಮತ್ತು ದೇವತೆಗಳು (೧-೪೬-೯) ಅಥವಾ ಕಾವ್ಯ ಉಶನಾ (೮-೨೩-೧೭), ಇವರುಗಳು ಅಗ್ನಿಯನ್ನು ಮನುವಿಗೆ ಕೊಟ್ಟರು ಅಥವಾ ಮನುವಿನ ಋತ್ವಿಜನನ್ನಾಗಿ ನೇಮಿಸಿದರು. ನಾಲ್ಕು ಸಂದರ್ಭಗಳಲ್ಲಿ ಮನು ಎಂದರೆ ಮನುಷ್ಯನೆಂದಿರಬೇಕು.

ಇಂದ್ರನು ವಿವಸ್ವತನ ಮಗನಾದ ಮನುವಿನ (ವಾ. ೪-೧) ಅಥವಾ ಮನುಸಾಂವರಣಿಯ (ವಾ. ೩-೧) ಜೊತೆಯಲ್ಲಿ ಸೋಮಪಾನ ಮಾಡಿದನು. ವೃತ್ರಾಸುರನೊಡನೆ ಯುದ್ಧ ಮಾಡುವುದಕ್ಕೆ ಬೇಕಾದ ಶಕ್ತಿಯನ್ನು ಪಡೆಯುವುದಕ್ಕೆ, ಮೂರು ಸರೋವರದಷ್ಟು ಮನುಗಳಿಗೆ ಸೇರಿದ ಸೋಮರಸವನ್ನು ಇಂದ್ರನು ಪಾನಮಾಡಿದನು (೫-೨೯-೭). ಪಕ್ಷಿಯು ಸೋಮರಸವನ್ನು ಮನುವಿಗೆ ತಂದುಕೊಟ್ಟಿತು (೪-೨೬-೪). ತೈತ್ತಿರೀಯ ಸಂಹಿತೆ ಮತ್ತು ಶತಪಥಬ್ರಾಹ್ಮಣಗಳಲ್ಲಿ ಮನುವನ್ನು ಧಾರ್ಮಿಕ ಕರ್ಮಗಳ ಪೋಷಕನೆಂದು ವರ್ಣಿಸಿದೆ.

ಮನುವು ವಿವಸ್ವತನ ಮಗನೆಂದು ಭಾವನೆ; ಅವನಿಗೆ ವಿವಸ್ವತ ಮನುವೆಂಬ ನಾಮಧೇಯವಿದೆ (ವಾ. ೪-೧ ; ೩-೧ನ್ನು ಹೋಲಿಸಿ). ಅಥರ್ವವೇದ (ಅ. ವೇ. ೮-೧೦-೨೪), ಶತಪಥಬ್ರಾಹ್ಮಣ (ಶ. ಬ್ರಾ.



CC-0. Jangamwadi Math Collection. Digitized by eGangotri

೧೩-೪-೩-೩) ಮತ್ತು ಪುರಾಣಾದಿಗಳಲ್ಲಿ, ಮನುವಿಗೆ ವೈವಸ್ವತನೆಂದೇ ಹೆಸರು ರೂಢಿಯಾಗಿದೆ. ವಿವಸ್ವತನ ಮಕ್ಕಳಲ್ಲಿ ಯಮನೂ ಒಬ್ಬನು ಮತ್ತು ಅವನು ಮಾನವರಲ್ಲಿ ಮೊದಲನೆಯವನು. ಅಂದರೆ ಮನು ಮತ್ತು ಯಮರು ಮನುಷ್ಯರ ಮೂಲಪುರುಷದ್ವಯವೆನ್ನಬಹುದು. ಆದರೆ ಮನುವು ಜೀವದಿಂದಿರುವವರಲ್ಲಿ ಮೊದಲನೆಯವನಾದರೆ, ಯಮನು ಮೃತರಾದವರಲ್ಲಿ ಮೊದಲನೆಯವನಾಗಿ, ಮೃತರಲೋಕದ ಒಡೆಯನಾದನು. ಶತಪಥ ಬ್ರಾಹ್ಮಣದಲ್ಲಿ, ವೈವಸ್ವತಮನುವನ್ನು ಮನುಷ್ಯರ ರಾಜನೆಂದೂ, ಯಮನನ್ನು ಮೃತರ ರಾಜನೆಂದೂ ಹೇಳಿದೆ (ಶ. ಬ್ರಾ. ೧೩-೪-೩-೩, ೫), ನಿರುಕ್ತದಲ್ಲಿ (ನಿ. ೧೨-೧೦), ಮನುವನ್ನು ವಿವಸ್ವತನೆಂಬ ಆದಿತ್ಯನ ಮಗ ಮತ್ತು ಸವರ್ಣಾ (ಸರಣ್ಯು ಎಂಬುದರ ಸ್ಥಾನದಲ್ಲಿ ಪ್ರಯೋಗಿಸಿರಬಹುದು) ಎಂಬುವಳ ಮಗನೆಂದು ವಿವರಿಸಿ (೧೦-೧೭-೨ನ್ನು ಹೋಲಿಸಿ), ಸ್ವರ್ಗಲೋಕದ ದೇವತೆಗಳಲ್ಲಿ (ನಿ. ೫-೬) ಒಬ್ಬನೆಂದು ನಿರ್ದೇಶಿಸಿದಾರೆ (ನಿ. ೧೨-೩೪).

ಪ್ರಳಯ ಕಾಲದಲ್ಲಿ, ಇತರ ಎಲ್ಲಾ ಪ್ರಾಣಿಗಳೂ ಮುಳುಗಿಹೋದರೂ, ಮನುವೊಬ್ಬನೇ ಒಂದು ಹಡಗಿನಲ್ಲಿ ಒಂದು ಮತ್ಸ್ಯದಿಂದ (ವಿಷ್ಣುವಿನ ಅವತಾರ) ರಕ್ಷಿಸಲ್ಪಟ್ಟನೆಂಬ ಕಥೆಯೊಂದು ಶತಪಥಬ್ರಾಹ್ಮಣದಲ್ಲಿದೆ (ಶ. ಬ್ರಾ. ೧-೮-೧-೧ರಿಂದ ೧೦). ಆಗಲೇ ಮನುವು, ಆಹುತಿಗಳಿಂದ ಜನಿತಳಾದ ಇಡಾ (ಇಳಾ) ಎಂಬ ತನ್ನ ಮಗಳ ಮೂಲಕ ಮಾನವ ವರ್ಗಕ್ಕೆ ಕಾರಣಭೂತನಾದುದು. ಈ ಪ್ರಳಯದ ಕಥೆಯು ಅಥರ್ವವೇದದಲ್ಲಿಯೂ ಪ್ರಸಕ್ತವಾಗಿದೆ (ಅ. ವೇ. ೧೯-೩೯-೮).

## ಭೃಗುಗಳು.

ಭೃಗು ಎಂಬುದು ಋಗ್ವೇದದಲ್ಲಿ ಇಪ್ಪತ್ತೊಂದು ಸಲ ಬರುತ್ತದೆ. ಇದಲ್ಲದೆ ಭೃಗುವತ್ ಎಂಬುದಾ
ಗಿಯೂ ಎರಡುಸಲ ಪ್ರಯೋಗಿಸಲ್ಪಟ್ಟಿದೆ. ಭೃಗು ಎಂಬುದಾಗಿ ಏಕವಚನದಲ್ಲಿ ಪ್ರಯೋಗಿಸಿರುವುದು ಒಂದೇ
ಒಂದು ಸಲ. ಆದುದರಿಂದ ಈ ಭೃಗುಗಳು ಪೌರಾಣಿಕ ವ್ಯಕ್ತಿಗಳ ಒಂದು ಗಣವನ್ನೇ ನಿರ್ದೇಶಿಸಬಹುದು.
ಅಗ್ನಿದೇವತಾಕವಾದ ಸೂಕ್ತಗಳಲ್ಲೇ ಸುಮಾರು ಹನ್ನೆರಡು ಸಲ ಬರುತ್ತದೆ. ಅದೂ ಸಾಧಾರಣವಾಗಿ ಮನು
ಷ್ಯರು ಅಗ್ನಿಯನ್ನು ಪಡೆದುದನ್ನು ವರ್ಣಿಸುವ ಸಂದರ್ಭದಲ್ಲೇ. ಮಾತರಿಶ್ವನು ಅಗ್ನಿಯನ್ನು ಭೃಗುವಿಗೆ
ಒಂದು ನಿಧಿರೂಪದಲ್ಲಿ ತಂದುಕೊಟ್ಟನು (೧-೬೦-೧), ಅಥವಾ ನಿಗೂಢನಾಗಿದ್ದ ಅಗ್ನಿಯನ್ನು ಭೃಗುಗಳಿಗೋಸ್ಕರ
ಉದ್ದೀಪನಗೊಳಿಸಿದನು (೩-೫-೧೦). ಮಾತರಿಶ್ವಾ ಮತ್ತು ದೇವತೆಗಳು ಅಗ್ನಿಯನ್ನು ರಚಿಸಿದರು ; ಭೃಗುಗಳು
ತಮ್ಮ ಶಕ್ತಿ ಬಲವನ್ನು ಪ್ರಯೋಗಿಸಿ, ಅಗ್ನಿಯನ್ನು ಉತ್ಪತ್ತಿಮಾಡಿದರು(೧೦-೪೬-೯). ನೀರಿನಲ್ಲಿ ಅಡಗಿಕೊಂ
ಡಿದ್ದ ಅಗ್ನಿಯನ್ನು ಭೃಗುಗಳು ಕಂಡು (೧೦-೪೬-೨), ಅಲ್ಲೇ ಅವನನ್ನು ಆರಾಧಿಸಿ, (ಆಯು) ಮನುಷ್ಯರ
ಗೃಹಗಳಲ್ಲಿ ಸ್ಥಾಪಿಸಿದರು (೨-೪-೨ ; ೨-೪-೪ನ್ನು ಹೋಲಿಸಿ). ಅವರು ಅಗ್ನಿಯನ್ನು ಕಾಡಿನಲ್ಲಿ ಚೆನ್ನಾಗಿ ನೆಲಸು
ವಂತೆ ಮಾಡಿದರು (೬-೧೫-೨) ಅಥವಾ ಮನುಷ್ಯರ ಮಧ್ಯದಲ್ಲಿ, ಒಂದು ನಿಧಿಯಂತೆ ಇಟ್ಟರು. (೧-೫೮-೬).
ಅಗ್ನಿಯು ಭೃಗುಗಳಿಂದ ದತ್ತವಾಗಿ ಬಂದ ವಸ್ತು (೩-೨-೪). ಚೆನ್ನಾಗಿ ಮಥನಮಾಡಿ. ಅವನನ್ನು ಸ್ತುತಿವಾಕ್ಯ
ಗಳಿಂದ ಸ್ತುತಿಸಿದರು (೧-೧೨೭-೭). ಸ್ತುತಿರೂಪವಾದ ಗಾನಗಳಿಂದ ಅವನನ್ನು ತೃಪ್ತಿಪಡಿಸಿ ಚೆನ್ನಾಗಿ
ಪ್ರಕಾಶಿಸುವಂತೆ ಮಾಡಿ ( ೧೦-೧೨೨-೫ ), ಅನಂತರ ವನಗಳಲ್ಲಿರುವಂತೆ ಮಾಡಿದರು ( ೪-೭-೧ ).
ಭೂಮಿಯ ನಾಭಿಪ್ರದೇಶಕ್ಕೆ ಕರೆತಂದರು. (೧-೧೪೩-೪). ಹೋಮ ಮುಂತಾದವುಗಳಿಂದ ವಿಶಿಷ್ಟವಾದ ಕರ್ಮ
ಗಳನ್ನು ಅಥರ್ವನು ವಿಧಿಸಿದನು ; ಭೃಗುಗಳು ತಮ್ಮ ಕೌಶಲ್ಯದಿಂದ ದೇವತಾ ಲಕ್ಷಣಗಳನ್ನು ವ್ಯಕ್ತಪಡಿಸಿದರು
(೧೦-೯೨-೧೦) ಅಗ್ನ್ಯುತ್ಪತ್ತಿಯಲ್ಲೇ ಅವರ ಚತುರತೆ ಕಂಡು ಬಂದಿದ್ದರೂ, ಅದನ್ನೂ ಒಂದು ಕಲೆಯೆಂದೇ ಭಾವಿಸಿ



CC-0. Jangamwadi Math Collection. Digitized by eGangotri

ದಾರೆ. ಭೃಗುಗಳು ರಥವನ್ನು ರಚಿಸಿದಂತೆ, ಇಂದ್ರ ಅಥವಾ ಅಶ್ವಿನೀ ದೇವತೆಗಳ ಸ್ತುತಿಯನ್ನು, ಸ್ತೋತೃಗಳು ರಚಿಸುತ್ತಾರೆ (೪-೧೬-೨೦ ; ೧೦-೩೯-೧೪).

ಭೃಗುಗಳು ಬಹಳ ಪುರಾತನರಿರಬೇಕು. ಯಾಗಕರ್ತೃಗಳು, ಅಂಗಿರಸರು, ಅಥರ್ವರು ಇವರುಗಳ ಜೊತೆಯಲ್ಲಿ, ಭೃಗುಗಳನ್ನೂ ಸೇರಿಸಿ, ಎಲ್ಲರೂ ಸೋಮರಸಪ್ರಿಯರಾದ ತಮ್ಮ ಪಿತೃಗಳೆಂದು (೧೦-೧೪-೬) ಹೇಳಿಕೊಂಡಿದಾರೆ, ಮತ್ತು ಭೃಗುಗಳು, ಅಂಗಿರಸರು ಮತ್ತು ಮನು, ಇವರುಗಳಂತೆ ಅಗ್ನಿಯನ್ನು ಸ್ತುತಿಸುತ್ತಾರೆ (೮-೪೩-೧೩). ಯತಿಗಳ ಮತ್ತು ಭೃಗುಗಳ ಪ್ರಾರ್ಥನೆಯನ್ನು ಲಾಲಿಸಿದಂತೆ, ತಮ್ಮ ಪ್ರಾರ್ಥನೆಯನ್ನೂ ಲಾಲಿಸಬೇಕೆಂದು (೮-೬-೧೮) ಅಥವಾ, ಯತಿಗಳು, ಭೃಗುಗಳು ಮತ್ತು ಪ್ರಸ್ಕಣ್ವರಿಗೆ ಸಹಾಯ ನೀಡಿದಂತೆ, ತಮಗೂ ಸಹಾಯ ನೀಡಬೇಕೆಂದು, ಇಂದ್ರನನ್ನು ಬೇಡಿಕೊಂಡಿದಾರೆ (೮-೩-೯). ದ್ರುಹ್ಯರು ಮತ್ತು ತುರ್ವಶ, ಇವರುಗಳೊಡನೆ, ಭೃಗುಗಳೂ, ಸುದಾಸನ ಶತ್ರುಗಳೆಂದು ಹೇಳಿದೆ (೭-೧೮-೬). ಈ ಮೇಲಿನ ಮೂರು ವಾಕ್ಯಗಳಲ್ಲಿ (೭-೬-೧೮ ; ೮-೩-೯ ; ೭-೧೮-೬), ಭೃಗುಗಳು ಯಾವುದೋ ಒಂದು ಸಣ್ಣ ಜನಾಂಗವನ್ನು ನಿರ್ದೆಶಿಸುವಂತೆ ತೋರುತ್ತದೆ. ಮೂವತ್ತುಮೂರುದೇವತೆಗಳು, ಅಶ್ವಿನೀದೇವತೆಗಳು, ಮರುತರು ಜಲಾಭಿಮಾನಿದೇವತೆಗಳು, ಅಶ್ವಿನೀದೇವತೆಗಳು, ಉಷಸ್ಸು ಮತ್ತು ಸೂರ್ಯ, ಇವರೊಡನೆ ಸೋಮಪಾನಕ್ಕೆ ಭೃಗುಗಳಿಗೂ ಆಹ್ವಾನವಿದೆ (೮-೩೫-೩). ಅವರನ್ನು ಸೂರ್ಯರಿಗೆ ಹೋಲಿಸಿದೆ ಮತ್ತು ಅವರನ್ನು ಸಂಪೂರ್ಣಕಾಮರೆಂದೂ ಹೇಳಿದೆ. (೮-೩-೧೬ ; ೯-೧೦೧-೧೩) ರಲ್ಲಿ, ಭೃಗುಗಳು ರಾಕ್ಷಸನನ್ನು ಓಡಿಸಿದಂತೆ, ಕೃಪಣರನ್ನು ಓಡಿಸಬೇಕೆಂದು ಆರಾಧಕರು ಪ್ರಾರ್ಥಿಸಿದಾರೆ. ಇಲ್ಲಿ ಭೃಗುಗಳು ಓಡಿಸಿದ ರಾಕ್ಷಸರು ಯಾರು, ಈ ಕಥೆಯಲ್ಲಿ ಪ್ರಸಕ್ತವಾಗಿದೆ, ಎಂಬುದು ತಿಳಿದಿಲ್ಲ.

ಋಗ್ವೇದಕ್ಕೆ ಸಂಬಂಧಿಸಿದ ವಸಿಷ್ಠಾದಿ ಋಷಿಗಳಂತೆ, ಭೃಗುಗಳು ಈಗ ಬಳಕೆಯಲ್ಲಿರುವ ಋಷಿಗಳ ಗುಂಪಿಗೆ ಸೇರಿದವರಲ್ಲವೆನ್ನಬಹುದು. ಅಂಗಿರಸರಿಗೆ ಅಂಗಿರಸನೂ, ವಸಿಷ್ಠರಿಗೆ ವಸಿಷ್ಠನೂ ನಾಯಕರಾಗಿರುವಂತೆ, ಭೃಗುವೂ ಭೃಗು ಎಂಬ ಒಂದು ಋಷಿಗಣಕ್ಕೆ ನಾಯಕನಿರಬೇಕು.

ಸ್ವರ್ಗದಿಂದ ಅಗ್ನಿಯು ಇಳಿದು ಬರುವುದು ಮತ್ತು ಅದು ಮನುಷ್ಯನಿಗೆ ದತ್ತವಾಗುವುದು, ಇವುಗಳಿಗೆ ಮಾತರಿಶ್ವ ಮತ್ತು ಭೃಗುಗಳೇ ಸಂಬಂಧಿಸಿದವರು. ಅದರಲ್ಲಿ ಮಾತರಿಶ್ವನು ಸ್ವರ್ಗದಿಂದ ಅಗ್ನಿಯನ್ನು ತರುವವನಾದರೆ, ಭೂಮಿಯಲ್ಲಿ ಯಾಗಾದಿ ಕರ್ಮಗಳ ಪ್ರಾರಂಭ ಮತ್ತು ಆಚರಣೆಗೆ ತರುವ ಕೆಲಸ ಭೃಗುಗಳದು.

ಇತರ ವೇದಗಳಲ್ಲಿ ಭೃಗುವು ಒಂದು ಗೋತ್ರದ ಪ್ರತಿನಿಧಿ (ಅ. ವೇ. ೫-೧೯-೧ ; ಐ. ಬ್ರಾ. ೨-೨೦-೭). ಪ್ರಜಾಪತಿಯ ರೇತಸ್ಸಿನಿಂದ ಉತ್ಪನ್ನನಾಗಿ ವರುಣನಿಂದ ತನ್ನ ಪುತ್ರನಾಗಿ ಸ್ವೀಕೃತನಾಗುತ್ತಾನೆ ; ಇದರಿಂದ ಅವನಿಗೆ ವಾರುಣಿ ಎಂಬ ಹೆಸರು ಬರುತ್ತದೆ (ಐ. ಬ್ರಾ. ೩-೩೪-೧ ; ಪಂ. ಬ್ರಾ. ೧೮-೯-೧) ; ವರುಣನ ಮಗನೆಂದು ಸ್ಪಷ್ಟವಾಗಿಯೂ ಉಕ್ತವಾಗಿದೆ (೧೧-೧-೧).

ಭೃಗು ಎಂಬ ಪದವು ಭ್ರಾಜ್ (ಬೆಳಗು ಪ್ರಕಾಶಿಸು) ಎಂಬ ಧಾತುವಿನಿಂದ ನಿಷ್ಪನ್ನವಾಗಿದೆ. ಭೃಗುವು ಅಗ್ನಿಯ ಒಂದು ಹೆಸರೆಂದು ಕೆಲವರೂ, ಅಗ್ನಿಯ ಸಿಡಿಲಿನ ರೂಪಕ್ಕೆ ಈ ಹೆಸರೆಂದು ಕೆಲವರೂ ಅಭಿಪ್ರಾಯಪಡುತ್ತಾರೆ.



CC-0. Jangamwadi Math Collection. Digitized by eGangotri

## ಅಥರ್ವಾ.

ಅಥರ್ವಾ ಎಂಬುದು ಹದಿನಾಲ್ಕು ಸಲ, ಅದರಲ್ಲಿ ಮೂರು ಸಲ ಬಹುವಚನದಲ್ಲಿ, ಬರುತ್ತದೆ. ಅಥರ್ವ ವೇದದಲ್ಲಿಯೂ ಅನೇಕ ಸಲ ಪ್ರಸಕ್ತವಾಗುತ್ತದೆ. ಸಾಧಾರಣವಾಗಿ ಅಥರ್ವನು ಪುರಾತನ ಋತ್ವಿಜ ಅಥವಾ ಅಥವಾ ಋಷಿ. ಅವನು ಅಗ್ನಿಯನ್ನು ಮಥಿಸಿದನು (೬-೧೬-೧೩) ಮತ್ತು ಅಥರ್ವನು ಅಗ್ನಿಯನ್ನು ಮಥಿಸಿದಂತೆ, ಋತ್ವಿಜರು ಅಗ್ನಿಯನ್ನು ಮಥಿಸುತ್ತಾರೆ (೬-೧೫-೧೭). ಅಥರ್ವನಿಂದ ಉತ್ಪತ್ತಿ ಮಾಡಲ್ಪಟ್ಟ ಅಗ್ನಿಯು ವಿವಸ್ವತನ ದೂತನಾದನು (೧೦-೨೧-೫). ಅಥರ್ವನೇ ಮೊದಲು ಆಹುತಿಗಳ ಮೂಲಕ ಋತ (ಯಾಗ)ವನ್ನು ಆಚರಣೆಗೆ ತಂದವನು (೧೦-೯೨-೧೦). ಆಹುತಿಗಳ ಮೂಲಕ ಅಥರ್ವನು (ಸೂರ್ಯ) ಪಥಗಳನ್ನು ವಿಸ್ತರಿಸಿದನು ; ಅನಂತರ ಸೂರ್ಯನು ಉತ್ಪನ್ನನಾದನು (೧-೮೩-೫). ಮನು ಮತ್ತು ದಧ್ಯಂಚರೊಡನೆ, ಅಥರ್ವನು (ಶ್ರದ್ಧೆಯನ್ನು) ಧರ್ಮವನ್ನು ಆಚರಣೆಗೆ ತಂದನು (೧-೮೦-೧೬). ಇಂದ್ರನು ಅಥರ್ವ, ತ್ರಿತ, ದಧ್ಯಂಚ ಮತ್ತು ಮಾತರಿಶ್ವರಿಗೆ ಸಹಾಯಕನು (೧೦-೪೮-೨). ದುಷ್ಟ ಪಿಶಾಚಗಳನ್ನು ನಾಶಮಾಡುವ ಅಗ್ನಿಯು ತನ್ನ ದಿವ್ಯವಾದ ಜ್ವಾಲೆಗಳಿಂದ ಅಜ್ಞಾನಿಯನ್ನು ಅಥರ್ವನು ದಹಿಸುವಂತೆ, ದಹಿಸಿಬಿಡಬೇಕೆಂದು ಪ್ರಾರ್ಥನೆ (೧೦-೮೭-೧೨) ಇದೆ. ಅಥರ್ವವೇದದಲ್ಲಿ ಇನ್ನೂ ಕೆಲವು ಲಕ್ಷಣಗಳು ಉಕ್ತವಾಗಿವೆ. ಅಥರ್ವನು ಒಂದು ಬಟ್ಟಲು ಸೋಮರಸವನ್ನು ಇಂದ್ರನಿಗೆ ತೆಂದುಕೊಟ್ಟನು (ಅ. ವೇ. ೧೮-೩-೫೪). ಅವನಿಗೆ ವರುಣನಿಂದ ಒಂದು ಆಶ್ಚರ್ಯಕರವಾದ ಗೋವು ಕೊಡಲ್ಪಟ್ಟಿತು (ಅ.ವೇ. ೫-೧-೧; ೭-೧೦-೪). ಅಥರ್ವನು ದೇವತೆಗಳ ಸಹಚರನು, ಅವರಿಗೆ ಬಂಧುವು ಮತ್ತು ಸ್ವರ್ಗದಲ್ಲೇ ವಾಸಿಸುತ್ತಾನೆ (ಅ. ವೇ. ೪-೧-೭ ; ಇತ್ಯಾದಿ). ಶತಪಥಬ್ರಾಹ್ಮಣದಲ್ಲಿ, ಅಥರ್ವನು ಒಬ್ಬ ಪುರಾತನ ಉಪಾಧ್ಯಾಯನು (೧೪-೫-೫-೨೨ ; ೧೪-೭-೩-೨೮).

ಬಹುವಚನದಲ್ಲಿ, ಅಥರ್ವರು (ಅಥರ್ವಾಣಃ), ಅಂಗಿರಸರು, ನವಗ್ವರು ಮತ್ತು ಭೃಗುಗಳು, ಇವರೆಲ್ಲರೂ ಪಿತೃಗಳೆಂದು (೧೦-೧೪-೬) ಎಣಿಸಲ್ಪಟ್ಟಿದಾರೆ. ಅವರು ವಾಸಿಸುವುದು ಸ್ವರ್ಗದಲ್ಲಿ ಮತ್ತು ದೇವತೆಗಳೆಂದೇ ಅವರಿಗೆ ನಾಮಧೇಯ (ಅ. ವೇ. ೧೧-೬-೧೩). ಒಂದು ಆಶ್ಚರ್ಯಕರವಾದ ಬೇರಿನ ಪ್ರಭಾವದಿಂದ ಅವರು ಪಿಶಾಚಗಳನ್ನು ನಾಶಮಾಡುತ್ತಾರೆ (ಅ. ವೇ. ೪-೩೭-೭).

ಋಗ್ವೇದದ ಕೆಲವು ವಾಕ್ಯಗಳಲ್ಲಿ, ಅಥರ್ವಎಂದರೆ ಸಾಧಾರಣವಾಗಿ ಋತ್ವಿಜ ಅಥವಾ ಪುರೋಹಿತ ಎಂದರ್ಥವಿರುವಂತೆ ತೋರುತ್ತದೆ. ೧೦-೧೨೦-೯ರಲ್ಲಿ (೧೦-೧೨೦-೮ನ್ನು ಹೋಲಿಸಿ), ಅಥರ್ವ ಎಂಬ ಪದವು, ಸ್ತುತಿ ವಾಕ್ಯಗಳನ್ನು ರಚಿಸುವ ಬೃಹದ್ದಿವ ಎಂಬುವನಿಗೆ ವಿಶೇಷಣವಾಗಿದೆ. ಅಥರ್ವನ ಮೇಲೆ ಆಹುತಿಯನ್ನು ಋಷಿಯು ಹಾಕುತ್ತಾನೆ (೮-೯-೭) ಎಂಬಲ್ಲಿ 'ಅಥರ್ವ' ಪದವನ್ನು ಅಗ್ನಿಗೆ ಉಪಯೋಗಿಸಿರುವಂತೆ ಕಾಣುತ್ತದೆ. ಅಥರ್ವರು ಸೋಮರಸವನ್ನು ಬೆರಸುತ್ತಾರೆ (೯-೪-೨) ಅಥವಾ ಅಥರ್ವರು ಒಬ್ಬ ದಾತೃವಿನಿಂದ ನೂರು ಗೋವುಗಳನ್ನು ಪಡೆಯುತ್ತಾರೆ (೬-೪೭-೨೪), ಈ ಸಂದರ್ಭಗಳಲ್ಲಿ ಋತ್ವಿಜನೆಂಬ ಅರ್ಥದಲ್ಲಿ ಪ್ರಯೋಗವಿದೆ. ಅಗ್ನಿಗೆ ಅಥರ್ಯು (ಅಥರ್-ಯು), ಜ್ವಾಲಾವಿಶಿಷ್ಟನು ಎಂದು ಹೆಸರು, ಈ ಅಥರ್ (ಜ್ವಾಲೆ) ಎಂಬುದರಿಂದ ಅಥರ್ವ (ಋತ್ವಿಜರು) ಎಂಬ ಋತ್ವಿಜರ ಗುಂಪೊಂದು ರೂಢಿಗೆ ಬಂದಿರಬಹುದು.

## ದಧ್ಯಂಚ.

ಅಥರ್ವನ ಮಗನಾದ ದಧ್ಯಂಚನ (೬-೧೬-೧೪ ; ೧-೧೧೬-೧೨ ; ೧-೧೧೭-೨೨) ಹೆಸರು ಒಂಬತ್ತು ಸಲ ಬರುತ್ತದೆ. ಅದರಲ್ಲಿ ಒಂದು ಸಲ ಬಿಟ್ಟರೆ ಉಳಿದುವೆಲ್ಲ, ೯, ೧೦ ಮತ್ತು ೧ನೆಯ ಮಂಡಲಗಳಲ್ಲೇ



CC-0. Jangamwadi Math Collection. Digitized by eGangotri

ಕಂಡುಬರುತ್ತದೆ. ಆತನು ಅಗ್ನಿಯನ್ನು ಉದ್ದೀಪನಗೊಳಿಸಿದ ಋಷಿ (೬-೧೬-೧೪) ಮತ್ತು ಅಥರ್ವ, ಅಂಗಿರಸರು, ಮನು ಮತ್ತು ಇತರ ಪುರಾತನ ಋಷಿಗಳ ಪಟ್ಟಿಯಲ್ಲಿ ಸೇರಿಸಲ್ಪಟ್ಟಿದಾನೆ (೧-೮೦-೧೬ ; ೧-೧೩೯-೯).

ಅಥರ್ವ ಪುತ್ರನಾದ ದಧ್ಯಂಚನಿಗೆ ಅಶ್ವಿನೀದೇವತೆಗಳು ಅಶ್ವಶಿರಸ್ಸನ್ನು ಅನುಗ್ರಹಿಸಿದರು ; ಅನಂತರ ಆತನು ಅವರಿಗೆ ಮಧುವಿದ್ಯೆಯನ್ನು ಉಪದೇಶಮಾಡಿದನು (೧-೧೧೭-೨೨). ಕುದುರೆಯ ತಲೆಯುಳ್ಳ ದಧ್ಯಂಚನು ಅಶ್ವಿನೀದೇವತೆಗಳಿಗೆ ಮಧುವು ಇರುವ ಸ್ಥಳವನ್ನು ತಿಳಿಸಿದನು (೧-೧೧೬-೧೨). ಅಶ್ವಿನೀದೇವತೆಗಳು ದಧ್ಯಂಚನ ಹೃದಯವನ್ನು ಸೂರೆಗೊಂಡರು ; ಅನಂತರ ಅಶ್ವಶಿರವು ಅವರನ್ನು ಉದ್ದೇಶಿಸಿ ಮಾತನಾಡಿತು (೧-೧೧೯-೯). ಈ ಕಥೆಗೆ ಇಂದ್ರನೂ ಸಂಬಂಧಿಸಿದಾನೆ. ಪರ್ವತಗಳಲ್ಲಿ ಹುದುಗಿಟ್ಟಿದ್ದ ಅಶ್ವಶಿರಸ್ಸನ್ನು ಹುಡುಕುತ್ತಾ, ಶರಣ್ಯಾವತದಲ್ಲಿ ಅದನ್ನು ಕಂಡು, ದಧ್ಯಂಚನ ಮೂಳೆಗಳಿಂದ ವೃತ್ರಾಸುರನನ್ನು ವಧಿಸಿದನು (೧-೮೪-೧೩, ೧೪). ತ್ರಿತನಿಗೋಸ್ಕರ, ಸರ್ಪದ ಹತ್ತಿರವಿದ್ದ ಗೋವುಗಳನ್ನು ಪಡೆದುದಲ್ಲದೆ, ದಧ್ಯಂಚ ಮತ್ತು ಮಾತರಿಶ್ವರಿಗೆ ಗೋಶಾಲೆಗಳನ್ನು ಕೊಟ್ಟನು (೧೦-೪೮-೨). ಸೋಮರಸದ ಪ್ರಭಾವದಿಂದ ದಧ್ಯಂಚನು ತೆರೆಯುವ ಗೋಶಾಲೆಗಳೇ (೯-೧೦೮-೪) ಇವುಗಳಿರಬೇಕು. ಎರಡರಿಂದ ಎಂಟು ಮಂಡಲಗಳಲ್ಲಿ ದಧ್ಯಂಚನ ಹೆಸರು ಬರುವುದು ಒಂದೇ ಕಡೆ (೬-೧೬-೧೪). ಇಲ್ಲಿ ದಧ್ಯಂಚನು ಅಥರ್ವನ ಮಗನು ; ತಂದೆಯಂತೆ ಇವನೂ ಬೆಂಕಿಯನ್ನು ಹೊತ್ತಿಸುವ ಕಾರ್ಯದಲ್ಲಿ ತೊಡಗಿದಾನೆ. ಇದಲ್ಲದೇ ಇದ್ದರೆ, ಸಾಧಾರಣವಾಗಿ ಸೋಮದ ಗುಪ್ತಸ್ಥಾನ, ಇಂದ್ರನಿಂದ ಗೋವಿಮೋಚನಕಾರ್ಯ ಇವುಗಳ ಸಂಬಂಧವೇ ಈತನಿಗೆ ಹೆಚ್ಚು. ಈತನಿಗೂ ಕುದುರೆಯ ತಲೆ ಎಂದು ಹೇಳಿರುವುದರಿಂದ, ಈತನಿಗೂ ದಧಿಕ್ರಾ ಎಂಬ ಅಶ್ವಕ್ಕೂ ಸಂಬಂಧವಿದೆ ಎಂದು ಹೇಳಿದರೂ ಹೇಳಬಹುದು. ಪದದ ನಿಷ್ಪತ್ತಿಯನ್ನು ತೆಗೆದುಕೊಂಡರೆ, (ದಧಿ-ಅಂಚ್) ನೊಸರಿನ ಅಭಿಮುಖವಾಗಿರುವವನು ಅಂದರೆ ಮೊಸರಿನಲ್ಲಿ ಅಭಿಮಾನವುಳ್ಳವನು ಎಂದಾಗಬಹುದು. ಕೆಲವರು ದಧ್ಯಂಚ ಮತ್ತು ಸೋಮ ಎರಡೂ ಒಂದೇ ಎಂದು ಅಭಿಪ್ರಾಯಪಡುತ್ತಾರೆ. ಆದರೆ ಈ ನಿರ್ಣಯಕ್ಕೆ ಬರಲು ಆಧಾರ ಸಾಲದು. ದಧ್ಯಂಚನೆಂದರೆ ಶಿಡಿಲುರೂಪವಾದ ಅಗ್ನಿಯೆಂದರೆ ತಪ್ಪಾಗಲಾರದು. ಅಶ್ವಶಿರಸ್ಸಿನಿಂದ ವೇಗವೂ, ಅದರ ಧ್ವನಿಯಿಂದ ಗುಡುಗೂ, ಮೂಳೆಯಿಂದ ಶಿಡಿಲೂ ಎಂದು ತಿಳಿದುಕೊಳ್ಳಬಹುದು. ಸೋಮರಸದೊಡನೆ ಅದಕ್ಕಿರುವ ಸಂಬಂಧವನ್ನು ನೋಡಿದರೆ, ಸೋಮ-ಶ್ಯೇನಗಳ ಸಂಬಂಧವು ಸೂಚಿತವಾಗುತ್ತದೆ. ಹೆಸರಿನಿಂದ ಚಂಡಮಾರುತವು ಬೀಸುವಾಗ ಉಂಟಾಗುವ ಕ್ಷೋಭೆಯು ಸೂಚಿತವಾಗುತ್ತದೆ. ಪುರಾಣಾದಿಗಳಲ್ಲಿ ಇದು ದಧೀಚ ಎಂದು ರೂಪಾಂತರ ಹೊಂದಿ, ಇವನ ಮೂಳೆಗಳಿಂದಲೇ ಇಂದ್ರನು ವಜ್ರಾಯುಧವನ್ನು ಮಾಡಿಕೊಂಡು, ವೃತ್ರಾಸುರನನ್ನು ವಧಿಸಿದನೆಂದು ಇದೆ.

## ಅಂಗಿರಸರು.

ಒಟ್ಟು ಸುಮಾರು ೬೦ ಪ್ರಯೋಗಗಳಲ್ಲಿ, ಮೂವತ್ತು ಬಹುವಚನದಲ್ಲಿದೆ. ಈ ಪದದಿಂದ ನಿಷ್ಪನ್ನವಾದ ರೂಪಗಳೂ ಮೂವತ್ತು ಇವೆ. ೧೦-೬೨ನೆಯ ಸೂಕ್ತ ಪೂರ್ತಿಯಾಗಿ ಈ ಗಣವನ್ನು ಹೊಗಳುತ್ತದೆ.

ಅಂಗಿರಸರು ಆಕಾಶದ ಪುತ್ರರು (೩-೫೬-೭ ; ೧೦-೬೭-೨ ; ೪-೨-೧೫ನ್ನು ಹೋಲಿಸಿ). ಅವರು ದೇವತೆಗಳ ಪುತ್ರರಾದ ಋಷಿಗಳು (೧೦-೬೨-೪). ಅವರಲ್ಲಿಯೇ ಒಬ್ಬ ಅಂಗಿರಸನು ಮೂಲಪುರುಷನೆಂದೂ ಉಳಿದವರು ಅವನ ಪುತ್ರರೆಂದೂ (೧೦-೬೨-೫) ಭಾವನೆ. ಮಂತ್ರಗಳಲ್ಲಿ, ಪಿತೃಗಳು (೧೦-೬೨-೨), ನಮ್ಮ ಪಿತೃಗಳು (೧-೭೧-೨) ಅಥವಾ ನಮ್ಮ ಪುರಾತನ ಪಿತೃಗಳು (೧-೬೨-೨) ಎಂದು ಕರೆಯಲ್ಪಟ್ಟಿದಾರೆ. ಅಥರ್ವರು, ಭೃಗುಗಳು ಇವರೊಡನೆ ಅಂಗಿರಸರೂ ಪಿತೃಗಳೆಂದು ಎನಿಸಿಕೊಂಡಿದಾರೆ (೧೦-೧೪-೬) ; ವಿಶೇಷವಾಗಿ ಯಮ



CC-0. Jangamwadi Math Collection. Digitized by eGangotri

ಮತ್ತು ಅಂಗಿರಸರು ಪಿತೃಗಳೆಂದು ಪರಿಗಣಿತರಾಗಿದಾರೆ (೧೦–೧೪-೩ರಿಂದ ೫). ಒಂದೊಂದು ಕಡೆ ದೇವತಾ ಗಣಗಳಿಗೆ ಸಾಮ್ಯವೂ ಹೇಳಿದೆ. ಆದಿತ್ಯರು, ವಸುಗಳು ಮತ್ತು ಮರುತರೊಡನೆ (೭-೪೪-೪ ; ೮-೩೫-೧೪), ಕೆಲವು ಸಂದರ್ಭಗಳಲ್ಲಿ ಆದಿತ್ಯರು, ರುದ್ರರು, ವಸುಗಳು ಮತ್ತು ಅಥರ್ವರೊಡನೆ (ಅ. ವೇ. ೧೧-೮-೧೩) ಕೆಲವು ಕಡೆ. ಅವರಿಗೆ ಸೋಮರಸವು ಅರ್ಪಿತವಾಗಿದೆ (೯-೬೨-೯) ಮತ್ತು ದೇವತೆಗಳಂತೆ ಸ್ತುತರಾಗಿದಾರೆ (೩-೫೩-೭ ; ೧೦-೬-೨). ಅವರು ಯಾಗಗಳಲ್ಲಿ ‘ಬ್ರಹ್ಮ’ನ ಸ್ಥಾನದಲ್ಲಿರುವವರು (೭-೪೨-೧). ವನಗಳಲ್ಲಿ ಅಡಗಿದ್ದ ಅಗ್ನಿಯನ್ನು ಕಂಡುಹಿಡಿದರು (೫-೧೧-೬) ಮತ್ತು ಯಾಗಸಂಬಂಧವಾದ ಮೊದಲನೆಯ ನಿಯಮವನ್ನು ಚಿಂತಿಸಿದರು (೧೦-೬೭-೨). ಯಾಗದಿಂದಲೇ ಅವರು ಅಮರತ್ವವನ್ನೂ ಇಂದ್ರನ ಮೈತ್ರಿಯನ್ನೂ ಗಳಿಸಿದರು (೧೦-೬೨-೧).

ಇಂದ್ರನಿಗೂ ಇವರಿಗೂ ಬಹಳ ಸಮೀಪ ಸಂಬಂಧವಿದೆ. ಇವರಿಗೇ ಇಂದ್ರನು ಗೋವುಗಳನ್ನು ತೋರಿಸಿದುದು (೮-೫೨-೩). ಇವರಿಗೋಸ್ಕರಲೇ, ಗೋಶಾಲೆಗಳ ದ್ವಾರಗಳನ್ನು ತೆರೆದುದು (೧-೫೧-೩ ; (೧-೧೩೪-೪) ವಲನನ್ನು ಉರುಳಿಸಿ, ಗೋವುಗಳನ್ನು ಹೊರಗೆ ಹೊರಡಿಸಿದುದು (೮-೧೪-೮). ಇವರಿಂದ ಸಹಚರಿತನಾಗಿಯೇ ಇಂದ್ರನು ವಲನನ್ನು ಇರಿದು (೨-೧೧-೨೦), ಹಸುಗಳನ್ನು ಹೊರಕ್ಕೆ ಓಡಿಸಿದುದು (೬-೧೭-೬). ಇವರಿಗೆ ಮುಖಂಡನೆಂಬ ಅಭಿಪ್ರಾಯದಿಂದಲೇ, ಇಂದ್ರನನ್ನು ಎರಡು ಸಂದರ್ಭಗಳಲ್ಲಿ (೧-೧೦೦-೪ ; ೧-೧೩೦-೩) ಅಂಗಿರಸ್ತಮ ಎಂದು ಕರೆದಿರುವುದು. ಇಂದ್ರನಿಗೆ ಉತ್ಸಾಹದಾಯಕವಾದ ಸೋಮವೂ ಅಂಗಿರಸರಿಗೊಸ್ಕರ ಗೋಶಾಲೆಗಳ ದ್ವಾರಗಳನ್ನು ತೆರೆಯಿತೆಂದು ಇದೆ (೯-೮೬-೨೩). ಗೋವಿಮೋಚನದ ಪ್ರಸಂಗದಲ್ಲಿ, ಅಂಗಿರಸರ ಗಾನವು ವಿಲಕ್ಷಣವಾದುದು. ಅವರಿಂದ ಸ್ತುತನಾಗಿ, ಇಂದ್ರನು ವಲನನ್ನು ಇರಿದನು (೨-೧೫-೮) ಗೋಶಾಲಾ ದ್ವಾರಗಳನ್ನು ಭೇದಿಸಿದನು (೪-೧೬-೧೮), ವಲನನ್ನು ಕೊಂದು, ಅವನ ದುರ್ಗದ್ವಾರಗಳನ್ನು ತೆರೆದನು (೬-೧೮-೫) ಅಥವಾ ಕತ್ತಲನ್ನು ಓಡಿಸಿ, ಭೂಮಿಯನ್ನು ವಿಸ್ತರಿಸಿ ಆಕಾಶದ ಅಧಃಪ್ರದೇಶಗಳನ್ನು ಸ್ಥಾಪಿಸಿದನು (೧-೬೨-೫). ನಾನಾ ವಿಧವಾಗಿ ಗಾನಮಾಡುವ ಮರುತರ ಗಾನವನ್ನೂ ಅಂಗಿರಸರು ಹಾಡುವುದಕ್ಕೆ ಹೋಲಿಸಿದೆ (೧೦-೭೮-೫) ಮತ್ತು ಅಂಗಿರಸರ ಗೀತೆಗಳಿಂದಲೇ, ದೇವತೆಗಳನ್ನು ಯಾಗಕ್ಕೆ ಕರೆಯುವುದು (೧-೧೦೭-೨) ಎಂದಮೇಲೆ ಅವರ ಹಾಡುಗಾರಿಕೆಯ ವೈಶಿಷ್ಟ್ಯವನ್ನು ಊಹಿಸಿಕೊಳ್ಳಬಹುದು. ಸಾಧಾರಣ ಋತ್ವಿಜರಿಂದ ಉಚ್ಚರಿಸಲ್ಪಡುವ ಸ್ತುತಿವಾಕ್ಯಗಳನ್ನೂ ಅಂಗಿರಸರ ಸ್ತುತಿಗೆ ಹೋಲಿಸುತ್ತಾರೆ (೧-೬೨-೧, ೨ ; ಇತ್ಯಾದಿ). ಗೋವುಗಳ ಇತಿಹಾಸದಲ್ಲಿ, ಪ್ರಸಂಗವಶಾತ್, ಅಂಗಿರಸರ ಪಾತ್ರವು ಇಂದ್ರನ ಪಾತ್ರಕಿಂತ ಹೆಚ್ಚೆಂದು ಕಾಣುತ್ತದೆ. ಇಂದ್ರನನ್ನು ಜೊತೆಯಲ್ಲಿಟ್ಟುಕೊಂಡು, ಅಂಗಿರಸರು, ಗೋ ಮತ್ತು ಅಶ್ವಶಾಲೆಗಳನ್ನು ಬರಿದು ಮಾಡಿದರು (೧೦-೬೨-೭). ಮುಂದೆ ಈ ಕೆಲಸವನ್ನು ಅಂಗಿರಸರೇ ಮಾಡಿದರು, ಅದರಲ್ಲಿ ಇಂದ್ರನ ಕೈವಾಡವೇ ಇಲ್ಲವೆನ್ನುವುದಕ್ಕೆ ಇದು ಮೊದಲನೆಯ ಹೆಜ್ಜೆ ಎನ್ನಬಹುದು. ತಾವು ಆಚರಿಸಿದ ಕರ್ಮ ಬಲದಿಂದ, ಅವರು ಹಸುಗಳನ್ನು ಹೊರಕ್ಕೆ ಅಟ್ಟಿ, ವಲನನ್ನು ಇರಿದು ಕೊಂದರು (೧೦-೬೨-೨), ಸೂರ್ಯನು ಆಕಾಶದಲ್ಲಿ ಏರುಪಂತೆ ಮಾಡಿದರು ಮತ್ತು ಭೂಮಿಯನ್ನು ವಿಸ್ತಾರವಾಗಿ ಹರಡಿದರು (೧೦-೬೨-೩). ತಾವು ಆಚರಿಸಿದ ಯಾಗ ಕರ್ಮದ ಬಲದಿಂದ ಬಂಡೆಯನ್ನು ಒಡೆದು, ಗೋವುಗಳೊಡನೆ ತಾವೂ (ಸಂತೋಷದಿಂದ) ಕಿರಿಚಿಕೊಂಡರು (೪-೩-೧೧). ಗಾನ ಮಾಡುತ್ತಾ ಅವರು ಗೋವುಗಳನ್ನು ಕಂಡರು (೧-೬೨-೨). ತಮ್ಮ ಗಾನಗಳಿಂದ, ಅವರು ಬಂಡೆಯನ್ನು ಒಡೆದು, ಬೆಳಕನ್ನು ಕಂಡರು (೧-೭೨-೨). ಇಂದ್ರನಿಗೋಸ್ಕರ, ಪಣಿನಾಮಕ ಅಸುರನಿಂದ ಅಪಹೃತವಾಗಿದ್ದ ಗೋವುಗಳನ್ನು ಸರಮೆಯು ಪತ್ತೆಹಚ್ಚಿದ ಪ್ರಸಂಗದಲ್ಲಿಯೂ, ಅಂಗಿರಸರ ಪಾತ್ರವಿದೆ (೧೦-೧೦೮-೮, ೧೦), ಸರಮೆಯು ಗೋವುಗಳನ್ನು ಗೊತ್ತುಹಚ್ಚುವುದರಲ್ಲಿ, ಇಂದ್ರ ಮತ್ತು ಅಂಗಿ





CC-0. Jangamwadi Math Collection. Digitized by eGangotri

ರಸರಿಗೆ ಸಹಾಯಮಾಡಿತು (೧-೬೨-೩ ; ೧-೭೨-೮ನ್ನು ಹೋಲಿಸಿ. ) ಅಂಗಿರಸರೇ ಸ್ವತಃ ಪಣಿಸಂಬಂಧವಾದ ಗೋವು ಮತ್ತು ಅಶ್ವಗಳನ್ನು ಕಂಡುಹಿಡಿದರೆಂದೂ ಇದೆ (೧-೮೩-೪). ಪಣಿಸಂಬಂಧವಾದ ಗೋವುಗಳ ವಿಮೋಚನಾ ಕಾರ್ಯದಲ್ಲಿ ಬೃಹಸ್ಪತಿಯೂ ಸೇರಿದಾನೆ (೧೦-೧೦೮-೬, ೧೧); ಪರ್ವತವನ್ನು ಛೇದಿಸಿ, ಗೋಗ್ರಹಣ ಮಾಡುವಾಗ, ಅವನಿಗೂ ಅಂಗಿರಸನೆಂಬ ವಿಶೇಷಣವಿದೆ (೬-೭೩-೧), ಭಗನು ಅನುಗ್ರಹಿಸುವಂತೆ ಗೋವುಗಳನ್ನು ಅನುಗ್ರಹಿಸುವಾಗಲೂ, ಬೃಹಸ್ಪತಿಗೆ ಇದೇ ವಿಶೇಷಣ (೧೦-೬೮-೨).

ಇಂದ್ರನ ಜೊತೆಯಲ್ಲಿದ್ದು, ಗೋವುಗಳನ್ನು ಓಡಿಸಿ, ನೀರನ್ನು ಹರಿಯುವಂತೆ ಮಾಡಿದಾಗ, ಬೃಹಸ್ಪತಿಯನ್ನು ಅಂಗಿರಸನೆಂತಲೇ ಕರೆದಿರುವುದು (೨-೨೩-೧೮). ಇದೊಂದು ಸಂದರ್ಭವನ್ನು ಬಿಟ್ಟರೆ, ಉಳಿದ ಏಕವಚನ ಪ್ರಯೋಗವೆಲ್ಲಾ ಅಗ್ನಿಪರವೇ. ಅಗ್ನಿಯು ಮೊದಲನೆಯ ಋಷಿಯಾದ ಅಂಗಿರಸನು (೧-೩೧-೧), ಪುರಾತನ ಅಂಗಿರಸನು (೧೦-೯೨-೧೫), ಅಥವಾ ಅಂಗಿರಸರಲ್ಲಿ ಬಹಳ ಪುರಾತನನೂ (೧-೧೨೭-೨), ಹೆಚ್ಚು ಸ್ಫೂರ್ತಿಯುಳ್ಳವನೂ (೬-೧೧-೩) ಆದವನು. ಅಗ್ನಿಯನ್ನು ಅನೇಕ ಸಲ ಅಂಗಿರಸರಲ್ಲಿ ಮುಖಂಡನೆಂದು ಕರೆದಿದೆ (೧-೭೫-೨ ; ಇತ್ಯಾದಿ). ಆದರೆ, ಇದೇ ಅಂಗಿರಸ್ತಮ (ಅಂಗಿರಸರ ಮುಖಂಡ) ಎಂಬುವುದು, ಒಂದೆರಡುಸಲ, ಇಂದ್ರ, ಉಷಸ್ಸು ಮತ್ತು ಸೋಮರಿಗೂ ಉಪಯೋಗಿಸಿದೆ. ಅಗ್ನಿ ಮೊದಲಾದವರಿಗೇ ಯಾರಿಗೂ ಅನ್ವಯಿಸದಂತೆ ಪ್ರಯೋಗಿಸಿರುವುದೂ ಉಂಟು ; ಪಿತೃಗಣದಲ್ಲಿ ಪುರಾತನ ಅಂಗಿರಸನೂ ಒಬ್ಬನು (೧-೧೩೯-೧) ಅಥವಾ ಅಂಗಿರಸ್ವತ್ ' ಎಂಬ ಪ್ರಯೋಗದಲ್ಲಿ (೧-೪೫-೩) ಸಂದರ್ಭಾನುಸಾರವಾಗಿ ಏಕವಚನಾರ್ಥವು ಉದ್ದಿಷ್ಟವಾದಾಗಲೂ, ಅದೇ ಅನನ್ವಿತವಾದ ಪ್ರಯೋಗ. ಎಲೈ ಅಗ್ನಿಯೇ, ಅಂಗಿರಸನೇ, ಮನು ಮತ್ತು ಅಂಗಿರಸರ ಆಹ್ವಾನಕ್ಕೆ ಮನ್ನಣೆ ಕೊಟ್ಟಂತೆ, (ನಮ್ಮ ಆಹ್ವಾನವನ್ನೂ ಮನ್ನಿಸಿ) ನಮ್ಮ ಸಮೀಪಕ್ಕೆ ಆಗಮಿಸು ಎಂಬಲ್ಲಿ (೧-೩೧-೧೭), ಅಗ್ನಿ ಮತ್ತು ಪಿತೃಗಳು ಇಬ್ಬರೂ ಆ ಪದದಿಂದ ಉದ್ದಿಷ್ಟರು.

ಅನುಕ್ರಮಣಿಯಲ್ಲಿ, ಅಂಗಿರಸರು ಒಂದು ಪುರೋಹಿತರ ವಂಶದವರು. ಒಂಬತ್ತನೆಯ ಮಂಡಲದ ಮಂತ್ರದ್ರಷ್ಟೃಗಳು. ಅಥರ್ವ-ಅಂಗಿರಸರು ಎಂಬಲ್ಲಿಯೂ ಅವರೇ ಉದ್ದಿಷ್ಟರು. ಅಥರ್ವ ವೇದಕ್ಕೇ ಅಥರ್ವಾಂಗಿರಸ ಎಂದು ಹೆಸರು (ಅ. ವೇ. ೧೦-೭-೨೦). ಇದೇ ಅಭಿಪ್ರಾಯ ಶತಪಥಬ್ರಾಹ್ಮಣದಲ್ಲಿಯೂ ಇದೆ (ಶ. ಬ್ರಾ. ೧೧-೫-೬-೭ ; ಇತ್ಯಾದಿ).

ಈ ಗುಂಪು ಮನುಷ್ಯರಿಗಿಂತ ಸ್ವಲ್ಪ ಉತ್ತಮರು, ದೇವಮಾನವರಿಗೆ ಮಧ್ಯದಲ್ಲಿ ಓಡಾಡಿಕೊಂಡಿದ್ದರು. ಅಥವಾ ದೇವದೂತನಾದ ಅಗ್ನಿಯ ದೂತರು ಎಂದು ಹೇಳಬಹುದು. ಅವರು ವ್ಯಕ್ತೀಕೃತವಾದ ಅಗ್ನಿಯ ಜ್ವಾಲೆಗಳು ಎನ್ನಬಹುದು.

## ವಿರೂಪಾಃ.

ಅಂಗಿರಸರೊಡನೆ ಸಂಬಂಧ ಹೊಂದಿರುವ ವಿರೂಪರೆಂಬುವರ ಹೆಸರು ಬಹುವಚನದಲ್ಲಿ ಮೂರು ಕಡೆ ಬಂದಿದೆ. ಅಂಗಿರಸರು ಮತ್ತು ವಿರೂಪರು ದ್ಯುದೇವತೆಯ ಪುತ್ರರು (ದಿವಸ್ಪುತ್ರಾಃ ೩-೫೩-೭). ವಿರೂಪರು ಋಷಿಗಳು, ಅಂಗಿರಸನ ಪುತ್ರರು, ಅಗ್ನಿಯಿಂದ, ಆಕಾಶದಿಂದ ಜನಿಸಿದವರು (೧೦-೬೨-೫, ೬). ಅಗ್ನಿಯನ್ನು ಸ್ತುತಿಸುವವನೆಂದು ಏಕವಚನದಲ್ಲಿ ' ವಿರೂಪ ' ಎಂದು ಒಂದು ಕಡೆ (೮-೭೫-೬) ಇದೆ. ೧-೪೫-೩ರಲ್ಲಿ, ಪ್ರಿಯಮೇಧಾವತ್, ಅತ್ರಿವತ್, ಅಂಗಿರಸ್ವತ್ ಇವುಗಳಂತೆ, ವಿರೂಪವತ್ (ವಿರೂಪನಂತೆ) ಎಂಬುದಾಗಿ ಏಕವಚನಾರ್ಥಕವಾಗಿ ಪ್ರಯೋಗಿಸಿದೆ. ೧೦-೧೪-೫ರಲ್ಲಿ ಅಂಗಿರಸರು, ವೈರೂಪರು (ವಿರೂಪನ ಮಕ್ಕಳು) ಮತ್ತು ಯಮ ಇವರುಗಳು ಒಟ್ಟಿಗೆ ಸ್ತುತರಾಗಿದಾರೆ. ವಿರೂಪ ಎಂದರೆ ಬದಲಾಯಿಸುವ ರೂಪವುಳ್ಳ ಎಂದರ್ಥವಾಗುತ್ತದೆ;



CC-0. Jangamwadi Math Collection. Digitized by eGangotri

ಪ್ರಾಯಶಃ ಈ ಪದವು ಅಂಗಿರಾಃ ಎಂಬ ಪದದ ಜೊತೆಯಲ್ಲಿಯೇ ಪ್ರಯೋಗಿಸಲ್ಪಟ್ಟಿರುವುದು ; ಆದುದರಿಂದ ಇದು ಅಂಗಿರಸ ಅಥವಾ ಅಂಗಿರಸರ ವಿಶೇಷಣವೆಂದೇ ಭಾವಿಸಬಹುದು.

## ನವಗ್ವಾಃ.

ಆರುಸಲ ಅಂಗಿರಸರೊಡನೆ ಬರುವುದನ್ನೂ ಸೇರಿಸಿಕೊಂಡು, ಒಟ್ಟು ಹದಿನಾಲ್ಕು ಕಡೆ ಈ ಪದವು ಬರುತ್ತದೆ. ಅವರು ನಮ್ಮ ಪುರಾತನ ಪಿತೃಗಳು (೬-೨೨-೨) ಅಥವಾ, ಅಂಗಿರಸರು, ಅಥರ್ವರು, ಭೃಗುಗಳು ಮತ್ತು ನವಗ್ವರು ನಮ್ಮ ಪಿತೃಗಳು (೧೦-೧೪-೬). ಇಂದ್ರ, ಸರಮಾ ಮತ್ತು ಪಣಿಸಂಬಂಧವಾದ ಗೋವುಗಳು, ಈ ವಿಷಯಕವಾದ ಗೋವುಗಳು, ಈ ವಿಷಯಕವಾದ ಇತಿಹಾಸದಲ್ಲಿ ನವಗ್ವರೂ ಸೇರಿದಾರೆ (೧-೬೨-೩, ೪ ; ೫-೪೫-೭ ; ೧೦-೧೦೮-೮). ನವಗ್ವರನ್ನು ಸ್ನೇಹಿತರಾಗಿಟ್ಟುಕೊಂಡು, ಇಂದ್ರನು ಗೋವುಗಳನ್ನು ಹುಡುಕಿದನು (೩-೩೯-೫). ಸೋಮರಸವನ್ನು ಸಿದ್ಧಪಡಿಸುತ್ತಾ, ಅವರು ಗಾನಗಳಿಂದ ಇಂದ್ರನನ್ನು ಸ್ತುತಿಸುತ್ತಾರೆ; ಗೋಶಾಲೆಗಳ ದ್ವಾರಗಳನ್ನು ಒಡೆಯುತ್ತಾರೆ (೫-೨೯-೧೨). ಸೋಮವನ್ನು ಹಿಂಡುವ ಶಿಲೆಗಳೊಡನೆ ಅವರು ಹತ್ತು ತಿಂಗಳು ಗಾನಮಾಡಿದರು (೫-೪೫-೭, ೧೧). ಬಹುವಚನದಲ್ಲಿ, ಎರಡು ಸಲ ಪ್ರಯೋಗವಿದೆ; ಅದರಲ್ಲಿ ಒಂದು ಸಲ ಅಗ್ನಿಕಿರಣಗಳಿಗೆ ವಿಶೇಷಣವಾಗಿದೆ (೬-೬-೩). ಅಂಗಿರಸ (೪-೫೧-೪; ೧೦-೬೨-೬) ಅಥವಾ ದಧ್ಯಂಚ (೯-೧೦೮-೪)ರಿಗೆ ವಿಶೇಷಣವಾಗಿ ಏಕವಚನದಲ್ಲಿ ಮೂರು ಸಲ ಪ್ರಯೋಗವಿದೆ. ಆ ಪದಕ್ಕೆ ಒಂಭತ್ತು ಜನ (ಗುಂಪಾಗಿ) ಹೋಗುವುದು ಎಂದರ್ಥ. ಪ್ರಾಯಶಃ ಒಂಬತ್ತು ಜನ ಪುರಾತನ ಋಷಿಗಳನ್ನು ಸೂಚಿಸಬಹುದು.

## ದಶಗ್ವಾಃ.

ಇದು ಏಳು ಸಲ—ಮೂರು ಸಲ ಏಕವಚನದಲ್ಲಿ, ಏಳರಲ್ಲಿ ಎರಡೇ ಸಲ ಪ್ರತ್ಯೇಕವಾಗಿ—ಸಾಧಾರ
ಣವಾಗಿ ನವಗ್ವರ ಜೊತೆಯಲ್ಲಿಯೇ, ಬಂದಿದೆ. ಇವರೇ ಮೊದಲು ಯಾಗಮಾಡಿದವರು (೨-೩೪-೧೨).
ಇಂದ್ರನು ನವಗ್ವರಿಂದ ಸಹಚರಿತನಾಗಿ ಗೋವುಗಳನ್ನು ಹುಡುಕಿದನು ಮತ್ತು ದಶಗ್ವರ ಸಹವಾಸದಲ್ಲಿ ಸೂರ್ಯ
ನನ್ನು ಕಂಡನು. (೩-೩೯-೫) ನವಗ್ವರು ಮತ್ತು ದಶಗ್ವರೊಡನೆ ಕೂಡಿ, ಇಂದ್ರನು ಪರ್ವತ ಮತ್ತು ವಲರನ್ನು
ಛೇದಿಸಿದನು (೧-೬೨-೪). ನವಗ್ವದಶಗ್ವರು ಇಂದ್ರನನ್ನು ಸ್ತುತಿಸಿ, ಗೋಶಾಲೆಗಳನ್ನು ಒಡೆದು ತೆರೆದರು
(೫-೨೯-೧೨). ನವಗ್ವ ಅಂಗಿರಸ ಮತ್ತು ಏಳು ಮುಖದ ದಶಗ್ವನ ಮೇಲೆ ಉಷಸ್ಸು ಪ್ರಕಾಶಿಸಿತು (೪-೫೧-೪).
ನವಗ್ವ ಸಹಚರಿತನಾದ ದಶಗ್ವನನ್ನು ಅಂಗಿರಸ್ತಮನೆಂದು (೧೦-೬೨-೬) ಕರೆದಿದೆ. ಇಂದ್ರನು ದಶಗ್ವನಿಗೆ ಕಷ್ಟ
ಬಂದಾಗ ಸಹಾಯಮಾಡಿದನೆಂದು (೮-೧೨-೨) ಇದೆ. ನವಗ್ವದಶಗ್ವರು ಸಂಖ್ಯಾವ್ಯತ್ಯಾಸವಿದ್ದರೂ, ಒಂದೇ
ವಿಧವಾದವರು ಎನ್ನಬಹುದು.

## ಸಪ್ತರ್ಷಿಗಳು.

ಈ ಸಪ್ತರ್ಷಿಗಳೆಂದು ಪ್ರಖ್ಯಾತವಾದ ಋಷಿಗಣವು ಋಗ್ವೇದದಲ್ಲಿ ನಾಲ್ಕೇ ಕಡೆ ಕಂಡುಬರುತ್ತದೆ.
ನಮ್ಮ ಪಿತೃಗಳು, ಏಳು ಜನ ಋಷಿಗಳು (೪-೪೨-೮). ದೇವತಾ ಸ್ವಭಾವವುಳ್ಳವರು (೧೦-೧೩೦-೭), ದೇವತೆ
ಗಳೊಡನೆ ಸಂಬಂಧವುಳ್ಳವರು (೧೦-೧೦೯-೪). ೨-೧-೨ನಲ್ಲಿ ಉಕ್ತವಾಗಿರುವ ಏಳು ಜನ ಋತ್ವಿಜರಿಂದ, ಈ
ಸಂಖ್ಯೆ ಸೂಚಿತವಾಗಬಹುದು ; ಆ ಏಳು ಜನಗಳೇ ಸಪ್ತಋಷಿಗಳಿರಬಹುದು. ಶತಪಥಬ್ರಾಹ್ಮಣದಲ್ಲಿ ಈ
ಏಳು ಜನಕ್ಕೂ ಒಂದೊಂದು ಹೆಸರಿದೆ (ಶ. ಬ್ರಾ. ೧೪-೫-೨-೬ ; ಬೃಹದಾ. ಉಪ. ೨-೨-೬). ಅದೇ ಬ್ರಾಹ್ಮ
ಣದಲ್ಲಿ (೨-೧-೨-೪ ; ಋ. ವೇ. ೮-೧-೧೦ನ್ನು ಹೋಲಿಸಿ), ಆ ಏಳು ಜನಗಳೂ ಸಪ್ತರ್ಷಿಮಂಡಲದ ಏಳು



CC-0. Jangamwadi Math Collection. Digitized by eGangotri

ನಕ್ಷತ್ರಗಳೆಂದೂ ಮೊದಲು ಕರಡಿಗಳಾಗಿದ್ದರೆಂದೂ ಹೇಳಿದೆ. ಋಕ್ಷ ಎಂಬ ಪದಕ್ಕೆ ನಕ್ಷತ್ರ (೧-೨೪-೧೦) ಮತ್ತು ಕರಡಿ (೫-೫೬-೩) ಎಂಬ ಎರಡು ಅರ್ಥಗಳಿರುವುದರಿಂದಲೂ, ಎರಡು ಸಂದರ್ಭಗಳಲ್ಲಿಯೂ ಸಂಖ್ಯೆ ಒಂವೇ ಆಗಿರುವುದರಿಂದಲೂ, ಈ ಅಭಿಪ್ರಾಯ ಬಂದಿರಬಹುದು.

ಏಳು ಜನ ವಿಪ್ರರು ಮತ್ತು ನವಗ್ವರು ಇಂದ್ರನನ್ನು ಸ್ತುತಿಸಿದರು (೬-೨೨-೨; ೩-೩೯-೫ನ್ನು ಹೋಲಿಸಿ; ೪-೨-೧೫) ಎಂಬಲ್ಲಿ ಏಳು ವಿಪ್ರರು ಸಪ್ತರ್ಷಿಗಳೇ ಇರಬೇಕು. ಏಳುಜನ ಹೋತೃಗಳು ಮನುವಿನಿಂದ ಸಹಿತರಾಗಿ ದೇವತೆಗಳಿಗೆ ಮೊದಲನೆಯ ಆಹುತಿಯನ್ನು ಕೊಟ್ಟರು (೧೦-೬೩-೭) ಎಂಬಲ್ಲಿಯೂ ಇದೇ ಅಭಿಪ್ರಾಯವಿರಬೇಕು.

## ಅತ್ರಿ

ಋಗ್ವೇದದಲ್ಲಿ ಹೆಚ್ಚುಸಲ ಪ್ರಸಕ್ತನಾಗುವ ಪುರಾತನ ಋಷಿಗಳಲ್ಲಿ ಒಬ್ಬನು. ಏಕವಚನದಲ್ಲಿ ಅರವತ್ತು ಸಲವೂ, ಅತ್ರಿ ಗೋತ್ರದವರು ಎಂಬರ್ಥದಲ್ಲಿ ಬಹುವಚನಾಂತವಾಗಿ ಮೂರು ಸಲವೂ ಪ್ರಯೋಗವಿದೆ. ಐದು ಪಂಗಡಗಳಿಗೆ ಸೇರಿದ ಋಷಿ (೧-೧೧೭-೩), ಮನು ಮೊದಲಾದ ಮಾನವ ವರ್ಗದ ಮೂಲಪುರುಷರಲ್ಲಿ ಒಬ್ಬನು (೧-೩೯-೯).

ಅಗ್ನಿಯು ಅತ್ರಿ (೭-೧೫-೫) ಮತ್ತು ಇತರ ಪುರಾತನ ಋಷಿಗಳಿಗೆ ಸಹಾಯ ಮಾಡಿದನು (೧-೪೫-೩; ೧೦-೧೫೦-೫). ಇಂದ್ರನೂ ಕೂಡ ಅತ್ರಿಯ ಪ್ರಾರ್ಥನೆಯನ್ನು ಕೇಳಿ (೮-೩೬-೭) ಅಂಗಿರಸರು ಮತ್ತು ಅತ್ರಿಗೋಸ್ಕರ ಗೋಶಾಲೆಯನ್ನು ತೆರೆದನು (೧-೫-೧೩). ಆದರೆ, ಅತ್ರಿಯು ಮುಖ್ಯವಾಗಿ ಅಶ್ವಿನೀದೇವತೆಗಳ ಆಶ್ರಿತನೆಂದೇ ಪ್ರತಿಪಾದಿಸಿರುವುದು ಮತ್ತು ಅತ್ರಿವಿಷಯಕವಾದ ಇತಿಹಾಸವೂ ಅಶ್ವಿನೀದೇವತೆಗಳಿಗೆ ಸಂಬಂಧಿಸಿದೆ. ಅತ್ರಿಯನ್ನು ತಮಸ್ಸಿನಿಂದ ಬಿಡುಗಡೆ ಮಾಡಿದರು (೬-೫೦-೧೦; ೭-೭೧-೫). ದುಷ್ಟರಾಕ್ಷಸನ ಮಾಯಾಜಾಲಗಳನ್ನು ಪರಿಹರಿಸಿ (೧-೧೧೭-೩), ಪರಿವಾರಸಮೇತನಾದ (೧-೧೧೬-೮; ೧-೧೧೭-೩), ಅತ್ರಿಯನ್ನು ಕಮರಿಯಿಂದ ಮೇಲಕ್ಕೆ ಎತ್ತಿದರು (೫-೭೮-೪). ಅತ್ರಿಯು ಬಿದ್ದಿದ್ದ ಮತ್ತು ಅಶ್ವಿನೀದೇವತೆಗಳು ಅವನನ್ನು ಮೇಲಕ್ಕೆ ಎತ್ತಿದ ಹಳ್ಳವು ಒಂದು ದೊಡ್ಡ ಅಗ್ನಿಕುಂಡ; ಆದರೆ, ಅವರು ಅವನಿಗೆ ಪುನರುಜ್ಜೀವಕವಾದ ಪಾನೀಯವನ್ನು ಕೊಡುತ್ತಾರೆ (೧-೧೧೬-೮; ೧-೧೧೮-೭). ಅಥವಾ, ಅವನು ಬಿದ್ದಿದ್ದ ಅಗ್ನಿಕುಂಡವೇ ಅವನಿಗೆ ಹಿತವಾಗಿರುವಂತೆ ಮತ್ತು ಅವನ ವಾಸಗೃಹವು ಅವನಿಗೆ ಅನುಕೂಲವಾಗಿರುವಂತೆ ಮಾಡಿದರು (೧೦-೩೯-೯; ೮-೭೩-೭); ಅಗ್ನಿಯು ಅವನನ್ನು ದಹಿಸದಂತೆ ಅಡ್ಡಿಪಡಿಸುತ್ತಾರೆ (೮-೭೩-೮); ಬೆಂಕಿಯ ಕಾವಿನಿಂದ ದಹಿಸಲ್ಪಡುತ್ತಿದ್ದ ಅತ್ರಿಯನ್ನು ಉಳಿಸಿದರು (೧೦-೮೦-೩), ಶೈತ್ಯವನ್ನುಂಟುಮಾಡಿ, ತಾಪ ಪರಿಹಾರ ಮಾಡಿದರು (೧-೧೧೯-೬; ೮-೭೩-೩) ಮತ್ತು ಉರಿಯುವ ಬೇಗೆಯೇ ಅವನಿಗೆ ಹಿತವಾಗಿರುವಂತೆ ಅನುಗ್ರಹಿಸಿದರು (೧-೧೧೨-೭). ವೃದ್ಧನಾಗಿದ್ದ ಅತ್ರಿಯನ್ನು ಪುನಃ ಯುವಕನನ್ನಾಗಿ ಮಾಡಿದರು (೧೦-೧೪೩-೧೨).

ಸ್ವರ್ಭಾನುವಿನಿಂದ ನಿಗೂಹಿತನಾಗಿದ್ದ ಸೂರ್ಯನನ್ನು ಅತ್ರಿಯು ಪತ್ತೆಹಚ್ಚಿ, ಪುನಃ ಆಕಾಶದಲ್ಲಿ ಸ್ಥಾಪಿಸಿದನು (೫-೪೦-೬, ೮). ಅದರ ಮುಂದಿನ ಮಂತ್ರದಲ್ಲಿ, ಈ ಮಹಾಕಾರ್ಯವನ್ನು ಸಾಧಿಸಿದವರು ಅತ್ರಿಗಳು ಎಂದು ಹೇಳಿದೆ. ಅಥರ್ವ ವೇದದಲ್ಲಿಯೂ, ಈ ಸೂರ್ಯನನ್ನು ಕಂಡುಹಿಡಿದು ಆಕಾಶದಲ್ಲಿ ಸ್ಥಾಪಿಸಿದ ವಿಷಯ ಪ್ರಸ್ತಾಪಿತವಾಗಿದೆ (ಅವೇ. ೧೩-೨-೪, ೧೨, ೩೬). ಶತಪಥಬ್ರಾಹ್ಮಣದಲ್ಲಿ, ಅತ್ರಿಯು ತಮಃಪರಿಹಾರಕನಾದ ಪುರೋಹಿತ (ಶ. ಬ್ರಾ. ೪-೩-೪-೨೧), ವಾಗ್ದೇವತೆಯಿಂದ ಜನಿಸಿದವನು (೧-೪-೫-೧೩) ಮತ್ತು ಅವನೇ ವಾಗ್ದೇವತೆಯೆಂತಲೂ (೧೪-೫-೨-೫) ಹೇಳಿದೆ.



CC-0. Jangamwadi Math Collection. Digitized by eGangotri

ಐದನೆಯ ಮಂಡಲ ಪೂರ್ತಿಯಾಗಿ ಅತ್ರಿಋಷಿ ದೃಷ್ಟವು ಅತ್ರಿ ಅಥವಾ ಅತ್ರಿಗಳೇ ಐದನೆಯ ಮಂಡಲದ ಮಂತ್ರದ್ರಷ್ಟೃಗಳು. ಏಕವಚನ ಅಥವಾ ಬಹುವಚನದಲ್ಲಿರುವ ಅತ್ರಿಪದ ಪ್ರಯೋಗದಲ್ಲಿ ಕಾಲುಭಾಗ ಈ ಮಂಡಲದಲ್ಲಿಯೇ ಇದೆ. ಅತ್ರಯಃ ಎಂಬ ಬಹುವಚನ ಪದದಿಂದ ಆ ಗೋತ್ರದ ಋಷಿಗಳು ಉದ್ದಿಷ್ಟರು.

ಅದ್ (ತಿನ್ನು) ಧಾತುವಿನಿಂದ ನಿಷ್ಪನ್ನವಾಗಿರಬಹುದು. ಅತ್ರಿನ್ (ನುಂಗುವವನು) ಎಂಬ ಪದವು ಈ ಧಾತುವಿನಿಂದ ನಿಷ್ಪನ್ನವಾಗಿ, ರಾಕ್ಷಸಾದಿಗಳಿಗೆ ವಿಶೇಷಣವಾಗಿ ಋಗ್ವೇದದಲ್ಲಿ ಉಪಯೋಗಿಸಲ್ಪಟ್ಟಿದೆ. ಪ್ರಾಯಶಃ ಈ ಅರ್ಥದಲ್ಲಿಯೇ, ಅತ್ರಿ ಎಂಬುದು ಅಗ್ನಿಗೆ ವಿಶೇಷಣವಾಗಿರುವುದು (೨-೮-೫). ಅತ್ರಿ ಪದದ ಜೊತೆಗೆ ಸಪ್ತವಧ್ರಿ ಎಂಬ ಪದಯುಕ್ತವಾಗಿ ಸುಮಾರು ನಾಲ್ಕು ಕಡೆ ಬಂದಿದೆ. ಸಪ್ತವಧ್ರಿಯು ಅಶ್ವಿನೀ ದೇವತೆಗಳ ಆಶ್ರಿತ; ಇವನನ್ನೇ ಬಂಧನದಿಂದ ವಿಮೋಚನೆ ಮಾಡಬೇಕೆಂದು ಅಶ್ವಿನೀ ದೇವತೆಗಳು ಪ್ರಾರ್ಥಿತರಾಗಿದಾರೆ (೫-೭೮-೫, ೬) ಮತ್ತು ಸಪ್ತವಧ್ರಿಯು ಅಗ್ನಿಯ ಅಲುಗನ್ನು (ಜ್ವಾಲೆ) ತನ್ನ ಸ್ತುತಿಯಿಂದ ಹರಿತವನ್ನಾಗಿ ಮಾಡಿದನು (೮-೭೩-೮). ಸುಡುತ್ತಿದ್ದ ಗರ್ತಪ್ರದೇಶವನ್ನು ಅತ್ರಿಸಪ್ತವಧ್ರಿಗೋಸ್ಕರವೇ, ಅಶ್ವಿನೀ ದೇವತೆಗಳು ಹಿತವಾಗಿರುವಂತೆ ಮಾಡಿದುದು (೧೦-೩೯-೯). ಪ್ರಾಯಶಃ, ಅತ್ರಿ ಮತ್ತು ಸಪ್ತ ವಧ್ರಿಗಳು ಒಂದೇ ವ್ಯಕ್ತಿಯ ಎರಡು ಹೆಸರುಗಳಿರಬಹುದು.

## ಕಣ್ವ ಮೊದಲಾದವರು.

### ಕಣ್ವ

ಈ ಹೆಸರು ಸುಮಾರು ಅರವತ್ತು ಸಲ ಬಂದಿದೆ. ಈತನೂ ಒಬ್ಬ ಪುರಾತನ ಋಷಿ ಮತ್ತು ಕಣ್ವರು ಅವನ ವಂಶೀಕರು. ಏಕವಚನ ಬಹುವಚನಗಳಲ್ಲಿ ಸುಮಾರು ಸಮವಾದ ಪ್ರಯೋಗಗಳಿವೆ. ಕಣ್ವನು ನೃಷದನ ಮಗ (೧೦-೩೧-೧೧). ಆದರಿಂದಲೇ ಅವನಿಗೆ ನಾರ್ಷದನೆಂದು ಹೆಸರು (೧-೧೧೭-೮; ಅ. ವೇ. ೪-೧೯-೨). ಪ್ರಪಂಚದ ಮೂಲಪುರುಷರಾದ ಮನು, ಅಂಗಿರಸರು ಮೊದಲಾದವರ ಪಟ್ಟಿಯೊಂದರಲ್ಲಿ ಕಣ್ವರ ಹೆಸರೂ ಸೇರಿದೆ (೧-೧೩೯-೯). ಕಣ್ವ ಮೊದಲಾದವರಿಗೆ ಅಗ್ನಿಯು ದೇವತೆಗಳಿಂದ ದತ್ತವಾಯಿತು. ಅವರಿಂದ ಉದ್ದೀಪಿತನಾದ ಅಗ್ನಿಯು ಅವರುಗಳನ್ನು ಅನುಗ್ರಹಿಸದನು (೧-೩೬-೧೦, ೧೧, ೧೭). ಅಗ್ನಿಯು ಕಣ್ವ, ಅತ್ರಿ, ತ್ರಸದಸ್ಯು ಮೊದಲಾದವರಿಗೆ ಯುದ್ಧದಲ್ಲಿ ಸಹಾಯಮಾಡಿದನು (೧೦-೫೦-೫), ಮತ್ತು ಅವನು ಕಣ್ವಾದಿಗಳಿಗೆ ನಾಯಕ ಮತ್ತು ಮಿತ್ರ (೧೦-೧೧೫-೫). ಇಂದ್ರನು ಕಣ್ವ, ತ್ರಸದಸ್ಯು ಮೊದಲಾದವರಿಗೆ ಸುವರ್ಣ ಮತ್ತು ಗೋವುಗಳನ್ನನುಗ್ರಹಿಸಿದನು (ವಾ. ೧-೧೦ ; ೨-೧೦) ; ತುರುಶ್ವ ಮತ್ತು ಯದುಗಳಿಂದ ಯುಕ್ತನಾದ ಕಣ್ವನಿಗೆ ಮರುತ್ತುಗಳು ಸಂಪತ್ತನ್ನು ದಯಪಾಲಿಸಿದರು (೮-೭-೧೮). ಅಶ್ವಿನೀದೇವತೆಗಳು ಕಣ್ವನಿಗೆ ಅನೇಕ ಸಲ ಸಹಾಯ ಮಾಡಿದಾರೆ (೧-೪೭-೫ ; ೧-೧೧೨-೫ ; ೮-೫-೨೩ ; ೮-೮-೨೦). ಅಶ್ವಿನೀ ದೇವತೆಗಳಿಂದ ಉದ್ಧರಿಸಲ್ಪಟ್ಟಾಗ, ಕಣ್ವನು ಅಂಧನಾಗಿದ್ದನು (೮-೫-೨೩) ; ಅವರು ಅವನಿಗೆ ಕಣ್ಣನ್ನು ಕೊಟ್ಟರು (೧-೧೧೮-೭).

ಎಂಟನೆಯ ಮಂಡಲದ ಬಹಳ ಭಾಗಕ್ಕೆ ಕಣ್ವರೇ ಋಷಿಗಳು. ಮಂತ್ರಗಳಲ್ಲಿಯೇ ಋಷಿಗಳ ಹೆಸರು ಕಣ್ವರೆಂದು ಇದೆ. ಆದರೆ 'ಅಂಧನಾದ ಕಣ್ವ'ನ ವಿಷಯ ಪ್ರಸ್ತಾಪಿತವಾಗಿಲ್ಲ. ಅಂಧ ಕಣ್ವನು, ರಾತ್ರಿಯ ಕಾಲದ ಸೂರ್ಯ ಅಥವಾ ನಿಗೂಢನಾದ ಅಗ್ನಿ ಅಥವಾ ಸೋಮನೆಂದು ಕೆಲವರು ಅಭಿಪ್ರಾಯಪಡುತ್ತಾರೆ.

### ಮೇಧ್ಯಾತಿಥಿ

(ಮೇಧಾತಿಥಿ)—ಕಣ್ವವಂಶದವನು ಮತ್ತು ಕಾಣ್ವನೆಂದೂ ಹೆಸರು (೮-೨-೪೦). ಒಂಭತ್ತು ಸಲ ಈ ಹೆಸರು ಬಂದಿದೆ. [illegible] ಪೂರ್ವಿಕರ ಪಟ್ಟಿಗಳಲ್ಲಿ, ಕಣ್ವ ಮೊದಲಾದವರೊಡನೆ


CC-0. Jangamwadi Math Collection. Digitized by eGangotri

ಪ್ರಯೋಗವಿದೆ (೧-೩೬-೧೦, ೧೧, ೧೭). ಯಜ್ಞಸಂಬಂಧವಾದ ಅತಿಥಿಯುಳ್ಳವನು (ಅಂದರೆ ಅಗ್ನಿ) ಎಂದು ಈ ಪದಕ್ಕೆ ಅರ್ಥವಾಗುತ್ತದೆ. ಪ್ರಿಯಮೇಧಾ—ಕಣ್ವಾದಿಗಳ ಜೊತೆಯಲ್ಲಿ ಐದಾರು ಕಡೆ ಬಂದಿದೆ (೮-೫೨೫). ಅವನ ವಂಶಜರಿಗೆ ಪ್ರಿಯಮೇಧರೆಂದು ಹೆಸರು.

## ಕುತ್ಸ.

ಇಂದ್ರಸಂಬಂಧವಾದ ಇತಿಹಾಸಗಳಲ್ಲಿ ಈ ಯೋಧನ ಪರಿಚಯವಾಗುತ್ತದೆ. ಸುಮಾರು ಅರವತ್ತು ಸಲ ಪ್ರಸಕ್ತವಾಗಿದೆ. ಒಂದೇ ಒಂದು ಸಲ ಮಾತ್ರ ಬಹುವಚನದಲ್ಲಿ, ಇಂದ್ರನನ್ನು ಉದ್ದೇಶಿಸಿ ಗಾನಮಾಡುವ ಗಾಯಕರು ಎಂಬರ್ಥದಲ್ಲಿ ಪ್ರಯೋಗವಿದೆ (೭-೨೫-೫). ಆರ್ಜುನ ಎಂಬುವನ ಮಗನಾದುದರಿಂದ ಆರ್ಜುನೇಯ ಎಂತಲೂ ಹೆಸರು (೧-೧೧೨-೨೩). ಇವನಿಗೆ, ದಸ್ಯುವಿನೊಡನೆ ಹೋರಾಟದಲ್ಲಿ ಇಂದ್ರನ ಸಹಾಯ ಪಡೆದ ಮಗನೊಬ್ಬನಿದಾನೆ (೧೦-೧೦೫-೧೧). ಕುತ್ಸನು ಯುವಕ ಮತ್ತು ತೇಜಸ್ವಿ (೧-೬೩-೩). ಗರ್ತದಲ್ಲಿ ಬೀಳಿಸಲ್ಪಟ್ಟಾಗ, ಇಂದ್ರನನ್ನು ಸಹಾಯ ಮಾಡೆಂದು ಪ್ರಾರ್ಥಿಸಿದ ಋಷಿಯು ಈತನೇ (೧-೧೦೬-೬). ಕುತ್ಸನೂ ಮತ್ತು ಇಂದ್ರನೂ ಒಂದೇ ರಥದಲ್ಲಿ ಸಂಚರಿಸುತ್ತಾರೆ (೪-೧೬-೧೧ ; ೫-೨೯-೯) ; ಇಂದ್ರನು ಕುತ್ಸನನ್ನು ಗಾಳಿಯಲ್ಲಿ ತೇಲಿಸಿಕೊಂಡು ಹೋಗುತ್ತಾನೆ (೫-೩೧-೮ ; ೮-೧-೧೧) ; ಅಥವಾ ತನ್ನ ಸಾರಥಿಯಾಗಿ ಮಾಡಿಕೊಳ್ಳುತ್ತಾನೆ (೨-೧೯-೬ ; ೬-೨೦-೫). ಕುತ್ಸನು ಇಂದ್ರನಂತೆಯೇ ಇದಾನೆ (೪-೧೬-೧೦) ; ಇಂದ್ರಾಕುತ್ಸರೆಂಬ ದೇವತಾದ್ವಯವು ರಥದಲ್ಲಿ ಆಗಮಿಸಬೇಕೆಂದು ಪ್ರಾರ್ಥಿತವಾಗಿದೆ (೫-೩೧-೯).

ಶುಷ್ಣ ಎಂಬ ಶತ್ರುವನ್ನು ಪರಾಜಯಗೊಳಿಸುವ ಸಂದರ್ಭದಲ್ಲಿ ಇಂದ್ರ ಮತ್ತು ಕುತ್ಸರು ಒಟ್ಟಾಗಿ ಸೇರುತ್ತಾರೆ. ಕುತ್ಸನಿಗೋಸ್ಕರ ಇಂದ್ರನು ಶುಷ್ಣನನ್ನು ಹೊಡೆದನು (೧-೬೩-೩ ; ೧-೧೨೧-೯ ; ೪-೧೬-೧೨ ; ೬-೨೬-೩) ; ಶುಷ್ಣನಿಗೆ ಪ್ರತಿಕಕ್ಷಿಯಾದ ಕುತ್ಸನಿಗೆ ಸಹಾಯ ಮಾಡಿದನು (೧-೫೧-೬) ; ಶುಷ್ಣನನ್ನು ಕುತ್ಸನಿಗೆ ಅಧೀನಪಡಿಸಿದನು (೭-೧೯-೨) ; ಅಥವಾ ಕುತ್ಸ ಮತ್ತು ಇತರ ದೇವತೆಗಳಿಂದ ಯುಕ್ತನಾಗಿ, ಶುಷ್ಣನನ್ನು ಸಂಪೂರ್ಣವಾಗಿ ಪರಾಭವಗೊಳಿಸಿದನು (೫-೨೯-೯). ಕುತ್ಸನ ಪಕ್ಷವನ್ನು ವಹಿಸಿ, ಶುಷ್ಣನ ಮೇಲೆ ಯುದ್ಧ ಮಾಡೆಂದು (೬-೩೧-೩) ಅಥವಾ ಕುತ್ಸನದ್ನು ಶುಷ್ಣನ ವಧೆಗೋಸ್ಕರ ಕರೆತರಬೇಕೆಂದು (೧-೧೭೫-೪) ಇಂದ್ರನನ್ನು ಪ್ರಾರ್ಥಿಸಿದೆ. ಇಂದ್ರನು ಕುತ್ಸನಿಗೋಸ್ಕರ ದೇವತೆಗಳ ಮೇಲೂ (೪-೩೦-೨ರಿಂದ ೫), ಅಥವಾ ಗಂಧರ್ವರ ಮೇಲೂ (೮-೧-೧೧), ಯುದ್ಧಮಾಡುತ್ತಾನೆ. ಸೂರ್ಯ ರಥವನ್ನು ಕದಿಯುವುದೇ, ಶುಷ್ಣನೊಡನೆ ಯುದ್ಧ ಮಾಡುವುದರ ಪರಿಣಾಮ (೧-೧೭೫-೪ ; ೬-೩೧-೩). ಶತ್ರುಗಳಿಂದ ಪೀಡಿತನಾದ ಕುತ್ಸನಿಗೋಸ್ಕರಲೇ, ಇಂದ್ರನು ಸೂರ್ಯರಥದ ಚಕ್ರವನ್ನು ಕಿತ್ತು (೪-೩೦-೪), ಕುತ್ಸನು ಉಪಯೋಗಿಸಲೆಂದು, ಅವನಿಗೆ ಕೊಟ್ಟನು (೫-೨೯-೧೦). ಇಂದ್ರನು ಮನುಷ್ಯರ ಸುಖಕ್ಕೋಸ್ಕರ ಸೂರ್ಯನನ್ನು ಸಂಪಾದಿಸಿದನು ಎಂಬುದೇ, ಸೂರ್ಯನನ್ನು ಚಲಿಸದಂತೆ ಮಾಡಿದನೆಂದು ಉಕ್ತವಾಗಿರುವಂತೆ ಕಾಣುತ್ತದೆ (೧-೧೨೧-೧೦ ; ೧೦-೧೩೮-೩ಗಳನ್ನು ಹೋಲಿಸಿರಿ). ಸೂರ್ಯನನ್ನು ಜಯಿಸಿ, ಇಂದ್ರನು ಸಾರಥಿಯಾದ ಕುತ್ಸನ ಸಂಚಾರಕ್ಕೆ ಅಗಲವಾದ ದಾರಿಯನ್ನು ಮಾಡಿದನು (೬-೨೦-೫). ಕುತ್ಸನಿಂದ ಯುಕ್ತನಾಗಿ, ದುಷ್ಟರನ್ನು ಧ್ವಂಸಮಾಡಿ, ಸೂರ್ಯನ ಚಕ್ರವನ್ನು ಉರುಳುವಂತೆ ಮಾಡಬೇಕೆಂದು ಪ್ರಾರ್ಥಿಸಿದೆ (೪-೧೬-೧೨). ಶುಷ್ಣನಲ್ಲದೆ, ಇತರ ಶತ್ರುಗಳೂ (ತುಗ್ರ, ಸ್ಮದಿಭ ಮತ್ತು ವೇತಸುಗಳು) ಕುತ್ಸನಿಗೆ ಇಂದ್ರನಿಂದ ವಶಪಡಿಸಲ್ಪಟ್ಟರು (೧೦-೪೯-೪).

ಇಂದ್ರನಿಂದ ಸಹಾಯಪಡೆದವನೂ, ಅವನ ಪ್ರೀತಿಪಾತ್ರನೂ ಆದ (೧-೩೩-೧೪) ಕುತ್ಸನು ಒಂದೊಂದು ಸಲ ಇಂದ್ರನ ಶತ್ರುವಾಗಿ ಕಾಣುತ್ತಾನೆ. ಕುತ್ಸ, ಆಯು ಮತ್ತು ಅತಿಥಿಗ್ವರ ಯೋಧರನ್ನು



CC-0. Jangamwadi Math Collection. Digitized by eGangotri

ಇಂದ್ರನು ಬಡಿದು ಉರುಳಿಸಿದನು (೨-೧೪-೭), ಆಯು, ಕುತ್ಸ ಮತ್ತು ಅತಿಥಿಗ್ವರನ್ನು ಪೀಡಿಸಿದನು (ವಾಲ. ೫-೨), ಈ ಮೂವರನ್ನೂ ತೂರ್ವಯಾಣನೆಂಬ ತರುಣನಾದ ರಾಜನಿಗೆ ಹಿಡಿದುಕೊಟ್ಟನು (೧-೫೩-೧೦) ಅಥವಾ ಆ ರಾಜನಿಗೋಸ್ಕರ, ಮೂವರನ್ನೂ ಹೊಡೆದು ನೆಲಕ್ಕುರುಳಿಸಿದನು (೬-೧೮-೧೩). ನಿರುಕ್ತದಲ್ಲಿ (೨-೨೦) ಕುತ್ಸ ಎಂಬುದು ವಜ್ರಾಯುಧದ ನಾಮಗಳಲ್ಲಿ ಒಂದು.

### ಕಾವ್ಯ ಉಶನಾ

ಉಶನಾ ಎಂಬ ಋಷಿಯು ಹೆಸರು ಹನ್ನೊಂದು ಕಡೆ ಪ್ರಸಕ್ತವಾಗಿದೆ. ಎರಡು ಸಲ ಕವಿ ಎಂಬುದಾಗಿಯೂ, ಐದು ಸಲ ಕಾವ್ಯ ಎಂಬುದಾಗಿಯೂ ಕರೆಯಲ್ಪಟ್ಟಿದಾನೆ. ಜ್ಞಾನವು ಅವನ ವೈಶಿಷ್ಟ್ಯ; ಬುದ್ಧಿಯ ಮಾತುಗಳನ್ನು ಹೇಳುತ್ತಿರುವ ಸೋಮನು ಉಶನನಿಗೆ ಉಪಮಿತನಾಗಿದಾನೆ (೯-೯೭-೭) ಮತ್ತು ಅದೇಕಾರಣದಿಂದ, ಸೋಮನೇ ಉಶನ ಎಂದೂ ಹೇಳಿದೆ (೯-೮೭-೩). ಕಾವ್ಯ ಉಶನನೇ ಅಗ್ನಿಯನ್ನು ಯಜ್ಞದಲ್ಲಿ ಹೋತೃಸ್ಥಾನದಲ್ಲಿ ಸ್ಥಾಪಿಸಿದನು (೮-೨೩-೧೭). ಅವನೇ ಗೋವುಗಳನ್ನು ಈ ಕಡೆ (ಭೂಮಿಯ ಕಡೆ) ಓಡಿಸಿದನು (೧-೮೩-೫). ಅವನು ಇಂದ್ರನ ಆಶ್ರಿತ (೬-೨೦-೧೧); ಇಂದ್ರನು ಅವನ ಸಹವಾಸದಲ್ಲಿ ಸಂತೋಷದಿಂದ ಇದ್ದನು (೧-೫೧-೧೧); ಕುತ್ಸ, ಉಶನಾ ಮೊದಲಾದವರೂ, ತಾನೂ ಒಂದೇ ಎಂದು ಇಂದ್ರನೇ ಹೇಳಿಕೊಂಡಿದಾನೆ (೪-೨೬-೧). ಕುತ್ಸ ಸಹಚರಿತನಾಗಿ, ಇಂದ್ರನು ಶುಷ್ಣನನ್ನು ನಿರ್ಮೂಲ ಮಾಡುವುದರಲ್ಲಿ, ಉಶನನೂ ಭಾಗವಹಿಸಿದ್ದನು (೫-೨೯-೯). ವೃತ್ರಾಸುರ ವಧೆಗೆ ಉಪಯೋಗಿಸಿದ ವಜ್ರಾಯುಧ ರಚನೆಯಲ್ಲಿಯೂ, ಉಶನನ ಕೈವಾಡವಿತ್ತು (೧-೧೨೧-೧೨; ೫-೩೪-೨; ೧-೫೧-೧೦ನ್ನು ಹೋಲಿಸಿ).

ಇನ್ನೂ ಅನೇಕ ಪುರಾತನ ಋಷಿಗಳು ಹೇಳಲ್ಪಟ್ಟಿದಾರೆ. ಗೋತಮ, ವಿಶ್ವಾಮಿತ್ರ, ವಾಮದೇವ, ಭರದ್ವಾಜ, ವಸಿಷ್ಠ ಮೊದಲಾದವರು, ಅವರಲ್ಲಿ ಕೆಲವರು. ಇವರು ಅಥವಾ ಇವರ ವಂಶಜರು, ಕ್ರಮವಾಗಿ, ಎರಡು, ಮೂರು, ನಾಲ್ಕು, ಆರು ಮತ್ತು ಏಳನೆಯ ಮಂಡಲದ ಮಂತ್ರಗಳಿಗೆ ಋಷಿಗಳು. ಋಗ್ವೇದದಲ್ಲಿ ಅನೇಕ ಸಲ ಪ್ರಸಕ್ತರಾಗುವ ಋಷಿಗಳಲ್ಲಿ ಅಗಸ್ತ್ಯನೂ ಒಬ್ಬನು. ಪ್ರಸಿದ್ಧರಾದ ಪುರಾತನ ಯೋಧರಲ್ಲಿ, ಸುದಾಸ, ಪುರುಕುತ್ಸ ಮತ್ತು ಅವನ ಮಗ ತ್ರಸದಸ್ಯು, ಮತ್ತು ದಿವೋದಾಸ ಅತಿಥಿಗ್ವ ಇವರುಗಳು, ಕೆಲವರು.

ಹಿಂದೆ ಪ್ರಸಕ್ತರಾಗಿರುವ ಋಷಿಗಳು, ಯಜ್ಞಕರ್ಮಗಳಲ್ಲಿ ಎಷ್ಟು ಪ್ರಾಮುಖ್ಯತೆಯನ್ನು ಪಡೆದಿದ್ದರೆಂಬುದನ್ನು ಪ್ರತಿಪಾದಿಸುವುದಕ್ಕೋಸ್ಕರ, ಬಹಳ ಪುರಾತನರು, ಮಾನವ ವರ್ಗಕ್ಕೆ ಮೂಲಪುರುಷರು, ಅಮಾನುಷ ಕರ್ಮಗಳನ್ನು ಮಾಡಿದವರು, ದೇವತೆಗಳಿಗೆ ಸಮಾನರಾಗಿ ಅವರ ಕಾರ್ಯಗಳಲ್ಲಿ ಭಾಗವಹಿಸಿದವರು, ಇತ್ಯಾದಿಯಾಗಿ ಚಿತ್ರಿಸಿದಾರೆ ಎಂದು ಹೇಳಬಹುದೇ ಹೊರತು ಇವರುಗಳು ನಿಜವಾಗಿ ಪ್ರಕೃತಿಯ ನಾನಾ ಅಂಶಗಳನ್ನು ಪ್ರತಿಬಿಂಬಿಸುತ್ತಾರೆ ಮತ್ತು ದೇವತೆಗಳೇ ಛನ್ನರಾಗಿ ಭೂಮಿಗೆ ಇಳಿದು ಬಂದು ಈ ರೂಪದಲ್ಲಿ ಸಂಚರಿಸುತ್ತಿದ್ದಾರೆ ಎಂದು ಹೇಳುವುದು ಅಷ್ಟು ಸಾಧುವಾಗಿ ಕಾಣುವುದಿಲ್ಲ.

## ಪ್ರಾಣಿಗಳು ಮತ್ತು ನಿರ್ಜೀವ ವಸ್ತುಗಳು.

ವೈದಿಕ ಇತಿಹಾಸಗಳಲ್ಲಿ ಪ್ರಾಣಿಗಳಿಗೂ ತಕ್ಕಮಟ್ಟಿನ ಶ್ರೇಷ್ಠವಾದ ಸ್ಥಾನವಿದೆ. ಈ ಇತಿಹಾಸಗಳನ್ನು ಪರಿಶೀಲಿಸಿದರೆ, ಮನುಷ್ಯರಿಗೂ ಪ್ರಾಣಿಗಳಿಗೂ ಇರುವ ವ್ಯತ್ಯಾಸಗಳು ಹೆಚ್ಚಾಗಿ ವ್ಯಕ್ತವಾಗಿಲ್ಲ. ದೇವತೆಗಳಿಗೂ ನಾನಾ ಪ್ರಾಣಿಗಳ ರೂಪಗಳು ಉಂಟು. ಉತ್ತಮ ದೇವತೆಗಳೇ ಒಂದೊಂದು ಸಲ ಪ್ರಾಣಿಗಳ ರೂಪಗಳನ್ನು ಧರಿಸುವುದುಂಟು. ಅಂದಮೇಲೆ ಗೋವು ಮೊದಲಾದ ಉಪಯುಕ್ತವಾದ ಪ್ರಾಣಿಗಳ



CC-0. Jangamwadi Math Collection. Digitized by eGangotri

ರೂಪಧಾರಿಗಳಾದ ಅತಿಮಾನುಷ ವ್ಯಕ್ತಿಗಳು ಮಧ್ಯಮ ವರ್ಗದವರೆಂದೂ ಮತ್ತು ಹಿಂಸ್ರ ಜಂತುಗಳ ರೂಪವುಳ್ಳವರು ಅವರಿಗಿಂತ ಕಡಿಮೆ ಅಥವಾ ರಾಕ್ಷಸ ಸ್ವಭಾವದವರು ಎಂದೂ ಭಾವನೆಯಿದೆ. ಅಲ್ಲದೇ ಮನುಷ್ಯನಿಗೆ ಉಪಯುಕ್ತವಾದ ಚತುಷ್ಪಾದ ಜಂತುಗಳು ಅವನ ಸುತ್ತುಮುತ್ತಲೂ ವಾಸಿಸುವಂತೆ, ದೇವತೆಗಳ ಸಮೀಪದಲ್ಲಿಯೂ ದೇವಲೋಕದ ಪ್ರಾಣಿಗಳು ಇವೆಯೆಂದೇ ನಂಬಿಕೆ. ಕಡೆಯದಾಗಿ, ಯಾಗಗಳಲ್ಲಿ, ಕೆಲವು ಪ್ರಾಣಿಗಳು, ಆಯಾ ಆಕೃತಿವಿಶಿಷ್ಟರೆಂದು ಪರಿಗಣಿತರಾದ ದೇವತೆಗಳ ಪ್ರತಿನಿಧಿಗಳಾಗಿ ಉಪಯೋಗಿಸಲ್ಪಟ್ಟಿವೆ. ಈ ಪ್ರತಿನಿಧಿ ಪೂಜೆ ಈಚೆಗೆ ಹೆಚ್ಚು ಬಳಕೆಯಿಲ್ಲ, ಏಕೆಂದರೆ, ದೇವತೆಗಳು ಮಹಾಮಹಿಮರು, ಸ್ವರ್ಗಲೋಕವಾಸಿಗಳು, ತಮ್ಮ ಸಾಮರ್ಥ್ಯದಿಂದ ಯಾಗಶಾಲೆಗೆ ಅದೃಶ್ಯರಾಗಿಯೇ ಬಂದು ತಮ್ಮ ಹವಿರ್ಭಾಗಗಳನ್ನು ಸ್ವೀಕರಿಸುತ್ತಾರೆ ಎಂಬ ಉದಾತ್ತಭಾವನೆಗೆ ಇದರಿಂದ ಚ್ಯುತಿಯಾದೀತೆಂಬ ಭಯವಿದೆ.

## ಅಶ್ವ ದಧಿಕ್ರಾ

ದೇವತೆಗಳ ರಥವಾಹಕಗಳಾದ ಅಶ್ವಗಳಲ್ಲದೆ, ಕೆಲವು ಅಶ್ವಗಳನ್ನು ವೈಯಕ್ತಿಕವಾಗಿ ನಿರ್ದೇಶಿಸುವುದುಂಟು. ಇಂತಹ ವೈಶಿಷ್ಟ್ಯವುಳ್ಳ ಅಶ್ವಗಳಲ್ಲಿ ಮುಖ್ಯವಾದುದು ದಧಿಕ್ರಾ ಎಂಬುದು. ನಾಲು ಸೂಕ್ತಗಳಲ್ಲಿ ಈ ಅಶ್ವದ ಪ್ರಸ್ತಾಪವಿದೆ ( ೪-೩೮, ೩೯, ೪೦; ೭-೪೪ ). ಅವುಗಳಲ್ಲಿ ದಧಿಕ್ರಾ ಎಂಬುದಾಗಿ ಹನ್ನೆರಡು ಸಲ ದಧಿಕ್ರಾವನ್ ಎಂಬುದಾಗಿ ಹತ್ತು ಸಲ. ಇತರ ವೇದಗಳಲ್ಲಿ ಇದರ ಪ್ರಸ್ತಾಪವಿಲ್ಲವೇ ಇಲ್ಲವೆನ್ನಬಹುದು. ದಧಿಕ್ರಾ ಎಂಬುದು ಒಂದು ಕುದುರೆಯ ಹೆಸರೆಂಬುದಕ್ಕೆ, ನಿರುಕ್ತದಲ್ಲಿ ಇದನ್ನು ಅಶ್ವನಾಮಗಳಲ್ಲಿ ಒಂದಾಗಿ ಸೇರಿಸಿರುವುದೇ ಸಾಕ್ಷಿ (ನಿ. ೧-೧೪). ಅದು ಬಹಳ ವೇಗಶಾಲಿ (೪-೩೮-೨, ೯; ೪-೩೯-೧ ); ಅನೇಕ ರಥಗಳ ಸಾಲಿನಲ್ಲಿ ಮೊದಲನೆಯ ಅಶ್ವವಾಗಿದೆ ( ೭-೪೪-೪); ರಥಗಳನ್ನು ನಾಶಮಾಡುತ್ತದೆ. ಮತ್ತು ವಾಯುವೇಗದಿಂದ ಓಡುತ್ತದೆ ( ೪-೩೮-೩ ). ಅದರ ವೇಗವನ್ನು ಜನರೆಲ್ಲರೂ ಪ್ರಶಂಸಿಸುತ್ತಾರೆ (೪-೩೮-೯, ೩). ರಸ್ತೆಗಳ ತಿರುವುಗಳಲ್ಲಿಯೂ ಧಾವಿಸುತ್ತದೆ (೪-೪೦-೪). ಇದಕ್ಕೆ ರೆಕ್ಕೆಗಳೂ ಉಂಟು. ಅದು ಪಕ್ಷಿಯಂತೆ ಇದೆ. ಮತ್ತು ಅದರ ಪಕ್ಷಗಳು ಒಂದು ಪಕ್ಷಿಯ ಅಥವಾ ಶ್ಯೇನಪಕ್ಷಿಯ ಪಕ್ಷಗಳಿಗೆ ಹೋಲಿಸಲ್ಪಟ್ಟಿವೆ (೪-೪೦-೨, ೩). ಮೇಲಿನಿಂದ ಬಂದು ಬೀಳುವ ಶ್ಯೇನಪಕ್ಷಿಗೆ ಹೋಲಿಸಿದೆ ಮತ್ತು ಶ್ಯೇನವೆಂದೇ ಕರೆಯಲ್ಪಟ್ಟಿದೆ (೪-೩೮-೫, ೨). ೪-೪೦-೫ರಲ್ಲಿ, ಬೆಳಕಿನಲ್ಲಿ ವಾಸಿಸುವ ಹಂಸ, ಅಂತರಿಕ್ಷದಲ್ಲಿರುವ ವಸು, ವೇದಿಕೆಯ ಮೇಲೆ ಆಸೀನನಾಗಿರುವ ಹೋತೃ, ಮನೆಯಲ್ಲಿ ಸುಖವಾಗಿ ಆಸೀನನಾಗಿರುವ ಅತಿಥಿ—ಮೊದಲಾಗಿ ಅಗ್ನಿಗೆ ಅನ್ವಯಿಸುವ ವಿಶೇಷಣಗಳಿಂದ, ಈ ಅಶ್ವವು ವರ್ಣಿತವಾಗಿದೆ.

ದಧಿಕ್ರನೂ ಒಬ್ಬ ವೀರ, ದಸ್ಯುಗಳನ್ನು ಹೊಡೆಯುತ್ತಾನೆ ಮತ್ತು ಜಯಶಾಲಿಯಾಗುತ್ತಾನೆ (೪-೩೮-೧, ೨, ೩, ೭). ಸಹಸ್ರಾರು ಜನಗಳನ್ನೆದುರಿಸಿ ಯುದ್ಧಮಾಡುವಾಗ, ಶತ್ರುಗಳು ಅವನಿಗೆ ಹೆದರುತ್ತಾರೆ; ಯುದ್ಧಗಳಲ್ಲಿ ಕೊಳ್ಳೆ ಹೊಡೆಯುತ್ತಾನೆ; ಯುದ್ಧಗಳಲ್ಲಿ ನಾನಾ ಪಂಗಡಗಳು ಅವನನ್ನುದ್ದೇಶಿಸಿ ಕೂಗಿಕೊಳ್ಳುತ್ತವೆ (೪-೩೮-೮, ೫, ೪). ಒಂದು ಹಾರವನ್ನು ಧರಿಸಿಕೊಂಡು, ಧೂಳನ್ನೆಬ್ಬಿಸುತ್ತಾ, ತನ್ನ ಹುಬ್ಬುಗಳ ಮೇಲಿಂದ ಅದು ಉದುರಿಸುತ್ತದೆ (೪-೩೮-೬, ೭). ಅದು ಎಲ್ಲಾ ಪಂಗಡಗಳಿಗೂ ಸೇರಿದೆ; ತನ್ನ ಸಾಮರ್ಥ್ಯದಿಂದ ಐದು ಪಂಗಡಗಳನ್ನೂ, ಸೂರ್ಯನು ತನ್ನ ತೇಜಸ್ಸಿನಿಂದ ನೀರನ್ನಾವರಿಸಿರುವಂತೆ, ಆವರಿಸಿಕೊಂಡಿದೆ (೪-೩೮-೨, ೧೦, ೪). ಜಯಶಾಲಿಯಾದ ಈ ಅಶ್ವವನ್ನು ಮಿತ್ರಾವರುಣರು ಪೂರುಗಳಿಗೆ ಕೊಟ್ಟರು (೪-೩೯-೨; ೪-೩೮-೧, ೨ ಗಳನ್ನು ಹೋಲಿಸಿ); ಮನುಷ್ಯನ ಅನುಗ್ರಹಾರ್ಥವಾಗಿ ಅವರು ದಧಿಕ್ರಾ ಎಂಬ ಅಶ್ವವನ್ನು ಕೊಟ್ಟರು.



CC-0. Jangamwadi Math Collection. Digitized by eGangotri

ಅರುಣೋದಯಕಾಲದಲ್ಲಿ ಅಗ್ನ್ಯುದ್ದೀಪನಮಾಡುವಾಗ, ದಧಿಕ್ರಾವನೆಂಬ ಅಶ್ವವನ್ನು ಸ್ತುತಿಸುತ್ತಾರೆ. ೭-೪೧-೬) ಉಷೋದೇವಿಯರ ಜೊತೆಯಲ್ಲಿ ಅವನೂ ಆಹೂತನಾಗಿದಾನೆ. (೪-೩೯-೧ ; ೪-೪೦-೧) ದಧಿಕ್ರಾವ ನಂತೆ ಯಜ್ಞಾಭಿಮುಖರಾಗಬೇಕೆಂದು ಉಷೋದೇವಿಯರನ್ನು ಪ್ರಾರ್ಥಿಸಿದೆ (೭-೪೧-೬). ನಿಯತವಾಗಿ ಉಷೋದೇವಿಯೊಡನೆ, ಅಷ್ಟೇ ಸಲ ಅಗ್ನಿಯೊಡನೆ ಮತ್ತು ಅಶ್ವಿನೀದೇವತೆಗಳು, ಸೂರ್ಯ ಮತ್ತು ಇತರ ದೇವತೆಗಳೊಡನೆ ಕೆಲವು ಸಲವೂ ಸ್ತುತನಾಗಿದಾನೆ (೩-೨೦-೧, ೫ ; ೭-೯೪-೧ರಿಂದ ೪ ; ೧೦-೧೦೧-೧); ಆದರೆ ದಧಿಕ್ರಾವನಿಗೇ ಮೊದಲನೆಯ ಆಹ್ವಾನ (೭-೪೪-೧).

ಪದದ ನಿಷ್ಪತ್ತಿಯಿಂದ, ಈ ಅಶ್ವದ ಸ್ವಭಾವ ಮತ್ತು ಲಕ್ಷಣಗಳು ಏನೂ ತಿಳಿದು ಬರುವುದಿಲ್ಲ. ಪದದ ಉತ್ತರ ಭಾಗಕ್ಕೆ (ಕ್ರಾ) ಚದುರಿಸುವ ಎಂದರ್ಥವಾಗಬಹುದು ; ಎಂದರೆ ದಧಿಯನ್ನು–ಸೂರ್ಯೋದಯ ಕಾಲದಲ್ಲಿ ಕಂಡುಬರುವ ಹಿಮವನ್ನುಚದುರಿಸುವವನು ಎಂದಾಗಬಹುದು. ಉದಿಸುತ್ತಿರುವ ಸೂರ್ಯನ ಮಂಡಲವೇ ದಧಿಕ್ರನಿರಬಹುದೆಂದು ಕೆಲವರ ಅಭಿಪ್ರಾಯ. ದಧಿಕ್ರನಿಗೆ ವಿಶೇಷ ಸಂಬಂಧವಿರುವುದು ಉಷೋದೇವಿಯೊಡನೆ; ಸೂರ್ಯನಿಗೂ ಅಶ್ವ ಅಥವಾ ಪಕ್ಷಿಯೆಂದು ಅನೇಕ ವೇಳೆ ಹೆಸರಿದೆ ಮತ್ತು ಅವನು ಯೋಧನ ಸ್ವಭಾವವುಳ್ಳವನೆಂದು ಒಂದೊಂದು ಕಡೆ ಉಕ್ತವಾಗಿದೆ. ಇವಗಳಿಂದಲೂ, ದಧಿಕ್ರನು ಸೂರ್ಯಮಂಡಲವೇ ಇರಬಹುದೆಂದು ಹೇಳಬಹುದು. ದಧಿಕ್ರನು ಅಗ್ನಿಯ ರೂಪ ವಿಶೇಷವೆಂದು ಕೆಲವರ ಅಭಿಪ್ರಾಯ. ಮತ್ತು ಕೆಲವರು ಇದು ದೇವತೆಯೇ ಅಲ್ಲ, ಒಂದು ಉತ್ತಮಾಶ್ವ ಎನ್ನುತ್ತಾರೆ.

ದಧ್ಯಂಚ ಮತ್ತು ದಧಿಕ್ರ, ಈ ಎರಡು ಹೆಸರುಗಳಲ್ಲಿಯೂ ಒಂದು ಸಾಮ್ಯವಿದೆ ಮತ್ತು ದಧ್ಯಂಚನಿಗೂ ಅಶ್ವಶಿರಸ್ಸಾದುದರಿಂದ, ಸ್ವಭಾವದಲ್ಲಿಯೂ ಇಬ್ಬರಿಗೂ ಸಾಮ್ಯವಿರಬಹುದು.

ತಾರ್ಕ್ಷ್ಯ.—ದಧಿಕ್ರನಿಗೆ ಸಂಬಂಧಿಸಿದ ಈ ಹೆಸರು ಎರಡೇ ಕಡೆ ಬರುತ್ತದೆ (೧-೮೯-೬ ; ೧೦–೧೭೮–೧). ಮೂರು ಋಕ್ಕುಗಳ ಒಂದು ಸೂಕ್ತವು ಇದನ್ನು ಸ್ತುತಿಸುತ್ತದೆ (೧೦-೧೭೮). ದೇವತೆಗಳಿಂದ ಪ್ರೇರಿತವಾಗುವ ಉತ್ತಮಾಶ್ವ, ರಥಗಳನ್ನು ಧ್ವಂಸಮಾಡುವುದು (೬-೪೪-೪ನ್ನು ಹೋಲಿಸಿ), ವೇಗಶಾಲಿ ಮತ್ತು ಯುದ್ಧರಂಗಕ್ಕೆ ಅಭಿಮುಖವಾಗಿ ಓಡುತ್ತದೆ. ಇಂದ್ರನಿಂದ ದತ್ತವಾದುದು. (ದಧಿಕ್ರನಿಗೆ ಉಪಯೋಗಿಸಿರುವ ಪದಗಳಿಂದಲೇ) ಐದು ಪಂಗಡಗಳನ್ನೂ ಆವರಿಸಿಕೊಳ್ಳುತ್ತಾನೆ (೪-೩೮-೧೦) ಎಂದು ಹೇಳಿದೆ. ಇದಕ್ಕೆ ಅರಿಷ್ಟನೇಮಿ ಎಂತಲೂ ಹೆಸರು (೧-೮೯-೬). ಆದರೆ ವಾಜಸನೇಯಿ ಸಂಹಿತೆಯಲ್ಲಿ, ತಾರ್ಕ್ಷ್ಯ ಮತ್ತು ಗರುಡ ಗಳಂತೆ ಅರಿಷ್ಟನೇಮಿಯೂ ಒಂದು ಸ್ವತಂತ್ರವಾದ ಹೆಸರು (ವಾ. ಸಂ. ೧೫-೧೮). ನಿರುಕ್ತದಲ್ಲಿ (ನಿ. ೧-೧೪). 'ತಾರ್ಕ್ಷ್ಯ'ವೂ ಅಶ್ವದ ನಾಮಗಳಲ್ಲಿ ಒಂದು. ಇತರ ವೇದಗಳಲ್ಲಿ 'ತಾರ್ಕ್ಷ್ಯ'ವು ಪಕ್ಷಿ ಎಂಬ ಅಭಿಪ್ರಾಯ ವಿದೆ; ಪುರಾಣಾದಿಗಳಲ್ಲಿ ಇದು ಗರುಡನ ಅನೇಕ ನಾಮಗಳಲ್ಲಿ ಒಂದು. ಪ್ರಾಯಶಃ ಇದು ಅಶ್ವರೂಪೀ ಸೂರ್ಯನ ಹೆಸರಿರಬಹುದು. ತ್ರಸದಸ್ಯುವ ಅಥವಾ ತೃಷಿ ಎಂಬ ಹೆಸರಿನ ವ್ಯಕ್ತಿಗೂ ಇದಕ್ಕೂ ಏನಾದರೂ ಸಂಬಂಧವಿರ ಬಹುದು (೮-೨೨-೭). ಈ ಆಧಾರದ ಮೇಲೆ, ಕೆಲವರು, ತೃಷಿಯು ಎಂಬ ಒಂದು ಅಶ್ವವೇ ಈ ತಾರ್ಕ್ಷ್ಯನೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಪೈದ್ವಃ,—ಅಶ್ವಿನಿಗಳು ಪೇದು ಎಂಬುವನಿಗೆ ತಂದು ಕೊಟ್ಟ ಅಶ್ವವೂ ಈ ಕಾಲ್ಪನಿಕ ಅಶ್ವಗಳಲ್ಲಿ ಒಂದು (೧-೧೧೯-೧೦; ೭-೭೧-೫), ಆದುದರಿಂದ ಇದಕ್ಕೆ ಪೈದ್ವ ಎಂದು ಒಂದು ಹೆಸರು (೧-೧೧೬-೬; ೯-೮೮-೪). ಪೇದುವಿನ ಅಪ್ರಯೋಜಕ ಅಶ್ವಕ್ಕೆ ಬದಲಾಗಿ ಉತ್ತಮಾಶ್ವವನ್ನು ಕೊಡುವುದೇ, ಈ ದಾನದ ಉದ್ದೇಶ (೧-೧೧೬-೬). ಅದು ಪ್ರಶಂಸಾರ್ಹವಾದುದು (೧-೧೧೯–೧೦ ; ೧೦-೩೯-೧೦; ೪-೩೮-೨ನ್ನು ಹೋಲಿಸಿ);





CC-0. Jangamwadi Math Collection. Digitized by eGangotri

ಭಗನಂತೆ (೧೦-೩೯-೧೦) ಇದೂ ಮನುಷ್ಯರಿಂದ ಸ್ತುತ್ಯವಾದುದು (೧-೧೧೬-೬). ಇಂದ್ರನಿಗೆ ಹೋಲಿಸಿದೆ (೧-೧೧೯-೧೦) ಮತ್ತು ಅಹಿಹನೆಂದು (ಸರ್ಪವನ್ನು ಕೊಲ್ಲುವವನು) ಹೆಸರು (೧-೧೧೭-೯; ೧-೧೧೮-೯; ೯-೮೮-೪ನ್ನು ಹೋಲಿಸಿ); ಸಾಧಾರಣವಾಗಿ ಇದು ಇಂದ್ರನಿಗೇ ಅನ್ವಯಿಸುವುದು. ಯುದ್ಧಗಳಲ್ಲಿ ಅಜೇಯನು ಮತ್ತು ಸ್ವರ್ಗಾಭಿಲಾಷಿ (೧-೧೧೯-೧೦). ಇದೂ ಸೂರ್ಯನನ್ನೇ ಸೂಚಿಸುತ್ತದೆ ಎನ್ನಬಹುದು.

ಏತಶ.—ವೇಗಶಾಲಿಯಾದ ಎಂಬರ್ಥದಲ್ಲಿ, ಈ ಪದವು ಕೆಲವು ಸಲವೂ, ಹೆಚ್ಚಾಗಿ ಕುದುರೆಯನ್ನು ನಿರ್ದೇಶಿಸುವುದಕ್ಕೂ ಉಪಯೋಗಿಸಿದೆ. ಇದೇ ಪದವು ಬಹುವಚನದಲ್ಲಿ ಸೂರ್ಯಾಶ್ವಗಳನ್ನು ಸೂಚಿಸುತ್ತದೆ (೭-೬೨-೨; ೧೦-೩೭-೩; ೧೦-೪೯-೭). ಸುಮಾರು ಹನ್ನೆರಡು ಸಲ ಅಂಕಿತನಾಮವಾಗಿ, ಸೂರ್ಯನಿಗೆ ಸಂಬಂಧಿಸಿದಂತೆ ಪ್ರಯೋಗವಿದೆ; ಈ ಸಂದರ್ಭಗಳಲ್ಲಿ ವಿಶೇಷವಾಗಿ ಸೂರ್ಯರಥದ ಚಕ್ರಕ್ಕೇ ಇದು ಅನ್ವಯಿಸುವುದು. ಭೂಭಾಗಗಳ ಪರಿಮಿತಿಯನ್ನು ಗೊತ್ತು ಮಾಡಿದವನು ಸವಿತೃ ಎಂಬ ಅಶ್ವ (ಏತಶಃ ೫-೮೧-೩). ವೇಗಶಾಲಿಯಾದ ಏತಶ ಎಂಬ ದೇವತೆಯು (ಅಶ್ವವು) ಸೂರ್ಯನನ್ನು ಎಳೆಯುತ್ತಾನೆ (೭-೬೬-೧೪). ರಥದ ಮೂಕಿಗೆ ಕಟ್ಟಲ್ಪಟ್ಟು, ಏತಶವು (ಅಶ್ವವು) ಸೂರ್ಯನ ರಥದ ಚಕ್ರವು ಚಲಿಸುವಂತೆ ಮಾಡುತ್ತದೆ (೭-೬೩-೨); ಅದು ಸೂರ್ಯನ ರಥದ ಚಕ್ರವನ್ನು ಕರತಂದಿತು (೧-೧೨೧-೧೩; ೫-೩೧-೧೧); ಇಂದ್ರನು ಸೂರ್ಯಾಶ್ವವನ್ನು ಹರಿದುಂಬಿಸುತ್ತಾನೆ (೮-೧-೧೧; ೯-೬೩-೮ನ್ನು ಹೋಲಿಸಿ). ಸೂರ್ಯನೊಡನೆ ಪಂದ್ಯದಲ್ಲಿ ಭಾಗವಹಿಸಿದ್ದ ಏತಶನಿಗೆ ಇಂದ್ರನು ಸಹಾಯ ಮಾಡಿದನು (೧-೬೧-೧೫). ನಷ್ಟವಾಗಿದ್ದ ಸೂರ್ಯರಥದ ಚಕ್ರವನ್ನು ಎತ್ತಿಕೊಂಡು ಹೋಗಿ ರಥಕ್ಕೆ ಸೇರಿಸಿ, ಪಂದ್ಯದಲ್ಲಿ ಮುಂದಾಗಿ ಬಂದುದರಿಂದ, ಸೂರ್ಯನು ತನ್ನ ರಥದ ಮುಂಬಾಗದಲ್ಲಿ ಏತಶನಿಗೆ ಸ್ಥಾನವನ್ನು ಅನುಗ್ರಹಿಸಿದನು ಎಂದು ಊಹಿಸಬಹುದು. ಈ ಪಂದ್ಯದ ನಿಜವಾದ ಅರ್ಥವೇನೆಂದು ಹೇಳಲಾಗುವುದಿಲ್ಲ. ಆದರೆ, ಏತಶ ಎಂಬುದು ಸೂರ್ಯಾಶ್ವವೆಂದು ಖಚಿತವಾಗಿ ಹೇಳಬಹುದು.

ಸೂರ್ಯ ಮತ್ತು ಅಗ್ನಿಗಳ ಲಾಂಛನವಾದ ಅಶ್ವವು.—ಅಶ್ವವು ಸೂರ್ಯನ ಲಾಂಛನವೆಂಬುದು ಕೆಲವು ವಾಕ್ಯಗಳಿಂದ ಸ್ಪಷ್ಟವಾಗುತ್ತದೆ. ಉಷೋದೇವಿಯು ಒಂದು ಶ್ವೇತಾಶ್ವವನ್ನು ನಡೆಯಿಸಿಕೊಂಡು ಬರುತ್ತಾಳೆ (೭-೭೭-೩); ಯಜ್ಞಾಶ್ವವನ್ನು ಸೂರ್ಯನಿಂದ ದೇವತೆಗಳು ರಚಿಸಿದರು (೧-೧೬೩-೨). ಸೋಮಯಾಗ ವಿಶೇಷವೊಂದರಲ್ಲಿ, ಅಶ್ವವು ಸೂರ್ಯನ ಪ್ರತೀಕವಾಗಿದೆ.

ವೇಗಶಾಲಿಯೂ ಚಟುವಟಿಕೆಯುಳ್ಳವನೂ ಆದ ಅಗ್ನಿಯೂ ಅನೇಕ ವೇಳೆ ಅಶ್ವವೆಂದೇ ವ್ಯವಹರಿಸಲ್ಪಟ್ಟಿದಾನೆ. ಕರ್ಮಗಳಲ್ಲಿ ಕುದುರೆಯು ಅಗ್ನಿಯ ಪ್ರತಿಬಿಂಬ. ಅಗ್ನಿಮಥನ ಮಾಡುವ ಪ್ರದೇಶವು ಕಾಣಿಸುವಂತೆ, ಒಂದು ಅಶ್ವವನ್ನು ತಂದು ನಿಲ್ಲಿಸುತ್ತಾರೆ. ಪೂರ್ವದಿಕ್ಕಿಗೆ ಅಗ್ನಿಯನ್ನು ತೆಗೆದುಕೊಂಡು ಹೋಗುವಾಗ ಮುಂದೆ ನಡೆದು ಹೋಗುತ್ತಿರುವ ಕುದುರೆಯ ಹಜ್ಜೆಯನ್ನನುಸರಿಸಿಯೇ ಹಾಗೆ ಮಾಡುವುದು. ಅಶ್ವವನ್ನು ದ್ದೇಶಿಸಿ, ಹೀಗೆ ಹೇಳುತ್ತಾರೆ—ನಿನ್ನ ಜನ್ಮಸ್ಥಳವು ಸ್ವರ್ಗವು; ಅಂತರಿಕ್ಷದಲ್ಲಿ ನಿನ್ನ ನಾಭಿ ಪ್ರದೇಶವಿದೆ; ಭೂಮಿಯಲ್ಲಿ ನಿನ್ನ ಮನೆ (ವಾ. ಸಂ. ೧೧-೧೨). ಶತಪಥಬ್ರಾಹ್ಮಣದಲ್ಲಿ ವಿದ್ಯುತ್ತನ್ನು, ನೀರಿನಲ್ಲಿ ಅಥವಾ ಮೋಡಗಳಲ್ಲಿ ಜನಿಸಿದ ಅಶ್ವವೆಂದು ಹೇಳಿಗೆ (ಶ. ಬ್ರಾ. ೫-೧-೪-೫; ೭-೫-೨-೧೮).

## ವೃಷಭ.

ಇಂದ್ರನಿಗೇ ಹೆಚ್ಚಾಗಿ ವೃಷಭನೆಂದು ಸಂಕೇತವಿರುವುದು. ಅದಕ್ಕಿಂತ ಕಡಿಮೆ ಸಲ ಅಗ್ನಿಗೂ, ದ್ಯು ಮೊದಲಾದ ದೇವತೆಗಳಿಗೂ ಅಪರೂಪವಾಗಿಯೂ ಉಪಯೋಗಿಸಿದೆ. ಅಥರ್ವ ವೇದದಲ್ಲಿ ಒಂದು ವೃಷಭ



CC-0. Jangamwadi Math Collection. Digitized by eGangotri

ವನ್ನು ಇಂದ್ರನೆಂದು ಕರೆದಿದೆ (ಅ. ವೇ. ೯-೪-೯). ಶತಪಥಬ್ರಾಹ್ಮಣದಲ್ಲಿ, ವೃಷಭವು ಇಂದ್ರನ ರೂಪವಿಶೇಷವೆಂದು ಹೇಳಿದೆ (ಶ. ಬ್ರಾ. ೨-೫-೩-೧೮). ವೈದಿಕ ಕರ್ಮಗಳಲ್ಲೊಂದರಲ್ಲಿ, ವೃಷಭವು ರುದ್ರನ ಪ್ರತಿನಿಧಿ. 'ಮುದ್ಗಲ ಮತ್ತು ಮುದ್ಗಲಾನೀ' ಇತಿಹಾಸದಲ್ಲಿ ವೃಷಭವು ಪಾತ್ರವಹಿಸಿದೆ (೧೦-೧೦೨).

## ಗೋವು.

ಪ್ರಪಂಚದಲ್ಲಿ ಗೋವಿನ ಹೆಚ್ಚಾದ ಉಪಯೋಗಕ್ಕನುಸಾರವಾಗಿ, ವೈದಿಕ ಇತಿಹಾಸದಲ್ಲಿಯೂ, ಅದಕೆ ಮುಖ್ಯಸ್ಥಾನವಿದೆ. ಉಷಃಕಾಲದ ಕಿರಣಗಳನ್ನೂ ಗೋವುಗಳೆಂದೂ, ಅವುಗಳೇ ಉಷೋದೇವಿಯ ರಥವನ್ನು ಎಳೆಯುತ್ತವೆಯೆಂದೂ ಭಾವನೆ. ಮಳೆ ಮೋಡವೂ ಒಂದು ಗೋವು; ಅದಕ್ಕೆ ಒಂದು ಕರುವೂ (ಸಿಡಿಲು) ಇದೆ. ಈ ಮೇಘರೂಪವಾದ ಗೋವಿಗೆ ಪೃಶ್ನಿ ಎಂದು ಹೆಸರು ರೂಢಿಯಾಗಿದೆ; ಆಕೆಯು ಮರುತರ ತಾಯಿ (ವಾ. ಸಂ. ೨-೧೬). ಆಕೆಯ ಕ್ಷೀರ (೬-೪೮-೨೨) ಮತ್ತು ಕೆಚ್ಚಲುಗಳು ಪದೇ ಪದೇ ಪ್ರಸಕ್ತವಾಗಿವೆ "ಉತ್ತಮರು ವಾಸಿಸುವ ಸ್ವರ್ಗಲೋಕದಲ್ಲಿ ಬೇಕಾದುದನ್ನು ದೋಹನ ಮಾಡುವ (ಕಾಮದುಘಾ) ಚಿತ್ರ ವರ್ಣದ ಗೋವುಗಳು" ಈ ಮೇಘಗಳೇ ಇರಬೇಕು (ಅ. ವೇ. ೪-೩೪-೮); ಮುಂದೆ ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿರುವ ಕಾಮಧೇನುವಿಗೆ, ಇವುಗಳೇ ಮೂಲ. ಹಾಲು ಮತ್ತು ಬೆಣ್ಣೆಗಳ ಆಹುತಿರೂಪವಾದ ಇಳಾ (ಇಡಾ) ಎಂಬ ದೇವತೆಯನ್ನೂ ಗೋವೆಂದು ಭಾವಿಸುವುದೂ ವಾಡಿಕೆಯಾಗಿದೆ. ಅದಿತಿಯನ್ನೂ ಒಂದೊಂದು ಸಲ ಆಕಳೆಂದು ಭಾವಿಸುವುದುಂಟು. ದೇವತೆಗಳೂ ಗೋವಿನಿಂದ ಜನಿಸಿದರೆಂದು (ಗೋಜಾತಾಃ) ಹೇಳುವುದುಂಟು. ಆದರೆ ವೇದದಲ್ಲಿ ಗೋವಿನ ಪ್ರಸಕ್ತಿಯಿರುವುದು, ಪರ್ವತ ಪ್ರದೇಶದಲ್ಲಿದ್ದ ಗೋವುಗಳನ್ನು ಇಂದ್ರನು ವಿಮೋಚನೆ ಮಾಡುವ ಸಂದರ್ಭದಲ್ಲಿಯೇ ಹೆಚ್ಚು.

ಭೂಲೋಕದ ಹಸುವೂ ಪಾವಿತ್ರ್ಯವನ್ನು ಪಡೆದಿದೆ. ಅವುಗಳನ್ನೂ ಅದಿತಿ, ದೇವತೆ ಮೊದಲಾಗಿ ಕರೆಯುವುದುಂಟು ಮತ್ತು ಗೋವಧೆ ಮಾಡಬಾರದೆಂದು ಹೇಳಿದೆ (೮-೯೦-೧೫, ೧೬ ; ವಾ. ಸಂ. ೪-೧೯, ೨೦ನ್ನು ಹೋಲಿಸಿ). ಹಸುವಿಗೆ ಅಘ್ನ್ಯಾ (ಅವಧ್ಯ) ಎಂಬುದಾಗಿ ಹದಿನಾರು ಸಲ ಪ್ರಯೋಗಿಸಿರುವುದರಿಂದ, ಅದು ಎಷ್ಟು ಪವಿತ್ರವೆಂಬ ಭಾವನೆಯಿತ್ತು ಎಂಬುದು ವ್ಯಕ್ತವಾಗುತ್ತದೆ. ಹಸುವನ್ನು ಪವಿತ್ರವಾದ ಪ್ರಾಣಿಯೆಂದೂ, ಅದನ್ನು ಪೂಜಿಸಬೇಕೆಂಬುದೂ ಅಥರ್ವವೇದದಲ್ಲಿ ಸಿದ್ಧವಾದ ವಿಷಯ (ಅ. ವೇ. ೧೨-೪-೫). ಗೋಮಾಂಸ ಭಕ್ಷಣೆ ಮಾಡುವವನು ಭೂಮಿಯಲ್ಲಿ ದುಷ್ಟನೆಂದು ಪ್ರಖ್ಯಾತನಾಗಿ ಪುನಃ ಜನಿಸುತ್ತಾನೆ (ಶ. ಬ್ರಾ. ೩-೧-೨-೨೧); ಆದರೆ, ಅತಿಥಿಗೋಸ್ಕರ ಗೋಮಾಂಸವನ್ನು ಪಾಕ ಮಾಡಬಹುದು (ಶ. ಬ್ರಾ. ೩-೪-೧-೨).

**ಅಜಃ.**—ಪೂಷಣನ ರಥವನ್ನು ಎಳೆಯುತ್ತದೆ. ಅಜ ಏಕಪಾದ (ಒಂದು ಕಾಲಿನ ಅಜ) ಎಂಬ ದೇವತೆಯಾಗಿಯೂ ಕಂಡುಬರುತ್ತದೆ. ಇತರ ವೇದಗಳಲ್ಲಿ ಅನೇಕ ಸಲ ಅಜಕ್ಕೂ ಅಗ್ನಿಗೂ ಸಂಬಂಧವು ಉಕ್ತವಾಗಿದೆ; ಒಂದೊಂದು ಸಲ ಅಗ್ನಿಯನ್ನು ಅಜವೆಂದೇ ವ್ಯವಹರಿಸಿರುವುದೂ ಉಂಟು.

**ಗರ್ದಭ.**—ವಿಶೇಷವಾಗಿ ಅಶ್ವಿನೀದೇವತೆಗಳ ರಥವಾಹಕವಾಗಿದೆ.

**ನಾಯಿ.**—ಮೈಮೇಲೆ ಚುಕ್ಕೆಗಳುಳ್ಳ, ಸಾರಮೇಯವೆಂಬ ಎರಡು ಬೇಟೆ ನಾಯಿಗಳು ಯಮನಿಗೆ ಸೇರಿವೆ. ಈ ಹೆಸರಿನಿಂದ (ಸಾರಮೇಯ), ಅವೆರಡು ನಾಯಿಗಳು, ಇಂದ್ರನ ದೂತಿಯಾಗಿ ಕೆಲಸ ಮಾಡಿದ ಸರಮಾ ಎಂಬುದರ ವಂಶಜರೆಂದು ಹೇಳಬಹುದು. ಸರಮೆಯು ಹೆಣ್ಣುನಾಯಿಯೆನ್ನುವುದಕ್ಕೆ ಋಗ್ವೇದದಲ್ಲಿ ಆಧಾರವಿಲ್ಲ; ಆದರೆ ಇತರ ವೇದಗಳಲ್ಲಿ ಇದಕ್ಕೆ ಆಧಾರವಿದೆ ಮತ್ತು ನಿರುಕ್ತದಲ್ಲಿ (ನಿ. ೧೧-೨೫) ಸರಮೆಯು ದೇವತೆಗಳ ಹೆಣ್ಣುನಾಯಿಯೆಂದು ವಿವರಿಸಿದೆ.



CC-0. Jangamwadi Math Collection. Digitized by eGangotri

**ವರಾಹ.**—ರುದ್ರ, ಮರುತರು ಮತ್ತು ವೃತ್ರರನ್ನು ಲಾಕ್ಷಣಿಕವಾಗಿ ವರಾಹವೆಂದು ಕರೆದಿದೆ. ತೈತ್ತಿರೀಯ ಸಂಹಿತೆ ಮತ್ತು ಬ್ರಾಹ್ಮಣಗಳಲ್ಲಿ ಪೃಥ್ವಿಯನ್ನು ಜಲಮಧ್ಯದಿಂದ ಮೇಲೆತ್ತಲು, ಸೃಷ್ಟಿಕರ್ತನು ಸ್ವೀಕರಿಸಿದ ರೂಪವಿದು. ಮುಂದೆ ಇದೇ ವಿಷ್ಣುವಿನ ಒಂದು ಅವತಾರವೆಂದು ಪ್ರಸಿದ್ಧಿಗೆ ಬಂದಿದೆ.

**ಕೂರ್ಮ.**—ಇತರ ವೇದಗಳಲ್ಲಿ, ನೀರಿಗೆಲ್ಲಾ ಒಡೆಯನೆಂಬುದಾಗಿ, ಕೂರ್ಮಕ್ಕೆ ಅರ್ಥದೇವತ್ವವು ಕೊಡಲ್ಪಟ್ಟಿದೆ (ವಾ. ಸಂ. ೧೩-೩೧) ಅಥವಾ ಕಶ್ಯಪ ಎಂಬ ಹೆಸರಿನಿಂದ ಪ್ರಜಾಪತಿಯ ಪಾರ್ಶ್ವದಲ್ಲಿ ಅಥವಾ ಪ್ರಜಾಪತಿಯೇ ಆಗಿ ಕಾಣಿಸುತ್ತದೆ; ಈ ರೂಪದಲ್ಲಿ ಸ್ವಯಂಭೂ ಎಂತಲೂ ವ್ಯವಹಾರವಿದೆ (ಅ. ವೇ. ೧೯-೫೩-೧೦). ಐತರೇಯ ಬ್ರಾಹ್ಮಣದಲ್ಲಿ, ಈ ಕಶ್ಯಪನಿಗೇ, ವಿಶ್ವಕರ್ಮನು ಭೂಮಿಯನ್ನು ಕೊಡುತ್ತೇನೆಂದು ಮಾತುಕೊಟ್ಟಿದ್ದನು (ಐ. ಬ್ರಾ. ೮-೨೧-೧೦) ಎಂದಿದೆ. ಶತಪಥಬ್ರಾಹ್ಮಣದಲ್ಲಿ ಪ್ರಜಾಪತಿಯು ಕೂರ್ಮರೂಪ ವನ್ನು ತಾಳಿ (ಶ. ಬ್ರಾ. ೭-೪-೩೫), ಸಮಸ್ತ ಪ್ರಾಣಿಗಳನ್ನೂ ಸೃಜಿಸಿದನೆಂದು (ಶ. ಬ್ರಾ. ೭-೫-೧-೧) ಇದೆ. ಈ ರೂಪವೇ, ಪುರಾಣಗಳಲ್ಲಿ ವಿಷ್ಣುವಿನ ಕೂರ್ಮಾವತಾರವೆಂದು ಪ್ರಸಿದ್ಧವಾಗಿದೆ. ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೨-೬-೩-೩), ಪುರೋಡಾಶವು ಕೂರ್ಮವಾಗಿ ಪರಿಣಮಿಸುತ್ತದೆ ಎಂದು ಹೇಳಿದೆ.

**ವಾನರಃ**—೧೦-೮೬ರಲ್ಲಿ, ಇಂದ್ರನಿಗೆ ಪ್ರಿಯವಾದ ಒಂದು ಕಪಿಯ ಪ್ರಸಕ್ತಿ ಇದೆ; ಇದರ ಚೇಷ್ಟೆ ಯಿಂದ ಕುಪಿತಳಾದ ಇಂದ್ರಾಣಿಯು ಇದನ್ನು ಓಡಿಸಿಬಿಡುತ್ತಾಳೆ; ಕೊನೆಗೆ ಮೊದಲಿನ ಸ್ಥಾನವು ದೊರಕುತ್ತದೆ.

**ಕಪ್ಪೆ.**—ಮಳೆಯಿಂದ ಏಳಿಸಲ್ಪಟ್ಟ ಕಪ್ಪೆಗಳು (೭-೧೦೩) ಗೋವುಗಳು ಮತ್ತು ದೀರ್ಘಾಯುಸ್ಸನ್ನು ಕೊಡುತ್ತವೆ ಎಂಬ ಪ್ರಶಂಸೆ ಇದೆ ಮತ್ತು ಅವುಗಳಿಗೆ ಮಂತ್ರ ವಿದ್ಯೆಯೂ ಬರುತ್ತದೆಂದು ನಂಬಿಕೆ.

**ಪಕ್ಷಿಃ.**—ವೈದಿಕ ಇತಿಹಾಸದಲ್ಲಿ ಪಕ್ಷಿಗಳಿಗೂ ಒಂದು ಪಾತ್ರವಿದೆ. ಸೋಮವನ್ನು ಪಕ್ಷಿಗೆ ಹೋಲಿಸಿ ದಾರೆ, ಪಕ್ಷಿಯೆಂದೇ ಕರೆದಿದಾರೆ. ವಿಶೇಷವಾಗಿ ಅಗ್ನಿಯನ್ನು ಪಕ್ಷಿಗಳಿಗೆ ಹೋಲಿಸಿರುವುದು ಅಥವಾ ಪಕ್ಷಿ ಎಂದು ಕರೆದಿರುವುದು. ಸೂರ್ಯನಿಗೂ ಪಕ್ಷಿಯೆಂಬ ಹಸರಿದೆ; ಎರಡು ಸಂದರ್ಭಗಳಲ್ಲಿ ಗರುತ್ಮಾನ್ ಎಂಬ ಹೆಸರಿದೆ. ಪುರಾಣಗಳಲ್ಲಿ ವಿಷ್ಣುವಿನ ವಾಹನವು ಗರುಡನೆಂದು ಬಂದಿರುವುದೂ ಇದೇ ಆಧಾರದ ಮೇಲಿರಬೇಕು. ವೇದದಲ್ಲಿ ಪಕ್ಷಿಯ ಮುಖ್ಯ ಕರ್ಮವೆಂದರೆ, ಶ್ಯೇನರೂಪದಲ್ಲಿ, ಇಂದ್ರನಿಗೋಸ್ಕರ ಸೋಮರಸವನ್ನು ತರುವುದು. ಕಾಠಕೋಪನಿಷತ್ತಿನ ಪ್ರಕಾರ, ಇಂದ್ರನೇ ಶ್ಯೇನರೂಪಿಯಾಗಿ, ಸೋಮ ಅಥವಾ ಅಮೃತವನ್ನು ತೆಗೆದು ಕೊಳ್ಳುತ್ತಾನೆ.

ಶಕುನಪಕ್ಷಿಗಳು ಮತ್ತು ಪ್ರಾಣಿಗಳು, ಕೆಲವು ದೇವತೆಗಳಿಂದ ಕಳುಹಿಸಲ್ಪಡುತ್ತವೆ. ಗೂಬೆ ಮತ್ತು ಪಾರಿವಾಳಗಳು ಯಮನ ದೂತರು. ಸೂತ್ರಗ್ರಂಥಗಳಲ್ಲಿ, ಗೂಬೆಯು ದುರ್ದೇವತೆಗಳ ದೂತ ಮತ್ತು ರಕ್ತ ಸಿಕ್ತವಾದ ಹಿಂಸ್ರಪಕ್ಷಿ ಮತ್ತು ರಣಹದ್ದುಗಳು ಯಮನ ದೂತರು. ಋಗ್ವೇದದಲ್ಲಿ, ಉತ್ತಮ ಶಕುನಗಳನ್ನೇ ಸೂಚಿಸಬೇಕೆಂದು ಒಂದು ಶಕುನಪಕ್ಷಿಗೆ ಪ್ರಾರ್ಥನೆಯಿದೆ (೨-೪೨-೪೩).

**ಹಿಂಸ್ರಪಶುಗಳು:**—ಇವುಗಳು ರಾಕ್ಷಸರಾಗಿ ಅಥವಾ ರಾಕ್ಷಸಲಕ್ಷಣಯುಕ್ತಗಳಾಗಿಯೇ ಕಂಡುಬರು ತ್ತವೆ. ಋಗ್ವೇದದಲ್ಲಿ, ರಾಕ್ಷಸರನ್ನು ಸೂಚಿಸಲು, 'ಮೃಗ' ಎಂಬ ಪದವನ್ನು ಪ್ರಯೋಗಿಸುವುದೂ ಉಂಟು (೧ ೮೦-೭; ೫-೨೯-೪; ೫-೩೨-೩). ಊರ್ಣವಾಭ (ಜೇಡರ ಹುಳುವಿನ ಜಾತಿ) ನೆಂಬ ರಾಕ್ಷಸನು ಮೂರು ಸಲ ಹೇಳಲ್ಪಟ್ಟಿದಾನೆ (೨-೧೧-೮; ೮-೩೨-೨೬; ೮-೬೬-೨); ಮತ್ತೊಬ್ಬನು ಉರಣ ಎಂದರೆ ಟಗರು (೨-೧೪-೪).



CC-0. Jangamwadi Math Collection. Digitized by eGangotri

ಅಹಿ (ಸರ್ಪ) ಎಂಬುದೇ ಹೆಚ್ಚಾಗಿ, ಈ ರೀತಿ ರಾಕ್ಷಸರನ್ನು ಸೂಚಿಸಲು ಉಪಯೋಗಿಸಿರುವುದು ; ಅದು ಸಾಧಾರಣವಾಗಿ ವೃತ್ರಾಸುರನ ಮತ್ತೊಂದು ಹೆಸರು; ಸರ್ಪವು ಪ್ರಾಣಿಗಳನ್ನು ಸುತ್ತಿಕೊಳ್ಳುವಂತೆ, ಇವನೂ ಮನುಷ್ಯರನ್ನು ಆವರಿಸುತ್ತಿದ್ದುದರಿಂದ ಈ ಹೆಸರು ಬಂದಿರಬಹುದು. ವೃತ್ರಾಸುರನನ್ನು ಕೊಂದ ಇಂದ್ರನೇ ಅಹಿಯನ್ನು ಕೊಲ್ಲುತ್ತಾನೆ (೮-೮೨-೨; ೪-೧೭-೧ ನ್ನು ಹೋಲಿಸಿ). ಅಹಿ ವೃತ್ರಗಳೆರಡೂ ಒಂದೇ ವ್ಯಕ್ತಿಗೆ ಅನ್ವಯಿಸುತ್ತವೆ ಎಂಬುದು ೧-೩೨-೧, ರಿಂದ ೧೪ ನೆಯ ಮಂತ್ರಗಳಲ್ಲಿ ಸ್ಪಷ್ಟವಾಗುತ್ತದೆ. ಈ ವಾಕ್ಯಗಳಲ್ಲಿ ವೃತ್ರನೆಂದು ಹೇಳಬೇಕಾದ ಸ್ಥಳಗಳಲ್ಲಿಯೂ ಅಹಿಯೆಂದೇ ಉಪಯೋಗಿಸಿದೆ. ಅದೇ ರೀತಿ ಅಹಿ ಶಬ್ದದ ಬದಲು ವೃತ್ರನೆಂದೂ ಹೇಳಿದೆ. ೧-೩೨-೩, ೪ ರಲ್ಲಿರುವ ಆದಿಯಲ್ಲಿ ಜನಿಸಿದ ಅಹಿಯೂ ವೃತ್ರನಲ್ಲದೆ ಬೇರೆ ಇರಲಾರದು ಇನ್ನೂ ಅನೇಕ ವಾಕ್ಯಗಳಲ್ಲೂ ಎರಡು ಪದಗಳೂ ಅಕ್ಕಪಕ್ಕಗಳಲ್ಲಿಯೇ ಇವೆ. ಅಹಿರೂಪನಾದ ವೃತ್ರನೆಂದೇ ಹೇಳಬಹುದು. ಅಹಿ ಒಬ್ಬನನ್ನೇ ಹೇಳಿದಾಗಲೂ, ಇಂದ್ರನ ಜಯದ ಪರಿಣಾಮವು, ವೃತ್ರನನ್ನು ವಧಿಸಿದಾಗ ಆಗುವ ಜಲವಿಮೋಚನ ಮತ್ತು ಗೋಲಾಭಗಳು. ಅಹಿಯು ನೀರನ್ನು ಸುತ್ತುಗಟ್ಟಿಕೊಂಡಿದಾನೆ ಎಂಬುದಾಗಿ ಹೇಳುವಾಗಲೂ ವೃ (ಆವರಿಸು) ಎಂಬ ಧಾತುವೇ ಪ್ರಯೋಗಿಸಲ್ಪಟ್ಟಿದೆ ಅದೇ ರೀತಿ, ಸರ್ಪವು ನೀರನ್ನು ನುಂಗಿಬಿಟ್ಟಿದೆ (ಗ್ರಸ್ ಧಾತು ; ೪-೧೭-೧ ; ೧೦-೧೧೧-೯). ಸಿಡಿಲು, ಗುಡುಗು ಮುಂತಾದುವು ಅಹಿಯ ಆಯುಧಗಳು (೧-೩೨-೧೩). ಅವನೂ ತೇಜಸ್ವಿ ; ಮರುತರಿಗೆ 'ಅಹಿಭಾನವಃ' ಎಂದರೆ ಅಹಿಯಂತೆ ಪ್ರಕಾಶಯುಕ್ತರು ಎಂದು ವಿಶೇಷಣ (೧-೧೭೨-೧). ಅಗ್ನಿಗೂ ಈ ಪದವನ್ನು ಪಯೋಗಿಸಿದಾರೆ; ರಭಸದಿಂದ ಬೀಸುತ್ತಿರುವ ಗಾಳಿಯಂತೆ ಬುಸುಗುಟ್ಟುತ್ತಿರುವ ಸರ್ಪವೆಂದು ಅವನನ್ನು ವರ್ಣಿಸಿದೆ (೧-೭೯-೧). ಶತ್ರುವನ್ನು ಅಹಿಗೆ ಒಪ್ಪಿಸಿಬಿಡು ಎಂದು ಸೋಮನನ್ನು ಪ್ರಾರ್ಥಿಸಿದಾರೆ (೭-೧೦೪-೯). ಅಹಯಃ ಎಂದು ಬಹುವಚನದಲ್ಲಿ ರಾಕ್ಷಸವಂಶವು ಉಕ್ತವಾಗಿದೆ (೯-೮೮-೪ ; ೧೦-೧೩೯-೬) ; ಅವರಲ್ಲಿ ಅಹಿಯೇ ಮೊದಲು ಹುಟ್ಟಿದವನು (೧-೩೨-೩, ೪). ಅಹಿ ಬುಧ್ನ್ಯ ಎಂಬ ಹೆಸರಿನಿಂದ, ಈ ಸರ್ಪವು ದೇವತೆಯಾಗಿ ಪರಿಗಣಿತವಾಗಿದೆ.

ಇತರ ವೇದಗಳಲ್ಲಿ, ಸರ್ಪಗಳೂ, ಗಂಧರ್ವರು ಮೊದಲಾದವರಂತೆ, ಅರ್ಧದೇವಜಾತಿಗೆ ಸೇರಿದವರೆಂದು ಗಣನೆಯಿದೆ. ಅವರುಗಳೂ ಭೂಮ್ಯಾಕಾಶಗಳು ಮತ್ತು ಸ್ವರ್ಗಲೋಕಗಳಲ್ಲಿರುತ್ತಾರೆ (ವಾ. ಸಂ. ೧೩-೬ ; ತೈ. ಬ್ರಾ. ೩-೧-೧-೭ನ್ನು ಹೋಲಿಸಿ). ಅಥರ್ವವೇದದಲ್ಲಿ ಬಹಳ ಕಡೆ ಇವುಗಳ ಪ್ರಸಕ್ತಿಯಿದೆ. ಸರ್ಪದೇವತೆಗಳ ಸ್ತುತಿಗಾಗಿ ಒಂದು ಸೂಕ್ತವೇ ಮೀಸಲಾಗಿರುವಂತಿದೆ (ಅ. ವೇ ೧೧-೯). ಸೂತ್ರಗಳಲ್ಲಿ, ಭೂಮಿ, ಅಂತರಿಕ್ಷ ಮತ್ತು ಸ್ವರ್ಗದ ದೇವತೆಗಳಿಗೆ ಪ್ರತ್ಯೇಕವಾಗಿ ಆಹುತಿಗಳು ವಿಹಿತವಾಗಿವೆ (ಆ. ಗೃ. ಸೂ. ೨-೧-೯ ; ಪಾ. ಗೃ. ಸೂ. ೨-೧೪-೯). ದೇವತೆಗಳು, ಸಸ್ಯಗಳು, ರಾಕ್ಷಸರು ಇವರ ಜೊತೆಗೆ ಸರ್ಪಗಳಿಗೂ ಪೂಜೆಯುಂಟು (ಶಾಂ. ಗೃ. ಸೂ. ೪-೯-೩ ; ೪-೧೫-೪ ; ಆ. ಗೃ. ಸೂ. ೩-೪-೧); ಅವುಗಳಿಗೋಸ್ಕರ ರಕ್ತವನ್ನು ಸುರಿಯುತ್ತಾರೆ (ಆ. ಗೃ. ಸೂ. ೪-೮-೨೭). ಸರ್ಪವು ಹಿಂಸ್ರಜಂತುವಾದುದರಿಂದ, ರಾಕ್ಷಸ ಸ್ವಭಾವವುಳ್ಳದ್ದೆಂದೂ, ಅದನ್ನು ತೃಪ್ತಿಪಡಿಸಲೇಬೇಕೆಂದೂ ನಂಬಿಕೆ. ಇದೇರೀತಿ ಇರುವೆಗಳಿಗೂ ಆಹುತಿಯುಂಟು (ಕೌ. ಸೂ. ೧೧೬).

### ದೇವತೆಗಳೆಂದು ಭಾವಿಸಲ್ಪಟ್ಟ ಭೌತಿಕ ವಸ್ತುಗಳು.

ಸ್ವರ್ಗ ಮತ್ತು ಅಂತರಿಕ್ಷಗಳಿಗೆ ಸಂಬಂಧಪಟ್ಟಂತೆ ಕಂಡುಬರುವ ಪ್ರಾಕೃತಿಕ ಘಟನೆಗಳು ಮತ್ತು ಶಕ್ತಿಗಳನ್ನಲ್ಲದೆ, ಪಾರ್ಥಿವ ವಸ್ತುಗಳನ್ನೂ ದೇವತೆಗಳೆಂದು ಭಾವಿಸುವುದೂ ಋಗ್ವೇದದಲ್ಲಿ ರೂಢಿಗೆ ಬಂದಿದೆ. ಈ ರೀತಿ ದೇವತಾರೂಪಕ್ಕೆ ಒಳಗಾಗುವ ವಸ್ತುಗಳು, ಸಾಧಾರಣವಾಗಿ ಮನುಷ್ಯನಿಗೆ ಅತ್ಯಂತ ಉಪಯುಕ್ತವಾದವುಗಳು ಮಾತ್ರ. ಈ ರೀತಿಯ ಪೂಜೆಯನ್ನು ಸರ್ವದೇವತಾರಾಧನೆ ಅಥವಾ, ವಿಶ್ವವೇ ದೇವರು, ದೇವರೇ



CC-0. Jangamwadi Math Collection. Digitized by eGangotri

ವಿಶ್ವವೆಂಬ ವಾದವೆಂದಾಗಲೀ ಭಾವಿಸಬಾರದು. ಇಲ್ಲಿ ಪ್ರತಿಯೊಂದು ವಸ್ತುವಿಗೂ ಪ್ರತ್ಯೇಕ ಸ್ಥಾನವಿದೆ. ಇದನ್ನು ಕೇವಲ ವಸ್ತುಪೂಜೆಯೆನ್ನಬಹುದು.

ದೇವತಾ ಸ್ವರೂಪಗಳಾದ ನದಿಗಳು ಹಿಂದೆಯೇ ಚರ್ಚಿಸಲ್ಪಟ್ಟಿವೆ-

ಪರ್ವತಗಳು ದಿವ್ಯಚೇತನವಿಶಿಷ್ಟವಾಗಿವೆ. ಸುಮಾರು ಇಪ್ಪತ್ತು ಸಲ ಬಹುವಚನದಲ್ಲಿಯೂ, ನಾಲ್ಕು ಸಲ ಏಕವಚನದಲ್ಲಿಯೂ ಹೊಗಳಲ್ಪಟ್ಟಿವೆ. ಈ ರೀತಿ ಪರ್ವತಗಳನ್ನು ಮಾತ್ರ ಎಲ್ಲಿಯೂ ಸ್ತುತಿಸಿಲ್ಲ; ಸಾಧಾರಣವಾಗಿ ಉದಕ, ನದಿಗಳು, ಗಿಡಗಳು, ಮರಗಳು, ಸ್ವರ್ಗ ಮತ್ತು ಭೂಮಿ ಇವುಗಳೊಡನೆ (೭-೩೪-೨೩ ; ಇತ್ಯಾದಿ) ಅಥವಾ ಸವಿತೃ, ಇಂದ್ರ, ಮೊದಲಾದ ದೇವತೆಗಳೊಡನೆ (೬-೪೯-೧೪ ; ಇತ್ಯಾದಿ) ಪೌರುಷಯುಕ್ತರು, ದೃಢವಾಗಿರುವವರು ಮತ್ತು ಸಮೃದ್ಧರಾಗಿ ಸಂತುಷ್ಟರಾಗಿರುವರು (೩-೫೪-೨೦). ಇಂದ್ರಾಪರ್ವತಾ ಎಂಬುದಾಗಿ ಇಂದ್ರನಿಗೆ ಸಮಾನವಾದ ಸ್ಥಾನವೂ ಅಭಿಪ್ರೇತವೆಂದು ಕಾಣುತ್ತದೆ. (೧-೧೨೨-೩ ; ೧-೧೩೨-೬). ಅವರಿಬ್ಬರೂ ಒಂದು ದೊಡ್ಡ ರಥದಲ್ಲಿ ಸಂಚರಿಸುತ್ತಾರೆ; ಇಬ್ಬರೂ ಕೂಡಿಯೇ ಯಾಗಕ್ಕೆ ಬರಬೇಕೆಂದು ಆಹ್ವಾನ (೩-೫೩-೧). ಇಲ್ಲಿ ಪರ್ವತವು ಪರ್ವತ ದೇವತೆ ಮತ್ತು ಇಂದ್ರನ ಸಹಚರ.

ಓಷಧಿಗಳೂ (ಗಿಡಗಳು) ದೇವತ್ವವನ್ನು ಪಡೆದಿವೆ. ೧೦-೯೭ ನೆಯ ಸೂಕ್ತ ಪೂರ್ತಿಯಾಗಿ ಇವುಗಳ ರೋಗಗಳನ್ನು ಗುಣಪಡಿಸುವ ಶಕ್ತಿಯನ್ನು ಹೊಗಳಿದೆ. ಜನನಿಯರು, ದೇವತೆಗಳು ಮೊದಲಾಗಿ ವರ್ಣಿಸಿದೆ. ಸೋಮಲತೆಗೆ ಎಲ್ಲಾ ಸಸ್ಯಗಳೂ ಅಧೀನ ಮತ್ತು ಸೋಮವು ಎಲ್ಲರಿಗೂ ದೊರೆ. ಔಷಧಿಗೆ ಉಪಯೋಗವಾಗುವ ಸಸ್ಯವೊಂದನ್ನು ಭೂದೇವಿಯಲ್ಲಿ ಜನಿಸಿದ ದೇವಿಯೆಂದು ಹೊಗಳಿದೆ (ಅ. ವೇ. ೬-೧೩೬-೧). ಸಂತತಿಗೆ ಅಡ್ಡಿ ಬಾರದಿರಲೆಂದು, ಈ ಓಷಧಿಗಳಿಗೆ ಒಂದು ಪಶು ಬಲಿಯೂ ಕೊಡಲ್ಪಡುತ್ತದೆ (ತೈ. ಸಂ. ೨-೧-೫-೩).

ವನಸ್ಪತಿಗಳು (ಮರಗಳು), ಬಹುವಚನದಲ್ಲಿ (೭-೩೪-೨೩ ; ೧೦-೬೪-೮) ಅಥವಾ ಏಕವಚನದಲ್ಲಿ (೧-೯೦-೮ ; ವಾಲ. ೬-೪), ನೀರು ಮತ್ತು ಪರ್ವತಗಳೊಡನೆ, ದೇವತೆಗಳೆಂದು ಭಾವಿಸಲ್ಪಟ್ಟಿವೆ. ವಿವಾಹ ಸಮಾರಂಭಗಳಲ್ಲಿ, ದೊಡ್ಡ ದೊಡ್ಡ ಮರಗಳ (ಅಶ್ವತ್ಥ ಮೊದಲಾದುವು) ಪೂಜೆಯು ವಿಹಿತವಾಗಿದೆ.

೧೦-೧೪೬ ನೆಯ ಸೂಕ್ತದಲ್ಲಿ ಅರಣ್ಯಾನೀ ಎಂಬ ಹೆಸರಿನಿಂದ ವನದೇವತೆಯು (ಕಾಡಿನ ಅಭಿಮಾನಿ ದೇವತೆ) ವರ್ಣಿತಳಾಗಿದ್ದಾಳೆ. ಕಾಡು ಮೃಗಗಳಿಗೆ ಜನನಿ, ವ್ಯವಸಾಯವಿಲ್ಲದಿದ್ದರೂ ಆಹಾರಕ್ಕೆ ಕೊರತೆಯಿಲ್ಲ. ಕಾಡಿನಲ್ಲಿ ಕೇಳಿಬರುವ ನಾನಾ ಶಬ್ದಗಳನ್ನು ನಾನಾ ವಿಧವಾಗಿ ವರ್ಣಿಸಿದಾರೆ. ಆದರೆ, ಈ ಸಸ್ಯಗಳು ಮತ್ತು ವನದೇವತೆಗಳ ಪಾತ್ರವು, ವೇದಗಳಲ್ಲಿ ಮಾತ್ರವಲ್ಲ, ಯಜ್ಞಾದಿ ಕರ್ಮಗಳಲ್ಲಿಯೂ, ಅಪ್ರಧಾನವಾದುದು. ಬೌದ್ಧಗ್ರಂಥಗಳಲ್ಲಿ ಮಾತ್ರ, ಇವುಗಳಿಗೂ ಮನುಷ್ಯರಿಗೂ ಬಹಳ ಸಮೀಪ ಬಾಂಧವ್ಯವೇರ್ಪಟ್ಟಿದೆ.

## ಉಪಕರಣಗಳು.

ವ್ಯಕ್ತೀಕರಣ ಮತ್ತು ದೇವತ್ವಾರೋಪಗಳಿಗೆ ಒಳಗಾಗಿರುವ ಇನ್ನೊಂದು ವಸ್ತುಚಯವೆಂದರೆ ಯಾಗೋಪಕರಣಗಳು. ಇವುಗಳಲ್ಲಿ ಮುಖ್ಯವಾದುದು ಯೂಪಸ್ತಂಭ. ಇದಕ್ಕೆ ವನಸ್ಪತಿ ಮತ್ತು ಸ್ವರು ಎಂಬ ಹೆಸರುಗಳೂ ಉಂಟು. ಇವೆರಡೂ ೩-೮ ರಲ್ಲಿ ದೇವತಾ ಸ್ವರೂಪರೆಂದು ಸ್ತುತವಾಗಿವೆ. ಋತ್ವಿಜರಿಂದ ಶುದ್ಧಿ ಮಾಡಲ್ಪಟ್ಟು, ಅಲಂಕರಿಸಲ್ಪಟ್ಟಿವೆ. ಋತ್ವಿಜರಿಂದ ನಿಲ್ಲಿಸಲ್ಪಟ್ಟ ಸ್ತಂಭಗಳೂ ದೇವತೆಗಳೇ ಮತ್ತು ಇತರ ದೇವತೆಗಳಂತೆ, ದೇವತೆಗಳ ಸಮೀಪಕ್ಕೆ ಹೋಗುತ್ತವೆ. ಆಪ್ರೀ ಸೂಕ್ತದ ಹತ್ತು ಮತ್ತು ಹನ್ನೊಂದನೆಯ ಮಂತ್ರಗಳಲ್ಲಿ, ಹೀಗೆ ಹೇಳಿದೆ; ಯೂಪಸ್ತಂಭವು ಮೂರು ಸಲ ಘೃತದಿಂದ ಶುದ್ಧಿಮಾಡಲ್ಪಟ್ಟು, ಅಗ್ನಿಯ



CC-0. Jangamwadi Math Collection. Digitized by eGangotri

ಪಾರ್ಶ್ವದಲ್ಲಿ ಸ್ಥಾಪಿತವಾಗಿ, ಹುತವಾದ ಪದಾರ್ಥಗಳನ್ನು ದೇವತೆಗಳ ಬಳಿಗೆ ಹೋಗಗೊಡಬೇಕೆಂದು ಪ್ರಾರ್ಥಿತವಾಗುತ್ತದೆ. ಅದೇ ಸೂಕ್ತದಲ್ಲಿ (೩-೩-೪ ; ೧೦-೭೦-೪). ದರ್ಭೆಯನ್ನೂ ದೇವತೆಯೆಂದು ಹೇಳಿದೆ. ಯಾಗಶಾಲೆಯ ದ್ವಾರಗಳನ್ನು ದೇವತೆಗಳೆಂದು ಹೆಚ್ಚುಸಲ ಕರೆದಿದಾರೆ (ದೇವೀಃ ದ್ವಾರಃ).

ಸೋಮರಸವನ್ನು ಹಿಂಡುವುದಕ್ಕೆ ಉಪಯೋಗಿಸುವ ಶಿಲೆಗಳು (ಗಾವಾ, ಅದ್ರಿ) ಮೂರು ಸೂಕ್ತಗಳಲ್ಲಿ ದೇವತೆಗಳೆಂದು ಭಾವಿತವಾಗಿವೆ (೧೦-೭೬, ೯೪, ೧೭೫). ಅವುಗಳಿಗೆ ನಾಶವಿಲ್ಲ. ವಾರ್ಧಕ್ಯವಿಲ್ಲ, ಮತ್ತು ಅವು ಸ್ವರ್ಗಕ್ಕಿಂತಲೂ ಮಹತ್ತಾದವು. ಸೋಮಾಭಿಷವಕಾಲದಲ್ಲಿ, ಅವು ಅಶ್ವಗಳು ಅಥವಾ ವೃಷಭಗಳಂತೆ ಇರುತ್ತವೆ ಮತ್ತು ಅವುಗಳಿಂದ ಜನಿತವಾದ ಶಬ್ದವು ಸ್ವರ್ಗವನ್ನೂ ಮುಟ್ಟುತ್ತದೆ. ರಾಕ್ಷಸರು ಮತ್ತು ಅಪಘಾತಗಳನ್ನು ನಿವಾರಿಸಿ, ಐಶ್ವರ್ಯ, ಸಂತಾನಗಳನ್ನು ಅನುಗ್ರಹಿಸಬೇಕೆಂದು ಪ್ರಾರ್ಥನೆ. ೧-೨೮-೫, ೬ ರಲ್ಲಿ, ಕಲಬತ್ತು ಮತ್ತು ಕುಟ್ಟಣಿಗಳು, ಗಟ್ಟಿಯಾಗಿ ಶಬ್ದಮಾಡುತ್ತಾ, ಸೋಮರಸವನ್ನು ಹಿಂಡಬೇಕೆಂದು ಪ್ರಾರ್ಥಿತವಾಗಿವೆ.

ಅಥರ್ವವೇದದಲ್ಲಿ, ಹೋಮಶೇಷಕ್ಕೆ (ಉಚ್ಛಿಷ್ಟ) ಹೆಚ್ಚಾದ ದೈವೀಶಕ್ತಿ ಇದೆಯೆಂದು ಹೇಳಿದೆ (ಅ.ವೇ. ೧೧-೭); ಅದೇ ರೀತಿ ಯಾಗದಲ್ಲಿ ಉಪಯೋಗಿಸುವ ಸ್ರುಕ್ ಸ್ರುವಾದಿಗಳಿಗೂ ಶಕ್ತಿಯುಂಟು.

ಶುನ ಸೀರ ಎಂಬ ವ್ಯವಸಾಯೋಪಕರಣಗಳಿಗೂ ಕೆಲವು ಸ್ತುತಿವಾಕ್ಯಗಳಿವೆ (೪-೫೭-೫ ರಿಂದ ೮) ಮತ್ತು ಅವುಗಳಿಗೆ ಪುರೋಡಾಶವು ವಿಹಿತವಾಗಿದೆ (ಶ. ಬ್ರಾ. ೨-೬-೩-೫).

ಆಯುಧಗಳಿಗೂ ದೇವತಾ ಸ್ವರೂಪವುಂಟು. ೬-೭೫ ನೆಯ ಸೂಕ್ತ ಪೂರ್ತಿಯಾಗಿ, ಬಿಲ್ಲುಬಾಣಗಳು, ಬತ್ತಳಿಕೆ ಮೊದಲಾದ ಯುದ್ಧೋಪಕರಣಗಳ ಸ್ತುತಿಗೆ ಮೀಸಲಾಗಿದೆ. ಬಾಣವೂ ದಿವ್ಯವಾದುದು; ರಕ್ಷಣೆ ಮಾಡಬೇಕು ಮತ್ತು ಶತ್ರುಗಳನ್ನು ಹೊಡೆಯಬೇಕೆಂದು ಪ್ರಾರ್ಥನೆ. ದುಂದುಭಿಯೂ ಇದೇರೀತಿ, ಆಪತ್ತು, ಶತ್ರುಗಳು ಮತ್ತು ರಾಕ್ಷಸರು, ಇವರನ್ನು ಓಡಿಸಬೇಕೆಂದು ಪ್ರಾರ್ಥಿತವಾಗಿದೆ. ಅಥರ್ವ ವೇದದ ಒಂದು ಇಡೀ ಸೂಕ್ತವೇ ಅದನ್ನು ಸ್ತುತಿಸುತ್ತದೆ (ಅ. ವೇ. ೪-೨೦).

## ಲಾಂಛನಗಳು—ಪ್ರತಿಮೆಗಳು.

ಸಾಧಾರಣ ವಸ್ತುಗಳನ್ನು ದೇವತೆಗಳ ಪ್ರತಿನಿಧಿಗಳನ್ನಾಗಿ ಹೇಳುವುದು ಇತರ ವೇದಗಳಲ್ಲಿ ಸ್ವಲ್ಪಮಟ್ಟಿಗೆ ಕಂಡುಬರುತ್ತದೆ. ನನ್ನ ಈ ಇಂದ್ರನನ್ನು ಹತ್ತು ಗೋವುಗಳಿಗೆ ಯಾರು ಕೊಂಡುಕೊಳ್ಳುತ್ತಾರೆ? ತನ್ನ ಶತ್ರುಗಳನ್ನು ಸೋಲಿಸಿದ ಮೇಲೆ ಹಿಂದಕ್ಕೆ ಕೊಡಬಹುದು (೪-೨೪-೧೦; ೮-೧-೫ ನ್ನು ಹೋಲಿಸಿ) ಎಂಬಲ್ಲಿ, ಇಂತಹುದೇ ಒಂದು ಇಂದ್ರ ಪ್ರತಿಮೆಯೇ ಕ್ರಯವಸ್ತುವಾಗಿರಬೇಕು. ಬ್ರಾಹ್ಮಣಗಳು ಮತ್ತು ಸೂತ್ರಗಳಲ್ಲಿ ಪ್ರತಿಮೆಗಳ ನಿರ್ದೇಶವು ಹೆಚ್ಚುತ್ತಾ ಬರುತ್ತದೆ.

ಕೆಲವು ಕರ್ಮಗಳಲ್ಲಿ, ಸೂರ್ಯನ ಪ್ರತಿನಿಧಿ (ಆಕಾರ ಮತ್ತು ಚಲನ ಸೂಚಕ) ಯಾಗಿ, ಚಕ್ರವನ್ನು ಉಪಯೋಗಿಸುವುದುಂಟು. ವಾಜಪೇಯ ಯಾಗದಲ್ಲಿ, ಅಗ್ನ್ಯಾಧಾನ ಸಮಯದಲ್ಲಿ, ಈ ರೀತಿ ಉಪಯೋಗಿಸುತ್ತಾರೆ. ಪುರಾಣಗಳಲ್ಲಂತೂ, ಚಕ್ರವು ವಿಷ್ಣುವಿನ ಒಂದು ಆಯುಧವಾಗಿದೆ.

ಸೂರ್ಯಾಸ್ತಮಾನವಾದ ಮೇಲೆ, ನೀರು ಸೇದುವ ಸಂದರ್ಭದಲ್ಲಿ ಸೂರ್ಯನ ಸ್ಥಾನದಲ್ಲಿ ಭಂಗಾರವನ್ನು ಇಟ್ಟುಕೊಳ್ಳುತ್ತಾರೆ (ಶ. ಬ್ರಾ. ೩-೯-೨-೯); ಆದರೆ ಚಿನ್ನವು ಸೂರ್ಯನಿರು ಅಥವಾ ಉರಿಯುವ ಕೊಳ್ಳಿಯನ್ನು


CC-0. Jangamwadi Math Collection. Digitized by eGangotri

ವಾಗಲೂ ಅದೇ ಕೆಲಸಕ್ಕೆ ಉಪಯೋಗವಾಗುತ್ತಿತ್ತು (ಶ. ಬ್ರಾ. ೧೩-೪-೪-೬). ಅಗ್ನಿಕುಂಡನಿರ್ಮಾಣ ಮಾಡುವಾಗ, ಸೂರ್ಯನ ಬದಲು, ಗುಂಡಾಗಿರುವ ಚಿನ್ನದ ತಗಡೊಂದನ್ನು ಉಪಯೋಗಿಸುತ್ತಾರೆ (ಶ. ಬ್ರಾ. ೭-೪-೧-೧೦).

ಶಿಶ್ನಪೂಜೆಯು ರೂಢಿಯಲ್ಲಿತ್ತೆಂದೂ ತೋರುತ್ತದೆ; ಶಿಶ್ನದೇವಾಃ ಎಂದು ಎರಡು ಕಡೆ ಬರುತ್ತದೆ. ಆದರೆ ಈ ಪೂಜೆಯು ವೈದಿಕ ಅಭಿಪ್ರಾಯಗಳಿಗೆ ವಿರುದ್ಧವಾಗಿತ್ತೆಂದು ಹೇಳಬಹುದು; ಶಿಶ್ನದೇವತೆಗಳನ್ನು ಯಾಗದ ಸಮೀಪಕ್ಕೆ ಬರಗೊಡಬೇಡವೆಂದು ಇಂದ್ರನು ಪ್ರಾರ್ಥಿತನಾಗಿದಾನೆ (೭-೨೧-೫); ಶತದ್ವಾರಗಳುಳ್ಳ ದುರ್ಗದ ಸಂಪತ್ತನ್ನು ಸಂಪಾದಿಸುವಾಗ, ಇಂದ್ರನು ಶಿಶ್ನದೇವತೆಗಳನ್ನು ವಧಿಸಿದನೆಂದು ಇದೆ (೧೦.೯೯-೩). ಪುರಾಣಗಳಲ್ಲಿ, ಶಿವನ ಸೃಷ್ಟಿಕರ್ತೃತ್ವ ಸೂಚಕವಾಗಿ, ಶಿಶ್ನ ಅಥವಾ ಲಿಂಗಪೂಜೆಯು ಬಳಕೆಗೆ ಬಂದಿದೆ.

## ಪಾಪದೇವತೆಗಳು ಮತ್ತು ಪಿಶಾಚಿಗಳು.

**ಅಸುರರು :**—ಮಂಗಳಕರವಾದ ದೇವತೆಗಳಿಗೆ ವಿರೋಧಿಗಳೂ ಹಿಂಸಕರೂ ಆದ ಕೆಲವು ವ್ಯಕ್ತಿಗಳು ಅನೇಕ ನಾಮಗಳಿಂದ ಕರೆಯಲ್ಪಟ್ಟಿದಾರೆ. ವೇದಗಳಲ್ಲೆಲ್ಲಾ ಅಸುರರೆಂದರೆ ಸ್ವರ್ಗಲೋಕದ ರಾಕ್ಷಸರು; ನಿಯತವಾಗಿ ದೇವತೆಗಳ ವಿರೋಧಿಗಳು; ಸರ್ವದಾ ಅವರೊಡನೆ ಐತಿಹಾಸಿಕ ಯುದ್ಧಗಳಲ್ಲಿ ಹೊಡೆದಾಡುತ್ತಿರುತ್ತಾರೆ; ಎಲ್ಲೋ ಅಪರೂಪವಾಗಿ ಮನುಷ್ಯನಿಗೆ ವಿರೋಧಿಗಳು (ಅ. ವೇ. ೮-೬-೫; ಕೌ. ಸೂ. ೮೭-೧೬; ೮೮-೧) ಆಗುತ್ತಾರೆ. ಆದರೆ ಋಗ್ವೇದದಲ್ಲಿ ಈ ಪದಕ್ಕೆ ಈ ಅರ್ಥವಿರುವುದು ಅಪರೂಪ. ಬಹುವಚನದಲ್ಲಿ, ರಾಕ್ಷಸರೆಂಬರ್ಥದಲ್ಲಿ ನಾಲ್ಕೇ ಸಲ ಪ್ರಯೋಗವಿದೆ. ದೈವಭಕ್ತಿಯಿಲ್ಲದ ಅಸುರರನ್ನು ಓಡಿಸೆಂದು ಇಂದ್ರನಿಗೆ ಪ್ರಾರ್ಥನೆ (೮-೮೫-೯). ಉಳಿದ ಮೂರು ಪ್ರಯೋಗಗಳು ಹತ್ತನೆಯ ಮಂಡಲದಲ್ಲೇ ಇವೆ. ದೇವತೆಗಳು ಅಸುರರನ್ನು ಹೊಡೆದರು (೧೦-೧೫೭-೪) ಅಸುರರನ್ನು ನಿರ್ಮೂಲ ಮಾಡುವ ಉಪಾಯವೊಂದನ್ನು ತಾನು ಕಂಡುಹಿಡಿಯುತ್ತೇನೆಂದು ಅಗ್ನಿಯು ಮಾತುಕೊಡುತ್ತಾನೆ (೧೦-೫೩-೪). ದುರ್ಜೇಯರಾದ ಅಸುರರಲ್ಲಿ ದೇವತೆಗಳು ನಂಬಿಕೆಯನ್ನು ಇಟ್ಟಿದ್ದರು ಎಂದಿದೆ (೧೦-೧೫೧-೩). ಏಕವಚನದಲ್ಲಿ ಮೂರು ಸಲ ಒಬ್ಬ ರಾಕ್ಷಸನನ್ನು ಸೂಚಿಸುತ್ತದೆ. ಅಸುರನ ಯೋಧರನ್ನು ಕಾದ ಕಲ್ಲಿನಿಂದ ಇರಿಯುವಂತೆ ಬೃಹಸ್ಪತಿಯು ಪ್ರಾರ್ಥಿತನಾಗಿದಾನೆ (೨-೩೦-೪). ಮಾಯಿಯಾದ ಪಿಪ್ರು ಎಂಬ ಅಸುರನ ದುರ್ಗಗಳನ್ನು ಇಂದ್ರನು ಧ್ವಂಸಮಾಡಿದನು (೧೦-೧೩೮-೩); ವರ್ಚಿ ಎಂಬ ಅಸುರನ ಒಂದು ಲಕ್ಷ ಯೋಧರನ್ನು ಇಂದ್ರಾವಿಷ್ಣುಗಳು ಬಡಿದರು (೭-೯೯-೫). ಇಂದ್ರ (೬-೨೨-೪), ಅಗ್ನಿ (೭-೧೩-೧) ಮತ್ತು ಸೂರ್ಯ (೧೦-೧೭೦-೨)ರಿಗೆ ಅನ್ವಯಿಸುವ 'ಅಸುರಹಾ' (ಅಸುರನನ್ನು ವಧಿಸುವವನು) ಎಂಬ ವಿಶೇಷಣದಲ್ಲಿಯೂ ಅಸುರ ಎಂದರೆ ರಾಕ್ಷಸನೇ. ಈ ದೇವಾಸುರ ಯುದ್ಧವೆಂಬುದು ಮೊದಲು ಇಂದ್ರನೆಂಬ ಒಬ್ಬ ದೇವತೆ ಮತ್ತು ವೃತ್ರನೆಂಬ ಒಬ್ಬ ಅಸುರನಿಗೂ ಪ್ರಾರಂಭವಾಗಿ, ಬರುಬರುತ್ತಾ, ದೇವತೆಗಳದೇ ಒಂದು ಗುಂಪು, ರಾಕ್ಷಸರದೇ ಒಂದು ಗುಂಪು, ಈ ಎರಡು ಪಂಗಡಗಳಿಗೂ ಸತತ ಯುದ್ಧವಾಗಿ ಪರಿಣತವಾಗಿರುವಂತೆ ಕಾಣುತ್ತದೆ. ಇದೇ ಅಭಿಪ್ರಾಯವೇ ಬ್ರಾಹ್ಮಣಗಳಲ್ಲಿ ವ್ಯಕ್ತವಾಗುವುದು. ಈ ಯುದ್ಧಗಳಲ್ಲಿ ಒಂದು ವೈಶಿಷ್ಟ್ಯವೂ ಇದೆ. ಪ್ರಾರಂಭದಲ್ಲಿ ಅಸುರರದೇ ಮೇಲುಗೈಯಾಗಿದ್ದು, ಕೊನೆಗೆ ದೇವತೆಗಳು ಉಪಾಯದಿಂಗ ಜಯಿಸುತ್ತಾರೆ. ವಿಷ್ಣುವು ತ್ರಿವಿಕ್ರಮಾವತಾರದಿಂದ ಮೂರು ಹೆಜ್ಜೆ ಭೂಮಿಯ ನೆಪದಲ್ಲಿ ದೇವತೆಗಳಿಗೆ ಅವರ ರಾಜ್ಯವನ್ನು ಹಿಂದಕ್ಕೆ ಕೊಡಿಸುವುದು ಬಹು ಮುಖ್ಯವಾದ ಉದಾಹರಣೆ.

ಬ್ರಾಹ್ಮಣಗಳಲ್ಲಿ ಅಸುರರಿಗೂ ಅಂಧಕಾರಕ್ಕೂ ಸಂಬಂಧ ಕಲ್ಪಿತವಾಗಿದೆ (ಶ. ಬ್ರಾ. ೨-೪-೨-೫). ಹಗಲು ದೇವತೆಗಳಿಗೂ, ರಾತ್ರಿಯು ರಾಕ್ಷಸರಿಗೂ ಸೇರಿದುದು. (ತೈ. ಸಂ. ೧-೫-೯-೨). ಆದರೆ, ಅಸುರರೂ



CC-0. Jangamwadi Math Collection. Digitized by eGangotri

ಪ್ರಜಾಪತಿಯಿಂದ ಜನಿಸಿದವರೇ; ಆದಿಯಲ್ಲಿ ದೇವತೆಗಳಂತೆ ಮತ್ತು ದೇವತೆಗಳಿಗೆ ಸಮರಾಗಿಯೇ ಇದ್ದರು. ದೇವ ಎಂಬ ಪದದಿಂದ ಕೆಲವು ಹಾನಿಕರರಾದ ವ್ಯಕ್ತಿಗಳೂ ವಾಚ್ಯರಾಗಿರುವುದು ಈ ಕಾರಣದಿಂದಲೇ ಇರಬಹುದು (ತೈ. ಸಂ. ೩-೫-೪-೧; ಅ. ವೇ. ೩-೧೫-೫).

ಅಥರ್ವವೇದದಿಂದೀಚೆಗೆ, ಅಸುರ ಎಂದರೆ ರಾಕ್ಷಸರು ಮಾತ್ರ; ಆದರೆ, ಋಗ್ವೇದದಲ್ಲಿ ಮುಖ್ಯವಾಗಿ ದೇವತೆಗಳೇ ಈ ಪದದಿಂದ ಅಭಿಪ್ರೇತರು. ಮೊದಲು ದೇವತೆಗಳಿಗೇ ಹೆಚ್ಚಾಗಿ ಉಪಯೋಗಿಸುತ್ತಿದ್ದ ಈ ಪದಕ್ಕೆ ರಾಕ್ಷಸರೆಂಬ ಅರ್ಥವು ರೂಢಿಗೆ ಬಂದಿರುವುದು ಈರೀತಿ ಇರಬಹುದು. ಅಸುರ ಎಂಬುದಕ್ಕೆ ಒಂದು ವಿಲಕ್ಷಣವಾದ ಅರ್ಥವಿರುವಂತೆ ತೋರುತ್ತದೆ. ಇದು ಸಾಧಾರಣವಾಗಿ ವರುಣ ಅಥವಾ ಮಿತ್ರಾ-ವರುಣರಿಗೇ ಉಪಯೋಗಿಸಲ್ಪಟ್ಟಿದೆ ಮತ್ತು ಇವರಿಬ್ಬರ 'ಮಾಯಾ' ಶಕ್ತಿಯು ಅವರ ವೈಶಿಷ್ಟ್ಯ. ಆದರೆ ಮಾಯಾ ಎಂದರೆ ಕಪಟತನ ಅಥವಾ ಕೇಡುಮಾಡುವ ಶಕ್ತಿ ಎಂತಲೂ ಆಗುತ್ತದೆ. ಇದು ಮತ್ತು ಅಸುರಪದಕ್ಕೆ ಇರುವ ದುಷ್ಟ ಅರ್ಥಗಳೂ (೧೦-೧೨೪-೫; ೧೦-೧೩೮-೩) ಸೇರಿ, ಅಸುರ ಪದವು ದೇವತೆಗಳಿಗೆ ಅನರ್ಹವೆಂಬ ನಿರ್ಣಯಕ್ಕೆ ಅವಕಾಶಕೊಟ್ಟಿರಬಹುದು. ಒಂದು ಸೂಕ್ತದಲ್ಲಿ (೧೦-೧೨೪) ಈ ಪದವು ಎರಡು ಅರ್ಥಗಳಲ್ಲಿಯೂ ಉಪಯೋಗಿಸಿರುವಂತೆ ತೋರುತ್ತದೆ. ಬರುಬರುತ್ತಾ ದೇವತೆ ಎಂಬರ್ಥದಲ್ಲಿ ಈ ಪದದ ಪ್ರಯೋಗವೇ ಕಡಿಮೆಯಾಗುತ್ತಾ ಬಂದಿದೆ. ಅಲ್ಲದೇ ಮಹಾಬಲಿಷ್ಠರೂ, ಸುರರಿಗೆ ವಿರೋಧಿಗಳೂ ಆದವರಿಗೆ ಒಂದು ಪ್ರತ್ಯೇಕ ಹೆಸರಿನ ಅವಶ್ಯಕತೆಯೂ, ಒಂದು ಕಾರಣ. ಆದುದರಿಂದ ಸುರ (ದೇವತೆಗಳು-ಮೊದಲು ಉಪನಿಷತ್ತಿನಲ್ಲಿ ಕಂಡುಬರುತ್ತದೆ) ರಲ್ಲದವರು ಅಸುರರು ಎಂದು, ರಾಕ್ಷಸರಿಗೆ ಈ ಹೆಸರು ರೂಢಿಗೆ ಬಂದಿರಬಹುದು.

**ಪಣಿಗಳು.**—ವಾಯುಮಂಡಲದಲ್ಲಿರುವ ಪಣಿಗಳೆಂಬುವರು ಮುಖ್ಯವಾಗಿ ಇಂದ್ರನಿಗೆ (೬-೨೦-೪; ೬-೩೯-೨), ಮತ್ತು ಅವನ ಮಿತ್ರರು, ಸೋಮ, ಅಗ್ನಿ, ಬೃಹಸ್ಪತಿ, ಮತ್ತು ಅಂಗಿರಸರಿಗೆ ಶತ್ರುಗಳು. ಈ ರಾಕ್ಷಸರ ಹೆಸರು ಬರುವ ಸ್ಥಳಗಳಲ್ಲೆಲ್ಲಾ, ಅವರ ಗೋವುಗಳು, ಸ್ಪಷ್ಟವಾಗಿ (೧೦-೧೦೮; ೬-೩೯-೨) ಅಥವಾ ಪಣಿಗಳ ನಿಧಿ ಅಥವಾ ಸಂಪತ್ತು ಎಂಬ ಹೆಸರಿನಿಂದ (೨-೨೪-೬; ೯-೧೧೧-೨) ಪ್ರಸಕ್ತವಾಗಿಯೇ ಇವೆ. ಪಣಿಯಿಂದ ಗೋವಿನಲ್ಲಿ ನಿಗೂಹಿತನಾಗಿದ್ದ ಘೃತವನ್ನು ದೇವತೆಗಳು ಕಂಡುಹಿಡಿದರೆಂದು ಇದೆ (೪-೫೮-೪). ಸಾಮರ್ಥ್ಯದಲ್ಲಿ ಇಂದ್ರನು ಇವರನ್ನು ಮೀರಿಸಿದಾನೆ (೬-೫೬-೧೦), ಆದರೆ ಮಿತ್ರಾವರುಣರಷ್ಟು ಸಾಮರ್ಥ್ಯವನ್ನು ಅವರು ಪಡೆದಿಲ್ಲ (೧-೧೫೧-೯) ಎಂದ ಮೇಲೆ, ಇವರೂ ತಕ್ಕಮಟ್ಟಿಗೆ ಪ್ರಬಲರೇ.

ಹದಿನಾರು ಸಲ ಬಹುವಚನದಲ್ಲಿ, ನಾಲ್ಕು ಸಲ ಏಕವಚನದಲ್ಲಿ ಇದೆ. ಇಂದ್ರ ಅಥವಾ ಅಗ್ನಿ-ಸೋಮರು ಪಣಿಯಿಂದ ಗೋವುಗಳನ್ನು ಕಸಿದುಕೊಂಡರು (೧೦-೬೭-೬; ೧-೯೩-೪); ವೃಕರೂಪನಾಗಿರುವ ಪಣಿಯನ್ನು ಹೊಡೆದು ಕೆಡವಬೇಕೆಂದು ಸೋಮದೇವತೆಯು ಪ್ರಾರ್ಥಿತನಾಗಿದಾನೆ (೬-೫೧-೧೪).

'ಪಣಿ' ಪದವು ಏಕವಚನದಲ್ಲಿ ಇನ್ನೂ ಅನೇಕ ಸಲ ಉಪಯೋಗಿಸಲ್ಪಟ್ಟಿದೆ, ಆದರೆ ರಾಕ್ಷಸಸೂಚಕವಾಗಿ ಅಲ್ಲ; ಕೃಪಣನೆಂಬರ್ಥದಲ್ಲಿ. ಅದರಲ್ಲಿಯೂ, ಯಾಗಗಳಲ್ಲಿ ದಾನ ಮತ್ತು ಹೋಮ ಮಾಡುವ ವಿಷಯದಲ್ಲಿ ಕಾರ್ಪಣ್ಯಸೂಚಕವಾಗಿ ಉಪಯೋಗಿಸಿರುವುದು. ಸ್ವರ್ಗೀಯ ಸಂಪದಾದಿಗಳನ್ನು ಒಬ್ಬರಿಗೂ ಸಿಗದಂತೆ ಮಾಡುತ್ತಾರೆ ಎಂಬುದರಿಂದ, ಪಣಿಗಳೂ ರಾಕ್ಷಸರೆಂಬ ಭಾವನೆ ಬಂದಿರಬಹುದು.

**ದಾಸ ಅಥವಾ ದಸ್ಯುಃ.**—ದಾಸ ಅಥವಾ ಅದರ ಸಮಾನವಾದ ದಸ್ಯು ಎಂಬ ಪದದಿಂದಲೂ, ವಾಯುಮಂಡಲದ ರಾಕ್ಷಸರು ವಾಚ್ಯರಾಗುತ್ತಾರೆ. ಇವರು ಪ್ರಾಯಶಃ ಮೊದಲು ಮನುಷ್ಯರೇ ಆಗಿದ್ದು,





CC-0. Jangamwadi Math Collection. Digitized by eGangotri

ಅವರಲ್ಲಿ ಕಂಡುಬಂದ ಕೆಲವು ಅನಿಷ್ಟಗುಣಗಳಿಂದ ರಾಕ್ಷಸತ್ವಾರೋಪಕ್ಕೆ ಒಳಗಾಗಿರಬಹುದು. ಕೆಲವು ಗೊತ್ತಾದ ರಾಕ್ಷಸರ ಹೆಸರುಗಳಿಗೆ ಐತಿಹಾಸಿಕ ಪ್ರಾಮುಖ್ಯತೆಯೂ ಇರುವಂತೆ ಕಾಣುತ್ತದೆ.

ಏಕವಚನದ (೨-೧೨-೧೦ ; ಇತ್ಯಾದಿ) ಮತ್ತು ಬಹುವಚನದ (೧-೧೦೧-೫) ರೂಪಗಳು ಇಂದ್ರನಿಂದ ಧ್ವಂಸಿತರಾದ ರಾಕ್ಷಸರನ್ನು ನಿರ್ದೇಶಿಸುತ್ತವೆ; ಅನೇಕ ಸಲ, ಈ ಪದಗಳು 'ವೃತ್ರ' ಪದದ ಜೊತೆಯಲ್ಲಿ ಪ್ರಯುಕ್ತವಾಗಿವೆ (೬-೨೩-೨ ; ಇತ್ಯಾದಿ). ಈ ಕಾರಣದಿಂದಲೇ, ಇಂದ್ರನಿಗೆ ದಸ್ಯುಹಾ ಎಂದೂ (೧-೧೦೦-೧೨ ; ಇತ್ಯಾದಿ) ಈ ಕಾರ್ಯಕ್ಕೆ ದಸ್ಯುಹತ್ಯಾ (೧-೫೧-೫, ೬ ; ಇತ್ಯಾದಿ) ಎಂತಲೂ ಹೆಸರು ಬಂದಿರುವುದು. ತನ್ನನ್ನು ಆಶ್ರಯಿಸಿದವರ ರಕ್ಷಣಾರ್ಥವಾಗಿ, ಇಂದ್ರನು ಮೂವತ್ತು ಸಹಸ್ರ ದಸ್ಯುಗಳನ್ನೂ ದೀರ್ಘನಿದ್ರಾಮಗ್ನರನ್ನಾಗಿ ಮಾಡಿದನು (೪-೩೦-೨೧) ; ಸಹಸ್ರ ದಸ್ಯುಗಳನ್ನು ಬಂಧಿಸಿದನು (೨-೧೩-೯) ; ಅಥವಾ ದಭ್ಯಂಚ ಮತ್ತು ಮಾತರಿಶ್ವರಿಗೋಸ್ಕರ, ದಸ್ಯುಗಳಿಂದ ಗೋಶಾಲೆಗಳನ್ನು ಪಡೆದನು (೧೦-೪೮-೨). ಆರ್ಯ ಮತ್ತು ದಸ್ಯುರೂಪರಾದ ಶತ್ರುಗಳ ಮೇಲೆ ಇಂದ್ರನ ಸಹಾಯವನ್ನು ಅಪೇಕ್ಷಿಸಿದಾಗಲೂ (೧೦-೩೮-೩ ; ಇತ್ಯಾದಿ), ಅಥವಾ ಆರ್ಯ ದಸ್ಯುಗಳಲ್ಲಿ ಭೇದವನ್ನೆಣಿಸುತ್ತಾನೆ ಎಂದು ಹೇಳುವಾಗಲೂ (೧-೫೧-೮ ; ೧೦-೮೬-೧೯), ಭೂಮಿಯಲ್ಲಿರುವ ಶತ್ರು ಸಾಮಾನ್ಯರೇ ಅಭಿಪ್ರೇತರು. ಆರ್ಯರಿಗೋಸ್ಕರ, ಇಂದ್ರನು ದಸ್ಯುಗಳ ಮೇಲೆ ಯುದ್ಧಮಾಡುತ್ತಾನೆ ಎನ್ನುವಾಗಲೂ ಇದೇ ಅಭಿಪ್ರಾಯ (೬-೧೮-೩ ; ೬-೨೫-೨). ಹೀಗೆ ಯುದ್ಧಗಳಲ್ಲಿ, ಆರ್ಯರು ದಾಸ ಅಥವಾ ದಸ್ಯುಗಳನ್ನು ಬಂದಿಗಳನ್ನಾಗಿ ಹಿಡಿಯುವುದರಿಂದ, ದಾಸ ಎಂಬ ಪದವು ಈಗ ರೂಢಿಯಲ್ಲಿರುವ 'ಗುಲಾಮ' ಎಂಬರ್ಥದಲ್ಲಿ ಎರಡು ಮೂರು ಸಲ ಉಗಯೋಗಿಸಲ್ಪಟ್ಟಿರುವಂತೆ ಕಾಣುತ್ತದೆ (೭-೮೬-೭ ; ವಾಲ. ೮-೩). ಸ್ವರ್ಗವನ್ನು ಆರೋಹಿಸಿ, ಇಂದ್ರನಿಂದ ಕೆಳಗೆ ಬೀಳಿಸಲ್ಪಟ್ಟ (೮-೧೪-೧೪ ; ೨-೧೨-೧೨ನ್ನು ಹೋಲಿಸಿ) ಅಥವಾ ಸ್ವರ್ಗದಲ್ಲಿ ದಹಿಸಲ್ಪಟ್ಟು ಕೆಳಗೆ ತಳ್ಳಲ್ಪಟ್ಟ (೧-೩೩-೭) ಅಥವಾ ಜನಿಸಿದ ಕೂಡಲೇ ಇಂದ್ರನಿಂದ ಧ್ವಂಸಮಾಡಲ್ಪಟ್ಟ (೧-೫೧-೬ ; ೮-೬೬-೧ರಿಂದ ೩) ಅಥವಾ ಯಾರ ಮೇಲೆ ಯುದ್ಧಕ್ಕೋಸ್ಕರ ಇಂದ್ರನು ದೇವತೆಗಳಿಗೆ ಸಹಾಯ ಮಾಡುತ್ತಾನೋ ಆ (೧೦-೫೪-೧) ದಸ್ಯುಗಳಾದರೋ, ರಾಕ್ಷಸರಾಗಿಯೇ ಉಳಿದರು. ಮಂಜು ಮತ್ತು ಕತ್ತಲನ್ನು ಹೋಗಲಾಡಿಸುತ್ತಾ, ಇಂದ್ರನು ದಸ್ಯುಗಳನ್ನು ಆಕ್ರಮಿಸುತ್ತಾನೆ (೧೦-೭೩-೫), ದಸ್ಯುಗಳನ್ನು ವಧಮಾಡಿ, ಸೂರ್ಯ ಮತ್ತು ನೀರುಗಳನ್ನು ಸಂಪಾದಿಸುತ್ತಾನೆ (೧-೧೦೦-೧೮) ಮತ್ತು ದೇವತೆಗಳೂ ಮತ್ತು ದಸ್ಯುಗಳೂ ಪರಸ್ಪರ ಶತ್ರುಗಳು (೩-೨೯-೯) ಮೊದಲಾದ ಸಂದರ್ಭಗಳಲ್ಲಿಯೂ ಇದೇ ಅಭಿಪ್ರಾಯ. ನೀರುಗಳ (ಜಲಾಭಿಮಾನಿದೇವತೆಗಳ) ಪತಿಯಾದ ದಾಸನೂ ಒಬ್ಬ ರಾಕ್ಷಸನೇ ಇರಬೇಕು (೧-೩೨-೧೧ : ೫-೩೦-೫ : ೮-೮೫-೧೮) ; ಇವನನ್ನು ಜಯಿಸಿ, ಇಂದ್ರನು ಆ ಜಲದೇವತೆಗಳನ್ನು ಉತ್ತಮದೇವತೆಯ ಪತ್ನಿಯರನ್ನಾಗಿ ಮಾಡುತ್ತಾನೆ (೧೦-೪೩-೮). ವೃತ್ರನ ಪುರಗಳಂತೆ (೧-೧೭೪-೨) ಶಾರದೀ ಎನ್ನಿಸಿಕೊಳ್ಳುವ (೬-೨೦-೧೦ ; ೭-೧೦೩-೯ನ್ನು ಹೋಲಿಸಿ), 'ದಾಸ'ರ ಏಳು ದುರ್ಗಗಳೂ ವಾಯುಮಂಡಲಕ್ಕೆ ಸಂಬಧಿಸಿದವು.

ದಾಸ ಮತ್ತು ದಸ್ಯುಗಳಿಗೆರಡಕ್ಕೂ ಒಟ್ಟಾಗಿ ಪಿಶಾಚಗಳು ಎಂದು ಹೇಳುವುದು ಅನುಕೂಲವಾಗಿರುತ್ತದೆ. ಜಾತಿವಾಚಕಗಳಾಗಿ, ಈ ಪದಗಳು ಇಂದ್ರನೊಡನೆ ಯುದ್ಧಗಳಲ್ಲಿ ಪ್ರಸಕ್ತರಾಗುವ ಒಂದೊಂದು ಪಿಶಾಚಿಗೂ ಉಪಯೋಗಿಸಲ್ಪಟ್ಟಿದೆ. ನಮುಚಿ (೫-೩೦-೭ರಿಂದ ೯ ; ಇತ್ಯಾದಿ), ಶಂಬರ (೫-೩೦-೧೪ ; ಇತ್ಯಾದಿ), ಶುಷ್ಣ (೭-೧೯-೨ ; ಇತ್ಯಾದಿ), ಒಂದೊಂದು ಸಲ ಪಿಪ್ರು (೮-೩೨-೨ ; ೧೦-೧೩೮-೩), ಚುಮುರಿ ಮತ್ತು ಧುನಿ (೨-೧೫-೯ ; ೭-೧೯-೪), ವರ್ಚೀ (೪-೩೦-೧೫ ; ೬-೪೭-೨೧), ನವವಾಸ್ತ್ವ (೧೦-೪೯-೬, ೭), ಒಂದು ಸಲ ತ್ವಾಷ್ಟ್ರ (೨-೧೧-೧೯) ಮತ್ತು ಅಹಿನಾಮಕಸರ್ಪ (೨-೧೧-೨).



CC-0. Jangamwadi Math Collection. Digitized by eGangotri

## ವೃತ್ರ.

ವಾಯುಮಂಡಲದ ರಾಕ್ಷಸರುಗಳಲ್ಲಿ ಬಹಳ ಮುಖ್ಯನಾದವನು ವೃತ್ರನು. ಇವನ ಪ್ರಸ್ತಾಪ ಬರುವಷ್ಟು ಸಲ ಇನ್ನಾವ ರಾಕ್ಷಸನ ಪ್ರಸ್ತಾಪವೂ ಇಲ್ಲ. ಇವನೇ ಇಂದ್ರನ ಮುಖ್ಯ ಶತ್ರು ಮತ್ತು ಇವನ ವಧೆಗೋಸ್ಕರಲೇ ಇಂದ್ರನು ಜನಿಸಿದುದು ಅಥವಾ ಬೆಳೆದುದು (೮-೭೮-೫ ; ೧೦-೫೫). ವೃತ್ರಹಾ ಎನ್ನುವುದು ಇಂದ್ರನ ವೈಯಕ್ತಿಕ ವಿಶೇಷಣ. ಈ ಪದದ ಅರ್ಥವನ್ನು ಎರಡು ಸಂದರ್ಭಗಳಲ್ಲಿ ಬಿಡಿಸಿ ಹೇಳಿದಾರೆ. ವೃತ್ರಹನು (ವೃತ್ರಾಸುರನನ್ನು ಕೊಲ್ಲುವವನು) ವೃತ್ರಾಸುರನನ್ನು ವಧಿಸಲಿ (೮-೭೮-೩) ಮತ್ತು ಎಲೈ ವೃತ್ರಹನೇ (ವೃತ್ರಹನ್) ವೃತ್ರಾಸುರನನ್ನು ವಧಿಸು (೮-೧೭-೯). ಇಂದ್ರನ ಈ ಕಾರ್ಯವು ವೃತ್ರಹತ್ಯಾ (ವೃತ್ರವಧೆ) ಮತ್ತು ಒಂದೊಂದು ಸಲ ವೃತ್ರತೂರ್ಯಾ (ವೃತ್ರಾಸುರನನ್ನು ಜಯಿಸುವುದು) ಎಂಬ ಪದಗಳಿಂದ ವಾಚ್ಯವಾಗಿದೆ.

ವೃತ್ರನಿಗೆ ಸರ್ಪಾಕೃತಿಯುಂಟೆಂಬುದು ಮೊದಲೇ ತಿಳಿಸಿದೆ. ಆದುದರಿಂದ ಅವನಿಗೆ ಕೈಕಾಲುಗಳಿಲ್ಲ ೧-೩೨-೭ ; ೩-೩೦-೮). ಇಂದ್ರನಿಂದ ಇರಿಯಲ್ಪಡುವ ಅವನ ಶಿರಸ್ಸು (೧-೫೨-೧೦ ; ೮-೬-೬ ; ೮-೬೫-೨), ವಜ್ರಾಯುಧದಿಂದ ಆಹತವಾಗುವ ಕವನ ವಸಡುಗಳು (೧-೫೨-೬) ಅನೇಕ ಸಲ ಹೇಳಲ್ಪಡುತ್ತದೆ. ಅವನು ಬುಸುಗುಟ್ಟುತ್ತಾನೆ ಅಥವಾ ಘೂಂಕರಿಸುತ್ತಾನೆ (೮-೮೫-೭, ೫-೨೯-೪, ೧-೫೨-೧೦, ೧-೬೧-೧೦ ಮತ್ತು ೬-೧೭-೧೦ಗಳನ್ನು ಹೋಲಿಸಿ). ಗುಡುಗು (೧-೮೦-೧೨), ಸಿಡಿಲು, ಹಿಮ ಮೊದಲಾದವು (೧-೩೨-೧೩) ಅವನ ಅಧೀನದಲ್ಲಿವೆ.

ವೃತ್ರನ ತಾಯಿಗೆ ದಾನು ಎಂದು ಹೆಸರು ಮತ್ತು ಅವಳನ್ನು ಗೋವಿಗೆ ಹೋಲಿಸಿದೆ (೧-೩೨-೯). ಇದೇ ಪದವು (ದಾನು) ನಪುಂಸಕ ಲಿಂಗದಲ್ಲಿ ಪ್ರವಾಹವನ್ನೂ, ಸ್ತ್ರೀಲಿಂಗದಲ್ಲಿ ಸ್ವರ್ಗೀಯೋದಕವನ್ನೂ ಸೂಚಿಸುತ್ತದೆ. ಈ ಎರಡು ಪದಗಳೂ ಒಂದೇ ಇರಬಹುದು. ಇದೇ ಪದವನ್ನು ಪುಲ್ಲಿಂಗದಲ್ಲಿ ವೃತ್ರಾಸುರನಿಗೆ ಉಪಯೋಗಿಸಿದೆ. ಪ್ರಾಯಶಃ ದಾನುವಿನ ಮಗನಾದುದರಿಂದ ಆ ಹೆಸರಿರಬಹುದು (೨-೧೨-೧೧, ೪-೩೦-೭). ಅದೇ ರೀತಿ ಔರ್ಣವಾಭ (೨-೧೧-೧೮) ಮತ್ತು ಇಂದ್ರನಿಂದ ಹತರಾದ ಏಳು ಜನ ರಾಕ್ಷಸ (೧೦-೧೨೦-೬)ರಿಗೂ ಅದೇ ಹೆಸರಿದೆ. 'ದಾನು' ಪದದಿಂದ (ದಾನುವಿನ ಮಗನೆಂದರ್ಥಕೊಡುವ) ನಿಷ್ಪನ್ನವಾದ ದಾನವ ಎಂಬ ಪದವು, ಇಂದ್ರನೊಡನೆ ಯುದ್ಧಮಾಡಿದ ರಾಕ್ಷಸನನ್ನು (ಬಹುಶಃ ವೃತ್ರಾಸುರನೇ) ಸೂಚಿಸುತ್ತದೆ. ಕಪಟಯಾದ ದಾನವನ ಮಾಯೆಗಳನ್ನೆಲ್ಲಾ ಇಂದ್ರನು ಪರಿಹರಿಸಿದನು (೨-೧೧-೧೦) ; ಘೂಂಕರಿಸುತ್ತಿದ್ದ ದಾನವ ನನ್ನು ಹೊಡೆದು ಕೆಡವಿದನು (೫-೨೯-೪), ಅನಂತರ ನೀರುಗಳನ್ನು ಬಿಡುಗಡೆ ಮಾಡಿದನು (೫-೩೨-೧).

ವೃತ್ರಾಸುರನಿಗೆ ಗುಪ್ತವಾದ ವಾಸಸ್ಥಾನವೊಂದಿದೆ, ಇಂದ್ರನಿಂದ ವಿಮೋಚಿತವಾಗಿ, ನೀರುಗಳು ಈ ವಾಸಗೃಹದಿಂದ ಹೊರಡುತ್ತವೆ (೧-೩೨-೧೦). ವೃತ್ರಾಸುರನು ನೀರಿನ ಆಹಿಯನ್ನು ಮೀರಿ ಹರಿದು, ಅಥವಾ ಅಂತರಿಕ್ಷದ ಅಧೋಭಾಗದಲ್ಲಿ, ನೀರಿನಿಂದಾ ಮೇಲೆ ಮಲಗಿರುತ್ತಾನೆ (೧-೧೨೧-೧೧, ೨-೧೧-೧೯), ಇಂದ್ರನು ನೀರನ್ನು ಪ್ರವಹಿಸುವಂತೆ ಮಾಡಿದಾಗ, ವೃತ್ರಾಸುರನು ವೃತನಾಗಿ ಬಿದ್ದಿರುತ್ತಾನೆ (೧-೫೨-೬). ಅಥವಾ ಬಹಳ ಎತ್ತರವಾದ ಪ್ರದೇಶಗಳಿಂದ, ಇಂದ್ರನು ಎತ್ತರವಾದ ಪ್ರದೇಶದಲ್ಲಿ ಮಲಗಿದ್ದನು (೧-೮೦-೫) ವೃತ್ರಾಸುರನನ್ನು ವಧಿಸಿದಾಗ, ಇಂದ್ರನು ಅವನ ತೊಂಭ ಅವನನ್ನು ಕೆಳಗೆ ತಳ್ಳುತ್ತಾನೆ (೮-೩-೧೯). ತೊಂಭತ್ತು (೭-೧೯-೫, ೮-೮೨-೨) ಕೋಟೆಗಳನ್ನು ಭೇದಿಸುತ್ತಾನೆ (೧೦-೮೯-೭).

ವೃ (ಎಂದರೆ ಆವರಿಸು, ಸುತ್ತುಗಟ್ಟು) ಎಂಬ ಧಾತುವಿನಿಂದಲೇ ವೃತ್ರ ಎಂಬ ಪದವು ನಿಷ್ಪನ್ನವಾಗಿ ಅಪೋವರಿವಾಂಸಂ (೨-೧೪-೨, ಇತ್ಯಾದಿ ನೀರನ್ನು ಆವರಿಸಿಕೊಂಡಿರುವ) ಅಥವಾ ರುವುದರಲ್ಲಿ ಸಂದೇಹವಿಲ್ಲ.



CC-0. Jangamwadi Math Collection. Digitized by eGangotri

ವೃಕ್ಷೀ (೧-೫೨-೬) ಅಥವಾ, ನದೀವೃತ್ (೧-೫೨-೨, ೮-೧೨-೨೬, ೬-೩೦-೪ ಮತ್ತು ೭-೨೧-೩ಗಳನ್ನು ಹೋಲಿಸಿ), ಮೊದಲಾದವುಗಳು ಈ ಮೇಲೆ ಹೇಳಿದ ಪದನಿಷ್ಪತ್ತಿಯನ್ನೇ ಸಮರ್ಥಿಸುತ್ತವೆ. ವೃತ್ರಂ ಅವೃಣೋತ್ (೩-೪೩-೩). ಅಪಾವೃಣೋತ್ (೧-೩೨-೧೧, ೧-೫೧-೪) ಮೊದಲಾದ ಪ್ರಯೋಗಗಳಲ್ಲಿ ಈ ಪದದ ಶ್ಲೇಷವಿದಂತೆ ತೋರುತ್ತದೆ. ವೃತ್ರನು ನದಿಗಳನ್ನು ಸುತ್ತುವರಿದಿದ್ದಾನೆ (ಪರಿಧಿಃ ೩-೩೩-೬).

ವೃತ್ರಹಾ ಎಂಬ ಪದದಿಂದ ವೃತ್ರಾಸುರನ ವಧೆ ಮಾತ್ರವಲ್ಲದೆ, ವೃತ್ರರ ವಧೆಯೂ ಅಭಿಪ್ರೇತವು. ವೃತ್ರಾ ಎಂಬುದಾಗಿ ಬಹುವಚನಾಂತವಾಗಿ ಮತ್ತು ನಪುಂಸಕಲಿಂಗದಲ್ಲಿ (ಭೂರೀಣಿ ವೃತ್ರಾ. ೭-೧೮-೪), ಬೇರೆ ಬೇರೆ ಪಿಶಾಚಗಳನ್ನು ಸೂಚಿಸುವುದಕ್ಕೆ ಉಪಯೋಗಿಸಿದೆ (೭-೧೯-೪ ; ೧೦-೪೯-೬). ಈ ಪಿಶಾಚಗಳೊಡನೆ ಇಂದ್ರನ ಯುದ್ಧದ ಪರಿಣಾಮವೂ, ಜಲವಿಮೋಚನೆ (೭-೩೪-೩) ಅಥವಾ ನದಿಗಳ ಬಿಡುಗಡೆ (೮-೮೫-೧೮) ; ಇವುಗಳೂ ಪಿಶಾಚಗಳಿಂದ ಆವರಿಸಲ್ಪಟ್ಟಿದ್ದುವು (ವೃತಾ೯ ೪-೪೨-೭). ಜನಿಸಿದ ಕೂಡಲೇ, ಇವುಗಳನ್ನು ಹೊಡೆಯುವುದಕ್ಕೋಸ್ಕರ (೬-೨೯-೬) ಮತ್ತು ಧ್ವಂಸ ಮಾಡುವುದಕ್ಕೋಸ್ಕರ (೩-೪೯-೧), ಇಂದ್ರನು ದೇವತೆಗಳಿಂದ ಸೃಜಿಸಲ್ಪಟ್ಟಿದಾನೆ. ದಧ್ಯಂಚನ ಅಸ್ಥಿಯಿಂದ ವೃತ್ರಾಸುರನ ತೊಂಭತ್ತೊಂಭತ್ತು ದುರ್ಗಗಳನ್ನು ನಾಶಮಾಡಿದಂತೆ (೭-೧೯-೫), ತೊಂಭತ್ತೊಂಭತ್ತು ವೃತ್ರರನ್ನೂ ಧ್ವಂಸಮಾಡಿದಾನೆ (೧-೮೪-೧೩).

ಈ ವೃತ್ರ ಎಂಬ ಬಹುವಚನಾಂತ ಪದದಿಂದ ಭೂಮಿಯಲ್ಲಿರುವ ಶತ್ರುಗಳೂ ವಾಚ್ಯರಾಗುತ್ತಾರೆ. ಆರ್ಯರು ಮತ್ತು ದಾಸರು ಎರಡು ವಿಧವಾದ ವೃತ್ರರು (೬-೨೨-೧೦ ; ೬-೩೩-೩). ಅನೇಕ ವಾಕ್ಯಗಳಲ್ಲಿ, ದೇವತೆಗಳ ಶತ್ರುಗಳಂತೆ, ಮನುಷ್ಯರ ಶತ್ರುಗಳೂ ಅಭಿಪ್ರೇತರಾಗುತ್ತಾರೆ. ಇಂತಹ ಸಂದರ್ಭಗಳಲ್ಲಿ, ವೃತ್ರ ಎಂದರೆ ಶತ್ರು ಅಥವಾ ಅಮಿತ್ರನು ಮಾತ್ರವಲ್ಲ, ವೃತ್ರಾಸುರನ ಗುಣಗಳ ಕಡೆಯೂ ದೃಷ್ಟಿಯಿದ್ದೇ ಇದೆ. ನಪುಂಸಕಲಿಂಗದ ಈ ಪದಕ್ಕೆ ಮೊದಲು ಸಾಧಾರಣವಾಗಿ ' ಅಡ್ಡಿ ' ' ಅಡಚಣೆ ' ಎಂಬರ್ಥವಿದ್ದು, ಅನಂತರ ಪಿಶಾಚಿಗಳೆಂಬ ಅರ್ಥ ಬಂದಿರಬೇಕು.

ಬ್ರಾಹ್ಮಣಗಳಲ್ಲಿ ವೃತ್ರನೆಂದರೆ ಚಂದ್ರನೆಂದೂ, ಅಮಾವಾಸ್ಯೆಯ ದಿನ, ಸೂರ್ಯರೂಪಿಯಾದ ಇಂದ್ರನು ಅವನನ್ನು ನುಂಗಿಬಿಡುತ್ತಾನೆ ಎಂದೂ ಇದೆ.

## ವಲ.

ಸುಮಾರು ಇಪ್ಪತ್ತು ನಾಲ್ಕು ಸಲ ಬಂದಿದೆ. ಇಂದ್ರ ಅಥವಾ ಅವನ ಜೊತೆಗಾರರು ವಿಶೇಷವಾಗಿ ಅಂಗಿರಸರು. ಇವರಿಂದ ಗೋವಿಮೋಚನೆಯ ಸಂಬಂಧವಾಗಿಯೇ ಇವರ ಪ್ರಸ್ತಾಪವಿರುವುದು. ಪಣಿಯು ಗೋವುಗಳನ್ನು ಕಸಿದುಕೊಂಡಾಗ ಇಂದ್ರನು, ಆ ಗೋವುಗಳ ರಕ್ಷಕನಾಗಿದ್ದ ವಲನನ್ನು ಧ್ವಂಸಮಾಡಿದನು (೧೦-೬೭-೬ ; ೬-೩೯-೨ನ್ನು ಹೋಲಿಸಿ). ಬೃಹಸ್ಪತಿಯು ಅವುಗಳನ್ನು ಹಿಡಿದುಕೊಂಡು ಹೋದಾಗ, ವಲನು ಅವುಗಳಿಗಾಗಿ ದುಃಖಿಸುತ್ತಾನೆ (೧೦-೬೮-೧೦ ; ೧೦-೬೭-೬ನ್ನು ಹೋಲಿಸಿ). ಅವನ ಕೋಟೆಗಳನ್ನು ಇಂದ್ರನು ಬಲಾತ್ಕಾರವಶಗಿ ತೆಗೆಯಿಸಿದನು (೬-೧೮-೧೫) ; ಬೇಲಿಗಳನ್ನು ಇಂದ್ರನು ಕತ್ತರಿಸಿದನು (೧-೫೨-೫) ; ಮತ್ತು ಅಖಂಡವಾದ ಉನ್ನತ ಪ್ರದೇಶವನ್ನು (ಸಾನು) ಇಂದ್ರನು ಮುರಿದನು (೬-೩೯-೨). ತೈತ್ತಿರೀಯ ಸಂಹಿತೆಯಲ್ಲಿ, ಇಂದ್ರನು ವಲನ ಬಿಲವನ್ನು ತೆರೆದು, ಅದರಲ್ಲಿದ್ದ ಅತ್ಯುತ್ತಮ ಪ್ರಾಣಿಯನ್ನು ಹೊರಗೆ ಹಾಕಿದನು; ಉಳಿದ ಪ್ರಾಣಿಗಳು ಅದನ್ನು ಅನುಸರಿಸಿದವು (ತೈ. ಸಂ. ೨-೧-೫-೧). ಯಾವ ವ್ಯಕ್ತಿಗೂ ಅನ್ವಯಿಸದಂತೆ, ಹೊದಿಕೆ, ಆವರಣ ಅಥವಾ ಗುಹೆ ಎಂಬರ್ಥದಲ್ಲಿ, ಅನೇಕ ಸಲ ಉಪಯೋಗಿಸಿರುವಂತೆ ತೋರುತ್ತದೆ. ಎರಡು



CC-0. Jangamwadi Math Collection. Digitized by eGangotri

ಸಂದರ್ಭಗಳಲ್ಲಿ (೧-೬೨-೪, ೪-೫೦-೫) ನೀರಿಗೆ ಆಶ್ರಯವಾದ (೮-೩೨-೨೫) ಫಲಿಗದ ಜೊತೆಗೆ ಉಪಯೋಗಿಸಿದೆ; ನಿರುಕ್ತದಲ್ಲಿ (ನಿ. ೧-೧೦) ವಲ ಎಂಬುದೂ ಮೇಘದ ನಾಮಗಳಲ್ಲಿ ಒಂದು. ಇಂದ್ರನು ಗೋವುಗಳನ್ನೆಲ್ಲಾ ಹೊರಕ್ಕೆ ಓಡಿಸಿ, ವಲದ ದ್ವಾರವನ್ನು ತೆರೆದನು (೨-೧೪-೩); ಅಥವಾ ಗೋವುಗಳನ್ನೊಡಗೊಂಡಿದ್ದ (೧-೧೧-೫) ವಲದ ಬಿಲವನ್ನು ತೆರೆದನು. ಪಂಚವಿಂಶ ಬ್ರಾಹ್ಮಣದಲ್ಲಿ, ಅಸುರರ ಗುಹೆ (ವಲ)ಯು, ಶಿಲೆಯಿಂದ ಮುಚ್ಚಲ್ಪಟ್ಟಿತ್ತು ಎಂದಿದೆ (ಪಂ. ಬ್ರಾ. ೧೯-೭). ಮತ್ತು ಕೆಲವು ವಾಕ್ಯಗಳಲ್ಲಿ ಈ ಪದವು ವಲನೆಂಬ ವ್ಯಕ್ತಿಯನ್ನು ಅಥವಾ ಗುಹಾದಿಗಳನ್ನು ನಿರ್ದೇಶಿಸಬಹುದು (೧-೫೨-೫, ೨-೧೨-೩, ೩-೩೪-೧೦). 'ವೃತ್ರಖಾದ' ಎಂಬುದರೊಡನೆ ಇಂದ್ರನಿಗೆ ವಿಶೇಷಣವಾಗಿರುವ 'ವಲಂರುಜ' ಎಂಬುದರಲ್ಲಿ ವಲನೆಂಬ ರಾಕ್ಷಸನೇ ಉದ್ದಿಷ್ಟನಿರಬಹುದು (೩-೪೫-೨, ೨-೧೨-೩ರನ್ನು ಹೋಲಿಸಿ). ಗುಹೆ ಎಂಬರ್ಥದಿಂದ ವ್ಯಕ್ತಿಸೂಚಕವಾಗಿ ಬದಲಾವಣೆ, ೩-೩೦-೧೦ ರಲ್ಲಿ ಸ್ಪಷ್ಟವಾಗಿದೆ. ವಲನೇ ಒಂದು ಗೋವ್ರಜ, ಇಂದ್ರನು ಹೊಡೆಯುತ್ತಾನೆಂಬ ಹೆದರಿಕೆಗೆ, ಈ ವಲನು ವ್ರಜದ ಬಾಗಿಲನ್ನು ತೆರೆಯುತ್ತಾನೆ. ವಲನ ವಧೆಯನ್ನು ಸೂಚಿಸುವುದಕ್ಕೆ, ಹನ್ ಧಾತುವನ್ನು ಉಪಯೋಗಿಸದೇ, ಭಿದ್, ದೃ ಅಥವಾ ರುಜ್ ಧಾತುಗಳನ್ನೇ ಉಪಯೋಗಿಸುವುದರಿಂದ, ವ್ಯಕ್ತೀಕರಣವು ಸಂಪೂರ್ಣವಾಗಿಲ್ಲವೆನ್ನಬಹುದು. ವಲಭಿತ್ ಎಂಬುದು ಇಂದ್ರನಿಗೆ ವಿಶೇಷಣ. ಪುರಾಣಗಳಲ್ಲಿ ಇದು ವಿಶೇಷವಾಗಿ ಕಂಡುಬರುತ್ತದೆ. ಇಲ್ಲಿ ವಲನು ವೃತ್ರನ ಸಹೋದರ ಮತ್ತು ಇಬ್ಬರನ್ನೂ ಇಂದ್ರನು ವಧಿಸುತ್ತಾನೆ (ವಲ-ವೃತ್ರ-ಹಾ).

**ಅರ್ಬುದ.**—ಏಳು ಕಡೆ ಬಂದಿದೆ, ಯಾವಾಗಲೂ ಇಂದ್ರನ ಶತ್ರುವಾಗಿಯೇ. ಅಪನು ಕಪಟಿ, ಅವನ ಹಸುಗಳನ್ನು ಇಂದ್ರನು ಹೊರಕ್ಕೆ ಅಟ್ಟಿದನು (೮-೩-೧೯). ಇಂದ್ರನು ಅವನನ್ನು ಕೆಳಕ್ಕೆ ಎಸೆದನು (೨-೧೧-೨೦, ೨-೧೪-೪, ೮-೩೨-೩ನ್ನು ಹೋಲಿಸಿ), ತನ್ನ ಕಾಲಿನಿಂದ ತುಳಿದನು (೧-೫೧-೬), ಅಥವಾ ಅವನ ತಲೆಯನ್ನು ಕತ್ತರಿಸಿದನು (೧೦-೬೭-೧೨). ಎರಡು ಮೂರು ಸಲ ವೃತ್ರ (ಅಹಿ) ನೊಡನೆ ಉಕ್ತನಾಗಿದಾನೆ, ಸ್ವಭಾವದಲ್ಲಿ ಅವನ ಜಾತಿಗೇ ಸೇರಿದವನು.

**ವಿಶ್ವರೂಪ.**—ತ್ವಷ್ಟೃಪುತ್ರ, ಮೂರು ತಲೆಗಳು, ಇಂದ್ರ ಮತ್ತು ತ್ರಿತರಿಬ್ಬರೂ ಅವನನ್ನು ವಧಿಸಿ, ಅವನ ಗೋವುಗಳನ್ನು ವಶಪಡಿಸಿಕೊಂಡಿದ್ದಾರೆ (೧೦-೮-೮, ೯). ಬೇರೆ ಎರಡು ಮೂರು ಸಂದರ್ಭಗಳಲ್ಲಿ ತ್ವಾಷ್ಟ್ರ ಎಂಬ ಪದದಿಂದಲೇ ನಿರ್ದೇಶವಿದೆ. ತ್ವಾಷ್ಟ್ರನು ಗೋ, ಅಶ್ವಾದಿಗಳಲ್ಲಿ ಸಮೃದ್ಧನು (೧೦-೭೬-೩), ಇಂದ್ರನು ಅವನನ್ನು ಹಿಡಿದು ತಿತ್ರನಿಗೆ ಒಪ್ಪಿಸಿದನು (೨-೧೧-೧೯). ತೈತ್ತಿರೀಯ ಸಂಹಿತೆಯಲ್ಲಿ (ತೈ. ಸಂ. ೨-೫-೧-೧), ವಿಶ್ವರೂಪನು ಅಸುರ ಸಂಬಂಧಿಯಾದರೂ, ದೇವತೆಗಳ ಪುರೋಹಿತ. ಮಹಾಭಾರತದಲ್ಲಿ, ಮೂರು ತಲೆಯ ತ್ವಾಷ್ಟ್ರನೂ ವೃತ್ರಾಸುರನೂ ಒಬ್ಬನೇ ಎಂಬ ಭಾವನೆ.

**ಸ್ವರ್ಭಾನು.**—ಇವನೂ ಒಬ್ಬ ಅಸುರಸ್ವಭಾವದವನು. ಒಂದೇ ಸೂಕ್ತದಲ್ಲಿ (೫-೪೦) ನಾಲ್ಕು ಸಲ ಪ್ರಸಕ್ತನಾಗಿದಾನೆ. ಇವನು ಸೂರ್ಯನನ್ನು ತಮಸ್ಸಿನಿಂದ ಮರೆಮಾಡುತ್ತಾನೆ. ಇವನ ಮಾಯೆಗಳನ್ನೆದುರಿಸಿ, ಇಂದ್ರನು ಯುದ್ಧಮಾಡಿದನು ಮತ್ತು ಅತ್ರಿಯು ಸೂರ್ಯನ ನೇತ್ರವನ್ನು ಪುನಃ ಅಂತರಿಕ್ಷದಲ್ಲಿ ಸ್ಥಾಪಿಸಿದನು. ಬ್ರಾಹ್ಮಣಗಳಲ್ಲಿಯೂ ಇವನ ಪ್ರಸ್ತಾಪವು ಅನೇಕ ಕಡೆ ಇದೆ. ಪುರಾಣಗಳಲ್ಲಿ ಸ್ವರ್ಭಾನುವಿನ ಸ್ಥಾನದಲ್ಲಿ ರಾಹುವಿದಾನೆ. ಈ ಪದಕ್ಕೆ, ಸೂರ್ಯನ ಬೆಳಕನ್ನು ತಡೆಯುವವನು ಎಂದರ್ಥ.

**ಉರಣ.**—ತೊಂಭತ್ತೊಂಭತ್ತು ಬಾಹುಗಳುಳ್ಳ ಇವನು ಇಂದ್ರನಿಂದ ಹತನಾದನು (೨-೧೪-೪).

## ದಾಸಾಃ—ದಸ್ಯುಗಳು.

**ಶುಷ್ಣ.**—ಇವನ ಹೆಸರು ಸುಮಾರು ೪೦ ಸಲ ಬರುತ್ತದೆ. ಕುತ್ಸನ ಮುಖ್ಯ ಶತ್ರು. ಈ ಕುತ್ಸನಿಗೋಸ್ಕರ ಅಥವಾ ಕುತ್ಸನ ಜೊತೆಯಲ್ಲಿ, ಇಂದ್ರನು ಶುಷ್ಣನನ್ನು ನಿರ್ಮೂಲ ಮಾಡುತ್ತಾನೆ (೪-೧೬-೧೨,


CC-0. Jangamwadi Math Collection. Digitized by eGangotri

೫-೨೯-೯, ಇತ್ಯಾದಿ). ಅವನಿಗೆ ಕೊಂಬುಗಳಿವೆ (೧-೩೩-೧೨). ಮೊಟ್ಟೆಗಳಿವೆ (೬-೪೦-೧೦, ೧೧) ಅಂದರೆ ಮೊಟ್ಟೆಗಳಿಂದಾದ ಮರಿಗಳು (೧೦-೧೨-೧೧ನ್ನು ಹೋಲಿಸಿ), ಇದರಿಂದ ಶುಷ್ಣನೂ ಒಂದು ಸರ್ಪವೆನ್ನಬಹುದು. ಬುಸುಗುಟ್ಟುತ್ತಾನೆ (ಶ್ವಸನಃ ೧-೫೪-೫). ಆರು ಸಲ ಇವನಿಗೆ ಅಶುಷ (ನುಂಗುವ) ಎಂಬ ವಿಶೇಷಣವು ಅಗ್ನಿಗೆ ಮಾತ್ರ ಉಪಯೋಗಿಸಲ್ಪಟ್ಟಿದೆ. ಅವನಿಗೆ ಬಲವಾದ ಕೋಟೆಗಳು (೧-೫೧-೧೧) ಅಥವಾ ಕೋಟೆ (೪-೩೦-೧೩) ಇದೆ, ಇವು ಚಲಿಸುವ ಕೋಟೆಗಳು (೮-೧-೨೮). ಇದ್ರನು ಶುಷ್ಣನ ಕೋಟೆಗಳನ್ನು ನಾಶಮಾಡಿ ನೀರುಗಳನ್ನು ಬಿಡುಗಡೆಮಾಡುತ್ತಾನೆ (೧-೫೧-೧೧), ಶುಷ್ಣನನ್ನು ಬಡಿದು ಜಲಧಿಯನ್ನು ಸಂಪಾದಿಸುತ್ತಾನೆ (ವಾಲ. ೩-೮) ಅಥವಾ ಶುಷ್ಣನ ವಂಶವನ್ನು ನಿರ್ಮೂಲಮಾಡಿ, ಸ್ವರ್ಗೀಯೋದಕವನ್ನು (ಸ್ವರ್ವತೀಃ) ಗಳಿಸುತ್ತಾನೆ (೮-೪೦-೧೦). ನಾಲ್ಕು ಸಲ ಶುಷ್ಣನಿಗೆ 'ಕುಯವ' (ಕೆಟ್ಟ ಧಾನ್ಯವನ್ನುಂಟುಮಾಡುವವನು) ಎಂಬ ವಿಶೇಷಣವಿದೆ. ಕುಯವ ಎಂಬುದೇ ಎರಡು ಸಲ ಪ್ರಾಯಶಃ ಶುಷ್ಣನಿಗೆ ಬದಲಾಗಿ ಉಪಯೋಗಿಸಿರುವಂತೆ ಇದೆ (೧-೧೦೩-೮, ೧-೧೦೪-೩). ಇಂದ್ರ ಶುಷ್ಣರ ಯುದ್ಧದ ಪರಿಣಾಮವು ಜಲವಿಮೋಚನೆ ಮಾತ್ರವಲ್ಲ, ಗೋವುಗಳ ಅಥವಾ ಸೂರ್ಯನ ಪ್ರಾಪ್ತಿಯೂ ಆಗಬಹುದು (೮-೮೫-೧೭). ಇಂದ್ರನೊಡನೆ ಯುದ್ಧಮಾಡುವಾಗ, ಶುಷ್ಣನು ಅಂಧಕಾರದಲ್ಲಿ ಓಡಾಡುತ್ತಾನೆ. ಹಿಮದ ಮಗ ಮತ್ತು ದಾನವನೆನ್ನಿಸಿಕೊಳ್ಳುತ್ತಾನೆ (೫-೩೨-೪). ಶುಷ್ಣನು ಅಮೃತವನ್ನು ತನ್ನಲ್ಲಿ ಇಟ್ಟುಕೊಂಡಿರುವ ದಾನವನು (ಕಾಠಕ).

ಮೇಲೆ ಹೇಳಿದ ವಾಕ್ಯಗಳಿಂದ ಶುಷ್ಣನು ಅನಾವೃಷ್ಟಿಕಾರಕನೆನ್ನಬಹುದು. 'ಶುಷ್ಣ' ಪದದ ಮೂಲವಾದ ಶುಷ್ ಧಾತುವಿಗೆ ಬುಸುಗುಟ್ಟು ಅಥವ ಒಣಗಿಸು ಎಂದರ್ಥ. ಇದೂ ಅನಾವೃಷ್ಟಿಕಾರಕನೆಂಬುದನ್ನು ಸಮರ್ಥಿಸುತ್ತದೆ.

ಶಂಬರಃ.—ಈ ಹೆಸರು ಸುಮಾರು ಇಪ್ಪತ್ತು ಸಲ ಬರುತ್ತದೆ. ಇತರ ಪಿಶಾಚಿಗಳೊಡನೆಯೇ ಶಂಬರನು ಪ್ರಸಕ್ತನಾಗಿರುವುದು. ಅದರಲ್ಲಿಯೂ ಹೆಚ್ಚಾಗಿ ಶುಷ್ಣ, ಪಿಪ್ರು (೧-೧೦೧-೨, ೧-೧೦೩-೮, ೨-೧೯-೬, ೬-೧೮-೮) ಮತ್ತು ವರ್ಚಿಗಳೊಡನೆ ; ಅಹಿ ಮತ್ತು ಶಂಬರರ ಮೇಲೆ ಯುದ್ಧಮಾಡುವಾಗ, ಮರುತರು ಇಂದ್ರನಿಗೆ ಸಹಾಯ ಮಾಡಿದರು (೩-೪೭-೪), ಶಂಬರನನ್ನು ಭೇದಿಸಿದಾಗ, ಇಂದ್ರನು ಆಕಾಶವನ್ನೇ ನಡುಗಿಸಿದನು (೧-೫೪-೪). ಪರ್ವತದ ಮೇಲೆ ವಾಸಿಸುತ್ತಿದ್ದ ಶಂಬರನನ್ನು ಹುಡುಕಿ (೨-೧೨-೧೧), ಪರ್ವತದಿಂದ ಕೆಳಕ್ಕುರುಳಿಸಿದರು (೧-೧೩೦-೭, ೬-೨೬-೫). ಕುಲಿತರನ ಪುತ್ರನಾದ ಶಂಬರನೆಂಬ ದಾಸನನ್ನು ಇಂದ್ರನು ದೊಡ್ಡ ಪರ್ವತದಿಂದ ಉರುಳಿಸಿದನು (೪-೩೦-೧೪). ತಾನೊಬ್ಬ ಸಣ್ಣ ದೇವತೆಯೆಂದು ತಿಳಿದುಕೊಂಡಿದ್ದು, ಶಂಬರನನ್ನು ಹೊಡೆದು, ಉನ್ನತ ಪ್ರದೇಶದಿಂದ ಬೀಳಿಸಿದನು (೭-೧೮-೨೦). ತೊಂಭತ್ತು (೧-೧೩೦-೭), ಸಾಧಾರಣವಾಗಿ ತೊಂಭತ್ತೊಂಭತ್ತು (೨-೧೯-೬, ಇತ್ಯಾದಿ) ಅಥವಾ ನೂರು (೨-೧೪-೬, ಇತ್ಯಾದಿ) ದುರ್ಗಗಳು ಅವನ ಅಧೀನದಲ್ಲಿವೆ. ಒಂದು ಸಲ, ನಪುಂಸಕಾಂತವಾದ ಈ ಪದಕ್ಕೆ ಶಂಬರನ ಕೋಟೆಗಳು ಎಂಬರ್ಥವಿದೆ. ಇವುಗಳನ್ನು ಬೃಹಸ್ಪತಿಯು ಭೇದಿಸಿ, ನಿಧಿಗಳಿಂದ ಯುಕ್ತವಾಗಿದ್ದ ಪರ್ವತ ಪ್ರದೇಶವನ್ನು ಪ್ರವೇಶಿಸಿದನು (೨-೨೪-೨). ಅತಿಥಿಗ್ವ (೧-೫೧-೬), ಸಾಧಾರಣವಾಗಿ ದಿವೋದಾಸ (೨-೧೯-೬, ಇತ್ಯಾದಿ). ಒಂದೊಂದು ಸಲ ಇಬ್ಬರೂ (೧-೧೩೦-೭, ೪-೨೬-೩), ಇವರುಗಳಿಗೋಸ್ಕರ, ಇಂದ್ರನು ಶಂಬರನನ್ನು ಧ್ವಂಸಮಾಡುತ್ತಾನೆ ಶಂಬರ ಮತ್ತು ದಿವೋದಾಸ ಎಂಬ ಎರಡೂ ಒಬ್ಬನ ಹೆಸರೆನಬಹುದು.

ಪಿಪ್ರು —ಇಂದ್ರನ ಆಶ್ರಿತನಾದ (ವಾಲ. ೧-೧೦) ಋಜಿಶ್ವನ ಶತ್ರು ; ಈ ಋಜಿಶ್ವನು ಇಂದ್ರನಿಗೆ ಸೋಮರಸವನ್ನರ್ಪಿಸಿ, ಪಿಪ್ರುವಿನ ಮೇಲೆ ಯುದ್ಧದಲ್ಲಿ, ಸಹಾಯ ಪಡೆಯುತ್ತಾನೆ (೫-೨೯-೧೧ ; ೧೦-೯೯-೧೧).



CC-0. Jangamwadi Math Collection. Digitized by eGangotri

ಇದ್ರನು ಋಜಿಶ್ವನಿಂದ ಯುಕ್ತನಾಗಿ (೧-೧೦೧-೧, ೨ ; ೧೦-೧೩೮-೩) ಅಥವಾ ಅವನಿಗೋಸ್ಕರ (೪-೧೬-೧೩ ; ೬-೨೦-೭) ಪಿಪ್ರುವನ್ನು ಸೊಲಿಸಿದನು. ಅಹಿಯ ಮಾಯೆಗಳಿಂದ ಯುಕ್ತನಾದ ಪಿಪ್ರುವಿನ ಅಧೀನದಲ್ಲಿ ಅನೇಕ ಕೋಟೆಗಳಿವೆ; ಇಂದ್ರನು ಇವುಗಳನ್ನು ಭೇದಿಸುತ್ತಾನೆ (೧-೫೧-೫, ೬-೨೦-೭). ಪಿಪ್ರುವೆಂಬ ದಾಸ ಮತ್ತು ಕೆಲವರನ್ನು ಇಂದ್ರನು ವಧಿಸಿ, ನೀರುಗಳನ್ನು ಹೊರಡಿಸಿಡನು (೮-೩೨-೨). ಸೂರ್ಯನು ಆಕಾಶ ಮಧ್ಯದಲ್ಲಿ, ತನ್ನ ರಥವನ್ನು ಬಿಚ್ಚಿದಾಗ, ಪಿಪ್ರುವಿಗೆ ಅನುರೂಪನಾದ ಯೋಧನನ್ನು ಆರ್ಯನು ಕಂಡನು ; ಋಜಿಶ್ವಯುಕ್ತನಾದ ಇಂದ್ರನು, ಮಾಯಿಯಾದ ಪಿಪ್ರು ಎಂಬ ಅಸುರನ ಬಲವಾದ ಕೋಟೆಗಳನ್ನು ಧ್ವಂಸ ಮಾಡಿದನು (೧೦-೧೩೮-೩). ಕಾಡುಮೃಗರೂಪನಾದ ಪಿಪ್ರುವನ್ನು ಇಂದ್ರನು ಋಜಿಶ್ವನಿಗೆ ಒಪ್ಪಿಸಿದನು ; ಐವತ್ತು ಸಾವಿರ ಕಪ್ಪುಜನರನ್ನು ಸೋಲಿಸಿ, ದುರ್ಗಗಳನ್ನು ಭೇದಿಸಿದನು (೪-೧೬-೧೩). ಋಜಿಶ್ವನೊಡನೆ ಸೇರಿಕೊಂಡು, ಇಂದ್ರನು ಕೃಷ್ಣವರ್ಣದವರ ಸಂತತಿಯನ್ನೇ ನಾಶಮಾಡಿದನು (೧-೧೧೧-೧). ಇವನಿಗೆ ಅಸುರ, ದಾಸ ಎಂಬ ಎರಡೂ ವಿಶೇಷಣಗಳಿರುವುದರಿಂದ, ಮನುಷ್ಯರ ಶತ್ರುವೂ ಆಗಿರಬಹುದೆಂದು ಕೆಲವರ ಅಭಿಪ್ರಾಯ.

ನಮುಚಿಃ.—ಋಗ್ವೇದದಲ್ಲಿ ಒಂಭತ್ತು ಸಲವಲ್ಲದೆ, ವಾಜಸನೇಯಿಸಂಹಿತೆ, ತೈತ್ತಿರೀಯಬ್ರಾಹ್ಮಣ ಮತ್ತು ಶತಪಥಬ್ರಾಹ್ಮಣಗಳಲ್ಲಿಯೂ, ಈ ಹೆಸರು ಕಂಡುಬರುತ್ತದೆ. ಅಸುರ (ಅಸುರಸ್ವಭಾವವುಳ್ಳವನು) ಎಂಬ ವಿಶೇಷಣವಿದೆ (೧೦-೧೩೧-೪ ; ಶ. ಬ್ರಾ. ೧೨-೭-೧-೧೦) ಮತ್ತು ಇತರ ವೇದಗಳಲ್ಲಿ ಅಸುರ ಎಂತಲೇ ಕರೆಸಿಕೊಳ್ಳುತ್ತಾನೆ. ದಾಸನೆಂತಲೂ ಮೂರು ನಾಲ್ಕು ವಾಕ್ಯಗಳಲ್ಲಿ ಇದೆ (೫-೩೦-೭, ೮, ಇತ್ಯಾದಿ) ಮತ್ತು ಮಾಯಿ ಎಂದು ಒಂದುಕಡೆ (೧-೫೩-೭). ನಮುಚಿಯನ್ನು ಸೋಲಿಸುವಾಗ, ಇಂದ್ರನ ಸಹಚರನು ನಮೀ ಸಾಪ್ಯನೆಂಬ ಆಶ್ರಿತ (೧-೫೩-೭, ೬-೨೦-೬). ಇತರ ಅನೇಕ ಪಿಶಾಚಿಗಳಂತೆ ನಮುಚಿಯೂ ಇಂದ್ರನಿಂದ ಹತನಾಗಿದಾನೆ (೨-೧೪-೫, ೭-೧೯-೫) ಅಥವಾ ಹೊಡೆದು ಕೆಡವಲ್ಪಟ್ಟಿದಾನೆ ( ೧-೫೩-೭ ). ವೃತ್ರನಮುಚಿಗಳನ್ನು ವಧಿಸಿ, ಇಂದ್ರನು ನೂರು ಕೋಟೆಗಳನ್ನು ನಾಶಮಾಡಿದನು (೭-೧೯-೫). ವೃತ್ರಾಸುರನ ತಲೆಯನ್ನು ಭೇದಿಸುತ್ತಾನೆ ಆದರೆ ನಮುಚಿಯ ತಲೆಯನ್ನು ಗಿರಕಿ ಹೊಡೆಸುತ್ತಾನೆ (೫-೩೦-೮ ; ೬-೨೦-೬). ಇದ್ರನು ನಮುಚಿಯ ಶಿರಸ್ಸನ್ನು ತಿರಿಚುತ್ತಾನೆ (೫-೩೦-೭) ಅಥವಾ ನೀರಿನ ನೊರೆಯಿಂದ ನುಲಚಿದ್ದಾನೆ (೮-೧೪-೧೩). ಬ್ರಾಹ್ಮಣಗಳಲ್ಲಿ ಶಿರಸ್ಸನ್ನು ಕತ್ತರಿಸಿದನು ಎಂತಲೂ ಇದೆ. ಇಂದ್ರನು ನಮುಚಿಯ ಪಾರ್ಶ್ವದಲ್ಲಿ ಕುಳಿತು ಮದ್ಯವನ್ನು ಕುಡಿದನು ; ಆಗ ಅಶ್ವಿನೀದೇವತೆಗಳ ಸಹಾಯದಿಂದ, ಸರಸ್ವತಿಯು ಗುಣಪಡಿಸಿದಳು (೧೦-೧೩೧-೪, ೫).

ಪಾಣಿನಿಯ ಪ್ರಕಾರ (೬-೩-೭೫), ನಮುಚಿ ಎಂದರೆ (ನ-ಮುಚಿ) ಬಿಟ್ಟುಕೊಡುವವನಲ್ಲ, ಅಂದರೆ ನೀರನ್ನು ತಡೆದಿರುವ ಪಿಶಾಚಿ ಎನ್ನಬಹುದು.

ಧುನಿ ಮತ್ತು ಚುಮುರಿಃ.—ಸಾಧಾರಣವಾಗಿ ಎರಡು ಹೆಸರುಗಳೂ ಒಟ್ಟಿಗೇ ಬರುತ್ತವೆ. ಒಂದು ಸಲ ದ್ವಂದ್ವವಾಗಿಯೂ (೬-೨೦-೧೩) ಉಪಯೋಗಿಸಿದೆ, ಇದರಿಂದ ಸಲ ಚುಮುರಿಯೊಂದೇ ಬಂದಿದೆ. ಒಂದು ಇವರಿಬ್ಬರದೂ ಸಂಬಂಧ ಎಷ್ಟು ನಿಕಟವಾದುದೆಂದು ತಿಳಿದು ಬರುತ್ತದೆ. ಇಂದ್ರನು ಇವರಿಬ್ಬರನ್ನು ನಿದ್ರಾಮಗ್ನರನ್ನಾಗಿ ಮಾಡಿದನು (೨-೧೫-೯, ೬-೨೦-೧೩ ; ೭-೧೯-೪), ಚುಮುರಿ ಒಬ್ಬನಿಗೂ ಇದೇ ರೀತಿ ಆಗಿದೆ (೬-೨೬-೬). ಶಂಬರ, ಪಿಪ್ರು, ಶುಷ್ಣ ಮೊದಲಾದವರೊಡನೆ, ಇವರನ್ನೂ ಇಂದ್ರನು ಧ್ವಂಸಮಾಡಿ, ಅವರ ಕೋಟೆಗಳನ್ನು ನಾಶಮಾಡಿದನು (೬-೧೮-೮). ತನಗೋಸ್ಕರ ಸೋಮರಸವನ್ನು ಸಿದ್ಧಪಡಿಸಿದ (೬-೨೦-೧೩) ದಭೀತಿಗೋಸ್ಕರ ಇವರಿಬ್ಬರು ಇಂದ್ರನಿಂದ ನಾಶಮಾಡಲ್ಪಟ್ಟರು ಅಥವಾ ನಿದ್ರಿತರಾಗಿ ಮಾಡಲ್ಪಟ್ಟರು



CC-0. Jangamwadi Math Collection. Digitized by eGangotri

